ಶ್ರೀ ರಾಘವೇಂದ್ರತೀರ್ಥ ಗುರುಸಾರ್ವಭೌಮ ವಿರಚಿತ

# ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯ ಭಾವಸಂಗ್ರಹಃ



ಅನುವಾದಕರು :

ರಾಜಾ ಶ್ರೀ ಗುರುರಾಜಾಚಾರ್ಯ

ಶ್ರೀಸುಯಮೀರಾಘವೇಂದ್ರ
ಪ್ರಕಾಶನ ಸಂಖ್ಯೆ 81



ಶ್ರೀಸುಶೀಲೇಂದ್ರವಿಜಯಮಾಲಾ
ಸಂಖ್ಯೆ 71

ಕಮಲೇಶ ಕುಸುಮ 61

ಶ್ರೀರಾಘವೇಂದ್ರಗುರುಸಾರ್ವಭೌಮವಿರಚಿತಃ

# ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಭಾವಸಂಗ್ರಹಃ

ಅನುವಾದಕರು :
"ಶ್ರೀರಾಘವೇಂದ್ರಗುರುವಂಶಭೂಷಣಂ, ವಿದ್ಯಾಧಿರಾಜ, ಸರಸ್ವತೀಕಂಠಾಭರಣಂ"
ಶ್ರೀ ರಾಜಾ. ಶ್ರೀ. ಗುರುರಾಜಾಚಾರ್ಯ

ಪ್ರಕಾಶಕರು :
ಶ್ರೀಸುಯಮೀರಾಘವೇಂದ್ರ ಸಂಶೋಧನ ಕೇಂದ್ರ
ನಂಜನಗೂಡು - ಬೆಂಗಳೂರು

2011

# Śrīman Mahābharata Tātparya Nirṇaya Bhāva Sangraha

*Authored by :*

**Śrī Rāghavendra Swāmījī**

*Translation in Kannada by :*

**Śrī Rājā S. Gururājāchārya**


*Published by :*

**Sri Suyami Raghavendra Research Center, Bangalore.**

ಗ್ರಂಥದ ಹೆಸರು : ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಭಾವಸಂಗ್ರಹಃ

ಗ್ರಂಥಕಾರರು : ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು

ಅನುವಾದಕರು : ರಾಜಾ ಶ್ರೀ ಗುರುರಾಜಾಚಾರ್ಯರು

ಪ್ರಕಾಶಕರು : ಶ್ರೀಸುಯಮೀರಾಘವೇಂದ್ರ ಸಂಶೋಧನ ಕೇಂದ್ರ
'ಸಾಧನಾ', ನಂ. 213/ಡಿ, 2ನೇ 'ಜಿ ಮುಖ್ಯರಸ್ತೆ, 2ನೇ 'ಇ ಅಡ್ಡರಸ್ತೆ,
ಗಿರಿನಗರ ಮೊದಲನೇ ಹಂತ, ಬೆಂಗಳೂರು - 560 085
ದೂರವಾಣಿ : 99453 48633

ಪ್ರಥಮ ಮುದ್ರಣ : 2011

ಪಕ್ಕಗಳು : ಪ್ರಕಾಶಕರದು

ಬೆಲೆ : ರೂ. 200/-

ಈ ಗ್ರಂಥವು ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀರಾಘವೇಂದ್ರಸ್ವಾಮಿಗಳವರ ಮಠದ ಸಂಪೂರ್ಣ ಸಹಕಾರ
ಮತ್ತು ಪ್ರೋತ್ಸಾಹದೊಂದಿಗೆ ಪ್ರಕಾಶನಗೊಳಿಸಲಾಗಿದೆ.

ಮುದ್ರಕರು : ಧನಂಜಯ ಪರಚೇಡಕರ್
ಸುಧಾ ಮುದ್ರಣ, 20, ಉತ್ತರಾದಿಮಠದ ಆವರಣ,
ಶಂಕರಪುರಮ್, ಬೆಂಗಳೂರು 560 004
ದೂರವಾಣಿ : 92430 74414

|| ಶ್ರೀಮೂಲರಾಮೋ ವಿಜಯತೇ ||



|| ಶ್ರೀಗುರುರಾಜೋ ವಿಜಯತೇ ||



ಸ್ವಸ್ತಿಶ್ರೀ ವಿಜಯಾಭ್ಯುದಯ ಗತ ಶಾಲಿವಾಹನ ಶಕ 1932 ನೇ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣಪಾರಂಗತ
ಸರ್ವತಂತ್ರ ಸ್ವತಂತ್ರ ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ ಶ್ರೀಮನ್ಮೂಲರಘುಪತಿವೇದವ್ಯಾಸದೇವರ
ದಿವ್ಯಶ್ರೀಪಾದಪದ್ಮಾರಾಧಕ ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನಾಧೀಶ್ವರರಾದ
ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತ ಸಾಮ್ರಾಜ್ಯ ದಿಗ್ವಿಜಯ ವಿದ್ಯಾಸಿಂಹಾಸನಾಧೀಶ್ವರರಾದ
ಶ್ರೀಮತ್ಸುಜಯೀಂದ್ರತೀರ್ಥಶ್ರೀಪಾದಂಗಳವರ ಕರಕಮಲಸಂಜಾತರಾದ

## ಶ್ರೀ 108 ಶ್ರೀಮತ್ಸುಶಮೀಂದ್ರತೀರ್ಥಶ್ರೀಪಾದಂಗಳವರ ವರಕುಮಾರಕರಾದ

# ಶ್ರೀ 108 ಶ್ರೀಸುಯತೀಂದ್ರತೀರ್ಥಶ್ರೀಪಾದಂಗಳವರು

ಶ್ರೀವಿಕೃತಿನಾಮ ಸಂವತ್ಸರ ಫಾಲ್ಗುಣ ಶುಕ್ಲದ್ವಿತೀಯಾ, ಭಾನುವಾರ, ದಿನಾಂಕ 2/03/2011.

ವಿದ್ವತ್ಪರಿಜ್ಞೇಯಮಹಾವಿಶೇಷಃ ಎಂಬುದಾಗಿ ಶ್ರೀಗುರುರಾಜರ ಏಕಾಂತಭಕ್ತರಾದ ಅಪ್ಪಣ್ಣಾಚಾರ್ಯರು ತಿಳಿಸಿದಂತೆ ಮಂತ್ರಾಲಯಪ್ರಭುಗಳ ಮಹಾವಿಶೇಷವನ್ನು ಅರಿಯಬೇಕಾದರೆ ಅವರು ಶ್ರೇಷ್ಠವಿದ್ವಾಂಸರೇ ಆಗಿರಬೇಕು. ಆದ್ದರಿಂದಲೇ ಅವರಿಗ ಪೂರ್ವಾಶ್ರಮದಲ್ಲಿ ವಿದ್ಯಾದೇವಿಯು 'ವಿದ್ವದಾದ್ಯ' ಎಂದು ಸಂಬೋಧಿಸಿದ್ದಾರೆ. ಇಂತಹ ಮಹಾಮಹಿಮರಾದ ಶ್ರೀರಾಘವೇಂದ್ರಗುರುಸಾರ್ವಭೌಮರು ತಮ್ಮ ಅಮೋಘ ಗ್ರಂಥರಾಶಿಗಳ ಮೂಲಕ ವಿದ್ವಾಂಸರಿಗೆ, ಚಿಂತನಶೀಲರಿಗೆ, ತತ್ತ್ವಜಿಜ್ಞಾಸುಗಳಿಗೆ ರಸದೌತಣವನ್ನೇ ನೀಡಿರುತ್ತಾರೆ. ಈ ಗ್ರಂಥಗಳಲ್ಲಿ ಕೆಲವು ಈಗಾಗಲೇ ದೇಶದ ಅನೇಕ ಭಾಷೆಗಳಲ್ಲಿ ತರ್ಜುಮೆಯಾಗಿವೆ.

ಪ್ರಕೃತ, ನಮ್ಮ ಪೂರ್ವಿಕಗುರುಗಳಾದ ಶ್ರೀಶ್ರೀಸುಯಮೀಂದ್ರತೀರ್ಥರ ಪೂರ್ವಾಶ್ರಮಪುತ್ರರಾದ ರಾಜಾ. ಎಸ್. ಗುರುರಾಜಾಚಾರ್ಯರ ಮಕ್ಕಳಾದ ರಾಜಾ. ಎಸ್. ಸುಧೀಂದ್ರಾಚಾರ್ಯರು 'ಸುಯಮೀರಾಘವೇಂದ್ರ ಸಂಶೋಧನಾ ಕೇಂದ್ರ'ದ ವತಿಯಿಂದ ರಾಜಾ. ಎಸ್. ರಾಜಗೋಪಾಲಾಚಾರ್ಯರು, ಶ್ರೀಸುಯಮೀಂದ್ರಾಚಾರ್ಯರು ಮೊದಲಾದವರ ಸಹಕಾರದೊಂದಿಗೆ ಶ್ರೀರಾಯರು ರಚಿಸಿರುವ ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯ ಭಾವಸಂಗ್ರಹ ಎಂಬ ಶ್ರೇಷ್ಠವಾದ ಗ್ರಂಥವನ್ನು ರಾಜಾ. ಎಸ್. ಗುರುರಾಜಾಚಾರ್ಯರು ಕನ್ನಡದಲ್ಲಿ ಅನುವಾದಿಸಿದ್ದು ಪ್ರಕೃತ ಅದನ್ನು ಪ್ರಕಾಶನಗೊಳಿಸುತ್ತಿದ್ದಾರೆ. ಈ ಗ್ರಂಥಪ್ರಕಾಶನದಲ್ಲಿ ಪಾಲ್ಗೊಂಡ ಪ್ರತಿಯೊಬ್ಬರಿಗೂ ಶ್ರೀರಾಘವೇಂದ್ರತೀರ್ಥಗುರ್ವಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಮೂಲರಘುಪತಿ ವೇದವ್ಯಾಸದೇವರು ಇನ್ನೂ ಹೆಚ್ಚಿನ ಇಂತಹ ಸತ್ಕಾರ್ಯಗಳನ್ನು ಮಾಡುವ ಶಕ್ತಿಯನ್ನು ನೀಡಲೆಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.



# Śrīman Mahābharata Tātparya Nirṇaya Bhāva Sangraha

*Authored by :*

**Śrī Rāghavendra Swāmījī**

*Translation in Kannada by :*

**Śrī Rājā S. Gururājāchārya**

*Published by* :

**Sri Suyami Raghavendra Research Center, Bangalore.**

ಗ್ರಂಥದ ಹೆಸರು : ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಭಾವಸಂಗ್ರಹಃ

ಗ್ರಂಥಕಾರರು : ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು

ಅನುವಾದಕರು : ರಾಜಾ ಶ್ರೀ ಗುರುರಾಜಾಚಾರ್ಯರು

ಪ್ರಕಾಶಕರು : ಶ್ರೀಸುಯಮೀರಾಘವೇಂದ್ರ ಸಂಶೋಧನ ಕೇಂದ್ರ
'ಸಾಧನಾ', ನಂ. 213/ಡಿ, 2ನೇ 'ಬಿ ಮುಖ್ಯರಸ್ತೆ, 2ನೇ 'ಇ ಅಡ್ಡರಸ್ತೆ,
ಗಿರಿನಗರ ಮೊದಲನೇ ಹಂತ, ಬೆಂಗಳೂರು - 560 085
ದೂರವಾಣಿ : 99453 48633

ಪ್ರಥಮ ಮುದ್ರಣ : 2011



ಬೆಲೆ : ರೂ. 200/-

ಈ ಗ್ರಂಥವು ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀರಾಘವೇಂದ್ರಸ್ವಾಮಿಗಳವರ ಮಠದ ಸಂಪೂರ್ಣ ಸಹಕಾರ
ಮತ್ತು ಪ್ರೋತ್ಸಾಹದೊಂದಿಗೆ ಪ್ರಕಾಶನಗೊಳಿಸಲಾಗಿದೆ.

ಮುದ್ರಕರು : ಧನಂಜಯ ವರಖೇಡಕರ್
**ಸುಧಾ ಮುದ್ರಣ,** 20, ಉತ್ತರಾದಿಮಠದ ಆವರಣ,
ಶಂಕರಪುರಮ್, ಬೆಂಗಳೂರು 560 004
ದೂರವಾಣಿ : 92430 74414

॥ ಶ್ರೀಮೂಲರಾಮೋ ವಿಜಯತೇ ॥



॥ ಶ್ರೀಗುರುರಾಜೋ ವಿಜಯತೇ ॥



ಸ್ವಸ್ತಿಶ್ರೀ ವಿಜಯಾಭ್ಯುದಯ ಗತ ಶಾಲಿವಾಹನ ಶಕ 1932 ನೇ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣಪಾರಂಗತ
ಸರ್ವತಂತ್ರ ಸ್ವತಂತ್ರ ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ ಶ್ರೀಮನ್ಮೂಲರಘುಪತಿವೇದವ್ಯಾಸದೇವರ
ದಿವ್ಯಶ್ರೀಪಾದಪದ್ಮಾರಾಧಕ ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನಾಧೀಶ್ವರರಾದ
ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತ ಸಾಮ್ರಾಜ್ಯ ದಿಗ್ವಿಜಯ ವಿದ್ಯಾಸಿಂಹಾಸನಾಧೀಶ್ವರರಾದ
ಶ್ರೀಮತ್ಸುಜಯೀಂದ್ರತೀರ್ಥಶ್ರೀಪಾದಂಗಳವರ ಕರಕಮಲಸಂಜಾತರಾದ

## ಶ್ರೀ 108 ಶ್ರೀಮತ್ಸುಶಮೀಂದ್ರತೀರ್ಥಶ್ರೀಪಾದಂಗಳವರ ವರಕುಮಾರಕರಾದ

# ಶ್ರೀ 108 ಶ್ರೀಸುಯತೀಂದ್ರತೀರ್ಥಶ್ರೀಪಾದಂಗಳವರು

ಶ್ರೀವಿಕೃತಿನಾಮ ಸಂವತ್ಸರ ಫಾಲ್ಗುಣ ಶುಕ್ಲ ದ್ವಿತೀಯಾ, ಭಾನುವಾರ, ದಿನಾಂಕ 2/03/2011.

ವಿದ್ವತ್ಪರಿಜ್ಞೇಯಮಹಾವಿಶೇಷಃ ಎಂಬುದಾಗಿ ಶ್ರೀಗುರುರಾಜರ ಏಕಾಂತಭಕ್ತರಾದ ಅಪ್ಪಣ್ಣಾಚಾರ್ಯರು ತಿಳಿಸಿದಂತೆ ಮಂತ್ರಾಲಯಪ್ರಭುಗಳ ಮಹಾವಿಶೇಷವನ್ನು ಅರಿಯಬೇಕಾದರೆ ಅವರು ಶ್ರೇಷ್ಠವಿದ್ವಾಂಸರೇ ಆಗಿರಬೇಕು. ಆದ್ದರಿಂದಲೇ ಅವರಿಗೆ ಪೂರ್ವಾಶ್ರಮದಲ್ಲಿ ವಿದ್ಯಾದೇವಿಯು 'ವಿದ್ವದ್ವಾದ್ಯ' ಎಂದು ಸಂಬೋಧಿಸಿದ್ದಾರೆ. ಇಂತಹ ಮಹಾಮಹಿಮರಾದ ಶ್ರೀರಾಘವೇಂದ್ರಗುರುಸಾರ್ವಭೌಮರು ತಮ್ಮ ಅಮೋಘ ಗ್ರಂಥರಾಶಿಗಳ ಮೂಲಕ ವಿದ್ವಾಂಸರಿಗೆ, ಚಿಂತನಶೀಲರಿಗೆ, ತತ್ತ್ವಜಿಜ್ಞಾಸುಗಳಿಗೆ ರಸದೌತಣವನ್ನೇ ನೀಡಿರುತ್ತಾರೆ. ಈ ಗ್ರಂಥಗಳಲ್ಲಿ ಕೆಲವು ಈಗಾಗಲೇ ದೇಶದ ಅನೇಕ ಭಾಷೆಗಳಲ್ಲಿ ತರ್ಜುಮೆಯಾಗಿವೆ.

ಪ್ರಕೃತ, ನಮ್ಮ ಪೂರ್ವಿಕಗುರುಗಳಾದ ಶ್ರೀಶ್ರೀಸುಯಮೀಂದ್ರತೀರ್ಥರ ಪೂರ್ವಾಶ್ರಮಪುತ್ರರಾದ ರಾಜಾ. ಎಸ್. ಗುರುರಾಜಾಚಾರ್ಯರ ಮಕ್ಕಳಾದ ರಾಜಾ. ಎಸ್. ಸುಧೀಂದ್ರಾಚಾರ್ಯರು '**ಸುಯಮೀರಾಘವೇಂದ್ರ ಸಂಶೋಧನಾ ಕೇಂದ್ರ**'ದ ವತಿಯಿಂದ ರಾಜಾ. ಎಸ್. ರಾಜಗೋಪಾಲಾಚಾರ್ಯರು, ಶ್ರೀಸುಯಮೀಂದ್ರಾ-ಚಾರ್ಯರು ಮೊದಲಾದವರ ಸಹಕಾರದೊಂದಿಗೆ ಶ್ರೀರಾಯರು ರಚಿಸಿರುವ **ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯ ಭಾವಸಂಗ್ರಹ** ಎಂಬ ಶ್ರೇಷ್ಠವಾದ ಗ್ರಂಥವನ್ನು ರಾಜಾ. ಎಸ್. ಗುರುರಾಜಾಚಾರ್ಯರು ಕನ್ನಡದಲ್ಲಿ ಅನುವಾದಿಸಿದ್ದು ಪ್ರಕೃತ ಅದನ್ನು ಪ್ರಕಾಶನಗೊಳಿಸುತ್ತಿದ್ದಾರೆ. ಈ ಗ್ರಂಥಪ್ರಕಾಶನದಲ್ಲಿ ಪಾಲ್ಗೊಂಡ ಪ್ರತಿಯೊಬ್ಬರಿಗೂ ಶ್ರೀರಾಘವೇಂದ್ರತೀರ್ಥಗುರ್ವಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಮೂಲರಘುಪತಿ ವೇದವ್ಯಾಸದೇವರು ಇನ್ನೂ ಹೆಚ್ಚಿನ ಇಂತಹ ಸತ್ಕಾರ್ಯಗಳನ್ನು ಮಾಡುವ ಶಕ್ತಿಯನ್ನು ನೀಡಲೆಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.



# ಕೃತಜ್ಞತಾ

ಶ್ರೀ ರಾಯರ ಅನುಗ್ರಹದ ನೆರಳಲ್ಲಿ ಅರಳುತ್ತಿರುವ ಶ್ರೀ ಸುಯಮೀರಾಘವೇಂದ್ರ ಸಂಶೋಧನಾ ಕೇಂದ್ರ ಭಗವತ್ಸಂಕಲ್ಪ, ಶ್ರೀ ಗುರುರಾಜರ ಪ್ರೇರಣೆ, ಪರಮಾನುಗ್ರಹ ಮತ್ತು ಸಂಸ್ಥೆಯ ಸಾಮ್ರಾಟ್ ಪೋಷಕರುಗಳಾದ ಪರಮಪೂಜ್ಯ ಶ್ರೀ ಸುಯಮೀಂದ್ರ, ಶ್ರೀ ಸುಜಯೀಂದ್ರ, ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರು ಮತ್ತು ಅಧುನಾಪೀಠ ವಿರಾಜಮಾನರಾದ ಪರಮಪೂಜ್ಯ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರ ಅನುಗ್ರಹಾ-ಶೀರ್ವಾದದ ರಕ್ಷಾಕವಚವನ್ನು ಧರಿಸಿ ಕಾರ್ಯೋನ್ಮುಖರಾಗಿರುವುದರ ಸತ್ಫಲವೇ ಸಾರಸ್ವತ ಲೋಕದಲ್ಲಿ ವೈಶಿಷ್ಟ್ಯ-ಪೂರ್ಣವಾದ ಸಾಧನೆ ! ಸಜ್ಜನರ ಅಭಿಮಾನದ ಮಹಾಪೂರ ! ಇಂತಹ ಒಂದು ಅಪೂರ್ವವಾದ ಆರೋಹಣ ಸಾಧನೆಯ ಯಶಸ್ಸನ್ನು ನಮ್ಮದಾಗಿಸಿದ ಶ್ರೀಹರಿ-ವಾಯು-ರಾಘವೇಂದ್ರತೀರ್ಥ ಗುರುಸಾರ್ವಭೌಮರು ಹಾಗೂ ಪೂಜ್ಯ ಶ್ರೀಪಾದಂಗಳವರಿಗೆ ಭಕ್ತಿ-ಶ್ರದ್ಧಾಪೂರ್ವಕವಾದ ಪರಂಪರಾಗತ ಅನಂತಕೋಟಿ ಶಿರಸಾಷ್ಟಾಂಗ ಪ್ರಣಾಮ-ಗಳನ್ನು ಅರ್ಪಿಸುತ್ತೇನೆ.

ಭಗವಂತನಾದ ಶ್ರೀಕೃಷ್ಣನು ತನ್ನ ತಾಯಿಗೆ, ಬಾಲಕನಾಗಿದ್ದಾಗಲೇ, ತನ್ನ ಪುಟ್ಟ ಬಾಯಿಯಲ್ಲಿ ಬ್ರಹ್ಮಾಂಡವನ್ನೇ ತೋರಿದ. ಅದರಂತೆಯೇ "ಶ್ರೀಕೃಷ್ಣಗ್ರಹಗೃಹೀತಾತ್ಮರಾದ ಶ್ರೀರಾಯರು"ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ ಭಾವಸಂಗ್ರಹ" ಎಂಬ 32 ಶ್ಲೋಕಗಳುಳ್ಳ ಪುಟ್ಟ ಗ್ರಂಥದಲ್ಲಿ ಸಂಪೂರ್ಣ ಮಹಾಭಾರತವನ್ನು ಸಂಗ್ರಹಿಸಿ ಸಜ್ಜನರಿಗೆ ಮಹದುಪಕಾರ ಮಾಡಿ ಅನುಗ್ರಹಿಸಿದ್ದಾರೆ. ಅಂತೆಯೇ, ಅವರನ್ನು "ಅತ್ಯಂತ ದಯಾಲುವೆ" ಎಂದು ಸ್ತುತಿಸುತ್ತಾರೆ. ಇಂತಹ ಒಂದು ಶ್ರೇಷ್ಠ ಗ್ರಂಥವು ನಮ್ಮ ಸಂಸ್ಥೆಯ ವತಿಯಿಂದ ಪ್ರಕಟಗೊಳ್ಳಲು ಪ್ರೇರಕ-ಪೂರಕಗಳಾಗಿ ನಮ್ಮನ್ನು ಅನುಗ್ರಹಿಸಿ, ಸಲಹುತ್ತಿರುವ ಶ್ರೀರಾಯರ ಪರಮಪಾವನ ಚರಣಕಿಸಲಯಗಳಿಗೆ ಭಕ್ತಿಪೂರ್ವಕವಾದ ಶಿರಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸಿ ಧನ್ಯರಾಗುತ್ತೇವೆ.

ಶ್ರೀ ಗುರುರಾಜರು ರಚಿಸಿರುವ "ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯ ಭಾವಸಂಗ್ರಹ" ಗ್ರಂಥವನ್ನು "ಶ್ರೀರಾಘವೇಂದ್ರಗುರುವಂಶಭೂಷಣ"ರಾದ ರಾಜಾ ಶ್ರೀ ಗುರುರಾಜಾಚಾರ್ಯರು ಅತ್ಯಂತ ಸರಳಸುಂದರವಾಗಿ ಕನ್ನಡ ಭಾಷೆಗೆ ಅನುವಾದಿಸಿ ಉಪಕರಿಸಿದ್ದಾರೆ. ಅದನ್ನು ಪ್ರಕೃತ ಪ್ರಕಾಶನಗೊಳಿಸುತ್ತಿದ್ದೇವೆ. ಈ ಒಂದು ಮಹಾಭಾಗ್ಯ ನಮ್ಮದಾಗಲು ಕಾರಣರಾದ ಶ್ರೀಯುತ ಆಚಾರ್ಯರಿಗೆ ನಮ್ಮ ಶಿರಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುತ್ತೇವೆ.

ನಮ್ಮ ಪ್ರಾರ್ಥನೆಯನ್ನು ಮನ್ನಿಸಿ, ತಮ್ಮ ಅಮೂಲ್ಯವಾದ ಅನುಗ್ರಹಸಂದೇಶವನ್ನು ನೀಡಿ ಗ್ರಂಥಕ್ಕೆ ಪಾವಿತ್ರ್ಯತೆಯ ಸಾನ್ನಿಧ್ಯವನ್ನು ತರುವುದರೊಂದಿಗೆ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಭಾವಸಂಗ್ರಹ ಗ್ರಂಥವನ್ನು "ಶ್ರೀಕ್ಷೇತ್ರ ಮಂತ್ರಾಲಯ"ದಲ್ಲಿ ಇದೇ ಮಾರ್ಚ್ 6ನೇ ತಾರೀಖಿನಿಂದ 12 ತಾರೀಖಿನವರೆಗೆ ನಡೆಯುವ ಶ್ರೀರಾಯರ ಪಟ್ಟಾಭಿಷೇಕ ಮಹೋತ್ಸವ ಮತ್ತು ಹಾಗೂ ಶ್ರೀರಾಯರ ವರ್ಧಂತ್ಯುತ್ಸವಗಳನ್ನೊಳಗೊಂಡ "ಶ್ರೀರಾಘವೇಂದ್ರ ಗುರುಭಕ್ತಿ ಉತ್ಸವ"ದ ಸಂದರ್ಭದಲ್ಲಿ ಪ್ರಕಾಶನಗೊಳಿಸಿ ನಮ್ಮನ್ನು ಅನುಗ್ರಹಿಸಿ ಆಶೀರ್ವದಿಸುತ್ತಿರುವ ಪರಮಪೂಜ್ಯ ಶ್ರೀಸುಯತೀಂದ್ರತೀರ್ಥ ಶ್ರೀಪಾದಂಗಳವರಿಗೆ ನಮ್ಮ ಭಕ್ತಿಪೂರ್ವಕವಾದ ಶಿರಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುತ್ತೇವೆ.

ಗ್ರಂಥಕ್ಕೆ ಚಿಂತನ-ಮಂಥನವೆಂಬ ಧೀಮಂತ ನುಡಿಮುತ್ತುಗಳ ಶ್ರೀಮಂತ ಉಡುಗೆಯನ್ನು ತೊಡಿಸಿದ ಶ್ರೀಪಾದಂಗಳವರ ಆಪ್ತಕಾರ್ಯದರ್ಶಿಗಳಾದ ಶ್ರೀ ರಾಜಾ ಎಸ್. ರಾಜಗೋಪಾಲಾಚಾರ್ಯರು ತಮ್ಮ ಅನುಭವದ ಮಾರ್ಗದರ್ಶನ, ಆತ್ಮೀಯ ಸಲಹೆ, ಸಹಕಾರಗಳ ಪ್ರೋತ್ಸಾಹವನ್ನು ಮುಂದುವರೆಸಿ, ಸದಾ ನಮ್ಮ ಜೊತೆಗಿರಬೇಕೆಂಬ ವಿಶ್ವಾಸದ ವಿಜ್ಞಾಪನೆಯನ್ನು ಸಲ್ಲಿಸುತ್ತಾ, ಅವರಿಗೆ ನಮ್ಮ ಕೃತಜ್ಞತೆಯ ಧನ್ಯವಾದಗಳನ್ನು ತಿಳಿಸುತ್ತೇವೆ. ಅಭಿಮಾನದ ಮಹಾಪೂರವನ್ನೇ ಹರಿಸುತ್ತಾ, ನಮ್ಮ ಜ್ಞಾನಕಾರ್ಯಕ್ಕೆ ಸರ್ವದಾ ಪ್ರೋತ್ಸಾಹಿಸುತ್ತಾ, ನಾವು ಇನ್ನೂ ಹೆಚ್ಚಿನ ಜ್ಞಾನ-ಕಾರ್ಯದಲ್ಲಿ ಆಸಕ್ತರಾಗುವಂತೆ ಉತ್ತೇಜಿಸುತ್ತಿರುವ ಶ್ರೀಪಾದಂಗಳವರ ಹೆಚ್ಚುವರಿ ಆಪ್ತಕಾರ್ಯದರ್ಶಿಗಳಾದ ಶ್ರೀ ಎಸ್. ಎನ್. ಸುಯಮೀಂದ್ರಾಚಾರ್ಯರಿಗೆ ನಮ್ಮ ಕೃತಜ್ಞತಾಪೂರ್ವಕವಾದ ಧನ್ಯವಾದಗಳು.

ಗ್ರಂಥಪ್ರಕಾಶನದಲ್ಲಿ ನಮ್ಮೊಂದಿಗಿದ್ದು, ನಮಗೆ ಪ್ರೋತ್ಸಾಹ-ಸಲಹೆಗಳನ್ನು ನೀಡಿ ಆಶೀರ್ವದಿಸಿದ ನಮ್ಮ ಹಿರಿಯರಾದ ಶ್ರೀ ರಾಜಾ ವಿ. ಜಯರಾಮಾಚಾರ್ಯರು, ಶ್ರೀ ಹುಲಿ ಎ. ಪವಮಾನಾಚಾರ್ಯರು, ಅಣ್ಣಂದಿರಾದ ಶ್ರೀ ಜಿ. ಕೆ. ಆಚಾರ್ಯ ಇವರಿಗೆ ವಂದಿಸುತ್ತಾ ನಮ್ಮ ಕೃತಜ್ಞತೆಗಳನ್ನು ತಿಳಿಸುತ್ತೇವೆ.

ಅತಿ ಮುಖ್ಯವಾಗಿ ಈ ಗ್ರಂಥ ಪ್ರಕಾಶನಗೊಳ್ಳಲು ಆರ್ಥಿಕಸಹಾಯ ಅತ್ಯಗತ್ಯ. ಈ ಒಂದು ಅಗತ್ಯತೆಯನ್ನು ಪೂರೈಸಿದವರು ಶ್ರೀರಾಯರ ಅಂತರಂಗ ಭಕ್ತರಾದ ಶ್ರೀ ಯು. ನಾಗರಾಜ್ ಮತ್ತು ಸಹೋದರರು. ಈ ಒಂದು ಗ್ರಂಥ ಮುದ್ರಣಕ್ಕೆ ತಗಲುವ ಸಂಪೂರ್ಣವೆಚ್ಚವನ್ನು ಶ್ರೀಯುತರು ಒದಗಿಸಿ ತಮ್ಮ ಹೃದಯಶ್ರೀಮಂತಿಕೆಯ ವೈಶಾಲ್ಯ ಮನಸ್ಸಿನ ಔದಾರ್ಯತೆಯನ್ನು ತೋರಿದ್ದಾರೆ. ಅವರ ಅಭಿಲಾಷೆಯಂತೆ ಅವರ ತಂದೆಯವರಾದ ಶ್ರೀ ಯು. ಕೃಷ್ಣಮೂರ್ತಿಯವರ ಸವಿನೆನಪಿಗಾಗಿ ಈ ಗ್ರಂಥವನ್ನು ಪ್ರಕಟಿಸುತ್ತಿದ್ದೇವೆ.

ಭಗವತ್ಪ್ರೀತ್ಯರ್ಥವಾಗಿ ಶ್ರೀಹರಿ-ವಾಯು-ರಾಘವೇಂದ್ರಗುರುಗಳಿಗೆ ಅತ್ಯಂತಪ್ರಿಯವಾದ 'ಜ್ಞಾನಕಾರ್ಯ'ಕ್ಕೆ ಸಹಾಯಮಾಡಿರುವ ಶ್ರೀ ಯು. ನಾಗರಾಜ್ ಹಾಗೂ ಅವರ ಸಕಲ ಕುಟುಂಬವರ್ಗದವರಿಗೆ ಶ್ರೀ ಗುರುರಾಜರು ಇತೋಪ್ಯತಿಶಯವಾದ ಐಶ್ವರ್ಯ, ಆಯುರಾರೋಗ್ಯಗಳನ್ನು ಅನುಗ್ರಹಿಸಿ ಆಶೀರ್ವದಿಸಲಿ ಎಂದು ಪ್ರಾರ್ಥಿಸಿ, ನಮ್ಮ ಕೃತಜ್ಞತಾಪೂರ್ವಕವಾದ ಧನ್ಯವಾದಗಳನ್ನು ತಿಳಿಸುತ್ತೇವೆ.

ಈ ಗ್ರಂಥಕ್ಕೆ ರಕ್ಷಾಪುಟವನ್ನು ಅತ್ಯಂತ ಅರ್ಥಪೂರ್ಣವಾಗಿ, ಸುಂದರವಾಗಿ ನಿಯೋಜಿಸಿ ಸಹಕರಿಸಿದ ಶ್ರೀ ಗೌತಮಾಚಾರ್ಯರಿಗೆ ನಮ್ಮ ವಿಶೇಷ ಅಭಿನಂದನೆಗಳು. ಶ್ರೀ ರಾಜಾ ಸೂರೀಂದ್ರಾಚಾರ್ಯ, ಶ್ರೀ ರಾಜಾ ವಾದೀಂದ್ರಾಚಾರ್ಯ, ಶ್ರೀ ರಾಜಾ ಬ್ರಹ್ಮಣ್ಯಾಚಾರ್ಯ ಮತ್ತು ಶ್ರೀ ರಾಜಾ ವ್ಯಾಸರಾಚಾರ್ಯ ಇವರುಗಳು ಈ ಗ್ರಂಥಮುದ್ರಣಕಾಲದಲ್ಲಿ ತಮ್ಮ ಅಮೂಲ್ಯವಾದ ಸಹಾಯವನ್ನು ನೀಡಿದ್ದಾರೆ. ಗ್ರಂಥವು ಶುದ್ಧವಾಗಿ ಮುದ್ರಿತವಾಗಲು ವಿದ್ವಾನ್ ಶ್ರೀ ಮಧ್ವೇಶಾಚಾರ್ಯ ಗಂಗೂರ್, ವಿದ್ವಾನ್ ಶ್ರೀ ಪ್ರಾಣನಾಥಾಚಾರ್ಯ ಪಾಂಗರಿ ಹಾಗೂ ವಿದ್ವಾನ್ ಶ್ರೀ ಡಿ. ಮಾಧವಾಚಾರ್ಯರು ತುಂಬ ಶ್ರಮಪಟ್ಟು ಸಹಕರಿಸಿದ್ದಾರೆ. ಇವರೆಲ್ಲರಿಗೂ ಧನ್ಯವಾದಗಳು.

ಈ ಗ್ರಂಥವನ್ನು ಸುಂದರವಾಗಿ ಮುದ್ರಿಸಿ, ಸಮಯಕ್ಕೆ ಸರಿಯಾಗಿ ಪ್ರಕಟವಾಗುವುದಕ್ಕೆ ಅನುವು ಮಾಡಿಕೊಟ್ಟ 'ಸುಧಾ ಮುದ್ರಣ'ದ ಮಾಲೀಕರಾದ ಶ್ರೀ ಧನಂಜಯ ವರಯೇಡಕರ ಇವರಿಗೆ ನಮ್ಮ ಧನ್ಯವಾದಗಳು.

ಈ ಎಲ್ಲ ಮಹನೀಯರ ಸಹಾಯವನ್ನು ನೆನೆಯುತ್ತಾ, ಶ್ರೀ ಗುರುರಾಜರು ಇವರೆಲ್ಲರಿಗೂ ಮಂಗಳವನ್ನು ನೀಡಲಿ ಎಂದು ಪ್ರಾರ್ಥಿಸಿ ನಮ್ಮ ಧನ್ಯವಾದಗಳನ್ನು ತಿಳಿಸುತ್ತೇವೆ.

ಪ್ರಕಾಶಕರು
ಶ್ರೀಸುಯಮೀರಾಘವೇಂದ್ರ ಸಂಶೋಧನ ಕೇಂದ್ರ
ನಂಜನಗೂಡು – ಬೆಂಗಳೂರು.

॥ ಶ್ರೀಃ ॥

॥ ಶ್ರೀಮೂಲರಾಮೋ ವಿಜಯತೇತರಾಮ್ ॥

॥ ಶ್ರೀಗುರುರಾಜೋ ವಿಜಯತೇ ॥

# ಚಿಂತನ - ಮಂಥನ

Short and Sweet ಉಕ್ತಿ ಎಂದು ಹುಟ್ಟಿತೋ ತಿಳಿಯದು.

ಹೇಳಬೇಕಾದ್ದನ್ನು ಮಿತವಾಗಿ – ಹಿತವಾಗಿ ಹೇಳುವ ಕಲೆ ಮಂತ್ರಾಲಯದ ಮುನಿಪುಂಗವ ಶ್ರೀ ರಾಘವೇಂದ್ರರಿಗೆ ಕರತಲಾಮಲಕ. ದೀರ್ಘವಾಗಿ ಎಳೆಸಿಕೊಂಡು ಹೋಗುವುದು, ಉಪಕಥೆಗಳನ್ನು ಮುಖ್ಯವಾಗಿಡುವುದು, ಬೇಸರ ತರಿಸುವಂತೆ ಬರೆಯುವುದು ಶ್ರೀರಾಯರಿಂದ ಬಹುದೂರ.

ಮಾತನಾಡಿದರೆ ಮುತ್ತು-ಮಾಣಿಕ್ಯದಂತಿರಬೇಕು – ರಾಯರಿಗೆ ಒಪ್ಪುವ ಮಾತಿದು.

ಐದು ಸಾವಿರ ವರ್ಷಗಳ ಹಿಂದೆ ನಡೆದ ಇತಿಹಾಸ 'ಮಹಾಭಾರತ'. ಐದು ಸಾವಿರಕ್ಕೂ ಹೆಚ್ಚು ಶ್ಲೋಕಗಳು, 32 ಬೃಹತ್ ಅಧ್ಯಾಯಗಳು, ಈಗಿನ ಮಂದಿ ಓದುತ್ತಾರೆಯೇ ? ಊಹೆ ಮಾಡಿ ! ನಮ್ಮ ಇಂದಿನ ಕಥೆ ರಾಯರಿಗೆ ಗೊತ್ತು. ಇಡೀ ರಾಮಾಯಣವನ್ನು 11 ಶ್ಲೋಕಗಳಲ್ಲಿಯೂ, ಕೃಷ್ಣನ ಕಥೆಯನ್ನು 28 ಶ್ಲೋಕಗಳಲ್ಲಿಯೂ ಸಂಗ್ರಹಿಸಿ ಬರೆದ ಶ್ರೀರಾಮಚಾರಿತ್ರ್ಯಮಂಜರೀ, ಶ್ರೀಕೃಷ್ಣಚಾರಿತ್ರ್ಯಮಂಜರೀ ಸಜ್ಜನರ ಸಾರ್ವಕಾಲಿಕ ಅಚ್ಚುಮೆಚ್ಚಿನ ಕೃತಿಗಳಾಗಿವೆ. ಮಿತಭಾಷಿಗಳಾದ ರಾಯರಿಗೆ ಸ್ಫೂರ್ತಿ ಅವರ ಪರಂಪರೆಯ ಮೂಲಸ್ಥಾಪಕರಾದ ಶ್ರೀಮಧ್ವಾ-ಚಾರ್ಯರೇ. ಅವರ ಪೀಠದಲ್ಲಿ ಬಂದವರಿಗೆ ಮಾತ್ರ ಇದು ಸಾಧ್ಯ. 18 ಪರ್ವಗಳು, ಲಕ್ಷಕ್ಕೂ ಅಧಿಕವಾದ ಮಹಾಭಾರತದ ಸಾರವನ್ನು ಮಧ್ವಾಚಾರ್ಯರು ಕೇವಲ 81 ಶ್ಲೋಕಗಳಲ್ಲಿ ಸಂಗ್ರಹಿಸಿಕೊಟ್ಟಿದ್ದು ಇದಕ್ಕೆ ನಿದರ್ಶನ. ಶ್ರೀಮಧ್ವಾಚಾರ್ಯರ ಭಾವವನ್ನು ಬಲ್ಲವರು ಶ್ರೀರಾಯರು. ಆಚಾರ್ಯರ ಮಹಾಭಾರತತಾತ್ಪರ್ಯನಿರ್ಣಯಕ್ಕೆ ರಾಯರೇ ಕೊಟ್ಟ ಸುಂದರ ಹೆಸರು "ಮಹಾಭಾರತತಾತ್ಪರ್ಯನಿರ್ಣಯಭಾವಸಂಗ್ರಹಃ". ಶ್ರೀರಾ ಸಂಕೋಚ ಪ್ರವೃತ್ತಿಯ ಶ್ರೀರಾಯರು ಶ್ರೀಆನಂದತೀರ್ಥರ ಹಾದಿಯಲ್ಲೇ ಹೋಗುತ್ತಾರೆ. ಅವರು ಧ್ವನಿಯಾದರೆ ಇವರು ಪ್ರತಿಧ್ವನಿ, ಬಿಂಬದಂತೆ ಪ್ರತಿಬಿಂಬ.

40ಕ್ಕೂ ಹೆಚ್ಚು ವ್ಯಾಖ್ಯಾನಗಳು ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಕ್ಕಿವೆ. ಇವುಗಳಲ್ಲೆಲ್ಲಾ ಅತ್ಯಂತ ಚಿಕ್ಕದು ಮತ್ತು ಚೊಕ್ಕದು ಎಂದರೆ ಶ್ರೀರಾಯರದ್ದೇ. ಅವುಗಳಲ್ಲಿ ಕೆಲವು –

1) ಶ್ರೀ ಜಯತೀರ್ಥರ ಶಿಷ್ಯ ಶ್ರೀ ವ್ಯಾಸತೀರ್ಥರ ಟೀಕೆ
2) ಸೋದೆ ಮಠದ ಶ್ರೀರತ್ನಗರ್ಭತೀರ್ಥರ ವ್ಯಾಖ್ಯಾನ
3) ಶ್ರೀವೇದಾಂಗತೀರ್ಥರ ಪದಾರ್ಥದೀಪಿಕಾ
4) ಶ್ರೀವಾದಿರಾಜರ ಭಾವ ಪ್ರಕಾಶಿಕಾ
5) ಶ್ರೀಸತ್ಯಾಭಿನವತೀರ್ಥರ ವ್ಯಾಖ್ಯಾನ
6) ಶ್ರೀವಿದ್ಯಾಧೀಶರ ಶಿಷ್ಯರಾದ ಶ್ರೀಮಧುಸೂದನ ಭಿಕ್ಷುಗಳ ವ್ಯಾಖ್ಯಾನ

7) ಶ್ರೀಸತ್ಯಧರ್ಮತೀರ್ಥರ ವ್ಯಾಖ್ಯಾನ

8) ಶ್ರೀಸಂಕರ್ಷಣಾಚಾರ್ಯರ ವ್ಯಾಖ್ಯಾನ

9) ಶ್ರೀ ಆದ್ಯ ವರದರಾಜಾಚಾರ್ಯರ ವ್ಯಾಖ್ಯಾನ

10) ಶ್ರೀನೃಸಿಂಹಾಚಾರ್ಯಸೂನು ಶ್ರೀ ಅನಂತಭಟ್ಟೀಯ

11) ಶ್ರೀಜನಾರ್ದನಭಟ್ಟೀಯ

12) ತಾಮ್ರಪರ್ಣಿ ಶ್ರೀನಿವಾಸಾಚಾರ್ಯರ ವ್ಯಾಖ್ಯಾನ ಪ್ರಮೇಯಮಾಲಾ

13) ನಿರ್ಣಯಟೀಕಾ – ಶ್ರೀ ಛಲಾರಿ ನರಸಿಂಹಾಚಾರ್ಯರು

14) ಡಂಬಳ ಆನಂದತೀರ್ಥಾಚಾರ್ಯರ ಶಿಷ್ಯ ಶ್ರೀಅನಂತಾಚಾರ್ಯರು ರಚಿಸಿರುವ ವ್ಯಾಖ್ಯಾನ

15) ಶ್ರೀ ಕರ್ನಾಟಕ ಶ್ರೀನಿವಾಸಾಚಾರ್ಯರ ವ್ಯಾಖ್ಯಾನ

16) ಶ್ರೀ ಜನಾರ್ದನಸೂನು ತಿರುಮಲ ಸಂಗ್ರಹಿತ ಪ್ರಮಾಸಂಗ್ರಹ

17) ಶ್ರೀನರಸಿಂಹಾಚಾರ್ಯ ಸಂಧಿ ಇವರ ವ್ಯಾಖ್ಯಾನ

18) ಜಂಬುಬಂದೀ ಶ್ರೀಲಕ್ಷ್ಮೀನರಸಿಂಹಾಚಾರ್ಯರ ವ್ಯಾಖ್ಯಾನ

19) ಶ್ರೀವಿಠಲಾಚಾರ್ಯಸೂನು ನಾರಾಯಣಾಚಾರ್ಯರ ವ್ಯಾಖ್ಯಾನ

20) ಶ್ರೀನವರತ್ನ ಪುರುಷೋತ್ತಮಾಚಾರ್ಯರ ವ್ಯಾಖ್ಯಾನ

21) ಕಾಶೀ ಶ್ರೀನಿವಾಸಾಚಾರ್ಯರ ವ್ಯಾಖ್ಯಾನ

22) ಶ್ರೀ ಚಿಟ್ಟಿ ಕೋನೇರಿ ಆಚಾರ್ಯರ ವ್ಯಾಖ್ಯಾನ

23) ಕರ್ನಾಟಕ ಶ್ರೀಕೃಷ್ಣಾಚಾರ್ಯಸೂನುಕೃತ ವ್ಯಾಖ್ಯಾನ

24) ಶ್ರೀವಾಸುದೇವಯತೀಂದ್ರರ ಪುತ್ರ – ರಾಮಾಚಾರ್ಯಕೃತ ವ್ಯಾಖ್ಯಾನ

25) ಶ್ರೀ ಚಕ್ರಪಾಣಿ ಶ್ರೀನಿವಾಸಾಚಾರ್ಯಕೃತ ವಿದೇಕೋದ್ಧಾರ

26) ಶ್ರೀನರಸಿಂಹಾಚಾರ್ಯರ ವ್ಯಾಖ್ಯಾನ

ಇವಿಷ್ಟು ವ್ಯಾಖ್ಯಾನಗಳು ಉಪಲಬ್ಧವಿದೆ. ಉಲ್ಲೇಖಿತ ಅನುಪಲಬ್ಧ 4-6 ವ್ಯಾಖ್ಯಾನಗಳು ಈ ಸಂಖ್ಯೆಗೆ ಸೇರ್ಪಡೆ. (ಉಲ್ಲೇಖ – ಶ್ರೀ ವ್ಯಾಸನಕೆರೆ ಪ್ರಭಂಜನಾಚಾರ್ಯರು)

ವಿದ್ವಾಂಸರ ಮನೆಗಳಲ್ಲಿ, ಮಠಗಳಲ್ಲಿ, ವಿಶ್ವವಿದ್ಯಾಲಯದ ಗ್ರಂಥಾಗಾರಗಳಲ್ಲಿ, ಖಾಸಗೀ ಸಂಗ್ರಹದ ಹಸ್ತಪ್ರತಿ ಕೋಶಾಗಾರದಲ್ಲಿ ಶ್ರೀರಾಯರ ಭಾವಸಂಗ್ರಹದ ಕೃತಿ ನೂರಾರು ಸಂಖ್ಯೆಯಲ್ಲಿ ಕಾಣಸಿಕೊಳ್ಳುತ್ತಿದೆ. ಬಹುಜನರಿಗೆ ಪ್ರೀತಿಯಾದ ಈ ಕೃತಿಯನ್ನು ಶತಮಾನಗಳಿಂದ ವಿದ್ಯಾರ್ಥಿಗಳು ವಿದ್ವಾಂಸರು ಉಪಯೋಗಿಸಿ-ಕೊಂಡು ಬಂದಿದ್ದಾರೆ.

ಶ್ರೀರಾಯರು ರಚಿಸಿರುವ ಈ ಕೃತಿ ಕನ್ನಡಿಗರಿಗೆ ವಿಸ್ತೃತವಾಗಿ ಮುಟ್ಟಿಸಿದ್ದು ರಾಜಾ ಗುರುರಾಜಾ-ಚಾರ್ಯರು.

ಶ್ರೀರಾಯರ ಆಶಯಕ್ಕೆ ಕುಂದಿಲ್ಲದಂತೆ ಸರಳವಾಗಿ, ಎಲ್ಲ ವರ್ಗದವರೂ ಓದುವಂತೆ ಅನುವಾದಿಸಿದ್ದಾರೆ. ರಾಜಾ ಗುರುರಾಜಾಚಾರ್ಯರ ಕನ್ನಡ 'ಜಾಮೂನು' ಸವಿದಂತೆ. ಮೃದುತ್ವ, ಗಾಂಭೀರ್ಯ, ಮಧುರತೆ ಮನಸ್ಸಿಗೆ ಮುದ ನೀಡುತ್ತದೆ. ಸರಿಸುಮಾರು ಅವರ ಎಲ್ಲ ಕೃತಿಗಳು ಮತ್ತೆ ಮತ್ತೆ ಅಕ್ಷರದ ಮುದ್ರಣವನ್ನು ಕೇಳುತ್ತದೆ, ಮತ್ತೊಮ್ಮೆ ಇಷ್ಟವಾದ ಸಿಹಿಯನ್ನು ಕೇಳಿ ಪಡೆಯುವಂತೆ.

ಸಾಮಾನ್ಯವಾಗಿ ಮದುವೆ-ಮುಂಜಿಯಂಥ ದೊಡ್ಡ ಕಾರ್ಯ ಮಾಡಿದರೆ ಆಯ್ತಪ್ಪ, ಸ್ವಲ್ಪ ಸುಧಾರಿಸಿಕೊಳ್ಳೋಣ ಎನ್ನುತ್ತೇವೆ. ಆದರೆ ರಾಜಾ ಸುಧೀಂದ್ರಾಚಾರ್ಯರು ಇದಕ್ಕೆ ಅತೀತರು. ಗುರುರಾಜಸಂಪುಟ - 1, ಗುರುರಾಜ ಸಂಪುಟ - 2 ಮತ್ತು ಅದರ ಎರಡೆರಡು ಮುದ್ರಣಗಳು. ಅಬ್ಬ ! ಅಂಥಹ ದೊಡ್ಡ ಜವಾಬ್ದಾರಿಯನ್ನು ಮುಗಿಸಿ ಹಗುರವಾಗಿ ಮತ್ತೊಂದು ಮೆಗಾಪ್ರಾಜೆಕ್ಟ್‌ಗೆ ಕೈ ಹಾಕುತ್ತಾರೆಂದರೆ ಅವರ ಗುಂಡೆದೆಯನ್ನು ಮೆಚ್ಚಲೇಬೇಕು. ಎಂಥಹ ಯೋಜನೆಯಾದರೂ ಸಾಥ್ ನೀಡಲಿಕ್ಕೆ ರಾಜಾ ಗೌತಮ್ ಅವರಿದ್ದಾರೆ. ಪುಸ್ತಕದ ವಿನ್ಯಾಸ ಮಾಡುವುದು, ಜನರಿಗೆ ತಲುಪಿಸುವುದು, ಇಂದಿನ ಓದುಗರಿಗೆ ಬೇಕಾದಂತೆ ರೂಪಿಸುವುದು ಸುಲಭದ ಕೆಲಸವೇನಲ್ಲ. ಆದರೆ ಅಂದು-ಕೊಂಡಂತೆ ಮಾಡುವುದು ಅಶ್ವಿನೀದೇವತೆಗಳಂತೆ. ಅಂದುಕೊಂಡಂತೆ ಪರಿಮಳ ಅರಳಿದೆ. ರಾಯರ ಭಾವನೆಗಳಿಗೆ ರಾಜಾ ಗುರುರಾಜಾಚಾರ್ಯರು ನಮ್ಮೆಲ್ಲರ ಮನವನ್ನು ಸಿದ್ಧಪಡಿಸಿದ್ದಾರೆ.

ಶ್ರೀಸುಯಮೀರಾಘವೇಂದ್ರ ಪ್ರಕಾಶನ ಪ್ರಕಾಶಿಸುತ್ತಿದೆ. ಆ ಬೆಳಕಿನೆಡೆಗೆ ಧಾವಿಸೋಣ.

**- ರಾಜಾ ಎಸ್. ರಾಜಗೋಪಾಲಾಚಾರ್ಯ**

*ಆಪ್ತ ಕಾರ್ಯದರ್ಶಿಗಳು*

**ಶ್ರೀರಾಘವೇಂದ್ರಸ್ವಾಮಿಗಳವರ ಮಠ,**

**ಮಂತ್ರಾಲಯ**

# ಪ್ರಸ್ತಾವನೆ

ಬಗೆಬಗೆಯ ಸಂಸಾರದ ಮಡುಗಡದ ಕಡಲಿನಲ್ಲಿ ಮುಳುಗೇಳುತ್ತಾ ತಮ್ಮ ಉದ್ಧಾರದ ಮಾರ್ಗವನ್ನು ತಿಳಿಯಲಾಗದೆ ಅದಕ್ಕಾಗಿ ಪರಿತಪಿಸುವ ಸುಜೀವಿಗಳಿಗೆ ಜ್ಞಾನವು ಪರಮಶ್ರೇಯಸ್ಸಿಗೆ ಸಾಧನವಾಗಿದೆ. ಕರ್ಮಾದಿಗಳು ಜ್ಞಾನಜನಕಗಳು. "ತಮೇವಂ ವಿದ್ವಾನಮೃತ ಇಹ ಭವತಿ, ನಾನ್ಯಃ ಪಂಥಾ ಅಯನಾಯ ವಿದ್ಯತೇ" ಎಂಬ ಶ್ರುತಿ ಇದೇ ಅರ್ಥವನ್ನು ಪ್ರತಿಪಾದಿಸುವುದು. ಈ ವಚನವು ಪುರುಷಸೂಕ್ತಾದಿ ಸಕಲ ವೇದಗಳಿಂದ ವೇದ್ಯನಾದ ಮಾಧವನ ಜ್ಞಾನವೇ ಶಾಶ್ವತವಾದ ಪರಮಸುಖಕ್ಕೆ ಕಾರಣವೆಂದು ನಿರೂಪಿಸುವುದು.

ಪರಮಾತ್ಮನಿಗೆ ಜ್ಞಾನಿಗಿಂತ ಪ್ರಿಯನಾದವನು ಮತ್ತೊಬ್ಬನಿಲ್ಲ. "ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ" ಎಂಬ ಪ್ರಮಾಣವು ಇದನ್ನು ಸಮರ್ಥಿಸುವುದು. ಪ್ರಭುವನ್ನು ಪ್ರೀತಿಗೊಳಿಸಿ ಅವನ ಪ್ರಸಾದದಿಂದ ಸುಖಪಡೆಯುವುದು ಲೋಕಪ್ರಸಿದ್ಧವಾಗಿರುವಂತೆ ಪರಮಪ್ರಭುವಾದ ಶ್ರೀಹರಿಯನ್ನು ಪ್ರೀತಿಯಿಂದ ಒಲಿಸಿ ಅವನ ಪ್ರಸಾದವನ್ನು ಪಡೆಯುವುದು 'ಜ್ಞಾನ'ದಿಂದ ಮಾತ್ರ ಸಾಧ್ಯವೇ ಹೊರತು ಅದಕ್ಕೆ ಅನ್ಯ ಉಪಾಯವಿಲ್ಲ. ಇಂತಹ ಜ್ಞಾನವು ಪ್ರತ್ಯಕ್ಷಾದಿಗಳಿಂದ ಜನಿಸಲಸಳವಲ್ಲ. "ಔಪನಿಷದಃ ಪುರುಷಃ", "ನಾವೇದವಿನ್ಮನುತೇದಂ ಬೃಹಂತಂ" "ನೈಷಾ ತರ್ಕೇಣ ಮತಿರಾಪನೇಯಾ" ಮುಂತಾದ ಶ್ರುತಿಗಳು ಭಗವಂತನು ವೇದಾದಿಗಳಿಂದ ಮಾತ್ರ ತಿಳಿಯಲು ಶಕ್ಯನೆಂದು ಸಾರುವುವು.

ವೇದಗಳು ಅಪೌರುಷೇಯ, ಆದ್ದರಿಂದ ಪುರುಷಕೃತ ದೋಷಗಳು ಅಲ್ಲಿ ಬರಲವಕಾಶವಿಲ್ಲವಾದ್ದರಿಂದ ವೇದಗಳು ಪರಮ ಪ್ರಮಾಣವಾಗಿವೆ. ವೇದಗಳು ಅಪೌರುಷೇಯವೆಂಬುದನ್ನು ಭಗವಾನ್ ಶ್ರೀಕೃಷ್ಣನೇ ಗೀತೆಯಲ್ಲಿ ಹೇಳಿರುವನು. "ವೇದೈಶ್ಚ ಸರ್ವೈರಹಮೇವ ವೇದ್ಯೋ ವೇದಾಂತಕೃದ್ವೇದವಿದೇವ ಚಾಹಂ" ಅಂದರೆ, ಸಕಲ ವೇದಗಳಿಂದಲೂ ನಾನೇ ವೇದ್ಯನಾಗಿದ್ದೇನೆ. ವೇದಾರ್ಥನಿರ್ಣಾಯಕವಾದ ಬ್ರಹ್ಮಮೀಮಾಂಸಾಶಾಸ್ತ್ರಕರ್ತನೂ, ವೇದಾರ್ಥಗಳನ್ನು ಬಲ್ಲವನೂ ನಾನು ಎಂದು ಹೇಳಿದ್ದಾನೆ. ಪರಮಾತ್ಮನು ವೇದವನ್ನು ರಚಿಸಿದ್ದ ಪಕ್ಷದಲ್ಲಿ 'ವೇದಾಂತಕೃತ್' ಹಾಗೆ ಹೇಳಿಕೊಂಡಿರುವಂತೆ 'ವೇದಕೃತ್' ಎಂದೂ ಹೇಳಬಹುದಾಗಿತ್ತು. ಹಾಗೆ ಹೇಳದಿರುವುದ-ರಿಂದ ವೇದವು ಅಪೌರುಷೇಯವೆಂದು ಸಿದ್ಧಿಸುವುದು. ಇಂತಹ ವೇದಗಳಿಂದ ಪರಮಾತ್ಮನನ್ನು ತಿಳಿಯಬೇಕಾದರೆ ಅದಕ್ಕೆ ಪುರಾಣ ಇತಿಹಾಸಾದಿಗಳ ಸಹಾಯ ಅತ್ಯಾವಶ್ಯಕ. ಇಲ್ಲದಿದ್ದರೆ ವಿಪರೀತಾರ್ಥವಾಗಿ ಅದರಿಂದ ಅನರ್ಥಗಳೇ ಉಂಟಾಗಬಹುದು.

"ಯದಿ ವಿದ್ಯಾಚ್ಚತುರ್ವೇದಾನ್ ಸಾಂಗೋಪನಿಷದಾನ್ ದ್ವಿಜಃ। ನ ಚೇತ್ಪುರಾಣಾಂ ಸಂವಿದ್ಯಾನ್ನೈವ ಸ ಸ್ಯಾದ್ವಿಚಕ್ಷಣಃ॥ ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್। ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರಚಲಿಷ್ಯತಿ ॥" ಮುಂತಾದ ಪ್ರಮಾಣಗಳು ಮೇಲಿನ ವಿಷಯವನ್ನು ಸ್ಪಷ್ಟಪಡಿಸುವುವು.

ವೇದಾರ್ಥಗಳನ್ನು ಸರಿಯಾಗಿ ತಿಳಿಸಲು ಸಹಾಯಕವಾಗಿರುವ ಇತಿಹಾಸ-ಪುರಾಣಗಳಲ್ಲಿ ಭಾರತಕ್ಕೆ ಸಮಾನವಾದುದು ಬೇರೊಂದಿಲ್ಲ. ಏಕೆಂದರೆ, ಪೌರುಷೇಯ ಗ್ರಂಥಗಳಲ್ಲಿ ಪರಮಾತ್ಮನಿಂದ ಉತ್ತಮಾಧಿಕಾರಿಗಳ ಉದ್ಧಾರಕ್ಕಾಗಿ ರಚಿತವಾದ ಗ್ರಂಥಗಳೇ ಪ್ರಮಾಣವೆನಿಸುವುವು. ಮಹಾಭಾರತವು ಪರಮಪುರುಷನಾದ ಸಾಕ್ಷಾತ್

ನಾರಾಯಣಾವತಾರರಾದ ಶ್ರೀವೇದವ್ಯಾಸರಿಂದ ಸಜ್ಜನರ ಉದ್ಧಾರಕ್ಕಾಗಿ ರಚಿತವಾಗಿರುವುದರಿಂದ ಇದು ಪ್ರಮಾಣತಮಗ್ರಂಥವೆನಿಸಿದೆ.

"ಲೋಕೇಶಾಃ ಬ್ರಹ್ಮರುದ್ರಾದ್ಯಾಸ್ಸಂಸಾರೇ ಕ್ಲೇಶಿನಂ ಜನಂ। ವೇದಾರ್ಥಾಜ್ಞಮಧೀಕಾರವರ್ಜಿತಂ ಚ ಸ್ತ್ರಿಯಾದಿಕಂ॥ ಅವೇಕ್ಷ್ಯ ಪ್ರಾರ್ಥಯಾಮಾಸುಃ ದೇವೇಶಂ ಪುರುಷೋತ್ತಮಂ । ತತಃ ಪ್ರಸನ್ನೋ ಭಗವಾನ್ ವ್ಯಾಸೋ ಭೂತ್ವಾ ಚ ತೇ ನ ಚ ॥ ಅನ್ಯಾವತಾರರೂಪೈಸ್ತು ವೇದಾನುಕ್ತಾರ್ಥಭೂಷಿತಮ್ । ಕೇವಲೇನಾತ್ಮಬೋಧೇನ ದೃಷ್ಟಂ ವೇದಾರ್ಥಸಂಯುತಮ್ ॥ ವೇದಾದಪಿ ಪರಂ ಚಕ್ರೇ ಪಂಚಮಂ ವೇದಮುತ್ತಮಮ್ ॥" ಎಂಬ "ನಾರಾಯಣಾಷ್ಟಾಕ್ಷರಕಲ್ಪ"ದ ಪ್ರಮಾಣದಿಂದ ಷಡ್ಗುಣೈಶ್ವರ್ಯಸಂಪನ್ನನೂ, ಅನಂತಕಲ್ಯಾಣಗುಣಪೂರ್ಣನೂ, ದೋಷದೂರನೂ, ಸರ್ವೋತ್ತಮನೂ ಆದ ಸಾಕ್ಷಾತ್ ಶ್ರೀಮನ್ನಾರಾಯಣರೂಪಿ ಶ್ರೀವೇದವ್ಯಾಸರು ಸಂಸಾರಕ್ಲೇಶ-ಸಂಸಕ್ತರಾದ ಸಜ್ಜನರಲ್ಲಿ ದಯಾಳುಗಳಾದ ಬ್ರಹ್ಮರುದ್ರಾದಿ ದೇವತೆಗಳ ಪ್ರಾರ್ಥನೆಯಂತೆ ಸಕಲಸಜ್ಜೀವರ ಉದ್ಧಾರ-ಕ್ಕಾಗಿ ವೇದಕ್ಕಿಂತಲೂ ಶ್ರೇಷ್ಠನಾದ, ಪಂಚಮವೇದವೆನಿಸಿದ ಮಹಾಭಾರತವನ್ನು ರಚಿಸಿದರೆಂದು ಸ್ಪಷ್ಟವಾಗುವುದು. ಇದರಿಂದ ವಕ್ತ್ರಾನುಕೂಲ್ಯ, ಶ್ರೋತ್ರಾನುಕೂಲ್ಯ, ಪ್ರಸಂಗಾನುಕೂಲ್ಯಗಳನ್ನು ನಿರೂಪಿಸಿದಂತಾಯಿತು. ಮತ್ತು ಆಪ್ತಮೂಲತ್ವಕ್ಕಿಂತಲೂ ವೇದವು ಪ್ರಮಾಣವೆಂತೂ ಹೇಳಿದಂತಾಯಿತು.

ಆದರೆ ವೇದಾರ್ಥನಿರ್ಣಾಯಕಗಳಾದ ಎಷ್ಟೋ ಗ್ರಂಥಗಳಿರಲು ಮಹಾಭಾರತಕ್ಕೇ ಏಕಿಷ್ಟು ಮಹತ್ವ ? ಎಂಬ ಪ್ರಶ್ನೆ ತಲೆದೋರುವುದು ಸ್ವಾಭಾವಿಕವಾಗಿದೆ. ಇದಕ್ಕೆ ಕೆಳಗಿನ ಪ್ರಮಾಣವು ಉತ್ತರ ನೀಡುವುದು.

"ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್" ಈ ಮಹಾಭಾರತದಲ್ಲಿ ಉಕ್ತವಾಗಿರುವ ವಿಷಯಗಳು ಇತರ ಗ್ರಂಥಗಳಲ್ಲೂ ಇವೆ. ಇದರಲ್ಲಿ ಹೇಳದಿರುವ ವಿಷಯಗಳು ಬೇರಾವ ಗ್ರಂಥಗಳಲ್ಲೂ ಇಲ್ಲ. ಅಂದರೆ ಭಾರತದಲ್ಲಿಲ್ಲದ ವಿಷಯವೇ ಇಲ್ಲ. ಆದ್ದರಿಂದಲೇ ಮಹಾಭಾರತಕ್ಕೆ ಇಷ್ಟೊಂದು ಮಹತ್ವ ಎಂದು ತಾತ್ಪರ್ಯ.

ಮಹಾಭಾರತದ ಮಹತ್ವವನ್ನು ಎತ್ತಿತೋರುವ ಒಂದು ಕಥೆಯಿದೆ. ಅದನ್ನು ಕೆಳಗಿನ ಪದ್ಯಗಳಿಂದ ತಿಳಿಯಬಹುದಾಗಿದೆ.

**"ಭಾರತಂ ಸರ್ವವೇದಾಶ್ಚ ತುಲಾಮಾರೋಪಿತಾಃ ಪುರಾ ।**
**ದೇವೈರ್ಬ್ರಹ್ಮಾದಿಭಿಸ್ಸರ್ವೈ ಋಷಿಭಿಶ್ಚ ಸಮನ್ವಿತೈಃ ।**
**ವ್ಯಾಸಸ್ಯೈವಾಜ್ಞಯಾ ತತ್ರ ತ್ವತ್ಯರಿಚ್ಯತ ಭಾರತಂ ॥"**

ಪೂರ್ವದಲ್ಲಿ ಚತುರಾನನ - ತ್ರಿಲೋಚನ ಪ್ರಮುಖ ದೇವತೆಗಳು, ಋಷಿಮುನಿಗಳು ಶ್ರೀವೇದವ್ಯಾಸರ ಅಪ್ಪಣೆಯಂತೆ ಒಂದು ತಕ್ಕಡಿಯಲ್ಲಿ ಸಮಾನಪರಿಮಾಣವುಳ್ಳ ಎರಡು ವಸ್ತುಗಳಲ್ಲಿ ಒಂದರಲ್ಲಿ ಭಾರತಾಭಿಮಾನಿ-ದೇವತೆಗಳನ್ನೂ, ಮತ್ತೊಂದರಲ್ಲಿ ಸಕಲಶಾಸ್ತ್ರಾಭಿಮಾನಿದೇವತೆಗಳನ್ನೂ ಆವಾಹನೆ ಮಾಡಿ ತೂಗಿದ ಕಾಲದಲ್ಲಿ ಭಾರತಾಭಿಮಾನಿದೇವತೆಗಳನ್ನು ಆವಾಹನೆಮಾಡಿದ್ದ ತಕ್ಕಡಿಯು ಭಾರವಾಗಿದ್ದುದರಿಂದ ಆಲಾಗಾಯಿತು ಮಹಾಭಾರತಕ್ಕೆ ಮಹತ್ವವುಂಟಾಯಿತಂತೆ!

ಮಹಾಭಾರತಶಬ್ದನಿರ್ವಚನದಿಂದಲೂ ಅದರ ಮಹತ್ವದ ಅರಿವಾಗುವುದು. "ಭಾರೇಣ ತತಸ್ತಾದ್ಭಾರತಂ, ಮಹಚ್ಚ ತತ್ ಭಾರತಂ ಚ ಮಹಾಭಾರತಂ" ಹೀಗೆ ವ್ಯುತ್ಪತ್ತಿ ಮಾಡಿದರೆ, ಅರ್ಥದಿಂದಲೂ, ಅಭಿಮಾನಿದೇವತೆ-ಗಳಿಂದಲೂ ಮಹತ್ವವುಳ್ಳದ್ದಾದುದರಿಂದ ಆದ್ದರಿಂದಲೇ ಮಹಾಭಾರವಾಗಿರುವುದರಿಂದಲೂ ಮಹಾಭಾರತ-

ವೆನಿಸಿಕೊಂಡಿದೆ ಎಂಬ ಅರ್ಥವು ವ್ಯಕ್ತವಾಗುವುದು. ಇಷ್ಟು ಮಹತ್ವವು ಇತರ ಯಾವ ಗ್ರಂಥಗಳಿಗೂ ಇರುವುದಿಲ್ಲ.

ಮಹಾಭಾರತಶಬ್ದಾರ್ಥವನ್ನು ವಿಚಾರಮಾಡಿ ಅರ್ಥ ತಿಳಿದುಕೊಳ್ಳುವುದರಿಂದ ಸಕಲಪಾಪನಿವೃತ್ತಿಯಾಗು-ವುದೆಂದು – "ಮಹತ್ವಾತ್ ಭಾರವತ್ವಾಚ್ಚ ಮಹಾಭಾರತಮುಚ್ಯತೇ । ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ" ಎಂಬ ಪ್ರಮಾಣವು ತಿಳಿಸುವುದು. ಏವಂ ಚ ಪೂರ್ವೋಕ್ತ ನಿಖಿಲಯುಕ್ತಿ ಉಪಕ್ರಮ ಪ್ರಮಾಣ-ವಚನಗಳಿಂದ ಸಕಲಶಾಸ್ತ್ರಗಳಲ್ಲಿ ಮಹಾಭಾರತವು ಶ್ರೇಷ್ಠವೆಂದು ಸಿದ್ಧವಾಗುವುದು.

ಜನನಮರಣರೂಪ ಸಂಸಾರಬಂಧದಲ್ಲಿ ಸಿಲುಕಿ ಬಳಲುತ್ತಿರುವ ಜೀವರು ಈ ಸಂಸಾರಚಕ್ರದಿಂದ ಪಾರಾಗಿ ಪುನರಾವರ್ತಿರಹಿತವಾದ ಆತ್ಯಂತಿಕದುಃಖನಿವೃತ್ತಿಪೂರ್ವಕ ಸ್ವಸ್ವರೂಪಾನಂದಾನುಭವರೂಪ ಮೋಕ್ಷವನ್ನು ಪಡೆಯ-ಬೇಕಾದರೆ ಅದಕ್ಕೆ ಪರಮಾತ್ಮನ ಅತ್ಯರ್ಥಪ್ರಸಾದ ಆವಶ್ಯವಾಗಿದೆ. ಭಗವತ್ಪ್ರಸಾದವು ಭಕ್ತಿಸಹಕೃತವಾದ ಭಗವದ್-ಜ್ಞಾನದಿಂದ ಮಾತ್ರ ಲಭಿಸುವುದು. ಅಂತಹ ತತ್ತ್ವಜ್ಞಾನವು ಶಾಸ್ತ್ರಾಧ್ಯಯನದಿಂದ ಲಭ್ಯವಾಗುವುದು. ಅಂತಹ ಮೋಕ್ಷಸಾಧಕಶಾಸ್ತ್ರಗಳೆಂದರೆ ಋಗಾದಿವೇದಗಳು, ಬ್ರಹ್ಮಸೂತ್ರಗಳು, ಪಂಚರಾತ್ರ, ಮೂಲರಾಮಾಯಣ ಮತ್ತು ಮಹಾಭಾರತವೆಂದು ಸಕಲಶಾಸ್ತ್ರಕಾರರು ಅಂಗೀಕರಿಸಿದ್ದಾರೆ. ಮಹಾಭಾರತವು ಶಾಶ್ವತಸುಖಸಾಧಕಶಾಸ್ತ್ರಗಳಲ್ಲಿ ಒಂದಾಗಿರುವುದರಿಂದಲೇ ಅದಕ್ಕೆ ಇಷ್ಟೊಂದು ಮಹತ್ವ ಉಂಟಾಗಿದೆ.

ದ್ವಾಪರಯುಗದಲ್ಲಿ ಗೌತಮರ ಶಾಪದಿಂದ ಜ್ಞಾನವು ನಷ್ಟವಾಗಿ ಮುಕ್ತಿಯೋಗ್ಯಜೀವರು ಬಳಲುತ್ತಿರುವಾಗ ಕರುಣಾಳುಗಳಾದ ಬ್ರಹ್ಮರುದ್ರೇಂದ್ರಾದಿ ದೇವತೆಗಳ ಪ್ರಾರ್ಥನೆಯಂತೆ ಶ್ರೀನಾರಾಯಣದೇವರು ಶ್ರೀವೇದವ್ಯಾಸರಾಗಿ ಅವತರಿಸಿ ವೇದವಿಭಾಗಪೂರ್ವಕವಾಗಿ ವೇದಾರ್ಥನಿರ್ಣಾಯಕ ಬ್ರಹ್ಮಮೀಮಾಂಸಾಶಾಸ್ತ್ರವನ್ನು, ಹದಿನೆಂಟು ಪುರಾಣಗಳು, ಉಪಪುರಾಣಗಳು ಮತ್ತು ಸಕಲಶಾಸ್ತ್ರಗರ್ಭಿತವಾದ ಮಹಾಭಾರತ ಇತಿಹಾಸಗಳನ್ನು ರಚಿಸಿ ಜ್ಞಾನಪ್ರತಿಷ್ಠಾಪನೆ ಮಾಡಿ ಸಜ್ಜನರನ್ನು ಉದ್ಧರಿಸಿದರು.

ಶ್ರೀವೇದವ್ಯಾಸರು ರಚಿಸಿದ ಮಹಾಭಾರತವು ತತ್ವಶಾಸ್ತ್ರಪ್ರಪಂಚದಲ್ಲಿ ವಿಶಿಷ್ಟಸ್ಥಾನವನ್ನು ಗಳಿಸಿರುವ ಪರಮ ಮಂಗಳಕರ ಮಹಾಗ್ರಂಥವಾಗಿದೆ.

ಈ ಮಹಾಭಾರತಕ್ಕೆ ಅನೇಕ ವ್ಯಾಖ್ಯಾನಗಳಿವೆ. ಆದರೆ ಅವು ಶ್ರೀಬಾದರಾಯಣರ ಭಾವವನ್ನು ಹೊರಹೊಮ್ಮಿಸಲು ಅಸಮರ್ಥವಾಗಿದೆ. ಅಂತೆಯೇ ಶ್ರೀವೇದವ್ಯಾಸರ ಬ್ರಹ್ಮಸೂತ್ರಗಳಿಗೆ ಅವರಿಗೆ ಸಮ್ಮತವಾದ ರೀತಿಯಲ್ಲಿ ಅವರಲ್ಲಿಯೇ ಅಧ್ಯಯನಮಾಡಿ ಅವರ ಅಪ್ಪಣೆಯಂತೆ ದ್ವೈತಭಾಷ್ಯವನ್ನು ರಚಿಸಿ ಜಗನ್ಮಾನ್ಯರಾದ, ವೇದಪ್ರತಿಪಾದ್ಯ ಮಹಾಮಹಿಮರೂ, ಜೀವೋತ್ತಮರೂ ಆದ ಶ್ರೀವಾಯುದೇವರ ತೃತೀಯಾವತಾರರಾದ ಶ್ರೀಮನ್ಮಧ್ವಾಚಾರ್ಯರು ಮಹಾಭಾರತ ಗ್ರಂಥದ ಮೇಲೆ "ತಾತ್ಪರ್ಯನಿರ್ಣಯ" ಎಂಬ ಅತ್ಯಂತ ಉತ್ಕೃಷ್ಟವಾದ ಗ್ರಂಥವನ್ನು ರಚಿಸಿ ವೇದವ್ಯಾಸರ ಅಭಿಪ್ರಾಯಗಳ ನಿರ್ಣಯಮಾಡಿ ಮಹೋಪಕಾರವನ್ನು ಮಾಡಿದ್ದಾರೆ. ಮಹಾಭಾರತದಲ್ಲಿ ತಲೆದೋರಬಹುದಾದ ಎಲ್ಲ ಸಂದೇಹ, ಭ್ರಮ, ವಿಪರೀತಾರ್ಥಗಳನ್ನು ಪರಿಹರಿಸಿ ಶ್ರೀವೇದವ್ಯಾಸರಿಗೆ ಪರಮಸಮ್ಮತವಾದ ರೀತಿಯಲ್ಲಿ ನಿರ್ಣಯ ಮಾಡಿರುವ ಶ್ರೀಮದಾಚಾರ್ಯರ ತಾತ್ಪರ್ಯ ನಿರ್ಣಯ ಗ್ರಂಥದಲ್ಲಿ ಅನೇಕ ರಹಸ್ಯಾರ್ಥಗಳು ಹೊರಹೊಮ್ಮಿವೆ. ಈ ಮಹಾಭಾರತತಾತ್ಪರ್ಯನಿರ್ಣಯವು ವೇದ, ಸ್ಮೃತಿ ಪುರಾಣವಾಕ್ಯಗಳ ಮಾತೃಸ್ಥಾನದಂತೆ ರಾರಾಜಿಸುತ್ತಿದೆ. ಇದು ಮುಮುಕ್ಷುಗಳನ್ನು ಅಮರತ್ವದೆಡೆಗೆ ಕೊಂಡೊಯ್ಯುವ

ಅಮೃತತರಂಗಿಣಿಯಾಗಿದೆ. ಸಕಲಶಾಸ್ತ್ರಾರ್ಥಗರ್ಭಿತವಾದ ಗ್ರಂಥವು ವಿಶ್ವದ ವೈದಿಕವಾಙ್ಮಯಕ್ಕೆ ಶ್ರೀಮದಾಚಾರ್ಯರು ನೀಡಿರುವ ಅನಿತರಸಾಧಾರಣ ಕಾಣಿಕೆಯೆಂದು ಹೇಳಲು ಹೆಮ್ಮೆ ಎನಿಸುವುದು.

ಮಹಾಭಾರತತಾತ್ಪರ್ಯನಿರ್ಣಯವು ಶ್ರೀಮದಾಚಾರ್ಯರ ಅಸಾಧಾರಣ ಜ್ಞಾನ, ಪ್ರತಿಭೆ, ಭಗವದ್ಭಕ್ತಿ, ಪ್ರಮಾಣೋದಾಹರಣಕೌಶಲ, ವಿಷಯನಿರೂಪಣಾಚಾತುರ್ಯ, ಸಜ್ಜನಾನುಗ್ರಹದೀಕ್ಷೆಗಳಿಗೆ ಜೀವಂತಸಾಕ್ಷಿಯಾಗಿ ಮೆರೆಯುತ್ತಿದೆ. ಇದು ವಿಶ್ವದ ಸಾರಸ್ವತರಂಗದಲ್ಲಿ ಸದಾತನವಾಗಿ ಉಳಿಯಬಲ್ಲ ಮೇರುಕೃತಿಯೆಂದು ಘಂಟಾಘೋಷವಾಗಿ ಹೇಳಬಹುದು.

ಶ್ರೇಷ್ಠದೇವತಾಲಕ್ಷಣಗಳೆಂದು ಶಾಸ್ತ್ರದಲ್ಲಿ ಉಕ್ತವಾಗಿರುವ ಮೂವತ್ತೆರಡು ಲಕ್ಷಣಗಳಿಂದ ರಾಜಿಸುವ ಶ್ರೀಮದಾಚಾರ್ಯರು ಮೂವತ್ತೆರಡು ಅಧ್ಯಾಯಾತ್ಮಕವಾದ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಮೊದಲು ಮೂರು ಅಧ್ಯಾಯಗಳನ್ನು ಶ್ರುತಿಸ್ಮೃತಿ ವಚನಗಳ ಉದಾಹರಣೆಗಾಗಿ ಮೀಸಲಾಗಿರಿಸಿದ್ದಾರೆ. ಆರು ಅಧ್ಯಾಯಗಳಲ್ಲಿ ಸಕಲ ಶಾಸ್ತ್ರಾರ್ಥನಿರ್ಣಯಕ್ಕಾಗಿ ಶ್ರೀ ಮೂಲರಾಮಾಯಣಕಥೆಯನ್ನು ಪ್ರತಿಪಾದಿಸಿರುವರು. ಒಂದು ಅಧ್ಯಾಯದಲ್ಲಿ ಶ್ರೀವೇದವ್ಯಾಸರ ಅವತಾರ ನಿರೂಪಣ ಮಾಡಿದ್ದಾರೆ. ಇನ್ನುಳಿದ ಇಪ್ಪತ್ತೆರಡು ಅಧ್ಯಾಯಗಳಲ್ಲಿ ಸಮಗ್ರ ಮಹಾಭಾರತ ಗ್ರಂಥದ ತಾತ್ಪರ್ಯವನ್ನು ವಿಸ್ತಾರವಾಗಿ, ಸ್ಪಷ್ಟವಾಗಿ ನಿರೂಪಿಸಿ ನಿರ್ಣಯಿಸಿದ್ದಾರೆ. ಹಾಗೆಯೇ ಮಹಾಭಾರತದಲ್ಲಿ ತಲೆದೋರಬಹುದಾದ ಸಂಶಯ, ಭ್ರಾಂತಿ ವಿಪರೀತಾಭಿಪ್ರಾಯಗಳನ್ನು ಪರಿಹರಿಸಿ ಶ್ರೀವೇದವ್ಯಾಸರ ಹೃದಯವನ್ನು ಅತಿ ಸುಂದರ ನುಡಿಗಳಿಂದ ಎತ್ತಿ ತೋರಿ ವಿಬುಧಾನೀಕಕ್ಕೆ ಎಂದೂ ಮರೆಯಲಾಗದ ಮಹೋಪಕಾರ ಮಾಡಿದ್ದಾರೆ.

ಶ್ರೀಮದಾಚಾರ್ಯರ ವೇದಾಂತಸಾಮ್ರಾಜ್ಯ ವಿದ್ಯಾಸಿಂಹಾಸನಾಧೀಶ್ವರರೂ, ಸಮಸ್ತ ದ್ವೈತಭಾಷ್ಯ ಟೀಕಾ ಟಿಪ್ಪಣಿಕಾರರೂ, ವೇದತ್ರಯನಿವೃತ್ತಿ, ನ್ಯಾಯಮುಕ್ತಾವಳಿ, ತಂತ್ರದೀಪಿಕಾ, ಗೀತಾರ್ಥಸಂಗ್ರಹ, ಭಾಟ್ಟಸಂಗ್ರಹ ಮುಂತಾದ ಅಸಾಧಾರಣ ಸ್ವತಂತ್ರ ಗ್ರಂಥರಚಯಿತೃಗಳೂ, ಶ್ರೀ ಪ್ರಹ್ಲಾದಾವತಾರರೂ ಆದ ಶ್ರೀಮದ್ರಾಘವೇಂದ್ರತೀರ್ಥಗುರುಸಾರ್ವಭೌಮರು, ಶ್ರೀಮದಾಚಾರ್ಯರು ರಚಿಸಿರುವ 32 ಅಧ್ಯಾಯಾತ್ಮಕವಾದ ಮಹಾಭಾರತತಾತ್ಪರ್ಯನಿರ್ಣಯ ಗ್ರಂಥವನ್ನು ಕೇವಲ 32 ಶ್ಲೋಕಗಳಲ್ಲೇ ಸಂಗ್ರಹಿಸಿ "ಮಹಾಭಾರತತಾತ್ಪರ್ಯನಿರ್ಣಯಭಾವಸಂಗ್ರಹ" ಎಂಬ ಪರಮಶ್ರೇಷ್ಠ ಮಂಗಳಕರವಾದ ಗ್ರಂಥರತ್ನವನ್ನು ರಚಿಸಿ, ಭಾರತದೇಶದ ವಿದ್ವನ್ಮಂಡಲಿಗೆ ಒಂದು ಅಮೌಲ್ಯ ಕಾಣಿಕೆಯನ್ನಿತ್ತು ಪರಮಾನುಗ್ರಹ ಮಾಡಿದ್ದಾರೆ.

ವಿಸ್ತಾರವಾದ ವಿಚಾರಗಳನ್ನು ಸಂಗ್ರಹಮಾಡಿ ಹೇಳುವುದರಲ್ಲಿ, ಆ ಕ್ರಮದಲ್ಲಿ ಗ್ರಂಥ ರಚಿಸುವುದರಲ್ಲಿ ಶ್ರೀಮಂತ್ರಾಲಯ ಶ್ರೀಪಾದಂಗಳವರು ಸಿದ್ಧಹಸ್ತರು, ಮಹಾಪ್ರಖ್ಯಾತರು. ಸಮಗ್ರ ರಾಮಾಯಣ, ಮತ್ತು ಭಾಗವತದಲ್ಲಿನ ಶ್ರೀಕೃಷ್ಣನ ಕಥೆಗಳನ್ನು 11 ಪದ್ಯಾತ್ಮಕ ಶ್ರೀರಾಮಚಾರಿತ್ರ್ಯಮಂಜರೀ, 28 ಪದ್ಯಾತ್ಮಕ ಶ್ರೀಕೃಷ್ಣಚಾರಿತ್ರ್ಯಮಂಜರಿಗಳಲ್ಲಿ ಸಂಗ್ರಹಿಸಿದ ಮಹಾಪ್ರತಿಭಾವಂತ ಜ್ಞಾನಿಗಳು ಶ್ರೀಗುರುರಾಜರು. ಶ್ರೀಗುರುಸಾರ್ವಭೌಮರ ಈ ಸಂಗ್ರಹಕೌಶಲವನ್ನು ಶ್ರೀವಾದೀಂದ್ರತೀರ್ಥಗುರುಚರಣರು "ಗುರುಗುಣಸ್ತವನ"ದಲ್ಲಿ

**ವಾಚಾ ಸಂಕ್ಷಿಪ್ತಯಾ ಯದ್ಬಹುಚರಿತಮುಪಾವರ್ಣಯಸ್ತ್ವಂ ಮುರಾರೇಃ**
**ಕಿಂಚ ಶ್ರೀ ರಾಘವೇಂದ್ರವ್ರತಿಪ ರಘುಪತೇಸ್ತೇನ ನೋ ವಿಸ್ಮಯೇಽಹಮ್॥**

ಕಿಂ ವಾ ದುಸ್ಸಾಧ್ಯಮಸ್ತಿ ತ್ರಿಜಗತಿ ಮಹತಾಮಾತ್ಮನಃ ಪಾಣಿಪದ್ಮೇ ।
ಪಶ್ಯಾಮಂದೋಮರಂದಃ ಕಿಲ ಘಟಜನುಷಾ ಚೋಲಿರಾಕಾರಿ ಸಿಂಧುಃ ॥

"ಹೇ ಶ್ರೀರಾಘವೇಂದ್ರ ಯತಿಶ್ರೇಷ್ಠರೆ ! ನೀವು ಅತಿ ಕಿರಿದಾದ ಶ್ರೀಕೃಷ್ಣಚಾರಿತ್ರ್ಯಮಂಜರಿ, ಶ್ರೀರಾಮ-ಚಾರಿತ್ರ್ಯಮಂಜರೀ ಎಂಬ ಗ್ರಂಥಗಳಲ್ಲಿ ಅತಿಸಂಕುಚಿತ ವಾಕ್ಯಗಳಿಂದ ಅತಿ ವಿಸ್ತಾರವಾದ ಶ್ರೀರಾಮಕೃಷ್ಣರ ಅನೇಕ ಚರಿತ್ರೆಯನ್ನು ಹೇಳಿರುವುದನ್ನು ಕಂಡು ನಾನು ಆಶ್ಚರ್ಯಪಡುವುದಿಲ್ಲ ! ಏಕೆಂದರೆ, ನೀವು ಮಹಾತ್ಮರು, ನಿಮಗೆ ಅಸಾಧ್ಯವಾದುದಾವುದಿದೆ ? ಈಗ ನೋಡಿ, ಮಹಾತ್ಮರಾದ ಅಗಸ್ತ್ಯ ಮಹರ್ಷಿಗಳು ಮಹಾಸಮುದ್ರವನ್ನೇ ತಮ್ಮ ಕರಕಮಲದಲ್ಲಿ ಆಪೋಶನರೂಪವಾಗಿ ಜೇನುಹನಿಯಂತೆ ಮಾಡಿ ಕುಡಿದುಬಿಡಲಿಲ್ಲವೇ ? ನೀವೂ ಮಹಾತ್ಮರಾದ್ದರಿಂದ ಶ್ರೀರಾಮಕೃಷ್ಣರ ವಿಸ್ತಾರವಾದ ಬಹುಚರಿತ್ರೆಯನ್ನು ನೀವು ಸಣ್ಣ ಗ್ರಂಥಗಳಲ್ಲೇ ಸಂಕುಚಿತ ವಾಕ್ಯಗಳಿಂದಲೇ ವರ್ಣಿಸಿದ್ದೀರಿ" ಎಂದು ಕೊಂಡಾಡಿದ್ದಾರೆ. ಇದರಿಂದ ಶ್ರೀಗುರುರಾಜರ ಗ್ರಂಥರಚನಾಸಾಮರ್ಥ್ಯ ವ್ಯಕ್ತವಾಗುವುದು.

ಪ್ರಕೃತ 'ಭಾವಸಂಗ್ರಹ' ಗ್ರಂಥದಲ್ಲಿಯೂ ಕೇವಲ 32 ಶ್ಲೋಕಗಳಲ್ಲಿ ಸಮಗ್ರ 32 ಅಧ್ಯಾಯಾತ್ಮಕ ಮಹಾಭಾರತದ ತಾತ್ಪರ್ಯನಿರ್ಣಯವನ್ನು ಸಂಗ್ರಹಿಸಿ ಶ್ರೀಗುರುರಾಜರು ಸಾರಸ್ವತ ಪ್ರಪಂಚಕ್ಕೆ ಅತಿ ಹಿರಿದಾದ ಕೊಡುಗೆಯನ್ನಿತ್ತು ಶಾಸ್ತ್ರಾಧ್ಯಯನಶೀಲರಿಗೆ ಮಹೋಪಕಾರ ಮಾಡಿದ್ದಾರೆ. ಈ ಪುಟ್ಟ ಗ್ರಂಥವನ್ನು ಪಾರಾಯಣ ಮಾಡುವುದರಿಂದ ಸಮಗ್ರ ಮಹಾಭಾರತತಾತ್ಪರ್ಯನಿರ್ಣಯ ಗ್ರಂಥ ಪಾರಾಯಣ ಮಾಡಿದ ಸುಕೃತಕ್ಕೆ ಸುಜನರು ಭಾಗಿಗಳಾಗ-ಬಹುದಾಗಿದೆ. ಅರ್ಥಾನುಸಂಧಾನಪೂರ್ವಕವಾಗಿ ಭಕ್ತಿಪೂರ್ವಕ ಪಾರಾಯಣ ಮಾಡಿದಲ್ಲಿ ಈ ಪುಟ್ಟಗ್ರಂಥವು ಅತಿದೊಡ್ಡದಾದ ಫಲವನ್ನೂ ಪರಮಮಂಗಳವನ್ನೂ ಸಕಲ ವಾಂಛಿತಾರ್ಥಗಳನ್ನೂ ಕೊಡಿಸಲು ಸಮರ್ಥವಾಗಿದೆ.

ಶ್ರೀಗುರುಸಾರ್ವಭೌಮರ ಈ 'ಭಾವಸಂಗ್ರಹ'ಕ್ಕೆ ಅವರ ಪೂರ್ವಾಶ್ರಮಪುತ್ರರೂ, "ಋಗ್ಭಾಷ್ಯಟೀಕಾವ್ಯಾಖ್ಯಾನ, ಶ್ರೀರಾಮಚಾರಿತ್ರ್ಯಮಂಜರೀ, ಶ್ರೀಕೃಷ್ಣಚಾರಿತ್ರ್ಯಮಂಜರೀ ವ್ಯಾಖ್ಯಾನಗಳೇ" ಮೊದಲಾದ ಅನೇಕ ಶ್ರೇಷ್ಠ ಪ್ರಬಂಧ-ಗಳನ್ನು ರಚಿಸಿ ವಿದ್ವತ್ಪ್ರಪಂಚದಲ್ಲಿ ಅಸದೃಶ ಕೀರ್ತಿಗೌರವ, ಸ್ಥಾನಮಾನಗಳನ್ನು ಗಳಿಸಿರುವ ವಿದ್ವತ್ಕುಲಲಲಾಮರಾದ ಶ್ರೀಲಕ್ಷ್ಮೀನಾರಾಯಣಾಚಾರ್ಯರು ಸಂಸ್ಕೃತದಲ್ಲಿ ವ್ಯಾಖ್ಯಾನ ರಚಿಸಿರುತ್ತಾರೆ.

ನಮ್ಮ ವಂಶದ ಪೂರ್ವಿಕರೂ, ಶ್ರೀಗುರುರಾಜರ ಸಾಕ್ಷಾತ್ ಪೂರ್ವಾಶ್ರಮಪುತ್ರರೂ, ಶಿಷ್ಯರೂ ಆದ ಪರಮಪೂಜ್ಯ ಶ್ರೀಲಕ್ಷ್ಮೀನಾರಾಯಣಾಚಾರ್ಯರ ಸಂಸ್ಕೃತವ್ಯಾಖ್ಯಾನವನ್ನು ಆಧರಿಸಿ ನಾನು ತತ್ತ್ವಬುಭುತ್ಸುಗಳಾದ ಸುಜನರಿಗೆ ಉಪಯೋಗವಾಗಲೆಂದು ಶ್ರೀಮಂತ್ರಾಲಯಶ್ರೀಪಾದಂಗಳವರ 'ಭಾವಸಂಗ್ರಹ'ವನ್ನು ಕನ್ನಡದಲ್ಲಿ ಅನುವಾದ ಮಾಡಲು ಪ್ರವೃತ್ತರಾಗಿದ್ದೇನೆ.

ಶ್ರೀಮಂತ್ರಾಲಯಕ್ಷೇತ್ರದಲ್ಲಿ ನಾವು ಶ್ರೀರಾಯರ ಬೃಂದಾವನ ಸನ್ನಿಧಿಯ ಕಾರ್ಯಾಲಯದ ವ್ಯವಸ್ಥಾಪಕರಾಗಿ, ಶ್ರೀಗುರುಸಾರ್ವಭೌಮ ಸಂಸ್ಕೃತ ಕಾಲೇಜಿನ ಗೌರವಾಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾಗ, 1955ರಲ್ಲಿ ಶ್ರೀಮದಾ-ಚಾರ್ಯರ ವಿದ್ಯಾಸಿಂಹಾಸನಾಧೀಶ್ವರರಾದ ಶ್ರೀಗುರುರಾಜರ ಪೀಠದಲ್ಲಿ ವಿರಾಜಮಾನರಾಗಿದ್ದ ಪರಮಪೂಜ್ಯ ಶ್ರೀ ಸುಯಮೀಂದ್ರತೀರ್ಥ ಶ್ರೀಪಾದಂಗಳವರಲ್ಲಿ, ಶ್ರೀ ರಾಘವೇಂದ್ರಗುರುರಾಜರು ರಚಿಸಿದ ಲೋಕಮಾನ್ಯ ಗ್ರಂಥಗಳನ್ನು ಅಪಂಡಿತ ಪಾಮರರಿಗೂ ಸಂತೋಷವಾಗುವ ರೀತಿಯಲ್ಲಿ ಕನ್ನಡಭಾಷೆಯಲ್ಲಿ ಅನುವಾದ ಮಾಡಿ ಪ್ರಕಟಿಸಬೇಕೆಂಬ ನಮ್ಮ ಮಹದಾಸೆಯನ್ನು ಅರಿಕೆ ಮಾಡಿದೆವು. ಆಗ ಪರಮಕರುಣಾಳುಗಳಾದ ಶ್ರೀಸುಯಮೀಂದ್ರತೀರ್ಥಪೂಜ್ಯ-

ಪಾದರು ನಮ್ಮ ಮನದಿಚ್ಛೆಯನ್ನು ಕೇಳಿ ಸಂತೋಷಿಸಿ ಅನುವಾದಕಾರ್ಯ ಮಾಡಿ ಸಜ್ಜನರಿಗೆ ಉಪಕಾರಮಾಡಲು ಅಪ್ಪಣೆಯಿತ್ತು ಆಶೀರ್ವದಿಸಿ "ಶ್ರೀಪರಿಮಳಾಚಾರ್ಯರ ಗ್ರಂಥಗಳನ್ನು ಕನ್ನಡದಲ್ಲಿ ಅನುವಾದಮಾಡಿ ಪ್ರಕಟಿಸು, ಈ ಕಾರ್ಯದಲ್ಲಿ ಅವರೇ ನಿನಗೆ ಪ್ರೇರಕಶಕ್ತಿಯಾಗಿ ನಿಂತು ಆ ಉತ್ತಮ ಕಾರ್ಯವನ್ನು ನಿನ್ನಿಂದ ಮಾಡಿಸುತ್ತಾರೆ ಮತ್ತು ಸುಪ್ರೀತರಾಗಿ ನಿನ್ನ ಉದಾತ್ತವಾದ ಉಳಿದೆಲ್ಲ ಆಸೆಗಳನ್ನು ಪೂರ್ಣಮಾಡಿ ಅನುಗ್ರಹಿಸುತ್ತಾರೆ" ಎಂದು ಅಪ್ಪಣೆ ಮಾಡಿ ಆಶೀರ್ವದಿಸಿದರು.

ಶ್ರೀಪಾದಂಗಳರ ಆಶೀರ್ವಾದಬಲ, ಶ್ರೀಗುರುರಾಜರ ಕಾರುಣ್ಯ, ಅನುಗ್ರಹಗಳಿಂದ 1) ಶ್ರೀರಾಮಚಾರಿತ್ರ್ಯ-ಮಂಜರೀ, 2) ಶ್ರೀಕೃಷ್ಣಚಾರಿತ್ರ್ಯಮಂಜರೀ, 3) ವಾದೀಂದ್ರತೀರ್ಥಗುರುಪಾದ ವಿರಚಿತ "ಗುರುಗುಣಸ್ತವನ" ಗ್ರಂಥಗಳನ್ನು ಕನ್ನಡದಲ್ಲಿ ಅನುವಾದ ಮಾಡಿ ಶ್ರೀಗುರುರಾಜರ ಭಕ್ತರಿಗಾಗಿ ಶ್ರೀಯವರ ಸನ್ನಿಧಿಯಲ್ಲಿ ಸಮರ್ಪಿಸಿ ಅವರ ಅನುಗ್ರಹಕ್ಕೆ ಪಾತ್ರರಾದೆವು.

ಶ್ರೀಪಾದಂಗಳವರ ಇಚ್ಛೆವನ್ನು ಪೂರ್ಣಮಾಡುವ ಹೊಣೆಯು ನಮ್ಮ ಮೇಲಿದ್ದುದರಿಂದ ಶ್ರೀಗುರುರಾಜರ ತ್ರಿಶತಮಾನೋತ್ಸವ ಕಾಲದಲ್ಲಿ ಅವರು ರಚಿಸಿದ "ತಾತ್ಪರ್ಯನಿರ್ಣಯಭಾವಸಂಗ್ರಹ"ವನ್ನು ಅನುವಾದ ಮಾಡಿ ಪ್ರಕಟಿಸಲು ಆಶಿಸಿ ಅನುವಾದಕಾರ್ಯವನ್ನು ಕೈಗೊಂಡೆವು. ಆದರೆ ಆ ಶುಭಸಮಯದಲ್ಲಿ ಅನುವಾದಕಾರ್ಯ ಅಪೂರ್ಣವಾಗಿದ್ದುದರಿಂದ ಪ್ರಕಟಿಸಲು ಸಾಧ್ಯವಾಗಲಿಲ್ಲ.

ಶ್ರೀಗುರುರಾಜರ ಅನುಗ್ರಹ, ಶ್ರೀಸುಯಮೀಂದ್ರತೀರ್ಥರ ಆಶೀರ್ವಾದಬಲದಿಂದ ಈಗ ಅನುವಾದ ಕಾರ್ಯವು ಪೂರ್ಣವಾಗಿದೆ. ಶ್ರೀರಾಮ-ಕೃಷ್ಣ-ಚಾರಿತ್ರ್ಯಮಂಜರಿಗಳು ಮತ್ತು 'ಗುರುಗುಣಸ್ತವನ' ಗ್ರಂಥಗಳ ಅನುವಾದವನ್ನು ಕಂಡು ಆನಂದಿಸಿ ಆಶೀರ್ವದಿಸಿದ ಪೂಜ್ಯ ಶ್ರೀಸುಯಮೀಂದ್ರತೀರ್ಥರು ಕಣ್ಮರೆಯಾಗಿದ್ದರೂ, ಶ್ರೀಗುರುರಾಜರ ಸನ್ನಿಧಿ-ಸ್ವಗುರುಸನ್ನಿಧಿಯಲ್ಲಿ ಬೃಂದಾವನಸ್ಥರಾಗಿರುವ ಆ ಮಹಾನುಭಾವರು ನಮ್ಮ 'ಭಾವ-ಸಂಗ್ರಹ'ದ ಈ ಅನುವಾದಕ್ಕೆ ಅಲ್ಲಿಂದಲೇ ಆಶೀರ್ವದಿಸಿ, ಮುಂದೆ ಇನ್ನೂ ಉತ್ತಮ ರೀತಿಯಲ್ಲಿ ಶ್ರೀಗುರುರಾಜರೇ ಮೊದಲಾದ ಪ್ರಾಚೀನಾರ್ಯರ ಗ್ರಂಥಗಳನ್ನು ಅನುವಾದಮಾಡಿ ಸಜ್ಜನರಿಗೆ ನೀಡಲು ಸಕಲವಿಧ ಶಕ್ತಿಯನ್ನು ಕರುಣಿಸುವರೆಂದು ನಂಬಿದ್ದೇವೆ.

ಶ್ರೀಹರಿವಾಯುಗಳ, ಶ್ರೀಮಂತ್ರಾಲಯ ಪ್ರಭುಗಳ, ಪೂಜ್ಯಶ್ರೀ ಲಕ್ಷ್ಮೀನಾರಾಯಣಾಚಾರ್ಯರ ಹಾಗೂ ಶ್ರೀ ಸುಯಮೀಂದ್ರಗುರುಪಾದರ ಚರಣಕಮಲಗಳಿಗೆ ಅಭಿವಂದಿಸಿ, ಆ ಮಹನೀಯರುಗಳ ಅನುಗ್ರಹಕವಚ ತೊಟ್ಟು, ಅವರೇ ಒಳಗೆ ನಿಂತು ಪ್ರೇರಣೆ ಮಾಡಿ ಬರೆಯಿಸಿದಂತೆ ನಮ್ಮ ಯೋಗ್ಯತಾನುಸಾರವಾಗಿ 'ಭಾವಸಂಗ್ರಹ'ವನ್ನು ಅನುವಾದಮಾಡಿ, ಶ್ರೀಗುರುರಾಜರ ಭಕ್ತರಾದ ಸಜ್ಜನರಿಗೆ ಅರ್ಪಿಸಲು ಪರಮಾನಂದವಾಗಿರುತ್ತದೆ.

ನಮ್ಮ ಈ ಅನುವಾದ ಗ್ರಂಥದಲ್ಲಿ ಮೊದಲು ಶ್ರೀರಾಯರು ರಚಿಸಿದ ಭಾವಸಂಗ್ರಹದ ಒಂದೊಂದು ಪದ್ಯಗಳನ್ನು ಕೊಟ್ಟು, ಅದಕ್ಕೆ ಶ್ರೀಲಕ್ಷ್ಮೀನಾರಾಯಣಾಚಾರ್ಯರ ವ್ಯಾಖ್ಯಾನವನ್ನು ಅನುಸರಿಸಿ, ಅನ್ವಯಾರ್ಥ ಮತ್ತು ತಾತ್ಪರ್ಯಗಳನ್ನು ಕೊಟ್ಟಿದ್ದೇವೆ. ಮತ್ತು ಶ್ರೀ ಗುರುರಾಜರು ಶ್ರೀಮದಾಚಾರ್ಯರ "ಮಹಾಭಾರತ ತಾತ್ಪರ್ಯ ನಿರ್ಣಯ"ದ ಒಂದೊಂದು ಅಧ್ಯಾಯಗಳ ಅರ್ಥವನ್ನು ಹೇಗೆ ಸಂಗ್ರಹಿಸಿದ್ದಾರೆಂದು ತೋರಿಕೊಡಲು ಶ್ರೀಮದಾ-ಚಾರ್ಯರ ತಾತ್ಪರ್ಯನಿರ್ಣಯದ ಒಂದೊಂದು ಅಧ್ಯಾಯದ ಕಥೆಯನ್ನು ನಮ್ಮ ಯೋಗ್ಯತಾನುಸಾರವಾಗಿ ಸಂಗ್ರಹಿಸಿ "ತಾತ್ಪರ್ಯನಿರ್ಣಯದ ಪ್ರಥಮಾಧ್ಯಾಯಕಥಾಸಂಗ್ರಹ, ದ್ವಿತೀಯಾಧ್ಯಾಯಕಥಾಸಂಗ್ರಹ" ಎಂಬ ಶಿರೋನಾಮೆಗಳಲ್ಲಿ ಕೊಟ್ಟಿರುತ್ತೇವೆ. ಒಂದು ರೀತಿಯಿಂದ ಈ ಭಾಗವು ಮಹಾಭಾರತತಾತ್ಪರ್ಯನಿರ್ಣಯದ

ಕಥಾನುವಾದವೇ ಆಗಿದೆಯೆಂದು ಹೇಳಬಹುದು. ಇದರಿಂದ ಶ್ರೀಗುರುರಾಜರ ಸೇವೆಯ ಜೊತೆಗೆ ಶ್ರೀ ಸರ್ವಜ್ಞಾಚಾರ್ಯರ ಸೇವೆಯನ್ನೂ ಮಾಡಿದಂತಾಗಿದೆಯೆಂದು ಮನಸ್ಸಿಗೆ ಹರ್ಷವಾಗಿದೆ. ಇದರಿಂದ ಅಧ್ಯಯನ-ಶೀಲರಿಗೆ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದ ಕಥೆಯನ್ನು ಅರಿಯಲು ಸಹಾಯಕವಾಗುವುದೆಂದು ಭಾವಿಸುತ್ತೇನೆ.

ನಮ್ಮ ಅನುವಾದ ಕಾರ್ಯದಲ್ಲಿ ಅಮೂಲ್ಯಸಲಹೆಗಳನ್ನಿತ್ತು, ಅನುವಾದ ಮಾಡಿದಂತೆಲ್ಲಾ ಓದಿಸಿ ಕೇಳಿ ಸಂತೋಷಿಸಿ ಪ್ರೋತ್ಸಾಹಿಸಿ ಸಹಕರಿಸಿದ ನಮ್ಮ ದಿವಂಗತ ಪೂಜ್ಯ ಕಕ್ಕಂದಿರಾದ ವಿದ್ವಾನ್ ಶ್ರೀ ಆರ್. ಜಯರಾಮಾಚಾರ್ಯರ ಉಪಕಾರವನ್ನು ನಾವು ಮರೆಯಲಾರೆವು. ಅದರಂತೆ ಸಹಕರಿಸಿ ಪ್ರೋತ್ಸಾಹಿಸಿದ ಪ್ರಿಯಮಿತ್ರರಾದ ವಿದ್ವಾನ್ ಶ್ರೀ ರತ್ತಿ ವೆಂಕಣ್ಣಾಚಾರ್ಯರಿಗೆ ನಮ್ಮ ಪ್ರಣಾಮಗಳನ್ನು ಸಲ್ಲಿಸುವುದು ಕರ್ತವ್ಯವೆಂದು ತಿಳಿದಿದ್ದೇವೆ.

ನಮ್ಮ ಈ ಅನುವಾದಗ್ರಂಥವನ್ನು ಸುಜನರು ಸಂತೋಷದಿಂದ ಸ್ವೀಕರಿಸಿ ಇದರ ಉಪಯೋಗವನ್ನು ಪಡೆದಲ್ಲಿ ನಮ್ಮ ಶ್ರಮವು ಸಾರ್ಥಕವಾಗುವುದು.

ಇತಿ ಸಜ್ಜನವಿಧೇಯ

**ರಾಜಾ ಎಸ್. ಗುರುರಾಜಾಚಾರ್ಯ**

ಅನುವಾದಕ

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

# ಗ್ರಂಥ ಸಮರ್ಪಣೆ

ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರ ಪರಮಾನುಗ್ರಹ-ಬಲದಿಂದ ಪುನರ್ಜನ್ಮವನ್ನು ಹೊಂದಿ, ಪರಮಪೂಜ್ಯ ಶ್ರೀಸುಯಮೀಂದ್ರತೀರ್ಥ ಶ್ರೀಪಾದಂಗಳವರ ಪರಮಾದೇಶದಂತೆ, ಶ್ರೀರಾಯರು ಕರುಣಿಸಿದ ಹೊಸ ಜನ್ಮವನ್ನು ಶ್ರೀರಾಯರ ಚರಣಸೇವೆಗಾಗಿ ಮೀಸಲಾಗಿರಿಸಲು ಸಂಕಲ್ಪಪೂರ್ವಕವಾಗಿ ಪ್ರತಿಜ್ಞೆ ಮಾಡಿ, ಅದನ್ನು ಚಾಚೂ ತಪ್ಪದಂತೆ ತಮ್ಮ ಸಂಪೂರ್ಣ ಜೀವಿತಾವಧಿಯಲ್ಲಿ ಪಾಲಿಸಿ, ಶ್ರೀಮನ್ಮಧ್ವಸಿದ್ಧಾಂತದ ಅಸಂಖ್ಯಾತ ಅಪೂರ್ವ ಅಪ್ರಕಟಿತ ಗ್ರಂಥರತ್ನಗಳು ವಿದ್ವತ್ಪ್ರಪಂಚದಲ್ಲಿ ವಿರಾಜಿಸುವುದಕ್ಕೆ ಕಾರಣಕರ್ತರಾಗಿ ಸುಧೀಜನರಿಂದ "ಸಾರಸ್ವತಲೋಕದ ಸರಸ್ವತೀ" ಎಂಬ ಕೀರ್ತಿಗೆ ಪಾತ್ರರಾಗಿ ಶ್ರೀಗುರುರಾಜರ ಪಟ್ಟಾಭಿಷೇಕ ಮಹೋತ್ಸವದ ದಿನದಂದೇ ಅವರ ಚರಣ-ಸನ್ನಿಧಿಯನ್ನು ಸೇರಿದ 'ಶ್ರೀರಾಘವೇಂದ್ರಗುರುವಂಶಭೂಷಣಂ' ರಾಜಾ. ಶ್ರೀ. ಗುರುರಾಜಾಚಾರ್ಯರ ಸಂಸ್ಮರಣಾರ್ಥವಾಗಿ, ಶ್ರೀರಾಯರು ರಚಿಸಿರುವ 'ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯ ಭಾವಸಂಗ್ರಹ' ಎಂಬ ಗ್ರಂಥಪುಷ್ಪವನ್ನು ಮಂತ್ರಾಲಯ ಸುಕ್ಷೇತ್ರದಲ್ಲಿ ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರ ಪಟ್ಟಾಭಿಷೇಕ ಮಹೋತ್ಸವದಿಂದ ಆರಂಭವಾಗಿ ಶ್ರೀರಾಯರ ವರ್ಧಂತ್ಯುತ್ಸವ ಪರ್ಯಂತ ನೆರವೇರುವ ಶ್ರೀರಾಘವೇಂದ್ರ ಗುರುಭಕ್ತಿ ಉತ್ಸವದ ಪರಮಮಂಗಳಕರ ಸುಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರ ಅಮೃತ ಹಸ್ತಗಳಿಂದ ಶ್ರೀಗುರುರಾಜರ ಪರಮಪಾವನ ಚರಣ ಕಮಲಗಳಿಗೆ ಸದ್ಭಕ್ತಿ, ಶ್ರದ್ಧಾದರ, ನಮನಪೂರ್ವಕವಾಗಿ ಸಮರ್ಪಿಸಿ ಪ್ರಕಾಶಿಸಲ್ಪಟ್ಟಿದೆ.



ಶ್ರೀ ರಾಘವೇಂದ್ರ ಗುರುಭಕ್ತಿ ಉತ್ಸವ
06.03.2011 ರಿಂದ 12.03.2011
ಮಂತ್ರಾಲಯ

– ರಾಘವೇಂದ್ರವಂಶಿ

# ಕುಲದೈವ



# ಶ್ರೀಶ್ರೀನಿವಾಸದೇವರು

# ಕುಲಗುರುಗಳು



ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು

## ಸಂಶೋಧನ ಕೇಂದ್ರದ ಸಾಮ್ರಾಟ್ ಪೋಷಕರು



ಶ್ರೀ ಸುಯಮೀಂದ್ರತೀರ್ಥರು

# ಸಾಮ್ರಾಟ್ ಪೋಷಕರು



ಶ್ರೀ ಸುಜಯೀಂದ್ರತೀರ್ಥರು

# ಸಾಮ್ರಾಟ್ ಪೋಷಕರು




**ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರು.**

# ಸಾಮ್ರಾಟ್ ಪೋಷಕರು



ಅಧುನಾಪೀಠ ವಿರಾಜಮಾನರು

## ಶ್ರೀ ಸುಯತೀಂದ್ರತೀರ್ಥರು

# ಸಂಶೋಧನ ಕೇಂದ್ರದ ಸ್ಫೂರ್ತಿಮೂರ್ತಿಗಳು



ರಾಜಾ ಶ್ರೀ ವೇಣುಗೋಪಾಲಾಚಾರ್ಯ



ರಾಜಾ ಶ್ರೀ ಗುರುರಾಜಾಚಾರ್ಯ



ರಾಜಾ ಶ್ರೀ ಲಕ್ಷ್ಮೀನಾರಾಯಣಾಚಾರ್ಯ



ಡಾ. ಹುಲಿ ಕೃ. ವೇದವ್ಯಾಸಾಚಾರ್ಯ

# ಗ್ರಂಥಸಹಾಯಕರು



## ಶ್ರೀ ಯು. ಕೃಷ್ಣಮೂರ್ತಿ

ಶ್ರೀ ಹರಿ-ವಾಯು ರಾಘವೇಂದ್ರತೀರ್ಥ ಗುರುಸಾರ್ವಭೌಮರ ಅಂತರಂಗ ಭಕ್ತರಾದ ಶ್ರೀ ಯು. ಕೃಷ್ಣಮೂರ್ತಿಯವರು ತಮ್ಮ ಜನ್ಮಸ್ಥಳವಾದ ಉದ್ಯಾವರದಲ್ಲಿ ಹೋಟೆಲ್ ಉದ್ಯಮವನ್ನು ನಡೆಸುತ್ತಿದ್ದರು. ಇವರು ಸತ್ಕಾರ್ಯ-ಧರ್ಮಕಾರ್ಯಗಳನ್ನು ನೆರವೇರಿಸುತ್ತಾ ಸಜ್ಜನರ ಪ್ರೀತಿಗೆ ಪಾತ್ರರಾಗಿದ್ದರು, ಶ್ರೀಯುತರು ಶಿತಿಲಾವಸ್ಥೆಯಲ್ಲಿದ್ದ ಶಂಬುಕಲ್ಲು ವೀರಭದ್ರ, ದುರ್ಗಾ ದೇವಸ್ಥಾನದ ಜೀರ್ಣೋದ್ಧಾರವನ್ನು ಮಾಡಿರುತ್ತಾರೆ. ಅನೇಕ ಬಡವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸಕ್ಕಾಗಿ ಉದಾರವಾಗಿ ಧನಸಹಾಯವನ್ನು ಮಾಡಿರುತ್ತಾರೆ. ಶ್ರೀ ರಾಘವೇಂದ್ರ ಸ್ವಾಮಿಗಳಲ್ಲಿ ಇವರಿಗೆ ಅನನ್ಯಸಾಧಾರಣವಾದ ಭಕ್ತಿ, ಯಾವುದೇ ಒಳ್ಳೆಯ ಕಾರ್ಯವನ್ನು ಮಾಡಿದರೂ ಅದು ಶ್ರೀರಾಯರ ಪರಮಾನುಗ್ರಹದ ಫಲ ಎಂಬ ಸದ್ಭಾವನೆಯನ್ನು ಹೊಂದಿದ್ದವರು. ಇದನ್ನು ಇವರ ಪತ್ನಿ, ಪುತ್ರರು ಹಾಗು ಸಕಲ ಕುಟುಂಬವರ್ಗದವರು ನೆನೆಸುತ್ತಾರೆ.

ಶ್ರೀಯುತರಂತೆ ಅವರ ಸತ್ಪುತ್ರರು ಯಾವುದೇ ರೀತಿಯ ಪ್ರಚಾರ-ಪ್ರಸಾರಗಳನ್ನು ಬಯಸದೇ ಭಗವತ್-ಪ್ರೀತ್ಯರ್ಥವಾಗಿ ಅನೇಕ ಸತ್ಕಾರ್ಯ-ಧರ್ಮಕಾರ್ಯ-ಜ್ಞಾನಕಾರ್ಯಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ.

ಇವರ ಧರ್ಮಪತ್ನಿಯವರಾದ ಶ್ರೀಮತಿ ಸುಶಿಲಾಮೂರ್ತಿ, ಸತ್ಪುತ್ರರಾದ ಶ್ರೀ ಯು. ನಾಗರಾಜ್ ಶ್ರೀಮತಿ ಅನುರಾಧಾ, ಶ್ರೀ ಯು. ರವಿರಾಜ್ ಶ್ರೀಮತಿ ರಶ್ಮಿ, ಶ್ರೀ ಯು. ರಾಜಾ, ಶ್ರೀಮತಿ ರಮ್ಯ ಹಾಗು ಮೊಮ್ಮಕ್ಕಳಾದ ಕೃಷ್ಣರಾಜ್, ಕಾವ್ಯ, ಕವನ, ಕಾರ್ತಿಕ್ ಮತ್ತು ಕೌಶಿಕ್ ಇವರೆಲ್ಲರೂ ತಮ್ಮ ಹಿರಿಯರಾದ ಶ್ರೀ ಯು. ಕೃಷ್ಣಮೂರ್ತಿಯವರ ಹೆಸರಿನಲ್ಲಿ ಶ್ರೀ ರಾಯರ ಗ್ರಂಥವನ್ನು ಪ್ರಕಟಿಸಬೇಕೆಂದು ಅಪೇಕ್ಷಿಸಿ ಅದಕ್ಕೆ ತಗಲುವ ಸಂಪೂರ್ಣ ವೆಚ್ಚವನ್ನು ನೀಡಿರುತ್ತಾರೆ. ಇವರೆಲ್ಲರಿಗೂ ಶ್ರೀ ಗುರುರಾಜರು ಸನ್ಮಂಗಳವನ್ನು ಕರುಣಿಸಲಿ ಎಂದು ಪ್ರಾರ್ಥಿಸುತ್ತಾ ನಮ್ಮ ಕೃತಜ್ಞತೆಯ ಧನ್ಯವಾದಗಳನ್ನು ತಿಳಿಸುತ್ತೇವೆ.

– ರಾಘವೇಂದ್ರವಂಶಿ

# ಸಂಸ್ಥಾಪಕರು



ಅನುವಾದಕರು
"ಶ್ರೀರಾಘವೇಂದ್ರಗುರುವಂಶಭೂಷಣಂ"
ರಾಜಾ. ಶ್ರೀ. ಗುರುರಾಜಾಚಾರ್ಯ



ವಾಸುದೇವ ರೂಪಿ - ಪರಮಾತ್ಮನ ಉದರದಲ್ಲಿ ನವಗ್ರಹ ಹಾಗು ಬ್ರಹ್ಮ-ರುದ್ರ ಇಂದ್ರರು

॥ ಶ್ರೀಃ ॥

॥ ಶ್ರೀಮೂಲರಾಮೋ ವಿಜಯತೇತರಾಮ್ ॥

॥ ಶ್ರೀಗುರುರಾಜೋ ವಿಜಯತೇ ॥

ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತಃ

# ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ-ಭಾವಸಂಗ್ರಹಃ

ಕನ್ನಡಾನುವಾದ :

## ರಾಜಾ ಶ್ರೀ ಗುರುರಾಜಾಚಾರ್ಯ

***ಅನುವಾದಕರ ಮಂಗಳಾಚರಣೆ***

ಶ್ರೀಕಾಂತಂ ಕಮಲಾಸನೇಶವಿನುತಂ ಸರ್ವೇಶ್ವರಂ ಮೋಕ್ಷದಂ
ರಾಕಾಚಂದ್ರನಿಭಾನನಂ ಕಮಲಯಾ ಶೇಷಾಂಗಸಂಶಾಯಿನಮ್ ।
ಬ್ರಹ್ಮಾಂಡೋದಯಸಂಸ್ಥಿತಿಕ್ಷತಿಮುಖಾದ್ಯಷ್ಟಕ್ರಿಯಾಕಾರಿಣಂ
ವಂದೇಽಹಂ ನಿರವದ್ಯಸದ್ಗುಣತನುಂ ವೇದೈಕವೇದ್ಯಂ ವಿಭುಮ್ ॥ 1 ॥

ರಾಮಪಾದಸರಸೀರುಹಭೃಂಗಂ ಕೃಷ್ಣವೈರಿಗಣಮರ್ದನಶೀಲಮ್ ।
ಸೂತ್ರಕೃತ್ಪರಮತತ್ತ್ವಬೋಧಕಂ ಸಂಶ್ರಯಾಮಿ ಪವನಂ ತ್ರಯಾತ್ಮಕಮ್ ॥ 2 ॥

ರಾಮಪಾದಾಬ್ಜಲೋಲಂಬಂ ದುರ್ಮತಧ್ವಾಂತಭಾಸ್ಕರಮ್ ।
ಪಾವನಾಂಬೋಧಿರಾಕೇಂದುಂ ರಾಘವೇಂದ್ರಗುರುಂ ನುಮಃ ॥ 3 ॥

ರಾಘವೇಂದ್ರಕುಮಾರಾಯ ವಿದ್ವತ್ಕುಮುದಬಂಧವೇ ।
ಲಕ್ಷ್ಮೀನಾರಾಯಣಾರ್ಯಾಯ ನತಯಸ್ಸಂತು ಮಾಮಕಾಃ ॥ 4 ॥

ಶ್ರೀರಾಘವೇಂದ್ರಸದ್ವಂಶ್ಯಾನ್ ಕೃತಿಶೀಲವ್ರತೀಶ್ವರಾನ್ ।
ಸುಯಮೀಂದ್ರಗುರೂನ್ ವಂದೇ ಸದ್‌ಜ್ಞಾನಾಭೀಷ್ಟಸಿದ್ಧಯೇ ॥ 5 ॥

ಶ್ರೀಮತ್ಪರಿಮಲಾಚಾರ್ಯನಿರ್ಮಿತಂ ಭಾವಸಂಗ್ರಹಮ್ ।
ರಾಜಾ ಶ್ರೀಗುರುರಾಜಾಖ್ಯಃ ವಿವೃಣೋಮಿ ಯಥಾಮತಿ ॥ 6 ॥

ಶ್ರೀಮಧ್ವಗುರುರಾಜಾರ್ಯವಾಗ್ಗಂಗಾಸಂಗಪಾವಿತಾ ।
ಅಬಲಾಽಪಿ ಬುಧೈರ್ಗ್ರಾಹ್ಯಾ ಸ್ಯಾನ್ಮೇ ವಾಣೀ ಕೃಪಾಲುಭಿಃ ॥ 7 ॥

*ಅವತಾರಿಕೆ:-*

ಸಜ್ಜನಾನುಗ್ರಹಾಕಾಂಕ್ಷಿಗಳಾದ ಕೃಪಾಪಾರಾವಾರರಾದ ಶ್ರೀಮದ್ರಾಘವೇಂದ್ರತೀರ್ಥಪೂಜ್ಯಚರಣರು ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತವಾದ ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯ ಎಂಬ ಗ್ರಂಥದ ಭಾವವನ್ನು ಸಂಗ್ರಹಿಸಲು ''ತಾತ್ಪರ್ಯನಿರ್ಣಯ ಭಾವಸಂಗ್ರಹ''ವೆಂಬ ಗ್ರಂಥವನ್ನು ರಚಿಸಲಿಚ್ಛಿಸಿ ಮೊದಲು ''ಯೋಽಗ್ರೇ'' ಎಂಬ ಶ್ಲೋಕದಿಂದ ಮಂಗಳಾಚರಣಮಾಡುತ್ತಾ ಮಹಾಭಾರತ ತಾತ್ಪರ್ಯ ನಿರ್ಣಯದ ಮೊದಲನೆಯ ಅಧ್ಯಾಯಾರ್ಥವನ್ನು ಸಂಗ್ರಹಿಸುತ್ತಾರೆ.

## ಪ್ರಥಮಾಧ್ಯಾಯಭಾವಸಂಗ್ರಹ

**ಯೋಽಗ್ರೇಽಭೂದ್ವಿಶ್ವಗರ್ಭಃ ಸುಖನಿಧಿರಮಿತೈರ್ವಾಸುದೇವಾದಿರೂಪೈಃ**
**ಕ್ರೀಡನ್ ದೇವೈರಜಾದ್ಯೈರಗಣಿತಸುಗುಣೋ ನಿತ್ಯನೀಚೋಚ್ಚಭಾವೈಃ ।**
**ವೇದೈರ್ವೇದ್ಯೋಽಸ್ತದೋಷೋಽಪ್ಯಸುರಜನಮನೋ ಮೋಹಯನ್ ಮರ್ತ್ಯವೃತ್ತ್ಯಾ**
**ಭಕ್ತಾನಾಂ ಮುಕ್ತಿದಾತಾ ದ್ವಿಷದಸುಖಕರಃ ಪಾತು ಸೋಽಸ್ಮಾನ್ ಮಹೇಶಃ ॥ 1 ॥**

**ಅನ್ವಯಾರ್ಥ:-** **ಯಃ** = ಯಾವ ಶ್ರೀಮನ್ನಾರಾಯಣನು, **ಅಗ್ರೇ** = ಸೃಷ್ಟಿಗೆ ಮೊದಲು, **ವಿಶ್ವಗರ್ಭಃ** = ಸಮಸ್ತ ಜಗತ್ತನ್ನು ತನ್ನ ಉದರದಲ್ಲಿಟ್ಟುಕೊಂಡು, **ಸುಖನಿಧಿಃ** = ಆನಂದಪೂರ್ಣನಾಗಿ, **ಅಭೂತ್** = ಇದ್ದನೋ; **ಅಗಣಿತಸುಗುಣಃ** - ಅಗಣಿತ = ಅನಂತವಾದ, ಸುಗುಣಃ = ಕಲ್ಯಾಣಗುಣಗಳಿಂದ ಯುಕ್ತನಾದ, **ಯಃ** = ಯಾವ ಶ್ರೀಹರಿಯು, **ನಿತ್ಯನೀಚೋಚ್ಚಭಾವೈಃ** - ನಿತ್ಯ = ನಿರಂತರವಾಗಿ (ಯಾವಾಗಲೂ) ನೀಚೋಚ್ಚಭಾವೈಃ = ತಾರತಮ್ಯ ಭಾವಯುಕ್ತರಾದ, **ಅಜಾದ್ಯೈಃ** ಸಹ = ಬ್ರಹ್ಮಾದಿದೇವತೆಗಳಿಂದ ಕೂಡಿ, **ಅಮಿತೈಃ** = ಅನಂತವಾದ, ವಾಸುದೇವಾದಿರೂಪೈಃ = ವಾಸುದೇವ ಮುಂತಾದ ತನ್ನ ರೂಪಗಳಿಂದ, **ಕ್ರೀಡನ್ ಅಭೂತ್** = ವಿಹರಿಸುತ್ತಿದ್ದನೋ; **ವೇದೈರ್ವೇದ್ಯಃ** = ವೇದಗಳಿಂದ ಮಾತ್ರ ತಿಳಿಯಲು ಯೋಗ್ಯನಾದ, **ಅಸ್ತದೋಷೋಽಪಿ** = ದೋಷದೂರನಾಗಿದ್ದರೂ ಸಹ, **ಮರ್ತ್ಯವೃತ್ತ್ಯಾ** = ಮಾನವನಂತೆ, **ಅಸುರಜನಮನಃ** = ದೈತ್ಯಜನರ ಮನಸ್ಸನ್ನು, **ಮೋಹಯನ್** = ಮೋಹಗೊಳಿಸುತ್ತಾ; **ಯಃ** = ಯಾವ ಶ್ರೀಹರಿಯು, **ಭಕ್ತಾನಾಂ** = ತನ್ನ ಭಕ್ತ ಜನರಿಗೆ, **ಮುಕ್ತಿದಾತಾ** = ಸ್ವಸ್ವರೂಪಾನಂದಾವಿರ್ಭಾವರೂಪ ಮೋಕ್ಷವನ್ನು ಕೊಡುವನೋ, **ದ್ವಿಷದಸುಖಕರಃ** - ದ್ವಿಷದ್ - ದ್ವೇಷಿಗಳಾದ ಅಸುರರಿಗೆ, ಅಸುಖಕರಃ = ಅಂಧತಾಮಿಸ್ರಪ್ರದನೋ, **ಸಃ** = ಅಂಥ, **ಮಹೇಶಃ** = ಸರ್ವೋತ್ತಮನಾದ ಶ್ರೀಮನ್ನಾರಾಯಣನು, **ಅಸ್ಮಾನ್** = ನಮ್ಮಗಳನ್ನು, **ಪಾತು** = ರಕ್ಷಿಸಲಿ.

**ತಾತ್ಪರ್ಯ:-** ಶ್ರೀಮನ್ನಾರಾಯಣನು ಸೃಷ್ಟಿಗೆ ಮೊದಲು ಸಕಲ ಜಗತ್ತನ್ನೂ ತನ್ನ ಉದರದಲ್ಲಿಟ್ಟುಕೊಂಡು ಆನಂದಪೂರ್ಣನಾಗಿದ್ದನು. ಅನಂತ ಕಲ್ಯಾಣಗುಣಗಳಿಂದ ಯುಕ್ತನಾದ ಶ್ರೀಹರಿಯು ಸರ್ವದಾ ತಾರತಮ್ಯಭಾವಯುಕ್ತರಾದ ಬ್ರಹ್ಮರುದ್ರೇಂದ್ರಾದಿ ಸಮಸ್ತ ದೇವತೆಗಳಿಂದ ಕೂಡಿ ಅನಂತವಾದ ತನ್ನ ವಾಸುದೇವಾದಿ ರೂಪಗಳಿಂದ ವಿಹರಿಸುತ್ತಿದ್ದನು. ವೇದಗಳಿಂದ ಮಾತ್ರ ತಿಳಿಯಲು ಯೋಗ್ಯನಾದ ಅವನು ದೋಷದೂರನಾಗಿದ್ದರೂ ಸಹ ಮಾನವರಂತೆ ದೈತ್ಯಜನರ ಮನಸ್ಸನ್ನು ಮೋಹಗೊಳಿಸುತ್ತಾ ತನ್ನ ಭಕ್ತರಾದವರಿಗೆ ಸ್ವರೂಪಾನಂದಾವಿರ್ಭಾವರೂಪಮೋಕ್ಷವನ್ನು ಕೊಟ್ಟು, ತನ್ನ ದ್ವೇಷಿಗಳಾದ ಅಸುರರಿಗೆ ಅಂಧತಾಮಿಸ್ರಪ್ರದನಾದ ಸರ್ವೋತ್ತಮನಾದ ಶ್ರೀಮನ್ನಾರಾಯಣನು ನಮ್ಮನ್ನು ಕಾಪಾಡಲಿ ಎಂದು ಭಾವ.

# ಪ್ರಥಮಾಧ್ಯಾಯ ಕಥಾಸಂಗ್ರಹ

ಶುಭಗುಣಗಣನಾದ ರಮಾರಮಣ ದೋಷದೂರ, ಸರ್ವೋತ್ತಮ, ಸ್ವತಂತ್ರ. ಅವನ ಶಕ್ತಿ, ಮಹಿಮಾದಿಗಳು ಅಚಿಂತ್ಯ, ಅದ್ಭುತ, ಅನುಪಮೇಯ, ಅನಂತ. ಸಕಲಜಗದ ಅಂತವಾಗಿ ಏನೂ ಉಳಿಯದಂತಾದ ಮೇಲೆ ಪ್ರಳಯಕಾಲ-ದಲ್ಲಿ ಸೃಷ್ಟಿಗೆ ಮೊದಲು ಈರೇಳು ಲೋಕಗಳಿಗೊಡೆಯನಾದ ನಾರಾಯಣನು ಎಡಬಿಡದೆ ತನ್ನ ಪದಿನೆಳಲಿನಂತಿರುವ ಕಡಲೊಡೆಯನೊಡಲ ಸಂಜಾತೆಯಾದ ಮಹಾಲಕುಮಿಯಿಂದೊಡಗೂಡಿ ಪ್ರಳಯಜಲರಾಶಿಯ ವಟಪತ್ರದ ಮೇಲೆ ಪವಡಿಸಿ ಕ್ರೀಡಿಸುತ್ತಿದ್ದನು.

ಕಲಶಪಯೋಧಿಕನ್ನಿಕೆಯಿಂದಾಲಿಂಗಿತನಾದ ದೇವದೇವನು ಶುದ್ಧಾನಂದಭರಿತ, ಅನಂತ ಕಲ್ಯಾಣಗುಣಪೂರ್ಣ, ಅವಾಙ್ಮಾನಸಗೋಚರನು. ರಮೆಗಿಂತ ಉತ್ತಮನು. ಪ್ರಳಯಕಾಲದಲ್ಲಿ ಅವನನ್ನುಳಿದು ಉಪದೇಶಕರು ಬೇರೊಬ್ಬರಿರಲಿಲ್ಲ. ಅಂತೆಯೇ ಶ್ರೀಹರಿಯು ತನ್ನ ಬುದ್ಧಿಸ್ಥವಾದ ನಿಖಿಲ ವೇದಾದಿ ಶಾಸ್ತ್ರಗಳನ್ನು ಸೃಷ್ಟಿಯ ಅನಂತರ ವಿಧಿಭವಾದಿ ದೇವತೆಗಳಿಗೆ ಉಪದೇಶಿಸಬೇಕಾಗಿರುವುದರಿಂದ ವೇದಾದಿಶಾಸ್ತ್ರಗಳನ್ನು ತನ್ನ ಉದರದಲ್ಲಿಟ್ಟುಕೊಂಡು ತಾನೊಬ್ಬನೇ ಸ್ವತಂತ್ರನಾಗಿ ಕಂಗೊಳಿಸುತ್ತಿದ್ದನು. ಪ್ರಳಯಕಾಲದಲ್ಲಿ ಬ್ರಹ್ಮಾದಿದೇವತೆಗಳೂ ಇರಲಿಲ್ಲವೆಂದು ವೇದಗಳೇ ಸಾರುತ್ತಿರುವುದರಿಂದ ನಾರಾಯಣನೇ ಸರ್ವೋತ್ತಮನೆಂಬುದು ಸಿದ್ಧವಾಗಿದೆ. ಸಮಸ್ತ ಜಗತ್ತನ್ನು ಉದರದಲ್ಲಿಟ್ಟುಕೊಂಡ ಶುದ್ಧಾನಂದಶರೀರಿಯೂ, ರಮಾವಲ್ಲಭನೂ ಆದ ಪ್ರಭುವು ಸೃಷ್ಟಿಗೆ ಯೋಗ್ಯರಾದ ಜೀವರನ್ನು ಸೃಜಿಸಬಯಸಿದನು. ಈ ಸೃಷ್ಟಿಯಿಂದ ಪೂರ್ಣ-ಕಾಮನಾದ ಆ ಮಹಾಪ್ರಭುವಿಗೆ ಯಾವ ಪ್ರಯೋಜನವಿರದಿದ್ದರೂ ಬ್ರಹ್ಮಾದಿಗಳ ಐಸಿರಿಯನ್ನು ವರ್ಧಿಸಲು ಮನಸ್ಸು ಮಾಡಿದನು. ಚೇತನರಲ್ಲಿ ಮುಕ್ತ, ಸಂಸಾರಿ ಎಂದು ಸಾಮಾನ್ಯವಾಗಿ ಎರಡು ಬಗೆ. ಲಿಂಗದೇಹದಿಂದ ಮುಕ್ತರಾದವರು ಮುಕ್ತರು. ಅವರಲ್ಲಿ ಮತ್ತೆ ಉತ್ತಮ-ಮಧ್ಯಮ-ಅಧಮ ಜೀವರನ್ನೊಮ್ಮೆ ನೋಡಿದನು. ಕೆಲವು ಧ್ಯಾನಪರರಾಗಿದ್ದರು. ಮತ್ತೆ ಕೆಲವರು ಸಂಸಾರರತರಾಗಿದ್ದರು. ಇನ್ನೂ ಕೆಲವರು ಸುಷುಪ್ತಿಯಲ್ಲಿದ್ದರು. ಇವರಲ್ಲದೆ ರುದ್ರಾದಿ ದೇವತೆಗಳನ್ನೂ ಪರಸ್ಪರ ಕಲಹಾಸಕ್ತರನ್ನೂ, ಮನುಜರನ್ನೂ ಪ್ರಭುವು ನೋಡಿದನು.

ಶ್ರೀರಮಾರಮಣನು ತನ್ನ ಆನಂದಜ್ಞಾನರೂಪ ಐಶ್ವರ್ಯಗಳನ್ನು ಅಭಿವ್ಯಕ್ತಗೊಳಿಸಲು 1) ಶುದ್ಧ, 2) ಪರಾಧೀನ-ವಿಶೇಷಾವಾಪ್ತಿ, 3) ಮಿಶ್ರ ಮತ್ತು 4) ಕೇವಲ ಎಂಬ ನಾಲ್ಕು ಬಗೆಯ ಸೃಷ್ಟಿಯನ್ನು ಮಾಡಬಯಸಿದನು. ಜಗತ್ತಿಗೆ ಉಪಕಾರ ಮಾಡಲೋಸುಗ ಮೂಲರೂಪದಿಂದಲೇ ಹೊರಗೆ ಬರುವುದು ಶುದ್ಧ ಸೃಷ್ಟಿ. ಇದು ಪರಮಾತ್ಮನೊಬ್ಬನಿಗೆ ಮಾತ್ರ ಸಲ್ಲುವುದು. ಪರಮಾತ್ಮನ ಆಜ್ಞೆಯಿಂದ ಶ್ರೀರಮಾಬ್ರಹ್ಮಾದಿದೇವತೆಗಳಿಗೆ ಸೃಷ್ಟಿ ಮಾಡುವ ಅಧಿಕಾರ, ಪ್ರಕೃತಿಯ ಸ್ವಾಮಿತ್ವ ಮೊದಲಾದ ವಿಶೇಷಗಳು ಸಂಭವಿಸುವುದು ಪರಾಧೀನವಿಶೇಷಾವಾಪ್ತಿ ಸೃಷ್ಟಿ. ಹುಟ್ಟದಿರುವ ಜೀವಚೇತನರಿಗೆ ಕೇವಲ ಹೊರಗಣಶರೀರದಿಂದಲೇ ಉತ್ಪತ್ತಿಯಾಗುವುದು ಮಿಶ್ರಸೃಷ್ಟಿ. ಕೇವಲ ಸೃಷ್ಟಿಯೆಂದರೆ ಅಭೂತ್ವಾಭವನ. ಅಂದರೆ ಮೊದಲು ಇಲ್ಲದಿರುವ ಘಟಪಟಾದಿಗಳಿಗೆ ಸ್ವರೂಪದಿಂದಲೇ ಉತ್ಪತ್ತಿ. ಹೀಗೆ ನಾಲ್ಕು ವಿಧವಾದ ಸೃಷ್ಟಿಯನ್ನು ಮಾಡಲು ಸರ್ವೋತ್ತಮನೂ, ಮುಕ್ತಿಪ್ರದನೂ ಆದ ಶ್ರೀಹರಿಯು ಅಪೇಕ್ಷಿಸಿ ''ವಾಸುದೇವ'' ಎಂಬ ನಾಮದಿಂದ ಮೈದೋರಿದನು. ಅವನ ಆಜ್ಞೆಯಂತೆ ಪರಮಾತ್ಮನ ಇಚ್ಛಾಸ್ವರೂಪವೆನಿಸಿದ ''ಮಾಯಾ'' ಎಂಬ ರೂಪದಿಂದ ಲಕ್ಷ್ಮೀದೇವಿಯು ತನ್ನ ಎರಡನೆಯ ರೂಪವನ್ನು ಧರಿಸಿದಳು. ಪರಮನಿತ್ಯನಾದ ನಾರಾಯಣನು ಮತ್ತೆ ಸಂಹಾರಕಾರ್ಯಕ್ಕೆ ಕಾರಣವಾದ ಶರೀರ ಧರಿಸಿ ''ಸಂಕರ್ಷಣ'' ಎಂಬ ಹೆಸರು ಪಡೆದನು. ಅದಕ್ಕೆ ತಕ್ಕಂತೆ ಲಕ್ಷ್ಮಿಯು ಹರಿಯ ಆಜ್ಞೆಯಿಂದ ''ಜಯಾ'' ನಾಮಕ ರೂಪ ಧರಿಸಿದಳು. ಅನಂತರ ಶ್ರೀಹರಿಯು ಮತ್ತೆ ಸೃಷ್ಟಿಗೆ ಕಾರಣವಾದ ''ಪ್ರದ್ಯುಮ್ನ'' ನಾಮಕ ರೂಪವನ್ನೂ, ರಮೆಯು ''ಕೃತಿ'' ನಾಮಕ ರೂಪವನ್ನೂ ಧರಿಸಿದರು. ಪುನಃ ನಾರಾಯಣನು ಜೀವರಾಶಿಯನ್ನು ಸಲಹಲು ''ಅನಿರುದ್ಧ'' ರೂಪವನ್ನು

ಧರಿಸಿದನು. ಲಕುಮಿಯು ''ಶಾಂತಿ'' ಎಂಬ ರೂಪವನ್ನು ಧರಿಸಿದಳು. ಮತ್ತೆ ನಾರಾಯಣನು ತನ್ನ ರೂಪಗಳಿಂದ ಅಚಿಂತ್ಯ ಶಕ್ತಿಯುಳ್ಳವನಾಗಿ ''ಪ್ರದ್ಯುಮ್ನ''ನೆಂಬ ರೂಪ ಧರಿಸಿ ಪ್ರಳಯಕಾಲದಲ್ಲಿ ಮೂಲರೂಪೀ ನಾರಾಯಣನ ಉದರದಲ್ಲಿದ್ದ ಜೀವರಾಶಿಯನ್ನು ತನ್ನೀ ಅವತಾರರೂಪದ ಉದರಕ್ಕೆ ಕರೆತಂದು ''ಅನಿರುದ್ಧ'' ರೂಪನಿಗೆ ಆ ಜೀವರಾಶಿಯನ್ನೇ ಸೃಷ್ಟಿಮಾಡೆಂದು ಹೇಳಿ ಕೊಟ್ಟನು. ಆಗ ಪರಮಾತ್ಮನು ಅನಿರುದ್ಧರೂಪದಿಂದ ದೇಹರಹಿತ ಜೀವರಿಗೆ ಅವರವರ ಕರ್ಮಾನುಗುಣವಾಗಿ ದೇಹಸಂಬಂಧವನ್ನೊದಗಿಸಿ ಸ್ವಯಂಭು, ಪ್ರಾಣ, ಶೇಷ, ಗರುಡ, ಈಶ ಮೊದಲಾದ ರೂಪಗಳಿಂದ ಸೃಷ್ಟಿಸಿದನು.

ಭಗವಾನ್ ಶ್ರೀವಿಷ್ಣುವು ತನ್ನ ಮೊದಲ ನಾರಾಯಣ ರೂಪವೂ ಸೇರಿ ವಾಸುದೇವಾದಿ ಪಂಚರೂಪನಾದನು. ಅನಂತರ ಕೇಶವಾದಿದ್ವಾದಶರೂಪವನ್ನೂ, ಮತ್ಸ್ಯಕೂರ್ಮಾದಿ ದಶರೂಪಗಳನ್ನೂ, ನಾರಾಯಣಾದಿ ನೂರು ರೂಪಗಳನ್ನೂ, ವಿಶ್ವಾದಿ ಸಹಸ್ರ ರೂಪಗಳನ್ನೂ, ಪರ ಮುಂತಾದ ಬಹುರೂಪಗಳನ್ನೂ ಅಜಾದ್ಯಮಿತರೂಪಗಳನ್ನೂ, ಹೀಗೆ ಅನಂತಾನಂತ ರೂಪಗಳನ್ನು ಧರಿಸಿದನು. ಸ್ವಭಾವತಃ ಏಕರೂಪಿಯಾದ ಹರಿಯು ಜೀವರಿಗಿಂತ ವಿಶೇಷ ಶಕ್ತಿ ಮಹಿಮೆಗಳನ್ನು ತೋರಲು ಜೀವರ ಅನೇಕವಿಧ ಹೋಲಿಕೆಗಳನ್ನು ಹೊಂದಿ ಏಕರೂಪನೂ, ಬಹುರೂಪನೂ ತಾನಾಗಿ ವಿಶೇಷಮಹಿಮೆಯಿಂದ ಕಂಗೊಳಿಸಿದನು. ಕೋಪ, ಭಯ, ಹಸಿವು, ಬಾಯಾರಿಕೆ, ಬಳಲಿಕೆ, ಮುಂತಾದ ಯಾವ ದೋಷಗಳೂ ಅವನತ್ತ ಸುಳಿಯವು. ಅವನು ಸದಾ ಸುಖಾನಂದಸ್ವರೂಪನು. ಅವನು ಸಕಲದೋಷರಹಿತನು. ಮಂಗಳಕರ ಅನಂತಗುಣ-ಪೂರ್ಣನು, ಪೂರ್ಣಸ್ವತಂತ್ರನು. ಪೃಥಿವೀ, ಅಪ್, ವಾಯು, ಅಗ್ನಿ, ಆಕಾಶಗಳೆಂಬ ಪಂಚಪ್ರಕೃತಿಗಳ ಮಿಶ್ರಣದ ವಿಕಾರದಿಂದ ದೇಹಗಳು ಹುಟ್ಟುತ್ತವೆ. ಆ ದೇಹಗಳಲ್ಲಿ ರೋಗರುಜಿನಾದಿ ವಿವಿಧ ಪ್ರಾಕೃತ ದೋಷಗಳಿರುತ್ತವೆ. ಇದು ಪ್ರಾಕೃತದೇಹದಿಂದ ಜನಿಸಿದ ಜೀವರಿಗಿರುತ್ತದೆ. ಆದರೆ ಅಪ್ರಾಕೃತಶರೀರನಾದ ಪರಮಾತ್ಮನು ಪ್ರಕೃತಿಯ ಸತ್ವ, ರಜಸ್ಸು, ತಮಸ್ಸುಗಳೆಂಬ ಗುಣಗಳಿಗೆ ದೂರನಾಗಿದ್ದಾನೆ. ಅವನಿಗೆ ಈ ವಿಕಾರಾದಿ ದೋಷಗಳಿಗೆ ಆಸ್ಪದವೇ ಇಲ್ಲ. ಆದ್ದರಿಂದ ಅವನು ಚೇತನರಹಿತವಾದ ಶರೀರಗುಣಗಳಿಂದ ಬಹುದೂರನಾಗಿದ್ದಾನೆ ಮತ್ತು ಅವನ ದೇಹ, ಅವಯವಗಳೆಲ್ಲವೂ ಆನಂದ ಮತ್ತು ಜ್ಞಾನಮಯವಾದುದು. ಅವನಿಗೂ ಅವನ ಕರಚರಣಾದ್ಯವಯವಗಳಿಗೂ, ಅವನ ಗುಣಗಳಿಗೂ ಯಾವ ಭೇದವೂ ಇಲ್ಲ. ಆದ್ದರಿಂದ ಅವನು ಸ್ವಗತಭೇದ-ವಿವರ್ಜಿತನೆಂದು ಕರೆಸಿಕೊಂಡಿದ್ದಾನೆ. ಕಾಲ, ದೇಶ, ಗುಣಗಳಿಂದವನು ಅಪರಿಚ್ಛಿನ್ನನು. ಅವನಿಗೆ ವೃದ್ಧಿ-ಹ್ರಾಸಾದಿಗಳಿಲ್ಲ. ಉತ್ತಮನೂ ಸನಾತನನೂ ಆಗಿರುವ ಅವನಿಗೆ ಸದೃಶರೆಲ್ಲಿಯೂ ದೊರಕರು. ಹಿಂದೆ ಇರಲಿಲ್ಲ. ಇಂದು ಇಲ್ಲ. ಮುಂದೆ ಸಹ ಅವನಿಗೆ ಸದೃಶರಿಲ್ಲ. ಲಕ್ಷ್ಮೀದೇವಿಗಿಂತ ಶ್ರೇಷ್ಠನಾದ ವಿಷ್ಣುವಿಗೆ ಯಾವ ನ್ಯೂನತೆಯೂ ಇಲ್ಲ. ಸರ್ವಜ್ಞನೂ, ಸೀಮಾತೀತ ಸಿರಿವಂತನೂ, ಸರ್ವಶಕ್ತನೂ, ಪೂರ್ಣನೂ, ನಾಶರಹಿತನೂ, ಪೂರ್ಣಜ್ಞಾನ, ಬಲ, ಸುಖ, ಪರಾಕ್ರಮ ಸಾರೋಪೇತನೂ ಆದ ಶ್ರೀಹರಿಯ ಆಜ್ಞೆಯಿಲ್ಲದೆ ರಮಾ, ಬ್ರಹ್ಮ, ರುದ್ರಾದಿ ದೇವತೆಗಳಿಗೆ ಇರಲೂ ಸಾಧ್ಯವಿಲ್ಲ. ಅಂತೆಯೇ ಅವನು ಸರ್ವರಿಗೂ ಒಡೆಯನಾಗಿದ್ದಾನೆ.

ಶ್ರೀವಾಯುದೇವರು ಶ್ರೀಹರಿಯ ಪ್ರತಿಬಿಂಬರು. ವಾಯುದೇವರಿಗೆ ರುದ್ರದೇವರು, ಅವರಿಗೆ ಶೇಷದೇವರು, ಅವರಿಗೆ ಇಂದ್ರ, ಇಂದ್ರದೇವರಿಗೆ ಕಾಮ, ಅವರಿಗೆ ಇತರ ಋಷಿಗಳು ಪ್ರತಿಬಿಂಬರು. ಹೀಗೆ ಕ್ರಮವಾಗಿ ಪ್ರತಿಬಿಂಬ-ರಾಗಿರುವ ಇವರು ಪರಸ್ಪರ ನೂರಂಶಗಳಷ್ಟು ಗುಣಗಳಲ್ಲಿ ಕಡಿಮೆಯಾಗಿರುವರು.

ರಮಾದೇವಿ ನಾರಾಯಣನ ಪ್ರತಿಬಿಂಬ. ಬ್ರಹ್ಮವಾಯುಗಳಿಗಿಂತ ಅವಳು ಉತ್ತಮ ಪ್ರತಿಬಿಂಬಳು. ಅನಂತರ ಬ್ರಹ್ಮನ ಪತ್ನಿ ಸರಸ್ವತಿ ಅವಳ ಪ್ರತಿಬಿಂಬಳು. ಅವಳು ರುದ್ರದೇವರಿಗಿಂತ ಶ್ರೇಷ್ಠ ಪ್ರತಿಬಿಂಬಳೂ. ಸರಸ್ವತಿಗೆ ರುದ್ರಸತಿ ಉಮಾದೇವಿ, ಗರುಡಪತ್ನಿ ಸುಪರ್ಣಾ - ಇವರಿಬ್ಬರು ಪ್ರತಿಬಿಂಬರು. ಅವರಿಬ್ಬರಿಗೆ ಕ್ರಮವಾಗಿ ಶಚೀದೇವಿ ಮುಂತಾದವರು ಪ್ರತಿಬಿಂಬರು.

ಇವರು ಪುರುಷದೇವತೆಗಳಾದ ನಾರಾಯಣ, ಬ್ರಹ್ಮ, ವಾಯುದೇವರಂತೆ, ಲಕ್ಷ್ಮೀ, ಸರಸ್ವತಿ, ಭಾರತೀಯರೆಂಬ ಕ್ರಮದಿಂದ ಪರಸ್ಪರವಾಗಿ ಬಿಂಬಪ್ರತಿಬಿಂಬರು. ಇಲ್ಲಿ ಪ್ರತಿಬಿಂಬದ ಹೋಲಿಕೆಯಲ್ಲಿ ಸಮಾನತೆಯನ್ನು ಸೂಚಿಸಲು ಪುರುಷದೇವತೆಗಳಂತೆ ಎಂದು ಹೇಳಬೇಕಿದೆಯೇ ಹೊರತು ಸರ್ವರೀತಿಯ ಸಮಾನತೆಯನ್ನು ಸೂಚಿಸಲಿಲ್ಲ. ಪುರುಷಕ್ರಮದಂತೆ ಸ್ತ್ರೀಕ್ರಮದಲ್ಲಿ ಏಕಪ್ರಕಾರವಿಲ್ಲ. ಸರಸ್ವತಿಗೆ ಪ್ರತಿಬಿಂಬಳಾದ ಉಮಾದೇವಿಯು ರುದ್ರದೇವರಿಗಿಂತ ಕಡಿಮೆಯಾದ ಇಂದ್ರದೇವರಿಗಿಂತ ಉತ್ತಮಳು. ಆದರೆ ಉಮಾದೇವಿಗೆ ಪ್ರತಿಬಿಂಬಳಾದ ಶಚೀದೇವಿಯು ಇಂದ್ರದೇವರಿಗಿಂತ ಕಡಿಮೆಯಾದ ಪ್ರಾಣನಿಗಿಂತ ಉತ್ತಮಳೆನ್ನುವಂತಿಲ್ಲ. ಆದುದರಿಂದ ಪುರುಷದೇವತೆಗಳಿಗೆ ಯಾರಿಗಿಂತ ಉತ್ತಮತೆಯಿದೆಯೋ ಸ್ತ್ರೀದೇವತೆಗೂ ಅವರಿಗಿಂತ ಉತ್ತಮತೆಯಿದೆಂಬುದಕ್ಕೆ ನಿಯಮವಿಲ್ಲ. ಇಂದ್ರನಿಗಿಂತ ಕಡಿಮೆಯಾದ ಪ್ರಾಣನಿಗಿಂತ ಶಚೀದೇವಿ ಕಡಿಮೆ. ಮನುವಿಗಿಂತ ಕಡಿಮೆಯಾದ ಪ್ರವಹನಿಗಿಂತ ಮನುಪತ್ನಿಯು ಕಡಿಮೆ. ಬೃಹಸ್ಪತ್ಯಾಚಾರ್ಯರಿಗಿಂತ ಕಡಿಮೆಯಾದ ಅನೇಕ ಪುರುಷ ದೇವತೆಗಳಿಗಿಂತಲೂ ಗುರುಪತ್ನಿ ತಾರಾದೇವಿಯ ಕಡಿಮೆ. ವರುಣನಗಿಂತ ಕಡಿಮೆಯಾದ ಪುರುಷದೇವತೆಗಳಿಗಿಂತ ಗಂಗಾದೇವಿ ಕಡಿಮೆ. ಹೀಗೆ ಹೇಳುವಾಗ ಪುರುಷರ ಮತ್ತು ಸ್ತ್ರೀದೇವತೆಗಳ ತಾರತಮ್ಯ ಬೇರೆ ಬೇರೆ ಎನ್ನುವುದು ವ್ಯಕ್ತವಾಗುವುದು. ಆದ್ದರಿಂದ ಗಂಗಾ, ತಾರಾ, ಶಚೀ ಮೊದಲಾದ ಕ್ರಮದಲ್ಲಿ ಉತ್ತಮತೆಯನ್ನು ತಿಳಿಯಬೇಕು. ಬಿಂಬಪ್ರತಿಬಿಂಬಭಾವದ ದೃಷ್ಟಾಂತ ಆಯಾ ದೇವತೆಗಳ ಯೋಗ್ಯತೆಯನ್ನನುಸರಿಸಿ ಹೇಳಿದೆ. ಆದ್ದರಿಂದಲೇ ಮನುವಿನ ಪತ್ನಿಗಿಂತಲೂ ಮನುವಿಗೆ ಸಮಾನಳಾದ ದಕ್ಷನ ಪತ್ನಿಯಾದ ಪ್ರಸೂತಿಯು ಕಡಿಮೆಯಾಗಿದ್ದಾಳೆ. ಅವರವರ ಪತ್ನಿಯರಿಗಿಂತಲೂ ಆಯಾ ದೇವತೆಗಳು ನೂರು ಗುಣಗಳಿಂದ ಅಧಿಕರು. ಹತ್ತು ಗುಣ, ಐದು ಗುಣವೆಂಬ ರೀತಿಯಿಂದ ಅಧಿಕರು. ''ಶತಂ'' ಎಂಬುದು ಬಹುವಚನವಾದ್ದರಿಂದ ಇತರ ಶ್ರುತಿಗಳಲ್ಲಿ ಬೇರೇ ಕ್ರಮದಲ್ಲಿ ಹೇಳಿರುವುದಕ್ಕೆ ವಿರೋಧವಿಲ್ಲ. ಶತಗುಣತ್ವಂ ಎಂದರೆ ನೂರು ಅಂಕಿಗಳಿಂದ ಎಣಿಸಿದ ಯಾವುದಾದರೊಂದು ಗುಣದಿಂದ ಅಧಿಕರೆಂದು ಮೇಲೆ ತೋರುವ ಅರ್ಥವಲ್ಲ. ಏಕೆಂದರೆ ಸರ್ವಸಾಧಾರಣವಾಗಿ ಇತರ ದೇವತೆಗಳಲ್ಲಿರುವ ಜ್ಞಾನಾದಿ ಗುಣಗಳಿಂದ ಸಾಮ್ಯ ಉಂಟಾದೀತು. ಆದರೆ ರುದ್ರದೇವರಿಗೆ ಮೊದಲಿದ್ದ ಜ್ಞಾನವನ್ನು ಎರಡರಿಂದ ಗುಣಿಸಬೇಕು. ಆ ಗುಣಲಬ್ಧ ಜ್ಞಾನಕ್ಕೆ ಒಂದು ಗುಣವೆಂದು ಹೆಸರು. ಅದನ್ನು ಮತ್ತೆ ಎರಡರಿಂದ ಗುಣಿಸಿದರೆ ಆಗುವ ಜ್ಞಾನಕ್ಕೆ ಎರಡು ಗುಣವೆಂದೂ, ಪುನಃ ಅದನ್ನು ಎರಡರಿಂದ ಗುಣಿಸಿದರೆ ಬರುವ ಜ್ಞಾನಕ್ಕೆ ಮೂರು ಗುಣವೆಂದೂ ಹೀಗೆ ಗುಣಿಸುತ್ತ ಹೋದಂತೆ ಅಧಿಕವಾಗುವ ಜ್ಞಾನವನ್ನು ನೂರರವರೆವಿಗೂ ದ್ವಿಗುಣ ಮಾಡಿದರೆ ಅಧಿಕವಾಗುವ ಜ್ಞಾನದ ರಾಶಿಯಿಂದ ಕೊನೆಯಲ್ಲಿ ಒಂದು ಮಹತ್ತರ ಜ್ಞಾನವಾಗುವುದು. ಅಂತಹ ಜ್ಞಾನಕ್ಕೆ ನೂರುಗುಣವೆಂದು ಹೆಸರು. ಈ ನೂರು ಗುಣಕ್ಕಿಂತ ಅಧಿಕವಾದವರು ಉತ್ತಮ ದೇವತೆಗಳು ಎಂದು ಭಾವ. ಗುಣಿಸುವ ಮೊದಲು ರುದ್ರದೇವರಿಗಿದ್ದ ಜ್ಞಾನವು ಗುಣಿಸಿದ ನಂತರ ಲಬ್ಧವಾದ ನೂರರಷ್ಟು ಅಧಿಕವಾದ ಸರಸ್ವತೀದೇವಿಯ ಜ್ಞಾನಕ್ಕಿಂತಲೂ ನೂರುಗುಣದಷ್ಟು ಕಡಿಮೆಯಾದದ್ದು ಎಂದು ತಿಳಿಯಬೇಕು. ಹೀಗೆಯೇ ಸುಖ, ಶಕ್ತಿ, ಆನಂದ ಮುಂತಾದವುಗಳನ್ನು ತಿಳಿಯಬೇಕು. ಆಯಾ ದೇವತೆಗಳ ತಾರತಮ್ಯ-ಸ್ವರೂಪವು ಹೀಗೆಯೇ ಇರುವುದು. ಮತ್ತು ಅವರು ಮುಕ್ತರಾದಮೇಲೂ ಅವರ ಸ್ವರೂಪವು ಹೀಗೆಯೇ ತಾರತಮ್ಯಯುಕ್ತವಾಗಿರುತ್ತದೆ. ನೂರು, ಸಾವಿರ, ಹತ್ತು ಸಾವಿರ ಎಂಬ ಪದಗಳು ಒಂದೊಂದು ದಶಕಸ್ಥಾನದಂತೆ ಗುಣಗಳನ್ನು ಹೆಚ್ಚಿಸುತ್ತವೆ. ಆದುದರಿಂದ ಗುಣಗಳಲ್ಲಿ ಅಧಿಕಾಂಶವೇ ತೋರುವುದು. ಕಡಿಮೆ ಅಂಶ ತೋರುವುದಿಲ್ಲವಾದ್ದರಿಂದ ಆಯಾ ದೇವತೆಗಳು ಒಬ್ಬರು - ಒಬ್ಬರಿಗಿಂತಲೂ ನೂರುಗುಣ ಅಧಿಕರು ಎಂಬುವುದು ಸ್ಪಷ್ಟವಾಗುವುದು.

ಹೀಗೆಯೇ ಮಾನವಶ್ರೇಷ್ಠರೂ ಗುಣಾಧಿಕರು. ಅವರು ಮುಕ್ತಿಯೋಗ್ಯರು. ಇತರರು ಸಂಸಾರಯೋಗ್ಯರು. ಅಂದರೆ ಮತ್ತೆ ಮತ್ತೆ ಜನನಮರಣವೆಂಬ ಪ್ರವಾಹಕ್ಕೆ ಬರುವವರು. ಅಸುರರು ತಮಸ್ಸಿಗೆ ಯೋಗ್ಯರು. ಈ ಒಂದು ನಿಯಮವು ಯಾವಾಗಲೂ ಹೀಗೆಯೇ ಇರತಕ್ಕದ್ದು. ಇದಕ್ಕೆ ಎಲ್ಲಿಯೂ ವ್ಯತ್ಯಾಸವಿಲ್ಲ. ಇಂಥ ತ್ರಿವಿಧಜೀವರೆಲ್ಲರೂ ತಮ್ಮ ಸಾಧನ

ಮುಗಿಯುವವರೆಗೂ ಜನನ ಮರಣಗಳ ಸುಳಿಯಲ್ಲಿ ಸೇರುವರು. ಒಬ್ಬ ಜೀವನ ಸಾಧನ ಮುಗಿಯುವ ಕಾಲದಲ್ಲಿ ಮತ್ತೊಬ್ಬನ ಸಾಧನವು ಮುಗಿಯುವುದೆಂದು ಹೇಳುವಂತಿಲ್ಲ. ಎಲ್ಲರ ಸಾಧನವೂ ಒಟ್ಟಿಗೆ ಮುಗಿಯಲಾರದು. ಇದರಿಂದ ಜೀವರಾಶಿಗಳ ಕೊನೆಯಾಗುವುದಿಲ್ಲ. ಜೀವರನ್ನು, ಬ್ರಹ್ಮಪದಕ್ಕೆ ಯೋಗ್ಯರಾದ ಜೀವರು, ರುದ್ರಪದಕ್ಕೆ ಯೋಗ್ಯರಾದ ಜೀವರು ಎಂದು ಎಣಿಸುತ್ತಾ ಹೋದಂತೆಲ್ಲ ಅವರಲ್ಲಿ ಅನಂತತೆಯೇ ಕಂಡುಬರುತ್ತದೆ. ಇನ್ನು ಆಯಾ 'ಗಣ'ಗಳಲ್ಲಿ ಸೇರಿರುವ ಜೀವರನ್ನು ಬೇರೆಯಾಗಿ ಎಣಿಸಿದರೆ ಅನಂತತೆಯು ವೃದ್ಧಿಸುತ್ತಲೇ ಹೋಗುವುದು. ಹೀಗಾಗಿ ಗಣನೆ ಮುಗಿಯದೆ ಅನಂತವಾಗಿಯೇ ಉಳಿಯುವುದರಿಂದ ಅನಂತಜೀವರ ಸಾಧನವು ಸಕಲಕಾಲಗತ ಪ್ರವೃತ್ತಿಯೆನಿಸಿ ನಡೆಯುತ್ತಲೇ ಇರುತ್ತದೆ.

ಸಕಲ ವೇದ-ಶಾಸ್ತ್ರಾದಿಗಳನ್ನು ಪರ್ಯಾಲೋಚನೆ ಮಾಡುವವರು ಉತ್ತಮ ದೇವತೆಗಳು. ಅವರು ಚತುರಾನನರಾದ ಶ್ರೀಬ್ರಹ್ಮದೇವರು, ಮತ್ತಿತರ ದೇವತೆಗಳು. ಅವರ ಬುದ್ಧಿಯು ಹೊಸ ಹೊಸ ವಿಚಾರಗಳನ್ನು ಚಿಂತಿಸಲು ಅತಿಸೂಕ್ಷ್ಮ-ವಾಗಿರುತ್ತದೆ. ರಮಾರಮಣನೂ ಪ್ರಕೃತಿವಿದೂರನೂ ಆದ ನಾರಾಯಣನು ಈ ಬ್ರಹ್ಮಾದಿದೇವತೆಗಳೊಡನಿದ್ದು ಅವರಿಗೆ ಸಾಧನ ಮಾಡಿಸುತ್ತಿರುವನು. ಶ್ರೀಹರಿಯು ಅನಂತಮಂಗಳಗುಣಪೂರ್ಣ. ಅಚಿಂತ್ಯಮಹಿಮ. ಇವು ಅವನ ಹೊರತು ಮತ್ತೊಬ್ಬರಿಗಿಲ್ಲ. ಇದರಲ್ಲಿ ಸಂದೇಹಕ್ಕೆ ಸ್ವಲ್ಪವೂ ಅವಕಾಶವಿಲ್ಲ. ನಿತ್ಯಸ್ವತಂತ್ರನೂ, ಸುಖಶರೀರನೂ, ರಮಾದೇವಿಗಿಂತ ಅತ್ಯಂತ ಶ್ರೇಷ್ಠನೂ ಆದ ನಾರಾಯಣನ ಸಾಮ್ಯವನ್ನು ಉತ್ತಮಪದವಿಯ ಬ್ರಹ್ಮದೇವರಿಗಾಗಲಿ, ಮುಕ್ತಿ ಹೊಂದಿದ ಇತರ ಜೀವರಿಗಾಗಲಿ ಪಡೆಯಲು ಸಾಧ್ಯವಿಲ್ಲ. ಜೀವಸಂದೋಹವು ಯಾವಾಗಲೂ ಅಸ್ವತಂತ್ರವಾದುದು. ಹೀಗಿರುವುದರಿಂದ ಅವರು ಅವನ ಹೆಸರು ಪಡೆಯಲೂ ಅಸ್ವತಂತ್ರರು. ಯಾವಾಗಲೂ ಯಾವ ರೀತಿಯಿಂದಲೂ ಅವನ ಸಾಮ್ಯವನ್ನು ಯಾರಿಗೂ ಹೊಂದಲಳವಲ್ಲ. ಈ ಎಲ್ಲ ವಿಷಯಗಳನ್ನು ಭಗವಾನ್ ಶ್ರೀಮನ್ ನಾರಾಯಣನು ವೇದ, ರಾಮಾಯಣ, ಭಾರತ, ಪಂಚರಾತ್ರ, ವೇದಾರ್ಥಬೋಧಕ ಅನೇಕ ಪುರಾಣಗಳು ಮತ್ತು ಬ್ರಹ್ಮಸೂತ್ರಗಳನ್ನು ಸ್ವೀಕರಿಸಿ ಅವುಗಳ ಆಧಾರದಿಂದ ಸಕಲವನ್ನೂ ನಿರ್ಣಯ ಮಾಡಿದ್ದಾನೆ.

''ನಾಸ್ತಿ ನಾರಾಯಣಸಮಂ'' ಎಂಬ ಭಾರತ, ''ಯಸ್ಮಾತ್ ಕ್ಷರಮತೀತೋಽಹಂ ಅಕ್ಷರಾದಪಿ ಚೋತ್ತಮಃ । ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ'' ಎಂಬ ಭಗವದ್ಗೀತಾ, ''ತತೋಽನ್ಯದಾರ್ತಂ'' ಎಂಬ ಶ್ರುತಿ, ''ಮುಕ್ತೋಪಸೃಪ್ಯವ್ಯಪದೇಶಾತ್'' ಎಂಬ ಬ್ರಹ್ಮಸೂತ್ರ, ''ಯ ಇಹ ನಾನೇವ ಪಶ್ಯತಿ'' ಎಂಬ ಶ್ರುತಿ - ಮುಂತಾದ ಪ್ರಮಾಣಗಳು, ನಾರಾಯಣನಿಗೆ ಸಮರಿಲ್ಲ, ಶ್ರೀಹರಿ ಪುರುಷಶ್ರೇಷ್ಠನು, ಅವನು ಸರ್ವಜೀವರ ಮತ್ತು ರಮಾದೇವಿ-ಯವರ ಹೃದಯದೊಳಗೆ ನೆಲೆಸಿರುವನು. ನಾರಾಯಣನನ್ನು ಬಿಟ್ಟು ಉಳಿದ ಬ್ರಹ್ಮಾದಿ ಜೀವರೆಲ್ಲರೂ ಅವನ ಸನ್ನಿಧಿಯಲ್ಲಿ ಸುತ್ತುತ್ತಿದ್ದರೂ ಕ್ಲೇಶ ಪಡುವವರು. ಜೀವರು ಮುಕ್ತರಾದರೂ ನಾರಾಯಣನನ್ನು ಹೊಂದಲು ಸಾಧನ ಮಾಡುತ್ತಾರೆ. ನಾರಾಯಣನಿಗೂ ಅವನ ಅವತಾರರೂಪಗಳಿಗೂ, ಗುಣಗಳಿಗೂ, ಅವಯವಗಳಿಗೂ, ಅವನ ವಿರೋಧರೂಪಗಳಿಗೂ, ವಿಲಕ್ಷಣರೂಪಗಳಿಗೂ, ವಿನಾಶರೂಪಗಳಿಗೂ ಅವನ ಸ್ಥಾನಗಳಿಗೂ ಪರಸ್ಪರ ಭೇದಗಳಿಲ್ಲ - ಮುಂತಾಗಿ, ಸಾರುವವು.

ಜೀವನು ನಾರಾಯಣನ ಪ್ರತಿಬಿಂಬ. ಆದರೂ ಅವನಿಗಿಂತ ಭಿನ್ನ. ಮುಕ್ತನಾಗಿದ್ದರೂ ಜೀವನಿಗೆ ನಾರಾಯಣನಂತೆ ಜಗತ್ ಸೃಷ್ಟಿ, ಸ್ಥಿತಿ, ಲಯಾದಿಗಳನ್ನು ಮಾಡುವ ಶಕ್ತಿಯಿಲ್ಲ. ಬ್ರಹ್ಮಾದಿ ದೇವತೆಗಳಿಗೆ ತಮಗಿಂತ ಕಡಿಮೆಯ ಜೀವರನ್ನು ಸೃಷ್ಟಿಸುವ ಶಕ್ತಿಯಿದ್ದರೂ ಅದು ಸ್ವತಂತ್ರವಾಗಿ ಇರುವುದಿಲ್ಲ. ಪ್ರಭುವಾದ ಶ್ರೀಹರಿಗೆ ಕಾಲ, ದೇಶ, ಗುಣಗಳ ಪರಿಮಿತಿಯಿಲ್ಲ. ಸೂರ್ಯ ಚಂದ್ರ ನಕ್ಷತ್ರಗಳ ಕಿರಣಗಳಿಗಾದರೂ ವ್ಯಾಪ್ತಿಯಲ್ಲಿ ಪರಿಮಿತಿಯಿದೆ. ಶ್ರೀಹರಿಯು ಶ್ರುತಿಗೆ ನಿಲುಕದ ಮಹಾಮಹಿಮನು. ಅವನ ಗುಣಗಳ ಮಹಿಮೆಯನ್ನು ರಮಾ-ಬ್ರಹ್ಮಾದಿದೇವತೆಗಳೂ ಹೊಂದಲಾರರು. ಸಮಗ್ರ

ಐಶ್ವರ್ಯ, ಮಿತಿಮೀರಿದಶಕ್ತಿ, ಯಶಸ್ಸು, ಗುಣಸಂಪತ್ತು, ಜ್ಞಾನ, ವಿಜ್ಞಾನಗಳೆಂಬ ಷಡ್ಗುಣಗಳು ಅವನಲ್ಲಿ ತುಂಬಿ ತುಳುಕುವುವು. ಅವೇ ಅವನ ದೇಹ. ಆದ್ದರಿಂದಲೇ ಅವನನ್ನು ಸಮಸ್ತಶ್ರುತಿಗಳು ಭಗವಾನ್ ಎಂದು ಕೊಂಡಾಡುವುವು.

ಭಗವಂತನ ದೇಹದಲ್ಲಿ ಅಪಾರ, ಅಗಮ್ಯ, ಅನಂತವೂ ಆದ ಮಹಿಮೆಗಳಿವೆ. ಶ್ರೀನಾರಾಯಣನು ಜೀವರಿಗೆ ಬಂಧನವನ್ನುಂಟುಮಾಡುವವನು ಮತ್ತು ಬಂಧಮೋಚಕನೂ ಆಗಿದ್ದಾನೆ. ಚತುರ್ಮುಖ ಬ್ರಹ್ಮನಾಗಲಿ, ಶಿವನಾಗಲಿ, ಅವನ ಕಲ್ಯಾಣಗುಣಗಳನ್ನು ಅರಿಯಲು ಅಸಮರ್ಥರೆಂದಮೇಲೆ ಆ ಗುಣಗಳನ್ನು ಅವರೆಂತು ಹೊಂದಬಲ್ಲರು ? ಅದು ಅಸಾಧ್ಯ. ರಮಾದೇವಿಯು ಬ್ರಹ್ಮ-ರುದ್ರಾದಿ ಜಗತ್ತನ್ನು ಸೃಷ್ಟಿಸುವಳೆಂದು ಪ್ರಸಿದ್ಧಿಯಿದೆ. ಅಂತಹ ಮಹಾಲಕ್ಷ್ಮಿಯೂ ಸಹ ಶ್ರೀಹರಿಯ ಗುಣಗಳನ್ನು ಸಾಕಲ್ಯೇನ ತಿಳಿಯಲು ಅಸಮರ್ಥಳು. ಹೀಗಿರಲು ಇತರ ಜೀವರು ಅವನ ಮಹಿಮೆಯನ್ನು ತಿಳಿಯಲು ಸಾಧ್ಯವಾದೀತೆ? ನಾರಾಯಣನ ಆನಂದದಲ್ಲಿನ ಅತಿ ಕಡಿಮೆಯ ಒಂದಂಶದ ಸುಖವನ್ನೂ ಅವರು ಹೊಂದಲಾರರು. ಅವರು ತಮ್ಮ ತಮ್ಮ ಉತ್ತಮ ಜೀವರ ಆನಂದಕ್ಕಿಂತ ನೂರುಭಾಗದಷ್ಟು ಕಡಿಮೆ ಆನಂದವನ್ನು ಮುಕ್ತಿಯಲ್ಲಿ ಹೊಂದಿ ಸುಖಿಸುವರು. ಇದು ಮೋಕ್ಷದಲ್ಲಿನ ಆನಂದಾನುಭವದ ರಹಸ್ಯ.

ವಿಶ್ವಗರ್ಭಃ ಎಂಬುದು ''ಮಾಹಾತ್ಮ್ಯದೇಹ'', ''ಸ್ವತಿಮುಕ್ತಿಗತ'' ಎಂಬ ತಾತ್ಪರ್ಯನಿರ್ಣಯ ವಿಶೇಷಣದಿಂದ ಹೊರ ಹೊಮ್ಮುವ ಅರ್ಥಗಳನ್ನು ನಿರೂಪಿಸುತ್ತದೆ. ಅದು ಹೀಗಿದೆ:- ಭಗವಂತನಿಗೆ ಸಾವಿರ ಮುಖಗಳಿವೆ. ಮುಖಾದ್ಯವಯವಗಳಿಂದ ಶ್ರೀಹರಿಯು ಇಂದ್ರ, ಅಗ್ನಿ, ಚಂದ್ರ, ಸೂರ್ಯ, ಪ್ರಾಣ, ಭೂಮಿ, ಅಂತರಿಕ್ಷ, ಸ್ವರ್ಗ, ದಿಕ್ಕು ಮೊದಲಾದವನ್ನು ಸೃಜಿಸುವನು. ಅವತರಿಸುವಾಗ ಶ್ರೀವತ್ಸ, ಕೌಸ್ತುಭ, ಶಂಖ, ಚಕ್ರ, ಗದಾಧಾರಿಯಾಗಿ ಮೂಲರೂಪದಿಂದ ಮೈದೋರುವನು. ಬಾಲ್ಯದಲ್ಲಿಯೇ ಸಕಲ ಜಗತ್ತನ್ನು ಉದರದಲ್ಲಿ ಧರಿಸಿ, ಗೋಕುಲದಲ್ಲಿ ಅವನನ್ನು ಅನೇಕ ಹಗ್ಗಗಳಿಂದ ಕಟ್ಟಲಾಗದಂತೆ ಉರವಣಿಸಿ, ಆಗಲೇ ಕಿರು ಬೆರಳಿನಿಂದ ಗೋವರ್ಧನ ಪರ್ವತವನ್ನೆತ್ತಿ ಅಗಣಿತ ಮಹಿಮೆಗಳನ್ನು ತೋರಿದನು. ಇದರಂತೆ ಶ್ರುತಿ, ಪುರುಷಸೂಕ್ತ, ಸ್ಮೃತಿಗಳು ಈ ಅರ್ಥಗಳನ್ನೂ ಸೂಚಿಸುವುವು.

ಇಂತು ಶ್ರೀಹರಿಯು ರಮಾಬ್ರಹ್ಮಾದಿ ದೇವತೆಗಳಿಗಿಂತಲೂ ಶ್ರೇಷ್ಠನಾದ್ದರಿಂದ ಸರ್ವೋತ್ತಮನೆನಿಸಿದ್ದಾನೆ. ಅವನ ಆಜ್ಞೆಯಂತೆ ರಮಾಬ್ರಹ್ಮಾದಿಪ್ರಪಂಚವು ಬದುಕುವುದು, ಬಾಳುವುದು, ತಿಳಿಯುವುದು, ತಿಳಿಸುವುದು, ಕಾರ್ಯವನ್ನು ಮಾಡುವುದು, ಮಾಡಿಸುವುದೇ ಮೊದಲಾದ ಜಗದ್ವ್ಯಾಪಾರಗಳನ್ನು ಮಾಡುವುದು. ಶ್ರೀಹರಿಯು ಉತ್ತಮನೂ ಸ್ವತಂತ್ರನೂ ಆಗಿರುವನು. ಅವನ ಶ್ರೇಷ್ಠ ಗುಣಗಳು ಸಮುದ್ರದಂತೆ ಎಲ್ಲೆ ಮೀರಿ ರಾರಾಜಿಸಿವೆ. ಅವು ಒಂದೊಂದೂ ಚತುರ್ವಿಧ-ನಾಶರಹಿತವಾದವು. ಅವು ಅಚಿಂತ್ಯ, ನಿತ್ಯ ಮತ್ತು ಶಶ್ವದೇಕಪ್ರಕಾರವಾದವು. ಹೀಗೆ ಶ್ರೀರಮಣನು ಅಪಾರ ಮಹಿಮನೆಂದು ಸಮಸ್ತ ವೇದಗಳು, ರಾಮಾಯಣ, ಭಾರತ, ಪಂಚರಾತ್ರ, ಪುರಾಣವಚನಗಳು ಸಾರಿ ಹೇಳುವವು.

ಋಗಾದಿ ನಾಲ್ಕು ವೇದಗಳು, ಪಂಚರಾತ್ರ, ಮೂಲರಾಮಾಯಣ, ಭಾರತ, ಬ್ರಹ್ಮಸೂತ್ರಗಳು ಸ್ವತಃಪ್ರಮಾಣಗಳು. ಇವಲ್ಲದೆ ಪ್ರತ್ಯಕ್ಷ, ಅನುಮಾನ, ಆಗಮ, ಸಾಕ್ಷಿಪ್ರಮಾಣಗಳೂ ಸಹ ಪ್ರಮಾಣಗಳು. ವೇದಗಳು ಅಪೌರುಷೇಯವಾದವು. ಅಜ್ಞಾನ, ಭ್ರಾಂತಿ, ಸಂದೇಹಾದಿ ದೋಷಗಳು ಅವುಗಳಿಗೆ ಹತ್ತುವುದಿಲ್ಲ. ಅಂತೆಯೇ ಋಗಾದಿ ನಾಲ್ಕು ವೇದಗಳು ಸ್ವತಃ ಪ್ರಮಾಣಗಳೆನಿಸಿವೆ. ವೇದಗಳಿಗೆ ಅವಿರೋಧವಾಗಿ ಅರ್ಥ ಹೇಳುವುದರಿಂದ ಮೂಲರಾಮಾಯಣ, ಮಹಾಭಾರತ, ಪಂಚರಾತ್ರ, ಅಷ್ಟಾದಶ ಪುರಾಣಗಳು, ಬ್ರಹ್ಮಸೂತ್ರಗಳು ವೇದಾನುಸಾರಿಯಾದುದರಿಂದ ಸ್ವತಃಪ್ರಮಾಣಗಳಾಗಿವೆ. ಇವುಗಳಿಗೆ ವಿರುದ್ಧವಾದ ಗ್ರಂಥಗಳು ಪ್ರಮಾಣವಾಗಲಾರವು. ವಿಷ್ಣುಸರ್ವೋತ್ತಮತ್ವ-ಪ್ರತಿಪಾದಕಗಳಾದ ಪಂಚರಾತ್ರ, ವೈಷ್ಣವ ಪುರಾಣಗಳು, ಮನುಸ್ಮೃತಿಗಳೂ ಪ್ರಮಾಣಗಳಾಗಿವೆ. ಪಂಚರಾತ್ರಾದಿ ಗ್ರಂಥಗಳು ವಿಷ್ಣು ಪಾರಮ್ಯವನ್ನು ಸ್ಪಷ್ಟವಾಗಿ ನಿರೂಪಿಸುವುವು. ಆದ್ದರಿಂದ ವಿಷ್ಣು-ಸರ್ವೋತ್ತಮತ್ವವೇ ಸಮಂಜಸವಾದುದೆಂದು ತಿಳಿಯಬೇಕು. ಇದಕ್ಕೆ ವಿರುದ್ಧವಾಗಿ

ತಿಳಿಯಬಾರದು. ಪಾಶುಪತಾದಿ ಶಾಸ್ತ್ರಗಳು ಶ್ರೀಹರಿಯ ಆಜ್ಞೆಯಂತೆಯೇ ಅಸುರಜನಮೋಹನಾರ್ಥವಾಗಿ ರಚಿತವಾಗಿವೆ. ಅಸುರರಿಗೆ ತಮಸ್ಸಿಗೆ ದಾರಿಮಾಡಿಕೊಡಲು ಅವು ರಚಿತವಾಗಿವೆ. ಆದ್ದರಿಂದ ಅದರಲ್ಲಿ ಹೇಳಿರುವಂತೆ ಆಚರಿಸಬಾರದು.

ಶ್ರೀಹರಿಯು ರಾಮಕೃಷ್ಣಾದ್ಯವತಾರಗಳನ್ನೆತ್ತಿ ಮಾನವರು ದುಃಖಪಟ್ಟಂತೆ ತಾನೂ ನಟಿಸಿದ್ದಾನೆ. ಅದು ಅಸುರರನ್ನು ಮೋಹಗೊಳಿಸಲೇ ಹೊರತು ಬೇರೆಯಲ್ಲ. ಶ್ರೀಹರಿಗೆ ಯಾವಾಗಲೂ ಎಲ್ಲಿಯೂ ದೋಷ ಹತ್ತುವುದಿಲ್ಲ. ಅಜ್ಞಾನ, ಪರಾಧೀನತೆ, ಮೈಕೈಗಳಿಗೆ ಗಾಯಗಳಾಗುವುದು, ಭಂಗವಾಗುವುದು, ಪ್ರಾಕೃತದೇಹ ಧರಿಸುವುದು, ದೇಹತ್ಯಾಗ, ಪ್ರಭುತ್ವ-ವಿಲ್ಲದಿರುವುದು, ದುಃಖಪಡುವುದು, ಅನ್ಯರಿಗೆ ಸಮನಾಗುವುದು, ಅಥವಾ ಕಡಿಮೆಯಾಗುವುದೇ ಮೊದಲಾದ ಲೋಪ-ದೋಷಗಳನ್ನು ಶ್ರೀಹರಿಯು ತನಗುಂಟಾದಂತೆ ತೋರಿಸುವನು. ದೈತ್ಯ-ದಾನವರನ್ನು ಮೋಹಗೊಳಿಸಲು ಶ್ರೀಹರಿಯು ಹಾಗೆ ನಟಿಸುವನು.

ಗುಣಪೂರ್ಣನೂ, ದೋಷರಹಿತನೂ, ಸ್ವತಂತ್ರನೂ, ಸರ್ವೋತ್ತಮನೂ ಆದ ನಾರಾಯಣನಿಗೂ ಬ್ರಹ್ಮಾದಿ-ದೇವತೆಗಳಿಗೂ ಅಭೇದ ಅಥವಾ ಸಾಮ್ಯವನ್ನು ಹೇಳಬಾರದು, ತಿಳಿಯಬಾರದು. ಪರಮಾತ್ಮನಾದ ಶ್ರೀಹರಿಗೂ, ಅಸ್ವತಂತ್ರರಾದ ಇತರರಿಗೂ ಅಭೇದ-ಸಾಮ್ಯಗಳು ಖಂಡಿತ ಇಲ್ಲ. ಹೀಗೆ ಹೇಳುವ ಶಾಸ್ತ್ರವೇ ಪರಮಶಾಸ್ತ್ರವು. ಶ್ರೀವ್ಯಾಸಾವತಾರವನ್ನು ತಳೆದ ಶ್ರೀಹರಿಯು ವೇದಾರ್ಥಗಳನ್ನು ನಿರ್ಣಯಿಸಲು ಬ್ರಹ್ಮಸೂತ್ರಗಳನ್ನು ರಚಿಸಿದ್ದಾನೆ. ಅಲ್ಲಿ ಪ್ರದರ್ಶಿಸಿರುವ ಮಾರ್ಗದಂತೆ ವೇದಾರ್ಥಗಳನ್ನು ನಿರ್ಣಯಿಸಿ ತಿಳಿಯಬೇಕು. ಅಲ್ಲಿಯೇ ಸಕಲ ನಿರ್ಣಯಕ್ರಮವೂ ಉಕ್ತವಾಗಿದೆ. ಸರಿಯಾಗಿ ಅರ್ಥಕೊಡುವ ವೇದವಾಕ್ಯಗಳ ಬಗ್ಗೆಯೂ ಅಸುರಜನಮೋಹನಾರ್ಥವಾಗಿ ಹೇಳಿದ ಶಾಸ್ತ್ರ-ವಾಕ್ಯಗಳ ಬಗ್ಗೆಯೂ ಪರಸ್ಪರ ಸಂದೇಹಗಳನ್ನು ಪರಿಹರಿಸಿ ಸರಿಯಾದ ಅರ್ಥವನ್ನು ನಿರೂಪಿಸಲು ಬ್ರಹ್ಮಸೂತ್ರಗಳು ಪ್ರವೃತ್ತವಾಗಿವೆ. ಆದ ಕಾರಣ ಬ್ರಹ್ಮಸೂತ್ರಾರ್ಥಗಳನ್ನು ಮನದಟ್ಟುಮಾಡಿಕೊಂಡು ಶ್ರೀಹರಿಯ ಸರ್ವೋತ್ತಮತ್ವ-ವಿಷಯದಲ್ಲಿ ಬರಬಹುದಾದ ಸಂದೇಹಗಳನ್ನು ಪರಿಹರಿಸಿ, ಸಕಲ ವಿಷಯಗಳನ್ನು ನಿರ್ಣಯಿಸಬೇಕು. ಶ್ರೀಹರಿಯು ಸರ್ವದೋಷದೂರ. ಸರ್ವಗುಣಪೂರ್ಣ. ಅವನ ರೂಪ, ಗುಣ, ಕ್ರಿಯೆಗಳಿಗೆ ಅಭೇದ. ಜೀವೇಶ್ವರರಿಗೆ ಅತ್ಯಂತ ಭೇದ. ಅವನು ಸರ್ವದೇವತೆಗಳಿಗೂ ಪ್ರಭು - ಇತ್ಯಾದಿ ವಿಷಯಗಳು ಬ್ರಹ್ಮಸೂತ್ರಗಳಲ್ಲಿ ಉಕ್ತವಾಗಿವೆ. ಮುಕ್ತಜೀವರಿಗೆ ತಾರತಮ್ಯ, ಬ್ರಹ್ಮವಿದ್ಯೆಯಿಂದ ಮೋಕ್ಷಪ್ರಾಪ್ತಿ ಮುಂತಾದವೂ ಉಕ್ತವಾಗಿವೆ. ಇದಕ್ಕೆ ವಿರುದ್ಧವಾಗಿ ಎಲ್ಲಿಯಾದರೂ ಹೇಳಿದ್ದರೆ ಅದು ಅಸುರ ಮೋಹನಾರ್ಥವೆಂದು ತಿಳಿಯಬೇಕು.

''ಏಷ ಮೋಹಂ ಸೃಜಾಮ್ಯಾಶು ಯೋ ಜನಾನ್ ಮೋಹಯಿಷ್ಯತಿ । ತ್ವಂ ಚ ರುದ್ರ ಮಹಾಬಾಹೋ ಮೋಹಶಾಸ್ತ್ರಾಣಿ ಕಾರಯ ॥ ಅತಥ್ಯಾನಿ ವಿತಥ್ಯಾನಿ ದರ್ಶಯಸ್ವ ಮಹಾಭುಜ । ಪ್ರಕಾಶಂ ಕುರು ಚಾತ್ಮಾನಂ ಅಪ್ರಕಾಶಂ ಚ ಮಾಂ ಕುರು ॥'' ಎಂಬ ವರಾಹಪುರಾಣವಚನದಿಂದ ಶ್ರೀಹರಿಯ ಆಜ್ಞೆಯಂತೆ ಅಸುರಜನಮೋಹಕ್ಕಾಗಿ ರುದ್ರದೇವರು ಪಾಶುಪತಾಗಮಗಳಲ್ಲಿ ತಾವೇ ಶ್ರೇಷ್ಠರೆಂದು ಹೇಳಿಕೊಂಡಿದ್ದರೂ, ಸಜ್ಜೀವರಿಗೆ ಮೋಹವುಂಟಾಗಬಾರದೆಂದು ಬ್ರಹ್ಮಾಂಡಪುರಾಣದಲ್ಲಿ ಶ್ರೀಹರಿಯೇ ಸರ್ವಶ್ರೇಷ್ಠನೆಂದೂ, ರುದ್ರಾದಿಗಳು ಅವನ ಕಿಂಕರರೆಂದೂ ನಿರೂಪಿಸಿದ್ದಾರೆ. ಹರಿಯ ಆಜ್ಞೆಯಿಂದಲೇ ಅಸುರಜನ-ಮೋಹನಾರ್ಥವಾಗಿ ರುದ್ರದೇವರು ತಮ್ಮ ಶ್ರೇಷ್ಠತ್ವ, ಶ್ರೀಹರಿಯ ಅಪಕೃಷ್ಟತ್ವಾದಿಗಳನ್ನು ಹೇಳಿರುವರೆಂಬುದು ಸ್ಕಾಂದ, ಪಾದ್ಮ, ಶೈವಪುರಾಣಗಳಲ್ಲಿ ರುದ್ರದೇವರು ಷಣ್ಮುಖನಿಗೆ, ಗಿರಿಜೆಗೆ ಹರಿಯ ಸರ್ವೋತ್ತಮತ್ವಾದಿಗಳನ್ನು ಉಪದೇಶಿಸಿರು-ವುದರಿಂದ ತಿಳಿಯಬಹುದಾಗಿದೆ. ಮುಖ್ಯವಾಗಿ ಶ್ರೀಹರಿಯೇ ಪರಮನು, ವಿಷ್ಣುಸರ್ವೋತ್ತಮತ್ವಜ್ಞಾನವೇ ಮೋಕ್ಷಸಾಧನ. ಇದೇ ಸರ್ವಶಾಸ್ತ್ರಗಳ ಸಾರ. ರುದ್ರದೇವರು ತಮ್ಮ ಪ್ರಿಯಪುತ್ರನಾದ ಷಣ್ಮುಖನಿಗೆ ಉಪದೇಶಿಸುತ್ತಾ ''ಮಗು, ಷಣ್ಮುಖ!, ವಿಷ್ಣುಜ್ಞಾನವಿಲ್ಲದೆ ಮೋಕ್ಷ ದೊರಕುವುದು, ನನಗೂ ಹರಿಗೂ ಸಾಮ್ಯವಿದೆ, ಶ್ರೀಹರಿಗಿಂತ ನಾನು ಅಧಿಕ, ನಾನು, ನೀನು,

ಪಾರ್ವತಿ ಮೊದಲಾದವರಿಗೂ ಶ್ರೀಹರಿಗೂ ಅಭೇದ, ಮುಕ್ತ ಜೀವರಿಗೂ ಶ್ರೀಹರಿಗೂ, ಅಭೇದ ಮುಂತಾಗಿ ಎಂದೂ ತಿಳಿಯಬಾರದು. ಹಾಗೆ ಹೇಳಿದ್ದೆಲ್ಲವೂ ಅಸುರಜನಮೋಹನಾರ್ಥವಾಗಿಯೇ ಹೊರತು ಮತ್ತೆ ಬೇರೆ ಅಲ್ಲ'' ಇತ್ಯಾದಿಯಾಗಿ ಹೇಳಿ ಶ್ರೀಹರಿಯ ಸರ್ವೋತ್ತಮತ್ವವನ್ನು ಎತ್ತಿ ಹಿಡಿದಿರುವರು.

''ಅಸ್ಯ ದೇವಸ್ಯ ಮೀಳ್ಹುಷಃ'', ಸ್ತುಹಿ ಶ್ರುತಂ ಗರ್ತಸದಂ ಯುವಾನಂ ಮೃಗನ್ನ ಭೀಮಮುಪಹತ್ನುಮುಗ್ರಂ'' ''ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ'', ''ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ'' ಮುಂತಾದ ಶ್ರುತಿಗಳಲ್ಲಿ ಶ್ರೀಹರಿಯೇ ಪರನೆಂದು ಉಕ್ತವಾಗಿದೆ. ರುದ್ರದೇವರು ಶ್ರೀವಿಷ್ಣುವನ್ನು ಯಾಗದಿಂದ ತೃಪ್ತಿಪಡಿಸಿ ರುದ್ರಪದವಿಯನ್ನು ಹೊಂದಿದರು, ''ಶ್ರೀನೃಸಿಂಹದೇವರು ಹಿರಣ್ಯಕಶಿಪುವನ್ನು ಸಂಹರಿಸಿದವರು. ಆದ್ದರಿಂದ ರುದ್ರ ! ಅಂತಹ ಮಹಾಮಹಿಮನಾದ ಶ್ರೀನರಸಿಂಹನನ್ನು ಸ್ತುತಿಸು'', ಎಂದು ಶ್ರುತಿಯು ಸಾರುವುದು. ಇನ್ನೊಂದು (ಅಂಭೃಣೀಸೂಕ್ತ) ಶ್ರುತಿಯು ''ಯಾರನ್ನು ನಾನು ರುದ್ರನನ್ನಾಗಿ ಮಾಡಬಯಸುವೆನೋ ಅವನನ್ನು ರುದ್ರನನ್ನಾಗಿ ಮಾಡುವೆನು. ಬ್ರಹ್ಮನನ್ನಾಗಿ ಮಾಡಲಿಚ್ಛಿಸಿದವರಿಗೆ ಬ್ರಹ್ಮಪದವಿಯನ್ನೀಯುವೆನು. ನಾನು ಬಯಸಿದವರನ್ನು ಋಷಿಯನ್ನಾಗಿಯೂ, ಮೇಧಾವಂತನನ್ನಾಗಿಯೂ ಮಾಡುವೆನು'' ಎಂದು ರಮಾದೇವಿ ಘೋಷಿಸು-ವಳೆಂದು ನಿರೂಪಿಸುವುದು. ಮತ್ತೊಂದು ಶ್ರುತಿಯು ''ಜಗತ್ಸೃಷ್ಟಿಗೆ ಪೂರ್ವದಲ್ಲಿ ಪ್ರಳಯಕಾಲದಲ್ಲಿ ಶ್ರೀನಾರಾಯಣ-ನೊಬ್ಬನೇ ಇದ್ದನು. ಅವನಿಗೆ ವಾಸುದೇವನೆಂಬ ಮತ್ತೊಂದು ಹೆಸರಿದೆ. ಅವನ ಹೊರತು ಬ್ರಹ್ಮನಾಗಲಿ, ಶಂಕರನಾಗಲಿ ಇರಲಿಲ್ಲ''. ಮುಂತಾಗಿ ಹೇಳುವುದು. ಇದರಿಂದ ಶ್ರೀಹರಿಯೇ ಸರ್ವೋತ್ತಮನೆಂದು ಸಿದ್ಧಿಸುವುದು.

ಭಗವಂತನಿಗೂ ಅವನ ಗುಣಕ್ರಿಯಾರೂಪ ಅವಯವಗಳಿಗೂ ತೋರುವ ಭೇದ ಅಸತ್ಯ. ಜಗತ್ತು ಅಸತ್ಯವಲ್ಲ. ಈ ಜಗತ್ತಿನ ಪ್ರವಾಹವು ಸತ್ಯ. ಇದರಲ್ಲಿ 1. ಜೀವೇಶ್ವರಭೇದ, 2. ಜೀವಜೀವಭೇದ, 3. ಜಡೇಶ್ವರಭೇದ, 5. ಜಡಜೀವಭೇದ-ಗಳೆಂಬ ಪಂಚಭೇದಗಳಿವೆ. ಈ ಭೇದಗಳು ಎಲ್ಲದರ ಸ್ಥಿತಿಯಲ್ಲೂ, ಎಲ್ಲ ರೀತಿಯಿಂದಲೂ ನಿತ್ಯ. ಮುಕ್ತಜೀವರ ತಾರತಮ್ಯ ಸುಳ್ಳಾಗದು.

ಮನುಷ್ಯೋತ್ತಮರಾದ ಚಕ್ರವರ್ತಿಗಳಲ್ಲಿ ಪರಸ್ಪರ ತಾರತಮ್ಯವಿದೆ. ಅವರ ನಂತರ ಉತ್ತಮರು ಮನುಷ್ಯಗಂಧ-ರ್ವರು. ಅವರಿಂದ ಉತ್ತಮರು ದೇವಗಂಧರ್ವರು. ಅವರಿಗಿಂತ ಪಿತೃಗಳು ಉತ್ತಮರು. ಅವರಲ್ಲಿ ಗಂಧರ್ವರಲ್ಲಿದ್ದಂತೆ ಎರಡು ವಿಧವಿದೆ. ಅಜಾನಜರು ಪಿತೃಗಳಿಗಿಂತ ಉತ್ತಮರು. ಜಯಂತ ಮುಂತಾದವರು ದೇವರ ಮಕ್ಕಳಾದ್ದರಿಂದ ಅಜಾನಜರೆನಿಸಿದರು. ಕರ್ಮಜರು ಅಜಾನಜರಕಿಂತ ಉತ್ತಮರು. ದೇವತೆಗಳು ಕರ್ಮಜದೇವತೆಗಳಿಗಿಂತ ಉತ್ತಮರು. ಇಂದ್ರನೆಂದರೆ ಬೃಹಸ್ಪತ್ಯಾಚಾರ್ಯರು. ಪುರಂದರನೆಂದರೆ ನೂರು ಯಾಗ ಮಾಡಿದ ಇಂದ್ರದೇವರು. ಹೀಗೆ ಅವರು ಕ್ರಮವಾಗಿ ನೂರು ಗುಣಗಳಿಂದ ಅಧಿಕರಾಗಿ ಉತ್ತಮರಾಗಿದ್ದಾರೆ. ರುದ್ರದೇವರಿಗಿಂತ ಸರಸ್ವತೀದೇವಿ ಅಧಿಕರು. ಅವರಿಗಿಂತ ವಾಯುದೇವರು ಉತ್ತಮರು. ಅವರು ಮುಕ್ತರಾದಾಗ ಒಬ್ಬರಕ್ಕಿಂತ ಮತ್ತೊಬ್ಬರಿಗೆ ನೂರರಷ್ಟು ಅಧಿಕ ಆನಂದವಿರುತ್ತದೆ. ವಾಯುದೇವರು ಬ್ರಹ್ಮದೇವರು ಸಮರು. ಗರುಡ-ರುದ್ರ-ಶೇಷರು ಸಮರು. ಗರುಡ, ರುದ್ರ, ಶೇಷರಲ್ಲಿ ಯಾರೊಬ್ಬರೂ ವಾಯದೇವರಿಗೆ ಸಮರಲ್ಲ. ಮುಕ್ತರಲ್ಲಿ ರಮಾದೇವಿಯರು ವಾಯುದೇವರಿಗಿಂತ ಗುಣಗಳಿಂದ ಸಹಸ್ರಗುಣ ಅಧಿಕರು. ರಮಾದೇವಿಯರಿಗಿಂತ ನಾರಾಯಣನು ಅನಂತಗುಣಗಳಿಂದ ಅಧಿಕನು. ಅವನಿಗೆ ಯಾವಾಗಲೂ, ಯಾರೂ ಸಮರಲ್ಲ ಇತ್ಯಾದಿ ತಾರತಮ್ಯವನ್ನೂ, ವಿಷ್ಣುವಿಗೆ ಶ್ರೇಷ್ಠತೆಯನ್ನೂ, ಹಿರಿಮೆಯನ್ನೂ ವೇದವಾಕ್ಯಗಳು ಘಂಟಾಘೋಷವಾಗಿ ಹೇಳುತ್ತವೆ.

ಶ್ರೀನಾರಾಯಣನ ಸರ್ವೋತ್ತಮತ್ವಾದಿ ತತ್ವಗಳನ್ನು ನಿರೂಪಿಸುವುದರಲ್ಲೇ ಸಕಲ ಶ್ರುತಿ, ಸ್ಮೃತಿ, ಪುರಾಣಾದಿ ವಾಕ್ಯಗಳ ಮಹಾತಾತ್ಪರ್ಯ. ಇದನ್ನು ಭಗವದ್ಗೀತೆ, ಬ್ರಹ್ಮಸೂತ್ರಗಳೂ ಸ್ಪಷ್ಟವಾಗಿ ತಿಳಿಸುತ್ತವೆ. ಭಗವಂತನ ಒಲುಮೆಯಿಂದಲೇ

ಮೋಕ್ಷವು ದೊರಕುವುದು. ನಿರ್ಮಲ ಭಕ್ತಿಯಿಂದ ಮೆಚ್ಚಿದ ಪರಮಾತ್ಮ ಕೈಹಿಡಿದಾಗಲೇ ಅವನ ಪ್ರಸಾದ ಲಭಿಸುವುದು. ಆದರಿಂದಲೇ ಮೋಕ್ಷ. ಶ್ರೀಹರಿಯ ಆಜ್ಞೆಯಂತೆ ವಾಯುದೇವರು ಮುಕ್ತಿಯನ್ನು ಕರುಣಿಸುವರು. ಭಕ್ತಿಯೊಂದೇ ಮುಕ್ತಿಗೆ ಸಾಧನ. ಜೀವಸಮೂಹದಲ್ಲಿ ದೇವ, ಮಾನುಷ, ದಾನವರೆಂದು ಮೂರು ವಿಧ. ಅವರಲ್ಲಿ ದೇವತೆಗಳು, ಮನುಷ್ಯೋತ್ತಮರು ಮುಕ್ತಿಯೋಗ್ಯರು. ಮಧ್ಯಮಮಾನುಷರು ಸದಾ ಜನನ-ಮರಣಗಳ ಪ್ರವಾಹವೆಂಬ ಸಂಸಾರಕ್ಕೆ ಯೋಗ್ಯರು. ಮಾನುಷಾಧಮರು ಪಾಪಲೋಕಕ್ಕೆ ಹೋಗುವವರು. ದಾನವರು ಕಗ್ಗತ್ತಲೆಯ ಮನೆಗಳಲ್ಲಿ ಕೊಳೆಯುವರು. ಮುಕ್ತಿಯೂ, ತಮಸ್ಸೂ ನಿತ್ಯವಾದವು. ಅಲ್ಲಿಗೆ ಹೋದವರು ಮತ್ತೆ ಬರಲಾರರು. ಉತ್ತಮಜೀವರು ತಮ್ಮ ಯೋಗ್ಯತೆಯಂತೆ ತಮ್ಮ ಹೃದಯಗುಹೆಯಲ್ಲಿ ನೆಲೆಸಿರುವ ಬಿಂಬಮೂರ್ತಿಯನ್ನು ಉಪಾಸನೆ ಮಾಡಬೇಕು. ಆದರಿಂದ ಶ್ರೀಹರಿಯು ಸುಪ್ರಸನ್ನನಾಗಿ ಅವರಿಗೆ ಮೋಕ್ಷ-ಪದವಿಯನ್ನಿತ್ತು ಸಲಹುವನು. ಪರಾಂತಕಾಲದಲ್ಲಿ ಬ್ರಹ್ಮದೇವರಿಗೆ ಮುಕ್ತಿಯೂ, ಕಲಿ ಮೊದಲಾದ ಅಸುರರಿಗೆ ತಮಸ್ಸೂ ಆಗುವುದು. ಆದುದರಿಂದ ಜೀವರು ವೇದೋಕ್ತ ಅನೇಕ ಗುಣಗಳಿಂದ ಭಗವಂತನನ್ನು ಸರ್ವದಾ ಸ್ತುತಿಸಬೇಕು.

ಬ್ರಹ್ಮಪದವಿಗೆ ಯೋಗ್ಯರಾದ ಜೀವರಿಗೆ 'ಋಜುಗಣ'ದ ದೇವತೆಗಳೆಂದು ಹೆಸರು. ಅವರ ಸಾಧನವಿಶೇಷದಿಂದ ಶ್ರೀಹರಿಯು ಅವರಿಗೆ ಬ್ರಹ್ಮಪದವಿಯನ್ನು ಅನುಗ್ರಹಿಸುವನು. ಋಜುಗಣದ ದೇವತೆಗಳಲ್ಲದವರಿಗೆ ಆ ಪದವಿಯು ದೊರಕದು. ಅವರೆಷ್ಟು ಸಾಧನ ಮಾಡಿದರೂ ಅವರ ಯೋಗ್ಯತೆಗೆ ತಕ್ಕ ಪದವಿಯೇ ಲಭಿಸುವುದು. ಇದರಂತೆ ಬೇರೆ ಬೇರೆ ಗಣಗಳಲ್ಲಿ ಸೇರಿದ ಜೀವರು ತಮತಮಗೆ ಯೋಗ್ಯವಾದ ಪದವಿಗಳನ್ನು ಪಡೆಯುವರು. ಈ ನಿಯಮವನ್ನು ಬದಲಿಸಲು ಯಾರಿಂದಲೂ ಯಾವಾಗಲೂ ಸಾಧ್ಯವಿಲ್ಲ. ತಮಗೆ ಸಲ್ಲದ ಉನ್ನತ ಸಾಧನಗಳಿಂದ ಉನ್ನತ ಪದವಿಗಳನ್ನು ಬಯಸುವವನು ಕೆಳಗೆ ಬೀಳುವನು. ಆದ್ದರಿಂದ ಜೀವರು ತಮ್ಮ ಯೋಗ್ಯತೆಯನ್ನು ಮೀರದೆ ವಿಷ್ಣುವನ್ನು ಭಜಿಸಿ ಯೋಗ್ಯತಾನುಗುಣವೂ, ಫಲಾಭಿಸಂಧಿರಹಿತವೂ ಆದ ಪೂರ್ಣಸೇವೆಯಿಂದ ಶ್ರೀಹರಿಯ ಅಪರೋಕ್ಷ ಜ್ಞಾನವನ್ನು ಪಡೆಯಲು ಯತ್ನಿಸಬೇಕು. ಸರ್ವಸುಜೀವರು ಸರಿಯಾದ ಸಾಧನದಿಂದ ಅಪರೋಕ್ಷಜ್ಞಾನವನ್ನು ಪಡೆಯಲು ಸಾಧ್ಯವಿದೆ. ನಾರಾಯಣನು ತನ್ನ ಸಂಕಲ್ಪವನ್ನು ಎಂದಿಗೂ ವ್ಯರ್ಥಗೊಳಿಸದೆ ನೆರವೇರಿಸುವನು. ಲೋಕೋಪದ್ರವಕಾರಿಗಳಾದ ಕ್ರೂರ ದೈತ್ಯದಾನವರನ್ನು ಸದೆಬಡೆದು ಅಂಧಃತಮಸ್ಸಿನಲ್ಲಿ ಹಾಕಿ ಶಿಕ್ಷಿಸಿ ದುಃಖ ಪಡಿಸುವನು. ಅತ್ಯಂತ ಸಾಧುಗಳಾದ ಬ್ರಹ್ಮಾದಿ ದೇವತೆಗಳಿಗೆ ಉತ್ತಮ ಪದವಿಯನ್ನಿತ್ತು ಸಲಹಿ ಆನಂದಗೊಳಿಸುವನು. ದೇವ-ದಾನವರಿಬ್ಬರೂ ಹರಿಯ ಅಧೀನರಾದ್ದರಿಂದ ಅವನ ಸಂಕಲ್ಪವನ್ನು ವ್ಯತ್ಯಾಸಗೊಳಿಸಲು ಯಾರಿಗೂ ಸಾಧ್ಯವಿಲ್ಲ. ಈ ಉಭಯ ವರ್ಗಕ್ಕೂ ಅವನು ಸ್ವಾಮಿಯೂ ನಿಯಾಮಕನೂ ಆಗಿದ್ದಾನೆ. ಅಸುರರು ಉಗ್ರ ತಪಸ್ಸಿನಿಂದ ತಮಗೆ ಸಲ್ಲದ ಶಕ್ತಿಗಳನ್ನು ಪಡೆದು ಮೇರೆ ಮೀರಿ ಅಭಿವೃದ್ಧಿಸುವುದನ್ನು ಶ್ರೀಹರಿಯು ಕ್ಷಮಿಸುವುದಿಲ್ಲ. ದೈತ್ಯ-ದಾನವರು ತನ್ನ ಸೇವೆ ಮಾಡತೊಡಗಿದರೆ ಅದನ್ನು ಅವನು ಮಾಡಗೊಡಿಸದೆ ಮುರಿದುಹಾಕುವನು. ಮುಂಬರಲಿರುವ ಅಸುರರಿಗೆ ಪರಮಾತ್ಮನ ಅನುಭವವಿಲ್ಲದಂತೆ ಮಾಡಿ ಅವರ ಸಾಧನವನ್ನು ಮುರಿಯುವನು. ವರ್ತಮಾನ ಕಾಲದ ಅಸುರರಿಗೂ ಇದೇ ರೀತಿ ಮಾಡುವನು. ಹೀಗೆ, ತ್ರಿಕಾಲದಲ್ಲಿಯೂ ಮಾಡುತ್ತಾ ಇಂದ್ರನೆನಿಸಿ ಬೆಳಗುತ್ತಿರುವನು.

ಜ್ಞಾನವೇ ಮೋಕ್ಷಸಾಧನ. ಭಗವದ್‌ಜ್ಞಾನದ ವಿನಃ ಮುಕ್ತಿಗೆ ಅನ್ಯಸಾಧನವಿಲ್ಲವೆಂದು ಶ್ರುತಿಗಳು ಸಾರಿ ಹೇಳುವವು. ಶ್ರೀಹರಿಯು ಪರಮ ಮಹಿಮನೆಂದರಿತು ಅವನಲ್ಲಿ ಭಕ್ತಿಯನ್ನು ಮಾಡಬೇಕು. ಹರಿಭಕ್ತಿಗೆ ಗುರುಗಳು ಸುಮಾರ್ಗ-ದರ್ಶಕರಾದ್ದರಿಂದ ಗುರುಗಳಲ್ಲಿಯೂ ಭಕ್ತಿ ಮಾಡಬೇಕು. ಗುರುಭಕ್ತಿಯಿಲ್ಲದೆ ಹರಿಭಕ್ತಿಯಿಲ್ಲ. ಅದಿಲ್ಲದೆ ಭಗವತ್ಪ್ರಸಾದವಿಲ್ಲ. ಪ್ರಸಾದವಾಗದ ವಿನಃ ಮೋಕ್ಷವು ಲಭಿಸದು. ಇದನ್ನರಿತು ಭಕ್ತಿ ಮಾಡುವ ಶಿಷ್ಯನಿಗೆ ಗುರುಗಳು ಉಪದೇಶಿಸಿದ ಅರ್ಥ-ಗಳೆಲ್ಲವೂ ಸುಸ್ಪಷ್ಟವಾಗಿ ಹೊಳೆಯುವಂತೆ ಅವರ ಅನುಗ್ರಹದಿಂದ ಅವರು ಉಪದೇಶಿಸದೇ ಇರುವ ಅರ್ಥಗಳು ಹೊಳೆ-ಯುವವು! ಅಂಥವನು ಮಹಾತ್ಮನೆನಿಸುವನು. ಗುರುಗಳಿಂದ ಪಡೆದ ಶಾಸ್ತ್ರಶ್ರವಣ ಮೊದಲಾದ ಸಾಧನಗಳು ಹರಿಗುರು-

ಭಕ್ತಿಯ ದೃಢತೆಗೆ ಸಹಾಯಕವಾಗುವುದು. ಭಕ್ತಿಯೆಂಬುದು ಕೇವಲ ಮುಕ್ತಿಸಾಧನ. ಜೀವರು ಮುಕ್ತರಾದ ಮೇಲೂ ಭಕ್ತಿಯನ್ನು ಅವಶ್ಯ ಆಚರಿಸಲೇಬೇಕು. ಅಂತಹ ಭಕ್ತಿಯು ಮುಕ್ತಿಯಲ್ಲಿ ಆನಂದವನ್ನು ಉನ್ನಾಹಗೊಳಿಸುವುದು. ಶ್ರೀಹರಿಯು ಸರ್ವೋತ್ತಮ-ನೆಂದು ತಿಳಿದು ಎಂಥ ವಿಘ್ನಗಳಿಂದಲೂ ಸ್ವಲ್ಪವೂ ಕುಂದದ ಶ್ರೇಷ್ಠವಾದ ಒಲವಿನ (ಪ್ರೇಮ) ಹೊನಲಿಗೆ ಭಕ್ತಿಯೆಂದು ಹೆಸರೆಂದು ವೇದಗಳು ಮುಕ್ತಿಯ ಸಾಧನವನ್ನು ನಿರೂಪಿಸುವವು. ಮಾನವನು ಸಕಲವಿಧ ಧರ್ಮಾಚರಣೆಗಳನ್ನು ತಪ್ಪದೇ ಆಚರಿಸುತ್ತಿದ್ದು ಹರಿಭಕ್ತಿ ರಹಿತನಾಗಿದ್ದರೆ ಸದಾಕಾಲವೂ ಅವನು ನರಕದಲ್ಲಿ ವಾಸಿಸುವನು. ಹರಿಭಕ್ತಿ ಸಹಿತನಾಗಿದ್ದಲ್ಲಿ ಬ್ರಹ್ಮಹತ್ಯೆಯನ್ನು ಮಾಡಿದ್ದರೂ ಮೋಕ್ಷಕ್ಕೆ ಹೋಗುವನು ಎಂದು ಹರಿಭಕ್ತಿಯ ಮಹಿಮೆಯನ್ನು ಸ್ಮೃತಿಗಳೂ ಸಾರಿ ಹೇಳುವವು.

ದೈತ್ಯರು ಅನಾದಿ ಕಾಲದಿಂದಲೂ ಸ್ವಾಭಾವಿಕವಾಗಿ ಶ್ರೀನಾರಾಯಣನಲ್ಲಿ ದ್ವೇಷ ಮಾಡುವರು. ಹೀಗೆ ವಿಷ್ಣುವಿನಲ್ಲಿ ಅವರಿಗೆ ಬೆಳೆಯುವ ದ್ವೇಷವು ಅವರನ್ನು ಎಂದಿಗೂ ಮರಳಿಬರಲಾಗದ ಅಂಧತಮಸ್ಸೆಂಬ ಕಗ್ಗತ್ತಲೆಯ ಕೂಪಕ್ಕೆ ತಳ್ಳುವುದು. ಅಂಧಃತಮಸ್ಸೆಂದರೆ ಅಲ್ಲಿ ಸುಖಾಂಶದ ಲೇಶವೂ ಉಳಿದಿರುವುದಿಲ್ಲ. ದ್ವೇಷವು ಸಂಪೂರ್ಣ ದುಃಖದ ಸ್ವರೂಪ. ಇಂತಹ ಅಂಧಃತಮಸ್ಸಿನಲ್ಲಿ ಬಿದ್ದ ದೈತ್ಯರ ದ್ವೇಷಕ್ಕೆ ಕೊನೆಮೊದಲಿಲ್ಲ. ಅವರಿಗೆ ದ್ವೇಷದಿಂದ ದುಃಖ, ಅದರಿಂದ ದ್ವೇಷವೆಂಬ ಮಹಾಪ್ರವಾಹವು ಬೆಳೆಯುತ್ತಲೇ ಇರುತ್ತದೆ. ದ್ವೇಷ ಒಂಭತ್ತು ವಿಧವಾಗಿದೆ, ಜೀವೇಶ್ವರರಲ್ಲಿ ಐಕ್ಯಜ್ಞಾನ, ಪರಮಾತ್ಮ ಗುಣರಹಿತನೆಂದು ತಿಳಿಯುವುದು. ಅವನಲ್ಲಿ ಯಾವುದೋ ಕೆಲಗುಣಗಳು ಮಾತ್ರವಿದೆಯೆಂದರಿಯುವುದು. ಇತರ ದೇವತೆಗಳು ಶ್ರೀಹರಿ ಸಮರೆನ್ನುವುದು. ಅಥವಾ ಇತರ ದೇವತೆಗಳು ಶ್ರೀಹರಿಗಿಂತ ಅಧಿಕರೆಂದು ತಿಳಿಯುವುದು. ಅವನಿಗೂ ಅವನ ಗುಣ ಮುಂತಾದವುಗಳಿಗೆ ಭೇದ ಹೇಳುವುದು. ಅವನಿಗೂ ಅವನ ಅವತಾರಗಳಿಗೂ ವ್ಯತ್ಯಾಸ ಹೇಳುವುದು, ಶ್ರೀಹರಿಸರ್ವೋತ್ತಮತ್ವಪ್ರತಿಪಾದಕ ಪ್ರಮಾಣಗಳಾದ ಶ್ರುತಿಸ್ಮೃತ್ಯಾದಿಗಳನ್ನು ದೂಷಿಸುವುದು - ಹೀಗೆ ದ್ವೇಷವು ನವವಿಧ-ವಾಗಿದೆ. ಇಂಥ ದ್ವೇಷರಹಿತವಾದ ಭಕ್ತಿಯೇ ಭಕ್ತಿಯೆಂದು ನಿಶ್ಚಿತವಾಗಿದೆ. ದೇವತೆಗಳಿಗೆ ಶ್ರೀಹರಿಯಲ್ಲಿ ಅನಾದಿ ಕಾಲದಿಂದಲೂ ಇಂತಹ ಭಕ್ತಿಯಿರುವುದರಿಂದ ಅವನ ಮಹಿಮಾತಿಶಯಗಳನ್ನರಿತಂತೆಲ್ಲ ಆ ಭಕ್ತಿಯು ಅಭಿವೃದ್ಧಿಸುತ್ತಲೇ ಹೋಗುವುದು. ಆ ಭಕ್ತಿಯೇ ಮುಕ್ತಜೀವರಲ್ಲಿ ಆನಂದಸ್ವರೂಪವಾಗಿ ಪರಿಣಮಿಸಿ ನಿತ್ಯವೂ ನೆಲೆಸಿರುವುದು. ಬಿಳಿಯ-ಗೋವಿನಲ್ಲಿ ಅದರ ಬಿಳುಪಿನ ಗುಣವು ಅಚ್ಚಳಿಯದೇ ನೆಲೆಸಿರುವಂತೆ ಭಕ್ತಿಯಲ್ಲಿನ ಜ್ಞಾನಾನಂದಾದಿ ಗುಣರೂಪಗಳು ಸರ್ವದಾ ಅಚ್ಚಳಿಯದೆ ನೆಲೆಸಿರುತ್ತವೆ.

ಬ್ರಹ್ಮಾದಿದೇವತೆಗಳು ಮುಕ್ತರಾದ ಮೇಲೂ ಅವರವರ ಜ್ಞಾನ ಸುಖಾನುಗುಣವಾಗಿ ತಾರತಮ್ಯವಿರುವುದು ಮುಖ್ಯ ಕಾರಣ. ಅದನ್ನನುಸರಿಸಿ ಅವರವರ ಭಕ್ತಿಯೂ ನಿತ್ಯವಾಗಿರುತ್ತದೆ. ಅಧಮ ಮಾನವರು ಹರಿಯಲ್ಲಿ ಸ್ವಲ್ಪ ದ್ವೇಷಮಾಡು-ವವರಾದುದರಿಂದ ಅವರು ದುಃಖದ ಮಡುವಿನಲ್ಲಿ ನಿತ್ಯವೂ ಮುಳುಗಿದ್ದಾರೆ. ಮಧ್ಯಮ ಮಾನವರು ದ್ವೇಷಮಿಶ್ರಿತ ಭಕ್ತಿಯಿಂದ ಹರಿಯನ್ನು ಭಜಿಸುವುದರಿಂದವರಿಗೆ ದುಃಖಮಿಶ್ರಿತ ಸುಖಾನುಭವವಾಗುವುದು. ಉತ್ತಮ ಮಾನವರು ಪೂರ್ಣಭಕ್ತಿಯಿಂದ ಭಜಿಸುವವರಾದ್ದರಿಂದ ಅವರು ನಿತ್ಯಸುಖರೂಪ ಮೋಕ್ಷಕ್ಕೆ ಭಾಗಿಗಳಾಗುವರು. ಇತರ ದೇವತೆಗಳಿಗಿಂತ ಬ್ರಹ್ಮದೇವರಿಗೆ ಭಕ್ತಿಯು ಸರ್ವೋತ್ತಮವಾಗಿರುತ್ತದೆ. ಆದ್ದರಿಂದ ಬ್ರಹ್ಮದೇವರು ಸರ್ವಜೀವೋತ್ತಮರಾಗಿದ್ದಾರೆ - ಮುಂತಾದ ವಚನಗಳು ಪುರಾಣಗಳಲ್ಲಿ ಅಲ್ಲಲ್ಲಿ ಬೇರೆಬೇರೆಯಾಗಿ ಉಕ್ತವಾಗಿವೆ.

ಉತ್ತಮದೇವತೆಗಳ ಸ್ವರೂಪವು ದ್ವಾತ್ರಿಂಶಲ್ಲಕ್ಷಣಗಳಿಂದ ರಾಜಿಸುವುದು. ಸ್ವಯಂ ಸಂಶಯರಹಿತನಾಗಿ, ಶಿಷ್ಯರ ಸಂದೇಹವನ್ನು ಸರ್ವದಾ ಪರಿಹರಿಸುವವನನ್ನು ''ಗುರು''ವೆಂದು ಜ್ಞಾನಿಗಳು ಹೇಳುವರು. ಆದ್ದರಿಂದ ಬ್ರಹ್ಮದೇವರೇ ಸರ್ವರಿಗೂ ಸರ್ವದಾ 'ಪ್ರಧಾನಗುರು'ಗಳಾಗಿರುವರು. ತಾರತಮ್ಯದಂತೆ ತಮಗಿಂತ ಉತ್ತರಾದವರು ಕ್ರಮವಾಗಿ ಗುರುಗಳೆಂದು ಪ್ರಸಿದ್ಧರಾಗಿದ್ದಾರೆ. ಮಧ್ಯಮ ಮಾನವರು ತಮ್ಮತಮ್ಮಲ್ಲಿ ಕ್ರಮವಾಗಿ ಸ್ವಲ್ಪ ಸ್ವಲ್ಪ ಗುರುಲಕ್ಷಣಗಳಿಂದ

ಕಡಿಮೆಯಾಗಿದ್ದಾರೆ. ಲಕ್ಷಣಾಲಕ್ಷಣಗಳಿಂದ ಸಮರಾಗಿರುವರು. ಬ್ರಹ್ಮದೇವರನ್ನು ಬಿಟ್ಟರೆ ಉಳಿದವರಿಗೆ ಗುರುತ್ವವು ಔಪಚಾರಿಕವಾಗಿ ಸಲ್ಲುತ್ತದೆ. ಆದರೂ ತಮಗಿಂತ ಉತ್ತಮರನ್ನು ಗುರುಗಳೆಂದು ಭಾವಿಸಬೇಕು. ಕಲಿಯು ಮೇಲೆ ಹೇಳಿದ ಈ ಗುರುಲಕ್ಷಣಕ್ಕೆ ವ್ಯತಿರಿಕ್ತವಾದ ದುರ್ಲಕ್ಷಣಗಳಿಂದ ಕೂಡಿರುವನು. ಸರ್ವಶ್ರೇಷ್ಠಲಕ್ಷಣಗಳಿಂದ ಯುಕ್ತನೂ, ಪ್ರಸನ್ನ-ಮನಸ್ಕನೂ ಆದ ಗುರುವು ಬೋಧಿಸುವ ವಿಷಯಗಳು ಶಿಷ್ಯನಿಗೆ ಸತ್ಯವಾಗಿ ಫಲಿಸುವುದು. ಹರಿಯು ಅಗೋಚರನಾದ್ದರಿಂದ ಗುರುಗಳ ಅಂತರ್ಗತನಾಗಿದ್ದು ಮೋಕ್ಷಪ್ರದನಾಗುತ್ತಾನೆ. ಗುರುಗಳು ಪ್ರಸನ್ನರಾಗದೆ ಉಪದೇಶಿಸಿದ್ದು ವ್ಯರ್ಥವಾಗುವು-ದರಿಂದ ಗುರುಗಳ ಮನಸ್ಸನ್ನು ಸಂತೋಷಪಡಿಸಲು ಸದಾ ಅವರನ್ನು ಪೂಜಿಸುತ್ತಿರಬೇಕು. ಗುರೂಪದೇಶದಂತೆ ಉಪಾಸನೆ ಮಾಡಿದಾಗ ಶಿಷ್ಯನಿಗೆ ಸ್ವಯೋಗ್ಯವಾದ, ಶ್ರೀಹರಿಯ ರೂಪದರ್ಶನವಾಗುವುದು. ಆದರಿಂದ ಅವನ ಪಾಪವು ಬೆಂದು ಭಸ್ಮವಾಗುವುದು. ಸಂಚಿತಪಾಪಗಳು ಭಸ್ಮವಾಗಿ ಕೆಲ ಆಗಾಮಿಪಾಪಗಳು ಅಂಟುವುದಿಲ್ಲ. ತನಗೆ ಯೋಗ್ಯವಾದ ಉಪಾಸನೆ-ಯಿಂದ ಶ್ರೀಹರಿಯ ದರ್ಶನವಾದಾಗ ನಿಯಮೇನ ಮೋಕ್ಷಪ್ರಾಪ್ತಿಯಾಗುವುದು ಎಂದು 'ಭವಿಷ್ಯತ್ಪರ್ವ' ವಚನ ಮತ್ತು 'ಬ್ರಹ್ಮಸೂತ್ರ'ವೂ ಸ್ಪಷ್ಟವಾಗಿ ಹೇಳಿವೆ. ವೇದಗಳೂ ಈ ವಿಷಯಗಳನ್ನು ಸುಸ್ಪಷ್ಟಗೊಳಿಸಿವೆ.

ಮುಕ್ತರಾದ ಮನುಷ್ಯೋತ್ತಮರು ದೇವತೆಗಳನ್ನೂ, ಅವರು ಇಂದ್ರದೇವರನ್ನೂ, ಇಂದ್ರದೇವರು ಶಂಕರನನ್ನೂ, ರುದ್ರದೇವರು ಬ್ರಹ್ಮದೇವರನ್ನೂ ಕ್ರಮವಾಗಿ ಆಶ್ರಯಿಸುತ್ತಾರೆ. ಸಕಲ ಬ್ರಹ್ಮಾದಿದೇವತೆಗಳೂ ಶ್ರೀಹರಿಯನ್ನು ಆಶ್ರಯಿಸುವರು. ಮುಕ್ತರು ರುದ್ರದೇವರನ್ನು ಮುಂದೆ ಮಾಡಿಕೊಂಡು ತಮಗಿಂತ ಉತ್ತಮ ದೇವತೆಗಳ ಕ್ರಮದಲ್ಲಿ ಅಧೀನರಾಗಿರುತ್ತಾರೆ.

ಜೀವರು ಮುಕ್ತಿಯಲ್ಲಿ ದೋಷರಹಿತರು. ಅವರು ನಿತ್ಯಸುಖವನ್ನು ಅನುಭವಿಸುವವರು. ಜನನಮರಣರೂಪ ಪ್ರವಾಹಕ್ಕೆ ಸಿಲುಕದೆ ಶ್ರೀಹರಿಯ ಇಚ್ಛಾನುವರ್ತಿಗಳಾಗಿಯೇ ಅವರು ಆನಂದಿಸುವರು.

ಕಲಿಯವರೆಗಿನ ಎಲ್ಲ ಅಸುರರು ಹೀಗೆಯೇ ಒಬ್ಬರಿಂದೊಬ್ಬರಿಗೆ ತಾರತಮ್ಯಾನುಸಾರವಾಗಿ ಹೆಚ್ಚು ಹೆಚ್ಚು ದುಃಖಗಳನ್ನು ಹೊಂದತಕ್ಕವರು. ಅವರಲ್ಲಿ ಕಲಿಯೇ ಅಧಿಕ ದುಃಖವನ್ನು ಪಡೆಯತಕ್ಕವನು. ಅಸುರರಲ್ಲಿಯೂ ಬ್ರಹ್ಮಾದಿ ದೇವತೆಗಳ ಪದವಿಯಲ್ಲಿ ವರ್ಗಗಳಿರುವಂತೆ ''ಕಲಿ''ಪದಯೋಗ್ಯವಾದ ವರ್ಗಗಳಿರುತ್ತವೆ. ಹಾಗೆಯೇ ಅಸುರರೂ ಸರ್ವದಾ ತಮತಮಗೆ ಯೋಗ್ಯವಾದ ವರ್ಗಗಳಲ್ಲಿರುತ್ತಾರೆ.

ಸರ್ವಜೀವರಿಗಿಂತಲೂ ಬ್ರಹ್ಮದೇವರೇ ಸದಾ ಎಲ್ಲಗುಣಗಳಿಂದ ಅಧಿಕರಾಗಿದ್ದಾರೆ. ಅವರು ಮುಕ್ತರಾದ ಮೇಲೂ ಸರ್ವ ಮುಕ್ತಜೀವರಿಗೆ ಸರ್ವದಾ ಪ್ರಭುಗಳಾಗಿ ಯಜಮಾನಿಕೆಯನ್ನು ನಡೆಸುವರು. ಅವರಿಗೆ ಭಗವಂತನಾದ ಶ್ರೀಮನ್ ನಾರಾಯಣನು ಸರ್ವದಾ ಆಶ್ರಯದಾತನೂ, ಸ್ವಾಮಿಯೂ ಆಗಿದ್ದಾನೆ – ಎಂದು ಋಗಾದಿ ವೇದಗಳು, ಪಂಚರಾತ್ರ, ಮೂಲರಾಮಾಯಣ, ಇತಿಹಾಸ ಮತ್ತು ಪುರಾಣಗಳು ಹಾಗೂ ಇತರ ಶಾಸ್ತ್ರಗಳ ಆಧಾರದಿಂದ ಮೇಲಿನ ವಿಷಯಗಳು ನಿರ್ಣಯಿಸಲ್ಪಟ್ಟಿವೆ.

ಹೀಗೆ ಶ್ರೀಮನ್ಮಧ್ವಾಚಾರ್ಯರವರು ''ಮಹಾಭಾರತ ತಾತ್ಪರ್ಯ ನಿರ್ಣಯ''ದ ಮೊದಲನೆಯ ಅಧ್ಯಾಯದಲ್ಲಿ ನಿರೂಪಿಸಿ-ರುವ ವಿಸ್ತಾರವಾದ ವಿಷಯಗಳನ್ನು ಶ್ರೀಮಂತ್ರಾಲಯಶ್ರೀಪಾದಂಗಳವರು ತಮ್ಮ ''ಭಾವಸಂಗ್ರಹ''ದ ''ಯೋಽಸಗ್ರೇಽಭೂದ್ವಿಷ್ಟಾಗರ್ಭಃ'' ಎಂಬ ಮೊದಲನೆಯ ಶ್ಲೋಕದಲ್ಲಿ ಸಂಗ್ರಹಿಸಿ ತತ್ವಜಿಜ್ಞಾಸುಗಳಲ್ಲಿ ಪರಮಾನುಗ್ರಹ ಮಾಡಿರುತ್ತಾರೆ. ॥ 1 ॥

***ಮಹಾಭಾರತ ತಾತ್ಪರ್ಯ ನಿರ್ಣಯದ ಮೊದಲನೆಯ ಅಧ್ಯಾಯದ ಕಥಾಸಂಗ್ರಹವು ಮುಗಿದುದು.***

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★

## ದ್ವಿತೀಯಾಧ್ಯಾಯಭಾವಸಂಗ್ರಹ

***ಅವತಾರಿಕೆ:-***

ಈಗ ಶ್ರೀಗುರುಸಾರ್ವಭೌಮರು ಮಹಾಭಾರತ ತಾತ್ಪರ್ಯ ನಿರ್ಣಯದ ದ್ವಿತೀಯಾಧ್ಯಾಯದ ಅರ್ಥವನ್ನು ''ಸದ್ಗ್ರಂಥಾನಾಂ'' ಎಂಬ ಪದ್ಯದಿಂದ ಸಂಗ್ರಹಿಸುತ್ತಾರೆ.

**ಸದ್ಗ್ರಂಥಾನಾಂ ಸಮೂಹೇ ಜಗತಿ ವಿಲುಲಿತೇ ಯೇನ ತದ್ಭಾವಮುಚ್ಚೈಃ**
**ವಕ್ತುಂ ಮಧ್ವೋ ನಿಯುಕ್ತೋ ವ್ಯಧಿತ ಸುವಚಸಾಮುದ್ಧೃತಿಂ ಭಾರತಸ್ಯ ।**
**ದೇವೋತ್ಕೃಷ್ಟಸ್ಯ ವಿಷ್ಣೋಃ ಪರಮಪುರುಷತಾಂ ತಾರತಮ್ಯಂ ಸುರಾಣಾಂ**
**ವಾಯೋರ್ಜೀವೋತ್ತಮತ್ವಾದಿಕಮಪಿ ವದತಾಂ ವ್ಯಾಸಮೀಡೇ ತಮೀಶಮ್ ॥ 2 ॥**

***ಅನ್ವಯಾರ್ಥ :-*** ಸದ್ಗ್ರಂಥಾನಾಂ = ಭಾರತಾದಿ ಸದ್ಗ್ರಂಥಗಳ, **ಸಮೂಹೇ** = ಸಮೂಹವು, **ಜಗತಿಮಿಲುಲಿತೇ** = ಅಪಪಾಠಾದಿಗಳಿಂದ ಜಗತ್ತಿನಲ್ಲಿ ವ್ಯಾಕುಲಿತವಾಗಲು, **ಯೇನ** = ಯಾವ ಭಗವಂತನಾದ ನಾರಾಯಣನಿಂದ, **ತದ್ಭಾವಂ** = ಭಾರತಾದಿ ಸದ್ಗ್ರಂಥಗಳ ಭಾವವನ್ನು, **ಉಚ್ಚೈಃ** = ಪ್ರಮಾಣಪೂರ್ವಕವಾಗಿ, **ವಕ್ತುಂ** = ಸ್ಪಷ್ಟವಾಗಿ ನಿರ್ಣಯಿಸಿ ಹೇಳಲು, **ಮಧ್ವಃ** = ಶ್ರೀಮನ್ಮಧ್ವಾಚಾರ್ಯರು, **ನಿಯುಕ್ತಃ** = ನಿಯುಕ್ತರಾಗಿ, **ದೇವೋತ್ಕೃಷ್ಟಸ್ಯ** = ದೇವತಾಸಾರ್ವಭೌಮನಾದ, **ವಿಷ್ಣೋಃ** = ಶ್ರೀಮನ್ನಾರಾಯಣನ, **ಪರಮಪುರುಷತಾಂ** = ಸರ್ವೋತ್ತಮತ್ವವನ್ನೂ, **ಸುರಾಣಾಂ** = ದೇವತೆಗಳ, **ತಾರತಮ್ಯಂ** = ತರತಮಭಾವವನ್ನೂ, **ವಾಯೋಃ** = ಶ್ರೀವಾಯುದೇವರ, **ಜೀವೋತ್ತಮತ್ವಾದಿಕಮಪಿ** = ಜೀವೋತ್ತಮತ್ವ, ಅತಿರೋಹಿತ ವಿಜ್ಞಾನತ್ವಾದಿಗಳನ್ನು ಸಹ, **ವದತಾಂ** = ಹೇಳುವ, **ಸುವಚಸಾಂ** = ಸಮಸ್ತ ಶಾಸ್ತ್ರವಾಕ್ಯಗಳ, **ಉದ್ಧೃತಿಂ** = ಉದ್ಧಾರವನ್ನು, **ವ್ಯಧಿತ** = ಮಾಡಿದರೋ, **ತಂ** = ಅಂಥಾ ಮಹಾಭಾರತ ಗ್ರಂಥವನ್ನು ರಚಿಸಿದ, **ಈಶಂ** = ಸಕಲರಿಗೂ ಪ್ರಭುಗಳಾದ, **ವ್ಯಾಸಂ** = ಶ್ರೀವೇದವ್ಯಾಸದೇವರನ್ನು, **ಈಡೇ** = ಸ್ತೋತ್ರಮಾಡುತ್ತೇನೆ.

***ತಾತ್ಪರ್ಯ :-*** ಮಹಾಭಾರತಾದಿ ಸದ್ಗ್ರಂಥಗಳು ಅಪಪಾಠಾದಿಗಳಿಂದ ಜಗತ್ತಿನಲ್ಲಿ ವ್ಯಾಕುಲಿತವಾಗಲು ಸಾಕ್ಷಾತ್ ನಾರಾಯಣದೇವರಿಂದ ಆ ಮಹಾಭಾರತಾದಿ ಗ್ರಂಥಗಳ ಭಾವವನ್ನು ಪ್ರಮಾಣಪೂರ್ವಕವಾಗಿ, ಸ್ಪಷ್ಟವಾಗಿ ನಿರ್ಣಯ-ಮಾಡಿ ನಿರೂಪಿಸಲು ಶ್ರೀಮನ್ಮಧ್ವಾಚಾರ್ಯರು ನಿಯುಕ್ತರಾದರು. ಅವರು ಶ್ರೀವೇದವ್ಯಾಸದೇವರ ಅನುಗ್ರಹದಿಂದ ದೇವತಾಸಾರ್ವಭೌಮನಾದ ಶ್ರೀವಿಷ್ಣುವಿನ ಸರ್ವೋತ್ತಮತ್ವ, ದೇವತೆಗಳ ತಾರತಮ್ಯ ಪ್ರಕಾರ, ಶ್ರೀವಾಯುದೇವರ ಜೀವೋತ್ತಮತ್ವ, ಅತಿರೋಹಿತ ವಿಜ್ಞಾನತ್ವಾದಿ ವಿಚಾರಗಳನ್ನು ಸಹ ನಿರೂಪಿಸುವ ಸಕಲ ಶಾಸ್ತ್ರಗಳ ವಾಕ್ಯೋದ್ಧಾರ-ಪೂರ್ವಕವಾಗಿ ''ಮಹಾಭಾರತ ತಾತ್ಪರ್ಯ ನಿರ್ಣಯ''ವೆಂಬ ಗ್ರಂಥವನ್ನು ರಚಿಸಿದರು. ಅಂಥ ಮಹಾಭಾರತ ಗ್ರಂಥವನ್ನು ರಚಿಸಿದ, ಸಕಲರಿಗೂ ಪ್ರಭುಗಳಾದ ಶ್ರೀವೇದವ್ಯಾಸದೇವರನ್ನು ಸ್ತುತಿಸುತ್ತೇನೆ ಎಂಬ ಭಾವ.

## ದ್ವಿತೀಯಾಧ್ಯಾಯ ಕಥಾಸಂಗ್ರಹ

ವೃಂದಾರಕವೃಂದವಂದನೀಯಪಾದಾರವಿಂದನಾದ ಅರವಿಂದಾಸನೆಯಾದ ಶ್ರೀರಮೆಯರಮಣನಾದ ಶ್ರೀಹರಿಯು ಅಚಿಂತ್ಯ, ಸುಜನರಿಗೆ ಪರಮಗುರು ಮತ್ತು ಮನೋಭೀಷ್ಟದಾತಾರನು. ಅವನು ಸಕಲ ಮಂಗಳಕರಗುಣಗಳಿಗೆ ಅಂಬುಧಿಯಂತಿರುವನು. ನಿಖಿಲದೋಷದೂರನವನು. ಇಂತಹ ಪುಂಡರೀಕಾಕ್ಷನಾದ ಕಮಲಾಕಾಂತನು ನನಗೆ ಪ್ರಮಾಣ

ಜ್ಞಾನವನ್ನು ಕರುಣಿಸಲಿ ಎಂದು ಮಂಗಳಾಚರಣ ಮಾಡಿ ಪ್ರಥಮಾಧ್ಯಾಯದಲ್ಲಿ ಶ್ರೀಹರಿಯೇ ಅನುಗ್ರಹದಿಂದ ಉಪದೇಶಿಸಿದ ಸರ್ವೋತ್ತಮವಾದ ಸಕಲಶಾಸ್ತ್ರಗಳ ನಿರ್ಣಯವನ್ನು ಮಾಡಿದ ಶ್ರೀಮಧ್ವಾಚಾರ್ಯರು ಈಗ ದ್ವಿತೀಯಾ-ಧ್ಯಾಯದಲ್ಲಿ ಮಹಾಭಾಗವತ ವಚನಗಳ ಆಧಾರದಿಂದ, ಈ ಎಲ್ಲ ಶಾಸ್ತ್ರವಾಕ್ಯಗಳ ನಿರ್ಣಯ ಮಾಡುತ್ತಾ ಹೀಗೆ ಹೇಳುತ್ತಾರೆ:-

ಕಲಿಯುಗದಲ್ಲಿ ಜನರ ಬುದ್ಧಿಯು ವ್ಯಾಕುಲವಾಗಿದೆ. ಆಲಸ್ಯ ಸ್ವಭಾವದವರಾಗಿರುವುದರಿಂದ ಅವರು ಶತಕೋಟಿ ರಾಮಾಯಣ. ಮೂಲ ರಾಮಾಯಣ, ಪಂಚರಾತ್ರಾದಿ ಗ್ರಂಥಗಳ ಅರ್ಥವರಿಯಲಾಗದೆ ಕೆಲಭಾಗಗಳನ್ನು ವ್ಯತ್ಯಾಸ-ಗೊಳಿಸಿದ್ದಾರೆ. ಇನ್ನು ಕೆಲವರು ಪಂಡಿತರಾದರೂ ಕುಹಕಬುದ್ಧಿಯಿಂದಲೋ ಮಾತ್ಸರ್ಯಾದಿ ದೋಷದಿಂದಲೋ ಮಹಾಭಾರತಾದಿ ಗ್ರಂಥಗಳಲ್ಲಿ ಬೇರೆ ವಾಕ್ಯಗಳನ್ನು ಸೇರಿಸಿ, ಇದ್ದ ವಾಕ್ಯಗಳನ್ನು ಕೆಲವೆಡೆಗಳಲ್ಲಿ ತೆಗೆದು ಹಾಕಿದ್ದಾರೆ. ಮತ್ತೆ ಕೆಲಸ್ಥಳಗಳಲ್ಲಿ ತಂತಮ್ಮ ಮತಗಳಿಗನುಕೂಲವಾಗುವಂತೆ ತಿದ್ದಿ, ತಮಗೆ ಪ್ರತಿಕೂಲವಾದುದನ್ನು ಕಿತ್ತಿ ಹಾಕಿದ್ದಾರೆ. ಇನ್ನೂ ಕೆಲವೆಡೆ ಸಂಬಂಧಪಡದ ಸ್ವಂತ ಶ್ಲೋಕಗಳನ್ನು ಸೇರಿಸಿ ವ್ಯತ್ಯಾಸ ಮಾಡಿದ್ದಾರೆ. ಸಹೃದಯರಾದರೂ ಕೆಲವರು ಗ್ರಂಥವನ್ನು ಪುನರ್ಲಿಪಿ ಮಾಡುವಾಗ ಮರೆವಿನಿಂದ ಮೂಲ ಶ್ಲೋಕಗಳನ್ನು ಕೈಬಿಟ್ಟಿದ್ದಾರೆ, ಹೀಗಾಗಿ ಮೂಲಗ್ರಂಥಗಳು ವ್ಯತ್ಯಾಸವಾಗಿ ಅವುಗಳ ನೈಜಾಭಿಪ್ರಾಯಗಳು ತಿಳಿಯದಂತಾಗಿವೆ. ಇಂತು ಬಹುಜನರ ಕೈವಾಡಕ್ಕೆ ಒಳಗಾದ ಮಹಾಭಾರತವು ವ್ಯತ್ಯಸ್ತ-ವಾಗಿದೆ. ಅವುಗಳಲ್ಲಿ ಒಂದು ಕೋಟಿಯ ಒಂದಂಶವೂ ಸ್ಪಷ್ಟಾರ್ಥಪ್ರತಿಪಾದನೆ ಮಾಡಲು ಅಸಮರ್ಥವಾಗಿದೆ! ಹೀಗೆ ಕಲಬೆರಕೆಯಾಗಿ ವ್ಯತ್ಯಾಸವಾಗಿರುವುದರಿಂದ ನಿಜವಾದ ಅರ್ಥವನ್ನು ದೇವತೆಗಳೂ ಅರಿಯದಂತಾಗಿದೆ. ಕಲಿಯುಗದಲ್ಲಿ ಇದರ ಸ್ಥಿತಿಯಿಂತಾದುದರಿಂದ ಶ್ರೀಹರಿಯು ಸಮಂಜಸವಾಗಿ ಇದರ ನಿರ್ಣಯ ಮಾಡಿ ನಿರೂಪಿಸಲು ನನಗೆ ಆಜ್ಞೆ ಮಾಡಿದನು. ಅವನ ಅನುಗ್ರಹದಿಂದ ವೇದ, ಪಂಚರಾತ್ರಾದಿ ಇತರ ಶಾಸ್ತ್ರಗಳ ರಹಸ್ಯವನ್ನರಿತು ಮಹಾಭಾರತದ ನಿರ್ಣಯವನ್ನು ಹೇಳುವೆನು.

ನಾನಾ ದೇಶಗಳಲ್ಲಿ ಸಂಚರಿಸಿ ಅಲ್ಲಲ್ಲಿ ದೊರಕಿದ ಕೆಲ ಗ್ರಂಥಗಳನ್ನು ಸಂಗ್ರಹಿಸಿ ಅವುಗಳನ್ನು ಚೆನ್ನಾಗಿ ಅವಲೋಕಿಸಿದ್ದೇನೆ. ಶ್ರೀವೇದವ್ಯಾಸರನ್ನು ಸಂದರ್ಶಿಸಿದ್ದೇನೆ. ಅವರ ಅಪ್ಪಣೆಯಂತೆ ಮಹಾಭಾರತದ ಗೂಢಾರ್ಥಗಳನ್ನಿಲ್ಲಿ ಹೇಳುವೆನು. ಮತ್ತು ಭಾರತಾರ್ಥವನ್ನನುಸರಿಸಿ ಸಕಲ ಶಾಸ್ತ್ರಾರ್ಥಗಳನ್ನೂ ಸಂಕ್ಷೇಪವಾಗಿ ಹೇಳುವೆನು. ಸರ್ವಶಾಸ್ತ್ರಗಳಿಗೂ ಭಾರತದಲ್ಲಿ ನಿರ್ಣಯ ದೊರಕುವುದು. ಪೂರ್ವದಲ್ಲಿ ದೇವತೆಗಳು ಶ್ರೀವೇದವ್ಯಾಸರ ಅಣತಿಯಂತೆ ಭಾರತ-ಸರ್ವಶಾಸ್ತ್ರಗಳನ್ನು ತೂಗಿದಾಗ ಭಾರತವೇ ಹೆಚ್ಚು ತೂಗಿದ್ದರಿಂದ ದೇವತೆಗಳು ಅದರ ಮಹತ್ವವನ್ನರಿತರು. ಮಹತ್ತರವಾದ ಅರ್ಥಬೋಧಕ ಹಾಗೂ ವಿವಿಧ ಶ್ರೇಷ್ಠ ಶಾಸ್ತ್ರಾರ್ಥ ಸಮರ್ಥಕವಾದ್ದರಿಂದ ಅದರ ಮಹಾಭಾರತವೆಂಬ ಹೆಸರು ಅನ್ವರ್ಥಕವಾಗಿದೆ. ಇಲ್ಲಿ ಬ್ರಹ್ಮಾದಿ ಸುರರು ಹರಿಗೆ ಅಧೀನರೆಂಬುದನ್ನು ಪ್ರಕಾಶಗೊಳಿಸಲಾಗಿದೆ. ಕೃಷ್ಣನಿಗೆ ಅಧೀನರಾದ ಪಾಂಡವರು ಅವನ ಪ್ರೇರಣೆಯಂತೆ ತಮ್ಮೆಲ್ಲ ಕಾರ್ಯಗಳನ್ನು ಮಾಡುತ್ತಿದ್ದರು. ಇಂತು ಸಕಲರಿಗೂ ಜ್ಞಾನ, ಕೀರ್ತಿಗಳನ್ನು ನೀಡುವ ಪ್ರಭು ಶ್ರೀವಿಷ್ಣುವೆಂಬುದು ವಿಖ್ಯಾತವಾಗಿದೆ. ಶ್ರೀ ನಾರಾಯಣಾವತಾರಿ ವೇದವ್ಯಾಸರು ಬ್ರಹ್ಮರುದ್ರಾದಿಗಳಿಗೆ, ಭೀಮ-ಶುಕಾದಿ ಮುನಿಗಳಿಗೆ ಅವತರಿಸಲಾಜ್ಞಾಪಿಸಿ ಪುನಃ ಭಾರತದಲ್ಲಿ ಅವರಿಗೆ ಕೀರ್ತಿಪ್ರದ ವಿಷಯಗಳನ್ನು ನಿರೂಪಿಸಿ, ಶುಕಾದಿ ಮುನಿಗಳಿಗೆ ಜ್ಞಾನೋಪದೇಶ ಮಾಡಿದರು.

ಬ್ರಹ್ಮದೇವರು ಶೇಷರುದ್ರಾದಿಗಳಿಗಿಂತ ಶ್ರೇಷ್ಠರು. ವಿಷ್ಣುವಿಗೆ ಎಲ್ಲರಕ್ಕಿಂತ ಪ್ರೀತ್ಯಾಸ್ಪದರವರು ಎಂಬುದು ಭೀಮಸೇನ-ದೇವರ ದೃಷ್ಟಾಂತದಿಂದ ಸ್ಪಷ್ಟವಾಗಿ ವ್ಯಕ್ತವಾಗಿದೆ. ಜರಾಸಂಧ-ದುರ್ಯೋಧನಾದಿಗಳನ್ನು ಸಂಹರಿಸಿದ ಭೀಮಸೇನನು ಭೂಭಾರಹರಣಕ್ಕಾಗಿ ಅವತರಿಸಿದ ಶ್ರೀಹರಿಗೆ ಪ್ರಧಾನಾಂಗವಾಗಿದ್ದಾನೆ. ವಿಷ್ಣು ಭಕ್ತಿಯಲ್ಲಿ ಶ್ರೇಷ್ಠರೂ (ಕ್ಷತ್ರಿಯರಲ್ಲಿ) ಅತಿ ಬಲವಂತರಾದವರೇ ಶ್ರೀಹರಿಯ ಪ್ರಧಾನಾಂಗಪಾತ್ರ ವಹಿಸುವರೇ ವಿನಃ ಮತ್ತೊಬ್ಬರಲ್ಲ. ಭೀಮಸೇನ ಸಕಲ ಕ್ಷತ್ರಿಯರಲ್ಲಿ

ಉತ್ತಮನೂ, ವಿಷ್ಣುಭಕ್ತಿ-ಬಲಗಳಲ್ಲಿ ಗರಿಷ್ಠನೆಂಬುದು ಅವನ ಕೃತಿಯಿಂದ ಸ್ಪಷ್ಟವಾಗಿದೆ. ಸ್ವಾಭಾವಿಕ ಬಲವಂತರೇ ಶ್ರೇಷ್ಠರು. ರುದ್ರಾದಿ ಇತರ ದೇವತೆಗಳ ವರ, ಅಸ್ತ್ರಗಳ ಪ್ರಭಾವದಿಂದ ಬಲಪ್ರದರ್ಶನ ಮಾಡಿದವರಲ್ಲಿ ಅದು ಕಾಲಕ್ರಮದಲ್ಲಿ ತಗ್ಗಿರುವುದು ಕಂಡಿದೆ. ನರಾವೇಶನಿಮಿತ್ತವಾಗಿ ಅರ್ಜುನ, ಅನ್ಯಾವೇಶಕಾರಣವಾಗಿ ಇತರರಲ್ಲಿ ಕಂಡ ಬಲ ತನ್ನಿಮಿತ್ತವೇ ಹೊರತು ಸ್ವಾಭಾವಿಕವಲ್ಲ. ಭೀಮಸೇನನದು ಸ್ವಾಭಾವಿಕ ಬಲವಾದ್ದರಿಂದ ಅದು ಶಾಶ್ವತವಾದುದು. ಭೂಮಿಯಲ್ಲಿ ಕ್ಷತ್ರಿಯರಾಗಿ ಹುಟ್ಟಿದ ದೇವತೆಗಳನ್ನು ಬಿಟ್ಟು ಇತರರಲ್ಲಿ ಬಲ ಜ್ಞಾನಭಕ್ತಿಗಳ ಆಧಿಕ್ಯವಿರುವುದಿಲ್ಲ. ತ್ರೇತೆಯಲ್ಲಿ ರಾಮಸೇವಕರಾಗಿ, ದ್ವಾಪರದಲ್ಲಿ ಕೃಷ್ಣಭಕ್ತರಾಗಿ ಅವತರಿಸಿದ ವಾಯುದೇವರು ಅಧಿಕ ಬಲಜ್ಞಾನ ವಿಷ್ಣುಭಕ್ತಿ ಪೂರ್ಣ-ರಾಗಿದ್ದುದು ಇದಕ್ಕೆ ದೃಷ್ಟಾಂತ. ಇಂಥ ಶ್ರೇಷ್ಠದೇವತೆಯೇ ಶ್ರೀಹರಿಗೆ ಪ್ರಿಯನಾಗುತ್ತಾನೆ. ಅನ್ಯರಿಗದೆಂದೂ ಸಾಧ್ಯವಾಗದು. ಯಾರು ಯಾರು ಬಲದಲ್ಲಿ ಅಧಿಕರೋ ಅವರೇ ಗುಣಾಧಿಕರೆಂದರಿಯಬೇಕು. ಸ್ಥೂಲದೃಷ್ಟಿಯವರಿಗೆ ಕ್ಷತ್ರಿಯರಲ್ಲಿ ಬಲಾಧಿಕ್ಯವಿರುವುದು ಕಾಣುವುದು. ಸೂಕ್ಷ್ಮ ದೃಷ್ಟಿಯುಳ್ಳವರಿಗೆ ಬಲಶಾಲಿಗಳಾದ ಕ್ಷತ್ರಿಯರಲ್ಲಿ ಜ್ಞಾನಾದಿಗುಣಗಳಿರುವುದು ಗೋಚರಿಸುವುದು. ಆದ್ದರಿಂದ ಬಲವಂತನಾದ ಕ್ಷತ್ರಿಯನಲ್ಲಿ ಜ್ಞಾನಾದಿ ಗುಣಗಳಿವೆಯೆಂದರಿಯಬೇಕು. ಕ್ಷತ್ರಿಯರಾಗಿ ಜನಿಸಿದ ದೇವತೆಗಳಲ್ಲಿ ಮಾತ್ರ ಬಲಜ್ಞಾನಾದಿಗುಣಗಳಿವೆಯೆಂಬ ನಿಯಮವಿಲ್ಲ. ದೇವತೆಗಳಲ್ಲದ ದುರ್ಯೋಧನಾದಿಗಳು ಹೆಚ್ಚು ಬಲವಂತರಾಗಿದ್ದುದು ಕಂಡುಬಂದರೂ ಕೃಷ್ಣ ವಿರೋಧಿಗಳಾದ ಅವರಲ್ಲಿ ಜ್ಞಾನಾದಿಗುಣಗಳು ಕಾಣಸಿಗುವುದಿಲ್ಲ. ದೇವತೆಗಳು ಬ್ರಾಹ್ಮಣಾದಿಗಳಾಗಿ ಜನಿಸಿದಾಗಲೂ ಅವರಲ್ಲಿ ಬಲಜ್ಞಾನಾದಿ ಗುಣಗಳಿರುವವು. ದ್ರೋಣ, ಕೃಪ, ಅಶ್ವತ್ಥಾಮಾದಿಗಳು ಇದಕ್ಕೆ ದೃಷ್ಟಾಂತರಾಗಿದ್ದಾರೆ. ಕೇಶವನೆಂದು ಪ್ರಖ್ಯಾತನಾದ ಶ್ರೀಕೃಷ್ಣನು ಇದಕ್ಕೆ ಪ್ರಮಾಣವಾಗಿರುವನು. ಲೋಕಕಂಟಕರಾದ ದುಷ್ಟರನ್ನು ಸದೆಬಡಿಯುವಾಗಲೂ, ಜ್ಞಾನಕಾರ್ಯ ಮಾಡುವಾಗಲೂ ಶ್ರೀಹರಿಯು ಸರ್ವರಲ್ಲಿ ನಿಯಾಮಕನಾಗಿದ್ದು ಆ ಕಾರ್ಯ ನಡೆಸಿರುವುದು ಕಂಡು ಬಂದಿದೆ. ಜ್ಞಾನ-ಬಲಗಳು ಎಲ್ಲ ಕ್ಷತ್ರಿಯರಲ್ಲೂ ಇರದಿರುವಂತೆ ಎಲ್ಲ ಬ್ರಾಹ್ಮಣರಲ್ಲೂ ಇಲ್ಲದಿರಬಹುದು. ದ್ರೋಣ-ಕೃಪ-ಅಶ್ವತ್ಥಾಮಾದಿಗಳನ್ನುಳಿದು ಮಿಕ್ಕ ಬ್ರಾಹ್ಮಣರಲ್ಲಿ ಕೇವಲ ಜ್ಞಾನ ಮಾತ್ರವಿರುವುದು ಪ್ರಮಾಣವಾಗಿದೆ. ಶ್ರೀಹರಿಯ ಬಲಕಾರ್ಯದಲ್ಲಿ ಸೇವೆ ಸಲ್ಲಿಸಲು ದೇವತೆಗಳು ಕ್ಷತ್ರಿಯರಾಗಿ, ಅವತರಿಸಿದಾಗ ಅವರ ಬಲಜ್ಞಾನಾದಿಗುಣಗಳಧಿಕವಾಗಿದ್ದುದು, ಈ ಪ್ರಮಾಣದಿಂದ ವ್ಯಕ್ತವಾಗುವುದು. ಬಲಕಾರ್ಯ-ಕ್ಕಾಗಿಯೇ ಹರಿಯು ರಾಮಕೃಷ್ಣಾದಿರೂಪಗಳಿಂದ ಅವತರಿಸಿದ್ದಾನೆ.

ಶ್ರೀಹರಿಯು ದತ್ತ, ವ್ಯಾಸ ಮೊದಲಾದ ರೂಪಗಳಿಂದ ಜ್ಞಾನಕಾರ್ಯ ಮಾಡಿದನು. ಬ್ರಹ್ಮಾದಿಗಳಿಂದಲೂ ಮಾಡಲಾಗದ ರೀತಿಯಲ್ಲಿ ಜ್ಞಾನ-ಬಲ ಕಾರ್ಯಗಳನ್ನು ಮಾಡಿದ್ದರಿಂದ ಅವುಗಳನ್ನು ಭಗವದವತಾರರೂಪಗಳೆಂದು ತಿಳಿಯಬೇಕು. ಆದ ಕಾರಣ ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕೃಷ್ಣದ್ವೈಪಾಯನ, ಕಪಿಲ, ದತ್ತ, ಋಷಭ, ಶಿಂಶುಮಾರ, ಯಜ್ಞ, ನಾರಾಯಣ, ಹರಿ, ವೇದವ್ಯಾಸ, ಮನು, ಮಹಿದಾಸ, ಹಂಸ, ಮೋಹಿನೀ, ಹಯಗ್ರೀವ, ವಡವಾಗ್ನಿ ಮುಖದರೂಪ, ಕಲ್ಕಿ, ಧನ್ವಂತರಿ ಮೊದಲಾದ ಈ ಎಲ್ಲಾ ರೂಪಗಳೂ ವಿಷ್ಣುವಿನ ಪೂರ್ಣಾವತಾರರೂಪಗಳೆಂದು ತಿಳಿಯಬೇಕು.

ಶ್ರೀರಮಾದೇವಿ, ಬ್ರಹ್ಮದೇವರು, ರುದ್ರದೇವರು, ಶೇಷ, ಗರುಡ, ಇಂದ್ರ, ಕಾಮ, ಬೃಹಸ್ಪತಿ, ಯಮ, ಮತ್ತು ಕ್ರಮವಾಗಿ ಅವರವರ ಪತ್ನಿಯರು, ದಕ್ಷಾದಿಪ್ರಜೇಶ್ವರರು, ಸ್ವಾಯಂಭುವಾದಿ ಮನುಗಳು, ಅವರ ಪುತ್ರರು, ಋಷಿಗಳು, ನಾರದ, ಪರ್ವತ, ಕಶ್ಯಪ, ಸನಕಾದಿಗಳು, ಅಗ್ನ್ಯಾದಿದೇವತೆಗಳು, ಭರತ, ಕಾರ್ತವೀರ್ಯ, ಪೃಥು ಮೊದಲಾದ ಚಕ್ರವರ್ತಿಗಳು, ಗಯ, ಲಕ್ಷ್ಮಣ, ಭರತ, ಶತ್ರುಘ್ನರೆಂಬ ರೋಹಿಣಿಯ ಮೂವರು ಪುತ್ರರು, ರುಕ್ಮಿಣೀದೇವಿಯ ಪುತ್ರ ಪ್ರದ್ಯುಮ್ನ, ಅವನ ಮಗ ಅನಿರುದ್ಧ ನರನಾದ ಅರ್ಜುನ- ಇವರುಗಳು ಶ್ರೀಹರಿಯ ವಿಶೇಷಾವೇಶಯುಕ್ತರೆಂದೂ ಮೇಲಿನ

ಕ್ರಮದಲ್ಲಿ ತಾರತಮ್ಯವನ್ನು ತಿಳಿಯಬೇಕು. ಬಲಿ, ಸಾಂಬಾದಿಗಳು ಹರಿಯ ಸ್ವಲ್ಪಾವೇಶಯುಕ್ತರು. ಆದ್ದರಿಂದ ಬಲ-ಕಾರ್ಯಪ್ರವೃತ್ತನಾದ ರಾಮಕೃಷ್ಣಾದ್ಯವತಾರನಾದ ಶ್ರೀಹರಿಗೆ ಹನುಮಂತ ಮತ್ತು ಭೀಮಸೇನರು ಅಂತರಂಗ ಪ್ರೀತಿಗೆ ಪಾತ್ರರಾಗಿ ಅವನ ಬಲಕಾರ್ಯಕ್ಕೆ ಸಹಾಯಕರಾಗಿ ಸೇವೆ ಸಲ್ಲಿಸುವರು. ವಾಯುದೇವರೇ ಬ್ರಹ್ಮದೇವರಾದ್ದರಿಂದ ಅವರು ಪೂರ್ವದಲ್ಲಿ ಬ್ರಹ್ಮಪದವಿ ಪಡೆದರು. ವಾಯುದೇವರಲ್ಲದವರಿಗೆ ಬ್ರಹ್ಮಪದವಿಯಿಲ್ಲ. ಆದ್ದರಿಂದ ವಾಯುದೇವರೇ ಬ್ರಹ್ಮ-ದೇವರಾಗಿರುವರು.

ರೂಪವಿರುವಲ್ಲಿ ಗುಣವಿದೆ ಎಂಬ ನ್ಯಾಯದಿಂದ ಭಕ್ತಿ ಮೊದಲಾದ ಗುಣಗಳು ಭೀಮಸೇನ ಮೊದಲಾದ ದೇವತೆಗಳ ಪತ್ನಿಯರಲ್ಲಿಯೂ ಸ್ಥಿರವಾಗಿವೆ. ಮೇಲೆ ನೋಡಲು ರೂಪಾದಿಗಳು ಸ್ಪಷ್ಟವಾಗುವಂತೆ ಸ್ತ್ರೀಯರಲ್ಲಿ ಸ್ಥಿರವಾಗಿರುವ ಭಕ್ತ್ಯಾದಿಗುಣಗಳೂ ಪ್ರಾಯಃ ಕಂಡುಬರುವುದರಿಂದ ದ್ವಾತ್ರಿಂಶಲ್ಲಕ್ಷಣಯುಕ್ತ ನೈಸರ್ಗಿಕರೂಪವುಳ್ಳ ಸ್ತ್ರೀಯರಿಗೆ ಭಕ್ತ್ಯಾದಿ ಗುಣಗಳಿರುವುದು ನಿಶ್ಚಯ. ಗುಣವಿದೆಯೆನ್ನಲು ದೇಹಸೌಂದರ್ಯವೇ ಲಕ್ಷಣವಲ್ಲ. ಅಸುರ ಸ್ತ್ರೀಯರಿಗೆ ದೇವತಾವರಗಳಿಂದ ರೂಪವಿರುತ್ತದೆ. ಆದರೆ ಅವರಲ್ಲಿ ಭಕ್ತಿ ಕಂಡು ಬರುವುದಿಲ್ಲ. ಅಸುರ ಸ್ತ್ರೀಯರಿಗೆ ಸ್ವಾಭಾವಿಕರೂಪವಿಲ್ಲದರಿಂದ ಭಕ್ತಿಯು ಅವರಲ್ಲಿರಲು ಸಾಧ್ಯವಿಲ್ಲ. ಆದ್ದರಿಂದ ಲಕ್ಷ್ಮೀದೇವಿಯ ಅವತಾರರೂಪರಾದ ಸೀತಾ, ರುಕ್ಮಿಣಿ, ಸತ್ಯಭಾಮಾ ಮುಂತಾದವರು ಪರಮ ಶ್ರೇಷ್ಠವಾದ ರೂಪ ಗುಣಗಳಿಂದ ಶೋಭಿಸುವರು. ಶ್ರೀಲಕುಮಿಯು ಎಲ್ಲರಿಗಿಂತ ರೂಪಗುಣಾದಿಗಳಲ್ಲಿ ಶ್ರೇಷ್ಠಳು. ಅವಳ ತರುವಾಯ ಭಾರತೀ(ದ್ರೌಪದೀ)ದೇವಿಯು ಎಲ್ಲ ಸ್ತ್ರೀಯರಿಗಿಂತ ಶ್ರೇಷ್ಠರೂಪಗುಣಗಳಿಂದ ಅಧಿಕಳಾಗಿದ್ದಾಳೆ. ದ್ರೌಪದಿಯು ಭೀಮಸೇನ ದೇವರಂತೆ ಶ್ರೀಹರಿಯ ಭೂಭಾರಹರಣಕಾರ್ಯದಲ್ಲಿ ಸಾಕ್ಷಾತ್ತಾಗಿ ಅಂಗಭೂತಳಾಗಿದ್ದಾಳೆ. ಭೀಮನು ಬಾಲ್ಯದಲ್ಲಿ ದುರ್ಯೋಧನಾದಿಗಳನ್ನು ಆಟದಲ್ಲಿ ಮರಗಳ ಮೇಲಿಂದ ಕೆಡವಿದನು. ಅವರು ತರಗೆಲೆಗಳಂತೆ ಕೆಳಬಿದ್ದರು. ಭೀಮನ ಮೇಲೆ ಸೇಡು ತೀರಿಸಿಕೊಳ್ಳಲು ಪ್ರತಿಜ್ಞೆ ಮಾಡಿ ದ್ವೇಷಿಗಳಾದರು. ಅವರು ದ್ರೌಪದಿಯ ಸಿರಿಮುಡಿಯನ್ನು ಹಿಡಿದೆಳೆದು ಸಭೆಯಲ್ಲಿ ಅಪಮಾನ ಮಾಡಿದ್ದರಿಂದ ಭೀಮ-ದ್ರೌಪದಿಯರು ಕೌರವರಿಗೆ ಶತ್ರುಗಳಾದರು. ಹೀಗೆ ಹಗೆತನಕ್ಕೆ ಕಾರಣಳಾದ ದ್ರೌಪದಿಯು ಭೀಮನ ನಂತರ ಶ್ರೀಹರಿಯ ಬಲಕಾರ್ಯಕ್ಕೆ ಸಹಾಯಕಳಾಗಿದ್ದಾಳೆ. ಅವಳ ತರುವಾಯ ಬಲರಾಮ ಮತ್ತು ಅರ್ಜುನರು. ಬಲರಾಮನಂತರ ನರಾವೇಶನಾದ್ದರಿಂದ ಅರ್ಜುನ ಸಹಾಯಕ. ಇಲ್ಲದಿದ್ದರೆ ರುದ್ರಾಂಶನಾದ ಅಶ್ವತ್ಥಾಮ ಸಹಾಯಕನಾಗಬೇಕಾಗಿತ್ತು. ತರುವಾಯ ಅಶ್ವತ್ಥಾಮನ ನಂತರ ಇತರರು. ಬಲರಾಮನಂತೆ ಜಾಂಬವತೀ ಮೊದಲಾದ ಆರುಜನ ಸ್ತ್ರೀಯರಾದ ಮೇಲೆ ರೇವತಿ - ಈ ತಾರತಮ್ಯ ತಿಳಿಯಬೇಕು. ಹನುಮಂತ, ತರುವಾಯ ಲಕ್ಷ್ಮಣ, ಭರತ, ವಾಲಿ, ಶತ್ರುಘ್ನ, ಸುಗ್ರೀವಾದಿ ಕ್ರಮದಲ್ಲಿ ತಾರತಮ್ಯವು ರಾಮಾಯಣ ಕಥಾವಿವೇಚನೆಯಿಂದ ತಿಳಿಯುತ್ತದೆ. ರಾಮಾವತಾರದಲ್ಲಿ ಶ್ರೀಹರಿ ಪರಮಾತ್ಮನ ಸೇವೆಯನ್ನು ಸಂಪೂರ್ಣವಾಗಿ ಮಾಡಲಾಗದ ಅವರು, ಶ್ರೀಕೃಷ್ಣಾವತಾರದಲ್ಲಿ ಸೇವೆಗಾಗಿ ಜನಿಸಿದರು. ವಾಲಿ-ಸುಗ್ರೀವಾದಿಗಳು ಇದಕ್ಕೆ ಉದಾಹರಣೆಯಾಗಿದ್ದಾರೆ. ಇದರಂತೆ ಬೀಭತ್ಸಾದಿಗಳು. ರಾಮಾವತಾರವಲ್ಲಿ ಅಧಿಕಸೇವೆ ಸಲ್ಲಿಸಿದವರು ಕೃಷ್ಣಾವತಾರದಲ್ಲಿ ಸ್ವಲ್ಪ ಸೇವೆ ಮಾಡಿದ್ದಾರೆ. ಲಕ್ಷ್ಮಣ, ಅಂಗದಾದಿಗಳು ಕೃಷ್ಣಾವತಾರದಲ್ಲಿ ಬಲರಾಮ ಅಭಿಮನ್ಯುಗಳಾಗಿ ಅಲ್ಪ ಸೇವೆ ಮಾಡಿದ್ದು ಇದಕ್ಕೆ ಉದಾಹರಣೆಯಾಗಿದೆ. ತ್ರೇತೆಯ ಸುಗ್ರೀವ ದ್ವಾಪರದಲ್ಲಿ ಕರ್ಣನಾಗಿ ಪರಶುರಾಮರೂಪಿ ಶ್ರೀಹರಿಗೆ ಹೆಚ್ಚು ಸೇವೆ ಸಲ್ಲಿಸಿದನು. ಯೋಗ್ಯತೆ ಮೀರಿ ಮಾಡಿದ ಸೇವೆಯನ್ನು ಹರಿ ಸಮ ಮಾಡಿಬಿಡುವನು. ರಾಮಾಯಣದ ಅಶ್ವಿನಿ ದೇವತೆಗಳು ವಿವಿದ ಮೈಂದರಾಗಿ ಯೋಗ್ಯತೆ ಮೀರಿ ಸೇವೆ ಮಾಡಿದರು, ಮತ್ತವರು ಕೃಷ್ಣಾವತಾರದಲ್ಲಿ ನಕುಲಸಹದೇವರಾಗಿ ಕೃಷ್ಣನ ಸೇವೆ ಮಾಡಿದರೂ, ವಿವಿದನು ನರಕಾಸುರನಿಗೆ ಸಹಾಯಕನಾಗಿ ಲವಣ ಸಮುದ್ರದ ಜಲವನ್ನು ಬೊಗಸೆಯಲ್ಲಿ ತಂದು ಕೃಷ್ಣನ ಗ್ರಾಮಗಳ ಮೇಲೆಸೆದು ಮುಳುಗಿಸಿದನು. ಕರ್ಣನು ದುರ್ಯೋಧನನ ಪಕ್ಷ ಸೇರಿ ಕೃಷ್ಣನ ಮಾತು ಮೀರಿ ದ್ರೌಪದಿಯ ಅಪಮಾನಕ್ಕೆ ಒಪ್ಪಿ ಪಾಂಡವದ್ವೇಷ ಮಾಡಿದನು. ಇದರಿಂದ ಅವರುಗಳ ಫಲ ಕಡಿಮೆ ಎಂಬುದನ್ನಿಲ್ಲಿ ನಿರ್ಣಯಿಸಲಾಗಿದೆ.

ಶ್ರೀಹರಿ ದುಷ್ಟರನ್ನು ದಂಡಿಸಿ ತನ್ನ ಸರ್ವೋತ್ತಮತ್ವವನ್ನು ರಾಮಕೃಷ್ಣಾದ್ಯವತಾರದಲ್ಲಿ ಸ್ಥಾಪಿಸಿರುವನು. ದ್ವಾಪರದಲ್ಲಿ ಕೃಷ್ಣನಾಗಿ, ವೇದವ್ಯಾಸರಾಗಿ ಭಗವತ್ತತ್ವಗಳನ್ನು ಚೆನ್ನಾಗಿ ಸ್ಥಾಪಿಸಿದನು. ಇನ್ನು ಬೇರೆ ಅವತಾರಗಳಲ್ಲಿ ಈ ಕಾರ್ಯವಾಗದೆಂದು ಕೃಷ್ಣಾವತಾರದಲ್ಲಿ ಶ್ರೀಹರಿತತ್ತ್ವವನ್ನು ಸಮಗ್ರವಾಗಿ ನಿರ್ಣಯಿಸಿದನು. ರಾಮಾವತಾರಾನಂತರ ಶ್ರೀಹರಿಯು ಕೃಷ್ಣಾವತಾರ ಮಹಿಮೆ ವಿಶೇಷವಾದ್ದರಿಂದ ಆಗಲೇ ಸರ್ವಶಾಸ್ತ್ರಾರ್ಥನಿರ್ಣಯ ಮಾಡಿದ್ದಾನೆ. ಒಂದು ರೂಪದಿಂದ ವ್ಯಾಸರಾಗಿ ಪ್ರಧಾನವಾದ ತನ್ನ ವಿಷಯವನ್ನೇ ಆರಿಸಿಕೊಂಡು ಮಹಾಭಾರತವನ್ನು ರಚಿಸಿದ್ದಾನೆ. ಅದರಲ್ಲಿ ಮಾರ್ಕಂಡೇಯ ಋಷಿಗೆ ಹೇಳಿದ ಸಮಾಖ್ಯೆಯಿಂದ ರಾಮಕಥೆಯನ್ನು ಹೇಳಲಾಗಿದೆ. ಆದ್ದರಿಂದ ಭಾರತದಲ್ಲಿ ದೊರಕದಿದ್ದುದು ಎಲ್ಲಿಯೂ ದೊರಕದು. ಇಲ್ಲಿ ಉಕ್ತವಾದಂತೆ ಸರ್ವಶಾಸ್ತ್ರ ವಿಚಾರ ಮತ್ತೆಲ್ಲೂ ಸ್ಪಷ್ಟವಾಗಿ ನಿರೂಪಿತವಾಗಿಲ್ಲ. ಇದನ್ನು ಈ ಹರಿಯೇ ಬ್ರಹ್ಮಾಂಡಪುರಾಣದಲ್ಲಿ ಹೇಳಿದ್ದಾನೆ. ನಾರಾಯಣನೇ ಶ್ರೀಕೃಷ್ಣದ್ವೈಪಾಯನವ್ಯಾಸರೆಂದು ವಾಯುಪುರಾಣ ಮಾತ್ರವಲ್ಲದೆ ಭಾರತದಲ್ಲೂ ಉಕ್ತವಾಗಿದೆ. ಕಮಲಾಕ್ಷನಾದ ನಾರಾಯಣಾವತಾರಿ ಶ್ರೀವ್ಯಾಸರಲ್ಲದೆ ಮತ್ತಾರು ತಾನೆ ಮಹಾಭಾರತದ ಕರ್ತರಾದಾರು? ಎಂದು ಎಲ್ಲ ಶಾಸ್ತ್ರಗಳಲ್ಲಿ ಬೇರೆ ಬೇರೆಯಾಗಿ ಉಕ್ತವಾಗಿದೆ. ಕುರುಪಾಂಡವ ವಂಶವು ಬೆಳೆದು ಬೆಳಗುವ ಮೊದಲೇ ಆ ಎರಡು ವಂಶಗಳ ಉತ್ಪತ್ತಿಯ ಕ್ರಮ, ರಾಜಸೂಯ, ಅಶ್ವಮೇಧಾದಿಯಾಗ ಮಹಿಮೆ, ಅದರ ದಿಗ್ವಿಜಯ, ಅರಗಿನಮನೆಯಿಂದ ಪಾರಾದುದು, ಬಕ-ಹಿಡಿಂಬಾದಿ ದೈತ್ಯ ಸಂಹಾರ, ದ್ರೌಪದೀ ಸ್ವಯಂವರ, ಕಪಟದ್ಯೂತ, ವನವಾಸ, ಅಜ್ಞಾನವಾಸ, ಗೋಗ್ರಹಣಾದಿ ಕಥೆಗಳು, ಕುರುಪಾಂಡವ ಯುದ್ಧ, ಶತ್ರುಸಂಹಾರಾದಿಗಳನ್ನು ಜ್ಞಾನದೃಷ್ಟಿಯಿಂದ ತಿಳಿದು ಭಾರತವನ್ನು ರಚಿಸಿದ ಶ್ರೀವೇದವ್ಯಾಸರ ಸರ್ವಜ್ಞತೆಗೆ ಕೊನೆ ಮೊದಲಿಲ್ಲ. ಮಹಾಭಾರತವನ್ನು ವ್ಯಾಸರು ಬರೆದರೆಂಬುದಕ್ಕೆ ಸ್ವಲ್ಪವೂ ಅನುಮಾನವಿಲ್ಲ. ಇದನ್ನು ಬೇರೆ ಗ್ರಂಥಗಳೂ ಸಮರ್ಥಿಸುತ್ತವೆ. ಭಾರತದ ವಾಕ್ಯಗಳಿಂದಲೇ, ಮೇಲಿನ ಮಹಿಮೆಯನ್ನು ತೋರಿಸುತ್ತೇವೆ.

ಸಿರಿಯರಸ, ಸುರರಗುರು. ಜಗದೇಕನಾಥ, ಭಕ್ತಪ್ರಿಯ, ಸರ್ವಲೋಕ ಸುಜನವಂದ್ಯ, ಪ್ರಾಕೃತಗುಣರಹಿತ, ಹುಟ್ಟಿಲ್ಲದವನು, ವ್ಯಾಪ್ತ, ಆದ್ಯ, ಸಿರಿವಂತ, ಭವಸಾಗರವನ್ನು ದಾಟಿಸುವವನು, ದೇವ, ಅಸುರ, ಸಿದ್ಧಾದಿಗಳು ಅವನಿಗೆ ನಮಿಸುವರು. ಭಗವಾನ್ ಶ್ರೀಹರಿ ಲಕ್ಷ್ಮೀ, ಬ್ರಹ್ಮರುದ್ರಾದಿ ಸರ್ವ ಸುರ ಸಂದೋಹಕ್ಕೆ ಜ್ಞಾನಪ್ರದನಾದ್ದರಿಂದ ಸರ್ವಶ್ರೇಷ್ಠನು. ಭಕ್ತಿಯಿಂದ ಮಾತ್ರ ತುಷ್ಟನಾಗುವನು. ಅವನಿಗೆ ಶಿರಬಾಗಿ ನಡೆಯುವುದೇ ಸಕಲರ ಧರ್ಮವು. ಮುಂತಾಗಿ ಭಾರತದ ಪೂರ್ವಭಾಗದಲ್ಲಿ ಕಂಡುಬಂದಿದೆ. ಶ್ರೀಹರಿ ದೋಷರಹಿತ, ಸಂಸಾರವಿದೂರ, ಶ್ರೇಷ್ಠ ಪೂರ್ಣಜ್ಞಾನಾನಂದಭರಿತ. ಅವನು ಪ್ರಪ್ರಥಮವಾಗಿ ಸೃಷ್ಟಿಯನ್ನು ಪ್ರಾರಂಭಿಸಿದವನು. ಉದರಗತಜೀವರಾಶಿಗಳನ್ನು ಸೃಜಿಸಿದವನು. ಸಕಲ ಜೀವರ ಸ್ವಾಭಾವಿಕ ಶಕ್ತಿ ಅವನ ಅಧೀನ. ಸಂಸಾರಬಂಧವಿಮೋಚನೆಗೆ ಅವನೇ ಮುಖ್ಯಕಾರಣ. ಜೀವರ ಇಂದ್ರಿಯಾಭಿಮಾನಿ ದೇವತೆಗಳು, ಮುಕ್ತರೂ ಅವನನ್ನು ಸದಾ ವಂದಿಸುವರು. ಅವನೇ ಪ್ರಧಾನದೇವನೆಂಬುದು ಭಾರತದ ಉತ್ತರಾರ್ಧದಲ್ಲಿ ಹೇಳಲಾಗಿದೆ. ಹೀಗೆ ಪೂರ್ವೋತ್ತರ ಉಭಯ ಭಾಗದಲ್ಲಿಯೂ ಶ್ರೀಹರಿಯು ವಂದನೀಯನೆಂದು ಹೇಳಿರುವುದರಿಂದ ಅವನು ಮುಕ್ತಾಮುಕ್ತರಿಂದಲೂ ವಂದನಾರ್ಹನೆಂದು ಸಿದ್ಧಿಸಿತು. ಹೀಗೆಯೇ ಶ್ರೀಹರಿಯೇ ಸರ್ವಗುಣ ಪರಿಪೂರ್ಣನೆಂಬುದನ್ನು ಮೊತ್ತ ಮೊದಲಾಗಿ ಪ್ರತಿಜ್ಞಾಪೂರ್ವಕ ಪ್ರಸ್ತಾಪಿಸಲಾಗಿದೆ. ಸೋಮಪಾನದಿಂದ ಪೂತಾತ್ಮರಾದ ಋತ್ವಿಜರು ಶ್ರೀಕೃಷ್ಣನನ್ನು ಯಜ್ಞಕರ್ಮಗಳಿಂದ, ವೀರರು ಪರಾಕ್ರಮ ಸಾಧನಗಳಿಂದ, ಮುನಿಗಳು ಬ್ರಹ್ಮವಿಚಾರದಿಂದ, ಮುಕ್ತರು ಮೋಹರಹಿತರಾಗಿ ಪೂಜಿಸುವರು. ಇಂಥ ಬ್ರಹ್ಮಾದಿ ದೇವತೆಗಳನ್ನು ಸೃಜಿಸಿದ, ದುಷ್ಟದಾನವ ಸಂಹಾರಕನಾದ, ಸರ್ವ ದೇವಾದಿದೇವ ಶ್ರೀಶಾರ್ಙ್ಗಧಾರಿಯಾದ ಶ್ರೀಹರಿಯೆ ! ನಿನಗೆ ನಮಸ್ಕಾರಗಳು.

ದೇವತೆಗಳ ಸೃಷ್ಟಿಗೆ ಮುಕ್ತ ಸೃಷ್ಟಿ ಎಂದು ಹೆಸರು. ಮುಕ್ತ ಸೃಷ್ಟಿಯೆಂದರೆ ಮುಕ್ತಜೀವರ ಸ್ವರೂಪಾನಂದಾವಿರ್ಭಾವ ಗೊಳಿಸುವುದೆಂದರ್ಥ. ಹೀಗೊಪ್ಪದಿದ್ದರೆ ಶ್ರೀಹರಿ ದೈತ್ಯರನ್ನೂ ಸೃಜಿಸುವುದರಿಂದ ಸೃಷ್ಟಿ ಉಭಯ ಸಾಧಾರಣವಾಗುತ್ತದೆ.

ಇಲ್ಲಿ ಹೇಳುವ ಸೃಷ್ಟಿ ಮುಕ್ತ ಸೃಷ್ಟಿ ಎಂದು ತಿಳಿಯಬೇಕು. ಇದೇ ಇಲ್ಲಿನ ವಿಶೇಷ. ದೇವಾಸುರ ಸಂಹಾರವೆಂಬ ಲಯಕಾರ್ಯ ವಿಶೇಷವಾದದ್ದೇನಲ್ಲ. ದೇವ-ದೈತ್ಯ-ದಾನವಾದಿ ಸರ್ವರಿಗೂ ಸಾಧಾರಣವಾಗಿ ಆಗುವ ಅವಸ್ಥೆಯದು. ದೈತ್ಯರನ್ನು ಸಂಹರಿಸುವುದೆಂದರೆ ಅವರನ್ನು ಬಲಾತ್ಕಾರವಾಗಿ ಅಂಧಃತಮಸ್ಸಿನಲ್ಲಿ ಶಾಶ್ವತವಾಗಿ ಬಂಧಿಸುವುದೆಂದರ್ಥವೇ ಹೊರತು ಬೇರೇನೂ ಅಲ್ಲ. ಇದು ಇಲ್ಲಿನ ವಿಶೇಷ. ಇದು ನಮ್ಮ ಮಾತು ಮಾತ್ರವಲ್ಲ. ಶ್ರೀವೇದವ್ಯಾಸರೇ ಸ್ವತಃ ಭಾರತದಲ್ಲಿ ಸುರರಿಗೆ ಸುಖ ಹರ್ಷ ಜಯಗಳನ್ನೂ, ದೈತ್ಯರಿಗೆ ದುಃಖ ದುಮ್ಮಾನ ಅಪಜಯಗಳನ್ನೂ ಪ್ರತ್ಯಕ್ಷ ಕಂಡು ಹೇಳಿದ್ದಾರೆ. ಭೀಮಾದಿಗಳು ಸುರರು, ದುರ್ಯೋಧನಾದಿಗಳು ಅಸುರರು. ಸುರರಿಗೆ ಇಷ್ಟಸಾಧನ ಅಸುರರಿಗೆ ಅನಿಷ್ಟ ಸಾಧನ ಮಾಡಿಸುವುದು ನಾರಾಯಣನಿಗೆ ಪ್ರಿಯವಾದದ್ದು. ಭೀಮ-ದುರ್ಯೋಧನ ಪಕ್ಷಗಳ ವಿಭಾಗ ಪೂರ್ವಕವಾಗಿ ಆಯಾ ಪಕ್ಷಗಳಿಗೆ ಯೋಗ್ಯಫಲಗಳನ್ನು ಹೊಂದಿಸಿಕೊಡುವುದು ಹರಿಗೆ ಪ್ರಿಯವಾದ ಕಾರ್ಯವೆಂದು ವ್ಯಾಸರು ಹೇಳಿದ್ದಾರೆ. ಬಹು ತೇಜಸ್ವಿಗಳೂ, ಷಡ್ಗುಣ ಸಂಪನ್ನರೂ ಆದ ವೇದವ್ಯಾಸರಿಗೆ ನಮಸ್ಕರಿಸಿ ಅವರ ಅನುಗ್ರಹದಿಂದ ನಾರಾಯಣನ ಈ ಕಥೆಯನ್ನು ಹೇಳುತ್ತೇನೆ. ನಾರಾಯಣನಿಗೆ ಸಮರು ಈಗಿಲ್ಲ, ಹಿಂದಿರಲಿಲ್ಲ, ಮುಂದೆ ಸಹ ಜನಿಸುವುದಿಲ್ಲವೆಂಬ ಈ ಸತ್ಯವಚನದಿಂದ ಸಕಲಾರ್ಥಗಳನ್ನೂ ಸಾಧಿಸುತ್ತೇನೆ, ಎಂದು ಭಾರತದ ಮಂಗಳ ಪದ್ಯಗಳ ಮೊದಲು ಕೊನೆಗಳಲ್ಲಿ ಶ್ರೀಹರಿಯು ಸರ್ವೋತ್ತಮನೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಭಾರತದ ಕಥೆಯಿಂದಲೇ ನಾರಾಯಣನ ಸರ್ವ ಸದ್ಗುಣಗಳನ್ನೂ ನಿರ್ಣಯಿಸಲಾಗುವುದು. ''ವೇದಶಾಸ್ತ್ರಗಳಿಗಿಂತ ಶ್ರೇಷ್ಠವಾದ ಬೇರೊಂದು ಶಾಸ್ತ್ರವಿಲ್ಲ. ಶ್ರೀಹರಿಗಿಂತ ಉತ್ತಮವಾದ ಬೇರೊಬ್ಬ ದೇವನಿಲ್ಲ. ಇದು ಸತ್ಯ, ಮತ್ತು ಇದೇ ಸತ್ಯ.'' ಎಂದು ವಿಷ್ಣುರೂಪಿ ವೇದವ್ಯಾಸರೇ ಹೇಳಿದ್ದಾರೆ. ''ಆಲೋಢ್ಯಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ । ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಸ್ಸದಾ ॥'' ಅಂದರೆ - ಎಲ್ಲ ಶಾಸ್ತ್ರಗಳನ್ನೂ ಮಥಿಸಿ ಪುನಃ ಪುನಃ ವಿಮರ್ಶಿಸಿ ಶ್ರೀನಾರಾಯಣನು ಸರ್ವದಾ ಧ್ಯೇಯನೆಂಬ ಒಂದೇ ತತ್ತ್ವವನ್ನು ನಿಶ್ಚಯಿಸಲಾಗಿದೆ. ಹರಿಯನ್ನು ಸರ್ವದಾ ನೆನೆಯಬೇಕು. ಮರೆಯಬಾರದು. ಎಲ್ಲರೂ ಈ ವಿಧಿನಿಷೇಧಗಳಿಗೆ ಬದ್ಧರು.

ಬ್ರಹ್ಮಾದಿಗಳೂ ಪರಬ್ರಹ್ಮನನ್ನು ಸಂಪೂರ್ಣ ತಿಳಿಯಲು ಅಶಕ್ತರೆಂದಮೇಲೆ ಉಳಿದವರು ಶಕ್ತರಲ್ಲವೆಂದು ಬೇರೆ ಹೇಳಬೇಕಾಗಿಲ್ಲ. ಪರಬ್ರಹ್ಮನನ್ನು ಅವನೇ ತಿಳಿಯಬಲ್ಲ. ಮತ್ತೊಬ್ಬರಲ್ಲ, ಶ್ರೀವೇದವ್ಯಾಸರು, ಕೃಷ್ಣ ಇವರಿಬ್ಬರನ್ನು ಬಿಟ್ಟು ಮತ್ತಾರೂ ಗುಣಪೂರ್ಣನೂ ದೋಷದೂರನೂ ಆದ ನಾರಾಯಣನನ್ನು ತಿಳಿಯಲು ಸಾಧ್ಯವಿಲ್ಲ. ಅಳತೆಗೆ ಸಿಗದ ಹರಿಯನ್ನು ಅಳೆಯಲಾದೀತೆ? ಮಗುವು ಬೊಂಬೆಯಾಟವಾಡುವಂತೆ ಪ್ರೀತಿಯಿಂದ ತಾನಾಗಿ ವಶನಾಗಿ ಆನಂದಗೊಂಡು ಸರ್ವಭೂತಗಳೊಡನೆ ಅವನು ಕ್ರೀಡಿಸುವನು. ಶ್ರೀಹರಿಗೆ ಪರಮನೆಂದು ಹೆಸರು. ವಿಶ್ವರೂಪನೂ ಅವನೇ. ಪರಮನಾಗಿ ಪರಮನಲ್ಲಿರುವ ಇವನಿಗಿಂತ ಭಿನ್ನರಿಗೆ ಈ ವಿಧವಾದ ಮಹಿಮೆಯಿಲ್ಲ !

ವಸುದೇವಸುತ, ದಶರಥಪುತ್ರ, ಜಮದಗ್ನಿಕುಮಾರ, ದೇವಕೀಗರ್ಭಜಾತನೆನಿಸುವ ಶ್ರೀಹರಿಯು ಅವರಾರ ಗರ್ಭದಲ್ಲೂ ವಾಸಿಸಿದವನಲ್ಲ. ಸರ್ವ ಜಗತ್ತಿಗೆ ಸ್ವಾಮಿಯಾದ ಹರಿಗೆ ಜನನ-ಜರಾ-ಮರಣಗಳಿಲ್ಲ. ಇವನನ್ನು ಅಂತ್ಯಗೊಳಿಸುವವರಿಲ್ಲ, ಇವನಿಗೆ ಮರುಳೆಂಬುದಿಲ್ಲ. ಯಾರೂ ಇವನನ್ನು ಬಂಧಿಸಲಾರರು. ಸ್ವತಂತ್ರನಿಗೆ ದುಃಖವೆಲ್ಲಿ ಬಂತು? ನಿತ್ಯಾನಂದ ಸ್ವರೂಪಿಯಾದ ಹರಿ ದೇವದೇವನು. ಸಕಲ ಜಗತ್ತಾಪಗಳನ್ನು ಪರಿಹರಿಸುವುದರಿಂದ ಇವನನ್ನು ಹರಿ ಎಂದು ಕರೆಯುವರು. ಸಿರಿಯರಸ ತಾನಾಗಿ ಸರ್ವರಿಗೂ ಸಂಪತ್ತನ್ನು ನೀಡುವನು. ದುರ್ಬಲ ರೈತನಂತೆ ನಿತ್ಯವೂ ಕಾಯಕವನ್ನು ಮಾಡುವನು. ತನ್ನನ್ನು ತಾನು ಅರಿಯದೆ ಮುಂದುಗಾಣದೆ ದುಃಖಿಸುವವನಂತೆ, ರಾಮನಾಗಿ ಸೀತೆಯನ್ನು ಅರಸುತ್ತಲಿರುವಂತೆ ನಟಿಸುವನು, ರಾವಣಸುತನಾದ ಇಂದ್ರಜಿತುವಿಗೆ ಸೆರೆಸಿಕ್ಕವನಂತೆ, ಸಮ್ಮೋಹನಾಸ್ತ್ರಕ್ಕೆ ಮೈ ಮರೆತವನಂತೆ,

ಬಾಣಾಹತನಾದವನಂತೆ ನಟಿಸಿದ್ದು ಕೇವಲ ಲೀಲೆ ಮತ್ತು ದೈತ್ಯಜನಮೋಹನಕ್ಕಾಗಿಯೇ ಆಗಿದೆ. ಅರಿಯದವನಂತೆ ಪ್ರಶ್ನಿಸುವುದು, ದೇಹ ತೊರೆದು ಸ್ವರ್ಗಕ್ಕೆ ಹೋದುದೆಲ್ಲವೂ ಅಸುರಮೋಹನಕ್ಕಾಗಿ ನಾಟಕದಂತೆ ತೋರಿಸಿದ್ದಾನೆ. ತಾಮಸರಿಗೆ ಕಪಟ ಹಾಗೂ ಸುಳ್ಳಾದ, ನೊಂದರೂಪ ತೋರುವನೆಂದೂ ಭಗವದವತಾರ ರೂಪಗಳಾವುವೂ ಪ್ರಾಕೃತವಲ್ಲವೆಂದು ಸುರರು ತಿಳಿಯುವರು. ಹರಿಯ ಅವತಾರ ರೂಪಗಳಿಗೆ ದೋಷ ಸಂಬಂಧವಿಲ್ಲ. ಮಂಗಳಗುಣಪೂರ್ಣ ಶರೀರಿಯು ಅವನ್ನು ಮರೆಮಾಡಿ ದುಷ್ಟರನ್ನು ಮರಳುಗೊಳಿಸಲು ಹಾಗೆ ತೋರುವನು. ಸುಜನರಿಗೆ ಒಮ್ಮೊಮ್ಮೆ ತೋರಿ ಜ್ಞಾನ ದೃಷ್ಟಿಯಿತ್ತು ಸಲಹುವನು. ಹರಿಯು ಲೀಲೆಗಾಗಿ, ಜೀವರ ಯೋಗ್ಯತೆಗೆ ಮೀರದ ಫಲವೀಯಲು ಹೀಗೆ ತೋರುವನು.

ಶ್ರೀಕೃಷ್ಣ ಗೀತೆಯಲ್ಲಿ ಅರ್ಜುನನಿಗೆ ಹೀಗೆ ಹೇಳಿದ್ದಾನೆ:- ''ನಾನು ಈ ಆತ್ಮ ಪರಮಾತ್ಮರ ಸಾಮಾನ್ಯ ಜ್ಞಾನಪ್ರಕಾರ, ಪರಮಾತ್ಮನನ್ನು ಪರಬ್ರಹ್ಮನೆಂಬ ವಿಶೇಷಜ್ಞಾನ ಪ್ರಕಾರವನ್ನು ವಿಶೇಷವಾಗಿ ಹೇಳುವೆನು. ಇದನ್ನರಿತ ಮೇಲೆ ತಿಳಿಯುವುದು ಬೇರಾವುದೂ ಉಳಿಯುವುದಿಲ್ಲ. ನಾನು ಸಕಲ ಜಗತ್ಸೃಷ್ಟಿ ಮತ್ತು ಪ್ರಳಯಕರ್ತ, ನಾನೊಬ್ಬನೇ ಸ್ವತಂತ್ರ. ಮಾನವ ದೇಹ ಧರಿಸಿ ಧರೆಗಿಳಿದು ಬಂದ ನನ್ನನ್ನು ಮರುಳರು ಅವಮಾನಿಸುವರು. ಎಲ್ಲ ವಸ್ತುಗಳಲ್ಲಿರುವ ನನ್ನ ಪರಮ ಸಂಪತ್ತು, ಪರಮಾತ್ಮಭಾವವನ್ನರಿಯದ ಮನುಜರು ತಮ್ಮ ಇಚ್ಛೆ, ಕರ್ಮ, ತಿಳುವಳಿಕೆಯನ್ನು ವ್ಯರ್ಥ ಮಾಡಿಕೊಂಡು ಮನಸ್ಸನ್ನು ಬರಿದು ಮಾಡಿಕೊಳ್ಳುವರು. ಅವರು ರಾಕ್ಷಸತ್ವ, ಅಸುರತ್ವ, ಮಂಕುತನದ ಸ್ವಭಾವವನ್ನು ಪಡೆಯುವರು. ಮಹಾತ್ಮರು ದೈವಿಕ ಸ್ವಭಾವವನ್ನು ಪಡೆದು ನನ್ನನ್ನು ಆಶ್ರಯಿಸುವರು. ನನ್ನ ವಿನಃ ಬೇರೊಬ್ಬರಲ್ಲಿ ಮನವಿಡದೆ ಸರ್ವಭೂತಗಳಿಗೂ ನಾನೇ ಆದಿ ಮತ್ತು ನಾಶರಹಿತನೆಂದರಿತು ಭಜಿಸುತ್ತಾರೆ''.

ಅರ್ಜುನನು ''ಸ್ವಾಮಿ, ನೀನು ಚರಾಚರ ಪ್ರಪಂಚಕ್ಕೆ ತಂದೆ, ಹಿರಿಯ, ಮಾರ್ಗದರ್ಶಕ ಮತ್ತು ಪೂಜ್ಯನೂ ಆಗಿರುವೆ. ನಿನಗೆ ಸಮರೇ ಇಲ್ಲವೆಂದ ಮೇಲೆ ಅಧಿಕರಾರಿದ್ದಾರೆ? ತ್ರಿಲೋಕಗಳಲ್ಲೂ ನಿನ್ನಂತಹ ಪ್ರಭಾವಶಾಲಿಗಳಿಲ್ಲ'' ಎಂದು ಕೃಷ್ಣನನ್ನು ಸ್ತುತಿಸಿದ್ದಾನೆ.

ಕೃಷ್ಣ ಮತ್ತೆ ಅರ್ಜುನನಿಗಿಂತು ಬೋಧಿಸಿದ್ದಾನೆ:- ''ಅರ್ಜುನ! ನಿನಗೆ ಎಲ್ಲಕ್ಕಿಂತ ಉತ್ಕೃಷ್ಟವಾದ ಜ್ಞಾನವನ್ನು ಬೋಧಿಸುವೆನು, ಸಮಸ್ತ ಮುನಿಗಳು ಯಾವ ಜ್ಞಾನ ಪಡೆದು ಇದಕ್ಕಿಂತ ಉತ್ತಮ ಸ್ಥಿತಿಯನ್ನು ಪಡೆದರೋ ಅದನ್ನು ತಿಳಿಸುವೆನು. ನನ್ನ ಜಗತ್ಸೃಷ್ಟಿಗೆ ಮುಖ್ಯ ಕಾರಣಳು ಮಹಾಲಕ್ಷ್ಮಿ. ಅವಳಿಗೆ ಮಹದ್ಬ್ರಹ್ಮವೆಂಬ ಶ್ರೇಷ್ಠ ಹೆಸರಿದೆ. ಅವಳಲ್ಲಿ ಸರ್ವಸೃಷ್ಟಿಗೆ ಕಾರಣವಾದ ವಿಧಾನವನ್ನಿಟ್ಟು ಧರಿಸಿ, ಪೋಷಿಸುತ್ತೇನೆ. ಸಕಲ ಪ್ರಾಣಿಗಳ ಉತ್ಪತ್ತಿ ಅವಳಿಂದ ಜರುಗುವುದು. ಬ್ರಹ್ಮಾದಿ ತೃಣಪರ್ಯಂತವಿರುವ ಜೀವರಿಗೆ ಕ್ಷರ ಎಂದು ಹೆಸರು. ಕೂಟಸ್ಥವೆಂದರೆ ಪ್ರಕೃತಿ, ಮಹಾಲಕ್ಷ್ಮಿ, ಅವಳಿಗೆ ಅಕ್ಷರ ಎಂದು ಹೆಸರು. ಲೋಕದಲ್ಲಿ ಕ್ಷರಾಕ್ಷರವೆಂದು ಪುರುಷರು ಎರಡು ವಿಧ. ಪುರು ಎಂದರೆ ದೇಹ, ಷ ಎಂದರೆ ಅಲ್ಲಿ ನೆಲೆಸಿರುವವರು. ಅಂಥವರಿಗೆ ಪುರುಷರೆಂದು ಹೆಸರು. ಯಾರು ಲಕ್ಷ್ಮೀರಮಣನಾಗಿ ಸಿರಿಯಿತ್ತು ಸಲುಹಿ, ಲೋಕತ್ರಯದಲ್ಲಿ ನೆಲೆಸಿ, ನಾಶರಹಿತನು ತಾನಾಗಿ, ಧರಿಸಿ ಕಾಪಾಡುವನೋ, ಅವನಿಗೆ, ಉತ್ತಮಪುರುಷ, ಪರಮಾತ್ಮನೆಂಬ ಬಿರುದಿದೆ. ಅವನು ಕ್ಷರಾಕ್ಷರಪುರುಷರಿಗಿಂತ ಭಿನ್ನನಾಗಿ ರಾರಾಜಿಸುವನು. ಕ್ಷರಾಕ್ಷರ ಪುರುಷರಿಗಿಂತ ಶ್ರೇಷ್ಠನಾದ್ದರಿಂದಲೇ ಲೋಕದಲ್ಲಿ, ವೇದದಲ್ಲಿಯೂ ಸ್ತುತಿಗೆ ವಿಷಯನಾಗಿ ಪುರುಷೋತ್ತಮನೆಂದು ನಾನು ಖ್ಯಾತನಾಗಿದ್ದೇನೆ. ಯಾರು ನನ್ನನ್ನು ಪುರುಷೋತ್ತಮನೆಂದು ತಿಳಿಯುವರೋ ಅವರು ಎಲ್ಲವನ್ನೂ ತಿಳಿದವರಾಗಿ, ಸರ್ವತ್ರ ನನ್ನ ಇರುವಿಕೆಯನ್ನರಿತು ಕೊನೆಗೆ ನನ್ನನ್ನು ಹೊಂದುವರು. ಈ ಜ್ಞಾನವನ್ನು ಆಶ್ರಯಿಸಿ ಸಾಧರ್ಮ್ಯವನ್ನು ಪಡೆದವರು ಸೃಷ್ಟಿ ಕಾಲದಲ್ಲಿ ಹುಟ್ಟುವುದೂ ಇಲ್ಲ. ಪ್ರಳಯ ಕಾಲದಲ್ಲಿ ದುಃಖಿಸುವುದೂ ಇಲ್ಲ. ಈ ರಹಸ್ಯಶಾಸ್ತ್ರವನ್ನು ನಿನಗೆ ಹೇಳಿದ್ದೇನೆ. ಇದನ್ನರಿತಲ್ಲಿ ಪರಬ್ರಹ್ಮಜ್ಞಾನಿಯಾಗಿ ನನ್ನ ಅನುಗ್ರಹದಿಂದ ಮೋಕ್ಷವನ್ನು ಪಡೆಯುವರು.

ಲೋಕದಲ್ಲಿ ದೇವತಾ ಸಂಬಂಧಿ, ಅಸುರ ಸಂಬಂಧಿ ಎಂದು, ಭೂತಸೃಷ್ಟಿ ಎರಡು ವಿಧವಾಗಿದೆ. ಹಿಂದೆ ದೇವತಾ ಸೃಷ್ಟಿಯನ್ನು ವಿಸ್ತಾರವಾಗಿ ಹೇಳಲಾಗಿದೆ. ಈಗ ನನ್ನ ಅಸುರ ಸೃಷ್ಟಿಯನ್ನು ಕೇಳು. ಕೆಲವರು ಪರಿದೃಶ್ಯವಾದ ಜಗತ್ತನ್ನು ಸುಳ್ಳೆನ್ನುವರು. ಅದು ಜೀವನಿಗೆ ಬ್ರಹ್ಮಜ್ಞಾನಾನಂತರ ನಾಶವಾಗುವುದೆನ್ನುವರು. ಇನ್ನು ಕೆಲವರು ಜಗತ್ತಿಗೆ ಸ್ವಾಮಿಯಿಲ್ಲ. ಅದು ಸಹಜವಾಗಿ ಹುಟ್ಟುವುದು ಎನ್ನುತ್ತಾರೆ. ಮತ್ತೆ ಕೆಲವರು ಘಟಪಟಾದಿಗಳಂತೆ ಜಗತ್ತು ಹುಟ್ಟಿದೆ ಎನ್ನುವರು. ಇನ್ನೂ ಕೆಲವರು ಇದು ಇರುವ ವಸ್ತುವೂ ಅಲ್ಲ, ಇರದ ವಸ್ತುವೂ ಅಲ್ಲ. ಇದಕ್ಕೆ ಹೊರತಾದ ಭಿನ್ನವಸ್ತು ಎನ್ನುತ್ತಾರೆ. ಕೆಲವರು ಜಗತ್ತು ಅಜ್ಞಾನ ಕಲ್ಪಿತವೆನ್ನುವರು. ಮಂದಮತಿಗಳು ಆತ್ಮಜ್ಞಾನವನ್ನು ಹಾಳು ಮಾಡಿಕೊಂಡು ಪ್ರಪಂಚವನ್ನು ಹೀಗೆ ತಿಳಿದು ಜಗದಲ್ಲಿ ಕ್ರೂರ ಕರ್ಮವೆಸಗಲು ಜನಿಸುವರು. ಮತ್ತು ಜಗತ್ತಿಗೆ ಅಹಿತರಾಗಿ ಅದನ್ನು ನಾಶಪಡಿಸಲಾರಂಭಿಸುವರು. ''ನಾನೇ ಈಶ್ವರ, ಭೋಗಿ, ಸರ್ವಸಿದ್ಧಿಯನ್ನು ಪಡೆದವನು, ಬಲವಂತ, ಸುಖಿ, ಕೀರ್ತಿವಂತ, ಉತ್ತಮಕುಲಸಂಜಾತ, ನನಗೆ ಸಮರು ಮತ್ತಾರಿದ್ದಾರೆ'' ಎಂದು ಮದಿಸಿ ತಮ್ಮ ದೇಹದಲ್ಲಿ ನೆಲೆಸಿರುವ ನನ್ನನ್ನು ಅಸೂಯೆಯಿಂದ ದ್ವೇಷಿಸುವರು. ಅಂಥ ಕ್ರೂರಿಗಳನ್ನು ನಾನು ಅಸುರ ಜನ್ಮದಲ್ಲಿ ಕೆಡವುತ್ತೇನೆ. ಅಸುರ ಜನ್ಮವೆತ್ತಿದ ಆ ಮೂಢರು ಜನ್ಮ ಜನ್ಮಗಳಲ್ಲೂ ಅಸುರ ಯೋನಿಯಲ್ಲಿ ಜನಿಸಿ, ನನ್ನನ್ನು ಪಡೆಯದೆ ಅಂಧಃತಮಸ್ಸಿಗೆ ಹೋಗುವರು. ಯಾರು ನನ್ನನ್ನು ಸರ್ವಭೂತಗಳಲ್ಲಿ ನೆಲೆಸಿರುವವನು, ಬೇರೆ ಬೇರೆ ಶರೀರಗಳಲ್ಲಿದ್ದರೂ ಅವಿಭಕ್ತನೆಂದೂ, ಚತುರ್ವಿಧ ನಾಶರಹಿತನೆಂದು ಏಕಭಾವದಿಂದ ತಿಳಿಯುವರೋ, ಅಂಥವರ ಜ್ಞಾನವನ್ನು ಸಾತ್ವಿಕ ಜ್ಞಾನವೆಂದು ತಿಳಿ. ನೀನು ನನಗೆ ಪ್ರಿಯನಾದ್ದರಿಂದ ಹಿತವಾದುದನ್ನು ಹೇಳುತ್ತೇನೆ. ನಿನ್ನ ಮನವನ್ನು ನನ್ನಲ್ಲಿ ನೆಲೆಗೊಳಿಸು. ನನ್ನ ಭಕ್ತನಾಗು. ನನ್ನನ್ನೇ ಪೂಜಿಸು, ನನ್ನನ್ನೇ ನಮಸ್ಕರಿಸು. ಆಂದರೆ ಸತ್ಯಸ್ವರೂಪನಾದ ನನ್ನನ್ನು ಪಡೆಯುವೆ'' ಎಂದು ಶ್ರೀಕೃಷ್ಣ ತನ್ನ ಸರ್ವೋತ್ತಮತ್ವವನ್ನು ಅರ್ಜುನನಿಗೆ ಉಪದೇಶಿಸಿದ್ದಾನೆ.

ಸಮಸ್ತ ಪಂಚರಾತ್ರ ಗ್ರಂಥವನ್ನು ಸ್ವತಃ ನಾರಾಯಣನೇ ಹೇಳಿದವನು. (ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ) ''ಸಾಂಖ್ಯ, ಯೋಗ, ಪಾಶುಪತ, ವೇದ ಆರಣ್ಯಕಾದಿ ಜ್ಞಾನಗಳ ಪೈಕಿ ಪಂಚರಾತ್ರಶಾಸ್ತ್ರವು ಸರ್ವಶ್ರೇಷ್ಠವಾದುದು. ಸಾಂಖ್ಯ ಪಾಶುಪತಾದಿಗಳಲ್ಲಿ ಹರಿಯು ಪರಮನೆಂದು ಹೇಳಿದ ಭಾವಗಳನ್ನು ಒಪ್ಪಬೇಕು. ಅದು ಪಂಚರಾತ್ರಕ್ಕೆ ಅವಿರುದ್ಧವಾಗಿರಬೇಕು. ಪಂಚರಾತ್ರದಲ್ಲಿ ಹೇಳಿದಂತೆ ನಾರಾಯಣ ಪರಾಯಣರಾದವರು ಏಕಾಂತ ಭಕ್ತರೆನಿಸಿ ವಾಸುದೇವನೆಂಬ ಹೆಸರಿನ ಭಗವಂತನಲ್ಲಿ ನೆಲೆಸುವರು.'' (ಜನಮೇಜಯನ ಪ್ರಶ್ನೆ) ''ಪುರುಷರು ಅನೇಕರೋ ಒಬ್ಬನೋ? ಅನೇಕರಿದ್ದಲ್ಲಿ ಅವರಲ್ಲಿ ಶ್ರೇಷ್ಠನಾರು?'' ವೈಶಂಪಾಯನರು ಹೇಳುತ್ತಾರೆ:- ''ಜ್ಞಾನಿಗಳು ಏಕಪುರುಷವಾದವನ್ನು ಒಪ್ಪುವುದಿಲ್ಲ, ಅನೇಕ ಪುರುಷರಿಗೆ ಕಾರಣಕರ್ತನಾದ್ದರಿಂದ ಪ್ರಧಾನನೆಂದು (ನಾರಾಯಣನನ್ನು) ಅವನನ್ನು ಕರೆಯುವರು. ಪ್ರತಿ ಶರೀರಾಂತರ್ಯಾಮಿಯಾದ್ದರಿಂದ ಪುರುಷನೆಂದೂ, ವಿಶ್ವಕ್ಕೆ ಸ್ವಾಮಿಯಾದ್ದರಿಂದ ವಿಶ್ವನೆಂದೂ ಕರೆಯಲ್ಪಡುವ ಅಧಿಕ ಗುಣವಂತನಾದ ಪರಬ್ರಹ್ಮನನ್ನು ನಿರೂಪಿಸುವೆನು. ಇದನ್ನು ರುದ್ರದೇವರಿಗೆ ಬ್ರಹ್ಮದೇವರು ಹೇಳಿದ್ದಾರೆ. ಸಕಲ ಜಗತ್ತನ್ನು ತನ್ನ ವಶದಲ್ಲಿಟ್ಟುಕೊಂಡಿರುವುದರಿಂದ ಪರಬ್ರಹ್ಮನನ್ನು ವಿಶ್ವನೆಂದು ಕರೆಯುವರು. ಆದ್ದರಿಂದ ಪರಬ್ರಹ್ಮನು ವಿರಾಡ್ರೂಪದಿಂದ ಪುರುಷನೆಂದು ಹೆಸರು ಪಡೆದು ಸ್ವತಂತ್ರನಾಗಿಯೂ, ಒಬ್ಬನಾಗಿಯೂ ಇರುವನು. ಗುಣಪೂರ್ಣನಾದ್ದರಿಂದ ಬ್ರಹ್ಮಶಬ್ದವಾಚ್ಯನಾದ ಶ್ರೀಹರಿಯು ಸೃಷ್ಟಿಗೂ ಮೊದಲಿದ್ದವನು. ಸಂಪತ್ತದನಾದ್ದರಿಂದ ಈಶನೆನಿಸಿದ್ದಾನೆ. ಸರ್ವೇಶನಾದ ಅವನಿಂದ ಬ್ರಹ್ಮದೇವರು ಜನಿಸಿದರು. ಅವನಿಂದಲೇ ಸ್ಥಾವರ ಜಂಗಮಗಳೂ, ಸಕಲವೇದರಾಶಿಗಳು, ರಹಸ್ಯಾರ್ಥ ಪ್ರತಿಪಾದಕ ಸದಾಗಮಗಳು ಜನಿಸಿದವು.'' (ಪರಬ್ರಹ್ಮ ವಚನ) ''ಬ್ರಹ್ಮರುದ್ರಾದಿ ಸರ್ವ ದೇವತೆಗಳು ಒಟ್ಟಾಗಿ ಸೇರಿ ಪರಬ್ರಹ್ಮನ ಗುಣಗಳನ್ನು ವ್ಯಾಖ್ಯಾನ ಮಾಡತೊಡಗಿದರೂ ಅವುಗಳಲ್ಲಿ ಒಂದಂಶವನ್ನೂ ಅವರು ಹೇಳಿ ಮುಗಿಸಲು ಸಾಧ್ಯವಿಲ್ಲ.'' (ಭೀಮ ವಚನ) - ''ಷಡ್ಗುಣೈಶ್ವರ್ಯ ಸಂಪನ್ನನಾದ ಪರಬ್ರಹ್ಮಸ್ವರೂಪಿಯಾದ ಶ್ರೀಕೃಷ್ಣನನ್ನು ಕೇವಲ ಮಾನವನೆಂದು ತಿಳಿಯಬಾರದು. ಶ್ರೀಕೃಷ್ಣ ವಚನ - ''ಶ್ರೀನಾರಾಯಣನ ಅನುಗ್ರಹದಿಂದ ಬ್ರಹ್ಮದೇವರು, ಕ್ರೋಧದಿಂದ

ರುದ್ರ ದೇವರು ಜನಿಸಿದರು. ಇಂದ್ರಾದಿ ಸರ್ವದೇವತೆಗಳು ರುದ್ರನನ್ನೂ, ಅವರು ಬ್ರಹ್ಮನನ್ನೂ, ಅವನು ನನ್ನನ್ನೂ ಎಲ್ಲ ಜ್ಯೋತಿಗಳು ಸೂರ್ಯನನ್ನು ಆಶ್ರಯಿಸಿರುವಂತೆ ಆಶ್ರಯಿಸಿದ್ದಾರೆ. ನಾನು ಯಾರೊಬ್ಬರನ್ನೂ ಆಶ್ರಯಿಸಿಲ್ಲ.''

ಮುಕ್ತಿ ಪಡೆದ ಜೀವಗಣಗಳು ಪರಬ್ರಹ್ಮನನ್ನು ಆಶ್ರಯಿಸಿದ್ದಾರೆಂದು ವೇದವ್ಯಾಸರು ಭವಿಷ್ಯತ್ಪರ್ವದಲ್ಲಿ ಹೇಳಿದ್ದಾರೆ. ವಾಸುದೇವನೆಂಬ ಪರಬ್ರಹ್ಮನ ಮಹಿಮೆಯನ್ನು ಭಾರತದಲ್ಲಿ ನಿರ್ಣಯಗೊಳಿಸಿದ್ದಾರೆ. ರಾಜಸೂಯಾದಿ ಸರ್ವಕಥೆಗಳೂ ವಾಸುದೇವನ ಮಹಿಮಾ ನಿರ್ಣಯಕ್ಕಾಗಿಯೇ ಉಕ್ತವಾಗಿವೆ. ವಿಷ್ಣುವಿನ ಗುಣಕೀರ್ತನ ಅನ್ಯದೇವತಾಪರವಲ್ಲ. ವಿಷ್ಣು ಮಹಿಮೆಗೆ ವಿರುದ್ಧವಾದ ಕಥೆಗಳಾವುದಾದರೂ ಕಂಡುಬಂದರೆ ಅವು ಪರದರ್ಶನಗಳಲ್ಲಿ ಹೇಳಿರುವುದು, ಪೂರ್ವ-ಪಕ್ಷರೂಪದಲ್ಲಿ ದರ್ಶನಭಾಷೆಯನ್ನು ಅನುಸರಿಸಿ ಹೇಳಿದ್ದೇ ವಿನಃ ಅವು ಸ್ವಸಿದ್ಧಾಂತವಲ್ಲ.

ದರ್ಶನ, ಸಮಾಧಿ, ಗುಹ್ಯ ಎಂದು ಭಾಷೆಗಳು ಮೂರು ವಿಧವಾಗಿವೆ. ವಿಷ್ಣು ಮಹಿಮೆಯನ್ನು ಏಕಾಗ್ರಚಿತ್ತದಿಂದ ಸ್ಪಷ್ಟವಾಗಿ ಹೇಳಿರುವುದು ಸಮಾಧಿ ಭಾಷೆ. ಆದ್ಯಂತ ಭಾಗಗಳಲ್ಲಿ ಪರಸ್ಪರ ವಿರುದ್ಧವಾಗಿ ಪರಕೀಯದರ್ಶನಗಳಲ್ಲಿ ಹೇಳಿದ ಕಥೆಗಳನ್ನು ಅನುವಾದ ಅಥವಾ ಪೂರ್ವಪಕ್ಷರೂಪವಾಗಿ ಹೇಳಿರುವುದಕ್ಕೆ ದರ್ಶನ ಭಾಷೆಯೆಂದು ಹೆಸರು. ಸ್ಪಷ್ಟಾರ್ಥ ನಿರೂಪಣ ಮಾಡುವ ಸಮಾಧಿ ಭಾಷೆಯಂತಲ್ಲದೆ, ಗೂಢವಾದ ಪದಗಳಿಂದ ಅರ್ಥ ಹೇಳುವ ಭಾಷೆ ಗುಹ್ಯ ಭಾಷೆ ಎನಿಸುವುದು. ಭಾರತದಲ್ಲಿ ಒಂದೊಂದು ಕಥಾನಕವನ್ನು ಒಂದೊಂದು ಭಾಷೆಯಿಂದ ಹೇಳಿರುವುದಾಗಿ ವೇದವ್ಯಾಸರೇ ಅಪ್ಪಣೆ ಕೊಡಿಸಿರುವುದರಿಂದ ಶ್ರೀವಿಷ್ಣು ಸರ್ವೋತ್ತಮತ್ವ ಮುಖ್ಯತತ್ವಕ್ಕೆ ಯಾವ ವಿರೋಧವೂ ಇಲ್ಲ. ಭಾರತದಲ್ಲಿ ವಿಷ್ಣು ಮಹಿಮೆಯನ್ನು ಸ್ಪಷ್ಟವಾಗಿ ಸಮಾಧಿ ಭಾಷೆಯಿಂದಲೂ, ಕೆಲವೆಡೆ ಶೈವ ದರ್ಶನವನ್ನವಲಂಬಿಸಿ ಶಿವಕಥೆಗಳನ್ನು ದರ್ಶನ ಭಾಷೆಯಿಂದಲೂ ಹೇಳಲಾಗಿದೆ. ಸಮಾಧಿ ಭಾಷೆಯಿಂದ ಹೇಳಿದ್ದೆಲ್ಲವೂ ಸಮಂಜಸವೆಂದರಿಯಬೇಕು. ಸಮಾಧಿ ಭಾಷೆಗೆ ಅವಿರುದ್ಧವಾಗಿ ದರ್ಶನ ಭಾಷೆಯಿಂದ ಹೇಳಿದ್ದರೂ ಸಹ ಯುಕ್ತವೆಂದು ತಿಳಿಯಬೇಕು. ಇವೆರಡರಿಂದ ಬೇರೆಯಾದದ್ದು ಗುಹ್ಯಭಾಷೆ. ಆದ್ದರಿಂದ ಭಾರತದಲ್ಲಿ ಶ್ರೀವಿಷ್ಣುವಿನ ಮಹಿಮೆಯನ್ನು ಯಥಾರ್ಥವಾಗಿ ಹೇಳಲಾಗಿದೆ.

ವಾಯುದೇವರು ಶ್ರೀಹರಿಯ ಜ್ಞಾನಬಲಕಾರ್ಯಗಳಲ್ಲಿ ಪ್ರಥಮಾಂಗಭೂತರು. ಅವರು ಮೂರವತಾರವನ್ನೆತ್ತಿದವರು. ವಾಯುದೇವರ ಮೊದಲನೆಯ ಅವತಾರಕ್ಕೆ ಹನುಮಂತನೆಂದೂ, ಎರಡನೆಯದಕ್ಕೆ ಭೀಮಸೇನನೆಂತಲೂ, ಮೂರನೆಯದಕ್ಕೆ ಪೂರ್ಣಪ್ರಜ್ಞನೆಂದೂ ಹೆಸರು. ಹೀಗೆ ವಾಯುದೇವರು ಅವತಾರತ್ರಯದಲ್ಲೂ ಭಗವತ್ಕಾರ್ಯವನ್ನು ಮಾಡಿದ್ದಾರೆ. ತ್ರೇತೆ, ದ್ವಾಪರ, ಕಲಿಯುಗಗಳಲ್ಲಿ ಹನುಮ-ಭೀಮ-ಪೂರ್ಣಪ್ರಜ್ಞರಾಗಿ ಕೇಶವನ ಆಜ್ಞೆಯಂತೆ ಅವತರಿಸಿದರು. ಸರಸ್ವತೀ ದೇವಿಯರು ಶ್ರೀಹರಿ ಕಾರ್ಯಸಾಧನಗೊಳಿಸಲು ದ್ವಿತೀಯಾಂಗಭೂತರು. ಭಾರತದಲ್ಲಿ ದ್ರೌಪದೀ ದೇವಿಯರಿಗೆ ''ಶಂ'' ಸುಖರೂಪರಾದ ವಾಯುದೇವರಲ್ಲಿ ''ರ'' ಎಂದರೆ ರಮಿಸುವವರಾದ್ದರಿಂದ ''ಶ್ರೀ'' ಎಂದು ಹೆಸರಿದೆ. ಇದಲ್ಲದೆ ಕಾಳೀ, ಚಂದ್ರಾ ಎಂದೂ ಅವರಿಗೆ ಬೇರೆ ಹೆಸರುಗಳಿವೆ. ಶೇಷದೇವರು ಹರಿಕಾರ್ಯಸಾಧನಕ್ಕೆ ತೃತೀಯಾಂಗಭೂತರು. ಅವರು ಹರಿಯಾಜ್ಞೆಯಂತೆ ನರಾವೇಶದಿಂದ, ಲಕ್ಷ್ಮಣ, ಬಲರಾಮಾದಿ ರೀತಿಯಲ್ಲಿ ಅವತರಿಸಿದರು. ಶೇಷದೇವರು ರುದ್ರದೇವರ ಸ್ವರೂಪಭೂತರಾದ್ದರಿಂದ ಶುಕಮುನಿಯಾಗಿಯೂ, ಅಶ್ವತ್ಥಾಮರಾಗಿಯೂ ಅವತರಿಸಿದರು. ಇಂದ್ರನಲ್ಲಿ ಹರಿಯ ನರಾವೇಶವಿರುವುದರಿಮದ ಇಂದ್ರಾವತಾರಿ ಅರ್ಜುನನು ನರಾಂಶಯುಕ್ತನಾಗಿದ್ದಾನೆ. ಪ್ರದ್ಯುಮ್ನಾದಿಗಳು ಕ್ರಮವಾಗಿ ಭಗವತ್ಕಾರ್ಯ ಸಾಧನೆಯಲ್ಲಿ ಅಂಗಭೂತರು. ಸರ್ವತ್ರವ್ಯಾಪ್ತನೂ, ಸಮರ್ಥನೂ, ಆದ ವಿಷ್ಣುವು ರಾಮಕೃಷ್ಣಾದಿ ರೂಪಗಳಿಂದ ಮಾನವದೇಹ ಧರಿಸಿ ದುಷ್ಟಶಿಕ್ಷಣ ಶಿಷ್ಟ ರಕ್ಷಣೆಗಾಗಿ ಅವತರಿಸಿದ್ದಾನೆ. ಸ್ವರಮಣನೂ, ಶರಣಾಗತರಿಗೆ ಸಂಪತ್ಪ್ರದನೂ ಆದ ಶ್ರೀಹರಿಗೆ ದುಃಖಾದಿಗಳಿಲ್ಲದಿದ್ದರೂ ವಿಪತ್ಸಮಯದಲ್ಲಿ ಹೇಗೆ ನಡೆದುಕೊಳ್ಳಬೇಕು, ಹೇಗೆ ಪಾರಾಗಬೇಕೆಂಬ ಲೋಕಶಿಕ್ಷಣಾರ್ಥವಾಗಿ ರಾಮಾವತಾರಾದಿಗಳಲ್ಲಿ ದುಃಖಪಟ್ಟವನಂತೆ ನಟಿಸಿದ್ದಾನೆ. ಯೋಗೀಶನಾದ

ರಾಮನು ಭಗವಾನ್ ವಾಸುದೇವನಾಮಕನಾಗಿದ್ದಾನೆ. ಅವನೆಂದೂ ದುಃಖವನ್ನು ಅನುಭವಿಸುವುದಿಲ್ಲ. ಸ್ತ್ರೀ ನಿಮಿತ್ತವಾಗಿ ಮನೋವ್ಯಥೆಯನ್ನು ಪಡುವುದಿಲ್ಲ. ಲಕ್ಷ್ಮಣನನ್ನೂ ಎಲ್ಲೂ ಬಿಟ್ಟುಹೋಗುವುದಿಲ್ಲ. ಯಾವನನ್ನು ಸೇವಿಸಿದವರ ದುಃಖಗಳೆಲ್ಲವೂ ದೂರಾಗುವವೋ, ಬ್ರಹ್ಮದೇವರೂ ಯಾವನ ಪಾದಕಮಲವನ್ನು ನಮಿಸುವರೋ ಅಂಥ ರಾಮನು ಹೆಣ್ಣಿಗೆ ಮರುಳಾದವರ ಗತಿ ಹೀಗಾಗುವುದೆಂದು ಪ್ರಕಟಗೊಳಿಸುತ್ತ ಸಂಚರಿಸಿದನು.

ಶ್ರೀರಾಮನು ಕೆಲಸಂದರ್ಭಗಳಲ್ಲಿ ಶಿವನನ್ನು, ಋಷಿಗಳು, ಇತರ ದೇವತೆಗಳು, ಮಾನವರನ್ನೂ ಪೂಜಿಸಿ, ಸ್ತುತಿಸಿ, ವರಬೇಡಿರುವುದು ಕಂಡುಬಂದಿದೆ. ಸರ್ವೇಶ್ವರನೂ, ಸ್ವತಂತ್ರನೂ, ಸರ್ವ ಶಕ್ತಿವಂತನೂ ಆದ ಆ ಪ್ರಭುವು ಶಿವಲಿಂಗ ಪ್ರತಿಷ್ಠಾಪನೆ, ಮಧುಕೈಟಭರಿಂದ ವರ ಪಡೆದಿದ್ದು ಮುಂತಾದ ಪುರಾಣೋಕ್ತ ವಿಷಯವು ಅಸುರಜನ ಮೋಹನಾರ್ಥವಾಗಿಯೂ ನರವಿಡಂಬನೆಗಾಗಿಯೂ ಆದದ್ದು. ಶ್ರೇಷ್ಠನಾದ ವಿಷ್ಣುವು ಜನರನ್ನು ಮೋಹಗೊಳಿಸಲು ಹಾಗೆ ನಟಿಸಿರುವನು. ಅವನ ಮಹಿಮೆ ಸರ್ವಶಾಸ್ತ್ರಗಳಲ್ಲಿ ಉಕ್ತವಾಗಿದೆ. ವಿಷ್ಣು ಮಹಿಮೆಗೆ ವಿರುದ್ಧವಾಗಿ ವರ್ಣಿಸಿರುವ ಕೃಷ್ಣನ ಕೈಲಾಸಯಾತ್ರಾದಿ ಚರಿತ್ರೆಗಳು ಶಾಸ್ತ್ರ ತಾತ್ಪರ್ಯಕ್ಕೆ ವಿಷಯವಾಗಲಾರದು. ಮಹಾಭಾರತದಲ್ಲಿ ಸರ್ವಶಾಸ್ತ್ರಾರ್ಥ ನಿರ್ಣಯವನ್ನು ಸೋದಾಹರಣವಾಗಿ ಮಾಡಿದ್ದಾರೆ. ಭಾರತಾರ್ಥವು ಮೂರುವಿಧವೆಂದು ವೇದವ್ಯಾಸರು ಸಮರ್ಥಿಸಿರುವರು. ಕೆಲವರು ಭಾರತದಲ್ಲಿ ಮನ್ವಾದಿಚರಿತೆಯನ್ನು ಹೇಳಲಾಗಿದೆ ಎಂದೂ, ಇನ್ನು ಕೆಲವರು ಆಸ್ತಿಕಾದಿಗಳ ಇತಿಹಾಸ ವರ್ಣಿತವಾಗಿದೆಯೆಂದೂ, ಮತ್ತೆ ಕೆಲವರು ಉಪರಿಚರ ವಿಷಯ ಉಕ್ತವಾಗಿದೆಯೆಂದೂ, ಹೇಳುವರು. ಹೀಗೆ ಭಾರತದಲ್ಲಿ ಮೂರು ವಿಧ ಅರ್ಥಗಳಿವೆ. ಈ ಪ್ರಕಾರ ಮೂರು ಅರ್ಥಗಳು ಭಾರತದಲ್ಲಿರುವುದರಿಂದ ಶ್ರೀಹರಿಯ ಶ್ರೇಷ್ಠ ಮಹಿಮೆಯನ್ನು ಮುಖ್ಯವಾಗಿ ಪ್ರತಿಪಾದಿಸಲಾಗಿದೆಯೆಂದು ತಾತ್ಪರ್ಯ. ದ್ರೌಪದಿಸಹಿತರಾದ ಪಾಂಡವರನ್ನು ಗೌರವಿಸಿ ಹೇಳಿರುವ ಅರ್ಥಗಳನ್ನು ಹಿಂದು ಮುಂದಾಗಿ, ಬುಡಮೇಲಾಗಿ ಹೇಳುವ ಸ್ವಾರಸ್ಯದಿಂದ ಹೇಳಿದರೆ ಅದಕ್ಕೆ ಆಸ್ತಿಕವೆಂದು ತಿಳಿದವರು ಹೇಳುವರು, ಧರ್ಮರಾಜ, ದಶಗುಣಾಭಿಮಾನಿ ಭೀಮಸೇನ, ಶ್ರುತಾಭಿಮಾನಿ ಅರ್ಜುನ, ಶೀಲ ಮತ್ತು ವಿನಯಾಭಿಮಾನಿಗಳಾದ ನಕುಲ-ಸಹದೇವರು, ವೇದಾಭಿಮಾನಿನಿಯಾದ ದ್ರೌಪದೀದೇವಿ ಹೀಗೆ ಈ ಆರುಜನ ಮಹನೀಯರ ವರ್ಣನೆ ಮಾಡಿರುವುದನ್ನು ಪಂಡಿತರು ಮನ್ವಾದಿ ಎಂದಿರುವರು. ನಾರಾಯಣನ ನಾಮಗಳು, ಸಕಲ ಭಾರತವಚನಗಳು, ನಾರಾಯಣನ ಸಾಮರ್ಥ್ಯ ಪ್ರತಿಪಾದಕ ವಾಕ್ಯಗಳು - ಇವನ್ನು ಬಲ್ಲವರು ಉಪರಿಚರವೆನ್ನುವರು. ಭಕ್ತಿ, ಜ್ಞಾನ, ವೈರಾಗ್ಯ, ಪ್ರಜ್ಞೆ, ಮೇಧಾ, ಧಾರಣೆ, ಧೈರ್ಯ, ಸ್ಥಿತಿ, ಯೋಗ, ಪ್ರಾಣ, ಬಲ ಈ ಹತ್ತು ಗುಣಗಳ ಸಮ್ಮಿಳನವನ್ನು 'ವೃಕೋದರ' ಎನ್ನುವರು. ವಾಯುದೇವರು ಈ ಬಗೆಯ ರೂಪಗುಣದವರಾದ್ದರಿಂದಲೇ ಭೀಮಸೇನದೇವರೂ ಆ ರೀತಿಯ ರೂಪ ಗುಣವಂತರಾಗಿರುವರು. ಸರ್ವವಿದ್ಯಾಭಿಮಾನಿನಿಯರಾದ್ದರಿಂದಲೇ ದ್ರೌಪದೀದೇವಿಯರು ಸರಸ್ವತಿ ಎನಿಸಿರುವರು.

ಅಜ್ಞಾನದ ಸ್ವರೂಪವೇ ದುರ್ಯೋಧನ. ಅವನು ಕಲಿಯ ಅವತಾರ. ವಿಪರೀತ ಜ್ಞಾನಸ್ವರೂಪನೇ ದುಶ್ಯಾಸನ. ನಾಸ್ತಿಕ್ಯ ಸ್ವರೂಪನೇ ಶಕುನಿ. ಉಳಿದವರು ಸರ್ವದೋಷಸ್ವರೂಪರು. ಅಶ್ವತ್ಥಾಮರು ರುದ್ರಾವತಾರರು. ಆದ್ದರಿಂದ ಉಳಿದವರು ಅಹಂಕಾರ ಸ್ವರೂಪರು. ಭೀಷ್ಮ, ದ್ರೋಣ, ಕರ್ಣ, ಅಭಿಮನ್ಯು, ನಕುಲಸಹದೇವರು, ಅರ್ಜುನ ಇವರೆಲ್ಲ ಇಂದ್ರಿಯ ರೂಪರು. ದುರ್ಯೋಧನನ ಪಕ್ಷಪಾತಿ ಸೈನಿಕರು ಪಾಪಸ್ವರೂಪರು. ಪಾಂಡವ ಪುತ್ರರು ಪುಣ್ಯಾಭಿಮಾನಿ ದೇವತೆಗಳು. ಅವರಲ್ಲಿ ಹರಿಯು ನಿಯಾಮಕನಾಗಿದ್ದು ಅವರಿಂದ ಪುಣ್ಯಕಾರ್ಯ ಮಾಡಿಸುವನು, ಹೀಗೆ ಭಾರತದಲ್ಲಿ ಅಧ್ಯಾತ್ಮದ ಅರ್ಥಗಳು ಅಡಕವಾಗಿವೆ. ವೇದವ್ಯಾಸರು ಸ್ವತಃ ಭಾರತಾರ್ಥವನ್ನು ಅರಿತವರು. ಅವರ ಅನುಗ್ರಹದಿಂದ ಬ್ರಹ್ಮದೇವರು ತಿಳಿಯುವರು. ಭಾರತದಲ್ಲಿ ವಿಷ್ಣು ಪಾರಮ್ಯ ಪ್ರತಿಪಾದಿಸಲ್ಪಟ್ಟಿದೆ. ಅದೇ ಭಾರತದ ಸಾರ ಸಂಗ್ರಹ. ವಿಷ್ಣು ಸರ್ವೋತ್ತಮತ್ವ.

ತಾರತಮ್ಯಾದಿಕ್ರಮವನ್ನು ಶ್ರೀವ್ಯಾಸರ ವಾಕ್ಯಗಳಿಂದಲೇ ಅರಿತು ನಿರ್ಣಯಿಸಿ ನಿರೂಪಿಸಿರುತ್ತೇವೆ. ವಾಯುದೇವರೇ ಬ್ರಹ್ಮಪದ ಪಡೆಯುವರಾದ್ದರಿಂದ ಅವರೇ ಬ್ರಹ್ಮದೇವರು. ಶಿವಾದಿಗಳವರಿಗೆ ಸಮರಲ್ಲ. ಜ್ಞಾನಭಕ್ತ್ಯಾದಿಗುಣಗಳಲ್ಲಿ ಹನುಮಂತದೇವರಿಗೆ ಸಮರಾರೂ ಇಲ್ಲ. ಯಾವಾಗಲೂ ಹುಟ್ಟಲಾರರು. ಎಲ್ಲಿಯೂ ದೊರಕರು.

ಶ್ರೀಹರಿಯು ಸರ್ವೋತ್ತಮ. ವಾಯುದೇವರು ಶ್ರೀಹರಿ ಕಾರ್ಯದಲ್ಲಿ ಪ್ರಧಾನಾಂಗರೆಂದು ಸ್ಮೃತಿಸಮ್ಮತಿಯಿಂದ ಸಾಧಿಸಿದೆವು. ಈಗ ಶ್ರುತಿಸಮ್ಮತಿಯಿಂದ ಸಾಧಿಸುವೆವು. ಭಗವದಾಜ್ಞೆಯಂತೆ ಪವಮಾನರು ಹನುಮಂತರೂಪದಿಂದ ಅವತರಿಸಿದರು. ಇದು ಅವರ ಮೊದಲ ಅವತಾರ. ಹನುಮದವತಾರದಲ್ಲಿ ಬಲವೇಗ ಜ್ಞಾನಗಳಿಂದ ವಾಯುದೇವರು ಮೆರೆದರು. ಕಲ್ಯಾದ್ಯಸುರರ ಕಿರುಕುಳವನ್ನು ತಡೆದು ಅವರನ್ನು ನಾಶಪಡಿಸಲು ಸಮರ್ಥರಾದರು. ಸರ್ವಜೀವರ ಶ್ವಾಸೋಛ್ವಾಸ ತಾವಾಗಿ ಅವರಿಗೆ ಜೀವವನ್ನಿತ್ತು ಪೊರೆದರು. ಮೂಲರೂಪದ ಜ್ಞಾನಶಕ್ತಿಗಳೇ ಅವತಾರರೂಪದಲ್ಲೂ ಕುಂದದೆ ರಾರಾಜಿಸುವುದು. ಈ ಪ್ರಥಮ ರೂಪಕ್ಕೆ 'ಮತಿ' ಎಂದು ಹೆಸರು. ಜ್ಞಾನರೂಪಿಯಾದ ಶ್ರೀರಾಮನ ಸನ್ನಿಧಿಯಲ್ಲಿ ವಿನೀತರಾಗಿ ಕರಮುಗಿದು ನಿಂತು, ಸಮರಾಂಗಣದಲ್ಲಿ ರಾಮಸೈನಿಕರಿಗೂ, ಅಶೋಕವನದಲ್ಲಿ ಸೀತೆಗೂ ಸತ್ಯವಾಕ್ಯನಾದ ಸಿರಿರಾಮನ ಸವಿನುಡಿಯ ಸಂದೇಶವನ್ನು ಮುಟ್ಟಿಸಿ ಶ್ರೀರಾಮಸೀತೆಯರನ್ನು ಮೊದಲನೆಯ ಹನುಮದವತಾರ ರೂಪದಿಂದ ಭಕ್ತಿಪೂರ್ವಕ ಸೇವಿಸಿ ವಿರಾಜಿಸಿದರು.

'ಪ್ರಕ್ಷ' ಎಂಬುದು ಅವರ ಎರಡನೆಯ ಅವತಾರರೂಪ. ಶತ್ರು ಸೈನಿಕರನ್ನು ಪುಡಿಪುಡಿ ಮಾಡುವುದರಿಂದಲೂ ಶತ್ರು ಭಯಂಕರರಾದ್ದರಿಂದಲೂ ಭೀಮಸೇನನೆಂಬ ಹೆಸರಿಗೆ ಅವರು ಮೆರಗುಕೊಟ್ಟಂತಿರುವರು. ಚೆನ್ನಾಗಿ ಉಂಬುವವರಾದ್ದರಿಂದ 'ಪಿತುಮಂತ'ನೆನಿಸಿರುವರು. ಸ್ವಚ್ಛಂದ ಮೃತ್ಯುಗಳಾದ್ದರಿಂದ ನಿತ್ಯರಾಗಿರುವರು. ಭಗವಂತನನ್ನು ತಿಳಿಸಿಕೊಡುವ ಋಗಾದಿ ನಾಲ್ಕು ವೇದಗಳು, ಪಂಚರಾತ್ರ, ಮೂಲ ರಾಮಾಯಣಗಳೆಂಬ ಶುಭಕರ ಸಪ್ತ ವಿದ್ಯೆಗಳಲ್ಲಿ ಲೋಕ ವಿಖ್ಯಾತ ವಿದ್ವತ್ತು ಪಡೆದರು. ವೇದಾಭಿಮಾನಿ ದೇವತೆಗಳಾದ ಶ್ರೀಭೂದುರ್ಗಾದೇವಿಯರು, ದೇವಶ್ರೇಷ್ಠರಾದ ವಾಯುದೇವರು ಪೂರ್ಣ-ಪ್ರಜ್ಞರೆಂಬ ಮೂರನೆಯ ರೂಪದಿಂದ ಅವತರಿಸಿ ವೇದಗಳಿಗೆ ಸರಿಯಾದ ವ್ಯಾಖ್ಯೆಗಳನ್ನು ರಚಿಸಲೆಂದು ಮಧ್ಯಗೇಹಭಟ್ಟರ ಪತ್ನಿಯ ಉದರದಲ್ಲಿದ್ದು ಶ್ರೀಮಧ್ವಾಚಾರ್ಯರನ್ನು ಹುಟ್ಟಿಸಿದರು.

ಜ್ಞಾನರೂಪರಾಗಿ, ವಿಬುಧರನ್ನು ಸನ್ಮಾರ್ಗಗಾಮಿಗಳನ್ನಾಗಿಸಿ, ಸುಜನರನ್ನು ಪೊರೆವ ದೇವಶ್ರೇಷ್ಠರಾದ ವಾಯುದೇವರ ಮೂರನೆಯ ಅವತಾರರೂಪರಾದ ಶ್ರೀಮನ್ಮಧ್ವಾಚಾರ್ಯರು ಅಧಿಕ ಬುದ್ಧಿವಂತರಾದ ಈಶಾನಾದಿಸುರರನ್ನು ಮುಂದೆ ಮಾಡಿಕೊಂಡು ಹೃದಯಗುಹೆಯಲ್ಲಿ ರಾಜಿಸುವ ಹರಿಯ ಸರ್ವೋತ್ತಮತ್ವವನ್ನು ಸ್ಥಾಪಿಸಿ ಜ್ಞಾನಪೀಯೂಷ ಧಾರೆಯನ್ನು ವರ್ಷಿಸಿ ಈಶಾನಾದಿ ದೇವತೆಗಳನ್ನು ಜ್ಞಾನಿಗಳನ್ನಾಗಿ ಮಾಡಿದರು.

ಪರಮನೂ, ಜನಕನೂ ಆದ ನಾರಾಯಣನು, ''ಪಾಜಕ ಕ್ಷೇತ್ರದಲ್ಲಿ ಅವತರಿಸಿ, ಬ್ರಹ್ಮಸೂತ್ರ ದಶೋಪನಿಷತ್ತುಗಳಿಗೆ ಭಾಷ್ಯ ರಚಿಸಿ, ರಜತಪೀಠಪುರದಲ್ಲಿ ಶ್ರೀಕೃಷ್ಣನನ್ನು ಪ್ರತಿಷ್ಠಿಸಿ, ಸೇತು ದರ್ಶನ ಮಾಡಿ ಖಳರನ್ನು ಜಯಿಸಿ, ಸಜ್ಜನರಿಗೆ ಜ್ಞಾನ ಬೋಧಿಸಿ, ಬದರಿಗೆ ಹೋಗಿ ವೇದವ್ಯಾಸರ ದರ್ಶನ ಮಾಡಿ, ಸಂಚಾರ ಕಾಲದಲ್ಲಿ ಸಜ್ಜನರನ್ನು ಅನುಗ್ರಹಿಸು'' ಎಂದು ಪ್ರೇರಣೆ ಮಾಡಿದಂತೆ ಆ ಕಾರ್ಯವನ್ನು ಮಾಡಿ, ಪರವಾದಿಗಳ ಎಲ್ಲ ಪ್ರಶ್ನೆಗಳಿಗೂ ಉತ್ತರವಿತ್ತರು. ರಮಾನಾರಾಯಣರು ಪ್ರತಿಯುಗದಲ್ಲೂ ಜ್ಞಾನಪ್ರಸಾರಕ್ಕೆ ಅವತರಿಸಲು ವಾಯುದೇವರನ್ನು ಪ್ರೇರಿಸುವರು. ಆದ್ದರಿಂದಲೇ ವಾಯುದೇವರ ಕೊನೆಯ ಅವತಾರರಾದ ಮಧ್ವಾಚಾರ್ಯರು ಹನುಮಭೀಮರಂತೆ ದುರ್ಜನರನ್ನು ಶ್ರೀಹರಿಯಾಜ್ಞೆಯಾಗಿಲ್ಲವೆಂದು ಸಂಹರಿಸದೆ ದಯಾಳುಗಳಾಗಿರುವರು. ಪ್ರತಿವಾದಿ ಬ್ರಾಹ್ಮಣರನ್ನು ವಾಗ್ಯುದ್ಧದಲ್ಲಿ ಜಯಿಸಿದರೂ ಬ್ರಹ್ಮಹತ್ಯಾರೂಪವಾದ ದೋಷಭಾಗಿಗಳಾಗಿರಬಾರದೆಂದು ಅವರನ್ನು ಸ್ಪರ್ಶಿಸಲಿಲ್ಲ. ಅಕಾರವಾಚ್ಯನಾದ ಹರಿಯ ಆಣತಿಯಂತೆ ಇಂತು ಮೂರು

ಅವತಾರಗಳಲ್ಲಿ, ಅಂಜನಾ, ಕುಂತೀ, ವಿಪ್ರಪತ್ತಿಯರೆಂಬ ಮೂವರು ಮಾತೆಯರಲ್ಲಿ ತ್ರೇತಾ, ದ್ವಾಪರ, ಕಲಿಯುಗಗಳಲ್ಲಿ ಅವತಾರ ಮಾಡಿದರು. ಸಪ್ತವಿದ್ಯೆಗಳಲ್ಲಿ ಶ್ರೇಷ್ಠಜ್ಞಾನಿಗಳಾದ್ದರಿಂದ ಸಕಲ ದುಷ್ಕರ್ಮಸಂಪರ್ಕ ಅವರಿಗಿಲ್ಲ. ಅಂತೆಯೇ ತಾಯಿಯ ಉದರದಲ್ಲಿರುವಾಗ ಗರ್ಭವಾಸನಿಮಿತ್ತಕವಾದ ಯಾವ ಹಿಂಸೆ, ದುಃಖಗಳಿಗೂ ಅವರೀಡಾಗಲಿಲ್ಲ. ಪ್ರಸವ-ವಾಗುವವರೆಗೆ ಸುಖದಿಂದ ಬೆಳೆದರು.

ಋಗಾದಿ ನಾಲ್ಕು ವೇದಗಳು, ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪಗಳೆಂಬ ವೇದವೇದಾಂಗಗಳು ನಿತ್ಯವಾದ ಪುರಾಣ ಪುರುಷೋತ್ತಮನಾದ ಶ್ರೀಹರಿಯನ್ನು ಪ್ರತಿಪಾದಿಸುವವು. ದೊಡ್ಡಮರವನ್ನು ಹತ್ತುವವನು ನಿಧಾನವಾಗಿ ಹತ್ತಿ ಕೊನೆಮುಟ್ಟುವಂತೆ ಶ್ರೀಮದ್ವಾಚಾರ್ಯರು ತಮ್ಮ ವಿಚಾರ ಶಕ್ತಿಯಿಂದ ನಿಧಾನವಾಗಿ ವ್ಯಾಖ್ಯಾನ ಮಾಡಿ ಪಾರಂಗತರಾದರು. ನೂತನವಾದ ಪೌರುಷೇಯಗ್ರಂಥಗಳೆನಿಸಿದ ಪಂಚರಾತ್ರ, ಮೂಲ ರಾಮಾಯಣ, ಮಹಾ-ಭಾರತಾದಿಗಳನ್ನು ಶೀಘ್ರವಾಗಿ ವ್ಯಾಖ್ಯಾನ ಮಾಡಿದರು. ಪೂರ್ವವಿದ್ಯೆಗಳಾದ ವೇದಗಳಲ್ಲಿ ಅಪ್ರಸಿದ್ಧ, ಅಲೌಕಿಕ ಅನೇಕ ಪದಗಳು, ಸ್ವರ, ಸಂಹಿತೆ, ಪದ, ಕ್ರಮಗಳ ನಿಯಮಗಳೂ ಹೆಚ್ಚಾಗಿರುವುದರಿಂದ ಸ್ವಚ್ಛಂದ ವ್ಯಾಖ್ಯಾನ ಮಾಡುವುದು ಅನುಚಿತವೆಂದು ಭಾವಿಸಿ ನಿಧಾನವಾಗಿಯೂ, ಪೌರುಷೇಯ ಗ್ರಂಥಗಳನ್ನು ಆ ಬಗೆಯ ಕಾಠಿಣ್ಯವಿಲ್ಲದರಿಂದ ಶೀಘ್ರವಾಗಿಯೂ ವ್ಯಾಖ್ಯಾನ ಮಾಡಿದರು. ಯಜ್ಞಗಳಲ್ಲಿ ಅಶ್ವಮೇಧ, ಜ್ಯೋತಿರ್ಗಣಗಳಲ್ಲಿ ಸೂರ್ಯ, ಮನುಷ್ಯರಲ್ಲಿ ಬ್ರಹ್ಮಜ್ಞಾನಿ, ದೇವತೆಗಳಲ್ಲಿ ವಾಯುದೇವರು ಶ್ರೇಷ್ಠರು. ಇಂದ್ರದೇವರಿಗೆ ರುದ್ರ ದೇವರು, ಅವರಿಗೆ ವಾಯುದೇವರು, ಅವರಿಗೆ ಸಾಕ್ಷಾತ್ ನಾರಾಯಣ ಬಲಪ್ರದನಾಗಿದ್ದಾನೆ. ನಾರಾಯಣನನ್ನು ಮೀರಿದವರಿಲ್ಲವಾದ್ದರಿಂದ ಅವನಿಗೆ ಇತರ ಬಲದ ಅವಶ್ಯಕತೆಯಿಲ್ಲ.

(ಸರ್ವಪ್ರಾಣಿಗಳಿಗೆ ಪ್ರಾಣಭೂತರಾದ ವಾಯುದೇವರು ಹೊರಬಂದರೆ ಜೀವ ಶರೀರದಿಂದ ನಿರ್ಗಮಿಸುವನು. ದೇಹ ನೆಲಕ್ಕುರುಳುವುದು. ತತ್ತದಿಂದ್ರಿಯಾಭಿಮಾನಿ ದೇವತೆಗಳಿದ್ದರೂ ಜೀವನಿರಲಾರ. ಪ್ರಾಣನಿದ್ದರೆ ಇಂದ್ರಿಯಾಭಿಮಾದಿ ದೇವತೆಗಳೂ ಜೀವನೂ ಶರೀರವೂ ಇರುವುದು. ಅವನಿಲ್ಲದಿದ್ದರೆ ಯಾವುದೂ ಇಲ್ಲ. ಹೀಗೆ ಪ್ರಾಣನ ಇರುವಿಕೆ ಇಲ್ಲದಿರುವಿಕೆಯೆಂಬ ಅನ್ವಯವ್ಯತಿರೇಕಗಳಿಂದ ಮುಖ್ಯಪ್ರಾಣನಿಗೆ ಜೀವೋತ್ತಮತ್ವವು ಸಿದ್ಧಿಸಿದೆ. ಇಂದ್ರಿಯಾಭಿಮಾನಿ ದೇವತೆಗಳಿಗೆ ಜೀವೋತ್ತಮತ್ವ ಸಿದ್ಧಿಸುವುದಿಲ್ಲ. ಪ್ರಾಣನಿದ್ದರೆ ಇಂದ್ರಿಯಾಭಿಮಾನಿ ದೇವತೆಗಳಿಲ್ಲದಿದ್ದರೂ ಜೀವನು ತತ್ತದಿಂದ್ರಿಯ ಶಕ್ತಿಕುಂಠಿತನಾದರೂ ಜೀವಿಸಿರುವನು. ಪ್ರಾಣನಿಲ್ಲದಿದ್ದರೆ ಇಂದ್ರಿಯಾಭಿಮಾನಿ ದೇವತೆಗಳಿದ್ದರೂ ಜೀವನು ಜೀವಿಸಿರಲಾರ. ಈ ಬಗೆಯಿಂದ ಇಂದ್ರಿಯಾಭಿಮಾನಿ ದೇವತೆಗಳಿಗೆ ಅನ್ವಯ ವ್ಯತಿರೇಕದಿಂದ ಜೀವೋತ್ತಮತ್ವವಿಲ್ಲವಾಗಿದೆ.) ಹೀಗೆ ವಾಯುದೇವರು ಶತ್ರು ಭಯಂಕರರೂ ಮಹಾಪರಾಕ್ರಮಶಾಲಿಗಳೂ, ಸರ್ವ ಪ್ರಾಣಿಗಳಿಗೆ ಪ್ರಾಣ ಸ್ವರೂಪರೂ, ಇತರ ದೇವತೆಗಳಿಗಿಂತ ಶ್ರೇಷ್ಠರೂ ಆದ್ದರಿಂದ ಅವರು ದೇವರದೇವನೂ ಆಗಿರುವರು. ಭಗವದ್ವಿಷಯಕ ತತ್ವಜ್ಞಾನ ಹರಿಭಕ್ತಿ, ಧೈರ್ಯ, ಸ್ಥೈರ್ಯ, ಪರಾಕ್ರಮ, ವೇಗ, ಲಾಘವ, ಪ್ರಲಾಪರಾಹಿತ್ಯ, ಶಾಸ್ತ್ರಜ್ಞಾನ, ಇಂದ್ರಿಯ ಚಟವಟಿಕೆ, ಶೌರ್ಯ, ಬಲಗಳಲ್ಲಿ ಭೀಮಸೇನ ದೇವರಿಗೆ ಸಮರಾದವರು ಉಭಯಸೇನೆಗಳಲ್ಲಿ ಯಾರೂ ದೊರೆಯುವುದಿಲ್ಲ.

''ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳು, ಕೀರ್ತಿ, ನಿಶ್ಚಲತೆ ಮುಂತಾದ ಗುಣಗಳು, ಮತ್ತು ಸಕಲಲೋಕದ ಸರ್ವಗುಣಗಳೂ ನಿನಗೆ ಅಧೀನವಾಗಿದೆ'' ಎಂದು ಧರ್ಮರಾಜ ಭೀಮನಿಗೆ ಹೇಳಿದ ವಾಕ್ಯವು; ಭೀಮಸೇನ, ಬಲರಾಮ, ಶಲ್ಯ ಈ ಮೂವರು ಮಹಾಪರಾಕ್ರಮಿಗಳು, ಅಸ್ತ್ರವಿದ್ಯೆ, ಪಾಂಚರಾತ್ರ, ಮೂಲ ರಾಮಾಯಣಾದಿ ಶಾಸ್ತ್ರ ವಿದ್ಯೆಗಳಲ್ಲವರು ನಿಸ್ಸೀಮಪಂಡಿತರು, ಪಾಂಡಿತ್ಯ-ಪರಾಕ್ರಮಗಳಲ್ಲವರು ಒಬ್ಬರಿಗಿಂತ ಒಬ್ಬರು ಕಡಿಮೆ ಶಕ್ತಿಯುಳ್ಳವರು. ಕರ್ತವ್ಯ, ಕರ್ಮ, ತಾತ್ವಿಕ ನಿರ್ಣಯದಲ್ಲಿ ಚತುರರು. ಆದ್ದರಿಂದಲೇ ಉರಿಯುತ್ತಿದ್ದ ಅರಮನೆಯಿಂದ ತಾಯಿ

ಸಹೋದರರೊಡನೆ ಪಾರಾಗಿ ಭೀಮಸೇನ ವಿಖ್ಯಾತನಾದ. ಅಂತಃಶಕ್ತಿ, ಬಾಹುಬಲ, ಧೈರ್ಯ, ಪರಪ್ರೇರಕಸಾಮರ್ಥ್ಯ, ಮಾನಸಿಕ ಕ್ರಿಯಾಶಕ್ತಿ, ಸಂಪೂರ್ಣ ಬಲ ಪೌರುಷಾದಿ ಗುಣಗಳಲ್ಲಿ ಅವರಿಗೆ ಸಮರು ಬೇರೊಬ್ಬರಿಲ್ಲ. ಈಗ ಮನುಷ್ಯ ಲೋಕದಲ್ಲಿ, ದೈತ್ಯದಾನವರಲ್ಲಿ ಈ ರೀತಿಯ ಶೌರ್ಯ ಯಾರಿಗೂ ಇಲ್ಲ. ಕೀಚಕ ಇವರೊಡನೆ ಸೇರುವ ನಾಲ್ಕನೆಯವನು. ಈ ನಾಲ್ವರನ್ನು ಬಿಟ್ಟು ಐದನೆಯವರನ್ನು ಎಲ್ಲಿಯೂ ಕೇಳರಿಯೆವು'' ಎಂಬ ವಿರಾಟಪರ್ವದಲ್ಲಿನ ದುರ್ಯೋಧನನ ವಾಕ್ಯಗಳು ಮೇಲಿನ ವಿಷಯವನ್ನು ಸಮರ್ಥಿಸುವವು.

''ಭೀಮಸೇನ! ಭಕ್ತಿವಿರಕ್ತ್ಯಾದಿ ಗುಣಗಳು ಎಷ್ಟೆಷ್ಟು ಸ್ವಲ್ಪವಾಗಿವೆಯೆಂದು ನೀನು ತಿಳಿದಿರುವೆಯೋ ನಾನದನ್ನು ಸಾವಿರಪಟ್ಟು ಅಧಿಕವಾಗಿದೆ ಎಂದು ತಿಳಿಯುತ್ತೇನೆ. ನಿನ್ನ ಸರ್ವರಾಜನ್ಯ ಪೂಜ್ಯವಂತ, ಮತ್ತು ಅದರ ಪವಿತ್ರಕರ್ಮಗಳಿಗೆ ತಕ್ಕಂತೆ ನೀನು ಗುಣವಂತನಾಗಿದ್ದೀಯೆ. ಈ ಭಾರತ ಯುದ್ಧದಲ್ಲಿ ಸಕಲವಿಧ ಹೊಣೆಗಾರಿಕೆ ನಿನ್ನ ಮೇಲೆ ಹೊರಿಸಲಾಗಿದೆ. ಅರ್ಜುನ ಉಳಿದ ಸೈನ್ಯ ಇದನ್ನು ನಿರ್ವಹಿಸತಕ್ಕದ್ದು'' ಎಂಬ ಶ್ರೀಕೃಷ್ಣನ ವಚನದಿಂದ ಭೀಮಸೇನದೇವರ ಮಹತ್ವ ವ್ಯಕ್ತವಾಗುವುದು. ಇವರಿಗೆ ಶ್ರೀಹರಿಯ ಬಲಕಾರ್ಯದಲ್ಲಿ ವಾಯುದೇವರು ಪ್ರಥಮಾಂಗರೆಂಬುದನ್ನು ಅವರ ಜೀವೋತ್ತಮತ್ವಾದಿಗಳನ್ನೂ ನಿರೂಪಿಸಲಾಯಿತು. ಈಗ ವಾಯುದೇವರ ತರುವಾಯ ಭಾರತೀದೇವಿಯರು ಶ್ರೀಹರಿ-ಕಾರ್ಯದಲ್ಲಿ ಅಂಗಭೂತರೆಂಬುದನ್ನು ನಿರೂಪಿಸಲಾಗುವುದು.

ಬ್ರಹ್ಮಾಂಡಪುರಾಣದಲ್ಲಿ ಬ್ರಹ್ಮದೇವರು ನಾರದರಿಗೆ ಹೇಳಿದ ವಚನ-''ಯಾವ ದೇವಿಯ ಕೃಪೆಯಿಂದ ಶೇಷ, ಗರುಡ, ರುದ್ರ ಇಂದ್ರರು ಶ್ರೇಷ್ಠ ಪದವಿಯನ್ನು ಪಡೆಯುವರೋ ಯಾವ ಭಾರತಿಯು ಪೂರ್ವದಲ್ಲಿ ವಾಯುದೇವರಿಂದ ಗರ್ಭಧರಿಸಿ ಚತುರ್ಮುಖ ಬ್ರಹ್ಮದೇವರನ್ನು ಹೋಲುವ ಶೇಷ, ಗರುಡ, ರುದ್ರ, ಇಂದ್ರರೆಂಬ ನಾಲ್ವರು ಮಕ್ಕಳನ್ನು ಪ್ರಸವಿಸಿದೋ ಅವಳೇ ದ್ರೌಪದಿಯೆಂಬ ನಾಮದಿಂದ ಜಗತ್ತಿನಲ್ಲಿ ಅವತರಿಸಿದಳು.''

''ಶ್ರೀಹರಿಯ ಜ್ಯೇಷ್ಠಪುತ್ರನಾದ ಭೀಮಸೇನನಿಗೆ ಸಮರು ಯಾರೂ ಇಲ್ಲ. ಶಿಲ್ಪಶಾಸ್ತ್ರ, ಜ್ಞಾನ, ಮೋಕ್ಷ ವಿಷಯಕಜ್ಞಾನ ಮೊದಲಾದುದರಲ್ಲಿ ಭೀಮನನ್ನು ಬಿಟ್ಟರೆ ನೇಗಿಲು ಧರಿಸಿದ ಬಲರಾಮನ ಹೊರತು ಬೇರೊಬ್ಬರಿಲ್ಲ''.

''ಬಲರಾಮನ ಅಪ್ಪಣೆಯಂತೆ ಬೀಭತ್ಸನು (ಅರ್ಜುನನು) ನಿನ್ನ ಬಳಿ ಬಂದು ನಿನ್ನ ಅನುಮತಿ ಪಡೆದು ತನ್ನನ್ನು ಗೆಲ್ಲುವರೇ ಇಲ್ಲದಂತಾದನು. ಭೀಮ, ಬೀಭತ್ಸನು ಶ್ರೀಕೃಷ್ಣನಿಂದಲೂ ಅನುಮತಿ ಮತ್ತು ಅವನ ಅನುಗ್ರಹ ಪಡೆದಿದ್ದರಿಂದ ಸಕಲ ವಿದ್ಯೆಗಳು, ಪರಾಕ್ರಮ, ಬಲಾದಿ ವೀರೋಚಿತಗುಣಗಳಲ್ಲಿ ನಿನ್ನನ್ನು ಬಿಟ್ಟರೆ ಈ ಅರ್ಜುನನು ಮೂರನೆಯ ವೀರನೆನಿಸಿರುವನು. ಇವನನ್ನು ಬಿಟ್ಟರೆ ಬೇರೊಬ್ಬ ವೀರನಿಲ್ಲ''. (ಧರ್ಮರಾಜನ ವಚನ).

''ಭೀಮಾರ್ಜುನರಿಬ್ಬರು ಮಾತ್ರ ಗಾಂಡೀವ ಧನುಸ್ಸಿಗೆ ಹೆದೆಯೇರಿಸಿ ಲಕ್ಷವೇಧದಲ್ಲಿ ಪ್ರವೀಣರು. ಮತ್ತು ನೀನೊಬ್ಬನು ಮಾತ್ರ ಅವರಲ್ಲಿ ಪ್ರವೀಣನಾಗಿರುವೆ. ನಿಮ್ಮನ್ನು ಬಿಟ್ಟರೆ ಅದು ಬೇರೆಯವರಿಗೆ ಶಕ್ಯವಾಗದು''. (ದ್ರೌಪದಿಯು ಕೃಷ್ಣನಿಗೆ ಹೇಳಿದ ವಚನ).

''ವಾಸುದೇವನ ತರುವಾಯ ಲೋಕದಲ್ಲಿ ಇಬ್ಬರು ಪುರುಷರು ಪ್ರಸಿದ್ಧರಾಗಿರುವರು. ಅವರಲ್ಲಿ ಭೀಮಸೇನ ಮೊದಲಿಗ. ಎರಡನೆಯವನು ರುದ್ರಾವತಾರನಾದ ಅಶ್ವತ್ಥಾಮ. ಅವರಿಗೆ ದೇವಲೋಕದ ಬಾಣಬತ್ತಳಿಕೆಗಳಿವೆ. ಮನುಷ್ಯ ಚಿಹ್ನೆಯ ಧ್ವಜವಿದೆ. ಬಿಲ್ಲುಗಳಲ್ಲಿ ಗಾಂಡೀವ ಧನುಸ್ಸು ಶ್ರೇಷ್ಠವಾದದ್ದು. ಆದ್ದರಿಂದ ದ್ರೋಣಪುತ್ರ ಅಶ್ವತ್ಥಾಮನಿಗಿಂತಲೂ ಅರ್ಜುನನು ಶ್ರೇಷ್ಠನು'' ಇತ್ಯಾದಿ ಅನಂತವಾಕ್ಯಗಳು ವಕ್ತವ್ಯಾರ್ಥ ಸಮರ್ಥನೆ ಮಾಡುವುವು. ದಿಕ್‌ಪ್ರದರ್ಶನಕ್ಕಾಗಿ ಮಾತ್ರ ಇಲ್ಲಿ ಕೆಲವಾಕ್ಯಗಳನ್ನು ಹೇಳಲಾಗಿದೆ. ಆದ್ದರಿಂದ ಪೂರ್ವೋಕ್ತ ಕ್ರಮದಂತೆ ಶ್ರೀಹರಿಯ ಸರ್ವೋತ್ತಮತ್ವವು ಸಿದ್ಧವಾಯಿತು.

ಇದರಿಂದ ಶ್ರೀಹರಿಯೇ ಪರಬ್ರಹ್ಮನೆಂದು ಪರಮಮುಖ್ಯವೃತ್ತಿಯಿಂದ ನಿರ್ಣಯಿಸಲ್ಪಟ್ಟಿತು. ಪೂರ್ಣಪ್ರಜ್ಞರು ಸಂಕ್ಷೇಪವಾಗಿ ಭಾರತಾಂತರ್ಗತ ಸದ್ವಾಕ್ಯಗಳನ್ನು ಶ್ರೀಹರಿಯ ಸರ್ವಗುಣ ಪರಿಪೂರ್ಣತ್ವ ನಿರ್ಣಯಕ್ಕಾಗಿ ಉದ್ಧರಿಸಿ ಹೇಳಿದ್ದಾರೆ.

ದೇಶಕಾಲಗುಣಗಳ ಅವಧಿರಹಿತನೂ, ಬ್ರಹ್ಮಾದಿದೇವತೆಗಳಿಗಿಂತ ಉತ್ತಮನೂ, ಭವಮೋಚಕನೂ ಆದ ಶ್ರೀಹರಿಯ ಪಾದಕಮಲಮಕರಂದವನ್ನು ಸೇವಿಸಿದ್ದರಿಂದಲೇ ಪಾಂಡವರು ಐಹಿಕಾಮುಷ್ಮಿಕಗಳಲ್ಲಿ ಸುಖಸಾಮ್ರಾಜ್ಯಭಾಗಿಗಳಾಗಿ ಮುದಿಸಿದರು. ಇಂತಹ ಶ್ರೀಹರಿಯು ಸುಪ್ರೀತನಾಗಲಿ.

ಹೀಗೆ ಶ್ರೀಮದಾಚಾರ್ಯರು ''ಮಹಾಭಾರತ ತಾತ್ಪರ್ಯ ನಿರ್ಣಯ''ದಲ್ಲಿ ವಿಸ್ತಾರವಾಗಿ ನಿರೂಪಿಸಿರುವ ವಿಚಾರಗಳನ್ನು ಶ್ರೀಮಂತ್ರಾಲಯ ಶ್ರೀಪಾದಂಗಳವರು ತಮ್ಮ ಗ್ರಂಥದಲ್ಲಿ ಅವುಗಳ ಭಾವಗಳನ್ನು ಸಂಗ್ರಹಿಸಿ ನಿರೂಪಿಸಿ ಮಹೋಪಕಾರ ಮಾಡಿದ್ದಾರೆ.

***ಮಹಾಭಾರತ ತಾತ್ಪರ್ಯ ನಿರ್ಣಯದ ಎರಡನೆಯ ಅಧ್ಯಾಯದ ಕಥಾಸಂಗ್ರಹವು ಮುಗಿದುದು.***

॥ ಶ್ರೀಕೃಷ್ಣಾರ್ಪಣಮಸ್ತು ॥



## ತೃತೀಯಾಧ್ಯಾಯಭಾವಸಂಗ್ರಹ

*ಅವತಾರಿಕೆ:-*

ಶ್ರೀಗುರುಸಾರ್ವಭೌಮರು ಈಗ 'ಆದೌ' ಎಂಬ ಪದ್ಯದಿಂದ "ತಾತ್ಪರ್ಯನಿರ್ಣಯದ ತೃತೀಯಾಧ್ಯಾಯ"ವನ್ನು ಸಂಗ್ರಹಿಸಿ ನಿರೂಪಿಸುತ್ತಾರೆ.

**ಆದೌ ರೂಪಚತುಷ್ಟಯೀ ಸೃಜತಿ ಯೋ ದೇವಾನ್ ಪುರಾನುಕ್ರಮಾತ್**
**ಬ್ರಹ್ಮಾಂಡಂ ಪುರಮಬ್ಜಜಾದಿವಿಬುಧಾನ್ ಸೃಷ್ಟ್ವಾ ಹರತ್ಯಂತತಃ ।**
**ಸ್ರಷ್ಟಾ ಪೂರ್ವವದಸ್ಯ ಸರ್ವಜಗತೋ ಮತ್ಸ್ಯಾದಿರೂಪೋಽಭವ-**
**ದ್ರಾಮೋಽಭೂದನುಜಾನ್ವಿತೋ ದಶರಥಾತ್ ಪಾಯಾತ್ಸ ನಃ ಶ್ರೀಪತಿಃ ॥ 3 ॥**

***ಅನ್ವಯಾರ್ಥ*** :- **ಆದೌ** = ಸೃಷ್ಟಿಗೆ ಮೊದಲು, **ರೂಪಚತುಷ್ಟಯೀ** = ವಾಸುದೇವಾದಿ ನಾಲ್ಕು ರೂಪಗಳುಳ್ಳ, **ಯಃ** = ಶ್ರೀಮನ್ನಾರಾಯಣನು, **ಪುರಾನುಕ್ರಮಾತ್** = ಪೂರ್ವಕಲ್ಪದ ಕ್ರಮವನ್ನು ಅನುಸರಿಸಿ, **ದೇವಾನ್** = ಬ್ರಹ್ಮಾದಿ ದೇವತೆಗಳನ್ನು, **ಸೃಜತಿ** = ಸೂಕ್ಷ್ಮರೂಪದಿಂದ ಸೃಷ್ಟಿಸುವನೋ, **ಬ್ರಹ್ಮಾಂಡಂ ಪುರಂ ಚ** = ಬ್ರಹ್ಮಾಂಡಭುವನವನ್ನು ಸಹ, **ಸೃಜತಿ** = ಸೃಷ್ಟಿ ಮಾಡುವನೋ, **ತತಃ** = ಅನಂತರ, **ಅಬ್ಜಜಾದಿವಿಬುಧಾನ್** = ಕಮಲೋದ್ಭವನಾದ ಬ್ರಹ್ಮದೇವರೇ ಮೊದಲಾದ ದೇವತೆಗಳನ್ನು, **ಸೃಷ್ಟ್ವಾ** = ಸೃಷ್ಟಿ ಮಾಡಿ, **ಅಂತತಃ** = ಪ್ರಲಯಕಾಲದಲ್ಲಿ, **ಹರತಿ** = ನಾಶಗೊಳಿಸುವನೋ, **ಪೂರ್ವವತ್** = ಮೊದಲಿನಂತೆ, **ಅಸ್ಯ** = ಈ, **ಸರ್ವಜಗತಃ** = ಸಕಲ ಜಗತ್ತಿನ, **ಸ್ರಷ್ಟಾ** = ಸೃಷ್ಟಿಕರ್ತನಾದ, **ಯಃ** = ಶ್ರೀನಾರಾಯಣನು, **ಮತ್ಸ್ಯಾದಿರೂಪೋ** = ಮತ್ಸ್ಯಾದ್ಯನೇಕರೂಪನು, **ಅಭವತ್** = ಆದನೋ, **ದಶರಥಾತ್** = ದಶರಥ ಮಹಾರಾಜನ ದೆಸೆಯಿಂದ. **ಅನುಜಾನ್ವಿತಃ** = ಲಕ್ಷ್ಮಣಾದಿ ಅನುಜರಿಂದೊಡಗೂಡಿ, **ರಾಮಃ ಅಭವತ್** = ಶ್ರೀರಾಮನಾದನೋ, **ಸಃ** = ಅಂಥ, **ಶ್ರೀಪತಿಃ** = ಕಮಲಾಪತಿಯು, **ನಃ** = ನಮ್ಮನ್ನು, **ಪಾಯಾತ್** = ಕಾಪಾಡಲಿ.

***ತಾತ್ಪರ್ಯ*** :- ಸೃಷ್ಟಿಗೆ ಮೊದಲು ವಾಸುದೇವ, ಸಂಕರ್ಷಣ , ಪ್ರದ್ಯುಮ್ನ, ಅನಿರುದ್ಧರೆಂಬ ನಾಲ್ಕು ರೂಪಯುಕ್ತನಾದ ಶ್ರೀಮನ್ನಾರಾಯಣನು ಪೂರ್ವಕಲ್ಪದ ಕ್ರಮವನ್ನು ಅನುಸರಿಸಿ ಸೂಕ್ಷ್ಮರೂಪದಿಂದ ಬ್ರಹ್ಮಾದಿದೇವತೆಗಳನ್ನೂ ಬ್ರಹ್ಮಾಂಡ-ವನ್ನೂ ಸೃಷ್ಟಿಮಾಡಿ ಅನಂತರ ಕಮಲೋದ್ಭವನಾದ ಶ್ರೀಬ್ರಹ್ಮದೇವರೇ ಮೊದಲಾದ ದೇವತೆಗಳನ್ನು ಸೃಜಿಸಿ, ಕೊನೆಗೆ ಪ್ರಳಯಕಾಲದಲ್ಲಿ ಸರ್ವವನ್ನೂ ನಾಶಪಡಿಸುವನು. ಮತ್ತೆ ಮೊದಲಿನಂತೆ ಈ ಸಕಲ ಜಗತ್ತಿನ ಸೃಷ್ಟಿಕರ್ತನಾದ ಶ್ರೀನಾರಾ-ಯಣನು ಮತ್ಸ್ಯ-ಕೂರ್ಮಾದಿ ಅನೇಕರೂಪನೂ, ದಶರಥನ ದೆಸೆಯಿಂದ ಲಕ್ಷ್ಮಣಾದಿ ಸಹೋದರರಿಂದೊಡಗೂಡಿ ಶ್ರೀರಾಮಚಂದ್ರನೆಂಬ ಹೆಸರಿನಿಂದ ಅವತಾರ ಮಾಡಿದನು. ಅಂಥ ಶ್ರೀಲಕ್ಷ್ಮೀಪತಿಯು ನಮ್ಮನ್ನು ಕಾಪಾಡಲಿ ಎಂದು ಭಾವ.

## ತೃತೀಯಾಧ್ಯಾಯ ಕಥಾಸಂಗ್ರಹ

ಶ್ರೀ ಕಮಲಾಕಾಂತನು ಜನನರಹಿತನಾದರೂ ಶ್ರೀ ವೇದವ್ಯಾಸರೂಪದಿಂದ ಭುವಿಯೊಳು ಮೈದೋರಿ ವೇದವಿಭಾಗ ಪೂರ್ವಕವಾಗಿ ವೇದಾರ್ಥನಿರ್ಣಾಯಕಗಳಾದ ಬ್ರಹ್ಮಸೂತ್ರಗಳನ್ನು ವಿರಚಿಸಿದನು. ಅದರಂತೆ ಭಾರತ-ಪುರಾಣಗಳನ್ನೂ ರಚಿಸಿ ಪದ್ಮೋದ್ಭವ-ಭವಾದಿ ದೇವತೆಗಳು ಮತ್ತು ಸಜ್ಜನರಲ್ಲಿ ಪರಬ್ರಹ್ಮಜ್ಞಾನ ಪ್ರಕಾಶ ಪ್ರಸರದಿಂದ ಯುಕ್ತನಾಗಿ, ದೇಶ

ಕಾಲ ಅವಧಿರಹಿತನೂ, ಅನಂತಕಲ್ಯಾಣ ಗುಣಮಂಡಲನೂ, ಜ್ಞಾನ ಕಿರಣಮಾಲಾಧಾರಿಯೂ ಆಗಿ ಸರ್ವದಾ ಉದಯಿಸಿದ್ದಾನೆ. ತನ್ನನ್ನು ಸ್ಮರಿಸುವವರ ಮನಸ್ಸಿನ ಕಗ್ಗತ್ತಲೆಯನ್ನು ಪರಿಹರಿಸುತ್ತ ಲೌಕಿಕ ಸೂರ್ಯನಿಗಿಂತಲೂ ಅತ್ಯಧಿಕ ಮಹಿಮಾಯುಕ್ತನಾದ ಶ್ರೀ ವೇದವ್ಯಾಸ ಭಾಸ್ಕರನು ಉಳಿದೆಲ್ಲ ಸುರರಗಿಂತ ಶ್ರೇಷ್ಠನಾಗಿ ರಾರಾಜಿಸುವನು.

ಶ್ರೀಹರಿಯು ಶ್ರೀರಾಮಚಂದ್ರನಾಗಿ ಭೂಮಿಯಲ್ಲಿ ಅವತರಿಸಿ ಲೌಕಿಕ ಚಂದ್ರನಿಗಿಂತ ಶ್ರೇಷ್ಠನಾಗಿ ಪ್ರಕಾಶಿಸುವನು. ರಾಮಚಂದ್ರನ ಬಿಂಬವು ಯಾವಾಗಲೂ ಕಂದದೆ ಆನಂದರೂಪ ಪ್ರಸರಣ ಹಾಗೂ ನಿರತಿಶಯ ಶ್ರೀಮಂತಿಕೆ ಕಾಂತಿಗಳಿಂದ ವಿರಾಜಿಸಿ ಅನಾದಿಕಾಲದಿಂದಲೂ ಉದಯಿಸಿರುವುದು. ಶ್ರೀರಾಮನು ನೆನೆದವರ ಭವತಾಪ, ಅನಿಷ್ಟಾದಿಗಳನ್ನೂ, ಶತ್ರುಗಳನ್ನೂ ಹೊಡೆದೋಡಿಸಿ, ಸ್ವರೂಪಾನಂದದ ಬೆಳಕನ್ನಿತ್ತು ಕಾಪಾಡುವನು. ಇಂತು ಶ್ರೀರಾಮಚಂದ್ರನು ಲೌಕಿಕ ಚಂದ್ರನಿಗಿಂತ ಮಿಕ್ಕ ವಿಶೇಷ ಮಹಿಮಾಪೂರ್ಣನಾಗಿ ಸಕಲದೇವತೆಗಳಿಗಿಂತ ಅಧಿಕನಾಗಿ ರಾರಾಜಿಸುವನು.

ಶ್ರೀಕೃಷ್ಣನೆಂಬ ಹೆಸರಿನಿಂದ ಅವತರಿಸಿದ ಶ್ರೀಕಾಂತನು ಪ್ರಸಿದ್ಧ ಸಮುದ್ರಗಳನ್ನೂ ಮೀರಿ ಮುಖ್ಯ ಸಮುದ್ರನಾಗಿ ರಾಜಿಸುವನು. ಶ್ರೀಕೃಷ್ಣ ಸಮುದ್ರವು ಅಗಣಿತ ಉತ್ಕೃಷ್ಟ ಬಲವೆಂಬ ಆಳವೂ ವಿಸ್ತಾರವೂ ಆದ ಜಲರಾಶಿಯಿಂದ, ಉನ್ನತ ಗುಣರೂಪ ಶ್ರೇಷ್ಠಜ್ಞಾನಾನಂದ ರತ್ನಾಕರವಾಗಿ ಸ್ವಾತಂತ್ರ್ಯಯುಕ್ತವಾಗಿರುವುದು. ಸರ್ವದಾ ಮಳೆಗಾಲ ಬೇಸಿಗೆಯೆನ್ನದೆ ಆತ್ಮತತ್ವಜ್ಞಾನಿಗಳೆಂಬ ಯೋಗಿರೂಪ ನದಿಗಳು ಈ ಮಹಾ ಸಮುದ್ರಕ್ಕೆ ಬಂದು ಸೇರುತ್ತಲೇ ಇರುವುವು. ಈ ಮಹಾಸಾಗರಕ್ಕೆ ಏರಿಳಿತಾದಿಗಳಿಲ್ಲ. ಇಂತು ಕೃಷ್ಣರೂಪ ಮಹಾ ಸಮುದ್ರವು ಉಳಿದೆಲ್ಲ ಸಮುದ್ರಗಳನ್ನೂ ಜಯಿಸಿ ರಾರಾಜಿಸುವುದು.

ಸಮಸ್ತ ಕಲ್ಯಾಣ ಗುಣಪೂರ್ಣನಾದ ಶ್ರೀ ನಾರಾಯಣನನ್ನೂ, ಕ್ರೀಡಾದಿಗುಣಪೂರ್ಣಳಾದ ಶ್ರೀ ಲಕ್ಷ್ಮೀದೇವಿಯನ್ನೂ, ನರೋತ್ತಮನಾದ ಶ್ರೀ ವಾಯುದೇವನನ್ನೂ, ನರಾಂಶನಾದ ಶೇಷನನ್ನೂ ಸರಸ್ವತಿ ಎನಿಸಿದ ಶ್ರೀ ಭಾರತಿಯನ್ನೂ, ಶ್ರೀನಾರಾಯಣಾವತಾರಿಗಳಾದ ಶ್ರೀ ವೇದವ್ಯಾಸದೇವರನ್ನೂ ನಮಿಸಿ ಜಯನಾಮಕ ಗ್ರಂಥವನ್ನು ನಿರೂಪಿಸುವೆನು. ಹಿಂದೆ ದೇವಸಭೆಯಲ್ಲಿ ತೂಗಿದಾಗ ಮಹತ್ತು ಬೃಹತ್ತುಗಳಿಂದ ಇತರೆಲ್ಲ ಗ್ರಂಥಗಳನ್ನೂ ಜಯಿಸಿದ್ದರಿಂದ ಈ ಭಾರತಕ್ಕೆ ಜಯವೆಂಬ ಹೆಸರುಂಟಾಯಿತು. ಶ್ರೀಕೃಷ್ಣದ್ವೈಪಾಯನ ವಿರಚಿತವಾದ ಇತಿಹಾಸವೇ ಜಯ ಎಂಬ ಹೆಸರಿನಿಂದ ರಾರಾಜಿಸಿದೆ. ವಾಯುದೇವನಿಗೆ ನರೋತ್ತಮನೆಂದು ಹೆಸರು. ಶ್ರೀ ಲಕ್ಷ್ಮಿಯನ್ನು ದೇವಿ ಎನ್ನುವರು.

ನಾರಾಯಣ-ವೇದವ್ಯಾಸರು ಭಿನ್ನರಾಗಿ ಕಂಡರೂ ಅವರು ಏಕವ್ಯಕ್ತ. ವಾಚ್ಯ-ವಕ್ತೃಸ್ವರೂಪವೇ ಇದಕ್ಕೆ ಸಾಧಕವಾಗಿದೆ. ಭಾರತದಲ್ಲಿ ನಾರಾಯಣನ ಮಹಿಮೆ ಉಕ್ತವಾಗಿರುವುದರಿಂದ ಅವನು ವಾಚ್ಯನಾಗಿದ್ದಾನೆ. ಹೇಳುವವರು ವೇದ-ವ್ಯಾಸರಾದ್ದರಿಂದ ಅವರು ವಕ್ತಾ ಎನಿಸಿರುವರು. ಇವರಿಬ್ಬರ ಸಂಬಂಧವು ಮಹಾಭಾರತದಲ್ಲಿ ಹಾಸುಹೊಕ್ಕಾಗಿ ಬೆಳೆದುಬಂದಿದೆ. ವ್ಯಾಸರಿಂದ ಭಾರತವನ್ನು ಕೇಳಿ ಅದರ ಅರ್ಥವನ್ನು ಸಾಧಿಸುವವರು ಶುಕಮುನಿ ಮುಂತಾದ ಸಾಧಕರು. ಇಂಥ ಸಾಧಕರೆಲ್ಲರಿಗೂ ಸ್ವಾಮಿಯು ನರೋತ್ತಮನಾದ ಶ್ರೀ ಪವಮಾನನು. ಸಾಧಕರಿಂದ ಭಗವತ್ತತ್ತ್ವೋಪದೇಶ ಪಡೆಯಲಾಗದವರಿಗೆ ಉಪದೇಶಿಸುವವರಿಗೆ 'ಉಪಸಾಧಕ'ರು ಎಂದು ಹೆಸರು. ಭಗವಂತನಿಂದಲೇ ಸಾಕ್ಷಾತ್ ಉಪದೇಶ ಪಡೆಯುವುದರಿಂದ ವಾಯುದೇವರು ಸಾಧಕರು. ಅವರಿಂದ ಉಪದೇಶ ಪಡೆಯುವುದರಿಂದ ಶೇಷದೇವರು ಉಪಸಾಧಕರು, ಲೋಕದ ಸಕಲ ಮಾನವರಿಗೆ ಲಕ್ಷ್ಮೀದೇವಿ ಸಂಪದ್ರೂಪಳು, ಸರಸ್ವತಿಯು ವಾಗ್ರೂಪಳು, ಅವಳೇ ಭಾರತದ ನುಡಿಗಳಿಗೆ ಅಭಿಮಾನಿ ದೇವತೆ. ಆದ್ದರಿಂದ ಇವರೆಲ್ಲರೂ ನಮನಾರ್ಹರು.

ಈ ಗ್ರಂಥದಲ್ಲಿ ವಾಸಿಷ್ಠ-ಯಾದವ ಕೃಷ್ಣರು, ಸತ್ಯಭಾಮಾ, ರುಕ್ಮಿಣಿ, ಭೀಮಸೇನ, ಅರ್ಜುನ, ಬಲರಾಮ, ಶೇಷ ಮತ್ತು ದ್ರೌಪದೀದೇವಿ – ಇವರ ಕಥೆಯು ನಿರೂಪಿಸಲಾಗಿದೆ. ಪ್ರಥಮಾಧ್ಯಾಯದಲ್ಲಿ ಶ್ರೀ ನಾರಾಯಣನ ಸರ್ವೋತ್ತಮತ್ವಾದಿ

ನಿರ್ಣಯವನ್ನೂ ಭಾರತ ವಾಕ್ಯೋದ್ಧಾರವನ್ನೂ, ದ್ವಿತೀಯಾಧ್ಯಾಯದಲ್ಲಿಯೂ ಸಹ ಮಾಡಿ ಈಗ ನನ್ನ ಮೂರನೆಯ ಅವತಾರವಾದ ಆನಂದತೀರ್ಥ ಎಂಬ ಹೆಸರಿನಿಂದ ಧರೆಯೊಳಗುದಿಸಿ ಶ್ರೀಹರಿಯ ಪಾದಕಮಲಗಳನ್ನು ಸ್ಮರಿಸಿ ಶ್ರೀಭಗವತ್ಕಥೆಯನ್ನು ನಿರೂಪಿಸುವೆನು.

1. ವಾಸುದೇವ, 2. ಸಂಕರ್ಷಣ, 3. ಪ್ರದ್ಯುಮ್ನ, 4. ಅನಿರುದ್ಧರೆಂಬ ನಾಲ್ಕು ಬಗೆಯಾಗಿ ಗುಂಪುಗೂಡಿದ ಶ್ರೀಭಗವಾನ್ ನಾರಾಯಣನು ತಾನೇ ತಾನಾಗಿ ಮಾಯಾರೂಪದ ಸಿರಿದೇವಿಯೊಡನೆ ಕೂಡಿದನು. ಅವನು ವಾಸುದೇವ ನಾಮದಲ್ಲಿರುವಾಗ ಜಗತ್ತನ್ನು ಸೃಜಿಸುವ ಇಚ್ಛೆಯಿಂದ ಮಾಯಾ ಎಂಬ ಲಕ್ಷ್ಮೀದೇವಿಯು ಅವನಿಂದ ಬ್ರಹ್ಮದೇವರನ್ನು ಪ್ರಸವಿಸಿದಳು. ಸಂಕರ್ಷಣ ರೂಪಿ ಹರಿಯಿಂದ ಜಯಾನಾಮಕ ಲಕ್ಷ್ಮೀದೇವಿಯಲ್ಲಿ ಭಾವಿ ಬ್ರಹ್ಮನಾದ ವಾಯುದೇವನು ಬಲ-ಜ್ಞಾನಗಳಿಂದ ರಾಜಿಸಿ ಮೊದಲಿಗನಾಗಿ ಅವತರಿಸಿದನು. ಇವನಲ್ಲದೆ ಬೇರೊಬ್ಬ ವಾಯುದೇವರಿಲ್ಲ. ವಾಯುವಿಗೆ ಸೂತ್ರನೆಂದೂ, ವಿರಿಂಚನಿಗೆ ಪುರುಷನೆಂದೂ ಹೆಸರು. ಪರಮಾತ್ಮನ ಮೂರನೆಯ ರೂಪನಾದ ಪ್ರದ್ಯುಮ್ನನಿಂದ ಕೃತಿದೇವಿಯಲ್ಲಿ ಅವಳಿ ಹೆಣ್ಣುಮಕ್ಕಳು ಜನಿಸಿದರು. ದೊಡ್ಡವಳಿಗೆ ಪ್ರಕೃತಿ ಎಂದು ಹೆಸರು. ಸೃಷ್ಟಿಗೆ ಪ್ರಧಾನಳಾದ್ದರಿಂದ 'ಪ್ರಧಾನ' ಎಂದೂ ಅವಳನ್ನು ಕರೆಯುವರು. ಎರಡನೆಯವಳಿಗೆ ಶ್ರದ್ಧಾ ಎಂದು ಹೆಸರು. ಪ್ರಕೃತಿ (ಪ್ರಧಾನ) ಮತ್ತು ಶ್ರದ್ಧೆಯರು ಸೂತ್ರನಾಮಕ ವಾಯುದೇವರ ಪತ್ನಿಯರು. ಶ್ರೀಹರಿಯ ಆಜ್ಞೆಯಂತೆ ಇವರಲ್ಲಿ ಶೇಷನು ಜೀವನೆಂಬ ನಾಮದಿಂದಲೂ, ಕಾಲನೆಂಬುವನು ಸುಪರ್ಣನಾಮದಿಂದಲೂ ಜನಿಸಿದರು. ಸುಪರ್ಣನು ಶ್ರೀಹರಿಗೆ ವಾಹನವಾದನು. ಶೇಷನು ಶಯ್ಯೆಯಾದನು. ಶೇಷನಿಗೆ ಕಾಲ ಮೊದಲಾದ ವಿಷ್ಣುಕಿಂಕರರಾದ ಮಕ್ಕಳಾದರು. ಸುಪರ್ಣನಿಗೆ ಜಯ-ವಿಜಯರು ಪುತ್ರರಾದರು. ಇವರೂ ಶ್ರೀಹರಿಯ ಪಾದಕಿಂಕರರಾದರು. ಇವರು ಬ್ರಹ್ಮಾಂಡ ಸೃಷ್ಟಿಗೆ ಮೊದಲೇ ಜನಿಸಿದವರು. ಆದ ಕಾರಣ ವಿಷ್ಣು ಪಾದಸೇವಕರಾದ ಕಾಲ, ಜಯ-ವಿಜಯಾದಿಗಳು ಬ್ರಹ್ಮಾಂಡ ಸೃಷ್ಟಿಯಲ್ಲಿ ಸೇರಿದ ರುದ್ರಾದಿಗಳಿಗಿಂತ ಕಡಿಮೆ. ವಾಯುಪುತ್ರನಾದ ವಿಷ್ವಕ್ಸೇನನು ಆಕಾಶಾಭಿಮಾನಿ ವಿನಾಯಕನಿಗೆ ಸಮನು. ನಾರಾಯಣನ ಮೂರನೇ ವ್ಯೂಹದ ಪ್ರದ್ಯುಮ್ನನು ಅನಿರುದ್ಧನನ್ನು ಬ್ರಹ್ಮ ಕ್ಷತ್ರ ವೈಶ್ಯ ಶೂದ್ರಾದಿ ನಾಲ್ಕು ವರ್ಣಗಳ ಸಕಲದೇವತೆಗಳನ್ನೂ ಮತ್ತೆ ಸೃಷ್ಟಿಸಲು ಪಡೆದನು. ಇದಕ್ಕಿಂತ ಮೊದಲು ಪ್ರದ್ಯುಮ್ನನು ಜೀವ ಸಮೂಹವನ್ನು ಸೃಷ್ಟಿಸಲು ಕೊಟ್ಟಿದ್ದನು. ಅನಿರುದ್ಧನು ಅವನಿಂದ ಜೀವಸಮೂಹವನ್ನು ಸೃಜಿಸಲು ಅನುಜ್ಞೆ ಪಡೆದು ಅವುಗಳಿಗೆ ಅತ್ಯಂತ ಸೂಕ್ಷ್ಮ ದೇಹಗಳನ್ನು ಹೊಂದಿಸಿ ಸೃಜಿಸಿದನು. ಅದನ್ನು ಮತ್ತೆ ಪ್ರದ್ಯುಮ್ನನು ಪಡೆದು ತನ್ನ ಉದರದಲ್ಲಿ ಸೇರಿಸಿಕೊಂಡನು.

ಅನಿರುದ್ಧನು ಪ್ರದ್ಯುಮ್ನನಿಂದ ನಾಲ್ಕು ವರ್ಣದ ದೇವತೆಗಳನ್ನು ಸ್ವೀಕರಿಸಿ ತನ್ನ ಪತ್ನಿಯಾದ ಶಾಂತಿದೇವಿಯ ಉದರದಲ್ಲಿ ಬೀಜನ್ಯಾಸ ಮಾಡಿದನು. ಸತ್ವರಜಸ್ತಮಗಳೆಂಬ ತ್ರಿಗುಣಗಳಿಗೆ ಅಭಿಮಾನಿನಿಯಾದ ಶಾಂತಿದೇವಿಗೆ ಮೂರು ರೂಪಗಳುಂಟು. ಅವಳಲ್ಲಿ ವಿರಿಂಚನು ಸ್ಥೂಲರೂಪದಿಂದ ಜನಿಸಿದನು. ಈ ಬ್ರಹ್ಮದೇವನಿಗೆ ಸತ್ವಗುಣಮಯವಾದ ಮಹತ್ತತ್ವವೇ ಶರೀರವು. ವಾಗಭಿಮಾನಿಯಾದ ಸರಸ್ವತಿಯೂ ಜನಿಸಿದಳು. ಬ್ರಹ್ಮದೇವರು ಸರಸ್ವತಿಯಲ್ಲಿ ರುದ್ರದೇವರನ್ನು ಸೃಜಿಸಿದರು. ಅಹಂಕಾರತತ್ವವು ರುದ್ರದೇವರ ಶರೀರವು ಮತ್ತು ಬುದ್ಧ್ಯಭಿಮಾನಿನಿಯೂ, ರುದ್ರನ ಅರ್ಧಶರೀರಳೂ ಆದ ಉಮಾದೇವಿಯನ್ನೂ ಸೃಜಿಸಿದಳು. ವೈಕಾರಿಕ, ತೈಜಸ, ತಾಮಸವೆಂಬ ತ್ರಿವಿಧ ಅಹಂಕಾರಾಭಿಮಾನಿಯಾದ ರುದ್ರನು ಬುದ್ಧಿಯೆಂಬ ಉಮಾದೇವಿಯಲ್ಲಿ ಮನಸ್ತತ್ವ, ವೈಕಾರಿಕಾದಿ ಏಕಾದಶ ಇಂದ್ರಿಯಗಳು, ತದಭಿಮಾನಿದೇವತೆಗಳ ಶರೀರಗಳನ್ನೂ ಸೃಷ್ಟಿಸಿದನು. ದಶೇಂದ್ರಿಯಗಳು ತೈಜಸವೇ ವಿನಃ ಭೌತಿಕವಲ್ಲ. ಅವು ತೈಜಸಾಹಂಕಾರದಿಂದ ಪರಿಣಾಮ ಹೊಂದಿರುವುವು. ತಾಮಸಾಹಂಕಾರದಿಂದ ಪಂಚಮಹಾಭೂತಗಳನ್ನೂ ಅವುಗಳ ವಿಷಯಗಳು, ಸೂಕ್ಷ್ಮರೂಪದ ತನ್ಮಾತ್ರಾಗಳನ್ನೂ ಸೃಜಿಸಿದನು. ಮತ್ತೆ ಪುರುಷನೆಂಬ ವಿರಿಂಚಿಯಿಂದ ಪ್ರಕೃತಿಯೆಂಬ ಅವ್ಯಕ್ತಾಭಿಮಾನಿನಿಯಾದ ಸರಸ್ವತಿಯಲ್ಲಿ

ಶಿವನು ಜನಿಸಿದನು. ಅವನಿಂದ ಸಕಲ ದೇವತೆಗಳು ಜನಿಸಿದರು. ಇಂದ್ರಾದಿ ಸಕಲ ದೇವತೆಗಳು ಸೂತ್ರನಾಮಕ ವಾಯುವಿನಿಂದ ಮತ್ತೆ ಹುಟ್ಟಿದರು. ಪ್ರದ್ಯುಮ್ನನ ಪುತ್ರಿಯಾದ ಶ್ರದ್ಧಾದೇವಿಗೆ ಶೇಷ, ಶಿವ, ಇಂದ್ರಾದಿ ವೀರ ದೇವತೆಗಳು ಪುತ್ರರಾದರು. ಇನ್ನು ಮುಂದಿನ ದೇವತೆಗಳು, ಅಗ್ನಿಷ್ಟೋಮಾದಿ ಯಾಗಾಭಿಮಾನಿ ದೇವತೆಗಳು ಇಂದ್ರನಿಂದ ಉತ್ಪನ್ನರಾದರು.

ಮಾಯಾದೇವಿಯು ಸತ್ವರಜಸ್ತಮೋರೂಪದಿಂದ ಮತ್ತೆ ಮೂರು ಬಗೆಯವಳಾದಳು. ಸತ್ವಗುಣಾಭಿಮಾನಿನಿಯಾದ ಶ್ರೀದೇವಿಯಲ್ಲಿ ವಾಸುದೇವನಿಂದ ಶ್ರೀಹರಿಯು ತಾನೇ ರೂಪಾಂತರದಿಂದ ವಿಷ್ಣುವಾಗಿ ಜನಿಸಿದನು. ವಾಸುದೇವ-ವಿಷ್ಣುಗಳಿಗೆ ಭೇದವಿಲ್ಲ. ಯಾವನು ವಿರಿಂಚನಲ್ಲಿ ನೆಲೆಸಿರುವನೋ ಅವನೇ ವಿರಿಂಚನಾಮಕನಾಗಿ ರಜೋಗುಣಕ್ಕೆ ಅಭಿಮಾನಿನಿಯಾದ ಭೂದೇವಿಯಲ್ಲಿ ಜನಿಸಿದನು. ಶರ್ವನಲ್ಲಿರುವವನೇ ಶರ್ವನೆಂಬ ಹೆಸರಿನಿಂದ ತಮೋಗುಣಾಭಿ-ಮಾನಿನಿಯಾದ ದುರ್ಗಾದೇವಿಯಲ್ಲಿ ಜನಿಸಿದನು. ಹೀಗೆ ತ್ರಿಮೂರ್ತಿಗಳು ಭಗವದವತಾರವೆನಿಸಿ ವಿರಿಂಚನಲ್ಲಿದ್ದು ಸೃಷ್ಟಿ ಪ್ರೇರಕನಾಗಿ, ವಿಷ್ಣುವೆನಿಸಿ ಜಗತ್ಪಾಲಕನಾಗಿ, ಶರ್ವನೊಳಗಿದ್ದು ಸಂಹಾರಕರ್ತನಾಗಿ ರಾಜಿಸಿದರು. ಹೀಗೆ ಜನಿಸಿದ ದೇವತೆಗಳು ಬ್ರಹ್ಮಾಂಡವನ್ನು ಸೃಷ್ಟಿಸಲು ಅಶಕ್ತರಾಗಿ ಶ್ರೀಹರಿಯ ಬಳಿಸಾರಿ ಅವನನ್ನು ನುತಿಸಿದರು. ಬ್ರಹ್ಮಾಂಡದ ಹೊರಗಿನ ಸೃಷ್ಟಿಗೆ ಸೇರಿದ ಶೇಷ, ಗರುಡ, ಶಿವಾದಿ ದೇವತೆಗಳು ಮತ್ತೆ ಬ್ರಹ್ಮಾಂಡದೊಳಗಿನ ಸೃಷ್ಟಿಯಲ್ಲಿ ಬರಬಯಸಿದ್ದರಿಂದ ಎರಡು ಸಲ ಸೃಷ್ಟಿಯಾಗುವುದು.

''ಷಡ್ಗುಣೈಶ್ವರ್ಯ ಸಂಪನ್ನನಾದ ಪುರುಷೋತ್ತಮ! ಜಗತ್ತನ್ನು ವೈವಿಧ್ಯಪೂರ್ಣವಾಗಿ ಚಿತ್ರವಿಚಿತ್ರ ರೀತಿಯಿಂದ ಸೃಜಿಸುವ ಅಸೀಮ ಶಕ್ತಿವಂತನಾದ ನೀನು ನಮಗೆ ಶ್ರೇಷ್ಠವಾದ ಮಂದಿರವನ್ನು ನಿರ್ಮಿಸಿಕೊಡು'' ಎಂದು ದೇವತೆಗಳಿಂದ ಸ್ತುತನಾದ ಶ್ರೀಹರಿಯು ಮತ್ತೆ ಸೃಷ್ಟಿ ಮಾಡಲು ವಿಷ್ಣುವೆಂಬ ಹೆಸರಿನಿಂದ ಶ್ರೀದೇವಿಯನ್ನು ಹೊಂದಿದನು. ಆ ಶ್ರೀದೇವಿಯೇ ವಿಷ್ಣುವಿನ ಪ್ರಾಣ. ತೇಜಸ್ಸಿನ ಹಿರಣ್ಮಯವಾದ ಬ್ರಹ್ಮಾಂಡವನ್ನು ಶ್ರೀಹರಿಯ ನಾಭಿಯಿಂದ ಕ್ಷೀರ ಸಮುದ್ರದಲ್ಲಿ ಪ್ರಸವಿಸಿದಳು. ಅನಂತರ ಸಕಲ ದೇವತೆಗಳು ಶ್ರೀಹರಿಯೊಡನೆ ಆ ಬ್ರಹ್ಮಾಂಡದೊಳಗೆ ಸೇರಿದರು. ಶ್ರೀಹರಿಯ ನಾಭಿ ಮಧ್ಯದಲ್ಲಿ ಲೋಕರೂಪ ಕಮಲವೂ, ಅದರಲ್ಲಿ ಮತ್ತೆ ಸತ್ವಗುಣಮಯನಾದ ಬ್ರಹ್ಮದೇವರೂ ಜನಿಸಿದರು. ಬ್ರಹ್ಮನಿಂದ ಪುನಃ ಸಕಲದೇವತೆಗಳು ಜನಿಸಿದರು. ಕಮಲದಲ್ಲಿ ಜನಿಸಿದ ಬ್ರಹ್ಮನ ಶರೀರದಿಂದ ರುದ್ರಾದಿ ದೇವತೆಗಳು ಮೊದಲೂ, ವಾಯುದೇವರು ಕೊನೆಗೂ ಹೊರಬಂದರು. ವಾಯುದೇವರು ಹೊರಗೆ ಬಂದ ಕೂಡಲೇ ಆ ಶರೀರವು ನೆಲದಮೇಲೆ ಬಿದ್ದಿತು. ವಾಯುದೇವರು ಪುನಃ ಅದರಲ್ಲಿ ಪ್ರವೇಶಿಸಲು ಅದು ಎದ್ದು ಕುಳಿತಿತು. ಸಕಲ ತತ್ವಾಭಿಮಾನಿ ದೇವತೆಗಳು ಶರೀರವನ್ನು ಪ್ರವೇಶಿಸಿದ ಮೇಲೆ ಕೊನೆಗೆ ವಾಯುದೇವರು ಪ್ರವೇಶಿಸುವರು. ಸರ್ವರೂ ಹೊರಬಂದ ಮೇಲೆ ವಾಯುದೇವರು ನಿರ್ಗಮಿಸುವರು ಎಂಬ ನಿಯಮವಿರುವುದರಿಂದ ಅವರೊಬ್ಬರೇ ಸರ್ವದೇವತೆಗಳಿಗೆ ಪ್ರಧಾನರೆಂದು ಸಕಲ ದೇವಗಣಗಳೂ ಅವರನ್ನು ಆಶ್ರಯಿಸಿವೆ. ಶ್ರೀಹರಿ, ಬ್ರಹ್ಮದೇವರ ಮಧ್ಯ ಇತರ ದೇವತೆಗಳ ಪರವಾಗಿ ರಾಯಭಾರ ವಹಿಸಲು ವಾಯುದೇವರ ವಿನಃ ಮತ್ತೊಬ್ಬರಿಲ್ಲವಾದ್ದರಿಂದ ಅವರು ಅನ್ಯ ದೇವಾಧಿಪತಿಗಳೆನಿಸಿರುವರು.

ವಿಷ್ಣುವಿನಿಂದ ವಿರಿಂಚನೂ, ಅವನಿಂದ ಹದಿನಾಲ್ಕು ಲೋಕಗಳೂ ಜನಿಸಿದವು. ಮತ್ತೆ ಬ್ರಹ್ಮನಿಂದ ವೈಕಾರಿಕಾದಿ ತ್ರಿರೂಪಾಹಂಕಾರದಿಂದ ಶಿವಾದಿ ದೇವತೆಗಳೂ ಮತ್ತೆ ಋಷಿಗಳೂ ಹುಟ್ಟಿದರು. ಶ್ರೀಬ್ರಹ್ಮದೇವರು ಹುಟ್ಟಿದ ಕೂಡಲೇ ಅವರಿಗೆ 'ನಾನು ಶ್ರೀಹರಿಯ ದಾಸ' ನೆಂಬ ಬುದ್ಧಿಯುಂಟಾಯಿತು. ಆ ಕ್ಷಣದಲ್ಲೇ ಮೊದಲು ಶಿವನು ಜನಿಸಿದನು. ಆದ್ದರಿಂದ ಅವನಿಗೆ ''ಅಹಂಭವ'' ಎಂಬ ಹೆಸರಾಯಿತು. ಅನಂತರ ಶೇಷ-ಗರುಡರು, ನಂತರ ಉಮಾದೇವಿ, ಮಾನಸ-ಪುತ್ರರಾಗಿ ಇಂದ್ರ-ಕಾಮರೂ, ನಾರದಾದಿ ಮುನಿಗಳೂ, ಗುರು, ಮನು, ದಕ್ಷಪ್ರಜಾಪತಿ, ತರುವಾಯ ಅನಿರುದ್ಧಾದಿಗಳು

ಮಾನಸಪುತ್ರರಾಗಿ ಜನಿಸಿದರು. ಕಣ್ಣು ಕರ್ಣಗಳಿಂದ ಸೂರ್ಯಚಂದ್ರರೂ, ಸ್ಪರ್ಶದಿಂದ ಧರ್ಮ ಇವರು ಒಟ್ಟಿಗೆ ಹುಟ್ಟಿದರು. ನಾಲಿಗೆಯಿಂದ ವರುಣ, ನಾಸಾಪುಟಗಳಿಂದ ನಾಸತ್ಯ, ದಸ್ರ ಎಂಬ ಅಶ್ವಿನೀ ದೇವತೆಗಳು ಜನಿಸಿದರು. ಅನಂತರ ಮರೀಚಿ, ಪ್ರಧಾನರಾಗಿ ಸನಕ-ಸನಂದನ-ಸನತ್ಕುಮಾರ-ಸನತ್ಸುಜಾತರೆಂಬ ಯೋಗಿವರ್ಯರು, ಸಕಲ ದೇವತೆಗಳು ಕ್ರಮವಾಗಿ ಹುಟ್ಟಿದರು. ಅವರ ತರುವಾಯ ಅಸುರ, ದೈತ್ಯ, ದಾನವಾದಿಗಳು, ಋಷಿಗಳು, ಮಾನವರು ಹುಟ್ಟಿ ಬ್ರಹ್ಮನಿಂದ ಚಿತ್ರ ವಿಚಿತ್ರವಾದ ಜಗತ್ತು ಸೃಷ್ಟಿಯಾಯಿತು.

ಮೇಲಿನ ಕ್ರಮದಲ್ಲಿ ಮೊದಲು ಜನಿಸಿದವರು ತರುವಾಯ ಜನಿಸಿದವರಿಗಿಂತ ತಾರತಮ್ಯದಲ್ಲಿ ಉತ್ತಮರು. ಈ ನಿಯಮವು ಅಸುರರ ಗುಂಪಿಗೆ ಸಲ್ಲುವುದಿಲ್ಲ. ಇದು ತಾರತಮ್ಯೋಪೇತವಾದ ಆದಿಸೃಷ್ಟಿಯಲ್ಲಿ ಅನ್ವಯಿಸುತ್ತದೆ. ಯಾವುದಾದರೊಂದು ಕಾರಣದಿಂದ ಅನಂತರ ಸೃಷ್ಟಿಯಲ್ಲಿ ದೊಡ್ಡವನು ಸಣ್ಣವನಾಗಿ ಜನಿಸಿದರೆ ಅವನು ಯಾವ ವಿಧದಿಂದಲೂ ಕಡಿಮೆತನವನ್ನು ಹೊಂದುವುದಿಲ್ಲ. ಭೀಮಸೇನ ಧರ್ಮರಾಜನಿಗಿಂತ ಕಿರಿಯನಾಗಿಯೂ, ಅಶ್ವತ್ಥಾಮನು ದ್ರೋಣಪುತ್ರನಾಗಿಯೂ ಜನಿಸಿದಾಗ ಅವರ ಮೂಲರೂಪದ ತಾರತಮ್ಯಕ್ಕೆ ಕುಂದುಂಟಾಗಲಿಲ್ಲ.

ದೇವತೆಗಳು ಹಾಗೂ ಇತರ ಜೀವರ ಗುಣಗಳು ಕಾಲ ಪರಿಣಾಮ ಅಥವಾ ಮಾತಾಪಿತೃಗಳ ದೋಷ, ಇಲ್ಲವೇ ತಮ್ಮ ಕರ್ಮಪಾಕವಶದಿಂದ ಕುಂದುತ್ತದೆ. ಅವರಿಗೆ ಸೃಷ್ಟಿಯೂ ಮೊದಲಿನ ಕ್ರಮದಿಂದಾಗಿದ್ದರೆ, ಲಯವು ಕೊನೆಯ ಕ್ರಮದಿಂದಾಗುವುದು. ಉದಾಹರಣೆಗೆ ಹೇಳುವುದಾದರೆ ಶ್ರೀಹರಿಯಿಂದ ಲಕ್ಷ್ಮಿಯ ಸೃಷ್ಟಿಯಾಗಿರುವುದರಿಂದ ಪ್ರಳಯದಲ್ಲಿ ಅವಳು ಶ್ರೀಹರಿಯ ಸಹಾಯವನ್ನು ಪಡೆಯುವಳು. ಬ್ರಹ್ಮನು ಲಕ್ಷ್ಮಿಯ ಸಹಾಯವನ್ನೂ, ಶಿವನು ಬ್ರಹ್ಮನ, ಇಂದ್ರನು ಶಿವನ ಸಹಾಯ ಪಡೆಯುವರು. ಈ ಕ್ರಮವು ನಿರಂತರ ಪ್ರವಾಹದಲ್ಲಿ ಸಾಗಿದೆ. ಶ್ರೀಹರಿಗೆ ಆದ್ಯಂತಗಳಿಲ್ಲದ, ಎಣಿಸಲಾಗದ ರೂಪಗಳಿವೆ. ಅವನಿಗೆ ಶಿರಸ್ಸು ಅನಂತ. ಮುಖಗಳು, ಕರ, ಚರಣಾದಿಗಳು ಅನಂತವಾಗಿವೆ. ಅವನಿಗೆ ಅನಂತನೆಂಬ ಬಿರುದಿದೆ. ಸ್ವಗತಭೇದವಿವರ್ಜಿತನವನು. ಅಮಂದವೂ ಸಾಂದ್ರವೂ ಆದ ತನ್ನ ಆನಂದ ಸಂದೋಹವನ್ನು ಅನುಭವಿಸುತ್ತಾ ಅವನು ಯೋಗನಿದ್ರೆಯಿಂದ ರಾಜಿಸುವನು. ಅನಂತ ಗುಣಗಳಿಂದ ಬೆಳಗುವನು. ಅವನ ಶಕ್ತಿ ಅನಂತ. ಆನಂದಾನುಭವದಲ್ಲಿ ಅವನು ಪರಿಪೂರ್ಣ. ಸದಾ ಭೋಗಾನುಭವ ಮೂರ್ತಿಯಾಗಿ, ಚಿನ್ಮಯಾನಂದರೂಪದಲ್ಲಿ ನೆಲೆಸಿರುವನು. ಅವನು ಪದೇಪದೇ ಹೀಗೆ ಈ ಸ್ಥಾವರ ಜಂಗಮಾತ್ಮಕವಾದ ಸಕಲ ಜಗತ್ತನ್ನು ಸೃಷ್ಟಿಸುತ್ತಾನೆ. ಇಂತು ಈ ಜಗತ್ತಿನ ಪ್ರವಾಹವು ಅನಂತವಾಗಿ ನಡೆದುಬಂದಿದೆ.

ಚೇತನರು ನಾಶವಿಲ್ಲದವರು. ಪ್ರಕೃತಿ ಹಾಗೂ ಕಾಲ ನಾಶರಹಿತವಾಗಿರುವಾಗ ದೇವಾಧಿದೇವನು ನಿತ್ಯನೆಂಬುದಕ್ಕೆ ಕುಂದುಂಟೆ? ಸರ್ವನದಿಗಳೂ ಸಮುದ್ರದಿಂದ ಹುಟ್ಟಿ ಮತ್ತೆ ಸಮುದ್ರವನ್ನು ಸೇರುವಂತೆ ಜೀವರು ಪ್ರಕೃತಿ, ಕಾಲ ಮೊದಲಾದ ನಿತ್ಯ ವಸ್ತುಗಳು ಪರಮಾತ್ಮನಿಂದ ಹುಟ್ಟಿ ಕೊನೆಗೆ ಅವನನ್ನೇ ಸೇರುವುವು. ಈ ತತ್ವದಿಂದ ಜ್ಞಾನಿಗಳು ಪುರುಷೋತ್ತಮನ ನಿತ್ಯವೂ ಅನಂತವೂ ಆದ ಶಕ್ತ್ಯಾದಿಗಳನ್ನು ಮನಗಂಡರು. ಚೇತನರ ಪಾಪಕರ್ಮಲೇಪಾದಿ ದೋಷಗಳು ಭಗವಂತನ ಪ್ರಸಾದದಿಂದ ದಗ್ಧವಾಗಿ ಭಸ್ಮವಾಗುವುವು. ಆದಾದ ಕೂಡಲೇ ಚೇತನರು ಭಗವಂತನ ಸಾಮೀಪ್ಯವನ್ನೈದುವರು. ಆಗ ದೇವದೇವನು ಸಕಲದೋಷರಹಿತರಾದ ದೇವತೆಗಳನ್ನು ತನ್ನ ಸನ್ನಿಧಿಯಲ್ಲಿ ಇರಿಸಿಕೊಳ್ಳುವನು.

ಪರಮಾತ್ಮನು ಅಧಿಕಾರ-ಯೋಗ್ಯತೆಯುಳ್ಳ ಚೇತನರಿಗೆ ಅವರವರ ಗುಣಗಳಿಗನುಸರಿಸಿ ಪುನಃ ಅವರಿಗೆ ಯೋಗ್ಯ ಸ್ಥಾನಗಳಲ್ಲಿಯೇ ನೇಮಕ ಮಾಡುವನು. ಹೀಗೆ ಪುನಃ ಮರೀಚಿ ಋಷಿಗಳು ಪುತ್ರರಾದ ಕಶ್ಯಪರಿಂದ ಅದಿತಿ ದೇವಿಯಲ್ಲಿ ದೇವತೆಗಳೂ, ದಿತಿದೇವಿಯಲ್ಲಿ ದೈತ್ಯರೆಂಬ ಅಸುರರೂ ಜನಿಸಿದರು. ಗೋವುಗಳು, ಮೃಗ, ಪಕ್ಷಿ, ಸರ್ಪಾದಿ ಪ್ರಾಣಿಗಳು ದಾಕ್ಷಾಯಿಣಿ ದೇವಿಯಲ್ಲಿ ಜನಿಸಿದವು. ಅನಂತರ ಪ್ರಳಯಸಾಗರದಲ್ಲಿ ಮುಳುಗಿದ್ದ ಲಕ್ಷಯೋಜನ ವಿಸ್ತೀರ್ಣವಾದ ಘನ

ಭೂಮಿಯನ್ನು ಕಂಡೊಡನೆ ಚತುರ್ವಿಧ ನಾಶರಹಿತನಾದ ಶ್ರೀಹರಿಯು ಆದಿವರಾಹರೂಪವನ್ನು ಧರಿಸಿದನು. ಅನಂತರ ಬ್ರಹ್ಮದೇವರ ಸಹಾಯಾರ್ಥವಾಗಿ ಗಿರಿಮಾಲೆ ಧರಿಸಿದ ಈ ಭೂಮಿಯನ್ನು ಎತ್ತಿ ಹಿಡಿದು ಸಮುದ್ರದ ಘನೋದಕದ ಮೇಲೆ ಸ್ಥಿರವಾಗಿ ನಿಲ್ಲಿಸಿದನು. ಇದು ಶ್ವೇತವರಾಹರೂಪದಿಂದ ಅವನು ಮಾಡಿದ ಕಾರ್ಯ. ತರುವಾಯ ಪದ್ಮನಾಭನಾದ ಶ್ರೀವೈಕುಂಠನ ದ್ವಾರಪಾಲಕರಾದ ಜಯ-ವಿಜಯರು ಸನಕಾದಿಗಳ ಶಾಪದಿಂದ ಭೂಲೋಕದಲ್ಲಿ ಮೂರು ಬಾರಿ ಜನಿಸಿದರು.

ದಿತಿಯಲ್ಲಿ ಹಿರಣ್ಯಾಕ್ಷ-ಹಿರಣ್ಯಕಶಿಪು ಎಂಬ ರಾಕ್ಷಸರಾಗಿಯೂ, ನಂತರ ಶ್ರೀಕೃಷ್ಣನ ಸೋದರತ್ತೆಯಲ್ಲಿ ಶಿಶುಪಾಲ-ದಂತವಕ್ರರಾಗಿಯೂ ಜನಿಸಿದರು. ದ್ವಿತೀಯ ಪುತ್ರನಾದ ಹಿರಣ್ಯಾಕ್ಷನು ಮಹಾಪರಾಕ್ರಮಶಾಲಿಯಾದನು. ಮುಂದೆ ತ್ರೇತೆಯಲ್ಲಿ ಅವರೇ ವಿಶ್ರವಸನ ಪುತ್ರರಾಗಿ ರಾವಣ-ಕುಂಭಕರ್ಣರೆಂಬ ಹೆಸರಿನಿಂದ ಜನಿಸಿದರು.

ಹಿಂದೆ ಘನಭೂಮಿಯು ತಾನಾಗಿ ಸಮುದ್ರದಲ್ಲಿ ಮುಳುಗಲು ಆದನ್ನೆತ್ತಲು ಆದಿಶ್ವೇತವರಾಹರೂಪಿ ಶ್ರೀಹರಿಯು ಹೋಗುತ್ತಿರಲು ಬ್ರಹ್ಮಪುತ್ರನಾದ ಆದಿ ಹಿರಣ್ಯಾಕ್ಷನು ಅವನನ್ನು ತಡೆದುದರಿಂದ ಶ್ರೀಹರಿಯು ಅವನನ್ನು ಸಂಹರಿಸಿ ಭೂಮಿಯನ್ನು ಎತ್ತಿ ನಿಲ್ಲಿಸಿದನು. ಎರಡನೇ ಸಲ ಕಶ್ಯಪನ ಮಗನಾದ ಹಿರಣ್ಯಾಕ್ಷನು ಬಲವಂತವಾಗಿ ಭೂಮಿಯನ್ನು ಸಮುದ್ರದಲ್ಲಿ ಮುಳುಗಿಸಿದಾಗ ಶ್ರೀಹರಿಯು ನೀಲವರಾಹರೂಪವನ್ನು ಧರಿಸಿ, ಹಿರಣ್ಯಾಕ್ಷನನ್ನು ಸಂಹರಿಸಿ, ಭೂಮಿಯನ್ನು ಮತ್ತೆ ಮೇಲೆತ್ತಿ ನಿಲ್ಲಿಸಿದನು. ಇದು ದಶಾವತಾರಾಂತರ್ಗತವಾದ ಅವತಾರ. ಭೂಮಿಯನ್ನು ಅಪಹರಿಸಿದ ದೈತ್ಯರಿಬ್ಬರಿಗೂ ಹಿರಣ್ಯಾಕ್ಷರೆಂದೂ ಅವರನ್ನು ಸಂಹರಿಸಿದ ಶ್ರೀಹರಿಯ ಎರಡು ರೂಪಗಳಿಗೆ ವರಾಹ ಎಂದೂ ಹೆಸರು. ಅನಂತರ ಹಯಗ್ರೀವನೆಂಬ ಅಸುರನು ವೇದಗಳನ್ನು ಕದ್ದು ಸಮುದ್ರ ಮಧ್ಯದಲ್ಲಿ ಅಡಗಿ ಕುಳಿತನು. ಆಗ ಶ್ರೀಹರಿಯು ಮತ್ಸ್ಯಾವತಾರವನ್ನೆತ್ತಿ ಅವನನ್ನು ಸಂಹರಿಸಿ, ಆ ವೇದಗಳನ್ನು ಬ್ರಹ್ಮದೇವರಿಗೆ ಕೊಟ್ಟು ವೈವಸ್ವತಮನುವನ್ನೂ ಮುನಿಗಳನ್ನೂ ಕಾಪಾಡಿದನು. ಮತ್ಸ್ಯಾವತಾರವಾದ ನಂತರ ಅಮೃತಮಥನಕಾಲದಲ್ಲಿ ಮತ್ತೊಮ್ಮೆ ವೈವಸ್ವತಮನ್ವಂತರದಲ್ಲಿ ಪ್ರಳಯವಾದಾಗ ಸತ್ಯವ್ರತರಾಜನನ್ನು ಅನುಗ್ರಹಿಸಲು ಹರಿಯು ಮತ್ಸ್ಯಾವತಾರವನ್ನೆತ್ತಿ ದೋಣಿಯಲ್ಲಿದ್ದ ಸತ್ಯವ್ರತರಾಜನನ್ನು ಮತ್ತು ಸಪ್ತ ಋಷಿಗಳು, ಔಷಧಿ ಲತಾ ಬೀಜಗಳನ್ನು ರಕ್ಷಿಸಿ ವೈವಸ್ವತ ಮನುವಿಗೆ ಚಿನ್ಮಯರೂಪನಾದ ಶ್ರೀಹರಿಯು ಶ್ರೇಷ್ಠವೂ ವ್ಯಾಪಕವೂ ಆದ ತನ್ನ ಮಹಿಮೆಯನ್ನು ಹೊಗಳುವ ವೇದಗಳನ್ನು ಅನುಗ್ರಹಿಸಿದನು.

ಮುಂದೆ ಹಿರಣ್ಯಕಶಿಪುವು ಬ್ರಹ್ಮನನ್ನು ತಪಸ್ಸಿನಿಂದ ಮೆಚ್ಚಿಸಿ ವರ ಪಡೆದು ಸುರ-ನರ-ಮುನಿಗಳನ್ನು ಪೀಡಿಸಲು ಅವನ ಉಪಟಳವನ್ನು ತಾಳಲಾರದೆ ಅವರು ಬ್ರಹ್ಮದೇವರೊಡನೆ ಕರುಣಾಕರನಾದ ಶ್ರೀಹರಿಯ ಬಳಿಗೆ ಶರಣು ಬಂದು ದೈತ್ಯನಿಂದಾಗುತ್ತಿರುವ ತೊಂದರೆಯನ್ನು ವಿಜ್ಞಾಪಿಸಿದರು. ಆಗ ಭೀಮಪರಾಕ್ರಮಿಯಾದ ಪ್ರಭುವು ನರಹರಿರೂಪತಾಳಿ ಹಿರಣ್ಯಕಶಿಪುವನ್ನು ಸಂಹರಿಸಿ ಅವನ ಪುತ್ರನಾದ ಪ್ರಹ್ಲಾದನಿಗೆ ಅಭಯವಿತ್ತು ಸುರರಿಗೆ ಹರುಷವನ್ನು ತಂದಿತ್ತು ಸಲಹಿದನು. ಒಂದು ಸಲ ದೇವಾಸುರರು ಏಕಮತಿಗಳಾಗಿ ಸೇರಿ ಅಮೃತಾರ್ಥವಾಗಿ ಕ್ಷೀರಸಮುದ್ರದಲ್ಲಿ ಮಂದರ ಪರ್ವತವನ್ನಿಟ್ಟು ಕಡೆಯುತ್ತಿರಲು ಅದು ಸಮುದ್ರದಲ್ಲಿ ಮುಳುಗಿದ್ದರಿಂದ ದೇವಾಸುರರು ದುಃಖಿತರಾದರು. ರುದ್ರದೇವರ ವರದಿಂದ ಸಮುದ್ರದಲ್ಲಿ ಮುಳುಗಿದ ಗಿರಿಯನ್ನು ಮೇಲೆತ್ತಿ ಹೊತ್ತು ನಿಲ್ಲುವ ಸಾಮರ್ಥ್ಯ ಅವರ್‍ಯಾರಿಗೂ ಇಲ್ಲವಾಯಿತು. ಆಗ ಶ್ರೀಹರಿಯು ಕೂರ್ಮಾವತಾರ ತಾಳಿ ಸಕಲ ಬ್ರಹ್ಮಾಂಡವನ್ನೇ ಹೊರುವ ಬಲದಿಂದ ಮಂದರಗಿರಿಯನ್ನು ತನ್ನ ಬೆನ್ನಿನ ಮೇಲೆ ಹೊತ್ತು ಕಾಪಾಡಿದನು.

ಪ್ರಹ್ಲಾದನ ಪುತ್ರನಾದ ಬಲಿರಾಜನು ದೈತ್ಯ ಸಾಮ್ರಾಟನಾಗಿ ತಪಸ್ಸಿನಿಂದ ಬ್ರಹ್ಮದೇವರನ್ನು ಒಲಿಸಿ ಅಜೇಯತ್ವ ವರ ಪಡೆದು ಇಂದ್ರನನ್ನು ಜಯಿಸಿ ಅವನ ಸಂಪತ್ತನ್ನು ಕಿತ್ತುಕೊಂಡನು. ಆಗ ಶ್ರೀಹರಿಯು ಕಶ್ಯಪ-ಅದಿತಿಯರಿಗೆ ಇಂದ್ರನ

ತಮ್ಮನಾಗಿ ಅವತರಿಸಿದನು. ಜನನವಿಲ್ಲದ ಹರಿಯು ಅಜನೆನಿಸಿದ್ದರೂ ಬ್ರಹ್ಮಾದಿದೇವತೆಗಳ ಪ್ರಾರ್ಥನೆಯನ್ನು ನಿರರ್ಥಕ-ಗೊಳಿಸಲಿಚ್ಛಿಸದೆ ಮಹನೆನಿಸಿದ್ದರೂ ಅಣುರೂಪ (ವಾಮನ)ನಾಗಿ ಜನಿಸಿ ಬಲಿಯ ಯಾಗಶಾಲೆಗೆ ಬಂದು ಮೂರುಹೆಜ್ಜೆ ಭೂಮಿಯನ್ನು ದಾನಬೇಡಿ ತನ್ನ ಮೂರು ಪಾದಗಳಿಂದ ಎಲ್ಲೆಡೆ ವ್ಯಾಪಿಸಿ ತ್ರಿವಿಕ್ರಮನೆನಿಸಿ ತ್ರಿವಿಷ್ಟಪವನ್ನು ಮತ್ತೆ ಪಡೆದು ಅಣ್ಣನಾದ ಇಂದ್ರನಿಗೆ ನೀಡಿದನು. ಹಿಂದೆ ಪ್ರಹ್ಲಾದನು ''ಬಲಿಯಲ್ಲಿ ಅನುಗ್ರಹ ಮಾಡು'' ಎಂದು ಬ್ರಹ್ಮರುದ್ರಾದಿಗಳಿಗೆ ಪ್ರವರ್ತಕನಾದ ಶ್ರೀ ಕೇಶವನನ್ನು ಪ್ರಾರ್ಥಿಸಿದಾಗ ಹರಿಯು ''ಬಲಿಯನ್ನು ದಾನಬೇಡದೆ ಸೆರೆ ಹಿಡಿಯುವುದಿಲ್ಲ''ವೆಂದು ಹೇಳಿದ್ದರಿಂದ ಈಗ ಅವನಲ್ಲಿ ದಾನ ಬೇಡಿದನು.

ಪೂರ್ವದಲ್ಲಿ ಒಮ್ಮೆ ಅಸುರರು ರುದ್ರದೇವರನ್ನು ತಪದಿಂದ ಮೆಚ್ಚಿಸಿ ಅವರ ವರಬಲದಿಂದ ಅಜೇಯರಾಗಿ ಭೂಮಿಯಲ್ಲಿ ಕ್ಷತ್ರಿಯರಾಗಿ ಜನಿಸಿದರು. ಇಂದ್ರಾದಿದೇವತೆಗಳು ಅವರ ಕಾಟವನ್ನು ತಾಳಲಾರದೆ ಬ್ರಹ್ಮದೇವರನ್ನು ಮುಂದಿಟ್ಟುಕೊಂಡು ಶ್ರೀಹರಿಯಲ್ಲಿಗೆ ಬಂದು ಬಗೆಬಗೆಯಿಂದ ಅವನನ್ನು ಸ್ತೋತ್ರಮಾಡಿದರು. ''ದೇವ, ಬ್ರಹ್ಮಸೃಷ್ಟಿಯಲ್ಲಿನ ಯಾವುದರಿಂದಲೂ ಮರಣವಾಗಬಾರದೆಂದು ವರಪಡೆದು ಅವಧ್ಯರಾಗಿದ್ದ ಹಿರಣ್ಯಾಕ್ಷ ಹಿರಣ್ಯಕಶಿಪುಗಳನ್ನೂ ಮಹಾಪರಾಕ್ರಮಿಯಾಗಿದ್ದ ಹಯಗ್ರೀವನೆಂಬ ಮಹಾದೈತ್ಯನನ್ನೂ ಸಂಹರಿಸಿದ ನೀನು ಬ್ರಹ್ಮನಿಗಿಂತ ಪುರಾತನನಾಗಿರುವೆ. ಪ್ರಭು! ರುದ್ರವರದಿಂದ ಅವಧ್ಯರಾದ ಈ ಸಕಲ ಅಸುರರನ್ನು ನಿನ್ನ ಇತಿಮಿತಿಯಿಲ್ಲದ ಪರಾಕ್ರಮದಿಂದ ಸಂಹರಿಸಿ ನಮ್ಮ ಹೃತ್ಪುಂಡರೀಕದಲ್ಲಿ ಸ್ಥಿರವಾಗಿ ನೆಲೆಸು'' ಮುಂತಾಗಿ ಭಕ್ತಿಭರದಿಂದ ದೇವತೆಗಳು ಸ್ತುತಿಸಲು ಅಜೇಯನಾದ ಶ್ರೀಹರಿಯು ಶಾರ್ಙ್ಗ ಧನುವನ್ನು ಧರಿಸಿ ಭೃಗುಕುಲತಿಲಕನಾಗಿ ಪರಶುರಾಮನೆಂಬ ಹೆಸರಿನಿಂದ ಭುವಿಯೊಳವತರಿಸಿ ಕ್ಷತ್ರಿಯರೂಪ ಅಸುರನಿಕವನ್ನು ಸಂಹರಿಸಿ ಅವರ ರಕ್ತಪ್ರವಾಹದಿಂದ ಐದು ಮಡವುಗಳನ್ನೂ ಕುರುಕ್ಷೇತ್ರದಲ್ಲಿ ನಿರ್ಮಿಸಿ ಐದು ಗಂಡು ಹೊಳೆಗಳನ್ನೂ ಮಾಡಿದನು.

ಜಯ-ವಿಜಯರು ಸನಕಾದಿಗಳ ಶಾಪದಿಂದ ಹಿರಣ್ಯಾಕ್ಷ-ಹಿರಣ್ಯಕಶಿಪುಗಳಾಗಿ ಹುಟ್ಟಿ, ಹರಿಯು ವರವಿತ್ತಿದ್ದಂತೆ ಅವನಿಂದಲೇ ಹತರಾಗಿ ಮೊದಲ ಜನ್ಮದಿಂದ ಮುಕ್ತರಾಗಿ ಮತ್ತೆ ರಾವಣ-ಕುಂಭಕರ್ಣರೆಂಬ ರಾಕ್ಷಸರಾಗಿ ಹುಟ್ಟಿ ಬ್ರಹ್ಮವರದಿಂದ ಅವಧ್ಯರೂ ಅಜೇಯರೂ ಆಗಿ ಮೆರೆದರು. ಹಿಂದಿನ ಜನ್ಮದಲ್ಲಿ ನರ-ವಾನರರನ್ನು ಬಿಟ್ಟು ಇತರರಿಂದ ಅಜೇಯತ್ವವನ್ನು ಬ್ರಹ್ಮನಿಂದ ಪಡೆದಿದ್ದರಿಂದ ಈ ಜನ್ಮದಲ್ಲಿ ಬ್ರಹ್ಮದೇವರು ಅವರಿಗೆ ಹಿಂದಿನಂತೆಯೇ ನರ-ವಾನರರ ಹೊರತು ನಿಮಗೆ ಇತರರಿಂದ ಮರಣವಿಲ್ಲ'' ಎಂದು ಜಾಣತನದ ವರವನ್ನು ಕೊಟ್ಟಿದ್ದರು. ಆ ವರದಿಂದ ರಾವಣ-ಕುಂಭಕರ್ಣರು ಮತ್ತರಾಗಿ ದೇವತೆಗಳನ್ನು ತಲ್ಲಣಿಸಲಾರಂಭಿಸಿದರು. ಆಗ ಇಂದ್ರಾದಿ ದೇವತೆಗಳು ರುದ್ರ, ಬ್ರಹ್ಮರನ್ನು ಮುಂದೆ ಮಾಡಿಕೊಂಡು ಕ್ಷೀರಸಮುದ್ರಕ್ಕೆ ಹೋಗಿ ಶ್ರೀಹರಿಯನ್ನು ಪ್ರಾರ್ಥಿಸಿದರು. ''ದೇವದೇವ, ನೀನೇ ಸರ್ವಕ್ಕೂ ಮುಖ್ಯನಾಗಿರುವೆ. ಹಿರಿಯನೂ ಆಗಿರುವೆ. ಶ್ರೀಮಂತ, ಸಂಪತ್ಪ್ರದ, ಶ್ರೇಷ್ಠ, ಜಗತ್ತಿಗೆ ಆದ್ಯಂತನೂ ನೀನೆ ಆಗಿದ್ದೀಯೆ. ನಿನ್ನ ಆಜ್ಞೆಯಂತೆಯೇ ಸಕಲವೂ ಜರುಗುವುದು. ಹಿಂದಿನ ಕಲ್ಪದ ಬ್ರಹ್ಮದೇವರೂ ವೈರಿಗಳ ಬಲವನ್ನು ವರ್ಧಿಸಿದರು. ಮುಂಬರುವವರೂ ಅದನ್ನು ಬೆಳೆಸಲಿರುವರು. ಈಗಿನ ಬ್ರಹ್ಮದೇವರಂತೂ ಬೆಳೆಸುತ್ತಲೇ ಇರುವರು. ಇವೆಲ್ಲವೂ ನಿನ್ನ ಆಣತಿಯಿಂದಲೇ ಜರುಗುವುದು.

ದೇವ ಮನುಷ್ಯಮಾನದ 360 ವರ್ಷಗಳು ದೇವತೆಗಳಿಗೆ ಒಂದು ವರ್ಷ. ಇಂಥ ದೇವಮಾನದ 12 ಸಾವಿರ ವರ್ಷಗಳಾದರೆ ಒಂದು ಚತುರ್ಯುಗ. ದೇವಮಾನದಿಂದ 4 ಸಾವಿರ ವರ್ಷಕ್ಕೆ ಒಂದು ಯುಗವಾದರೆ ಕ್ರಮವಾಗಿ ಒಂದೊಂದು ಯುಗ ಪ್ರಕಾರ ಒಂದೊಂದು ಸಾವಿರ ವರ್ಷಗಳಂತೆ ಕಡಿಮೆಯಾಗುತ್ತ ಬರುವುದು. ಅನಂತರ ದೇವಮಾನದ ಒಂದು ಸಾವಿರ ವರ್ಷಕ್ಕೆ ಒಂದು ಪಾದವೆಂದು ನಿರ್ಧರಿಸಿದರೆ ಕೃತದಿಂದ ತ್ರೇತೆಗೆ ಒಂದು ಪಾದ ಕಡಿಮೆಯಾಗುವುದು.

ಆಗ ತ್ರೇತೆಗೆ 3 ಸಾವಿರ ವರ್ಷಗಳಿರುತ್ತದೆ. ಅಂದರೆ ಅದು ತ್ರಿಪಾದಿಯಾಗುವುದು. ಇದರಂತೆ ದ್ವಾಪರ ದ್ವಿಪಾದಿ ಕಲಿಯುಗ ಏಕಪಾದಿಯಾಗುವುದು. ಈ ಕ್ರಮದಲ್ಲಿ 10 ಸಾವಿರ ವರ್ಷಗಳೀಗ ಕಳೆದಿವೆ. ಅವನ್ನು 2 ಸಾವಿರ ವರ್ಷಗಳಿಂದ ಗುಣಿಸಿ ಬಂದ ಸಂಖ್ಯೆಯ ಮೊತ್ತವನ್ನು ನೂರರಿಂದ ಭಾಗಿಸಿದರೆ 2 ಸಾವಿರ ವರ್ಷಗಳಾಗುತ್ತವೆ. ಇದರಂತೆ ಅದನ್ನು ಪ್ರತಿಯುಗದ ಸಂಧಿಕಾಲದಲ್ಲಿ ವಿಭಾಗಿಸುತ್ತಾ ಬಂದರೆ ಕಲಿಯುಗ-ಕೃತಯುಗದ ಸಂಧಿಯಲ್ಲಿ ಎಂಟುನೂರು ವರ್ಷಗಳಾಗುತ್ತವೆ. ಕೃತ, ತ್ರೇತೆಗಳ ಸಂಧಿಯಲ್ಲಿ 600, ತ್ರೇತಾ ದ್ವಾಪರ ಸಂಧಿಯಲ್ಲಿ 400, ದ್ವಾಪರ ಕಲಿಯುಗ ಸಂಧಿಯಲ್ಲಿ 200 ವರ್ಷಗಳಾಗುವುದು. ಈ ಕ್ರಮದಲ್ಲಿ ಇವುಗಳ 12 ಸಾವಿರ ವರ್ಷಗಳಿಗೆ ಒಂದು ಚತುರ್ಯುಗವಾಗುವುದು. ಇಂತು ದೇವಮಾನದ ಚತುರ್ಯುಗಗಳು ಸಾವಿರ ಬಾರಿ ತಿರುಗಿದರೆ ಬ್ರಹ್ಮದೇವರಿಗೆ ಒಂದು ಹಗಲಾಗುವುದು. ಇದರಂತೆ ಮತ್ತೆ ಸಾವಿರಬಾರಿ ಉರುಳಿದರೆ ಒಂದು ರಾತ್ರಿಯಾಗುವುದು. ಅದು ಬ್ರಹ್ಮದೇವರಿಗೆ ಒಂದು ದಿನ. ಇದರಂತೆ ನೂರು ವರ್ಷಗಳಾದರೆ ಬ್ರಹ್ಮದೇವರಿಗೆ ಒಂದು ಪಟ್ಟವಾಗುತ್ತದೆ. ಹೀಗೆ ಹೇ ದೇವ, ನಿನ್ನ ಆಜ್ಞೆಯ ಪ್ರಕಾರ ಪ್ರತಿಬ್ರಹ್ಮರೂ ತಮ್ಮ ತಮ್ಮ ಸೃಷ್ಟಿಕರ್ತೃತ್ವಾದಿ ಭೋಗಗಳನ್ನು ಅನುಭವಿಸಿ ತಮ್ಮ ಅವಧಿ ಮುಗಿದ ಕೂಡಲೇ ನಿನ್ನ ಸನ್ನಿಧಿಗೆ ಬಂದು ಸೇರುವರು.

ಹಿಂದೆ ನಿನ್ನ ಕರ್ಣದಿಂದ ಜನಿಸಿದ ಮಧು-ಕೈಟಭರೆಂಬ ಮಹಾದೈತ್ಯರಲ್ಲಿ ನಿನ್ನ ಆಜ್ಞೆಯಂತೆ ವಾಯುದೇವರು ಆವಿಷ್ಟರಾದ್ದರಿಂದ, ಆ ದೈತ್ಯರು ಮಹಾಬಲಶಾಲಿಗಳಾಗಿ ಉದ್ಧಟತನದಿಂದ ಸಮುದ್ರದಲ್ಲಿ ಹೊಕ್ಕು ಕೊಬ್ಬಿ ಬೆಳೆದರು. ಬ್ರಹ್ಮದೇವರು ನಿನ್ನಾಣತಿಯಂತೆ ಅವರಿಗೆ ಅವಧ್ಯತ್ವ ವರ ಕೊಟ್ಟರು. ಆಗ ವೇದಗಳು ಬ್ರಹ್ಮದೇವರ ಮುಖದಿಂದ ಹೊರಹೊಮ್ಮಿದವು. ಆಗ ಉನ್ಮತ್ತರಾದ ಮಧು-ಕೈಟಭರು ವೇದಗಳನ್ನು ಕದ್ದು ಓಡುತ್ತಿರಲು ರುದ್ರನಿಗಿಂತ ಶ್ರೇಷ್ಠನಾದ ನೀನು ಹಯಗ್ರೀವರೂಪ ಧರಿಸಿ ಅವರನ್ನು ಸಂಹರಿಸಿ, ಸಕಲ ವೇದಗಳನ್ನು ಮರಳಿ ತಂದು ಬ್ರಹ್ಮದೇವರಿಗೆ ಕೊಟ್ಟಿದ್ದೀಯೆ. ಕಳ್ಳರಾಗಿದ್ದ ಮಧು-ಕೈಟಭರನ್ನು ಹಿಡಿದು ಹಿಸುಕಿ ಅವರ ತೊಡೆಗಳನ್ನು ಮುರಿದು ಅವರ ಮೇದಸ್ಸಿನಿಂದ ಮೇದನಿಯನ್ನು ಸೃಷ್ಟಿಸಿರುವೆ ! ಇಂತು ದೇವತೆಗಳ ಸ್ವಾಭಾವಿಕ ಬಲ, ದೇವತೆಗಳ ವರದಿಂದ ವರ್ಧಿಸಿದ ಅಸುರರ ಬಲ ಇವೆರಡೂ ನಿನಗೆ ಅಧೀನವಾಗಿವೆ. ಆದ್ದರಿಂದ ತಂದೆಯಾದ ನಿನಗೆ ನಾವಿದನ್ನು ವಿಜ್ಞಾಪಿಸುತ್ತಿದ್ದೇವೆ. ಈಗ ರಾವಣ ಕುಂಭಕರ್ಣರು ಬ್ರಹ್ಮದೇವರ ವರದಿಂದ ಬಹುಕೊಬ್ಬಿ ಉದ್ಧಟರಾಗಿರುವರು. ನೀನು ಮಾನವನಾಗಿ ಅವತರಿಸಿ ಅವರನ್ನು ಸಂಹರಿಸಬೇಕು'' - ಹೀಗೆ ದೇವತೆಗಳು ಪ್ರಾರ್ಥಿಸಲು ಶ್ರೀಹರಿಯು ಅವರ ಪ್ರಾರ್ಥನೆಯಂತೆ ಶ್ರೀರಾಮನಾಗಿ ಅವತರಿಸಿದನು.

ಕಶ್ಯಪ-ಅದಿತಿಯರಿಗೆ ವಿವಸ್ವತನೆಂಬ ಸೂರ್ಯನು ಪುತ್ರನಾಗಿ ಜನಿಸಿದನು. ಅಂತಹ ಸೂರ್ಯವಂಶದಲ್ಲಿ ಬಹು-ಧಾರ್ಮಿಕನಾದ ದಶರಥನೆಂಬ ರಾಜನು ಹುಟ್ಟಿದನು. ಅವನಿಗೆ ಬಹುಕಾಲ ಸಂತಾನವಾಗದಿರಲು ಕುಲಪುರೋಹಿತರಾದ ಶ್ರೀ ವಸಿಷ್ಠಮುನಿಗಳ ಉಪದೇಶದ ಪ್ರಕಾರವಾಗಿ ಶ್ರೀಹರಿಯು ಮಗನಾಗಬೇಕೆಂದಾಶಿಸಿ, ಪುತ್ರಕಾಮೇಷ್ಟಿಯಾಗವನ್ನು ನೆರವೇರಿಸಿ ಪರಮಾತ್ಮನನ್ನು ಸೇವಿಸಲು ಪ್ರಸನ್ನನಾದ ಶ್ರೀಕಮಲಾಪತಿಯು ದಶರಥನ ಪಟ್ಟದರಾಣಿಯಾದ ಕೌಸಲ್ಯಾ-ದೇವಿಯಲ್ಲಿ ಶ್ರೀರಾಮಚಂದ್ರನೆಂಬ ಅಭಿಧಾನದಿಂದ ಪುತ್ರನಾಗಿ ಅವತರಿಸಿದನು. ಶ್ರೀಹರಿಯ ಆಜ್ಞೆಯಂತೆ ಈ ಮೊದಲು, ದೇವತೆಗಳು ನರ-ವಾನರ-ಕರಡಿ ಮುಂತಾದ ರೂಪಗಳಿಂದ, ಅನಂತರ ಕೆಲದೇವತೆಗಳೂ ಸಹ ಜನಿಸಿದರು. ಮೈಂದ, ವಿವಿದ, ಜಾಂಬುವಂತ, ವಾಲಿ, ಸುಗ್ರೀವ, ಹನುಮಂತಾದಿಗಳು ಪ್ರಧಾನರಾದ್ದರಿಂದ ಗುಣಪೂರ್ಣನಾದ ಶ್ರೀಹರಿಯ ಸೇವೆಗಾಗಿ ಮೊದಲನೇ ಹುಟ್ಟಿದರು. ಅಂಗದಾದಿಗಳು ಅಧಿಕ ಸಂಖ್ಯೆಯಲ್ಲಿ ತರುವಾಯ ಬೇರೆ ಬೇರೆ ದ್ವೀಪಗಳಲ್ಲಿ ವಾನರರಾಗಿ ಹುಟ್ಟಿದರು. ನರರಲ್ಲಿ ಲಕ್ಷ್ಮಣಾದಿಗಳು ಶ್ರೀರಾಮನು ಜನಿಸಿದ ಮೇಲೆ ಹುಟ್ಟಿದರು.

ಹನುಮಂತನು ಸಕಲ ಸುರರಲ್ಲಿ ಅಗ್ರಗಣ್ಯನು. ಗುಣದಲ್ಲಿ ಶ್ರೇಷ್ಠನು. ವೈರಿಭಂಜಕನಾದ್ದರಿಂದ ಅವನಿಗೆ 'ಪ್ರಭಂಜನ'-ನೆಂಬ ಹೆಸರಿದೆ. ಹನುಮಂತನು ಸಕಲರಿಗೂ ಒಡೆಯನು. ಅವನು ಸ್ವತಃ ಶ್ರೀಹರಿಯ ಅಪ್ಪಣೆಯಂತೆ ಇತರರ

ಅಪೇಕ್ಷೆಯಿಲ್ಲದೆ ಕೇಸರಿ ಎಂಬ ವಾನರ ಪತ್ನಿಯಾದ ಅಂಜನಾದೇವಿಗೆ ಮಗನಾಗಿ ಜನಿಸಿದನು. ಇಂದ್ರನು ವಾಲಿಯಾಗಿ ಜನಿಸಿದನು. ಹಿಂದೆ ಬ್ರಹ್ಮದೇವರ ಹೃದಯದ ಚರ್ಮದಿಂದ 'ಧರ್ಮ' ಎಂಬ ನಾಮದಿಂದ ಜನಿಸಿದ್ದವನೇ ಈಗ ಬ್ರಹ್ಮದೇವರ ತೇಜಸ್ಸಿನಿಂದ ಯುಕ್ತನಾಗಿ ಅವರ ವದನದಿಂದ ಜಾಂಬವಂತನಾಗಿ ಜನಿಸಿದನು. ಅವನ ಪತ್ನಿಯಾದ ಸಂಜ್ಞಾದೇವಿಯಲ್ಲಿ ಯಮಧರ್ಮರಾಜನಾಗಿ ಜನಿಸಿದ್ದವನೇ ಮತ್ತೆ ಈಗ ಸೂರ್ಯಪುತ್ರನಾಗಿ ಸುಗ್ರೀವನೆಂಬ ಅಭಿಧಾನದಿಂದ ಜನಿಸಿದನು. ಬ್ರಹ್ಮದೇವರು ದೇವತೆಗಳ ಕಾರ್ಯ ನಿರ್ವಾಹಕನಾಗಿ ಜಾಂಬವಂತನನ್ನು ಸೃಷ್ಟಿಸಿದರು. ಸೂರ್ಯಸುತನಿಗೆ ಧರ್ಮ-ಯಮ ಎಂದು ಎರಡು ರೂಪಗಳಿವೆ. ಅನಂತರ ಬ್ರಹ್ಮದೇವರ ಕಿವಿಯಿಂದ ಅತ್ರಿ ಋಷಿಗಳ ನೇತ್ರದಿಂದ ಜನಿಸಿದ್ದ ಚಂದ್ರನು ಅಂಗದನಾಗಿ ಹುಟ್ಟಿದನು. ಹಿಂದೆ ಬೃಹಸ್ಪತಿಯು ಶಚೀದೇವಿಯ ಸಹಿತ ಮನಸ್ತತ್ವದಿಂದ ಹುಟ್ಟಿದ್ದರೂ ಈಗ ಬ್ರಹ್ಮಪುತ್ರನಾದ ಅಂಗಿರಮುನಿಗೆ ತಾರನೆಂಬ ಸುತನಾಗಿ ಜನಿಸಿದನು. ಮರೀಚಿ ಮುನಿಗಳ ಮಗನಾದ ಪುಲೋಮನ ಮಗಳೂ ಇಂದ್ರಸತಿಯೂ ಆದ ಶಚೀದೇವಿಯೇ ತಾರೆ ಎಂಬ ನಾಮದಿಂದ ಹುಟ್ಟಿದಳು. ದೇವಗುರು ಬೃಹಸ್ಪತ್ಯಾಚಾರ್ಯರೇ ತಾರನೆಂಬ ವಾನರರಾಗಿಯೂ, ವರುಣನು ಸುಷೇಣನಾಗಿಯೂ, ನಾಸತ್ಯ, ದಸ್ರರೆಂಬ ಅಶ್ವಿನೀ ದೇವತೆಗಳು ಈಗ ವಿವಿದ, ಮೈಂದರಾಗಿಯೂ ಜನಿಸಿದರು. ಬ್ರಹ್ಮ ದೇವರ ನಾಸಾಪುಟದಿಂದ ಜನಿಸಿದ್ದ ಅಶ್ವಿನೀ ದೇವತೆಗಳೇ ಈಗ ಮತ್ತೆ ಸೂರ್ಯನಿಂದ ಹುಟ್ಟಿದರು. ಹಿರಿಯವನಾದ ವಿವಿದನಿಗೆ ದೇವತೆಗಳ ವರ, ಇಂದ್ರನ ಆವೇಶವೂ ಸೇರಿದ್ದರಿಂದ ಅವನು ಸಣ್ಣವನಾದ ಮೈಂದನಿಗಿಂತ ಬಹು ಪರಾಕ್ರಮಿಯಾದನು.

ಬ್ರಹ್ಮದೇವರಿಂದ ಜನಿಸಿದ್ದ ಅಗ್ನಿಯು ನೀಲನಾಗಿ ಜನಿಸಿದನು. ಬ್ರಹ್ಮಮಾನಸಪುತ್ರನಾಗಿ ಕಾಮನು ಶ್ರೀಹರಿಯಿಂದ ಸಿರಿದೇವಿಯಲ್ಲಿ ಮತ್ತೆ ಪ್ರದ್ಯುಮ್ನನಾಗಿ, ಪುನಃ ಶಿವಪಾರ್ವತಿಯರಲ್ಲಿ ಸ್ಕಂದನಾಗಿ ಜನಿಸಿ ಪುನಃ ಚಕ್ರರೂಪನಾದನು. ಇದಕ್ಕೂ ಪೂರ್ವದಲ್ಲಿ ತಮೋಭಿಮಾನಿನಿಯಾದ ದುರ್ಗಾದೇವಿಯು ಶ್ರೀಹರಿಯ ಚಕ್ರರೂಪಳಾಗಿದ್ದಳು. ಸತ್ವಾಭಿಮಾನಿನಿಯಾದ ಶ್ರೀದೇವಿಗೆ ಲಕ್ಷ್ಮಿ ಎಂದು ಹೆಸರು. ಅವಳು ಶಂಖರೂಪಳಾದಳು. ರಜೋಭಿಮಾನಿನಿಯಾದ ಭೂದೇವಿಯು ಶ್ರೀಹರಿಗೆ ಪದ್ಮವಾದಳು. ಬಲಜ್ಞಾನರೂಪಿಯಾದ ವಾಯುದೇವನು ಗದೆಯಾದನು. ಸರ್ವಭೂತಗಳಲ್ಲಿ ವಿದ್ಯಾರೂಪದಿಂದ ನೆಲೆಸಿ ವಿದ್ಯಾನಾಮಕಳಾಗಿ ಖ್ಯಾತಳಾದ ಸಿರಿದೇವಿ ಶಾರ್ಙ್ಗವೆಂಬ ಧನುರೂಪವಾದಳು ಮತ್ತು ಖಡ್ಗರೂಪಳಾದಳು. ದುರ್ಗಾದೇವಿ ಗುರಾಣಿಯಾದಳು. ಪ್ರಾಣಾಪಾನಾದಿ ಪಂಚರೂಪಿವಾಯುವು ಬಾಣವಾದನು. ಕಾಮನು ಕೃಷ್ಣ-ರುಕ್ಮಿಣಿಯರಿಗೆ ಪ್ರದ್ಯುಮ್ನನೆಂಬ ಹೆಸರಿನಿಂದ ಪುತ್ರನಾದನು. ಅವನೇ ಹಿಂದೆ ಬ್ರಹ್ಮದೇವರಿಗೆ ಅನಿರುದ್ಧ ದೇವನಾಗಿ ಹುಟ್ಟಿದ್ದನು. ಪುರುಷರೂಪದ ಅನಿರುದ್ಧನು ಹರಿಗೆ ಶಂಖವಾಗಿದ್ದು ಬಳಿಕ ಚಕ್ರರೂಪಿಕಾಮನು ಕೈಕೇಯಿ ದೇವಿಯಲ್ಲಿ ಭರತನಾಗಿ ರಾಮನಿಗೆ ತಮ್ಮನಾಗಿ ಜನಿಸಿದನು. ಬಳಿಕ ಸುಮಿತ್ರಾದೇವಿಯಲ್ಲಿ ಹಿಂದಿನ ಶೇಷನು ಲಕ್ಷ್ಮಣನಾಗಿಯೂ, ಶಂಖರೂಪದ ಅನಿರುದ್ಧನು ಶತ್ರುಘ್ನನಾಗಿಯೂ ಹುಟ್ಟಿದರು. ಶ್ರೀರಾಮನ ತರುವಾಯ ಭರತ, ಆಮೇಲೆ ಲಕ್ಷ್ಮಣ, ಶತ್ರುಘ್ನರು ಜನಿಸಿದರು. ದಶರಥನಿಗೆ ರಾಮ-ಭರತ-ಲಕ್ಷ್ಮಣ-ಶತ್ರುಘ್ನರೆಂಬ ದೇವೋತ್ತಮರಾದ ನಾಲ್ವರು ಮಕ್ಕಳಾದರು. ಶ್ರೀಮಹಾ-ವಿಷ್ಣುವು ಸಂಕರ್ಷಣರೂಪದಿಂದ ಲಕ್ಷ್ಮಣನಲ್ಲಿಯೂ ಪ್ರದ್ಯುಮ್ನರೂಪದಿಂದ ಭರತನಲ್ಲಿಯೂ, ಅನಿರುದ್ಧರೂಪದಿಂದ ಶತ್ರುಘ್ನನಲ್ಲಿಯೂ ತನ್ನ ಆವೇಶರೂಪದಿಂದ ನೆಲೆಸಿದನು. ಅಂಗದನಲ್ಲಿ ಇಂದ್ರಾಂಶವಿರುವುದರಿಂದ ಅವನು ಸದಾ ಬಹು ಬಲವಂತನಾದನು. ಇನ್ನುಳಿದ ಕಾರ್ತವೀರ್ಯಾದಿ ಸಹಸ್ರಪಟ್ಟು ಬಲಾಧಿಕರಾದ ರಾಜರಲ್ಲಿ ಶ್ರೀಹರಿಯ ಸಾನಿಧ್ಯವಿರು-ವುದರಿಂದವರು ಧರ್ಮವಂತರೂ ಬಲವಂತರೂ ಆಗಿದ್ದಾರೆ.

ಶ್ರೀರಾಮಾವತಾರವಾಗಲು ನಿತ್ಯಾವಿಯೋಗಿನಿಯಾದ ಶ್ರೀಲಕ್ಷ್ಮೀದೇವಿಯು ಶ್ರೀಹರಿಯ ಆಜ್ಞೆಯಂತೆ ಸ್ವತಂತ್ರನಾದ ಭಗವಂತನೊಡನೆ ಸ್ವಯಂ ವಿಹರಿಸುವವಳಾದ್ದರಿಂದ ವಿದೇಹಾಧೀಶನಾದ ಜನಕರಾಜನ ಯಜ್ಞಭೂಮಿಯಲ್ಲಿ ನೇಗಲಿನ

ತುದಿಗೆ ಶ್ರೀರಾಮ ಕಾರ್ಯಕ್ಕಾಗಿ 'ಸೀತೆ' ಎಂಬ ಹೆಸರಿನಿಂದ ಜನಕರಾಜನಿಗೆ ಪುತ್ರಿಯಾಗಿ ಅವತರಿಸಿದಳು. ಇವೇ ಮೊದಲಾದ ಕಲ್ಪದಲ್ಲಿ ನಡೆದ ಈ ಸೃಷ್ಟಿಕ್ರಮ, ಪೂರ್ವಕಲ್ಪದ ಅನುಸೃಷ್ಟಿ ಕ್ರಮಗಳನ್ನೂ ಸಕಲಾಗಮ ನಿರ್ಣಯಕ್ಕಾಗಿ ಹೇಳಿದ್ದೇನೆ. ಆಯಾ ಕಲ್ಪಗಳ ಸೃಷ್ಟಿಯ ನಿರೂಪಣೆಯಿಂದ ಭಗವಂತನ ನಿತ್ಯತ್ವ, ಅನಂತ ಕಲ್ಯಾಣಗುಣಪೂರ್ಣತ್ವಾದಿ ಮಹಾಮಹಿಮೆಗಳು ವ್ಯಕ್ತವಾಗುವುದು. ಇದಲ್ಲದೆ ಇನ್ನು ಮುಂದೆ ಆಗಲಿರುವ ಕಲ್ಪಗಳ ಪ್ರಕಾರದ ಸೃಷ್ಟಿ ಭೇದಗಳನ್ನು, ಶ್ರುತಿ-ಪುರಾಣಾದಿಗಳಲ್ಲಿ ಬೇರೆ ವಿಧದಲ್ಲಿ ಹೇಳಲಾಗಿದೆ. ಅವುಗಳಲ್ಲಿ ಶ್ರೀಹರಿ ಸರ್ವೋತ್ತಮತ್ವಾದಿ ಗುಣೋತ್ಕರ್ಷವನ್ನು ಹೇಳದಿರುವುದರಿಂದ ಅವುಗಳ ನಿರ್ಣಯವನ್ನು ವಿಶೇಷ ವಾಕ್ಯಗಳಿಂದ ತಿಳಿದುಕೊಳ್ಳಬೇಕು. ಹೀಗೆ ಶ್ರೀಮನ್ಮಧ್ವಾಚಾರ್ಯರು ಮಹಾಭಾರತ ತಾತ್ಪರ್ಯ ನಿರ್ಣಯದ ಮೂರನೇ ಅಧ್ಯಾಯದಲ್ಲಿ ವಿಸ್ತಾರವಾಗಿ ನಿರೂಪಿಸಿರುವ ಕಥಾಭಾಗವನ್ನು ಶ್ರೀ ಗುರುರಾಜರು ತಮ್ಮ ''ಭಾವಸಂಗ್ರಹ''ದಲ್ಲಿ ಸಂಗ್ರಹಿಸಿ ಪರಮೋಪಕಾರ ಮಾಡಿರುವರು.

*ಮಹಾಭಾರತ ತಾತ್ಪರ್ಯ ನಿರ್ಣಯದ ಸರ್ಗಾನುಸರ್ಗಲಯ-ಪ್ರಾದುರ್ಭಾವ ನಿರ್ಣಯವೆಂಬ ತೃತೀಯಾಧ್ಯಾಯದ ಕಥಾಸಂಗ್ರಹವು ಮುಗಿದುದು.*

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★

## ಚತುರ್ಥಾಧ್ಯಾಯಭಾವಸಂಗ್ರಹ

*ಅವತಾರಿಕೆ:-*

ಶ್ರೀಗುರುರಾಜರು ಈಗ ನಾಲ್ಕನೆಯ ಅಧ್ಯಾಯದ ಅರ್ಥವನ್ನು 'ಯದ್ವೃದ್ಧಿ'' ಎಂಬ ಪದ್ಯದಿಂದ ಸಂಗ್ರಹಿಸುತ್ತಾರೆ.

**ಯದ್ವೃದ್ಧಿರ್ಜನಮೋಹಿನೀ ಮುದಮಿತಾ ಯದ್ದರ್ಶನಾತ್ಸಜ್ಜನಾಃ**
**ಯೇನಾರ್ಥಿಪ್ರಿಯಕಾರಿಣಾ ನಿಶಚರೀಹಂತ್ರಾ ಕ್ರತೂ ರಕ್ಷಿತಃ ।**
**ಯೋಽಹಲ್ಯಾಂ ಸಪತಿಂ ವ್ಯಧಾದ್ಧರಧನುರ್ಭಂಕ್ತ್ವಾಽವಹಜ್ಜಾನಕೀಂ**
**ಜೇತಾ ವರ್ತ್ಮನಿ ಭಾರ್ಗವಸ್ಯ ನಗರೀಂ ರಾಮೋ ಗತೋಽವ್ಯಾತ್ಸ ಮಾಮ್ ॥ 4 ॥**

**ಅನ್ವಯಾರ್ಥ :-** **ಯಸ್ಯ** = ಯಾವ ರಾಮಚಂದ್ರನ, **ವೃದ್ಧಿಃ** = ಅಭಿವೃದ್ಧಿಯು, **ಜನಮೋಹಿನೀ** - **ಜನ** = ಮಂದಜನರಿಗೆ, **ಮೋಹಿನೀ** = ಅನ್ಯಥಾಜ್ಞಾನಸಂಪಾದಕವೋ, **ಯಸ್ಯ** = ಯಾವ ಶ್ರೀರಾಮನ, **ದರ್ಶನಾತ್** = ದರ್ಶನದಿಂದ, **ಸಜ್ಜನಾಃ** = ಸುಜನರು, **ಮುದಮಿತಾಃ** = ಅಧಿಕಾನಂದವನ್ನು ಪಡೆದರೋ, **ಅರ್ಥಿಪ್ರಿಯಕಾರಿಣಾ** - **ಅರ್ಥಿ** = ಅರ್ಥಿಯಾದ ವಿಶ್ವಾಮಿತ್ರ ಮುನಿಗಳಿಗೆ, **ಪ್ರಿಯಕಾರಿಣಾ** = ಹಿತವನ್ನುಂಟುಮಾಡಿದ, **ನಿಶಚರೀಹಂತ್ರಾ** = ತಾಟಕಿ, ಸುಬಾಹು ಮುಂತಾದ ರಾಕ್ಷಸರನ್ನು ಸಂಹಾರ ಮಾಡಿದ, **ಯೇನ** = ಯಾವ ರಾಮನಿಂದ, **ಕ್ರತೂ (ಕ್ರತುಃ)** = ಯಜ್ಞವು, **ರಕ್ಷಿತಃ** = ರಕ್ಷಿಸಲ್ಪಟ್ಟಿತೋ, **ಯಃ** = ಯಾವನು, **ಅಹಲ್ಯಾಂ** = ಪತಿಯ ಶಾಪದಿಂದ ಶಿಲಾರೂಪಳಾಗಿದ್ದ ಗೌತಮರ ಪತ್ನಿಯಾದ ಸಾಧ್ವಿಯಾದ ಅಹಲ್ಯಾದೇವಿಯನ್ನು, **ಸಪತಿಂ** = ದರ್ಶನಮಾತ್ರದಿಂದ ಶಾಪಮೋಚನಮಾಡಿ ಮತ್ತೆ ಸ್ತ್ರೀಯನ್ನಾಗಿಸಿ ಪತಿಯಾದ ಗೌತಮರಿಗೆ ಭೋಗ್ಯಳನ್ನಾಗಿ ಮಾಡಿದನೋ, **ಯಃ** = ಯಾರು, **ಹರಧನುಃ** = ರುದ್ರದೇವರ ಧನುಸ್ಸನ್ನು, **ಭಂಕ್ತ್ವಾ** = ಛೇದಿಸಿ (ಮುರಿದು), **ಜಾನಕೀಂ** = ಜನಕಪುತ್ರಿಯಾದ ಸೀತಾದೇವಿಯನ್ನು, **ಆವಹತ್** = ವಿವಾಹವಾದನೋ, **ವರ್ತ್ಮನಿ** = ಮಾರ್ಗಮಧ್ಯದಲ್ಲಿ, **ಭಾರ್ಗವಸ್ಯ** = ಪರಶುರಾಮದೇವರನ್ನು, **ಜೇತಾ** = ಜಯಿಸಿದನೋ, **ನಗರೀಂ** = ಅಯೋಧ್ಯಾಪುರಿಯನ್ನು, **ಗತಃ** = ಹೊಂದಿದ, **ಸಃ** = ಅಂತಹ, **ರಾಮಃ** = ಶ್ರೀರಾಮಚಂದ್ರನು, **ಮಾಂ** = ನನ್ನನ್ನು, **ಅವ್ಯಾತ್** = ಕಾಪಾಡಲಿ.

**ತಾತ್ಪರ್ಯ :-** ಶ್ರೀರಾಮನು ಶುಕ್ಲಪಕ್ಷದ ಚಂದ್ರಮನಂತೆ ಅಭಿವೃದ್ಧನಾದುದು ಕೇವಲ ಅಜ್ಞ ಜನರಿಗೆ ಅನ್ಯಥಾ-ಜ್ಞಾನವನ್ನು ಹುಟ್ಟಿಸಲೆಂದೇ ವಿನಃ ಮಹತೋಮಹಿಮನಾದ ಆ ಪ್ರಭುವಿಗೆ ವೃದ್ಧಿಹ್ರಾಸಾದಿಗಳಿಲ್ಲ. ಲೋಕದ ಸಕಲ ಸಜ್ಜನರೂ ಶ್ರೀರಾಮನ ದರ್ಶನ ಮಾತ್ರದಿಂದ ಅಮಂದಾನಂದತುಂದಿಲರಾಗುತ್ತಿದ್ದರು. ವಿಶ್ವಾಮಿತ್ರಋಷಿಯು ಯಜ್ಞರಕ್ಷಣೆಗಾಗಿ ಶ್ರೀರಾಮನನ್ನು ಕಳುಹಿಸಬೇಕೆಂದು ಬೇಡಲು ತಂದೆಯ ಅಪ್ಪಣೆಯಂತೆ ಲಕ್ಷ್ಮಣನೊಡನೆ ವಿಶ್ವಾಮಿತ್ರನ ಜೊತೆಗೆ ಹೊರಟು ಅರ್ಥಿಯಾದ ವಿಶ್ವಾಮಿತ್ರನಿಗೆ ಪ್ರಿಯವನ್ನುಂಟುಮಾಡಿ, ತಾಟಕಿ, ಸುಬಾಹು ಮುಂತಾದ ರಾಕ್ಷಸರನ್ನು ಸಂಹರಿಸಿ ಅವರ ಯಜ್ಞವನ್ನು ರಕ್ಷಿಸಿದನು. ಸೀತಾವಿವಾಹ ವಿಚಾರವರಿತು ಗುರುಗಳೊಡನೆ ಹೊರಟ ಶ್ರೀರಾಮನು ಹಿಂದೆ ಇಂದ್ರದೇವರು ಗೌತಮರ ವೇಷಧರಿಸಿ ಮೋಸದಿಂದ ಬಲಾತ್ಕಾರವಾಗಿ ಅಹಲ್ಯಾದೇವಿಯೊಡನೆ ವಿಹರಿಸಿದ ವಿಚಾರವನ್ನು ಜ್ಞಾನದೃಷ್ಟಿಯಿಂದ ತಿಳಿದು ಕುಪಿತರಾದ ಗೌತಮರು ಕಲ್ಲಾಗೆಂದು ಶಾಪಕೊಡಲು ಅಹಲ್ಯಾದೇವಿಯು ಪತಿಶಾಪದಿಂದ ಬಹುಕಾಲದಿಂದ ಶಿಲಾರೂಪಳಾಗಿ ಕಷ್ಟಪಡುತ್ತಿರಲು ಶ್ರೀರಾಮನು ತನ್ನ ದರ್ಶನಮಾತ್ರದಿಂದ ಅಹಲ್ಯೆಯ ಶಾಪಮೋಚನಮಾಡಿ ಮತ್ತೆ ಅವಳನ್ನು ಮಾನವಳನ್ನಾಗಿ ಮಾಡಿ ದೋಷರಹಿತಳಾದ, ಸಾಧ್ವಿಯಾದ ಅಹಲ್ಯಾದೇವಿಯನ್ನು ಮತ್ತೆ ಗೌತಮರೊಡನೆ ಸೇರಿಸಿ

ಅವರು ಸುಖದಿಂದಿರುವಂತೆ ಮಾಡಿದನು. ಜನಕರಾಯನ ಪಟ್ಟಣದಲ್ಲಿ ಸ್ವಯಂವರದ ಪಣವಾಗಿದ್ದ ಶಿವಧನುಷ್ಯವನ್ನು ಲೀಲಾಜಾಲವಾಗಿ ಮುರಿದು ಜಾನಕಿಯನ್ನು ವಿವಾಹವಾದನು. ನಂತರ ತಂದೆತಾಯಿಯರು, ಬಂಧು-ಬಾಂಧವರೊಡನೆ ಅಯೋಧ್ಯೆಗೆ ಹೊರಟು ಪ್ರಯಾಣ ಬೆಳೆಸುತ್ತಿರುವಾಗ ಮಾರ್ಗಮಧ್ಯದಲ್ಲಿ ಬಂದ ಪರಶುರಾಮರು ವೈಷ್ಣವಧನುವನ್ನಿತ್ತು ಇದನ್ನು ಹೆದೆಯೇರಿಸು ನೋಡೋಣವೆನಲು ಸುಲಭವಾಗಿ ಹೆದೆಯೇರಿಸಿ ಪರಶುರಾಮರನ್ನು ಜಯಿಸಿ ಅಯೋಧ್ಯೆಗೆ ಬಂದು ಅಲ್ಲಿ ಪತ್ನಿಯಾದ ಸೀತಾದೇವಿಯೊಡನೆ ಬಹುಕಾಲ ವಿಹರಿಸುತ್ತಾ ಸುಖವಾಗಿದ್ದನು. ಇಂಥ ಶ್ರೀರಾಮಚಂದ್ರನು ನನ್ನನ್ನು ಕಾಪಾಡಲಿ ಎಂದು ಭಾವ.

## ಚತುರ್ಥಾಧ್ಯಾಯ ಕಥಾಸಂಗ್ರಹ

ದಶರಥಮಹಾರಾಜನ ಅರಮನೆಯಲ್ಲಿ ಶ್ರೀರಾಮಚಂದ್ರ ಲಕ್ಷ್ಮಣ-ಭರತ-ಶತ್ರುಘ್ನರೊಡನೆ ಶುಕ್ಲಪಕ್ಷದ ಚಂದ್ರನಂತೆ ಬೆಳೆಯತೊಡಗಿದನು. ದೊಡ್ಡದುದರಲ್ಲಿ ದೊಡ್ಡವನಾದ (ಮಹತೋಮಹಿಮನಾದ) ಶ್ರೀರಾಮನಿಗೆ ವೃದ್ಧಿಹ್ರಾಸಾದಿ-ಗಳುಂಟೆ? ಪುರುಷೋತ್ತಮನಾದ ಶ್ರೀರಾಮನ ಹಿರಿಮೆಯನ್ನು ಅರಿಯಲಾಗದ ಮಂದಜನರ ದೃಷ್ಟಿಯಲ್ಲಿ ಅವನು ಬೆಳೆಯುವವನಂತೆ ತೋರಿದನು. ದಶರಥ ಮಹಾರಾಜನು ತನ್ನ ಸುತರ ಅಭಿವೃದ್ಧಿಯನ್ನು ಕಂಡು ಮುದಿಸುತ್ತಿದ್ದನು. ರಾಮನ ದುಂಡಾದ ಮುಖಚಂದ್ರಬಿಂಬವನ್ನು ನೋಡುತ್ತಾ ತಾನೇ ಧನ್ಯನೆಂದು ಭಾವಿಸಿ ಸುಖಿಸುತ್ತಿದ್ದನು. ಶ್ರೀರಾಮನ ತಾಯಂದಿರು, ಪೌರಜಾನಪದರು, ನಗರದ ನಾರಿಯರು, ಸಚಿವರು, ಅಂತಃಪುರದ ವನಿತೆಯರೇ ಮೊದಲಾದ ಕೋಸಲದ ಎಲ್ಲ ಪ್ರಜರು ಮೋಕ್ಷಾನಂದವನ್ನು ಅನುಭವಿಸಿ ತಣಿಯುವಂತೆ ರಾಮನ ದರ್ಶನದಿಂದ ತೃಪ್ತರಾದರು.

ಇತ್ತ ಶ್ರೇಷ್ಠವಾದ ಚಂದ್ರಕುಲದಲ್ಲಿ ದೇವೇಂದ್ರನು ಗಾಧಿ ಎಂಬ ನಾಮದಿಂದ ಅವತರಿಸಿದನು. ಅವನಿಗೆ ಸಕಲ ಜಗತ್ತಿಗೇ ಮಿತ್ರನಾದ್ದರಿಂದ ಅನ್ವರ್ಥನಾಮ ಧರಿಸಿದ ವಿಶ್ವಾಮಿತ್ರನೆಂಬ ಪುತ್ರನು ಜನಿಸಿದನು. ಕ್ಷತ್ರಿಯವಂಶೋದ್ಭವನಾದ ವಿಶ್ವಾಮಿತ್ರನು ತಪವನ್ನೆಸಗಿ ಬ್ರಹ್ಮರ್ಷಿಯೆನಿಸಿ ಹೆಸರು ಗಳಿಸಿದನು. ಅವನು ದಶರಥನ ಆಸ್ಥಾನಕ್ಕೆ ಬಂದು ''ನಾನು ಮಾಡುತ್ತಿರುವ ಯಾಗಕ್ಕೆ ಸುಬಾಹು-ಮಾರೀಚರೆಂಬ ರಕ್ಕಸರು ವಿಘ್ನ ಮಾಡುತ್ತಿರುವರು. ಅವರನ್ನು ಸಂಹರಿಸಿ ಯಜ್ಞವನ್ನು ರಕ್ಷಿಸಲು ಸಮರ್ಥರಾದ ರಾಮ-ಲಕ್ಷ್ಮಣರನ್ನು ಕಳುಹಿಸಿಕೊಡು'' ಎಂದು ದಶರಥನನ್ನು ಬೇಡಿದನು. ಮಕ್ಕಳಲ್ಲಿ, ಅದರಲ್ಲೂ ಶ್ರೀರಾಮನಲ್ಲಿ ಅತಿ ಪ್ರೀತಿಯನ್ನಿಟ್ಟಿದ್ದ ದಶರಥನು ಅವರನ್ನು ಕಳುಹಲು ಮನವಿರದಿದ್ದರೂ ನಿರ್ವಾಹವಿಲ್ಲದೆ ಕಳುಹಿಸಿ-ಕೊಟ್ಟನು. ಶ್ರೀರಾಮನು ಲಕ್ಷ್ಮಣನೊಡನೆ ವಿಶ್ವಾಮಿತ್ರರ ಜೊತೆಯಲ್ಲಿ ಹೊರಟು ಸಿದ್ಧಜನರಿಂದ ವಂದಿತನಾಗಿ ಸಿದ್ಧಾಶ್ರಮಕ್ಕೆ ತೆರಳಿದನು. ತಮ್ಮನಾದ ಲಕ್ಷ್ಮಣನಿಂದ ಕೂಡಿದ ರಾಮನು ವಿಶ್ವಾಮಿತ್ರರಲ್ಲಿ ಅನುಗ್ರಹ ಮಾಡಲು ಬ್ರಹ್ಮಾಸ್ತ್ರಾದಿ ಮಂತ್ರಾಸ್ತ್ರ ವಿದ್ಯೆಗಳನ್ನು ಅವರಿಂದ ಕಲಿತನು. ಆಗ ಅಸ್ತ್ರಾಭಿಮಾನಿ ದೇವತೆಗಳು ತಮ್ಮ ತಮ್ಮ ರೂಪಗಳಿಂದ ಮೈದೋರಿ ಬಂದು ಶ್ರೀರಾಮನಿಗೆ ಅಭಿವಂದಿಸಿದರು.

ಶ್ರೀರಾಮನ ಹೊರತು ಮತ್ತೊಬ್ಬರಿಂದ ತನಗೆ ಮರಣವಾಗಬಾರದೆಂದು ಬ್ರಹ್ಮದೇವರಿಂದ ವರವನ್ನು ಪಡೆದ ಸುಕೇತುವಿನ ಮಗಳಾದ ತಾಟಕಿಯನ್ನು ಗುರುಗಳ ಅಪ್ಪಣೆಯಂತೆ ಸಂಹರಿಸಿದ ರಾಮಭದ್ರನು ರುದ್ರದೇವರ ವರದಿಂದ ಅವಧ್ಯನಾದ ಸುಬಾಹುವನ್ನು ಸಂಹರಿಸಿ, ಶ್ರೀರಾಮನು ವಿಶ್ವಾಮಿತ್ರರ ಯಜ್ಞವನ್ನು ರಕ್ಷಿಸಿದನು. ತರುವಾಯ ಶ್ರೀರಾಮ-ಚಂದ್ರನು ಮಾರೀಚನನ್ನು ವಾಯವ್ಯಾಸ್ತ್ರದಿಂದ ದೂರದ ಸಮುದ್ರಕ್ಕೆಸೆದನು. ಬ್ರಹ್ಮದೇವರ ವರದಿಂದ ಅವಧ್ಯನಾದ ಮಾರೀಚನನ್ನು ಶ್ರೀರಾಮನು ಸಂಹರಿಸಬಹುದಾಗಿದ್ದರೂ ಬ್ರಹ್ಮದೇವರ ವರವನ್ನು ಸತ್ಯ ಮಾಡಲೋಸುಗ ಕೊಲ್ಲದೆ ಬಿಟ್ಟನೇ ಹೊರತು ಮಾರೀಚನನ್ನು ಸಂಹರಿಸಲವನು ಅಶಕ್ತನಾಗಿದ್ದನೆಂದಲ್ಲ. ಮುಂದೆ ಈ ಮಾರೀಚನ ಕಾರಣವಾಗಿ ರಾಕ್ಷಸಕುಲದ

ಸಂಹಾರವಾಗಬೇಕಾಗಿದ್ದುದರಿಂದಲೂ ಈಗ ಅವನನ್ನು ಸಂಹರಿಸಲಿಲ್ಲ. ಮುಂದೆ ಮೃಗರೂಪದಿಂದ ಸೀತೆಯನ್ನು ವಂಚಿಸಿದ ಮಾರೀಚನನ್ನು ರಾಮನು ಲೀಲೆಯಿಂದಲೇ ಸಂಹರಿಸಿ ಇತರ ರಾಕ್ಷಸರನ್ನು ಸಂಹರಿಸಿದನು. ಆದುದರಿಂದ ಈಗ ಕೊಲ್ಲದಿರಲು ಬ್ರಹ್ಮದೇವರ ವರಕ್ಕೆ ಗೌರವ ತೋರಲೆಂದೇ ಹೊರತು ಮತ್ತೆ ಬೇರೆಯಲ್ಲವೆಂದು ತಿಳಿಯಬೇಕು.

ಇದೇ ಸಮಯದಲ್ಲಿ ವಿದೇಹ ದೇಶದ ಅರಸನಾದ ಜನಕರಾಜನು ಸೀತಾ ಸ್ವಯಂವರವನ್ನೇರ್ಪಡಿಸಿದ ವಿಚಾರವರಿತು ವಿಶ್ವಾಮಿತ್ರರೊಡನೆ ರಾಘವನು ಲಕ್ಷ್ಮಣನೊಡನೆ ವಿದೇಹನಗರಿಗೆ ಹೊರಟನು. ಪೂರ್ವದಲ್ಲಿ ಇಂದ್ರದೇವರು, ಗೌತಮರು ಆಶ್ರಮದಲ್ಲಿಲ್ಲದ ವೇಳೆಯನ್ನು ಸಾಧಿಸಿ ಬಂದು ಗೌತಮರ ವೇಷದಿಂದ ಅಹಲ್ಯೆಯನ್ನು ಬಲಾತ್ಕಾರವಾಗಿ ಭೋಗಿಸಿದ್ದರಿಂದ ಗೌತಮರು ಅದನ್ನು ಜ್ಞಾನದೃಷ್ಟಿಯಿಂದರಿತು ಕುಪಿತರಾಗಿ ನಿರಪರಾಧಿನಿಯೂ, ಸಾಧ್ವಿಯೂ ಆದ ಪತ್ನಿಯನ್ನು ಕಲ್ಲಾಗುವಂತೆ ಶಪಿಸಿದ್ದರು. ಶ್ರೀರಾಮನು ಈಗ ಅಲ್ಲಿಗೈತಂದು ತನ್ನ ಕರುಣಾದೃಷ್ಟಿವೀಕ್ಷಣ ಮಾತ್ರದಿಂದ ಅಹಲ್ಯೆಯ ಶಾಪವಿಮೋಚನೆ ಮಾಡಿ ಗೌತಮರ ಹೃದಯದಲ್ಲಿ ಪ್ರೇಮರಸವನ್ನು ಉಕ್ಕೇರಿಸಿ ಸತಿಪತಿಯರನ್ನು ಒಂದುಗೂಡಿಸಿದನು. ಭಗವಂತನಲ್ಲಿ ಮಾಡುವ ನಿರತಿಶಯ ಭಕ್ತಿಯ ಮಹತ್ವವನ್ನೂ, ತನಗೆ ದೇವತೆಗಳಲ್ಲಿರುವ ಕಾರುಣ್ಯವನ್ನೂ ತೋರುತ್ತಾ ಶ್ರೀರಾಮಚಂದ್ರನು ಭಕ್ತಳಾದ, ಶಿಲಾರೂಪಳಾಗಿದ್ದ ಅಹಲ್ಯೆಯನ್ನು ದೇವೇಂದ್ರನ ಪಾಪದ ಅಪಕೀರ್ತಿಯು ಸ್ವಲ್ಪವೂ ಉಳಿಯದಂತೆ ಮಾಡಲು ಅವಳನ್ನು ಮತ್ತೆ ಮಾನವಸ್ತ್ರೀಯನ್ನಾಗಿ ಮಾರ್ಪಡಿಸಿ ಅವಳ ಭಕ್ತಿಯುತ ಪೂಜೆಯನ್ನು ಸ್ವೀಕರಿಸಿ ಮುಂದೆ ಹೊರಟನು.

ಇಂದ್ರನೀಲಮಣಿಯಂತೆ ತಿಳಿನೀಲವರ್ಣದಿಂದ, ದಿನಮಣಿಯ ದೀಪ್ತಿಯಿಂದೊಪ್ಪುವ ಪರಮಲಾವಣ್ಯಮೂರ್ತಿಯಾದ ಶ್ರೀರಾಮಚಂದ್ರನು ಅನಂತ ಚಂದ್ರಮರ ಅಖಂಡಕಾಂತಿಸಂದೋಹಕ್ಕೂ ಮಿಕ್ಕಿದ ನಿರತಿಶಯ ಸುಂದರ ಮೈಕಾಂತಿಯಿಂದ, ಕರಗಳಲ್ಲಿ ಧನುರ್ಬಾಣಗಳನ್ನು ಹಿಡಿದು ಲಕ್ಷ್ಮಣನೊಡನೆ ಮಿಥಿಲಾಪಟ್ಟಣವನ್ನು ಪ್ರವೇಶಿಸುತ್ತಿರುವಾಗ ಆ ನಾಡಿನ ಜನರು ರಾಮನನ್ನು ಕಂಡು ಪರಮಾನಂದಭರಿತರಾದರು. ಪುರಾಣಪುರುಷೋತ್ತಮನಾದ ಮಾಧವನ ಅಂತರಂಗಭಕ್ತರಾದ ಶುಕ-ನಾರದಾದಿ ಮುನಿಗಳು ಅವನ ಚರಣಕಮಲಗಳ ಮಧುವನ್ನು ಹೀರುವಂತೆ, ವಿದೇಹ ನಗರದ ಪ್ರಜರಾದ ನರನಾರಿಯರು ಗುಂಪುಗುಂಪಾಗಿ ಬಂದು ಆನಂದಭರಿತವಾದ ತಮ್ಮ ನಯನಗಳೆಂಬ ಭ್ರಮರಗಳಿಂದ ಪುರುಷೋತ್ತಮನಾದ ಶ್ರೀರಾಮಚಂದ್ರನ ಶ್ರೇಷ್ಠವಾದ ಮುಖಾರವಿಂದ ಮಕರಂದವನ್ನು ಮನತಣಿಯುವಂತೆ ಪಾನ ಮಾಡಿದರು. ಮಿಥಿಲಾಧಿಪತಿಯಾದ ಜನಕರಾಜನು ಸಹಸ್ರನಯನನಾದ ಇಂದ್ರನ ಸಹೋದರನಾಗಿ ವಾಮನನೆಂಬ ಹೆಸರಿನಿಂದ ಅವತರಿಸಿದ, ಲಕ್ಷ್ಮಣಸಹಿತನಾದ ಶ್ರೀರಾಮಚಂದ್ರನನ್ನು ಭಕ್ತಿಯಿಂದ ಪೂಜಿಸಿದನು.

ನವನವೋನ್ಮೇಷಲಾವಣ್ಯದಿಂದ ಕಂಗೊಳಿಸಿ ಅವತರಿಸಿದ ಶ್ರೀರಾಮಚಂದ್ರನೇ ತನ್ನ ಪ್ರಿಯಕುವರಿ ಸೀತಾದೇವಿಗೆ ತಕ್ಕ ವರನೆಂದೂ, ತನಗೆ ಸರಿಯಾದ ಅಳಿಯನೆಂದೂ ಭಾವಿಸಿದನು. ಜನಕರಾಜನಿಗೆ ತೇಜಸ್ವಿಯಾದ ವಿಶ್ವಾಮಿತ್ರನು ಬೇಗ ಶ್ರೀರಾಮನನ್ನು ಅಳಿಯನನ್ನಾಗಿ ಮಾಡಿಕೊಳ್ಳುವಂತೆ ತಿಳಿಸಿದನು. ಮುನಿಯ ವಚನವನ್ನಾಲಿಸಿ ಮುದಗೊಂಡ ಜನಕರಾಜನದಕ್ಕೆ ಒಪ್ಪಿ ತನ್ನ ಕುಮಾರಿಯ ಸ್ವಯಂವರದ ಬಗ್ಗೆ ತಾನೆಸಗಿದ ಪ್ರತಿಜ್ಞೆಯನ್ನಿಂತು ಅರುಹಿದನು-

''ಮುನಿವರ್ಯ! ಹಿಂದೊಮ್ಮೆ ನಾನು ಉತ್ತಮ ಆಯುಧವನ್ನು ಪಡೆಯಲು ರುದ್ರದೇವನನ್ನು ಕುರಿತು ತಪಸ್ಸನ್ನು ಮಾಡಿದೆನು. ಅದಕ್ಕೆ ಶಿವನು ಮೆಚ್ಚಿ ಮೈದೋರಿ ನನ್ನ ವಿನಃ ಬೇರಾರಿಂದಲೂ ಅಲುಗಾಡಿಸಲು ಸಾಧ್ಯವಾಗದ ತನ್ನ ಈ ದಿವ್ಯಧನುಷ್ಯವನ್ನು ನನಗೆ ದಯಪಾಲಿಸಿದನು. ದೇವಾಸುರ ನಾಗಗಂಧರ್ವರು ಮತ್ತು ಇಂದ್ರದೇವರೊಂದಾಗಿ ಬಂದರೂ ಈ ಧನುಷ್ಯವನ್ನು ಚಲಿಸಲು ಅಸಮರ್ಥರಾಗಿರಲು ಇದನ್ನು ಮಾನವರೆಂತು ಎತ್ತಿ ಹೆದೆಯೇರಿಸಲು ಸಾಧ್ಯ? ನನ್ನ ಈ ಸೇವಕರಿಗೆ ರುದ್ರದೇವನು ವರವಿತ್ತಿರುವುದರಿಂದಲೇ ಇವರು ಗಾಡಿಯ ಮೇಲಿಟ್ಟಿರುವ ಈ ಧನುಸ್ಸನ್ನು ಎಳೆದು ತರಲು ಶಕ್ತರಾಗಿರುವರು. ಬಿಲ್ಲಿನ ಭಾರದಿಂದ ಗಾಡಿಯು ಮುರಿಯದಂತೆಯೂ ಶಿವನು ವರವಿತ್ತಿದ್ದನು. ಈ ಶಿವಧನುವನ್ನು

ಯಾರಿಂದಲೂ ಎತ್ತಲಾಗದು. ಶಂಕರನ ಕೃಪೆಯಿಂದ ನಾನಿದನ್ನು ಪಡೆದು ಮಾನವರ ಬಲಪರೀಕ್ಷೆಗಾಗಿ ಸೀತಾ ಸ್ವಯಂವರಕ್ಕೆ ಪಣವಾಗಿಟ್ಟಿರುವೆನೇ ಹೊರತು ಪರಮಪುರುಷನಾದ ಶ್ರೀರಾಮನ ಸತ್ವಪರೀಕ್ಷೆಗಾಗಲ್ಲ! ಯಾರಿದನ್ನು ಎತ್ತಿ ಹೆದೆಯೇರಿಸಿ ಬಾಣ ಹೂಡಲು ಶಕ್ತರಾಗುವರೋ ಅವರಿಗೇ ನನ್ನ ಪ್ರಿಯಪುತ್ರಿಯನ್ನಿತ್ತು ವಿವಾಹ ಮಾಡಿಕೊಡುವುದಾಗಿ ಪ್ರತಿಜ್ಞೆ ಮಾಡಿರುವೆನು. ಅಂತೆಯೇ ಈ ಧನುಷ್ಯವು ವಿವಾಹದ ಪಣವಾಗಿದೆ. ಈ ವಿಚಾರವನ್ನು ನಾನು ಸೇವಕರ ಮೂಲಕ ದೇಶ ದೇಶಗಳಲ್ಲಿ ಘೋಷಿಸಿದೆನು. ಅದನ್ನು ಕೇಳಿ ದೈತ್ಯ-ದಾನವ-ಯಕ್ಷ-ರಾಕ್ಷಸರು ಮತ್ತು ಅನೇಕ ರಾಜರು ಸಹ ಬಂದು ಈ ಧನುವಿನ ಸ್ಪರ್ಶ ಮಾಡಲು ಶಕ್ತರಾದರೇ ವಿನಃ ಅಲುಗಾಡಿಸಲೂ ಸಮರ್ಥರಾಗಲಿಲ್ಲ. ಮಹಾಬಲಶಾಲಿಗಳಾದ ರಾವಣ ಮೊದಲಾದ ರಾಕ್ಷಸರು ಈ ಧನುವನ್ನೆತ್ತಲು ಪ್ರಯತ್ನಿಸಿ ವಿಫಲರಾದರು. ಅವರ ಮೈ ಬೆವರಿಟ್ಟಿತು. ಕಣ್ಣುಗುಡ್ಡೆಗಳು ತಿರುಗಿ ಅವರು ನೆಲಕ್ಕೆ ಬಿದ್ದರು. ತರುವಾಯ ಪ್ರಜ್ಞೆ ಬಂದಮೇಲೆ ಕೋಪಗೊಂಡು ನನ್ನೊಡನೆ ಹೋರಾಡ ಬಂದರು. ಆದರೆ ಅವರು ನನ್ನನ್ನು ಜಯಿಸಿ ನನ್ನ ಪುತ್ರಿಯನ್ನು ವರಿಸಲು ಶಕ್ತರಾಗಲಿಲ್ಲ ! ಕನ್ಯೆಗಾಗಿ ನನ್ನೊಡನೆ ಹೋರಾಡಿ ನನ್ನನ್ನು ಸೋಲಿಸಿ ನನ್ನ ಮಗಳನ್ನು ಪಡೆಯಲಾಗದಂತೆ ಬ್ರಹ್ಮದೇವರು ನನಗೆ ವರವಿತ್ತಿರುವರು. ಹಿಂದೆ ನನ್ನ ತಪಸ್ಸಿಗೆ ಮೆಚ್ಚಿದ ಚತುರಾನನರು ನನಗೆ ಈ ರೀತಿಯ ವರವನ್ನು ಅನುಗ್ರಹಿಸಿದರು. ವರಪ್ರದಾನದಲ್ಲಿ ಹೆಸರಾದ ಕಮಲೋದ್ಭವರಾದ ಪಿತಾಮಹರು ಯಾರೂ ಬಲಾತ್ಕಾರದಿಂದ ನನ್ನ ಪುತ್ರಿಯನ್ನು ಹೊಂದಲಾಗದಂತೆ, ನನ್ನೊಡನೆ ಹೋರಾಟ ಮಾಡದಂತೆಯೂ ವರವನ್ನು ಕೊಟ್ಟಿಹರು. ರಾವಣಾದಿ ಅನೇಕ ವೀರರು ಮತ್ತು ರಾಜರು ಈ ಧನುವನ್ನು ಎತ್ತಲೆತ್ನಿಸಿ ತಮ್ಮ ಮದವನ್ನು ಕಳೆದುಕೊಂಡು ಇಂದೇ ಇಲ್ಲಿಂದ ತೆರಳಿದರು. ನಾನು ಅಳಿಯನಾಗಬೇಕೆಂದು ಬಯಸುವ ಶ್ರೀರಾಮಚಂದ್ರನು ನನ್ನ ಮನೋಭೀಷ್ಟವನ್ನು ಪೂರೈಸಿ ನನ್ನ ಕನ್ಯೆಯನ್ನು ವರಿಸಲಿ.

ಇಂತು ವಿಜ್ಞಾಪಿಸಿದ ಜನಕರಾಯನ ಮಾತನ್ನಾಲಿಸಿ ಗಾಧಿನಂದನನು ನಸುನಗೆಯಿಂದ ಅದಕ್ಕೊಪ್ಪಿದನು. ತರುವಾಯ ರಾಜನ ಆಣತಿಯಂತೆ ಜನಕನ ಸೇವಕರು ಅನಂತನೆಂಬ ನಾಗನ ಹೆಡೆಯಂತೊಪ್ಪುವ ರುದ್ರದೇವರ ಆ ಧನುವನ್ನು ಎಳೆದು ತಂದರು. ಶ್ರೀರಾಮಭದ್ರನು ಗುರುವಿಶ್ವಾಮಿತ್ರರಿಗೆ ವಂದಿಸಿ ಅವರ ಅಪ್ಪಣೆ ಪಡೆದು ಕಿರುನಗೆಯನ್ನು ಹೊರಸೂಸುತ್ತಾ ಆಟದ ಬಿಲ್ಲಿನಂತೆ ಆ ಹರನ ಧನುವನ್ನು ಲೀಲಾಜಾಲವಾಗಿ ಎಡಗೈಯಿಂದ ಮೇಲೆತ್ತಿ ಹೆದೆಯೇರಿಸಿದನು. ಸಂಕಲ್ಪ ಮಾತ್ರದಿಂದಲೇ ಅನೇಕ ಕಾರ್ಯಗಳನ್ನು ಸಫಲಗೊಳಿಸಲು ಶಕ್ತವಾದ ತನ್ನ ಎಲ್ಲೆಯಿಲ್ಲದ ಮಹಾಬಲದಿಂದ ಶ್ರೀರಾಮನು ಶಿವಧನುವನ್ನು ಹೆದೆಯೇರಿಸುತ್ತಿರುವಂತೆಯೇ ಅದನ್ನು ಚಟಚಟನೆ ಮುರಿದು ಹಾಕಿದನು! ಅಚಿಂತ್ಯಾದ್ಭುತ ಶಕ್ತನಾದ ಆ ಮಹಾನುಭಾವನ ಭುಜಬಲ ಪರಾಕ್ರಮದ ಪಟ್ಟನ್ನು ಅದಾರು ತಾನೆ ಸಹಿಸಲು ಸಮರ್ಥರಾದಾರು? ಐರಾವತವು ಕಬ್ಬಿನ ಜಲ್ಲೆಯ ಗಿಣ್ಣುಗಳನ್ನು ಕ್ರೀಡೆಯಿಂದಲೇ ಮುರಿಮುರಿದು ಬಿಸುಟುವಂತೆ ಶ್ರೀರಾಮನು ಶಿವಧನುವನ್ನು ಲೀಲೆಯಿಂದ ಮುರಿದೆಸೆದು ಲಕ್ಷ್ಮಣನೊಡನೆ ಚಂದ್ರಮನಂತೆ ರಾಜಿಸಿ ವಿಶ್ವಾಮಿತ್ರರ ಮುಖವನ್ನೀಕ್ಷಿಸುತ್ತಾ ನಿಂತನು. ಅವನ ವಿಕಸಿತ ಕಮಲನಯನಗಳು, ವಿಶಾಲವಾದ ಉನ್ನತ ವಕ್ಷಸ್ಥಳ, ಇಂದ್ರನೀಲಮಣಿಯ ಕಾಂತಿ, ಕಿವಿಗಳಲ್ಲಿ ಮಿನುಗುವ ಕುಂಡಲಗಳ ಕಾಂತಿ, ನಸುಗೆಂಪಿನ ಶ್ರೀಗಂಧ ಲೇಪನದ ಚೆಲುವು, ಮಿಂಚಿನ ಗೊಂಚಲಿನ ವರ್ಣದ ವಸ್ತ್ರಗಳನ್ನು ಧರಿಸಿ ಸಂಶೋಭಿಸುವ ರಘುಕುಲರಾಮನನ್ನು ನೋಡಿ ಜನಕನಂದಿನಿಯಾದ ಸೀತಾದೇವಿಯು ಮನದಲ್ಲಿ ಮುದಗೊಂಡಳು. ಅನಂತರ ಅರಳಿದ ತಾವರೆಯಂತಿರುವ ನಯನಗಳಿಂದ ಶೋಭಿಸುವ ಸೀತಾದೇವಿಯು ತನ್ನೆರಡು ಕರಗಳಿಂದ ಬಾಡದ ಕಮಲಗಳಿಂದ ರಚಿಸಲಾದ ಸುಂದರ ಮಾಲೆಯನ್ನು ಹಿಡಿದು ಮೃದುವಾಗಿ ಹೆಜ್ಜೆಗಳನ್ನಿಕ್ಕುತ್ತಾ ಮೆಲ್ಲಮೆಲ್ಲನೆ ಶ್ರೀರಾಮನ ಬಳಿಗೆ ನಡೆತಂದು ಅವನ ಕೊರಳಿಗೆ ಮಾಲೆ ಹಾಕಿ ಅವನ ಪಕ್ಕದಲ್ಲಿ ನಿಂತಳು. ಆಗ ವಿದೇಹ ದೇಶದ ಪ್ರಜಾಜನರು ಮೇರೆ ಮೀರಿದ ಆನಂದವನ್ನು ಪಡೆದರು. ನೆರೆಹೊರೆಯ ದೇಶಗಳಿಂದ ಬಂದಿದ್ದ ಜನರಿಗಾದ ಆನಂದಕ್ಕಂತೂ ಪಾರವೇ ಇಲ್ಲ. ಶ್ರೀರಾಮನು

ರಾಜಪುತ್ರಿಯಾದ ಸೀತಾದೇವಿಯೊಡನೆ ನಿಂತಿದ್ದನು. ಉದಾರನೂ, ಸಿರಿವಂತನೂ ಆದ ಆ ಪ್ರಭುವು ಆನಂದನಿಧಿಯೇ ಮೂರ್ತಿವೆತ್ತು ಬಂದಿದೆಯೋ ಎಂಬಂತೆ ವಿರಾಜಿಸಿದನು. ಶ್ರೀ ನಾರಾಯಣನು ರಮಾದೇವಿಯೊಡನೆ ಎಲ್ಲರಿಗೂ ಪರಿದೃಶ್ಯನಾಗಿ ನಿಂತಿರಲು ಜನಕರಾಜನು ಶ್ರೀರಾಮನ ಜನಕನಾದ ದಶರಥಚಕ್ರವರ್ತಿಗೆ ಈ ಸಂತಸದ ಸುದ್ದಿಯನ್ನು ಹೇಳಿಕಳುಹಿಸಿದನು. ದಶರಥನು ರೂಪಯೌವನ ಲಾವಣ್ಯಪೂರ್ಣನಾದ ತನ್ನ ಕುಮಾರನು ಸೀತೆಯೊಡನೆ ರಾಜಿಸುವನೆಂಬ ಮಂಗಳವಾರ್ತೆಯನ್ನಾಲಿಸಿ ಹರ್ಷನಿರ್ಭರನಾದನು. ಕೂಡಲೆ ಅವನು ತನ್ನ ರಾಣಿಯರು, ಭರತ ಶತ್ರುಘ್ನರು, ಮತ್ತು ಚತುರಂಗಬಲದೊಡನೆ ಬ್ರಹ್ಮಪುತ್ರರಾದ ವಸಿಷ್ಠರನ್ನು ಮುಂದು ಮಾಡಿಕೊಂಡು ಮಿಥಿಲಾನಗರಿಗೆ ಪ್ರಯಾಣ ಬೆಳೆಯಿಸಿದರು.

ಮಿಥಿಲಾಪುರಿಗೆ ಬಂದ ದಶರಥನನ್ನು ಜನಕರಾಜನು ವೈಭವದಿಂದ ಸ್ವಾಗತಿಸಿ, ಪದ್ಧತಿಯಂತೆ ಅವನನ್ನು ಪೂಜಿಸಿ ಆನಂದಪಡಿಸಿದನು. ಸಂತೋಷಭರಿತ ಮನದಿಂದ ಅವನು ಶ್ರೀಸೀತಾರಾಮರ ವಿವಾಹಮಹೋತ್ಸವವನ್ನು ವಿಜೃಂಭಣೆ-ಯಿಂದ ನೆರವೇರಿಸಿದನು. ಬಳಿಕ ಕುಲಪುರೋಹಿತರಾದ ವಸಿಷ್ಠ ಮಹರ್ಷಿಗಳು ವಿಶ್ವಾಮಿತ್ರರ ಅನುಮತಿಯಂತೆ ವಿವಾಹಿತರಾದ ನೂತನ ದಂಪತಿಗಳನ್ನು ಹಸೆಮಣೆಯ ಮೇಲೆ ಕೂಡಿಸಿ ಅವರ ಮುಂದೆ ಅಗ್ನಿ ಪ್ರತಿಷ್ಠಾಪನೆಯನ್ನು ಮಾಡಿ ವೇದಘೋಷಗಳಿಂದ ಅಗ್ನಿದೇವನಲ್ಲಿ ಹವಿಸ್ಸನ್ನು ಹೋಮ ಮಾಡಿದರು.

ಈ ಮಂಗಳ ಮಹೋತ್ಸವವನ್ನು ನೋಡಬಯಸಿ ಸಕಲ ದೇವತೆಗಳು ವಿಮಾನಾರೂಢರಾಗಿ ಬಂದರು. ಅಂಬರದಲ್ಲಿ ಎತ್ತ ನೋಡಿದರತ್ತ ವಿವಿಧ ವಿಮಾನಗಳ ಪಂಕ್ತಿಗಳೇ ಕಂಡುಬರುತ್ತಿತ್ತು. ಅಂಬರದಲ್ಲಿ ದೇವಾನೀಕವು ನಿಬಿಡವಾಗಿ ಸೇರಲು ದೇವ ದುಂದುಭಿಗಳು ಮೊಳಗಿದವು. ಆಗ ಅಲ್ಲಿ ಸೇರಿದ್ದ ಸಹಸ್ರಾಧಿಕ ಗಂಧರ್ವರು ಸುಮಧುರ ಕಂಠದಿಂದ ಗಾನ ಮಾಡಿದರು.

ಸಕಲ ಸುರಸಂದೋಹವು ಜಗನ್ಮಾತೆಯಾದ ಶ್ರೀಲಕ್ಷ್ಮೀದೇವಿಯು ಸೀತೆಯಾಗಿ ಅವತರಿಸಿರುವುದನ್ನು ಅರಿತಿದ್ದರೂ, ನಿತ್ಯಾವಿಯೋಗಿನಿಯಾದ ಸೀತೆಯನ್ನು ಶ್ರೀರಾಮನ ಪಕ್ಕದಲ್ಲಿರುವಾಗ ದರ್ಶನ ಮಾಡಿ ತಾವು ಭಾಗ್ಯಶಾಲಿಗಳಾಗಬೇಕೆಂದು ಕಾದಿದ್ದರು. ಆದುದರಿಂದಲೇ ಈಗ ರಮಾವತಾರಳಾದ ಶ್ರೀ ಸೀತಾದೇವಿಯೊಡನೆ ರಾಜಿಸುವ ಪ್ರಭು ಶ್ರೀರಾಮಚಂದ್ರನನ್ನು ನೋಡಲು ಬಂದು ಅಂಬರವನ್ನಲಂಕರಿಸಿದರು. ಹಿಂದೆ ಸಮುದ್ರರಾಜನ ಪುತ್ರಿಯಾದ ಲಕ್ಷ್ಮೀದೇವಿಯ ಸ್ವಯಂವರವು ನೆರವೇರಿದಾಗ ಹೇಗೆ ಸಕಲ ದೇವತೆಗಳೂ ಬಂದು ಸೇರಿದ್ದರೋ ಹಾಗೆಯೇ ಈಗಲೂ ಸಕಲ ದೇವತೆಗಳು ಮುನಿಶ್ರೇಷ್ಠರು, ಚಕ್ರವರ್ತಿಗಳು ಭೂಮಿಯಲ್ಲಿ ಬಂದು ಸೇರಿದರು. ಹಿಂದೆ ಕ್ಷೀರಸಾಗರ ಮಥನಕಾಲದಲ್ಲಿ ಲೋಕಮಾತೆಯ ಕರಪಿಡಿದಂತೆ ವಿಕಸಿತ ಅರವಿಂದಾಕ್ಷನಾದ ಶ್ರೀರಾಮನು ಸೀತಾಮಾತೆಯ ಪಾಣಿಗ್ರಹಣ ಮಾಡಿ ಶೋಭಿಸಿದನು.

ಆ ಮಂಗಳ ಮಹೋತ್ಸವದಲ್ಲಿ ಜನಕರಾಯನ ಅಂತಃಪುರದ ಸುಂದರ ಯುವತಿಯರು ಚೆನ್ನಾಗಿ ಅಲಂಕೃತರಾಗಿ ಸಂಭ್ರಮದಿಂದ ಓಡಾಡುತ್ತಿದ್ದರು. ಜನಕರಾಜನು ರಮಾದೇವಿಯೊಡನೆ ರಾಜಿಸುವ ರಮಾಧವನ ದರ್ಶನ ಮಾಡಿ ಸಂತಸಗೊಂಡು ಶ್ರೀರಾಮನಿಗೆ ವರದಕ್ಷಿಣೆಯನ್ನು ನೀಡಿದನು. ಜನಕರಾಜನು ಸಕಲ ಜಗತ್ತಿಗೆ ಸ್ವಾಮಿಯಾದ ಶ್ರೀರಾಮ-ಚಂದ್ರನಿಗೆ ಪ್ರಿಯವಾದ ವಸ್ತ್ರಗಳು, ರಥಗಳು, ಗಜತುರಗಾದಿಗಳು ಮತ್ತು ಅನರ್ಘ್ಯರತ್ನಗಳನ್ನು ವರೋಪಚಾರವಾಗಿ ಸಮರ್ಪಿಸಿದನು.

ತರುವಾಯ ಊರ್ಮಿಳೆ, ಶ್ರುತಕೀರ್ತಿ, ಮಾಂಡವಿಯರೆಂಬ ಮೂವರು ಕನ್ಯೆಯರನ್ನು ರಾಮನ ಸಹೋದರರಾದ ಲಕ್ಷ್ಮಣ, ಭರತ, ಶತ್ರುಘ್ನರಿಗೆ ಕೊಟ್ಟು ವೈಭವದಿಂದ ವಿವಾಹವನ್ನು ನೆರವೇರಿಸಿದನು. ನಂತರ ಸ್ವಯಂವರಕ್ಕೆ ಬಂದಿದ್ದ

ಅಮರರು, ಮಾನವರೆಲ್ಲರೂ ಆ ಶುಭವಿವಾಹಮಹೋತ್ಸವದಲ್ಲಿ ಭಾಗವಹಿಸಿ ಆನಂದಿಸಿ ತಂತಮ್ಮ ಸ್ಥಳಗಳಿಗೆ ಬಂದಂತೆಯೇ ಮರಳಿದರು. ದಶರಥನು ಸುತರು, ಸೊಸೆಯಂದಿರು, ಪತ್ನಿಯರು, ಬಂಧು-ಬಾಂಧವರೊಡನೆ ಸಂತೋಷದಿಂದ ತನ್ನ ರಾಜಧಾನಿಯಾದ ಅಯೋಧ್ಯೆಗೆ ಹೊರಟನು.

ಇಂತು ಪಯಣ ಹೊರಟ ದಶರಥನು ಮಾರ್ಗಮಧ್ಯದಲ್ಲಿ ಭೃಗುಕುಲ ತಿಲಕನಾದ ಪರಶುರಾಮನನ್ನು ಕಂಡನು. ಆಗ ಪರಶುರಾಮನು ಸಹಸ್ರಾರು ಲಕ್ಷ ಸೂರ್ಯರು ಏಕಕಾಲದಲ್ಲಿ ಉದಯಿಸಿದರೆ ಉಂಟಾಗುವ ಕಿರಣನಿಚಯದ ತೇಜಸ್ಸನ್ನೂ ಮೀರಿ ಕಂಗೊಳಿಸುತ್ತಿದ್ದನು. ಹೀಗೆ ಪರಶುರಾಮನು ತನ್ನ ಕಾಂತಿಕಿರಣಮಂಡಲದಿಂದ ಕಣ್ಣು ಕೋರೈಸುವಂತೆ ಪ್ರಕಾಶಿಸುತ್ತಾ ಕರದಲ್ಲಿ ದೇದೀಪ್ಯಮಾನವಾದ ಧನುಸ್ಸು ಮತ್ತು ಪರಶುಗಳನ್ನು ಹಿಡಿದಿದ್ದನು. ಆ ಪರಶುವೂ ಪ್ರಖರಕಿರಣಗಳ ಕಾಂತಿಯಿಂದ ಬೆಳಗುತ್ತಿದ್ದಿತು.

ಆದಿಪುರುಷನಾದ ಶ್ರೀಮನ್ನಾರಾಯಣನೇ ರಾಮಚಂದ್ರನಾಗಿ ಧರೆಯಲ್ಲಿ ಅವತರಿಸಿರುವನೆಂಬುದನ್ನರಿಯಲಾಗದ ಪಾಮರ ಜನರಿಗೆ ಅವನು ವಿಷ್ಣುವೆಂಬುದನ್ನು ನಿದರ್ಶನಪೂರ್ವಕ ತಿಳಿಸಿಕೊಡಲು ಪರಶುರಾಮನು ಶ್ರೀರಾಮನನ್ನು ಸ್ಪರ್ಧೆಯಲ್ಲಿ ತನ್ನನ್ನು ಜಯಿಸಲಾಹ್ವಾನಿಸಿದನು. ಅದನ್ನು ನೋಡಿ ದಶರಥರಾಜನು ಭಯಗೊಂಡು ಪರಶುರಾಮನಿಗೆ ವಂದಿಸಿ ''ಸ್ವಾಮಿ, ನಾನು ಬಹುವೃದ್ಧನಾಗಿರುವೆ. ಬಹುಕಾಲದ ಮೇಲೆ ವೃದ್ಧಾಪ್ಯದಲ್ಲಿ ನನಗೆ ಮಕ್ಕಳಾಗಿದ್ದಾರೆ. ನನ್ನ ಪ್ರೀತಿಯ ಪುತ್ರನಾದ ರಾಮನನ್ನು ದಯಮಾಡಿ ಸಂಹರಿಸಬೇಡಿ'' ಎಂದು ಬೇಡಿದನು.

ಅವನ ವಚನವನ್ನಾಲಿಸಿ ಭಾರ್ಗವರಾಮನು ''ನರೇಂದ್ರ, ರಾಮನನ್ನು ಬಿಟ್ಟು ನಿನ್ನ ಉಳಿದ ಮೂವರು ಪುತ್ರರನ್ನು ಬಿಟ್ಟುಕೊಡುವೆನು. ಈ ರಾಮನು ರಣರಂಗದಲ್ಲಿ ನಿಂತು ಭುಜಬಲಪರಾಕ್ರಮವನ್ನು ತೋರುವ ಬಗೆಯನ್ನು ನಾನು ಕಣ್ಣಾರ ಕಾಣಬಯಸಿ ಇಲ್ಲಿಗೆ ಬಂದಿರುವೆನು'' - ಎಂದು ಹೇಳಿ ರಾಮನತ್ತ ತಿರುಗಿ ಇಂತೆಂದನು - ''ನಾನು ಪುರಾತನನಾದ ಶ್ರೀಹರಿಯೇ ಹೊರತು ಬೇರೆಯಲ್ಲ'' ಎಂದು ಹೇಳುತ್ತಾ ಅಜ್ಞ ಜನರಿಗೆ ರಾಮಪರಶುರಾಮರ ಉಭಯರೂಪಗಳಲ್ಲಿರುವ ಅಭೇದವನ್ನು ಪ್ರದರ್ಶಿಸಿ ತನ್ನದೇ ಆದ ಮತ್ತೊಂದು ರೂಪದಲ್ಲಿರುವ ಶ್ರೀರಾಮನನ್ನು ಕುರಿತು ''ಈ ನನ್ನ ಮುಂದೆ ನಿಂತಿರುವ ರಾಮರೂಪದ ಶ್ರೀಹರಿಯೇ ನಾನು!'' ಎಂದನು. ಮತ್ತೆ ರಾಮನನ್ನು ನೋಡಿ ''ಅಯ್ಯಾ ಶ್ರೀರಾಮಚಂದ್ರ! ನನ್ನ ಮಾತನ್ನಾಲಿಸು. ಹಿಂದೆ ಅದ್ಭುತವಾದ ಎರಡು ಧನುಸ್ಸುಗಳು ಉದ್ಭವಿಸಿದ್ದವು. ಅವುಗಳಲ್ಲೊಂದನ್ನು ಉಮಾಧವನಾದ ಪರಮೇಶ್ವರನು ಸ್ವೀಕರಿಸಿದನು. ಪರಮಶ್ರೇಷ್ಠವಾದ ಇನ್ನೊಂದು ಧನುವನ್ನು ರಮಾಧವನಾದ ಶ್ರೀಹರಿಯು ಧರಿಸಿದನು. ಆಗ ರಣಭೂಮಿಯಲ್ಲಿ ಹೋರಾಡಲು ಪ್ರತಿಭಟನಾಗಿ ನಿಂತ ನಾರಾಯಣನನ್ನು ನೋಡಲು ಸಹ ಶಿವನು ಶಕ್ತನಾಗಲಿಲ್ಲ. ಅಷ್ಟೇ ಅಲ್ಲ; ಒಂದಂಗುಲ ಅಲುಗಾಡಲೂ ಅಸಮರ್ಥನಾದನೆಂದಮೇಲೆ ಕೇಳುವುದೇನು? ಯುದ್ಧ ಮಾಡುವುದಂತೂ ದೂರವೇ ಉಳಿಯಿತು! ಹರಿ-ಹರರ ಬಲಪರೀಕ್ಷೆಗಾಗಿ ಅಲ್ಲಿ ಸೇರಿದ್ದ ಸಕಲ ಅಮರರು ಒಟ್ಟಾಗಿ ಜಗದೊಡೆಯನಾದ ಶ್ರೀಹರಿಯ ಮಹಾಬಲದ ಮಹತ್ವವನ್ನು ಉಚ್ಚ ಕಂಠದಿಂದ ಪ್ರಶಂಸಿಸಲಾರಂಭಿಸಿದರು. ''ದೇವದೇವ! ಶ್ರೀವಾಯುದೇವರ ದಯವಿಲ್ಲದೊಡೆ ಈ ಉಮಾಧವನು ಉಸಿರಾಡಲೂ ಸಮರ್ಥನಾಗಲಾರನೆಂದ ಬಳಿಕ ಅಂಥ ವಾಯುದೇವನಿಗೂ ನಿಯಾಮಕನಾದ ನಿನ್ನ ಬಲವು ಈ ಶಿವನ ಬಲಕ್ಕಿಂತ ಅಧಿಕವೆಂಬುದರಲ್ಲಿ ಸಂದೇಹವುಂಟೆ?'' ಆಗ ರುದ್ರದೇವನು ಜನಾರ್ದನನಿಗೆ ಶಿರಬಾಗಿ ವಂದಿಸಿದನು. ಸುಪ್ರೀತನಾದ ನಾರಾಯಣನು ಕೃಪಾದೃಷ್ಟಿಯಿಂದ ಹರನನ್ನು ನೋಡಿ ಮಂದಹಾಸ ಬೀರಿದನು. ಆಗ ರುದ್ರದೇವನು ಶ್ರೀಹರಿಯ ಕರುಣೆಗೆ ಪಾತ್ರನಾಗಿ ಕೈಲಾಸ ಮಂದಿರಕ್ಕೆ ತೆರಳಿದನು. ರಾಮಚಂದ್ರ! ಜನಕರಾಜನ ಸಭೆಯಲ್ಲಿ ನೀನು ಅಂಥ ಹರನ ಬಿಲ್ಲನ್ನು ಸಕಲ ಜನರೆದುರು ಮುರಿದು ಹಾಕಿರುವೆ. ಇತ್ತ ನೋಡು. ಇದು ಆ ಮತ್ತೊಂದು ಧನುವು! ಇದು ಶ್ರೀಹರಿಯ ಕರದಲ್ಲಿ ಶೋಭಿಸಲು ಯೋಗ್ಯವಾದುದು. ಶಿವಧನುಸ್ಸಿಗಿಂತ ಇದು

ಕೋಟಿಗುಣ ಶಕ್ತಿಯಲ್ಲಿ ಶ್ರೇಷ್ಠವಾದುದು. ಇಂತಹ ಉತ್ತಮವಾದ ಧನುಷ್ಯವನ್ನು ನಾನು ಇಟ್ಟಿಕೊಂಡಿರುವೆನು. ಇದು ವೈಷ್ಣವ ಧನುಸ್ಸು! ಇದನ್ನು ತೆಗೆದುಕೋ, ನೀನಿದನ್ನು ಒಂದು ವೇಳೆ ಹೆದೆಯೇರಿಸಿ ಎಳೆದು ಬಾಣ ಹೂಡಿ ಪ್ರಯೋಗಿಸಿದರೆ; ಆಗ ನೀನು ನಿಜವಾಗಿ ವಿಷ್ಣುವೇ ಅಹುದು! ಇದರಲ್ಲಿ ಸಂದೇಹಬೇಡ'' ಎಂದು ನುಡಿದು ಪರಶುರಾಮನು ಶ್ರೇಷ್ಠವಾದ ಆ ವೈಷ್ಣವಧನುಷ್ಯವನ್ನು ಕೊಡುತ್ತಾ ಹರನ ಬಲಕ್ಕಿಂತ ಶ್ರೀಹರಿಯ ಬಲವೇ ಶ್ರೇಷ್ಠವಾದುದೆಂಬ ಅಂಶವನ್ನು ಜಗತ್ತಿಗೆ ತೋರಿಕೊಡಲು ಪ್ರಯತ್ನಿಸಿದನು.

ಪರಶುರಾಮನ ಮಾತನ್ನಾಲಿಸಿ ಶ್ರೀರಾಮನು ಆ ಧನುಷ್ಯವನ್ನು ಕೈಗೆ ತೆಗೆದುಕೊಂಡು ಸಜ್ಜುಗೊಳಿಸಿ ಒಂದೇ ನಿಮಿಷದಲ್ಲಿ ಲೀಲೆಯಿಂದಲೇ ಅದನ್ನು ಸೆಳೆದು ಗುಣಬಂಧನ ಮಾಡಿದನು. ಅಲ್ಲಿ ಸೇರಿದ್ದ ಜನರು ಈ ಅಚ್ಚರಿಯನ್ನು ನೋಡುತ್ತಿರುವಂತೆಯೇ ರಾಮನು ಧನುಸ್ಸಿಗೆ ಬಾಣ ಹೂಡಿ ಜನರ ಸಂದೇಹವನ್ನು ಪರಿಹರಿಸಿದನು. ರುದ್ರದೇವರ ಬಲಕ್ಕಿಂತ ಶ್ರೀಹರಿಯ ಬಲವು ಅಧಿಕವೆಂಬುದನ್ನು ತೋರಿದ ಮೇಲೆ ಆದಿಪುರುಷನಾದ ಪರಶುರಾಮನು ಮೇಘಗಂಭೀರ ಧ್ವನಿಯಿಂದ ಶ್ರೀರಾಮನನ್ನು ಕುರಿತು ''ರಾಮಚಂದ್ರ! ನಿನ್ನ ಬಲವು ಸಕಲಲೋಕದ ಬಲಕ್ಕಿಂತ ಶ್ರೇಷ್ಠವಾದುದು. ಆದ್ದರಿಂದ ನೀನು ಸಾಕ್ಷಾತ್ ನಾರಾಯಣನೇ ಆಗಿದ್ದೀಯೆ! ಇದು ನಿಜ. ಕೇಳಿಲ್ಲಿ. ಲೋಕಮಯನೂ, ತಪೋಮಯನೂ ಆದ ದೊಡ್ಡ ಅಸುರನೊಬ್ಬನು ಬ್ರಹ್ಮದೇವರ ವರದಿಂದ ಬಲಿಷ್ಠನಾಗಿರುವನು. ಅವನ ಮೇಲೆ ನಿನ್ನೀ ಬಾಣವನ್ನು ಪ್ರಯೋಗಿಸು! ಅವನ ವಿಚಾರವನ್ನು ಹೇಳುವೆನು ಕೇಳು. ಹಿಂದೆ ಅತುಲನೆಂಬ ಒಬ್ಬ ಮಹಾ ಅಸುರನು ಬ್ರಹ್ಮದೇವರನ್ನು ಕುರಿತು ತಪಸ್ಸು ಮಾಡಿ ಅವರನ್ನು ಮೆಚ್ಚಿಸಿ ಲೋಕಮಯನಾಗುವ ವರವನ್ನು ಪಡೆದನು. ಆಗ ಬ್ರಹ್ಮದೇವರು ಅವನನ್ನು ಕುರಿತು ''ಯಾವಾಗ ಜಗದ್ಗುರುವಾದ ಶ್ರೀಹರಿಯು ಸೋತವನಂತೆ ಕಾಣಿಸುವನೋ ಆಗಲೇ ನೀನು ಅವನಿಂದ ಹತನಾಗುವೆ'' ಎಂದು ಹೇಳಿದನು. ಆದ್ದರಿಂದ ಲೋಕವನ್ನು ನಾಶಪಡಿಸುತ್ತಿರುವ ಈ ಅಸುರನನ್ನು ವಧಿಸಲೆಂದು, ಅಜೇಯನಾಗಿದ್ದರೂ ನಾನು ನಿನ್ನ ಮುಂದೆ ಸೋತುಹೋದವನಂತೆ ಕಾಣಿಸುತ್ತಿರುವೆನು'' ಎಂದುಸುರಿದನು. ಅನಂತರ ಶ್ರೀರಾಮನು ಕೂಡಲೇ ಜಗನ್ನಾಶಕನಾದ ಆ ಲೋಕಮಯ ಅಸುರನ ಮೇಲೆ ಬಾಣವನ್ನು ಬಿಟ್ಟನು.

ಹಿಂದೊಮ್ಮೆ ಆ ಅಸುರನು ಮತ್ತೊಂದು ಸಲ ಶಿವನನ್ನು ತಪಸ್ಸಿನಿಂದ ಮೆಚ್ಚಿಸಿದನು. ಶಿವನು ನಿನಗೇನು ವರಬೇಕು? ಎಂದು ಕೇಳಲು ಅಸುರನು ಮೋಕ್ಷವನ್ನು ಬಯಸಿದನು. ಅದಕ್ಕೆ ರುದ್ರನು ಆ ಅಸುರನಿಗೆ ''ನೀನು ವಿಷ್ಣುವಿನ ಶರೀರದಲ್ಲಿ ಪ್ರವೇಶ ಮಾಡಿದರೆ ನಿನಗೆ ಮುಕ್ತಿಯಾಗುವುದು'' ಎಂದು ಹೇಳಿ ಅದರಂತೆ ವರವಿತ್ತಿದ್ದನು. ಆದರ ಬಲದಿಂದ ಆ ಅಸುರನು ಪರಶುರಾಮ ದೇವರ ಶರೀರದಲ್ಲಿ ನೆಲೆಸಿದ್ದನು. ಶ್ರೀರಾಮನ ಬಾಣದಿಂದಲೂ ಪರಶುರಾಮರೂಪಿ ಹರಿಯ ಅಪ್ಪಣೆಯಿಂದಲೂ ಆ ಅಸುರನು ಪರಶುರಾಮನ ದೇಹದಿಂದ ಹೊರಬಂದು ಕೂಡಲೇ ಸುಟ್ಟು ಬೂದಿಯಾದನು. ಇಂತು ರಘುರಾಮನು ಭಾರ್ಗವರಾಮನಿಂದ ಧನುರ್ಬಾಣಗಳನ್ನು ಪಡೆದು ಅವನ ಮೇಲೆ ಅದನ್ನು ಪ್ರಯೋಗಿಸಿ ಅವನ ಒಳಗಿದ್ದು ತಪಸ್ಸು ಮಾಡುತ್ತಿದ್ದ ಅತುಲನಾಮಕ ಅಸುರನನ್ನು ಸಂಹರಿಸಿ ಲೋಕಕಂಟಕವಾಗಿದ್ದ ಅವನ ತಪಸ್ಸನ್ನು ಪರಿಹರಿಸಿ ಸಂತೋಷಿಸಿದನು. ನೋಡಿದವರಿಗೆ ಅದು ಪರಶುರಾಮನ ತಪಸ್ಸೆಂಬ ಭ್ರಾಂತಿ ಬರುವಂತಿತ್ತು.

ಆದಿಪುರುಷನಾದ ಶ್ರೀರಾಮನು ಸದಾ ಆನಂದಾತಿಶಯ ಜ್ಞಾನಗಳ ಸಾರರೂಪನಾಗಿದ್ದಾನೆ. ಅವನು ಪ್ರಪಂಚದ ಎಲ್ಲ ವಿಚಾರಗಳನ್ನೂ ಬಲ್ಲ. ಆದರೂ ರೂಪದ್ವಂದ್ವನಾದ ಅವನು ಒಂದುರೂಪದಿಂದ ಹೇಳುವವನಂತೆ, ಮತ್ತೊಂದು ರೂಪದಿಂದ ಕೇಳುವವನಂತೆ ತೋರುವನು. ಅವನಿಗಿದೊಂದು ಲೀಲಾವಿನೋದ. ಅವನು ಒಬ್ಬನೇ, ರೂಪಗಳು ಮಾತ್ರ ಎರಡು. ಹೀಗೆ ರಾಮನು ತನ್ನ ವೈಭವವನ್ನು ಪ್ರದರ್ಶಿಸಿ ಮುದಗೊಂಡನು. ಈ ಬಗೆಯ ಅವನ ಲೀಲೆಗಳು ಭಕ್ತರಿಗೆ ಭಗವಂತನ ಉತ್ತಮ ತತ್ತ್ವಜ್ಞಾನಕ್ಕೆ ಕಾರಣವಾಗಿವೆ. ಅವನ ಭಕ್ತರಲ್ಲದವರಿಗೆ ಅದು ಹೆಚ್ಚು ಮರೆವನ್ನು ತಂದು ನೀಡುವುದು. ಇಂಥ ಮಹಾ

ಮಹಿಮನಾದ ಅವನೇ ಬೇರೊಬ್ಬ ಮಾನವನಲ್ಲಿ ನೆಲೆಸಿದವನಂತೆ ಕಾಣಿಸುತ್ತಾ ಒಬ್ಬನೇ ತಾನಾಗಿ ಆನಂದದಿಂದ ವಿಹರಿಸುವನು.

ಅನಂತರ ಕಾರುಣ್ಯನಿಧಿಯಾದ ರಘುರಾಮನು ತಾನು ಒಬ್ಬನೇ ಎಂದೂ, ಆ ಎರಡು ರೂಪದಲ್ಲಿರುವವನೂ ತಾನೇ ಎಂದೂ ಪ್ರಕಟಗೊಳಿಸುತ್ತಾ ಭೃಗುಶ್ರೇಷ್ಠನಾದ ಪರಶುರಾಮನು ಸರ್ವರ ಸಮಕ್ಷ ಒಮ್ಮೆ ರಾಮನಾಗಿ ಮತ್ತೊಮ್ಮೆ ಪರಶುರಾಮನಾಗಿ ತಾವಿಬ್ಬರೂ ಒಬ್ಬನೇ ಎಂದು ತಮ್ಮಿಬ್ಬರಲ್ಲಿ ಐಕ್ಯವನ್ನು ತೋರಿಕೊಟ್ಟನು. ಇಂತು ಪರಶುರಾಮರೂಪಿ ರಮಾವಲ್ಲಭನು ತನ್ನೆರಡು ರೂಪದ ಲೀಲೆಯನ್ನು ನೋಡುತ್ತಾ ನಿಂತ ಭಕ್ತ ಜನರಿಗೆ ತನ್ನ ಮತ್ತು ರಾಮನ ಐಕ್ಯವನ್ನು ತೋರಿಸಿ ಅವರ ಎಲ್ಲ ಸಂದೇಹಗಳನ್ನೂ ಪರಿಹರಿಸಿ ಶ್ರೀರಾಮನಿಗೆ ಶ್ರೇಷ್ಠವಾದ ತನ್ನ ವೈಷ್ಣವಧನುವನ್ನು ಕೊಟ್ಟು ಅವನಿಂದ ಬೀಳ್ಕೊಂಡು ತನ್ನ ಸ್ಥಳಕ್ಕೆ ಮರಳಿದನು.

ಅನಂತರ ದಶರಥ ಚಕ್ರವರ್ತಿಯು ಈ ಅದ್ಭುತವನ್ನು ಕಂಡು ಅತ್ಯಾನಂದತುಂದಿಲನಾಗಿ ನಾಲ್ವರು ಮಕ್ಕಳು, ಬಂಧುಬಾಂಧವರು, ಪರಿವಾರವರ್ಗದಿಂದೊಡಗೂಡಿ ರಾಜಧಾನಿಯಾದ ಅಯೋಧ್ಯಾನಗರಿಗೆ ಸುಖವಾಗಿ ಪ್ರಯಾಣ ಬೆಳೆಸಿದನು.

ಶ್ರೀರಾಮಚಂದ್ರನು ರಾಜಧಾನಿಯಲ್ಲಿ ರಮಾಸ್ವರೂಪಿಯಾದ ಜನಕ ನಂದಿನಿ ಸೀತಾದೇವಿಯೊಡನೆ ವಿಹರಿಸುತ್ತಾ ಸುಖವಾಗಿದ್ದನು. ಹಿಂದೆ ಸಿರಿಯರಸನಾದ ಶ್ರೀನಾರಾಯಣನು ರಮಾದೇವಿಯೊಡನೆ ಕ್ಷೀರಸಮುದ್ರದಲ್ಲಿ ಮುದದಿಂದ ವಿಹರಿಸುತ್ತಿದ್ದಂತೆ ಶ್ರೀರಾಮನು ಸೀತಾದೇವಿಯೊಡನೆ ಆನಂದದಿಂದ ವಿಹರಿಸುತ್ತಾ ಅಯೋಧ್ಯಾ ಪಟ್ಟಣದಲ್ಲಿ ಬಹುಕಾಲ ಸುಖದಿಂದ ವಾಸಿಸಿದನು.

ಇವೆಲ್ಲವೂ ಶ್ರೀರಾಮರೂಪಿ ಶ್ರೀಹರಿಯ ವಿವಿಧ ಲೀಲೆಗಳು. ಇವನ್ನು ತೋರುವುದು ಅವನಿಗೊಂದು ದೊಡ್ಡಕಾರ್ಯವಲ್ಲ. ಅವನ ಶಕ್ತಿ ಅಪಾರ ಮತ್ತು ಅನಂತ. ಆ ಪ್ರಭುವಿನ ಲೀಲಾವೈಭವವನ್ನು ಬಣ್ಣಿಸುವುದು ನನ್ನ ಮೊದಲ ಕರ್ತವ್ಯವೆಂದು ಭಾವಿಸಿ ಅದನ್ನು ವರ್ಣಿಸಲು ಉದ್ಯುಕ್ತನಾಗಿರುವೆನು. ಇಂತು ಶ್ರೀಮಧ್ವಾಚಾರ್ಯರು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ವಿಸ್ತಾರವಾಗಿ ನಿರೂಪಿಸಿರುವ ನಾಲ್ಕನೆಯ ಅಧ್ಯಾಯಾರ್ಥ ನಿರ್ಣಯದ ಭಾವವನ್ನು ಸಂಗ್ರಹಿಸಿ ಶ್ರೀರಾಮಕಥಾ ಭಾಗವನ್ನು ಶ್ರೀಗುರುಸಾರ್ವಭೌಮರು ತಮ್ಮ ಶ್ರೇಷ್ಠಗ್ರಂಥದಲ್ಲಿ ನಿರೂಪಿಸಿದ್ದಾರೆ.

*ಮಹಾಭಾರತ ತಾತ್ಪರ್ಯ ನಿರ್ಣಯದ ಅಯೋಧ್ಯಾಪ್ರವೇಶವೆಂಬ*

*ನಾಲ್ಕನೆಯ ಅಧ್ಯಾಯದ ಕಥಾಸಂಗ್ರಹವು ಮುಗಿದುದು.*

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★

## ಪಂಚಮಾಧ್ಯಾಯಭಾವಸಂಗ್ರಹ

*ಅವತಾರಿಕೆ:-*

**ತ್ಯಕ್ತ್ವಾ ರಾಜ್ಯಮಿತೋ ವನಂ ವಚನತೋ ಮಾತುಶ್ಚ ಕಾಕಾಕ್ಷಿಗಂ**
**ದೈತ್ಯಂ ವ್ಯಸ್ಯ ವಿಕರ್ಣಘೋಣಖಚರೀಬಂಧೂನ್ ಖರಾದೀನ್ ಖಲಾನ್ ।**
**ಮಾರೀಚಂ ಚ ನಿಹತ್ಯ ರಾವಣಹೃತಾಂ ಸೀತಾಂ ವಿಚಿನ್ವನ್ನಿವ**
**ಪ್ರಾಪ್ತೋ ವಾಯುಸುತೇನ ಸೂರ್ಯಜಯುಜಾ ರಾಮೋಽವತಾದ್ವಂದಿತಃ ॥ 5 ॥**

**ಅನ್ವಯಾರ್ಥ :-** ಯಃ = ಯಾವ ಶ್ರೀರಾಮನು, **ಮಾತುರ್ವಚನತಃ** = ತಾಯಿಯಾದ ಕೈಕೇಯೀದೇವಿಯ ಮಾತಿನಂತೆ, **ರಾಜ್ಯಂ** = ತನ್ನ ರಾಜ್ಯವನ್ನು, **ತ್ಯಕ್ತ್ವಾ** = ಬಿಟ್ಟು, **ವನಮಿತಸ್ಸನ್** = ಅರಣ್ಯಕ್ಕೆ ಬಂದವನಾಗಿ, **ಕಾಕಾಕ್ಷಿಗಂ** = ಕಾಗೆಯ ಕಣ್ಣಿನಲ್ಲಿದ್ದ, **ದೈತ್ಯಂ ಚ** = (ತುರಂಗಾಸುರ) ಕಾಕಾಸುರನನ್ನು ಸಹ, **ವ್ಯಸ್ಯ** = ಸಂಹಾರ ಮಾಡಿ, **ವಿಕರ್ಣಘೋಣಖಚರೀಬಂಧೂನ್** - **ವಿಕರ್ಣಘೋಣಖಚರೀ** = ಕತ್ತರಿಸಲ್ಪಟ್ಟ ಕಿವಿ-ಮೂಗುಗಳುಳ್ಳ ಶೂರ್ಪಣಖಿಯೆಂಬ ರಕ್ಕಸಿಯ, **ಬಂಧೂನ್** = ಬಾಂಧವರನ್ನು, **ಖಲಾನ್** = ದುಷ್ಟರಾದ, **ಖರಾದೀನ್** = ಖರ-ದೂಷಣ-ತ್ರಿಶಿರಾದಿಗಳನ್ನೂ, **ಮಾರೀಚಂ ಚ** = ಮಾರೀಚನನ್ನೂ ಸಹ, **ನಿಹತ್ಯ** = ಸಂಹಾರಮಾಡಿ, **ರಾವಣಹೃತಾಂ** = ರಾವಣನಿಂದ ಅಪಹೃತಳಾದ, **ಸೀತಾಂ** = ಸೀತಾಪ್ರತಿಕೃತಿಯನ್ನು, **ವಿಚಿನ್ವನ್ನಿವ** = ಹುಡುಕುವವನಂತೆ, **ಸ್ಥಿತಃ** = (ಇದ್ದವನಾಗಿ) ನಟನೆ ಮಾಡುತ್ತಾ, **ಸೂರ್ಯಜಯುಜಾ** = ಸೂರ್ಯಪುತ್ರನಾದ ಸುಗ್ರೀವನಿಂದ ಯುಕ್ತನಾದ, **ವಾಯುಸುತೇನ** = ವಾಯುಪುತ್ರನಾದ ಹನುಮಂತನೊಡನೆ, **ಪ್ರಾಪ್ತಸ್ಸನ್** = ಸೇರಿದವನಾಗಿ, **ವಂದಿತಃ** = ಅವರಿಂದ ನಮಸ್ಕೃತನಾದ, **ರಾಮಃ** = ಶ್ರೀ ರಾಮಚಂದ್ರಪ್ರಭುವು, (**ನಃ** = ನಮ್ಮನ್ನು) **ಅವತಾತ್** = ಸಂರಕ್ಷಣ ಮಾಡಲಿ.

**ತಾತ್ಪರ್ಯ :-** ತಾಯಿಯಾದ ಕೈಕೇಯಿದೇವಿಯ ವಚನದಂತೆ ಪಿತೃವಾಕ್ಯಪರಿಪಾಲನಮಾಡಲು ತನ್ನ ರಾಜ್ಯವನ್ನು ತ್ಯಜಿಸಿದವನಾಗಿ ಸೀತಾಲಕ್ಷ್ಮಣರ ಜೊತೆಗೂಡಿ ಅರಣ್ಯಕ್ಕೆ ಬಂದು, ಅಲ್ಲಿ ಕಾಗೆಯು ಸೀತಾಮಾತೆಗೆ ಮಾಡಲೆತ್ನಿಸಿದ ಅಪಚಾರಕ್ಕಾಗಿ ಕಾಗೆಯ ರೂಪದಲ್ಲಿದ್ದ ಜಯಂತನ ಕಣ್ಣಿನಲ್ಲಿದ್ದ (ತುರಂಗನೆಂಬ ದೈತ್ಯನನ್ನು) ಕಾಕಾಸುರನನ್ನು ಸಂಹಾರ ಮಾಡಿ, ತನ್ನನ್ನು ಕಾಮಿಸಿಬಂದ ರಾವಣನ ತಂಗಿಯಾದ ಶೂರ್ಪಣಖಿಯೆಂಬ ರಾಕ್ಷಸಿಯ ಕಿವಿ-ಮೂಗುಗಳನ್ನು ಲಕ್ಷ್ಮಣ-ನಿಂದ ಛೇದನಮಾಡಿಸಿ, ಅವಳ ಬಂಧುಗಳಾದ ದುಷ್ಟರಾದ ಖರ-ದೂಷಣ-ತ್ರಿಶಿರಾದಿಗಳನ್ನು, ಸಮುದ್ರಕ್ಕೆಸೆದು ಸಂಹಾರ ಮಾಡಿ; ರಾಮಚಂದ್ರನು ತನ್ನ ತಂಗಿಯಾದ ಶೂರ್ಪಣಖಿಯ ಅಪಮಾನ ಮಾಡಿದನೆಂಬ ಕೋಪದಿಂದ ರಾವಣನು ಸೀತಾಪ್ರತಿಕೃತಿಯನ್ನು ಅಪಹರಿಸಿಕೊಂಡು ಹೋಗಲು, ಪ್ರಿಯಪತ್ನಿಯ ವಿರಹದಿಂದ ಅವಳನ್ನು ಹುಡುಕುವವನಂತೆ ನಟಿಸುತ್ತಾ ಕಿಷ್ಕಿಂಧೆಯಲ್ಲಿ ಸೂರ್ಯಪುತ್ರನಾದ ಸುಗ್ರೀವನಿಂದ ಸಹಿತನಾಗಿ ತನ್ನ ದರ್ಶನಕ್ಕಾಗಿ ಬಂದ ಶ್ರೀವಾಯುಸುತನಾದ ಹನುಮಂತದೇವರೊಡನೆ ಸೇರಿ ಅವರಿಂದ ನಮಸ್ಕೃತನಾದ ಶ್ರೀರಾಮಚಂದ್ರದೇವರು ನಮ್ಮನ್ನು ಕಾಪಾಡಲಿ ಎಂದು ಭಾವ.

## ಪಂಚಮಾಧ್ಯಾಯ ಕಥಾಸಂಗ್ರಹ

ಸಮಸ್ತ ಪ್ರಪಂಚಕ್ಕೆ ಪ್ರಭುವಾದ ಶ್ರೀರಾಮಚಂದ್ರಮೂರ್ತಿಯು ಸೀತಾಸಹಾಯನಾಗಿ ಅಖಿಲ ಜಗದ ಸಂರಕ್ಷಣೆಯ ಭಾರವನ್ನು ವಹಿಸಿ ಭೂಭಾರವನ್ನಿಳಿಸಲು ಧರೆಗಿಳಿದುಬಂದು ಶ್ರೀ ವಿಶ್ವಾಮಿತ್ರರ ಯಜ್ಞ ರಕ್ಷಣೆಯಿಂದ ಮೊದಲುಗೊಂಡು

ಪರಶುರಾಮರಿಂದ ವೈಷ್ಣವಧನುಷ್ಯವನ್ನು ಸಂಪಾದಿಸಿದವರೆಗೆ ತೋರಿದ ಅಸದೃಶ ಲೀಲಾವಿಲಾಸಗಳನ್ನು ಪರಿಕಿಸಿ (ನೋಡಿ) ಭೂತಳದ ಜನ ಜಂಗುಳಿಯು ಮುದಿಸಹತ್ತಿದರು. ಶ್ರೀರಾಮಚಂದ್ರನಲ್ಲಿ ಅಯೋಧ್ಯಾನಗರ ನಿವಾಸಿಗಳಿಗೆ ದಿನೇ ದಿನೇ ಭಕ್ತಿಯು ಅಭಿವೃದ್ಧಿಸಹತ್ತಿತು. ದಶರಥಮಹಾರಾಜನು ಪ್ರಿಯಕುವರ ರಾಮಭದ್ರನ ಮೂರ್ಧಾಭಿಷೇಕವನ್ನು ಬೇಗ ಕಂಡು ಆನಂದಿಸಲು ಮನದಲ್ಲಿ ಬಯಸಿದನು. ಸಕಲ ಮಂತ್ರಿಗಳೂ ಒಂದಾಗಿ ಶ್ರೀರಾಮನಿಗೆ ಪಟ್ಟಾಭೀಷೇಕವನ್ನು ನೆರವೇರಿಸಬೇಕೆಂದು ದಶರಥನನ್ನು ಪ್ರಾರ್ಥಿಸಿದರು. ತನ್ನ ಮನದೀಪ್ಸಿತವನ್ನೇ ಸಚಿವಮಂಡಲವು ಬಿನ್ನವಿಸಿದುದನ್ನು ಕೇಳಿ ದಶರಥನು ಮುದಗೊಂಡು ರಾಮಚಂದ್ರನಿಗೆ ಪಟ್ಟಕಟ್ಟಲು ನಿಶ್ಚಯಿಸಿದನು. ಅದೆಂತೋ ಈ ಸಂತಸದ ವಾರ್ತೆಯು ಕೈಕೇಯಿದೇವಿಯ ದಾಸಿಯಾದ ಮಂಥರೆಯ ಕಿವಿಗೆ ತಲುಪಿತು. ಇದನ್ನು ಕೇಳಿ ಕಡುನೊಂದ ಮಂಥರೆಯು ಅದು ನಡೆಯದಂತೆ ಮಾಡಲು ಪಣತೊಟ್ಟು ಶ್ರೀರಾಮಪ್ರಭುವಿನ ಮಂಗಳದ ಪಟ್ಟಾಭಿಷೇಕಕ್ಕೆ ವಿಘ್ನ ತಂದೊಡ್ಡಿದಳು.

ಕಲಿಯ ಪತ್ನಿಯಾದ ಅಲಕ್ಷ್ಮಿಯೇ ಮಂಥರೆಯಾಗಿ ಭುವಿಯೊಳು ಜನಿಸಿದ್ದಳು. ಹಿಂದೆ ಅವಳು ಅದೆಂತೋ ಕ್ಷೀರ ಸಮುದ್ರದಲ್ಲಿ ಜನಿಸಿ ಕಮಲಾಸನನ್ನು ಕುರಿತು ತಪವೆಸಗಿ ಬ್ರಹ್ಮದೇವನ ವರಪ್ರಭಾವದಿಂದ ಅಪ್ಸರೆಯಾಗಿ ಮೆರೆದಳು. ಮುಂದವಳು ಅಪ್ಸರೆಯಾಗಿದ್ದರೂ ಸ್ವರೂಪ ಗುಣಕ್ಕೆ ತಕ್ಕಂತೆ ಮಹಾಗರ್ವಿತಳಾಗಿ ತನ್ನ ಅಸುರ ಸ್ವಭಾವಕ್ಕನುಸರಿಸಿ ದುಷ್ಕರ್ಮಗಳನ್ನೆಸಗುತ್ತಾ ಬ್ರಹ್ಮದೇವರಿಗೆ ಕೋಪ ಬರುವಂತೆ ವರ್ತಿಸಹತ್ತಿದಳು. ಇದರಿಂದ ಕುಪಿತರಾದ ಚತುರಾನನರು ಅವಳನ್ನು ಅಂಧಂತಮಸ್ಸಿಗೆ ತಳ್ಳಬಯಸಿ ''ಎಲೈ ದುಷ್ಟೆ! ನೀನು ಭೂಲೋಕದಲ್ಲಿ ಶ್ರೀರಾಮನ ಪಟ್ಟಾಭಿಷೇಕಕ್ಕೆ ವಿಘ್ನ ಮಾಡಿ ನಿನ್ನ ಸ್ವರೂಪ ಯೋಗ್ಯತೆಗೆ ತಕ್ಕುದಾದ ತಮೋಲೋಕಕ್ಕೆ ತೆರಳು. ನೀಗೈದ ಪಾಪಕರ್ಮಗಳಿಗೆ ಇದುವೇ ಸರಿಯಾದ ಫಲ'' ಎಂದು ಅವಳಿಗೆ ಶಾಪವಿತ್ತರು. ಪದ್ಮಸಂಭವರ ಶಾಪದ ಫಲವಾಗಿ ಅಲಕ್ಷ್ಮಿಯು ಮಂಥರೆಯಾಗಿ ಭೂಮಿಯಲ್ಲಿ ಹುಟ್ಟಿ ಕೈಕೇಯಿದೇವಿಯ ದಾಸಿಯಾಗಿ ಶ್ರೀರಾಮನ ಪಟ್ಟಾಭಿಷೇಕಕ್ಕೆ ವಿಘ್ನ ತರಲು ಸಮಯವನ್ನು ನಿರೀಕ್ಷಿಸುತ್ತಿದ್ದಳು.

ಪೂರ್ವದಲ್ಲಿ ಒಮ್ಮೆ ದಶರಥನು ದೇವತೆಗಳ ಪಕ್ಷ ವಹಿಸಿ ದೈತ್ಯರೊಡನೆ ಯುದ್ಧ ಮಾಡಹೊರಟನು. ಆಗ ಅವನ ಪ್ರೇಮದ ರಾಣಿಯಾದ ಕೈಕೇಯಿಯೂ ಹೋಗಿದ್ದಳು. ದೈತ್ಯರೊಡನೆ ಭರದಿಂದ ಯುದ್ಧ ಸಾಗಿರಲು ದಶರಥನ ರಥದ ಗಾಲಿಯ ಕಡಾಣಿಯು ಮುರಿದುಹೋಯಿತು. ಅದನ್ನು ಗಮನಿಸಿದ ಕೈಕೇಯಿಯು ತಕ್ಷಣ ರಥದಿಂದ ಹಾರಿ ರಥದ ದೂರಿಗೆ ತನ್ನ ಕರವನ್ನೇ ಆಸರೆಯಾಗಿತ್ತು ಪತಿಗೊದಗಿದ್ದ ಅಪಾಯವನ್ನು ತಪ್ಪಿಸಿದಳು. ಯುದ್ಧದಲ್ಲಿ ದಶರಥನು ವಿಜಯಿಯಾದನು. ಅನಂತರ ಅವನಿಗೆ ಪತ್ನಿಯಿಂದ ತನಗಾದ ಸಹಾಯದ ವಿಚಾರ ತಿಳಿಯಿತು. ಅದರಿಂದ ಹರ್ಷಗೊಂಡು ಪ್ರಿಯಸತಿಯನ್ನು ಮುದಗೊಳಿಸಲು ಅವಳಿಗೆ ಎರಡು ವರಗಳನ್ನಿತ್ತನು. ಕೈಕೇಯಿಯು ಆ ಎರಡು ವರಗಳನ್ನು ಸಮಯ ಬಂದಾಗ ಬೇಡುವುದಾಗಿ ಹೇಳಿದ್ದಳು. ಈ ಹಿನ್ನೆಲೆಯನ್ನು ಅರಿತಿದ್ದ ಮಂಥರೆಯು ಕೈಕೇಯಿಯ ಹಿತೈಷಿಯಂತೆ ನಟಿಸುತ್ತಾ ತನ್ನ ಕಪಟಜಾಲದಲ್ಲಿ ರಾಣಿಯನ್ನು ಸಿಕ್ಕಿಸಿಕೊಂಡು ದುಷ್ಟಮಾತುಗಳಿಂದ ಶ್ರೀರಾಮನ ಬಗ್ಗೆ ಅವಳ ಮನಸ್ಸನ್ನು ಕೆಡಿಸಿ ಭರತನಿಗಾಗಿ ಆ ಎರಡು ವರಗಳನ್ನು ಈಗಲೇ ಬೇಡಿ ಇಷ್ಟಾರ್ಥವನ್ನು ಸಾಧಿಸಿಕೊಳ್ಳಬೇಕೆಂದು ಉಪದೇಶಿಸಿ ಪ್ರೋತ್ಸಾಹಿಸಿದಳು. ಕೈಕೇಯಿಯು ಮಂಥರೆಯ ದುರ್ಬೋಧನೆಗೊಳಗಾಗಿ ಪತಿಗೆ ಅವನು ದೇವಾಸುರ ಯುದ್ಧಕಾಲದಲ್ಲಿ ತನಗಿತ್ತಿದ್ದ ಎರಡು ವರಗಳ ವಿಚಾರವನ್ನು ನೆನಪಿಗೆ ತಂದು ಒಂದು ವರದಿಂದ ಶ್ರೀರಾಮಚಂದ್ರನಿಗೆ ರಾಜ್ಯವಿಲ್ಲದಂತೆ ಮಾಡಿ ರಾಮನ ರಾಜ್ಯವನ್ನು ತನ್ನ ಕುಮಾರ ಭರತನಿಗಾಗಿ ಅಪಹರಿಸಿದಳು. ಮತ್ತೊಂದು ವರದಿಂದ ಶ್ರೀರಾಮನಿಗೆ ಹದಿನಾಲ್ಕು ವರ್ಷ ವನವಾಸವನ್ನು ವಿಧಿಸಿದಳು.

ಶ್ರೀರಾಮನು ಪೂಜ್ಯ ಜನಕನ ವಾಕ್ಯವನ್ನು ಸತ್ಯ ಮಾಡಬೇಕೆಂಬ ಗೌರವ ಬುದ್ಧಿಯಿಂದಲೂ ತನ್ನ ಅವತಾರ ಕಾರ್ಯವನ್ನು ನಿರ್ವಹಿಸಲು, ಅಂದರೆ ಸುರರು ಮತ್ತು ಋಷಿಮುನಿಗಳ ಪ್ರಾರ್ಥನೆಯನ್ನು ಪೂರ್ಣಮಾಡಲೂ ಸಹ

ಸೀತಾದೇವಿ, ಲಕ್ಷ್ಮಣರಿಂದೊಡಗೂಡಿ ದಂಡಕಾರಣ್ಯಕ್ಕೆ ಪಯಣ ಬೆಳೆಸಿದನು. ಲಕ್ಷ್ಮಣನು ಅಣ್ಣನ ಅನುಚರನಾದನು. ಅವನಿಗೆ ಅಗ್ರಜನಲ್ಲಿ ಅಮಲ ಭಕುತಿಯು ಅಭಿವೃದ್ಧಿಸತೊಡಗಿತು. ರಾಜ್ಯದ ಸಕಲ ನರನಾರಿಯರು, ಪಶುಪಕ್ಷ್ಯಾದಿ ಜಂತುಗಳು ರಾಮನ ಅಗಲುವಿಕೆಯ ದುಃಖವನ್ನು ಸಹಿಸಲಾರದೆ ಆಹಾರ ನಿದ್ರೆಗಳನ್ನು ಬಿಟ್ಟವು. ಪುರಜನರು ಸಕಲ ಇಷ್ಟಭೋಗಗಳಲ್ಲಿ ಆಶೆಯನ್ನು ತ್ಯಜಿಸಿದರು. ಅವರಿಗೆ ರಾಮಚಂದ್ರನಲ್ಲಿ ಭಕ್ತಿಯು ಇನ್ನೂ ಹೆಚ್ಚತೊಡಗಿತು.

ಹೀಗೆ ಶ್ರೀರಾಮನು ಮರ, ಗಿಡ, ಪಕ್ಷಿಗಳು, ಆನೆ, ಕೀಟ ಮೊದಲಾದ ಜಂತುಗಳನ್ನೂ, ತಾಯಿ-ತಂದೆ, ಮಿತ್ರರೇ ಮೊದಲಾದ ಹಿತೈಷಿಗಳನ್ನೂ ಬಿಟ್ಟು ಬರುವಾಗ ಪುಣ್ಯಸ್ವರೂಪಿಣಿಯಾಗಿ ನಲುವಿನಿಂದ ಹರಿಯುತ್ತಿದ್ದ ಗಂಗಾನದಿಯನ್ನು ಕಂಡು ಅಲ್ಲಿ ಗುಹನೆಂಬ ಕಿರಾತನೆಸಗಿದ ಪಾದಪೂಜೆ-ಆತಿಥ್ಯಗಳನ್ನು ಸ್ವೀಕರಿಸಿ ಅವನನ್ನು ಅನುಗ್ರಹಿಸಿದನು. ಗುಹನು ರಾಮನಿಗೆ ಗೈದ ಪೂಜೆಯು ಷಣ್ಮುಖನು ರುದ್ರದೇವನಿಗೆಸಗಿದ ಪೂಜೆಯಂತಿತ್ತು. ಆ ತರುವಾಯ ಗುಹನು ಶ್ರೀರಾಮಸೀತಾ ಲಕ್ಷ್ಮಣರನ್ನು ತನ್ನ ನಾವೆಯಿಂದ ಗಂಗೆಯ ಆಚೆಯ ದಂಡೆಗೆ ಮುಟ್ಟಿಸಿ, ಮಣಿದು ಬೀಳ್ಕೊಂಡನು.

ಗಂಗಾನದಿಯ ಆ ದಡದಲ್ಲಿ ದೇವಗುರು ಬೃಹಸ್ಪತ್ಯಾಚಾರ್ಯರ ಪುತ್ರರಾದ ಭಾರದ್ವಾಜಮುನಿಗಳು ಅನೇಕ ಋಷಿಗಳಿಂದೊಡಗೂಡಿ ಶ್ರೀರಾಮನನ್ನು ಸ್ವಾಗತಿಸಿ ಪೂಜೆ ಮಾಡಿ ಸತ್ಕರಿಸಿದರು. ಅವರ ಪೂಜೆಯನ್ನು ಸ್ವೀಕರಿಸಿದ ಶ್ರೀರಾಮಭದ್ರನು ಅಲ್ಲಿಂದ ಹೊರಟು ಚಿತ್ರಕೂಟ ಪರ್ವತಕ್ಕಾಗಮಿಸಿ ಅಲ್ಲಿ ಕೆಲ ದಿನಗಳು ಬಲು ಸಂತಸದಿಂದ ವಾಸ ಮಾಡಿದನು.

ಇತ್ತ ಅಯೋಧ್ಯೆಯಲ್ಲಿ ದಶರಥ ಮಹಾರಾಜನು ಶ್ರೀರಾಮನ ವಿರಹ ದುಃಖವನ್ನು ತಾಳಲಾರದೆ ಸ್ವರ್ಗಸ್ಥನಾದನು. ಕೂಡಲೇ ಸಚಿವರು ಕೇಕಯ ರಾಜನ ಅರಮನೆಯಲ್ಲಿ ವಾಸವಾಗಿದ್ದ; ಹಿಂದೆ ಬ್ರಹ್ಮಮಾನಸಪುತ್ರರಾಗಿದ್ದು ಈಗ ದಶರಥನ ಸುತರಾಗಿದ್ದ ಭರತ ಶತ್ರುಘ್ನರನ್ನು ಅಯೋಧ್ಯೆಗೆ ಕರೆಯಿಸಿ ಅವರಿಂದ ದಶರಥನ ಉತ್ತರಕ್ರಿಯೆಗಳನ್ನು ವೈದಿಕ ಸಂಪ್ರದಾಯದಂತೆ ನೆರವೇರಿಸಿದರು. ತರುವಾಯ, ತಂದೆಯಿಲ್ಲದ ಅಯೋಧ್ಯೆಯನ್ನು ಪ್ರವೇಶಿಸುವುದಿಲ್ಲವೆಂದು ದುಃಖದಿಂದ ಹೇಳುತ್ತಿದ್ದ ಭರತ ಶತ್ರುಘ್ನರನ್ನು ಪುರಜನರು ಮತ್ತು ಜನನಿಯರು ಸಮಾಧಾನಗೊಳಿಸಿ ರಾಜಮಾರ್ಗದಿಂದ ಅರಮನೆಗೆ ಕರೆತಂದರು.

ಭರತ ಶತ್ರುಘ್ನರು ತಂದೆಯ ಮರಣಕ್ಕೆ ಮಂಥರೆ ಮತ್ತು ತಾಯಿ ಕೈಕೇಯಿಯರು ಕಾರಣರೆಂದರಿತು ಅವರಲ್ಲಿ ಬಹು ಪಾಪಿಷ್ಠಳಾದ ಮಂಥರೆಯನ್ನೂ, ಅವಳ ಕೆಟ್ಟ ಮಾತಿನಂತೆ ನಡೆದುಕೊಂಡ ಕೈಕೇಯಿಯನ್ನೂ ಬಿರುನುಡಿಗಳಿಂದ ನಿಂದಿಸಿ, ಅಲ್ಲಿ ನಿಲ್ಲಲಾರದೆ ಅಣ್ಣನಾದ ಶ್ರೀರಾಮಚಂದ್ರನ ಚರಣಕಮಲಗಳ ದರ್ಶನಕ್ಕಾಗಿ ಅರಣ್ಯಕ್ಕೆ ಹೊರಟನು. ಮಾರ್ಗದಲ್ಲಿ ಅನೇಕ ಮುನಿಗಳು ಅವರ ಜೊತೆಗೂಡಿದರು. ಎಲ್ಲರೊಡನೆ ಭರತಶತ್ರುಘ್ನರು ಶ್ರೀರಾಮನ ಸನ್ನಿಧಿಗೆ ಬಂದರು. ಭರತನು ತಲೆಬಾಗಿ ರಾಜೀವನೇತ್ರನಾದ ಶ್ರೀರಾಮನಿಗೆ ನಮಿಸಿ ''ಪ್ರಭು! ನಮ್ಮಲ್ಲಿ ಕೃಪೆಮಾಡಿ ಅಯೋಧ್ಯೆಗೆ ಬಂದು ಸಹೋದರರೊಡನೆ ಕೂಡಿ ರಾಜ್ಯಭಾರದ ಹೊಣೆಯನ್ನು ಹೊತ್ತು ರಾಜ್ಯಪಾಲನೆ ಮಾಡಬೇಕು'' ಎಂದು ಬಿನ್ನವಿಸಿದನು.

ಭರತನ ವಾಕ್ಯವಾಲಿಸಿದ ಸ್ವಾಮಿಯಾದ ಶ್ರೀರಾಮನು ''ಚಿಂತಿಸದಿರು ಸಹಜ! ಸಕಲ ಸುರಜನರ ಬಿನ್ನಪವ ದಿಟಮಾಡಿ ಅಮರಾನೀಕಮಂ ಮುದಗೊಳಿಸಿ ಬರುವೆ ಬಹುಬೇಗ'' ಎಂದು ಹೇಳಿದನು. ಭರತನು ಗದ್ಗದ ಕಂಠದಿಂದ ಮತ್ತೆ ಮತ್ತೆ ''ಪ್ರಭು, ರಾಜಧಾನಿಗೆ ನೀನು ದಯಮಾಡಿ ಬರಲೇಬೇಕು'' ಎಂದ ಪ್ರಾರ್ಥಿಸಲು ಶ್ರೀರಾಮನು ''ಸಹೋದರ! ಹದಿನಾಲ್ಕು ವರ್ಷ ವನವಾಸ, ಅದರ ಮೇಲೊಂದು ದಿನದ ಮಟ್ಟಿಗೆ ನಿನ್ನೀ ದುಃಖವನ್ನು ಸಹಿಸು. ಆ ಅವಧಿಯು ಮುಗಿಯು-

ಪರಶುರಾಮರಿಂದ ವೈಷ್ಣವಧನುಷ್ಯವನ್ನು ಸಂಪಾದಿಸಿದವರೆಗೆ ತೋರಿದ ಅಸದೃಶ ಲೀಲಾವಿಲಾಸಗಳನ್ನು ಪರಿಕಿಸಿ (ನೋಡಿ) ಭೂತಳದ ಜನ ಜಂಗುಳಿಯು ಮುದಿಸಹತ್ತಿದರು. ಶ್ರೀರಾಮಚಂದ್ರನಲ್ಲಿ ಅಯೋಧ್ಯಾನಗರ ನಿವಾಸಿಗಳಿಗೆ ದಿನೇ ದಿನೇ ಭಕ್ತಿಯು ಅಭಿವೃದ್ಧಿಸಹತ್ತಿತು. ದಶರಥಮಹಾರಾಜನು ಪ್ರಿಯಕುವರ ರಾಮಭದ್ರನ ಮೂರ್ಧಾಭಿಷೇಕವನ್ನು ಬೇಗ ಕಂಡು ಆನಂದಿಸಲು ಮನದಲ್ಲಿ ಬಯಸಿದನು. ಸಕಲ ಮಂತ್ರಿಗಳೂ ಒಂದಾಗಿ ಶ್ರೀರಾಮನಿಗೆ ಪಟ್ಟಾಭೀಷೇಕವನ್ನು ನೆರವೇರಿಸಬೇಕೆಂದು ದಶರಥನನ್ನು ಪ್ರಾರ್ಥಿಸಿದರು. ತನ್ನ ಮನದೀಪ್ಸಿತವನ್ನೇ ಸಚಿವಮಂಡಲವು ಬಿನ್ನವಿಸಿದುದನ್ನು ಕೇಳಿ ದಶರಥನು ಮುದಗೊಂಡು ರಾಮಚಂದ್ರನಿಗೆ ಪಟ್ಟಕಟ್ಟಲು ನಿಶ್ಚಯಿಸಿದನು. ಅದೆಂತೋ ಈ ಸಂತಸದ ವಾರ್ತೆಯು ಕೈಕೇಯಿದೇವಿಯ ದಾಸಿಯಾದ ಮಂಥರೆಯ ಕಿವಿಗೆ ತಲುಪಿತು. ಇದನ್ನು ಕೇಳಿ ಕಡುನೊಂದ ಮಂಥರೆಯು ಅದು ನಡೆಯದಂತೆ ಮಾಡಲು ಪಣತೊಟ್ಟು ಶ್ರೀರಾಮಪ್ರಭುವಿನ ಮಂಗಳದ ಪಟ್ಟಾಭಿಷೇಕಕ್ಕೆ ವಿಘ್ನ ತಂದೊಡ್ಡಿದಳು.

ಕಲಿಯ ಪತ್ನಿಯಾದ ಅಲಕ್ಷ್ಮಿಯೇ ಮಂಥರೆಯಾಗಿ ಭುವಿಯೊಳು ಜನಿಸಿದ್ದಳು. ಹಿಂದೆ ಅವಳು ಅದೆಂತೋ ಕ್ಷೀರ ಸಮುದ್ರದಲ್ಲಿ ಜನಿಸಿ ಕಮಲಾಸನನ್ನು ಕುರಿತು ತಪವೆಸಗಿ ಬ್ರಹ್ಮದೇವನ ವರಪ್ರಭಾವದಿಂದ ಅಪ್ಸರೆಯಾಗಿ ಮೆರೆದಳು. ಮುಂದವಳು ಅಪ್ಸರೆಯಾಗಿದ್ದರೂ ಸ್ವರೂಪ ಗುಣಕ್ಕೆ ತಕ್ಕಂತೆ ಮಹಾಗರ್ವಿತಳಾಗಿ ತನ್ನ ಅಸುರ ಸ್ವಭಾವಕ್ಕನುಸರಿಸಿ ದುಷ್ಕರ್ಮಗಳನ್ನೆಸಗುತ್ತಾ ಬ್ರಹ್ಮದೇವರಿಗೆ ಕೋಪ ಬರುವಂತೆ ವರ್ತಿಸಹತ್ತಿದಳು. ಇದರಿಂದ ಕುಪಿತರಾದ ಚತುರಾನರು ಅವಳನ್ನು ಅಂಧಃತಮಸ್ಸಿಗೆ ತಳ್ಳಬಯಸಿ ''ಎಲೈ ದುಷ್ಟೆ! ನೀನು ಭೂಲೋಕದಲ್ಲಿ ಶ್ರೀರಾಮನ ಪಟ್ಟಾಭಿಷೇಕಕ್ಕೆ ವಿಘ್ನ ಮಾಡಿ ನಿನ್ನ ಸ್ವರೂಪ ಯೋಗ್ಯತೆಗೆ ತಕ್ಕುದಾದ ತಮೋಲೋಕಕ್ಕೆ ತೆರಳು. ನೀಗೈದ ಪಾಪಕರ್ಮಗಳಿಗೆ ಇದುವೇ ಸರಿಯಾದ ಫಲ'' ಎಂದು ಅವಳಿಗೆ ಶಾಪವಿತ್ತರು. ಪದ್ಮಸಂಭವರ ಶಾಪದ ಫಲವಾಗಿ ಅಲಕ್ಷ್ಮಿಯು ಮಂಥರೆಯಾಗಿ ಭೂಮಿಯಲ್ಲಿ ಹುಟ್ಟಿ ಕೈಕೇಯಿದೇವಿಯ ದಾಸಿಯಾಗಿ ಶ್ರೀರಾಮನ ಪಟ್ಟಾಭಿಷೇಕಕ್ಕೆ ವಿಘ್ನ ತರಲು ಸಮಯವನ್ನು ನಿರೀಕ್ಷಿಸುತ್ತಿದ್ದಳು.

ಪೂರ್ವದಲ್ಲಿ ಒಮ್ಮೆ ದಶರಥನು ದೇವತೆಗಳ ಪಕ್ಷ ವಹಿಸಿ ದೈತ್ಯರೊಡನೆ ಯುದ್ಧ ಮಾಡಹೊರಟನು. ಆಗ ಅವನ ಪ್ರೇಮದ ರಾಣಿಯಾದ ಕೈಕೇಯಿಯೂ ಹೋಗಿದ್ದಳು. ದೈತ್ಯರೊಡನೆ ಭರದಿಂದ ಯುದ್ಧ ಸಾಗಿರಲು ದಶರಥನ ರಥದ ಗಾಲಿಯ ಕಡಾಣಿಯು ಮುರಿದುಹೋಯಿತು. ಅದನ್ನು ಗಮನಿಸಿದ ಕೈಕೇಯಿಯು ತಕ್ಷಣ ರಥದಿಂದ ಹಾರಿ ರಥದ ದೂರಿಗೆ ತನ್ನ ಕರವನ್ನೇ ಆಸರೆಯಾಗಿತ್ತು ಪತಿಗೊದಗಿದ್ದ ಅಪಾಯವನ್ನು ತಪ್ಪಿಸಿದಳು. ಯುದ್ಧದಲ್ಲಿ ದಶರಥನು ವಿಜಯಿಯಾದನು. ಅನಂತರ ಅವನಿಗೆ ಪತ್ನಿಯಿಂದ ತನಗಾದ ಸಹಾಯದ ವಿಚಾರ ತಿಳಿಯಿತು. ಅದರಿಂದ ಹರ್ಷಗೊಂಡು ಪ್ರಿಯಸತಿಯನ್ನು ಮುದಗೊಳಿಸಲು ಅವಳಿಗೆ ಎರಡು ವರಗಳನ್ನಿತ್ತನು. ಕೈಕೇಯಿಯು ಆ ಎರಡು ವರಗಳನ್ನು ಸಮಯ ಬಂದಾಗ ಬೇಡುವುದಾಗಿ ಹೇಳಿದ್ದಳು. ಈ ಹಿನ್ನೆಲೆಯನ್ನು ಅರಿತಿದ್ದ ಮಂಥರೆಯು ಕೈಕೇಯಿಯ ಹಿತೈಷಿಯಂತೆ ನಟಿಸುತ್ತಾ ತನ್ನ ಕಪಟಜಾಲದಲ್ಲಿ ರಾಣಿಯನ್ನು ಸಿಕ್ಕಿಸಿಕೊಂಡು ದುಷ್ಟಮಾತುಗಳಿಂದ ಶ್ರೀರಾಮನ ಬಗ್ಗೆ ಅವಳ ಮನಸ್ಸನ್ನು ಕೆಡಿಸಿ ಭರತನಿಗಾಗಿ ಆ ಎರಡು ವರಗಳನ್ನು ಈಗಲೇ ಬೇಡಿ ಇಷ್ಟಾರ್ಥವನ್ನು ಸಾಧಿಸಿಕೊಳ್ಳಬೇಕೆಂದು ಉಪದೇಶಿಸಿ ಪ್ರೋತ್ಸಾಹಿಸಿದಳು. ಕೈಕೇಯಿಯು ಮಂಥರೆಯ ದುರ್ಬೋಧನೆಗೊಳಗಾಗಿ ಪತಿಗೆ ಅವನು ದೇವಾಸುರ ಯುದ್ಧಕಾಲದಲ್ಲಿ ತನಗಿತ್ತಿದ್ದ ಎರಡು ವರಗಳ ವಿಚಾರವನ್ನು ನೆನಪಿಗೆ ತಂದು ಒಂದು ವರದಿಂದ ಶ್ರೀರಾಮಚಂದ್ರನಿಗೆ ರಾಜ್ಯವಿಲ್ಲದಂತೆ ಮಾಡಿ ರಾಮನ ರಾಜ್ಯವನ್ನು ತನ್ನ ಕುಮಾರ ಭರತನಿಗಾಗಿ ಅಪಹರಿಸಿದಳು. ಮತ್ತೊಂದು ವರದಿಂದ ಶ್ರೀರಾಮನಿಗೆ ಹದಿನಾಲ್ಕು ವರ್ಷ ವನವಾಸವನ್ನು ವಿಧಿಸಿದಳು.

ಶ್ರೀರಾಮನು ಪೂಜ್ಯ ಜನಕನ ವಾಕ್ಯವನ್ನು ಸತ್ಯ ಮಾಡಬೇಕೆಂಬ ಗೌರವ ಬುದ್ಧಿಯಿಂದಲೂ ತನ್ನ ಅವತಾರ ಕಾರ್ಯವನ್ನು ನಿರ್ವಹಿಸಲು, ಅಂದರೆ ಸುರರು ಮತ್ತು ಋಷಿಮುನಿಗಳ ಪ್ರಾರ್ಥನೆಯನ್ನು ಪೂರ್ಣಮಾಡಲೂ ಸಹ

ಸೀತಾದೇವಿ, ಲಕ್ಷ್ಮಣರಿಂದೊಡಗೂಡಿ ದಂಡಕಾರಣ್ಯಕ್ಕೆ ಪಯಣ ಬೆಳೆಸಿದನು. ಲಕ್ಷ್ಮಣನು ಅಣ್ಣನ ಅನುಚರನಾದನು. ಅವನಿಗೆ ಅಗ್ರಜನಲ್ಲಿ ಅಮಲ ಭಕುತಿಯು ಅಭಿವೃದ್ಧಿಸತೊಡಗಿತು. ರಾಜ್ಯದ ಸಕಲ ನರನಾರಿಯರು, ಪಶುಪಕ್ಷ್ಯಾದಿ ಜಂತುಗಳು ರಾಮನ ಅಗಲುವಿಕೆಯ ದುಃಖವನ್ನು ಸಹಿಸಲಾರದೆ ಆಹಾರ ನಿದ್ರೆಗಳನ್ನು ಬಿಟ್ಟವು. ಪುರಜನರು ಸಕಲ ಇಷ್ಟಭೋಗಗಳಲ್ಲಿ ಆಶೆಯನ್ನು ತ್ಯಜಿಸಿದರು. ಅವರಿಗೆ ರಾಮಚಂದ್ರನಲ್ಲಿ ಭಕ್ತಿಯು ಇನ್ನೂ ಹೆಚ್ಚತೊಡಗಿತು.

ಹೀಗೆ ಶ್ರೀರಾಮನು ಮರ, ಗಿಡ, ಪಕ್ಷಿಗಳು, ಆನೆ, ಕೀಟ ಮೊದಲಾದ ಜಂತುಗಳನ್ನೂ, ತಾಯಿ-ತಂದೆ, ಮಿತ್ರರೇ ಮೊದಲಾದ ಹಿತೈಷಿಗಳನ್ನೂ ಬಿಟ್ಟು ಬರುವಾಗ ಪುಣ್ಯಸ್ವರೂಪಿಣಿಯಾಗಿ ನಲುವಿನಿಂದ ಹರಿಯುತ್ತಿದ್ದ ಗಂಗಾನದಿಯನ್ನು ಕಂಡು ಅಲ್ಲಿ ಗುಹನೆಂಬ ಕಿರಾತನೆಸಗಿದ ಪಾದಪೂಜೆ-ಆತಿಥ್ಯಗಳನ್ನು ಸ್ವೀಕರಿಸಿ ಅವನನ್ನು ಅನುಗ್ರಹಿಸಿದನು. ಗುಹನು ರಾಮನಿಗೆ ಗೈದ ಪೂಜೆಯು ಷಣ್ಮುಖನು ರುದ್ರದೇವನಿಗೆಸಗಿದ ಪೂಜೆಯಂತಿತ್ತು. ಆ ತರುವಾಯ ಗುಹನು ಶ್ರೀರಾಮಸೀತಾ ಲಕ್ಷ್ಮಣರನ್ನು ತನ್ನ ನಾವೆಯಿಂದ ಗಂಗೆಯ ಆಚೆಯ ದಂಡೆಗೆ ಮುಟ್ಟಿಸಿ, ಮಣಿದು ಬೀಳ್ಕೊಂಡನು.

ಗಂಗಾನದಿಯ ಆ ದಡದಲ್ಲಿ ದೇವಗುರು ಬೃಹಸ್ಪತ್ಯಾಚಾರ್ಯರ ಪುತ್ರರಾದ ಭಾರದ್ವಾಜಮುನಿಗಳು ಅನೇಕ ಋಷಿಗಳಿಂದೊಡಗೂಡಿ ಶ್ರೀರಾಮನನ್ನು ಸ್ವಾಗತಿಸಿ ಪೂಜೆ ಮಾಡಿ ಸತ್ಕರಿಸಿದರು. ಅವರ ಪೂಜೆಯನ್ನು ಸ್ವೀಕರಿಸಿದ ಶ್ರೀರಾಮಭದ್ರನು ಅಲ್ಲಿಂದ ಹೊರಟು ಚಿತ್ರಕೂಟ ಪರ್ವತಕ್ಕಾಗಮಿಸಿ ಅಲ್ಲಿ ಕೆಲ ದಿನಗಳು ಬಲು ಸಂತಸದಿಂದ ವಾಸ ಮಾಡಿದನು.

ಇತ್ತ ಅಯೋಧ್ಯೆಯಲ್ಲಿ ದಶರಥ ಮಹಾರಾಜನು ಶ್ರೀರಾಮನ ವಿರಹ ದುಃಖವನ್ನು ತಾಳಲಾರದೆ ಸ್ವರ್ಗಸ್ಥನಾದನು. ಕೂಡಲೇ ಸಚಿವರು ಕೇಕಯ ರಾಜನ ಅರಮನೆಯಲ್ಲಿ ವಾಸವಾಗಿದ್ದ; ಹಿಂದೆ ಬ್ರಹ್ಮಮಾನಸಪುತ್ರರಾಗಿದ್ದು ಈಗ ದಶರಥನ ಸುತರಾಗಿದ್ದ ಭರತ ಶತ್ರುಘ್ನರನ್ನು ಅಯೋಧ್ಯೆಗೆ ಕರೆಯಿಸಿ ಅವರಿಂದ ದಶರಥನ ಉತ್ತರಕ್ರಿಯೆಗಳನ್ನು ವೈದಿಕ ಸಂಪ್ರದಾಯದಂತೆ ನೆರವೇರಿಸಿದರು. ತರುವಾಯ, ತಂದೆಯಿಲ್ಲದ ಅಯೋಧ್ಯೆಯನ್ನು ಪ್ರವೇಶಿಸುವುದಿಲ್ಲವೆಂದು ದುಃಖದಿಂದ ಹೇಳುತ್ತಿದ್ದ ಭರತ ಶತ್ರುಘ್ನರನ್ನು ಪುರಜನರು ಮತ್ತು ಜನನಿಯರು ಸಮಾಧಾನಗೊಳಿಸಿ ರಾಜಮಾರ್ಗದಿಂದ ಅರಮನೆಗೆ ಕರೆತಂದರು.

ಭರತ ಶತ್ರುಘ್ನರು ತಂದೆಯ ಮರಣಕ್ಕೆ ಮಂಥರೆ ಮತ್ತು ತಾಯಿ ಕೈಕೇಯಿಯರು ಕಾರಣರೆಂದರಿತು ಅವರಲ್ಲಿ ಬಹು ಪಾಪಿಷ್ಠಳಾದ ಮಂಥರೆಯನ್ನೂ, ಅವಳ ಕೆಟ್ಟ ಮಾತಿನಂತೆ ನಡೆದುಕೊಂಡ ಕೈಕೇಯಿಯನ್ನೂ ಬಿರುನುಡಿಗಳಿಂದ ನಿಂದಿಸಿ, ಅಲ್ಲಿ ನಿಲ್ಲಲಾರದೆ ಅಣ್ಣನಾದ ಶ್ರೀರಾಮಚಂದ್ರನ ಚರಣಕಮಲಗಳ ದರ್ಶನಕ್ಕಾಗಿ ಅರಣ್ಯಕ್ಕೆ ಹೊರಟನು. ಮಾರ್ಗದಲ್ಲಿ ಅನೇಕ ಮುನಿಗಳು ಅವರ ಜೊತೆಗೂಡಿದರು. ಎಲ್ಲರೊಡನೆ ಭರತಶತ್ರುಘ್ನರು ಶ್ರೀರಾಮನ ಸನ್ನಿಧಿಗೆ ಬಂದರು. ಭರತನು ತಲೆಬಾಗಿ ರಾಜೀವನೇತ್ರನಾದ ಶ್ರೀರಾಮನಿಗೆ ನಮಿಸಿ ''ಪ್ರಭು! ನಮ್ಮಲ್ಲಿ ಕೃಪೆಮಾಡಿ ಅಯೋಧ್ಯೆಗೆ ಬಂದು ಸಹೋದರರೊಡನೆ ಕೂಡಿ ರಾಜ್ಯಭಾರದ ಹೊಣೆಯನ್ನು ಹೊತ್ತು ರಾಜ್ಯಪಾಲನೆ ಮಾಡಬೇಕು'' ಎಂದು ಬಿನ್ನವಿಸಿದನು.

ಭರತನ ವಾಕ್ಯವಾಲಿಸಿದ ಸ್ವಾಮಿಯಾದ ಶ್ರೀರಾಮನು ''ಚಿಂತಿಸದಿರು ಸಹಜ! ಸಕಲ ಸುರಜನರ ಬಿನ್ನಪವ ದಿಟಮಾಡಿ ಅಮರಾನೀಕಮಂ ಮುದಗೊಳಿಸಿ ಬರುವೆ ಬಹುಬೇಗ'' ಎಂದು ಹೇಳಿದನು. ಭರತನು ಗದ್ಗದ ಕಂಠದಿಂದ ಮತ್ತೆ ಮತ್ತೆ ''ಪ್ರಭು, ರಾಜಧಾನಿಗೆ ನೀನು ದಯಮಾಡಿ ಬರಲೇಬೇಕು'' ಎಂದ ಪ್ರಾರ್ಥಿಸಲು ಶ್ರೀರಾಮನು ''ಸಹೋದರ! ಹದಿನಾಲ್ಕು ವರ್ಷ ವನವಾಸ, ಅದರ ಮೇಲೊಂದು ದಿನದ ಮಟ್ಟಿಗೆ ನಿನ್ನೀ ದುಃಖವನ್ನು ಸಹಿಸು. ಆ ಅವಧಿಯು ಮುಗಿಯು-

ವುದರೊಳಗಾಗಿ ನಿನ್ನ ಕೋರಿಕೆಯನ್ನು ಪೂರ್ಣ ಮಾಡುವೆನು. ಇದು ಸತ್ಯ! ಇದೆಂದಿಗೂ ಸಟೆಯಾಗದು. ಸಂದೇಹ ಪಡಬೇಡ ತಮ್ಮಾ'' ಎಂದು ಭರತನನ್ನು ಸಮಾಧಾನಪಡಿಸಿದನು.

ಅಣ್ಣನ ಮೃದುವಾಣಿಯನಾಲಿಸಿದ ಭರತನು ''ಎನ್ನೊಡೆಯ, ಕೇಳಣ್ಣ ಎನ್ನ ಮಾತ ! ನಿನ್ನ ನುಡಿ ಸಟೆಯಾದೊಡೆ ಧಗಧಗಿಪ ಹುತವಹನ ಒಡಲ ಸೇರುವೆನಯ್ಯಾ, ಇದು ಸತ್ಯ ಇದು ಸತ್ಯ ! ನಿನ್ನ ಮುಖದರ್ಶನ ಪಡೆವ ಪರಿಯಂತರವು ನಾನಯೋಧ್ಯೆಯ ಕಡೆಗೆ ಕಣ್ಣೆತ್ತಿಯೂ ನೋಡೆ ! ಕೇಳಯ್ಯ ರಘುರಾಮ ! ಇದು ನನ್ನ ಮೊದಲ ಶಪಥ ! ಇನ್ನೊಂದ ಕೇಳಣ್ಣಾ ರಾಜಧಾನಿಗೆ ನೀನು ಪಾದ ಬೆಳೆಸುವವರೆಗೆ ನೆಲವೇ ಹಾಸಿಗೆಯೆನಗೆ. ಬ್ರಹ್ಮಚರ್ಯವ ಸತತ ಪರಿಪಾಲಿಸುವೆ ನಾನು. ಏಕಭುಕ್ತಿಯನಿಯಮ, ನಾರು ವಸನವನುಟ್ಟು ಜಟೆ ಧರಿಸಿ ಯೋಗಿಯೂ ವ್ರತಪಿಡಿದು ಪಾಲಿಪೆನು ಇದು ಸತ್ಯ!'' ಇಂತು ಎರಡು ಘೋರ ಪ್ರತಿಜ್ಞೆಗಳನ್ನು ಮಾಡಿ, ತರುವಾಯ ಶ್ರೀರಾಮನ ಶ್ರೇಷ್ಠವಾದ ನವರತ್ನ ಖಚಿತವಾದ ಕನಕಮಯ ಪಾದುಕೆಗಳನ್ನು ಅವನ ಪ್ರತಿನಿಧಿತ್ವೇನ ಸ್ವೀಕರಿಸಿ ಅದನ್ನು ಶಿರದ ಮೇಲೆ ಹೊತ್ತು ಶ್ರೀರಾಮನ ಅಪ್ಪಣೆಯನ್ನು ಪಡೆದು ಹೊರಟು ನಂದಿಗ್ರಾಮದ ಹೊರವಲಯದಲ್ಲಿ ಪರ್ಣಕುಟಿಯನ್ನು ನಿರ್ಮಿಸಿಕೊಂಡು ವಾಸಿಸಹತ್ತಿದನು.

ಭರತನನ್ನು ಬೀಳ್ಕೊಟ್ಟ ರಾಮಚಂದ್ರನು ಸ್ವಯಂ ಭಗವಂತನಾಗಿದ್ದರೂ ಸೀತಾಲಕ್ಷ್ಮಣ ಸಹಿತನಾಗಿ ಚಿತ್ರಕೂಟ ಪರ್ವತದಲ್ಲಿ ವಾಸಿಸುತ್ತಿದ್ದನು. ಇದು ಅಚ್ಚರಿಯ ಸಂಗತಿ.

ಪೂರ್ವದಲ್ಲಿ ಇಂದ್ರಪುತ್ರನಾದ ಜಯಂತನು ಬಹುಕಾಲ ಬಲಿಯ ಅನ್ನವನ್ನು ತಿಂದು ಜೀವಿಸಲು ಬಯಸಿ ದೇವರನ್ನು ಪ್ರಾರ್ಥಿಸಿದ್ದನು. ಅದರಂತೆ ಅವನಿಗೆ ಕಾಗೆಯ ಜನ್ಮ ಬಂದಿತು. ಅವನು ಚಿತ್ರಕೂಟದ ಒಂದು ವೃಕ್ಷದ ಮೇಲೆ ವಾಸಮಾಡುತ್ತಿದ್ದನು. ಕಾಗೆಯ ರೂಪದಲ್ಲಿದ್ದ ಜಯಂತನಲ್ಲಿ ''ತುರಂಗ'' ಎಂಬ ಒಬ್ಬ ಮಹಾ ಅಸುರನು ಪ್ರವೇಶಿಸಿ ಅವನು ಕಾಮಪರವಶನಾಗುವಂತೆ ಮಾಡಿದನು. ಇಂದ್ರಿಯ ಭೋಗಲಾಲಸೆಯಿಂದ ಅವನು ಸೀತಾಮಾತೆಯನ್ನು ಕಂಡು ವಿಕಾರವಶನಾಗಿ ಸೀತಾರಾಮರಿದ್ದಲ್ಲಿಗೆ ಬಂದನು. ಅಸುರಾವೇಶದಿಂದ ಮತಿಗೆಟ್ಟ ಕಾಗೆಯ ರೂಪದ ಜಯಂತನು ಸಾಕ್ಷಾದ್ರಮಾಸ್ವರೂಪಿಣಿಯಾದ ಸೀತಾದೇವಿಯ ಸ್ತನವನ್ನು ತನ್ನ ಕೊಕ್ಕಿನಿಂದ ಕೊರೆಯಲು ಹವಣಿಸುತ್ತಿರುವಾಗ ಶ್ರೀರಾಮನ ದೃಷ್ಟಿಗೆ ಬಿದ್ದನು. ಆಗ ಶ್ರೀರಾಮನು ಕೂಡಲೇ ಒಂದು ಹುಲ್ಲುಕಡ್ಡಿಯನ್ನು ಅಭಿಮಂತ್ರಿಸಿ ಅಸ್ತ್ರದಂತೆ ಪ್ರಯೋಗಿಸಲು ಅದು ಉರಿಯುವ ಅಗ್ನಿಜ್ವಾಲೆಯಿಂದ ಜಯಂತನನ್ನು ಅಟ್ಟಿಸಿಕೊಂಡು ಹೋಯಿತು.

ಅದನ್ನು ಕಂಡು ಭಯಗೊಂಡ ಜಯಂತನು ಬ್ರಹ್ಮ, ರುದ್ರ, ಇಂದ್ರಾದಿ ದೇವತೆಗಳನ್ನು ಮೊರೆಹೊಕ್ಕು ರಕ್ಷಿಸಲು ಪ್ರಾರ್ಥಿಸಿದನು. ಶ್ರೀಹರಿಯಲ್ಲಿ ಅನನ್ಯ ಅಸಾಧಾರಣ ಭಕ್ತಿಭಾವದಿಂದಿದ್ದ ಅವರಾರೂ ಅವನನ್ನು ರಕ್ಷಿಸಬಯಸಲಿಲ್ಲ. ಹರಿಯ ಶಕ್ತಿಯನ್ನು ಮೀರಿ ನಡೆಯಲದಾರು ತಾನೇ ಸಮರ್ಥರಾದಾರು? ಅವರು ಮೊರೆಯಿಡುತ್ತಿದ್ದ ಜಯಂತನನ್ನು ನಿಂದಿಸಿ ಬಹಿಷ್ಕರಿಸಿದರು. ಜಯಂತನು ಯಾರಿಂದಲೂ ತನಗೆ ರಕ್ಷಣೆ ದೊರಕದಾಗಲು ಶ್ರೀರಾಮನ ಬಳಿಗೇ ಧಾವಿಸಿ ಬಂದು ''ಪ್ರಭೋ, ಶರಣಾಗತನಾಗಿದ್ದೇನೆ. ಕಾಪಾಡು ತಂದೆ'' ಎಂದು ಬೇಡಿದನು. ಶರಣಾಗತವತ್ಸಲನಾದ ಶ್ರೀರಾಮ-ಪ್ರಭುವು ಅವನ ನೇತ್ರೇಂದ್ರಿಯದಲ್ಲಿ ನೆಲೆಸಿದ್ದ ತುರಂಗನಾಮಕ ಮಹಾ ಅಸುರರನ್ನು ಸಂಹರಿಸಿ, ಜಯಂತನನ್ನು ಕಾಗೆಯ ರೂಪದಲ್ಲೇ ಇರಲು ಬಿಟ್ಟನು.

ತುರಂಗನೆಂಬ ಅಸುರನು ಹಿಂದೆ ಚಂದ್ರಚೂಡನಾದ ಶ್ರೀರುದ್ರದೇವನನ್ನು ತಪಸ್ಸಿನಿಂದ ಮೆಚ್ಚಿಸಿ ಅವಧ್ಯನಾಗಿರುವಂತೆ ವರವನ್ನು ಯಾಚಿಸಿದನು. ಪ್ರಸನ್ನನಾದ ಶಿವನು ''ಅಸುರ ಶ್ರೇಷ್ಠ, ನೀನು ಕಾಗೆಗಳ ಎರಡು ನೇತ್ರೇಂದ್ರಿಯಗಳ ಗೋಳಕದ

ಮೂಲದಲ್ಲಿ ಸೇರಿ ನೆಲೆಸುವವರೆಗೂ ನಿನಗೆ ಮರಣವಾಗದಿರಲಿ'' ಎಂದು ವಿಚಿತ್ರ ವರವನ್ನಿತ್ತನು. ಶಿವನ ವರದಿಂದ ತುರಂಗಾಸುರನು ಅವಧ್ಯನಾಗಿದ್ದರೂ ಅವನು ಕಾಗೆಯ ಕಣ್ಣಿನ ಒಂದೇ ಗೋಳಕದಲ್ಲಿ ಸೇರಿದಾಗ ಅವನನ್ನು ಶ್ರೀರಾಮನು ಸಂಹರಿಸಿದನು. ಶಿವನ ವರವನ್ನು ವ್ಯರ್ಥಗೊಳಿಸಲು ತುರಂಗಾಸುರನ ನೇತ್ರೇಂದ್ರಿಯವನ್ನು ಕಳೆದುಹಾಕಿ ಅವಧ್ಯನಾಗಿದ್ದ ಅವನು ತನಗೆಸಗಿದ ಅಪಚಾರಕ್ಕೆ ಶಿಕ್ಷಾರೂಪವಾಗಿ ಅವನು ಜಯಂತನ ಒಂದೇ ಗೋಳಕದಲ್ಲಿ ಸೇರಿದ್ದಾಗ ಸಂಹರಿಸಿದನು. ಅನಂತರ ಜಯಂತನು ಶ್ರೀರಾಮನ ಅಪ್ಪಣೆಯಂತೆ ತನ್ನ ನಗರಿಗೆ ತೆರಳಿದನು.

ದಂಡಕಾರಣ್ಯವಾಸಿಗಳಾದ ಋಷಿಮುನಿಗಳು ಶ್ರೀರಾಮನಲ್ಲಿಗೆ ಬಂದು ಖರದೂಷಣಾದಿ ದುಷ್ಟ ರಕ್ಕಸರು ರುದ್ರದೇವರ ವರಬಲದಿಂದ ಸಕಲರಿಂದ ಅವಧ್ಯರಾಗಿ ಸೊಕ್ಕಿನಿಂದ ಅನೇಕ ಸುರಜನರನ್ನೂ ತಪಸ್ವಿಗಳಾದ ಋಷಿಮುನಿಗಳನ್ನೂ ಹಿಂಸಿಸುತ್ತಾ, ಸಂಹರಿಸುತ್ತಾ ಅತಿ ಶಕ್ತಿವಂತರಾಗಿ ಮೆರೆಯುತ್ತಿರುವ ವಿಚಾರವನ್ನು ಅರುಹಿ ಅವರನ್ನು ಸಂಹರಿಸಿ ಸಜ್ಜನರನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿದರು. ಶ್ರೀರಾಮನು ಅವರಿಗೆ ಅಭಯವಿತ್ತು ಸೀತಾಸಮೇತನಾಗಿ ದಂಡಕಾರಣ್ಯಕ್ಕೆ ಬಂದನು.

ದಂಡಕಾರಣ್ಯದಲ್ಲಿ ಶರಭಂಗನೆಂಬ ಮುನಿಯು ತಪಸ್ಸನ್ನೆಸಗುತ್ತಿದ್ದನು. ವೃದ್ಧಾಪ್ಯದಿಂದ ಸೊರಗಿದ್ದ ಅವನು ಮೋಕ್ಷ-ಪದವನ್ನು ಪಡೆಯಲು ಕಠಿಣ ತಪಸ್ಸನ್ನು ಮಾಡಿ ತೇಜಸ್ವಿಯಾಗಿ ಕಂಗೊಳಿಸುತ್ತಿದ್ದನು. ಶ್ರೀರಾಮನು ಬರುತ್ತಿರುವುದನ್ನು ನೋಡಿ ಶರಭಂಗ ಮುನಿಯು ಆನಂದದಿಂದ ಶ್ರೀರಾಮನನ್ನು ಸ್ವಾಗತಿಸಿ ಕರೆತಂದು ತನ್ನ ಆಶ್ರಮದಲ್ಲಿ ಭಕ್ತ್ಯಾದರಗಳಿಂದ ರಾಮನಿಗೆ ಅರ್ಘ್ಯಪಾದ್ಯಾದಿ ಪೂಜೆಗಳನ್ನು ಸಲ್ಲಿಸಿ ಕೃತಾರ್ಥನಾದನು. ಮುನಿಯ ಪೂಜೆಯಿಂದ ಮುದಗೊಂಡ ಮುಕುಂದನು (ಶ್ರೀರಾಮನು) ಮುನಿಗೆ ಮೋಕ್ಷಪದವಿಯನ್ನಿತ್ತು ಪೊರೆದನು. ಗೆಡ್ಡೆಗೆಣಸುಗಳನ್ನು ತಿಂದು ಅರಣ್ಯದಲ್ಲಿ ತಪಸ್ಸನ್ನು ಮಾಡುತ್ತಿದ್ದ ಶರಭಂಗ ಋಷಿಯು ತನ್ನ ಶಕ್ತಿಗುಂದಿ ಧರ್ಮಾಚರಣೆಯು ಅಸಾಧ್ಯವಾಗಿದ್ದರಿಂದ: ಆ ಪರಿಸ್ಥಿತಿಯಲ್ಲಿರುವರು ಅಗ್ನಿಯನ್ನು ಪ್ರತಿಷ್ಠಾಪಿಸಿ ಮಂತ್ರಪಠನಪೂರ್ವಕ ಅಗ್ನಿಯಲ್ಲಿ ದೇಹತ್ಯಾಗ ಮಾಡುವುದು ಶ್ರೇಷ್ಠ ಧರ್ಮವೆಂಬುದನ್ನರಿತಿದ್ದುದರಿಂದ, ತನ್ನ ಯೋಗಶಕ್ತಿಯಿಂದ ದೇಹದಲ್ಲಿ ಅಗ್ನಿಯನ್ನು ಪ್ರಜ್ವಲಿಸಿ ಆ ಯೋಗಾಗ್ನಿಯಿಂದ ಶ್ರೀರಾಮಚಂದ್ರನ ಮುಂದೆ ತನ್ನ ದೇಹವನ್ನು ಸಮರ್ಪಿಸಿ ಶ್ರೀಹರಿಮಂದಿರವನ್ನು ಸೇರಿದನು.

ಅಲ್ಲಿಂದ ಹೊರಟ ಶ್ರೀರಾಮನಿಗೆ ವಿರಾಧನೆಂಬ ರಾಕ್ಷಸನು ಕಣ್ಣಿಗೆ ಬಿದ್ದನು. ಪೂರ್ವದಲ್ಲಿ ತುಂಬುರು ಎಂಬ ಗಂಧರ್ವನು ಒಮ್ಮೆ ಊರ್ವಶಿಯೆಂಬ ಅಪ್ಸರೆಯೊಡನೆ ಕಾಮಕೇಳಿಯಲ್ಲಿ ರತನಾಗಿ ಕುಬೇರನ ದೃಷ್ಟಿಗೆ ಬಿದ್ದನು. ಕೋಪಗೊಂಡ ಕುಬೇರನು 'ಅಸುರನಾಗಿ ಜನಿಸು' ಎಂದು ಶಾಪಕೊಟ್ಟನು. ಆ ಶಾಪದಿಂದ ಅವನು ಈಗ ವಿರಾಧನೆಂಬ ಅಸುರನಾಗಿ ಜನಿಸಿದ್ದನು. ವಿರಾಧನು ತಪಸ್ಸಿನಿಂದ ಶಿವನನ್ನು ಸಂತೋಷಗೊಳಿಸಿ ಅವಧ್ಯತ್ವ ವರವನ್ನು ಪಡೆದು ಲೋಕಕಂಟಕನಾಗಿ ದಂಡಕಾವನದಲ್ಲಿ ಗುಹೆಯೊಂದರಲ್ಲಿ ವಾಸಿಸುತ್ತಿದ್ದನು. ಶ್ರೀರಾಮನು ಲಕ್ಷ್ಮಣ ಸಹಿತನಾಗಿ ವಿರಾಧನ ಗುಹೆಯನ್ನು ಪ್ರವೇಶಿಸಿ ಅವನ ಬಾಹುಗಳ ಮಧ್ಯೆ ಹೊಕ್ಕು ವಿರಾಧನ ಎರಡೂ ತೋಳುಗಳನ್ನು ಛೇದಿಸಿದನು. ಹಿಂದೊಮ್ಮೆ ಈ ವಿರಾಧನ ತಪಸ್ಸಿಗೆ ಮೆಚ್ಚಿದ ಚತುರಾನನು ''ವಿರಾಧ! ನಿನ್ನ ತೋಳುಗಳ ಮಧ್ಯೆ ಬರುವವರು ನಿನ್ನ ವಶವಾಗಲಿ'' ಎಂದು ವರವಿತ್ತಿದ್ದರು. ಆದರೆ ಅವನ ಒಳತೋಳುಗಳಲ್ಲಿ ಸೇರಿದವರಿಂದ ಅವನ ಬಾಹುಗಳು ಕತ್ತರಿಸಲಾಗದಂತೇನೂ ಅವರು ವರಕೊಟ್ಟಿರಲಿಲ್ಲವಾದುದರಿಂದಲೂ, ಬ್ರಹ್ಮದೇವರ ವರಕ್ಕೆ ಗೌರವ ಕೊಡಬೇಕೆಂದೂ ಶ್ರೀರಾಮನು ವಿರಾಧನ ತೋಳುಗಳನ್ನು ಕತ್ತರಿಸಿ ಹಾಕಿದನು. ಮತ್ತು ತನ್ನ ಭಕ್ತನಾದ 'ತುಂಬುರು' ಎಂಬ ಗಂಧರ್ವನಿಗೆ ಮೋಕ್ಷವನ್ನು ಕರುಣಿಸಿದನು. ವಿರಾಧನು ಶ್ರೀರಾಮಲಕ್ಷ್ಮಣರನ್ನು ತಿನ್ನಲು ಅವರನ್ನು ತನ್ನೆರಡು ಬಾಹುಗಳ ನಡುವೆ ಕಟ್ಟಿಹಾಕಿದ್ದರೂ ಲಕ್ಷ್ಮಣ ಸಹಿತನಾಗಿ ಶ್ರೀರಾಮನು ವಿರಾಧನ ತೋಳುಗಳನ್ನು ಛೇದಿಸಿದನು.

ಅಲ್ಲಿಂದ ಹೊರಟ ರಾಮಚಂದ್ರನು ಕುಂಭಸಂಭವರಾದ, ತನ್ನ ಭಕ್ತರಾದ ಅಗಸ್ತ್ಯಮುನಿಗಳ ಕೋರಿಕೆಯಂತೆ ಅವರ ಆಶ್ರಮಕ್ಕೆ ಬಂದು ಅವರನ್ನು ಸಂತೋಷಗೊಳಿಸಲು ಅವರಿತ್ತ ಪೂಜೆಯನ್ನು ಸ್ವೀಕರಿಸಿದನು. ಇಂದ್ರದೇವರು ಅಗಸ್ತ್ಯಮುನಿಗಳಿಗೆ ಹಿಂದೆ ಶಾರ್ಙ್ಗ ಎಂಬ ಶ್ರೇಷ್ಠವಾದ ಧನುಸ್ಸನ್ನು ಕೊಟ್ಟಿದ್ದರು. ಅಗಸ್ತ್ಯರು ಶ್ರೀರಾಮನ ದುಷ್ಟಶಿಕ್ಷಣ ಕಾರ್ಯದಲ್ಲಿ ಸಹಾಯಕವಾಗಲೆಂದು- ''ದೇವ, ಇದು ನಿನ್ನ ಧನುಸ್ಸು, ಸ್ವೀಕರಿಸು'' ಎಂದು ಅದನ್ನು ರಾಮನಿಗೆ ಅರ್ಪಿಸಿದರು. ಶ್ರೀಹರಿಯು ಹಿಂದೆ ಶಾರ್ಙ್ಗಧನುವನ್ನು ಶ್ರೀರಾಮಾವತಾರ ಕಾಲದಲ್ಲಿ ತನಗೆ ಸಹಾಯಕವಾಗಲೆಂದೂ, ದಂಡಕಾರಣ್ಯ-ದಲ್ಲಿರುವ ಋಷಿಮುನಿಗಳ ಸಂರಕ್ಷಣೆಗಾಗಿಯೂ ಅದನ್ನು ಇಂದ್ರದೇವರಿಗೆ ಕೊಟ್ಟಿದ್ದನು. ಸರಿಯಾದ ಸಮಯದಲ್ಲಿ ಶ್ರೀರಾಮನಿಗೆ ಕೊಡಲು ಇಂದ್ರದೇವರು ಅಗಸ್ತ್ಯರಿಗೆ ಅದನ್ನು ಕೊಟ್ಟಿದ್ದರು. ದಂಡಕಾರಣ್ಯಕ್ಕೆ ಬಂದ ಶ್ರೀರಾಮನಿಗೆ ಅಗಸ್ತ್ಯರು ಆ ಧನುವನ್ನು ಸಮರ್ಪಿಸಿದರು. ಇಂತು ಪರಂಪರೆಯಿಂದ ಬಂದ ತನ್ನ ಧನುವನ್ನು ಮತ್ತೆ ಪಡೆದ ಶ್ರೀರಾಮನು ಮುನಿಜನರನ್ನು ರಕ್ಷಿಸುತ್ತಾ ದಂಡಕಾರಣ್ಯದಲ್ಲಿ ವಾಸ ಮಾಡಹತ್ತಿದನು.

ಹಿಂದೊಮ್ಮೆ ರಾವಣನು ಖರದೂಷಣರು ಮತ್ತು ಅಪಾರ ಸೈನ್ಯದೊಡನೆ ಕೂಡಿ ರಣಭೂಮಿಯಲ್ಲಿ ಯುದ್ಧ ಮಾಡುತ್ತಿರುವಾಗ ತಿಳಿಯದೆ ಶತ್ರುಗಳ ಮೇಲೆ ಪ್ರಯೋಗಿಸಿದ ಬಾಣವು ಗುರಿತಪ್ಪಿ ಅವನ ತಂಗಿಯಾದ ಶೂರ್ಪಣಖಿ ಪತಿಯ ದೇಹವನ್ನು ಹೊಕ್ಕು ಅವನು ಮೃತನಾದನು. ದುಃಖಿತಳಾದ ಶೂರ್ಪಣಖಿಯು ''ಅಣ್ಣಾ, ನನ್ನ ಪತಿಯನ್ನು ಸಂಹರಿಸಿದೆ. ನನಗೆ ಮುಂದೇನು ಗತಿ?'' ಎಂದು ಪ್ರಲಾಪಿಸಲು ರಾವಣನು ''ಸೋದರಿ! ನೀನು ಮೆಚ್ಚಿ ಕರೆತರುವವನೊಡನೆ ನಿನಗೆ ಮದುವೆ ಮಾಡುವೆನು'' ಎಂದು ಹೇಳಿದ್ದರಿಂದ ಅದರಂತೆ ಮತ್ತೊಬ್ಬ ಸರಿಯಾದ ಪತಿಯನ್ನು ಪಡೆಯಲು ವಿಧವೆಯಾಗಿದ್ದ ಶೂರ್ಪಣಖಿಯು ತನ್ನಿಬ್ಬರು ಅಣ್ಣಂದಿರೊಡನೆ ಉತ್ತಮ ಪತಿಯನ್ನರಸುತ್ತಾ ದಂಡಕವನದಲ್ಲಿ ವಾಸಿಸುತ್ತಿದ್ದಳು. ಅಲ್ಲಿ ಶ್ರೀರಾಮನನ್ನು ಕಂಡು ಅವನ ರೂಪಲಾವಣ್ಯಗಳಿಗೆ ಮರುಳಾಗಿ ಅವನೇ ತನಗೆ ತಕ್ಕ ಪತಿಯೆಂದು ನಿರ್ಧರಿಸಿ ರಾಮನನ್ನು ಕಾಮುಕಳಾಗಿ ನೋಡತೊಡಗಿದಳು. ಅವನೆಡೆಗೆ ನಡೆತಂದು ''ಓ ಚೆಲುವಿನನಿಧಿಯೇ! ನೀನಾರು? ನಿನ್ನ ಹೆಸರೇನು? ನೀಯೆನ್ನ ಕರಪಿಡಿದು ಪತಿಯಾಗು!'' ಎಂದು ಹೇಳಿದಳು. ಈ ಮಾತು, ಕಗ್ಗತ್ತಲೆಯು ಪ್ರಜ್ವಲಿಸುವ ಸೂರ್ಯನ ಬಳಿಸಾರಿ ''ನನ್ನನ್ನು ನಿನ್ನೊಡನೆ ಸೇರಿಸಿಕೋ'' ಎನ್ನುವಂತಾಯಿತು.

ಶ್ರೀರಾಮನು ನಸುನಗುತ್ತಾ ಸೀತೆಯನ್ನು ತೋರಿ ''ಇಕೋ ನಾನಾಗಲೇ ಇವಳನ್ನು ಮದುವೆಯಾಗಿರುವೆ. ನನ್ನ ಸಹೋದರನು ನನಗಿಂತ ಸುಂದರನು! ನೋಡಲ್ಲಿ ನಿಂತಿಹನು. ಅವನನ್ನು ನೀನು ಲಗ್ನವಾಗು'' ಎಂದು ವಿನೋದವಾಡಿದನು. ಅನಂತರ ಅವಳ ಲಕ್ಷ್ಮಣನ ಬಳಿಗೆ ಬಂದು ಮದುವೆಯಾಗಿ ತನ್ನ ಕಾಮಿತವನ್ನು ನೆರವೇರಿಸುವಂತೆ ಬೇಡಿದಳು. ಶ್ರೀರಾಮನ ಸಂಜ್ಞೆಯನ್ನು ಆಣತಿಯೆಂದು ತಿಳಿದು ನಸುನಕ್ಕು ಭ್ರಷ್ಟಳಾದ ಆ ರಕ್ಕಸಿಯನ್ನು ಕಿವಿಮೂಗಿಲ್ಲದವಳನ್ನಾಗಿ ಮಾಡಿದನು. ಅಂದರೆ ಅವಳ ಕಿವಿಮೂಗುಗಳನ್ನು ಕತ್ತರಿಸಿಹಾಕಿದನು. ಇಂತು ಶ್ರೀರಘುರಾಮನು ನಿಖಿಲ ರಕ್ಕಸಕುಲ ನಾಶದ ನಾಂದಿಯಾಗಿ ಶೂರ್ಪಣಖಿಯ ಕಿವಿಮೂಗುಗಳನ್ನು ಲಕ್ಷ್ಮಣನಿಂದ ಕತ್ತರಿಸಿ ಹಾಕಿಸಿ ದುಷ್ಟಳನ್ನು ಶಿಕ್ಷಿಸಿದನು.

ಅಪಮಾನದಿಂದ ಖತಿಗೊಂಡ ಶೂರ್ಪಣಖಿಯು ತಕ್ಷಣ ತನ್ನ ಬಂಧುಗಳಾದ ಖರದೂಷಣ ತ್ರಿಶಿರರನ್ನು ಪ್ರೇರಿಸಿ ರಾಮನ ಮೇಲೆ ಯುದ್ಧಕ್ಕೆ ಕಳಿಸಿದಳು. ಭಯಂಕರ ಪರಾಕ್ರಮಶಾಲಿಗಳಾದ ಅವರು ಹದಿನಾಲ್ಕು ಸಾವಿರ ಸೈನ್ಯದೊಡನೆ ಶ್ರೀರಾಮನ ಆಶ್ರಮವನ್ನು ಮುತ್ತಿದರು. ಅಪ್ರತಿಹತ ಕೋದಂಡಧಾರಿಯಾದ ಶ್ರೀರಾಮನು ಬಿಲ್ಲನ್ನು ಠೇಂಕರಿಸಿ ಬಾಣಗಳ ಮಳೆಗರೆದು ಹದಿನಾಲ್ಕು ಸಾವಿರ ಸೈನ್ಯದೊಡನೆ ಖರ-ದೂಷಣ-ತ್ರಿಶೀರ್ಷರನ್ನು ಸಂಹರಿಸಿ ಸಕಲ ಮುನಿಜನರಿಗೆ ಪರಮಾನಂದವನ್ನುಂಟು ಮಾಡಿದನು.

ಶ್ರೇಷ್ಠನಾದ ಶ್ರೀರಾಮನು ಮುನಿಸಂದೋಹಕ್ಕೆ ಅಭಯವನ್ನೂ ರಜನೀಚರರೆನಿಸಿದ ರಕ್ಕಸ ಗಣಕ್ಕೆ ಭಯವನ್ನೂ ಉಂಟು ಮಾಡಿದನು. ಶೂರ್ಪಣಖಿಯೂ, ಅವಿಕಂಪನನೆಂಬ ರಾಕ್ಷಸನೂ ರಘುಕುಲಕ್ಕೆ ಪ್ರಭುವಾದ ಶ್ರೀರಾಮನ ಶೌರ್ಯ ಪ್ರತಾಪಗಳ ಹಿರಿಮೆ ಗರಿಮೆಗಳನ್ನು ರಾವಣನ ಮುಂದೆ ಬಣ್ಣಿಸಿ ಹೇಳಿದರು. ರಾವಣನು ಅದನ್ನು ಕೇಳಿ ಮನದಲ್ಲಿ ತಳಮಳಿಸಹತ್ತಿದನು.

ಹಿಂದೆ ಮಾರೀಚನು ರಾಮನ ಬಾಣದ ಪ್ರಭಾವದಿಂದ ಸಾಗರದಲ್ಲಿ ಬಿದ್ದಿದ್ದನು. ನಂತರ ಸಮುದ್ರ ತೀರದಲ್ಲಿರುವ ಗೋಕರ್ಣಕ್ಷೇತ್ರಕ್ಕೆ ಬಂದು ರಾಮನ ಬಾಣಕ್ಕೆ ಅಂಜಿ ಅಲ್ಲಿ ತಪಸ್ಸು ಮಾಡುತ್ತಿದ್ದನು. ರಾಮನ ಮೇಲೆ ಸೇಡು ತೀರಿಸಿಕೊಳ್ಳಲು ಮಾರೀಚನೊಡನೆ ವಿಮರ್ಶಿಸಲು ರಾವಣನು ಅಲ್ಲಿಗೆ ಬಂದು ರಾಮನನ್ನು ಎಂತಾದರೂ ಮೋಸಗೊಳಿಸುವಂತೆ ಮಾರೀಚನನ್ನು ಬೇಡಿದನು. ಈ ಮೊದಲನೇ ರಾಮನ ಬಾಣದ ಸವಿಯನ್ನುಂಡಿದ್ದ ಮಾರೀಚನು ರಾವಣನ ಮಾತನ್ನು ಒಪ್ಪದೇ ''ರಕ್ಕಸಕುಲಸಾರ್ವಭೌಮ! ಶ್ರೀರಾಮನು ಸಾಮಾನ್ಯಮಾನವನಲ್ಲ! ಅವನ ಶಕ್ತಿ ಸಾಮರ್ಥ್ಯಗಳನ್ನು ನೀನರಿಯೆ! ಯುದ್ಧದಲ್ಲಿ ಅವನನ್ನು ಸೋಲಿಸಲು ನಿನ್ನಿಂದಾಗದು. ನಾನಾಗಲೇ ಅವನ ಬಾಣದ ಹೊಡೆತದಿಂದ ತತ್ತರಿಸಿಹೋಗಿದ್ದೇನೆ. ಆದ್ದರಿಂದ ಅದನ್ನು ನಾನು ಚೆನ್ನಾಗಿ ಬಲ್ಲೆ'' ಎಂದುಸುರಿದನು.

ಮಾರೀಚನ ವಚನವನ್ನಾಲಿಸಿ ಕ್ರೋಧಸಂತಪ್ತನಾದ ದಶಕಂಠನು ಖಡ್ಗವನ್ನು ಹಿರಿದು 'ನನ್ನ ಮಾತನ್ನು ಪೂರ್ಣ ಮಾಡದಿದ್ದರೆ ನಿನ್ನನ್ನು ಸಂಹರಿಸುತ್ತೇನೆ' ಎಂದೆನಲು ಮಾರೀಚನು ರಾಮನ ಬಳಿ ಹೋಗಲು ಸಮ್ಮತಿಸಿದನು. ಸ್ವಾಭಾವಿಕವಾಗಿ ಪಾಪಕರ್ಮಿಯಾದವನಿಗೆ ಇಂತಹ ದುರ್ಬುದ್ಧಿ ಹುಟ್ಟಿದ್ದು ಆಚ್ಚರಿಯೇನಲ್ಲ. ಮಾರೀಚನು ಕೂಡಲೇ ನವರತ್ನಗಳಿಂದ ರಾಜಿಸುವ ಬಂಗಾರದ ಜಿಂಕೆಯ ರೂಪವನ್ನು ತಾಳಿ ಸೀತಾದೇವಿಯ ಬಳಿ ಸಾರಿ ಮರಳುಗೊಳಿಸುವಂತೆ ಅತ್ತಿತ್ತ ಸುಳಿದಾಡ-ಹತ್ತಿದನು. ಸಾಕ್ಷಾತ್ ಲಕ್ಷ್ಮೀಜ್ಞಾನವು ನಿತ್ಯವೂ, ನಿರ್ದೋಷವೂ, ಉತ್ತಮವೂ ಆಗಿರುವುದರಿಂದ ಲಕ್ಷ್ಮೀಸ್ವರೂಪಿಣಿಯಾದ ಸೀತಾದೇವಿಗೆ ಅದು ಅರಿಯದ ವಿಚಾರವೇನಾಗಿರಲಿಲ್ಲ. ಆದರೂ ಸರ್ವಜ್ಞಳಾದ ಆ ಲೋಕಮಾತೆಯು ಮಾರೀಚನ ಸಂಹಾರಕ್ಕಾಗಿಯೂ, ರಾಜಸ-ತಾಮಸ ಜನರನ್ನು ಮೋಹಗೊಳಿಸಲು ಶ್ರೀರಾಮನನ್ನು ''ಆರ್ಯ! ನನಗೆ ಆಟವಾಡಲು ಈ ಕನಕ ಮೃಗವನ್ನು ಹಿಡಿದು ತಂದುಕೊಡು'' ಎಂದು ಕೇಳಿದಳು. ಸೀತೆಯ ಮಾತು ಕೇಳಿ ಶ್ರೀರಾಮನು ಅದು ಮಾಯಮೃಗವೆಂದರಿತಿದ್ದರೂ ಬಿಲ್ಲುಬಾಣಗಳನ್ನು ಹಿಡಿದು ಮಾಯಾಮೃಗವೇಷಧಾರಿಯಾದ ರಕ್ಕಸನ ಬೆನ್ನಟ್ಟಿ ಅವನನ್ನು ಸಂಹರಿಸಿದನು. ರಾಮಬಾಣವು ಮಾರೀಚನ ದೇಹಕ್ಕೆ ನಾಟಿತು. ಅವನು ಅದರ ನೋವನ್ನು ತಾಳಲಾರದೆ ತಳಮಳಿಸಿ ''ಹಾ ಲಕ್ಷ್ಮಣ'' ಎಂದು ಕೂಗುತ್ತಾ ಆ ಪಾಪಿಯು ನೋವಿನಿಂದ ನರಳಿ ಪ್ರಾಣಬಿಟ್ಟನು. ರಾಮನೇ ಕೂಗಿ ಕರೆದಂತೆ ಕೇಳಿಸಿದ ಆರ್ತನಾದದಿಂದ ದಿಕ್ಕೆಟ್ಟವಳಂತೆ ಕಂಡ ಸೀತಾದೇವಿಯ ಬಿರುನುಡಿಗಳಿಂದ ಪ್ರೇರಿತನಾದ ಲಕ್ಷ್ಮಣನು ಕರದಲ್ಲಿ ಬಿಲ್ಲು ಬಾಣಗಳನ್ನು ಹಿಡಿದು ರಾಮನ ಹಾದಿಯನ್ನು ಹಿಡಿದು ಹೊರಟನು. ಪರಾತ್ಪರನಾದ ಶ್ರೀಹರಿಯ ಲೀಲೆಗಳಿಗೆ ತಕ್ಕಂತೆ ಅವನ ಪ್ರೇಯಸಿಯಾದ ಶ್ರೀರಮಾದೇವಿಯು ತಾನೂ ಲೀಲೆಗಳನ್ನು ತೋರುವಳು. ಮಾಯಾಮೃಗದ ಈ ಸನ್ನಿವೇಶದಿಂದ ಶ್ರೀರಮಾಮಾಧವರಲ್ಲಿ ಪರಮಾಣುವಷ್ಟೂ ದೋಷವನ್ನಾರೂ ಚಿಂತಿಸಲಾಗದು. ಸೀತಾರಾಮರು ಅಂತಹ ಉದಾರ ಪ್ರಭುಗಳಾಗಿ ರಾಜಿಸುತ್ತಿದ್ದಾರೆ.

ಶ್ರೀಹರಿ ಮತ್ತು ಶ್ರೀರಮಾದೇವಿಯರು ತಮ್ಮ ಅಪಾಂಗವೀಕ್ಷಣ ಮಾತ್ರದಿಂದ ಸಕಲಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರ-ಸಂಸಾರದಿಂದ ಹಿಡಿದು ಮೋಕ್ಷಾದಿಗಳನ್ನೆಸಗುವವರಂದ ಮೇಲೆ ಅವರಿಗೆ ಅಜ್ಞಾನ ಆಪತ್ತುಗಳೆಂದಿಗಾದರೂ ಒದಗುವುದುಂಟೆ? ಎಂದಿಗೂ ಸಾಧ್ಯವಿಲ್ಲವೆಂಬುದು ಕೈಮುತ್ಯನ್ಯಾಯದಿಂದ ಸಿದ್ಧವಾಗಿದೆ. ಈ ಮಾಯಾಮೃಗ ಪ್ರಕರಣದಲ್ಲಿ ಅವರು

ಅಜ್ಞಾನಿಗಳಂತೆ ನಟಿಸಿರುವುದು ವಿಡಂಬನೆಯೇ ವಿನಾ ಬೇರೆ ಅಲ್ಲ. ಶ್ರೀರಮಾನಾರಾಯಣರು ದೇವತೆಗಳಂತೆಯೂ ಮಾನವರಂತೆಯೂ ಅನುಕರಣ ಮಾಡಿ ಲೀಲೆ ತೋರುವವರಾದ್ದರಿಂದ ಈ ಮಾಯಾಮೃಗದ ವಿಷಯದಲ್ಲಿ ಅಜ್ಞರಾದ ಮಾನವರಂತೆ ವಿಡಂಬನೆ ಮಾಡಿರುವರು.

ಲಕ್ಷ್ಮಣನತ್ತ ಹೋದೊಡನೆಯೇ ರಾವಣನು ಸೀತಾದೇವಿಯ ಮುಂದೆ ಸುಳಿದಾಡಹತ್ತಿದನು. ಯಾರಿಂದಲೂ ಸಹಿಸಲಸದಳ ಶಕ್ತಿವಂತಳೂ, ಮಹಾಮಹಿಮಳೂ ಆದ ಸೀತಾದೇವಿಯು ತನ್ನಂತಿರುವ ಒಂದು ಪ್ರತಿಮೆಯನ್ನು ಸೃಷ್ಟಿಸಿ, ನಿಜರೂಪದಿಂದ ಅದೃಶ್ಯಳಾಗಿ ಕೈಲಾಸಕ್ಕೆ ಹೋಗಿ ಅಲ್ಲಿ ಶಿವಪಾರ್ವತಿಯರಿಂದ ಸೇವೆ ಕೈಗೊಳ್ಳುತ್ತಾ ವಾಸಮಾಡಹತ್ತಿದಳು. ಇತ್ತ ಭೂಮಿಯಲ್ಲಿ ನಿಂತಿದ್ದ ಸೀತಾಪ್ರತಿಕೃತಿಯಲ್ಲಿ ಇಂದ್ರದೇವರು ಬಂದು ನೆಲೆಸಿದರು. ''ರಾವಣನು ಸೀತಾದೇವಿಯನ್ನು ಅಪಹರಿಸಿದ''ನೆಂಬ ಮಾತಿನ ವ್ಯವಹಾರದ ಸಿದ್ಧಿಗಾಗಿ ರಮಾದೇವಿಯೂ ಸಹ ಆ ಸೀತಾಕೃತಿಯಲ್ಲಿ ತನ್ನ ಸನ್ನಿಧಾನವಿರಿಸಿದಳು. ರಾವಣನು ಆ ಸೀತಾಕೃತಿಯನ್ನೇ ಸೀತಾಮಾತೆಯೆಂದು ತಿಳಿದು ಆ ಸೀತಾಪ್ರತಿಕೃತಿಯನ್ನು ತೆಗೆದುಕೊಂಡು ಹೊರಟನು. ಮಾರ್ಗಮಧ್ಯದಲ್ಲಿ ದಶರಥ ಚಕ್ರವರ್ತಿಯ ಗೆಳೆಯನಾದ ಜಟಾಯುವೆಂಬ ಪಕ್ಷಿರಾಜನು ರಾವಣನನ್ನು ಅಡ್ಡಗಟ್ಟಿ ಸೀತೆಯನ್ನು ಬಿಡಲು ಹೇಳಿದನು. ರಾಕ್ಷಸೇಂದ್ರನಾದ ರಾವಣನು ಅವನ ಮಾತನ್ನು ನಿರ್ಲಕ್ಷಿಸಿ ಬಹು ಸಾಹಸ ಪ್ರಯತ್ನಗಳಿಂದ ಯುದ್ಧದಲ್ಲಿ ಜಟಾಯುವನ್ನು ಕೊಂದು ಲಂಕೆಯ ಕಡೆ ಹೊರಟನು. ಅವನು ಕಿಷ್ಕಿಂಧೆಯ ನಡುಮಾರ್ಗದಲ್ಲಿ ಹೋಗುತ್ತಿರುವಾಗ ಶ್ರೀವಾಯುಪುತ್ರನಾದ ಹನುಮಂತನು ಅವನಿಗೆ ವಿವೇಕ ಹೇಳಲೆತ್ನಿಸಿದಾಗ ಸೂರ್ಯಸುತನಾದ ಸುಗ್ರೀವನು ಬೇಡವೆಂದು ಅವನನ್ನು ತಡೆದನು. ವಾಯುದೇವರು ಸುಗ್ರೀವನಿಂದ ಬೇಡವೆಂದು ಅವನನ್ನು ತಡೆದನು. ವಾಯುದೇವರು ಸುಗ್ರೀವನಿಂದ ಬೇಡವೆಂದು ಹೇಳಿಸಿಕೊಳ್ಳುವ ಪ್ರಮೇಯವೇನೂ ಇರಲಿಲ್ಲ. ಅವರು ಸ್ವತಃ ಶ್ರೀಹರಿಯ ಅವತಾರನಾದ ಶ್ರೀರಾಮನ ಕೀರ್ತಿಯನ್ನು ಬಯಸಿದವರು ಮತ್ತು ದೇವಕಾರ್ಯವೇನೆಂಬುದನ್ನು ಅರಿತವಾದ್ದರಿಂದ ಶ್ರೀಹರಿಯ ಆಜ್ಞೆಯನ್ನು ಶಿರಸಾವಹಿಸಿ ದುಷ್ಟನಾದ ರಾವಣನನ್ನು ಸಂಹರಿಸದೇ ಸುಮ್ಮನಾದರು.

ಅತ್ತ ರಾವಣನು ಲಂಕಾಪಟ್ಟಣವನ್ನು ತಲುಪಿ ಅಶೋಕವನದಲ್ಲಿ ಸೀತಾ ಪ್ರತಿಕೃತಿಯನ್ನಿರಿಸಿ ಕಾವಲಿಗೆ ರಾಕ್ಷಸಿ-ಯರನ್ನೇರ್ಪಡಿಸಿದನು. ಇತ್ತ ರಾಮನು ಸೀತೆಯನ್ನು ಮೋಸಗೊಳಿಸಿದ ದುಷ್ಟ ಮಾರೀಚನನ್ನು ಸಂಹರಿಸಿ ತನ್ನ ಆಶ್ರಮಕ್ಕೆ ಬಂದು ಅಲ್ಲಿ ತನ್ನ ಪ್ರಿಯಳಾದ ಸೀತೆಯನ್ನು ಕಾಣದವನಂತೆ ವರ್ತಿಸಿದನು. ಅನಂತರ ಶ್ರೀರಾಮನು ಸೀತಾಮಾತೆಯನ್ನು ಹುಡುಕುತ್ತಿರುವವನಂತೆ ನಟಿಸುತ್ತಾ ಹೊರಟು ಮಾರ್ಗಮಧ್ಯದಲ್ಲಿ ಕೊನೆಯುಸಿರನ್ನೆಳೆಯುತ್ತಾ ನರಳುತ್ತಿದ್ದ ಜಟಾಯುವನ್ನು ಕಂಡನು. ಜಟಾಯುವು ಹೇಗಾದರೂ ಸೀತೆಯನ್ನು ರಕ್ಷಿಸಬೇಕೆಂಬ ಆಶೆಯಿಂದ ಶತ್ರುವಿನೊಡನೆ ಬಹು ಹೋರಾಡಿ ಗಾಯಗೊಂಡು ಬಿದ್ದಿದ್ದನು. ಅವನಿಂದ ಶ್ರೀರಾಮನು ರಾವಣನ ಕ್ರೂರವರ್ತನೆಯನ್ನು ಕೇಳಿ ತಿಳಿದು ಮರುಗಿ ಮೃತನಾದ ಜಟಾಯುವಿಗೆ ದಹನ ಸಂಸ್ಕಾರವನ್ನು ಮಾಡಿ ಅವನಿಗೆ ಉತ್ತಮಗತಿಯನ್ನು ಕರುಣಿಸಿ ಅಲ್ಲಿಂದ ಹೊರಟನು.

ಅರಣ್ಯದಲ್ಲಿ ರಾಮನಿಗೆ ಕಬಂಧನೆಂಬ ರಾಕ್ಷಸನು ಎದುರಾದನು. ಅವನ ಹಿಂದೆ 'ದನು' ಎಂಬ ಗಂಧರ್ವನು. ಇಂದ್ರ ಭೃತ್ಯನಾಗಿದ್ದವನು. ಕಾರಣಾಂತರದಿಂದ ಅವನೀಗ ತ್ರಿಜಟಿಯೆಂಬ ರಾಕ್ಷಸಿಯೊಡನೆ ಜನಿಸಿ ಕಬಂಧನೆಂಬ ಹೆಸರಿನಿಂದ ಖ್ಯಾತನಾಗಿದ್ದನು. ಅವನು ಹಿಂದೆ ಬ್ರಹ್ಮದೇವರನ್ನು ತಪದಿಂದ ಮೆಚ್ಚಿಸಿ ಅವರ ವರಬಲದಿಂದ ಸರ್ವರನ್ನೂ ಜಯಿಸುವ ಶಕ್ತಿ ಪಡೆದು ಅವಧ್ಯನಾಗಿದ್ದನು. ಹಿಂದೊಮ್ಮೆ ಇಂದ್ರನ ವಜ್ರಾಯುಧದಪೆಟ್ಟು ಅವನ ಶಿರದ ಮೇಲೆ ಬಿದ್ದು ಶಿರವು ಮುಂಡದೊಳಗೆ ಸೇರಿತು. ಆದ್ದರಿಂದ ಅವನಿಗೆ ಕಬಂಧನೆಂಬ ಹೆಸರಾಯಿತು. ಶ್ರೀರಾಮನು ಲಕ್ಷ್ಮಣಸಹಿತನಾಗಿ ಕಬಂಧನ ಎರಡು ತೋಳುಗಳನ್ನು ಕತ್ತರಿಸಿ ಹಾಕಿದನು. ಇದರಿಂದ ದನುವೆಂಬ ಗಂಧರ್ವನಿಗೆ ಮೊದಲರೂಪ ಬಂದಿತು. ಅವನು

ಆನಂದದಿಂದ ರಾಮನನ್ನು ಭಕ್ತಿಯಿಂದ ಪೂಜಿಸಿ ಬೀಳ್ಕೊಂಡನು. ರಾಮನು ಮುಂದೆ ಹೊರಟನು. ಶ್ರೀಹರಿಯ ಪ್ರತ್ಯಕ್ಷ ದರ್ಶನ ಪಡೆದು ಆನಂದ ಬಯಸಿ ಶಬರಿಯು ಮತಂಗಮುನಿಗಳ ಆಶ್ರಮದಲ್ಲಿ ಅವರ ಸೇವೆ ಮಾಡುತ್ತಿದ್ದಳು. ಮತಂಗಮುನಿಗಳು ''ಹರಿಯು ರಾಮರೂಪದಿಂದ ಇಲ್ಲಿಗೆ ಬಂದು ನಿನ್ನನ್ನು ಅನುಗ್ರಹಿಸುವನು. ಅಲ್ಲಿಯವರೆಗೆ ಈ ತಪೋವನದಲ್ಲಿ ನೀನು ಅವನಿಗಾಗಿ ಕಾದಿರು'' ಎಂದು ಹೇಳಿದ್ದರು. ತನ್ನ ಆಗಮನವನ್ನೇ ನಿರೀಕ್ಷಿಸುತ್ತಿದ್ದ ಶಬರಿಯನ್ನು ಅನುಗ್ರಹಿಸಲು ರಾಮನು ಲಕ್ಷ್ಮಣನಿಂದೊಡಗೂಡಿ ಅಲ್ಲಿಗೆ ಬಂದನು. ಶ್ರೀರಾಮರೂಪೀ ಶ್ರೀಹರಿಯ ದರ್ಶನದಿಂದ ಪುನೀತಳಾದ ಶಬರಿಯು ಅಗ್ನಿಯನ್ನು ಪ್ರತಿಷ್ಠಾಪಿಸಿ ಅದರಲ್ಲಿ ದೇಹತ್ಯಾಗ ಮಾಡಿದಳು. ಶ್ರೀರಾಮನು ಶಬರಿಗೆ ಮೋಕ್ಷಪದವನ್ನಿತ್ತು ಕರುಣಿಸಿದನು.

ಹಿಂದೆ ಅಪ್ಸರೆಯಾಗಿದ್ದಾಗ, ಇಂದ್ರನ ಮುಂದೆ ಗರ್ವಪ್ರದರ್ಶನ ಮಾಡಲು ಕುಪಿತಳಾದ ಶಚೀದೇವಿಯು ಅವಳಿಗೆ ಶಾಪವಿತ್ತಿದ್ದಳು. ಅವಳು ತನ್ನ ಅಪ್ಸರೆಯ ಸ್ಥಾನವನ್ನು ಕಳೆದುಕೊಂಡು ಶಬರಿಯ ಜನ್ಮವನ್ನು ಪಡೆದಳು. ಶ್ರೀರಾಮನು ತನ್ನ ದರ್ಶನದಿಂದ ಅವಳ ಅಪ್ಸರೆಯ ಅಪ್ಸರತನವನ್ನು ಕಳೆದು ಮೋಕ್ಷವನ್ನು ಅನುಗ್ರಹಿಸಿದನು. ಅಲ್ಲಿಂದ ಹೊರಟ ಶ್ರೀರಾಮನು ಋಷ್ಯಮೂಕ ಪರ್ವತದಲ್ಲಿ ವಾಯುಸುತನಾದ ಹನುಮನನ್ನು ಕಂಡನು. ಋಜುಯೋಗಿಯಾದ ಶ್ರೀಹನುಮಂತನು ಶ್ರೀರಾಮನನ್ನು ಹರಿಯೆಂದು ತಿಳಿದನು. ಅವನ ವಿನಾ ಬೇರಾರಿಗೂ ಈ ರಹಸ್ಯ ತಿಳಿಯಲಿಲ್ಲ. ವಾಯುದೇವರು ನೆಲೆಸಿರುವ ಸಕಲ ಚೇತನ ಶರೀರಗಳಲ್ಲಿ ಶ್ರೀಹರಿಯು ಎಲ್ಲಿ ಸನ್ನಿಹಿತನಾಗಿರುವನೋ ಅಲ್ಲಿ ಶ್ರೀವಾಯುದೇವನೂ ಇರುತ್ತಾನೆ. ಇದನ್ನು ''ಕಸ್ಮಿನ್ನಹಮುತ್ಕ್ರಾಂತ ಉತ್ಕ್ರಮಿಷ್ಯಾಮಿ ಕಸ್ಮಿನ್ವಹಂಸ್ಥಿತೇ ಸ್ಥಾಸ್ಯಾಮಿ, ಸಪ್ರಾಣಮಸೃಜತ'' ಎಂಬ ವೇದವಾಕ್ಯವು ಸಾರುತ್ತಿದೆ. ಅಂತೆಯೇ ಶ್ರೀರಾಮಚಂದ್ರನು ಮಾರುತಿಗಾಗಿ ಸೂರ್ಯಪುತ್ರನಾದ ಸುಗ್ರೀವನನ್ನು ರಕ್ಷಿಸಿದನು. ತ್ರೇತೆಯಲ್ಲಿ ಶ್ರೀರಾಮನಾಗಿ ಸೂರ್ಯಸುತನಾದ ಸುಗ್ರೀವನನ್ನು ಪೊರೆದು ಅವನ ವಿರೋಧಿಯಾದ ಇಂದ್ರಪುತ್ರನಾದ ವಾಲಿಯನ್ನು ವಧಿಸಿದಂತೆ ದ್ವಾಪರದಲ್ಲಿ ಶ್ರೀಕೃಷ್ಣನಾಗಿ ವಾಯುದೇವರ ಅವತಾರನಾದ ಭೀಮಸೇನನಿಗೋಸ್ಕರ ಇಂದ್ರಸುತನಾದ ಅರ್ಜುನನನ್ನು ರಕ್ಷಿಸಿ, ಅವನ ವಿರೋಧಿಯಾದ ಸೂರ್ಯಪುತ್ರ ಕರ್ಣನನ್ನು ಸಂಹರಿಸಿ ಮೆರೆದನು. ತ್ರೇತೆಯಲ್ಲಿ ಮಾರುತಿಯ ನಿಮಿತ್ತವಾಗಿ ಇಂದ್ರಸುತ ವಾಲಿಯನ್ನು ಸಂಹರಿಸಿಸುವುದರಿಂದಲೇ ದ್ವಾಪರದಲ್ಲಿ ಭೀಮನ ನಿಮಿತ್ತವಾಗಿ ಸೂರ್ಯಸುತ ಕರ್ಣನನ್ನು ಸಂಹರಿಸಿದನೆಂಬ ಕಾರಣವು ಯುಕ್ತವಾಗಿದೆ. ಸಕಲ ದೇವತೆಗಳು ವಾಯುದೇವರಿಗೆ ಅಧೀನರಾದ್ದರಿಂದಲೇ ಅವರು ಸೂರ್ಯಸುತನಾದ ಸುಗ್ರೀವನನ್ನು ಆಶ್ರಯಿಸಿದರು. ಅದರಂತೆಯೇ ದ್ವಾಪರದಲ್ಲಿ ಇಂದ್ರಪುತ್ರ ಅರ್ಜುನನನ್ನು ಆಶ್ರಯಿಸಿದರು. ಇದರಿಂದ ಎರಡು ಯುಗಗಳಲ್ಲೂ ಶ್ರೀವಾಯುದೇವರ ಅನುಗ್ರಹದ್ವಾರಾ ಶ್ರೀಹರಿಯ ಅನುಗ್ರಹಕ್ಕೆ ಪಾತ್ರರಾಗ ಬಯಸಿ ದೇವತೆಗಳು ಹಾಗೆ ಆಶ್ರಯಿಸಿದರು. ಇಂತು ಶ್ರೀರಾಮನು ಲಕ್ಷ್ಮಣನಿಂದ ಕೂಡಿ ಹನುಮಂತನ ಮೂಲಕ ಸಕಲ ಅಮರರನ್ನು ಅನುಗ್ರಹಿಸಲು ಅಲ್ಲಿಗೆ ದಯಮಾಡಿಸಿದನು. ಶ್ರೀಲಕ್ಷ್ಮೀದೇವಿ, ಕಮಲಸಂಭವನಾದ ಬ್ರಹ್ಮದೇವ, ಶಿವ ಮುಂತಾದವರು ಸಕಲ ಲೋಕಪಾಲಕರಿಂದ ಸಹಿತರಾಗಿ ಯಾವ ಶ್ರೀಹರಿಯ ಪಾದಕಮಲಗಳ ಮೇಲಿನ ಧೂಳನ್ನು ಶಿರದಲ್ಲಿ ಧರಿಸುವರೋ ಅಂಥ ಸಕಲ ಜಗಕ್ಕೆ ಪ್ರಭುವೂ, ಸರ್ವೋತ್ತಮನೂ, ಸರ್ವಶಕ್ತನೂ ಆದ ರಮಾಧವನಿಗೆ ಶತ್ರುಸಂಹಾರ ಕಾರ್ಯದಲ್ಲಿ ಕಪಿವೀರರು ಸಹಾಯಕರೆಂದು ಹೇಳಲಳವುಂಟೆ? ಹೀಗೆ ಶ್ರೀರಾಮನು ಅಲ್ಲಿಗೆ ಬಂದುದನ್ನು ಕಂಡು ಸೂರ್ಯಸುತನಾದ ಸುಗ್ರೀವ ಮುಂತಾದ ಕಪಿವೀರರು ಭಯಾರ್ತರಾಗಿ ಹಾರುತ್ತಾ ನೆಗೆಯುತ್ತಾ ಓಡ-ಲಾರಂಭಿಸಿದರು. ಶ್ರೀವಾಯುಸುತರಾದ ಹನುಮಂತದೇವರು ಅವರನ್ನು ತಡೆದು ಶ್ರೀಹರಿಯ ಅನಂತ ಗುಣಾತಿಶಯಗಳನ್ನು ಕಪಿವೀರರಿಗೆ ಹೇಳಿ ಸಮಾಧಾನಪಡಿಸಿ ಧೈರ್ಯದಿಂದಿರುವಂತೆ ಮಾಡಿ ಲೋಕಪಿತಾಮಹರಾದ ಸಾಕ್ಷಾತ್ ಶ್ರೀಬ್ರಹ್ಮದೇವರಿಗೆ ಶ್ರೀರಾಮನು ಜನಕನೆಂದು ಅವನ ಚರಣಕಮಲಗಳಿಗೆ ಅಡ್ಡಬಿದ್ದು ನಮಸ್ಕರಿಸಹತ್ತಿದರು.

ಇಂತು ಶ್ರೀಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಶ್ರೀಮದಾಚಾರ್ಯರು ವಿಸ್ತಾರವಾಗಿ ನಿರೂಪಿಸಿದ ಐದನೇ ಅಧ್ಯಾಯದ ಕಥಾಭಾಗವನ್ನು ಶ್ರೀಗುರುಸಾರ್ವಭೌಮರು ತಮ್ಮ ''ಭಾವಸಂಗ್ರಹ''ದಲ್ಲಿ ಸಂಗ್ರಹಿಸಿ ಅನುಗ್ರಹಿಸಿದ್ದಾರೆ.

***ಮಹಾಭಾರತ ತಾತ್ಪರ್ಯ ನಿರ್ಣಯದ ಐದನೆಯ ಅಧ್ಯಾಯದ ಕಥಾಸಂಗ್ರಹವು ಮುಗಿದುದು.***

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★

## ಷಷ್ಠಾಧ್ಯಾಯಭಾವಸಂಗ್ರಹ

*ಅವತಾರಿಕೆ:-*

**ಸುಗ್ರೀವೇಣ ಸಖಿತ್ವಮಾಪ್ಯ ಶಪಥಂ ಕೃತ್ವಾ ವಧೇ ವಾಲಿನಃ**
**ತಾಲಾನ್ ಸಪ್ತ ವಿಭಿದ್ಯ ವಾಲಿನಿಧನಂ ಕೃತ್ವಾ ಸ್ವರಾಜ್ಯೇ ಸ್ಥಿತಮ್ ।**
**ಮಾರ್ತಾಂಡಿಂ ಚ ವಿಧಾಯ ಮಾರುತಿಯುಜಾ ಯಾಮ್ಯಾಂ ದಿಶಂ ಗಚ್ಛತಾ**
**ಸೀತಾನ್ವೇಷಣಮಿಚ್ಛತಾಬ್ಧಿತರಣೇ ರಾಮೋಽವತಾತ್ ಸಂಸ್ತುತಃ ॥ 6 ॥**

**ಅನ್ವಯಾರ್ಥ :-** **ಸುಗ್ರೀವೇಣ** = ಸುಗ್ರೀವನೊಡನೆ, **ಸಖಿತ್ವಂ** = ಮೈತ್ರೀಭಾವವನ್ನು - (ಮಿತ್ರತ್ವವನ್ನು), **ಆಪ್ಯ** = ಹೊಂದಿ, **ವಾಲಿನಃ** = ವಾಲಿಯ, **ವಧೇ** = ಸಂಹಾರ ವಿಷಯದಲ್ಲಿ, **ಶಪಥಂ** = ಪ್ರತಿಜ್ಞೆಯನ್ನು, **ಕೃತ್ವಾ** = ಮಾಡಿ, **ಸಪ್ತತಾಲಾನ್** = ಏಳು ತಾಲವೃಕ್ಷಗಳನ್ನು, **ವಿಭಿದ್ಯ** = ಭೇದಿಸಿ, **ವಾಲಿನಿಧನಂ** = ವಾಲಿಯ ಸಂಹಾರ(ವಧೆ)ವನ್ನು, **ಕೃತ್ವಾ** = ಮಾಡಿ, **ಮಾರ್ತಾಂಡಿಂ** = ಸೂರ್ಯಪುತ್ರನಾದ ಸುಗ್ರೀವನನ್ನು, **ಸ್ವರಾಜ್ಯೇ** = ಅವನದಾದ ಕಪಿರಾಜ್ಯದಲ್ಲಿ, **ಸ್ಥಿತಂ ವಿಧಾಯ** = ಅಧಿಪತಿಯಾಗಿರುವಂತೆ ಮಾಡಿ, **ಯಾಮ್ಯಾಂ ದಿಶಂ** = ದಕ್ಷಿಣ ದಿಕ್ಕನ್ನು ಕುರಿತು, **ಗಚ್ಛತಾ** = ಹೋಗುತ್ತಿರುವ, **ಸೀತಾನ್ವೇಷಣಮಿಚ್ಛತಾ** = ಸೀತಾದೇವಿಯನ್ನು ಹುಡುಕಲಿಚ್ಛಿಸಿದ, **ಮಾರುತಿಯುಜಾ** = ಶ್ರೀಹನುಮಂತದೇವರಿಂದ ಯುಕ್ತವಾದ ಕಪಿಸೈನ್ಯದಿಂದ, **ಅಬ್ಧಿತರಣೇ** = ಸಮುದ್ರತರಣ ಕಾಲದಲ್ಲಿ, **ಸಂಸ್ತುತಃ** = ಚೆನ್ನಾಗಿ ಸ್ತುತನಾದ, **ರಾಮಃ** = ಶ್ರೀರಾಮಚಂದ್ರನು, **ಅವತಾತ್** = ರಕ್ಷಣ ಮಾಡಲಿ.

**ತಾತ್ಪರ್ಯ :-** ಶ್ರೀರಾಮಚಂದ್ರನು ಸುಗ್ರೀವನ ಮಿತ್ರತ್ವವನ್ನು ಪಡೆದು ವಾಲಿಯನ್ನು ಸಂಹರಿಸುವುದಾಗಿ ಪ್ರತಿಜ್ಞೆ ಮಾಡಿ, ವಾಲಿಯನ್ನು ಸಂಹಾರಮಾಡಿ ಕಪಿರಾಜ್ಯದಲ್ಲಿ ಸೂರ್ಯಪುತ್ರನಾದ ಸುಗ್ರೀವನನ್ನು ಸಂಸ್ಥಾಪಿಸಿದನು. ಅನಂತರ ಸುಗ್ರೀವನ ಅಪ್ಪಣೆಯಂತೆ ಸಕಲ ವಾನರರೂ ಶ್ರೀಹನುಮಂತದೇವರಿಂದ ಕೂಡಿ ಸೀತಾದೇವಿಯನ್ನು ಹುಡುಕಬಯಸಿ ದಕ್ಷಿಣ ದಿಕ್ಕಿಗೆ ಪ್ರಯಾಣ ಬೆಳೆಸಿ ಅಲ್ಲಿ ಅಗಾಧವಾದ ಸಮುದ್ರವನ್ನು ಕಂಡು ಸಮುದ್ರಲಂಘನ ಸಮಯದಲ್ಲಿ ಶ್ರೀರಾಮ-ಚಂದ್ರದೇವರನ್ನು ಬಹು ಭಕ್ತಿಪೂರ್ವಕವಾಗಿ ಸ್ತೋತ್ರಮಾಡಿದರು. ಹೀಗೆ ಕಪಿವೀರರಿಂದ ಸಂಸ್ತುತನಾದ ಶ್ರೀರಾಮ-ಚಂದ್ರಪ್ರಭುವು ನಮ್ಮನ್ನು ರಕ್ಷಿಸಲಿ ಎಂದು ಭಾವ.

## ಷಷ್ಠಾಧ್ಯಾಯ ಕಥಾಸಂಗ್ರಹ

ಶ್ರೀರಾಮಚಂದ್ರ ಪ್ರಭುವು ತನ್ನ ಚರಣಕಮಲಗಳಿಗೆ ನಮಸ್ಕರಿಸುತ್ತಿರುವ ಪವನನಂದನನಾದ ಶ್ರೀಹನುಮಂತದೇವರ ಮೇಲೆ ವಿಕಸಿತ ಅರವಿಂದನಯನದಿಂದ ಕೃಪಾಕಟಾಕ್ಷವನ್ನು ಬೀರಿ ವಾಂಛಿತವರಗಳನ್ನೀಯಲು ಸಮರ್ಥವಾದ ಶುಭ-ಚಕ್ರಾಂಕಿತವಾದ ತನ್ನ ಕರಕಮಲಗಳಿಂದ ಹನುಮಂತನನ್ನು ಹಿಡಿದೆಬ್ಬಿಸಿ ಲಕ್ಷ್ಮಣ ಸಹಿತನಾಗಿ ಆವನ ಹೆಗಲೇರಿ ಕುಳಿತು ನಸುನಗುತ್ತಾ ಕಾಮಿತಪ್ರದ ಸವಿನುಡಿಗಳಿಂದ ಆನಂದಗೊಳಿಸಿದನು.

ಹನುಮಂತನು ಭಗವಾನ್ ಶ್ರೀರಾಮನನ್ನು ಒಂದು ಹೆಗಲಮೇಲೂ, ಶ್ರೀರಾಮಭಕ್ತನಾದ ಲಕ್ಷ್ಮಣನನ್ನು ಮತ್ತೊಂದು ಹೆಗಲ ಮೇಲೂ ಕುಳ್ಳಿರಿಸಿಕೊಂಡು ವಾನರನಾಯಕನಾದ ಸುಗ್ರೀವನ ಬಳಿಗೆ ಕರೆತಂದನು. ಹನುಮಂತನು ನಿಜಭಕ್ತರ ಭವತಾಪವನ್ನು ಆತ್ಯಂತಿಕವಾಗಿ ಪರಿಹರಿಸುವ ಶ್ರೀರಾಮಚಂದ್ರನಿಗೂ ಸುಗ್ರೀವನಿಗೂ ಅಗ್ನಿಸಾಕ್ಷಿಯಾಗಿ

ಮೈತ್ರಿಯನ್ನೇರ್ಪಡಿಸಿದನು. ಸುಗ್ರೀವನು ವಾಲಿಯಿಂದಾಗುತ್ತಿರುವ ದುಃಖವನ್ನು ಶ್ರೀರಾಮನಲ್ಲಿ ವಿಜ್ಞಾಪಿಸಿದನು. ಅದನ್ನಾಲಿಸಿ ಶ್ರೀರಾಮನು ವಾಲಿಸಂಹಾರಪೂರ್ವಕ ಸುಗ್ರೀವನಿಗೆ ಸಮಾಧಾನವನ್ನುಂಟು ಮಾಡುವುದಾಗಿ ಪ್ರತಿಜ್ಞೆ ಮಾಡಿದನು. ಸುಗ್ರೀವನು ವಾಲಿಯಿಂದ ಸಂಹೃತನಾದ ದುಂದುಭಿಯ ಕಳೇಬರವನ್ನು ತೋರಿ ''ಪ್ರಭು! ನೀನೀ ದೇಹವನ್ನು ದೂರ ಎಸೆದಲ್ಲಿ ನನಗೆ ನಿನ್ನ ಬಲದ ಬಗ್ಗೆ ನಂಬಿಕೆಯಾಗುವುದು'' ಎಂದು ಹೇಳಿ ತಾನೂ ಸೀತಾದೇವಿಯ ಅನ್ವೇಷಣ ಮಾಡಿಸುವುದಾಗಿ ಪ್ರತಿಜ್ಞೆ ಮಾಡಿದನು.

ಶ್ರೀರಾಮನು ದುಂದುಭಿಯ ಮಹಾಕಾಯವನ್ನು ಲೀಲೆಯಿಂದಲೇ ತನ್ನ ಎಡಗಾಲಿನ ಅಂಗುಷ್ಠ ಸ್ಪರ್ಶದಿಂದ ನೂರು ಯೋಜನ ದೂರಕ್ಕೆಸೆದನು. ಬಾಣದಂತೆ ಆಕಾಶದಲ್ಲಿ ದುಂದುಭಿಯ ದೊಡ್ಡ ದೇಹವು ಹಾರಿಹೋಗುತ್ತಿದ್ದ ವೇಗದ ರಭಸಕ್ಕೆ ಭೂಮಿಯು ಇಬ್ಭಾಗವಾಯಿತು. ಭೂಮಿಗೆ ಕಂಟಕರಾದ, ರಸಾತಲದಲ್ಲಿದ್ದ ಅಸಂಖ್ಯ ದಾನವರನ್ನು ಹೀಗೆ ದುಂದುಭಿಯ ಜಡದೇಹಾಘಾತದಿಂದ ಅರೆದು ಸಂಹಾರ ಮಾಡಿದನು.

ಇಷ್ಟು ಮಹಾಪರಾಕ್ರಮವನ್ನು ಶ್ರೀರಾಮನು ತೋರಿದರೂ ವಾಲಿಯ ಬಾಹುಬಲಕ್ಕೆ ಅಂಜಿದ್ದ ಸುಗ್ರೀವನಿಗೆ ನಂಬಿಕೆಯಾಗಲಿಲ್ಲ. ಆಗವನು ಅಲ್ಲಿಯೇ ಇದ್ದ ಏಳು ತಾಲ ವೃಕ್ಷಗಳನ್ನು ತೋರಿ ''ದೇವ, ವಜ್ರಕ್ಕಿಂತ ಕಠೋರವಾದ ಈ ಏಳು ತಾಲವೃಕ್ಷಗಳನ್ನು ನೋಡು. ಈ ವೃಕ್ಷಗಳನ್ನು ವಾಲಿಯು ಭರದಿಂದ ಅಲುಗಾಡಿಸುತ್ತಿದ್ದನು. ಆದರೆ ಇದರ ಒಂದು ಎಲೆಯನ್ನು ಉದುರಿಸಲೂ ಅವನು ಶಕ್ತನಾಗಲಿಲ್ಲ. ಸಾಲಾಗಿ ನಿಂತಿರುವ ಈ ಏಳು ವೃಕ್ಷಗಳನ್ನು ಒಂದೇ ಬಾಣದಿಂದ ಬುಡಸಹಿತ ನೀನು ಕೀಳಬಲ್ಲೆಯಾದರೆ ನೀನು ವಾಲಿಯನ್ನು ಸಂಹರಿಸಬಹುದೆಂಬ ಧೈರ್ಯ ನನಗೆ ಉಂಟಾಗುತ್ತದೆ. ಸ್ವಾಮಿ, ಚತುರಂಗಬಲಸಹಿತನಾಗಿ ವಾಲಿಗಿಂತ ನೂರುಪಾಲು ಹೆಚ್ಚು ಬಲಶಾಲಿಯಾದವನಿಂದ ಮಾತ್ರ ವಾಲಿಯನ್ನು ಸಂಹರಿಸಲು ಸಾಧ್ಯ. ಇಂದ್ರಸುತನಾದ ವಾಲಿಯಿಂದ ಎಲೆಗಳನ್ನು ಉದಿರಿಸಲಾಗದ ಈ ಸಪ್ತತಾಲವೃಕ್ಷಗಳನ್ನು ಛೇದಿಸಿ ನನ್ನ ಸಂಶಯವನ್ನು ಪರಿಹರಿಸು'' ಎಂದು ಕೋರಿದನು.

ಶ್ರೀರಾಮನು ಆ ತಾಲವೃಕ್ಷಗಳನ್ನೊಮ್ಮೆ ನೋಡಿದನು. ದಿತಿಯಸುತರು ಈ ಏಳು ವೃಕ್ಷರೂಪದಲ್ಲಿದ್ದರು. ಅದನ್ನು ಮನದಲ್ಲಿಯೇ ವಿಮರ್ಶಿಸಿ ಬ್ರಹ್ಮದೇವರ ವರಬಲದಿಂದ ಯಾರಿಂದಲೂ ಸೀಳಲಾಗದ ತಾಳೆಯ ಮರಗಳ ರೂಪದಲ್ಲಿ ಏಳುಜನ ದೈತ್ಯರು ಬ್ರಹ್ಮಪದವಿಯನ್ನಾಶಿಸಿ ಅಚಲವಾದ ತಪಸ್ಸನ್ನು ಮಾಡುತ್ತಿರುವರೆಂಬುದನ್ನು ಅರಿತು, ಶ್ರೀರಾಮನು ವರಧನುವಾದ ಕೋದಂಡಕ್ಕೆ ಗುಣಸಂಧಾನ ಮಾಡಿ ಬಾಣವನ್ನು ಹೂಡಿ ಬಲಗೈಯಿಂದ ಕರ್ಣಾಂತವಾಗಿ ಎಳೆದು ಬಾಣವನ್ನು ಬಿಟ್ಟನು. ಆ ಬಾಣವು ಸುಯ್‌ಗುಟ್ಟುತ್ತಾ ಬಹುವೇಗವಾಗಿ ಒಂದೇ ಕಾಲದಲ್ಲಿ ಎಲ್ಲ ತಾಲವೃಕ್ಷಗಳನ್ನೂ ಬುಡಸಹಿತ ಕತ್ತರಿಸಿಹಾಕಿತು. ಭೀಕರ ಧ್ವನಿ ಗೈಯುತ್ತಾ ಆ ಮರಗಳು ಧರೆಗುರುಳಿ ಪುಡಿಪುಡಿಯಾದವು.

ಕುಮುದಿಗಳೆಂಬ ಏಳು ಜನ ರಾಕ್ಷಸರೇ ಏಳು ತಾಲವೃಕ್ಷರೂಪದಲ್ಲಿದ್ದರು. ಹೀಗೆ ಪಿತಾಮಹ ಶ್ರೀಬ್ರಹ್ಮದೇವರ ವರಬಲದ ರಕ್ಷಣೆಯಲ್ಲಿದ್ದ ಅವರನ್ನು ಭಗವಾನ್ ಶ್ರೀರಾಮನು ತನ್ನೊಂದೇ ಬಾಣದಿಂದ ಸಂಹರಿಸಿಹಾಕಿದನು. ಶ್ರೀರಾಮನ ಆ ಬಾಣವು ಮಹಾಪರ್ವತಗಳು, ಭೂಮಿ, ಪಾತಾಳಾದಿ ಸಪ್ತಲೋಕಗಳನ್ನು ಭೇದಿಸಿಕೊಂಡು, ಅವಧ್ಯರಾಗಿದ್ದ ಆ ಏಳುಜನ ದೈತ್ಯರನ್ನು ಸೀಳಿ ಸುಟ್ಟು ಬೂದಿ ಮಾಡಿತು. ಸಕಲ ಜಗತ್ತಿನಲ್ಲಿ ವ್ಯಾಪಕವಾದ ಶ್ರೀಹರಿಯ ಬಲವು ಅಚಿಂತ್ಯಾದ್ಭುತವಾದುದು. ವಾಯುದೇವರೂ ಪ್ರಕೃತಿ, ರುದ್ರ, ಕಾಲ, ಕರ್ಮ ಮೊದಲಾದವುಗಳಿಗೆ ಕಾರ್ಯ ಪ್ರವೃತ್ತಿಯು ಯಾರ ಪ್ರೇರಣೆ-ಯಿಂದಾಗುವುದೋ ಅಂಥ ಮಹಾದ್ಭುತ ಕಾರ್ಯ ಮಾಡಲು ಶ್ರೀಹರಿಯೊಬ್ಬನೇ ಸಮರ್ಥನು ಮತ್ತಾರಿಂದಲೂ ಅದು ಆಗದೆಂದ ಮೇಲೆ ಆ ಹರಿಯೇ ಶ್ರೀರಾಮನಾಗಿ ನಿಂತು ಕೊಲ್ಲಲಳವಿಲ್ಲದ ಕುಮುದಿ ದೈತ್ಯರನ್ನು ಸಂಹರಿಸುವುದರ ಜತೆಗೆ ಭೂಮಿ-ಪರ್ವತ-ಪಾತಾಳಾದಿ ಸಪ್ತಲೋಕಗಳನ್ನೂ ಸೀಳಿಹಾಕಿದುದು ಆಚ್ಚರಿಯೇನಲ್ಲ.

ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀರಾಮಚಂದ್ರನ ಅಸೀಮ ಪರಾಕ್ರಮವನ್ನು ಕಂಡ ಕಪೀಶ್ವರನಾದ ಸುಗ್ರೀವನು ಪರಮಾನಂದಭರಿತನಾಗಿ ರಾಮನನ್ನು ಮುಂದೆ ಮಾಡಿಕೊಂಡು ಕಿಷ್ಕಿಂಧಾಪುರಕ್ಕೆ ಬಂದು ಮಹಾದ್ವಾರದ ಬಳಿನಿಂತು ವಾಲಿಗೆ ಯುದ್ಧಾಹ್ವಾನ ನೀಡಿ ಗರ್ಜಿಸಿದನು. ಸಹೋದರನ ಭೀಕರ ಗರ್ಜನೆಯನ್ನಾಲಿಸಿ ಕಡುಕೋಪಗೊಂಡ ವಾಲಿಯು ಸುಗ್ರೀವನೊಡನೆ ಯುದ್ಧಮಾಡ ಹೊರಟನು. ಅವನ ಪತ್ನಿಯಾದ ತಾರೆಯು ಎಷ್ಟು ವಿರೋಧಿಸಿದರೂ ಕೇಳದೆ ಬಿಲದಿಂದ ಹೊರಬಂದು ಸುಗ್ರೀವನಿಗೆ ಎದುರಾದನು. ನಂತರ ಅವನ ಮೇಲೇರಿ ಹೋಗಿ ಮುಷ್ಟಿ ಪ್ರಹಾರಗಳಿಂದ ಸುಗ್ರೀವನನ್ನು ನೋಯಿಸಿದನು. ವಾಲಿಯ ಹೊಡೆತವನ್ನು ತಾಳಲಾರದೆ ಅಶಕ್ತನಾದ ಸುಗ್ರೀವನು ಯುದ್ಧದಿಂದ ಹಿಮ್ಮೆಟ್ಟಿ ಶ್ರೀರಾಮನ ಬಳಿಗೆ ಓಡಿಬಂದನು. ಅಣ್ಣತಮ್ಮಂದಿರಲ್ಲಿನ ದ್ವೇಷಾದಿಗಳು ಶಾಶ್ವತವಾಗಿರುವುದಿಲ್ಲ. ಕೊನೆಗಾಲದಲ್ಲಾದರೂ ಅವರು ಸ್ನೇಹದಿಂದಿರಲು ಅವಕಾಶವಾದೀತು. ತಾನೀಗ ವಾಲಿಯನ್ನು ಸಂಹರಿಸಿದರೆ ಅದಕ್ಕೆ ವ್ಯತ್ಯಯ ಉಂಟಾಗುವುದು ಮುಂತಾಗಿ ಯೋಚಿಸಿ ರಾಮನು ವಾಲಿಯನ್ನು ಸಂಹರಿಸುವುದಾಗಿ ವಚನವಿತ್ತಿದ್ದರೂ ಅವನನ್ನು ಕೊಲ್ಲಲಿಲ್ಲ. ತರುವಾಯ ಶ್ರೀರಾಮ-ಚಂದ್ರನು ''ಸುಗ್ರೀವ! ನೀವಿಬ್ಬರೂ ಹೋಲಿಕೆಯಲ್ಲಿ ಒಂದೇ ರೀತಿ ಇರುವಿರಿ. ಯುದ್ಧ ಮಾಡುತ್ತಿರುವಾಗ ನಿಮ್ಮನ್ನು ಗುರುತಿಸಲಾಗಲಿಲ್ಲ'' ಎಂದ ಹೇಳಿ ಮನದಲ್ಲಿ ಇಂತು ಚಿಂತಿಸಿದನು. ''ವಾಲಿಯು ನನಗಾವ ಅಪರಾಧವನ್ನೂ ಮಾಡಿಲ್ಲ. ಅಂಥವನನ್ನು ಕೊಲ್ಲುವುದೆಂತು? ಸುಗ್ರೀವನು ಭ್ರಾತೃಪ್ರೇಮದಿಂದ ವಾಲಿಯೊಡನೆ ಸ್ನೇಹದಿಂದ ಇರಬಯಸುವುದಾದರೆ ಅವನನ್ನು ಕೊಲ್ಲುವುದು ವಿಹಿತವಾಗಲಾರದು. ಕಾರ್ಯ ಮಿಂಚಿದ ಮೇಲೆ ಪಶ್ಚಾತ್ತಾಪಪಟ್ಟು ಫಲವಿಲ್ಲ. ಯಾತರಿಂದಲೂ ಪರಿಹಾರವಾಗದ ದೀರ್ಘ ದ್ವೇಷ-ಕೋಪಗಳು ಧನಕನಕಾದಿ ಕಾರಣವಿಲ್ಲದಿದ್ದರೆ ಕೂಡಲೇ ಶಾಂತವಾಗುವುದು. ಅಣ್ಣ ತಮ್ಮಂದಿರಲ್ಲಿನ ಬಹುಕಾಲದ ದ್ವೇಷವೂ ಮರಣಕಾಲದಲ್ಲಿ ಪರಿಹಾರವಾಗುವುದು, ಲೋಕದಲ್ಲಿ ಕಂಡುಬಂದಿದೆ. ಆದ್ದರಿಂದ ಅವರಿಬ್ಬರಲ್ಲಾರನ್ನು ಕೊಂದರೂ ಮುಂದೆ ಪಶ್ಚಾತ್ತಾಪಪಡಬೇಕಾಗಬಹುದು. ಆದ್ದರಿಂದ ಈಗ ದುಡುಕಿ ವಾಲಿಯನ್ನು ಕೊಲ್ಲುವುದು ತರವಲ್ಲ''ವೆಂದು ಯೋಚಿಸಹತ್ತಿದನು. ಬಂಧುಗಳಲ್ಲಿ ಪರಸ್ಪರ ವಿರೋಧ ವೈಷಮ್ಯಾದಿಗಳುಂಟಾದರೆ ಅವರ ಅನುಬಂಧಿಗಳು ದುಡುಕಿ ಅವರನ್ನು ಸಂಹರಿಸಬಾರದು ಎಂಬ ಲೋಕಧರ್ಮವನ್ನು ತೋರಿಸಲೂ, ಸೂರ್ಯಸುತನಾದ ಸುಗ್ರೀವನಿಗೆ ಮುಂಬರಲಿರುವ ದುಃಖವನ್ನು ಸೂಚಿಸಲೂ ಸರ್ವಜ್ಞನಾದ ಶ್ರೀರಾಮನು ವಾಲಿಯನ್ನು ಸಂಹರಿಸಲಿಲ್ಲ.

ದೇವದೇವನಾದ ಶ್ರೀರಾಮರೂಪಿಯಾದ ಶ್ರೀವಿಷ್ಣುವಿನ ಪ್ರೇರಣೆಯಿಂದ ಸರ್ವರ ಬುದ್ಧಿಯು ವಿಕಸಿತವಾಗುವುದು. ಅವನ ಆಜ್ಞೆಯಿಂದಲೇ ಸಕಲವೂ ನಡೆಯುವುದು. ಅಂತೆಯೇ ಅದಕ್ಕೆ ಸುಗ್ರೀವನೂ ಹೊರತಲ್ಲ. ಅಂತೆಯೇ ಅದು ಅವನ ಬುದ್ಧಿಯನ್ನು ಪ್ರೇರಿಸಿತು. ಆದಕಾರಣವೇ ಸುಗ್ರೀವನು ಮರುದಿನ ಯುದ್ಧ ಸನ್ನದ್ಧನಾಗಿ ಶ್ರೀರಾಮನ ಬಳಿಗೆ ಬಂದ ''ಇಂದು ಸತ್ಯವಾಗಿ ವಾಲಿಯನ್ನು ಕೊಲ್ಲಬೇಕು'' ಎಂದು ವಿನಂತಿಸಿದನು. ತರುವಾಯ ಶ್ರೀರಾಮನ ಅಪ್ಪಣೆಯಂತೆ ಹನುಮಂತನು ಸುಗ್ರೀವನಿಗೆ ಬಳ್ಳಿಯ ಮಾಲೆಯನ್ನು ಕೊರಳಿಗೆ ಹಾಕಿದನು. ಇದರಿಂದ ಹನುಮಂತನಿಗೆ ಅಥವಾ ಶ್ರೀರಾಮನಿಗೆ ಯುದ್ಧದಲ್ಲಿ ವಾಲಿ-ಸುಗ್ರೀವರನ್ನು ಗುರುತಿಸುವುದಕ್ಕೆ ಆಗಲಿಲ್ಲೆಂದಾಗಲಿ, ಅಥವಾ ಅವರಿಗೆ ಅಜ್ಞಾನವೆಂದಾಗಲಿ ಭಾವಿಸಬಾರದು. ಬಳ್ಳಿಯ ಮಾಲೆಧರಿಸಿ ಸುಗ್ರೀವನು ವಾಲಿಯೊಡನೆ ಯುದ್ಧಮಾಡುತ್ತಿರುವಾಗ ಶ್ರೀರಾಮನು ವಜ್ರಾಯುಧ ಸದೃಶವಾದ ಬಾಣವನ್ನು ವಾಲಿಯ ಮೇಲೆ ಬಿಟ್ಟನು. ಆ ಬಾಣವು ಭಯಂಕರ ನಾದ ಮಾಡಿ ವಾಲಿಯ ದೇಹವನ್ನು ಭೇದಿಸಿತು. ಶ್ರೀರಾಮನ ಬಾಣದ ಈ ಮಹತ್ತಾದ ಧ್ವನಿಯನ್ನಾಲಿಸಿ ವಾಲಿಯು ಧೈರ್ಯಗೆಟ್ಟು ಕಾಲುಕುಸಿದು ಗಿರಿಯಂತೆ ಧರೆಗುರುಳಿಬಿದ್ದು ನರಳಹತ್ತಿದನು.

ಲೋಕೈಕವೀರನಾದ ಶ್ರೀರಾಮನು ಮರೆಯಲ್ಲಿ ನಿಂತು ಏಕೆ ವಾಲಿಯನ್ನು ಕೊಂದನೆಂಬ ಪ್ರಶ್ನೆಗೆ ಶ್ರೀಮದಾಚಾರ್ಯರು ಸಮಂಜಸವಾದ ಉತ್ತರವನ್ನು ಹೇಳಿದ್ದಾರೆ. ''ಇಂದ್ರಸುತನಾದ ವಾಲಿಯು ನನ್ನ ಶ್ರೇಷ್ಠಭಕ್ತನು. ಅವನು ನನ್ನನ್ನು ಕಂಡರೆ,

ಓಡಿಬಂದು ನಮಸ್ಕರಿಸಿ ಶರಣಾಗತನಾಗುತ್ತಾನೆ. ಅವನ ಮಾನಸಿಕ ವಿಕಾರಗಳೆಲ್ಲವೂ ತೊಲಗುವುವು. ಇದು ನಿಜ. ನನಗೆ ವಂದಿಸಿ ಶರಣಾಗತನಾದ ಭಕ್ತನನ್ನು ಕೊಲ್ಲುವುದು ಯುಕ್ತವಲ್ಲ. ಸುಗ್ರೀವನಿಗೆ ವಾಲಿಯನ್ನು ಸಂಹರಿಸುವುದಾಗಿ ವಚನವಿತ್ತಿರುವುದರಿಮದ ಕೊಲ್ಲದಿರುವುದೂ ತರವಲ್ಲ. ವಾಲಿಗಿಂತ ಸುಗ್ರೀವ ಮೊದಲು ನನಗೆ ನಮಸ್ಕರಿಸಿದ್ದಾನೆ. ಅವನ ಬಯಕೆಯನ್ನು ಈಡೇರಿಸಬೇಕು. ವಾಲಿಯು ನನಗೆ ವಂದಿಸಲಿದ್ದಾನೆ. ಆಗ ಅವನನ್ನು ಕೊಲ್ಲುವುದು ಯುಕ್ತವಾಗದು. ಆದ್ದರಿಂದ ವಾಲಿಯ ಕಣ್ಣಿಗೆ ಬೀಳದ ಮರೆಯಾಗಿ ನಿಂತು ಅವನನ್ನು ಸಂಹರಿಸುವುದೇ ವಿಹಿತ'' ಎಂದು ನಿಶ್ಚಯಿಸಿ ರಾಮನು ಅದರಂತೆ ವಾಲಿಯನ್ನು ಸಂಹರಿಸಿದನು. ಸಕಲಜಗತ್ತಿನ ಬಲವನ್ನು ಪ್ರೇರಿಸುವ ಶ್ರೀರಾಮನ ಶರೀರಬಲವು ನಿತ್ಯವೂ ಪೂರ್ಣವೂ ನಾಶರಹಿತವೂ ಮತ್ತು ಉತ್ತಮವಾದುದು. ಅವನ ಪರಾಕ್ರಮಕ್ಕೆ ಸಮವೂ ಇಲ್ಲ, ಅಧಿಕವೂ ಇಲ್ಲ. ಆದ್ದರಿಂದಲೇ ಅವನನ್ನು ಸ್ವತಂತ್ರನೆಂದು ಜ್ಞಾನಿಗಳು ಹೇಳುವರು. ಇಂಥ ಶ್ರೀರಾಮನು ಒಬ್ಬ ಸಾಮಾನ್ಯ ವಾನರನನ್ನು ಪ್ರತ್ಯಕ್ಷವಾಗಿ ಎದುರು ನಿಂತು ಕೊಲ್ಲಲೆತ್ನಿಸಿದಾಗ ಆ ವಾನರನು ಮಹಾಪ್ರಭುವಿಗೇನು ಮಾಡಲಾಪನು? ಜನಕರಾಯನ ರಾಜಸಭೆಯಲ್ಲಿ ಶಿವಧನುವನ್ನು ಮುರಿದುಹಾಕಿದ ಪ್ರಭುವಿಗೆ ಅದಾರ ಭಯವಿದ್ದೀತು?

ತರುವಾಯ ಶ್ರೀರಾಮನು ವಾಲಿಯ ಪ್ರಾಣೋತ್ಕ್ರಮಣ ಕಾಲದಲ್ಲಿ ಅವನ ಪಕ್ಕದಲ್ಲಿ ನಿಂತು ಅವನನ್ನು ಮಧುರ-ವಚನಗಳಿಂದ ಸಮಾಧಾನಗೊಳಿಸುತ್ತಾ ''ವಾಲಿ! ನೀನು ಬದುಕಬಯಸಿದಲ್ಲಿ ನಿನ್ನನ್ನೀಗ ಬದುಕಿಸುವೆನು'' ಎಂದೆನಲು ವಾಲಿಯು ಜೀವಿಸಬಯಸದೆ ''ಸ್ವಾಮಿ, ಮರಣಕಾಲದಲ್ಲಿ ಪುರುಷೋತ್ತಮನಾದ ನೀನೇ ಪ್ರತ್ಯಕ್ಷನಾಗಿ ನಿಂತಿರುವಾಗ ಇಂಥ ಭಾಗ್ಯಪಡೆದ ಅದಾವನು ತಾನೆ ಮರಣವನ್ನು ಬಯಸದಿರುವನು?'' ಎಂದು ಶ್ರೀರಾಮನನ್ನು ಸ್ಮರಿಸುತ್ತಾ ಅಸುನೀಗಿದನು. ಅನಂತರ ಸುಗ್ರೀವನು ವಾಲಿಯ ಪುತ್ರನಾದ ಅಂಗದನನ್ನು ಮುಂದಿಟ್ಟುಕೊಂಡು ಅಗ್ರಜನ ಅಂತ್ಯಕ್ರಿಯೆಗಳನ್ನು ಮುಗಿಸಿ ನಂತರ ಶ್ರೀರಾಮನ ಅಪ್ಪಣೆಯಂತೆ ವಾನರರಾಜ್ಯವನ್ನಾಳಹತ್ತಿದನು. ಆ ವೇಳೆಗೆ ಮಳೆಗಾಲ ಬಂದಿದ್ದರಿಂದ ಶ್ರೀರಾಮನು ಲಕ್ಷ್ಮಣನೊಡನೆ ಉತ್ತಮವಾದ ಋಷ್ಯಮೂಕ ಪರ್ವತದಲ್ಲಿ ನಾಲ್ಕು ತಿಂಗಳು ಕಾಲ ವಾಸ ಮಾಡಿದನು.

ಇತ್ತ ಸುಗ್ರೀವನು ರಾಜ್ಯದ ಸುಖಭೋಗಗಳಲ್ಲಿ ಮೈಮರೆತು ಶ್ರೀರಾಮನು ಮಾಡಿದ ಉಪಕಾರವನ್ನು ಮರೆತು ಕರ್ತವ್ಯಪರನಾಗದೆ ಕುಳಿತನು. ಇದನ್ನು ಗಮನಿಸಿ ಶ್ರೀರಾಮಭಕ್ತನೂ ಮೇಧಾವಿಯೂ ಶ್ರೇಷ್ಠನೂ ಮಹಾಜ್ಞಾನಿಯೂ ಆದ ಹನುಮಂತನು ಸುಗ್ರೀವನೆಡೆಗೆ ಬಂದು ಇಂತೆಂದನು.

''ಕಪಿರಾಜ! ರಘುಕುಲಶ್ರೇಷ್ಠನಾದ ಶ್ರೀರಾಮಚಂದ್ರನ ಕಾರ್ಯವನ್ನು ನೆರವೇರಿಸಬೇಕು. ಪೂಜ್ಯನಾದ ಅವನ ಕೆಲಸವನ್ನು ಮಾಡಲು ನೀನಾಗಿ ಪ್ರಯತ್ನಿಸದಿದ್ದರೆ ನಾನು ಬಲಪ್ರಯೋಗದಿಂದಲಾದರೂ ಆ ಕಾರ್ಯವನ್ನು ಮಾಡಿಸ-ಬೇಕಾಗುವುದು. ಇದು ಸತ್ಯ!'' ಹೀಗೆ ಹೇಳಿ ಹನುಮಂತನು ಸಪ್ತದ್ವೀಪವಾಸಿಗಳಾದ ವಾನರರನ್ನು ಕರೆಯಿಸಲು ಸುಗ್ರೀವನಿಗೆ ಸೂಚಿಸಿದನು. ಹನುಮಂತನ ಮಾತಿನಂತೆ ಸುಗ್ರೀವನು ಸಮಸ್ತ ಕಪಿವೀರರನ್ನು ಕರೆತರಲು ಆಜ್ಞಾಪಿಸಿದನು. ಅವನ ಆಣತಿಯಂತೆಯೂ, ಹನುಮಂತನಲ್ಲಿನ ಗೌರವದಿಂದಲೂ ಎಲ್ಲ ಕಪಿವೀರರು ಸಕಲ ಗಿರಿಕಂದರ ಗಿಡಮರಗಳಲ್ಲಿ ವಾಸಿಸುತ್ತಿದ್ದ ಸಕಲ ವಾನರರನ್ನು ಕರೆದುತರಲು ಹೊರಟರು.

ಸರ್ವಜ್ಞನಾದ ಶ್ರೀರಾಮನು, ಭೋಗಾಸಕ್ತನಾಗಿ ತನ್ನ ಉಪಕಾರವನ್ನು ಮರೆತ ಸುಗ್ರೀವನು ಸುಮ್ಮನಿರುವುದನ್ನು ಕಂಡು ಲಕ್ಷ್ಮಣನ ಮೂಲಕ ಕಪಿರಾಜನಿಗೆ ಹೀಗೆ ಹೇಳಿಕಳಿಸಿದನು. ''ಸುಗ್ರೀವ! ನನ್ನ ಕಾರ್ಯದಲ್ಲಿ ನಿರಾಸಕ್ತನಾಗಿ ಕೊಬ್ಬಿ ನಡೆದರೆ ವಾಲಿಯ ಮಾರ್ಗವನ್ನೇ ನಿನಗೂ ತೋರಿಸುವೆನು. ಜಾಗ್ರತನಾಗಿರು. ಸಾಮಾನ್ಯ ಮಾನವರು ತಮ್ಮ ಕಾರ್ಯ-ವಾಗುವವರೆಗೆ ವಿಧೇಯತೆಯನ್ನು, ವಿಶ್ವಾಸವನ್ನು ತೋರಿಸಿ ನಂತರ ಪ್ರತ್ಯುಪಕಾರ ಮಾಡದೆ ಮೌನವಹಿಸುವರು. ನೀನು ಅಂತಾಗಬೇಡ'' ಅಣ್ಣನ ಆಜ್ಞೆಯನ್ನು ಕೇಳಿ ಲಕ್ಷ್ಮಣನು ಧನುರ್ಬಾಣಗಳನ್ನು ಧರಿಸಿ ಸುಗ್ರೀವನ ಬಳಿಗೆ ಹೊರಟನು.

ಕೋಪದಿಂದ ಬರುತ್ತಿರುವ ಲಕ್ಷ್ಮಣನನ್ನು ಕಂಡೊಡನೆ, ಸುಗ್ರೀವನು ಬಹುಭಯದಿಂದ ಶ್ರೀರಾಮನ ಬಳಿಗೆ ಬಂದನು. ಭೀತನಾದ ಸುಗ್ರೀವನಿಗೆ ಹನುಮಂತನು ಧೈರ್ಯ ಹೇಳಲು ಅವನು ಮುದಗೊಂಡು ಶ್ರೀರಾಮನ ಬಳಿಗೆ ಬರುತ್ತಿರುವಂತೆಯೇ ಸಕಲ ಕಪಿವೀರರೂ ಅಲ್ಲಿಗೆ ಬಂದು ಸೇರಿದರು. ಅವರೆಲ್ಲರೊಡನೆ ಬಂದ ಸುಗ್ರೀವನನ್ನು ಕಂಡು ರಾಮನು ಸಂತಸಗೊಂಡನು.

ಪ್ರಭುವಾದ ಶ್ರೀರಾಮನು ತನ್ನ ಚರಣಕಮಲಗಳಿಗೆ ಶಿರಬಾಗಿ ನಮಸ್ಕರಿಸಿದ ಕಪಿರಾಜನನ್ನು ಮೇಲೆಬ್ಬಿಸಿ ಪ್ರೇಮದಿಂದ ಆಲಂಗಿಸಿ ತನ್ನ ಪಕ್ಕದಲ್ಲಿ ಕೂಡಿಸಿಕೊಂಡನು. ಕೂಡಲೇ ಸುಗ್ರೀವನು ಸಕಲ ಕಪಿವೀರರನ್ನೂ ಸೀತಾಮಾತೆಯನ್ನು ಹುಡುಕಲು ಅಪ್ಪಣೆ ಮಾಡಿದನು. ಅದರಂತೆ ಸಕಲ ವಾನರರು, ಸಮಸ್ತ ದಿಕ್ಕುಗಳಿಗೂ ಹೊರಟರು. ಆಗ ಶ್ರೀರಾಮನು ಹನುಮಂತನನ್ನು ಕರೆದು ''ವಾಯುಕುಮಾರ! ನನ್ನ ಶ್ರೇಷ್ಠವಾದ ಕಾರ್ಯಗಳನ್ನು ಸಾಧಿಸಲು ನಿನ್ನ ಹೊರತು ಬೇರಾರೂ ಸಮರ್ಥರಲ್ಲ. ಆದ್ದರಿಂದ ಇಕೋ, ನನ್ನೀ ಮುದ್ರೆಯ ಉಂಗುರವನ್ನು ತೆಗೆದುಕೊಂಡು ದಕ್ಷಿಣ ದಿಕ್ಕಿನ ಕಡೆ ಪ್ರಯಾಣ ಬೆಳೆಸು'' ಎಂದು ಆಜ್ಞಾಪಿಸಿದನು. ಶ್ರೀರಾಮನ ಅಪ್ಪಣೆಯಂತೆ ಹನುಮಂತನು ಯುವರಾಜ ಅಂಗದನೊಡನೆ ದಕ್ಷಿಣದಿಕ್ಕಿನ ಕಡೆ ಹೊರಟನು.

ದಿಕ್ಕು ವಿದಿಕ್ಕುಗಳಿಗೆ ಸುಗ್ರೀವನ ಅಪ್ಪಣೆಯಂತೆ ಸೀತಾಮಾತೆಯನ್ನು ಹುಡುಕ ಹೊರಟ ಕಪಿವೀರರು ಸೀತಾದೇವಿಯನ್ನು ಕಾಣದೆ ಒಂದು ತಿಂಗಳ ಗಡವು ಮುಗಿಯುವುದರೊಳಗೆ ಕಿಷ್ಕಿಂಧೆಗೆ ಮರಳಿದರು. ಹನುಮಂತನೊಡನೆ ಹೊರಟ ಅಂಗದ, ಜಾಂಬವಂತಾದಿ ಕಪಿವೀರರು ಕಾರ್ಯವನ್ನು ಸಾಧಿಸದೆ ಮರಳಬಾರದೆಂದು ಸೀತಾಮಾತೆಯನ್ನು ಹುಡುಕುತ್ತಿದ್ದರು. ಅವರು ದಕ್ಷಿಣ ದಿಕ್ಕಿನಲ್ಲಿರುವ ವಿಂಧ್ಯಪರ್ವತದ ಒಂದು ಅದ್ಭುತ ಗವಿಯ ಬಳಿ ಬಂದರು. ಆ ಪರ್ವತವು ಬಹು ಭಯಂಕರವಾಗಿದ್ದಿತು. ಅದರ ಬಳಿ ಸಾರಲು ಯಾರಿಗೂ ಸಾಧ್ಯವಾಗುತ್ತಿರಲಿಲ್ಲ. ಅಲ್ಲಿ ಅವರು ಹುಡುಕುತ್ತಿರುವಾಗ ಒಂದು ತಿಂಗಳ ಅವಧಿಯು ಮುಗಿದು ಹೋಯಿತು. ಕಪಿವೀರರು ಪ್ರವೇಶಿಸಿದ್ದ ಆ ಗುಹೆಯನ್ನು ಮಯನು ವಿಚಿತ್ರ ರೀತಿಯಿಂದ ನಿರ್ಮಿಸಿದ್ದನು. ಉತ್ತಮವಾದ ಆ ಗುಹೆಯನ್ನು ಕಂಡ ತಾರನು ಅಂಗದನನ್ನು ನೋಡಿ ''ಯುವರಾಜ, ಕಪಿರಾಜನು ಕೊಟ್ಟಿದ್ದ ಅವಧಿಯು ಮುಗಿದುಹೋಯಿತು. ನಾವಿನ್ನು ಅವನ ಬಳಿ ಹೋಗಲು ಸಾಧ್ಯವಿಲ್ಲ. ಸುಗ್ರೀವನ ಆಜ್ಞೆ ಅತಿ-ಭಯಂಕರವಾದುದು. ಕಾರ್ಯವನ್ನು ಸಾಧಿಸದೇ ವಾಪಸಾದ ನಾವು ಅವನ ಮುಂದೆ ನಿಂತು ನೋಡಲೂ ಸಾಧ್ಯವಾಗದು. ತನ್ನ ಆಜ್ಞೆಯನ್ನು ಉಲ್ಲಂಘಿಸಿದಿಯೆಂದು ಅವನು ಹಿಂದುಮುಂದು ನೋಡದೆ ನಿನ್ನನ್ನೂ ಸಂಹರಿಸುವನು. ಅಂದಮೇಲೆ ನಮ್ಮನ್ನು ಬಿಡುವನೇ? ಈ ಗುಹೆಯು ವಿಚಿತ್ರವಾಗಿದೆ. ನಾವು ಇಲ್ಲೇ ಇದ್ದು ಬಿಡೋಣ. ಇಲ್ಲಿಗೆ ಬಂದು ಸುಗ್ರೀವನು ನಮ್ಮನ್ನೇನು ಮಾಡಬಲ್ಲನು? ಇನ್ನು ಲಕ್ಷ್ಮಣಸಹಿತನಾದ ಶ್ರೀರಾಮನಿಂದ ವನವಾಸಿಗಳಾದ ನಮಗೇನು ಪ್ರಯೋಜನ? ಶ್ರೀರಾಮನು ಇಲ್ಲಿಗೆ ಬಂದು ಈ ಬಿಲವನ್ನು ಕಂಡುಹಿಡಿದು ನಮ್ಮನ್ನು ಹಿಂಸಿಸಲು ಸಾಧ್ಯವಿಲ್ಲ. ಅವನಿಗಂಥ ಶಕ್ತಿಯೂ ಇಲ್ಲ. ಆದ್ದರಿಂದ ನಿಶ್ಚಿಂತೆಯಿಂದ ನಾವಿಲ್ಲಿರುವುದೇ ಶ್ರೇಯಸ್ಕರವೆಂದು ನಾನು ಭಾವಿಸುತ್ತೇನೆ'' ಎಂದನು.

ಮಾತುಲನ ಮಾತನ್ನಾಲಿಸಿ ಅಂಗದನು ಆದರದಿಂದ ಅವನ ಮಾತನ್ನು ಒಪ್ಪಿದನು. ಮತ್ತು ಕಪಿವೀರರನ್ನು ನೋಡಿ ''ನಮ್ಮ ಪ್ರಭುವಾದ ಸುಗ್ರೀವನು ಶಾಸನಭಂಗ ಮಾಡಿದವರನ್ನೆಂದಿಗೂ ಕ್ಷಮಿಸನು. ರಾಜ್ಯಲೋಭದಿಂದ ಸ್ವಂತ ಅಣ್ಣನನ್ನೇ ಕೊಲ್ಲಿಸಿದನು. ನಿರ್ದಯನಾಗಿ ಅತ್ತಿಗೆಯ ದುಃಖಕ್ಕೆ ಕಾರಣನಾದನು. ಅವನೀಗ ಅತಿ ಬಲವಂತನಾಗಿರುವನು. ಆಶ್ರಯ-ರಹಿತರಾದ ನಾವೀಗ ದುರ್ಬಲರಾಗಿದ್ದೇವೆ. ಇದರ ಮೇಲೆ ಆಜ್ಞೆಯನ್ನು ಮೀರಿದ್ದೇವೆ. ಇಂಥ ನಮ್ಮನ್ನು ಅವನು ಹೇಗೆ ರಕ್ಷಿಸುವನು'' ಎಂದನು. ಕಪಿವೀರರ ಏಕಾಭಿಪ್ರಾಯವನ್ನು ಕೇಳಿ ಹನುಮಂತನು ಹೀಗೆ ಹೇಳಿದನು - ''ಕಪಿವೀರರೇ, ಅಂಗದ ತಾರರು ಸುಗ್ರೀವನ ರಾಜ್ಯದ ಬಗ್ಗೆ ಹೇಳಿದ್ದ ಮಾತು ನಿರರ್ಥವಾಯಿತು. ನೀವು ನೆನೆದಂತೆ ನಡೆಯಲು ಎಂದಿಗೂ

ಸಾಧ್ಯವಾಗದು. ಈ ವಾಯುನಂದನನು ಶ್ರೀರಾಮನಿಗೆ ವಿರೋಧವಾದ ಮಾತನ್ನು ಎಂದಿಗೂ ಸಹಿಸಲಾರನು! ನೀವೆಲ್ಲರೂ ಉಪಾಯದಿಂದ ನನ್ನನ್ನು ಮರುಳುಗೊಳಿಸಿ ನಿಮ್ಮ ಕಡೆ ವಾಲುವಂತೆ ಮಾಡಲು ಖಂಡಿತ ಸಾಧ್ಯವಿಲ್ಲ. ಕಪಿವೀರರೇ ಕೇಳಿರಿ, ಅಸೀಮ ಭುಜಬಲ ಪರಾಕ್ರಮಶಾಲಿಯಾದ ಶ್ರೀರಾಮನ ಮುಂದೆ ನಿಂತು ಅವನನ್ನು ನೋಡಲು ಯಾರಿಗೂ ಶಕ್ಯವಿಲ್ಲ. ಅಂಥಾ ಪ್ರಭುವಿನ ಬಲವನ್ನು ಸನ್ಮಾರ್ಗದಿಂದ ಎದುರಿಸಲು ನೀವೆಲ್ಲರೂ ಒಂದಾಗಿ ಸೇರಿದರೂ ಆಗಲಾರದು. ನನ್ನ ಈ ಹಿತವಚನವನ್ನು ಆದರದಿಂದ ಕೇಳಿ ಅದರಂತೆ ನಡೆದರೆ ನಿಮಗೆ ಶ್ರೇಯಸ್ಸಾಗುವುದು. ನನಗೂ ಸಂತೋಷವಾಗುವುದು. ಇಲ್ಲವಾದರೆ ಅಕಾರ್ಯದಲ್ಲಿ ತೊಡಗಿರುವ ನಿಮ್ಮೆಲ್ಲರನ್ನೂ ಶಿಕ್ಷಿಸಿ ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುತ್ತೇನೆ''.

ವಾಯುಪುತ್ರನಾದ ಹನುಮಂತನ ವಾಕ್ಯವನ್ನಾಲಿಸಿ ಎಲ್ಲರೂ ಹೆದರಿ ಮೌನ ತಾಳಿದರು. ಅನಂತರ ಹನುಮಂತನ ಬುದ್ಧಿವಾದದಿಂದ ವಿವೇಕವನ್ನು ಪಡೆದ ಅವರು ಹನುಮಂತನ ಮಾತಿನಂತೆ ನಡೆಯುವುದಾಗಿ ಹೇಳಿ ಅವನನ್ನು ಹಿಂಬಾಲಿಸಿ ಮಹೇಂದ್ರಪರ್ವತಕ್ಕೆ ಬಂದರು. ಅಲ್ಲಿ ಅವರು ಮುಂದೆ ಹೋಗುತ್ತಿರುವಾಗ ಬಹಳ ವಿಸ್ತಾರವಾದ ಸಾಗರವನ್ನು ಕಂಡರು. ಅದನ್ನು ನೋಡಿ ಅವರ ಹೃದಯ ತಲ್ಲಣಿಸಿತು. ನಿರಾಶೆಯಾಯಿತು. ಮುಂದಿನ ದಾರಿ ಕಾಣದೆ ಪ್ರಾಯೋಪವೇಶ ಮಾಡಲು ನಿರ್ಧರಿಸಿದರು. ಎಲ್ಲ ಕಪಿವೀರರೂ ಉಪವಾಸ ವ್ರತವನ್ನು ಕೈಗೊಂಡು ಭವಸಾಗರವನ್ನು ದಾಟಿಸಿ ಮೋಕ್ಷವನ್ನು ಕರುಣಿಸುವ ಶ್ರೀರಾಮಚಂದ್ರನ ಪರಮ ಮಂಗಳಕರ ಕಥೆಯನ್ನು ಹಾಡಿ ಪಾಡಹತ್ತಿದರು.

ಜಟಾಯುವಿನ ಮರಣ ಮತ್ತು ಶ್ರೀರಾಮನು ಅವನಿಗೆ ಮೋಕ್ಷವಿತ್ತ ಕಥಾಸಂದರ್ಭವನ್ನು ವಾನರರು ಹೇಳುತ್ತಿರುವ ವಿಚಾರ ಸೂರ್ಯಸಾರಥಿಯಾದ ಅರುಣನ ಪುತ್ರನೂ ಜಟಾಯುವಿನ ಅಣ್ಣನೂ ಆದ ಸಂಪಾತಿಯ ಕಿವಿಗೆ ಬಿದ್ದಿತು. ಹಿಂದೊಮ್ಮೆ ಅರುಣನ ಪುತ್ರರೂ ಸಹೋದರರೂ ಆದ ಸಂಪಾತಿ ಮತ್ತು ಜಟಾಯುಗಳು ತಮ್ಮಿಬ್ಬರ ವೇಗದ ಪರೀಕ್ಷೆಗಾಗಿ ಸೂರ್ಯಮಂಡಲದ ಹತ್ತಿರಕ್ಕೆ ಹಾರಿಹೋದರು. ಆಗ ಸಂಪಾತಿಯ ರೆಕ್ಕೆಗಳು ಸೂರ್ಯಕಿರಣಗಳ ಜ್ವಾಲೆಯಿಂದ ದಗ್ಧವಾದವು. ಅವನನ್ನು ಕಾಪಾಡಲು ಜಟಾಯುವು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ರೆಕ್ಕೆ ಸುಟ್ಟು ಸಂಪಾತಿಯು ಭೂಮಿಯಲ್ಲಿ ಬಿದ್ದನು. ಹೀಗೆ ರೆಕ್ಕೆ ಸುಟ್ಟು ಭೂಮಿಯಲ್ಲಿ ಬಿದ್ದಿದ್ದ ಸಂಪಾತಿಗೆ ಕಪಿವೀರರ ರಾಮಕಥಾ ಶ್ರವಣದ ಪ್ರಭಾವದಿಂದ ಮತ್ತೆ ರೆಕ್ಕೆಗಳು ಹುಟ್ಟಿಕೊಂಡವು. ಜಟಾಯುವಿನ ಮರಣವಾರ್ತೆಯು ಸತ್ಯವೆಂದು ಕಪಿವೀರರ ಮಾತಿನಿಂದ ಮನಗಂಡು ದುಃಖಿಸಿದನು. ತರುವಾಯ ಹಿಂದೆ ರಾವಣನು ಸೀತಾಕೃತಿಯನ್ನು ಒಯ್ಯುತ್ತಿದ್ದುದನ್ನು ಸಂಪಾತಿಯ ಮಗನು ಅವನಿಗೆ ತಿಳಿಸಿದ್ದನು. ಅದನ್ನು ಕೇಳಿ ಸಂಪಾತಿಯು ದಕ್ಷಿಣ ದಿಕ್ಕಿನ ಕಡೆ ತಿರುಗಿ ಅಶೋಕವನದಲ್ಲಿ ಕುಳಿತಿದ್ದ ಸೀತಾಕೃತಿಯನ್ನು ಸ್ವತಃ ಕಂಡಿದ್ದನು. ಅದನ್ನು ಸಂಪಾತಿಯು ಕಪಿವೀರರಿಗೆ ತಿಳಿಸಿದನು.

ಅನಂತರ ಜಾಂಬುವಂತನು ''ನೀವು ಎಷ್ಟೆಷ್ಟು ದೂರ ಹಾರಬಲ್ಲಿರಿ?'' ಎಂದು ಕಪಿವೀರರನ್ನು ಪ್ರಶ್ನಿಸಿದನು. ಅದಕ್ಕೆ ಉತ್ತರವಾಗಿ ಕಪಿವೀರರು ಹತ್ತು ಯೋಜನದಿಂದಾರಂಭಿಸಿ ಕ್ರಮವಾಗಿ ಇಪ್ಪತ್ತು ಯೋಜನಗಳವರೆಗೆ ತಾವು ಹಾರಬಲ್ಲೆವೆಂದು ಒಬ್ಬೊಬ್ಬರಾಗಿ ಹೇಳಿದರು. ನೀಲ, ಮೈಂದ, ವಿವಿದ, ತಾರ ಮೊದಲಾದ ವಾನರವೀರರು ತಮ್ಮ ತಮ್ಮ ಹಾರುವ ಶಕ್ತಿಯನ್ನು ಹೇಳಿದರು. ಅದು ಎಂಭತ್ತು ಯೋಜನದವರೆಗೆ ಬಂದು ನಿಂತಿತು. ಅದರ ಮೇಲೆ ಹಾರಲು ಅವರು ಸಮರ್ಥ-ರಲ್ಲವೆಂದಾಯಿತು. ಆಗ ಜಾಂಬುವಂತನು ತಾನು ತೊಂಭತ್ತು ಯೋಜನ ದೂರ ಹಾರಬಲ್ಲೆನೆಂದು ಹೇಳಿ ಮುಂದುವರೆದು ''ಪೂರ್ವದಲ್ಲಿ ಕೃತಯುಗದಲ್ಲಿ ಶ್ರೀವಿಷ್ಣುವು ವಾಮನನಾಗಿ ತನ್ನ ಮೂರು ಪಾದಗಳಿಂದ ಬಲಿಚಕ್ರವರ್ತಿಯ ಮೂರು ಲೋಕಗಳನ್ನೂ ಪಡೆದಾಗ ನಾನು ಆನಂದಭರದಿಂದ ಹೋಗುತ್ತಿರುವಾಗ ಮೇರುಪರ್ವತವು ನನ್ನ ಮೊಣಕಾಲುಗಳಿಗೆ ತಾಗಿ ಬೆಂಡಾಗಿವೆ. ಆದ್ದರಿಂದ ಹಿಂದಿನಂತೆ ಹಾರುವ ಶಕ್ತಿ ಈಗ ನನಗಿಲ್ಲ. ಮೊದಲು ನಾನು ತೊಂಭತ್ತಾರು ಯೋಜನದಷ್ಟು ದೂರ ಹಾರುತ್ತಿದ್ದೆನು'' ಎಂದನು.

ತರುವಾಯ ಯುವರಾಜನಾದ ಅಂಗದನು ''ನಾನು ಈ ಮಹೇಂದ್ರ ಪರ್ವತದ ಮೇಲೇರಿ ನೆಗೆದು ಒಂದುನೂರು ಯೋಜನಗಳ ದೂರ ಹಾರಬಲ್ಲೆನು. ಆದರೆ ಮುಂದೆ ರಾವಣನ ಕೋಟೆಯನ್ನು ಪ್ರವೇಶಿಸುವುದು, ರಾಕ್ಷಸರೊಡನೆ ಹೋರಾಡುವುದು, ಮತ್ತು ಅಲ್ಲಿಂದ ಹಿಂದಿರುಗಿ ಬರುವ ಕಾರ್ಯಗಳು ನನ್ನಿಂದಾಗದು'' ಎಂದನು. ಹೀಗೆ ಎಲ್ಲರೂ ಹತ್ತು ಯೋಜನದಿಂದ ನೂರುಯೋಜನಗಳವರೆಗೆ ಹಾರುವ ಶಕ್ತಿ ತಮಗಿರುವುದಾಗಿ ನಿರೂಪಿಸಿದರು. ಜಾಂಬುವಂತನು ಶತ್ರುಬಲವನ್ನು ನೋಡಿ, ರಾಕ್ಷಸೇಂದ್ರನಾದ ರಾವಣನ ಪಟ್ಟಣದೊಳಗೆ ಪ್ರವೇಶಿಸುವುದು ಅಸಾಧ್ಯವೆಂದರಿತು ಹೀಗೆ ಹೇಳಿದನು. ''ಸಂಪಾತಿಯು ತ್ರಿಕೂಟಪರ್ವತಕ್ಕೆ ನೂರು ಯೋಜನಗಳಾಗುವವೆಂದು ಹೇಳಿದನು. ಆದರೆ ಅಲ್ಲಿಂದ ಮುಂದೆ ಹೋಗಲು ಪ್ರಯತ್ನಿಸಲು ಅನೇಕ ವಿಘ್ನಗಳಿವೆ. ಆದ್ದರಿಂದ ಈ ಮಹತ್ಕಾರ್ಯವನ್ನು ಮಾಡಲು ಹನುಮಂತನೊಬ್ಬನೇ ಸಮರ್ಥನು. ಅವನನ್ನು ಬಿಟ್ಟು ಮತ್ತಾರೂ ಈ ಕಾರ್ಯ ಮಾಡಲು ಸಮರ್ಥರಲ್ಲ'' ಎಂದು ಹೇಳಿ ತರುವಾಯ ಶ್ರೀ ಪ್ರಾಣದೇವರ ಪುತ್ರನಾದ ಹನುಮಂತನ ನಿಸ್ಸೀಮ ಬಲವನ್ನು ಕೊಂಡಾಡುತ್ತಾ ''ಹನುಮಂತ! ಈ ಮಹಾಕಾರ್ಯವನ್ನು ಸಾಧಿಸಲು ನೀನೊಬ್ಬನೇ ಮಹಾಬಲಶಾಲಿಯಾದ್ದರಿಂದ ಸಮರ್ಥನಾಗಿದ್ದೀಯೇ. ನೀನು ಇದನ್ನು ನೆರವೇರಿಸಿ ಸಕಲ ವಾನರರನ್ನೂ ಕಾಪಾಡು'' ಎಂದು ಹೇಳಿದನು.

ಜಾಂಬವಂತನ ಮಾತನ್ನಾಲಿಸಿ ಶ್ರೀವಾಯುನಂದನನು ಎಲ್ಲ ವಾನರ ವೀರರ ಅಶಕ್ತತೆಯನ್ನು ಪ್ರಕಟಗೊಳಿಸಿ ಶ್ರೀರಾಮನನ್ನು ಧ್ಯಾನಿಸಿ ಶತಯೋಜನ ವಿಸ್ತೀರ್ಣವಾದ ಮಹಾಸಮುದ್ರವನ್ನು ಗರುಡನಂತೆ ಹಾರಿ ಶ್ರೀರಾಮನ ಆಜ್ಞೆಯನ್ನು ನೆರವೇರಿಸಲು ಮಹಾಶಕ್ತಿಯುಳ್ಳ ಬೃಹತ್‌ರೂಪದಿಂದ ಬೆಳೆದನು. ॥ 6 ॥

ಹೀಗೆ ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯದಲ್ಲಿ ವಿಸ್ತಾರವಾಗಿ ನಿರೂಪಿಸಿದ ಆರನೆಯ ಅಧ್ಯಾಯದ ಕಥಾಭಾಗವನ್ನು ಶ್ರೀಗುರುರಾಜರು ''ಸುಗ್ರೀವೇಣ'' ಎಂಬ ಪದ್ಯದಿಂದ ಸಂಗ್ರಹಿಸಿ ಅನುಗ್ರಹಿಸಿದ್ದಾರೆ.

*ಮಹಾಭಾರತದ ತಾತ್ಪರ್ಯ ನಿರ್ಣಯದ ಶ್ರೀಹನುಮದ್ದರ್ಶನವೆಂಬ*
*ಆರನೆಯ ಅಧ್ಯಾಯದ ಕಥಾಸಂಗ್ರಹವು ಮುಗಿದುದು.*

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★



ಹನುಮಂತನಿಂದ ಲಂಕಾಧ್ವಂಸ

## ಸಪ್ತಮಾಧ್ಯಾಯಭಾವಸಂಗ್ರಹ

*ಅವತಾರಿಕೆ:-*

ಶ್ರೀಗುರುರಾಜರು ಈಗ ಮಹಾಭಾರತ ತಾತ್ಪರ್ಯ ನಿರ್ಣಯದ ಏಳನೆಯ ಅಧ್ಯಾಯದ ಕಥಾಭಾಗವನ್ನು ''ಯಸ್ಯ'' ಎಂಬ ಶ್ಲೋಕದಿಂದ ಸಂಗ್ರಹಿಸುತ್ತಾರೆ :-

**ಯಸ್ಯ ಶ್ರೀಹನುಮಾನನುಗ್ರಹಬಲಾತ್ ತೀರ್ಣಾಂಬುಧಿರ್ಲೀಲಯಾ**
**ಲಂಕಾಂ ಪ್ರಾಪ್ಯ ನಿಶಾಮ್ಯ ರಾಮದಯಿತಾಂ ಭಂಕ್ತ್ವಾ ವನಂ ರಾಕ್ಷಸಾನ್ ।**
**ಅಕ್ಷಾದೀನ್ವಿನಿಹತ್ಯ ವೀಕ್ಷ್ಯ ದಶಕಂ ದಗ್ಧ್ವಾ ಪುರೀಂ ತಾಂ ಪುನಃ**
**ತೀರ್ಣಾಬ್ಧಿಃ ಕಪಿಭಿರ್ಯುತೋ ಯಮನಮತ್ ತ್ತಂ ರಾಮಚಂದ್ರಂ ಭಜೇ ॥ 7 ॥**

**ಅನ್ವಯಾರ್ಥ :-** **ಯಸ್ಯ** = ಯಾವ ಶ್ರೀರಾಮಚಂದ್ರಪ್ರಭುವಿನ, **ಅನುಗ್ರಹಬಲಾತ್** = ಅನುಗ್ರಹಬಲದಿಂದ, **ಹನುಮಾನ್** = ಶ್ರೀಹನುಮಂತದೇವರು, **ಲೀಲಯಾ** = ಕ್ರೀಡೆಯಿಂದಲೇ, **ತೀರ್ಣಾಂಬುಧಿಃ** = ಸಮುದ್ರವನ್ನು ದಾಟಿದವರಾಗಿ, **ಲಂಕಾಂ** = ಲಂಕಾಪಟ್ಟಣವನ್ನು, **ಪ್ರಾಪ್ಯ** = ಹೊಂದಿ (ಸೇರಿ), **ರಾಮದಯಿತಾಂ** = ಸೀತಾಕೃತಿಯನ್ನು, **ನಿಶಾಮ್ಯ** = ನೋಡಿ, **ವನಂ** = ಅಶೋಕವನವನ್ನು, **ಭಂಕ್ತ್ವಾ** = ಭಂಗಗೊಳಿಸಿ, **ಅಕ್ಷಾದೀನ್ ರಾಕ್ಷಸಾನ್** = ಅಕ್ಷಕುಮಾರನೇ ಮೊದಲಾದ ರಾಕ್ಷಸರನ್ನು, **ವಿನಿಹತ್ಯ** = ಸಂಹಾರಮಾಡಿ, **ದಶಕಂ** = ರಾವಣನ ಲಂಕೆಯನ್ನು, **ದಗ್ಧ್ವಾ** = ದಹಿಸಿ (ಸುಟ್ಟುಹಾಕಿ), **ಪುನಃ** = ಮತ್ತೆ, **ತೀರ್ಣಾಬ್ಧಿಃ ಸನ್** = ಸಾಗರವನ್ನು ದಾಟಿದವರಾಗಿ, **ಕಪಿಭಿರ್ಯುತಸ್ಸನ್** = ವಾನರರಿಂದ ಕೂಡಿದವರಾಗಿ, **ಯಂ** = ಯಾವ ದೇವನನ್ನು, **ಅನಮತ್** = ನಮಸ್ಕರಿಸಿದರೋ, **ತಂ** = ಅಂಥ, **ರಾಮಚಂದ್ರಂ** = ಶ್ರೀರಾಮಚಂದ್ರದೇವರನ್ನು, **ಭಜೇ** = ಭಜಿಸುತ್ತೇನೆ.

**ತಾತ್ಪರ್ಯ :-** ಶ್ರೀಹನುಮಂತದೇವರು ವಾನರರ ಪ್ರಾರ್ಥನೆಯಂತೆ ಶ್ರೀರಾಮಚಂದ್ರದೇವರ ಅನುಗ್ರಹಬಲದಿಂದ ಲೀಲೆಯಿಂದಲೇ ಮಹಾಸಮುದ್ರವನ್ನು ದಾಟಿ, ಲಂಕಾನಗರಕ್ಕೆ ಹೋಗಿ, ಶ್ರೀರಾಮನ ಮಡದಿಯಾದ ಶ್ರೀಸೀತಾದೇವಿಯ ಪ್ರತಿಕೃತಿಯನ್ನು ದರ್ಶನಮಾಡಿ, ಅಶೋಕವನವನ್ನು ಧ್ವಂಸಮಾಡಿ, ರಾವಣನ ಮಗನಾದ ಅಕ್ಷಕುಮಾರನೇ ಮೊದಲಾದ ರಾಕ್ಷಸರುಗಳನ್ನು ಸಂಹಾರ ಮಾಡಿ, ದಶಕಂಠನಾದ ರಾವಣನನ್ನು ನೋಡಿ ಆ ಲಂಕಾಪಟ್ಟಣವನ್ನು ಸುಟ್ಟು ಮತ್ತೆ ವಿಸ್ತೀರ್ಣವಾದ ಸಮುದ್ರವನ್ನು ದಾಟಿ, ವಾನರರಿಂದೊಡಗೂಡಿ ಬಂದು ಶ್ರೀರಾಮಚಂದ್ರನಿಗೆ ನಮಸ್ಕರಿಸಿದರು. ಇಂಥ ರಘುಕುಲಲಲಾಮನಾದ ಶ್ರೀರಾಮಚಂದ್ರನನ್ನು ಭಜಿಸುತ್ತೇನೆ ಎಂದು ಭಾವ.

## ಸಪ್ತಮಾಧ್ಯಾಯಾರ್ಥ ಕಥಾಸಂಗ್ರಹ

ಪವನನಂದನನಾದ ಶ್ರೀ ಹನುಮಂತನು ಶಾಶ್ವತವೂ ಪರಿಪೂರ್ಣವೂ ಆದ ಷಡ್ಗುಣೋಪೇತನೂ, ಸರ್ವದೇವತೆಗಳಿಗೆ ಸ್ವಾಮಿಯೂ, ಸಾಗರದಂತೆ ಅಪಾರವಾದ ಬಲ ಮತ್ತು ವೀರ್ಯಾದಿ ಗುಣಯುಕ್ತನೂ ಆದ ಶ್ರೀರಾಮಚಂದ್ರನಿಗೆ ಭಕ್ತಿಯಿಂದ ನಮಸ್ಕರಿಸಿ ಮಹಾಸಮುದ್ರವನ್ನು ದಾಟಬಯಸಿ ಮಹೇಂದ್ರ ಪರ್ವತದಿಂದ ಅಂಬರಕ್ಕೆ ನೆಗೆದನು. ಆ ರಭಸಕ್ಕೆ ಸಾಗರವು ತಳಮಳಿಸಿ ಕದಡಿ ಉಕ್ಕಹತ್ತಿತು. ಹನುಮನ ವೇಗದ ಆಕರ್ಷಣೆಗೊಳಗಾದ ಸಾಗರವೂ ಅವನೊಡನೆ ಭರದಿಂದ ಓಡಿತು. ಅಂಬುಧಿಯ ಅಂತರದೊಳಿರ್ದ ಜಲಚರಪ್ರಾಣಿಗಳು ಜಲದಸುಳಿಯಲ್ಲಿ ಸಿಲುಕಿ ತಿರುಗಹತ್ತಿದವು. ಗಿರಿಯೊಳಗೆ ಬೆಳೆದಿದ್ದ

ಗಿಡ ಮರಗಳು ಮಾರುತಿಯ ವೇಗದಿಂದ ಬುಡಸಹಿತ ಕಿತ್ತು ಈ ಮೊದಲೇ ಸಮುದ್ರದೊಳಗೆ ಉರುಳಿದ್ದವು. ಆಂಜನೇಯನ ವೇಗದಿಂದ ಆಕರ್ಷಿತವಾಗಿ ಪರ್ವತವೂ ಒಮ್ಮೆ ಮೇಲಕ್ಕೆ ನೆಗೆಯಿತು.

ಹಿಂದೊಮ್ಮೆ ಇಂದ್ರನ ವಜ್ರಾಯುಧದ ಭಯದಿಂದ ಪಾರ್ವತಿಯ ಅನುಜನಾದ ಮೈನಾಕಪರ್ವತವು ಭರದಿಂದ ಹಾರಲೆತ್ನಿಸಿದಾಗ ವಾಯುದೇವನು ಅವನಿಗೆ ಅನುಕೂಲವಾಗುವಂತೆ ಬಲವಾಗಿ ಗಾಳಿಯ ಬೀಸಲು ಅದರ ಸಹಾಯದಿಂದ ಮೈನಾಕನಿಗೆ ವೇಗವಾಗಿ ಹಾರಲು ಅನುವಾಯಿತು. ಇಂತು ವಾಯುದೇವನು ಮೈನಾಕನಿಗೆ ಉಪಕಾರವೆಸಗಿ ಅವನನ್ನು ಸಮುದ್ರದಲ್ಲಿ ಅಡಗಿಸಿದ್ದನು. ಹಿಮವಂತನ ಸುತನಾದ ಮೈನಾಕನು ಈಗ ವಾಯುಪುತ್ರನಾದ ಹನುಮಂತನು ಗಗನದಲ್ಲಿ ಹಾರುತ್ತಿರುವುದನ್ನು ಅರಿತು ಅವನಿಗೆ ವಿಶ್ರಾಂತಿ ನೀಡಿ ಉಪಚರಿಸಲು ಕೂಡಲೇ ಸಮುದ್ರದ ಜಲವನ್ನು ಸೀಳಿಕೊಂಡು ಮೇಲೆ ಹೊರಟು ಬೆಳೆಯಲಾರಂಭಿಸಿದನು.

ಹನುಮಂತನ ಪೌರುಷ ಬಲಗಳಿಗೆ ಮೇರೆಯೇ ಇಲ್ಲ. ಅವನಿಗೆ ಬಳಲಿಕೆ ಶ್ರಮವೆಂಬುದೆಲ್ಲಿದೆ? ಆದುದರಿಂದಲೇ ಅವನು ಆ ಪರ್ವತದಲ್ಲಿ ವಿಶ್ರಮಿಸಲಿಚ್ಛಿಸದೆ ಆ ಉತ್ತಮವಾದ ಪರ್ವತವನ್ನು ಅಪ್ಪಿಕೊಂಡು ಮತ್ತೆ ಅವನು ಮುಂದೆ ಹೋಗುತ್ತಿರಲು ದೇವತೆಗಳು ವರವಿತ್ತು ಕಳುಹಿದ ನಾಗಮಾತೆ ಕದ್ರುವನ್ನು ಕಂಡನು. ಹನುಮಂತನ ಬಲವನ್ನು ತಿಳಿಯಬಯಸಿದ ಅಮರರು ''ಕದ್ರು! ನೀನಾವುದನ್ನು ತಿನ್ನ ಬಯಸುವೆಯೋ ಅದು ನಿನಗೆ ಆಹಾರವಾಗಲಿ'' ಎಂದು ವರವಿತ್ತಿದ್ದರು. ಇದನ್ನು ಅರಿತ ಹನುಮಂತನು ತನ್ನನ್ನು ತಿನ್ನಬಯಸಿ ದೊಡ್ಡದಾಗಿ ಬಾಯಿ ತೆರೆದು ಬರುತ್ತಿದ್ದ ಕದ್ರುವಿನ ಬಾಯಿಯಲ್ಲಿ ಪ್ರವೇಶಿಸಿ ತಕ್ಷಣ ಹೊರಗೆ ಬಂದನು. ಅನಂತರ ಮತ್ತೆ ಅವಳ ಬಾಯಿಯಲ್ಲಿ ಯಾರೂ ಪ್ರವೇಶಿಸದಿರುವಂತೆ ಮಾಡಿ ರಕ್ಷಿಸಿ ಸುರಾನೀಕವನ್ನು ಆನಂದಗೊಳಿಸಿದನು. ಬಳಿಕ ದೇವತೆಗಳು ತಮಗೆ ಆನಂದಪ್ರದವೂ ವೈರಿಗಳಿಗೆ ಭೀಕರವೂ ಆದ ವಾಯುನಂದನನ ಬಲಕಾರ್ಯವನ್ನು ಅವಲೋಕಿಸಿ ಮುದಗೊಂಡು ಹನುಮಂತನ ಮೇಲೆ ಪುಷ್ಪವೃಷ್ಟಿಗೈಯ್ಯಲು ಅಮರರ ಆದರದ ಆ ಪೂಜೆಯನ್ನು ಆನಂದದಿಂದ ಸ್ವೀಕರಿಸಿ ಅಂಜನಾನಂದನನು ಪುನಃ ಗಗನದಲ್ಲಿ ಹಾರಿಹೋಗುತ್ತಿರಲು ಸಿಂಹಿಕೆ ಎಂಬ ಛಾಯಾಗ್ರಹವು ತನಗೆದುರಾಗಿ ಬರುತ್ತಿರುವುದನ್ನು ನೋಡಿದನು.

ಹಿಂದೆ ಬ್ರಹ್ಮದೇವರು ಈ ಸಿಂಹಿಕೆಗೆ ಲಂಕಾಪಟ್ಟಣವನ್ನು ರಕ್ಷಿಸಲು ಸಕಲರ ನೆರಳನ್ನು ನಿಗ್ರಹಿಸಿ ಕಟ್ಟಿಹಾಕುವ ಸಾಮರ್ಥ್ಯವನ್ನು ಕರುಣಿಸಿದ್ದರು. ಅಪ್ರತಿಹತವಾದ ಸಿಂಹಿಕೆಯ ಸಾಮರ್ಥ್ಯವನ್ನೆದುರಿಸಲು ಯಾರಿಗೂ ಸಾಧ್ಯವಾಗುತ್ತಿರಲಿಲ್ಲ. ಆದರೆ ಅವಳಿಗೆ ಹನುಮಂತನನ್ನು ನಿಗ್ರಹಿಸಲಾಗಲಿಲ್ಲ. ಆದುದರಿಂದ ಅವಳು ಹನುಮಂತನ ಛಾಯೆಯನ್ನು ಹಿಡಿದು ಕಟ್ಟಿ ಹಾಕಲೆತ್ನಿಸಿದಳು. ಬ್ರಹ್ಮದೇವರ ವರಕ್ಕೆ ಮನ್ನಣೆ ನೀಡಲು ಹನುಮಂತನು ಅವಳಿಗೆ ಸೆರೆಸಿಕ್ಕುವವನಂತೆ ನಟಿಸಿ ನಂತರ ಕೂಡಲೇ ಸೂಕ್ಷ್ಮ ರೂಪದಿಂದ ಅವಳ ಶರೀರದೊಳಗೆ ಪ್ರವೇಶಿಸಿ ಬೃಹದ್ರೂಪವನ್ನು ತಾಳಿ ಅವಳ ದೇಹವನ್ನು ಸೀಳಿಕೊಂಡು ಹೊರಬಂದನು. ಇಂತು ಹನುಮಂತನು ನಿಸ್ಸೀಮಬಲನೆಂಬುದನ್ನು ತೋರಿಸುತ್ತ ಪಿತಾಮಹ ಬ್ರಹ್ಮದೇವರ ವರಬಲದಿಂದ ರಕ್ಷಿತಳಾಗಿದ್ದ ಸಿಂಹಿಕೆಯನ್ನು ಸಂಹರಿಸಿ ಲಂಕಾಪುರಿಯ ಸಮೀಪಕ್ಕೆ ಬಂದನು.

ಹನುಮಂತನು ಲೋಲಂಬಮಾನ ಶಿಖರಗಳಿಂದ ವಿರಾಜಿಸುತ್ತಿದ್ದ ಲಂಕಾಪಟ್ಟಣದ ಲಂಬಶಿಖರವೆಂಬ ಪ್ರಾಕಾರದತ್ತ ಹಾರಿಬಂದು ಆ ಶಿಖರದ ಮೇಲೆ ನೆಗೆದನು. ಆ ಹಾರುವಿಕೆಯ ಭಾರಕ್ಕೆ ಶಿಖರಗಳು ಕುಸಿದುಬಿದ್ದವು. ಅದರ ಮೇಲೆ ನಿಂತ ಹನುಮಂತನು ತನ್ನ ಬೃಹದ್ರೂಪವನ್ನು ಸಣ್ಣದಾಗಿಸಿ ಮೊದಲಿನಂತಾದನು. ಅನಂತರ ಅವನು ಮಾರ್ಜಾಲರೂಪದಿಂದ ನಿಶೆಯಲ್ಲಿ ಲಂಕಾಪುರಿಯನ್ನು ಪ್ರವೇಶಿಸಬೇಕೆಂದು ಯೋಚಿಸುತ್ತಿರುವಷ್ಟರಲ್ಲಿ ದುರ್ಗಾದೇವಿಯ ಪರಿವಾರಕ್ಕೆ ಸೇರಿದ, ಲಂಕಾಪಟ್ಟಣದ ಅಭಿಮಾನಿ ದೇವತೆಯಾದ ಲಂಕಿಣಿಯನ್ನು ಕಂಡನು. ಅವಳು ಹನುಮಂತನು ನಗರದೊಳಗೆ ಪ್ರವೇಶಿಸದಂತೆ ಅಡ್ಡಿ ಮಾಡಿದಳು. ಆಗ ಹನುಮಂತನು ಮುಷ್ಟಿ ಪ್ರಹಾರದಿಂದ ಅವಳನ್ನು ಮರ್ದಿಸಿ ಪರಾಜಯಗೊಳಿಸಿ ಅವಳ ಒಪ್ಪಿಗೆ-

ಯಂತೆಯೇ ಲಂಕಾಪುರಿಯೊಳಗೆ ಪ್ರವೇಶ ಮಾಡಿದನು. ಅವನು ಲಂಕೆಯ ಒಳಹೊರಗೆಲ್ಲಾ ಹುಡುಕುತ್ತ ಅಶೋಕವನದ ಶಿಂಶುಪಾವೃಕ್ಷದ ಬುಡದಲ್ಲಿ ಕುಳಿತಿರುವ ರಮಾದೇವಿಯ ಸೀತಾಕೃತಿಯನ್ನು ನೋಡಿದನು.

ಸರ್ವಜ್ಞನಾದ ಹನುಮಂತನು ಸಂಪಾತಿಯಿಂದ ಸೀತಾಕೃತಿಯು ಲಂಕೆಯ ಅಶೋಕವನದ ಶಿಂಶುಪಾವೃಕ್ಷದ ಬುಡದಲ್ಲಿರುವುದನ್ನು ಕೇಳಿ ತಿಳಿದಿದ್ದನು. ಆದರೂ ಸಾಮಾನ್ಯ ಮಾನವನಂತೆ ಸೀತಾದೇವಿಯನ್ನು ಒಳಗೆ-ಹೊರಗೆ ಹುಡುಕುವುದು, ಸೀತಾಕೃತಿಯ ಮುಂದೆ ಅಪೇಕ್ಷೆಯಿರದಿದ್ದರೂ ಶ್ರೀರಾಮನು ಹೇಳಿದನೆಂದು ಸವಿನುಡಿಗಳನ್ನಾಡಿ ಸಾಂತ್ವನಗೊಳಿಸುವುದು, ಮುದ್ರೆಯುಂಗುರವನ್ನು ನೀಡುವುದು, ಸೀತೆಯಿಂದ ಚೂಡಾಮಣಿಯನ್ನು ಸ್ವೀಕರಿಸುವುದೇ ಮುಂತಾದ ಕಾರ್ಯಗಳನ್ನು ಶ್ರೀರಾಮಚಂದ್ರನ ಹೃದ್ಗತವನ್ನರಿತವನಾದ್ದರಿಂದ ಶ್ರೀರಾಮನ ಇಂಗಿತದಂತೆ ಮಾಡಿದನು.

ಲಕ್ಷ್ಮೀಸ್ವರೂಪಿಣಿಯಾದ ಸೀತಾಮಾತೆಯೂ ಶ್ರೀರಾಮನ ಲೀಲಾವಿಲಾಸಗಳಿಗೆ ತಕ್ಕಂತೆ ತಾನೂ ಲೀಲೆಗಳನ್ನು ತೋರುವಳು. ಮೂಲ ಸೀತಾದೇವಿಗಿರುವ ಲೀಲೆಗಳೇ ಸೀತಾಕೃತಿಯಲ್ಲಿಯೂ ಇರುವವು. ಆದ್ದರಿಂದ ಹನುಮಂತನು ಶ್ರೀರಾಮನ ಮುದ್ರೆಯುಂಗುರವನ್ನು ಸೀತಾಕೃತಿಗೆ ಸಮರ್ಪಿಸಿದನು. ಮೂಲ ಸೀತಾದೇವಿಯ ಸಾಮರ್ಥ್ಯದಿಂದ ಎರಡು ಸೀತಾರೂಪಗಳಾದವು. ಅಂತೆಯೇ ಮೂಲರೂಪದ ಒಡವೆ ವಸ್ತುಗಳು ಪ್ರತಿಕೃತಿಗೂ ಆದವು. ಹನುಮಂತನಿಂದ ಶ್ರೀರಾಮಲಕ್ಷ್ಮಣರ ಕುಶಲವಾರ್ತೆಯನ್ನು ಕೇಳಿ ಮುದ್ರೆಯುಂಗರವನ್ನು ಸ್ವೀಕರಿಸಿ ತನ್ನ ಗುರುತಿಗಾಗಿ ಸೀತಾಕೃತಿಯ ಆ ದೇವಿಯು ಶ್ರೀರಾಮನಿಗೆ ಸಮರ್ಪಿಸಲು ತನ್ನ ಮುಡಿಯಲ್ಲಿದ್ದ ಚೂಡಾಮಣಿಯನ್ನು ಕೊಟ್ಟಳು. ಹನುಮಂತನು ಸೀತಾದೇವಿಯನ್ನು ಸವಿನುಡಿಗಳಿಂದ ಸಂತೈಸಿದ್ದು, ಸೀತಾಕೃತಿಯ ಪ್ರಲಾಪಾದಿಗಳನ್ನು ಲಂಕೆಯಲ್ಲಿನ ರಾಕ್ಷಸರು ಮದ್ಯದ ಅಮಲಿನಿಂದ ಮತ್ತರಾಗಿ ನಿದ್ರಿಸುತ್ತಿದ್ದುದರಿಂದ ನೋಡಲಾಗಲಿಲ್ಲ. ದ್ಯುಲೋಕ ಸಂಚಾರಿಗಳಾದ ದೇವತೆಗಳು, ಇದರಂತೆ ಕಲಿಯೇ ಮೊದಲಾದ ದೈತ್ಯರು ಪಾಪಕರ್ಮವಶದಿಂದ ನಿದ್ರೆಮಾಡಲಾಗದೆ ಎಲ್ಲೆಡೆಯಿದ್ದು ಇದನ್ನು ನೋಡಿದರು.

ಈ ವ್ಯಾಪಾರಗಳು ದೇವತೆಗಳು ಮತ್ತು ಋಷಿಗಳಿಗೆ ಹೆಚ್ಚಿನ ತತ್ವಜ್ಞಾನಕ್ಕೂ, ಕಲಿ ಮೊದಲಾದ ದೈತ್ಯರಿಗೆ ಮತ್ತಷ್ಟು ಮಿಥ್ಯಾಜ್ಞಾನಕ್ಕೂ ಕಾರಣವಾಗಿದೆ. ದೇವತೆಗಳು-ಋಷಿಗಳು ಸಾಕ್ಷಾತ್ ನಾರಾಯಣಾವತಾರನೂ ಜ್ಞಾನಾನಂದಾದಿ ಗುಣಪೂರ್ಣನೂ, ಸರ್ವೋತ್ತಮನೂ ಆದ ಶ್ರೀರಾಮಚಂದ್ರಪ್ರಭು, ರಮಾಸ್ವರೂಪಿಣಿಯಾದ ಸೀತಾಮಾತೆ, ಜಗಜ್ಜೀವನನಾದ ಮುಖ್ಯಪ್ರಾಣಾವತಾರಿಯಾದ ಹನುಮಂತ ಇವರ ಈ ವ್ಯಾಪಾರಗಳು ಕೇವಲ ಮಾನವರಂತೆ ಅನುಕರಣ ಮಾಡಲು ಮಾಡಿದುದೇ ಹೊರತು ಅಜ್ಞಾನ ಮೂಲಕವಲ್ಲವೆಂದು ಅರಿತಿರುವುದರಿಂದ ಅದು ಅವರಿಗೆ ಹೆಚ್ಚಿನ ತತ್ವಜ್ಞಾನೋದಯಕ್ಕೆ ಕಾರಣವಾಗಿದೆ. ಕಲಿ ಮೊದಲಾದ ದೈತ್ಯರು ತಮಸ್ಸಿಗೆ ಭಾಗಿಗಳಾದುದರಿಂದ ಅವರಿಗೆ ಇನ್ನುಷ್ಟು ಮೋಹವುಂಟಾಗಲು ಅವರನ್ನು ವಂಚಿಸಲು ಈ ವ್ಯಾಪಾರವು ನಡೆದಿವೆ. ''ಶ್ರೀರಾಮನು ಸೀತಾವಿಯೋಗ ದುಃಖದಿಂದ ಹನುಮಂತನನ್ನು ಹುಡುಕಲು ಕಳಿಸಿದನು, ಹನುಮಂತನು ಸೀತೆಯು ಎಲ್ಲಿರುವಳೆಂದು ಅರಿಯದೆ ಲಂಕೆಯ ಒಳಹೊರಗೆಲ್ಲ ಹುಡುಕುತ್ತಿದ್ದಾನೆ, ಶ್ರೀರಾಮನಾದರೋ ಸೀತಾದೇವಿಗೆ ಈ ಹನುಮಂತನು ನಿಜವಾದ ರಾಮದೂತನೋ, ಅಥವಾ ಮಾಯಾರೂಪದ ದೈತ್ಯನೋ ಎಂಬ ಸಂಶಯ ಬರದಿರಲಿ ಎಂದು ತನ್ನ ಮುದ್ರೆಯುಂಗುರವನ್ನು ಕೊಟ್ಟನು, ಸೀತೆಯೂ ಸಹ ಹನುಮಂತನು ತನ್ನನ್ನು ನೋಡಿ ಬಂದಿರುವನೋ ಇಲ್ಲವೇ ನೋಡಿಬಂದನೆಂದು ಸುಳ್ಳು ಹೇಳುತ್ತಿರುವನೋ? ಎಂದು ಶ್ರೀರಾಮನಿಗೆ ಸಂಶಯ ಬಂದೀತು! ನಿಜವಾಗಿ ರಾಮನಿಗೆ ಸಂದೇಹ ಬರದಿರಲಿ ಎಂಬ ಅಭಿಪ್ರಾಯದಿಂದ ಅವಳು ತನ್ನ ಚೂಡಾಮಣಿಯನ್ನು ಕೊಡುತ್ತಿದ್ದಾಳೆ, ಶ್ರೀರಾಮನ ವಿಯೋಗ ದುಃಖದಿಂದ ಸೀತೆ ಅಳುತ್ತಿದ್ದಾಳೆ'' ಮುಂತಾಗಿ ದೈತ್ಯರಿಗೆ ಮಿಥ್ಯಾಜ್ಞಾನವುಂಟಾಗಲು ಇದು ಕಾರಣವಾಗಿದೆ. ಶ್ರೀರಾಮ-ಸೀತಾ-ಹನುಮಂತದೇವರ ಈ ವಿಡಂಬನೆಯಿಂದ ದೇವತೆಗಳಿಗೆ ಅಧಿಕ ತತ್ತ್ವಜ್ಞಾನವೂ ದೈತ್ಯರಿಗೆ ಮಿಥ್ಯಾಜ್ಞಾನಾಧಿಕ್ಯಕ್ಕೂ ಈ ವ್ಯಾಪಾರಗಳು ಹೀಗೆ ನಡೆದಿವೆ. ಶ್ರೀರಾಮನ ಇಂಗಿತದಂತೆ ತತ್ತ್ವಜ್ಞಾನಿಗಳಲ್ಲಿ

ಉತ್ತಮನಾದ ವಾಯುನಂದನನು ಈ ಎಲ್ಲ ಕಾರ್ಯಗಳನ್ನು ಶಂಕೆಯಿಲ್ಲದೆ ನೆರವೇರಿಸಿ ನಂತರ ಲಂಕೆಗೆ ತಾನು ಬಂದಿರುವುದನ್ನು ಪ್ರಕಟಿಸಲು ಮನಸ್ಸು ಮಾಡಿದನು.

ತರುವಾಯ ವೀರನಾದ ಹನುಮಂತನು ಶಿಂಶುಪಾವೃಕ್ಷ ಒಂದನ್ನು ಬಿಟ್ಟು ರಾವಣನ ಅಶೋಕವನವನ್ನು ತಕ್ಷಣವೇ ಭಂಗಗೊಳಿಸಿ ಶೀಘ್ರವಾಗಿ ರಕ್ಕಸರ ನಾಶವಾಗಬೇಕೆಂದು ಆಶಿಸಿ ಮತ್ತೆ ಮತ್ತೆ ಸಿಂಹಗರ್ಜನೆ ಮಾಡುತ್ತಾ ತೋರಣವನ್ನು ಹತ್ತಿ ಕುಳಿತನು. ಅನಂತರ ಕಾಪಿನ ಭಟರಿಂದ ಕಪೀಶ್ವರನಾದ ಹನುಮಂತನ ಉಪಟಳವನ್ನು ಕೇಳಿ ತಿಳಿದು ರಾವಣನು ''ಆ ಕಪಿಯನ್ನು ಹಿಡಿದು ತನ್ನಿರಿ'' ಎಂದು ತನ್ನ ಸೇವಕರಿಗೆ ಆಜ್ಞಾಪಿಸಿದನು. ರುದ್ರದೇವರ ವರಬಲದಿಂದ ಮದಿಸಿ ಅವಧ್ಯರಾದ ರಾವಣನ ಸೇವಕರು ಮಹಾಪರಾಕ್ರಮಶಾಲಿಯೂ ವಾಯುಕುಮಾರನೂ ಆದ ಹನುಮಂತನನ್ನು ಸೆರೆಹಿಡಿಯಲು ಎಲ್ಲ ಕಡೆಗಳಿಂದಲೂ ಅವನನ್ನು ಮುತ್ತಿದರು. ಆ ರಕ್ಕಸ ಪಡೆಯಲ್ಲಿ ಎಂಭತ್ತು ಕೋಟಿ ದಳಪತಿಗಳೂ, ಎಂಭತ್ತು ಸಾವಿರ ಕಾಲಾಳುಗಳೂ ಇದ್ದರು. ವಿವಿಧ ಆಯುಧಗಳಿಂದ ಸಜ್ಜಾಗಿದ್ದ ಅವರು ಕಪೀಂದ್ರನಾದ ಹನುಮಂತನನ್ನು ಮುತ್ತಿ ಅವನ ಮೇಲೆರಗಿದರು. ಇಂತು ಬಗೆ ಬಗೆಯ ಆಯುಧಗಳಿಂದ ಯುಕ್ತರಾದ ಅವರು ಹನುಮಂತನನ್ನು ಸುತ್ತುಗಟ್ಟಿ ತಮ್ಮ ಎಲ್ಲ ಬಲಗಳನ್ನೂ ವಿನಿಯೋಗಿಸಿ ವಿವಿಧ ಆಯುಧಗಳಿಂದ ತಾಡನ ಮಾಡಿದರೂ ಹನುಮಂತನ ಕೂದಲು ಕೊಂಕಿಸಲೂ ಅವರು ಸಮರ್ಥರಾಗಲಿಲ್ಲ. ಅನಂತರ ಹನುಮಂತನು ಅವರೆಲ್ಲರನ್ನೂ ಹಿಡಿದು ನೆಲಕ್ಕೆ ಅಪ್ಪಳಿಸಿ ಪುಡಿಪುಡಿ ಮಾಡಿದನು.

ಹನುಮಂತ ಈ ಕೃತಿಯಿಂದ ಕುಪಿತನಾದ ರಾವಣನು ತನ್ನ ಮಂತ್ರಿಗಳ ಮಕ್ಕಳಾದ ಏಳುಜನ ರಾಕ್ಷಸ ವೀರರನ್ನು ಹುರಿದುಂಬಿಸಿ ಕಪಿಯನ್ನು ಹಿಡಿದು ತರಲು ಕಳಿಸಿದನು. ಬ್ರಹ್ಮದೇವರ ವರಬಲದಿಂದ ರಕ್ಷಿತರಾಗಿದ್ದ ಪರ್ವತಗಳಂತಿದ್ದ ಆ ಏಳು ಜನ ರಾಕ್ಷಸರನ್ನು ಹನುಮಂತನು ಮರ್ದಿಸಿದನು. ರುದ್ರದೇವರ ವರಬಲದಿಂದ ಕೊಬ್ಬಿದ್ದ ಶ್ರೇಷ್ಠ ಬಲಶಾಲಿಗಳಾಗಿದ್ದ ಕೆಲ ರಾಕ್ಷಸರು ಹನುಮಂತನನ್ನು ಹಿಡಿಯಲು ಬರಲು ಹನುಮಂತನು ಆ ರಕ್ಕಸರಲ್ಲಿ ಮೂರನೇ ಒಂದು ಭಾಗದ ಜನರನ್ನು ಕೊಂದು ಹಾಕಿದನು. ಹನುಮಂತನ ಎಣೆಯಿಲ್ಲದ ಪರಾಕ್ರಮವನ್ನು ಕೇಳಿ ರಾಕ್ಷಸೇಶ್ವರನಾದ ರಾವಣನು ತನಗೆ ಸಮಾನ ಪರಾಕ್ರಮಿಯಾದ ಅಕ್ಷಕುಮಾರನೆಂಬ ತನ್ನ ಪುತ್ರನಿಗೆ ಹನುಮಂತನನ್ನು ಹಿಡಿದು ತರಲು ಆಜ್ಞಾಪಿಸಿದನು. ಸರ್ವಲೋಕ-ಸಾಕ್ಷಿಯಾದ ಪವನನಂದನನ ಮೇಲೆ ಅಕ್ಷಕುಮಾರನು ಶರವರ್ಷ ಮಾಡಿದುದಲ್ಲದೆ ಮಂತ್ರಾಸ್ತ್ರಗಳನ್ನೂ ಪ್ರಯೋಗಿಸಿದನು. ಆದರೂ ಅವನು ಹನುಮಂತನನ್ನು ಅಲುಗಾಡಿಸಲೂ ಶಕ್ತನಾಗಲಿಲ್ಲ.

ಹನುಮಂತನು ರಾವಣನನ್ನು ಹೋಲುವ ಮಂಡೋದರಿಯ ಮಗನಾದ ಅಕ್ಷಕುಮಾರರನ್ನು ಕಂಡು ಮನದಲ್ಲಿ ಇಂತು ಆಲೋಚಿಸಿದನು-''ರಾವಣನು ವರಬಲ ಮತ್ತು ಆತ್ಮಬಲ ಪರಾಕ್ರಮಗಳಿಂದ ಮೆರೆಯುತ್ತಿರುವನು. ಇಂದ್ರಜಿತ್ತು ಅವನ ದ್ವಿತೀಯಾಂಶನಾಗಿದ್ದಾನೆ. ಈ ಅಕ್ಷಕುಮಾರನು ತನ್ನ ಬಲ ಶೌರ್ಯ ವರಬಲಗಳಲ್ಲಿ ರಾವಣನಿಗೆ ಮೂರನೇ ಅಂಶನಾಗಿರುವನು. ರಾವಣನನ್ನು ಈಗ ನಾನು ಸಂಹರಿಸಿದಲ್ಲಿ ಶ್ರೀರಾಮನ ಸಂಕಲ್ಪವು ಸಫಲವಾಗಲಾರದು. ಆದಕಾರಣ ಈಗ ನಾನು ರಾವಣನನ್ನು ಕೊಲ್ಲದೆ ಬಿಡಬೇಕು. ಇಂದ್ರಜಿತ್ತನ್ನು ವಧಿಸಿದಲ್ಲಿ ಅವನ ಬಲಪರೀಕ್ಷೆ ಮಾಡಿದಂತಾಗು-ವುದಿಲ್ಲವಾದ್ದರಿಂದ ಅವನನ್ನು ಮೀಸಲಿಡಬೇಕು. ಈಗ ರಾವಣ-ಇಂದ್ರಜಿತ್ತುಗಳಿಗೆ ಸರಿಸಾಟಿಯಾದ ಅಕ್ಷಕುಮಾರನನ್ನು ಸಂಹರಿಸಬೇಕು'' ಎಂದಾಲೋಚಿಸಿ ತಕ್ಷಣವೇ ಅಕ್ಷಕುಮಾರನನ್ನು ಕಾಲುಗಳಲ್ಲಿ ಹಿಡಿದು ಕುಪ್ಪಳಿಸಿ ಹಾರಿದನು. ಪವನಸುತನು ಅಕ್ಷಕುಮಾರನನ್ನು ಚಕ್ರಾಕಾರವಾಗಿ ತಿರುಗಿಸಲು ಅವನು ದಿಕ್ಕೆಟ್ಟು ಕಾತರನಾದನು. ಆಗ ಹನುಮಂತನು ಅವನನ್ನು ಮೇಲೆತ್ತಿ ಪುಟಬರುವಂತೆ ನೆಲಕ್ಕೆ ಅಪ್ಪಳಿಸಿದನು. ನೆಲಕ್ಕೆ ಅಪ್ಪಳಿಸಿದ ಅಕ್ಷಕುಮಾರನು ಪುಡಿಪುಡಿಯಾಗಿ ಪ್ರಾಣಬಿಟ್ಟನು. ಈ ದಾರುಣ ವಾರ್ತೆಯನ್ನಾಲಿಸಿದ ರಾವಣನು ದುಃಖದಿಂದ ಕಡುನೊಂದು ಮಾರುತಿಯನ್ನು ಹಿಡಿದುತರಲು ಇಂದ್ರಜಿತ್ತುವಿಗೆ ಅಪ್ಪಣೆ ಮಾಡಿದನು.

ತಂದೆಯ ಆಣತಿಯಂತೆ ಇಂದ್ರಜಿತ್ತು ಮಾರುತಿಯನ್ನು ನೋಯಿಸಲು ದೇವತೆಗಳ ವರದಿಂದ ಲಭಿಸಿದ ಅನೇಕ ಅಸ್ತ್ರಗಳಿಂದ ಕೂಡಿದ ಶರಪುಂಜವನ್ನು ಹನುಮಂತನ ಮೇಲೆ ಪ್ರಯೋಗಿಸಿದನು. ಇಷ್ಟಾದರೂ ಅವನು ಕಪೀಂದ್ರನನ್ನು ಅಲುಗಿಸಲು ಶಕ್ತನಾಗಲಿಲ್ಲ. ಅನಂತರ ಇಂದ್ರಜಿತ್ತು ಯಾರಿಂದಲೂ ಸಹಿಸಲು ಸಾಧ್ಯವಾಗದ ಬ್ರಹ್ಮದೇವರ ಶ್ರೇಷ್ಠವಾದ ಬ್ರಹ್ಮಾಸ್ತ್ರವನ್ನು ಮಾರುತಿಯ ಮೇಲೆ ಪ್ರಯೋಗಿಸಿದನು. ಬ್ರಹ್ಮಾಸ್ತ್ರದಿಂದ ತಾಡಿತನಾದ ಹನುಮಂತನು ವ್ಯಾಕುಲ-ರಹಿತನಾಗಿದ್ದರೂ ಇಂತು ಯೋಚಿಸಹತ್ತಿದನು. ''ಈ ಹಿಂದೆ ನಾನು ಅನೇಕ ಸಲ ಪಿತಾಮಹನ ವರಗಳನ್ನು ಉಲ್ಲಂಘಿಸಿದ್ದೇನೆ! ಈಗ ನಾನು ಬ್ರಹ್ಮದೇವರಿಗೆ ಗೌರವವನ್ನು ಸಲ್ಲಿಸಬೇಕು. ಆದ್ದರಿಂದ ಈ ಬ್ರಹ್ಮಾಸ್ತ್ರವನ್ನು ನಾನೀಗ ಗೌರವಿಸುವೆನು. ಬ್ರಹ್ಮಾಸ್ತ್ರದಿಂದ ನಾನು ಬದ್ಧನಾದರೆ ರಾಕ್ಷಸರು ಆನಂದಿಸುವರು. ಇಷ್ಟಲ್ಲದೆ ಇವರು ನನಗೆ ಮತ್ತೇನು ಮಾಡಬಲ್ಲರು? ಹೀಗೆ ಮಾಡುವುದರಿಂದ ಬ್ರಹ್ಮಾಸ್ತ್ರಕ್ಕೆ ಗೌರವ ಕೊಟ್ಟಂತೆಯೂ ಆಗುವುದು, ರಾವಣನನ್ನು ನೋಡಬೇಕೆಂಬ ನನ್ನ ಉದ್ದೇಶವೂ ಸಫಲವಾಗುವುದು'' ಎಂದು ಚಿಂತಿಸಿ ಹನುಮಂತನು ಬ್ರಹ್ಮಾಸ್ತ್ರಕ್ಕೆ ಸೆರೆ ಸಿಕ್ಕಿದನು.

ಹನುಮಂತನ ಪ್ರಚಂಡ ಪರಾಕ್ರಮವನ್ನೂ, ಅವನ ಮನದಿಂಗಿತವನ್ನೂ ತಿಳಿಯದ ರಕ್ಕಸರು ಅವನು ಸೆರೆ ಸಿಕ್ಕಿದನೆಂದೇ ಭ್ರಮಿಸಿದರು. ಕಮಲಸಂಭವನ ಮೇಲಿನ ಪೂಜ್ಯಭಾವನೆಯಿಂದ ಹನುಮಂತನು ಸೆರೆಸಿಕ್ಕವನಂತೆ ಸುಮ್ಮನೆ ನಿಂತನು. ಅದನ್ನು ಕಂಡ ರಾಕ್ಷಸರು ಹರ್ಷಭರಿತರಾಗಿ ಬ್ರಹ್ಮಾಸ್ತ್ರದಿಂದ ಬದ್ಧನಾಗಿದ್ದ ಹನುಮಂತನನ್ನು ಅಪ್ರಯೋಜಕ ಹಗ್ಗಗಳಿಂದ ಬಿಗಿದು ಕಟ್ಟ ಹತ್ತಿದರು. ಅದು ತನಗೆ ಗೌರವಾದರವಲ್ಲವೆಂದು ತಿಳಿದು ಬ್ರಹ್ಮಾಸ್ತ್ರವು ಸ್ವಯಂ ಮುಕ್ತವಾಗಿ ಮಾಯವಾಯಿತು.

ತರುವಾಯ ಆ ರಕ್ಕಸರು ಹನುಮಂತನನ್ನು ತಮ್ಮೊಡೆಯನಾದ ರಾವಣನ ಬಳಿಗೆ ಕರೆತಂದರು. ಹನುಮಂತನನ್ನು ನೋಡಿ ದಶಕಂಧರನು ''ಎಲವೆಲವೋ ಕಪಿಯೇ! ನಿನ್ನ ಊರಾವುದು? ಯಾರ ಕಡೆಯವನು? ಇಂತು ಅಶೋಕವನಧ್ವಂಸ, ರಾಕ್ಷಸ ಸಂಹಾರಾದಿಗಳನ್ನೇಕೆ ಮಾಡಿದೆ?'' ಎಂದು ಪ್ರಶ್ನಿಸಲು ಜಗದೀಶ್ವರನಾದ ಶ್ರೀರಾಮಪ್ರಭುವಿಗೆ ಅಭಿವಂದಿಸಿ ಹನುಮಂತನಿಂತೆಂದನು-''ಎಲವೋ ರಾಕ್ಷಸಾಧಮ! ನಾನಾರೆಂಬುದನ್ನು ಕೇಳು. ರಘುಕುಲದೀಪಕನೂ ಅಸದೃಶ ಪರಾಕ್ರಮಶಾಲಿಯೂ ಆದ ಶ್ರೀರಾಮಚಂದ್ರನಿಗೆ ನಾನು ದಾಸನು. ಅವನ ದೂತನಾಗಿ ಬಂದಿರುವೆನು. ನಾನು ಪವನನಂದನನು. ಒಬ್ಬರೂ ಉಳಿಯದಂತೆ ನಿನ್ನ ಕುಲವನ್ನೇ ನಾನು ನಾಶಮಾಡಲು ಸಮರ್ಥನು! ಶೀಘ್ರವಾಗಿ ನೀನು ರಘುಕುಲಲಲಾಮನಾದ ಶ್ರೀರಾಮನ ಪ್ರಿಯಳನ್ನು ಅವನಿಗೆ ಸಮರ್ಪಿಸದಿದ್ದೊಡೆ ನೀನು ಪುತ್ರ, ಮಿತ್ರ, ಬಾಂಧವರೊಡನೆ ಸಮೂಲವಾಗಿ ನಾಶವಾಗುತ್ತೀಯೇ! ಶ್ರೀರಾಮಚಂದ್ರನ ಬಾಣದ ವೇಗವನ್ನು ಸಹಿಸಲು ಬ್ರಹ್ಮರುದ್ರಾದಿ ದೇವತೆಗಳೇ ಅಸಮರ್ಥರಾಗಿರಲು ಕೇವಲ ಹುಲ್ಲಿನಂತೆ ಅಲ್ಪನಾದ ನೀನೆಂತು ತಡೆಯಬಲ್ಲೆ? ಅಂಚಿಂತ್ಯಾದ್ಭುತಶಕ್ತನಾದ ಆ ಮಹಾಪ್ರಭುವಿಗೆ ಕೋಪಬರುವಂತೆ ಮಾಡಿ ಸುರರು, ಅಸುರರು, ಉರುಗರೇ ಮುಂತಾದ ಯಾರೇ ಆಗಲಿ ಅವನೆದುರು ನಿಲ್ಲಲು ಸಮರ್ಥರಾಗಬಲ್ಲರೆ? ಆದ್ದರಿಂದ ಇದೆಂದಿಗೂ ನಿನ್ನಿಂದಾಗದ ಕಾರ್ಯ''.

ಹನುಮಂತನ ಮಾತನ್ನಾಲಿಸಿದ ರಾವಣನು ಕಡುಕೋಪದಿಂದ ಅವನನ್ನು ಸಂಹಾರಮಾಡಲುದ್ಯುಕ್ತನಾದನು. ಆಗ ರಾವಣನ ತಮ್ಮನಾದ ವಿಭೀಷಣನು ದೂತರನ್ನು ವಧಿಸಬಾರದೆಂದು ತಡೆದನು. ಆಗ ಹನುಮಂತನ ಬಾಲವನ್ನು ಸುಡುವಂತೆ ರಾಕ್ಷಸರಿಗೆ ಆಜ್ಞಾಪಿಸಿದನು. ಅನೇಕ ವಸ್ತ್ರಗಳ ಸಮೂಹದಿಂದ ಹನುಮಂತನ ಬಾಲವನ್ನು ಸುತ್ತಿ ರಾಕ್ಷಸರು ಅದಕ್ಕೆ ಬೆಂಕಿ ಹಚ್ಚಿದರು. ಆದರೆ ವಾಯುದೇವನ ಗೆಳೆಯನಾದ ಅಗ್ನಿದೇವನು ಹನುಮಂತನಿಗೆ ದಹಿಸದಂತೆ ತಂಪಾಗಿದ್ದನು.

ಯಾವನು ನಿಸ್ಸೀಮ ಪರಾಕ್ರಮಿಯೋ ಯಾರ ಹೆಸರನ್ನು ಕೇಳಿದರೆ ಬೇನೆ ಬೇಸರಿಕೆಗಳು ದೂರ ಓಡುವವೋ ಅಂಥ ಶ್ರೀ ಹನುಮಂತನನ್ನು ರಕ್ಕಸರ ಈ ದಾಳಿಯು ಅದೇನು ತಾನೆ ಮಾಡಬಲ್ಲುದು? ಆದುದರಿಂದಲೇ ಹನುಮಂತನು ರಕ್ಕಸರ ಈ ಹಿಂಸೆಯನ್ನು ಮನಸ್ಸಿಗೆ ತಾರದೆ ಕ್ಷಮಿಸಿದನು. ಹನುಮಂತನು ಬಾಲದ ಬೆಂಕಿಯನ್ನು ನೋಡಿ ಕುತೂಹಲದಿಂದ ಅದರಿಂದ ಆ ಲಂಕಾಪುರಿಯನ್ನು ದಹಿಸಬಯಸಿದನು. ತರುವಾಯ ಅವನು ಬಾಲಕ್ಕೆ ಹತ್ತಿದ ಬೆಂಕಿಯಿಂದ ಲಂಕಾಪುರವನ್ನೆಲ್ಲಾ ಸುಟ್ಟುಹಾಕಿದನು. ಅವನಿಗಿದೊಂದು ಮಹತ್ಕಾರ್ಯವಲ್ಲ. ಜಗತ್ತಿನ ಸಕಲ ವ್ಯಾಪಾರಗಳೂ ಅದಾರ ಪ್ರೇರಣೆಯಿಂದ ನೆರವೇರುವವೋ ಅಂಥವನಿಗೆ ಯಾವುದು ತಾನೆ ಅಸಾಧ್ಯವಾದೀತು? ಇಂತಹ ಮಹಾಮಹಿಮನಾದ ವಾಯುಕುಮಾರನ ತೇಜಸ್ಸಿನಿಂದ ಆ ಲಂಕಾಪುರಿಯು ಭಸ್ಮವಾಯಿತು. ಸುವರ್ಣ ನವರತ್ನಗಳಿಂದ ಅಂದವಾಗಿ ನಿರ್ಮಿಸಿದ್ದ ಆ ಲಂಕಾ ಪಟ್ಟಣವನ್ನು ರಾಕ್ಷಸೋತ್ತಮರು, ಪ್ರಧಾನರೂ ಆದ ರಕ್ಕಸರ ಸಹಿತವಾಗಿ ಉರಿಸಿ, ಅದು ಧಗಧಗನೆ ಉರಿಯುತ್ತಿರುವುದನ್ನು ಕಂಡು ಆನಂದದಿಂದ ಸಿಂಹಗರ್ಜನೆ ಮಾಡಿದನು. ಹನುಮಂತನು ಪುತ್ರರಿಂದೊಡಗೂಡಿದ ರಾವಣನನ್ನು ತೃಣಪ್ರಾಯವಾಗಿ ಮಾಡಿ ಅವರು ನೋಡುತ್ತಿರುವಂತೆಯೇ ನಗರವನ್ನು ಭಸ್ಮ ಮಾಡಿ ಹೊರಟನು.

ಆನಂತರ ಹನುಮಂತನು ಮತ್ತೆ ಸಮುದ್ರವನ್ನು ದಾಟಿ ಜಾಂಬುವಂತ, ಅಂಗದ, ನಳ, ನೀಲ, ಸುಷೇಣ, ವಿವಿದ, ಮೈಂದ, ತಾರ ಮೊದಲಾದ ಕಪಿವೀರರಿದ್ದೆಡೆಗೆ ಬಂದು ಅವರು ಸಲ್ಲಿಸಿದ ಪೂಜೆಯನ್ನು ಸ್ವೀಕರಿಸಿ, ಕಪಿಗಳಿಗೆ ದೊರೆಯಾದ ಸುಗ್ರೀವನ ಮಧುವನಕ್ಕೆ ಹೋಗಿ ಮನತಣಿಯುವಂತೆ ಮಧುಪಾನ ಮಾಡಿ ಶ್ರೀರಾಮಪ್ರಭುವಿನ ಸನ್ನಿಧಿಗೆ ಹೋದನು.

ಸಕಲ ದೇವತೆಗಳಿಗೆ ಸ್ವಾಮಿಯಾದ, ಅಗಣಿತ ಗುಣಗಳಿಂದ ಭಕ್ತಜನರ ಹೃದಯವನ್ನಾಕರ್ಷಿಸಿ ಆನಂದವೀಯುವ ತನ್ನೊಡೆಯನಾದ ಶ್ರೀರಾಮಚಂದ್ರನ ಬಳಿಗೆ ಹನುಮಂತನು ಸಕಲ ಕಪಿವೀರರಿಂದೊಡಗೂಡಿ ಹೋಗಿ ಸೀತಾದೇವಿಯು ಕೊಟ್ಟ ಚೂಡಾಮಣಿಯನ್ನು ಅವನ ಚರಣಗಳಲ್ಲಿ ಸಮರ್ಪಿಸಿ ಭಕ್ತಿಭರದಿಂದ ನಮಸ್ಕರಿಸಿದನು. ಸಂತೋಷಭರಿತನಾದ ಶ್ರೀರಾಮಚಂದ್ರನು ಅತಿ ಭಕ್ತಿಭರಿತನಾದ ಪವನನಂದನನಿಗೆ ಯಾವ ರೀತಿ, ಏನನ್ನು ನೀಡಿ ಅನುಗ್ರಹಿಸಲಿ? ಎಂದು ಯೋಚಿಸಿ ಅವನಿಗೆ ತಕ್ಕುದಾದುದು ಯಾವುದೂ ಇಲ್ಲವೆಂದರಿತು ತನ್ನ ಅಪ್ರಾಕೃತ ದೇಹಾಲಿಂಗನರೂಪ ಅನುಗ್ರಹವೇ ಹನುಮಂತನಿಗೆ ಯುಕ್ತವೆಂದು ನಿಶ್ಚಯಿಸಿ ಹನುವಂತನನ್ನು ಪ್ರೇಮಭರದಿಂದಾಲಿಂಗಿಸಿಕೊಂಡು ಅನುಗ್ರಹಿಸಿದನು.

ಹೀಗೆ ಶ್ರೀಮದಾಚಾರ್ಯರು ''ಮಹಾಭಾರತ ತಾತ್ಪರ್ಯ ನಿರ್ಣಯ''ದಲ್ಲಿ ವಿಸ್ತಾರವಾಗಿ ನಿರೂಪಿಸಿದ ''ಶ್ರೀಹನುಮದ್ದರ್ಶನ'' (ಹನುಮತ್ಪ್ರತಿಯಾನ)ವೆಂಬ ಏಳನೆಯ ಅಧ್ಯಾಯಾರ್ಥವನ್ನು ಶ್ರೀಗುರುರಾಜರು ''ಯಸ್ಯ'' ಎಂಬ ಪದ್ಯದಿಂದ ಸಂಗ್ರಹಿಸಿ ಅನುಗ್ರಹಿಸಿದ್ದಾರೆ.

***ಮಹಾಭಾರತ ತಾತ್ಪರ್ಯ ನಿರ್ಣಯದ ಏಳನೆಯ ಅಧ್ಯಾಯದ ಕಥಾಸಂಗ್ರಹವು ಮುಗಿದುದು.***

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★

## ಅಷ್ಟಮಾಧ್ಯಾಯಭಾವಸಂಗ್ರಹ

*ಅವತಾರಿಕೆ:-*

ಶ್ರೀಗುರುಸಾರ್ವಭೌಮರು ಮಹಾಭಾರತ ತಾತ್ಪರ್ಯ ನಿರ್ಣಯದ ಎಂಟನೆಯ ಅಧ್ಯಾಯಾರ್ಥವನ್ನು ''ಸಿಂಧುಂ ದಕ್ಷಿಣಮಾಗತೋ'' ಎಂಬ ಪದ್ಯದಿಂದ ಸಂಗ್ರಹಿಸುತ್ತಾರೆ.

**ಸಿಂಧುಂ ದಕ್ಷಿಣಮಾಗತೋ ದಶಮುಖಭ್ರಾತ್ರಿಷ್ಟದೋಽಭ್ಯರ್ಥಿತೋ**

**ಬದ್ಧ್ವಾ ಸೇತುಮವಾಪ್ಯ ರಾಕ್ಷಸಪುರೀಂ ಸೈನ್ಯೈಃ ಕಪೀನಾಂ ಯುತಃ ।**

**ಹತ್ವೇಂದ್ರಾರಿಕರೀರಕರ್ಣದಶಕಾದೀನ್ ರಾಕ್ಷಸಾನ್ ಜಾನಕೀ-**

**ಮಾದಾಯಾಪ್ಯ ಪುರೀಂ ಸ್ವರಾಜ್ಯಪದವೀಂ ಪ್ರಾಪ್ತೋಽವತಾದ್ ರಾಘವಃ ॥ 8 ॥**

***ಅನ್ವಯಾರ್ಥ:-*** **ಯಃ** = ಯಾವ ಶ್ರೀರಾಮಚಂದ್ರನು, **ದಕ್ಷಿಣಂಸಿಂಧುಂ** = ದಕ್ಷಿಣಸಮುದ್ರಕ್ಕೆ, **ಆಗತಃ** = ಪ್ರಾಪ್ತನಾಗಿ, **ದಶಮುಖಭ್ರಾತ್ರಿಷ್ಟದಃ** = ರಾವಣನ ಅನುಜನಾದ ವಿಭೀಷಣನ ಇಷ್ಟವನ್ನು ಪೂರ್ಣಮಾಡಿ, **ಅಭ್ಯರ್ಥಿತಃ** (ಸಿಂಧುನೇತಿ ಶೇಷಃ) = ಸಮುದ್ರರಾಜನಿಂದ ಪ್ರಾರ್ಥಿತನಾಗಿ, **ಸೇತುಂ ಬದ್ಧ್ವಾ** = ಸೇತುಬಂಧನಮಾಡಿ, **ರಾಕ್ಷಸಪುರೀಂ** = ಲಂಕಾಪಟ್ಟಣವನ್ನು, **ಆಪ್ಯ** = ಸೇರಿ (ಹೊಂದಿ), **ಕಪೀನಾಂಸೈನ್ಯೈಃ** = ವಾನರಸೇನೆಗಳಿಂದ, **ಯುತಃ ಸನ್** = ಯುಕ್ತನಾಗಿ, **ಇಂದ್ರಾರಿಕರೀರಕರ್ಣದಶಕಾದೀನ್** - **ಇಂದ್ರಾರಿ** = ದೇವೇಂದ್ರನ ರಿಪುವಾದ ಇಂದ್ರಜಿತ್ತು, **ಕರೀರಕರ್ಣ** = ಕುಂಭಕರ್ಣ, **ದಶಕಾದೀನ್** = ದಶಕಂಠನಾದ ರಾವಣನೇ ಮೊದಲಾದ, **ರಾಕ್ಷಸಾನ್** = ರಕ್ಕಸರನ್ನು, **ಹತ್ವಾ** = ಸಂಹಾರ ಮಾಡಿ. **ಜಾನಕೀಂ** = ಸೀತಾಕೃತಿಯನ್ನು, **ಆದಾಯ** = ಕರೆದುಕೊಂಡು, **ಪುರೀಂ** = ಅಯೋಧ್ಯಾ ಪಟ್ಟಣವನ್ನು, **ಆಪ್ಯ** = ಹೊಂದಿ (ಸೇರಿ), **ಸ್ವರಾಜ್ಯಪದವೀಂ ಪ್ರಾಪ್ತಃ** = ತನ್ನದಾದ ಅಯೋಧ್ಯಾರಾಜ್ಯಸಿಂಹಾಸನದಲ್ಲಿ ಪಟ್ಟಾಭಿಷಿಕ್ತನಾದನೋ, **ರಾಘವಃ** = ಅಂಥ ಶ್ರೀರಾಮಚಂದ್ರ ಪ್ರಭುವು, **ಅವತಾತ್** = ನಮ್ಮನ್ನು ರಕ್ಷಣೆಮಾಡಲಿ.

**ತಾತ್ಪರ್ಯ :-** ಅನಂತರ ಶ್ರೀರಾಮಚಂದ್ರನು ದಕ್ಷಿಣ ಸಮುದ್ರಕ್ಕೆ ಬಂದು ಅಲ್ಲಿಗೆ ತನಗೆ ಶರಣಾಗತನಾಗಿಬಂದ ರಾವಣನ ಸಹೋದರನಾದ ವಿಭೀಷಣನನ್ನು ಮಿತ್ರನನ್ನಾಗಿ ಸ್ವೀಕರಿಸಿ ಅವನ ಇಷ್ಟವನ್ನು ಪೂರ್ಣಮಾಡಿ ಸಮುದ್ರರಾಜನ ಪ್ರಾರ್ಥನೆಯಂತೆ ಸೇತುಬಂಧನಮಾಡಿ ಕಪಿಸೈನ್ಯಗಳಿಂದ ಯುಕ್ತನಾಗಿ ಲಂಕಾಪಟ್ಟಣವನ್ನು ತಲುಪಿ, ಕಪಿಸೇನೆಯೊಡನೆ ಸೇರಿ ಯುದ್ಧ ಮಾಡಿ ಇಂದ್ರಜಿತ್ತು, ಕುಂಭಕರ್ಣ, ರಾವಣನೇ ಮೊದಲಾದ ಸಮಸ್ತ ರಾಕ್ಷಸರನ್ನು ಸಂಹಾರ ಮಾಡಿ, ಸೀತಾ-ಕೃತಿಯನ್ನು ಕರೆದುಕೊಂಡು ಅಯೋಧ್ಯಾ ಪಟ್ಟಣಕ್ಕೆ ದಯಮಾಡಿಸಿ ಸಾಮ್ರಾಜ್ಯಸಿಂಹಾಸನದಲ್ಲಿ ಪಟ್ಟಾಭಿಷಿಕ್ತನಾದನು. ಇಂಥ ಶ್ರೀರಘುಪತಿಯು ನಮನ್ನು ಕಾಪಾಡಲಿ ಎಂದು ಭಾವ.

## ಅಷ್ಟಮಾಧ್ಯಾಯ ಕಥಾಸಂಗ್ರಹ

ಶ್ರೀರಾಮಚಂದ್ರನು ಹನುಮಂತದೇವರ ಮಾತನ್ನಾಲಿಸಿ ಪರಮಪ್ರೀತಿಯಿಂದ ಅವನೆಸಗಿದ ಕಾರ್ಯಕಲಾಪಗಳನ್ನು ಮೆಚ್ಚಿ ಲಂಕೆಗೆ ಹೊರಡಲು ನಿಶ್ಚಯಿಸಿ ಪವನನಂದನನ ಹೆಗಲೇರಿ ಕುಳಿತು ಪಯಣ ಬೆಳೆಸಿದನು. ಶ್ರೀಹನುಮಂತನನ್ನು ಅನುಸರಿಸಿ ಅಂಗದ, ಲಕ್ಷ್ಮಣ, ಸುಗ್ರೀವ ಮತ್ತು ವಾನರ ಸೈನ್ಯಗಳು ಹೊರಟಿತು. ವಾನರಚಮೂಸಹಿತನಾಗಿ ದಕ್ಷಿಣ ಸಮುದ್ರದ ದಂಡೆಗೆ ಬಂದ ಶ್ರೀರಾಮನು ತಾನು ಲೋಕಗುರುವಾಗಿದ್ದರೂ, ಮತ್ತೊಬ್ಬರಿಂದ ಸಹಿಸಲಳವಲ್ಲದ ಮಹಾಶಕ್ತಿ

ಸಂಪನ್ನನಾಗಿದ್ದರೂ, ನ್ಯಾಯ, ಧರ್ಮ, ನೀತಿಮಾರ್ಗವನ್ನು ಜಗತ್ತಿಗೆ ತೋರಿಸಿಕೊಡಲು, ಸಮುದ್ರದಾಟಲು ಸಮುದ್ರರಾಜನ ಒಪ್ಪಿಗೆಗಾಗಿ ಕಾದಿರುವನೋ ಎಂಬಂತೆ ಅವನ ಆಗಮನವನ್ನು ನಿರೀಕ್ಷಿಸುತ್ತಿದ್ದು, ಸಮುದ್ರರಾಜನ ಭಕ್ತಿಯ ಪೂಜೆಯನ್ನು ಸ್ವೀಕರಿಸಿ, ಅವನ ಒಪ್ಪಿಗೆಯಂತೆ ಸಮುದ್ರವನ್ನು ದಾಟಲು ನಿಶ್ಚಯಿಸಿದನು. ಅದೇ ಸಮಯಕ್ಕೆ ರಾಕ್ಷಸೇಂದ್ರನಾದ ರಾವಣನಿಂದ ಪರಿತ್ಯಕ್ತನಾದ, ರಾವಣಾನುಜನಾದ ವಿಭೀಷಣನು ಧರ್ಮರತನಾಗಿ, ಭಕ್ತನಾಗಿ ಶ್ರೀರಾಮನಿಗೆ ಶರಣಾಗತನಾಗಿ ಅವನ ಬಳಿಗೆ ಬಂದು ಸೇರಿದನು. ಅದನ್ನು ಕಂಡ ಬ್ರಹ್ಮದೇವರ ಪುತ್ರನಾದ ಜಾಂಬವಂತ, ಸೂರ್ಯಕುವರ ಸುಗ್ರೀವ, ವಾನರಚಮೂನಾಯಕ ನಳ, ಮತ್ತು ಮೈಂದ, ವಿವಿದ, ಅಂಗದ, ತಾರ ಮೊದಲಾದ ಕಪಿವೀರರು ಶತ್ರುವಾದ ರಾವಣನ ಸಹೋದರನಾದ ವಿಭೀಷಣನು, ಶತ್ರುವಿನ ಕಡೆಯಿಂದ ಬಂದಿರುವುದರಿಂದ ಅವನನ್ನು ತಮ್ಮ ಕಡೆ ಸೇರಿಸಿಕೊಳ್ಳುವುದು ಉಚಿತವಲ್ಲವೆಂದು ಹೇಳಿದರು. ಅನಂತರ ಬಲದೇವನಾದ ಪವಮಾನಾವತಾರಿಯಾದ ಹನುಮಂತನು, ಶ್ರೀರಾಮನಿಗೆ ಅಪಕೃತಿಯನ್ನೆಸಗಿರುವ ರಾವಣನ ಅಳಿವು ನಿಶ್ಚಿತವೆಂದು ತಿಳಿದು ''ರಾವಣನಿಂದ ತ್ಯಕ್ತನಾಗಿ ವಿಭೀಷಣನು ಲಂಕೆಯ ಅಧಿಪತ್ಯವನ್ನು ಬಯಸಿ ಶ್ರೀರಾಮನಿಗೆ ಭಕ್ತಿಯಿಂದ ಶರಣಾಗತನಾಗಿ ಬಂದಿದ್ದಾನೆ. ಆದ್ದರಿಂದ ವಿಭೀಷಣನನ್ನು ಖಂಡಿತವಾಗಿ ನಾವು ಸ್ವೀಕರಿಸಬೇಕು'' ಎಂದು ವಿಜ್ಞಾಪಿಸಿದನು. ಶ್ರೀರಾಮಪ್ರಭುವು ಹನುಮಂತನ ವಚನವನ್ನಾಲಿಸಿ, ಅವನ ವಚನವನ್ನು ಅಂಗೀಕರಿಸಿ ''ಹಿಂದೆ ವಾಯುನಂದನನ ಮಾತಿನಂತೆ ಸುಗ್ರೀವನನ್ನು ಮಿತ್ರನನ್ನಾಗಿ ಸ್ವೀಕರಿಸಿದಂತೆ ಶರಣಾಗತನಾಗಿ ಬಂದಿರುವ ಈ ವಿಭೀಷಣನನ್ನು ಮಿತ್ರನನ್ನಾಗಿ ಸ್ವೀಕರಿಸುವೆನು. ಶರಣಾಗತರನ್ನು ಪರಿಗ್ರಹಿಸಿ ರಕ್ಷಿಸುವುದೇ ನನ್ನ ವ್ರತವಾಗಿದೆ. ಬ್ರಹ್ಮರುದ್ರಾದಿ ಸಕಲ ದೇವತೆಗಳು, ದೈತ್ಯರು, ಮಾನವರೇ ಮೊದಲಾದವರೆಲ್ಲರೂ ಒಂದಾಗಿ ಸೇರಿ ಬಂದರೂ ಅವರು ನನ್ನ ಕಿರುಬೆರಳನ್ನೂ ಅಲುಗಿಸಲು ಅಶಕ್ತರಾಗಿರಲು ಪಾಪ, ಒಬ್ಬ ರಾಕ್ಷಸನಾದ ಈ ವಿಭೀಷಣನಿಂದ ನನಗೇನಾದೀತು? ಇವನಾದರೋ ಪವಿತ್ರ ಸ್ವಭಾವದವನೆಂದು ನಾನು ಚೆನ್ನಾಗಿಬಲ್ಲೆ. ಆದ್ದರಿಂದ ಇವನನ್ನು ನಾನು ಸ್ವೀಕರಿಸುತ್ತೇನೆ'' ಹೀಗೆ ಹೇಳಿ ಅಚಿಂತ್ಯಾದ್ಭುತಶಕ್ತನಾದ ಶ್ರೀರಾಮನು ವಿಭೀಷಣನನ್ನು ತನ್ನ ಉತ್ತಮಭಕ್ತನನ್ನಾಗಿ ಪರಿಗ್ರಹಿಸಿ, ರಾಕ್ಷಸೇಶ್ವರನೂ, ಸಾತ್ವಿಕರಿಗೆ ಯಮಸದೃಶನೂ ಆದ ರಾವಣನನ್ನು ತೃಣಪ್ರಾಯವಾಗಿ ಕಂಡು, ವಿಭೀಷಣನಿಗೆ ಲಂಕಾಧಿಪತ್ಯವನ್ನು ಕರುಣಿಸಿ ಪಟ್ಟಾಭಿಷೇಕ ಮಾಡಿದನು. ಶ್ರೀರಾಮನು ವಿಭೀಷಣನಿಗೆ ಕಲ್ಪಾಂತಸ್ಥಾಯಿಯಾದ ರಾಕ್ಷಸ ಸಾಮ್ರಾಜ್ಯವನ್ನೂ, ಅಷ್ಟು ಕಾಲ ಜೀವಿಸಲು ಚಿರಂಜೀವಿ ಪಟ್ಟವನ್ನೂ ಅನಂತರ ಮೋಕ್ಷಪದವನ್ನೂ ಅನುಗ್ರಹಿಸಿದನು.

ತರುವಾಯ ಸಮುದ್ರದಂಡೆಯಲ್ಲಿ ಮೂರುರಾತ್ರಿ ಸಮುದ್ರರಾಜನಿಗಾಗಿ ಕಾದು ಕುಳಿತರೂ ಅವನು ಬಾರದಿರಲು ಅವನ ಮೇಲೆ ಶ್ರೀರಾಮನಿಗೆ ಮೇರೆ ಮೀರಿದ ಕ್ರೋಧವುಂಟಾಯಿತು. ರಾಮನ ನೇತ್ರಗಳು ಕೆಂಡದಂತೆ ಕೆಂಪಗೆ ಹೊಳೆಯಹತ್ತಿದವು. ಕೂಡಲೇ ಶ್ರೀರಾಮನು ಬಾಣದಂತೆ ತೀಕ್ಷ್ಣವಾದ ತನ್ನ ಉರಿಗಣ್ಣಿನ ನೋಟವನ್ನು ಸಮುದ್ರರಾಜನ ಮೇಲೆ ಪ್ರಯೋಗಿಸಿದನು. ಶ್ರೀರಾಮನ ಕ್ರೋಧೋದ್ದೀಪ್ತ ಮುಂಗಣ್ಣಿನ ಆಘಾತದಿಂದ ಬಳಲಿದ ಸಮುದ್ರ ರಾಜನು ಬತ್ತ ಹತ್ತಿದನು. ದಾನವರೇ ಮೊದಲಾದವರ ಸತ್ವವನ್ನು ಪಡೆದ ಸಮುದ್ರರಾಜನು ಕೂಡಲೇ ಸಾಕ್ಷಾತ್ತಾಗಿ ಪೂಜಾಸಲಕರಣೆಗಳನ್ನು ಶಿರದಲ್ಲಿ ಹೊತ್ತು ಭರದಿಂದ ಶ್ರೀರಾಮನ ಚರಣಕಮಲದೆಡೆಗೆ ನಡೆತಂದು ವಿನಯದಿಂದ ಇಂತು ವಿಜ್ಞಾಪಿಸಿದನು.

''ಮಹಾಪ್ರಭು! ನೀನು ಪೂರ್ಣನು, ರಮಾದೇವಿಯಲ್ಲಿ ನೆಲೆಸಿರುವೆ, ಸೃಷ್ಟಿಗೂ ಮೊದಲಿದ್ದ ನೀನು ಆದಿಪುರುಷನು. ಈ ಚತುರ್ದಶಲೋಕಗಳಿಗೂ ನೀನು ಸ್ವಾಮಿಯಾಗಿರುವೆ. ನಾವು ಮಂದಮತಿಗಳು. ಸತ್ವಗುಣದಿಂದ ದಿವಿಜಾಂಗಣವನ್ನೂ, ರಜೋಗುಣದಿಂದ ಮನುಷ್ಯರನ್ನೂ, ಮೂರನೆಯ ತಮೋಗುಣದಿಂದ ಅಸುರಾನೀಕವನ್ನೂ ನೀನು ಸೃಜಿಸಿರುವೆ. ಇಂತು ಮಹಾಮಹಿಮನಾದ ನಿನ್ನನ್ನು ನಾನರಿಯಬಲ್ಲೆನೆ? ಪ್ರಭು! ನಿನ್ನಿಷ್ಟ ಬಂದಂತೆ ಪ್ರಯಾಣ ಬೆಳೆಸು. ಉದಾರಚರಿತವಾದ ವಿಶ್ರವಸರಿಗೆ ಪುತ್ರನಾಗಲು ಯೋಗ್ಯನಲ್ಲದ ರಾವಣನು ಅವರ ಕಲ್ಮಶದಂತೆ ಹೊರಬಿದ್ದಿರುವನು. ಮೂರುಲೋಕದ ಕಣ್ಣೀರಿಗೆ

ಕಾರಣನೂ, ಭಯಂಕರನೂ ಆದ್ದರಿಂದ ರಾವಣನೆನಿಸಿದ ಆ ದುರಾತ್ಮನನ್ನು ಸಂಹರಿಸಿ ವೀರಪತ್ನಿಯಾದ ಸೀತಾಮಾತೆಯನ್ನು ಪರಿಗ್ರಹಿಸು. ಸಮುದ್ರಕ್ಕೆ ಸೇತುವೆ ಕಟ್ಟಿಸು. ವಿಸ್ತಾರವಾದ ನಿನ್ನ ಕೀರ್ತಿಯನ್ನು ಕಂಡು ಮುಗ್ಧರಾಗಿ ದೇವತೆಗಳು ನಿನ್ನನ್ನು ಕೊಂಡಾಡುವರು. ದಿಗ್ವಿಜಯಿಯಾದ ನಿನ್ನ ಬಳಿ ಬಂದು ರಾಜನ್ಯರು ನಿನ್ನ ಯಶಸ್ಸನ್ನು ಗಾನ ಮಾಡುವರು''. ಹೀಗೆ ಬಿನ್ನವಿಸಿದ ಸಮುದ್ರರಾಜನಲ್ಲಿ ಅನುಗ್ರಹಮಾಡಿ ಶ್ರೀರಾಮನು ಅವನಮೇಲೆ ಪ್ರಯೋಗಿಸಲು ತೊಟ್ಟಿದ್ದ ಬಾಣವನ್ನು ರುದ್ರದೇವರ ವರಬಲದಿಂದ ಅವಧ್ಯರೂ ಅಜೇಯರೂ ಆಗಿದ್ದ; ಸಮುದ್ರದಿಂದ ಮೇಲೆದ್ದು ಬಂದ ಕ್ರೂರ ರಾಕ್ಷಸರ ಮೇಲೆ ಬಿಟ್ಟು ತತ್‌ಕ್ಷಣವೇ ಸಕಲರನ್ನೂ ಭಸ್ಮ ಮಾಡಿದನು. ಬಳಿಕ ದಕ್ಷಿಣ ಸಮುದ್ರ ದಡದ ಮರಳುಭೂಮಿಯಲ್ಲಿ ಬೆಳೆದಿದ್ದ ಕಂಟಕಗಳನ್ನು ಕಡಿಸಿ, ಅಲ್ಲಿ ಕಂದಮೂಲ ಫಲಗಳು ಬೆಳೆಯುವಂತೆ ಅನುಗ್ರಹಿಸಿದನು. ಭವರೋಗಹರನಾದ ಶ್ರೀರಾಮನ ಪ್ರತಿಯೊಂದು ಲೀಲೆಯೂ ಅಮೋಘವಾದುದು. ಅಂತಹವನಿಗೆ ಈ ಕಾರ್ಯವು ಗಹನವಾದೀತೇ?

ಅನಂತರ ಶ್ರೀರಾಮನು ವಿಶ್ವಕರ್ಮನ ಅವತಾರನೂ, ಅವನ ಪುತ್ರನೂ ಆದ ನಳನಿಗೂ ಇತರ ವಾನರರಿಗೂ ಸಮುದ್ರಕ್ಕೆ ಸೇತುವೆಯನ್ನು ಕಟ್ಟಲು ಅಪ್ಪಣೆ ಮಾಡಿದನು. ವಿವಿಧ ಪರ್ವತಗಳಲ್ಲಿದ್ದ ಕೋಡುಗಲ್ಲುಗಳೇ ಮೊದಲಾದುವನ್ನು ಕೀಳಿಸಿ ತರಿಸಿ ವಾನರರಿಂದ ಸೇತುವೆಯನ್ನು ಕಟ್ಟಿಸಿ ರಘುಪತಿಯು ಸುಗ್ರೀವ, ನೀಲ, ಹನುಮಂತ ಮೊದಲಾದ ಸೇನಾಸಮೂಹದೊಡನೆ ಸಮುದ್ರವನ್ನು ದಾಟಿ, ವಿಭೀಷಣನು ತೋರಿದ ಹಾದಿಯಲ್ಲಿ ಭಸ್ಮವಾಗಿದ್ದ ಲಂಕಾಪಟ್ಟಣವನ್ನು ಪ್ರವೇಶಿಸಿದನು. ಭುವನೈಕಸಾರನೂ, ಪರಮನೂ, ಅಪ್ರತಿಹತ ಪರಾಕ್ರಮಿಯೂ, ನಾಶರಹಿತನೂ ಆದ ಶ್ರೀರಾಮಚಂದ್ರನು ಲಂಕೆಗೆ ಬಂದನು. ಈ ವಾರ್ತೆಯನ್ನು ಕೇಳಿ ರಾವಣನು ಭಯದಿಂದ ಧೃತಿಗೆಟ್ಟನು. ಅವನ ಹೃದಯ ತಳಮಳಿಸಿತು. ಮುಂದೇನು ಮಾಡಬೇಕೆಂದು ತಿಳಿಯದ ರಾವಣನ ಮನದಲ್ಲಿ ಕತ್ತಲೆ ಕವಿಯಿತು. ಉದಾರಚರಿತನಾದ ಶ್ರೀರಾಮನು ತರುವಾಯ ಅಂಗದನನ್ನು ರಾಯಭಾರಿಯಾಗಿ ರಾವಣನ ಬಳಿಗೆ ಸಂಧಾನಕ್ಕೆ ಕಳುಹಿದನು. ಅದಕ್ಕೆ ರಾವಣನು ಒಪ್ಪದಿರಲು ಸರ್ವೋತ್ತಮನಾದ ಶ್ರೀರಾಮನು ಎಲ್ಲ ಬಗೆಯಿಂದ ಪರಿಪೂರ್ಣವಾಗಿದ್ದ ತನ್ನ ಸೇನೆಯಿಂದ ನಾಲ್ಕೂ ನಿಟ್ಟಿನಿಂದ ಲಂಕೆಯನ್ನು ಮುತ್ತಿ ಯುದ್ಧ ಸನ್ನದ್ಧನಾದನು. ಅದೇ ವೇಳೆಗೆ ರಾವಣನು ತನ್ನ ಪುತ್ರನಾದ ಇಂದ್ರಜಿತ್ತುವನ್ನು ಪಶ್ಚಿಮ ಕೋಟೆಯ ಕಡೆಗೂ, ಮಂತ್ರಿಯಾದ ಪ್ರಹಸ್ತನನ್ನು ಪೂರ್ವಕ್ಕೂ ವಜ್ರದಂಷ್ಟ್ರನನ್ನು ದಕ್ಷಿಣದ ಕಡೆಗೂ ಯುದ್ಧಕ್ಕೆ ಕಳಿಸಿ, ತಾನು ಉತ್ತರದ ಕೋಟೆಯಿಂದ ಯುದ್ಧಕ್ಕೆ ಹೊರಟನು. ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀರಾಮನು ಇದನ್ನರಿತು ಇಂದ್ರಜಿತ್ತುವನ್ನು ಜಯಿಸಲು ಹನುಮಂತನಿಗೂ ಪ್ರಹಸ್ತನನ್ನು ಕೊಲ್ಲಲು ನೀಲನಿಗೂ, ವಜ್ರದಂಷ್ಟ್ರನನ್ನು ಸಂಹರಿಸಲು ವಾಲಿಕುಮಾರ ಅಂಗದನಿಗೂ, ಮಧ್ಯದಲ್ಲಿ ನಿಂತು ಹೋರಾಡಲು ಕಪೀಶನಾದ ಸುಗ್ರೀವನಿಗೂ ಆಜ್ಞಾಪಿಸಿದನು. ದೇದೀಪ್ಯಮಾನ ಶರೀರನೂ ಪರಮಪುರುಷನೂ ಆದ ಶ್ರೀರಾಮಚಂದ್ರ ಪ್ರಭುವು ಸ್ವತಃ ಧನುಸ್ಸಿಗೆ ಬಾಣವನ್ನು ಹೂಡಿ ಖಡ್ಗಧಾರಿಯಾಗಿ ರಾವಣನಿಗೆ ಅಭಿಮುಖವಾಗಿ ಹೊರಟು ನಿಂತನು.

ಶ್ರೀರಾಮಚಂದ್ರ ಪ್ರಭುವು-ಲಂಕೆಯನ್ನು ಮುತ್ತಿದನು. ರಕ್ಕಸರೊಡನೆ ಭೀಕರ ಕಾಳಗ ಪ್ರಾರಂಭವಾಯಿತು. ಇಂದ್ರಜಿತ್ತು ಹನುಮಂತನನ್ನು ಆಕ್ರಮಿಸಲು ಬಂದನು. ಹನುಮಂತನು ಅವನಿಗೆ ಸಿಕ್ಕವನಂತೆ ನಟಿಸಿ ಅವನ ಪರಾಕ್ರಮವರಿತು ಅವನನ್ನು ಯುದ್ಧದಲ್ಲಿ ಸೋಲಿಸಿ ಓಡಿಸಿದನು. ನೀಲ-ವಿಭೀಷಣರು ಪ್ರಹಸ್ತನೊಡನೆ ಸೆಣಸಿದರು. ಪ್ರಹಸ್ತನು ನೀಲನಿಗೆ ಸುಲಭವಾಗಿ ಸಿಗನೆಂದರಿತು ವಿಭೀಷಣನು ನೀಲನೊಡಗೂಡಿ ಅಮೋಘ ಶಕ್ತಿಯಿಂದ ಹೊಡೆಯಲು ಪ್ರಹಸ್ತನು ಮೃತನಾದನು. ಅಷ್ಟರಲ್ಲಿ ಅಂಗದನು ಅಲ್ಲಿಗೆ ಧಾವಿಸಿ ಬಂದು ವಜ್ರದಂಷ್ಟ್ರನನ್ನು ನೆಲಕ್ಕೆ ಕೆಡವಿ ಅವನ ತಲೆಯನ್ನು ಕಡಿದು ಸಂಹರಿಸಿದನು. ಇಂತು ಪ್ರಹಸ್ತ-ವಜ್ರದಂಷ್ಟ್ರರು ಮೃತರಾಗಿ ಅವನ ಸೈನ್ಯ ನಾಶವಾಗುತ್ತಿರಲು ಅದನ್ನು ಕಂಡು ರಾಕ್ಷಸಾಧಿಪನಾದ ರಾವಣನು ಧೂಮ್ರನೇತ್ರನೆಂಬ ರಾಕ್ಷಸನನ್ನು ಹೋರಾಡಲು ಕಳುಹಿಸಿದನು. ಅವನು ಹಿಂದೆ ಲಂಕಾದಹನದ ಕಾಲದಲ್ಲಿ

ಬೆಂದು ಬೂದಿಯಾಗಿದ್ದರೂ ಈಶ್ವರನ ವರಬಲದಿಂದ ರಕ್ಷಿತನಾಗಿದ್ದನು. ಧೂಮ್ರನೇತ್ರನು ಪಶ್ಚಿಮ ದ್ವಾರದಿಂದ ಹೊರಟು ದುರಂತಶಕ್ತಿಯುಳ್ಳ ಪವನನಂದನನ ಬಳಿಗೆ ತಂದು ಯುದ್ಧಕ್ಕೆ ಸಿದ್ಧನಾಗಲು ಹನುಮಂತನು ಅವನನ್ನು ತಕ್ಷಣವೇ ಸಂಹರಿಸಿದನು. ಅನಂತರ ರಾವಣನ ಆಣತಿಯಂತೆ ಅಕಂಪನನೆಂಬ ರಾಕ್ಷಸನು ಹನುಮಂತನನ್ನು ಎದುರಿಸಿದನು. ಹರನ ವರಬಲದಿಂದ ಬಲಿಷ್ಠನಾದ ಅವನನ್ನು ಹನುಮಂತನು ಹೊಡೆದು ಕೊಂದುಹಾಕಿದನು. ಅಂದು ರಾತ್ರೆ ಶ್ರೀರಾಮನ ಅಪ್ಪಣೆಯಂತೆ ಕಪಿವೀರರು ಜ್ವಾಲಾಕಾರವಾಗಿ ಉರಿ ಎಬ್ಬಿಸುವ ಅಸ್ತ್ರಗಳ ಬೆಂಕಿಯಿಂದ ಲಂಕೆಯನ್ನು ಸುಟ್ಟು ಬೂದಿ ಮಾಡಿದರು.

ತರುವಾಯ ರಾವಣನ ಆಜ್ಞೆಯಂತೆ ಕುಂಭಶ್ರುತಿಯೆಂಬ ರಕ್ಕಸನ ಮಕ್ಕಳಾದ ನಿಕುಂಭ ಮತ್ತು ಕುಂಭರೆಂಬ ಈರ್ವರು ಸಕಲ ವಾನರರನ್ನೂ ಲಂಕೆಯಿಂದ ಓಡಿಸಿ ಆನಂದಿಸಿದರು. ಕುಂಭನು ಜಾಂಬುವಂತ, ತಾರ, ನೀಳ, ನಳ ಮತ್ತು ವಿವಿದ, ಮೈಂದ ಹಾಗೂ ಅಂಗದರನ್ನು ಎದುರಿಸಿ ಹೋರಾಡಿ ಅವರನ್ನು ಸೋಲಿಸಿ ಹಿಮ್ಮೆಟ್ಟಿಸಿದನು. ಆಗ ಸುಗ್ರೀವನು ಅವನ ಮೇಲೆರಗಿ ಆ ಪಾಪಿಯನ್ನು ಕೊಂದು ಹಾಕಿದನು. ತರುವಾಯ ನಿಕುಂಭನು ಮಹಾಪರ್ವತಗಳನ್ನೇ ಪುಡಿ ಪುಡಿ ಮಾಡುವ ಪರಿಘಾಯುಧವನ್ನು ಹಿಡಿದು ಸುಗ್ರೀವನತ್ತ ಧಾವಿಸಿದನು. ಅದನ್ನು ಕಂಡ ಸುಗ್ರೀವನು ಹೆದರಿ ಓಡಹತ್ತಿದನು. ರುದ್ರದೇವರ ವರದಿಂದ ಕೊಬ್ಬಿದ ನಿಕುಂಭನು ಪರಿಘಾಯುಧವನ್ನು ಗರಗರನೆ ತಿರುಗಿಸುತ್ತಿರಲು ದಿಕ್ಕುಗಳು, ಗಗನ ಮತ್ತು ಚಂದ್ರಸೂರ್ಯರು ಭ್ರಾಂತರಾಗಿ ತಿರುಗಹತ್ತಿದರು. ಸಕಲ ದೇವತೆಗಳೂ ಅವನ ಪೌರುಷವನ್ನು ಕಂಡು ಸ್ವಲ್ಪಕಾಲ ವಿಷಾದಿಸಿದಂತೆ ಕಂಡುಬಂದರು. ನಿಕುಂಭನ ಈ ಉಪಟಳವನ್ನು ನೋಡಿ ಹನುಮಂತನು ಈ ರಕ್ಕಸನನ್ನು ತನ್ನ ಹೊರತು ಮಿಕ್ಕವರಿಂದ ಸದೆಬಡಿಯಲಳವಲ್ಲವೆಂದರಿತು ನಿಕುಂಭನ ಮುಂದೆ ಬಂದು ನಿಂತು ''ಈ ಉಪಟಳದಿಂದ ಪ್ರಯೋಜನ-ವೇನು? ನೀನು ನಿಜವಾಗಿ ಅಂತಹ ಧೀರನಾದೊಡೆ ಎಲ್ಲಿ, ನನ್ನೀ ಎದೆಗೆ ನಿನ್ನ ಆಯುಧದಿಂದ ಹೊಡೆ ನೋಡುವಾ'' ಎಂದನು. ಕಪಿಶ್ರೇಷ್ಠನ ವಚನವನ್ನಾಲಿಸಿ ನಿಕುಂಭನು ಶಿವವರದಿಂದ ಅಮೋಘವಾಗಿದ್ದ ಆ ಪರಿಘಾಯುಧದಿಂದ ಮಾರುತಿಯ ವಕ್ಷಸ್ಥಳಕ್ಕೆ ಬಲವಾಗಿ ಹೊಡೆದನು. ಗರುಡನ ಮೇಲೆ ಪ್ರಯೋಗಿಸಿದ ವಜ್ರಾಯುಧವು ವ್ಯರ್ಥವಾಗುವಂತೆ ಆ ದೈತ್ಯನ ಪರಿಘಾಯುಧವು ವಾಯುನಂದನನ ಅಭೇದ್ಯ ವಕ್ಷಸ್ಥಳವನ್ನು ಘಾಸಿಗೊಳಿಸಲಾಗದೆ ತಾನೇ ಚೂರ್ಣವಾಯಿತು. ಅದನ್ನು ನೋಡಿ ನಿಕುಂಭನು ಪಾವಮಾನಿಯನ್ನು ತನ್ನ ತೋಳುಗಳಿಂದ ಹಿಡಿದೆತ್ತಿ ತನ್ನ ಹೆಗಲ ಮೇಲೆ ಹಾಕಿಕೊಂಡು ಭರದಿಂದ ಓಡಲಾರಂಭಿಸಿದನು. ಮುಖ್ಯ ಪ್ರಾಣಕುಮಾರನು ಆ ದೈತ್ಯನ ಕುತ್ತಿಗೆಯನ್ನು ಬಿಗಿಯಾಗಿ ಒತ್ತಿ ಹಿಡಿಯಲು ಆ ಅಸುರನು ಉಸಿರುಗಟ್ಟಿದಂತಾಗಿ ತತ್ತರಿಸಹತ್ತಿದನು. ಮಾರುತಿಯು ಒಡನೆಯೇ ಅವನನ್ನು ನೆಲಕ್ಕೆ ಕೆಡವಿ ಸಮರಯಜ್ಞದಲ್ಲಿ ಹರಿಯನ್ನು ಅಧ್ಯಕ್ಷನನ್ನಾಗಿಸಿ ಆ ರಕ್ಕಸನನ್ನು ಯಾಗಪಶುವಾಗಿ ಸಮರ್ಪಿಸಿದನು. ದೈತ್ಯನ ಹನನದಿಂದ ಮುದಗೊಂಡ ಸುರಾನೀಕವು ಜಯ ಧ್ವನಿಗೈದಿತು.

ತರುವಾಯ ರಾವಣನ ಪ್ರೇರಣೆಯಂತೆ ಸುಪ್ತಘ್ನ, ಯಜ್ಞಕೋಪ, ಶಕುನಿ, ದೇವತಾಪನೀಯ, ವಿದ್ಯುಜ್ಜಿಹ್ವ, ಪ್ರಮಾಥಿ ಮತ್ತು ಶುಕಸಾರಣ ಮೊದಲಾದ ರಾಕ್ಷಸರು ಯುದ್ಧಭೂಮಿಯನ್ನು ಹೊಕ್ಕು ಕಪಿಕುಂಜರಗಳನ್ನು ಮಥಿಸಿ ತಳಮಳ-ಗೊಳಿಸತೊಡಗಿದರು. ಆಗ ಬ್ರಹ್ಮದೇವರ ವರದಿಂದ ಅವಧ್ಯರಾದ ಅವರೆಲ್ಲರೂ ಶ್ರೀರಾಮನ ಶರಾಹತಿಗಳಿಂದ ಹತರಾಗಿ ಧರೆಗೊರಗಿದರು. ಆ ಬಳಿಕ ರಾವಣನು ಯುದ್ಧೋನ್ಮತ್ತ, ದೇವಾಂತಕ, ನರಾಂತಕ, ತ್ರಿಶಿರ, ಅತಿಕಾಯರೆಂಬ ರಕ್ಕಸರನ್ನು ಯುದ್ಧಕ್ಕೆ ಕಳುಹಿದನು. ರಾವಣನ ಪುತ್ರನಾದ ನರಾಂತಕನು ದಿವ್ಯತೇಜಿಯನ್ನೇರಿ ಪ್ರಾಸಾಯುಧವನ್ನು ಕರದಲ್ಲಿ ಹಿಡಿದು ಕಪಿಗಳ ಮೇಲೇರಿ ಬಂದು ಅವರನ್ನು ಪ್ರಾಸಾಯುಧದಿಂದ ಸದೆಬಡಿಯಹತ್ತಿದನು. ಆಗ ಅಂಗದನು ಹಾರಿಬಂದು ನರಾಂತಕನಿಗೆ ಎದೆಯೊಡ್ಡಿ ನಿಂತನು. ಆ ರಕ್ಕಸನು ಕೂಡಲೇ ಆಯುಧದಿಂದ ಅಂಗದನ ಎದೆಗೆ ಬಲವಾಗಿ ಗುದ್ದಲು ಅದು ವಾಲಿಪುತ್ರನ

ತೇಜಸ್ಸಿನಿಂದ ಮುರಿದು ಇಬ್ಭಾಗವಾಯಿತು. ಆಗ ಅಂಗದನು ನರಾಂತಕನು ಏರಿದ್ದ ಕುದುರೆಯ ಹಣೆಗೆ ಮುಷ್ಟಿಯಿಂದ ಗುದ್ದಲು ಕುದುರೆಯ ನೇತ್ರಗಳು ಕಳಚಿಬಿದ್ದು ಅದು ನೆಲಕ್ಕೊರಗಿತು. ಅದರಿಂದ ಕುಪಿತನಾದ ನರಾಂತಕನು ಖಡ್ಗವನ್ನು ಹಿರಿದು ಅಂಗದನ ಮೇಲೇರಿ ಹೋದನು. ಆಗ ಅಂಗದನು ಆ ದುಷ್ಟನ ಖಡ್ಗವನ್ನು ಮುರಿದು ಅವನನ್ನು ಸಂಹರಿಸಿದನು.

ರಾವಣನಿಗೆ ಗಂಧರ್ವ ಕನ್ಯೆಯಲ್ಲಿ ಜನಿಸಿದ್ದ ನರಾಂತಕನು ಅಸುನೀಗಲು ಅವನ ಹಿರಿಯ ಸಹೋದರನಾದ ದೇವಾಂತಕನು ಸಮರಭೂಮಿಯನ್ನು ಪ್ರವೇಶಿಸುತ್ತಿರುವಂತೆಯೇ ಅಗ್ನ್ಯಸ್ತ್ರದಿಂದ ಬೆಂಕಿಯ ಮಳೆ ಸುರಿಸಹತ್ತಿದನು. ಅದರ ತಾಪವನ್ನು ಸಹಿಸಲಾರದೆ ಜಾಂಬವಂತಾದಿ ವಾನರವೀರರು ಭಯಗೊಂಡು ಹಿಂಜರಿದು ಓಡಿದರು. ದೇವಾಂತಕನು ಭಾನುಸುತನ ಆಯುಧವನ್ನು ಹೋಲುವ ಒಂದು ಶರವನ್ನು ಅಂಗದನ ಮೇಲೆ ಪ್ರಯೋಗಿಸಲು ಆ ಶರಾಹತಿಯಿಂದ ಅಂಗದನು ಮೂರ್ಛೆಗೊಂಡು ಭೂಮಿಗೆ ಬಿದ್ದನು. ಅದನ್ನು ಕಂಡ ಸುಗ್ರೀವನು ದೊಡ್ಡ ಪರ್ವತವನ್ನು ಬುಡಸಹಿತ ಕಿತ್ತಿ ಅದನ್ನು ದೇವಾಂತಕನ ಮೇಲೆಸೆದನು. ಅವನು ಒಂದು ಬಾಣದಿಂದ ಅದನ್ನು ಪುಡಿಪುಡಿ ಮಾಡಿ ಮತ್ತೊಂದು ಶರವನ್ನು ಸುಗ್ರೀವನ ವಕ್ಷಸ್ಥಳಕ್ಕೆ ಪ್ರಯೋಗಿಸಲು ಅದರಿಂದ ತತ್ತರಿಸಿ ಕಪಿರಾಜನು ಧರೆಗುರುಳಿದನು. ಸುರಾಂತಕನ ಅಪ್ರತಿಮ ಸಾಮರ್ಥ್ಯವನ್ನು ಕಂಡು ಹನುಮಂತನು ಬ್ರಹ್ಮ-ರುದ್ರಾದಿಪ್ರವರ್ತಕನಾದ ಶ್ರೀಕೇಶವನು ಕೈಟಭನನ್ನು ಸಮರಕ್ಕೆ ಕರೆದಂತೆ ಸುರಾಂತಕನನ್ನು ಯುದ್ಧಕ್ಕೆ ಆಹ್ವಾನಿಸಿದನು. ಆಗ ಸುರಾಂತಕನು ಹನುಮಂತನ ಮೇಲೇರಿ ಹೋಗಲು ವಾಯುಪುತ್ರನು ಅವನ ರಥ, ಸಾರಥಿ ಹಾಗೂ ತೇಜಿಗಳನ್ನು ಪುಡಿಪುಡಿ ಮಾಡಿ ಅವನ ಬಿಲ್ಲನ್ನು ಕತ್ತರಿಸಿಹಾಕಿದನು. ಆಗ ಕುಪಿತನಾದ ಆ ರಕ್ಕಸನು ಹನುಮಂತನ ಮೇಲೇರಿ ಬಂದನು. ವಾಯುಕುಮಾರನು ಆಗ ಅವನ ಕೇಶವನ್ನು ಹಿಡಿದು ನೆಲಕ್ಕಪ್ಪಳಿಸಿದನು. ತರುವಾಯ ಭರದಿಂದ ಯುದ್ಧ ಮಾಡುತ್ತ ಶಿವವರದಿಂದ ಅವಧ್ಯನಾದ ಸುರಾಂತಕನ ತಲೆಯನ್ನು ಕಾಲಿನಿಂದ ಮೆಟ್ಟಿ ಅರೆದು ಅವನನ್ನು ಸಂಹಾರ ಮಾಡಿದನು. ಆ ರಕ್ಕಸನು ಹತನಾದುದನ್ನು ಕಂಡು ಅಮರನಿಕರವು ಮಾರುತಿಯನ್ನು ಸ್ತುತಿಸಿತು. ಅದನ್ನು ಕಂಡು ಸಕಲ ಕಪಿವೀರರು ಮುದಗೊಂಡರು.

ತರುವಾಯ ಬ್ರಹ್ಮದೇವರ ವರಬಲದಿಂದ ಅವಧ್ಯನಾದ ತ್ರಿಶಿರನೆಂಬ ರಾಕ್ಷಸನು ಸಕಲ ಕಪಿಗಳನ್ನು ತನ್ನ ತೋಳ್ಬಲದಿಂದ ಓಡಿಸಲು ಮಾರುತಿಯು ಅವನ ರಥ, ಧನುಸ್ಸು, ಖಡ್ಗಗಳನ್ನು ಮುರಿದುಹಾಕಿ ಅವನ ಶಿರವನ್ನು ತುಂಡರಿಸಿಹಾಕಿದನು. ಅನಂತರ ಪಾರ್ವತಿಯ ವರಬಲದಿಂದ ಮತ್ತರಾದ ಯುದ್ಧೋನ್ಮತ್ತ ಮತ್ತು ಮತ್ತ ಎಂಬಿಬ್ಬರು ರಕ್ಕಸರು ಸಮಸ್ತ ಕಪಿಗಳನ್ನು ತಳಮಳಗೊಳಿಸುತ್ತಿರಲು ಪವನನಂದನನು ಮುಷ್ಟಿಪ್ರಹಾರಗಳಿಂದ ಅವರನ್ನು ಸಂಹರಿಸಿದನು. ಆಗ ರಾವಣನಿಗೆ ಗಂಧರ್ವ ಕನ್ಯೆಯಲ್ಲಿ ಜನಿಸಿದ್ದ ಅತಿಕಾಯನೆಂಬ ರಾಕ್ಷಸನು ಯುದ್ಧಕ್ಕೆ ಬಂದನು. ಅವನು ಬ್ರಹ್ಮದೇವರನ್ನು ಒಲಿಸಿ ಒಂದು ರಥವನ್ನು ಪಡೆದಿದ್ದನು. ಅಂತೆಯೇ ಅವನಿಗೆ ಅತಿರಥನೆಂದೂ ಹೆಸರುಂಟು. ಅವನು ಬ್ರಹ್ಮದತ್ತವಾದ ರಥದಲ್ಲಿ ಕುಳಿತು ಪ್ರಳಯಕಾಲದ ಅಗ್ನಿಯಂತೆ ಜ್ವಲಿಸುತ್ತ ರಣರಂಗದಲ್ಲೆಲ್ಲಾ ಸಂಚರಿಸಿ ಕಪಿವೀರರನ್ನು ತಳಮಳಗೊಳಿಸಲಾರಂಭಿಸಿದನು. ಅತಿದೊಡ್ಡ ಶರೀರಿಯಾದ್ದರಿಂದಲೇ ಅವನು ಅತಿಕಾಯನೆಂಬ ಹೆಸರು ಪಡೆದಿದ್ದನು. ಅವನ ಕರ್ಣಗಳು ಕುಂಭದಂತಿದ್ದವು. ಅವನಿಗೆ ಕುಂಭಕರ್ಣನೆಂದೂ ಹೆಸರಿತ್ತು. ಅವನು ಸೂರ್ಯಪುತ್ರನಾದ ಸುಗ್ರೀವಾದಿ ವಾನರ ವೀರರನ್ನು ಜಯಿಸಿ ಶ್ರೀರಾಮನ ಮೇಲೆ ತೀಕ್ಷ್ಣವಾದ ಶರವರ್ಷಗೈದನು. ಅದನ್ನು ನೋಡಿ ಸುಮಿತ್ರಾನಂದನನಾದ ಲಕ್ಷ್ಮಣನು ಬಿಲ್ಲಿಗೆ ಹೆದೆಯೇರಿಸಿ ಆ ರಕ್ಕಸನ ಬಾಣಪ್ರವಾಹವನ್ನು ತನ್ನ ಶರವರ್ಷದಿಂದ ಪರಿಹರಿಸಿ ಬಿರುಗಾಳಿಯಂತೆ ಮೇಲೇರಿ ಬರುತ್ತಿದ್ದ ಅತಿಕಾಯನನ್ನು ತಡೆದನು.

ರಣರಂಗದಲ್ಲಿ ಏಕಪ್ರಕಾರವಾಗಿ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿ ಕೈಚಳಕ ತೋರುವುದರಲ್ಲಿ ಕುಶಲರೂ, ಸಮಾನ ಪರಾಕ್ರಮಶಾಲಿಗಳೂ ಆದ ಲಕ್ಷ್ಮಣ-ಅತಿಕಾಯರು ಸುರಪತಿಯ ವಜ್ರಾಯುಧದಂತೆ ಭರದಿಂದ ಹಾರುವ ಬಾಣಗಳನ್ನು

ಪ್ರಯೋಗಿಸುತ್ತ ಗಗನದಲ್ಲಿ ಕಗ್ಗತ್ತಲೆ ಕವಿಯುವಂತೆ ಮಾಡಿದರು. ಶೂರನಾದ ಶ್ರೀರಾಮಾನುಜನು ಆ ರಕ್ಕಸನ ಬಾಣಗಳನ್ನೆಲ್ಲಾ ಮಧ್ಯದಲ್ಲಿಯೇ ಕತ್ತರಿಸಿ ಅಮೋಘಾಸ್ತ್ರಗಳನ್ನು ಪ್ರಯೋಗಿಸಿ ಶರಚಪ್ಪರವನ್ನು ಕಟ್ಟಿ ರಕ್ಕಸನ ಎರಡು ತೋಳು ಮತ್ತು ತಲೆಯನ್ನು ಕಡಿದು ಹಾಕಿದನು, ಅದೇನಚ್ಚರಿ! ಆ ರಕ್ಕಸನಿಗೆ ತತ್‌ಕ್ಷಣವೇ ಎರಡು ತಲೆ, ನಾಲ್ಕು ತೋಳುಗಳಾದವು!! ಲಕ್ಷ್ಮಣನು ಮತ್ತೆ ಮತ್ತೆ ಅವನ ತಲೆ-ತೋಳುಗಳನ್ನು ಕತ್ತರಿಸಿ ಹಾಕಿದಂತೆಲ್ಲಾ ಇಮ್ಮಡಿ, ಮುಮ್ಮಡಿಯಾಗಿ ತಲೆ-ತೋಳುಗಳು ಹುಟ್ಟಹತ್ತಿದವು! ಇದನ್ನು ಕಂಡು ಲಕ್ಷ್ಮಣನು ವಿಷಾದಿಸುತ್ತಿರಲು ಸಕಲ ಪ್ರಪಂಚದ ಜೀವರ ಹೃದಯದಲ್ಲಿ ನೆಲೆಸಿ ಸ್ವಾಮಿಯೆನಿಸಿದ ಪವಮಾನಕುವರನಾದ ಹನುಮಂತನು ಮುಂದೆ ಬಂದು "ಸುಂದರಾನನ! ರಾಮಾನುಜ! ಕೇಳು, ನಾಲ್ಮೊಗನು ಇವನಿಗೆ ಅವಧ್ಯತ್ವ ವರವ ಕರುಣಿಸಿಹನು. ಇವನು ಮಾಯಾವಿದ್ಯೆಯಲ್ಲಿಯೂ ಬಲ್ಲಿದನು. ಇವನನ್ನು ಬ್ರಹ್ಮಾಸ್ತ್ರದಿಂದಲ್ಲದೆ ಇತರ ಅಸ್ತ್ರಗಳಿಂದ ಸಂಹರಿಸಲು ಅಸಾಧ್ಯ" ಎಂದು ಆ ರಕ್ಕಸನಿಗೂ ಕೇಳುವಂತೆ ಹೇಳಿ ಅಂಬರಕ್ಕೆರಗಿದನು. ದೇವೋತ್ತಮನಾದ ಶ್ರೀರಾಮಚಂದ್ರನ ಅನುಜನಾದ ಲಕ್ಷ್ಮಣನು ರಾವಣನ ಮಗನಾದ ಅತಿಕಾಯನಮೇಲೆ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಆಗ ಕೂಡಲೆ ಅತಿಕಾಯನು ತನ್ನ ರಥ, ಅಶ್ವ, ಸಾರಥಿಗಳಿಂದೊಡಗೂಡಿ ಉರಿದು ಭಸ್ಮವಾದನು.

ಇಂತು ತನ್ನ ಕುವರರೆಲ್ಲರೂ ಮೃತರಾದ ವಾರ್ತೆಯನ್ನಾಲಿಸಿ ಖಿನ್ನನಾದ ರಕ್ಕಸಸಾರ್ವಭೌಮನಾದ ದಶಕಂಧರನು ತಾನೇ ಯುದ್ಧಕ್ಕೆ ಹೊರಡಲು ನಿರ್ಧರಿಸಿದನು. ಆಗ ಧನುರ್ಧರರಲ್ಲಿ ಶ್ರೇಷ್ಠನೆನಿಸಿದ ಖರನೆಂಬ ರಾಕ್ಷಸನ ಪುತ್ರನಾದ ಮಕರಾಕ್ಷನು ರಾವಣನ ಬಳಿಗೆ ಬಂದು "ಪ್ರಭು! ನನ್ನ ತಂದೆಯನ್ನು ಸಂಹರಿಸಿದ ಈ ರಾಮ ಮತ್ತು ಲಕ್ಷ್ಮಣರನ್ನು ಸಂಹರಿಸಲು ನನ್ನನ್ನು ನೇಮಿಸು. ನಾನವರನ್ನೂ, ಸಕಲ ವಾನರವೀರನನ್ನೂ ಸಂಹರಿಸಿ ನಿನ್ನನ್ನು ಆನಂದಗೊಳಿಸವೆನು" ಎಂದು ಬಿನ್ನವಿಸಿದನು. ಆಗ ರಾವಣನು ಅವನಿಷ್ಟದಂತೆ ಮಕರಾಕ್ಷನನ್ನು ಸಮರಕ್ಕೆ ಕಳುಹಿಸಿದನು.

ರಾವಣನ ಅಣತಿಯಂತೆ ಮಕರಾಕ್ಷನು ಯುದ್ಧಭೂಮಿಗೆ ಬಂದು ಸುಗ್ರೀವ, ಅಂಗದ ಮುಂತಾದ ಕಪಿವೀರರನ್ನು ತನ್ನ ಸಾಹಸದಿಂದ ನಡುಗಿಸ ಹತ್ತಿದನು. ಪದ್ಮಸಂಭವ ವರದಿಂದ ಅವಧ್ಯನಾದ ಆ ರಾಕ್ಷಸನು ಲಕ್ಷ್ಮಣನ ಮೇಲೆ ಶರ-ವರ್ಷಗೈದರೂ ಲಕ್ಷ್ಮಣನದನ್ನು ಲೆಕ್ಕಿಸದಿರಲು ಮಕರಾಕ್ಷನು ಶ್ರೀರಾಮನನ್ನು ಅವಹೇಳನ ಮಾಡುತ್ತಾ "ಹೇ ರಾಮ! ಅಂದು ನೀನು ಜನಸ್ಥಾನದಲ್ಲಿ ನನ್ನ ತಂದೆಯನ್ನು ಸಂಹರಿಸಿದೆಯಲ್ಲವೆ? ಧನುರ್ಧರರಲ್ಲಿ ಉತ್ತಮನಾದ ನಾನು ಈಗ ಅದಕ್ಕೆ ಪ್ರತೀಕಾರಮಾಡದೇ ಬಿಡೆನು. ಹೂಂ, ಅದರ ಫಲವನ್ನು ಅನುಭವಿಸು" ಎಂದು ರಾಮನ ಮೇಲೆ ಬಾಣಗಳ ಮಳೆಗರೆದನು. ಅದರಿಂದ ಸ್ವಲ್ಪವೂ ಘಾಸಿಗೊಳ್ಳದೆ ಅಪ್ರಮೇಯನಾದ ಶ್ರೀರಾಮಚಂದ್ರನು ಮಂದಹಾಸ ಬೀರುತ್ತಾ ಆ ರಾಕ್ಷಸನ ಅಸ್ತ್ರ-ಪ್ರವಾಹವನ್ನು ತನ್ನ ಅಮೋಘಾಸ್ತ್ರಗಳಿಂದ ತಡೆಗಟ್ಟಿ ನಂತರ ವಜ್ರಾಯುಧ ಸದೃಶವಾದ ಒಂದು ತೀಕ್ಷ್ಣಬಾಣದಿಂದ ಮಕರಾಕ್ಷನ ಶಿರಸ್ಸನ್ನು ತರಿದು ನೆಲಕ್ಕುರುಳಿಸಿದನು. ಕಪಿವೀರರು ಹಿಂದೆ ಧೂಮ್ರಾಕ್ಷ ಮೊದಲಾದ ರಾಕ್ಷಸರನ್ನು ಮರ-ಗಿರಿಗಳನ್ನು ಹಿಡಿದು ಸದೆಬಡೆದಂತೆ ಮಕರಾಕ್ಷನ ಹಿಂಬಾಲಕರಾದ ರಾಕ್ಷಸರೆಲ್ಲರನ್ನೂ ಮರ್ದನ ಮಾಡಿದರು. ಅಳಿದುಳಿದ ಕೆಲ ರಕ್ಕಸರು ರಣರಂಗದಿಂದ ಓಡಿಹೋದರು.

ತರುವಾಯ ರಾಕ್ಷಸೇಶ್ವರನಾದ ರಾವಣನು ಸಕಲಾಯುಧ ಸನ್ನದ್ಧನಾಗಿ ರಥವೇರಿ ಕುಳಿತು ಕೋಟಿಗಟ್ಟಲೆಗೂ ಮೀರಿದ ದಳಪತಿಗಳು ವೀರ ರಕ್ಕಸರಿಂದ ಸಹಿತನಾಗಿ ರಣಭೂಮಿಗೆ ಬಂದನು. ಬಳಿಕ ರಾವಣನ ಬಲಶಾಲಿಗಳಾದ ಭಟರು ವಿವಿಧಾಯುಧ ಪ್ರಹಾರದಿಂದ ವಾನರಚಮೂವನ್ನು ದಿಕ್ಕು ವಿದಿಕ್ಕುಗಳಿಗೆ ಓಡುವಂತೆ ಮಾಡಿದರು. ಅದರಲ್ಲಿ ಮುಖ್ಯರಾದ ಧನದನೆಂಬ ವಾನರವೀರನ ಮಕ್ಕಳಾದ ಗದ, ಗವಾಕ್ಷ, ಗವಯ, ಗಂಧಮಾದ ಮುಂತಾದವರು ಮತ್ತು ವಾಯುಪುತ್ರರಾದ ಐದುಜನ ಕಪಿಶ್ರೇಷ್ಠರು ಮತ್ತು ಕತ್ವನ ವಿತ್ತಪತಿ ಮುಂತಾದ ಕಪಿವೀರರು ಆ ರಕ್ಕಸರನ್ನು ಎದುರಿಸಿ ಅವರನ್ನು ಹಿಡಿದು ಅರೆದು ಕೊಂದು ಹಾಕಿದರು. ಆಗ ರಾವಣನು ಆ ಕಪಿವೀರರನ್ನು ಆರು ಬಾಣಗಳಿಂದ ನೆಲಕ್ಕೆ ಕೆಡವಿದನು. ಅದನ್ನು ಕಂಡು

ವಿವಿದ, ಮೈಂದ ಮತ್ತು ಜಾಂಬವಂತರು ದೊಡ್ಡ ದೊಡ್ಡ ಮೂರು ಪರ್ವತಗಳನ್ನು ಕಿತ್ತಿ ತಂದು ಅವುಗಳಿಂದ ರಾವಣನನ್ನು ಹೊಡೆದರು. ರಾಕ್ಷಸೇಶ್ವರನು ಮೂರು ಬಾಣಗಳಿಂದ ಅದನ್ನು ಸೀಳಿ ಹಾಕಿ ನಂತರ ಆ ಮೂವರು ಕಪೀಂದ್ರರ ಮೇಲೆ ಬಾಣವನ್ನು ಪ್ರಯೋಗಿಸಿ ಅವರನ್ನು ಧರೆಗುರುಳಿಸಿದನು. ಆಗ ಸೂರ್ಯಸುತನಾದ ತಾರನು ದೊಡ್ಡ ಬಂಡೆಯನ್ನು ಹೊತ್ತು ರಾವಣನತ್ತ ಸಾಗಿದನು. ಅದನ್ನು ನೋಡಿದ ರಾವಣನು ಚೂಪಾದಬಾಣದಿಂದ ತಾರನ ಎದೆಗೆ ಹೊಡೆದು ಅವನನ್ನು ನೆಲಕ್ಕುರುಳಿಸಿದನು. ಅದನ್ನು ಕಂಡು ಸುಗ್ರೀವನು ತಾರನನ್ನು ರಕ್ಷಿಸಲು ತಾನೇ ರಾಕ್ಷಸಾಧಿಪನಿಗೆ ಎದುರಾಗಿ ಹೋರಾಡಲು ನಿಂತನು. ಸುಗ್ರೀವನ ಕೈಲಿದ್ದ ಬೆಟ್ಟವನ್ನು ಬಾಣದಿಂದ ಪುಡಿಮಾಡಿ ರಾವಣನು ಮತ್ತೊಂದು ಬಾಣವನ್ನು ಸುಗ್ರೀವನ ಕುತ್ತಿಗೆಗೆ ಪ್ರಯೋಗಿಸಿದನು. ಅದರಿಂದ ಕಡುನೊಂದ ಕಪಿರಾಜನು ಭೂಶಾಯಿಯಾದನು. ಆಗ ಹನುಮಂತನು ನಾಗರಾಜನ ಹೆಡೆಯಂತಿರುವ ತನ್ನ ತೋಳುಗಳನ್ನು ಮೇಲೆತ್ತಿ ರಾವಣನ ಎದೆಗೆ ಒಮ್ಮೆ ಗುದ್ದಿದನು. ಆ ಪ್ರಹಾರದಿಂದ ತಳಮಳಗೊಂಡ ರಾವಣನು ಹತ್ತು ಮುಖದಿಂದಲೂ ರಕ್ತಕಾರಿ ಮೂರ್ಛಿತನಾಗಿ ಭೂಮಿಗೆ ಬಿದ್ದನು. ನಂತರ ಮೂರ್ಛೆ ತಿಳಿದೆದ್ದು ಹನುಮಂತನ ಪ್ರತಾಪವನ್ನು ಕಂಡು ಅಚ್ಚರಿಗೊಂಡ ರಾವಣನು ''ಭಲೆ ಭಲೆ ಕಪಿವೀರ! ನಿನಗೆ ಸಮರಾರೂ ಇಲ್ಲ. ನನಗೆ ಇಂಥ ಅವಸ್ಥೆಯನ್ನು ತಂದವನು ನಿನ್ನ ವಿನಃ ಬೇರಾರಿದ್ದಾರೆ'' ಎಂದು ಮುಕ್ತಕಂಠದಿಂದ ಹನುಮಂತನನ್ನು ಹೊಗಳಿದನು.

''ರಾವಣ! ನನ್ನದು ಒಂದು ಪುಟ್ಟ ಗುದ್ದು. ಅಂತೆಯೇ ನೀನಿನ್ನೂ ಜೀವಿಸಿರುವೆ''ಎಂದು ಹನುಮಂತನು ಉಸುರಿದನು. ಅದನ್ನಾಲಿಸಿ ರಾವಣನು ''ಎಲೈ ವಾನರ! ಇದಿಗೋ ನನ್ನ ಮುಷ್ಟಿ ಪ್ರಹಾರವನ್ನು ಸ್ವೀಕರಿಸು'' ಎಂದು ತನ್ನೆಲ್ಲ ಬಲವನ್ನೂ ಒಟ್ಟುಗೂಡಿಸಿ ಕಪಿರಾಜನ ಬೆನ್ನಿನ ಮೇಲೆ ಗುದ್ದಿದನು. ರಾವಣನ ಆ ಬಲವಾದ ಹೊಡೆತಕ್ಕೆ ಸಾಮಾನ್ಯ ಪೆಟ್ಟು ತಿಂದವನಂತೆ ಹನುಮಂತನು ಕಳವಳಿಸಿದಂತೆ ನಿಂತನು. ಆಗ ದಶಕಂಧರನು ನೀಲನತ್ತ ಧಾವಿಸುತ್ತಿರುವುದನ್ನು ಕಂಡ ಮಾರುತಿಯು ಬೇಡವೆಂದು ನಿವಾರಿಸಿದರೂ ಬಿಡದೆ ನೀಲನ ಕಡೆ ಹೊರಟನು. ಅದನ್ನು ಗಮನಿಸಿದ ನೀಲನು ತತ್‌ಕ್ಷಣವೇ ಮೇಲೆ ನೆಗೆದು ರಾವಣನ ಧನುಸ್ಸು, ಧ್ವಜದ ತುದಿ, ರಥ ಹಾಗೂ ರಾವಣನ ಹತ್ತು ತಲೆಗಳ ಮೇಲೆ ಚುರುಕಾಗಿ ಹರಿದಾಡಿದನು. ಏನಾಗುತ್ತಿದೆಯೆಂದೂ ತಿಳಿಯದಾದ ರಾವಣನು ಮಂಕಾಗಿ ಸುಮ್ಮನೆ ನಿಂತನು. ಅನಂತರ ರಾವಣನು ಅಗ್ನ್ಯಸ್ತ್ರವನ್ನು ನೀಲನ ಮೇಲೆ ಪ್ರಯೋಗಿಸಲು ನೀಲನು ನೆಲಕ್ಕೊರಗಿದನು. ಅಗ್ನಿದೇವನ ಅಂಶನಾದುದರಿಂದ ಅಗ್ನ್ಯಸ್ತ್ರವು ನೀಲನನ್ನು ಸುಡದೆ ತಂಪಾಗಿಯೇ ಇದ್ದಿತು. ಅನಂತರ ರಾಕ್ಷಸೇಶ್ವರನು ಶ್ರೀರಾಮನತ್ತ ನಡೆದನು. ಲಕ್ಷ್ಮಣನು ಅವನನ್ನು ತಡೆದನು, ಜಗತ್ತಿನ ಧನುರ್ವಿದ್ಯಾ ನಿಪುಣರಲ್ಲಿ ರಾಮಲಕ್ಷ್ಮಣರು ಮಹಾಮಲ್ಲರು. ಅವರು ಕವಚವನ್ನು ಭೇದಿಸಿ ನೋಯಿಸುವ ತೀಕ್ಷ್ಣ ಬಾಣಗಳನ್ನು ರಾವಣನ ಮೇಲೆ ಬಿಟ್ಟು ನೋಯಿಸಿದರು. ಲಕ್ಷ್ಮಣನು ಅಡ್ಡ ತಡೆದುದರಿಂದ ರಾವಣನು ಬ್ರಹ್ಮದೇವರು ಅನುಗ್ರಹಿಸಿದ್ದ ಅಮೋಘವಾದ ಉಗ್ರಬಾಣವನ್ನು ಲಕ್ಷ್ಮಣನ ಹಣೆಗೆ ಗುರಿಯಿಟ್ಟು ಹೊಡೆದನು. ಪದ್ಮಸಂಭವನ ಶರಾಘಾತವನ್ನು ತಾಳಲಾಗದೆ ಲಕ್ಷ್ಮಣನು ಮೂರ್ಛಿತನಾಗಿ ಬಿದ್ದನು. ರಾವಣನು ಕೂಡಲೇ ಅವನನ್ನು ತನ್ನ ತೋಳತೆಕ್ಕೆಯಲ್ಲಿ ಬಂಧಿಸಿ ತನ್ನ ರಥಕ್ಕೆ ಕೊಂಡೊಯ್ಯ ಬಯಸಿದನು. ಅದೇ ಸಮಯಕ್ಕೆ ಮೂರ್ಛೆ ತಿಳಿದೆದ್ದು ಬಳಲಿದ್ದ ಲಕ್ಷ್ಮಣನು ತನ್ನ ಮೂಲರೂಪವನ್ನು ಸ್ಮರಿಸಿಕೊಳ್ಳಲು ಶ್ರೀಹರಿಯ ಅಂಶದಿಂದ ಯುಕ್ತನಾದ ಶೇಷಾವತಾರಿಯಾದ ಲಕ್ಷ್ಮಣನನ್ನು ಅಲುಗಾಡಿಸಲೂ ರಾವಣನು ಸಮರ್ಥನಾಗಲಿಲ್ಲ. ರಾವಣನು ತನ್ನ ಇಪ್ಪತ್ತು ತೋಳುಗಳಿಂದ ಹಿಡಿದು ಲಕ್ಷ್ಮಣನನ್ನು ಎಳೆಯುತ್ತಿರುವಾಗ ಭೂಕಂಪವೇ ಆಯಿತು. ಮೇರುಮಂದರ ಪರ್ವತಗಳು ಕಂಪಿಸಿದವು. ಸಾಗರವು ಉಕ್ಕಿ ಹರಿಯಿತೇ ವಿನಃ ಲಕ್ಷ್ಮಣನೇನೂ ಕದಲಲಿಲ್ಲ. ಪಾಪ, ಪಾಪ! ಸಹಸ್ರ ಫಣಗಳ ಆದಿಶೇಷನ ಒಂದು ಹೆಡೆಯ ಮೇಲೆ ಸಮಸ್ತ ಭೂಮಂಡಲವೇ ಸಾಸುವೆಯ ಕಾಳಿನಂತೆ ನಿಂತಿರುವಾಗ ಅಂಥ ಶೇಷದೇವನನ್ನು ಬಲಾತ್ಕಾರದಿಂದ ಸೆಳೆದೊಯ್ಯುವ ಗಂಡು ಅದಾವನಿರುವನು? ಹೀಗೆ ಕಾತರದಿಂದ ರಾವಣನು ರಾಮಾನುಜನನ್ನು ಎಳೆಯುತ್ತಿರಲು ಜೀವೋತ್ತಮನೂ

ಸರ್ವಜೀವರಿಗೆ ಒಡೆಯನೂ ಆದ ವಾಯುದೇವನ ಮತ್ತೊಂದು ರೂಪವಾದ ಶ್ರೀಹನುಮಂತನು ತತ್‌ಕ್ಷಣವೇ ಹಾರಿಬಂದು ರಾವಣನ ಮುಂದೆ ನಿಂತು ಅತಿಕುಪಿತನಾಗಿ ವಜ್ರಾಯುಧ ಸಮವಾದ ತನ್ನ ಮುಷ್ಟಿಯಿಂದ ರಾವಣನಿಗೆ ಪ್ರಹಾರ ಮಾಡಲು ಅದನ್ನು ಸಹಿಸಲಾಗದೆ ತಳಮಳಗೊಂಡ ರಾವಣನು ತನ್ನ ಹತ್ತು ಮುಖಗಳಿಂದಲೂ ರಕ್ತಕಾರುತ್ತಾ ಇಪ್ಪತ್ತು ಕೈಗಳನ್ನೂ ಉದ್ದಕ್ಕೆ ಚಾಚಿ ಶವದಂತೆ ಧರೆಗುರುಳಿಬಿದ್ದನು. ವಾಯುನಂದನನಾದ ಹನುಮಂತನು ಸೌಮಿತ್ರಿಯನ್ನು ನಾಗಶಯನನಾದ ಶ್ರೀರಾಮನ ಸನ್ನಿಧಿಗೆ ಎತ್ತಿ ಕರೆತಂದನು. ಸೌಮಿತ್ರಿಯನ್ನು ಪವನನಂದನನು ಹೊತ್ತು ತರಲು ಅತ್ಯಂತ ಸಮರ್ಥನಲ್ಲವೆ? ಶ್ರೀರಾಮಚಂದ್ರನು ಪ್ರೇಮದಿಂದ ಸಹೋದರನು ಮೈಮೇಲೆ ತನ್ನ ಕರದಿಂದ ಸವರಲು ಲಕ್ಷ್ಮಣನ ಶ್ರಮವೆಲ್ಲವೂ ಪರಿಹಾರವಾಯಿತು. ಕೂಡಲೇ ಲಕ್ಷ್ಮಣನು ಧನುರ್ಬಾಣಗಳನ್ನು ಧರಿಸಿ ರಾಹುವಿನಿಂದ ಮುಕ್ತನಾದ ಪೂರ್ಣಚಂದ್ರನು ಚಂದ್ರಿಕೆಯ ಕಿರಣಗಳನ್ನು ಹೊರಸೂಸುತ್ತಾ ಶೋಭಿಸುವಂತೆ ಕಂಗೊಳಿಸಿದನು.

ಅನಂತರ ಜನಾರ್ದನನಾದ ಶ್ರೀರಾಮಚಂದ್ರಪ್ರಭುವು ಶೇಷಫಣದಂತಿರುವ ಧನುಸ್ಸನ್ನು ಹೆದೆಯೇರಿಸಿ ಬಾಣಹೂಡಿ, ಮೂರ್ಛೆ ತಿಳಿದೆದ್ದು ನಿಂತ ರಾವಣನನ್ನು ನೋಡಿ ''ರಾವಣ! ಯುದ್ಧಕ್ಕೆ ಸಿದ್ಧನಾಗು'' ಎಂದನು. ಶ್ರೇಷ್ಠ ಅಸ್ತ್ರ ಕೋವಿದನಾದ ರಾವಣನು ಕೂಡಲೇ ಬಿಲ್ಲು ಬಾಣಬತ್ತಳಿಕೆಗಳನ್ನು ಸರಿಯಾಗಿ ಧರಿಸಿ ರಾಮಚಂದ್ರನಿಗೆ ಎದುರಾಗಿ ನಿಂತು ವಿವಿಧಾಸ್ತ್ರ ಪ್ರಯೋಗಗಳಿಂದ ಸಕಲದಿಕ್ಕುಗಳನ್ನೂ ಅಂಧಕಾರಮಯವಾಗಿಸಿದನು. ರಾವಣನು ರಥದಲ್ಲಿ ಕುಳಿತಿರಲು ತನ್ನ ಸ್ವಾಮಿಯು ಧರೆಯ ಮೇಲೆ ನಿಂತಿರುವುದೇ? ಛೇ, ಕೂಡದು ಎಂದು ಚಿಂತಿಸಿದ ಹನುಮಂತನು ಶ್ರೀರಾಮಪ್ರಭುವನ್ನು ತನ್ನ ಭುಜದ ಮೇಲೆ ಕುಳ್ಳಿರಿಸಿಕೊಂಡು ರಾವಣನತ್ತ ಹೋದನು. ಹನುಮಂತನ ಕ್ರಿಯೆಯನ್ನು ನೋಡಿ ಶ್ರೀರಾಮನು ನಕ್ಕು ರಾವಣನ ಕುದುರೆಗಳು, ಸಾರಥಿಗಳನ್ನು ಸಂಹರಿಸಿ, ಧ್ವಜ, ರಥ, ಧನುಸ್ಸು, ಖಡ್ಗ ಮತ್ತು ಸಕಲಾಯುಧಗಳನ್ನೂ ಪುಡಿಪುಡಿ ಮಾಡಿ, ಛತ್ರಯನ್ನು ಸೀಳಿ ರಾವಣನ ಶಿರಗಳನ್ನು ತರಿದನು. ಆಗ ರಾಕ್ಷಸೇಶ್ವರನಾದ ರಾವಣನು ಮುಂದೇನು ಮಾಡಬೇಕೆಂದು ತೋರದೆ ಕುಳಿತಿರಲು ಶ್ರೀರಾಮನು ''ಎಲವೋ ರಾವಣ, ಕೂಡಲೇ ಮನೆಗೆ ಹೋಗು. ಅಲ್ಲಿ ನಿನಗಿಷ್ಟವಾದ ಸಕಲ ಭೋಗಗಳನ್ನೂ ಅನುಭವಿಸಿ ನಿನ್ನ ಬಂಧುಜನರನ್ನು ಮುದಗೊಳಿಸು ಮತ್ತು ಮರಣಹೊಂದಲು ನಾಳೆ ಬೇಗ ಮರಳಿ ಬಾ'' ಎಂದನು. ಉದಾರಚರಿತನಾದ ಶ್ರೀರಾಮಚಂದ್ರನ ವಚನವನ್ನಾಲಿಸಿದ ರಾವಣನು ಲಜ್ಜೆಯಿಂದ ತಲೆತಗ್ಗಿಸಿ ಅಲ್ಲಿಂದ ಅರಮನೆಗೆ ತೆರಳಿ ಅಲ್ಲಿ ತನ್ನ ಮಂತ್ರಿಗಳನ್ನು ಆಹ್ವಾನಿಸಿ ಸಭೆಯನ್ನು ಕರೆದು ಅಳಿದುಳಿದ ತನ್ನ ಅನುಯಾಯಿಗಳೊಡನೆ ಮಂತ್ರಾಲೋಚನೆ ನಡೆಸಿ, ಯುದ್ಧಕ್ಕಾಗಿ, ಮಲಗಿ ನಿದ್ರಿಸುತ್ತಿರುವ ಕುಂಭಕರ್ಣನನ್ನು ಎಚ್ಚರಗೊಳಿಸಬೇಕೆಂದು ನಿರ್ಧರಿಸಿದನು.

ರಾವಣೇಶ್ವರನ ಆಣತಿಯಂತೆ ಹತ್ತು ಲಕ್ಷ ರಕ್ಕಸರು ತಮ್ಮ ಕರಗಳಲ್ಲಿ ಉನ್ನತ ಪರ್ವತ, ಕೋಡುಗಲ್ಲು, ಕೊಡಲಿ, ಖಡ್ಗ ಮೊದಲಾದ ಆಯುಧಗಳನ್ನು ಬಡಿಯುತ್ತಾ ಶಬ್ದ ಮಾಡತೊಡಗಿದರು. ಕೆಲ ಸೈನಿಕರು ಅವನ ಬಳಿಸಾರಿ ಅವನ ನಾಸಿಕದ ಗಾಳಿಯಲ್ಲಿ ಸಿಕ್ಕಿ ಬಹುದೂರ ಹೋಗಿ ಬಿದ್ದು ಕೈಕಾಲುಗಳನ್ನು ಮುರಿದುಕೊಂಡರು. ಕೊನೆಗೆ ಅದೆಂತೋ ಕೆಲವರು ಅವನ ಹತ್ತಿರ ಹೋಗಿ ಬಹು ಕಷ್ಟದಿಂದ ಕುಂಭಕರ್ಣನನ್ನು ಎಬ್ಬಿಸಿದರು. ಅವನು ಎಚ್ಚರಗೊಂಡು ಪರ್ವತಾಕಾರ ಶರೀರತಾಳಿ ಕುಳಿತುಕೊಳ್ಳಲು ಅವನಿಗೆ ಬೆಟ್ಟಗಳಷ್ಟು ಮಾಂಸಾದಿ ಆಹಾರ, ರಕ್ತಪಾನೀಯಗಳನ್ನೊದಗಿಸಿದರು. ಅವನದೆಲ್ಲವನ್ನೂ ತಿಂದು, ಕುಡಿದು ತೇಗಿದ ಮೇಲೆ ರಾವಣನು ಅವನನ್ನು ಆದರದಿಂದ ಉಪಚರಿಸಿ ಸಭೆಗೆ ಆಹ್ವಾನಿಸಿದನು.

ಸಭೆಯಲ್ಲಿ ರಾವಣ ಕುಂಭಕರ್ಣರು ಆಸನಾಸೀನರಾದಮೇಲೆ ರಾವಣನು ''ಸಹೋದರ, ನಿನ್ನಂತಹ ಅಸಹಾಯ ಶೂರನಿನ್ನೂ ಬದುಕಿರುವಾಗಲೇ ರಾಮನೆಂಬ ನರನು ರಣರಂಗದಲ್ಲಿ ನನ್ನನ್ನು ಸೋಲಿಸಿದನು! ರಾಮನನ್ನು ಸಂಹರಿಸಿ ನನ್ನನ್ನು ಹರ್ಷಗೊಳಿಸು ಸಹೋದರ'' ಎಂದು ಹೇಳಿದನು. ತರುವಾಯ ಇಷ್ಟೆಲ್ಲ ಅನಾಹುತಗಳಿಗೆ ಕಾರಣವನ್ನು ಕೇಳಿತಿಳಿದು

ರಾವಣನು ಅನ್ಯಾಯ ಮಾಡಿದನೆಂದು ನಿಶ್ಚಯಿಸಿ ಜಿಗುಪ್ಸೆಗೊಂಡು ''ಅಣ್ಣ, ನೀನು ಮಾಡಿದ ಈ ಕಾರ್ಯ ಸರಿಯಾಗಲಿಲ್ಲ. ಶ್ರೀರಾಮಚಂದ್ರನ ಪರಾಕ್ರಮ ಅಮೋಘವಾದುದು. ನೀನು ಅವನ ವಿರೋಧ ಕಟ್ಟಿಕೊಂಡುದು ಒಳಿತಲ್ಲವಣ್ಣಾ'' ಎಂದು ಕುಂಭಕರ್ಣನು ಅಣ್ಣನನ್ನು ಹಳಿದನು. ಮತ್ತೆ ''ಬಲಶಾಲಿಗಳೊಡನೆ ನಾವು ವಿರೋಧ ಕಟ್ಟಿಕೊಳ್ಳುವುದು ತರವಲ್ಲ. ಅದೇನೇ ಇರಲಿ. ನಿನ್ನ ಎಲ್ಲಾ ಹೇಳಿಕೆಗಳನ್ನು ಕೇಳಿದರೆ ಶ್ರೀರಾಮನು ಅತಿಬಲವಂತನೆಂದು ನನಗನಿಸುತ್ತಿದೆ'' ಎಂದನು. ಆಗ ರಾವಣನು ''ತಮ್ಮಾ, ನಾನು ದುರ್ನಡತೆಯವನಿರಬಹುದು. ಆ ಮಾತಿನಿಂದೀಗೇನು ಪ್ರಯೋಜನ? ಈಗ ನೀನೇ ನನ್ನನ್ನು ರಕ್ಷಿಸಬೇಕು. ಬೇರೆ ಮಾರ್ಗವಿಲ್ಲ. ಹೀಗಿರಲು ನೀನಿಂತು ನುಡಿಯುವುದು ಸರಿಯೇ ಸೋದರಾ? ಲೋಕದಲ್ಲಿ ಅನೇಕ ರಾಜರು ನಿನ್ನಂತಹ ಅತಿಬಲವಂತರಾದ ಬಾಂಧವರು ಸಹಾಯಕ್ಕಿರುವರೆಂದರಿತು ಒಮ್ಮೊಮ್ಮೆ ಅಕ್ರಮದಿಂದ ಅನೀತಿಯ ದಾರಿಯಲ್ಲಿ ಕಾಲಿಡುತ್ತಾರೆ. ನನ್ನ ಪರಿಸ್ಥಿತಿಯೂ ಹಾಗೆಯೇ ಆಗಿದೆ. ಈಗ ನೀನು ನನ್ನ ಕೈಬಿಡಬಾರದು'' ಎಂದು ಕಳಕಳಿಯಿಂದ ಕೇಳಿಕೊಳ್ಳಲು ಕುಂಭಕರ್ಣನು ಅಗ್ರಜನ ಮಾತಿಗೆ ಪ್ರತಿಹೇಳಲಾರದೆ ರಣರಂಗಕ್ಕೆ ಹೊರಟನು.

ಅವನು ಶ್ರೇಷ್ಠ ಶೂಲಾಯುಧವನ್ನು ಹಿಡಿದು ರಣರಂಗಕ್ಕೆ ಹೋದ ಕೂಡಲೇ ಅವನನ್ನು ಕಂಡು ಭಯಗೊಂಡ ಕಪಿವೀರರು ದಿಕ್ಕಾಪಾಲಾಗಿ ಓಡ ಹತ್ತಿದರು. ಕೆಲವರಂತೂ ಸೇತುವೆಯನ್ನು ದಾಟಿ ಭರದಿಂದ ಓಡಲಾರಂಭಿಸಿದರು. ಕುಂಭಕರ್ಣನು ವಸುವಿನ ಅಂಶರಾದ ಶತಬಲ, ಪನಸ, ಉತ್ತಮ ವಾಯುಗುಣದಿಂದ ಜನಿಸಿದ ಶ್ವೇತ, ಸಂಪಾತಿ, ನಿಋತಿಜಾತನಾದ ದುರ್ಮುಖ, ಮರುತ್ತುಗಳಲ್ಲಿ ಜನಿಸಿದ ಕೇಸರಿ, ಪ್ರವರ ಎಂಬುವ ಕಪಿವೀರರನ್ನು ಬಾಯಿಯಲ್ಲಿ ಹಾಕಿಕೊಂಡು ತಿಂದನು. ರಾಕ್ಷಸಶ್ರೇಷ್ಠನಾದ ಆ ಕುಂಭಕರ್ಣನು ಕುಮುದ, ಜಯಂತರನ್ನು ತನ್ನ ಕರತಲಗಳಿಂದ ಅರೆದು ಹಾಕಿದನು. ದೊಡ್ಡ ದೊಡ್ಡ ಪರ್ವತ ಮರಗಿಡಗಳನ್ನು ಹಿಡಿದು ನಿಂತಿದ್ದ ನಳ, ಗಜ ಮುಂತಾದ ಐದು ಜನ ವಾನರವೀರರನ್ನೂ ಹಾಗೂ ನೀಲ, ತಾರ ಮೊದಲಾದವರನ್ನು ಮುಷ್ಟಿಯಿಂದ ಗುದ್ದಿ ನೆಲಕ್ಕೆ ಬೀಳಿಸಿದನು. ಅನಂತರ ಅಂಗದ, ಜಾಂಬವಂತ, ಸುಗ್ರೀವ, ಮತ್ತಿತರ ವಾನರರು ಮರ, ಗಿಡ, ಪರ್ವತಗಳನ್ನು ಎತ್ತಿ ತಂದು ಕುಂಭಕರ್ಣನನ್ನು ಚೆನ್ನಾಗಿ ಹೊಡೆದರು. ಆದರೆ ಕುಂಭಕರ್ಣನ ಎದೆಗೆ ಅಪ್ಪಳಿಸಿದ ಅವೆಲ್ಲವೂ ಅವನ ಎದೆಯ ಪ್ರತಿಘಾತದಿಂದ ಪುಡಿಪುಡಿಯಾದವೇ ವಿನಾ ಶೌರ್ಯದಿಂದ ಮತ್ತನಾದ ಕುಂಭಕರ್ಣನಿಗೆ ಅದರಿಂದ ಸ್ವಲ್ಪವೂ ನೋವಾಗಲಿಲ್ಲ.

ಬಳಿಕ ಸುಗ್ರೀವನು ದೊಡ್ಡ ಪರ್ವತವನ್ನೇ ಕುಂಭಕರ್ಣನ ಮೇಲೆಸೆದನು. ಅವನದನ್ನು ಆತುಹಿಡಿದು ಸುಗ್ರೀವನನ್ನು ಅದರಿಂದ ಹೊಡೆಯಲು ಸೂರ್ಯಪುತ್ರನು ಧರೆಗುರುಳಿದನು. ತರುವಾಯ ಕುಂಭಕರ್ಣನು ಕೋಪದಿಂದ ಅಂಗದ, ಜಾಂಬವಂತರನ್ನು ಅಂಗೈಯಿಂದ ಭರದಿಂದ ಕುಟ್ಟಲು ಅವರೂ ನೆಲಕ್ಕೊರಗಿದರು. ಬಳಿಕ ಬಲಾಢ್ಯನಾದ ಆ ರಕ್ಕಸನು ಸುಗ್ರೀವನನ್ನು ಹೊತ್ತುಕೊಂಡೊಯ್ಯತೊಡಗಿದನು. ಆಗ ಮಾರುತಿಯು ಒಂದು ಸಣ್ಣನೊಣದಂತಾಗಿ ಅವನನ್ನು ಹಿಂಬಾಲಿಸಿ ''ಈ ಕುಂಭಕರ್ಣನು ಸುಗ್ರೀವನನ್ನು ಹಿಂಸಿಸುವಾಗ ನಾನು ಬಿಡಿಸುತ್ತೇನೆ. ಆ ಕಾರ್ಯ ಮಾಡುವಾಗ ಈ ರಕ್ಕಸನ ಪ್ರಾಣ ಕಳೆಯುವುದೂ ವಿಹಿತವೇ ಆದೀತು'' ಎಂದು ಚಿಂತಿಸುತ್ತಾ ನಡೆದನು. ಲಂಕೆಯ ಪ್ರಮುಖ ಜನರು ಕುಂಭಕರ್ಣನು ವಿಜಯಗಳಿಸಿ ಬರುತ್ತಿರುವುದನ್ನು ನೋಡಿ ಅವನನ್ನು ಗೌರವಿಸುತ್ತಿರಲು ಅವನು ಲಂಕಾಪುರಿಯನ್ನು ಹೊಕ್ಕನು. ಲಂಕೆಯ ಜನರು ಕುಂಭಕರ್ಣನಿಗೆ ಶೈತ್ಯೋಪಚಾರ ಮಾಡುತ್ತಿರಲು ಅವನ ಹಿಂದೆ ನಿಂತ ಮಾರುತಿಗೂ ಇಬ್ಬನಿಯ ತುಂತುರು ಧಾರೆಯು ದೊರಕಿತು. ಅದರಿಂದ ಅವನ ಯುದ್ಧಾಯಾಸವೆಲ್ಲ ಪರಿಹಾರವಾಯಿತು. ಬಳಿಕ ಪವನನಂದನನು ಆ ರಕ್ಕಸನಿಗೆ ತಿಳಿಯದಂತೆ ಅವನ ಮೂಗನ್ನು ಕಚ್ಚಿ, ಅವನ ಕಿವಿಗಳನ್ನು ಹರಿದು ಹಲ್ಲುಗಳಿಂದ ಮೂಗು ಕತ್ತರಿಸಿ ಮೇಲೆ ನೆಗೆದನು.

ಆಗ ಕುಂಭಕರ್ಣನು ಕೆಳಗೆ ಬಿದ್ದ ಸುಗ್ರೀವನನ್ನು ಹೊಡೆದು ಕಾಲಿನಿಂದ ಕುಟ್ಟಿದನು. ಸುಗ್ರೀವನು ಅವನ ಕಾಲು ಬೆರಳುಗಳ ಸಂದಿನಲ್ಲಿ ನುಸುಳಿ ಮೇಲೆದ್ದು ಬರುತ್ತಿರಲು ಮತ್ತೊಮ್ಮೆ ಆ ರಕ್ಕಸನು ಅವನನ್ನು ಶೂಲದಿಂದ ಹೊಡೆದನು.

ಶೂಲಾಯುಧವು ಸುಗ್ರೀವನ ಮೇಲೆ ಬೀಳುತ್ತಿರುವುದನ್ನು ಕಂಡ ಹನುಮಂತನು ಕೂಡಲೇ ಅವನನ್ನು ತನ್ನ ಮೊಣಕಾಲಿನ ಮೇಲೆ ಕೂಡಿಸಿಕೊಂಡು ರಾಕ್ಷಸನನ್ನು ಬಲವಾಗಿ ಹೊಡೆದು ಗರ್ಜಿಸಿದನು. ಆಗ ಕುಂಭಕರ್ಣನು ಹನುಮಂತನ ಎದೆಗೆ ಗುದ್ದಿದನು. ಆದರಿಂದ ಇನಿತೂ ವಿಚಲಿತನಾಗದ ಕಪಿರಾಜನು ಅವನನ್ನು ಎದುರಿಸಿ ಗುದ್ದಿದನು. ಪುನಃ ರಾಕ್ಷಸನ ಎದೆಗೆ ಒದ್ದನು. ಆದರಿಂದ ಕುಂಭಕರ್ಣನು ಜ್ಞಾನತಪ್ಪಿ ನೆಲದಮೇಲೆ ಬಿದ್ದು ಮತ್ತೆ ಬೇಗ ಮೂರ್ಛೆ ತಿಳಿದು ಮೇಲೆದ್ದು ಹನುಮಂತನನ್ನು ಬಿಟ್ಟು ಶ್ರೀರಾಮನ ಕಡೆಗೆ ಹೊರಟನು.

ಆಗ ವಾಯುನಂದನನಾದ ಶ್ರೀಹನುಮಂತನು ಮನದಲ್ಲಿ ಇಂತು ಚಿಂತಿಸಿದನು. ''ನಾನು ಈ ಕುಂಭಕರ್ಣನನ್ನು ಸಂಹರಿಸಬಲ್ಲೆ. ನಿಜ, ಆದರೂ ಇವನನ್ನು ಕೊಲ್ಲದೆ ಬಿಡುತ್ತೇನೆ. ಇವನನ್ನು ಸಂಹರಿಸಿದ ಕೀರ್ತಿಯು ಶ್ರೀರಾಮನಿಗೆ ಬರಬೇಕಲ್ಲವೆ? ಅದನ್ನು ನಾನು ತೋರಿಕೊಡುವೆನು. ಶ್ರೀಹರಿಯಲ್ಲದೆ ಬೇರೆಯವರು ಇವನನ್ನು ಸಂಹರಿಸಬಾರದು. ಶ್ರೀರಾಮನೇ ಸ್ವತಃ ಇವನನ್ನು ಕೊಂದು ಕೀರ್ತಿ ಗಳಿಸಬೇಕು. ಹಿಂದೆ ವೈಕುಂಠದ ದ್ವಾರಪಾಲಕರಾಗಿದ್ದ ಜಯ-ವಿಜಯರಿಗೆ ಶ್ರೀಹರಿಯು ''ಎಲೈ ದ್ವಾರಪಾಲಕರಿರಾ, ಮುಂದಿನ ಮೂರು ಜನ್ಮಗಳಲ್ಲಿ ನೀನು ಅಧಿಕ ಬಲಶಾಲಿಗಳಾಗಿ ಉನ್ನತ್ತರಾಗಿ ನನ್ನಿಂದ ಮರಣವನ್ನು ಪಡೆಯಿರಿ'' ಎಂದು ವರವಿತ್ತಿದ್ದಾನೆ. ಒಂದು ವೇಳೆ ನಾನಿವನನ್ನು ಸಂಹರಿಸಿದರೂ ಕುಪಿತನಾಗದೆ ಆ ಪ್ರಭುವು ನನ್ನಲ್ಲಿ ಅನುಗ್ರಹಿಸುವನಾದರೂ ನಾನು ಹಾಗೆ ಆಚರಿಸುವುದು ಧರ್ಮವಲ್ಲ''.

ಹೀಗೆ ಶ್ರೀ ಆಂಜನೇಯ ತತ್ತ್ವಾರ್ಥವನ್ನು ಚಿಂತಿಸಿ ಕುಂಭಕರ್ಣನನ್ನು ಬಿಟ್ಟು ಕಪಿವೀರರಿರುವ ಸ್ಥಳಕ್ಕೆ ನಡೆದನು. ಇತ್ತ ಹನುಮಂತನಿಂದ ಮುಕ್ತನಾದ ಕುಂಭಕರ್ಣನು ಸಕಲ ಕಪಿಗಳನ್ನು ತಿನ್ನುತ್ತಾ ಶ್ರೀರಾಮನ ಬಳಿಗೆ ಭರದಿಂದ ಬಂದನು. ಅವನು ನುಂಗಿದ ಕಪಿವೀರರೆಲ್ಲರೂ ಅವನ ಶರೀರದ ನವದ್ವಾರಗಳ ಮೂಲಕ, ರೋಮಕೂಪಗಳ ದ್ವಾರಾ ಹೊರಹೊರಟು ಪರ್ವತವನ್ನೇರುವ ತೆರನಾಗಿ ಅವನ ಶರೀರದ ಮೇಲೇರಹತ್ತಿದರು. ಮಹಾಗಜದಂತೆ ಮದಿಸಿದ ಆ ರಕ್ಕಸನು ಮೈಮೇಲೆ ಏರಿ ಕುಳಿತ ವಾನರವೀರರನ್ನು ಮೈಕೊಡವಿ ನೆಲಕ್ಕೆ ಕೆಡವಿ ತನ್ನವರು-ಪರಕೀಯರೆಂಬ ಭೇದವಿಲ್ಲದೆ ಸಿಕ್ಕಿದವರನ್ನು ನುಂಗುತ್ತ ಏಕಾಕಿಯಾಗಿ ಯುದ್ಧಕ್ಕಾಗಿ ಶ್ರೀರಾಮನ ಬಳಿ ಸಾರಿದನು. ಲಕ್ಷ್ಮಣನು ಅವನ ಮೇಲೆ ಶರವರ್ಷಗೈಯುತ್ತಾ ತಡೆದರೂ ಲೆಕ್ಕಿಸದೆ ಪರ್ವತಗಳನ್ನು ಹಿಡಿದು ರಾಮನಿಗೆ ಸಮರಾಹ್ವಾನವೀಯುತ್ತಾ ಅವನನ್ನು ಎದುರಿಸಿದನು. ಆಗ ಶ್ರೀರಾಮಚಂದ್ರ ಪ್ರಭುವು ಭಯಂಕರವಾದ ಧನುಸ್ಸನ್ನು ಕೈಗೆ ತೆಗೆದುಕೊಂಡು ವೇಗದಲ್ಲಿ ವಜ್ರಾಯುಧವನ್ನು ಹೋಲುವ ಅನೇಕ ಬಾಣಗಳಿಂದ ಆ ರಕ್ಕಸನ ಮೇಲೆ ಪ್ರಯೋಗಿಸಿದನು. ಖರದೂಷಣಾದಿ ರಕ್ಕಸರನ್ನು ಕೊಲ್ಲುವಾಗ ಅದೆಷ್ಟು ಪ್ರಮಾಣದ ಬಲವನ್ನು ಪ್ರಯೋಗಿಸಿದ್ದನೋ ಅಷ್ಟು ಬಲಪ್ರಯೋಗದಿಂದ ಕುಂಭಕರ್ಣನು ಬೀಳದಿರಲು ಶ್ರೀರಾಮನು ನಸುನಗುತ್ತಾ ತನ್ನ ಬಲದೋಳಿನ ಸಣ್ಣ ಅಂಶವನ್ನು ಪ್ರದರ್ಶಿಸುತ್ತ ಶ್ರೇಷ್ಠ ಶರಗಳನ್ನು ಹೂಡಿ ಎರಡು ಬಾಣಗಳಿಂದ ಕುಂಭಕರ್ಣನ ಕರಗಳನ್ನೂ ಇನ್ನೆರಡು ಶರಗಳಿಂದ ಕಾಲುಗಳನ್ನೂ ಮತ್ತೊಂದು ಬಾಣದಿಂದ ರಕ್ಕಸನ ಕುತ್ತಿಗೆಯನ್ನೂ ಛೇದಿಸಿ ತತ್‌ಕ್ಷಣವೇ ಅವನ ಮೃತದೇಹವನ್ನು ಸಾಗರದ ಆಳವಾದ ನೀರಿನಲ್ಲಿ ಮುಳುಗಿಸಿದನು. ಕುಂಭಕರ್ಣನು ಮೃತನಾಗಿ ಸಮುದ್ರದಲ್ಲಿ ಬಿದ್ದೊಡನೆಯೇ ಮೂರುಲಕ್ಷ ಯೋಜನಗಳವರೆಗೆ ಬೆಳೆದನು. ಆದರಿಂದ ಸಮುದ್ರವೂ ಅಧಿಕವಾಗಿ ಬೆಳೆಯತೊಡಗಿತು. ಆ ಪರಿಯನ್ನು ಕಂಡ ಸಕಲ ದೇವತೆಗಳು ಆನಂದ ಭರಿತರಾಗಿ ಶ್ರೀರಾಮನ ಶಿರಸ್ಸಿನ ಮೇಲೆ ಪುಷ್ಪ ವೃಷ್ಟಿ ಮಾಡಿ ಬಗಬಗೆಯಾಗಿ ಶ್ರೀರಾಮನನ್ನು ಸ್ತೋತ್ರಮಾಡಿದರು.

ಬಳಿಕ ಅಳಿದುಳಿದ ರಾಕ್ಷಸರು ರಾವಣನ ಬಳಿಗೆ ಸಾರಿ ಕುಂಭಕರ್ಣನು ಮೃತನಾದ ವಾರ್ತೆಯನ್ನು ತಿಳಿಸಿದರು. ಅದನ್ನಾಲಿಸಿ ರಾವಣನು ದುಃಖದಿಂದ ಕಡುನೊಂದು ಬಸವಳಿದು ಧರೆಯ ಮೇಲೊರಗಿದನು. ಸ್ವಲ್ಪ ವೇಳೆಯ ನಂತರ ಪ್ರಜ್ಞೆಯನ್ನು ಪಡೆದು ತಾನು ಬದುಕುವ ವಿಷಯದಲ್ಲಿ ಅನುಮಾನಗೊಂಡು ಜೀವಿತದ ಆಶೆ ತೊರೆದನು. ಆಗ ಅವನ

ಮಗನಾದ ಇಂದ್ರಜಿತ್ತು ರಾವಣನಲ್ಲಿಗೆ ಬಂದು ''ಜನಕ, ರಿಪುಗಳನ್ನು ಸಂಹರಿಸಲು ಕೂಡಲೇ ನನ್ನನ್ನು ನೇಮಿಸು. ನಾನು ಹಿಂದೆ ಇಂದ್ರನನ್ನು ಸೆರೆಹಿಡಿದಿರಲಿಲ್ಲವೆ? ಹೀಗಿರಲು ಈ ಮಾನವ ರಾಜಕುಮಾರನಿಗಾಗಿ ನೀನಿಂತು ದುಃಖಿಸುವುದು ತರವೇ'' ಎಂದು ಬಿನ್ನವಿಸಿ ತಂದೆಯನ್ನು ಸಮಾಧಾನಪಡಿಸಿ ಶಿವನನ್ನು ಪೂಜಿಸಿ, ಹೋಮ ಮಾಡಿ ರಥವೇರಿ ಕುಳಿತು ಧನುಸ್ಸಿಗೆ ಹೆದೆಯೇರಿಸಿ ತೀಕ್ಷ್ಣವಾದ ಬಾಣಗಳನ್ನು ಹೂಡಿ ರಥಸಹಿತನಾಗಿ ಗಗನಕ್ಕೆ ಹಾರಿ ಅಲ್ಲಿ ನೋಡುತ್ತಿರುವಂತೆಯೇ ಮಾಯವಾಗಿ ಶಿವವರಬಲದಿಂದ ಉಬ್ಬಿ ನಾಗಾಸ್ತ್ರಗಳನ್ನು ಪ್ರಯೋಗಿಸಿ ನಾಗಪಾಶದಿಂದ ಎಲ್ಲ ಕಪಿವೀರರ ಗುಂಪುಗಳನ್ನು ಕಟ್ಟಿ ಹಾಕಿದನು.

ಹಿಂದೆ ವಿಷ್ಣುವು ತಾನು ರಾಮಾವತಾರ ಕೈಗೊಂಡಾಗ ದೇವತೆಗಳೆಲ್ಲರಿಗೂ ಒಂದೊಂದು ಸೇವೆ ಸಲ್ಲಿಸುವಂತೆ ಆದೇಶವಿತ್ತಿದ್ದನು. ಆಗ ಗರುಡನು ತನಗೂ ಒಂದು ಸೇವೆ ಮಾಡುವ ಭಾಗ್ಯ ಕರುಣಿಸುವಂತೆ ಪ್ರಾರ್ಥಿಸಿದಾಗ ಶ್ರೀವಿಷ್ಣುವು 'ಖಗರಾಜ! ನೀನು ಅವತರಿಸುವ ಅವಶ್ಯವಿಲ್ಲ. ಬೇರೊಂದು ಬಗೆಯಿಂದ ನಾನು ನಿನ್ನ ಸೇವೆ ಸ್ವೀಕರಿಸುವೆನು, ಅದರಿಂದ ನಿನಗೆ ಕೀರ್ತಿ ಮತ್ತು ನನ್ನ ಅನುಗ್ರಹ ದೊರಕುವುದು. ರಾವಣನ ಪುತ್ರನಾದ ಇಂದ್ರಜಿತ್ತು ಲಕ್ಷ್ಮಣ ಮತ್ತು ಸಕಲ ಕಪಿವೀರರನ್ನು ನಾಗಪಾಶದಿಂದ ಬಂಧಿಸಿದಾಗ ನೀನು ಬಂದು ಅವರನ್ನು ನಾಗಪಾಶದಿಂದ ಬಿಡಿಸಬೇಕು, ಗರುಡ! ಆ ನಾಗಪಾಶವನ್ನು ಪರಿಹರಿಸಲು ನಾನು, ಲಕ್ಷ್ಮಣ ಮತ್ತು ಹನುಮಂತ ಮಾತ್ರ ಸಮರ್ಥರಾಗಿದ್ದೇವೆ. ಆದರೂ ನಾವು ನಮ್ಮ ಸಂಕಲ್ಪದಂತೆ ನಿನಗೆ ಸಂತೋಷವಾಗಬೇಕಾದ್ದರಿಂದ ಅದನ್ನು ಪರಿಹರಿಸುವುದಿಲ್ಲ. ಇದೇ ನೀನು ಸಲ್ಲಿಸಬೇಕಾದ ಸೇವೆ'' ಎಂದು ಆದೇಶ ನೀಡಿದ್ದನು. ಆದ್ದರಿಂದಲೇ ಶ್ರೀರಾಮನು ನಾಗಪಾಶದಿಂದ ಕಪಿವೀರರನ್ನು ಬಿಡಿಸಲಿಲ್ಲ. ಆ ಕಾರಣದಿಂದಲೇ ಲಕ್ಷ್ಮಣನೂ ಹನುಮಂತನೂ ಪ್ರಯತ್ನಿಸಲಿಲ್ಲ. ಹನುಮಂತನೊಬ್ಬನೇ ಈ ದೇವರಹಸ್ಯವನ್ನು ಬಲ್ಲವನಾದುದರಿಂದ ಅದನ್ನರಿತ ವಾಯುನಂದನನು ನಾಗಪಾಶವನ್ನು ಪರಿಹರಿಸದೆ ಸುಮ್ಮನಾದನು. ಕಪಿವೀರರನ್ನು ನಾಗಪಾಶದಿಂದ ಬಂಧಿಸಿದ ಇಂದ್ರಜಿತ್ತು ತಂದೆಯ ಬಳಿಗೆ ಹೋಗಿ ಆ ವಿಚಾರವನ್ನು ಅರುಹಿದನು. ಅದನ್ನು ಕೇಳಿ ರಾವಣನು ಮಗನ ಪರಾಕ್ರಮವನ್ನು ಮೆಚ್ಚಿ ಸಂತೋಷಿಸಿ ತನ್ನ ಕಾರ್ಯವನ್ನು ಸಾಧಿಸಿಕೊಂಡು ಬಂದ ಮಗನನ್ನು ಮುಕ್ತಕಂಠದಿಂದ ಹೊಗಳಿದನು.

ಇತ್ತ ಪಕ್ಷಿರಾಜನಾದ ಗರುಡನು ಹಿಂದೆ ಶ್ರೀಹರಿಯು ನೀಡಿದ್ದ ಆದೇಶವನ್ನು ಸ್ಮರಿಸಿ ಬಂಧಿತರಾದ ಕಪಿವೀರರ ಬಳಿಗೆ ಲಗುಬಗೆಯಿಂದ ಹಾರಿಬಂದನು. ಆಗ ಗರುಡನು ಹಾರಿಬರುವಾಗ ಉಂಟಾದ ಅವನ ರೆಕ್ಕೆಯ ಗಾಳಿಯು ತಗಲುವುದರಿಂದಲೇ ಕಪಿವೀರರನ್ನು ಬಂಧಿಸಿದ್ದ ನಾಗಪಾಶಗಳು ಬಿಚ್ಚಿಹೋದವು. ಗರುಡನು ರಮಾರಮಣನೂ ಸರ್ವೋತ್ತಮದೇವನೂ ಆದ ಶ್ರೀರಾಮಚಂದ್ರನ ಚರಣಕಮಲಗಳಿಗೆ ನಮಸ್ಕರಿಸಿ ಅವನಿಂದ ಅನುಗೃಹೀತನಾಗಿ ಹೊರಟು ಹೋದನು. ಅನಂತರ ಹರ್ಷಭರಿತರಾದ ಕಪಿವೀರರು ಮಹಾಬಲವಂತರಾಗಿ ಗಿಡಮರಗಳನ್ನೂ, ಬಂಡೆಗಳನ್ನೂ ಕೈಲಿ ಹಿಡಿದು ವಿಜಯಗರ್ಜನೆ ಮಾಡತೊಡಗಿದರು. ಪುತ್ರಸಹಿತನಾದ ರಾವಣನು ಕಪಿವೀರರ ಸಿಂಹನಾದವನ್ನಾಲಿಸಿ ಮತ್ತೆ ಬಹುಭೀತನಾದನು. ನಾಗಪಾಶದಿಂದ ಕಪಿವೀರರು ಮುಕ್ತರಾದ್ದರಿಂದ ಮುಂದೇನು ಮಾಡಬೇಕೆಂದವನು ಯೋಚನೆಗೀಡಾದನು.

ಆಗ ಇಂದ್ರಜಿತ್ತು ಹೋಮಮಾಡಿ ರಥವೇರಿ ಕುಳಿತು ಗಗನಕ್ಕೆ ಹಾರಿ ಹಿಂದಿನಂತೆಯೇ ಮಾಯವಾಗಿ ರುದ್ರದೇವರ ಮತ್ತು ಬ್ರಹ್ಮದೇವರ ವರಗಳಿಂದ ಲಭಿಸಿದ ದಿವ್ಯಾಸ್ತ್ರಗಳ ಮಳೆಗರೆಯಹತ್ತಿದನು. ಪುನಃ ಲಕ್ಷ್ಮಣಸಹಿತರಾಗಿ ಎಲ್ಲ ವಾನರರೂ ದಿವ್ಯಾಸ್ತ್ರಗಳ ಹೊಡೆತಕ್ಕೀಡಾಗಿ ಧರಾಶಾಯಿಗಳಾದರು. ಆದರೆ ಅಸಾಧ್ಯ ಪರಾಕ್ರಮಶಾಲಿಯಾದ ವಾಯುನಂದನನ್ನು ಆ ದಿವ್ಯಾಸ್ತ್ರಗಳು ಸ್ಪರ್ಶಿಸಲೂ ಶಕ್ತವಾಗಲಿಲ್ಲ. ಅಷ್ಟರಲ್ಲಿ ಲಂಕೆಯಲ್ಲಿನ ವಾರ್ತೆ ತಿಳಿದು ಬರಲು ಹೋಗಿದ್ದ ವಿಭೀಷಣನು ರಣರಂಗಕ್ಕೆ ಬಂದು ಇಂದ್ರಜಿತ್ತುವಿನ ದಿವ್ಯಾಸ್ತ್ರಾಘಾತದಿಂದ ಮೈಮರೆತು ಬಿದ್ದಿರುವ ಕಪಿಗಳನ್ನೂ ಅಲ್ಲಿ ನೆಮ್ಮದಿಯಿಂದ ಕುಳಿತಿದ್ದ ಹನುಮಂತನನ್ನೂ ಕಂಡನು. ಬಾಣಗಳ ನೋವಿನಿಂದ ನರಳುತ್ತಾ ಜಾಂಬುವಂತನು ಕಣ್ಣುಮುಚ್ಚಿ ಕುಳಿತಿರುವಲ್ಲಿಗೆ

ವಿಭೀಷಣನು ಹನುಮಂತನೊಡನೆ ಬಂದು ತಣ್ಣೀರು ಚಿಮುಕಿಸಿ ''ಜೀವಿಸಿರುವೆಯಾ ಜಾಂಬವಂತ'' ಎಂದನು. ಚೇತರಿಸಿಕೊಂಡು ಜಾಂಬುವಂತನು ''ಬದುಕಿದ್ದೇನೆ'' ಎಂದು ಹೇಳಿ ತನ್ನನ್ನು ಪ್ರಶ್ನಿಸಿದವನು ವಿಭೀಷಣನೆಂದು ತಿಳಿದು ಮತ್ತೆ ''ವಿಭೀಷಣ, ಹನುಮಂತನು ಜೀವಿಸಿರುವನೆ? ಅವನು ಬದುಕಿದ್ದರಲ್ಲವೇ ನಾವು ಜೀವಿಸಿರುವುದು. ಅವನ ಹತನಾಗಿದ್ದರೆ ನಾವೆಲ್ಲರೂ ಸತ್ತಂತೆಯೇ ಸರಿ'' ಎನಲು ಆಗ ಹನುಮಂತನು ಮುಂದೆ ಬಂದು ''ಅಯ್ಯಾ, ನಾನು ಇದ್ದೇನೆ'' ಎಂದು ಹೇಳಿದನು. ಆಗ ಜಾಂಬವಂತನು ''ವಾಯುನಂದನ! ಮೇರುಪರ್ವತದ ಸಮೀಪದಲ್ಲಿ ಗಂಧಮಾದನ ಪರ್ವತ-ವಿದೆ. ಅಧರಿಂದ ಅಮೃತಸಂಜೀವಿನೀ ಎಂಬ ಅತಿಮುಖ್ಯ ಔಷಧವು, ಸಂಧಾನಕರಣೀ, ಸವರ್ಣಕರಣೀ, ವಿಶಲ್ಯಕರಣೀ ಎಂಬ ಔಷಧಗಳು ಹೀಗೆ ನಾಲ್ಕು ಔಷಧಗಳು ಈಗ ಮುಖ್ಯವಾಗಿ ಬೇಕಾಗಿವೆ'' ಎಂದೆನಲು ಕೂಡಲೇ ಹನುಮಂತನು ಗಂಧಮಾದನ ಪರ್ವತಕ್ಕೆ ಹೊರಟುಬಿಟ್ಟನು.

ಹನುಮಂತನು ಶ್ರೀರಾಮನು ಪ್ರಯೋಗಿಸಿದ ಬಾಣವೋ ಎಂಬ ತೆರನಾಗಿ ಗಗನದಲ್ಲಿ ಭರದಿಂದ ಹೊರಟು ಗಂಧಮಾದನ ಪರ್ವತಕ್ಕೆ ಬಂದು ಅಲ್ಲಿ ಅಡೆತಡೆಗಳಿರುವುದನ್ನು ನೋಡಿ ಹುಡುಕಲು ತಡವಾಗುವುದೆಂದರಿತು ನೂರು ಯೋಜನ ವಿಸ್ತೀರ್ಣವಾದ ಆ ಪರ್ವತವನ್ನೇ ಬುಡಸಹಿತ ಕಿತ್ತಿ ತನ್ನ ಒಂದು ಕೈಯಲ್ಲಿ ಹಿಡಿದು ಗಗನಕ್ಕೆ ಹಾರಿ ಬಲದೇವನ ಪುತ್ರನಾದ ಹನುಮಂತನು ಅತಿವೇಗಶಾಲಿಯಾಗಿ, ಸುದರ್ಶನಧಾರಿಯಾದ ಶ್ರೀಹರಿಯು ವಾಮನಾವತಾರ ಕಾಲದಲ್ಲಿ ಮೂರುಹೆಜ್ಜೆಗಳಿಂದ ಸಕಲಲೋಕವನ್ನೂ ಆಕ್ರಮಿಸಿದಂತೆ ಐವತ್ತು ಸಹಸ್ರಯೋಜನ ದೂರದ ಲಂಕೆಗೆ ಲೀಲೆಯಿಂದಲೇ ಬಂದು ಸೇರಿದನು. ರೆಪ್ಪೆ ಬಡಿಯುವಷ್ಟು ಕಾಲದಲ್ಲೆ ಅವನು ಪ್ರಜ್ಞೆ ತಪ್ಪಿ ಬಿದ್ದಿದ್ದ ವಾನರವೀರರ ಬಳಿಗೆ ಬಂದನು. ಗಂಧಮಾದನ ಪರ್ವತದ ಗಾಳಿಯ ಸ್ಪರ್ಶಮಾತ್ರದಿಂದ ಎಲ್ಲ ವಾನರ ಚಮೂನಾಯಕರು ಕೂಡಲೇ ಎದ್ದು ಕುಳಿತು. ರಘುಕುಲಾವತಂಸನಾದ ಶ್ರೀರಾಮನು ಅತ್ಯುಗ್ರಪೌರುಷಶಾಲಿಯಾದ ಮಾರುತಿಯನ್ನು ಮುಕ್ತಕಂಠದಿಂದ ಹೊಗಳಿದನು. ರಾಮಾನುಜನಾದ ಲಕ್ಷ್ಮಣ ಮತ್ತು ಇತರ ಸಕಲ ವಾನರವೀರರು ಅವನನ್ನು ಗೌರವಧಿಂದ ಪೂಜಿಸಿದರು. ಸಾಹಸಮಯ ಕಾರ್ಯವೆಸಗಿ ಮಹೋಪಕಾರಮಾಡಿದ ಹನುಮಂತನ ಬಗ್ಗೆ ಅತಿ ಸಂತೋಷಗೊಂಡ ದೇವತೆಗಳು ಮಾರುತಿಯ ಶಿರದ ಮೇಲೆ ಪುಷ್ಪವರ್ಷವನ್ನು ಗೈದರು. ಅನಂತರ ದೇವತೆಗಳು, ಗಂಧರ್ವರು, ಶ್ರೇಷ್ಠ ಋಷಿಗಳು ವಾಯುಪುತ್ರನನ್ನು ನುತಿಸಿದರು. ಶ್ರೀರಾಮನು ತನ್ನ ಅಮೃತಕರಗಳಿಂದ ಹನುಮಂತನನ್ನು ಸವರಿ ಅನುಗ್ರಹಿಸಿದನು. ತರುವಾಯ ಹನುಮಂತನು ಶ್ರೀರಾಮನ ಅನುಗ್ರಹದಿಂದ ತಾನು ತಂದಿದ್ದ ಶತಯೋಜನ ವಿಸ್ತೀರ್ಣವಾದ ಗಂಧಮಾದನ ಪರ್ವತವನ್ನು ನಿಂತಲ್ಲಿಂದಲೇ ಮೇರುಪರ್ವತದ ಕಡೆಗೆ ಎಸೆದನು. ಆ ವೇಗದಿಂದ ಗಗನದಲ್ಲಿ ಹಾರಿಹೋದ ಪರ್ವತವು ಮೊದಲಿನ ಸ್ಥಳದಲ್ಲಿಯೇ ಹಿಂದಿದ್ದಂತೆಯೇ ವ್ಯತ್ಯಾಸವಿಲ್ಲದೆ ಹೋಗಿ ಕುಳಿತಿತು. ಹನುಮಂತನ ಕೌಶಲವಲ್ಲವೆ ಇದು? ತರುವಾಯ ಚೇತರಿಸಿಕೊಂಡು ಮೇಲೆದ್ದ ಕಪಿವೀರರು ಕೈಯಲ್ಲಿ ಬೆಟ್ಟಗುಡ್ಡ ಗಿಡಮರಗಳನ್ನು ಹಿಡಿದು ಅಬ್ಬರದಿಂದ ಗರ್ಜಿಸುತ್ತ ಯುದ್ಧಕ್ಕೆ ಸಿದ್ಧರಾಗಿ ನಿಂತರು.

ಮತ್ತೆ ಕಪಿವೀರರು ಹೋರಾಡಲು ಸಿದ್ಧರಾದುದನ್ನು ಕಂಡು ಇಂದ್ರಜಿತ್ತು ಹೆದರಿದನು. ಅವನು ಮತ್ತೆ ಹೋಮಮಾಡಿ ಶಿವನನ್ನು ಆರಾಧಿಸಿ ರಥವೇರಿ ಗಗನಕ್ಕೆ ಹಾರಿ ಮಾಯವಾಗಿ ಮಾಯಾ ಯುದ್ಧದಲ್ಲಿ ತೊಡಗಿ ಬ್ರಹ್ಮರುದ್ರ ವರಬಲದಿಂದ ಮದಿಸಿ ಸಮ್ಮೋಹನಾಸ್ತ್ರಗಳಿಂದ ಕಪಿವೀರರನ್ನು ಬಂಧಿಸಿದನು. ಆದರೆ ಅದು ಲಕ್ಷ್ಮಣನನ್ನು ಏನೂ ಮಾಡಲಿಲ್ಲ. ಪೂರ್ವದಲ್ಲಿ ಶ್ರೀರಾಮನ ಆಣತಿಯಂತೆ ಅತಿಕಾಯ ಮೊದಲಾದ ರಕ್ಕಸರ ಮೇಲೆ ಶರವರ್ಷ ಮಾಡಿದ್ದಂತೆ ಈಗ ಲಕ್ಷ್ಮಣನು ''ಪ್ರಭು, ಬ್ರಹ್ಮಾಸ್ತ್ರದಿಂದ ಈ ದುಷ್ಟನನ್ನು ಬಂಧುಜನ ಸಹಿತವಾಗಿ ಸಂಹರಿಸಲು ಆಜ್ಞೆ ನೀಡು'' ಎಂದು ರಾಮನನ್ನು ಪ್ರಾರ್ಥಿಸಿದನು. ಆಗ ಶ್ರೀರಾಮ ''ಭಯಗೊಂಡು ಅದೃಶ್ಯರಾದವರ ಮೇಲೆ ಅಸ್ತ್ರಪ್ರಯೋಗ ಮಾಡುವುದು ಸರಿಯಲ್ಲ. ನೀನು ಪುನಃ ಪುನಃ

ಒಂದೇ ಅಸ್ತ್ರವನ್ನು ಧರಿಸಿ ಪ್ರಯೋಗಿಸಲಾಗದಿದ್ದರೆ ನಾನು ಒಂದೇ ಬಾಣದಿಂದ ಸಪ್ತತಾಳವೃಕ್ಷಗಳಲ್ಲಿದ್ದ ರಾಕ್ಷಸರನ್ನು ಹಿಂದೆ ಸಂಹರಿಸಿದಂತೆ ಇಂದ್ರಜಿತುವು ಅದೃಶ್ಯನಾಗಿದ್ದರೂ ರಸಾತಲ ಸತ್ಯಲೋಕಗಳಲ್ಲಿದ್ದರೂ ಬಿಡದೆ ಸಂಹರಿಸುವೆನು'' ಎಂದು ಹೇಳಿ ಶ್ರೀರಾಮಚಂದ್ರನು ಈ ಹಿಂದೆ ಗರುಡ-ಹನುಮಂತರ ಶಕ್ತಿಯನ್ನು ಜಗತ್ತಿನಲ್ಲಿ ಪ್ರಸಿದ್ಧಿಪಡಿಸಲು ಸುಮ್ಮನಿದ್ದು ಅವರಿಂದ ಸಂಹಾರಕಾರ್ಯ ಮಾಡಿಸಿದಂತೆ, ಲಕ್ಷ್ಮಣನಿಗೆ ಬ್ರಹ್ಮಾಸ್ತ್ರಧರಿಸಲಾಜ್ಞಾಪಿಸಿ, ಇಂದ್ರಜಿತುವನ್ನು ಬಯಲಿಗೆಳೆಯಲು ಒಂದೇ ಬಾಣವನ್ನು ಬಿಲ್ಲಿಗೆ ತೊಟ್ಟು ನಿಂತನು. ತನ್ನ ಮಾಯೆ ಬಯಲಾಯಿತೆಂದು ಹೆದರಿದ ಇಂದ್ರಜಿತುವಿಗೆ ರಾಮನ ಪರಾಕ್ರಮದ ಅರಿವಾಯಿತು. ರಾಮನನ್ನು ಅವನು ದೇವರೆಂದು ನಿಶ್ಚಯಿಸಿ ಪ್ರಾಣ ಉಳಿಸಿಕೊಳ್ಳಲು ಅಲ್ಲಿಂದ ಓಡಿದನು.

ಹಾಹಾಕಾರ ಮಾಡುತ್ತಾ ಇಂದ್ರಜಿತುವು ಓಡುವುದನ್ನು ಕಂಡು ದೇವತೆಗಳು ನಕ್ಕರು. ಇತ್ತ ರಾಮನು ವಿಜ್ಞಾನಾಸ್ತ್ರವನ್ನು ಕಪಿವೀರರ ಮೇಲೆ ಪ್ರಯೋಗಿಸಲು ಅದು ಅವರನ್ನು ಬಿಗಿದಿದ್ದ ನಾಗಪಾಶವನ್ನು ತುಂಡರಿಸಿತು. ಅದರಿಂದ ಕಪಿಗಳಿಗಾವ ಅಪಾಯವೂ ಸಂಭವಿಸಲಿಲ್ಲ. ಶ್ರೀರಾಮನ ವಿಜ್ಞಾನಾಸ್ತ್ರದಿಂದ ಇಂದ್ರಜಿತುವಿನ ಸಮ್ಮೋಹನಾಸ್ತ್ರವು ತಣ್ಣಗಾಯಿತು. ಕಪಿವೀರರು ಹರ್ಷದ್ವನಿಗೈದು ರಾಮನನ್ನು ಸ್ತುತಿಸಿದರು. ದೇವತೆಗಳು ರಾಮನ ಮೇಲೆ ಕುಸುಮವೃಷ್ಟಿಗೈದರು. ಅನಂತವೀರ್ಯನಾದ ಶ್ರೀರಾಮನು ಕೋದಂಡ ಧರಿಸಿ ನಿಂತನು. ಅತ್ತ ಇಂದ್ರಜಿತುವು ಮಾಯೆಯಿಂದ 'ನಿಕುಂಭಿಲಾ' ಎಂಬ ಗಿರಿಗುಹೆಯನ್ನು ರಚಿಸಿ ಅಲ್ಲಿ ಅಗ್ನಿಯಲ್ಲಿ ಹೋಮ ಮಾಡತೊಡಗಿದನು. ವಿಭೀಷಣನು ರಾಮನ ಬಳಿಗೈತಂದು ''ಪ್ರಭು, ಕೂಡಲೇ ಇಂದ್ರಜಿತುವನ್ನು ಸಂಹರಿಸಲು ಆಜ್ಞೆ ಮಾಡಿರಿ. ತಡವಾದರೆ ಅವನನ್ನು ಸಂಹರಿಸಲಾಗದು. ಏಕೆಂದರೆ ಬ್ರಹ್ಮದೇವರು ಅವನಿಗೆ ''ಅಗ್ನಿ ಪೂಜೆ ಮಾಡಿದ ಮೇಲೆ ನಿನ್ನನ್ನು ಯಾರಿಂದಲೂ ವಧಿಸಲಾಗದಿರಲಿ'' ಎಂದು ವರಕೊಟ್ಟಿರುವನು'' ಎಂದು ಬಿನ್ನವಿಸಿದನು. ''ಇಂದ್ರಜಿತುವು ಭಯದಿಂದ ಓಡಿಹೋಗಿ ಪ್ರಾಣರಕ್ಷಿಸಿಕೊಳ್ಳಲು ಅತ್ರ ಪರೀಕ್ಷೆಗೆ ತೊಡಗಿದ್ದಾನೆ. ಅವನ ಎಲ್ಲ ಶಕ್ತಿ ಉಡುಗಿಹೋಗಿದೆ. ಕೂಟಯುದ್ಧದಲ್ಲಿ ಅವನು ಸಮರ್ಥ. ಅವನನ್ನು ನಾನು ವಧಿಸುವುದು ಯುಕ್ತವಲ್ಲ''ವೆಂದು ಶ್ರೀರಾಮನು ಯೋಚಿಸಿದನು. ಯದ್ಯಪಿ ಇಂದ್ರಜಿತುವಿನ ಚತುರ್ಥ ಹೋಮ ಮುಗಿದಮೇಲೂ ಅವನನ್ನು ಸಂಹರಿಸಲು ಅವನು ಸಮರ್ಥನೇ ಅಹುದು. ಆದರೂ ಸತ್ವಹೀನನಾಗಿ ಜೀವಗಳ್ಳನಾಗಿ ಓಡಿದ ಅವನನ್ನು ವಧಿಸುವುದು ತನಗೆ ವಿಹಿತವಲ್ಲವೆಂದು ಭಾವಿಸಿದನು. ಲಕ್ಷ್ಮಣನಿಂದ ಅವನನ್ನು ಕೊಲ್ಲಿಸುವುದೇ ಅವನ ಸಂಕಲ್ಪ. ಆದ್ದರಿಂದ ಹನುಮಂತನೂ ಅವನನ್ನು ವಧಿಸಬಾರದು. ಲಕ್ಷ್ಮಣನಿಗೆ ಬ್ರಹ್ಮದೇವರ ವರವನ್ನು ಉಲ್ಲಂಘಿಸುವ ಸಾಮರ್ಥ್ಯವಿಲ್ಲದ್ದರಿಂದ ಆ ಮಹಾಪ್ರಭುವು ಇಂದ್ರಜಿತುವಿನ ಹೋಮ ಮುಗಿಯುವುದರೊಳಗೆ ಅವನನ್ನು ಸಂಹರಿಸುವಂತೆ ಲಕ್ಷ್ಮಣನಿಗೆ ಅಪ್ಪಣೆ ಮಾಡಿ ಹನುಮಂತ, ವಿಭೀಷಣ ಮತ್ತು ಸಕಲ ಕಪಿವೀರರೊಡನೆ ಇಂದ್ರಜಿತುವಿದ್ದ ಸ್ಥಳಕ್ಕೆ ಬಂದನು. ಕಪಿವೀರರ ಮೂಲಕ ಇಂದ್ರಜಿತುವಿನ ಹೋಮಕ್ಕೆ ವಿಘ್ನವನ್ನು ತಂದೊಡ್ಡಿದನು. ಇಂದ್ರಜಿತುವು ಜಯಾಪೇಕ್ಷೆಯಿಂದ ಯುದ್ಧಕ್ಕೆ ಸಿದ್ಧನಾಗಿ ರಥದಲ್ಲಿ ಕುಳಿತು ಗರ್ಜಿಸುತ್ತ ಲಕ್ಷ್ಮಣನನ್ನು ಎದುರಿಸಿದನು. ಲಕ್ಷ್ಮಣ-ಇಂದ್ರಜಿತುಗಳಲ್ಲಿ ಘೋರ ಯುದ್ಧ ಪ್ರಾರಂಭವಾಯಿತು. ಅಸ್ತ್ರವಿದ್ಯೆಯಲ್ಲಿ ಕುಶಲರಾದ ಅವರಿಬ್ಬರೂ ಬಾಣಗಳ ಮಳೆಯನ್ನೇ ಸುರಿಸುತ್ತಾ ಹೋರಾಡಿದರು. ತರುವಾಯ ಲಕ್ಷ್ಮಣನು ರಕ್ಕಸನ ಸಕಲಾಸ್ತ್ರಗಳನ್ನೂ ಪ್ರತ್ಯಸ್ತ್ರಗಳಿಂದ ಛೇದಿಸಿ ಸ್ವರ್ಣಕುಂಡಲಗಳಿಂದ ಕಂಗೊಳಿಸುತ್ತಿದ್ದ ಇಂದ್ರಜಿತುವಿನ ಶಿರಸ್ಸನ್ನು ಒಂದೇ ಬಾಣದಿಂದ ಕತ್ತರಿಸಿ ಹಾಕಿದನು. ಇಂದ್ರಜಿತ್ತು ಅಸುನೀಗಿದನು. ಆನಂದದಿಂದ ಅಮರರು ಪುಷ್ಪವೃಷ್ಟಿಗೈದರು.

ಇಂದ್ರಜಿತುವು ಮೃತನಾದಮೇಲೆ ಕಪಿವೀರರು ಅನೇಕಕೋಟಿ ರಾಕ್ಷಸರನ್ನು ಸಂಹರಿಸಿದರು. ಅಳಿದುಳಿದ ರಾಕ್ಷಸರು ಇಂದ್ರಜಿತುವಿನ ಮರಣವಾರ್ತೆಯನ್ನು ರಾವಣನಿಗೆ ತಿಳಿಸಿದರು. ಅಹಿತವೂ ಘೋರವೂ ಆದ ತನ್ನ ಪ್ರಿಯಕುಮಾರನ ಮರಣ ವಿಚಾರವನ್ನು ಕೇಳಿ ರಾವಣನು ಬಹುವಾಗಿ ದುಃಖಿಸಿ ಗಳಗಳ ಅತ್ತನು. ಇನ್ನು ತನ್ನ ಮರಣ ನಿಶ್ಚಯವೆಂದರಿತು

ಮರಣಾಭಿಮುಖನಾದ ರಾವಣನು ತನ್ನ ದಳಪತಿಗಳನ್ನು ಕರೆದು 30 ಸಾವಿರ ದಂಡಾಳುಗಳ ಮಹತ್ತರ ದಳವನ್ನೂ, ಆರು ಸಾವಿರ ಅಕ್ಷೌಹಿಣೀ ಸೈನ್ಯವನ್ನೂ ಶ್ರೀರಾಮನ ಮೇಲೆ ಯುದ್ಧಕ್ಕೆ ಹೋಗಲು ಜಾಗ್ರತೆ ಸಿದ್ಧಪಡಿಸುವಂತೆ ಹೇಳಿ ತಾನೂ ಸಮರ ಸನ್ನಾಹದಲ್ಲಿ ಮಗ್ನನಾದನು. ರಾವಣನ ಸೈನ್ಯವನ್ನೆದುರಿಸುವುದಾರಿಂದಲೂ ಸಾಧ್ಯವಾಗದ ಮಾತು. ಆ ಸೈನಿಕರು ಅತಿ ಭಯಂಕರರಾಗಿ, ಬ್ರಹ್ಮದೇವರ ವರದಿಂದ ಮತ್ತರಾಗಿದ್ದರು. ಪ್ರಳಯಕಾಲದ ಸಮುದ್ರಜಲದಂತೆ ಮೇರೆದಪ್ಪಿ ಭರಭರನೆ ತಿರುಗುತ್ತ, ವಿವಿಧ ಶಸ್ತ್ರಾಸ್ತ್ರಪಾಣಿಗಳಾಗಿ ಮುನ್ನುಗ್ಗುತ್ತಿದ್ದರು. ಇಂಥ ಸೈನ್ಯಸಹಿತನಾದ ರಾವಣನು ಬೇಗ ಕಪಿವೀರಸೈನ್ಯವಿದ್ದಲ್ಲಿಗೆ ಬಂದನು.

ಮಹಾಸಾಗರವೇ ಉಕ್ಕಿಬರುವಂತಿದ್ದ ಆ ರಕ್ಕಸ ಸೇನೆಯನ್ನು ಕಂಡ ವಾನರವೀರರು ಭಯಗೊಂಡು, ತಳಮಳಿಸಿ, ಅಲ್ಲಿಂದ ಚದುರಿ ಓಡಹತ್ತಿದರು. ಹಿಂದೆ ಬ್ರಹ್ಮದೇವರು ರಾವಣನ ತಪಸ್ಸಿಗೆ ಮೆಚ್ಚಿ ಅಲ್ಪವಾದ ಭೂತಲದಲ್ಲಿ ವಾಸಿಸುವ ಶಕ್ತಿ ಮತ್ತು ಅಜೇಯತ್ವವನ್ನು ಕರುಣಿಸಿದ್ದರು. ಅಂತೆಯೇ ಸುಗ್ರೀವಾದಿ ಕಪಿವೀರರಿಗೆ ಅವನನ್ನು ನೋಡುವುದಕ್ಕೂ ಸಾಧ್ಯವಾಗದೆ ಅವರು ಭ್ರಾಂತರಾಗಿ ಓಡಿದರು. ಶ್ರೀರಾಮನು ಕೋದಂಡಪಾಣಿಯಾಗಿ ಶರವರ್ಷಗೈಯುತ್ತಾ ಆಕ್ರಮಿಸಿ ಬರುತ್ತಿದ್ದ ರಕ್ಕಸರ ಗುಂಪನ್ನು ಸಂಹರಿಸಿದನು. ಒಬ್ಬನೇ ಆದ ಆ ಮಹಾಪ್ರಭುವು ಎಲ್ಲ ದಿಕ್ಕುಗಳಲ್ಲಿಯೂ ಅನೇಕನಾಗಿ ಕಾಣಿಸಿಕೊಂಡು ಎಲ್ಲ ಕ್ರೂರ ರಾಕ್ಷಸರನ್ನೂ ವಿವಿಧ ರೀತಿಯಲ್ಲಿ ಸಂಹರಿಸಿ ಕಪಿಶ್ರೇಷ್ಠರಿಂದ ಪೂಜೆಗೊಂಡನು. ಮುದಗೊಂಡ ಅಮರರು ಶ್ರೀರಾಮಚಂದ್ರನನ್ನು ವಿಧವಿಧವಾಗಿ ಸ್ತುತಿಸಿ ಹೂಮಳೆಗರೆದರು.

ಅಳಿದುಳಿದ ರಾಕ್ಷಸರು ಓಲೈಸುತ್ತಿರಲು ಮಹಾಬಲಸಂಪನ್ನನಾದ ರಾವಣನು ಬೇಗ ಪ್ರಾಣತೊರೆಯಲು ಹಾರೈಸಿ ಪುಷ್ಪಕ ವಿಮಾನವನ್ನೇರಿ ಶ್ರೀರಾಮನೆಡೆಗೆ ತಂದನು. ವಿರೂಪನೇತ್ರ, ಯೂಪನೇತ್ರ, ಮಹಾಪಾರ್ಶ್ವ, ಹಾಗೂ ಮಹೋದರರೆಂಬ ಮಂತ್ರಿಗಳೂ ಮರಣವನ್ನು ಮುಂದಿಟ್ಟುಕೊಂಡು ರಾವಣನನ್ನು ಅನುಸರಿಸಿದರು. ಕಪಿವೀರರು ಬೆಟ್ಟಗುಡ್ಡಗಳಿಂದ ಹೊಡೆದು ರಾವಣನ ಸೈನಿಕರನ್ನು ಸಾಯಿಸಹತ್ತಿದರು. ಅದನ್ನು ಕಂಡ ಮಹಾ ಪರಾಕ್ರಮಿಯಾದ ಮಹೋದರನು ಕುಪಿತನಾಗಿ ಭರದಿಂದ ಅತ್ತ ಸಾಗಿದನು. ದೊಡ್ಡ ಭೂತದಂತಿರುವ ಅವನನ್ನು ಕಂಡು ಕಪಿವೀರರು "ಹೋ, ಕುಂಭಕರ್ಣನೇ ಇವನು" ಎಂದು ಹೆದರಿ ಓಡಲಾರಂಭಿಸಿದರು. ಆಗ ಅಂಗದನು "ಇವನು ಕುಂಭಕರ್ಣನಲ್ಲ. ಇವನ ದೇಹ ನೋಡಲು ಭಯಪ್ರದವಾಗಿದೆ ಅಷ್ಟೇ ಓಡಬೇಡಿ" ಎಂದು ವಾನರವೀರರನ್ನು ತಡೆದು ಮಹೋದರನನ್ನು ಎದುರಿಸಿ ನಿಂತನು. ಮಹೋದರನು ಭರದಿಂದ ಬಿಡುತ್ತಿದ್ದ ಬಾಣಗಳನ್ನು ಲೆಕ್ಕಿಸದೆ ಅಂಗದನು ಅವನ ಕುತ್ತಿಗೆಯನ್ನು ಮುರಿದು ಕಾಲಿನಿಂದ ಮೆಟ್ಟಿ ಪುಡಿಪುಡಿ ಮಾಡಿದನು. ಮಹೋದರನು ಪ್ರಾಣಬಿಟ್ಟನು. ಅನಂತರ ಮೇಲೇರಿ ಬಂದ ಮಹಾಪಾರ್ಶ್ವನ ಧನುವನ್ನು ಮುರಿದು ಕರದಲ್ಲಿದ್ದ ಖಡ್ಗವನ್ನು ಕಿತ್ತುಕೊಂಡು ಅವನ ಕೂದಲನ್ನು ಹಿಡಿದು ನೆಲಕ್ಕೆ ಕೆಡವಿ ಖಡ್ಗದಿಂದ ಅವನ ದೇಹವನ್ನು ಜನಿವಾರದ ಆಕಾರದಲ್ಲಿ ಕತ್ತರಿಸಿಹಾಕಿದನು. ಮಹಾಪಾರ್ಶ್ವನು ಅಸುನೀಗಿದನು. ತರುವಾಯ ವಿರೂಪನೇತ್ರ-ಯೂಪನೇತ್ರರು ಆಯುಧಗಳನ್ನು ಹಿಡಿದು ಬಾಣದ ಸುರಿಮಳೆ ಸುರಿಸಹತ್ತಿದರು. ಆದರಿಂದ ಅಂಗದನಿಗೆ ಅಲುಗಾಡಲೂ ಆಗದಂತಾಯಿತು. ಆಗ ಸುಗ್ರೀವನು ದೊಡ್ಡ ಪರ್ವತವನ್ನು ಕಿತ್ತು ತಂದು ಅವರ ಮೇಲೆಸೆದನು. ಆದರಿಂದ ರಾವಣನ ಮಂತ್ರಿಗಳಾದ ಅವರೀರ್ವರೂ ಧರೆಗೊರಗಿ ಪುಡಿಪುಡಿಯಾಗಿ ಪ್ರಾಣಬಿಟ್ಟರು. ಇದರಿಂದ ಕುಪಿತನಾದ ರಾವಣನು ಒಂದು ಬಾಣದಿಂದ ಸುಗ್ರೀವನ ಎದೆಗೆ ಹೊಡೆಯಲು ಅವನು ಧರೆಗುರುಳಿದನು. ಬಳಿಕ ರಾವಣನು ತೀಕ್ಷ್ಣ ಶರಗಳಿಂದ ಅನೇಕ ವಾನರವೀರರನ್ನು ದೂರ ಬಿಸಾಡಿದನು. ತರುವಾಯ ರಾಕ್ಷಸ ಚಕ್ರವರ್ತಿಯು ರಾಮಚಂದ್ರನತ್ತ ನಡೆದನು. ಆದನ್ನು ಕಂಡ ಲಕ್ಷ್ಮಣನು ಬಾಣಗಳನ್ನು ಪ್ರಯೋಗಿಸಿ ಅವನನ್ನು ತಡೆಗಟ್ಟಿದನು.

ಹಿಂದೆ ಮಯಾಸುರನಿಗೆ ಬ್ರಹ್ಮದೇವರು ಮೆಚ್ಚಿ ಶಕ್ತ್ಯಾಯುಧವನ್ನು ಅನುಗ್ರಹಿಸಿದ್ದರು. ಅವನದನ್ನು ತನ್ನ ಮಗಳಾದ ಮಂಡೋದರಿಯನ್ನು ರಾವಣನಿಗಿತ್ತು ವಿವಾಹ ಮಾಡಿಕೊಟ್ಟಾಗ ಶಕ್ತ್ಯಾಯುಧವನ್ನು ಅಳಿಯನಿಗೆ ಉಡುಗೊರೆಯಾಗಿ

ಕೊಟ್ಟಿದ್ದನು. ಅದನ್ನೀಗ ರಾವಣನು ಲಕ್ಷ್ಮಣನ ಮೇಲೆ ಪ್ರಯೋಗಿಸಲು ಲಕ್ಷ್ಮಣನ ಹೃದಯ ಸೀಳಿ ಅವನು ಮೂರ್ಛಿತನಾದನು. ಆದರಿಂದ ಸಿಟ್ಟಾದ ಪವನನಂದನನಾದ ಹನುಮಂತನು ಅತಿದೊಡ್ಡ ಬೆಟ್ಟವನ್ನು ಮೇಲೆತ್ತಿ ರಾವಣನ ಎದೆಗೆ ಹೊಡೆದನು. ಅದರ ನೋವನ್ನು ತಾಳಲಾರದೆ ರಾವಣನು ಹತ್ತು ಮುಖಗಳಿಂದಲೂ ರಕ್ತ ಕಾರಿದನು. ಅಷ್ಟರಲ್ಲಿ ಹನುಮಂತನು ಲಕ್ಷ್ಮಣನನ್ನು ಶಕ್ತ್ಯಾಯುಧ ಸಹಿತವಾಗಿ ಎತ್ತಿಕೊಂಡು ಶ್ರೀರಾಮನ ಸಮೀಪಕ್ಕೆ ಬಂದನು. ಶ್ರೀರಾಮನು ವಾಯುಸುತನೊಡನೆ ರಹಸ್ಯವಾಗಿ ಮಾತನಾಡಿ ಗಂಧಮಾದನ ಪರ್ವತದಲ್ಲಿರುವ ಸಂಜೀವಿನೀ ಮುಂತಾದ ಔಷಧಗಳನ್ನು ತರಲಾಜ್ಞಾಪಿಸಿದನು. ಅದರಂತೆ ಹನುಮಂತನು ಹಿಂದಿನಂತೆಯೇ ಆ ಪರ್ವತವನ್ನೇ ಕಿತ್ತು ತಂದನು. ಆ ಪರ್ವತದ ವಾಸನೆಯಿಂದಲೇ ಲಕ್ಷ್ಮಣನು ಮೇಲೆದ್ದು ಕುಳಿತನು ಮತ್ತು ಬಲ-ಉತ್ಸಾಹಗಳಿಂದ ಹರ್ಷಿಸಿದನು. ಅನಂತಗುಣ ಸಾಗರನಾದ ಶ್ರೀರಾಮಪ್ರಭುವು ಮಂದಹಾಸದಿಂದ ಹನುಮಂತನನ್ನಾಲಿಂಗಿಸಿ ಮುದಿಸಿದನು. ತರುವಾಯ ಹನುಮಂತನು ಪರ್ವತವನ್ನು ಇದ್ದಲ್ಲಿಂದಲೇ ಎಸೆದು ಮೊದಲಿದ್ದ ಸ್ಥಳದಲ್ಲೇ ಮೊದಲಿನಂತೆಯೇ ಅದನ್ನು ಸ್ಥಾಪಿಸಿದನು. ಮೃತರಾಗಿದ್ದ ವಾನರರೆಲ್ಲರೂ ಆ ಪರ್ವತದ ಸುಗಂಧ ಸೇವನೆಯಿಂದ ಮತ್ತೆ ಜೀವಂತರಾದರು. ಸರ್ವಜ್ಞನಾದ ಶ್ರೀರಾಮನು ಆ ಪರ್ವತವನ್ನು ತರುವ ಮೊದಲೇ ರಾಕ್ಷಸರ ಮೃತದೇಹಗಳನ್ನು ಕಪಿವೀರರ ಮೂಲಕ ಸಮುದ್ರಕ್ಕೆ ಹಾಕಿಸಿದ್ದರಿಂದ ರಾಕ್ಷಸರು ಮತ್ತೆ ಜೀವಿಸಲವಕಾಶವಾಗಲಿಲ್ಲ. ವಾನರರು ಮಾತ್ರ ಪುನಃ ಬದುಕಿದರು. ಅವರ ಎಲ್ಲ ರೋಗರುಜಿನ, ಬೇಸರಿಕೆಗಳು ಪರಿಹಾರವಾದವು. ಗಂಧಮಾದನದಲ್ಲಿದ್ದ ಸಿದ್ಧೌಷಧಗಳ ಪ್ರಭಾವದಿಂದ ಕಪಿವೀರರು ಬದುಕಿದ್ದು ಮಾತ್ರವಲ್ಲದೆ ಕ್ಷತವಿಕ್ಷತವಾಗಿದ್ದ ಅವರ ಅಂಗಾಂಗಗಳೆಲ್ಲ ಮೊದಲಿನಂತಾದವು. ಅವರು ಹಿಂದಿನಂತೆ ದೃಢಕಾಯರೂ ಆರೋಗ್ಯವಂತರೂ ಆದರು.

ತರುವಾಯ ರಾವಣನು ಪುಷ್ಪಕವಿಮಾನದಲ್ಲಿ ಕುಳಿತು ಶ್ರೀರಾಮನ ಸಮೀಪಕ್ಕೆ ಬಂದು ಬಾಣಗಳ ಮಳೆಯನ್ನೇ ಸುರಿಸಲಾರಂಭಿಸಿದನು. ಕೂಡಲೇ ಶ್ರೀರಾಮನು ಧನುಸ್ಸಿಗೆ ಹೆದೆಯೇರಿಸಿ ಅವನನ್ನು ಎದುರಿಸಿ ನಿಂತನು. ಆಗ ದೇವೇಂದ್ರನು ಶ್ರೀರಾಮನಿಗಾಗಿ ತನ್ನ ದಿವ್ಯರಥ ದಿವ್ಯಾಸ್ತ್ರ ಸಮೂಹಗಳನ್ನು ಮಾತಲಿಯ ಮೂಲಕ ಕಳಿಸಿಕೊಟ್ಟು ತನ್ನ ಭಕ್ತಿ ಶ್ರದ್ಧೆಗಳನ್ನು ಪ್ರಕಟಿಸಿದನು. ಶ್ರೀರಾಮನು ಆ ರಥದಲ್ಲಿ ಕುಳಿತನು. ಭಗವಾನ್ ದಿನಮಣಿಯು ದಿವ್ಯರಥವೇರಿ ಸಕಲ ಜಗತ್ತಿಗೆ ಕವಿದಿದ್ದ ಗಾಢಾಂಧಕಾರವನ್ನು ಪರಿಹರಿಸುತ್ತಾ; ಕಂಗೊಳಿಸುವ ತರುಣಾರುಣಕಿರಣಸರಣಿಯನ್ನೆರಚುತ್ತಾ ಪೂರ್ವಾಚಲದಿಂದ ಉದಯಿಸಿ ಮೇಲೆದ್ದು ಬರುವಂತೆ ಜಗತ್ತಿಗೆ ಏಕೈಕ ಪ್ರಭುವಾದ ಶ್ರೀರಾಮಚಂದ್ರನು ಹೊಂಗಿರಣಗಳಿಂದ ಶೋಭಿಸುವ ಸುರಪತಿಯ ಪರಮರಥದಲ್ಲಿ ಮಂಡಿಸಿ ಶರಣಜನಸಂದೋಹಕ್ಕೆ ಅಭಯವೀಯಲು ರಾತ್ರಿಂಚರರೊಡೆಯನಾದ ರಾವಣನ ಸಮೀಪಕ್ಕೆ ಬಂದನು.

ಶ್ರೀರಘುಕುಲಲಲಾಮನು ಭರದಿಂದ ತನ್ನತ್ತ ಬರುತ್ತಿರುವುದನ್ನು ಕಂಡು ರಾಕ್ಷಸರೊಡೆಯನಾದ ರಾವಣನು ಅನೇಕ ಶಸ್ತ್ರಾಸ್ತ್ರಗಳನ್ನು ರಾಮನ ಮೇಲೆ ಪ್ರಯೋಗಿಸತೊಡಗಿದನು. ರಘುಪತಿಯು ಅವೆಲ್ಲವನ್ನೂ ತಡೆಗಟ್ಟಿ ಏಕಕಾಲದಲ್ಲಿ ರಾವಣನ ಹತ್ತು ತಲೆಗಳನ್ನು ಕತ್ತರಿಸಿ ಹಾಕಿದನು. ಆದರೆ ಬ್ರಹ್ಮದೇವರ ವರಪ್ರಭಾವದಿಂದ ಅವನ ತಲೆಗಳು ಮತ್ತೆ ಬಂದು ಸೇರಹತ್ತಿದವು. ಆಗ ಸರ್ವಜ್ಞನೂ ರಣಮಲ್ಲನೂ ಆದ ಶ್ರೀರಾಮಭದ್ರನು ಇದನ್ನರಿತು ಮೃತ್ಯುಸದೃಶವಾದ ಒಂದೇ ಬಾಣದಿಂದ ರಾವಣನ ಹೃದಯವನ್ನು ಸೀಳಿದನು. ರಾವಣನ ಶಿರಗಳೂ ಉರುಳಿದವು. ರಾವಣನು ರಕ್ತಕಾರುತ್ತಾ ವಿಮಾನದಿಂದ ಉರುಳಿ ಬಿದ್ದು ಮೃತನಾದನು. ತ್ರಿಲೋಕಕಂಟಕನಾದ ರಾವಣನು ಮೃತನಾಗಲು ಬ್ರಹ್ಮದೇವರು ರುದ್ರದೇವರು ಸಕಲಲೋಕಪಾಲರೊಡನೆ ಜಗದೇಕನಾಥನಾದ ಶ್ರೀರಾಮನ ಚರಣಕಮಲಗಳ ಬಳಿಸಾರಿ ಭಕ್ತಿಪರವಶರಾಗಿ ಶಿರಬಾಗಿ ನಮಸ್ಕರಿಸಿದರು. ಅನಂತರ ಕರಜೋಡಿಸಿ ಬ್ರಹ್ಮದೇವರು ಶ್ರೀರಾಮನನ್ನು ಮುಕ್ತಕಂಠದಿಂದ ಸ್ತುತಿಸಹತ್ತಿದರು.

''ಪ್ರಭೋ ಶ್ರೀರಾಮಚಂದ್ರ! ನೀನು ಜಗತ್ತನ್ನು ಸೃಜಿಸುವೆ. ಜಯಿಸಿರುವೆ. ನಿನ್ನನ್ನು ಯಾರಿಂದಲೂ ಗೆಲ್ಲಲಾಗದು. ಶರಣಾಗತರನ್ನು ಕಾಪಾಡು ಸ್ವಾಮಿ, ನಿನಗೆ ಶಿರಬಾಗಿ ನಮಸ್ಕರಿಸಿದ್ದೇವೆ. ಭಗವನ್, ನೀನೇ ಜಗತ್ತಿಗೆ ವಿಭು, ಸ್ವಾಮಿಯೂ

ನೀನೇ, ನೀನು ಆದ್ಯಂತರಹಿತನು. ನಿನ್ನ ಗುಣಗಳು ಅನಂತವಾಗಿವೆ. ಕಾಲ-ದೇಶಗಳಿಂದಲೂ ಅಮಿತವಾಗಿವೆ. ನಿನ್ನ ಅನಂತಗುಣಗಳೊಂದೊಂದೂ ಹುಟ್ಟುಸಾವುಗಳಿಲ್ಲದ್ದು. ಅವುಗಳಿಗೆ ಅರಳುಮರಳುಗಳಿಲ್ಲ. ಪ್ರಭು, ನೀನು ಜನನಮರಣ-ಗಳಿಲ್ಲದವನು. ಮುನಿಶಾಪದಿಂದ ನಿನ್ನ ಗುಣಗಳು ಮರೆಯಾಗಲಾರವು. ಸ್ವತಃ ಅವು ಮಾಸವು, ಅಳಿಯವು. ಅವು ಮಗುವಿನ ಸೌಂದರ್ಯದಂತೆ ದಿನೇದಿನೇ ಬೆಳೆದು ಬಂದುವುಗಳಲ್ಲ. ಶಶ್ವದೇಕಪ್ರಕಾರವಾದ ಗುಣಗಳವು. ನೀನು ಸ್ವಗತ-ಭೇದವಿವರ್ಜಿತನು. ನೀನು ಆದ್ಯನು, ಪರಮನೂ, ಸ್ವತಂತ್ರನೂ ನೀನೇ! ನಾನು, ರುದ್ರ ಮೊದಲಾದವರೆಲ್ಲರೂ ನಿನ್ನ ಸೇವಕರು.

ದೇವ, ವಾಯುವಿನ ವೇಗದಿಂದ ಅಗ್ನಿಜ್ವಾಲೆಗಳು ಹೊರಹೊಮ್ಮಿ ಮತ್ತೆ ಅಗ್ನಿಯನ್ನು ಸೇರುವಂತೆ; ಸೂರ್ಯನಿಂದ ಕಿರಣಗಳು ಪಸರಿಸಿ ಪುನಃ ಸೂರ್ಯನೊಡನೆ ಬೆರೆಯುವಂತೆ, ನದಿಗಳಲ್ಲಿ ನೀರು ಹರಿದು ಪುನಃ ಸಮುದ್ರವನ್ನು ಸೇರುವಂತೆ; ಈ ಗಮನಾಗಮನಗಳು ಸತತವೂ ಜರುಗುವಂತೆ, ನಾನೂ, ಶಿವನೇ ಮೊದಲಾದ ದೇವತೆಗಳೂ ನನ್ನಿಂದ ಬಂದು ನಿನ್ನನ್ನೇ ಸೇರುವೆವು. ಸ್ವಾಮಿ, ಮುಕ್ತರು, ಬದ್ಧರು-ಇವರೆಲ್ಲರೂ ಸರ್ವದಾ ನಿನಗೆ ಅಧೀನರು. ಈಶನಿಗೂ ಈಶ ನೀನು. ನಾವೆಲ್ಲರೂ ಸದಾ ನಿನ್ನ ಗುಣರಾಶಿಯನ್ನು ಎಷ್ಟು ಹೊಗಳಿದರೂ ಮುಗಿಸಲಾರೆವು. ದಡವನ್ನು ಕಾಣಲಾರೆವು. ಪ್ರಭುವೇ! ಇಂಥ ಗುಣಪೂರ್ಣನಾದ ನಿನಗೆ ಈ ರಾಕ್ಷಸರ ಸಂಹಾರವು ಏನು ಗಹನ? ಸಕಲ ದೇವತೆಗಳ ಪಾಲನೆ ನಿನಗೆಂತಹ ಶ್ರಮ? ದುಷ್ಟ ಶಿಕ್ಷಣ-ಶಿಷ್ಟ ಪರಿಪಾಲನಗಳು ನಿನ್ನಿಂದಲ್ಲದೆ ಬೇರೆಯವರಿಗೆ ಸಾಧ್ಯವಿಲ್ಲ. ಅಂತೆಯೇ ನಿನ್ನೀ ಕಾರ್ಯಗಳು ನಡೆದಿವೆ. ಅದಕ್ಕಾಗಿ ನಿನಗೆ ನಮೋ ನಮೋ ಎನ್ನುತ್ತೇವೆ''.

ಆ ಬಳಿಕ ಶೂಲಧಾರಿಗಳಾದ ರುದ್ರದೇವರು ''ಅಯ್ಯಾ, ಶ್ರೀರಾಮಚಂದ್ರ! ನೀನು ನನ್ನ ವರವನ್ನು ತಿರಸ್ಕರಿಸಿ ರಾಕ್ಷಸರನ್ನು ಸಂಹರಿಸಿದ್ದೀಯೆ. ಆದ್ದರಿಂದ ನೀನು ನನ್ನೊಡನೆ ಯುದ್ಧಕ್ಕೆ ಬಾ'' ಎಂದು ಶ್ರೀರಾಮನನ್ನು ಯುದ್ಧಕ್ಕೆ ಆಹ್ವಾನಿಸಿದರು. ಆಗ ಶ್ರೀರಾಮಚಂದ್ರ ದೇವರು ಧನುವಿಗೆ ಶರ ಸಂಧಾನ ಮಾಡಿ ಕರ್ಣಾಂತವಾಗಿ ಸೆಳೆದಕೂಡಲೇ ಭೂಮಿಯು ಗಡಗಡ ನಡುಗಿತು. ಹೀಗೆ ಭೂಕಂಪವಾದುದರಿಂದ ರುದ್ರದೇವರು ನೆಲದ ಮೇಲೆ ಮಲಗಿದರು. ಬಳಿಕ ಮೇಲೆದ್ದು ನಿಂತರು. ಆಗ ಅವರ ಅಸುರಭಾವ ತೊಲಗಿತು. ಕೂಡಲೇ ಶ್ರೀರಾಮನ ಪಾದಗಳಿಗೆರಗಿ ''ದೇವದೇವ, ನನ್ನ ಅಪರಾಧವನ್ನು ಕ್ಷಮಿಸು. ನಾನು ಯಾವಾಗಲೂ ನಿನಗೆ ಅಧೀನನಾಗಿದ್ದೇನೆ. ಪ್ರಸನ್ನನಾಗು. ನನ್ನ ಮನಸ್ಸು ಸರ್ವದಾ ನಿನ್ನಲ್ಲೇ ನೆಲಸುವಂತೆ ಅನುಗ್ರಹಿಸು'' ಎಂದು ಪ್ರಾರ್ಥಿಸಿದರು.

ತರುವಾಯ ಇಂದ್ರಾದಿ ಸಕಲ ದೇವತೆಗಳು ''ಸ್ವಾಮಿ, ದುಷ್ಟರಾದ ರಾಕ್ಷಸರನ್ನು ಸಂಹರಿಸಿ ನಮ್ಮ ಅಪಾಯಗಳನ್ನು ಪರಿಹರಿಸಿ ಕಾಪಾಡಿದ್ದೀಯೆ. ಯಾವಾಗಲೂ ನಿನ್ನವರಾದ ನಮ್ಮನ್ನು ಕೈಬಿಡದೆ ಸಲಹು'' ಎಂದು ಶ್ರೀರಾಮನನ್ನು ಬೇಡಿದರು. ಅಷ್ಟರಲ್ಲಿ ಶ್ರೀ ಸೀತಾದೇವಿಯ ಪ್ರತಿರೂಪವು ಅಲ್ಲಿಗೆ ಬರಲು ಪ್ರಾಮಾಣಿಕತೆಗಾಗಿ ಸ್ವರ್ಗಲೋಕದ ಅಗ್ನಿಯಲ್ಲಿ ಪ್ರವೇಶಿಸುವಂತೆ ರಾಮನು ಅಪ್ಪಣೆ ಮಾಡಿದನು. ಆಗ ಅದುವರೆಗೆ ಕೈಲಾಸದಲ್ಲಿದ್ದ ಬಿಂಬರೂಪದ ಸೀತಾದೇವಿಯು ಆ ಅಗ್ನಿಯಲ್ಲಿ ಸನ್ನಿಹಿತಳಾದಳು. ಅಗ್ನಿದೇವರು ಸೀತಾದೇವಿಯನ್ನು ಶ್ರೀರಾಮನಿಗೆ ಸಮರ್ಪಿಸಲು ಶ್ರೀರಾಮನು ಪರಿಗ್ರಹಿಸಿದನು. ಕೈಲಾಸದಲ್ಲಿ ಪೂಜೆಗೊಳ್ಳುತ್ತಾ ವಾಸಿಸುತ್ತಿದ್ದ ಸೀತಾದೇವಿಯನ್ನು ಅಗ್ನಿಯು ಅರ್ಪಿಸುತ್ತಿರುವನೆಂದರಿತು ಅವಳನ್ನು ಸ್ವೀಕರಿಸಿ ಮುದಗೊಂಡನು. ಅದರಂತೆಯೇ ಸೀತಾಮಾತೆಯೂ ಭಗವಂತನ ಸಾಮೀಪ್ಯವನ್ನು ಸೇರಿ ಅಮಂದಾನಂದ-ತುಂದಿಲಳಾದಳು.

ದೇವವೈದ್ಯಶ್ರೇಷ್ಠನಾದ ಸುಷೇಣನು ಅಶ್ವಿನೀದೇವತೆಗಳ ಮತ್ತೊಂದು ರೂಪ. ರಾಮಾವತಾರಕ್ಕೆ ಮೊದಲೇ ಅಶ್ವಿನೀ-ದೇವತೆಗಳು ವಿವಿದ-ಮೈಂದರೆಂಬ ಹೆಸರಿನಿಂದ ಅವತರಿಸಿದ್ದರು. ರಾಮಾವತಾರದನಂತರ ಅಶ್ವಿನೀದೇವತೆಗಳ ಅಂಶದಿಂದ

ಸುಷೇಣನು ಅವರ ಮತ್ತೊಂದು ರೂಪವಾಗಿ ಅವತರಿಸಿದನು. ಆದ್ದರಿಂದಲೇ ಇವನನ್ನು ದೇವವೈದ್ಯರಲ್ಲಿ ಶ್ರೇಷ್ಠನೆಂದು ಕರೆದರು. ಹನುಮಂತನು ಗಂಧಮಾದನ ಪರ್ವತವನ್ನು ತರುವ ಮೊದಲೇ ತಾರಾಪಿತನಾದ ಈ ಸುಷೇಣನು ರಾವಣನ ಶರಘಾತದಿಂದ ಗಾಯಗೊಂಡು ನರಳುತ್ತಿದ್ದ ವಾನರವೀರರಿಗೆ ಚಿಕಿತ್ಸೆ ಮಾಡಿ ಗುಣಪಡಿಸಿದ್ದನು. ಕೆಲ ಕಪಿವೀರರು ರೋಗರಹಿತರಾಗಿದ್ದರು. ಗಂಧಮಾದನವನ್ನು ವಾಯುಸುತನು ತಂದಮೇಲೆ ಸಕಲರೂ ಜೀವಿತರಾಗಿ ಆರೋಗ್ಯವಂತರಾದರು. ಮತ್ತೆ ಕೆಲವರು ದೇವಾಂಶಸಂಭೂತರು ಶ್ರೀರಾಮಚಂದ್ರನ ದರ್ಶನವಾಗದೆ ಮೃತರಾಗಿದ್ದರು. ಕೆಲವರು ಯಮಲೋಕದಲ್ಲಿ ವಾಸಿಸುತ್ತಿದ್ದರು. ಶ್ರೀರಾಮದೇವರು ಅವರನ್ನು ತಮ್ಮ ದರ್ಶನಕ್ಕಾಗಿ ಕರೆಯಿಸಿದರು. ಅವರಲ್ಲಿ ದಶರಥಚಕ್ರವರ್ತಿಯೂ ಒಬ್ಬನಿದ್ದನು. ಶ್ರೀರಾಮನು ತನ್ನ ದರ್ಶನದಿಂದ ಎಲ್ಲರನ್ನೂ ಸುಖಿಗಳನ್ನಾಗಿಸಿ ಉತ್ತಮಪದವಿಯನ್ನು ಕರುಣಿಸಿದನು. ಲೋಕದ ಮಾನವನಂತೆ ಬಂಧುಜನ ಪ್ರೇಮಾಭಿಮಾನದಿಂದ ಶ್ರೀರಾಮನು ತನ್ನ ತಂದೆಯನ್ನು ಕರೆಯಿಸಿಕೊಳ್ಳಲಿಲ್ಲ. ಅದಕ್ಕೆ ಬದಲಾಗಿ ತಂದೆಯ ವಿಯೋಗ ದುಃಖವನ್ನು ಪರಿಹರಿಸಿ ಅವನಿಗೆ ಸಾಯುಜ್ಯ ಪದವಿಯನ್ನು ಕೊಡುವುದಕ್ಕಾಗಿ ಕರೆಸಿದ್ದನು. ಅನಂತರ ತನ್ನ ಪಿತನಿಗೆ ಮುಕ್ತಿ ಪದವಿಯನ್ನು ಅನುಗ್ರಹಿಸಿದನು.

ಅನಂತರ ವಿಭೀಷಣನು ತನ್ನ ಭಕ್ತಿ ಕಾಣಿಕೆಯಾಗಿ ಪುಷ್ಪಕ ವಿಮಾನವನ್ನು ಅರ್ಪಿಸಿದನು. ಶ್ರೀರಾಮನು ಸೀತಾಸಹಿತನಾಗಿ ಸರ್ವಕಪಿವೀರರೊಡನೆ ಪುಷ್ಪಕದಲ್ಲಿ ಕುಳಿತು ಅಯೋಧ್ಯೆಗೆ ಪ್ರಯಾಣ ಬೆಳೆಸಿದನು. ಇದಕ್ಕೆ ಮೊದಲೇ ಶ್ರೀರಾಮನು ಅಗ್ನಿ ಪ್ರವೇಶ ಮಾಡಲಿದ್ದ ಭರತನನ್ನು ಸಮಾಧಾನಗೊಳಿಸಲು ಹನುಮಂತನನ್ನು ಕಳುಹಿಸಿದ್ದನು.

ಇತ್ತ ಭರತನು ಹದಿನಾಲ್ಕು ವರ್ಷಗಳು ಕಳೆದರೂ ಜಗದೀಶನಾದ ಅಣ್ಣ ಶ್ರೀರಾಮಭದ್ರನು ಬಂದು ದರ್ಶನವೀಯಲಿಲ್ಲವೆಂದು ಮೊದಲೇ ತಾನು ಪ್ರತಿಜ್ಞೆ ಮಾಡಿದಂತೆ ಅಗ್ನಿಪ್ರವೇಶ ಮಾಡಲು ಸಿದ್ಧನಾದನು. ಅದನ್ನು ಕಂಡ ಹನುಮಂತನು ಅಲ್ಲಿಗೆ ಹೋಗಿ ಶ್ರೀರಾಮಾಗಮನದ ಸಂತಸದ ವಾರ್ತೆಯನ್ನು ಅರುಹಿ ಭರತನು ಅಗ್ನಿಪ್ರವೇಶ ಮಾಡದಂತೆ ತಡೆದು ಅವನನ್ನು ರಕ್ಷಿಸಿದನು.

ಶ್ರೀರಾಮಾಗಮನ ವಾರ್ತೆಯನ್ನಾಲಿಸಿದ ಭರತನು ಅತ್ಯಂತ ಮುದಗೊಂಡು ನಗರದ ಸಕಲ ನರನಾರಿಯರು, ತನ್ನ ಸಕಲ ತಾಯಂದಿರು, ಶತ್ರುಘ್ನನನ್ನು ಜೊತೆಗೆ ಕರೆದುಕೊಂಡು ಶ್ರೀರಾಮನ ದರ್ಶನಕ್ಕಾಗಿ ಪಟ್ಟಣದ ಹೊರವಲಯಕ್ಕೆ ಹೋದನು. ಅಲ್ಲಿ ಶ್ರೀರಾಮನನ್ನು ಕಂಡು ಪರಮಾನಂದಭರಿತನಾದನು. ಅವನ ಕಣ್ಣುಗಳಿಂದ ಆನಂದಾಶ್ರು ಹರಿಯಹತ್ತಿತು. ಭರತನು ಅಣ್ಣನ ಚರಣಗಳಲ್ಲಿ ಶಿರವಿರಿಸಿ ಭಕ್ತಿಯಿಂದ ನಮಸ್ಕರಿಸಿದನು. ಶ್ರೀರಾಮನು ಭರತನನ್ನು ಪ್ರೇಮದಿಂದ ಎತ್ತಿ ಆಲಿಂಗಿಸಿದನು. ಅನಂತರ ಶತ್ರುಘ್ನನನ್ನಪ್ಪಿದನು. ತರುವಾಯ ವಯಸ್ಸಿಗೆ ತಕ್ಕಂತೆ ಸರ್ವರನ್ನೂ ಸನ್ಮಾನಿಸಿ ಸಂತೋಷಪಡಿಸಿದನು.

ತರುವಾಯ ಸಕಲ ಮುನಿಜನರೊಡನೆ ಅಯೋಧ್ಯೆಯನ್ನು ಪ್ರವೇಶಿಸಿದನು. ಮುನಿಗಳು ಪರಮಾನಂದಭರಿತರಾಗಿ ಶ್ರೀರಾಮಚಂದ್ರಪ್ರಭುವಿಗೆ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸಿದರು. ಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತನಾದ ಸರ್ವಜಗತ್ತಿಗೆ ಒಡೆಯನಾದ ಶ್ರೀರಾಮಚಂದ್ರನು ಆ ಮಂಗಳ ಸಂದರ್ಭದಲ್ಲಿ ಸಕಲರಿಗೂ ಯಥೋಚಿತ ಸನ್ಮಾನ ಮಾಡಿ ಸರ್ವರನ್ನೂ ಉದ್ದೇಶಿಸಿ ಇಂತು ಅಪ್ಪಣೆ ಕೊಡಿಸಿದನು:-

''ಮುನಿವರ್ಯರೇ, ನೀವು ಮನೋವಾಕ್ಕಾಯಗಳಿಂದ ನನ್ನ ಪೂಜೆಯನ್ನು ಬಹು ಚೆನ್ನಾಗಿ ನೆರವೇರಿಸಿರುವಿರಿ. ಇದಕ್ಕಿಂತ ಹೆಚ್ಚಾಗಿ ತ್ರಿಕರಣಗಳಿಂದ ನನ್ನನ್ನು ಪೂಜಿಸುವುದಾವುದೂ ಉಳಿದಿಲ್ಲ. ಇಂತು ನನ್ನನ್ನು ಎಲ್ಲ ರೀತಿಯಿಂದ ಸೇವಿಸಿದ ನಿಮಗೆ ಕೊಡುವುದೆಂದರೆ ಮುಕ್ತಿಯ ಹೊರತು ಬೇರಾವುದನ್ನೂ ಕಾಣೆನು. ಅದರಲ್ಲಿಯೂ ನಮ್ಮ ಪ್ರೀತ್ಯಾಸ್ಪದನಾದ ಹನುಮಂತನು ಸಲ್ಲಿಸಿದ ಸೇವೆಯು ಅಪಾರವಾದುದು. ಅವನ ಭಕ್ತಿಗೆ ಸರಿಮಿಗಿಲಿಲ್ಲ. ಅಂತೆಯೇ ಅವನು ನನಗೆ ಸ್ವಭಾವ

ಭಕ್ತನಾಗಿದ್ದಾನೆ. ಈಗ ಇವನನ್ನು ನಾನು ಅಸಾಧಾರಣ ರೀತಿಯಲ್ಲಿ ಅವಧಿರಹಿತವಾಗಿ ಅನುಗ್ರಹಿಸಬೇಕಾಗಿದೆ. ಹನುಮಂತನಿಗೆ ನನ್ನಲ್ಲಿರುವ ಭಕ್ತಿಯು ಅಪಾರ, ಜ್ಞಾನ ಅವಧಿರಹಿತ, ಬಲದಲ್ಲಿ ಇವನಿಗೆ ಸಮರಾಗಲಿ ಹೆಚ್ಚಿನವರಾಗಲೀ ಇಲ್ಲ. ಸ್ಥೈರ್ಯದಲ್ಲಿ ಆಧಿಕ್ಯದಲ್ಲಿ, ಇವನು ಸಕಲರನ್ನೂ ಮೀರಿರುವನು. ಇನ್ನು ಅಧಿಕ ಧೈರ್ಯ, ಪ್ರಖರ ತೇಜಸ್ಸು, ಬ್ರಹ್ಮಚರ್ಯ, ಇಂದ್ರಿಯ ನಿಗ್ರಹ, ಸದಾ ನನ್ನಲ್ಲಿ ಗಾಢವಾಗಿ ನೆಲೆಗೊಂಡಿರುವ ಮನಸ್ಸು-ಮೊದಲಾದ ಉತ್ತಮಗುಣಗಳಲ್ಲಿ ಇವನಿಗೆ ಸಮಾನರೊಬ್ಬರೂ ಇಲ್ಲ. ಇವು ಇವನ ಸಹಜಗುಣಗಳಾಗಿವೆ. ಇವನು ಅಜ್ಞಾನಮೂಲಕವಾದ ಅಹಂಕಾರದಿಂದ ಇತರರನ್ನು ಎಂದಿಗೂ ಅಲ್ಲಗಳೆದವನಲ್ಲ. ಆದ್ದರಿಂದ ಇವನು ಅಜ್ಞಾನ, ಚಿಂತೆ, ಭ್ರಮೆ, ಭಯ ಮೊದಲಾದ ದೋಷಗಳಿಗೆ ಅತಿ ದೂರನಾಗಿದ್ದಾನೆ' ಶೇಷ-ರುದ್ರ-ಗರುಡರು ಮುಂತಾದವರು ಹನುಮಂತನ ಶ್ರೇಷ್ಠಗುಣಗಳ ಹೋಲಿಕೆಯಲ್ಲಿ ಅನಂತಾಂಶ ಅವರರಾಗಿದ್ದಾರೆ. ಈ ಕಾರಣಗಳಿಂದ ವೈಕುಂಠದಲ್ಲಿದ್ದಂತೆ ನನ್ನ ವಿಶೇಷಾಂಶವಿರುವ ಸತ್ಯಲೋಕದಲ್ಲಿ ಇವನೊಡನೆ ವಾಸಿಸುತ್ತಾ ಆನಂದಾನುಭವ ಗೊಳ್ಳುತ್ತೇನೆ.

ಪೂರ್ವದಲ್ಲಿ ರಾವಣನು ಬ್ರಹ್ಮನ ವರದಿಂದ ತ್ರಿಲೋಕಗಳನ್ನೂ ಗೆದ್ದನು. ಅವನನ್ನು ಸೋಲಿಸುವುದು ಯಾರಿಗೂ ಆಗಲಿಲ್ಲ. ಆದರೂ ಇಂದ್ರಸುತ ವಾಲಿ ಮತ್ತು ಕಾರ್ತವೀರ್ಯರು ರಾವಣನನ್ನು ವಿಶೇಷ ಕಾರಣಗಳಿಂದ ಸೋಲಿಸಿದರು. ಒಮ್ಮೆ ವಾಲಿಯು ಭೂಪ್ರದಕ್ಷಿಣೆ ಮಾಡಿಬರಲು ಹೊರಟಾಗ ಮಾರ್ಗಮಧ್ಯದಲ್ಲಿ ಅವನನ್ನು ರಾವಣನು ತಡೆಯಲು ಕೆರಳಿದ ವಾಲಿಯು ರಾವಣನನ್ನು ಕಂಕುಳಿನಲ್ಲಿ ಹಿಡಿದುತಂದು ಮಗನಾದ ಅಂಗದನ ತೊಟ್ಟಿಲಿಗೆ ಮಗನ ವಿನೋದಕ್ಕಾಗಿ ಗಿಣಿಚಪ್ಪರದಂತೆ ಕಟ್ಟಿ ಹಾಕಿದನು. ಮತ್ತೆ ರಾವಣನ ಪ್ರಾರ್ಥನೆಯಂತೆ ವಾಲಿಯು ಅವನನ್ನು ಬಿಟ್ಟುಕೊಟ್ಟು ಕಳಿಸಿದನು. ಬ್ರಹ್ಮನ ವರದಲ್ಲಿ ವಾನರ-ನರರಿಗೆ ವಿನಾಯತಿ ಇದ್ದುದರಿಂದ ವಾಲಿಗೆ ರಾವಣನನ್ನು ಗೆಲ್ಲಲು ಸಾಧ್ಯವಾಯಿತು. ರಾವಣನನ್ನು ಜಯಿಸಿದ ಮತ್ತೊಬ್ಬನು ಕಾರ್ತವೀರ್ಯ. ದತ್ತಾತ್ರೇಯಾವತಾರವೆತ್ತಿದ ನನ್ನ ಶಿಷ್ಯನಾದ ಕಾರ್ತವೀರ್ಯನು ನನ್ನ ಅನುಗ್ರಹಬಲದಿಂದ ರಾವಣನನ್ನು ಜಯಿಸಿದನು. ಬ್ರಹ್ಮನು ನರ-ವಾನರರನ್ನು ಬಿಟ್ಟು ನಿನ್ನನ್ನು ಯಾರೂ ಜಯಿಸಲಾರರು ಎಂದು ರಾವಣನಿಗೆ ವರ ಕೊಟ್ಟಿದ್ದನು. ವಾನರ-ನರರಿಂದ ತನಗಪಾಯವಾಗಲೀ ಮರಣವಾಗಲಿ ಅಸಂಭವವೆಂದು ರಾವಣ ನಂಬಿ ಸಂತೋಷಗೊಂಡಿದ್ದನು. ಪೂರ್ವ ಸಂಕಲ್ಪದಂತೆ ನನ್ನಿಂದಲೇ ಅವನಿಗೆ ಮರಣವಾಗಬೇಕಾಗಿತ್ತು. ವಾಲಿಯು ವಾನರನಾದ್ದರಿಂದ ರಾವಣನನ್ನು ಜಯಿಸಿದನೇ ಹೊರತು ಸಂಹರಿಸಲಾಗಲಿಲ್ಲ. ಹಿಂದೆ ಈ ರಾವಣನು ಪಾತಾಳಲೋಕಕ್ಕೆ ಬಂದು ಗರ್ವದಿಂದ ನನ್ನ ಭಕ್ತನಾದ ಬಲಿರಾಜನನ್ನು ಯುದ್ಧಕ್ಕೆ ಕರೆದನು. ಬ್ರಹ್ಮನ ವರವನ್ನು ಸುಳ್ಳಾಗಿಸುವ ಶಕ್ತಿ ನನಗೊಬ್ಬನಿಗಲ್ಲದೆ ಮತ್ತಾರಿಗೂ ಇಲ್ಲ. ಆದ್ದರಿಂದ ರಾವಣನನ್ನು ಸೋಲಿಸಲು ಸಂಹರಿಸಲು ನಾನೇ ಸಮರ್ಥನು. ಹಿಂದೆ ಬಲಿಚಕ್ರವರ್ತಿಯು ಭಕ್ತಿಯಿಂದ ನನಗೆ ಮೂರಡಿ ಭೂಮಿಯನ್ನು ದಾನ ಮಾಡಿದ್ದರಿಂದ ತುಷ್ಟನಾದ ನಾನು ಪಾತಾಳದಲ್ಲಿ ಅವನ ಅರಮನೆಯ ಬಾಗಿಲು ಕಾಯುತ್ತಾ ಸಕಲವಿಧವಾಗಿ ಅವನನ್ನು ಸಂರಕ್ಷಿಸುವುದಾಗಿ ಬಲಿರಾಜನಿಗೆ ವರವನ್ನು ಕೊಟ್ಟಿದ್ದೆನು. ಆಗ ರಾವಣನು, ಬಂದು ಬಲಿಯನ್ನು ಯುದ್ಧಕ್ಕೆ ಕರೆದಾಗ, ನಾನು ನನ್ನ ಪಾದಾಂಗುಷ್ಠದ ತುದಿಯಿಂದ ರಾವಣನನ್ನು ಲಕ್ಷಯೋಜನ ದೂರಕ್ಕೆ ಎಸೆದೆನು, ಮತ್ತೊಮ್ಮೆ ರಾವಣನು ನಾನು ಕಪಿಲಾವತಾರ ತಾಳಿದ್ದಾಗ ನನ್ನನ್ನು ಯುದ್ಧಕ್ಕೆ ಕರೆದನು. ನಾನು ಸ್ವಾಭಾವಿಕ ಬಲವಂತನು. ಮತ್ತು ನನ್ನ ಅತಿಪ್ರೀತಿಯ ಪುತ್ರನಾದ ವಾಯುದೇವನು ತ್ರಿಕೋಟಿರೂಪಧಾರಿಯು. ಅವನೂ ಅತಿಬಲವಂತನು. ಹೀಗೆ ನಾನು ಮತ್ತು ವಾಯು ಇಬ್ಬರೂ ಸ್ವಾಭಾವಿಕ ಸ್ವಶಕ್ತಿಯಿಂದಲೇ ಗೆಲವುಗೊಂಡವರು. ಇದು ಪ್ರಸಿದ್ಧ. ಅವನು ಕಾರ್ತವೀರ್‍ಯಾರ್ಜುನನಂತೆ ನನ್ನ ವಿಶೇಷಾನುಗ್ರಹಬಲದಿಂದ ರಾವಣನನ್ನು ಗೆದ್ದನು. ಒಮ್ಮೆ ಶಿವನ ಸಹಿತವಾಗಿ ಕೈಲಾಸವನ್ನು ಕಿತ್ತಿ ಲಂಕೆಗೆ ಕೊಂಡೊಯ್ಯಲು, ಹಠದಿಂದ ತನ್ನ ಬಲದಿಂದ ಉದ್ಧಟನಾದ ರಾವಣನು ತನ್ನ ಇಪ್ಪತ್ತು ಕೈಗಳಿಂದಲೂ ಕೈಲಾಸವನ್ನು ಕೀಳಲೆತ್ನಿಸಿದನು. ಆಗ ರುದ್ರನು ನನ್ನ ಅನುಗ್ರಹ ಬಲದಿಂದ ಗಿರಿಸ್ತಂಭನಗೊಳಿಸಲು ಅದು ಬೇರೂರಿ ಅಚಲವಾಯಿತು. ಅತಿಸಾಹಸಿಯಾದ ರಾವಣನು ಅದನ್ನು ಕೀಳಲಾಗದೆ ತಾನೇ

ಉರುಳಿಬಿದ್ದನು. ಬ್ರಹ್ಮನ ವರದಿಂದ ದೇವತೆಗಳಿಂದಲೂ ಅಜೇಯನಾದ್ದರಿಂದ ಶಿವನು ಅವನನ್ನು ಗೆಲ್ಲಲು ನನ್ನಿಂದ ವರವನ್ನು ಪಡೆದನು. ನಾನು ಸಹಜವಾಗಿಯೇ ಲೀಲಾಜಾಲವಾಗಿಯೇ ರಾವಣನನ್ನು ಗೆದ್ದೆನು. ಆದುದರಿಂದ ನಾನು, ಮೂಲ ರೂಪದ ವಾಯುದೇವ, ಅವತಾರರೂಪದ ಈ ಹನುಮಂತ, ಇಬ್ಬರೂ ಸ್ವಾಭಾವಿಕವಾಗಿಯೇ ಜಯಶಾಲಿಗಳು. ಇದು ಪ್ರಸಿದ್ಧ.

ಹಿಂದೆ ಈ ಹನುಮಂತನ ಕಾರಣದಿಂದಾಗಿ ದೇವೇಂದ್ರ-ಶಿವಾದಿ ದೇವತೆಗಳು ಕಟ್ಟಿಗೆಯಂತೆ ಚಲಿಸಲಾಗದ ಸ್ಥಿತಿಗೀಡಾಗಬೇಕಾಗಿ ಬಂದಿತ್ತು. ಹನುಮಂತನು ಶಿಶುವಾಗಿದ್ದಾಗ ಸೂರ್ಯನನ್ನು ಹಣ್ಣೆಂದು ತಿಳಿದು ಗಗನಕ್ಕೆ ನೆಗೆದು ಸೂರ್ಯನನ್ನು ನುಂಗಲು, ದೇವೇಂದ್ರನು ವಜ್ರಾಯುಧದಿಂದ ಹನುಮಂತನ ತಲೆಗೆ ಹೊಡೆಯಲು, ಅದರಿಂದ ಕುಪಿತನಾದ ವಾಯುವು ಶ್ವಾಸನಿರೋಧಮಾಡಿದ್ದರಿಂದ ಇಂದ್ರಾದಿ ದೇವತೆಗಳು ಚಲಿಸದೆ ಕಟ್ಟಿಗೆಯಂತಾದರು. ಆದ್ದರಿಂದ ಈ ಹನುಮಂತನು ನನ್ನ ಅಪ್ಪಣೆಯಂತೆ ಬ್ರಹ್ಮಪದವಿಯನ್ನು ಪಡೆಯಲಿ. ಅವನು ಲೋಕದ ಸೃಷ್ಟ್ಯಾದ್ಯಷ್ಟ ಕರ್ಮಗಳನ್ನು ಮಾಡಲಿ. ಮುಕ್ತರಿಗೆ ಸುಖವನ್ನು ಅನುಭವಕ್ಕೆ ತಂದುಕೊಡಲಿ. ಇವನು ಇಂತಹ ಕಾರ್ಯಗಳನ್ನು ನೆರವೇರಿಸುತ್ತಿರಲಿ.

ಇಂಥ ಬ್ರಹ್ಮಪದವಿಗೆ ಸಹಭೋಗವೆಂದು ಹೆಸರು. ಈ ಲೋಕದಲ್ಲಿ ಪ್ರಾಣಿಗಳು ಅನಾದಿಕಾಲದಿಂದ ಅನಾದಿಯೂ ಅನಂತವೂ ಆದ ಪುಣ್ಯಕರ್ಮಗಳನ್ನು ಆಚರಿಸುತ್ತಿರುವವು. ಅವುಗಳಿಗೆ ತಕ್ಕ ಸುಖಾನುಭವವನ್ನು ಕೊಡುವ ಅಧಿಕಾರ ನನ್ನ ವಶದಲ್ಲಿದೆ. ಮತ್ತು ಪ್ರತಿಕಲ್ಪದಲ್ಲಿ ಬರುವ ಬೇರೆ ಬೇರೆ ಬ್ರಹ್ಮದೇವರುಗಳಿಗೂ ನನ್ನ ಆಜ್ಞೆಯಿಂದ ಅಂಥ ಅಧಿಕಾರವಿದೆ. ಸರ್ವಜೀವರ ಶುಭಕರ್ಮಾನುಸಾರವಾಗಿ ಸುಖಾನುಭವ ನೀಡುವ ಪರಮಾಧಿಕಾರ ನಮ್ಮಿಬ್ಬರಿಗೆ ಅಲ್ಲದೆ ಅನ್ಯರಿಗಿಲ್ಲ. ಹೀಗೆ ನಾವಿಬ್ಬರೇ, ನಮ್ಮಿಂದ ಜನಿಸಿದ ಸಾರಭೂತ ಸುಖದ ಅಂಶವನ್ನು ಯಥೋಚಿತವಾಗಿ ಜೀವರಿಗೆ ಹಂಚುತ್ತೇವೆ. ನನಗೆ ಕರ್ಮಬಂಧವಿಲ್ಲ. ನಾನು ಕರ್ಮಸ್ವಾಮಿ, ಕರ್ಮಾಂತರ್ಯಾಮಿ, ಕರ್ಮನಿಯಾಮಕನು. ಬ್ರಹ್ಮನು ಪದವಿಯಲ್ಲಿರುವವರಿಗೂ ನನ್ನಾಣತಿಯಂತೆ ಅವು ಉಂಟು. ನಾನು ಸತ್ಯಲೋಕದಲ್ಲಿ ಬ್ರಹ್ಮಾಂತರ್ಯಾಮಿಯಾಗಿ ಬ್ರಹ್ಮನೊಡನೆ ಭೋಗಗಳನ್ನು ಅನುಭವಿಸುತ್ತೇನೆ. ಇದೇ ಸಹಭೋಗ, ಅಯ್ಯಾ, ಹನುಮಂತ! ಇಂಥ ಸಹಭೋಗವನ್ನು ನಾನು ನಿನಗೆ ಸದಾ ನೀಡುವೆನು'' ಎಂದು ಅನುಗ್ರಹಿಸಿದನು. ಅದನ್ನು ಕೇಳಿ ಹನುಮಂತನು ಗಾಢಭಕ್ತಿಯಿಂದ ಪ್ರಭುವಿಗೆ ಶಿರಬಾಗಿ ನಮಿಸಿ ಇಂತು ವಿಜ್ಞಾಪಿಸಿದನು.

''ಸರ್ವದರಲ್ಲೂ ಪೂರ್ಣನಾದ ಪ್ರಭುವೇ, ನಿನ್ನ ಚರಣಕಮಲಶರಣರಲ್ಲಿ ಹಾಗೂ ಈ ಲೋಕತ್ರಯದಲ್ಲಿ ಸುಲಭವಾಗಿ ದೊರೆಯದ ಹಿರಿಮೆ-ಗರಿಮೆಗಳಲ್ಲಿ ನಾನೆಷ್ಟರವನು? ಸ್ವಾಮಿ, ನಿನ್ನ ಪಾದಸೇವೆಯೊಂದನ್ನು ಬಿಟ್ಟು ಮತ್ತಾವ ಪದವಿಯನ್ನು ನಾನು ಅಪೇಕ್ಷಿಸುವುದಿಲ್ಲ. ದೇವ, ನೀನೇ ಪರಮನು, ಸ್ವತಂತ್ರನೂ, ಸಕಲ ಉದಾರ ಶಕ್ತಿವಂತನೂ ನೀನೇ. ಅಗಣಿತಗುಣಸಾಗರನು ನೀನು. ರಮಾ-ಚತುರ್ಮುಖಬ್ರಹ್ಮಾದಿ ಸಕಲದೇವತೆಗಳೆಲ್ಲರೂ ಒಂದಾಗಿ ಸದಾ ನಿನ್ನ ಅಪಾರ ಗುಣಗಾನ ಮಾಡುತ್ತಿದ್ದರೂ ಸಂಪೂರ್ಣವಾಗಿ ಹೇಳಿ ಮುಗಿಸಲಾರರು. ಅನಂತಕಾಲದವರಿಗೆ ಅವರದನ್ನು ಹೊಗಳಿದರೂ ಅದು ಮುಗಿಯದು. ನಿನ್ನ ಗುಣಗಳು ಅಪಾರ, ಅವು ಒಂದೊಂದು ಪರಿಪೂರ್ಣ. ಜಗತ್ತಿನ ಸೌಖ್ಯ-ಜ್ಞಾನಗಳಿಗೆ ನೀನೇ ಪ್ರಭುವು. ನೀನು ಸದಾ ವಿಶುದ್ಧನು, ಯಾವನು ನಿನ್ನ ಕಥಾಶ್ರವಣದಲ್ಲಿಯೇ ಸದಾ ಆಸಕ್ತನಾದ ಸೇವಕನೋ, ಅವನು ಪ್ರತಿ ಅವತಾರದಲ್ಲೂ ಅಚಲ ಮತ್ತು ಗಾಢವಾದ ಭಕ್ತಿಯಿಂದ ವಿನೀತನಾಗಿ ನಿನ್ನ ಸೇವೆಯಲ್ಲಿ ರತನೋ, ಅಂಥವನ ಜೀವನವೇ ಜೀವನ! ಇದಕ್ಕೆ ಹೊರತಾದುದು ಜೀವನವೇ ಅಲ್ಲ. ಸ್ವಾಮಿ, ನನಗೆ ಸರ್ವವಿಧದಿಂದಲೂ ಅಂಥ ಸಾರ್ಥಕವಾದ ಜೀವನವೇ ಒದಗಲಿ. ಪ್ರಭು, ನೀನು ಸದಾ ಪರಿಪೂರ್ಣಕಾಮನು. ನನಗೆ ನಿನ್ನಲ್ಲಿ ಕ್ಷಣಕ್ಷಣಕ್ಕೂ ಭಕ್ತಿಯು ಚೆನ್ನಾಗಿ ವರ್ಧಿಸುತ್ತಿರಲಿ. ಅದೆಂದೂ ಕ್ಷೀಣವಾಗದಿರಲಿ. ನಿನ್ನ ಅನುಗ್ರಹವೂ ನನ್ನಲ್ಲಿ ಅದರಂತೆಯೇ ಹೆಚ್ಚಲಿ. ಅದು ಎಂದಿಗೂ ಕಡಿಮೆಯಾಗದಿರಲಿ.

ನಿನ್ನ ಮೇಲೆ ನನ್ನ ಭಕ್ತಿ, ನನ್ನ ಮೇಲೆ ನಿನ್ನ ಕರುಣೆ, ಇವೆರಡೂ ಸರ್ವದಾ ನಿರ್ವ್ಯಾಜವಾಗಿರುವಂತೆ ಅನುಗ್ರಹಿಸು, ಸ್ವಾಮಿ''.

ಹೀಗೆ ಶ್ರೀಹನುಮಂತನು ವಿಜ್ಞಾಪಿಸಿದ ಮೇಲೆ ಶ್ರೀರಾಮಚಂದ್ರಪ್ರಭುವು ಪ್ರೀತಿಯಿಂದ ತಮ್ಮ ಭಕ್ತನಾದ ಹನುಮಂತನಿಗೆ ಬ್ರಹ್ಮಪದವಿಯನ್ನೂ, ಸಕಲಜೀವರು ನೆರವೇರಿಸುವ ಶುಭಕಾರ್ಯಗಳಿಗೆ ಫಲವನ್ನು ಕೊಡುವ ಅಧಿಕಾರವನ್ನೂ ಅನುಗ್ರಹಿಸಿದನು. ಮತ್ತು ಕರುಣಾರ್ದ್ರಹೃದಯದಿಂದ ಹನುಮಂತನನ್ನು ಗಾಢವಾಗಿ ಆಲಂಗಿಸಿದನು. ಅನಂತರ ಸರ್ವ ಭಕ್ತಜನರಿಗೂ ಯಥೋಚಿತವಾಗಿ ಸನ್ಮಾನಗಳನ್ನು ಅನುಗ್ರಹಿಸಿದನು.

ಇಂತು ಶ್ರೀಮಧ್ವಾಚಾರ್ಯರು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ವಿಸ್ತಾರವಾಗಿ ನಿರೂಪಿಸಿದ ಶ್ರೀರಾಮ ಚರಿತ್ರೆಯಲ್ಲಿ ಅಯೋಧ್ಯಾ ಪ್ರವೇಶವೆಂಬ ಅಷ್ಟಮಾಧ್ಯಾಯಯದ ಕಥಾಭಾಗವನ್ನು ಶ್ರೀಗುರುಸಾರ್ವಭೌಮರು ತಮ್ಮ ತಾತ್ಪರ್ಯ ನಿರ್ಣಯಭಾವಸಂಗ್ರಹದಲ್ಲಿ ಸಂಗ್ರಹಿಸಿ ಅನುಗ್ರಹಿಸಿದ್ದಾರೆ.

***ಮಹಾಭಾರತ ತಾತ್ಪರ್ಯ ನಿರ್ಣಯದ ಎಂಟನೆಯ ಅಧ್ಯಾಯದ ಕಥಾಸಂಗ್ರಹವು ಮುಗಿದುದು.***

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★



ಭರತನಿಗೆ ಯುವ ಪಟ್ಟಾಭಿಷೇಕ



ಲವಕುಶ ಜನನ

# ನವಮಾಧ್ಯಾಯಭಾವಸಂಗ್ರಹ

*ಅವತಾರಿಕೆ:-*

ಈಗ ಶ್ರೀರಾಘವೇಂದ್ರಗುರುಸಾರ್ವಭೌಮರು ''ಮಹಾಭಾರತ ತಾತ್ಪರ್ಯ ನಿರ್ಣಯ''ದ ಒಂಬತ್ತನೆಯ ಅಧ್ಯಾಯಾರ್ಥವನ್ನು ''ಪ್ರಾಪ್ತಃ'' ಎಂಬ ಪದ್ಯದಿಂದ ಸಂಗ್ರಹಿಸಿ ನಿರೂಪಿಸುತ್ತಾರೆ:-

**ಪ್ರಾಪ್ತಃ ಸಾಮ್ರಾಜ್ಯಲಕ್ಷ್ಮೀಂ ಪ್ರಿಯತಮಭರತಂ ಯೌವರಾಜ್ಯೇಽಭಿಷಿಚ್ಯ**
**ಸ್ವೀಯಾನ್ ರಕ್ಷನ್ ಸುತೌ ದ್ವೌ ಜನಕದುಹಿತರಿ ಪ್ರಾಪ್ಯ ಯಜ್ಞೈರ್ಯಜನ್ ಸ್ವಮ್ ।**
**ಸೀತಾಹೇತೋರ್ವಿಮೋಹ್ಯ ಕ್ಷಿತಿಜದಿತಿಸುತಾನರ್ಥಿತೋ ದೇವಸಂಘೈಃ**
**ಸದ್ಭಿರ್ಯುಕ್ತೋ ಹನೂಮದ್ವರದ ಉಪಗತಃ ಸ್ವಂ ಪದಂ ಪಾತು ರಾಮಃ ।। 9 ।।**

**ಅನ್ವಯಾರ್ಥ :- ಸಾಮ್ರಾಜ್ಯಲಕ್ಷ್ಮೀಂ ಪ್ರಾಪ್ತಃ ಸನ್** = ಅಯೋಧ್ಯಾ ಸಾಮ್ರಾಜ್ಯ ಸಿಂಹಾಸನದಲ್ಲಿ ಪಟ್ಟಾಭಿಷಿಕ್ತರಾದವರಾಗಿ, **ಯೌವರಾಜ್ಯೇ** = ಯುವರಾಜಪದದಲ್ಲಿ, **ಪ್ರಿಯತಮಭರತಂ** = ಪರಮಪ್ರೀತ್ಯಾಸ್ಪದನಾದ ಭರತನನ್ನು, **ಅಭಿಷಿಚ್ಯ** = ಪಟ್ಟಾಭಿಷೇಕ ಮಾಡಿ ನಿಯಮಿಸಿ, **ಸ್ವೀಯಾನ್** = ತನ್ನವರಾದ ಬಂಧುಬಾಂಧವಾದಿ ಸಮಸ್ತ ಜನರನ್ನೂ, **ರಕ್ಷನ್ ಸನ್** = ರಕ್ಷಣೆ ಮಾಡುವವನಾಗಿ, **ಜನಕದುಹಿತರಿ** = ಜನಕಮಹಾರಾಜನ ಕುಮಾರಿಯಾದ ಶ್ರೀಸೀತಾದೇವಿಯಲ್ಲಿ, **ದ್ವೌ ಸುತೌ** = ಇಬ್ಬರು ಮಕ್ಕಳನ್ನು, **ಪ್ರಾಪ್ಯ** = ಹೊಂದಿ (ಪಡೆದು), **ಯಜ್ಞೈಃ** = ಅನೇಕ ಯಜ್ಞಗಳಿಂದ, **ಸ್ವಂ** = ತನ್ನನ್ನೇ ಕುರಿತು, **ಯಜನ್ ಸನ್** = ಯಾಗ ಮಾಡುವವನಾಗಿ, **ಸೀತಾಹೇತೋಃ** = ಸೀತೆಯ ಕಾರಣವಾಗಿ (ಸೀತೆಗಾಗಿ) ಭೂಮಿಯಲ್ಲಿ, **ಉತ್ಪನ್ನಾನ್** = ಹುಟ್ಟಿದ, **ದೈತ್ಯಾನ್** = ದೈತ್ಯರುಗಳನ್ನು, **ವಿಮೋಹ್ಯ** = ಮೋಹಗೊಂಡವರನ್ನಾಗಿ ಮಾಡಿ, **ದೇವಸಂಘೈಃ** = ದೇವತೆಗಳ ಸಮೂಹದಿಂದ, **ಅರ್ಥಿತಸ್ಸನ್** = ಪ್ರಾರ್ಥಿತನಾದವನಾಗಿ, **ಸದ್ಭಿರ್ಯುಕ್ತಃ** = ಸಜ್ಜನರಿಂದೊಡಗೂಡಿ, **ಹನೂಮದ್ವರದಃ** = ಶ್ರೀಹನುಮಂತದೇವರಿಗೆ ವರವನ್ನು ಅನುಗ್ರಹಿಸಿ, **ಸ್ವಂ ಪದಂ** = ತನ್ನ ಸ್ಥಾನವನ್ನು, **ಉಪಗತಃ** = ಸೇರಿದ, **ರಾಮಃ** = ಶ್ರೀರಾಮಚಂದ್ರನು, **ಪಾತು** = ನಮ್ಮನ್ನು ಕಾಪಾಡಲಿ.

**ತಾತ್ಪರ್ಯ :-** ಅಯೋಧ್ಯೆಯ ಸಾಮ್ರಾಜ್ಯ ಸಿಂಹಾಸನದಲ್ಲಿ ಪಟ್ಟಾಭಿಷಿಕ್ತನಾದ ಶ್ರೀರಾಮಚಂದ್ರನು ಯುವರಾಜಪದದಲ್ಲಿ ಪ್ರಿಯ ತಮ್ಮನಾದ ಭರತನನ್ನು ಅಭಿಷೇಕಮಾಡಿ ನಿಯಮಿಸಿ, ತನ್ನವರಾದ ಬಂಧುಬಾಂಧವರೇ ಮೊದಲಾದ ಸಕಲ ಜನರನ್ನೂ ಕಾಪಾಡುವವನಾಗಿ ಸೀತಾದೇವಿಯಲ್ಲಿ ಲವಕುಶರೆಂಬ ಇಬ್ಬರು ಪುತ್ರರನ್ನು ಪಡೆದು, ಅನೇಕ ಯಜ್ಞಗಳಿಂದ ತನ್ನನ್ನೇ ಕುರಿತು ಯಾಗಮಾಡಿದವನಾಗಿ, ಸೀತಾನಿಮಿತ್ತವಾಗಿ ಅಂದರೆ ಸೀತಾಪರಿತ್ಯಾಗಾದಿ ನಟನೆಗಳಿಂದ ಭೂಮಿಯಲ್ಲಿ ಜನಿಸಿದ ದೈತ್ಯರುಗಳನ್ನು ಮೋಹಗೊಳಿಸಿದವನಾಗಿ ದೇವತೆಗಳಿಂದ ಸ್ವಸ್ಥಾನಕ್ಕೆ ದಯಮಾಡಿಸಬೇಕೆಂದು ಪ್ರಾರ್ಥಿತನಾಗಿ, ಸಜ್ಜನರಿಂದೊಡಗೂಡಿ, ಹನುಮಂತದೇವರಿಗೆ ವರಪ್ರಸಾದ ಮಾಡಿ ಅನುಗ್ರಹಿಸಿ, ತನ್ನ ಪರಮಪದವನ್ನು ಸೇರಿದ ಶ್ರೀರಾಮಚಂದ್ರ ಪ್ರಭುವು ನಮ್ಮೆಲ್ಲರನ್ನೂ ಸಂರಕ್ಷಣ ಮಾಡಲಿ ಎಂದು ಭಾವ.

## ನವಮಾಧ್ಯಾಯ ಕಥಾಸಂಗ್ರಹ

ಚಕ್ರಾಧಿಪತ್ಯದಲ್ಲಿ ಪಟ್ಟಾಭಿಷಿಕ್ತನಾದ ಶ್ರೀರಾಮಚಂದ್ರಪ್ರಭುವು ತನ್ನ ಪ್ರಿಯ ಸಹೋದರನಾದ ಲಕ್ಷ್ಮಣನಿಗೆ ಯುವರಾಜ ಪದದಲ್ಲಿ ಪಟ್ಟಾಭಿಷೇಕ ಮಾಡಲಿಚ್ಛಿಸಿ ಲಕ್ಷ್ಮಣನಿಗೆ ತಿಳಿಸಿದನು. ಆಗ ಲಕ್ಷ್ಮಣನು ಪೂಜ್ಯ ಅಣ್ಣನಾದ ಶ್ರೀರಾಮಚಂದ್ರನಲ್ಲಿ

ವಿನಯದಿಂದ ''ಪ್ರಭು, ನಿನ್ನ ಪಾದಾಬ್ಜ ಸೇವೆಯ ಹೊರತು ಮತ್ತೊಂದನ್ನು ನಾನು ಅಪೇಕ್ಷಿಸುವುದಿಲ್ಲ. ನನಗೆ ಯುವರಾಜ ಪದವಿಯು ಬೇಡ. ನಿನ್ನ ಪಾದಸೇವೆಯನ್ನು ಹಂಬಲಿಸುತ್ತಿರುವ ನನ್ನನ್ನು ಬೇರೆ ಕಾರ್ಯದಲ್ಲಿ ತೊಡಗಿಸಬಾರದೆಂದು ಪ್ರಾರ್ಥಿಸುವೆನು. ನಿನ್ನ ಚರಣಕಮಲಗಳ ಸೇವೆಗಿಂತ ಮಿಗಿಲಾದ ಅನುಗ್ರಹ ಬೇರೊಂದಿಲ್ಲ. ಅದನ್ನೇ ನನಗೆ ಸರ್ವದಾ ಕರುಣಿಸು'' ಎಂದು ಕೋರಿದನು. ಲಕ್ಷ್ಮಣನ ಪ್ರಾರ್ಥನೆಯನ್ನು ಮನ್ನಿಸಿದ ಆ ಪ್ರಭುವು ತನ್ನ ಚರಣಸೇವೆಯನ್ನು ಅವನಿಗಿತ್ತು ಪ್ರಿಯ ತಮ್ಮನನ್ನು ಆಲಂಗಿಸಿದನು. ತರುವಾಯ ಪ್ರೀತಿಯ ಅನುಜನಾದ ಭರತನನ್ನು ಯೌವರಾಜ್ಯದಲ್ಲಿ ಪಟ್ಟಾಭಿಷಿಕ್ತನನ್ನಾಗಿ ಮಾಡಿ ಧರ್ಮನಿರತರಾದ ಸಕಲ ಪ್ರಜೆಗಳನ್ನು ಪೊರೆಯುತ್ತಾ ಸಾಮ್ರಾಜ್ಯವನ್ನಾಳಹತ್ತಿದನು.

ಶ್ರೀರಾಮಚಂದ್ರನು ರಾಜ್ಯಭಾರ ಮಾಡುತ್ತಿರಲು ಧರಣಿಯು ಬ್ರಹ್ಮಲೋಕಕ್ಕೆ ಸಮಾನವೆನಿಸಿತು. ಪ್ರಜೆಗಳು ವಿಷ್ಣುಭಕ್ತರಾಗಿದ್ದರು. ಯಾರೊಬ್ಬರ ಧಾರ್ಮಿಕಾಚರಣೆಗೂ ಕುಂದುಂಟಾಗುತ್ತಿರಲಿಲ್ಲ. ಉತ್ತಮಗುಣ ಮಂಡಿತರಾಗಿ ಜನಿಸಿದ ಪ್ರಜರು ತಮ್ಮ ತಮ್ಮ ಗುಣ-ಕರ್ಮಗಳಿಗನುಗುಣವಾಗಿ ತರತಮಭಾವಯುಕ್ತರಾಗಿ ರೋಗಾದ್ಯುಪದ್ರವ-ರಹಿತರಾಗಿ ಸಕಲ ಸಂಪದ್ಯುಕ್ತರಾಗಿ ಅಭ್ಯುದಯವನ್ನು ಹೊಂದಿ ಸಹಸ್ರಾರು ವರ್ಷಗಳ ಕಾಲ ಆಯುಷ್ಯವಂತರಾಗಿ ಬಾಳುತ್ತಿದ್ದರು. ಅವರು ದೇಹೇಂದ್ರಿಯಾದಿ ಬಲಸಹಿತರಾಗಿ ಅಭೀಷ್ಟ ಸಿದ್ಧಿಗಳನ್ನು ಪಡೆದು, ಭಯ, ಕ್ರೋಧ, ಆಲಸ್ಯಾದಿ ದೋಷರಹಿತರಾಗಿ ಸಕಲರೂ ರೂಪಲಾವಣ್ಯಗಳಿಂದ ಕೂಡಿ ಹರ್ಷಪ್ರದಗಳಾದ ಹಬ್ಬಗಳನ್ನಾಚರಿಸುತ್ತ ಶೋಭಿಸುತ್ತಿದ್ದರು. ರಾಮರಾಜ್ಯದಲ್ಲಿ ಎಲ್ಲ ಪ್ರಜೆಗಳು ಮನೋವಾಕ್ಕಾಯಗಳಿಂದಲೂ ಶ್ರೀಹರಿಯು ಸರ್ವೋತ್ತಮ-ನೆಂದು ತಿಳಿದು ಪೂಜಿಸುತ್ತಿದ್ದರು. ಇತರ ದೇವತೆಗಳನ್ನು ಶ್ರೀಹರಿಯ ಪರಿವಾರದವರೆಂದರಿತು ಅದಕ್ಕೆ ತಕ್ಕಂತೆ ತಾರತಮ್ಯವನ್ನು ಅನುಸರಿಸಿ ಪೂಜಿಸುತ್ತಿದ್ದರು. ವಸುಂಧರೆಯು ರತ್ನಗರ್ಭ ಎಂಬ ತನ್ನ ಅನ್ವರ್ಥ ಹೆಸರಿನಿಂದ ರಾಜಿಸುತ್ತಿದ್ದಳು. ಭೂಮಿಯಲ್ಲಿ ಹೆಚ್ಚಾಗಿ ಧಾನ್ಯಗಳು ಬೆಳೆಯುತ್ತಿತ್ತು. ಗೋವುಗಳು ಬಹುವಾಗಿ ಹಾಲನ್ನು ಕರೆಯುತ್ತಿದ್ದವು. ಸುಗಂಧದ್ರವ್ಯಗಳು ಸುವಾಸನೆಯಿಂದ ಮನಸ್ಸನ್ನು ಸೂರೆಗೊಳ್ಳುತ್ತಿದ್ದವು. ಭಕ್ಷ್ಯಭೋಜ್ಯಗಳು ಮಧುರವಾಗಿ, ರುಚಿಕರವಾಗಿದ್ದು ಮನಸ್ಸನ್ನಾಕರ್ಷಿಸುತ್ತಿದ್ದವು. ಎಲ್ಲ ವಿಧ ಶಬ್ದಗಳು ಕಿವಿಗಳಿಗೆ ಇಂಪನ್ನೀಯುತ್ತಿದ್ದವು. ಎಲ್ಲ ಬಗೆಯ ಸ್ಪರ್ಶಗಳು ಸ್ಪರ್ಶೇಂದ್ರಿಯಗಳನ್ನು ತಣಿಸುತ್ತಿದ್ದವು. ರಾಮರಾಜ್ಯದಲ್ಲಿ ಯಾರೂ ದುಃಖಿಗಳಾಗಿರಲಿಲ್ಲ. ದುಃಖದ ಹೆಸರೇ ಇರುತ್ತಿರಲಿಲ್ಲ. ಕಳ್ಳತನವಂತೂ ಮೊದಲೇ ಇರಲಿಲ್ಲ. ಅಧರ್ಮಿಗಳನ್ನು ಹುಡುಕಿದರೂ ಸಿಗುತ್ತಿರಲಿಲ್ಲ. ಅಪುತ್ರವಂತರಾಗಲಿ, ದುಷ್ಟ ಮಡದಿಯರಾಗಲಿ ಇರಲಿಲ್ಲ. ಸ್ತ್ರೀಯರು ದೀರ್ಘ ಸುಮಂಗಲಿ-ಯರಾಗಿ ಬಾಳುತ್ತಿದ್ದರು. ಅವರಿಗೆ ವೈಧವ್ಯ ಬರುತ್ತಿರಲಿಲ್ಲ. ಪುರುಷರಿಗೆ ಪತ್ನಿ ವಿಯೋಗವಾಗುತ್ತಿರಲಿಲ್ಲ. ಯಾರಿಗೂ ಅನಿಷ್ಟ ಫಲವಾಗುತ್ತಿರಲಿಲ್ಲ. ಮನೋಭೀಷ್ಟವೀಡೇರದವರ್ಯಾರೂ ಇರಲಿಲ್ಲ. ಸಣ್ಣವಯಸ್ಸಿನವರು ವೃದ್ಧರ ಕಣ್ಣೆದುರು ಮೃತರಾಗುತ್ತಿರಲಿಲ್ಲ. ಜನಾರ್ದನನೆಂಬ ಪವಿತ್ರನಾಮದಿಂದ ರಾಜಿಸುವ ಜಗದೊಡೆಯನಾದ ಶ್ರೀರಾಮಚಂದ್ರನು ಅತ್ಯಂತ ಧರ್ಮದಿಂದ ಭೂಮಿಯನ್ನಾಳುತ್ತಿರುವಾಗ ಸಕಲ ಪ್ರಜರೂ ಯಥೇಷ್ಟವಾಗಿ ಹೂವಿನ ಹಾರ ವಿವಿಧ ಆಭರಣಗಳನ್ನು ಧರಿಸಿ ಸುಗಂಧಗಳನ್ನು ಪೂಸಿಕೊಂಡು ಶ್ರೇಷ್ಠವಾದ ಪೀತಾಂಬರ, ಜೀನಾಂಬರಾದಿ ಉಡುಪುಗಳನ್ನು ಉಟ್ಟು ಸವಿಯಾದ ಹಾಲನ್ನು ಸವಿದು ಮೃಷ್ಟಾನ್ನ ಭೋಜನ ಮಾಡುತ್ತಾ ಹರ್ಷನಿರ್ಭರರಾಗಿ ಸುಖವಾಗಿದ್ದರು. ಬ್ರಹ್ಮ-ರುದ್ರ-ಇಂದ್ರ-ಬೃಹಸ್ಪತಿ-ಪ್ರವಹವಾಯು-ಸೂರ್ಯ ಮೊದಲಾದ ದೇವತೆಗಳು ನವರತ್ನ ಖಚಿತವಾದ ಕಿರೀಟಗಳಿಂದ ಬೆಳಗುವ ತಮ್ಮ ಶಿರಗಳನ್ನು ರಘುರಾಮನ ಪಾದಕಮಲಗಳ ಮೇಲಿರಿಸಿ ನಮಸ್ಕರಿಸುತ್ತಿದ್ದರು. ಅವರ ಕಿರೀಟಗಳಲ್ಲಿನ ನವರತ್ನಗಳ ಕಾಂತಿಯಿಂದ ಶ್ರೀರಾಮನ ಚರಣಗಳು ಪ್ರಕಾಶಿಸುತ್ತಿದ್ದವು. ಇಂತು ಶ್ರೀ ರಮಾ-ರಮಣನಾದ ರಾಮಚಂದ್ರಪ್ರಭುವು ಸುರ-ನರ-ವಾನರೋತ್ತಮರ ಭಕ್ತಿ ಸಹಕೃತವಾದ ಪೂಜೆ-ನಮನಗಳನ್ನು ಸ್ವೀಕರಿಸುತ್ತ ವಿರಾಜಿಸುತ್ತಿದ್ದನು.

ಸಕಲರಿಗೂ ಒಡೆಯನಾದ ಶ್ರೀನಾರಾಯಣನನ್ನು ಅನಾದ್ಯನಂತಕಾಲದಿಂದ ಸರ್ವದಾ ಅನುಸರಿಸುವ ನಿತ್ಯಾ-ವಿಯೋಗಿನಿಯಾದ ಶ್ರೀಲಕ್ಷ್ಮೀದೇವಿಯೇ ಈಗ ಶ್ರೀಹರಿಯು ಕೈಗೊಂಡಿರುವ ರಾಮಾವತಾರದಲ್ಲಿ ಅವನನ್ನು ಸೇವಿಸಲು ಸೀತಾದೇವಿಯಾಗಿ ಅವತರಿಸಿರುವಳು. ಸ್ವರಮಣನೂ, ರಮಾರಮಣನೂ ಆದ ಶ್ರೀನಾರಾಯಣವತಾರಿಯಾದ ಶ್ರೀರಾಮ-ಚಂದ್ರನನ್ನು ಅನುಸರಿಸಿ ತನ್ನ ಸ್ವಭಾವಸಿದ್ಧವಾದ (ಸ್ವಾಭಾವಿಕ) ಸೌಂದರ್ಯ, ಲಾವಣ್ಯ, ಒನಪು, ವೈಯ್ಯಾರ, ಬೆಡಗು ಮೊದಲಾದ ಶ್ರೇಷ್ಠಗುಣಗಳಿಂದ ಅವನನ್ನು ನಿತ್ಯವೂ ಸಂತೋಷಗೊಳಿಸುವಳು. ಶ್ರೀರಾಮನು ಸ್ವಭಾವದಿಂದಲೇ ನಿತ್ಯವೂ ಉನ್ನತವೂ ಅಪಾರವೂ ಆದ ಆನಂದಪೂರ್ಣನಾಗಿರುವನು. ಪೂರ್ಣಚಂದ್ರನ ಬೆಳದಿಂಗಳಿನಿಂದ ಮನೋಹರವಾಗಿ ವಿರಾಜಿಸುವ ರಾತ್ರಿಗಳಲ್ಲಿ ಅರಳಿದ ಕುಸುಮಾವಳಿಗಳಿಂದ ಕಂಗೊಳಿಸುವ ಅಶೋಕತರುಗಳ ಉಪವನಗಳಲ್ಲಿ ಸರ್ವೋತ್ತಮನೂ ಸ್ವರಮಣನೂ ಆದ ಶ್ರೀರಾಮನು ಪ್ರತಿದಿನ ತನ್ನ ಪ್ರಿಯಳಾದ ಶ್ರೀಸೀತಾದೇವಿಯೊಡನೆ ವಿಹರಿಸುವನು. ಶ್ರೀರಾಮಚಂದ್ರನ ಶ್ರೇಷ್ಠಗುಣಗಳಿಂದ ಅವನಲ್ಲಿ ಅನುರಕ್ತರಾದ ಗಂಧರ್ವ-ಚಾರಣಾದಿಗಳು, ಅಪ್ಸರಸ್ತ್ರೀಯ-ರಿಂದೊಡಗೂಡಿ ಸುಮಧುರ ಕಂಠದಿಂದ ಅವನ ಗುಣಗಳನ್ನು ಗಾಯನ ಮಾಡುವರು. ಬ್ರಹ್ಮ-ರುದ್ರ ಮತ್ತು ಇಂದ್ರಾದಿ ದೇವತೆಗಳು, ಸಕಲ ಮುನಿಜನರು ವಿವಿಧ ಸ್ತೋತ್ರಾದಿಗಳಿಂದ ಅವನನ್ನು ಆನಂದಗೊಳಿಸುವರು. ನಿಖಿಲ ಸಾಮಂತ ರಾಜರು ಸದಾ ಜಾಗರೂಕರಾಗಿದ್ದು ಶ್ರೀರಾಮಚಂದ್ರನನ್ನು ಅನುಸರಿಸಿ ನಡೆದುಕೊಳ್ಳುವರು. ಇಂತು ರಘುಕುಲಾ-ವತಂಸನಾದ ಶ್ರೀರಾಮನು ಹದಿಮೂರು ಸಾವಿರ ವರ್ಷಗಳ ಕಾಲ ಭೂಮಂಡಲವನ್ನು ಪರಿಪಾಲಿಸಿದನು. ಅಮೋಘ ವೀರ್ಯನೂ, ವಿಜಿತಾರಿಯೂ, ಅಪರಿಮಿತಗುಣ ಗಣನೂ ಆದ ಇಂದಿರಾ ನಾಯಕನು ಅಮಂದಾನಂದಸಮುದ್ರನಾಗಿ ಚಂದ್ರಮನಂತೆ ಸಕಲ ಲೋಕಕ್ಕೂ ಆನಂದದಾಯಕನಾಗಿ ರಾರಾಜಿಸಿದನು.

ಶ್ರೀರಾಮನು ಸೀತಾದೇವಿಯಲ್ಲಿ ಅಗ್ನಿ ಮತ್ತು ಇಂದ್ರರನ್ನು ಕುಶಲವರೆಂಬ ಹೆಸರಿನಿಂದ ಅವಳಿ ಪುತ್ರರನ್ನಾಗಿ ಪಡೆದನು. ಕುಶಲವರು ಸಂಗೀತ ಸಾಹಿತ್ಯ ಕಲಾ ಕುಶಲರಾಗಿ, ಗುಣವಂತರಾಗಿ, ಬಲವಂತರಾಗಿ ಶೋಭಿಸಿದರು. ತರುವಾಯ ಶ್ರೀರಾಮಚಂದ್ರನು. ತಮ್ಮನಾದ ಶತ್ರುಘ್ನನಿಂದ ಬೆಂಕಿಯನ್ನು ಕಾರುವ ಬಾಣಗಳಿಂದ ಲವಣಾಸುರನನ್ನು ಸುಟ್ಟು ಬೂದಿ ಮಾಡಿಸಿದನು. ಭಯಂಕರ ಪರಾಕ್ರಮಶಾಲಿಯಾದ ರಾಮನು ಮಧುರಾ ನಗರವನ್ನು ನಿರ್ಮಾಣ ಮಾಡಿಸಿದನು. ಮೂರು ಕೋಟಿ ಸಂಖ್ಯಾತರಾದ ದೈತ್ಯರು ಗಂಧರ್ವರಲ್ಲಿ ಜನಿಸಿದ್ದರು. ಶ್ರೀರಾಮನು ಭರತನಿಗೆ ಕೀರ್ತಿಯನ್ನು ತಂದೀಯಲು ಅವನಲ್ಲಿ ಸನ್ನಿಹಿತನಾಗಿದ್ದು ಅವನಿಂದ ಬೋಧಿಸಲೂ, ಪರಮಾತ್ಮನ (ತನ್ನ) ಪ್ರೀತ್ಯರ್ಥವಾಗಿಯೂ ಅನೇಕ ಯಜ್ಞಗಳನ್ನು ನೆರವೇರಿಸಿದನು. ಐಹಿಕ ಫಲಕಾಮನಾ ರಹಿತವಾದ ಆ ಯಾಗಗಳು ಶ್ರೇಷ್ಠ ಕಲ್ಪಕಗಳೆನಿಸಿದವು. ಆ ಶ್ರೇಷ್ಠ ಯಾಗಗಳಲ್ಲಿ ಬ್ರಹ್ಮರುದ್ರ, ಇಂದ್ರಾದಿ ಸಕಲದೇವತೆಗಳು ಸಾರಥ್ಯವನ್ನು ವಹಿಸಿದ್ದರಲ್ಲದೆ ಶ್ರೀದೇವಿ, ಭೂದೇವಿ, ದುರ್ಗಾದೇವಿಯರೂ ಕೂಡ ಸಚಿವತನವನ್ನು ನಿರ್ವಹಿಸಿದರು.

ಶ್ರೀರಾಮಚಂದ್ರನು ಅಧರ್ಮಿಗಳನ್ನು ದಂಡಿಸಿ ಧರ್ಮಿಷ್ಠರನ್ನು ಸಲಹುತ್ತಿದ್ದನು. ಹಿಂದೆ ಜಂಘ ಎಂಬ ಅಸುರನು ಶ್ರೀ ಪಾರ್ವತಿ ದೇವಿಯನ್ನು ತಪಸ್ಸಿನಿಂದ ಒಲಿಸಿಕೊಂಡು ಒಂದು ಕಲ್ಪಕಾಲ ಜೀವಿಸುವ ದೀರ್ಘಾಯುಷ್ಯವನ್ನು ಪಾರ್ವತಿದೇವಿಯವರಿಂದ ಪಡೆದಿದ್ದನು. ದುರ್ಬುದ್ಧಿಯಾದ ಆ ಅಸುರನು ಈಗ ಶೂದ್ರನಾಗಿ ಜನಿಸಿದ್ದನು. ಆ ಶೂದ್ರನು ಸಕಲ ಲೋಕಗಳನ್ನೂ ನಾಶ ಮಾಡಬಯಸಿದನು. ಅವನು ಶಂಭೂಕನೆಂಬ ಹೆಸರಿನಿಂದ ವರಬಲದಿಂದ ಅನ್ಯರಿಂದ ಅವಧ್ಯನಾಗಿದ್ದನು. ಶ್ರೀರಾಮನಿಂದಲ್ಲದೆ ಬೇರೆಯವರಿಂದ ಅವನು ಸಾಯಬಾರದೆಂದು ಆ ವರದ ಅರ್ಥ. ಇಷ್ಟು ಮಾತ್ರವಲ್ಲದೆ ಆ ತಾಮಸಬುದ್ಧಿಯ ಶಂಭೂಕನು ಮಹೇಶ್ವರ ಪದವಿಯನ್ನು ಪಡೆಯಬೇಕೆಂದು ಘೋರತಪಸ್ಸನ್ನು ಎಸಗುತ್ತಿದ್ದನು. ಆದರಿಂದ ಓರ್ವ ಬ್ರಾಹ್ಮಣನ ಪುತ್ರನು ಮೃತನಾದನು. ಸರ್ವಶಕ್ತನೂ ಪುರುಷೋತ್ತಮನೂ ಆದ

ಶ್ರೀರಾಮಚಂದ್ರನು ಅಧರ್ಮಿಯೂ ಲೋಕನಾಶಕಮತಿಯುಳ್ಳವನೂ ಆದ ಶಂಭೂಕನನ್ನು ಸಂಹರಿಸಿ ವಿಪ್ರ ಪುತ್ರನನ್ನು ಮತ್ತೆ ಬದುಕಿಸಿದನು.

ಒಮ್ಮೆ ಶ್ವೇತನೆಂಬ ರಾಜನು ಅನೇಕ ಯಜ್ಞಗಳನ್ನು ಮಾಡಿದನು. ಯಜ್ಞ ಕಾಲದಲ್ಲಿ ಹೆಚ್ಚಾಗಿ ಅನ್ನದಾನ ಮಾಡುವುದು ಸಂಪ್ರದಾಯ ಮತ್ತು ಕರ್ತವ್ಯ. ಆದರೆ ಶ್ವೇತಭೂಪತಿಯು ಅನ್ನದಾನ ಮಾಡದೆ ಯಜ್ಞಗಳನ್ನು ನೆರವೇರಿಸಿದ್ದರಿಂದ ಅದರ ದೋಷದಿಂದಾಗಿ ಅವನಿಗೆ ಅನ್ನಾಹಾರಗಳು ದೊರಕದಂತಾದವು. ಹಸಿವೆಯನ್ನು ಪರಿಹರಿಸಿಕೊಳ್ಳುವ ಉಪಾಯಕಾಣದೆ ತನ್ನ ದೇಹದಲ್ಲಿದ್ದ ಮಾಂಸವನ್ನೇ ಕಿತ್ತಿ ತಿನ್ನುತ್ತಿದ್ದನು. ಆ ಕಷ್ಟದಿಂದ ಪಾರಾಗಲು ಶ್ವೇತನು ಬ್ರಹ್ಮದೇವರನ್ನು ಕುರಿತು ತಪಸ್ಸು ಮಾಡಿದನು. ಅವನ ತಪಸ್ಸಿಗೆ ಮೆಚ್ಚಿ ಬ್ರಹ್ಮದೇವರು ಪ್ರತ್ಯಕ್ಷರಾಗಿ ಏನು ವರಬೇಕೆಂದು ಕೇಳಿದಾಗ ಅವನು ತನ್ನ ಹಸಿವನ್ನು ನಿವಾರಿಸಿಕೊಳ್ಳಲು ಉಪಾಯವನ್ನು ಬೇಡಿದನು. ಬ್ರಹ್ಮದೇವರು ಸ್ಪರ್ಶ ಮಾತ್ರದಿಂದ ಮೃತರಾದವರನ್ನು ಬದುಕಿಸುವ ಮಹಿಮೆಯುಳ್ಳ ಒಂದು ಅಪೂರ್ವ ಮಾಲೆಯನ್ನು ಶ್ವೇತರಾಜನಿಗೆ ಅನುಗ್ರಹಿಸಿ ''ರಾಜನ್, ಈ ಮಾಲೆಯನ್ನು ಸ್ಪರ್ಶಿಸುವ ಪುಣ್ಯದಿಂದ ನಿನ್ನ ಹಸಿವೆಯನ್ನು ನಿವಾರಿಸಿಕೊಂಡು ಆ ಬಳಿಕ ಇದನ್ನು ಶ್ರೀರಾಮಚಂದ್ರನಿಗೆ ಸಮರ್ಪಿಸಲು ಅಗಸ್ತ್ಯ ಮುನಿಗಳಿಗೆ ಕೊಡು'' ಎಂದು ಹೇಳಿ ಅಂತರ್ಧಾನ ಹೊಂದಿದರು. ಆ ಮಾಲೆಯ ಸ್ಪರ್ಶ ಮಾತ್ರದಿಂದ ಅದರ ದಿವ್ಯ ಪ್ರಭಾವದಿಂದ ಶ್ವೇತರಾಜನು ತನ್ನ ಹಸಿವೆಯನ್ನು ನಿವಾರಿಸಿಕೊಂಡು ಮುಂದೆ ಅದನ್ನು ಅಗಸ್ತ್ಯ ಮಹರ್ಷಿಗಳಿಗೆ ಅರ್ಪಿಸಿ ಶ್ರೀರಾಮನಿಗದನ್ನು ಕೊಡುವಂತೆ ವಿಜ್ಞಾಪಿಸಿದನು. ಅಗಸ್ತ್ಯರು ಆ ಮಾಲೆಯನ್ನು ಭಕ್ತಿಯಿಂದ ತಮ್ಮ ಕರಕಿಸಲಯಗಳಿಂದ ಪೂಜಿಸುತ್ತಿದ್ದರು. ಆದರಿಂದ ತುಷ್ಟನಾದ ಪ್ರಭು ಶ್ರೀರಾಮನು ಅಗಸ್ತ್ಯರನ್ನು ತನ್ನ ಭಕ್ತರೆಂದು ಪರಿಗಣಿಸಿದನು. ಜನಾರ್ದನನಾದ ಶ್ರೀರಾಮಚಂದ್ರನು ಅಗಸ್ತ್ಯ ಮುನಿಗಳಿಂದ ಆ ಮಾಲೆಯನ್ನು ಸ್ವೀಕರಿಸಿ ಅವರಿಂದ ಸ್ತುತ್ಯನಾಗಿ ಅಯೋಧ್ಯೆಗೆ ದಯ-ಮಾಡಿಸಿದನು.

ಸುರಾಣಕರೆಂಬ ಕೆಲ ಅಸುರರು ಭೂಲೋಕದಲ್ಲಿ ಜನಿಸಿ ವಿಶೇಷಾಕಾರವಾಗಿ ತಪಸ್ಸನ್ನು ಮಾಡಿ ಚತುರಾನನರಾದ ಬ್ರಹ್ಮದೇವರನ್ನು ಒಲಿಸಿಕೊಂಡು ''ಉದಾರ ಸದ್ಗುಣ ಸಂಪನ್ನನಾದ ಪ್ರಭುವೇ! ನಾವು ಎಷ್ಟೇ ಪಾಪವನ್ನು ಮಾಡಿದರೂ ನಮಗೆ ಮೋಕ್ಷ ದೊರೆಯಬೇಕು. ಹಾಗೆ ಅನುಗ್ರಹಮಾಡಿರಿ'' ಎಂದು ಪ್ರಾರ್ಥಿಸಿದರು. ಬ್ರಹ್ಮದೇವರು ಮುಗುಳುನಗೆಯ ಮೊಗದಿಂದ ''ಸುರಾಣಕರೇ, ಎಲ್ಲಿಯವರೆಗೆ ನೀವು ಗುಣಾರ್ಣವನಾದ ಲಕ್ಷ್ಮೀಕಾಂತನನ್ನು ರಮಾದೇವಿಯಿಂದ ಅಗಲಿಸುವುದಿಲ್ಲವೋ ಅಲ್ಲಿಯವರೆಗೆ ನೀವು ಹೆಚ್ಚು ಪಾಪವನ್ನಾಚರಿಸಿದರೂ ಅದು ಮೋಕ್ಷಸಾಧನೆಗೆ ಅಡ್ಡಿಯಾಗುವುದಿಲ್ಲ'' ಎಂದು ಹೇಳಿ ವರವನ್ನು ಕರುಣಿಸಿದರು. ತರುವಾಯ ಆ ಅಸುರರು ಜಾಗ್ರತೆಯಾಗಿ ಮುಕ್ತಿಯನ್ನು ಪಡೆಯಬಯಸಿ ಶ್ರೀರಾಮನು ಭೂಮಂಡಲವನ್ನು ಆಳುತ್ತಿರುವಾಗ ಬಹು ಆಸಕ್ತಿಯಿಂದ ಮೋಕ್ಷಸಾಧನೀಭೂತ ಸತ್ಕರ್ಮಾನುಷ್ಠಾನರತರಾದರು. ಆ ಸುರಾಣಕರು ಅನಾದಿಕಾಲದಿಂದ ಅನೇಕ ದುಷ್ಟ ಕಾರ್ಯಗಳನ್ನೆಸಗಿ ಪರ್ವತಗಟ್ಟಳೆ ಪಾಪಗಳನ್ನು ಗಳಿಸಿದ್ದಾರೆ. ಆದುದರಿಂದ ಅವರಿಗೆ ಮೋಕ್ಷಕ್ಕೆ ಹೋಗುವ ಯೋಗ್ಯತೆ ಇಲ್ಲ. ಆದರೆ ಅವರೀಗ ಬ್ರಹ್ಮದೇವರಿಂದ ವರಪಡೆದು ಸಜ್ಜನರ ಸಹವಾಸದಲ್ಲಿದ್ದು ಸತ್ಕರ್ಮಾನುಷ್ಠಾನರತರಾಗಿದ್ದಾರೆ. ಜಪಾಕುಸುಮಸಹವಾಸದಿಂದ ಶುದ್ಧ ಸ್ಫಟಿಕಮಣಿಯಲ್ಲಿ ಕೆಂಬಣ್ಣ ಮೂಡುವಂತೆ ಆ ಅಸುರರಿಗೆ ಸತ್ಸಹವಾಸದಿಂದ ಮೋಕ್ಷಸಾಧನ ತತ್ವಜ್ಞಾನ ಉದಯಿಸಬಹುದು. ಶ್ರೀರಾಮಸೀತೆಯರು ಸಾಕ್ಷಾತ್ ಲಕ್ಷ್ಮೀನಾರಾಯಣರೆಂಬ ಜ್ಞಾನಹುಟ್ಟಬಹುದು. ಹಾಗಾದಲ್ಲಿ ಅವರಿಗೆ ಮೋಕ್ಷ ದೊರಕೀತು. ಅರ್ಹರಲ್ಲದ ಅವರಿಗೆ ಮೋಕ್ಷವಾಗಬಾರದು ಇತ್ಯಾದಿಯಾಗಿ ಯೋಚಿಸಿ ಜನಕನಂದಿನಿಯಾದ ಶ್ರೀಸೀತಾಮಾತೆಯು ತನ್ನ ಮಾಯೆಯಿಂದ ಸುರಾಣಕರಲ್ಲಿದ್ದ ತತ್ವಜ್ಞಾನವನ್ನು ಕದಲಿಸಿದಳು. ಸೀತಾ (ತಾನು) ಮತ್ತು ಶ್ರೀರಾಮಚಂದ್ರರು ಸಾಮಾನ್ಯ ಮಾನವರೆಂಬ ಭಾವನೆಯನ್ನು ಅವರಲ್ಲಿ ಹುಟ್ಟಿಸಿದಳು. ಆದರಿಂದಲೂ, ಶ್ರೀಹರಿಯ ಆಜ್ಞೆ ಮತ್ತು ಶ್ರೀಭಗವದಧೀನನಾದ ಮಾಯೆಯಿಂದ

ಸುರಾಣಕರು ಭ್ರಾಂತಿಗೊಳಗಾಗಿ ''ರಾಮನು ರಾಕ್ಷಸನಾದ ರಾವಣನು ಕದ್ದೊಯ್ದಿದ್ದ ಸೀತೆಯನ್ನು ಮತ್ತೆ ಮನೆಗೆ ಸೇರಿಸಿ-ಕೊಂಡನು'' ಎಂದು ಮುಂತಾಗಿ ಶ್ರೀರಾಮಸೀತೆಯರನ್ನು ನಿಂದಿಸಿದರು. ಶ್ರೀರಾಮಚಂದ್ರ ಪ್ರಭುವು 'ಎಲ್ಲಿಯವರೆಗೆ ನೀವು ಲಕ್ಷ್ಮೀದೇವಿಯಿಂದ ನಾರಾಯಣನನ್ನು ಅಗಲಿಸುವುದಿಲ್ಲವೋ'-ಎಂಬ ಬ್ರಹ್ಮದೇವರ ವಾಕ್ಯವನ್ನು ಸತ್ಯಮಾಡಲಿಕ್ಕಾಗಿ ಆ ಸುರಾಣಕ ದೈತ್ಯರನ್ನು ಅಂಧಃತಮಸ್ಸಿಗೆ ನೂಕಿದನು. ಅಂದರೆ ಸೀತೆಯನ್ನು ತ್ಯಾಗಮಾಡಿದವನಂತೆ ನಟಿಸಿ ಆದರಿಂದ ಸುರಾಣಕರು ಮೋಕ್ಷಕ್ಕೆ ಅನರ್ಹರೆಂಬುದನ್ನು ಸ್ಥಿರಪಡಿಸಿ ಅಂಧಃತಮಸ್ಸಿಗೆ ಅವರು ಅರ್ಹರೆಂದು ಸಂಕಲ್ಪಿಸಿ ಅವರಿಗೆ ಆ ಗತಿಯಾಗಲೆಂದು ಆಜ್ಞೆಯಿತ್ತನು. ನಿತ್ಯಾವಿಯೋಗಿನಿಯಾದ ಲಕ್ಷ್ಮೀದೇವಿಯ ಅವತಾರಳಾದ ಸೀತಾದೇವಿಯೊಡನೆ ಸರ್ವದಾ ವಾಸಿಸುವನಾದರೂ ಅಜ್ಞ ಜನರ ದೃಷ್ಟಿಯಲ್ಲಿ ಸೀತೆಯನ್ನು ವಸಿಷ್ಠರ ಆಶ್ರಮಕ್ಕೆ ಕಳಿಸಿದನೆಂಬಂತೆಯೂ, ಪತ್ನಿಯನ್ನು ತ್ಯಜಿಸಿದನೆಂಬಂತೆಯೂ ನಟಿಸಿದನು. ಸೀತಾರಾಮನಿಂದಕರಾದ ಸುರಾಣಕರು ಆ ಕಾರಣದಿಂದ ಅಂಧತಮಸ್ಸಿಗೆ ಹೋದರು.

ಶ್ರೀರಾಮಚಂದ್ರನು ಅಶ್ವಮೇಧಯಾಗವನ್ನು ಪ್ರಾರಂಭಿಸಿ ವಸಿಷ್ಠರ ಆಶ್ರಮದಲ್ಲಿದ್ದ ಸೀತೆಯನ್ನು ಅಜ್ಞ ಜನರ ದೃಷ್ಟಿಯಲ್ಲಿ ಯಾಗಕ್ಕೆ ಕರೆಯಿಸಿಕೊಂಡವನಂತೆ ನಟನೆ ಮಾಡಿದನು. ಸರ್ವದಾ ಶ್ರೀಹರಿಯನ್ನೇ ಅನುಸರಿಸುವ ಸೀತಾ-ಮಾತೆಯೂ ಸಹ ಯಜ್ಞಶಾಲೆಗೆ ಬಂದವಳಂತೆ ನಟಿಸಿ ''ತಾಯಿ, ಭೂಮಾತೆ, ನಾನು ಕಳಂಕಿನಿಯಲ್ಲದ ಪಕ್ಷದಲ್ಲಿ ನನ್ನನ್ನು ನಿನ್ನ ಉದರದಲ್ಲಿ ಸೇರಿಸಿಕೊಳ್ಳಮ್ಮಾ'' ಎಂದಳು. ಕೂಡಲೇ ಭೂಮಿಯು ಇಬ್ಭಾಗವಾಗಿ ಸಕಲ ಜನರೂ ನೋಡುತ್ತಿರುವಂತೆಯೇ ಸೀತಾದೇವಿಯು ಭೂಗರ್ಭದಲ್ಲಿ ಮರೆಯಾದವಳಂತೆ ಅಜ್ಞ ಜನರಿಗೂ ಗೋಚರಿಸಿತು. ಅಷ್ಟೇ ಹೊರತು, ನಿತ್ಯದಂಪತಿಗಳಾದ ಸೀತಾರಾಮರಿಗೆ ವಿಯೋಗವೆಂಬುದುಂಟೆ? ಜಗದೊಡೆಯನಾದ ಶ್ರೀಹರಿಯು ತಾನೇ ಬ್ರಹ್ಮದೇವರನ್ನು ಜಗದ್ಗುರುವನ್ನಾಗಿ ಸೃಜಿಸಿದನೆಂದ ಬಳಿಕ ಬ್ರಹ್ಮನ ವಚನವನ್ನು ಸಜ್ಜನರ ಸಭೆಯಲ್ಲಿ ಸುಳ್ಳು ಮಾಡುವುದುಂಟೆ? ಅಂತೆಯೇ ಬ್ರಹ್ಮದೇವರ ವಾಕ್ಯವನ್ನು ಸತ್ಯವನ್ನಾಗಿ ಮಾಡಿದನು. ಬ್ರಹ್ಮದೇವರು ಯೋಗ್ಯರಿಗೆ ಕೊಟ್ಟ ವರಗಳಲ್ಲಿ ಕೆಲವಂಶವನ್ನು ಸತ್ಯವನ್ನಾಗಿ, ಕೆಲವಂಶವನ್ನು ಅಸತ್ಯವನ್ನಾಗಿ ಶ್ರೀಹರಿಯು ಮಾಡುವನು. ದೂರ್ವಾಸರು ಅಂಬರೀಷ ಚಕ್ರವರ್ತಿಗೆ ಕೊಟ್ಟ ಶಾಪವನ್ನು ವ್ಯರ್ಥಗೊಳಿಸಿದ್ದು ಇದಕ್ಕೆ ಉದಾಹರಣೆಯಾಗಿದೆ. ಆದರೆ ಶ್ರೀಹರಿಯು ಕೊಟ್ಟ ವರವನ್ನಾಗಲೀ ಶಾಪವನ್ನಾಗಲೀ ವ್ಯರ್ಥ-ಗೊಳಿಸಲು ಯಾರೂ ಶಕ್ತರಲ್ಲ. ತ್ರಿಕಾಲಕ್ಕೂ ಅವನ ವಚನ ಸುಳ್ಳಾಗದು. ಬುದ್ಧಾವತಾರವನ್ನೆತ್ತಿದಾಗ ಶ್ರೀಹರಿಯು ಅಸುರರಿಗೆ ಹೇಳಿದ ವಚನಗಳು ಅಸತ್ಯವಾಗಿವೆಯಲ್ಲ ಎಂದರೆ ಅಸುರರಿಗೆ ಸ್ವಾಭಾವಿಕವಾಗಿಯೇ ಭ್ರಮೆಯಿರುವುದರಿಂದ ಅವು ವ್ಯರ್ಥವಾದವು. ದೇವತೆಗಳಿಗೆ ಸಹಜವಾಗಿಯೇ ಯಥಾರ್ಥ ಜ್ಞಾನವಿರುವುದರಿಂದ ಶ್ರೀಹರಿಯ ಆ ವಚನಗಳು ಸತ್ಯವಾದವು. ಇಂಥ ಸತ್ಯವಾಕ್ಯಪರಿಪಾಲನೆಗಾಗಿಯೇ ಯುಗಯುಗಗಳಲ್ಲಿ ಶ್ರೀಹರಿಯು ಅವತಾರವೆತ್ತುವನು. ಅದೇ ಅವನ ಅವತಾರಗಳ ಪ್ರಯೋಜನ! ಸೀತಾಮಾತೆಯು ಅಜ್ಞರ ದೃಷ್ಟಿಯಲ್ಲಿ ಭೂಮಿಯಲ್ಲಿ ಪ್ರವೇಶಿಸಿ ಅದೃಶ್ಯಳಾದವಳಂತೆ ಕಂಡರೂ, ಪ್ರಭೆಯು ಸೂರ್ಯನನ್ನು ಬಿಟ್ಟಿರದಂತೆ ನಿತ್ಯಾವಿಯೋಗಿನಿಯಾದ ಸೀತಾದೇವಿಯು ಶ್ರೀರಾಮನಿಂದ ಅವಿಯುಕ್ತಳಾಗಿ ಅಂದರೆ ಸದಾ ಶ್ರೀರಾಮನೊಡನಿದ್ದು ಕ್ರೀಡಿಸುತ್ತಿದ್ದಳು.

ಹೀಗೆ ಶ್ರೀಲಕ್ಷ್ಮೀದೇವಿಯು ಸಂತೋಷದಿಂದ ನೆರವೇರಿಸುವ ಪಾದಸೇವೆಯನ್ನು ಶ್ರೀರಾಮಚಂದ್ರನು ಆನಂದದಿಂದ ಸ್ವೀಕರಿಸುತ್ತ ಬೆಡಗುಗೊಂಡನು. ಆಪ್ತಕಾಮನಾದ ಶ್ರೀರಾಮನಿಗೆ ಯಾವ ವಿಧವಾದ ಫಲಾಪೇಕ್ಷೆಯು ಇರದಿದ್ದರೂ ಲೋಕಶಿಕ್ಷಾರ್ಥವಾಗಿ ಪುನಃಪುನಃ ಶ್ರೇಷ್ಠವಾದ ಅಶ್ವಮೇಧಾದಿ ಯಜ್ಞಗಳನ್ನು ಜರುಗಿಸುತ್ತ ತನ್ನನ್ನು ಪೂಜಿಸುತ್ತ ಲೋಕಾಭಿರಾಮನಾಗಿ ರಾಜಿಸಿದನು. ಜನಕನಂದಿನಿಯಾದ ಸೀತಾಮಾತೆಯು ಜಗತ್ತಿನ ಜನರ ಕಣ್ಣಿಗೆ ಕಾಣಸುತ್ತಿರದಿದ್ದರೂ ಸರ್ವದಾ ಶ್ರೀರಾಮನ ಕಣ್ಣೆದುರು ರಾಜಿಸುತ್ತ ಅವನ ಸೇವಾತತ್ಪರಳಾಗಿದ್ದಳು. ಆ ದೇವಿಯು ಭೂಮಿಯಲ್ಲಿ ಪ್ರವೇಶಿಸಿದ

ಮೇಲೂ ಏಳುನೂರು ವರ್ಷಗಳ ಕಾಲ ಸಂತಸದಿಂದ ಶ್ರೀರಾಮನೊಡನೆ ಶೋಭಿಸುತ್ತಿದ್ದಳು. ಜನಾರ್ದನನೂ, ಲೋಕಾಭಿರಾಮನೂ ಆದ ಪ್ರಭು ಶ್ರೀರಘುರಾಮನ ಅವತಾರದ ಅನಂತಲೀಲಾ ವಿಲಾಸಗಳನ್ನು ನಾಲ್ಮೊಗ, ಶೂಲಪಾಣಿ, ಶೇಷ, ಸುರಪತಿ ಮೊದಲಾದ ದೇವತೆಗಳೇ ಮನದಲ್ಲಿಯೂ ಯೋಚಿಸಲು ಅಸಮರ್ಥರಾಗಿರುವಾಗ ಅಂಥ ಪರಮ ಲೀಲಾವಿಲಾಸಗಳನ್ನು ತೋರಲು ಆ ದೇವತೆಗಳು ಶಕ್ತರಾದಾರೆ? ಬ್ರಹ್ಮಾದಿಗಳ ಪಾಡೇ ಇಂತಿರಲು ಇನ್ನು ಉಳಿದ ಯೋಗಿಗಳು, ಋಷಿಮುನಿಗಳಿಗೆ ಅದು ಅಸಾಧ್ಯವೆಂದು ಬೇರೆ ಹೇಳಬೇಕಾಗಿಲ್ಲವಷ್ಟೇ!

ಶ್ರೀರಾಮನು ಭೂಮಂಡಲವನ್ನು ಸತ್ಯಲೋಕಕ್ಕೆ ಸಮವಾದ ಉತ್ತಮ ಗುಣಯುಕ್ತವಾಗಿರುವಂತೆ ಮಾಡಿ ರಾಜ್ಯಭಾರ ಮಾಡುತ್ತಿದ್ದನು. ಇಂದ್ರಾದಿ ದೇವತೆಗಳು ಇದನ್ನು ಕಂಡು ತಮ್ಮ ತಮ್ಮ ಲೋಕಗಳು ಭೂಲೋಕಕ್ಕಿಂತ ಮಿಗಿಲಾದ ಪ್ರಾಶಸ್ತ್ಯ ಪಡೆಯುವಂತೆ ಮಾಡಲು ಆಸಿಸಿ ಸತ್ಯಲೋಕಕ್ಕೆ ತೆರಳಿ ಚತುರಾನನರಾದ ಶ್ರೀಬ್ರಹ್ಮದೇವರಲ್ಲಿ ಭೂಲೋಕದ ಹಿರಿಮೆ-ಗರಿಮೆಗಳನ್ನು ಕೊಂಡಾಡಿದರು. ಅಮರರ ಮಾತನ್ನು ಲಾಲಿಸಿ ಅಮರನಿಕರಕ್ಕೆ ವಿಭುಗಳಾದ ಬ್ರಹ್ಮದೇವರು ಸುರಾನೀಕದೊಡನೆ ಆಪ್ತಾಲೋಚನೆ ನಡೆಸಿ ಶ್ರೀರಾಮಚಂದ್ರ ಪ್ರಭುವು ನಿಜಧಾಮವಾದ ವೈಕುಂಠ ನಗರಕ್ಕೆ ಬರುವಂತೆ ಮಾಡಿದಲ್ಲಿ ದೇವತಾ ಲೋಕಗಳ ಮಹತ್ವ ಶಾಶ್ವತವಾಗುಳಿಯುವುದೆಂದು ಮನಗಂಡು ಶೂಲಪಾಣಿಗಳಾದ ಮಹಾದೇವರನ್ನು ಕರೆದು ''ರುದ್ರದೇವ! ನೀನು ಭೂಲೋಕಕ್ಕೆ ತೆರಳಿ ಶ್ರೀರಾಮನ ದರ್ಶನ ಪಡೆದು ನಮ್ಮೆಲ್ಲರ ಪರವಾಗಿ ಪ್ರಭುವನ್ನು ವೈಕುಂಠಕ್ಕೆ ದಯಮಾಡಿಸಬೇಕೆಂದು ಪ್ರಾರ್ಥಿಸು'' ಎಂದು ಆಜ್ಞಾಪಿಸಿದನು.

ಸಮಸ್ತ ಜಗತ್ತನ್ನು ಲಯಗೊಳಿಸುವುದರಿಂದ ಕಾಲನೆಂಬ ಹೆಸರಿನಿಂದ ಖ್ಯಾತರಾದ ರುದ್ರದೇವರು ಸೃಷ್ಟಿಕರ್ತರಾದ ಬ್ರಹ್ಮದೇವರ ಬಿನ್ನಹವನ್ನು ಶ್ರೀರಾಮಚಂದ್ರನಲ್ಲಿ ಅರಿಕೆ ಮಾಡಲು ಅಯೋಧ್ಯೆಗೆ ಬಂದು ಮಹಾಪ್ರಭುವನ್ನು ಏಕಾಂತದಲ್ಲಿ ದರ್ಶನ ಮಾಡಿದರು. ಸರ್ವಜ್ಞನಾದ ಸ್ವಾಮಿಯು ರುದ್ರದೇವರ ಆಗಮನದ ಕಾರಣವನ್ನು ತಿಳಿದಿದ್ದರಿಂದ ಮುಂದಿನ ಕಾರ್ಯಕ್ಕೆ ಸನ್ನಾಹಗೊಂಡು ಪ್ರೀತಿಯ ತಮ್ಮನಾದ ಲಕ್ಷ್ಮಣನನ್ನು ಕರೆದು ''ವತ್ಸ, ಲಕ್ಷ್ಮಣ! ನಾನು ರುದ್ರನೊಡನೆ ಏಕಾಂತದಲ್ಲಿ ಮಾತನಾಡಬೇಕಾಗಿದೆ. ನೀನು ನಮ್ಮ ಏಕಾಂತ ಮಾತುಕಥೆ ಮುಗಿಯುವವರೆಗೂ ಯಾರನ್ನೂ ಒಳಗೆ ಬಿಡಬಾರದು. ಒಂದು ವೇಳೆ ಯಾರನ್ನಾದರೂ ಬಿಟ್ಟೆಯಾದಲ್ಲಿ ನಿನ್ನನ್ನು ಸಂಹರಿಸಿಬಿಡುವೆನು'' ಎಂದನು. ಶ್ರೀರಾಮನ ಅಪ್ಪಣೆಯನ್ನು ಕೇಳಿದ ಲಕ್ಷ್ಮಣನು ''ಅಪ್ಪಣೆ'' ಎಂದರುಹಿ ತಾನೇ ದ್ವಾರಪಾಲಕನಾಗಿ ಕಾದು ನಿಂತನು. ಶ್ರೀರಾಮ, ರುದ್ರದೇವರುಗಳು ಏಕಾಂತದಲ್ಲಿ ಮಾತನಾಡಲಾರಂಭಿಸಿದರು. ಅದೇ ಸಮಯದಲ್ಲಿ ರುದ್ರದೇವರ ಇನ್ನೊಂದು ರೂಪರಾದ ದೂರ್ವಾಸಮುನಿಗಳು ಆಗಮಿಸಿ ಲಕ್ಷ್ಮಣಾ! ನಾನೀಗಲೇ ರಾಮಚಂದ್ರನನ್ನು ಕಾಣಬೇಕಾಗಿದೆ. ನನಗೆ ದಾರಿಬಿಡು ಎಂದರು. ಆಗ ಲಕ್ಷ್ಮಣನು ಪೇಚಿನಲ್ಲಿ ಸಿಕ್ಕುಬಿದ್ದು ಇಂತು ಯೋಚಿಸಿದನು. ''ರಾಮಭದ್ರನು ಈಗ ಏಕಾಂತದಲ್ಲಿ ಶಿವನೊಡನಿರುವನು. ಒಳಗೆ ಯಾರನ್ನೂ ಬಿಡಬಾರದೆಂದೂ ಬಿಟ್ಟರೆ ನನ್ನನ್ನು ಸಂಹರಿಸುವುದಾಗಿಯೂ ಆಜ್ಞಾಪಿಸಿರುವನು. ಈಗ ಈ ದುರ್ವಾಸಮುನಿಗಳು ಒಳಗೆ ಹೋಗಿ ಶ್ರೀರಾಮನನ್ನು ಕಾಣಬಯಸಿದ್ದಾರೆ. ಇವರ ಮಾತನ್ನು ಉಲ್ಲಂಘಿಸಿದರೆ ಮಹಾ ಕೋಪಿಷ್ಠರಾದ ಇವರು ಏನನ್ನೂ ಮಾಡಬಲ್ಲರು. ಇವರನ್ನು ಬಿಡುವುದೇ ಬೇಡವೇ? ಹೂಂ, ಇವರನ್ನು ಬಿಡುವುದೇ ಉಚಿತ. ಏಕೆಂದರೆ ಇವರು ಹಿಂದೆ, ''ನಾನು ಬೇಡಿದ ಇಷ್ಟವನ್ನು ಪೂರ್ಣಗೊಳಿಸಿ ಸಾಕೆನಿಸುವಷ್ಟು ಭೋಜನನೀಡಿ ತೃಪ್ತಿಪಡಿಸಲು ಯಾರಿಗೂ ಸಾಧ್ಯವಾಗದು. ಅದು ಸಾಧ್ಯವಾಗದಂತೆಯೇ ನಾನು ಕಾಮಿತವನ್ನು ಕೋರುವೆನು. ನನ್ನ ಇಷ್ಟಾರ್ಥವನ್ನು ಸಲ್ಲಿಸಲಾಗದವರ ಮೇಲೆ ಕೋಪಗೊಳ್ಳುವೆನು'' ಎಂದು ಪ್ರತಿಜ್ಞೆ ಮಾಡಿದ್ದಾರೆ. ಅನೇಕರು ದೂರ್ವಾಸರ ಇಚ್ಛೆಯನ್ನು ಪೂರೈಸಲಾಗದೆ. ಅವರ ಕೋಪಕ್ಕೆ ಗುರಿಯಾಗಿ ಬಹುಕಷ್ಟಪಟ್ಟಿದ್ದಾರೆ. ಈ ಮುನಿಗಳು ಜಗತ್ತಿನಲ್ಲಿ ತಮಗೆ ತೃಪ್ತಿಯಾಗುವಂತೆ ಭೋಜನ ಮಾಡಿಸಲು ಯಾರಿಂದಲೂ ಸಾಧ್ಯವಾಗದಂತೆ ಮಾಡಿ, ಅದರಂತೆ ಪ್ರತಿಜ್ಞೆ ಮಾಡಿ

ಮರೆಯುತ್ತಿದ್ದಾರೆ. ಈ ಮುನಿಗಳ ಪ್ರತಿಜ್ಞಾ ಭಂಗವಾಗುವಂತೆ ಮಾಡಬೇಕು. ಏಕಾಂತದಲ್ಲಿರುವ ಶ್ರೀರಾಮನ ಬಳಿ ನಾನಿವರನ್ನು ಬಿಟ್ಟರೆ ಶ್ರೀರಾಮನ ಮಹಿಮೆಯಿಂದ ಇವರಿಗೆ ತೃಪ್ತಿಕರವಾಗಿ ಭೋಜನ ದೊರಕುವುದು. ಹಾಗಾದಲ್ಲಿ ಇವರು ಪ್ರತಿಜ್ಞಾಭಂಗವಾಗುವುದಲ್ಲದೆ ಶ್ರೀರಾಮನ ಕೀರ್ತಿ ಬೆಳಗುವುದು. ನಾನಿವರನ್ನು ಬಿಡದಿದ್ದರೆ ಶ್ರೀರಾಘವನಿಗೆ ಅಪಕೀರ್ತಿ ಬಂದೇ ಬರುವುದು ಖಂಡಿತ ಹಾಗಾಗಬಾರದು. ಒಂದು ವೇಳೆ ಶ್ರೀರಾಮನು ತನ್ನ ಆಜ್ಞಾಭಂಗ ಮಾಡಿದ್ದಕ್ಕಾಗಿ ನನ್ನನ್ನು ಸಂಹರಿಸಿದರೂ ಅದು ನನ್ನ ಮೇಲೆ ದಯೆತೋರಿದಂತೆಯೇ ಆಗುವುದು. ಆದ್ದರಿಂದ ನಾನಿವರನ್ನು ಒಳಗೆ ಬಿಡುವುದೇ ವಿಹಿತ'' ಹೀಗೆ ಮನದಲ್ಲಿ ಯೋಚಿಸಿ ಲಕ್ಷ್ಮಣನು ಏಕಾಂತದಲ್ಲಿರುವ ರಾಮನ ಬಳಿಗೆ ಹೋಗಲು ದುರ್ವಾಸರಿಗೆ ದಾರಿಕೊಟ್ಟನು.

ಇತ್ತ ಏಕಾಂತದಲ್ಲಿ ರುದ್ರದೇವರು ಶ್ರೀರಾಮಚಂದ್ರನಿಗೆ ಅಭಿವಂದಿಸಿ ಹೀಗೆ ವಿಜ್ಞಾಪಿಸಿದರು ''ಮಹಾಪ್ರಭೋ, ಎಲ್ಲ ದೇವತೆಗಳೂ ಬ್ರಹ್ಮದೇವರೊಡನೆ ಕಲೆತು ವಿಚಾರಮಾಡಿ ತಮ್ಮ ತಮ್ಮ ಲೋಕಗಳಿಗೆ ಭೂಲೋಕಕ್ಕಿಂತ ಅಧಿಕ ಮಹತ್ವ ಪ್ರಾಪ್ತವಾಗಬೇಕೆಂದು ಆಶಿಸಿದ್ದಾರೆ. ಸ್ವಾಮಿ, ನೀನು ಭೂಲೋಕವನ್ನು ಆಳುತ್ತಿರುವುದರಿಂದ ನಿನ್ನ ಮಹಿಮಾತಿಶಯದಿಂದ ಭೂಲೋಕವು ದೇವಲೋಕಗಳಿಗಿಂತ ಮಿಗಿಲೆನಿಸಿದೆ. ಇದೇ ಮುಂದುವರೆದಲ್ಲಿ ಸ್ವರ್ಗಾದಿ ಅಮರಲೋಕಗಳನ್ನು ಕೇಳುವವರೇ ಇಲ್ಲದಂತಾಗಬಹುದು. ಅದು ನಿನಗೆ ಸಮ್ಮತವೂ ಅಲ್ಲವೆಂದು ನಾವು ನಂಬಿರುವೆವು. ನೀನು ಈಗ ನಿನ್ನ ಅವತಾರ ಕಾರ್ಯವನ್ನು ಮುಗಿಸಿ ಶ್ರೇಷ್ಠವಾದ ವೈಕುಂಠಕ್ಕೆ ದಿಗ್ವಿಜಯ ಮಾಡಬೇಕೆಂದು ಸಕಲದೇವತೆಗಳೂ ಪ್ರಾರ್ಥಿಸುತ್ತಿದ್ದಾರೆ. ದೇವ ದೇವ! ಕಮಲಸಂಭವರಾದ ಬ್ರಹ್ಮದೇವರು ನಿನ್ನ ಪುತ್ರರು. ನಾನು ನಿನ್ನ ಪೌತ್ರನು. ನಾವೀರ್ವರೂ ನಿನ್ನನ್ನು ಪ್ರಾರ್ಥಿಸುತ್ತಿದ್ದೇವೆ. ಜಗತ್ತಿನಲ್ಲಿ ಗುಣವಂತರು, ಮೊಮ್ಮಗನ ಮಾತು ಅಸಾಧುವಾಗಿದ್ದರೂ ಅದನ್ನು ಪ್ರೀತಿಯಿಂದ ನೆರವೇರಿಸುತ್ತಾರೆ. ಆದುದರಿಂದ ನಾನು ನಿನ್ನನ್ನು ಪರಂಧಾಮಕ್ಕೆ ಬಿಜಯಮಾಡಬೇಕೆಂದು ಪ್ರಣಾಮಪೂರ್ವಕವಾಗಿ ಬಿನ್ನವಿಸುತ್ತಿದ್ದೇನೆ. ಮಹಾಪ್ರಭು! ನೀನು ದೇವತೆಗಳ ಪ್ರಾರ್ಥನೆಯಂತೆ ಧರೆಯೊಳಗವತರಿಸಿ ಮಾಡಬೇಕಾದ ಸಮಸ್ತಕಾರ್ಯಗಳನ್ನೂ ನೆರವೇರಿಸಿದ್ದೀಯೆ. ಈಗ ಮತ್ತೆ ನೀನು ಸಕಲದೇವತೆಗಳ ಪ್ರಾರ್ಥನೆಯಂತೆ ಅವರೆಲ್ಲರಿಗೂ ಸಂತೋಷವಾಗುವುದಕ್ಕಾಗಿ ಜಾಗ್ರತೆಯಾಗಿ ವೈಕುಂಠ ಲೋಕಕ್ಕೆ ಪ್ರಯಾಣ ಬೆಳಸಬೇಕೆಂದು ಪ್ರಾರ್ಥಿಸುವೆನು.

ಬ್ರಹ್ಮಾದಿದೇವತೆಗಳ ಪ್ರಾರ್ಥನೆಯನ್ನರುಹಿದ ರುದ್ರದೇವರ ಬಿನ್ನಹವನ್ನಾಲಿಸಿದ ಸೀತಾಕಾಂತನಾದ ಶ್ರೀರಾಮಚಂದ್ರ ಪ್ರಭುವು ನಸುನಗುತ್ತಾ ''ರುದ್ರ ನಿನ್ನಿಚ್ಛೆಯಂತೆಯೇ ಆಗಲಿ'' ಎಂದು ಅಪ್ಪಣೆಕೊಡಿಸಿದನು. ಅದೇ ಸಮಯದಲ್ಲಿ ಒಳಗೆ ಬಂದಿದ್ದ ದೂರ್ವಾಸರು ರುದ್ರ-ರಾಮರ ಏಕಾಂತ ಸಂಭಾಷಣೆಯನ್ನಾಲಿಸಿಬಿಟ್ಟರು!

ರುದ್ರಾಂಶರಾದ ದೂರ್ವಾಸರು ಏಕಾಂತದಲ್ಲಿ ರಾಮ-ರುದ್ರರಿಗೆ ನಡೆದ ಸಂಭಾಷಣೆಯನ್ನು ಕೇಳಿ ಮುಂದೆ ಬಂದು ''ಶ್ರೀ ರಾಮಭದ್ರ! ನನಗೀಗ ಬಹಳ ಹಸಿವೆಯಾಗಿದೆ. ನೀನು ನೀಡುವ ಭೋಜನವು ಸಿದ್ಧವಾಗಿದ್ದಾಗಿರಕೂಡದು. ಅಥವಾ ಈಗ ಸಿದ್ಧಪಡಿಸಿ ನೀಡಲೂ ಬಾರದು. ಅಂತಹ ಭೋಜನವನ್ನು ನನಗೆ ನೀಡಿ ತೃಪ್ತಿಪಡಿಸಬೇಕು'' ಎಂದು ಕೋರಿದರು. ಅದನ್ನು ಕೇಳಿ ಶ್ರೀರಾಮನು ನಗೆಮೊಗದಿಂದ ತನ್ನ ಅಮೃತಮಯವಾದ ಹಸ್ತದ ನಾಲ್ಕು ಬೆರಳುಗಳಿಂದ ಭಕ್ಷ್ಯ, ಭೋಜ್ಯ, ಲೇಹ್ಯ, ಪೇಯಗಳೆಂಬ ಚತುರ್ವಿಧ ಅಮೃತಮಯ ಅಡುಗೆಯನ್ನು ಸೃಜಿಸಿ ಮುನಿಗಳು ದಣಿಯುವಂತೆ ಉಣಬಡಿಸಿದನು. ದೂರ್ವಾಸರು ಭಗವಂತನ ಹಸ್ತದಿಂದ ಭೋಜನವನ್ನುಂಡು ತೃಪ್ತರಾಗಿ ತೆರಳಿದರು.

ಯಾರಿಂದಲೂ ತೃಪ್ತಿ ಪಡಿಸಲಾಗದಂತೆ ಮಾಡುವೆನೆಂದು ಪ್ರತಿಜ್ಞೆ ಮಾಡಿದ ದೂರ್ವಾಸಮುನಿಗಳ ಮನೋಭೀಷ್ಟವನ್ನು ಪ್ರಭುವಾದ ಶ್ರೀರಾಮಚಂದ್ರನು ಪೂರೈಸಿಕೊಟ್ಟು ಭೋಜನದಿಂದ ಅವರು ದಣಿಯುವಂತೆ ಮಾಡಿ ಅವರ ಪ್ರತಿಜ್ಞೆಯು

ಸುಳ್ಳಾಗುವಂತೆ ಮಾಡಿದನು. ಬೇರೆಯವರಿಂದ ಹಾಗೆ ಮಾಡಲಾಗಲಿಲ್ಲ. ''ಸರ್ವೇ ನಿಯಮಾಃ ಸಾಪವಾದಾಃ'' ಅಂದರೆ ಎಲ್ಲ ನಿಯಮಗಳಿಗೂ ಅಪವಾದವಿರುವುದಷ್ಟೇ? ನಿಜ, ಈ ಮಾತಿಗೆ ಎರಡು ಅಪವಾದಗಳಿವೆ. ಒಂದು ಕುಂತೀದೇವಿ, ಮತ್ತೊಂದು ಶ್ರೀಕೃಷ್ಣ – ಇವರು ಹಿಂದೆ ದೂರ್ವಾಸ ಮುನಿಗಳನ್ನು ಗೆದ್ದ ದೃಷ್ಟಾಂತವಿದೆ.

ಒಮ್ಮೆ ದೂರ್ವಾಸರು ಕುಂತಿಭೋಜನ ಅರಮನೆಯಲ್ಲಿ ಚಾತುರ್ಮಾಸ್ಯ ಸಂಕಲ್ಪಕ್ಕೆ ಕುಳಿತಿದ್ದರು. ''ನನಗೆ ಅಪ್ರಿಯವಾದ ಕಾರ್ಯ ನಡೆದರೆ ನಾನು ಹೊರಟು ಹೋಗುತ್ತೇನೆ'' ಎಂದು ಕುಂತಿಭೋಜನಿಗೆ ತಿಳಿಸಿದ್ದರು. ರಾಜನು ಮಹಾ ಕೋಪಿಷ್ಠರಾದ ದೂರ್ವಾಸರ ಕೈಂಕರ್ಯಕ್ಕೆ ಕುಂತೀದೇವಿಯನ್ನು ನೇಮಕಮಾಡಿ ಮುನಿಗಳಿಗೆ ಸಂತೋಷವಾಗುವಂತೆ ಸೇವೆ ಸಲ್ಲಿಸಲು ಹೇಳಿದನು. ಅದರಂತೆ ಕುಂತೀದೇವಿಯು ಬಹು ಭಯಭಕ್ತಿಗಳಿಂದ ಮುನಿಗಳನ್ನು ಸೇವಿಸುತ್ತಾ ಶೀಘ್ರಕೋಪಿಗಳಾದ ಅವರನ್ನು ಸಂತೋಷಗೊಳಿಸಿ ಅವರ ಮೆಚ್ಚಿಕೆಗೆ ಪಾತ್ರಳಾದಳು. ಕುಂತಿಯ ಸೇವೆಯಿಂದ ಮುದಗೊಂಡು ಮುನಿಗಳು ಕುಂತೀದೇವಿಗೆ ಸೂರ್ಯ, ವಾಯು, ಇಂದ್ರ, ಅಶ್ವಿನಿ ದೇವತಾಕವಾದ ಐದು ಮಂತ್ರಗಳನ್ನು ಉಪದೇಶಿಸಿದ್ದಲ್ಲದೆ ಭಯದಿಂದಲೇ ಸೇವಿಸುತ್ತಿದ್ದ ಅವಳಲ್ಲಿ ಕನಿಕರದಿಂದ ವಾತ್ಸಲ್ಯ ತೋರಿ ''ಮಗಳೇ, ನಿನ್ನ ಸೇವೆಯನ್ನು ಕಂಡು ತುಷ್ಟನಾಗಿರುವೆ. ಇನ್ನು ನೀನು ಯಾವ ಭಯವೂ ಇಲ್ಲದೆ ನನ್ನ ಸೇವೆ ಮಾಡು. ನಿನ್ನಲ್ಲಿ ನಾನು ಕೋಪಗೊಳ್ಳುವುದಿಲ್ಲ'' ಎಂದು ವರವನ್ನು ಕೊಟ್ಟರು. ಹೀಗೆ ಕುಂತಿಯು ಮುನಿಗಳ ವರದಿಂದಲೇ ಅವರನ್ನು ಜಯಿಸಿದಳು.

ಇದರಂತೆ ರಾಮನ ಮತ್ತೊಂದು ಅವತಾರನಾದ ಶ್ರೀಕೃಷ್ಣನು ಗೋಕುಲದಲ್ಲಿದ್ದಾಗ ''ನನ್ನನ್ನು ಭೋಜನದಿಂದ ತೃಪ್ತಿಗೊಳಿಸುವವರಾರನ್ನೂ ನಾನು ಕಾಣೆ'' ಎಂದು ಪ್ರತಿಜ್ಞೆ ಮಾಡಿ ಅಲ್ಲಿಗೆ ಬಂದಾಗ ಶ್ರೀಕೃಷ್ಣನು ಅವರು ತೃಪ್ತರಾಗುವಂತೆ ಉಣಬಡಿಸಿ ''ಸಾಕಪ್ಪಾ ಕೃಷ್ಣ! ನಾನಿನ್ನು ಭೋಜನ ಮಾಡಲಾರೆ'' ಎನ್ನುವಷ್ಟು ತೃಪ್ತಿಪಡಿಸಿದನು. ಹೀಗೆ ಕೃಷ್ಣನು ಸ್ವಸಾಮರ್ಥ್ಯದಿಂದ ದೂರ್ವಾಸರನ್ನು ಗೆದ್ದನು. ಶ್ರೀರಾಮಚಂದ್ರನು ದೂರ್ವಾಸರನ್ನು ಮುದಗೊಳಿಸಿ ಕಳಿಸಿದನು. ದೂರ್ವಾಸರು ಅಲ್ಲಿಂದ ತೆರಳಿದ ಮೇಲೆ ಶ್ರೀರಾಮನು ತನ್ನ ಅವತಾರವನ್ನು ಸಮಾಪ್ತಿಗೊಳಿಸಲು ಸ್ವತಃ ನಿಶ್ಚಯಿಸಿ ಅದಕ್ಕೆ ತಕ್ಕಂತೆ ತನ್ನ ಸೇವೆಗಾಗಿ ಅವತರಿಸಿದ್ದ ಲಕ್ಷ್ಮಣಾದಿಗಳನ್ನು ಅವರವರ ಲೋಕಗಳಿಗೆ ಕಳುಹಿಸಬಯಸಿದನು. ಅಂತೆಯೇ ಸರ್ವಜ್ಞನಾದ ಆ ಸ್ವಾಮಿಯು ರುದ್ರದೇವರು ಮತ್ತು ತಾನು ಏಕಾಂತದಲ್ಲಿರುವಾಗ ಯಾರನ್ನೂ ಬಿಡಬಾರದೆಂದೂ, ಬಿಟ್ಟರೆ ಸಂಹರಿಸುವುದಾಗಿಯೂ ಹೇಳಿ ಲಕ್ಷ್ಮಣನನ್ನು ಕಾವಲಿಗೆ ನಿಲ್ಲಿಸಿದ್ದನು. ದೂರ್ವಾಸರು ಏಕಾಂತದಲ್ಲಿ ರಾಮರುದ್ರ ಮಾತನ್ನಾಲಿಸಿದ್ದನ್ನು ಗಮನಿಸಿದ ರಾಮಚಂದ್ರ ದೂರ್ವಾಸರ ಮನೋಭೀಷ್ಟ ಪೂರ್ಣಮಾಡಿ ಕಳಿಸಿದ ಮೇಲೆ ಲಕ್ಷ್ಮಣನನ್ನು ಅವನ ಲೋಕಕ್ಕೆ ಕಳಿಸಲು ದೂರ್ವಾಸಪ್ರಕರಣವನ್ನೇ ಕಾರಣವಾಗಿಟ್ಟುಕೊಂಡು ''ಲಕ್ಷ್ಮಣಾ, ಇಲ್ಲಿ ಬಾ. ನನ್ನ ಆಜ್ಞೆಯನ್ನು ಮೀರಿ ನೀನು ದೂರ್ವಾಸರನ್ನು ಒಳಗೆ ಬಿಟ್ಟಿದ್ದೀಯೆ. ನೀನೀಗಲೇ ನಿನ್ನ ಲೋಕಕ್ಕೆ ಹೊರಟು ಹೋಗು'' ಎಂದು ಆಜ್ಞಾಪಿಸಿದನು. ಅತ್ಯಂತ ಪ್ರಿಯ ಸಹೋದರನಾದ ಲಕ್ಷ್ಮಣನನ್ನು ತ್ಯಜಿಸದೇ ಲಕ್ಷ್ಮಣನನ್ನು ಸಂಹರಿಸುವನೇ ಸ್ವಾಮಿ? ಒಂದು ನಿಮಿತ್ತ ಬೇಕಾಗಿತ್ತು ಲಕ್ಷ್ಮಣನನ್ನು ಕಳುಹಿಸಲು. ಲಕ್ಷ್ಮಣನನ್ನು ತ್ಯಜಿಸುವುದೇ ಅವನ ಸಂಹಾರ ಮಾಡಿದಂತೆ. ಅಂತೆಯೇ ಜಗನ್ನಾಟಕಸೂತ್ರಧಾರಿಯಾದ ಪ್ರಭುವು ತನ್ನ ಸಂಕಲ್ಪವನ್ನು ಪೂರ್ಣಗೊಳಿಸಲು ಲಕ್ಷ್ಮಣನಿಗೆ ಆಜ್ಞಾಪಿಸಿದನೇ ಹೊರತು ಪ್ರಿಯವಾದ ಲಕ್ಷ್ಮಣನ ಮೇಲೆ ಅವನಿಗೆ ಇನಿತೂ ಕೋಪವಿರಲಿಲ್ಲ. ''ನ ಲಕ್ಷ್ಮಣಂ ಚಾಪಿ ಜಹಾತಿ ಕರ್ಹಿಚಿತ್'' ಎಂಬ ವಾಕ್ಯ ಅದನ್ನು ಸ್ಪಷ್ಟಗೊಳಿಸುವುದು.

ಲಕ್ಷ್ಮಣನು ಅಣ್ಣನ ಆಜ್ಞೆಯನ್ನು ಶಿರಸಾಧರಿಸಿ ಅರಮನೆಯಿಂದ ಹೊರಟು ಜಗತ್ತಿನ ಅಂಧಕಾರವನ್ನು ಪರಿಹರಿಸುವ ಶ್ರೀರಾಮನನ್ನು ಧ್ಯಾನಿಸಿ ಸಹಸ್ರ ಮುಖಾರವಿಂದಗಳಿಂದ ರಾಜಿಸುವ ಆದಿಶೇಷನಾಗಿ ನಾಗಲೋಕಕ್ಕೂ ಪರಮಾತ್ಮನ

ಮಂಚವಾಗಿ ವೈಕುಂಠಕ್ಕೂ ಪ್ರಯಾಣ ಮಾಡಿದನು ಮತ್ತು ಮುಸಲ-ನೇಗಿಲುಗಳನ್ನು ಹೊತ್ತು ಭವ್ಯರೂಪದ ಬಲರಾಮನಾದನು. ತರುವಾಯ ಕ್ಷೀರಸಾಗರದಲ್ಲಿ ಪವಡಿಸುವ ಶ್ರೀಹರಿಗೆ ಶಯ್ಯೆಯಾಗಿ ವಿರಾಜಿಸಿದನು.

ಅನಂತರ ಶ್ರೀರಾಮಚಂದ್ರನು ತನ್ನವರಾದದವರೆಲ್ಲರನ್ನೂ ತನ್ನೊಟನೆ ವೈಕುಂಠಕ್ಕೆ ಕರೆದುಕೊಂಡು ಹೋಗಲು ಸಂಕಲ್ಪಿಸಿ ''ಶಾಶ್ವತಾನಂದ ಪ್ರದವಾದ ಆನಂದಧಾಮವೆನಿಸಿದ ಮೋಕ್ಷವನ್ನು ಬಯಸುವವರೆಲ್ಲರೂ ನನ್ನೊಡನೆ ಬರಬಹುದು. ಅವರೆಲ್ಲರ ಇಷ್ಟಾರ್ಥವನ್ನು ನಾನು ಸಲ್ಲಿಸಿ ಪೂರೆಯುವೆನು'' ಎಂದು ಡಂಗುರ ಸಾರಿಸಿದನು. ಆಗ ತೃಣಜೀವರಿಂದಾರಂಭಿಸಿ ಸಣ್ಣಜೀವಿಯಾದ ಇರುವೆಯವರೆಗೂ ಮೋಕ್ಷಾಪೇಕ್ಷಿಗಳು ಶ್ರೀರಾಮನೊಡನೆ ಮೋಕ್ಷಕ್ಕೆ ಹೋಗಲು ಅಪೇಕ್ಷಿಸಿ ನಾನು ಮುಂದು ತಾನು ಮುಂದೆ ಎಂದು ಹೊರಟರು. ಶ್ರೀರಾಮನ ಆಜ್ಞೆಯಿಂದ ಹುಲ್ಲು ಮೊದಲಾದ ಜಡವಸ್ತುಗಳಿಗೆ ಚಲನಶಕ್ತಿ ಪ್ರಾಪ್ತವಾಯಿತು. ದೀರ್ಘಸಂಸಾರಿಗಳು ಮಾತ್ರ ಮೋಕ್ಷವನ್ನು ಬಯಸಲಿಲ್ಲ. ಅಂಥವರನ್ನುಳಿದು ಮಿಕ್ಕವರೆಲ್ಲರೂ ಹಿಂಬಾಲಿಸಿದರು.

ಶ್ರೀರಾಮಚಂದ್ರನು ತನ್ನ ಜ್ಯೇಷ್ಠ ಪುತ್ರನಾದ ಕುಶನಿಗೆ ಸಾಮ್ರಾಜ್ಯ ಪಟ್ಟಾಭಿಷೇಕಮಾಡಿ ಕಿರಿಯ ಮಗನಾದ ಲವನಿಗೆ ಯೌವ್ವರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದನು. ಇತ್ತ ಕಿಷ್ಕಿಂಧೆಯಲ್ಲಿ ಸೂರ್ಯಸುತನಾದ ಸುಗ್ರೀವನು ತನ್ನ ಅಣ್ಣ ವಾಲಿಯ ಪುತ್ರನಾದ ಅಂಗದನನ್ನು ವಾನರ ರಾಜ್ಯದಲ್ಲಿ ಪಟ್ಟಗಟ್ಟಿ ಶ್ರೀರಾಮನ ಸನ್ನಿಧಿಗೆ ಬಂದನು. ಶ್ರೀರಾಮನು ಪವನನಂದನನಾದ ಆಂಜನೇಯನನ್ನು ಪ್ರೇಮದಿಂದ ಆಲಂಗಿಸಿ ''ವತ್ಸ, ಹನುಮಂತ! ನಾನು ಸರ್ವದಾ ನಿನ್ನ ಕಣ್ಣೆದುರು ಕಂಗೊಳಿಸುತ್ತಿರುವೆನು. ನೀನು ಬಹುಕಾಲ ಶ್ರೇಷ್ಠವಾದ ತಪಸ್ಸನ್ನೆಸಗಿರುವೆ. ಇದರಂತೆಯೇ ಮುಂದೂ ಬಹುಕಾಲ ಉತ್ತಮ ತಪಸ್ಸನ್ನಾಚರಿಸುತ್ತಿರು. ಅದು ನನಗೆ ಅತಿಪ್ರಿಯವಾದ ಕಾರ್ಯ. ರಾವಣ ಕುಂಭಕರ್ಣರನ್ನು ಸಂಹರಿಸಲು ಅತ್ಯಂತ ಸಮರ್ಥನಾಗಿದ್ದರೂ ನೀನು ಆ ಕೀರ್ತಿ ನನಗೇ ಬರಬೇಕೆಂದು ನನ್ನ ಮೇಲಿನ ಭಕ್ತಿಯಿಂದ ಅವರನ್ನು ಸಂಹರಿಸದೇ ಬಿಟ್ಟೆ. ನಾನು ಸುಪ್ರೀತನಾಗಿದ್ದೇನೆ. ಅದಕ್ಕಾಗಿ ನೀನು ಒಂದು ಕಲ್ಪ ಕಾಲ ಸುಖದಿಂದ ಜೀವಿಸು. ಕ್ಷೀರಸಾಗರದಲ್ಲಿರುವ ನನ್ನ ಮಂದಿರದಲ್ಲಿ ಅಥವಾ ನಾನಿರುವ ಎಲ್ಲಾ ಮಂದಿರದಲ್ಲಿಯೂ ನೀನು ನೆನೆದ ಮಾತ್ರದಿಂದ ನಿನ್ನ ಈ ಶರೀರದಿಂದಲೇ ಬಂದು ಹೋಗುವ ಅಧಿಕಾರವನ್ನು ನಿನಗೆ ಕರುಣಿಸಿರುವೆನು. ನೀನು ಅಪೇಕ್ಷಿಸಿದಷ್ಟು ಭೋಗಗಳನ್ನು ಪಡೆ, ನಿನ್ನ ಧವಲಕೀರ್ತಿಯನ್ನು ದೇವಗಾಯಕರು ಸ್ವರ್ಗಾದಿ ಲೋಕಗಳಲ್ಲಿ ಗಾನ ಮಾಡುವರು. ನೀನು ಸರ್ವದಾ ನನ್ನೆದುರು ಕ್ರೀಡಿಸುತ್ತಿರು. ನಿನ್ನ ಯಾವ ಮನೋರಥವೂ ಹುಸಿಯಾಗದು, ಸುಳ್ಳಾಗದು. ನನ್ನ ಪ್ರೀತಿಗೆ ನೀನು ಸದಾ ಪಾತ್ರನಾಗುವೆ'' ಎಂದು ಆಜ್ಞಾಪಿಸಿದನು.

ಶ್ರೀರಾಮನ ಅನುಗ್ರಹ ಪೂರ್ಣವಚನವನ್ನಾಲಿಸಿ ಪವನನಂದನನು ಜಗತ್ಪ್ರಭುವಾದ ಜಾನಕೀಕಾಂತನಿಗೆ ನಮಸ್ಕರಿಸಿ ''ಪ್ರಭು, ನಿನ್ನ ಪಾದ ಕಮಲಗಳಲ್ಲಿ ನನಗೆ ಉತ್ಕೃಷ್ಟವಾದ ಭಕ್ತಿಯನ್ನುಂಟುಮಾಡು. ಅದು ಸರ್ವದಾ ಅಭಿವರ್ಧಿಸುತ್ತಿರಲಿ, ಭಕ್ತಿಯುಕ್ತನಾದ ನಾನು ಆನಂದದಿಂದ ನಲಿಯುವಂತೆ ಕರುಣಿಸು. ಸ್ವಾಮಿ, ಸಕಲ ಜೀವರಾಶಿಗೆ ನಿನ್ನಲ್ಲಿರುವ ಭಕ್ತಿಗಿಂತ ನನ್ನ ಭಕ್ತಿಯೇ ಯಾವಾಗಲೂ ವರ್ಧಿಸುತ್ತಿರಲಿ. ಭಗವನ್, ಸಕಲ ಸದ್ಗುಣಗಳಿಗೆ ಆಶ್ರಯವಾದ ಮಂಗಳಕರವಾದ ನಿನ್ನ ಚರಣಕಮಲಗಳಿಗೆ ಶಿರಬಾಗಿ ವಂದಿಸುವೆನು. ನಿನಗೆ ನಮೋ ನಮಃ''.

ಹನುಮಂತನ ಬಿನ್ನಹವನ್ನು ಲಾಲಿಸಿ ಪುಂಡರೀಕಾಕ್ಷನಾದ ಶ್ರೀರಘುರಾಮನು ''ತಥಾಸ್ತು'' ಎಂದು ವರವಿತ್ತು ಸಕಲ ಜೀವರನ್ನು ಜೊತೆಗೆ ಕರೆದುಕೊಂಡು ವೈಕುಂಠಧಾಮಕ್ಕೆ ಪ್ರಯಾಣ ಬೆಳೆಸಿದನು. ಶ್ರೀರಾಮನ ಅನುಗ್ರಹದಿಂದ ಮೃಗಪಕ್ಷಿ-ಇರುವೆ-ಗಾರ್ದಭ, ಮತ್ತು ತೃಣಾದಿಗಳೂ ಪರಮಪದವನ್ನು ಪಡೆದವೆಂದ ಮೇಲೆ ನರ-ವಾನರು ಪಡೆದರೆಂಬುದರಲ್ಲಿ ಆಚ್ಚರಿಯೇನಿದೆ? ಭಗವತ್ತತ್ತ್ವಗಳನ್ನರಿತು ಅವರು ಸದಾ ಶ್ರೀರಾಮನನ್ನು ನೆನೆಯುತ್ತಿದ್ದುದರಿಂದ ಅವರಿಗೆ ಶ್ರೀರಾಮಾನುಗ್ರಹವಾಗಿ ಅವರು ಶ್ರೀಹರಿಪದಕ್ಕೆ ತೆರಳಿದರು. ಅನಂತಕಲ್ಯಾಣ ಗುಣಪೂರ್ಣನೂ ದೋಷದೂರನೂ, ಸರ್ವ

ತಂತ್ರನೂ, ಅಚಿಂತ್ಯಾದ್ಭುತ ಶಕ್ತಿ ಸಂಪನ್ನನೂ, ಸರ್ವೋತ್ತಮನೂ ರಮಾ-ಬ್ರಹ್ಮ-ರುದ್ರೇಂದ್ರಾದಿ ವಂದ್ಯ ಪಾದಾರವಿಂದನೂ ಜಗದಭಿರಾಮನೂ ಆದ ಶ್ರೀರಾಮಚಂದ್ರನು ಸಕಲ ಜೀವಕೋಟಿಯನ್ನು ಉತ್ತರಾಭಿಮುಖವಾಗಿ ಶಾಶ್ವತವಾದ ತನ್ನ ಆನಂದಮಂದಿರಕ್ಕೆ ಕರೆದುಕೊಂಡು ಹೊರಟನು.

ಏಕಕಾಲದಲ್ಲಿ ಉದಯಿಸಿದ ಅನಂತ ಕೆಂಗಿರಣಗಳ ಪ್ರಖರ ಹೊಂಗಿರಣ ಕಾಂತಿಪುಂಜನಾದ ಶ್ರೀರಾಮಚಂದ್ರನು ಸರ್ವೇಶ್ವರನು. ಅನಂತಕಲ್ಯಾಣಗುಣಪೂರ್ಣನು. ಅವನ ಸದ್ಗುಣಗಳು ಎಲ್ಲೆಯಿಲ್ಲದ ಸಾಗರದಂತೆ. ಅವು ಅಪಾರ. ಇಂಥ ಶ್ರೀರಾಮನ ಶಿರಸ್ಸಿನಲ್ಲಿ ನವರತ್ನಖಚಿತ ಕಿರೀಟವು ಸಹಸ್ರಕಿರಣನ ಸರಣಿಯನ್ನು ತನ್ನತ್ತ ಸೆಳೆಯುತ್ತ ರಾಜಿಸುವಂತೆ ಬೆಸೆಗುಗೊಂಡಿದೆ. ಭುಜಗಳ ಮೇಲೆ ಹಾರಾಡುತ್ತಿರುವ ಅವನ ನೀಲಕೇಶರಾಶಿಯು ಎಲ್ಲರ ಮನಸೆಳೆಯುತ್ತಿದೆ. ಅನಂತ ಚಂದ್ರಮರ ಶೀಲತ ಕಿರಣಗಳಿಂದೊಪ್ಪುವ ಮಂದಹಾಸದಿಂದ ಕಂಗೊಳಿಸುವ ಶ್ರೀರಾಮನ ಮುಖಮಂಡಲ ಸರ್ವರ ಹೃದಯಗಳನ್ನೂ ಸೂರೆಗೊಳ್ಳುತ್ತಿದೆ. ನಸುಗೆಂಪಿನ ವಿಕಸಿತ ಕಮಲಗಳಂತೆ ಅವನ ನೇತ್ರಗಳು ಬೆಳಗುತ್ತಿದೆ. ಸೌದಾಮಿನಿಯ ದಿವ್ಯದೀಪ್ತಿಯನ್ನು ಹೊರಚೆಲ್ಲುತ್ತಾ ಶ್ರೀರಾಮನ ಕಿವಿಯಲ್ಲಿ ಕರ್ಣಕುಂಡಲಗಳು ವಿರಾಜಿಸಿವೆ. ಮಂದಹಾಸದಿಂದ ರಂಜಿಸುವ ಹವಳಕಾಂತಿಯ ಚೆಂದುಟಿ, ಮತ್ತು ಸಕಲ ವೇದಾರ್ಥ ರಹಸ್ಯಗಳನ್ನೂ ಹರಿಸುವ ನಾಲಿಗೆ ಶೋಭಾಯ-ಮಾನವಾಗಿದೆ. ಸೂರ್ಯಸಂದೋಹದ ಕಾಂತಿಗೂ ಮಿಕ್ಕಿದ ಪ್ರಭೆಯ ಕೌಸ್ತುಭಮಾಲೆಯ ತೇಜಸ್ಸಿನಿಂದ ರಾಮಚಂದ್ರನ ಕೊರಳು ಬೆಳಗುತ್ತಿದೆ. ಸಕಲ ಪ್ರಪಂಚದ ಭಾರವನ್ನು ಧರಿಸಿರುವ ಅವನ ಹೆಗಲು ಉಬ್ಬಿ ಉನ್ನತವಾಗಿ ಸುಂದರವಾಗಿ ಕಂಗೊಳಿಸುತ್ತಿದೆ. ದುಂಡಗೆ ಪುಷ್ಟವಾದ ನೀಳಬಾಹುಗಳಿಂದೊಪ್ಪುವ ಶ್ರೀರಘುಪತಿಯು ಸಕಲಶಿಲಾಲೋಹಮಯ ಜಗವನ್ನು ಮಡಿಸಿ ಸ್ವತಃ ತಯಾರಿಸಿದ ತೀಕ್ಷ್ಣ ಬಾಣಗಳನ್ನು ಬಲಗೈಯಲ್ಲಿ ಧರಿಸಿದ್ದಾನೆ. ಮಧು-ಕೈಟಭರನ್ನು ಸಂಹರಿಸಿದ ಅನಾದಿಕಾಲದಿಂದ ಶ್ರೀವಿಷ್ಣುವು ಕರದಲ್ಲಿ ಧರಿಸಿದ್ದ ಆ ಬಾಣಗಳೇ ಈ ಅವತಾರದಲ್ಲಿ ಮೂಲ ರೂಪದಿಂದ ಶ್ರೀರಾಮನಲ್ಲಿಗೆ ಬಂದಿದ್ದು ಆ ಬಾಣಗಳಿಂದಲೇ ಭಗವಂತನು ಶತ್ರುಗಳನ್ನು ಸಂಹರಿಸಿದನು. ತನ್ನ ಅವತಾರವನ್ನು ಮುಗಿಸಲಿಚ್ಛಿಸಿದ ರಾಮನು ಅದನ್ನು ಲಕ್ಷ್ಮಣನ ಅನುಜನಾದ ಶತ್ರುಘ್ನನಿಗಿತ್ತನು. ಶತ್ರುಘ್ನನು ಮಧನಾಮಕ ದೈತ್ಯನ ಪುತ್ರನಾದ ಲವಣಾಸುರನನ್ನು ಆ ಬಾಣದಿಂದ ಸಂಹರಿಸಿ, ಮಧುರಾನಗರಿಯನ್ನು ನಿರ್ಮಿಸಿ ಶ್ರೀರಾಮನಿಗೆ ಮತ್ತೆ ಆ ಬಾಣಗಳನ್ನು ಅರ್ಪಿಸಲು ಅನಾದಿಕಾಲದಿಂದ ಬಂದಿದ್ದ ಆ ಬಾಣವನ್ನು ಬಲಕೈಯಲ್ಲಿ ಹಿಡಿದು ಶಾರ್ಙ್ಗವೆಂಬ ಧನುಸ್ಸನ್ನು ಎಡಗೈಯಲ್ಲಿ ಧರಿಸಿ ಹೊರಟನು. ಶ್ರೀರಾಮನ ನೀಳವಾದ ಬಾಹುಗಳಲ್ಲಿ ಭುಜಕೀರ್ತಿಗಳು, ಕರಗಳಲ್ಲಿ ಕಂಕಣಗಳು, ಬೆರಳುಗಳಲ್ಲಿ ಮನಮೋಹಕ ರತ್ನದುಂಗುರಗಳು ವಿರಾಜಿಸಿವೆ. ಅವನ ಅಂಗೈ ಸುರಕ್ತವಾದ ಕೆಂದಾವರೆಯಂತೆ ಬೆಳಗುತ್ತಿದೆ. ಸಿರಿದೇವಿಯನ್ನು ಧರಿಸಿರುವ ಅವನ ವಿಸ್ತಾರವಾದ ಕೊರಳಿನಲ್ಲಿ ಅನರ್ಘ್ಯರತ್ನಮಾಲೆ ಮತ್ತು ವನಮಾಲೆಗಳು ರಾಜಿಸುತ್ತಿವೆ. ಶ್ರೀವತ್ಸಾಂಕಿತನಾದ ರಾಮಚಂದ್ರನ ತೆಳವಾದ ಸುಂದರ ಉದರದಲ್ಲಿ ತ್ರಿವಳಿಗಳೂ, ನಡುವಿನಲ್ಲಿ ಝಗಝಗಿಸುವ ಸುವರ್ಣವರ್ಣದ ಪಟ್ಟೆ ಪೀತಾಂಬರ ಶೋಭಿಸುತ್ತಿವೆ. ಅವನ ತೊಡೆಗಳು ಮದಕರಿಯ ಸೊಂಡಲಿನಂತಿವೆ. ದುಂಡಗೆ ಉಬ್ಬಿದ ಮೊಣಕಾಲುಗಳು, ಹೇಳಿ ಮಾಡಿಸಿದಂತಿರುವ ಜಂಘೆಗಳು, ನಸುಗೆಂಪಾದ ಪಾದಪಲ್ಲವಗಳಿಂದ ಶ್ರೀರಾಮಚಂದ್ರ ಪ್ರಭುವು ಶೋಭಿಸುತ್ತಿದ್ದಾನೆ. ಅಗಣ್ಯವಾದ ಜ್ಞಾನಾನಂದ ಸಾಗರನೂ, ಜಗತ್ತಿನ ಸಕಲ ಸಾತ್ವಿಕ ಶಕ್ತಿರೂಪನೂ ಆದ ಶ್ರೀರಾಮನು ಹೊಳೆಯುವ ಇಂದ್ರನೀಲಮಣಿ ಕಾಂತಿಯಿಂದ ಅತ್ಯಂತ ಮನೋಹರನಾಗಿ ಕಂಗೊಳಿಸುತ್ತಿದ್ದಾನೆ. ಹೀಗೆ ದೇವದೇವನಾದ ಶ್ರೀರಾಘವನು ಅರಳಿದ ತಾವರೆಗಳಂತಿರುವ ಮಿನುಗುವ ತನ್ನೆರಡು ಕಣ್ಣುಗಳಿಂದ ಅರ್ಥಿಜನರಿಗೆ ಜ್ಞಾನವನ್ನು, ಉತ್ತಮವಾದ ವದನಾರವಿಂದದಿಂದ ವೇದಾರ್ಥಸಾರವನ್ನು ಬೋಧಿಸುತ್ತ ತನ್ನ ಶೃಂಗಾರವಾದ ಮೈಕಾಂತಿಯಿಂದ ಒಳ ಮತ್ತು ಹೊರ ಬ್ರಹ್ಮಾಂಡವನ್ನು ಬೆಳಗಿಸುತ್ತ ಮುಖದಿಂದ

ಕಾಂತಿಕಿರಣಗಳನ್ನೆರಚುತ್ತ, ಸರ್ವೇಷ್ಟಪ್ರದವಾದ ಅಭಯವರದ ಹಸ್ತಗಳಿಂದ ಭಕ್ತಜನರ ಮನೋಭೀಷ್ಟಗಳನ್ನು ನೀಡುತ್ತಾ ದುಃಖರಹಿತವಾದ ಉತ್ತರದಿಶಾಭಿಮುಖವಾಗಿ ನಿಜಪದವಾದ ಮಂಗಳಕರ ವೈಕುಂಠನಗರಿಗೆ ಬಿಜಯ-ಮಾಡಿದನು.

ಶ್ರೀಪವನನಂದನರಾದ ಹನುಮಂತದೇವರು, ಅಮೃತವನ್ನು ಹರಿಸುವ ಶತಸಹಸ್ರ ಪೂರ್ಣಚಂದ್ರರ ಅಮಿತಕಾಂತಿ-ಪುಂಜದಿಂದೆಸೆಯುವ ಶ್ರೇಷ್ಠವಾದ ಶ್ವೇತಛತ್ರವನ್ನು ಭಗವಾನ್ ಶ್ರೀರಾಮಚಂದ್ರದೇವರಿಗೆ ಹಿಡಿದರು. ಆಗ ಲೋಕ ಜನನಿಯಾದ ಸೀತಾದೇವಿಯು ಸಕಲ ಜನರಿಗೂ ದೃಗ್ಗೋಚರಳಾಗಿ ಶ್ರೀಭೂದೇವಿಯರೆಂಬ ಎರಡು ರೂಪಗಳನ್ನು ಧರಿಸಿ ಮಹಾಪ್ರಭುವಿನ ಎಡಬಲ ಪಾರ್ಶ್ವಗಳಲ್ಲಿ ನಿಂತು ಪೂರ್ಣಚಂದ್ರನ ಚಂದ್ರಿಕೆಯಂತೆ ತಳತಳಿಸುವ ಎರಡು ಚಾಮರಗಳನ್ನು ದೇವದೇವನಿಗೆ ಹಾಕುತ್ತಾ ಪ್ರಖರಕಿರಣಸರಣಿಯಂತೆ ನಿಖಿಲ ಕಲ್ಯಾಣಗುಣತನುವಿರಾಜಿತಳಾಗಿ ಸಕಲಾಭರಣಗಳಿಂ-ದೊಡಗೂಡಿ ಶೋಭಿಸಿದಳು. ಭರತನು ಚಕ್ರರೂಪ ಧರಿಸಿ ತನ್ನ ಮೂಲರೂಪದಿಂದ ಭಗವಂತನ ಬಲಕರದಲ್ಲಿ ಸೇರಿದನು. ಅದರಂತೆ ಶತ್ರುಘ್ನನು ಮೂಲರೂಪವಾದ ಶಂಖರೂಪ ಧರಿಸಿ ಪರಮಾತ್ಮನ ಎಡಕರವನ್ನು ಸೇರಿದನು.

ಭಗವಂತನ ಮುಂಭಾಗದಲ್ಲಿ ಕಮಲಸಂಭವರಾದ ಬ್ರಹ್ಮದೇವರೇ ಮೊದಲಾದ ಅಮರರೂ ಓಂಕಾರಸಹಿತವಾಗಿ ಸಕಲ ವೇದಾಭಿಮಾನಿ ದೇವತೆಗಳೂ ನಡೆಯುತ್ತಿದ್ದರು. ನಿಖಿಲ ಜಗತ್ತೂ ಭಗವಂತನನ್ನು ಹಿಂಬಾಲಿಸಿತು. ಶ್ರೀರಾಮನ ಬಲಭಾಗದಲ್ಲಿ ಸುಗ್ರೀವಾದಿ ಕಪಿವೀರರೂ, ಎಡಭಾಗದಲ್ಲಿ ಸಕಲ ಮಾನವರೂ ಭಕ್ತಿಯಿಂದ ವೇದವಾಕ್ಯಗಳಿಂದ ಶ್ರೀಹರಿಯ ರಾಮಚರಿತೆಯನ್ನು ಗಾನ ಮಾಡುತ್ತಾ ನಡೆದರು. ಗಂಧರ್ವರು ಸುಮಧುರವಾಗಿ ಗಾನ ಮಾಡುತ್ತಿರಲು, ವಿಬುಧ-ಮುನಿಜನರು, ಬ್ರಹ್ಮರುದ್ರೇಂದ್ರಾದಿ ದೇವತೆಗಳು ಶ್ರೀಹರಿಯ ಶಿರಸ್ಸಿನ ಮೇಲೆ ಪುಷ್ಪವೃಷ್ಟಿ ಮಾಡುತ್ತಾ ವೇದವಚನಗಳಿಂದ ಸ್ತೋತ್ರ ಮಾಡುತ್ತಿರಲು, ಸಕಲ ಪ್ರಾಣಿಗಳು ಭಕ್ತಿ ಕೌತುಕಗಳಿಂದ ಜಗದಭಿರಾಮನಾದ ಶ್ರೀರಾಮಚಂದ್ರ ಪ್ರಭುವನ್ನು ಬಿಟ್ಟಕಣ್ಣು ನೆಟ್ಟನೋಟಗಳಿಂದ ನೋಡುತ್ತಿದ್ದರು. ಇಂತು ವೈಭವ-ಸಡಗರದಿಂದ ಸರ್ವೋತ್ತಮನಾದ ಶ್ರೀಪರಮಾತ್ಮನು ನಿಜಧಾಮಕ್ಕೆ ಬಿಜಯಂಗೈದನು. ಬ್ರಹ್ಮರುದ್ರಾದಿ ಸುರನಿಕರರು ಶ್ರೀಹರಿಯ ವರಗುಣಗಳನ್ನು ಪರಿಪರಿಯಿಂದ ಗಾನ ಮಾಡುತ್ತಿರಲು ದೇವದೇವನು ಗಗನಾಂಗಣದಲ್ಲಿ ಪದಾರ್ಪಣ ಮಾಡಿ ಕಂಗೊಳಿಸಿದನು. ಆಗ ಮೃಗ-ಪಕ್ಷಿ-ವಾನರರು ದಿವ್ಯದೇಹಗಳನ್ನು ಪಡೆದು ರಾಜಿಸಿದರು. ಅನಂತರ ಚತುರಾನನರು ಶ್ರೀಹರಿ ಪರಮಾತ್ಮನಲ್ಲಿ ಇಂತು ವಿಜ್ಞಾಪಿಸಿದರು :-

ಬ್ರಹ್ಮದೇವರು :- ಮಹಾಪ್ರಭು! ನಿನ್ನ ಆಣತಿಯಂತೆ ದಶರಥ ಮಹಾರಾಜನಿಗೆ ಉತ್ತಮ ಲೋಕದಲ್ಲಿ ಸ್ಥಾನವನ್ನು ಕೊಡಲಾಗಿದೆ. ನೀನಿಲ್ಲಿಗೆ ದಯಮಾಡಿಸುವ ಲಕ್ಷವರ್ಷಗಳ ಹಿಂದೆಯೇ ನಿನ್ನ ತಾಯಿಯರಿಗೆ ಪತಿಲೋಕದಲ್ಲಿ ಶ್ರೇಷ್ಠ ಸ್ಥಾನವನ್ನು ನೀಡಲಾಗಿದೆ. ದೇವ, ನಿನ್ನ ಪಟ್ಟಾಭಿಷೇಕಕ್ಕೆ ವಿಘ್ನವೆಸಗಿದ ಕಾರಣದಿಂದಾಗಿ ಸ್ವಲ್ಪ ಪಾಪಭಾಗಿನಿಯಾಗಿ, ಆದ್ದರಿಂದಲೇ ಸದ್ಗತಿಗೆ ಅನರ್ಹಳಾಗಿದ್ದ ಕೈಕೇಯಿದೇವಿಗೂ ಸಹ ಸದ್ಗತಿಯನ್ನು ನೀಡಲಾಜ್ಞಾಪಿಸಲಾಗಿದೆ. ಸ್ವಾಮಿ, ಭರತನಂತಹ ಪುಣ್ಯಪುರುಷನನ್ನು ಪುತ್ರನನ್ನಾಗಿ ಪಡೆದ ಕೈಕೇಯಿಯು ಪಾಪಲೋಕಕ್ಕೆ ತೆರಳುವುದು ಉಚಿತವಲ್ಲ. ನಿಕೃತಿ ಎಂಬ ರಾಕ್ಷಸಿಯು ಕೈಕೇಯಿಯ ಮನದಲ್ಲಿ ಸೇರಿ ಬುದ್ಧಿಗೆಡಿಸಿದಳು. ಮಂಥರೆಯು ದುರ್ಬೋಧನೆಯಿಂದ ಮನಸ್ಸನ್ನು ಕದಡಿದಳು. ಹೀಗೆ ಈ ಈರ್ವರು ರಾಕ್ಷಸಿಯರ ಪ್ರೇರಣೆಗೊಳಗಾಗಿ ಅವರ ಪ್ರಭಾವದಿಂದ ಅವಳು ದುಷ್ಕರ್ಮ ಮಾಡಿದಳೇ ವಿನಾ ಸ್ವಭಾವದಿಂದಲ್ಲ. ಆದ್ದರಿಂದಲೇ ನಿಕೃತಿ ಮಂಥರೆಯನ್ನು ಶಾಶ್ವತವಾದ ತಮಸ್ಸಿಗೆ ತಳ್ಳಿದ್ದೇನೆ. ಪುಣ್ಯಶಾಲಿಯಾದ ಭರತನಿಗೆ ಮಾತೆಯಾದುದರಿಂದ ಕೈಕೇಯಿಗೆ ಅಶಾಶ್ವತವಾದ ಸ್ವರ್ಗದಲ್ಲಿ ಸ್ಥಾನಕೊಡಲಾಗಿದೆ. ಮುಂದೆ ಅವಳು ನಿನ್ನಲ್ಲಿ ದೃಢಭಕುತಿಯನ್ನು ಮಾಡಿ ಆ ಪುಣ್ಯಪ್ರಭಾವದಿಂದ ಈಗಿನ ದೋಷಗಳಿಂದ ಮುಕ್ತಳಾಗಿ ಶಾಶ್ವತ ಪುಣ್ಯಲೋಕದಲ್ಲಿ ಸ್ಥಾನಗಳಿಸುವಳು. ಇದು ನಿನ್ನಾಜ್ಞೆಯಂತೆ ನೆರವೇರುವುದು.

ದೇವ, ಪರಮಪವಿತ್ರಳಾದ ಸೀತಾಮಾತೆಯ ಬಗ್ಗೆ ಅಪವಾದವನ್ನು ಹೊರಿಸಿ, ನಿನ್ನನ್ನು ನಿಂದಿಸಿದ ಅಸುರರನ್ನು ತಮೋಲೋಕಕ್ಕೆ ಅಟ್ಟಲಾಗಿದೆ. ನಿನ್ನಿಂದ ಹತರಾದ ಅಸುರರು ತಮೋಲೋಕಕ್ಕೆ ಹೋಗಿದ್ದಾರೆ. ಉಳಿದ ಅಸುರರು ಮುಂದೆ ದ್ವಾಪರದಲ್ಲಿ ನೀನು ಕೃಷ್ಣಾವತಾರ ತಾಳಿದಾಗ ನಿನ್ನಿಂದ ಸಂಹೃತರಾಗಿ ತಮಸ್ಸಿಗೆ ಹೋಗುವರು. ಇನ್ನುಳಿದವರು 28ನೆಯ ಕಲಿಯುಗದಲ್ಲಿ ವೇದಶಾಸ್ತ್ರ ನಿಂದಕರಾಗಿ, ನಿನ್ನನ್ನು ನಿಂದಿಸಿ, ಕಲಿಯುಗದ 4300 ವರ್ಷಗಳು ಉರುಳಿದ ತರುವಾಯ ಮೃತರಾಗಿ ತಮಸ್ಸಿಗೆ ಭಾಗಿಗಳಾಗುವರು. ಸ್ವಾಮಿ, ನಿನ್ನ ಪಾದಾರವಿಂದ ಮಕರಂದ ಸುಧಾಸ್ವಾಧನಾಭಿಲಾಷಿಗಳಾದ ನಿನ್ನ ಭಕ್ತರು ಈಗ ನಿನ್ನೊಂದಿಗೆ ಬಂದಿದ್ದಾರೆ. ಅವರಿಗೆ ಉತ್ತಮ ಸ್ಥಾನವನ್ನು ಅನುಗ್ರಹಿಸಬೇಕು. ಪ್ರಭೋ, ನಾನು, ರುದ್ರ, ಇಂದ್ರಾದಿ ದೇವತೆಗಳು ನಿನ್ನ ಪದತಲದಲ್ಲಿ ಆಜ್ಞಾಧಾರಕರಾಗಿ ನಿಂತಿದ್ದೇವೆ. ನಮ್ಮಿಂದ ಏನು ಸೇವೆಯನ್ನು ಸ್ವೀಕರಿಸ-ಬಯಸಿದ್ದೀಯೆ? ಜಗದೀಶ, ಆಜ್ಞಾಪಿಸು ಅದರಂತೆ ನಾವು ನಡೆಯುತ್ತೇವೆ''.

ಮಹಾಪ್ರಭುವಾದ ಶ್ರೀರಾಮಚಂದ್ರನು ಪದ್ಮಯೋನಿಯ ವಚನವನ್ನಾಲಿಸಿ ಮಂದಹಾಸವನ್ನು ಬೀರುತ್ತ ಇಂತು ಆಜ್ಞಾಪಿಸಿದನು :-''ಕಮಲಸಂಭವ! ನೀನು ಜಗದ್ಗುರುವಾಗಿರಬೇಕು. ಗುರೂಪದೇಶಗಳಿಗೆ ಅನುಸರಿಸಿ ವರ್ತಿಸಿದವರಿಗೆ ಸದ್ಗತಿಯಾಗಬೇಕು. ನೀನೊಬ್ಬನು ಮಾತ್ರ ನನ್ನ ಮನದಲ್ಲಿರುವುದನ್ನು ಅರಿತಿರುವೆ. ನನ್ನ ಆಣತಿಯಂತೆ ನೀನಿವರಿಗೆ ಉತ್ತಮ ಲೋಕಗಳನ್ನು ಕರುಣಿಸು'' - ಭಗವಂತನ ಅಪ್ಪಣೆಯಂತೆ ಬ್ರಹ್ಮದೇವರು ಪಿಪೀಲಿಕಾದಿ ತೃಣಾಂತರಾದ ಸಕಲರಿಗೂ ಸದ್ಗತಿಯನ್ನು ದಯಪಾಲಿಸಿದರು. ಸಾಂತಾನಿಕ ಲೋಕಗಳಲ್ಲಿರುವ ಭಗವದ್ಭಕ್ತರು ಸಕಲ ದುಃಖದೂರರಾಗಿ, ಜರಾ-ಮರಣರಹಿತರಾಗಿ ಸರ್ವದಾ ಮುದಿಸುವರು. ಮಾನವರಾಗಿ, ವಾನರರಾಗಿ ಅವತರಿಸಿದ್ದ ಭರತ-ಸುಗ್ರೀವಾದಿ ದೇವತೆಗಳು ತಂತಮ್ಮ ಮೂಲರೂಪಗಳನ್ನು ಪಡೆದು ಶಾಶ್ವತಸುಖಕ್ಕೆ ಭಾಗಿಗಳಾಗಿ ಆನಂದಿಸಿದರು.

ವಿವಿದ-ಮೈಂದರು ಅಸುರಾವೇಶಯುಕ್ತರಾದ್ದರಿಂದ ಅವರು ಶ್ರೀರಾಮನನ್ನು ಹಿಂಬಾಲಿಸಿಲ್ಲವಾಗಿ ಅವರಿಗೆ ಮೂಲರೂಪ ಪ್ರಾಪ್ತವಾಗಲಿಲ್ಲ. ಕೃತಯುಗದಲ್ಲಿ ಈ ವಿವಿದ-ಮೈಂದರು ಅಮೃತಮಥನಕ್ಕಿಂತ ಹಿಂದಿನಿಂದಲೂ ವಾನರರಾಗಿದ್ದು ಬ್ರಹ್ಮನ ವರದಿಂದ ಅಜರಾಮರರಾಗಿದ್ದರು. ದೇವತೆಗಳು ಅಮೃತಪಾನ ಮಾಡಿದ ಮೇಲೆ ಅವರ ಮೇಲೆ ದೈತ್ಯರು ಯುದ್ಧಕ್ಕೆ ಬಂದರು. ದೇವತೆಗಳು ಅಮೃತ ಕಲಶವನ್ನು ವಿವಿದ ಮೈಂದರಿಗೆ ಕೊಟ್ಟು ರಕ್ಷಿಸುವಂತೆ ಹೇಳಿ ಅಸುರರೊಡನೆ ಯುದ್ಧ ಮಾಡಹತ್ತಿದ್ದರು. ಆಗ ವಿವಿದ-ಮೈಂದರು ವಂಚನೆಯಿಂದ ಅಮೃತಪಾನ ಮಾಡಿದ್ದರಿಂದ ಅವರಿಗೆ ಅಸುರಭಾವ ಪ್ರಾಪ್ತವಾಯಿತು. ಆ ದೋಷದಿಂದ ಅವರು ಶಾಶ್ವತವಾಗಿ ಅಸುರಭಾವವನ್ನು ಪಡೆದರು. ದೇವಾಂಶ ಸಂಜಾತರೆಂದವರನ್ನು ದೇವತೆಗಳು ಸಂಹರಿಸದೆ ಉದಾಸೀನರಾದರು. ವಾಲಿಕುಮಾರನಾದ ಅಂಗದನು ಕಾಲಕ್ರಮದಲ್ಲಿ ಪಾರ್ಥಿವ ದೇಹವನ್ನು ತ್ಯಜಿಸಿ ತನ್ನ ಮೂಲರೂಪ ಪಡೆದು ಸುಖಿಸಿದನು. ಧರ್ಮಾತ್ಮನಾದ ವಿಭೀಷಣನು ಶ್ರೀರಾಮನಾಣತಿಯಂತೆ ಕುಶನ ಜತೆಗಾರನಾಗಿದ್ದು ರಾಜ್ಯಭಾರಮಾಡಿದ್ದಲ್ಲದೆ ಕುಬೇರನ ಸೇನಾನಿಯಾಗಿ ಒಂದು ಕಲ್ಪಕಾಲ ರಾಕ್ಷಸರನ್ನು ಸಂರಕ್ಷಿಸಿದನು. ಜಾಂಬುವಂತನು ಶ್ರೀರಾಮಾಜ್ಞೆಯಂತೆ ಜಾಂಬವತಿಯ ಜನನಕ್ಕಾಗಿ ತಪೋನಿರತನಾಗಿ ಭೂಮಿಯಲ್ಲಿ ವಾಸಿಸುತ್ತಿದ್ದನು.

ಶ್ರೀರಾಮಚಂದ್ರನು ಗಗನಾರೋಹಣದ ಅನಂತರ ಒಂದು ರೂಪದಿಂದ ಸ್ವರ್ಗದಲ್ಲಿಯೂ ಎರಡನೆಯ ರೂಪದಿಂದ ಸತ್ಯಲೋಕದಲ್ಲಿಯೂ ದೇವತೆಗಳು ಮತ್ತು ಬ್ರಹ್ಮದೇವರಿಂದ ಪೂಜೆ ಕೈಗೊಳ್ಳುತ್ತಾ, ಮೂರನೆಯ ರೂಪದಿಂದ ನಿಜಧಾಮವಾದ ವೈಕುಂಠದಲ್ಲಿಯೂ ವಾಸಿಸುತ್ತಿದ್ದನು. ಮೂರನೆಯ ರೂಪದಿಂದ ವೈಕುಂಠಕ್ಕೆ ದಯಮಾಡಿಸುತ್ತಿದ್ದ ಶ್ರೀಹರಿಯನ್ನು ಅನುಸರಿಸಿ ಸ್ವಸ್ವಯೋಗ್ಯತಾನುಸಾರವಾಗಿ ಕೆಲವರು ಅಮುಕ್ತಸ್ಥಾನದಲ್ಲಿ ನಿಂತು, ಮತ್ತೆ ಕೆಲವರು ವೈಕುಂಠದಲ್ಲಿ ಸಪ್ತದ್ವಾರಗಳವರೆಗೆ ತೆರಳಿ ಅಲ್ಲಿ ದೂರದಲ್ಲಿ ನಿಂತು ಭಗವಂತನ ದರ್ಶನ ಮಾಡುತ್ತಾ ವೇದವಚನಗಳಿಂದ ಅವನನ್ನು ಸ್ತುತಿಸುತ್ತಿದ್ದರು. ಬ್ರಹ್ಮ-ವಾಯು-

ಹನುಮಂತ-ರುದ್ರ-ಶೇಷ-ಗರುಡ-ಇಂದ್ರ-ಕಾಮ-ದಕ್ಷ-ಯಮ-ಧರ್ಮ ಮೊದಲಾದವರು ತಮ್ಮ ತಮ್ಮ ಯೋಗ್ಯತಾನುಸಾರ ಶ್ರೀಹರಿಯನ್ನು ಹಿಂಬಾಲಿಸಿ ಅವನ ಅಪ್ಪಣೆಯನ್ನು ಶಿರಸಾಧರಿಸಿ ತಮ್ಮ ತಮ್ಮ ಲೋಕಗಳಿಗೆ ತೆರಳಿದರು. ಶತಶೃಂಗಪರ್ವತದ ಮೇಲೆ ಒಂದು ಬದರಿ, ಹಿಮವತ್ಪರ್ವತದ ಮೇಲೆ ಒಂದು ಬದರಿ, ಮೇರುಪರ್ವತದ ತಪ್ಪಲು ಪ್ರದೇಶದಲ್ಲಿ ಮತ್ತೊಂದು ಬದರಿ ಹೀಗೆ ಮೂರು ಬದರಿಗಳುಂಟು. ಈ ಮೂರು ಬದರಿಗಳಲ್ಲಿಯೂ ಶ್ರೀಹರಿಯು ಸನ್ನಿಹಿತನಾಗಿರುವನು. ಶ್ರೀಹನುಮಂತ ದೇವರು ಮೇರುಪರ್ವತದ ತಪ್ಪಲು ಪ್ರದೇಶದಲ್ಲಿರುವ ಬದರಿಗೆ ಹೋಗಿ ಶ್ರೀನಾರಾಯಣನ ಪಾದಸೇವೆಯಲ್ಲಿ ಆಸಕ್ತರಾಗಿ ಸಕಲ ಶಾಸ್ತ್ರಗಳನ್ನು ನಿರ್ಣಯಿಸುವ ಶ್ರೀಹರಿಯ ಉಪದೇಶವಚನಗಳನ್ನು ಆನಂದದಿಂದ ಶ್ರವಣ ಮಾಡಿ ಶ್ರೇಷ್ಠ ದೇವತೆಗಳು, ಋಷಿಮುನಿಗಳಿಗೆ ಶ್ರೀಹರಿ ತತ್ವಗಳನ್ನು ಉಪದೇಶಿಸುತ್ತ ಅಲ್ಲಿ ವಾಸಿಸಿದರು. ಅವರು ಒಂದು ರೂಪದಿಂದ ಬದರಿಕಾಶ್ರಮದಲ್ಲಿದ್ದು ಶ್ರೀರಾಮದೇವರ ಅಪ್ಪಣೆಯಂತೆ ದ್ವಿತೀಯ ರೂಪದಿಂದ ಕಿಂಪುರುಷಖಂಡದಲ್ಲಿ ರಾಜ್ಯವಾಳುತ್ತ ತ್ರಿಕೋಟಿ ರೂಪಗಳನ್ನು ಧರಿಸಿ ಶ್ರೀಹರಿಯ ಎಲ್ಲ ಮಂದಿರಗಳಲ್ಲಿಯೂ ವಾಸಿಸುತ್ತ, ಸ್ವೇಚ್ಛೆಯಿಂದ ಶ್ವೇತದ್ವೀಪ, ಅನಂತಾಸನ, ವೈಕುಂಠಗಳಲ್ಲಿಯೂ ವಾಸಮಾಡುತ್ತಿರುವರು. ಶ್ರೀಹನುಮಂತದೇವರು, ಮೂಲ ರಾಮಾಯಣ, ಭಾರತ, ಪಂಚರಾತ್ರ, ಬ್ರಹ್ಮಸೂತ್ರ ಸಹಿತವಾಗಿ ಸಕಲ ವೇದಗಳಿಗೂ ವ್ಯಾಖ್ಯಾನ ಮಾಡಿದರು. ಮತ್ತು ಮೂಲರಾಮಾಯಣವನ್ನು ಗಾಯನ ಮಾಡುತ್ತಾ ಸಂತಸದಿಂದ ವಾಸ ಮಾಡಿದರು.

ಶ್ರೀರಾಮಚಂದ್ರದೇವರು ಸೀತಾಸಹಿತರಾಗಿ, ಲಕ್ಷ್ಮಣ, ಮೂಲರೂಪದ ಶೇಷ ಮತ್ತು ಗರುಡ, ಪವನನಂದನರೂಪ ಹನುಮಂತದೇವರು ಇವರಿಂದ ಸೇವೆಯನ್ನು ಸ್ವೀಕರಿಸುತ್ತಾ, ತಮ್ಮ ಎಲ್ಲಾ ಅವತಾರಗಳನ್ನೊಂದು ಮಾಡಿಕೊಂಡು ಪಾಲ್ಗಡಲಿನಲ್ಲಿ ಶೇಷನ ಮೇಲೆ ಪವಡಿಸಿ ರಮಿಸುತ್ತಿರುವರು. ಭಗವಂತನು ತನ್ನ ಇಚ್ಛೆಯಿಂದ ಅನಂತರೂಪಗಳನ್ನು ವ್ಯೂಹ ಮಾಡಿಕೊಂಡು ಕ್ರೀಡಿಸುವನು. ಅವನು ಇಚ್ಛಾಮರಣಿಯಾಗಿದ್ದಾನೆ. ಶ್ರೀಹರಿಯ ಸದ್ಗುಣಗಳು ಅಮಿತವಾಗಿವೆ - ಹೀಗೆ ಸಕಲ ಪುರಾಣಗಳು, ಪಂಚರಾತ್ರ, ಭಾರತ, ಸಕಲ ವೇದಗಳು, ಮಹಾರಾಮಾಯಣ ಮುಂತಾದ ಶಾಸ್ತ್ರಗಳ ಆಧಾರದಿಂದ ಹೇಳಲಾಗಿದೆ. ಅನೇಕ ಪುರಾಣಾದಿಗಳಲ್ಲಿ ಪರಸ್ಪರ ವಿರೋಧಗಳು ಕಂಡುಬರುತ್ತಿರುವುದನ್ನು ಪರಿಹರಿಸಿ, ಮಹಾಕಲ್ಪ, ಅವಾಂತರ ಕಲ್ಪಗಳಿಗನುಸಾರವಾಗಿ ಶ್ರೀರಾಮಕಥೆಯನ್ನು ಹೇಳಲಾಗಿದೆ. ಇದರಂತೆ ಕಾಲ, ಪುರುಷ ವ್ಯತ್ಯಾಸಗಳಿಂದ ಹೇಳಿರುವುದೂ ಉಂಟು, ಅವೆಲ್ಲ ಅಸುರ ಜನಮೋಹನಾರ್ಥವೆಂದು ತಿಳಿಯಬೇಕು. ಆದ್ದರಿಂದ ಈ ಗ್ರಂಥದಲ್ಲಿ ನಾನು ನಿರ್ಣಯ ಮಾಡಿದ್ದೇನೆ ಎಂದು ಶ್ರೀಮದಾಚಾರ್ಯರು ಅಪ್ಪಣೆ ಕೊಡಿಸಿದ್ದಾರೆ.

ಭಗವಂತನ ಅನೇಕ ಅವತಾರ ಕಥೆಗಳು, ಸೃಷ್ಟ್ಯಾದಿಪರಂಪರೆಗಳ ಬಗ್ಗೆ ಬೇರೆ ಬೇರೆ ಕಡೆ ಹೇಳಿರುವ ವಿಚಾರಗಳಲ್ಲಿ ತೋರುವ ವಿರೋಧಗಳನ್ನು ಪರಿಹರಿಸಿ ನಿರ್ಣಯ ಮಾಡಿ ಇಲ್ಲಿ ಹೇಳಲಾಗಿದೆ. ಭಾರತದಲ್ಲಿ ಬರುವ ಕಥೆಗಳು, ವಾಕ್ಯಗಳ ವಿರೋಧ ಪರಿಹರಿಸಿ ನಿರ್ಣಯಿಸಲಾಗಿದೆ. ಈ ಎಲ್ಲ ವಿಚಾರಗಳೂ, ಬ್ರಹ್ಮಕಲ್ಪ, ಅವಾಂತರಕಲ್ಪ, ಕಾಲ-ಪುರುಷವ್ಯತ್ಯಾಸ, ಪ್ರಾತಿಲೋಮ್ಯಕ್ರಮದಿಂದಲೂ, ಕೆಲವೆಡೆ ಸೂಚೀಕಟಾಹನ್ಯಾಯದಿಂದ, ಮಹಾಮಲ್ಲಭಂಗನ್ಯಾಯದಿಂದ, ಮತ್ತು ಗುಹ್ಯ, ಸಮಾಧಿ, ದರ್ಶನಭಾಷೆಗಳಿಂದ, ವೈದರ್ಭಿ, ಗೌಡಿ, ಪಾಂಚಾಲಿ ಮುಂತಾದ ರೀತಿ, ಶತಕಗಳಿಂದ ನಿರೂಪಿತವಾಗಿದೆ ಎಂದು ತಿಳಿಯಬೇಕು, ಶ್ರೀವೇದವ್ಯಾಸದೇವರು ವ್ಯತ್ಯಾಸ (ಕಾಲ ಪುರುಷ ವ್ಯತ್ಯಾಸ) ಪ್ರಾತಿಲೋಮ್ಯ, ಗೋಮೂತ್ರೀ, ಪ್ರಘಸ, ಲಕ್ಷಣ, ಸುಘರ, ಸಾಧು, ಎಂಬ ಸಪ್ತಭೇದಗಳಿಂದ ಮಹಾಭಾರತ, ಬ್ರಹ್ಮಸೂತ್ರ, ಪಂಚರಾತ್ರ, ಮೂಲರಾಮಾಯಣ ಮುಂತಾದ ಶ್ರೇಷ್ಠ ಗ್ರಂಥಗಳಲ್ಲಿ ತಾತ್ವಿಕವಾಗಿ ವಿಚಾರಗಳನ್ನು ನಿರ್ಣಯ ಮಾಡಿ ಹೇಳಿರುವರು. ಆದ್ದರಿಂದ ನಾನು (ಶ್ರೀಮದಾಚಾರ್ಯರು) ಲಕ್ಷಣ ಗ್ರಂಥಗಳಿಗೆ ಅನುಸಾರವಾಗಿ ಸ್ಪಷ್ಟವಾಗಿ ನಿರ್ಣಯಿಸಿ ಇಲ್ಲಿ ಹೇಳಿದ್ದೇನೆ, ಸಜ್ಜನರು ಈ ನಿರ್ಣಯಶಾಸ್ತ್ರವನ್ನು ಚೆನ್ನಾಗಿ ಗ್ರಹಿಸಬೇಕು - ಎಂದು ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಸಮಸ್ತ

ಶಾಸ್ತ್ರಾನುಸಾರವಾಗಿ ಸಂಸಾರಸಾರವನ್ನು ದಾಟಿಸುವ ಶ್ರೀರಾಮಕಥೆಯನ್ನು ನಿರೂಪಿಸಿದ್ದಾರೆ. ಇದನ್ನು ಹೇಳಿ-ಕೇಳಿದವರು ಸಂಸಾರ ಬಂಧನದಿಂದ ಬಿಡುಗಡೆ ಹೊಂದಿ ಅವರು ಶ್ರೀರಮಾರಮಣನ ಚರಣಕಮಲಗಳನ್ನು ಹೊಂದಿ ಸ್ವಸ್ವರೂಪಾನಂದರೂಪ ಶಾಶ್ವತಸುಖವನ್ನು ಅನುಭವಿಸುವರು.

ಇಂತು ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯವಿರಚಿತ ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯಕ್ಕೆ ಶ್ರೀರಾಘವೇಂದ್ರ ಗುರುಸಾರ್ವಭೌಮರು ರಚಿಸಿದ ನವಮಾಧ್ಯಾಯಾರ್ಥ ''ಭಾವಸಂಗ್ರಹ''ದ ಕನ್ನಡಭಾವಾನುವಾದವು ಮುಗಿದುದು.

*ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದ ಒಂಭತ್ತನೆಯ ಅಧ್ಯಾಯದ ಕಥಾಸಂಗ್ರಹವು ಮುಗಿದುದು.*

॥ ಶ್ರೀಕೃಷ್ಣಾರ್ಪಣಮಸ್ತು ॥





ಕ್ಷೀರ ಸಮುದ್ರಕ್ಕೆ ಬ್ರಹ್ಮ ದೇವರು ಹಾಗು ಇತರ ದೇವತೆಗಳು ಹೋಗಿ ತತಜ್ಞಾನ ಸಂಸ್ಥಾಪನೆಗೆ
ಶ್ರೀ ಹರಿಯಲ್ಲಿ ಪ್ರಾರ್ಥನೆ

# ದಶಮಾಧ್ಯಾಯಭಾವಸಂಗ್ರಹ

*ಅವತಾರಿಕೆ:-*

**ಕ್ಷೀರಾಬ್ಧ್ಯುನ್ಮಥನಾದಿಕಾತ್ಮಚರಿತಂ ದೇವೈರ್ಗೃಣದ್ಭಿಃ ಸ್ತುತಃ**
**ಸದ್‌ಜ್ಞಾನಾಯ ಪರಾಶರಾಖ್ಯಮುನಿನಾ ಯಃ ಸತ್ಯವತ್ಯಾಮಭೂತ್ ।**
**ವ್ಯಾಸತ್ವೇನ ವಿಧಾಯ ವೇದವಿವೃತಿಂ ಶಾಸ್ತ್ರಾಣಿ ಸರ್ವಾಣ್ಯಪಿ**
**ಜ್ಞಾನಂ ಸತ್ಸು ವಿಧಾಯ ತದ್ಗತಕಲಿಂ ನಿಘ್ನನ್ ಸ ನೋಽವ್ಯಾದ್ಧರಿಃ ॥ 10 ॥**

***ಅನ್ವಯಾರ್ಥ*** :- **ಯಃ** = ಯಾವನು, **ಕ್ಷೀರಾಬ್ಧ್ಯುನ್ಮಥನಾದಿಕಾತ್ಮಚರಿತಂ** - **ಕ್ಷೀರಾಬ್ಧಿ** = ಕ್ಷೀರಸಮುದ್ರದ, **ಉನ್ಮಥನಾದಿ** = ಮಥನವೇ ಮೊದಲಾದ, **ಆತ್ಮಚರಿತಂ** = ತನ್ನ ಚರಿತ್ರೆಯನ್ನು, **ಗೃಣದ್ಭಿಃ** = ಹೇಳುವ, **ದೇವೈಃ** = ದೇವತೆಗಳಿಂದ, **ಸ್ತುತಃ ಸನ್** = ಸ್ತೋತ್ರಮಾಡಿಸಿಕೊಳ್ಳಲ್ಪಟ್ಟವನಾಗಿ, **ಸತ್ಯವತ್ಯಾಂ** = ಸತ್ಯವತೀದೇವಿಯಲ್ಲಿ, **ಪರಾಶರಾಖ್ಯಮುನಿನಾ** = ಪರಾಶರರೆಂಬ ಮುನಿಗಳಿಂದ, **ಸದ್‌ಜ್ಞಾನಾಯ** = ಉತ್ತಮಜ್ಞಾನಕ್ಕೋಸ್ಕರವಾಗಿ, **ವ್ಯಾಸತ್ವೇನ** = ಶ್ರೀವೇದವ್ಯಾಸರೂಪದಿಂದ, **ಅಭೂತ್** = ಅವತಾರ ಮಾಡಿದನೋ, (ತತ ಇತಿ ಯೋಜ್ಯ) **ತತಃ** = ಆದುದರಿಂದಲೇ, **ವೇದವಿವೃತಿಂ** = ವೇದವಿಭಾಗಾದಿಗಳನ್ನು, **ಸರ್ವಾಣಿ** = ಸಮಸ್ತವಾದ, **ಶಾಸ್ತ್ರಾಣಿ ಚ** = ಶಾಸ್ತ್ರಗಳನ್ನು ಸಹ, **ವಿಧಾಯ** = ರಚನೆಮಾಡಿ, **ಸತ್ಸು** = ಸಜ್ಜನರಲ್ಲಿ, **ಜ್ಞಾನಂ** = ತತ್ವಜ್ಞಾನವನ್ನು, **ವಿಧಾಯ** = ಉಂಟುಮಾಡಿ, **ತದ್ಗತಕಲಿಂ** = ಸಜ್ಜನರಲ್ಲಿ ಅಡಗಿದ್ದ ಕಲಿಯನ್ನು, **ನಿಘ್ನನ್** = ನಾಶಪಡಿಸಿದ, **ಸಃ ಹರಿಃ** = ಅಂಥ ಶ್ರೀಹರಿ ಪರಮಾತ್ಮನು, **ನಃ** = ನಮ್ಮಗಳನ್ನು, **ಅವ್ಯಾತ್** = ಕಾಪಾಡಲಿ.

***ತಾತ್ಪರ್ಯ*** :- ಬ್ರಹ್ಮದೇವರೇ ಮೊದಲಾದ ದೇವತೆಗಳು ಕ್ಷೀರಸಮುದ್ರಕ್ಕೆ ಹೋಗಿ ಶ್ರೀಹರಿಯನ್ನು ಪ್ರಾರ್ಥಿಸಲು ಭಗವಂತನು ಅವರಿಗೆ ದರ್ಶನವಿತ್ತನು. ಆಗ ದೇವತೆಗಳು "ಸ್ವಾಮಿ, ಹಿಂದೆ ನೀನು ಅಮೃತಮಥನ ಕಾಲದಲ್ಲಿ ಮಂದರ-ಪರ್ವತವು ಕ್ಷೀರಸಮುದ್ರದಲ್ಲಿ ಮುಳುಗಿದಾಗ, ಮತ್ತೆ, ಅಮೃತವಿತರಣಾದಿ ಕಾಲಗಳಲ್ಲಿ ದೇವತೆಗಳ ಕ್ಷೇಮಕ್ಕಾಗಿ ಅದ್ಭುತ ಲೀಲೆಗಳನ್ನು ತೋರಿ ಅನುಗ್ರಹಿಸಿದ್ದೀಯೇ. ನಿನ್ನ ಅನುಗ್ರಹದಿಂದಲೇ ಈಗ ಮತ್ತೆ ನಮ್ಮ ಉದ್ಧಾರವಾಗಬೇಕಾಗಿದೆ. ಗೌತಮ ಮುನಿಗಳ ಶಾಪದಿಂದ ಕಲಿಯ ಪ್ರಾಬಲ್ಯದಿಂದ ತತ್ವಜ್ಞಾನವು ಆಕುಲಿತವಾಗಿದೆ. ಮಿಥ್ಯಾಜ್ಞಾನ, ವಿಪರೀತಜ್ಞಾನಗಳಿಂದ ಮುಕ್ತಿ-ಯೋಗ್ಯರು ಬಳಲುತ್ತಿದ್ದಾರೆ. ನೀನು ಪರಮಾನುಗ್ರಹಮಾಡಿ ಮತ್ತೆ ತತ್ವಜ್ಞಾನವನ್ನು ಸಂಸ್ಥಾಪಿಸಲು ಅವತರಿಸಿ ಜ್ಞಾನವನ್ನು ಬೋಧಿಸಿ ಮುಕ್ತಿಯೋಗ್ಯರನ್ನು ಪೊರೆಯಬೇಕು. ಈ ಕಾರ್ಯವನ್ನು ನೆರವೇರಿಸಲು ನಿನ್ನ ವಿನಃ ಮತ್ತಾರೂ ಸಮರ್ಥರಲ್ಲ, ಸದ್‌ಜ್ಞಾನವನ್ನು ಬೋಧಿಸಿ ನಮ್ಮೆಲ್ಲರನ್ನು ಕರುಣಿಸು" ಮುಂತಾಗಿ ಪ್ರಾರ್ಥಿಸಿದರು. ಶ್ರೀಹರಿಯು ಅವರ ಪ್ರಾರ್ಥನೆಯಂತೆ ಸತ್ಯವತೀದೇವಿಯಲ್ಲಿ ಶ್ರೀಪರಾಶರ ಮುನಿಗಳಿಂದ ಶ್ರೀವೇದವ್ಯಾಸರೂಪದಿಂದ ಅವತರಿಸಿ, ವೇದವಿಭಾಗಪೂರ್ವಕವಾಗಿ, ವೇದಾರ್ಥನಿರ್ಣಾಯಕ ಬ್ರಹ್ಮಸೂತ್ರಗಳನ್ನು, ಸಕಲಶಾಸ್ತ್ರಗಳನ್ನೂ ರಚಿಸಿ, ಸದ್‌ಜ್ಞಾನವನ್ನು ಉಪದೇಶಿಸಿ, ಸಜ್ಜನರಲ್ಲಿ ಅಡಗಿದ್ದ ಕಲಿಯನ್ನು ಹೊಡೆದೋಡಿಸಿ ಪರಮಾನುಗ್ರಹ ಮಾಡಿದನು. ಇಂಥ ಶ್ರೀಹರಿಯು ನಮ್ಮನ್ನು ರಕ್ಷಣೆ ಮಾಡಲಿ ಎಂದು ಭಾವ.

## ದಶಮಾಧ್ಯಾಯ ಕಥಾಸಂಗ್ರಹ

ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ಬ್ರಹ್ಮರುದ್ರಾದಿದೇವತೆಗಳು ಕ್ಷೀರ ಸಮುದ್ರಕ್ಕೆ ಬಂದು ಜಗದೊಡೆಯನಾದ ಶ್ರೀಮನ್ನಾರಾಯಣನನ್ನು ಭಕ್ತಿಪೂರ್ವಕವಾಗಿ ಸ್ತುತಿಸಿದರು. ಚತುರ್ವಿಧನಾಶರಹಿತನಾದ ಶ್ರೀಹರಿಯು ಅಮರರ ಪ್ರಾರ್ಥನೆಗೆ ಒಲಿದು ಮೈದೋರಿದನು. ದೇವತೆಗಳು ಭಗವಂತನನ್ನು ಪ್ರಾರ್ಥಿಸಹತ್ತಿದರು:-

''ದೇವದೇವ, ಜಗನ್ನಾಥ, ಶ್ರೀಹರಿ, ನಿನಗೆ ನಮಸ್ಕಾರ. ಅಗಣಿತ ಶುಭಗುಣಗಣಮಂದಿರನು ನೀನು. ನಿಖಿಲವಿಜ್ಞಾನದ ಕಾಂತಿಪುಂಜಮಾಲಾಧಾರಿಯಾದ ನೀನು, ಅನಾದಿಕಾಲದಿಂದ ಮನೆಮಾಡಿರುವ ಅಜ್ಞಾನಾಂಧಕಾರವನ್ನು ಪರಿಹರಿಸಿ ಬ್ರಹ್ಮಾದಿಸುರಸಂದೋಹಕ್ಕೆ ಜರಾಮರಣರಹಿತವಾದ ಆನಂದಧಾಮವೆನಿಸಿದ ಮೋಕ್ಷವನ್ನು ಕೊಡುವ ಪ್ರಭುವೇ, ನಮಸ್ಕಾರ. ಒಂದೊಮ್ಮೆ ಇಂದ್ರದೇವರು ಐರಾವತವನ್ನೇರಿ ಬರುವಾಗ ದೂರ್ವಾಸರು ನಿನಗರ್ಪಿಸಿದ ಮಾಲೆಯನ್ನವರಿಗೆ ನೀಡಿದಾಗ ಉದಾಸೀನದಿಂದ ಅದನ್ನು ಇಂದ್ರದೇವರು ಐರಾವತದ ಶಿರದಲ್ಲಿರಿಸಿದಾಗ ಅದು ಆ ಮಾಲೆಯನ್ನು ನೆಲಕ್ಕೆ ಎಸೆಯಿತು. ಇದರಿಂದ ಕುಪಿತರಾದ ದೂರ್ವಾಸರು ''ಇಂದ್ರ, ನಿನ್ನ ಐಶ್ವರ್ಯವು ಹೋಗಲಿ'' ಎಂದು ಶಾಪವಿತ್ತರು. ಕೂಡಲೇ ಇಂದ್ರ ದೇವರ ಐಶ್ವರ್ಯ ನಷ್ಟವಾಯಿತು. ದೈತ್ಯರು ಸ್ವರ್ಗವನ್ನು ಮುತ್ತಿ ಇಂದ್ರದೇವರನ್ನು ಸೋಲಿಸಿದರು. ಆಗ ನಾವು ಎಲ್ಲರೂ ನಿನಗೆ ಶರಣು ಬಂದೆವು. ಆಗ ನೀನು ಬಲಿಯ ಸಂಗಡ ಸಂಧಿಮಾಡಿಕೊಳ್ಳುವಂತೆ ಆಜ್ಞಾಪಿಸಿದಿ. ಅದರಂತೆ ಸಂಧಿ ಮಾಡಿಕೊಂಡು ಬಲಸಂವರ್ಧನೆಗೆ ಅಮೃತ ದೊರಕಿಸಲು ಮಂದರ ಪರ್ವತವನ್ನು ತಂದು ಕ್ಷೀರಸಮುದ್ರದಲ್ಲಿಟ್ಟು ಮಥಿಸಲು ನಿಶ್ಚಯಿಸಿದೆವು, ನಿನ್ನ ಅಪ್ಪಣೆಯಂತೆ ಮಂದರ ಪರ್ವತವನ್ನು ನಿನ್ನ ವಿನಃ ಯಾರೂ ಕೀಳಲು ಸಾಧ್ಯವಾಗದಂತೆ ರುದ್ರದೇವರು ವರವನ್ನು ಕೊಟ್ಟಿದ್ದರು. ನಿನ್ನಾಜ್ಞೆಯಂತೆ ದೇವತೆಗಳು ದೈತ್ಯರಾಜ ಬಲಿ ಹಾಗೂ ದೈತ್ಯರೊಡನೆ ಸೇರಿ ಮಂದರಪರ್ವತವನ್ನು ಬಾಹುಗಳಿಂದ ಕಿತ್ತಿ ಮೇಲೆತ್ತಲು ಪ್ರಯತ್ನಿಸಿ ವಿಫಲರಾದೆವು.

ಪ್ರಭು, ಎಂದಿಗೂ ಕುಂದದ ಬಲದಿಂದ ಕಂಗೊಳಿಸುವ ನೀನು ಪರ್ವತವನ್ನು ಕಿತ್ತಿ ಅನಂತನೆಂಬ ಹೆಸರಿನ, ನಿನ್ನನ್ನು ಹೊರುವುದರಿಂದ ಅನಂತನೆಂದು ಖ್ಯಾತನಾದ ಗರುಡನ ಭುಜದ ಮೇಲಿರಿಸಿ ಅವನಲ್ಲಿ ಕೃಪೆತೋರಲು ನೀನೂ ಅವನ ಭುಜವನ್ನೇರಿ ಕುಳಿತೆ. ನಿನ್ನ ಅನುಗ್ರಹದಿಂದ ಗರಡುನು ಪರ್ವತ ಸಹಿತ ನಿನ್ನನ್ನೂ ಎತ್ತಿಕೊಂಡು ಹೋಗುತ್ತಿರುವಾಗ ದೇವತೆಗಳು ಮತ್ತು ಅಸುರರು ಆ ಪರ್ವತವನ್ನು ಹೊರಲು ತಾವು ಸಮರ್ಥರೆ? ಎಂದು ಪರೀಕ್ಷಿಸಲು ಅದನ್ನು ಗರುಡನ ಹೆಗಲ ಮೇಲಿಂದ ಮೇಲೆತ್ತಿದಾಗ ಅದು ಅವರ ಮೇಲೆ ಅಪ್ಪಳಿಸಿ ಬಿದ್ದಿತು. ಆಗವರು ಪುಡಿಪುಡಿಯಾದರು. ಪ್ರಭುವೇ, ನೀನಾಗ ಕೃಪಾದೃಷ್ಟಿಯಿಂದ ಅವರನ್ನು ನೋಡಲು ಮತ್ತೆ ಅವರು ದೃಢಕಾಯರಾಗಿ ಮೇಲೆದ್ದು ನಿಂತರು. ಆಗ ನೀನು ಪುನಃ ಪರ್ವತವನ್ನು ಎಡಗೈಯಿಂದ ಎತ್ತಿ ಗರುಡನ ಹೆಗಲ ಮೇಲಿಟ್ಟು ನೀನೂ ಕುಳಿತು ದೇವಾಸುರರೊಡನೆ ಕ್ಷೀರ ಸಮುದ್ರಕ್ಕೆ ಬಂದು ಮಂದರವನ್ನು ಕಡಗೋಲಿನಂತೆ ಸಮುದ್ರದಲ್ಲಿಟ್ಟು ವಾಸುಕಿಯನ್ನು ಹಗ್ಗ ಮಾಡಿ ಮಂದರಕ್ಕೆ ಸುತ್ತಿ ಮಥನಕಾರ್ಯ ಪ್ರಾರಂಭಿಸಿದೆ. ದೇವತೆಗಳು ಮತ್ತು ಅಸುರರು ನಿನ್ನೊಡನೆ ಸೇರಿ ಕ್ಷೀರ ಸಮುದ್ರದ ಮಧ್ಯದಲ್ಲಿ ಹೆಚ್ಚು ತುಪ್ಪವಿರುವ ಭಾಗವನ್ನು ಕಡೆದರು. ಹಾವಿನ ಬಾಲವು ಅಶುಭವೆಂದು ದೈತ್ಯರು ವಾಸುಕಿಯ ಹೆಡೆಯನ್ನು ಹಿಡಿದು ಕಡೆಯಹತ್ತಿದ್ದರಿಂದ ವಾಸುಕಿ ಹೆಡೆಯಿಂದ ವಿಷವನ್ನು ಕಾರಹತ್ತಿದನು. ಅದರಿಂದ ಅಸುರರು ಆಯಾಸದಿಂದ ಬಳಲಿದರು.

ಹೀಗೆ ಸಮುದ್ರಮಥನವಾಗುತ್ತಿರುವಾಗ ಕನಕಪರ್ವತವೆನಿಸಿದ ಮಂದರವು ಭಾರವಾಗಿದ್ದುದರಿಂದ ಸಾಗರದಲ್ಲಿ ಮುಳುಗಿ ಪಾತಾಳ ಸೇರಿತು. ಸ್ವಾಮಿ, ಆಗ ದಯಾಮಯನಾದ ನೀನು, ಕೂರ್ಮಾವತಾರ ತಾಳಿ ಪರ್ವತವನ್ನು ಬೆನ್ನಿನ ಮೇಲೆ ಹೊತ್ತುಕೊಂಡು ಮೇಲಕ್ಕೆ ತಂದೆ. ನಿನ್ನ ವಿನಃ ಇನ್ನಾರಿಗೂ ಮಂದರವನ್ನು ಹೊರಲು ಅಸಾಧ್ಯ. ನೀನದನ್ನು ಲೀಲೆಯಿಂದಲೇ ಧರಿಸಿದೆ. ಆಗ ನೀನು ಪರ್ವತದ ಕೆಳಗೆ ಮೇಲೆ ಒಳಗೆ ಹೊರಗೆ, ವಾಸುಕಿಯ ಒಳಹೊರಗೂ ಪ್ರವೇಶಿಸಿ ರಕ್ಷಕನಾಗಿ ನಿಂತಿರಲು ದೇವಾಸುರರು ಕ್ಷೀರಸಮುದ್ರವನ್ನು ವೇಗವಾಗಿ ಮಥಿಸಿದರು. ಅದರಿಂದ ಸಮುದ್ರವು ಮಿತಿಮೀರಿ ಉಕ್ಕಿ ಜಲಚರಪ್ರಾಣಿಗಳು ತಲ್ಲಣಿಸಿದವು. ದೇವಾಸುರರು ಬಳಲಿದರು. ಆಗ ಉತ್ಕೃಷ್ಟ ಪರಾಕ್ರಮಶಾಲಿಯಾದ ನೀನೊಬ್ಬನೇ ಸಮುದ್ರಮಥನ ಮಾಡಿದೆ. ಆಗ ಮೊದಲು ಜಗನ್ನಾಶಕವಾದ ಹಾಲಾಹಲವೆಂಬ ವಿಷವು ಉತ್ಪನ್ನವಾಯಿತು. ದೇವಾಸುರರು ಹಾಹಾಕಾರ ಮಾಡಹತ್ತಿದ್ದರು. ಆಗ ನಿನ್ನ ಅಪ್ಪಣೆಯಂತೆ ವಾಯುದೇವರು ಅದನ್ನು ಅಂಗೈಯಲ್ಲಿಟ್ಟು ಹೆಬ್ಬೆರಳಿನಿಂದ ಮಥಿಸಿ

ಸಾರರಹಿತವನ್ನಾಗಿ ಮಾಡಿದರು. ಹಾಲಾಹಲವು ಕಲಿಗೆ ಅಭಿಮಾನಪಾತ್ರ. ಕಲಿಗೆ ಬ್ರಹ್ಮದೇವರ ವರವಿದ್ದುದರಿಂದ ಆ ವಿಷವನ್ನು ಯಾರಿಗೂ ತಾಳಲೂ ಮುಟ್ಟಲೂ ಸಾಧ್ಯವಿಲ್ಲ. ಆದರೆ ಶ್ರೀವಾಯುದೇವರಲ್ಲಿ ಕಲಿಯ ಪ್ರಭಾವ ಏನೂ ನಡೆಯದು. ಆದ್ದರಿಂದ ಅವರದನ್ನು ಕೈಯಲ್ಲಿ ಹಿಡಿದು ಮರ್ದಿಸಿ ಸ್ವಲ್ಪಭಾಗವನ್ನು ಕುಡಿಯಲು ರುದ್ರದೇವರಿಗೆ ನೀಡಿದರು. ಅತಿಸ್ವಲ್ಪಭಾಗ ವಿಷವನ್ನು ಕುಡಿಯುತ್ತಿರುವಂತೆಯೇ ರುದ್ರದೇವರು ಎಷದ ವೇಗವನ್ನು ತಡೆಯಲಾರದೆ ಮೂರ್ಛಿತರಾಗಿ ಬಿದ್ದರು. ಆಗ ಕರುಣಾಳುವಾದ ನಿನ್ನ ಕರಸ್ಪರ್ಶದಿಂದ ಮೂರ್ಛೆ ತಿಳಿದೆದ್ದು ರುದ್ರದೇವರು ಕುಳಿತರು. ವಿಷವೇಗದಿಂದ ಅವರ ಕಂಠ ನೀಲವರ್ಣವಾಯಿತು. ಆದಕ್ಕಾಗಿ ಅವರಿಗೆ ನೀಲಕಂಠನೆಂಬ ಬಿರುದು ವಿಖ್ಯಾತವಾಯಿತು. ತರುವಾಯ ನಿನ್ನ ಆಣತಿಯಂತೆ ವಾಯುದೇವರು ಸುವರ್ಣಪಾತ್ರೆಯಲ್ಲಿ ಹಾಲಾಹಲವನ್ನು ಹಾಕಿ ಭಯಂಕರವಾದ ಆ ವಿಷವನ್ನು ಏನೂ ಉಳಿಯದಂತೆ ತಾವೇ ಕುಡಿದುಬಿಟ್ಟರು. ಆದರಿಂದ ವಾಯುದೇವರಿಗೆ ಯಾವ ವಿಕಾರವೂ ಆಗಲಿಲ್ಲ. ವಿಷವು ಅವರ ಹೊಟ್ಟೆಯಲ್ಲಿಯೇ ಜೀರ್ಣವಾಗಿ ಹೋಯಿತು. ಸ್ವಲ್ಪ ವಿಷ ಕುಡಿದುದರ ಪ್ರಭಾವದಿಂದಾಗಿ ರುದ್ರದೇವರಿಗೆ ತಲೆಯಲ್ಲಿ ನೋವುಂಟಾಯಿತು. ಆದುದರಿಂದವರು ಅಭಿಷೇಕಪ್ರಿಯರೂ, ಚಂದ್ರಮೌಳೀಶ್ವರರೂ ಆದರೆಂಬ ಪ್ರಸಿದ್ಧಿ ಉಂಟಾಯಿತು. ವಿಷ ಕುಡಿದಿದ್ದರಿಂದ ಉಂಟಾದ ವ್ಯಥೆಯಿಂದ ಕೆಳಗೆ ಬೀಳುತ್ತಿದ್ದ ರುದ್ರದೇವರ ಅಂಗೈನಲ್ಲಿದ್ದ ವಿಷವು ಜಾರಿಬಿದ್ದು ಸಕಲ ಜಗತ್ತನ್ನು ತುಂಬಿ ತುಳುಕಿತು. ಕಲಿಯು ಸಕಲ ಜಗತ್ತಿನಲ್ಲಿ ತುಂಬಿದ ಮೇಲೆ ವಿಷಮಯವಾದ ಅವನ ದೇಹದಿಂದ ಕೆಟ್ಟ ಹಾವು, ಚೇಳು, ಶುನಕಪಾದದಂಥ ನರಿ, ತೋಳ, ಹುಲಿ ಮೊದಲಾದವೂ, ರಾಕ್ಷಸರೂ ಸಹ ಹುಟ್ಟಿಕೊಂಡರು. ಸ್ವಾಮಿ, ನೀನು ಬಿಡದೇ ಕ್ಷೀರ ಸಮುದ್ರವನ್ನು ಮಥಿಸುತ್ತಿರಲು ಮದ್ಯವು ಹುಟ್ಟಿತು. ದೈತ್ಯರು ಅದನ್ನು ತೆಗೆದುಕೊಂಡರು.

ಬಳಿಕ ಉಚ್ಚೈಶ್ರವಸ್ಸು ಎಂಬ ಶ್ವೇತಾಶ್ವ, ಐರಾವತವೆಂಬ ಐದು ಸೊಂಡಲಿನ ಬಿಳಿಯ ಆನೆ, ಅಷ್ಟದಿಗ್ಗಜಗಳೂ ಮತ್ತು ಊರ್ವಶಿ, ಮೇನಕಾ, ರಂಭಾ, ಘೃತಾಚಿ, ತಿಲೋತ್ತಮಾ ಮೊದಲಾದವರೂ, ಸುರರ ಆಯುಧಗಳೂ, ವಿವಿಧ ಆಭರಣಗಳೂ, ಸುರತರುವೆನಿಸಿದ ಪಾರಿಜಾತವೃಕ್ಷ, ಕಾಮಧೇನುವೂ, ಚಂದ್ರನೂ, ಜಗತ್ತಿನ ಸಾರವೇ ಮೂರ್ತಿವೆತ್ತ ಕೌಸ್ತುಭಮಣಿಯೂ ಹುಟ್ಟಿದವು. ತರುವಾಯ ಶ್ರೀಲಕ್ಷ್ಮೀದೇವಿಗೆ ನಿತ್ಯದೇಹವಿದ್ದಾಗ್ಯೂ ಅವಳು ತನ್ನ ಎರಡನೆಯ ರೂಪದಿಂದ ಪ್ರತ್ಯಕ್ಷಳಾದಳು. ದೇವ, ಆಗ ನೀನು ಬಲಕರದಲ್ಲಿ ಅಮೃತಕಲಶವನ್ನೂ ಎಡಕರದಲ್ಲಿ ಕಮಂಡಲುವನ್ನೂ ಹಿಡಿದುಕೊಂಡು ಧನ್ವಂತರಿಯ ರೂಪದಿಂದ ಪ್ರತ್ಯಕ್ಷನಾದೆ. ಹೀಗೆ ಇಂದ್ರನೀಲಮಣಿಕಾಂತಿಯಿಂದೊಪ್ಪುವ ನೀನು ಧನ್ವಂತರಿ ಎಂಬ ಹೆಸರಿನಿಂದ ಕ್ಷೀರೋದಧಿಯಿಂದ ಹೊರಬಂದೆ. ಆಗ ದಿತಿಯ ಮಕ್ಕಳಾದ ಅಸುರರು ನಿನ್ನ ಕರದಲ್ಲಿದ್ದ ಅಮೃತಕಲಶವನ್ನು ಕಿತ್ತುಕೊಂಡರು. ಪ್ರಭು, ಅವರನ್ನು ತಕ್ಷಣ ಸಂಹರಿಸಲು ನೀನು ಶಕ್ತಿವಂತನಾಗಿದ್ದರೂ, ''ದೈತ್ಯರು ವಂಚಕರು, ಸತ್ಯಕ್ಕೆ ತಪ್ಪಿ ನಡೆಯುವವರು'' ಎಂಬುದನ್ನು ಪ್ರತ್ಯಕ್ಷ ಮಾಡಿ, ನೀನು ಅವರನ್ನು ಸದ್ಯ ಸಂಹರಿಸದೆ ಬಿಟ್ಟೆ. ಅನಂತರ ನೀನು ಶ್ರೇಷ್ಠವೂ ಅನುಪಮವೂ ಆದ ಮೋಹಿನಿಯ ರೂಪವನ್ನು ಧರಿಸಿದೆ.

ದೇವ, ನಸುನೀಲವರ್ಣದ ದೇಹ, ರತ್ನಮಯ ವಡ್ಯಾಣದಿಂದ ರಾಜಿಸುವ ನಿತಂಬ, ಬಂಗಾರಮಯ ರೇಶಿಮೆಯ ಸೀರೆಯನ್ನುಟ್ಟು ಕಂಗೊಳಿಸುವ ಮಧ್ಯಭಾಗ (ನಡು), ದುಂಡು ನಿತಂಬಗಳು, ಕಳಶವನ್ನು ಹೋಲುವ ಸ್ತನಗಳು, ಅರಳಿದ ಪುಂಡರೀಕಗಳಂತೆ ವಿಶಾಲವಾದ ನಯನಗಳಿಂದ ಬೆಡಗುಗೊಂಡ ನಿನ್ನ ಮೋಹಿನಿಯ ರೂಪವು ಅದ್ಭುತವಾಗಿತ್ತು. ಜಗತ್ತಿನ ಸಕಲ ಸೌಂದರ್ಯಸಾರವನ್ನೂ ಒಟ್ಟಾಗಿ ಸೇರಿಸಿ ಎರಕಹೊಯ್ದು ತಯಾರಿಸಿದಂತಿದ್ದ, ಸಕಲ ಮಂಗಳಗುಣಗಣಗಳಿಂದ ತುಂಬಿದ ನಿನ್ನ ಆ ಸುಮನೋಹರಲೋಕಮೋಹಕಚೆಲುವನ್ನು ಕಂಡ ದೈತ್ಯರು ಕೂಡಲೇ ಮರುಳಾದರು, ಮಂಕಾದರು. ಅಮೃತ ನನಗೆ-ತನಗೆ ಎಂದು ಜಗಳವಾಡಹತ್ತಿದ ದೈತ್ಯರು ಕೊನೆಗೆ ನಿನ್ನಲ್ಲಿ ಮರುಳಾಗಿದ್ದುದರಿಂದ ''ಸುಂದರಿ, ನೀನು ಅಮೃತವನ್ನು ನಮ್ಮೆಲ್ಲ-ರಿಗೂ ಸಮವಾಗಿ ಹಂಚಿ ಕುಡಿಸು'' ಎಂದು ಹೇಳಿ ಅಮೃತಕಲಶವನ್ನು ನಿನ್ನ ಕೈಯಲ್ಲಿ ಕೊಟ್ಟು ತಮಗೆ ತಾವೇ ವಂಚಿತರಾದರು.

ಪಾಪಿಜನರಲ್ಲಿ ಕಪಟ ಮಾಡುವುದೇ ಸರಿಯಾದ ಧರ್ಮವೆಂದು ಸಜ್ಜನರಿಗೆ ಬೋಧಿಸಲು ನೀನು ಹೀಗೆ ಹೇಳಿದೆ ''ನಾನು ಅಮೃತವನ್ನು ಹಂಚುವಲ್ಲಿ ಅನುಸರಿಸುವ ನೀತಿಯು ನಿಮಗೊಪ್ಪಿತವಾದಲ್ಲಿ ನಾನು ಸುಧೆಯನ್ನು ನಿಮಗೆಲ್ಲರಿಗೂ ಹೇಗೆ ಹಂಚುವೆನೆಂಬುದನ್ನು ನೋಡಿರಿ. ನಾನು ನನಗೆ ತೋರಿದಂತೆ ಅಮೃತವನ್ನು ಹಂಚಿಬಿಡಬಹುದಾದುದರಿಂದ ನನ್ನನ್ನು ನೀವು ನಂಬಬೇಡಿ'' ಎಂದು ಮಂದಹಾಸ ಬೀರುತ್ತಾ ನೀನು ಹೇಳಿದ ಮಾತನ್ನು ಕೇಳಿ ನಿನ್ನ ಹಾವಭಾವ, ವೈಯಾರಗಳಿಗೆ ಮರುಳಾದ ದೈತ್ಯರು ''ಹಾಗೆಯೇ ಹಾಗಲಿ,'' ಎಂದು ಒಪ್ಪಿದರು.

ತರುವಾಯ ನೀನು, ದೇವತೆಗಳು ಅಸುರರನ್ನು ಬೇರೆ ಬೇರೆ ಪಂಕ್ತಿಗಳಲ್ಲಿ ಕುಳ್ಳಿರಿಸಿದೆ. ಅಸುರರು ನಿನ್ನ ಸೌಂದರ್ಯ-ದಿಂದ ಮರುಳಾಗಿ ಬೆರಗುಗೊಂಡು ನಿನ್ನನ್ನೇ ಎವೆಯಿಕ್ಕದೆ ನೋಡತೊಡಗಿದರು. ಆಗ ನೀನು ''ನೀವೆಲ್ಲರೂ ಇಂತು ನನ್ನನ್ನು ಎವೆಯಿಕ್ಕದೆ ನೋಡುತ್ತಿದ್ದರೆ ನನಗೆ ನಿಮ್ಮನ್ನು ನೋಡಲು ನಾಚಿಕೆಯಾಗುತ್ತದೆ. ಆದ್ದರಿಂದ ನೀವೆಲ್ಲರೂ ಕಣ್ಣುಮುಚ್ಚಿ ಕುಳಿತುಕೊಳ್ಳಿರಿ'' ಎಂದು ದೈತ್ಯರಿಗೆ ಹೇಳಲು, ಅವರು ನಿನ್ನ ಮಾತನ್ನು ಒಪ್ಪಿ ಕಣ್ಣುಗಳನ್ನು ಮುಚ್ಚಿಕೊಂಡರು. ಆಗ ನೀನು ಸಕಲದೇವತೆಗಳಿಗೂ ತೃಪ್ತಿಯಾಗುವಂತೆ ಅಮೃತವನ್ನು ಕುಡಿಸಿದೆ. ಆಗ ರಾಹುವು ಮೋಸದಿಂದ ದೇವತೆಗಳ ವೇಷದಲ್ಲಿ ಬಂದು ದೇವತೆಗಳ ಪಂಕ್ತಿಯಲ್ಲಿ ಕುಳಿತಿದ್ದನು. ಅವನ ಕೈಯ್ಯಲ್ಲೂ ಅಮೃತ ಬೀಳಲು, ಅದನ್ನು ಅವನು ಕುಡಿದುಬಿಟ್ಟನು. ಕೂಡಲೇ ನೀನು ಮೋಹಿನಿಯ ರೂಪವನ್ನು ತ್ಯಜಿಸಿ ಪರಮಪುರುಷನಾದೆ ಮತ್ತು ಅಮೃತಪಾನ ಮಾಡುತ್ತಿದ್ದ ರಾಹುವಿನ ಶಿರಸ್ಸನ್ನು ಚಕ್ರದಿಂದ ತಕ್ಷಣವೇ ಕತ್ತರಿಸಿ ಹಾಕಿದೆ. ಹಿಂದೆ ರಾಹುವು ಅಮೃತಪ್ರಾಶನಕ್ಕಾಗಿ ಸಾವಿರಾರು ಜನ್ಮಗಳಲ್ಲಿ ಬ್ರಹ್ಮ-ದೇವರನ್ನು ಕುರಿತು ಘೋರ ತಪಸ್ಸನ್ನೆಸಗಿದ್ದನು. ಬ್ರಹ್ಮದೇವರು ಅವನ ತಪಸ್ಸಿಗೆ ಮೆಚ್ಚಿ ಅವನಿಗೆ ಅಮೃತ ದೊರೆಯುವಂತೆ ವರ ಕೊಟ್ಟಿದ್ದರು. ಅದನ್ನು ತಿಳಿದಿದ್ದ ನೀನು ರಾಹುವಿನ ಕರಕ್ಕೆ ಒಂದು ಹನಿ ಮಾತ್ರ ಅಮೃತವನ್ನು ಹಾಕಿ, ಅದನ್ನವನು ಕುಡಿಯುತ್ತಿರುವಂತೆಯೇ ಅವನ ಶಿರವನ್ನು ತರಿದುಹಾಕಿದೆ. ಅಸುರರ್‍ಯಾರಿಗೂ ಇಲ್ಲದ ಅಮೃತಪಾನದ ಯೋಗ್ಯತೆ ಮೇಲಿನ ಕಾರಣದಿಂದ ರಾಹುವಿಗೆ ಬಂದಿತ್ತು. ಅದನ್ನು ನೀನು ಪರಿಹರಿಸಿಬಿಟ್ಟೆ. ದೇವತೆಗಳ ಜೊತೆ ಸೇರಿದ ರಾಹುವಿನ ಆ ಶಿರವು ಚಂದ್ರಸೂರ್ಯನನ್ನು ಕವಿಯುವ ಗ್ರಹವಾಯಿತು. ಬಾಹುಸಮೇತವಿದ್ದ ರಾಹುವಿನ ಮುಂಡವನ್ನು ಶುಭೋದಸಮುದ್ರದಲ್ಲಿ ನೀನು ಎಸೆದುಬಿಟ್ಟಿದ್ದೀಯೆ. ಅಮೃತಪಾನ ಮಾಡಿದ್ದರಿಂದ ಅದು ಈಗಲೂ ಜೀವಂತವಾಗಿಯೇ ಇದೆ. ದೇವ ನೀನು ನಿಜರೂಪ ಧರಿಸಿದ ಕೂಡಲೇ ಅಸುರರು ಆಯುಧಗಳನ್ನು ಹಿಡಿದು ನಿನ್ನ ಮೇಲೆ ಯುದ್ಧ ಮಾಡಲು ಬಂದರು. ಆಗ ನೀನು ಯುದ್ಧದಲ್ಲಿ ಸಕಲ ಅಸುರರನ್ನೂ ಸಂಹಾರ ಮಾಡಿದೆ. ಕಲಿಯು ಬ್ರಹ್ಮದೇವರ ವರವಿದ್ದುದರಿಂದ ಅಜೇಯನಾದನು. ನೀನು ಮತ್ತು ಪರಶುಕ್ಲತ್ರಯರಲ್ಲದೆ ಅವನನ್ನು ಯಾರು ಗೆಲ್ಲಲಾರರು. ಪರಶುಕ್ಲತ್ರಯರನ್ನೂ ಮತ್ತು ನಿನ್ನನ್ನು ಬಿಟ್ಟು ಕಲಿಯು ಸಕಲ ಪುರುಷರಲ್ಲಿಯೂ ಸೇರಿರುವನು. ಕ್ಷೀರಾಬ್ಧಿಯಲ್ಲಿ ಹುಟ್ಟಿದ ಅಲಕ್ಷ್ಮೀಯು ಕಲಿಯ ಅರ್ಧಾಂಗಿಯಾದಳು. ದೋಷಸಮೂಹಕ್ಕೆ ಅಭಿಮಾನಿಗಳಾದ ಸಕಲ ದೈತ್ಯರೂ ಅವಳ ಮಕ್ಕಳಾದರು. ಅನಂತರ ಶ್ರೀಲಕ್ಷ್ಮೀದೇವಿಯು ನಿನ್ನ ಹೃದಯ ಮಂದಿರವನ್ನು ಸೇರಿದಳು. ಕೌಸ್ತುಭಮಣಿಯ ಅಭಿಮಾನಿಯಾದ ಬ್ರಹ್ಮದೇವರು ನಿನ್ನ ಕಂಠದಲ್ಲಿ ಸೇರಿದರು.

ಪ್ರಭು! ಕ್ಷೀರಸಮುದ್ರದಲ್ಲಿ ಜನಿಸಿದ ಶ್ರೀಲಕ್ಷ್ಮೀದೇವಿ, ಕೌಸ್ತುಭಮಣಿ, ಸುಧಾ - ಇವುಗಳನ್ನು ಬಿಟ್ಟು ಉಳಿದೆಲ್ಲ ವಸ್ತುಗಳನ್ನೂ ಸಮವಾಗಿ ವಿಭಾಗಮಾಡಿ ನೀನು ಇಂದ್ರಾದಿಗಳಿಗೆ ಕರುಣಿಸಿರುವೆ. ಐರಾವತ, ಉಚ್ಚೈಃಶ್ರವಸ್ಸು, ಕಲ್ಪವೃಕ್ಷ (ಪಾರಿಜಾತ)ಗಳನ್ನು ಇಂದ್ರದೇವರಿಗೂ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕಗಳೆಂಬ ಸಪ್ತ ದಿಗ್ಗಜಗಳನ್ನು ಕ್ರಮವಾಗಿ ಅಗ್ನಿ ಮೊದಲಾದ ದಿಕ್ಪಾಲರಿಗೆ ಅನುಗ್ರಹಿಸಿದ್ದೀಯೆ. ಇದರಂತೆ ಆಯುಧಗಳು-ಆಭರಣಗಳನ್ನೂ ಉಚಿತ ರೀತಿಯಿಂದ ದೇವತೆಗಳಿಗೆ ಕರುಣಿಸಿದ್ದೀಯೆ. ಇದರಂತೆ ನಿನ್ನ ಸುಖರೂಪ ಮೋಕ್ಷವನ್ನು ದೇವತೆಗಳಿಗೆ ಕೊಡುತ್ತೀಯೆ ಎಂಬ ಉದಾಹರಣೆಗಾಗಿ ಅವರಿಗೆ ವಿಶೇಷವಾಗಿ ಅಮೃತವನ್ನು ಹಂಚಿರುವೆ.

ದೇವ, ದೇವತೆಗಳಿಗೆ ಖಂಡಿತ ತಪ್ಪದೆ ಮೋಕ್ಷವೂ ಅಸುರರಿಗೆ ಅಂಧತಮಸ್ಸೂ ದೊರಕುವುದು ನಿಶ್ಚಿತ. ಯಾರಾದರೂ ದೈತ್ಯರು ತಮಗೆ ದೊರಕದ ಮೋಕ್ಷಕ್ಕಾಗಿ ಪ್ರಯತ್ನಿಸಿದಲ್ಲಿ ರಾಹುವಿಗೆಂತು ದುಃಖರೂಪ ಫಲ ದೊರಕಿತೋ ಅದರಂತೆಯೇ ಪ್ರಯತ್ನಿಸಿದ ಇತರ ದೈತ್ಯರಿಗೂ ದುಃಖಮಯವಾದ ಅಂಧತಮಸ್ಸೇ ದೊರಕುವುದು. ಇದು ಶ್ರುತಿ, ಸ್ಮೃತಿ, ಪುರಾಣಾದಿ ಶಾಸ್ತ್ರಗಳಲ್ಲಿ ಪ್ರಸಿದ್ಧವಿದೆ.

ಸ್ವಾಮಿ, ಈಗ ಕಲಿಯು ಬ್ರಹ್ಮದೇವರ ವರಬಲದ ಗರ್ವದಿಂದ ಅಜ್ಞಾನ ಮಿಥ್ಯಾಜ್ಞಾನ, ಸಂಶಯ ರೂಪಗಳಲ್ಲಿ ಪಿಶಾಚವು ಆವೇಶ ಹೊಂದುವಂತೆ ನಮ್ಮ ಮನಸ್ಸಿನ ಒಳಹೊಕ್ಕು ಕೆಲವು ಸಲ ನಮ್ಮ ಬುದ್ಧಿಯನ್ನು ಕಲಕಿ ಭ್ರಮೆಗೊಳಿಸುತ್ತಾನೆ. ಎಲ್ಲ ಪ್ರಜೆಗಳಿಗೂ ಕಾಲಬಲದಿಂದಲೂ ಮತ್ತು ಗೌತಮಮುನಿಗಳ ಶಾಪದಿಂದಲೂ ಮತಿಯು ದುರ್ಬಲವಾದ್ದರಿಂದ ಕಲಿಯು ಅವರಲ್ಲಿ ಸುಲಭವಾಗಿ ಒಳಹೊಕ್ಕು ಮನಸ್ಸನ್ನು ಕದಡಿ ಪೂರ್ಣವಾಗಿ ಭ್ರಮೆಗೊಳಿಸಿರುವನು. ಪರಶುಕ್ಲತ್ರಯರಲ್ಲಿ ಕಲಿಯ ಪ್ರಭಾವ ನಡೆಯದಾದ್ದರಿಂದ ಅವರ ತತ್ತ್ವಜ್ಞಾನಕ್ಕೆ ಅಪೋಹವಾಗಲಾರದು. ಕಲಿಯು ಹಾಲಾಹಲವಿಷ ದೊರಕಿದ ನೆಪದಲ್ಲಿ ಅಜ್ಞಾನ, ವಿಪರೀತಜ್ಞಾನ, ಸಂದೇಹ ರೂಪಗಳನ್ನು ತಾಳಿ ತತ್ತ್ವಜ್ಞಾನಕ್ಕೆ ವಿರುದ್ಧನಾಗಿ ಎಲ್ಲರನ್ನೂ ಬಾಧಿಸಹತ್ತಿದ್ದಾನೆ. ಬ್ರಹ್ಮದೇವರು ನಿನ್ನ ಆಜ್ಞೆಯಂತೆ ಅವನಿಗೆ ವರ ಕೊಟ್ಟಿದ್ದರ ಪ್ರಭಾವದಿಂದ ಕಲಿಯು ರುದ್ರ ದೇವರಲ್ಲೂ ಒಳಹೊಕ್ಕು ಅವರಿಂದ ವೈದಿಕಾಗಮಗಳಿಗೆ ವಿರುದ್ಧವಾದ ದೂಷಣ ಶಾಸ್ತ್ರಗಳನ್ನು ಬರೆಯಿಸಿದನು. ಅದರ ಸ್ಥಾಪನೆಗಾಗಿ ಕುಯುಕ್ತಿಗಳನ್ನು ವಿರಚಿಸಿದನು, ಅವುಗಳನ್ನು ನಿರಾಕರಿಸಿ ಸತ್ತ್ವಗಳನ್ನು ಪ್ರತಿಷ್ಠಾಪಿಸಲು ನಿನ್ನ ವಿನಃ ಮತ್ತಾರೂ ಸಮರ್ಥರಲ್ಲ. ಗೌತಮರಿಗೂ ಸಹ ಕಲಿಯ ಆವೇಶವಾಗಿದ್ದುದರಿಂದ ಅವರು ವೇದ ಶಾಸ್ತ್ರಾರ್ಥಜ್ಞಾನವು ನಷ್ಟವಾಗಲೆಂದು ಶಾಪಕೊಟ್ಟರೇ ವಿನಃ ಬೇರೆಯಲ್ಲ. ಇಂತು ಕಲಿಯು ಸರ್ವವ್ಯಾಪಿಯಾಗಿ ವೇದ-ಪಂಚರಾತ್ರಾದಿ ಶಾಸ್ತ್ರಗಳ ಸರಿಯಾದ ವಾದಗಳನ್ನು ಕೆಡಿಸಿ ನಿಜವಾದ ಅರ್ಥವನ್ನು ಮರೆಮಾಚಿ ಅಪಾರ್ಥಕ್ಕೆ ಅವಕಾಶಮಾಡಿಕೊಟ್ಟು ಸಜ್ಜನರನ್ನು ನೋಯಿಸಹತ್ತಿದ್ದಾನೆ. ಆದ್ದರಿಂದ ಮಹಾಪ್ರಭು, ನೀನು ಪುಣ್ಯಭೂಮಿಯಾದ ಭಾರತಾವನಿಯಲ್ಲಿ ಅವತರಿಸಿ, ವೇದಗಳನ್ನು ಸರಿಪಡಿಸಿ, ಅವುಗಳಿಗೆ ಸರಿಯಾದ ಅರ್ಥಗಳನ್ನು ನಿರ್ಣಯಿಸುವ ಬ್ರಹ್ಮಸೂತ್ರ, ಮಹಾಭಾರತ, ಪಂಚರಾತ್ರ, ಅಷ್ಟಾದಶ ಪುರಾಣಗಳೇ ಮೊದಲಾದ ಶ್ರೇಷ್ಠ ಶಾಸ್ತ್ರಗಳನ್ನು ರಚಿಸಿ ತತ್ತ್ವಜ್ಞಾನವನ್ನು ಬೋಧಿಸಿ ಪರಮಾನುಗ್ರಹ ಮಾಡಬೇಕು'' ಎಂದು ಪ್ರಾರ್ಥಿಸಿದರು.

''ಪ್ರಭು! ಕಲಿಯು ದೃಷ್ಟ್ಯಗೋಚರನಾಗಿದ್ದಾನೆ. ಅಂತೆಯೇ ಅವನಿರುವ ಎಡೆಯನ್ನರಿಯುವುದು ದುಸ್ಸಾಧ್ಯವಾಗಿದೆ. ಅವನಿಂತಹ ರೂಪವುಳ್ಳವನೆಂದು ಅನುಮಾನದಿಂದ ತರ್ಕಿಸಲು ಸಾಧ್ಯವಿಲ್ಲ. ಅವನು ಸಮಸ್ತ ಜಗದ (ಜನತೆಯ) ಮನದಲ್ಲಿ ಲೀನನಾಗಿದ್ದಾನೆ. ಅಂತಹ ಕಲಿಯನ್ನು ನೀನು ಸಚ್ಛಾಸ್ತ್ರವೆಂಬ ಶಸ್ತ್ರದಿಂದ ಸಂಹರಿಸಿ ನಿನ್ನ ಭಕುತ ಸಂದೋಹಕ್ಕೆ ಶಾಶ್ವತಾನಂದ (ಮೋಕ್ಷ)ವನ್ನು ದಯಪಾಲಿಸು. ನೀನೊರ್ವನೇ ಅಖಿಲ ಶಕ್ತಿ ಪೂರ್ಣನಾಗಿದ್ದೀಯೆ. ನಿನ್ನ ವಿನಃ ಅವನನ್ನು ಸಂಹರಿಸುವವರು ನಿಜವಾಗಿ ಬೇರೊಬ್ಬರಿಲ್ಲ. ಆದುದರಿಂದ ಭಗವಾನ್! ಅಜ್ಞಾನ ನಾಶಕ್ಕಾಗಿ ಸ್ವರೂಪಜ್ಞಾನವೇ ಶರೀರವಾಗುಳ್ಳ ನಾವು ನಿನಗೆ ಶರಣಾಗತರಾಗಿದ್ದೇವೆ''.

ಇಂತು ಬ್ರಹ್ಮಾದಿ ಸುರನಿಕರದಿಂದ ಪ್ರಾರ್ಥಿತನಾದ ಶ್ರೇಷ್ಠನೂ, ಅಪ್ರಮೇಯನೂ, ಅಜ್ಞಾನಲೇಶರಹಿತನೂ, ವಿಶೇಷಜ್ಞಾನಪೂರ್ಣ ಸ್ವರೂಪನೂ, ಆದ್ಯಂತರಹಿನೂ, ಕ್ಷಯರಹಿತ ಆನಂದಾದಿ ಗುಣಾಶ್ರಯನೂ (ಮುಕ್ತಾಶ್ರಯನೂ) ಆದ ಶ್ರೀಹರಿಪರಮಾತ್ಮನು ಧರೆಯೊಳಗೆ ಪ್ರಾದುರ್ಭೂತನಾದನು.

ಬ್ರಹ್ಮದೇವರ ಪುತ್ರರಾದ ವಸಿಷ್ಠರಿಗೆ ಶಕ್ತಿಯೆಂಬ ಮಗನಿದ್ದನು. ಅವನಿಗೆ ಪರಾಶರನೆಂಬ ಪುತ್ರನಾದನು. ಪರಾಶರನು ಶ್ರೀಹರಿಯು ತನಗೆ ಪುತ್ರನಾಗಬೇಕೆಂದು ತಪವನ್ನೆಸಗಿದನು. ಪರಾಶರನ ತಪಸ್ಸಿನಿಂದ ಮುದಗೊಂಡ ಭಗವಂತನು ಅವರಿಗೆ 'ನಿಮ್ಮ ಮನೋಭೀಷ್ಟವನ್ನು ಪೂರ್ಣಮಾಡುವೆ'ನೆಂದು ವರವಿತ್ತು ಇಂತೆಂದನು-''ನನ್ನ ಪರಮಭಕ್ತನಾದ ವಸುರಾಜನಿಗೆ

ಮಂಗಳಪ್ರದಳಾದ ಓರ್ವ ಮಗಳಿದ್ದಾಳೆ. ಅತ್ಯಂತ ಸುಂದರಿಯೂ, ರೂಪಸಿಯೂ ಆದ ಆ ಕನ್ಯೆಯು ಈವರೆಗೆ ಯಾರನ್ನೂ ಮದುವೆಯಾಗದೆ ನಾವಿಕರಾಜನ (ದಾಶನಾಯಕ) ಮನೆಯಲ್ಲಿ ಬೆಳೆಯುತ್ತಿರುವಳು. ಆ ವಸುರಾಜಕುವರಿಗೆ ಸತ್ಯವತೀ ಎಂದು ಹೆಸರು. ನಾನು ಅಜನಾಗಿದ್ದರೂ (ಜನ್ಮರಹಿತನಾಗಿದ್ದರೂ) ಸತ್ಯವತಿಯಲ್ಲಿ ನಿನಗೆ ಪುತ್ರನಾಗಿ ಅವತರಿಸುವೆನು''.

ವಸುಪುತ್ರಿಯಾದ ಸತ್ಯವತಿಯು ದಾಶಗೃಹದಲ್ಲಿ ಬೆಳೆಯುತ್ತಿರುವುದರ ಕಾರಣವನ್ನು ವಿವರಿಸುತ್ತ ಭಗವಂತನು ಮುಂದುವರೆದು ಪರಾಶರರಿಗೆ ಹೀಗೆ ಹೇಳಹತ್ತಿದನು: ''ನನ್ನ ಭಕ್ತನಾದ ವಸುರಾಜನು ಹಿಂದೊಮ್ಮೆ ಮೃಗಯಾರ್ಥವಾಗಿ ಅರಣ್ಯದಲ್ಲಿ ಸಂಚರಿಸುತ್ತಿರುವಾಗ ಮನದಲ್ಲಿ ತನ್ನ ಪತ್ನಿಯನ್ನು ನೆನೆಸಿದ್ದರಿಂದ ಕೂಡಲೇ ಅವನಿಗೆ ವೀರ್ಯಸ್ಖಲನವಾಯಿತು. ಆಗ ವಸುರಾಜನು ವೀರ್ಯವನ್ನು ಕರದಲ್ಲಿ ಧರಿಸಿ ಅದನ್ನು ತನ್ನ ಪತ್ನಿಗೆ ಕೊಡುವಂತೆ ಹೇಳಿ ಶ್ಯೇನ ಪಕ್ಷಿಯ ಕರದಲ್ಲಿ ಹಾಕಿದನು. ಅದು ಗಗನದಲ್ಲಿ ಹಾರಿಹೋಗುತ್ತಿರುವಾಗ ಬೇರೊಂದು ಶ್ಯೇನಪಕ್ಷಿಯು ಅದಕ್ಕೆದುರಾಗಿ ಅದರೊಡನೆ ಯುದ್ಧಕ್ಕೆ ಬಂದಿತು. ಶ್ಯೇನಪಕ್ಷಿಯು ಅನಿವಾರ್ಯವಾಗಿ ಯುದ್ಧಮಾಡುವ ಪ್ರಸಂಗ ಬಂದೊದಗಿತು. ಯುದ್ಧ ಮಾಡುತ್ತಿರುವಾಗ ಶ್ಯೇನಪಕ್ಷಿಯ ಕರದಲ್ಲಿದ್ದ ವಸುರಾಜನ ವೀರ್ಯವು ಯಮುನಾ ನದಿಯ ಜಲದಲ್ಲಿ ಬಿದ್ದಿತು. ಆಗ ಒಂದು ಹೆಣ್ಣು ಮೀನು ಆ ವೀರ್ಯವನ್ನು ನುಂಗಿಬಿಟ್ಟಿತು. ದಾಶರು (ನಾವಿಕರು) ಆ ಮೀನನ್ನು ಹಿಡಿದರು. ಅದರ ಗರ್ಭದಲ್ಲಿ ಒಂದು ಗಂಡು, ಒಂದು ಹೆಣ್ಣು ಹೀಗೆ ಅವಳಿ ಮಕ್ಕಳು ಕಂಗೊಳಿಸಿದರು. ದಾಶರು ಈ ವಿಚಿತ್ರವನ್ನು ಕಂಡು ಅಚ್ಚರಿಗೊಂಡು ಎಲ್ಲ ವಿಚಾರವನ್ನೂ ಅರಿಕೆ ಮಾಡಿ ಆ ಅವಳಿ ಮಕ್ಕಳನ್ನು ತಮ್ಮ ಸ್ವಾಮಿಯಾದ ದಾಶರಾಜನಿಗೆ ಸಮರ್ಪಿಸಿದರು. ದಾಶನಾಯಕನು ಆ ಅವಳಿ ಮಕ್ಕಳನ್ನು ತನ್ನ ಪ್ರಭುವಾದ ವಸುರಾಜನಿಗೆ ಅರ್ಪಿಸಿದನು. ವಸುರಾಜನು ಅವು ತನ್ನ ಮಕ್ಕಳೇ ಎಂದರಿತು ಪುತ್ರನನ್ನು ತಾನು ಸ್ವೀಕರಿಸಿ ಹೆಣ್ಣು ಶಿಶುವನ್ನು ದಾಶನಾಯಕನಿಗೆ ಕೊಟ್ಟನು. ವಸುಸುತನು ಮತ್ಸ್ಯನೆಂಬ ರಾಜನಾದನು. ಆ ಕನ್ಯೆಯೇ ಸತ್ಯವತೀ ಎಂಬ ಅಭಿಧಾನದಿಂದ ದಾಶನಾಯಕನ ಗೃಹದಲ್ಲಿ ಅಭಿವೃದ್ಧಿಸಿದಳು. ಆ ಕನ್ಯೆಯಲ್ಲಿ ನಾನು ನಿನಗೆ ಪುತ್ರನಾಗಿ ಅವತರಿಸುವೆನು'' ಎಂದು ಭಗವಂತನು ಆಜ್ಞಾಪಿಸಿ ವರವಿತ್ತು ಅಂತರ್ಧಾನ ಹೊಂದಿದನು.

ಚಕ್ರಧಾರಿಯಾದ ಶ್ರೀಹರಿ ಪರಮಾತ್ಮನ ಆಣತಿಯಂತೆ ಪರಾಶರಮುನಿಗಳು, ಸಮುದ್ರಗಾಮಿನಿಯೂ, ಸೂರ್ಯಪುತ್ರಿಯೂ ಆದ ಯಮುನೆಯನ್ನು ದಾಟಬಯಸುವ ಜನರನ್ನು ಯಮುನಾ ನದಿಯನ್ನು ಹರಿಗೋಲಿನಿಂದ ದಾಟಿಸುವ ಕಾರ್ಯದಲ್ಲಿ ತತ್ಪರಳಾಗಿದ್ದ ಸತ್ಯವತಿಯಿದ್ದಲ್ಲಿಗೆ ಬಂದು ತಾವೂ ನದಿಯನ್ನು ದಾಟಬಯಸುವುದಾಗಿ ಹೇಳಿ ಹರಿಗೋಲಿನಲ್ಲಿ ಕುಳಿತು ಹೊರಟು ಮಾರ್ಗಮಧ್ಯದಲ್ಲಿ ಸತ್ಯವತಿಯೊಡನೆ ರಮಿಸಿದರು. ಪರಾಶರ-ಸತ್ಯವತಿಯರು ರಮಿಸಿದ ಮೇಲೆ ಸತ್ಯವತಿಯಲ್ಲಿ ವಿಶುದ್ಧಚಿತ್ತನೂ, ಸದ್ ಜ್ಞಾನಪೂರ್ಣನೂ ಆದ ಭಗವಂತನು ಪರಾಶರರಿಗೆ ವರವಿತ್ತಂತೆ ವೇದವ್ಯಾಸರೂಪದಿಂದ ಪ್ರಾದುರ್ಭವಿಸಿದನು.

ಪರಮಾತ್ಮನು ಪರಾಶರರಿಂದ ಸತ್ಯವತಿಯಲ್ಲಿ ಪ್ರಾದುರ್ಭವಿಸಿದನೆಂದೇಕೆ ಹೇಳಬೇಕು? ಲೋಕರೂಢಿಯಂತೆ ಶುಕ್ರಶೋಣಿತ ಸಂಬಂಧದಿಂದ ಹುಟ್ಟಿದನೆಂದು ಏಕಾಗಬಾರದು? ಎಂಬುದನ್ನು ತಾತ್ಪರ್ಯ ನಿರ್ಣಯಕಾರರು ಅಧಿಕೃತ ವಾಣಿಯಿಂದ ನಿರೂಪಿಸಿದ್ದಾರೆ. ನಿರ್ದುಷ್ಟ ಹಾಗೂ ವಿಜ್ಞಾನ ಸುಖೈಕರೂಪನಾದ ಪರಮಾತ್ಮನು ಜನನರಹಿತನಾಗಿದ್ದರೂ ಅಯೋಗ್ಯ ಜನರನ್ನು ಮೋಹಗೊಳಿಸಲು ತೋರಿಕೆಗೆ ಓರ್ವ ಪುರುಷನಿಂದ ಸ್ತ್ರೀಯಲ್ಲಿ ಜನಿಸಿದವನಂತೆ ಕಾಣಿಸಿದನೇ ಹೊರತು ಬಲ-ಜ್ಞಾನ-ಆನಂದಾದಿ ಕಲ್ಯಾಣ ಗುಣದೇಹನಾದ ಆ ಸ್ವಾಮಿ ಶ್ರೀಹರಿಯು ಎಲ್ಲರಲ್ಲಿಯೂ ಯಾರಿಂದಲೂ ಜನಿಸುವುದಿಲ್ಲ. ''ಪ್ರಾದುರ್ಭಾವೋ ಹರೇಃ ಜನಿಃ'' ಎಂಬ ಪ್ರಮಾಣವಿರುವುದರಿಂದ ಯಾರನ್ನು ಅನುಗ್ರಹಿಸಬೇಕೆಂದು ಆ ಪರಮಾತ್ಮನು ಇಚ್ಛಿಸುವನೋ ಕೂಡಲೇ ಅಲ್ಲಿ ಪ್ರಾದುರ್ಭವಿಸುವನು. ಇದೇ ಭಗವಂತನ ಅಚಿಂತ್ಯಾದ್ಭುತ ಶಕ್ತಿ ಮತ್ತು ಮಹಿಮೆಯಾಗಿದೆ.

ಮೇಲಿನ ವಿಚಾರಕ್ಕೆ ಒಂದು ಸುಂದರ ಸಂದರ್ಭವನ್ನು ಉದಾಹರಣೆಯಾಗಿ ಹೇಳಬಹುದು; ಹಿಂದೆ ಭಕ್ತ ಪ್ರಹ್ಲಾದನಿಗೆ ಒಲಿದು ಪ್ರಭುವು ಲೋಕವಿಲಕ್ಷಣ ಶ್ರೀನೃಸಿಂಹರೂಪದಿಂದ ಸ್ತಂಭದಲ್ಲಿ ಪ್ರಾದುರ್ಭವಿಸಿದನಲ್ಲವೆ? ಈಗಲೂ ಹಾಗೆಯೇ ಸರ್ವತ್ರವ್ಯಾಪಕನೂ, ನಿತ್ಯನೂ (ಅವಿನಾಶಿ ಶರೀರಸ್ವರೂಪನೂ) ಆದ ಶ್ರೀಹರಿಯು ಸ್ತ್ರೀಯಲ್ಲಿ ಆವಿರ್ಭವಿಸಿದರೂ ಶುಕ್ರಶೋಣಿತವೆಂಬ ಮಲೋತ್ಪನ್ನನಾದವನಂತೆ ಅಭಕ್ತ ಜನರನ್ನು ಮೋಹಗೊಳಿಸಲು ನಟಿಸಿದರೂ ಆ ಪ್ರಭುವು ಮಲೋತ್ಪನ್ನನಲ್ಲ. ಸ್ತ್ರೀ-ಪುಂಸಂಬಂಧದಿಂದ ಶ್ರೀಹರಿಯು ಶುಕ್ರಶೋಣಿತ ಸಂಬಂಧದಿಂದ ಜನಿಸಿದನೆಂದು ಪಾಪಿ ಜನರು ತಿಳಿಯುವರು. ಜ್ಞಾನಿಗಳು ಪರಮಾತ್ಮನ ಮಹಾತ್ಮ್ಯವನ್ನು ಬಲ್ಲವರಾದುದರಿಂದ ಅಜನೂ, ಗುಣಪೂರ್ಣವಿಗ್ರಹನೂ ಆದ ಶ್ರೀಹರಿಯು ಪರಾಶರ-ಸತ್ಯವತೀದೇವಿಯರನ್ನು ಅನುಗ್ರಹಿಸಲು ಅವರಲ್ಲಿ ಪುತ್ರತ್ವೇನ ಪ್ರಾದುರ್ಭವಿಸಿದ್ದಾನೆ ಎಂದೇ ತಿಳಿಯುವರು. ಇಂತು ಸರ್ವಜಗಜ್ಜನಕನೂ, ಜ್ಞಾನಕಿರಣ ಮಂಡಲ ಶೋಭಿತನೂ ಆದ ಶ್ರೀಪ್ರಭುವು ಸಹಸ್ರ ಲಕ್ಷಾಧಿಕ ತೇಜಸ್ಸಿನಿಂದ ಬೆಳಗುತ್ತಾ ಬ್ರಹ್ಮಾಂಡದ ಹೊರಒಳಗನ್ನು ಪ್ರಕಾಶಗೊಳಿಸುತ್ತಾ ಜಲಾವೃತ ಯಮುನಾ ದ್ವೀಪ ಪ್ರದೇಶದಲ್ಲಿ ಕಂಗೊಳಿಸಿದನು.

ಶ್ರೀಹರಿ ಪರಮಾತ್ಮನು ಎಣಿಸಲಸದಳವಾದ ಲೋಕ ವಿಲಕ್ಷಣವಾದ ಉತ್ತಮ ಗುಣಸಾಗರನು. ಅವನು ಜಗತ್ಪ್ರಭುವು (ಸಮರ್ಥನು), ಬ್ರಹ್ಮ-ರುದ್ರೇಂದ್ರಾದಿ ಸಮಸ್ತರಿಗೆ ಸ್ವಾಮಿಯು ಸಮಸ್ತ ದೋಷವಿದೂರ ಶುಭಗುಣ ವಿಗ್ರಹನವನು. ವಿಶುದ್ಧ ಇಂದ್ರನೀಲಮಣಿ ಕಾಂತಿಯಂತೆ ಕಂಗೊಳಿಸುವ ಶರೀರಶೋಭೆಯುಳ್ಳವನು. ಆರಕ್ತ ನೇತ್ರ, ಅಧರ, ಕರ, ನಖ, ಪಾದಪದ್ಮ ವಿರಾಜಿತನು. ಹಸ್ತಪಾದಗಳಲ್ಲಿ ಚಕ್ರ-ಶಂಖ-ಪದ್ಮರೇಖಾ ವಿಶೋಭಿತನು. ಅವನು ದಿನಮಣಿಯ ಉತ್ತಮ ಕಿರಣಗಳಂತೆ ಹೊಳೆಯುವ ಚಿಗರಿಯ ಚರ್ಮವನ್ನು ಧರಿಸಿದ್ದಾನೆ. ಶಿರಸ್ಸಿನ ಮಧ್ಯಭಾಗದಲ್ಲಿ ಮಿಂಚಿನಗೊಂಚಲಿನಂತಿರುವ ನಿರ್ಮಲ ಜಟೆಗಳಿಂದ ಪ್ರಕಾಶಮಾನವಾದ ಶಿಖೆಯಿಂದ ಬೆಡಗುಗೊಂಡಿದ್ದಾನೆ. ಶಂಖದಂತೆ ಮೂರು ರೇಖೆಗಳಿಂದ ಶೋಭಿಸುವ ಕಂಠ, ಕಮಲದಂತೆ ವಿಸ್ತಾರವಾದ ವಕ್ಷಸ್ಥಳಗಳಿಂದ ಪರಿಶೋಭಿಸುತ್ತ, ಅನಂತ ಚಂದ್ರಮರನ್ನು ಮೀರಿಸಿದ ಕಾಂತಿಯಿಂದ ಹೊಳೆಯುವ ನಿರ್ದುಷ್ಟವಾದ ಮುಖಾರವಿಂದದಿಂದ ಸಮಸ್ತ ವೇದಗಳನ್ನೂ ಹೇಳುತ್ತ, ಜ್ಞಾನ-ಅಭಯ-ಮುದ್ರಾಂಕಿತ ಹಸ್ತಗಳಿಂದಲೂ, ಮೌಂಜೀ, ಯಜ್ಞೋಪವೀತಾದಿಗಳಿಂದಲೂ ಉಲ್ಲಸಿತನಾಗಿ ತನ್ನ ಸುಪ್ರಸನ್ನ ದೃಷ್ಟಿಯಿಂದ ಅಜ್ಞಾನವೆಂಬ ಮಹಾಸರ್ಪದಷ್ಟವಾದ ಭಕ್ತಸಂದೋಹವನ್ನು ಉಜ್ಜೀವನಗೊಳಿಸುವ ಶ್ರೀವೇದವ್ಯಾಸದೇವನು ರಮಾಬ್ರಹ್ಮಾದಿ ಸಮಸ್ತರನ್ನೂ ಅತಿಕ್ರಮಿಸಿ ಕಂಗೊಳಿಸಿದನು. ಶ್ರೀವೇದವ್ಯಾಸದೇವನು ತನ್ನ ಮಾತಾಪಿತೃಗಳನ್ನು ರಕ್ಷಿಸಬೇಕೆಂಬ ಬಯಕೆಯಿಂದ ಜ್ಞಾನವನ್ನು ಅನುಗ್ರಹಿಸಿ, ಅವರಿಗೆ ಸ್ಮರಣ ಮಾತ್ರದಿಂದ ಮೈದೋರಿ ಸಲಹುವುದಾಗಿ ವರವನ್ನು ದಯಪಾಲಿಸಿದನು.

ಶ್ರೀ ಚತುರಾನನಾದಿ ಸಕಲ ಸುರ-ಮುನಿಜನರು ಹಿಂಬಾಲಿಸಿ ಬರುತ್ತಿರಲು ಶ್ರೀಕೃಷ್ಣದ್ವೈಪಾಯನರು ಮೇರುಪರ್ವತಕ್ಕೆ ಬಿಜಯ ಮಾಡಿಸಿ ಸೃಷ್ಟಿಯ ಆದಿಯಲ್ಲಿ ಎಂತು ವೇದಾದಿ ವಿದ್ಯೆಗಳನ್ನು ಬ್ರಹ್ಮದೇವರಿಗೆ ಉಪದೇಶಮಾಡಿದರೋ ಹಾಗೆಯೇ ಸಕಲ ವೇದಗಳನ್ನೂ (ಎತ್ತಿ) ಉದ್ಧರಿಸಿ ಸಕಲದೇವತೆಗಳು ಮತ್ತು ಮುನಿಗಳಿಗೆ ಉಪದೇಶ ಮಾಡಿದರು. ಅನಂತರ ಶ್ರೀವೇದವ್ಯಾಸರು ವೇದಾನುಸಾರವಾಗಿ ಶಾಸ್ತ್ರಗಳನ್ನು ರಚಿಸಿದರು ಮತ್ತು ವೇದಾರ್ಥನಿರ್ಣಾಯಕ ಬ್ರಹ್ಮಸೂತ್ರಗಳನ್ನು ರಚಿಸಿದರು. ಬ್ರಹ್ಮ-ರುದ್ರಾದಿ ಸುರನಿಕರವು ಮತ್ತು ಮುನಿಶ್ರೇಷ್ಠರೂ ಸಹ ಅವೆಲ್ಲವನ್ನೂ ಶ್ರೀವೇದವ್ಯಾಸರಿಂದ ಕೇಳಿ (ಉಪದೇಶ ಮೂಲಕ) ತಿಳಿದರು. ಶ್ರೀಬಾದರಾಯಣರು ಸಮಸ್ತ ಶಾಸ್ತ್ರಗಳ ದೃಷ್ಟಾಂತರೂಪವಾಗಿ ವೇದಗಳಿಗಿಂತಲೂ ಉತ್ತಮವಾದ ಮಹಾಭಾರತವೆಂಬ ಹೆಸರಿನ ಗ್ರಂಥವನ್ನು ರಚಿಸಿದರು. ಅದನ್ನು ಕಮಲಸಂಭವ-ಉಮಾಧವಾದಿ ಸುರಜನರು ವೇದವ್ಯಾಸರ ಮುಖದಿಂದ ಶ್ರವಣ ಮಾಡಿದರು. ರುದ್ರಾದಿ ದೇವತೆಗಳ ಮನಸ್ಸಿನಲ್ಲಿ ವಾಸಮಾಡುತ್ತಿದ್ದ

ಕಲಿಯು ಷಡ್ಗುಣೈಶ್ವರ್ಯ ಸಂಪನ್ನರಾದ ಶ್ರೀವೇದವ್ಯಾಸ ದೇವರ ಮುಖಕಮಲದಿಂದ ಹೊರಹೊಮ್ಮಿದ ವೇದ-ಭಾರತ-ಬ್ರಹ್ಮಸೂತ್ರಾದಿ ಸದ್ವಾಕ್ಯ ರೂಪ ಶರಾಹತಿಯಿಂದ ಛೇದಿತ ಶಿರಸ್ಕನಾಗಿ ಮೃತನಾದನು. ದೇವತೆಗಳು ಸಮೀಚೀನ ಜ್ಞಾನಸುಧಾರಸವನ್ನು ಪಾನಮಾಡಿ ತೃಪ್ತರಾದರು. ದೇವತೆಗಳ ಮನಸ್ಸಿನಿಂದ ನಿರ್ಗಮಿಸಿದ ಮೇಲೆ ಕಲಿಯು ತ್ರಿವಿಧರಾದ ಮನುಷ್ಯರು ಮತ್ತು ಅಸುರರಲ್ಲಿ ರೂಪವಿಶೇಷಗಳಿಂದಿದ್ದನು. ಕಲಿಯು ಇನ್ನೂ ಉಳಿದೇ ಇದ್ದುದರಿಂದ ಮನುಷ್ಯೋತ್ತಮರಲ್ಲಿ ನೆಲೆಸಿರುವ ಅವನನ್ನು ನಾಶಪಡಿಸಬೇಕೆಂದು ಯೋಚಿಸಿ ಪ್ರಭುಗಳಾದ ಶ್ರೀವೇದವ್ಯಾಸದೇವರು ಕಾಲಬಲದಿಂದ, ಅತ್ಯಲ್ಪ ಆಯಸ್ಸು, ಬುದ್ಧಿ, ವರ್ಣಾಶ್ರಮೋಚಿತ ಕರ್ಮಾಚರಣೆಗಳನ್ನು ವಿಚಾರಮಾಡಿ ಅದಕ್ಕೆ ತಕ್ಕಂತೆ ಮೂಲವೇದಗಳನ್ನು ನಾಲ್ಕು ಭಾಗವಾಗಿ ಅಂದರೆ ಋಗ್ಯಜುಸ್ಸಾಮಾಥರ್ವಣ ಭೇದದಿಂದ ವಿಭಾಗ ಮಾಡಿದರು. ಮತ್ತು ಭಾಗವತ ಪುರಾಣವನ್ನು ವಿರಚಿಸಿದರು. ಎಲ್ಲಿ ಎಲ್ಲಿ ಯಾರು ಯಾರು ಅಜ್ಞಾನವೆಂಬ ಕತ್ತಲಿನಿಂದಾವೃತರಾಗಿ ಕಷ್ಟ ಪಡುತ್ತಿದ್ದರೋ ಅಲ್ಲಲ್ಲಿಗೆ ಶ್ರೀವೇದ-ವ್ಯಾಸದೇವರು ದಯಮಾಡಿಸಿ ಬ್ರಹ್ಮಸೂತ್ರಾದಿಗಳಲ್ಲಿ ಉಕ್ತವಾದ ನಿರ್ಣಯರೂಪ ಸದ್ವಾಕ್ಯಗಳಿಂದ ಜನರ ಅಜ್ಞಾನವನ್ನು ಪರಿಹರಿಸಿ ಅನುಗ್ರಹ ಮಾಡಿದರು.

ಜನತೆಯ ಅಜ್ಞಾನವನ್ನು ತಮ್ಮ ದಿವ್ಯ ಜ್ಞಾನೋಪದೇಶದಿಂದ ಕಳೆದು ಅನುಗ್ರಹಿಸುತ್ತಿದ್ದ ಶ್ರೀವೇದವ್ಯಾಸ ದೇವರು ಮಾರ್ಗಮಧ್ಯದಲ್ಲಿ ಒಂದು ಕೀಟವನ್ನು (ಹುಳುವಾಗಿ ಜನಿಸಿದ್ದ ಪುರುಷನನ್ನು) ಕಂಡರು. ಆ ಕೀಟವು ಹಿಂದೆ ಭಗವದ್ಭಕ್ತನಾಗಿದ್ದ ಶೂದ್ರನಾಗಿತ್ತು. ಅವನು ಅತ್ಯಂತ ಲೋಭಿಯಾಗಿದ್ದುದರ ಫಲವಾಗಿ ಈಗ ಕೀಟಯೋನಿಯಲ್ಲಿ ಜನಿಸಿದ್ದನು. ಶ್ರೀವೇದವ್ಯಾಸರು ''ತುಚ್ಛವಾದ ಕೀಟದೇಹವನ್ನು ತ್ಯಜಿಸಿ ರಾಜನಾಗು'' ಎಂದರು. ಕೀಟವು ಅದಕ್ಕೆ ಒಪ್ಪಲಿಲ್ಲವಾದ್ದರಿಂದ ಭಕ್ತವತ್ಸಲರೂ, ಕೃಪಾಪಾರಾವಾರರೂ ಆದ ಶ್ರೀವೇದವ್ಯಾಸರು ಆ ಕೀಟಕ್ಕೆ ಅನುಗ್ರಹಿಸಲು ಅದಕ್ಕೆ ಕ್ಷತ್ರಿಯತ್ವವನ್ನು ದಯಪಾಲಿಸಿ ಅದನ್ನು ರಾಜನನ್ನಾಗಿ ಮಾಡಿದರು. ಸಕಲ ನೃಪತಿಗಳೂ ಆ ಕೀಟರಾಜನಿಗೆ ವೈಶ್ಯರಂತೆ ಕಪ್ಪಕಾಣಿಕೆಗಳನ್ನು ನೀಡಿದರು. ಅನಂತರ ಶ್ರೀವೇದವ್ಯಾಸರು ಕೀಟರಾಜನನ್ನು ನೋಡಿ ''ನಾನು ನಿನಗೆ ಈಗಲೇ ಮೋಕ್ಷವನ್ನು ಅನುಗ್ರಹಿಸಲು ಸಮರ್ಥನಾಗಿದ್ದೇನೆ. ಆದರೆ ಚಾತುರ್ವರ್ಣ್ಯದಲ್ಲಿ ಬ್ರಾಹ್ಮಣಜನ್ಮದಲ್ಲಿ ಜ್ಞಾನವನ್ನು ಸಂಪಾದಿಸಿ ನಂತರ ನನ್ನ ಪ್ರಸಾದದಿಂದ ಮೋಕ್ಷವನ್ನು ಪಡೆಯಬೇಕೆಂದು ನನ್ನ ಸಂಕಲ್ಪ ಮತ್ತು ನಿಯಮವಿದೆ. ಆ ನಿಯಮವನ್ನು ಕಾಪಾಡಬೇಕಾಗಿರುವುದರಿಂದ ನಿನಗೀಗ ಕ್ಷತ್ರಿಯತ್ವವನ್ನು ದಯಪಾಲಿಸಿ ಈ ಮಹೀಮಂಡಲಕ್ಕೆ ನಿನ್ನನ್ನು ಚಕ್ರವರ್ತಿಯನ್ನಾಗಿ ಮಾಡಿದ್ದೇನೆ. ನೀನು ಮುಂದೆ ವಿಪ್ರನಾಗಿ ಜನಿಸಿ ಜ್ಞಾನಮಾರ್ಗದಿಂದ ನನ್ನನ್ನು ಆರಾಧಿಸಿ ನನ್ನ ಪ್ರಸಾದದಿಂದ ಮುಕ್ತನಾಗುತ್ತೀಯೆ'' ಎಂದು ಅಪ್ಪಣೆ ಮಾಡಿ ಕೀಟರಾಜನಿಗೆ ನಿರ್ಮಲ ಜ್ಞಾನವನ್ನು ಉಪದೇಶ ಮಾಡಿದರು. ಬಹುಕಾಲ ಭೂಮಂಡಲವನ್ನು ಪರಿಪಾಲಿಸಿ ಕೀಟರಾಜನು ಕೊನೆಗೆ ಆ ದೇಹವನ್ನು ತ್ಯಜಿಸಿ ವಿಪ್ರನಾಗಿ ಜನಿಸಿದನು. ಮತ್ತು ಮೋಕ್ಷಸಾಧಕವಾದ ಶ್ರೀಹರಿತತ್ತ್ವಜ್ಞಾನ ಸ್ವಭಾವನಾಗಿ, ಶ್ರೀಹರಿಭಕ್ತಿಯ ಪ್ರಭಾವದಿಂದ ಮೋಕ್ಷವನ್ನು ಪಡೆದನು. ಬ್ರಹ್ಮಾದಿ ದೇವತೆಗಳಿಗೆ ಸ್ವಾಮಿಯಾದ ಶ್ರೀವೇದವ್ಯಾಸ ರೂಪಿ ಶ್ರೀಹರಿಯು ಕೀಟವನ್ನು ಅನುಗ್ರಹಿಸಿದಂತೆಯೇ ಸಂಸಾರಬಂಧನದಲ್ಲಿ ಬಳಲುತ್ತಿರುವ ಅನೇಕ ಭಕ್ತಜನರನ್ನು ಬಂಧಕವಾದ ಸಂಸಾರಚಕ್ರದಿಂದ ಬಿಡುಗಡೆ ಮಾಡಿ ಶಾಶ್ವತಸುಖ ರೂಪವಾದ ಮೋಕ್ಷವನ್ನು ದಯಪಾಲಿಸಿದ್ದಾನೆ. ಇದರಂತೆ ಅನೇಕ ಕಾರ್ಯಗಳನ್ನು ಭಗವಾನ್ ಶ್ರೀವೇದವ್ಯಾಸರು ಎಸಗಿದ್ದಾರೆ. ಅವು ಮನಸ್ಸಿನಿಂದ ಚಿಂತಿಸಲೂ ಅಸಾಧ್ಯವಾದುದಾಗಿವೆ.

ಅನಂತರ ಶ್ರೀರುದ್ರದೇವರು ಶ್ರೀವೇದವ್ಯಾಸದೇವರ ಪುತ್ರರಾಗಿ ಅವತರಿಸಬೇಕೆಂದು ಆಶಿಸಿ ಶ್ರೀವೇದವ್ಯಾಸರನ್ನು ಕುರಿತು ಮಹತ್ತಾದ ತಪಸ್ಸನ್ನೆಸಗಿದರು. ಅವರ ಭಕ್ತಿಗೆ ಮೆಚ್ಚಿದ ವೇದವ್ಯಾಸರು ರುದ್ರದೇವರಿಗೆ ಒಲಿದು ''ವತ್ಸ! ರುದ್ರ, ನೀನು ಆಶಿಸುವಂತೆ ನಿನಗೆ ಜಗತ್ತಿನಲ್ಲಿ ಮಹತ್ತ್ವವನ್ನು ತಂದುಕೊಡಲು ನೀನೇ ನನಗೆ ಪುತ್ರನಾಗಬೇಕೆಂದು ನಿನ್ನನ್ನು ಕುರಿತು ತಪಸ್ಸು ಮಾಡಿ ನಿನ್ನಿಂದ ವರವನ್ನು ಪಡೆದು ನಿನ್ನನ್ನು ಪುತ್ರನನ್ನಾಗಿ ಪಡೆದು ಅನುಗ್ರಹ ಮಾಡುವೆನು'' ಎಂದು ವರವನ್ನು

ಕರುಣಿಸಿದರು. ಭಕ್ತಪರಾಧೀನರೂ, ಕರುಣಾಸಾಗರರೂ ಆದ ಶ್ರೀವೇದವ್ಯಾಸದೇವರು ಅದರಂತೆ ರುದ್ರದೇವರನ್ನು ಕುರಿತು ತಪಸ್ಸು ಮಾಡಿ ಮೊದಲೇ ಉಮಾಪತಿಗೆ ವರವಿತ್ತಿದ್ದಂತೆ, ಅಭಯವಿತ್ತಿದ್ದಂತೆ ರುದ್ರದೇವರಿಂದ ವರ ಪಡೆದು ಅವರನ್ನು ಪುತ್ರರನ್ನಾಗಿ ಪಡೆದರು. ಶ್ರೀವೇದವ್ಯಾಸ ದೇವರು ದೈತ್ಯರನ್ನು ಮೋಹಗೊಳಿಸಲು ಹಾಗೆ ನಟಿಸಿದರು. ಇದರಂತೆಯೇ ವೇದವ್ಯಾಸರು ತಮ್ಮ ಇತರ ಅವತಾರಗಳಲ್ಲಿಯೂ ರುದ್ರ ದೇವರಿಲ್ಲಿ ಅನುಗ್ರಹ ಮಾಡಲೂ, ಅಸುರ ಸ್ವಭಾವದವರನ್ನು ಮೋಹಗೊಳಿಸಲೂ, ಅವರಲ್ಲಿ ವಿಪರೀತಜ್ಞಾನ ಹುಟ್ಟಿಸಲೂ ಸಹ ಸ್ವಯಂ ದೋಷ ಲೇಶರಹಿತರಾಗಿದ್ದರೂ ಕಾಮಾದಿ-ದೋಷವಿದ್ದವರಂತೆ, ಪುತ್ರೇಚ್ಛಾದಿ ದೋಷವುಳ್ಳವರಂತೆ ಅಂದರೆ ತಮ್ಮಲ್ಲಿ ಯಾವ ದೋಷಗಳಿಲ್ಲದಿದ್ದರೂ, ಇದ್ದವರಂತೆ ತೋರಿಸಿದ್ದಾರೆ. ಹೀಗೆ ತೋರಿಕೆಗೆ ದೋಷವಿದ್ದವರಂತೆ ನಟಿಸಿದ ಮಾತ್ರದಿಂದ ಸಾಕ್ಷಾತ್ ಶ್ರೀಹರಿಯ ಅವತಾರರಾದ ಶ್ರೀವೇದವ್ಯಾಸದೇವರಿಗೆ ಯಾವುದೇ ದೇಶಕಾಲಗಳಲ್ಲಿಯೂ, ಎಲ್ಲಿಯೂ ದೋಷಲೇಶವಿಲ್ಲವೆಂದು ನಿರ್ಣಯಾದಿ ಶಾಸ್ತ್ರ-ಗ್ರಂಥಗಳಿಂದ ಸಿದ್ಧವಾಗಿದೆ.

''ನ ಕರ್ಮಣಾ ಲಿಪ್ಯತೇ ಪಾಪಕೇನ'', ''ನ ಸ್ತ್ರೀಕೃತಂ ಕಶ್ಮಲಮಶ್ನುವೀತ'' ಮುಂತಾದ ಶ್ರುತಿ-ಸ್ಮೃತಿಗಳಲ್ಲಿ ಪ್ರಸಿದ್ಧ-ವಾಗಿರುವ ಭಗವನ್ಮಹಿಮಾ ವಿಚಾರವು ನಿರ್ಣಯ ಗ್ರಂಥದಲ್ಲಿ ''ಹಿ'' ಎಂಬ ಪದದಿಂದ ನಿರೂಪಿತವಾಗಿದೆ.

ಇದಾದನಂತರ ಒಂದು ದಿನ ಶ್ರೀವೇದವ್ಯಾಸರು ಅರಣಿಮಥನ ಮಾಡುತ್ತಿರುವಾಗ ಘೃತಾಚೀ ಎಂಬ ಅಪ್ಸರೆಯು ಹೆಣ್ಣುಗಿಳಿಯ ರೂಪತಾಳಿ ಅವರೆದುರು ಬಂದಳು. ಆಗ ಕಾಮರಹಿತರಾಗಿದ್ದರೂ ಅಪೇಕ್ಷೆಯುಳ್ಳವರಂತೆ ಅವಳನ್ನು ಕಾಮಿಸಿದವರಂತೆ ನಟಿಸಿದರು. ಆಗ (ಅರಣಿಮಥನ ಕಾಲದಲ್ಲಿ) ವೇದವ್ಯಾಸ ದೇವರಿಗೆ ವೀರ್ಯಪತನವಾಯಿತು. ಅದನ್ನು ಧರಿಸಿದ ಗಿಳಿರೂಪದ ಘೃತಾಚಿಯು ರುದ್ರದೇವರನ್ನು ಮಗುವಾಗಿ ಪ್ರಸವಿಸಿದಳು ಮತ್ತು ಪುತ್ರನಿಗೆ 'ಶುಕ' ಎಂದೇ ನಾಮಕರಣ ಮಾಡಬೇಕೆಂದು ಪ್ರಾರ್ಥಿಸಿದಳು. ವೇದವ್ಯಾಸರು ಮಗನಿಗೆ ಶುಕ ಎಂದು ನಾಮಕರಣ ಮಾಡಿದರು. ಅರಣಿ ಮಥನ ಕಾಲದಲ್ಲಿ ವೇದವ್ಯಾಸರಿಗೆ ರೇತಃಪಾತವಾಯಿತೆಂಬ ಕಥೆಯು ಅಸುರಜನ ಮೋಹನಾರ್ಥವೇ ಹೊರತು ಅಪ್ರಾಕೃತ ಶರೀರರೂ, ಪರಬ್ರಹ್ಮ ಸ್ವರೂಪರೂ, ದೋಷದೂರರೂ, ''ನ ಕರ್ಮಣಾಲಿಪ್ಯತೇ ಪಾಪಕೇನ'', ''ನ ಸ್ತ್ರೀ ಕೃತಂ ಕಶ್ಮಲಮಶ್ನುವೀತ'' ಇತ್ಯಾದಿ ಶ್ರುತಿ ಸ್ಮೃತಿಗಳಿಂದ ಜೇಗೀಯಮಾನ ಮಹಾಮಹಿಮರಾದ ಶ್ರೀಕೃಷ್ಣದ್ವೈಪಾಯನರಿಗೆ ರೇತಃಪಾತವಾಗಲೀ, ಸ್ತ್ರೀಸಂಬಂಧಿ ಕಾಮಮೋಹಾದಿಗಳಾಗಲೀ ಇಲ್ಲ. ಸಾಮಾನ್ಯವಾಗಿ ಪ್ರಾಕೃತ ಶರೀರಿಗಳಾದ ಮನುಷ್ಯರಿಗೆ ಮನುಷ್ಯ ಸ್ತ್ರೀ ದರ್ಶನದಿಂದ ಕಾಮೋತ್ಪತ್ತಿಯಾಗಬಹುದಾದರೂ ಶುಕ ಸ್ತ್ರೀ ದರ್ಶನದಿಂದ ಮನುಷ್ಯರಿಗೂ ಕಾಮೋತ್ಪತ್ತಿಯಾಗುವುದು ಎಲ್ಲೂ ಕಂಡುಬಂದಿಲ್ಲ ಎಂಬ ಯುಕ್ತಿಯನ್ನು ''ಶುಕೀಂ ಹಿ ಭೂತ್ವಾ'' ಎಂಬಲ್ಲಿನ ''ಹಿ'' ಶಬ್ದವು ಸೂಚಿಸುತ್ತದೆ. ಶ್ರೀವೇದವ್ಯಾಸರು ಅರಣಿಮಥನ ಮಾಡುತ್ತಿರುವಾಗ ಘೃತಾಚೀ ಎಂಬ ಅಪ್ಸರ ಸ್ತ್ರೀಯು ಹೆಣ್ಣುಗಿಳಿ ರೂಪಧರಿಸಿ ಅವರ ಮುಂದೆ ಸುಳಿದಳು. ರುದ್ರದೇವರಿಗೆ ವರವಿತ್ತಂತೆ ಅವರನ್ನು ಪುತ್ರರನ್ನಾಗಿ ಪಡೆದು ಅನುಗ್ರಹಿಸಲು ಶ್ರೀವೇದವ್ಯಾಸರು ಅರಣಿಮಥನ ಕಾಲದಲ್ಲಿ (ಅವಳೊಡನೆ ರಮಿಸಿ) ಪ್ರಾಕೃತರೇತಸ್ಸನ್ನು ಸೃಷ್ಟಿಸಿದರು. ಅದು ಅಪ್ರಾಕೃತ ಭಗವತ್ಸಂಬಂಧಿಯಾದುದಲ್ಲ. ಪ್ರಾಕೃತರೇತಸ್ಸನ್ನು ಶುಕಸ್ತ್ರೀ ಧರಿಸಿದ್ದರಿಂದ ರುದ್ರದೇವರು ಪುತ್ರರಾಗಿ ಜನಿಸಿದರು. ಅರಣಿ ಮಥನ ಕಾಲದಲ್ಲಿ ಜನಿಸಿದ ಅವರಿಗೆ ಶುಕ ಎಂದು ನಾಮಕರಣ ಮಾಡಿದರು ಎಂದು ಹೇಳುವುದು ಶಾಸ್ತ್ರ ಸಮ್ಮತವಾಗಿದೆ. ಇದು ತತ್ವಮಾರ್ಗದಲ್ಲಿ ಅಧಿಕಾರಿಗಳಲ್ಲದ, ಅಯೋಗ್ಯರಾದ ಅಸುರರನ್ನು ಮೋಹಗೊಳಿಸಲು ಭಗವಂತ ಮಾಡಿದ ಲೀಲೆಯಾಗಿದೆ. ಇಲ್ಲದಿದ್ದರೆ ''ನ ಸ್ತ್ರೀಕೃತಂ ಕಶ್ಮಲಮಶ್ನುವೀತ'' ಎಂಬ ಸ್ಪಷ್ಟ ವಚನಕ್ಕೆ ವ್ಯಾಘಾತ ಉಂಟಾಗುತ್ತದೆ.

ಶ್ರೀಹರಿಯಲ್ಲಿ ಸಾಕ್ಷಾತ್ ಉಪದೇಶ ಪಡೆಯಲು ತಾರತಮ್ಯಾನುಸಾರ (ಯೋಗ್ಯತಾನುಸಾರ) ದೇವತೆಗಳೇ ಅಧಿಕಾರಿಗಳಾದುದರಿಂದ ಬೇರೆ ಬೇರೆ ದೇವತೆಗಳು ಅನೇಕ ಋಷಿ ಮುನಿಗಳಲ್ಲಿ ಆವಿಷ್ಟರಾಗಿ ತಾರತಮ್ಯಾನುಸಾರವಾಗಿ

ಶ್ರೀವೇದವ್ಯಾಸರಿಂದ ಜ್ಞಾನವನ್ನು ಪಡೆದು ಅನುಗೃಹೀತರಾದ ಪ್ರಕಾರವು ತಾತ್ಪರ್ಯ ನಿರ್ಣಯದಲ್ಲಿ ಹೃದಯಂಗಮ-ವಾಗಿ ನಿರೂಪಿತವಾಗಿದೆ.

ಶ್ರೀವೇದವ್ಯಾಸದೇವರನ್ನು ಸಂಸೇವಿಸಲೂ ಅವರಿಂದ ಸರ್ವವಿಷಯಕ ಜ್ಞಾನವನ್ನು ಪಡೆಯಲೂ ಮುಖ್ಯಾಧಿಕಾರಿಗಳು ಶ್ರೀವಾಯುದೇವರು. ಅಂತೆಯೇ ಅವರು ಶ್ರೀಬಾದರಾಯಣರ ಸೇವಾರ್ಥವಾಗಿ ವ್ಯಾಸಪುತ್ರರಾದ ಶ್ರೀಶುಕಾಚಾರ್ಯರಲ್ಲಿ ಪ್ರವೇಶ ಮಾಡಿದರು (ಆವಿಷ್ಟರಾದರು). ಶ್ರೀವೇದವ್ಯಾಸದೇವರು ಶುಕಾಂತರ್ಗತ ವಾಯುದೇವರಿಗೂ ಶುಕರಿಗೂ ಸಕಲವೇದಗಳನ್ನೂ ಭಾರತ, ವೈಷ್ಣವ, ನಾರದೀಯ, ಭಾಗವತ, ಗಾರುಡ, ಪಾದ್ಮ, ವಾರಾಹಾದಿ ಪುರಾಣಗಳನ್ನೂ, ಸಕಲ ವಿಷಯಕ ಜ್ಞಾನವನ್ನೂ ಉಪದೇಶಿಸಿ ಅನುಗ್ರಹಿಸಿದರು. ಅನಂತರ ಸ್ವಸ್ವಯೋಗ್ಯತಾನುಸಾರವಾಗಿ ವಿವಿಧ ದೇವತೆಗಳು ಸಕಲ ಋಷಿಮುನಿಗಳಲ್ಲಿ ಆವಿಷ್ಟರಾಗಿದ್ದು (ಅಂತರ್ಗತರಾಗಿದ್ದು) ಭಗವಾನ್ ಶ್ರೀವೇದವ್ಯಾಸ ದೇವರಿಂದ ಈ ಕ್ರಮದಲ್ಲಿ ಉಪದೇಶ ಪಡೆದರು.

ಶ್ರೀವೇದವ್ಯಾಸರು ಉಪದೇಶಿಸಲಾರಂಭಿಸಿದ ಕೂಡಲೇ ಅವರ ಸೇವೆ ಮಾಡಲು ಉತ್ಕಂಠಿತರಾದ ಶೇಷ ದೇವರು ಪೈಲಮುನಿಗಳಲ್ಲಿಯೂ, ಗರುಡ ದೇವರು ವರುಣ ಪುತ್ರರಾದ ಸುಮಂತರಲ್ಲಿಯೂ[1] ಪ್ರಭುಗಳಾದ ಬ್ರಹ್ಮದೇವರು ಗರುಡಾವಿಷ್ಟರಾದ ಸುಮಂತು ಮತ್ತು ವೈಶಂಪಾಯನ ಋಷಿಗಳಲ್ಲಿಯೂ, ಇಂದ್ರದೇವರು ಜೈಮಿನಿ ಋಷಿಗಳಲ್ಲಿಯೂ ಆವಿಷ್ಟರಾದರು. ಅನಂತರ ವ್ಯಾಸ ಭಗವಾನರು ಈ ನಾಲ್ವರು ದೇವತೆಗಳು ಮತ್ತು ಅವರಿಂದ ಆವಿಷ್ಟರಾದ ಮುನಿಗಳಿಗೆ ಸಮಸ್ತ ವಿದ್ಯೆಗಳನ್ನು ಉಪದೇಶ ಮಾಡಿದ ಮೇಲೆ ಶ್ರೀಹರಿಯು ಶೇಷಾದಿಗಳನ್ನೂ ಆವಿಷ್ಟರಾದ ಪೈಲ ಮೊದಲಾದ ಋಷಿಗಳನ್ನು ಭೂಲೋಕಾದಿಗಳಲ್ಲಿ ವಿದ್ಯಾಪ್ರವರ್ತಕರನ್ನಾಗಿ ಮಾಡಿದರು.

ಋಗ್ವೇದಕ್ಕೆ ಪೈಲರನ್ನೂ, ಕೃಷ್ಣ ಯಜುರ್ವೇದಕ್ಕೆ, ವೈಶಂಪಾಯನರನ್ನೂ, ಶುಕ್ಲ ಯಜುರ್ವೇದಕ್ಕೆ ಸೂರ್ಯನನ್ನೂ, ಸಾಮವೇದಕ್ಕೆ ಜೈಮಿನಿಗಳನ್ನೂ, ಅಥರ್ವವೇದಕ್ಕೆ ಸುಮಂತುಗಳನ್ನೂ, ಅವರಲ್ಲಿ ಆವಿಷ್ಟರಾದ ಗರುಡದೇವರನ್ನೂ ಪ್ರವರ್ತಕರನ್ನಾಗಿ ಮಾಡಿದರು. ಕೃಷ್ಣ ಯಜುರ್ವೇದಕ್ಕೆ ಪ್ರವರ್ತಕರಾದ ವೈಶಂಪಾಯನರನ್ನೇ ಭಾರತಕ್ಕೂ ಪ್ರವರ್ತಕರನ್ನಾಗಿ ಮಾಡಿದರು.

ಮನುಷ್ಯರು ಮತ್ತು ಗಂಧರ್ವಾದಿಗಳಲ್ಲಿ ವೇದಾದಿಗಳ ಪ್ರವರ್ತಕರಾಗಿರುವಂತೆ ತಮ್ಮ ಪುತ್ರರಾದ ಶ್ರೀಶುಕಾಚಾರ್ಯರಿಗೆ ಆಜ್ಞಾಪಿಸಿದರು. ಶುಕಾಚಾರ್ಯರ ಶಿಷ್ಯರಾದ ಪರೀಕ್ಷಿದ್ರಾಜರೇ ಮೊದಲಾದ ಚಕ್ರವರ್ತಿಗಳು ಮನುಷ್ಯರಲ್ಲಿ ಸೇರುವುದರಿಂದ ''ಮನುಷ್ಯರಲ್ಲಿ'' ಎಂದು ಹೇಳಿದ್ದಾರೆ. ದೇವಲೋಕದಲ್ಲಿ ಅಂದರೆ ಸ್ವರ್ಗದಲ್ಲಿ ವಾಯು-ಶೇಷ-ಗರುಡ-ಬ್ರಹ್ಮ-ಇಂದ್ರ-ಸೂರ್ಯಾದಿ ದೇವತೆಗಳನ್ನು ಬಿಟ್ಟು ಉಳಿದದೇವತೆಗಳಲ್ಲಿ ವೇದಾದಿಗಳ ಪ್ರವರ್ತಕರಾಗಿರಲು ನಾರದರಿಗೆ ಉಪದೇಶಮಾಡಿ ವ್ಯವಸ್ಥಾಮಾಡಿದರು. ವಾಯು ಮುಂತಾದ ಮೇಲೆ ಹೇಳಿದ ದೇವತೆಗಳು ಸಾಕ್ಷಾತ್ತಾಗಿ ಶ್ರೀವೇದವ್ಯಾಸ ದೇವರಲ್ಲಿ ಉಪದೇಶ

---

1. ವೇದ ಪ್ರವರ್ತಕರ ವಿಭಾಗ ಮಾಡುವಾಗ ಭೃಗು ಋಷಿಗಳನ್ನು ಹೆಸರಿಸದಿರುವುದರಿಂದ ನಾಲ್ಕು ದೇವತೆಗಳನ್ನು ನಾಲ್ಕು ವೇದಗಳಿಗೆ ಪ್ರವರ್ತಕರನ್ನಾಗಿ ಮಾಡಿದರೆಂಬುದೇ ಗ್ರಂಥಕಾರರ ಅಭಿಪ್ರಾಯವಾಗಿದೆ ಎಂಬುದೇ ಸಮಂಜಸ. ''ಅಥರ್ವಾಂಗಿರಸಾಮಾಸೀತ್ಸುಮಂತುರ್ವಾರುಣೋ ಮುನಿಃ'' ಎಂದು ಭಾಗವತದಲ್ಲಿ ವಾರುಣ-ವರುಣ ಪುತ್ರ ಸುಮಂತು ಮುನಿಗಳೆಂದು ಟೀಕೆಯಲ್ಲಿ ಸ್ಪಷ್ಟವಾಗಿ ಉಕ್ತವಾಗಿರುವುದರಿಂದ ವಾರುಣ ಎಂದರೆ ಸುಮಂತುಗಳೇ ವಿನಃ ಭೃಗು ಋಷಿಗಳಲ್ಲ ಎಂದು ಶ್ರೀವಾದಿರಾಜರು ತಮ್ಮ ವ್ಯಾಖ್ಯಾನದಲ್ಲಿ ಆಪ್ತಣೆ ಕೊಡಿಸಿದ್ದಾರೆ. ಇನ್ನೊಬ್ಬ ಮಹನೀಯರು ತಮ್ಮ ವ್ಯಾಖ್ಯಾನದಲ್ಲಿ ಭೃಗುರ್ವೈ ವಾರುಣಿಃ ಎಂಬ ಪ್ರಮಾಣದಂತೆ ವಾರುಣಿಃ - ಭೃಗು ಋಷಿಗಳೆಂದು ತಿಳಿಸಿದ್ದಾರೆ. ಸೂರ್ಯ ನಾರದಾದಿಗಳು ಸಾಕ್ಷಾತ್ ಶ್ರೀವ್ಯಾಸರಲ್ಲಿ ಅಥವಾ ಶುಕಮುನಿಗಳಲ್ಲಿ ಅಧ್ಯಯನ ಮಾಡಿ ಪ್ರವರ್ತಕರಾದುದರಿಂದ ಅವರ ಆವೇಶವನ್ನು ಹೇಳಲಿಲ್ಲ ಎಂದು ತಿಳಿಯಬೇಕು ಎಂದ ಶ್ರೀವಾದಿರಾಜ ಗುರುಚರಣರು ನಿರೂಪಿಸಿದ್ದಾರೆ.

ಪಡೆದಿರುವುದರಿಂದ ಅವರನ್ನು ಬಿಟ್ಟು ಉಳಿದ ದೇವತೆಗಳಲ್ಲಿ ಪ್ರವರ್ತಕರಾಗಿರಲು ನಾರದರಿಗೆ ಆದೇಶವಿತ್ತರೆಂದು ತಿಳಿಯಬೇಕು.

ಋಷಿಗಳಿಗೆ ಆದೇಶವಿತ್ತ ಮೇಲೆ ಶ್ರೀವೇದವ್ಯಾಸರು ರೋಮಾಂಚನದಿಂದ ರೋಮಹರ್ಷಣರನ್ನು (ಸೂತರನ್ನು) ಸೃಜಿಸಿದರು. ಕಾಮದೇವರು ಭಗವಾನ್ ಕೃಷ್ಣದ್ವೈಪಾಯನರ ಸೇವೆಗಾಗಿ ರೋಮಹರ್ಷಣ (ಸೂತ)ರಲ್ಲಿ ಆವಿಷ್ಟರಾದರು. ರೋಮಾಂಚನದಿಂದ ರೋಮಹರ್ಷಣರನ್ನು 'ಸೃಜಿಸಿದರು' ಎಂಬುವುದರಿಂದ 'ಪದ್ಭ್ಯಾಂ ಶೂದ್ರೋ ಅಜಾಯತ' ಅಂದರೆ ಪಾದಗಳಿಂದ ಶೂದ್ರರನ್ನು ಸೃಜಿಸಿದಂತೆ ಸೂತ ಜಾತಿಯವರನ್ನೂ ಸೃಷ್ಟಿಸಿದರೆಂದು ತಿಳಿಯಬೇಕು. ಆದ್ದರಿಂದಲೇ ರೋಮಹರ್ಷಣ (ಸೂತ)ರನ್ನು ಸೃಷ್ಟಿಸಿದ ಮೇಲೆ ವೇದವನ್ನು ಬಿಟ್ಟು ಉಳಿದ ಭಾರತಾದಿ ಪೌರುಷೇಯ ಗ್ರಂಥಗಳನ್ನು ಪ್ರವರ್ತಿಸಲೋಸುಗ ಅವರಿಗೆ ಅಂದರೆ ಸೂತರಲ್ಲಿ ಆವಿಷ್ಟರಾದ ಕಾಮದೇವರಿಗೆ ಮತ್ತು ಸೂತರಿಗೆ ಸಮಸ್ತ ಜ್ಞಾನವನ್ನು ಅಂದರೆ ಭಾರತ-ರಾಮಾಯಣ, ಕೃತ್ಸ್ನ ಪಂಚರಾತ್ರಾದಿ ಪೌರುಷೇಯ ಗ್ರಂಥಗಳನ್ನು ಉಪದೇಶಿಸಿ ತನ್ಮೂಲಕ ವೇದಾದಿ ಸಕಲ ಜ್ಞಾನವನ್ನೂ ಅನುಗ್ರಹಿಸಿದರು.

ಅನಂತರ ಸನಕ-ಸನಂದನಾದಿ ಪ್ರಮುಖರನ್ನು ಯೋಗಶಾಸ್ತ್ರಕ್ಕೆ ಪ್ರವರ್ತಕರನ್ನಾಗಿ ಮಾಡಿದರು. ಭೃಗು ಮುಂತಾದವರಿಗೆ ಸಂಶಯರಹಿತವಾದ ಮಂಗಳಕರವಾದ ಜ್ಞಾನವನ್ನು ಅನುಗ್ರಹಿಸಿ ಅವರನ್ನು ಕರ್ಮಯೋಗಕ್ಕೆ ಪ್ರವರ್ತಕರನ್ನಾಗಿ ಮಾಡಿದರು. ಜೈಮಿನಿಗಳನ್ನು ಕರ್ಮಮೀಮಾಂಸಾ ಪ್ರವರ್ತಕರನ್ನಾಗಿ ಮಾಡಿದರು. ಅನಂತರ ''ಅಥಾತೋ ದೈವೀಮೀಮಾಂಸಾ'' ಎಂಬ ಆದಿ ಸೂತ್ರವನ್ನೂ, ''ಸ ವಿಷ್ಣು ರಾಹ ಹಿ'', '' ತಂ ಬ್ರಹ್ಮೇತ್ಯಾಚಕ್ಷತೇ'' ಎಂಬ ಕೊನೆಯ ಎರಡು ಸೂತ್ರಗಳನ್ನೂ ಸ್ವತಃ ರಚಿಸಿಕೊಟ್ಟು ಉಳಿದ ಮಧ್ಯಭಾಗವನ್ನು ರಚಿಸಿ ಪ್ರವರ್ತಿಸಲು ಪೈಲರಲ್ಲಿ ಆವಿಷ್ಟರಾದ ಶೇಷದೇವರಿಗೆ ಅಪ್ಪಣೆ ಮಾಡಿದರು. ತರುವಾಯ ಸುರದ್ವೇಷಿಗಳಾದ ದೈತ್ಯರಿಗೆ ಸಂಶಯ ಹುಟ್ಟಿಸಲು ವೇದವ್ಯಾಸದೇವರು ಪಾಶುಪತಾಗಮಗಳನ್ನೂ, ಶಿವಸರ್ವೋತ್ತಮತ್ವ ಪ್ರತಿಪಾದಕಗಳಾದ ತಾಮಸ ಶೈವ ಪುರಾಣಗಳನ್ನೂ, ಯಥಾರ್ಥಜ್ಞಾನ ಸಿದ್ಧಿಗಾಗಿ ಪಂಚರಾತ್ರಾ-ಗಮಗಳನ್ನೂ, ವಿಷ್ಣುಸರ್ವೋತ್ತಮತ್ವ ಪ್ರತಿಪಾದಕಗಳಾದ ಸಾತ್ವಿಕ ಪುರಾಣಗಳನ್ನೂ ರಚಿಸಿದರು. ಮೇಲೆ ನೋಡಲು ಕರ್ಮಾದಿಗಳನ್ನು ನಿರೂಪಿಸುವಂತೆ ಕಾಣುವ ವೇದವಾಕ್ಯಗಳಿಂದ ಬ್ರಾಹ್ಮಾದಿ ರಾಜಸ ಪುರಾಣಗಳನ್ನು ತತ್ವಜ್ಞಾನಕ್ಕೆ ಅಯೋಗ್ಯರಾದವರಿಗೆ ಸಂಶಯ ಹುಟ್ಟಿಸಲು ರಚಿಸಿದರು.

ವೇದಗಳಲ್ಲಿ ಕೆಲವು ಕಡೆ ''ಪ್ರಜಾಪತೇ ನತ್ವದೇತಾನಿ''. ''ಅಗ್ನಿಮೀಳೇ ಪುರೋಹಿತಂ'', ''ದೇವೀಂ ವಾಚ-ಮಜನಯಂತ'', ''ಸವಿತಾ ಪಶ್ಚಾತಾತ್'', ''ಅಪಾಂಫೇನೇನ ನಮುಚೇಃ ಶಿರ ಇಂದ್ರೋದವರ್ತಯಃ'', ''ಗಣಾನಾಂತ್ವಾ ಗಣಪತಿಂ ಹವಾಮಹೇ'', ''ಯೋವಃ ಸೇನಾನೀರ್ಮಹತೋ ಮಹಸ್ಯ'' ಇತ್ಯಾದಿಯಾಗಿ ಬ್ರಹ್ಮ (ಹಿರಣ್ಯಗರ್ಭ) ಅಗ್ನಿ, ಇಂದ್ರ, ಲಕ್ಷ್ಮೀ, ಸರಸ್ವತೀ, ಮೊದಲಾದ ದೇವತೆಗಳ ಉತ್ಕರ್ಷವನ್ನು ಹೇಳುವಂತೆ ವೇದಗಳಲ್ಲಿ ಕಂಡುಬರುವ ಆಪಾತತಾರ್ಥದಂತೆ ತತ್ವಜ್ಞಾನಕ್ಕೆ ಅಯೋಗ್ಯರಾದವರನ್ನು ಮೋಹಗೊಳಿಸಲು ಬ್ರಾಹ್ಮಾದಿ ರಾಜಸ ಪುರಾಣ ಗ್ರಂಥ ಸಂಗ್ರಹವನ್ನು ಮಾಡಿದರು. ''ಪ್ರಜಾಪತಿಂ ಕೃಶಾನುಂ ಚ ತಥಾ ದೇವಿಂ ಸರಸ್ವತೀಂ। ಪರತ್ವೇನ ವದಚ್ಛಾಸ್ತ್ರಂ ರಾಜಸಂ ಪರಿಕೀರ್ತಿತಂ॥'' ಎಂದು ಪ್ರಮಾಣವಿರುವುದರಿಂದ ಬ್ರಾಹ್ಮಾದಿ ಪುರಾಣಗಳೂ ರಾಜಸಪುರಾಣಗಳೆಂದು ತಿಳಿಯಬೇಕು.

ಹೀಗೆ ಅನೇಕ ಪ್ರಕಾರವಾಗಿ ದೇವತೆಗಳಿಂದಾರಂಭಿಸಿ ಮನುಷ್ಯರವರೆಗೆ ಪರಿಭಕ್ತರೆಲ್ಲರೂ ವೈವಸ್ವತ ಮನ್ವಂತರದ ಮೊದಲ ದ್ವಾಪರಕ್ಕಿಂತಲೂ ಇಪ್ಪತ್ತೆಂಟನೆಯ ದ್ವಾಪರಯುಗದ ವ್ಯಾಸಾವತಾರಕ್ಕಿಂತಲೂ ಪುನಃ ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ಶ್ರೀವೇದವ್ಯಾಸದೇವರಿಂದ ಜ್ಞಾನವನ್ನು ಪಡೆದು ಕೃತಾರ್ಥರಾದರು. ದೇವತೆಗಳು ಮತ್ತೆ ಬೇರೆ ಬೇರೆ ಆವಿಷ್ಟ ರೂಪದಿಂದ ವಿಶೇಷ ಜ್ಞಾನವನ್ನು ಪಡೆದರು. ಗೌತಮ ಋಷಿಗಳ ಶಾಪದಿಂದ ನಷ್ಟಜ್ಞಾನರಾದ ಋಷಿಗಳು

ಮನುಷ್ಯರು ಸಹ ಪುನಃ ಭಗವದನುಗ್ರಹದಿಂದ ಜ್ಞಾನವನ್ನು ಪಡೆದರು. ಹೀಗೆ ಈ ಎಲ್ಲ ದೇವತೆಗಳೇ ಮೊದಲಾದವರು ಶ್ರೀವೇದವ್ಯಾಸ ದೇವರಿಂದ ಜ್ಞಾನವನ್ನು ಪಡೆದು ಭೂಲೋಕದಲ್ಲಿ ಮತ್ತು ಪರಲೋಕದಲ್ಲಿ ಮುದಿಸಿದರು.

ಸಮಸ್ತ ವಿಜ್ಞಾನ (ವಿಶೇಷಜ್ಞಾನ) ವೆಂಬ ಕಿರಣ ಸಮೂಹವನ್ನು ಪಸರಿಸಿ, ಜಗತ್ತಿನಲ್ಲಿ ವ್ಯಾಪಿಸಿದ್ದ ಅಜ್ಞಾನವೆಂಬ ಅಂಧಕಾರವನ್ನು ನಿರಸನಮಾಡಿ (ತಿರಸ್ಕರಿಸಿ) ಸೂರ್ಯನಂತೆ ಬೆಳಗುತ್ತಾ ಜಗವನ್ನು ಸದ್‌ಜ್ಞಾನದಿಂದ ಪ್ರಕಾಶಗೊಳಿಸುತ್ತಾ ಶ್ರೀವೇದವ್ಯಾಸ ದೇವರು ಅತ್ಯಂತ ಉತ್ಕೃಷ್ಟರಾಗಿ ಕಂಗೊಳಿಸಿದರು. ಪ್ರಭುಗಳಾದ ಭಗವಾನ್ ವೇದವ್ಯಾಸರು ಚತುರಾನನ ಬ್ರಹ್ಮ-ರುದ್ರ-ದೇವೇಂದ್ರಾದಿ ಅಮರ ನಿಕರರಿಂದ ಸರ್ವದಾ ಸಂಸೇವ್ಯಮಾನಪಾದಪಲ್ಲವರಾಗಿ ಬ್ರಹ್ಮಾದಿಗಳಲ್ಲಿ ಸದಾ ಸ್ವಸಂಬಂಧಿ ಗುಣಾದಿರಹಸ್ಯಗಳನ್ನು ಪ್ರಕಾಶಗೊಳಿಸುತ್ತಾ ಮೇರುಪರ್ವತ ಮತ್ತು ಬದರಿಕಾಶ್ರಮದಲ್ಲಿ ಆನಂದಿಸಿದರು.

*ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಶ್ರೀವ್ಯಾಸಾವತಾರ ಕಥಾನಿರೂಪಣವೆಂಬ*
*ದಶಮಾಧ್ಯಾಯದ ಕಥಾಸಂಗ್ರಹವು ಮುಗಿದುದು.*

॥ ಶ್ರೀಕೃಷ್ಣಾರ್ಪಣಮಸ್ತು ॥



## ಏಕಾದಶಾಧ್ಯಾಯಭಾವಸಂಗ್ರಹ

***ಅವತಾರಿಕೆ:-***

ಶ್ರೀಗುರುಸಾರ್ವಭೌಮರು ಈಗ ತಾತ್ಪರ್ಯ ನಿರ್ಣಯದ ಏಕಾದಶಾಧ್ಯಾಯದ ಭಾವವನ್ನು "ಭೂಪಾ" ಎಂಬ ಪದ್ಯದಿಂದ ಸಂಗ್ರಹಿಸಿ ನಿರೂಪಿಸುತ್ತಾರೆ.

**ಭೂಪಾ ಯತ್ರ ಪುರೂರವಪ್ರಭೃತಯೋ ಜಾತಾ ವಿಧೋರನ್ವಯೇ**
**ಯದ್ವಾದ್ಯಾ ಭರತಾದಯಃ ಕುರುಮುಖಾಃ ಭೀಷ್ಮಾಂಬಿಕೇಯಾದಯಃ ।**
**ಭೂಭಾರಕ್ಷಯಕಾಂಕ್ಷಿಭಿಸ್ಸುರವರ್ಯೈರಭ್ಯರ್ಥಿತಃ ಶ್ರೀಪತಿಃ**
**ತತ್ರಾವಿರ್ಭವಿತುಂ ಸಹಾಮರಗಣೈರಿಚ್ಛನ್ ಹರಿಃ ಪಾತು ಮಾಮ್ ॥ 11 ॥**

***ಅನ್ವಯಾರ್ಥ*** **:- ಯತ್ರ** = ಎಲ್ಲಿ, **ಪುರೂರವಪ್ರಭೃತಯಃ** = ಪುರೂರವನೇ ಮೊದಲಾದವರೂ, **ಯದ್ವಾದ್ಯಾಃ** = ಯದುರಾಜ ಮೊದಲಾದವರು, **ಭರತಾದಯಃ** = ಭರತಚಕ್ರವರ್ತಿ ಮುಂತಾದವರು, **ಕುರುಮುಖಾಃ** = ಕುರುರಾಜ ಮೊದಲಾದ, **ಭೂಪಾಃ** = ರಾಜರುಗಳು, **ಭೀಷ್ಮಾಂಬಿಕೇಯಾದಯಃ** = ಭೀಷ್ಮ - ಪಿತಾಮಹ ಭೀಷ್ಮರು, **ಅಂಬಿಕೇಯ** = ಧೃತರಾಷ್ಟ್ರನೇ, **ಆದಯಃ** = ಮೊದಲಾದ, **ಭೂಪಾಃ** = ನೃಪತಿಗಳು, **ಜಾತಾಃ** = ಜನಿಸಿದರೋ, **ತತ್ರ** = ಅಂತಹ, **ವಿಧೋರನ್ವಯೇ** = ಚಂದ್ರವಂಶದಲ್ಲಿ, **ಭೂಭಾರಕ್ಷಯಕಾಂಕ್ಷಿಭಿಃ** = ಭೂಭಾರ ಹರಣವನ್ನು ಅಪೇಕ್ಷಿಸತಕ್ಕ, **ಸುರವರ್ಯೈಃ (ಗಣೈಃ)** = ಸುರಶ್ರೇಷ್ಠರಿಂದ (ದೇವತಾ ಸಮೂಹದಿಂದ) **ಅಭ್ಯರ್ಥಿತಃ** = ಪ್ರಾರ್ಥಿತನಾದ, **ಅಮರವರ್ಯೈಃ ಸಹ** = ದೇವಶ್ರೇಷ್ಠರಿಂದ ಕೂಡಿ, **ಆವಿರ್ಭವಿತುಂ** = ಆವಿರ್ಭವಿಸಲು (ಅವತರಿಸಲು), **ಇಚ್ಛನ್** = ಅಪೇಕ್ಷಿಸಿದ, **ಶ್ರೀಪತಿಃ** = ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನು, **ಮಾಂ** = ನನ್ನನ್ನು, **ಪಾತು** = ಸಂರಕ್ಷಿಸಲಿ.

***ತಾತ್ಪರ್ಯ*** **:-** ಈ ಅಧ್ಯಾಯದಲ್ಲಿ ಪುರು, ಯಾದವ, ಭರತ, ಕುರು, ಮುಂತಾದ ಸಾಮ್ರಾಟರು ಅವತರಿಸಿದ ಚಂದ್ರವಂಶದ ಮತ್ತು ಅಲ್ಲಿ ಜನಿಸಿದ ರಾಜರ ಹಾಗೂ ಶ್ರೀಹರಿಯ ಮತ್ತು ದೇವತೆಗಳ ಅವತಾರಾದಿ ಕಥಾಭಾಗವನ್ನು ಶ್ರೀಮದಾಚಾರ್ಯರು ವಿಸ್ತಾರವಾಗಿ ವರ್ಣಿಸಿದ್ದಾರೆ. ಶ್ರೀಗುರುರಾಜರು ಅದನ್ನು ಸಂಗ್ರಹಿಸಿ ಇಲ್ಲಿ ನಿರೂಪಿಸಿದ್ದಾರೆ.

ಯಾವ ಚಂದ್ರವಂಶದಲ್ಲಿ ಪುರೂರವ, ಯದುರಾಜ, ಭರತ ಚಕ್ರವರ್ತಿ, ಕುರುರಾಜ ಮೊದಲಾದ ಭೂಪತಿಗಳು ಜನಿಸಿದರೋ, ಮತ್ತು ಶ್ರೀಭೀಷ್ಮಾಚಾರ್ಯರು, ಧೃತರಾಷ್ಟ್ರ-ಪಾಂಡು ಮೊದಲಾದ ನೃಪತಿಗಳು ಜನಿಸಿದರೋ ಅಂತಹ ಚಂದ್ರ-ವಂಶದಲ್ಲಿ ಭೂಭಾರಹರಣವನ್ನು ಅಪೇಕ್ಷಿಸುವ ಬ್ರಹ್ಮರುದ್ರೇಂದ್ರಾದಿ ಸುರಶ್ರೇಷ್ಠರಿಂದ ಪ್ರಾರ್ಥಿತನಾದ ಶ್ರೀಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನು ಸುರಶ್ರೇಷ್ಠರಿಂದೊಡಗೂಡಿ (ಅಮರಗಣದಿಂದೊಡಗೂಡಿ) ಆವಿರ್ಭವಿಸಬೇಕೆಂದು (ಅವತರಿಸ-ಬೇಕೆಂದು) ಅಪೇಕ್ಷಿಸಿದನು. ಅಂಥ ಶ್ರೀಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನು ನಮ್ಮನ್ನು ಕಾಪಾಡಲಿ ಎಂದು ಭಾವ.

## ಏಕದಶಾಧ್ಯಾಯ ಕಥಾಸಂಗ್ರಹ

ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯದ ಹನ್ನೊಂದನೆಯ ಅಧ್ಯಾಯದಲ್ಲಿ ಕ್ರಮಪ್ರಾಪ್ತವಾದ ಶ್ರೀಕೃಷ್ಣ-ಪಾಂಡವರ ಕಥೆಯನ್ನು ನಿರೂಪಿಸಬಯಸಿ ಮೊದಲು ಚಂದ್ರವಂಶವನ್ನೂ, ಆ ವಂಶಪರಂಪರೆಯನ್ನೂ ವರ್ಣಿಸಿದ್ದಾರೆ. ಅವರ ಸಾರವನ್ನಿಲ್ಲಿ ಕೊಡಲಾಗಿದೆ.

ಲೋಕ ಪಿತಾಮಹರಾದ ಚತುರಾನನ ಬ್ರಹ್ಮದೇವರಿಗೆ ಅತ್ರಿ ಎಂಬ ಪುತ್ರರಾದರು. ಅವರಿಗೆ ಚಂದ್ರನು ಮಗನಾದನು. ಚಂದ್ರನ ಮಗ ಬುಧ. ಅವನ ಪುತ್ರನೇ ಪುರೂರವನು. ಪುರೂರವನಿಗೆ ಆಯು ಪುತ್ರನಾದ. ಅವನ ಮಗನೇ ನಹುಷ ಚಕ್ರವರ್ತಿ. ನಹುಷನಿಗೆ ಯಯಾತಿ ಎಂಬ ಪುತ್ರನುದಯಿಸಿದನು. ಯಯಾತಿಗೆ ಇಬ್ಬರು ಪತ್ನಿಯರು. ದೈತ್ಯ ಗುರು ಶುಕ್ರಾಚಾರ್ಯರ ಮಗಳಾದ ದೇವಯಾನಿ ಒಬ್ಬ ಪತ್ನಿ. ಮತ್ತೊಬ್ಬಳು ವೃಷಪರ್ವನೆಂಬ ದಾನವಚಕ್ರವರ್ತಿಯ ಮಗಳಾದ ಶರ್ಮಿಷ್ಠೆ. ಯಯಾತಿಗೆ ಈ ಈರ್ವರು ಪತ್ನಿಯರಲ್ಲಿ ಶ್ರೀವಿಷ್ಣುಪದಾಸಕ್ತರಾದ ಐದುಜನ ಪುತ್ರರು ಜನಿಸಿದರು. ದೇವಯಾನಿಯಲ್ಲಿ ಯದು ಮತ್ತು ತುರ್ವಸು ಎಂಬಿಬ್ಬರು ಮಕ್ಕಳೂ, ಶರ್ಮಿಷ್ಠಾಳಲ್ಲಿ ದ್ರುಹ್ಯು, ಅನು ಮತ್ತು ಪುರು ಎಂಬ ಮೂವರು ಪುತ್ರರೂ ಜನಿಸಿದರು. ದೇವಯಾನಿ-ಶರ್ಮಿಷ್ಠೆಯರಲ್ಲಿ ದೇವಕೀ-ರೋಹಿಣಿಯರಲ್ಲಿ ಬಲಭದ್ರನು ಜನಿಸಿದಂತೆ ಪುರುವು ಜನಿಸಿದನು.

ದೇವಯಾನಿಯ ಮಗನಾದ ಯದುರಾಜನ ವಂಶದ ಕೃತವೀರ್ಯನಲ್ಲಿ ದತ್ತಾತ್ರೇಯ ನಾಮಕ ವಿಷ್ಣುವಿನ ಪ್ರಸಾದದಿಂದ ಅಣಿಮಾದ್ಯಷ್ಟ ಯೋಗಸಿದ್ಧಿಯನ್ನು ಪಡೆದ ಕಾರ್ತವೀರ್ಯಾರ್ಜುನನು ಹುಟ್ಟಿದನು. ಅವನ ಸಂತತಿಯಲ್ಲಿ ಶ್ರೀಕೃಷ್ಣನೇ ಮುಖ್ಯಾಶ್ರಯರಾದ ಯಾದವರು ವಿಖ್ಯಾತರಾದರು.

ಶರ್ಮಿಷ್ಠೆಯ ಪುತ್ರನಾದ ಪುರುಚಕ್ರವರ್ತಿಯ ವಂಶದಲ್ಲಿ ಶ್ರೀಹರಿಪ್ರಿಯನಾದ ಭರತಚಕ್ರವರ್ತಿಯು ಜನಿಸಿದನು. ಆ ಭರತ ಚಕ್ರವರ್ತಿಯ ಒಂದು ವಂಶದಲ್ಲಿ ಕುರುರಾಜನೂ, ಮತ್ತೊಂದು ವಂಶದಲ್ಲಿ ಪ್ರತೀಪರಾಜನೂ ಜನಿಸಿದರು. ಪ್ರತೀಪ ರಾಜನಿಗೆ ದೇವಾಪಿ, ಬಾಹ್ಲೀಕ ಮತ್ತು ಗುಣಜ್ಯೇಷ್ಠ (ಶ್ರೇಷ್ಠ)ನಾದ ಶಂತನು ಎಂಬ ತ್ರೇತಾಗ್ನಿಗಳಂತೆ ಬೆಳಗುವ ಮೂವರು ಪುತ್ರರಾದರು. ಮೊದಲನೆಯ ದೇವಾಪಿಯು ಕುಷ್ಠರೋಗ ಪೀಡಿತನಾದುದರಿಮದ ವೈರಾಗ್ಯ ತಾಳಿ ತಪಸ್ಸಿಗಾಗಿ ವನಕ್ಕೆ ತೆರಳಿದನು. ಮುಂದವನು ವಿಷ್ಣುವಿನ ಅನುಗ್ರಹದಿಂದ ಕೃತಯುಗದಲ್ಲಿ ರಾಜನಾಗುವನು. ಎರಡನೆಯವನಾದ ಬಾಹ್ಲೀಕನು 'ಪುತ್ರಿಕಾಪುತ್ರನ್ಯಾಯ'[2]ದಿಂದ ಮಾತಾಮಹ (ನಾದ ಪ್ರತೀಪರಾಜ)ನಿಗೆ (ದತ್ತಕಪೂರ್ವಕ) ಮಗನಾದನು. ಈ ಬಾಹ್ಲೀಕರಾಜನು ಸಾಮಾನ್ಯನಲ್ಲ. ಹಿಂದೆ ಹಿರಣ್ಯಕಶಿಪುವಿಗೆ ಮಗನಾದ ಪ್ರಹ್ಲಾದನೇ ಬಾಹ್ಲೀಕನು. ಭಗವದ್ಭಕ್ತನೂ, ವಾಯುದೇವರ ಆವೇಶಯುಕ್ತನೂ ಆದ ಪ್ರಹ್ಲಾದರಾಜನೇ ಈಗ ವಾಯ್ವಾವೇಶಯುಕ್ತನಾಗಿ ಬಾಹ್ಲೀಕನಾಗಿ ಜನಿಸಿದನು. ವಾಯುದೇವರ ಆವೇಶವಿದ್ದುದರಿಂದವನು ಮಹಾ ಬಲಶಾಲಿಯಾಗಿದ್ದನು. ಅಂತೆಯೇ ಮಹಾಬಲ ಸಮನ್ವಿತನವನು. ಶ್ರೀಪ್ರಹ್ಲಾದರಾಜನು ಶ್ರೀಹರಿಯ ಬಲಕಾರ್ಯದಲ್ಲಿ (ಭೂಭಾರಹರಣ ಕಾರ್ಯದಲ್ಲಿ) ಸೇವೆ ಸಲ್ಲಿಸಲು ಬಾಹ್ಲೀಕನಾಗಿ ಅವತರಿಸಿ ಮಾತಾಮಹನ ದೇಶಕ್ಕೆ (ಬಾಹ್ಲೀಕ ದೇಶಕ್ಕೆ) ಅಧಿಪತಿಯಾದನು. ಬಾಹ್ಲೀಕರಾಜನಿಗೆ ಸೋಮದತ್ತ ಎಂಬ ಮಗನು ಹುಟ್ಟಿದನು. ಅವನು ಹಿಂದೆ ಪತ್ರತಾಪ ಎಂಬ ಹೆಸರಿನ ರುದ್ರ ದೇವರು. ರುದ್ರರ ಮಧ್ಯದಲ್ಲಿ ಅಜೈಕಪಾದ, ಅಹಿರ್ಬುಧ್ನಿ, ವಿರೂಪಾಕ್ಷ ಎಂಬ ಮೂವರು ರುದ್ರರು ಶ್ರೀಹರಿಯ ಭೂಭಾರಹರಣ ಕಾರ್ಯದಲ್ಲಿ ಸಹಾಯಕರಾಗಿ ಸೇವೆ ಸಲ್ಲಿಸಬೇಕೆಂಬ ಅಪೇಕ್ಷೆಯಿಂದ ಸೋಮದತ್ತನಿಗೆ ಭೂರಿ, ಭೂರಿಶ್ರವ, ಶಲ ಎಂಬ ಹೆಸರಿನಿಂದ ಪುತ್ರರಾಗಿ ಜನಿಸಿದರು. ಈ ಮೂವರಲ್ಲಿ ಭೂರಿಶ್ರವಸ್ಸು ಶಿವಾದಿ ಸರ್ವರುದ್ರರ ಆವೇಶ ಹಾಗೂ ಶಿವವರಬಲದಿಂದ ಮಹಾಬಲಶಾಲಿಯೂ ಶ್ರೇಷ್ಠ ಅಸ್ತ್ರವಿದ್ಯಾವಿಶಾರನೂ ಆಗಿದ್ದನು. ಹಿಂದೆ ಸೋಮದತ್ತನು ಶ್ರೇಷ್ಠನೂ, ಮಹಾಬಲಶಾಲಿಯೂ ಆದ ಪುತ್ರನಿಗಾಗಿ ರುದ್ರದೇವರನ್ನು ಕುರಿತು ತಪಸ್ಸು ಮಾಡಿದನು. ಅವನ ತಪಸ್ಸಿಗೆ ಒಲಿದ ರುದ್ರದೇವರು "ನಿನ್ನ ಶತ್ರುಗಳನ್ನು ಜಯಿಸುವ,

---

2. 'ಪುತ್ರಿಕಾಪುತ್ರನ್ಯಾಯ'ವೆಂದರೆ - ಪುತ್ರಸಂತಾನವಿಲ್ಲದವರು ತಮ್ಮ ಪುತ್ರಿಯನ್ನು ಅವಳಲ್ಲಿ ಜನಿಸಿದ ಪುತ್ರನು ತನಗೆ ಪುತ್ರನಾಗಬೇಕೆಂದು ಬಯಸಿ ವಿವಾಹ ಮಾಡಿಕೊಟ್ಟ ಮೇಲೆ ಆ ಮಗಳಲ್ಲಿ ಜನಿಸಿದ ಮಗನು ಮಾತಾಮಹನಿಗೆ (ದತ್ತಕಮೂಲಕ) ಪುತ್ರನಾಗುವುದೆಂದರ್ಥ.

ಯಜ್ಞಾಚರಣ ಸ್ವಭಾವನೂ, ಬಲ-ವೀರ್ಯ-ಸದ್ಗುಣ ಯುಕ್ತನೂ ನನ್ನ ಆವೇಶವುಳ್ಳವನೂ ಆದ ಪುತ್ರನು ನಿನಗೆ ಜನಿಸುವನು'' ಎಂದು ವರ ನೀಡಿದ್ದರು. ಆ ವರಬಲದಿಂದ ಸೋಮದತ್ತನಿಗೆ ಭೂರಿಶ್ರವನು ಪುತ್ರನಾಗಿ ಹುಟ್ಟಿ ಮಹಾ ಬಲಶಾಲಿಯಾದನು.

ಪ್ರತೀಪ ರಾಜನ ಮೂರನೆಯ ಮಗನಾದ ಶಂತನು ಚಕ್ರವರ್ತಿಯ ಮೂಲರೂಪ ಅವತಾರ ಕಾರಣಗಳನ್ನೀಗ ನಿರೂಪಿಸುತ್ತಾರೆ.

ಒಂದೊಮ್ಮೆ ಬ್ರಹ್ಮದೇವರು ಪೂರ್ವ ಸಮುದ್ರದ ಪಶ್ಚಿಮ ತೀರಕ್ಕೆ ಗಂಗಾ ಸಮುದ್ರ ಸಂಗಮ ಸ್ಥಳಕ್ಕೆ ದಯಮಾಡಿಸಿದರು. ಅಂದು ಪೂರ್ಣಿಮೆಯಾಗಿತ್ತು. ಪರ್ವ ಪ್ರಯುಕ್ತ, ಬಿರುಗಾಳಿ, ದೊಡ್ಡ ಅಲೆಗಳಿಂದ ಸಮುದ್ರರಾಜನು ಉಕ್ಕೇರಿ ಸಮುದ್ರ ಜಲವು ಬ್ರಹ್ಮದೇವರ ಮೇಲೆ ಬಲವಾಗಿ ಅಪ್ಪಳಿಸಿತು. ಇದರಿಂದ ಕುಪಿತರಾದ ಬ್ರಹ್ಮದೇವರು 'ಶಾಂತನಾಗು' ಎಂದು ಹೇಳಿದರು. ಸಮುದ್ರರಾಜ ಶಾಂತನಾದ. ಆಗ ಕಮಲಾಸನರು ''ನೀನು ಮದಿಸಿ ನನಗೆ ಮಹಾಭಿಷೇಕ ಮಾಡಿದ್ದರಿಂದ ಮಹಾಭಿಷಕ್ ಎಂಬ ರಾಜನಾಗಿ ಜನಿಸು. ಅನಂತರ ನಾನು ಶಾಂತನಾಗು ಎಂದ ಕೂಡಲೇ ಶಾಂತತನವುಳ್ಳವನಾದ್ದರಿಂದ ನೀನು ಸಂಕ್ಷೇಪ ಶರೀರನಾಗಿ ಶಂತನು ಎಂಬ ಹೆಸರಿಂದ ಜನಿಸು. ಆಗ ಈ ಗಂಗೆಯೂ ದೇವತಾಕಾರ್ಯದಿಂದ ನಿನಗೆ ಪತ್ನಿಯಾಗುವಳು'' ಎಂದು ವರುಣದೇವನಿಗೆ ಶಾಪ ಪ್ರದಾನ ಮಾಡಿದರು. ಬ್ರಹ್ಮದೇವರ ಶಾಪದಿಂದ ವರುಣದೇವನು ಮಹಾಭಿಷಕ್ ಎಂಬ ಹೆಸರಿನಿಂದ ಅವತರಿಸಿ ಬಹುಕಾಲ ರಾಜ್ಯಭಾರ ಮಾಡಿ ತರುವಾಯ ಬ್ರಹ್ಮಸಭೆಗೆ ಮರಳಿ ಬಂದು ಸೇರಿದನು. ಅಲ್ಲೊಂದು ದಿನ ಅಸ್ತವ್ಯಸ್ತ ಉಡುಪಿನಲ್ಲಿದ್ದ ಪತ್ನಿಯಾದ ಗಂಗಾದೇವಿಯನ್ನು ವರುಣನು ಆಸೆಯಿಂದ ನೋಡಿದನು. ನಗ್ನ ಸ್ತ್ರೀಯರನ್ನು ನೋಡಬಾರದೆಂಬ ನಿಯಮವಿದ್ದುದರಿಂದ ಎಲ್ಲ ದೇವತೆಗಳೂ ತಲೆ ತಗ್ಗಿಸಿ ಕುಳಿತರು. ಆದರೆ ವರುಣನು ಮಾತ್ರ ಗಂಗೆಯನ್ನು ನೋಡಿದನು. ಇದನ್ನು ಗಮನಿಸಿದ ಕಮಲಾಸನರು ''ನಗ್ನಾವಸ್ಥೆಯಲ್ಲಿದ್ದ ಗಂಗೆಯನ್ನು ಆಶೆಗಣ್ಣುಗಳಿಂದ ನಿರೀಕ್ಷಿಸಿದ ನೀನು ಭೂಮಿಯಲ್ಲಿ ಮನುಷ್ಯ ಶರೀರವನ್ನು ಧರಿಸಿ ಶಂತನು ಎಂಬ ಹೆಸರಿನಿಂದ ಜನಿಸು'' ಎಂದು ವರುಣನನ್ನು ಶಪಿಸಿದರು. ಭಾವಿ ಅಪರಾಧವನ್ನು ಅರಿತಿದ್ದರಿಂದಲೇ ಹಿಂದೆ ಸಮುದ್ರರಾಜ (ವರುಣ)ನಿಗೆ ಬ್ರಹ್ಮದೇವರು ಹಾಗೆ ಶಾಪ ನೀಡಿದ್ದರು. ಅದಕ್ಕೆ ಅನುಸರಿಸಿ ಈಗ ಮತ್ತೆ ಶಾಪ ಪ್ರದಾನ ಮಾಡಿದರೆಂದು ತಿಳಿಯಬೇಕು. ಶಾಪ ಪಡೆದ ಮರುಕ್ಷಣವೇ ವರುಣನು ಗಂಗಾದೇವಿಯೊಡನೆ ಭೂಮಿಯಲ್ಲಿ ಪ್ರತೀಪರಾಜನಿಗೆ ಮಗನಾಗಿ ಶಂತನು ಎಂಬ ಹೆಸರಿನಿಂದ ಜನಿಸಿದನು. ಶಂತನು ಗಂಗೆಯನ್ನು ಮದುವೆಯಾಗಿ ಬಹುವರ್ಷಕಾಲ ಅವಳೊಡನೆ ಸುಖಿಸಿದನು.

ಈಗ ನಿರ್ಣಯಕಾರರು ಭೀಷ್ಮೋತ್ಪತ್ತಿಯನ್ನು ನಿರೂಪಿಸ ಬಯಸಿ ಗಂಗಾದೇವಿಯು ಧರೆಗೆ ಆಗಮಿಸಿದ ಬಗೆಯನ್ನು ವರ್ಣಿಸುವರು.

ದ್ಯುನಾಮಕವಸುವು ಅಷ್ಟ ವಸುಗಳಲ್ಲಿ ಎಂಟನೆಯವನು. ಅವನಿಗೆ ವರಾಂಗೀ ಎಂಬ ಪತ್ನಿಯಿದ್ದಳು. ವರಾಂಗಿಗೆ ಸುವಿಂದನೆಂಬ ರಾಜನ ಪತ್ನಿಯಾದ ವರಾಂಗಿ ಎಂಬ ಹೆಸರುಳ್ಳವಳು ಗೆಳತಿಯಾದಳು. ವರಾಂಗಿಯು ಜರಾಮೃತಿಗಳಿಂದ ದೂರಾಗಲು, ವಸಿಷ್ಠಮುನಿಗಳ ಬಳಿಯಿದ್ದ, ತನ್ನ ಅಮೃತ(ಕ್ಷೀರ)ದಿಂದ ಜರಾಮರಣಗಳನ್ನು ಪರಿಹರಿಸುವ ನಂದಿನೀ ಎಂಬ ಕಾಮಧೇನುವಿನ ವತ್ಸೆಯನ್ನು ತನಗಾಗಿ ಬಂಧಿಸಿ ತರುವಂತೆ ಪತಿಯಾದ ದ್ಯುವಸುವನ್ನು ಪ್ರಚೋದಿಸಿದಳು. ಹಿಂದುಮುಂದಾಲೋಚಿಸದೆ ಅವನು ಆ ಕಾರ್ಯದಲ್ಲಿ ಪ್ರವೃತ್ತನಾದ. ಸಹೋದರ ಪ್ರೇಮಪಾಶಬದ್ಧರಾದ ಉಳಿದ ಏಳುಜನ ವಸುಗಳೂ ತಮ್ಮನೊಡನೆ ವಸಿಷ್ಠರ ಆಶ್ರಮಕ್ಕೆ ಬಂದು ಬಲಾತ್ಕಾರವಾಗಿ ನಂದಿನಿಯನ್ನು ಬಂಧಿಸಿದರು. ಇದನ್ನರಿತು ವಸಿಷ್ಠರಲ್ಲಿ ಅಂತರ್ಗತರಾಗಿದ್ದ ಬ್ರಹ್ಮದೇವರು ''ಎಲೈ ವಸುಗಳೇ! ಅಧರ್ಮದ ಗೋಬಂಧನರೂಪಕಾರ್ಯಪ್ರವೃತ್ತರಾದ ನೀವು ಶೀಘ್ರವಾಗಿ ಮಾನುಷಯೋನಿಯಲ್ಲಿ ಜನಿಸಿರಿ. ಯಾವ ತಮ್ಮನ ಮೇಲಿನ ಪ್ರೀತಿಯಿಂದ ನೀವು ಇಂಥಾ ಅಧರ್ಮ

ಕಾರ್ಯಾಸಕ್ತರಾಗಿ ಧರ್ಮಚ್ಯುತರಾದಿರೋ ಅದಕ್ಕೆ ಮುಖ್ಯ ಕರ್ತೃವಾದ ಈ ದ್ಯುವಸುವು ನಿಮ್ಮ ಏಳು ಜನರ ಆಯುಷ್ಯವನ್ನು ಪಡೆಯಲಿ. ನೀವು ಜನ್ಮಿಸಿದ ಕೂಡಲೇ ಸಂಹರಿಸಲ್ಪಟ್ಟು, ಶಾಪಮುಕ್ತರಾಗಿ ನಿಜರೂಪವನ್ನು ಪಡೆಯುವಿರಿ. ಪತಿಯನ್ನು ಅಧರ್ಮಕಾರ್ಯ ಮಾಡುವಂತೆ ಪ್ರಚೋದಿಸಿದ ಈ ವರಾಂಗಿಯು ಮನುಷ್ಯ ಯೋನಿಯಲ್ಲಿ 'ಅಂಬಾ' ಎಂಬ ಹೆಸರಿನಿಂದ ಹುಟ್ಟಿ, ಪತಿ ಇಲ್ಲದವಳಾಗಿ ಜೀವಿಸಿ ನಂತರ ಪುರುಷತ್ವವನ್ನು ಪಡೆದು ಪತಿಯಾದ ಈ ದ್ಯುನಾಮಕ ವಸುವಿನ ಮೃತ್ಯುವಿಗೆ ಕಾರಣಳಾಗಲಿ. ಈ ದ್ಯುವಸುವು ನನ್ನೀ ಶಾಪದಿಂದ ಮಾನುಷಯೋನಿಯಲ್ಲಿ ಜನಿಸಿ ಆಜನ್ಮ ಬ್ರಹ್ಮಚರ್ಯ ವ್ರತನಿಷ್ಠನಾಗಲಿ. ಆಗ ಅಂಬೆಯಾಗಿ ಜನಿಸಿದ ಈ ವರಾಂಗಿಗೂ (ಭೀಷ್ಮನಾಗಿ ಜನಿಸಿದ) ಅವನಿಗೂ ಮಹಾದ್ವೇಷ ಉಂಟಾಗಲಿ. ಅವನು ಎಂಟು ವಸುಗಳ ಗರ್ಭವಾಸದ ಎಲ್ಲ ವಿಧ ದುಃಖವನ್ನೂ ಶಸ್ತ್ರಾಹತಿಯಿಂದ ಬಹುಪ್ರಕಾರವಾಗಿ ಗಾಯಗೊಂಡು ಕ್ಷತ ವಿಕ್ಷತ ಶರೀರನಾಗಿ ಶರತಲ್ಪದ ಮೇಲೆ ಮಲಗಿದ್ದಾಗ ಅನುಭವಿಸಲಿ'' ಎಂದು ಶಾಪ ನೀಡಿದರು.

ಇಂತು ಶಾಪಪ್ರದಾನ ಮಾಡಿದೊಡನೆಯೇ ಆ ವಸುಗಳು ತಮಗೆ ಶಾಪ ನೀಡಿದವರು ಬ್ರಹ್ಮದೇವರೆಂದು ಅರಿತು ಕೂಡಲೇ ನಂದಿನಿಯನ್ನು ಬಂಧನದಿಂದ ಬಿಡಿಸಿ ವಸಿಷ್ಠಾಂತರ್ಗತ ಬ್ರಹ್ಮದೇವರಿಗೆ ನಮಸ್ಕರಿಸಿ ''ಸ್ವಾಮಿ, ನಾವು ಮನುಷ್ಯಗರ್ಭದಲ್ಲಿ ಜನಿಸಬಯಸುವುದಿಲ್ಲ. ಮನುಷ್ಯವೀರ್ಯದಿಂದ ದೇವತಾವಸುವಿನ ಗರ್ಭದಲ್ಲಿ ಜನಿಸುತ್ತೇವೆ. ನಮ್ಮ ಸಹೋದರನಾದ ಈ ದ್ಯುವಸುವು ನಿಮ್ಮ ಅಂಶದಿಂದ (ಬ್ರಹ್ಮದೇವರ ಆವೇಶದಿಂದ) ಯುಕ್ತನಾಗಿ ಜನಿಸಿ ಸರ್ವವನ್ನೂ ಬಲ್ಲವನಾಗಿ (ಸಕಲ ವಿದ್ಯಾಕೋವಿದನಾಗಿ) ಕೀರ್ತಿಶಾಲಿಯಾಗಿ, ಮಹಾಸ್ತ್ರಪ್ರಯೋಗಪ್ರವೀಣನಾಗಲಿ ಮತ್ತು ಉಳಿದ ಏಳು ವಸುಗಳಾದ ನಮ್ಮೆಲ್ಲರ ಬಲವನ್ನೂ ಇವನು ಪಡೆಯಲಿ ಪಿತಾಮಹ! ಹೀಗೆ ನೀವು ನಮ್ಮಲ್ಲಿ ಅನುಗ್ರಹ ಮಾಡಿರಿ'' ಎಂದು ವಿಜ್ಞಾಪಿಸಲು ಬ್ರಹ್ಮದೇವರು ಅದನ್ನು ಅನುಮೋದಿಸಿ ಅದರಂತೆ ವರವಿತ್ತರು.

ಅನಂತರ ವಸುಗಳೆಲ್ಲರೂ ಗಂಗಾದೇವಿಯ ಬಳಿಗೆ ಬಂದು ''ದೇವಿ, ನಾವು ನಿನಗೆ ಪುತ್ರರಾಗಿ ಜನಿಸಲಿಚ್ಛಿಸುತ್ತೇವೆ. ಆದರೆ ತಾಯಿ, ನೀನು ನಮಗೆ ಜನ್ಮವಿತ್ತೊಡನೆಯೇ ನಮ್ಮನ್ನು ಸಂಹರಿಸಿಬಿಡು. ಕೊನೆಯವನನ್ನು ಮಾತ್ರ ಸಂಹರಿಸಬೇಡ'' ಎಂದು ಪ್ರಾರ್ಥಿಸಿದರು. ಅದಕ್ಕೆ ಗಂಗಾದೇವಿಯು ಸಮ್ಮತಿಸಿ ಏಳು ಜನ (ವಸುಗಳನ್ನು) ಪುತ್ರರನ್ನು ಸಂಹರಿಸಿದ ಪಾಪ ತನಗುಂಟಾಗಬಾರದು ಮತ್ತು ತಮ್ಮುಭಯರಲ್ಲಿ ಪ್ರೀತಿ ಇರಬೇಕು ಎಂದು ಹೇಳಿ ಅದರಂತೆ ವಸುಗಳಿಂದ ವರಪಡೆದಳು.

ಆ ಕಾರ್ಯನಿರ್ವಹಣೆಗಾಗಿ ಪ್ರತೀಪರಾಜನ ಸೊಸೆಯಾಗಬಯಸಿ ಗಂಗಾದೇವಿಯು ಧರೆಗಿಳಿದು ಬಂದು ಕಾಮದೂರಳಾಗಿದ್ದರೂ ಕಾಮುಕಿಯಂತೆ ನಟಿಸಿ ಪ್ರತೀಪರಾಜನ ಬಲತೊಡೆಯನ್ನೇರಿ ಕುಳಿತಳು. ಆಗ ಪ್ರತೀಪರಾಜನು ಪತ್ನಿಯ ಭಾಗ ಎಡತೊಡೆ, ಬಲತೊಡೆಯು ಪುತ್ರಿ ಮತ್ತು ಸೊಸೆಯ ಭಾಗ, ನೀನು ಬಲತೊಡೆಯ ಮೇಲೆ ಕುಳಿತಿದದರಿಂದ ನೀನು ನನಗೆ ಸೊಸೆಯಾಗಬೇಕು. ಆದ್ದರಿಂದ ನೀನು ನನ್ನ ಪುತ್ರನನ್ನು ವರಿಸು'' ಎಂದನು. ಆಗ ಗಂಗಾದೇವಿಯು ''ರಾಜನ್, ನಿನ್ನ ಇಷ್ಟದಂತೆ ನಾನು ನಿನ್ನ ಸೊಸೆಯಾಗುವೆನು. ಆದರೆ ನನ್ನದೊಂದು ನಿಯಮವಿದೆ. ನನ್ನ ಪತಿಯು ನಾನು ಯಾರು? ಎಂದು ಕೇಳಬಾರದು. ನಾನು ಮಾಡುವ ಕಾರ್ಯವನ್ನು ವಿರೋಧಿಸಬಾರದು. ಮತ್ತು ನಾನು ಎಂತಹ ಅಯೋಗ್ಯ ಕಾರ್ಯವನ್ನಾಚರಿಸಿದರೂ ಅದಕ್ಕೆ ಕಾರಣವನ್ನು ಪ್ರಶ್ನಿಸಬಾರದು. ಈ ಮೂರು ವಿಷಯಗಳಿಗೆ ನಿನ್ನ ಪುತ್ರನು ಸಮ್ಮತಿಸಬೇಕು. ಈ ಮೂರರಲ್ಲಿ ಯಾವುದೊಂದನ್ನು ತಪ್ಪಿದರೂ ನಾನು ನಿನ್ನ ಮಗನನ್ನು ತ್ಯಜಿಸಿ ಹೊರಟುಹೋಗುವೆನು. ನಿನ್ನ ಪುತ್ರರಲ್ಲಿ ನಾನು ಶಂತನುವನ್ನೇ ಮದುವೆಯಾಗಬಯಸುತ್ತೇನೆ. ನೀನು ಅವನಿಗೆ ಇವೆಲ್ಲ ವಿಚಾರಗಳನ್ನೂ ಹೇಳಿ ಅವನನ್ನು ಒಪ್ಪಿಸು'' ಎಂದು ಹೇಳಿದಳು. ಪ್ರತೀಪರಾಜನು ಅವಳ ಮಾತಿನಂತೆ ಎಲ್ಲ ವಿಚಾರಗಳನ್ನೂ ಶಂತನುವಿಗೆ ತಿಳಿಸಿ ಅವನನ್ನು ಒಪ್ಪಿಸಿ ಗಂಗಾದೇವಿ ಶಂತನು ಇವರ ವಿವಾಹವನ್ನು ನೆರವೇರಿಸಿದನು. ಇಂತು ಶಂತನುವಿನ ಕರಪಿಡಿದ

ಗಂಗಾದೇವಿಯು ಅವನಿಂದ ಅಷ್ಟವಸುಗಳನ್ನು ಮಕ್ಕಳಾಗಿ ಪಡೆದಳು. ಅವರಲ್ಲಿ ಏಳು ಜನರನ್ನು ಜನಿಸಿದಕೂಡಲೇ ಸಂಹರಿಸಿ ಗಂಗೆಗೆಸೆದುಬಿಟ್ಟಳು.

ಅನಂತರ ಗಂಗಾದೇವಿಯು "ದೇವತಾಶರೀರಯುಕ್ತಳಾದ ತಾನು ಮಾನವ ಗೃಹದಲ್ಲಿರುವುದು ಸುಖಪ್ರದವಲ್ಲ. ಯದ್ಯಪಿ ದ್ಯುವಸುವು ದೇವತೆಯಾಗಿದ್ದರೂ ಶಾಪಗ್ರಸ್ತನಾಗಿ ಈಗ ಮಾನವ ಶರೀರಿಯಾಗಿ ಶಂತನುವಾಗಿ ಜನಿಸಿದ್ದಾನೆ. ಆ ದೇಹ ತನ್ನ ದೇಹದಂತೆ ದೇವತಾಶರೀರವಲ್ಲ. ಅದು ಮಾನವ ತನುವಾಗಿದೆ. ಆದ್ದರಿಂದ ನರಸಂಬಂಧಿ ದೇಹವುಳ್ಳ ಶಂತನುವಿನೊಡನೆ ಸಂಸಾರ ಮಾಡುವುದು ಸುಖಪ್ರದವಲ್ಲ. ಆದ್ದರಿಂದ ತಾನು ಮತ್ತೆ ದೇವಲೋಕಕ್ಕೆ ಹೊರಟುಹೋಗಬೇಕು" ಎಂದು ನಿಶ್ಚಯಿಸಿ ಅಷ್ಟಮ ಪುತ್ರನನ್ನು ಹಡೆದೊಡನೆಯೇ ಅವನನ್ನೂ ಸಂಹರಿಸುವವಳಂತೆ ನಟಿಸಿದಳು. ಏಳು ಮಕ್ಕಳನ್ನು ಸಂಹರಿಸಿದರೂ ಪ್ರತಿಯಾಡದಿದ್ದ ಶಂತನುವಿಗೀಗ ಮಾತ್ರ ತಡೆಯಲಾಗಲಿಲ್ಲ. ಕೂಡಲೇ ಅವನು ಪುತ್ರನನ್ನು ಕೊಲ್ಲ-ಲುದ್ಯುಕ್ತಳಾದ ಗಂಗೆಯನ್ನು ತಡೆದು ಇಂತು ಪ್ರಶ್ನಿಸಿದನು-"ದೇವಿ ನೀನು ನಿಜವಾಗಿ ಯಾರು ಹೇಳು. ನೋಡಿದರೆ ಸುರಸ್ತ್ರೀಯಂತೆ ಅತಿರೂಪಲಾವಣ್ಯಭರಿತಳಾಗಿರುವೆ. ಮಂಗಳಾಂಗಿಯಾದ ನೀನು ಮಾಡುತ್ತಿರುವ ಕಾರ್ಯವಾದರೋ ಅಮಂಗಳಕರವಾಗಿದೆ. ಕಟುಕರಾದ ರಾಕ್ಷಸರ ಕೃತ್ಯದಂತಿದೆ. ಪುತ್ರವಧರೂಪವಾದ ಇಂಥ ಪಾಪಕಾರ್ಯವನ್ನು ನೀನು ಮಾಡಲು ಏನೋ ಕಾರಣವಿರಬೇಕು! ಎಲೈ ಮಂಗಳಾಂಗಿ! ಆ ರಹಸ್ಯವೇನು? ನಾನು ತಿಳಿಯಬಹುದಾಗಿದ್ದಲ್ಲಿ ಎಲ್ಲವನ್ನೂ ವಿಶದವಾಗಿ ತಿಳಿಸು".

ಪತಿಯ ಮಾತನ್ನಾಲಿಸಿದ ಗಂಗಾದೇವಿಯು ಹಿಂದಿನ ಸಮಸ್ತ ವೃತ್ತಾಂತವನ್ನೂ ತಿಳಿಸಿದಳು. ಸ್ವರೂಪ ಬಯಲಾದ ಮೇಲೆ ದೇವತೆಗಳು ಆ ಸ್ಥಳದಲ್ಲಿರುವುದಿಲ್ಲ. ಯಾವ ಕಾರ್ಯಕ್ಕಾಗಿ ಮನುಷ್ಯರಾಗಿ ಜನಿಸುತ್ತಾರೋ ಆದಾದ ಮೇಲೆ ದೇವತೆಗಳು ಅದೃಶ್ಯರಾಗುತ್ತಾರೆ. ಕಣ್ಣಿಗೆ ಕಾಣದಂತಾಗುವುದು, ಸ್ಪರ್ಶಿಸದಿರುವುದು, ಮಾತನಾಡದಿರುವುದು ದೇವತೆಗಳ ಧರ್ಮ. ದೇವತೆಗಳಲ್ಲಿಯೂ, ಮಾನವಯೋನಿಯಲ್ಲಿ ಜನಿಸಿದ ಸುರರಿಗಿದು ರಹಸ್ಯಧರ್ಮವಾಗಿದೆ. ಅಂತೆಯೇ ಶಂತನುಗೆ ತನ್ನ ಸ್ವರೂಪಾದಿ ರಹಸ್ಯಗಳನ್ನು ತಿಳಿಸಿದ ಕೂಡಲೇ ಗಂಗಾದೇವಿಯು ತಾನು ಹಾಕಿದ ನಿಯಮವನ್ನು ಉಲ್ಲಂಘಿಸಿದನೆಂಬ ಕಾರಣ ಹೇಳಿ ಪತಿಯನ್ನು ತ್ಯಜಿಸಿ ಪತಿಯ ಅನುಜ್ಞೆಯಂತೆಯೇ ಅಷ್ಟಮಸುತನೊಡನೆ ವರುಣಾಲಯಕ್ಕೆ ಹೊರಟು-ಹೋದಳು. ಮತ್ತು ಪುತ್ರಸಂಹಾರಕಾರ್ಯದಿಂದ ನಿವೃತ್ತಳಾಗಿ ಮಗನನ್ನು ವಿದ್ಯಾಭ್ಯಾಸಕ್ಕಾಗಿ ದೇವಗುರು ಬೃಹಸ್ಪತ್ಯಾ-ಚಾರ್ಯರಿಗೆ ಒಪ್ಪಿಸಿದಳು.

ಶಂತನು-ಗಂಗೆಯರಿಗೆ ಜನಿಸಿದ ಅಷ್ಟಮಪುತ್ರನಿಗೆ ದೇವವ್ರತನೆಂದು ಹೆಸರು. ದೇವವ್ರತನು ಐವತ್ತು ವರ್ಷಗಳ ಕಾಲ ಬೃಹಸ್ಪತ್ಯಾಚಾರ್ಯರ ಶಿಷ್ಯನಾಗಿದ್ದು, ಭಗವನ್ನಿಷ್ಠಬುದ್ಧಿಯುಳ್ಳವನಾಗಿ ಅವರಲ್ಲಿ ಸಕಲ ದೇವತೆಗಳನ್ನೂ ಅರ್ಥ-ಪೂರ್ವಕವಾಗಿ ಚೆನ್ನಾಗಿ ಅಧ್ಯಯನ ಮಾಡಿದನು. ಅನಂತರ ಗಂಗಾದೇವಿಯು ದೇವವ್ರತನನ್ನು ಪರಮಶ್ರೇಷ್ಠನೂ ನಿರವಧಿಕ ಕಲ್ಯಾಣಗುಣಪೂರ್ಣನೂ ಭೃಗುಗಳಿಗೆ ಅಧಿಪತಿಯೂ ಆದ ಶ್ರೀಪರಶುರಾಮದೇವರಲ್ಲಿ ವಿಶೇಷ ಅಧ್ಯಯನಕ್ಕಾಗಿ ಸಮರ್ಪಿಸಿದಳು. ದೇವವ್ರತನು ಶ್ರೀಪರಶುರಾಮದೇವರನ್ನು ಸೇವಿಸುತ್ತಾ ಐವತ್ತು ವರ್ಷಗಳ ಕಾಲ ಅವರಲ್ಲಿ ಶ್ರೀಹರಿ ಸ್ವರೂಪಪ್ರತಿಪಾದಕ ಶಾಸ್ತ್ರವನ್ನು ವ್ಯಾಸಂಗ ಮಾಡಿ ಮತ್ತೆ ಇಪ್ಪತ್ತೈದು ವರ್ಷಕಾಲ ಅವರಲ್ಲಿ ಅಸ್ತ್ರವಿದ್ಯೆಯನ್ನು ಅಭ್ಯಾಸ ಮಾಡಿದನು.

ಆ ತರುವಾಯ ಗಂಗಾದೇವಿಯು ಮಗನನ್ನು ಅವನ ತಂದೆಗೆ ಒಪ್ಪಿಸಲಾಶಿಸಿ ಪರಶುರಾಮಾಶ್ರಮದಿಂದ ದೇವವ್ರತನನ್ನು ಕರೆತಂದು ಗಂಗಾನದಿಯ (ತನ್ನ) ತಟದಲ್ಲಿ ಬಿಟ್ಟಳು. ದೇವವ್ರತನು ತನ್ನ ಅಸ್ತ್ರವಿದ್ಯಾಕೌಶಲವನ್ನು ಪ್ರದರ್ಶಿಸಲು ಗಂಗಾನದಿಯನ್ನೇ ಶರಪಂಜರದಿಂದ ಬಂಧಿಸಿ ಕ್ರೀಡಿಸುತ್ತಿದ್ದನು. ಅದೇ ಕಾಲದಲ್ಲಿ ಮೃಗಯಾರ್ಥವಾಗಿ

ಬಂದ ಶಂತನು ಚಕ್ರವರ್ತಿಯು ತೃಷಾರ್ತನಾಗಿ ಗಂಗಾನದಿಯತ್ತ ಬಂದನು. ದೇವವ್ರತನು ಶರಪಂಜರದಿಂದ ಗಂಗೆಯನ್ನು ಬಂಧಿಸಿದ್ದರಿಂದ ಗಂಗೆಯು ಅಲ್ಪಜಲಯುಕ್ತಳಾಗಿ ಹರಿಯುತ್ತಿದ್ದಳು. ಇದನ್ನು ಕಂಡು ಶಂತನು ವಿಸ್ಮಯಗೊಂಡನು. ಮತ್ತು ಅದರ ರಹಸ್ಯವನ್ನರಿಯಲು ಗಂಗಾತಟದಲ್ಲಿ ಸಂಚರಿಸುತ್ತಿರುವಾಗ ಅಸ್ತ್ರಕ್ರೀಡಾರತನಾದ ತನ್ನ ಮಗನನ್ನು ಕಂಡನು. ಶಂತನುವನ್ನು ನೋಡಿದ ಕೂಡಲೇ ದೇವವ್ರತನು ಅದೃಶ್ಯನಾದನು. ಆ ಬಾಲಕನಾರು? ಅವನೆಲ್ಲಿ ಹೋದನು ಎಂದು ಶಂತನು ವಿಚಾರ ಮಾಡುತ್ತಿರಲು ಗಂಗಾದೇವಿಯು ಮಗನೊಡನೆ ಶಂತನು ಇದ್ದಲ್ಲಿಗೆ ಬಂದು "ದೇವ, ಇವನು ನಿನ್ನ ಮಗನು. ಸಮಸ್ತ ವಿದ್ಯಾನಿಪುಣನು, ಅಸ್ತ್ರಪ್ರಯೋಗ ಕುಶಲನು, ವೀರ್ಯ-ಬಲ-ಗುಣಸಂಪನ್ನನಾಗಿದ್ದಾನೆ. ನೀನು ಇವನನ್ನು ಸ್ವೀಕರಿಸು" ಎಂದು ಹೇಳಿ ಮತ್ತೆ ಇಂತೆಂದಳು "ಇವನ ಹಿಂದೆ ಜನಿಸಿದ ಏಳು ಜನ ಕುಮಾರರು ಶ್ರೀಹರಿ ಪಾದಪದ್ಮೋದ್ಭವಳಾದ ನನ್ನ ಸ್ಪರ್ಶದಿಂದ (ಗಂಗಾನದೀ ಸ್ಪರ್ಶದಿಂದ) ಮಾನವ ದೇಹವನ್ನು ತ್ಯಜಿಸಿ ಮೂಲರೂಪವನ್ನು ಪಡೆದಿದ್ದಾರೆ. ಅವರಿಗಾಗಿ ಶೋಕಿಸಬೇಡ. ಈ ಕುಮಾರನನ್ನು ಪಡೆದು ಸಂತಸದಿಂದಿರು". ಹೀಗೆ ಹೇಳಿ ಗಂಗಾದೇವಿಯು ಪುತ್ರನನ್ನು ಶಂತನು ಚಕ್ರವರ್ತಿಗೆ ಒಪ್ಪಿಸಿಕೊಟ್ಟು ಅದೃಶ್ಯಳಾದಳು. ಶಂತನು ದೇವವ್ರತನೊಡನೆ ಅರಮನೆ ಸೇರಿದನು ಮತ್ತು ಕುಮಾರನ ಜ್ಞಾನ ಭಕ್ತ್ಯಾದಿ ಸದ್ಗುಣಗಳನ್ನು ಕಂಡು ಅತ್ಯಂತ ತೃಪ್ತನಾಗಿ ದೇವವ್ರತನಿಗೆ ಯೌವರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿ ಮುದಿಸಿದನು.

ಶ್ರೀಗಂಗಾದೇವಿಯು ಅಷ್ಟಮ ಪುತ್ರನನ್ನು ಪ್ರಸವಿಸಿದ ಸಮಯದಲ್ಲೇ ಒಂದು ದಿನ ಶಂತನು ಚಕ್ರವರ್ತಿಯು ಮೃಗಯಾರ್ಥವಾಗಿ ಅರಣ್ಯದಲ್ಲಿ ಸಂಚರಿಸುತ್ತಿರುವಾಗ ಅಯೋನಿಜರಾದ ಅವಳಿ ಮಕ್ಕಳನ್ನು ಕಂಡನು. ಶರದ್ವತ್ ಎಂಬ ಋಷಿಯು ತಪೋನಿರತನಾಗಿರುವಾಗ ಆಕಸ್ಮಿಕವಾಗಿ ದೇವನರ್ತಕಿಯಾದ ಊರ್ವಶಿಯನ್ನು ಕಂಡನು. ಕೂಡಲೇ ಅವನಿಗೆ ರೇತಸ್ಸು ಸ್ಖಲಿಸಿ ಹುಲ್ಲಿನ ಗುಂಪಿನಲ್ಲಿ ಬಿದ್ದಿತು. ಏಕಾದಶರುದ್ರ ಮಧ್ಯದಲ್ಲಿ ವಿಷ್ಕಂಭನೆಂಬ ರುದ್ರನು ಭೂಮಿಗೆ ಭಾರರಾದ ದೈತ್ಯರ ಸಂಹಾರರೂಪವಾದ ಶ್ರೀಹರಿಯ ಬಲಕಾರ್ಯದಲ್ಲಿ ಸಹಾಯಕನಾಗಿ ಸೇವೆ ಸಲ್ಲಿಸಲು ಶರದ್ವತ್ ಋಷಿಯ ವೀರ್ಯದಿಂದ ಪುತ್ರನಾಗಿ ಜನಿಸಿದನು. ಅದೇ ತೇಜಸ್ಸಿನಿಂದ ಬೃಹಸ್ಪತ್ಯಾಚಾರ್ಯರ ಪತ್ನಿಯಾದ ತಾರಾದೇವಿಯೂ ಜನಿಸಿದಳು. ಹೀಗೆ ಶರದ್ವತ್ ಋಷಿಯು ತನ್ನ ವೀರ್ಯದಿಂದ ಉತ್ಪನ್ನರಾದ ಗಂಡು ಹೆಣ್ಣು ಶಿಶುಗಳನ್ನು ಜ್ಞಾನಿಯಾದುದರಿಂದ ಅವರನ್ನು ಶಂತನು ಚಕ್ರವರ್ತಿಯು ಪೋಷಿಸುವನೆಂದು ಅರಿತು ಆ ಮಕ್ಕಳನ್ನು ಕಾಡಿನಲ್ಲಿಯೇ ಬಿಟ್ಟು ಹೊರಟುಹೋದನು. ಅರಣ್ಯದಲ್ಲಿ ಅನಾಥವಾಗಿದ್ದ ಆ ಶಿಶುಗಳನ್ನು ಕಂಡು ಶಂತನು ಚಕ್ರವರ್ತಿಯು ಕಾರುಣ್ಯಪರವಶನಾಗಿ ಅವರನ್ನು ತನ್ನ ಅರಮನೆಗೆ ಕೊಂಡೊಯ್ದು ಸಂರಕ್ಷಿಸಹತ್ತಿದನು. ಶಂತನುವಿನ ಕೃಪೆಯಿಂದ ಆ ಮಕ್ಕಳು ಪೋಷಿಸಲ್ಪಟ್ಟದ್ದರಿಂದ ಗಂಡುಮಗುವಿಗೆ ಕೃಪ ಎಂದು ಹೆಣ್ಣುಕೂಸಿಗೆ ಕೃಪಿಯೆಂದೂ ಹೆಸರಾಯಿತು. ಶಂತನು ಅವರಿಗೆ ಅದೇ ಹೆಸರಿಟ್ಟನು. ರಾಜನ ಪೋಷಣೆಯಲ್ಲಿ ಅಭಿವೃದ್ಧನಾದ ಕೃಪನು ಶ್ರೀಹರಿಯನ್ನು ಕುರಿತು ತಪಸ್ಸನ್ನಾಚರಿಸಿದನು. ಸರ್ವಲೋಕಗಳಿಗೂ, ದೇವತೆಗಳಿಗೂ ನಿಯಾಮಕನಾದ ಶ್ರೀಹರಿಯು ಸಂತುಷ್ಟನಾಗಿ ಕೃಪಾಚಾರ್ಯರಿಗೆ ಮುಂದಾಗಲಿರುವ ಸಪ್ತಋಷಿಗಳಲ್ಲಿ ಒಂದು ಸ್ಥಾನ (ಒಂದು ಋಷಿತ್ವವನ್ನು)ವನ್ನೂ ಮತ್ತು ವೈವಸ್ವತಮನು ಕಲ್ಪಪರ್ಯಂತವಾದ ಆಯುಸ್ಸನ್ನೂ ಕರುಣಿಸಿದನು. ಅನಂತರ ಕೃಪಾಚಾರ್ಯರು ಶಂತನು ಚಕ್ರವರ್ತಿಯ ಮನೆಯಲ್ಲಿ ರಾಜಕುಮಾರನಾದ ದೇವವ್ರತನಿಗೆ ಪ್ರಿಯ ಗೆಳೆಯನಾಗಿ ವಾಸ ಮಾಡಿದನು. ಶಂತನು ಕೃಪ ಮತ್ತು ಕೃಪಿಯರನ್ನು ಮಗ ಮತ್ತು ಮಗಳಂತೆ ಸಂರಕ್ಷಿಸಿದನು. ಕೃಪಾಚಾರ್ಯರು ಗೌತಮ ಋಷಿಗಳ ಅನುಗ್ರಹದಿಂದ ಅವರ ಗೋತ್ರ್ಯಾದಿಗಳನ್ನು ಪಡೆದುದಲ್ಲದೆ ಅವರಲ್ಲಿ ಅಸ್ತ್ರವಿದ್ಯೆಯನ್ನೂ, ವಿಶ್ವಾಮಿತ್ರ ಋಷಿಗಳಿಂದ ಸಕಲ ವೇದಗಳನ್ನೂ ಶಾಸ್ತ್ರಗಳನ್ನೂ ಶ್ರೀವೇದವ್ಯಾಸ ದೇವರಿಂದ ತತ್ವಜ್ಞಾನವನ್ನೂ ಪಡೆದು ಸರ್ವಜ್ಞರಾಗಿ ವಿರಾಜಿಸಿದರು.

ಕೃಪಾಚಾರ್ಯರ ಜನನ ಸಮಯದಲ್ಲೇ ಬೃಹಸ್ಪತ್ಯಾಚಾರ್ಯರ ಮಕ್ಕಳಾದ ಭರದ್ವಾಜ ಋಷಿಗಳು ಭಾಗೀರಥೀ ಸ್ನಾನಾರ್ಥವಾಗಿ ಗಂಗಾನದಿಗೆ ತೆರಳಿದ್ದರು. ಆ ಕಾಲದಲ್ಲಿ ಸ್ನಾನ ಮಾಡುತ್ತಿದ್ದ ದೇವ ನರ್ತಕಿಯಾದ ಘೃತಾಚಿಯು ಉಟ್ಟದ್ದ

ರೇಷ್ಮೆಯ ಪೀತಾಂಬರವು ಅಸ್ತವ್ಯಸ್ತವಾಗಿ ಜಾರಿಬಿದ್ದಿತು. ನಗ್ನಳಾಗಿದ್ದ ಘೃತಾಚಿಯ ದರ್ಶನದಿಂದ ಭರದ್ವಾಜರಿಗೆ ರೇತಸ್ಸು ಸ್ಖಲನವಾಯಿತು. ಆಗ ಅವರು ಆ ವೀರ್ಯವನ್ನು ತಮ್ಮಲ್ಲಿದ್ದ ಧಾನ್ಯಗಳನ್ನು ಅಳೆಯುವ ಕೊಳಗ (ದ್ರೋಣ)ದಲ್ಲಿಟ್ಟರು. ಆದರಿಂದ ಬ್ರಹ್ಮದೇವರ ಆವೇಶಯುಕ್ತರಾಗಿ ಸಾಕ್ಷಾತ್ ಬೃಹಸ್ಪತ್ಯಾಚಾರ್ಯರು ಶ್ರೀಹರಿಗೆ ಭೂಭಾರಹರಣ ಕಾರ್ಯದಲ್ಲಿ ಸೇವೆ ಸಲ್ಲಿಸಲು, ಭರದ್ವಾಜರಿಗೆ ಪುತ್ರರಾಗಿ ಜನಿಸಿದರು. ತಾರತಮ್ಯದಲ್ಲಿ ಕಿರಿಯರಾದ ಅವರು ಮುಂದೆ ಶ್ರೇಷ್ಠರಾದ ಭೀಮಾರ್ಜುನಾದಿಗಳಿಗೆ ಗುರುಗಳಾಗಬೇಕಾಗಿರುವುದರಿಂದ ಅವರಿಗೆ ಆ ಯೋಗ್ಯತೆ ತಂದುಕೊಡಲು ಅವರಲ್ಲಿ ಬ್ರಹ್ಮ-ದೇವರು ಸನ್ನಿಹಿತರಾದರು. ಭರದ್ವಾಜರು ಪುತ್ರರಿಗೆ ದ್ರೋಣ ಎಂದು ನಾಮಕರಣ ಮಾಡಿದರು. ದ್ರೋಣರು ಮುಂದೆ ತಂದೆಗಳಾದ ಭರದ್ವಾಜ ಮುನಿಗಳಲ್ಲಿ ವೇದ ಮತ್ತು ಸಕಲ ಶಾಸ್ತ್ರಗಳನ್ನು ಅಧ್ಯಯನ ಮಾಡಿ ಚತುರಾನನರ ಆವೇಶವಿದ್ದುದರಿಂದ ಶೀಘ್ರವಾಗಿ ಸರ್ವಜ್ಞರಾದರು.

ದ್ರೋಣಾಚಾರ್ಯರ ಉತ್ಪತ್ತಿ ಕಾಲದಲ್ಲಿ ಅಪುತ್ರನಾಗಿದ್ದ ಪಾಂಚಾಲ ದೇಶಾಧಿಪತಿಯಾದ ಪೃಷತನೆಂಬ ರಾಜನು ಮಕ್ಕಳಿಗಾಗಿ ತಪಸ್ಸು ಮಾಡುತ್ತಿರುವಾಗ ಉತ್ತಮಳಾದ ಅಪ್ಸರ ಸ್ತ್ರೀಪತನದಿಂದ ವೀರ್ಯಪತನವಾಯಿತು. ನಾಚಿಕೆಯಿಂದ ಪೃಷತರಾಜನು ಅದನ್ನು ತನ್ನ ಪಾದದಿಂದ ಅದುಮಿ ಮುಚ್ಚಿದನು. ಆದರಿಂದ ಅವನಿಗೆ ಆವಹನೆಂಬ ವಾಯುವಿನ ಆವೇಶಯುಕ್ತನಾದ, ಬ್ರಹ್ಮಸಭೆಯಲ್ಲಿ ಗಾಯನ ಮಾಡುವ 'ಹೂಹೂ' ನಾಮಕ ಗಂಧರ್ವನು ಪುತ್ರನಾಗಿ ಜನಿಸಿದನು. ಪಾದಾಕ್ರಾಂತತ್ವದಿಂದ ಜನಿಸಿದ ಆ ಪೃಷತರಾಜನ ಪುತ್ರನಿಗೆ 'ದ್ರುಪದ'ನೆಂದೂ ಹೆಸರಾಯಿತು. ಆ ದ್ರುಪದನು ದ್ರೋಣರ ಒಡನಾಡಿಯಾಗಿ ಅವರೊಡನೆ ಭರದ್ವಾಜರಲ್ಲಿ ವೇದಶಾಸ್ತ್ರ ಹಾಗೂ ಎಲ್ಲ ವಿದ್ಯೆಗಳನ್ನು ಅಧ್ಯಯನ ಮಾಡಿದನು. ದ್ರುಪದನು ತಾನು ಮತ್ತು ದ್ರೋಣ ಇಬ್ಬರೂ ಒಂದೇ ಗುರುವಿನಲ್ಲಿ ಒಟ್ಟಿಗೆ ವಿದ್ಯೆಯನ್ನು ಪಡೆದು ಮಿತ್ರರಾಗಿದ್ದುದರಿಂದ ಮುಂದೆ ತನಗೆ ಬರಲಿರುವ ರಾಜ್ಯವನ್ನೂ ಸಹ ತಾವಿಬ್ಬರೂ ಕೂಡಿಯೇ ಅನುಭೋಗಿಸೋಣವೆಂದು ದ್ರೋಣರಿಗೆ ಹೇಳಿ ಅದರಂತೆ ಪ್ರತಿಜ್ಞಾ ಬದ್ಧನಾದನು. ಮುಂದೆ ದ್ರುಪದನು ತಂದೆಯ ತರುವಾಯ ಪಾಂಚಾಲದೇಶಕ್ಕೆ ಅಧಿಪತಿಯಾದನು. ಅವನ ಪ್ರತಿಜ್ಞೆಯ ಪ್ರಕಾರವಾಗಿ ದ್ರೋಣರು ದ್ರುಪದನ ಅರ್ಧ ರಾಜ್ಯಕ್ಕೆ ಅಧಿಪತಿಗಳಾಗಲು ಯೋಗ್ಯರಾಗಿದ್ದರೂ ಸಹ ಅವರು ಅದನ್ನು ಆಶಿಸದೆ ಕೃಪಾಚಾರ್ಯರ ಸಹೋದರಿಯಾದ ಕೃಪಿಯನ್ನು ಬ್ರಾಹ್ಮವಿಧಿಯಿಂದ ವಿವಾಹವಾಗಿ ಪ್ರತಿಗ್ರಹವಿರಹಿತರಾಗಿ ಶಿಲೋಂಛನ ವೃತ್ತಿಯಿಂದ ಜೀವಿಸುತ್ತಾ ಶ್ರೀವಿಷ್ಣು ಪ್ರೀತಿಕರ ಧರ್ಮಾಸಕ್ತರಾಗಿ ದೇವವ್ರತನಿಗೆ ಮಿತ್ರರಾಗಿ ನಂತರ ಕೃಪರಿಗೆ ಸಖರಾಗಿ ಹಸ್ತಿನಾವತಿಯಲ್ಲಿ ಸುಖವಾಗಿ ವಾಸಮಾಡಹತ್ತಿದರು.

ಬ್ರಹ್ಮದೇವರ ಸಭೆಯಲ್ಲಿ ಗಾನ ಮಾಡುವ "ಹಾಹಾ" ಎಂಬ ಗಂಧರ್ವಾಂಶದಿಂದ ಜನಿಸಿದ ವಿರಾಟನೆಂಬ ರಾಜನೂ ಸಹ ದೇವವ್ರತ (ಭೀಷ್ಮ), ದ್ರೋಣ, ಕೃಪ ಮತ್ತು ದ್ರುಪದರ ಸಮವಯಸ್ಕನಾಗಿ ವರ್ಣಾಶ್ರಮಧರ್ಮನಿರತನಾಗಿ ರಾಜ್ಯಭಾರ ಮಾಡುತ್ತಿದ್ದನು. ಆ ವಿರಾಟರಾಜನಲ್ಲಿ 'ವಿವಹ' ನಾಮಕವಾಯುವಿನ ವಿಶೇಷ ಸನ್ನಿಧಾನ (ಆವೇಶ)ವಿತ್ತು.

ಈಗ ನಿರ್ಣಯಕಾರರು ಪಾಂಡವರ ಉತ್ಪತ್ತಿಗೆ ಉಪೋದ್ಘಾತ ಹೇಳುತ್ತಾರೆ.

ಶಂತನು ಚಕ್ರವರ್ತಿಯು ತನ್ನ ಕುಮಾರನಾದ ದೇವವ್ರತನಿಗೆ ಯೌವರಾಜ್ಯದಲ್ಲಿ ಪಟ್ಟಾಭಿಷೇಕಮಾಡಿ ಸಂತೋಷಿಸಿದನು. ಆನಂತರ ಒಂದು ದಿನ ಶಂತನು ಚಕ್ರವರ್ತಿಯು ಬೇಟೆಯಾಡಲು ಹೊರಟಾಗ ಭಕ್ತ್ಯಾದಿಗುಣಸಂಪನ್ನಳೂ ರೂಪಲಾವಣ್ಯ-ಪೂರ್ಣಳೂ ಆದ ಓರ್ವ ಕನ್ನಿಕೆಯನ್ನು ಕಂಡನು. ಅವಳಿಗೆ ಕಾಳಿ ಎಂದು ಹೆಸರು. ಆ ಕನ್ಯೆಯು ಪೂರ್ವಜನ್ಮದಲ್ಲಿ ಅಗ್ನಿಷ್ವಾತ್ತರೆಂದು ವಿಖ್ಯಾತರಾದ ಪಿತೃದೇವತೆಗಳ ಮನಸ್ಸಿನಿಂದ 'ಅಚ್ಛೋದಾ' ಎಂಬ ಹೆಸರಿನಿಂದ ಪುತ್ರಿಯಾಗಿ ಜನಿಸಿದ್ದಳು. ಆಗವಳು ಶ್ರೀಹರಿಯನ್ನು ಕುರಿತು ಉತ್ತಮವಾದ ತಪಸ್ಸನ್ನಸಗಿದಳು. ಅವಳ ತಪಸ್ಸಿಗೆ ಮೆಚ್ಚಿದ ಶ್ರೀಹರಿಯು ಮೈದೋರಿ ಅವಳಿಗೆ 'ನಾನು ನಿನಗೆ ಪುತ್ರನಾಗಿ ಅವತರಿಸುತ್ತೇನೆ' ಎಂದು ವರವನ್ನು ಅನುಗ್ರಹಿಸಿದ್ದನು. ಮುಂದೆ ಆ ಅಚ್ಛೋದೆಯು

ವಸುರಾಜನಿಗೆ ಮಗಳಾಗಿ ಹುಟ್ಟಿ ದೈವಸಂಕಲ್ಪದಿಂದ ನಾವಿಕರಿಗೆ ಒಡೆಯನಾದ ದಾಶರಾಜನ ಮನೆಯಲ್ಲಿ ಕಾಳಿ ಎಂಬ ಹೆಸರಿನಿಂದ ಬೆಳೆದಳು. ಆ ಕನ್ಯೆಯಲ್ಲಿ ಶ್ರೀಹರಿ ಪರಮಾತ್ಮನು ತಾನು ನೀಡಿದ್ದ ವರದಂತೆ ಶ್ರೀವೇದವ್ಯಾಸರೂಪದಿಂದ ಪ್ರಕಟವಾದನು. ಆ ಕಾಳಿಯನ್ನು ನೋಡಿ ಶಂತನು ಚಕ್ರವರ್ತಿಯು ಮೋಹಿತನಾಗಿ ಅವಳನ್ನು ಲಗ್ನವಾಗಬಯಸಿದನು. ದಾಸರಾಜನು ತನ್ನ ಮಗಳ ಉದರದಲ್ಲಿ ಜನಿಸುವ ಪುತ್ರನಿಗೆ ಸಾಮ್ರಾಜ್ಯ ಪಟ್ಟ ಕಟ್ಟುವಂತಿದ್ದರೆ ತನ್ನ ಕನ್ಯೆಯನ್ನು ಲಗ್ನ ಮಾಡಿಕೊಡುವುದಾಗಿ ಹೇಳಿದನು. ಜ್ಯೇಷ್ಠನೂ, ಶ್ರೇಷ್ಠನೂ ಆದ ದೇವವ್ರತನು ಇರುವಾಗ ಈ ಕನ್ಯೆಯಲ್ಲಿ ಜನಿಸಿದವನಿಗೆ ರಾಜ್ಯವನ್ನೆಂತು ಕೊಡಲಾದೀತೆಂದು ಚಿಂತಿಸಿ ನಿರಾಶನಾದ ಶಂತನು ಅರಮನೆಗೆ ಮರಳಿದನು. ಯೋಚನೆಯಿಂದ ಕಂಗೆಟ್ಟು ಬಾಡಿದ ಮುಖವುಳ್ಳ ತಂದೆಯ ಚಿಂತೆಗೆ ಕಾರಣವೇನೆಂದು ದೇವವ್ರತನು ಪಿತನ ಸಾರಥಿಯನ್ನು ಪ್ರಶ್ನಿಸಿದನು. ಆ ಸಾರಥಿಯು ನಡೆದ ಸಮಸ್ತ ವಿಚಾರಗಳನ್ನೂ ದೇವವ್ರತನಿಗೆ ತಿಳುಹಿಸಿದನು. ತಂದೆಯ ದುಃಖದ ಕಾರಣವನ್ನರಿತ ದೇವವ್ರತನು ಕೂಡಲೇ ದಾಶರಾಜನಲ್ಲಿಗೆ ಹೋಗಿ 'ನನ್ನ ತಂದೆಗೆ ನಿನ್ನ ಪುತ್ರಿಯನ್ನು ವಿವಾಹಮಾಡಿಕೊಡು. ನೀನು ಅಪೇಕ್ಷಿಸಿದಂತೆ ನಿನ್ನ ಮಗಳ ಉದರದಲ್ಲಿ ಜನಿಸಿದ ಮಗನಿಗೇ ಈ ಸಾಮ್ರಾಜ್ಯದಲ್ಲಿ ಪಟ್ಟಕಟ್ಟುತ್ತೇನೆ. ನಾನು ಆಜನ್ಮ ಬ್ರಹ್ಮಚಾರಿಯಾಗಿದ್ದು ಸಾಮ್ರಾಜ್ಯದ ಹಿತರಕ್ಷಣೆ ಮಾಡುತ್ತೇನೆ' ಎಂದು ಪ್ರತಿಜ್ಞಾಪೂರ್ವಕವಾಗಿ ಹೇಳಿದನು. ದೇವವ್ರತನ ಈ ಬಗೆಯಾದ ಭಯಂಕರ ಪ್ರತಿಜ್ಞೆಯನ್ನು ಕೇಳಿ ಇಂದ್ರಾದಿ ದೇವತೆಗಳು ಅವನ ಮೇಲೆ ಪುಷ್ಪವೃಷ್ಟಿ ಮಾಡಿ "ಭೀಷ್ಮ, ಭೀಷ್ಮ" ಎಂದು ದೇವವ್ರತನನ್ನು ಕೊಂಡಾಡಿದರು. ದಾಶರಾಜನು ಅದ್ಭುತ ಪ್ರತಿಜ್ಞೆ ಮಾಡಿ ದೇವತೆಗಳಿಂದ ಭೀಷ್ಮನೆಂದು ಸಂಭೋಧಿತನಾದ ದೇವವ್ರತನ ಮಾತಿಗೆ ಸಂತೋಷದಿಂದ ಸಮ್ಮತಿಸಿ ತನ್ನ ಮಗಳಾದ ಕಾಳಿಯನ್ನು ಶಂತನುಗೆ ಪತ್ನಿಯಾಗಲು ದೇವವ್ರತನೊಡನೆ ಕಳುಹಿಸಿಕೊಟ್ಟನು. ದೇವವ್ರತನು ಕಾಳಿಯ ಪೂರ್ವೋತ್ತರ ವಿಚಾರಗಳನ್ನು ತಿಳಿದು ಅವಳು ವಸುರಾಜನ ಪುತ್ರಿಯೂ, ಗುಣಯುಕ್ತಳೂ ಸತ್ಯಶಬ್ದವಾಚ್ಯನಾದ ಶ್ರೀವಿಷ್ಣುವಿನ (ಶ್ರೀವೇದವ್ಯಾಸರ) ತಾಯಿಯೂ ಆಗಿರುವಳು ಅಂತೆಯೇ ಅವಳು ಶ್ರೇಷ್ಠಳಾಗಿ ಸತ್ಯವತೀ ಎಂಬ ಹೆಸರಿನಿಂದ ಲೋಕದಲ್ಲಿ ಪ್ರಖ್ಯಾತಳಾಗುವಳೆಂದರಿತು ಸತ್ಯವತೀನಾಮಕಳಾದ ಆ ಕನ್ಯೆಯನ್ನು ತಂದೆಯಾದ ಶಂತನು ಚಕ್ರವರ್ತಿಗೆ ಕೊಟ್ಟು ಸಂತೋಷದಿಂದ ವಿವಾಹವನ್ನು ನೆರವೇರಿಸಿದನು.

"ಯೋಗ್ಯತೆಯ ಎಲ್ಲೆ ಮೀರದಿರುವ ಸಜ್ಜನರ ಮನಸ್ಸು ಪಾಪಕಾರ್ಯದಲ್ಲಿ ಆಸಕ್ತವಾಗುವುದಿಲ್ಲ. ನನ್ನ ಮನಸ್ಸು ಈ ಕನ್ನಿಕೆಯಲ್ಲಿ ಆಸಕ್ತವಾಗಿದೆ. ಅವಳು ನನಗೆ ಯೋಗ್ಯಳಲ್ಲದಿದ್ದಲ್ಲಿ ನನ್ನ ಮನಸ್ಸು ಅವಳಲ್ಲಿ ಆಸಕ್ತವಾಗುತ್ತಿರಲಿಲ್ಲ. ಅವಳು ನಾವಿಕರೊಡನೆಯನಾದ ದಾಶರಾಜನ ಮನೆಯಲ್ಲಿ ಅವನ ಮಗಳೆಂದು ಕಾಳಿ ಎಂಬ ಹೆಸರಿನಿಂದ ಬೆಳೆದಿದ್ದರೂ ನಿಜವಾಗಿ ಅವಳು ರಾಜಪುತ್ರಿಯು, ವಸುರಾಜನ ಮಗಳಾದ ಅವಳು ರಾಜಕನ್ನಿಕೆಯರಿಗೆ ಯೋಗ್ಯವಾದ ರೀತಿಯಲ್ಲಿ ಪೋಷಿತಳಾಗಿದ್ದಾರೆ. ಆದುದರಿಂದ ಅವಳನ್ನು ನಾನು ಪರಿಗ್ರಹಿಸುವುದು ಅಧರ್ಮವಾಗಲಾರದು" ಎಂದು ತಿಳಿದು ಶಂತನು ಚಕ್ರವರ್ತಿಯು ಸತ್ಯವತಿಯನ್ನು ವಿವಾಹಪೂರ್ವಕ ಸ್ವೀಕರಿಸಿದನು. ತನ್ನ ಮನಸ್ಸಂತೋಷಪಡಿಸಲೋಸುಗ ಅದ್ಭುತ ತ್ಯಾಗಮಾಡಿ ಆಜನ್ಮ ಬ್ರಹ್ಮಚಾರಿಯಾಗಿರುವುದಾಗಿ ಪ್ರತಿಜ್ಞೆ ಮಾಡಿ ಸತ್ಯವತಿಯನ್ನು ತನಗೆ ಸಮರ್ಪಿಸಿದ ಪ್ರಿಯಪುತ್ರನಾದ ಭೀಷ್ಮ(ದೇವವ್ರತ)ನಲ್ಲಿ ಸುಪ್ರೀತನಾದ ಶಂತನು ಚಕ್ರವರ್ತಿಯು ಭೀಷ್ಮನಿಗೆ ಸ್ವಚ್ಛಂದಮರಣ (ಇಚ್ಛಾಮರಣ), ಅಜಯ್ಯತ್ವ ಮುಂತಾದ ಶ್ರೇಷ್ಠ ವರಗಳನ್ನು ಕೊಟ್ಟು ಆಶೀರ್ವದಿಸಿದನು. ಮತ್ತು ಸತ್ಯವತಿಯೊಡನೆ ಬಹುವರ್ಷಗಳವರೆಗೆ ಸುಖವಾಗಿ ವಿಹರಿಸಿದನು. ಶಂತನುಗೆ ಸತ್ಯವತಿಯಲ್ಲಿ ಚಿತ್ರಾಂಗದ ಮತ್ತು ವಿಚಿತ್ರವೀರ್ಯ ಎಂಬ ಈರ್ವರು ಪುತ್ರರು ಜನಿಸಿದರು. ಅವರಿನ್ನೂ ಬಾಲ್ಯಾವಸ್ಥೆಯಲ್ಲಿರುವಾಗಲೇ ಶಂತನು ಜೀರ್ಣವಾದ ನನ್ನ ಈ ಶರೀರದಿಂದೇನು ಪ್ರಯೋಜನವೆಂದು ಬಗೆದು ಸ್ವೇಚ್ಛೆಯಿಂದಲೇ ಯೋಗಶಕ್ತಿಯಿಂದ ದೇಹ ತ್ಯಾಗಮಾಡಿ ತನ್ನ ಮೂಲರೂಪವನ್ನು (ವರುಣ) ಹೊಂದಿದನು. ಶಂತನು ಯೋಗಶಕ್ತಿಯಿಂದ ದೇಹತ್ಯಾಗಮಾಡಿ ಮೂಲರೂಪ ಪಡೆದಮೇಲೆ ಭೀಷ್ಮಾಚಾರ್ಯರು ತಂದೆಯ ದೇಹಕ್ಕೆ

ಪ್ರೇತಸಂಸ್ಕಾರಾದಿಗಳನ್ನು ನೆರವೇರಿಸಿ ತಮ್ಮನಾದ ಚಿತ್ರಾಂಗದನಿಗೆ ಸಾಮ್ರಾಜ್ಯದಲ್ಲಿ ಪಟ್ಟಾಭಿಷೇಕಮಾಡಿ ಕಿರಿಯನಾದ ವಿಚಿತ್ರವೀರ್ಯನಿಗೆ ಯೌವರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿಸಿದನು. ಮುಂದೆ ಒಂದು ದಿನ ಚಿತ್ರಾಂಗದನೆಂಬ ಗಂಧರ್ವನಿಗೂ ಸಾಮ್ರಾಟ್ ಚಿತ್ರಾಂಗದನಿಗೂ ಕಲಹವುಂಟಾಯಿತು. ಚಿತ್ರಾಂಗದನೆಂಬ ಗಂಧರ್ವನು "ಚಿತ್ರಾಂಗದ ಎಂಬುದು ನನ್ನ ಹೆಸರು. ನೀನು ನನ್ನ ಹೆಸರನ್ನು ಇಟ್ಟುಕೊಂಡಿರುವೆ. ನಾನು ಅದನ್ನು ಸಹಿಸಲಾರೆ. ಆದ್ದರಿಂದ ನೀನು ಚಿತ್ರಾಂಗದ ಎಂಬ ಹೆಸರನ್ನು ಬಿಟ್ಟುಬಿಡು" ಎಂದನು. ಅದಕ್ಕೆ ಚಿತ್ರಾಂಗದನು ಒಪ್ಪದಿರಲು ಗಂಧರ್ವನು ಚಿತ್ರಾಂಗದನನ್ನು ಸಂಹರಿಸಿಬಿಟ್ಟನು. ಚಿತ್ರಾಂಗದನು ಅವಿವಾಹಿತನಾಗಿರುವಾಗಲೇ ಹೀಗೆ ಗಂಧರ್ವನಿಂದ ಕೊಲ್ಲಲ್ಪಟ್ಟನು.

ಚಿತ್ರಾಂಗದನು ಮೃತನಾದ್ದರಿಂದ ಭೀಷ್ಮಾಚಾರ್ಯರು ಅವನ ತಮ್ಮನಾದ ವಿಚಿತ್ರವೀರ್ಯನನ್ನು ಸಾಮ್ರಾಜ್ಯಾಧಿಪತಿಯನ್ನಾಗಿ ಮಾಡಿ ಸಾಮ್ರಾಜ್ಯವನ್ನು ಸಂರಕ್ಷಿಸುತ್ತಿದ್ದರು. ಹೀಗಿರಲೊಂದು ದಿನ ಕಾಶಿರಾಜನ ಅರಮನೆಯಲ್ಲಿ ಸ್ವಯಂವರ ನೆರವೇರುವುದೆಂಬ ವಾರ್ತೆ ಕೇಳಿ ಮಹಾಪರಾಕ್ರಮಶಾಲಿಗಳಾದ ಭೀಷ್ಮಾಚಾರ್ಯರು ಆ ಸ್ವಯಂವರಕ್ಕೆ ಹೋಗಿ ಸಾಲ್ವದೇಶಾಧಿಪತಿಯಾದ ಬ್ರಹ್ಮದತ್ತನೆಂಬ ಅಸುರರನ್ನೂ ಮತ್ತು ಇತರ ಕ್ಷತ್ರಿಯ ರಾಜರನ್ನೂ ಜಯಿಸಿ ಕಾಶೀರಾಜನ ಪುತ್ರಿಯರಾದ ಅಂಬಿಕೆ, ಅಂಬಾಲಿಕೆ, ಅಂಬಾ ಎಂಬ ಮೂವರು ರಾಜಪುತ್ರಿಯರನ್ನೂ ತಮ್ಮ ಸಹೋದರನಾದ ವಿಚಿತ್ರವೀರ್ಯನಿಗಾಗಿ ಅಪಹರಿಸಿ ತಂದರು. ಆಗ ಆ ಮೂವರಲ್ಲಿ ಉತ್ತಮರಾದ ಅಂಬಿಕೆ ಮತ್ತು ಅಂಬಾಲಿಕೆಯರು ವಿಚಿತ್ರವೀರ್ಯನ ಕರಪಿಡಿಯಲು ಸಮ್ಮತಿಸಿದರು. ಆದರೆ ಅಂಬೆಯು ಮಾತ್ರ ತಾನು ಸಾಲ್ವದೇಶಾಧಿಪತಿಯನ್ನು ಮನಸಾ ವರಿಸಿರುವುದಾಗಿ ಸುಳ್ಳಾಡಿದಳು. ಅಂಬೆಯು ಪೂರ್ವದಲ್ಲಿ ಭೀಷ್ಮರ ಮೂಲರೂಪದ ದ್ಯುನಾಮಕ ವಸುವಿನ ಪತ್ನಿಯಾದ ವರಾಂಗಿಯು. ಬ್ರಹ್ಮದೇವರ ಶಾಪದಿಂದ ಈಗ ಅಂಬೆಯಾಗಿ ಜನಿಸಿದ್ದಳು. ಬ್ರಹ್ಮದೇವರ ಶಾಪದಂತೆ ಈ ಜನ್ಮದಲ್ಲಿ ಅವಳು ಪತಿರಹಿತಳಾಗಿದ್ದು ಈಗ ಭೀಷ್ಮರಾಗಿ ಹುಟ್ಟಿರುವ ಮೂಲರೂಪದ ಪತಿಯೊಡನೆ ದ್ವೇಷ ಬೆಳೆಸಬೇಕಾದ್ದು ಯುಕ್ತವಾದ್ದರಿಂದ ಮನುಷ್ಯನ ಪತ್ನಿಯಾಗಲು (ವಿಚಿತ್ರವೀರ್ಯನ ಹೆಂಡತಿಯಾಗಲು) ಇಚ್ಛಿಸದೇ ಬ್ರಹ್ಮದತ್ತ (ಸಾಲ್ವ)ನನ್ನು ವರಿಸಿರುವುದಾಗಿ ಸುಳ್ಳು ಹೇಳಿದಳು. ಭೀಷ್ಮರು ವಿರುದ್ಧಭಾಷಿಣಿಯಾದ ಅಂಬೆಯನ್ನು 'ನಿನ್ನಿಚ್ಛೆಯಂತೆ ಸಾಲ್ವದೇಶಾಧಿಪತಿಯನ್ನೇ ಲಗ್ನವಾಗು' ಎಂದು ಹೇಳಿ ಬಿಟ್ಟುಕೊಟ್ಟರು. ಅಂಬೆಯು ಸಾಲ್ವದೇಶಾಧಿಪನನ್ನು ಲಗ್ನವಾಗುವಂತೆ ಪ್ರಾರ್ಥಿಸಿದಳು. ಆದರೆ ಪರಸ್ಪೃಷ್ಟಳೆಂದು ಬ್ರಹ್ಮದತ್ತನು ಅವಳನ್ನು ತಿರಸ್ಕರಿಸಿಬಿಟ್ಟನು. ಆಗ ಅಂಬೆಯು ಮತ್ತೆ ಭೀಷ್ಮರಲ್ಲಿಗೆ ಬಂದು ನೀವು ನನ್ನನ್ನು ಸ್ಪರ್ಶಮಾಡಿದ್ದರಿಂದ ಸಾಲ್ವದೇಶಾಧಿಪನು ನನ್ನನ್ನು ತಿರಸ್ಕರಿಸಿದನು. ನೀವೇ ನನ್ನನ್ನು ವಿವಾಹಮಾಡಿಕೊಳ್ಳಿ ಎಂದಳು. ಆಜನ್ಮ ಬ್ರಹ್ಮಚರ್ಯವ್ರತಸ್ಥರಾದ ಭೀಷ್ಮರು ಅವಳ ಮಾತನ್ನು ನಿರಾಕರಿಸಿದರು. ಆಗ ಅಂಬೆಯು ಕ್ರೋಧಸಂತಪ್ತಳಾಗಿ ಭೀಷ್ಮರು ತನ್ನ ಕರ ಪಿಡಿಯುವಂತೆ ಮಾಡುತ್ತೇನೆ. ಇಲ್ಲದಿದ್ದರೆ ಅವರ ಸಂಹಾರ ಮಾಡಿಸುತ್ತೇನೆಂದು ನಿಶ್ಚಯಿಸಿ ಪರಶುರಾಮದೇವರಲ್ಲಿಗೆ ಹೋದಳು. ಅನಂತರ ಭೀಷ್ಮರು ಅಂಬಿಕೆ ಮತ್ತು ಅಂಬಾಲಿಕೆಯರನ್ನು ವಿಚಿತ್ರವೀರ್ಯನಿಗೆ ತಂದುಕೊಂಡು ವೈಭವದಿಂದ ವಿವಾಹವನ್ನು ನೆರವೇರಿಸಿದರು.

ಅತ್ತ ಅಂಬೆಯು ಶ್ರೀಪರಶುರಾಮದೇವರಲ್ಲಿಗೆ ಹೋಗಿ "ಭೀಷ್ಮರು ನನ್ನನ್ನು ವರಿಸುವಂತೆ ಮಾಡಿ. ಇಲ್ಲದಿದ್ದರೆ ಅವನನ್ನು ಸಂಹರಿಸಿರಿ" ಎಂದು ಪ್ರಾರ್ಥಿಸಿದಳು. ಪರಶುರಾಮದೇವರು ತಮ್ಮ ಶಿಷ್ಯರಾದ ಭೀಷ್ಮಾಚಾರ್ಯರಿಗೆ ವಿಶೇಷ ಕೀರ್ತಿಯನ್ನು ಕೊಡಲು ಸಂಕಲ್ಪಿಸಿ ಭೀಷ್ಮಾಚಾರ್ಯರೊಡನೆ ಯುದ್ಧ ಮಾಡಿದರು. ಅಪರಿಮಿತ ಶಕ್ತಿ ಸಂಪನ್ನರಾಗಿದ್ದರೂ ಸಹ ಶ್ರೀಪರಶುರಾಮದೇವರು ಭೀಷ್ಮರಲ್ಲಿರುವ ಕಾರುಣ್ಯಾತಿಶಯದಿಂದ ಅವರನ್ನು ಸಂಹರಿಸಲಿಲ್ಲ. ಅಂಬೆಯನ್ನು ವರಿಸುವಂತೆಯೂ ಮಾಡಲಿಲ್ಲ. "ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾಚ" ಮುಂತಾದ ಶ್ರುತಿಗಳಿಂದ ಗೇಗೀಯಮಾನರಾದ ಶ್ರೀಪರಶುರಾಮದೇವರು ಅನಂತಶಕ್ತಿ ಸಂಪನ್ನರು. ಅವರು ಸರ್ವಾಂತರ್ಯಾಮಿಗಳು.

ಅವರು ಸರ್ವಜ್ಞರು ಮತ್ತು ಸರ್ವವಶಿಗಳಾದ ಅವರಿಗೆ ಸರ್ವವೂ ಅಧೀನ. ಸರ್ವರನ್ನೂ ಜಯಿಸಿದ ಅವರಿಗೆ ಸರಿಸಮರ್ರ್ಯಾರೂ ಇಲ್ಲ. ಇಂತು ಸರ್ವೋತ್ಕೃಷ್ಟರಾದ ಶ್ರೀಪರಶುರಾಮದೇವರಿಗೆ ಯಾವ ದೇಶ-ಕಾಲ-ಪ್ರಕಾರಗಳಿಂದಲೂ ಶಕ್ಯಭಾವವಿಲ್ಲವೇ ಇಲ್ಲ. ತಮ್ಮ ಪರಮಭಕ್ತರೂ ಶಿಷ್ಯರೂ ಆದ ಭೀಷ್ಮಾಚಾರ್ಯರು ಗುರುಗಳೊಡನೆ ಯುದ್ಧ ಮಾಡಿದರೇ ವಿನಃ ಅಂಬೆಯನ್ನು ಸ್ವೀಕರಿಸಲಿಲ್ಲವೆಂಬ ಕೀರ್ತಿಯನ್ನಿತ್ತು ಅಸುರಜನರನ್ನು ಮೋಹಗೊಳಿಸಿದರು. ನಿಜವಾಗಿ ಪರಶುರಾಮದೇವರು ಭೀಷ್ಮಾಚಾರ್ಯರನ್ನು ಜಯಿಸಿಯೇ ಇದ್ದಾರೆ. ಆದರೆ ಅವರನ್ನು ಸಂಹರಿಸಲಿಲ್ಲ ಮಾತ್ರ. ಹೀಗೆ ಆಜನ್ಮ ಬ್ರಹ್ಮಚಾರಿಯಾಗಿರುವೆನೆಂಬ ಭೀಷ್ಮರ ಪ್ರತಿಜ್ಞೆಯನ್ನು ಸತ್ಯಮಾಡಿ ತೋರಿಸಲು ಲೋಕದೃಷ್ಟಿಯಲ್ಲಿ ನನ್ನನ್ನು ಭೀಷ್ಮನು ಜಯಿಸಿದನು ಎಂದು ಅಂಬೆಯನ್ನು ಮೋಹಗೊಳಿಸಲು ಪರಾಜಿತರಾದವರಂತೆ ನಟಿಸಿದರು. ಪರಶುರಾಮದೇವರಿಗೆ ಪರಾಜಯವೆಂಬುದೇ ಇಲ್ಲವೆಂದು ಅನೇಕ ಪ್ರಮಾಣಗಳು ಸಾರುತ್ತಿವೆ. ಶ್ರೀಹರಿಯು ಶರಾಹತನಂತೆ, ಅಜ್ಞನಂತೆ, ವ್ಯಥೆಯಿಂದ ಪೀಡಿತನಾದವನಂತೆ ಅಯೋಗ್ಯರಲ್ಲಿ ಮೋಹವನ್ನುಂಟು ಮಾಡಲು ನಟಿಸುತ್ತಾನಾದರೂ ಅವನಿಗೆ ನಿಜವಾಗಿ ಶರಾಹತಿ ಪೀಡೆ, ವ್ಯಥೆ ಮುಂತಾವುದಾವುದೂ ಇಲ್ಲವೆಂದು ಅನೇಕ ಪುರಾಣ ವಾಕ್ಯಗಳು ಸಾರುವುದರಿಂದ ಶ್ರೀಪರಶುರಾಮರು ಸರ್ವದಾ ಜಯಶೀಲರೇ ಆಗಿದ್ದಾರೆ. ಶ್ರೀಪರಶುರಾಮದೇವರು ಭೀಷ್ಮರಿಗೆ ಕೀರ್ತಿಯನ್ನು ಕರುಣಿಸಿ, ಶರಣಾಗತಳಾದ ಅಂಬೆಯನ್ನು ಪತಿಹನನರೂಪ ಪಾಪಕಾರ್ಯದಿಂದ ಮುಕ್ತಳನ್ನಾಗಿ ಮಾಡಿ ತಾವು ಅಭಯವಿತ್ತಂತೆ ಮುಂದೆ ಭೀಷ್ಮರು ದೇಹತ್ಯಾಗ ಮಾಡಿ ಮೂಲರೂಪ ಸೇರುವುದರೊಳಗೆ ಅಂಬೆಯನ್ನು ಅವರೊಡನೆ ಕೂಡಿಸಿ ಅನುಗ್ರಹಿಸಿದರು ಎಂದು ತಿಳಿಯಬೇಕು.

ಅನಂತರ ಅಂಬೆಯು ಪರಶುರಾಮದೇವರ ಆಶ್ರಮದಿಂದ ಹೊರಟು ಭೀಷ್ಮರನ್ನು ಸಂಹರಿಸಲು ತನಗೆ ಪುಂಸ್ತ್ವ ಬರಬೇಕೆಂದು ರುದ್ರದೇವರನ್ನು ಕುರಿತು ತಪಸ್ಸು ಮಾಡಿದಳು. ಭೀಷ್ಮಾಚಾರ್ಯರು ತಮ್ಮ ಗುರುಗಳಾದ ಶ್ರೀಪರಶುರಾಮದೇವರು ಅಂಬೆಗೆ 'ನಿನ್ನನ್ನು ಭೀಷ್ಮನು ಸ್ವೀಕರಿಸುವಂತೆ ಮಾಡುತ್ತೇನೆ' ಎಂದು ನೀಡಿದ ವಚನವನ್ನು ಶರತಲ್ಪದಲ್ಲಿ ಮಲಗಿ ನಂತರ ದೇಹತ್ಯಾಗ ಮಾಡಿ ಮೂಲರೂಪವಾದ ದ್ಯುನಾಮಕವಸುರೂಪ ಪಡೆದಮೇಲೆ ತಮ್ಮ ಪತ್ನಿಯಾದ ಅವಳನ್ನು ಸ್ವೀಕರಿಸಿ ಸತ್ಯವನ್ನಾಗಿ ಮಾಡಿದರು. ಪರಶುರಾಮರು ನಿನ್ನ ಪತಿಯೊಡನೆ ಕೂಡಿಸುತ್ತೇನೆಂದು ಹೇಳಿದ್ದರೇ ವಿನಃ ಈ ಜನ್ಮದಲ್ಲಿ ಭೀಷ್ಮರೊಡನೆ ಕೂಡಿಸುವುದಾಗಿ ಹೇಳಿರಲಿಲ್ಲವಾದ್ದರಿಂದ, ಮುಂದೆ ಭೀಷ್ಮರು ಮೂಲರೂಪ ಧರಿಸಿ ಅಂಬೆಯ ಮೂಲರೂಪಳಾದ ಸ್ವಪತ್ನಿಯನ್ನು ಸ್ವೀಕರಿಸಿದ್ದರಿಂದ ಪರಶುರಾಮರ ಪ್ರತಿಜ್ಞೆಗೆ ಭಂಗವಿಲ್ಲವೆಂದು ತಿಳಿಯಬೇಕು.

ಅಂಬೆಯ ತಪಸ್ಸಿಗೆ ಮೆಚ್ಚಿ ರುದ್ರದೇವರು ಪ್ರತ್ಯಕ್ಷರಾಗಿ ಮುದಗೊಂಡು ಅವಳಿಗೆ ಎರಡು ವರಗಳನ್ನು ಕರುಣಿಸಿ ಇಂತೆಂದರು "ನೀನು ಭೀಷ್ಮಾಚಾರ್ಯರ ಮರಣಕ್ಕೆ ಕಾರಣಳಾಗುತ್ತೀಯೆ. ಅಂದರೆ ನಿನ್ನಿಂದಾಗಿ ಭೀಷ್ಮರು ಮೃತರಾಗುವರು. ನಿನಗೆ ಮುಂದಿನ ಜನ್ಮದಲ್ಲಿ ಕಾಲಾಂತರದಲ್ಲಿ ಪುರುಷದೇಹ ಪ್ರಾಪ್ತವಾಗುವುದು. ಪುರುಷತ್ವವನ್ನು ಪಡೆಯುತ್ತೀಯೆ" ಎಂದು ಹೇಳಿ ಅಂಬೆಗೆ ಒಂದು ದಿವ್ಯಮಾಲೆಯನ್ನು ಕರುಣಿಸಿದರು ಮತ್ತು "ಇದನ್ನು ಯಾರು ಸ್ವೀಕರಿಸುವರೋ ಅವರೇ ಭೀಷ್ಮರನ್ನು ಸಂಹರಿಸಲು ಸಮರ್ಥರಾಗುವರು" ಎಂದು ಅಪ್ಪಣೆ ಕೊಡಿಸಿದರು.

ಅಂಬೆಯು ಸಂತಸದಿಂದ ಭೀಷ್ಮರ ಸಂಹಾರ ಮಾಡಿಸಲು ರುದ್ರದೇವರಿತ್ತ ಮಾಲೆಯನ್ನು ಹಿಡಿದುಕೊಂಡು ಎಲ್ಲ ರಾಜರ ಬಳಿಗೆ ಹೋಗಿ "ಈ ಮಾಲೆಯನ್ನು ಸ್ವೀಕರಿಸಿರಿ. ನೀವು ಭೀಷ್ಮರನ್ನು ಸಂಹರಿಸಲು ಶಕ್ತರಾಗುವಿರಿ" ಎಂದು ಕೇಳಿಕೊಂಡಳು. ಆದರೆ ಭೀಷ್ಮರ ಮಹಾಪರಾಕ್ರಮವನ್ನು ಬಲ್ಲ ರಾಜರು ಭೀಷ್ಮರ ಭಯದಿಂದ ಆ ಮಾಲೆಯನ್ನು ಸ್ವೀಕರಿಸಲು ಒಪ್ಪದಿರಲು ನಿರಾಶಳಾದ ಅಂಬೆಯು ಭೀಷ್ಮರನ್ನು ಕೊಲ್ಲಬೇಕೆಂಬ ಹಠದಿಂದ ಆ ಮಾಲೆಯನ್ನು ಪಾಂಚಾಲ ದೇಶದ

ಅಧಿಪತಿಯಾದ ದ್ರುಪದಮಹಾರಾಜನ ಅರಮನೆಯ ಬಾಗಿಲಿನಲ್ಲಿಟ್ಟು ಯೋಗಶಕ್ತಿಯಿಂದ ಮುಂದಿನ ಜನ್ಮದಲ್ಲಿ ಭೀಷ್ಮರನ್ನು ಸಂಹರಿಸಬೇಕೆಂಬ ಛಲದಿಂದ ದೇಹತ್ಯಾಗ ಮಾಡಿದಳು.[3]

ಅದೇ ಸಂದರ್ಭದಲ್ಲಿ ಪಾಂಚಾಲ ದೇಶಾಧಿಪತಿಯಾದ ದ್ರುಪದರಾಜನು ಮಕ್ಕಳಿಗಾಗಿ ರುದ್ರದೇವರನ್ನು ಕುರಿತು ತಪಸ್ಸನ್ನಾಚರಿಸಿ ಶಿವನನ್ನು ಸಂತೋಷಗೊಳಿಸಿದನು. ದ್ರುಪದನ ತಪಸ್ಸಿಗೆ ಮೆಚ್ಚಿದ ರುದ್ರದೇವರು ಮೈದೋರಿ "ನಿನಗೆ ಓರ್ವಪುತ್ರಿಯು ಜನಿಸುವಳು. ಅವಳು ಮುಂದೆ ಪುರುಷತ್ವ ಪಡೆಯುವಳು" ಎಂದು ವರವಿತ್ತರು. ಶ್ರೀರುದ್ರದೇವರ ವರದ ಫಲದಿಂದ ಅಂಬೆಯು ದ್ರುಪದರಾಜನಿಗೆ ಮಗಳಾಗಿ ಜನಿಸಿದಳು. ಅವಳಿಗೆ ಶಿಖಂಡಿನೀ ಎಂದು ನಾಮಕರಣವಾಯಿತು. ರುದ್ರದೇವರು "ನಿನ್ನ ಪುತ್ರಿಯು ಕಾಲಾಂತರದಲ್ಲಿ ಪುರುಷನಾಗುವಳು" ಎಂದು ವರವಿತ್ತಿದ್ದರಿಂದ, ಈ ಮಗಳೇ ಮುಂದೆ ಮಗನಾಗುವನೆಂಬ ನಂಬಿಕೆಯಿಂದ ದ್ರುಪದರಾಜನು ಮಗಳನ್ನು ಪುತ್ರನಂತೆಯೇ ಬೆಳೆಸಿ, ಪುತ್ರನಿಗೆ ಮಾಡುವಂತೆ, ಚೌಲ, ಉಪನಯನಾದಿ ಸಂಸ್ಕಾರಗಳನ್ನು ನೆರವೇರಿಸಿದನು. ಶಿಖಂಡಿನಿಯು ಹೆಣ್ಣೆಂಬ ವಿಚಾರವನ್ನು ಬಹುರಹಸ್ಯವಾಗಿ ಇಟ್ಟಿದ್ದರಿಂದ ದ್ರುಪದರಾಜ ಮತ್ತು ಅವನ ರಾಣಿ ಇವರಿಬ್ಬರ ವಿನಃ ಉಳಿದವರೆಲ್ಲರೂ ಆ ಬಾಲಿಕೆಯನ್ನು ಪುತ್ರನೆಂದೇ ತಿಳಿದಿದ್ದರು.

ದ್ರುಪದರಾಜನು ದಶಾರ್ಣದೇಶಾಧಿಪತಿಯಾದ ಹಿರಣ್ಯವರ್ಮ ರಾಜನ ಮಗಳನ್ನು ತಂದುಕೊಂಡು ಶಿಖಂಡಿನಿಗೆ ಗಂಡು ಮಕ್ಕಳಿಗೆ ಮಾಡುವಂತೆ ವಿವಾಹವನ್ನು ಮಾಡಿಸಿದನು. ಮುಂದೆ ಗಂಡನಮನೆಗೆ ಬಂದ ಹಿರಣ್ಯವರ್ಮನ ಮಗಳಿಗೆ ತನ್ನ ಪತಿಯು ಗಂಡಲ್ಲ, ತನ್ನಂತೆಯೇ ಹೆಣ್ಣು - ಎಂಬ ವಿಚಾರ ಸ್ಪಷ್ಟವಾಯಿತು. ದುಃಖಭರಿತಳಾದ ಆ ರಾಜಕುವರಿಯು ಈ ರಹಸ್ಯವನ್ನು ತನ್ನ ಉಪಮಾತೆಗೆ ಏಕಾಂತದಲ್ಲಿ ತಿಳಿಸಿದಳು. ಅವಳಾ ವಿಷಯವನ್ನು ಹಿರಣ್ಯವರ್ಮರಾಜನಿಗೆ ನಿವೇದಿಸಿದಳು. ಹಿರಣ್ಯವರ್ಮನು ಬಹಳ ಕ್ರುದ್ಧನಾದನು. ದ್ರುಪದರಾಜನು ಹೆಣ್ಣುಮಗಳನ್ನು ಪುತ್ರನೆಂದು ಸುಳ್ಳುಹೇಳಿ ಅವಳಿಗೆ ತನ್ನ ಮಗಳನ್ನು ಮದುವೆ ಮಾಡಿಸಿ ಮೋಸಗೊಳಿಸಿದನೆಂದು ಅತಿ ಸಿಟ್ಟಿನಿಂದ ದೂತನ ಮೂಲಕವಾಗಿ ದ್ರುಪದರಾಜನಿಗೆ "ನೀನು ಮಾಡಿರುವ ಮೋಸ ಮತ್ತು ವಂಚನೆಗೆ ನಾನೀಗ ಬಾಂಧವಸಹಿತನಾದ ನಿನ್ನನ್ನು ಸಂಹರಿಸುತ್ತೇನೆ" ಎಂದು ಹೇಳಿಕಳಿಸಿದನು. ದ್ರುಪದರಾಜನು ದೂತನ ಮಾತನ್ನಾಲಿಸಿದರೂ ಹೆದರಲಿಲ್ಲ. ಆವನು ರುದ್ರದೇವರು ನಿನ್ನ ಮಗಳು ಮುಂದೆ ಗಂಡಾಗುವಳೆಂದು ವರವಿತ್ತಿದ್ದರಿಂದ ರುದ್ರದೇವರ ವಾಕ್ಯದಲಿ ನಂಬಿಕೆಯಿಟ್ಟು ಶಿಖಂಡಿನಿಯು ಪುತ್ರನೆಂದೇ ಸಾಧಿಸಿ ದೂತನ ಮೂಲಕ ಹಾಗೆ ಹೇಳಿಕಳಿಸಿದನು ಮತ್ತು "ನನ್ನ ಮಗನನ್ನು ಹೆಣ್ಣೆಂದು ಹೇಳಿಕಳಿಸಿರುವ ನಿನ್ನ ಬುದ್ಧಿಯು ಬಾಲಕಿಯ ಮಾತಿನಿಂದ ನಷ್ಟವಾಗಿದೆ. ಆದ್ದರಿಂದ ರಾಜ, ನೀನು ನಿಂದಾರ್ಹನಾಗಿರುವೆ. ಸದಸದ್ವಿವೇಕಬುದ್ಧಿ, ವಿಚಾರ ಶಕ್ತಿಯಿಲ್ಲದ ನಿನಗೆ ರಾಜ್ಯವಿರುವುದು ಯೋಗ್ಯವಲ್ಲ!" ಮುಂತಾಗಿ ಉಪಹಾಸದ ವಚನಗಳನ್ನಾಡಿ ದೂತನನ್ನು ತಿರುಗಿ ಕಳುಹಿಸಿಬಿಟ್ಟನು.

ಹಿರಣ್ಯವರ್ಮನ ದೂತನು ಬಂದು ಹೇಳಿದ ವಿಚಾರ, ಅದಕ್ಕೆ ತಂದೆ ದ್ರುಪದರಾಜನು ಹೇಳಿಕಳಿಸಿದ ಪ್ರತ್ಯುತ್ತರ, ಮತ್ತು ತಂದೆ ತಾಯಿಗಳು ಮುಂದೇನು ಮಾಡಬೇಕೆಂದು ತೋಚದೆ ಚಿಂತಾಕ್ರಾಂತರಾಗಿರುವುದನ್ನು ತಿಳಿದ ಶಿಖಂಡಿನಿಯು

3. ದ್ರುಪದರಾಜನು ಒಣಗದ ಪದ್ಮಮಯವಾದ ಆ ಮಾಲೆಯನ್ನು ತನ್ನ ಕೋಶದಲ್ಲಿ ಭದ್ರವಾಗಿರಿಸಿ, ಮುಂದೆ ದ್ರೌಪದೀ ಸ್ವಯಂವರ ಕಾಲದಲ್ಲಿ ಆ ಮಾಲಿಕೆಯನ್ನು ಭೀಷ್ಮರನ್ನು ಕೊಲ್ಲಲಿರುವ ಅರ್ಜುನನ ಕೊರಳಿಗೆ ದ್ರೌಪದಿಯಿಂದ ಹಾಕಿಸಿದನೆಂಬುದು ಇಲ್ಲಿ ಸೂಚಿತವಾಗುವುದು. ಇಲ್ಲದಿದ್ದರೆ ಶಿವನಿತ್ತ ವರಕ್ಕೆ ವೈಯರ್ಥ್ಯ ಉಂಟಾಗಬೇಕಾಗುತ್ತಾದ್ದರಿಂದ ಹೀಗೆ ಅರ್ಥ ಮಾಡಬೇಕೆಂದು ಶ್ರೀವಾದಿರಾಜಗುರುವರ್ಯರು ವ್ಯಾಖ್ಯಾನ ಮಾಡಿದ್ದಾರೆ.

ದುಃಖಿತಳಾಗಿ ತನ್ನ ಕಾರಣವಾಗಿ ತಂದೆಯ ನಾಶವಾಗಬಾರದೆಂದಾಶಿಸಿ ಕಡುನೊಂದು ಅರಮನೆಯನ್ನು ತ್ಯಜಿಸಿ ತುಂಬುರು ಎಂಬ ಗಂಧರ್ವನಿದ್ದ ವನಕ್ಕೆ ಯಾರಿಗೂ ತಿಳಿಯದಂತೆ ಹೊರಟುಹೋದಳು.[4]

ದೃಢವಾದ ಕರ್ಣಗಳುಳ್ಳವನಾದ್ದರಿಂದ ಸ್ಥೂಣಾಕರ್ಣನೆಂಬ ಹೆಸರುಳ್ಳ ತುಂಬುರು ಎಂಬ ಗಂಧರ್ವನು ಶಿಖಂಡಿನಿಯನ್ನು ಕಂಡು ಅವಳಿಂದ ಪೂರ್ವವೃತ್ತಾಂತಗಳನ್ನು ತಿಳಿದು ಮನಕರಗಿ ಉತ್ತಮವನದ ಆ ಗಂಧರ್ವನು ಶಿಖಂಡಿನಿಯಲ್ಲಿ ಕೃಪೆದೋರಿದನು. ಅವಳಿಗೆ ಉಪಕಾರ ಮಾಡಲಾಶಿಸಿದ ಆ ತುಂಬುರನು ಶಿಖಂಡಿನಿಗೆ ತನ್ನ ಪುರುಷ-ದೇಹವನ್ನು ನೀಡಿ ಅವಳ ಸ್ತ್ರೀದೇಹವನ್ನು ತಾನು ಸ್ವೀಕರಿಸಿದನು. ಮತ್ತು ಶಿಖಂಡಿನಿಗೆ ನೀಡಿದ ಆ ದೇಹದಲ್ಲಿ ಗಂಡುತನ ಬರಲೋಸುಗ ತಾನು ಒಂದಂಶದಿಂದ ಅಲ್ಲಿ ಅಧಿಷ್ಠಿತನಾದನು.

ಪುರುಷರಿಗೆ ಶಾಪಾದಿಗಳಿಂದ ಸ್ತ್ರೀಸ್ವರೂಪ ಪ್ರಾಪ್ತವಾಗುವುದು ಕಂಡು ಬಂದಿದೆ. ಅದು ಸಾಧ್ಯವೂ ಆಹುದು. ಶಾಪವಿಮೋಚನಾನಂತರ ಅಂಥವರು ಮತ್ತೆ ಮೊದಲಿನಂತೆ ಪುರುಷರೇ ಆಗುವರು. ಆದರೆ ಸ್ತ್ರೀಯರಿಗೆ ದೇವತಾವರಾದಿ ಯಾವುದೇ ಪ್ರಬಲ ಕಾರಣದಿಂದಲೂ ಪುರುಷತ್ವವು ಬರಲು ಸಾಧ್ಯವೇ ಇಲ್ಲ. ಆದ್ದರಿಂದಲೇ ಆ ಗಂಧರ್ವನು ತಾನು ಶಿಖಂಡಿನಿಗಿತ್ತ ತನ್ನ ಪೂರ್ವದ ಪುರುಷದೇಹದಲ್ಲಿ ಪುಂಸ್ತ್ವ ಪ್ರಾಪ್ತಿಗಾಗಿ ಅಧಿಷ್ಠಿತನಾದನು.

ರುದ್ರದೇವರು ದ್ರುಪದರಾಜನಿಗೆ "ನಿನಗೆ ಪುತ್ರಿಯು ಜನಿಸುವಳು. ಅವಳೇ ಮುಂದೆ ಪುರುಷನಾಗುವಳು" ಎಂದು ವರವಿತ್ತಿದ್ದರೂ, ಹೆಂಗಸರಿಗೆ ಪುರುಷತ್ವಬಾರದಾದ್ದರಿಂದ ಅಂಬೆಯು ಸ್ತ್ರೀಯಾಗಿಯೇ (ಶಿಖಂಡಿನಿಯಾಗಿ) ಜನಿಸಿದಳು. ಗಂಧರ್ವನ ಪುರುಷದೇಹವನ್ನು ಶಿಖಂಡಿನಿಯು ಸ್ವೀಕರಿಸಿದ್ದರಿಂದ ಅವಳು ಪುರುಷನಾದಳೇ ವಿನಃ ಪುರುಷನಾಗಿಯೇ ಹುಟ್ಟಲಿಲ್ಲ. ಅವಳು ಗಂಧರ್ವನ ಕೃಪೆಯಿಂದ ಅವನ ಪುರುಷಶರೀರವನ್ನು ಪಡೆದು, ಅಲ್ಲಿ ಗಂಧರ್ವನ ಅಧಿಷ್ಠಾನವೂ ಇದ್ದುದರಿಂದ ಪುರುಷರಂತೆ ಧೈರ್ಯಸ್ಥೈರ್ಯ, ಪುರುಷಕಂಠ, ಪಚನ ಸಾಮರ್ಥ್ಯಾದಿಗಳನ್ನು ಪಡೆದು ಅರಮನೆಗೆ ಮರಳಿದಳು. ತುಂಬುರು ಗಂಧರ್ವನು ಸ್ತ್ರೀದೇಹದಿಂದ ಆ ವನದಲ್ಲಿಯೇ ವಾಸಿಸುತ್ತಿದ್ದನು. ಒಮ್ಮೆ ಕುಬೇರನು ಅಲ್ಲಿಗೆ ಬಂದಾಗ ಮೇಲೇಳದೆ ಹಾಗೆಯೇ ಕುಳಿತಿದ್ದು ಅನಂತರ ಲಜ್ಜೆಯಿಂದ ಮರೆಯಾಗಿ ನಿಂತನು. ಅದನ್ನು ಕಂಡು ಕುಬೇರನು ನಿಜಸ್ಥಿತಿಯನ್ನರಿತು "ನೀನು ಬಹುಕಾಲ ಹೀಗೆಯೇ ಸ್ತ್ರೀದೇಹಧಾರಿಯಾಗಿಯೇ ಇರು. ಮುಂದೆ ಅಶ್ವತ್ಥಾಮಾಚಾರ್ಯರ ಖಡ್ಗಾಘಾತದಿಂದ ಶಿಖಂಡಿನಿಯು ಮೃತಳಾದ ಮೇಲೆ ನೀನು ನಿನ್ನ ಪುರುಷ ಶರೀರವನ್ನು ಪಡೆಯುತ್ತೀಯೆ" ಎಂದು ಹೇಳಿದನು. ತುಂಬುರು ಗಂಧರ್ವನು ಕೌರವ ಪಾಂಡವರ ಯುದ್ಧ ಮುಗಿಯುವವರೆಗೆ ಸ್ತ್ರೀಶರೀರಿಯಾಗಿಯೇ ಇದ್ದನು.

ಇತ್ತ ಶಿಖಂಡಿನಿಯು ಅರಮನೆಗೆ ಬಂದು ತಾನು ಪುರುಷನಾದ ಬಗೆಯನ್ನೂ ತುಂಬುರಗಂಧರ್ವನ ಔದಾರ್ಯವನ್ನೂ ತಂದೆತಾಯಿಗಳಿಗೆ ನಿವೇದಿಸಿದಳು. ಅವರು ಮಗಳು ಮಗನಾಗಿ ಬಂದದ್ದನ್ನು ಕಂಡು ಹರ್ಷನಿರ್ಭರರಾದರು. ಹಿರಣ್ಯ-ವರ್ಮರಾಜನು ಶಿಖಂಡಿನಿಯನ್ನು ಪರೀಕ್ಷಿಸಿ ಅವನು ಪುರುಷನೆಂಬುದನ್ನು ಮನಗಂಡು ತಾನು ದುಡುಕಿ ದೂತನನ್ನು ಕಳಿಸಿದ್ದಕ್ಕೆ ನಾಚಿ ತನ್ನೂರಿಗೆ ತೆರಳಿದನು.

ಮರುದಿನ ಶಿಖಂಡಿನಿಯು ವನಕ್ಕೆ ಹೋಗಿ ಗಂಧರ್ವನನ್ನು ಕಂಡಾಗ ಅವನ ಶಿಖಂಡಿನಿಯು ತೆರಳಿದ ಮೇಲೆ ಕುಬೇರನು ಬಂದಿದ್ದು, ತನಗೆ ಶಾಪ ಕೊಟ್ಟಿದ್ದು ಮುಂತಾದ ಸಮಸ್ತ ವೃತ್ತಾಂತವನ್ನೂ ತಿಳಿಸಿ "ನೀನು ಮರಣ ಹೊಂದುವವರೆಗೆ

4. ಶ್ರೀವಾದಿರಾಜಶ್ರೀಪಾದಂಗಳವರು 'ಕೆಲವೆಡೆಯಲ್ಲಿ ಸ್ಥೂಣಾಕರ್ಣನೆಂಬುವವನು ಶಿಖಂಡಿನಿಗಾಗಿ ತನ್ನ ಶರೀರವನ್ನು ಕೊಟ್ಟನು' ಎಂಬ ಕಥೆ ಇದೆ ಎಂದು ವ್ಯಾಖ್ಯಾನಮಾಡಿದ್ದಾರೆ. ತುಂಬುರುವಿನ ಮತ್ತೊಂದು ಹೆಸರೇ ಸ್ಥೂಣಾಕರ್ಣನೆಂದು ಹೇಳಬಹುದು.

ಪುರುಷದೇಹದಿಂದಲೇ ಇರು. ನಾನೂ ಸ್ತ್ರೀಶರೀರದಿಂದಲೇ ಇರುವೆನು" ಎಂದು ಹೇಳಿದನು. ಗಂಧರ್ವನ ಅಧಿಷ್ಠಾನ ಮತ್ತು ಅವನ ಪುರುಷ ಶರೀರದಿಂದ ಕೂಡಿದ ಶಿಖಂಡಿನಿಯು ಪುರುಷತ್ವವನ್ನು ಹೊಂದಿ "ಶಿಖಂಡಿ" ಎಂಬ ಹೆಸರಿನಿಂದ ಖ್ಯಾತಳಾಗಿ ಅಸ್ತ್ರ-ಶಸ್ತ್ರ ವಿದ್ಯೆಗಳಲ್ಲಿ ನಿಪುಣಳಾಗಿ ಅತ್ಯಂತ ಪ್ರತಾಪವಂತಳಾದಳು.

ಪ್ರಕೃತ ಕಥಾಭಾಗವನ್ನು ಶ್ರೀವೇದವ್ಯಾಸರು ನಿರೂಪಿಸುತ್ತಾರೆ. ಶಂತನು ಚಕ್ರವರ್ತಿಯ ಕುಮಾರನಾದ ವಿಚಿತ್ರವೀರ್ಯನು ಅಂಬಿಕಾ, ಅಂಬಾಲಿಕಾ ಎಂಬ ತನ್ನ ಈರ್ವರು ಪತ್ನಿಯರಲ್ಲಿ ಆಸಕ್ತನಾಗಿ ಬಹುವರ್ಷಗಳ ಕಾಲ ಅವರೊಡನೆ ಆನಂದದಿಂದ ಕ್ರೀಡಿಸುತ್ತಿದ್ದನು. ಅವನಿಗೆ ಕ್ಷಯರೋಗ ಉಂಟಾಗಿ ಅದರಿಂದಲೇ ಅವನು ಮರಣ ಹೊಂದಿದನು. ರಾಜಮಾತೆಯಾದ ಸತ್ಯವತೀ ದೇವಿಯು ರಾಜ್ಯವು ಅರಾಜಕವಾಗಬಾರದೆಂದು ಶ್ರೀವೇದವ್ಯಾಸದೇವರನ್ನು ಸ್ಮರಿಸಿದಳು.

ಜಗತ್ತನ್ನು ಸೃಜಿಸಿದ, ಜನ್ಮ ಜರಾ ಭಯಾದಿನಾಶಕನಾದ, ಪರಿಪೂರ್ಣ ವಿಜ್ಞಾನಾತ್ಮಕ ಶರೀರನಾದ, ಸುಖಸಮುದ್ರನಾದ ಜನಾರ್ದನರೂಪಿ ಶ್ರೀವೇದವ್ಯಾಸದೇವನು ಕೂಡಲೇ ಪ್ರತ್ಯಕ್ಷನಾದನು. ತಾಯಿಯಾದ ಸತ್ಯವತೀ ದೇವಿಯು ವೇದವ್ಯಾಸದೇವರನ್ನು ಭಕ್ತಿಪೂರ್ವಕವಾಗಿ ಪೂಜಿಸಿದಳು. ಭೀಷ್ಮಾದಿಗಳಿಂದ ಅಧಿಕ ಭಕ್ತಿ ಶ್ರದ್ಧಾದಿಗಳಿಂದ ಪೂಜಿತರಾದ, ಸ್ತುತ್ಯರಾದ ಶ್ರೀವೇದವ್ಯಾಸರನ್ನು ಕಂಡು ಸತ್ಯವತಿಯು "ಕುಮಾರ! ನನ್ನ ಇಬ್ಬರು ಮಕ್ಕಳೂ ಮರಣ ಹೊಂದಿದರು. ಈಗ ಸಾಮ್ರಾಜ್ಯ ಅರಾಜಕವಾಗಿದೆ. ಭೀಷ್ಮಾಚಾರ್ಯರನ್ನು ರಾಜ್ಯಭಾರ ಮಾಡುವಂತೆ ಕೇಳಿಕೊಂಡೆ. ಆದರೆ ಭೀಷ್ಮನು ರಾಜ್ಯಭಾರವನ್ನು ವಹಿಸಲು ಒಪ್ಪುತ್ತಿಲ್ಲ. ಆದುದರಿಂದ ನೀನು ನಿನ್ನ ಸಹೋದರನಾದ ವಿಚಿತ್ರವೀರ್ಯನ ಪತ್ನಿಯಲ್ಲಿ ಶ್ರೇಷ್ಠನಾದ ಪುತ್ರನೊಬ್ಬನನ್ನು ಉತ್ಪಾದನೆ ಮಾಡಿ ಸಾಮ್ರಾಜ್ಯವನ್ನು ಸಂರಕ್ಷಿಸು" ಎಂದು ಪ್ರಾರ್ಥಿಸಿ ನಮಿಸಿದಳು. ಭೀಷ್ಮಾದಿಗಳೂ ನಮಸ್ಕರಿಸಿ ಸ್ತುತಿಸಿದರು. ಆಗ ಜಗದ್ಗುರುಗಳಾದ ಶ್ರೀವೇದವ್ಯಾಸದೇವರು "ಜನನಿ! ರಮಾದೇವಿಯ ಹೊರತು ನನ್ನ ಅಂಗಸಂಗಕ್ಕೆ ಯೋಗ್ಯರಾದವರು ಸ್ವರ್ಗದಲ್ಲಾಗಲೀ ಮತ್ತಾವ ಲೋಕದಲ್ಲೇ ಆಗಲಿ ಇಲ್ಲವೇ ಇಲ್ಲ. ಆದರೂ ನಿನ್ನ ಮಾತನ್ನು ನಡೆಸಿಕೊಡುವೆನು. ನಿನ್ನ ಸೊಸೆಯು ಒಂದು ವರ್ಷಕಾಲ ನನ್ನ ಸಂಬಂಧಿಯಾದ, ವೈಷ್ಣವ ವ್ರತವನ್ನು ಆಚರಿಸಲಿ. ಆ ವೈಷ್ಣವ ವ್ರತ (ವಿಷ್ಣುಪಂಚಕವ್ರತ)ದಿಂದ ಪಾವನಗಾತ್ರಳಾದ ಅಂಬಿಕೆಯು ನನ್ನಿಂದ ಉತ್ತಮನಾದ ಪುತ್ರನನ್ನು ಪಡೆಯಲಿ" ಎಂದರುಹಿದರು. ಆಗ ಸತ್ಯವತೀದೇವಿಯು "ಕುಮಾರ! ಒಂದು ವರುಷದವರೆಗೆ ಕಾಯಲು ಅವಕಾಶವಿಲ್ಲ. ಈಗಲೇ ನೀನು ಪುತ್ರೋತ್ಪತ್ತಿ ಮಾಡಬೇಕು. ಇಲ್ಲದಿದ್ದರೆ ರಾಜ್ಯವು ಅರಾಜಕವಾಗಿ ನಾಶವಾಗುವುದು" ಎಂದು ಹೇಳಲು ಶ್ರೀವೇದವ್ಯಾಸದೇವರು ಮತ್ತೆ ತಾಯಿಗೆ ಹೀಗೆ ಹೇಳಿದರು.

"ಅಮ್ಮಾ, ಹಾಗಾದರೆ ನಿನ್ನ ಸೊಸೆಯು ನನ್ನ ಭಯಂಕರ ರೂಪವನ್ನು ನೋಡಬೇಕಾಗುವುದು. ನಾನು ಸೌಮ್ಯ ಸ್ವರೂಪನಾದರೂ ನಿನ್ನ ಸೊಸೆಗೆ ಭಯಂಕರರೂಪವನ್ನು ಬೇಕೆಂದೇ ತೋರುವೆನು. ಆ ರೂಪವನ್ನು ನೋಡಲು ಅವಳು ಶಕ್ತಳಾದಲ್ಲಿ ಅವಳಿಗೆ ಗುಣಸಂಪನ್ನನೂ, ಬಲವೀರ್ಯವಂತನೂ ಆದ ಪುತ್ರನು ಉದಯಿಸುವನು".

ವೇದವ್ಯಾಸದೇವರ ಮಾತಿಗೆ ಸಮ್ಮತಿಸಿದ ಸತ್ಯವತೀದೇವಿಯು ಅಂಬಿಕೆಯಲ್ಲಿಗೆ ವೇದವ್ಯಾಸರನ್ನು ಕಳುಹಿದಳು. ಸಂಗಮ ಕಾಲದಲ್ಲಿ ವೇದವ್ಯಾಸರು ಭಯಂಕರ ರೂಪವನ್ನು ತೋರಿದರು. ಅದನ್ನು ಕಂಡು ಭಯದಿಂದ ಅಂಬಿಕೆಯು ಕಣ್ಣುಮುಚ್ಚಿಕೊಂಡುಬಿಟ್ಟಳು. ಆಗ ಅರಿಷ್ಟಾದೇವಿಯ ಮಗನಾದ 'ಹಂಸ'ನೆಂಬ ಗಂಧರ್ವರಾಜನು ಶ್ರೀವಾಯುದೇವರ ಆವೇಶಯುಕ್ತನಾಗಿ ಅಂಬಿಕೆಯಲ್ಲಿ ಧೃತರಾಷ್ಟ್ರ ಎಂಬ ಹೆಸರಿನಿಂದ ಜನಿಸಿದನು. ಕುರುವಂಶವನ್ನು ಅಭಿವೃದ್ಧಿಸಲು ಧೃತರಾಷ್ಟ್ರನು ವಾಯುದೇವರ ಆವೇಶಪ್ರಭಾವದಿಂದ ಅತ್ಯಂತ ಬಲಶಾಲಿಯಾದನು. ವೇದವ್ಯಾಸರು ಅವನಿಗೆ ಅಧಿಕ

ಬಲಶಾಲಿಯಾಗುವಂತೆ ವರನೀಡಿದರು. ಆದರೆ ಸಂಗಮಕಾಲದಲ್ಲಿ ಅವನ ತಾಯಿಯಾದ ಅಂಬಿಕೆಯು ಭಯದಿಂದ ಕಣ್ಣುಮುಚ್ಚಿದ್ದರಿಂದ ಆ ದೋಷದಿಂದಾಗಿ ಧೃತರಾಷ್ಟ್ರನು ಹುಟ್ಟು ಕುರುಡನಾದನು.

ಅಂಬಿಕೆಯು ವೇದವ್ಯಾಸದೇವರ ಭಯಂಕರ ರೂಪವನ್ನು ಅವಲೋಕಿಸಿ ಸಂಗಮಕಾಲದಲ್ಲಿ ಭಯದಿಂದ ಕಣ್ಣುಮುಚ್ಚಿಕೊಂಡಿದ್ದರ ಪರಿಣಾಮವಾಗಿ ಅವಳಿಗೆ ಅಂಧನಾದ ಪುತ್ರನು ಜನಿಸಿದನು. ಇದರಿಂದ ದುಃಖಿತಳಾದ ಮಾತಾ ಸತ್ಯವತೀದೇವಿಯು ಶ್ರೀವೇದವ್ಯಾಸರನ್ನು ಅಂಬಾಲಿಕೆಯಲ್ಲಿ ಗುಣಭರಿತನಾದ ಮತ್ತೊಬ್ಬ ಪುತ್ರನನ್ನು ಕರುಣಿಸಬೇಕೆಂದು ಕೋರಿದಳು. ಮಾತೆಯ ಮಾತನ್ನು ಮನ್ನಿಸಿ ಮುನಿಕುಲೋತ್ತುಂಗರಾದ ವೇದವ್ಯಾಸರು ಅಂಬಾಲಿಕೆಯಲ್ಲಿ ಓರ್ವಪುತ್ರನನ್ನು ಹುಟ್ಟಿಸಿದರು. ಅಂಬಾಲಿಕೆಯು ತನಗೆ ಜನಿಸುವ ಮಗನು ಅಂಬಿಕೆಯ ಪುತ್ರನಂತೆ ಕುರುಡನಾಗಬಾರದೆಂದು ಬಯಸಿ ಸಂಗಮಕಾಲದಲ್ಲಿ ವೇದವ್ಯಾಸರ ಭಯಂಕರ ರೂಪವನ್ನು ನೋಡಿ ಕಣ್ಣು ಮುಚ್ಚದಿದ್ದರೂ ಆ ರೂಪದರ್ಶನದಿಂದ ಭಯಗೊಂಡು ಬೆವತು ಬಿಳುಚಿಕೊಂಡಳು. ಬಂಗಾರದಂತೆ ಸುಂದರರೂಪದ ಅಂಬಾಲಿಕೆಯು ಶ್ರೀವೇದವ್ಯಾಸರ ಭೀಕರ ರೂಪವನ್ನು ಕಂಡು ಭಯದಿಂದ ತನ್ನ ಸ್ವರ್ಣಕಾಂತಿಯನ್ನು ತ್ಯಜಿಸಿ ಪಾಂಡುರವರ್ಣತಾಳಿದಳು. ಆಗ ಅಂಬಾಲಿಕೆಗೆ 'ಪರಾವಹ'ನೆಂಬ ವಾಯುವು ಕುಮಾರನಾಗಿ ಜನಿಸಿದನು. ಮಾತೆಯು ಸಂಗಮಕಾಲದಲಿ ಭಯದಿಂದ ಬಿಳುಚಿ-ಕೊಂಡಿದ್ದರಿಂದ ಅವಳ ಮಗನೂ ಪಾಂಡುರವರ್ಣನಾಗಿಯೇ ಜನಿಸಿದನು. ಪಾಂಡುರವರ್ಣವುಳ್ಳ ಅವನಿಗೆ ಮುಂದೆ ಪಾಂಡು ಎಂದೇ ಹೆಸರಾಯಿತು. ಅವನು ಶ್ರೀವಾಯುದೇವರ ಆವೇಶಯುಕ್ತನಾದುದರಿಂದ ಅಧಿಕ ವೀರ್ಯವಂತನೂ, ಸಕಲ ಶಸ್ತ್ರಾಸ್ತ್ರ ವಿಶಾರದನೂ ಆದನು. ಶ್ರೀವೇದವ್ಯಾಸರು ಪಾಂಡುರಾಜನು ಹೆಚ್ಚು ಬಲವೀರ್ಯವಂತನಾಗುವಂತೆ ಅವನಿಗೆ ವರವನ್ನು ಕರುಣಿಸಿದರು.

ತರುವಾಯ ಸತ್ಯವತೀದೇವಿಯು ಅಂಬಾಲಿಕೆಯ ಪುತ್ರನು ಶ್ವೇತವರ್ಣ ವಿಶಿಷ್ಟನಾಗಿ ಜನಿಸಿದುದನ್ನು ಕಂಡು ಖಿನ್ನಳಾಗಿ ಮತ್ತೆ ಕುರುಡನಲ್ಲದ, ಶ್ವೇತತ್ವಾದಿ ದೋಷರಹಿತನಾದ ಮತ್ತೊಬ್ಬ ಮಹನೀಯನಾದ ಮಗನನ್ನು ಅಂಬಿಕೆಯಲ್ಲಿ ಕರುಣಿಸುವಂತೆ ವೇದವ್ಯಾಸರನ್ನು ಕೋರಿದಳು. ಮತ್ತು ಹಿರಿಯ ಸೊಸೆಯಾದ ಅಂಬಿಕೆಯನ್ನು ಕುರಿತು "ಮಗಳೇ! ನೀನು ವೇದವ್ಯಾಸರ ರೂಪವನ್ನು ಕಂಡು ಭಯದಿಂದ ಕಣ್ಣುಮುಚ್ಚಿಕೊಂಡಿದ್ದರಿಂದ ನಿನಗೆ ಕುರುಡನಾದ ಕುಮಾರನುದಯಿಸಿದನು. ಈ ಮಹಾಸಾಮ್ರಾಜ್ಯ ನಿರ್ವಹಣೆಗೆ ನಮಗೀಗ ದೋಷವಿಲ್ಲದ ಗುಣವಂತನಾದ ಉತ್ತಮ ಸತ್ಪುತ್ರನು ಬೇಕು. ಆದುದರಿಂದ ನೀನೀಗ ಪುನಃ ಭಕ್ತಿಪೂರ್ವಕವಾಗಿ ವೇದವ್ಯಾಸರನ್ನು ಸೇವಿಸು" ಎಂದ ಅಪ್ಪಣೆ ಮಾಡಿದಳು.

ಸತ್ಯವತೀದೇವಿಯು ಹೀಗೆ ಆಣತಿಯಿತ್ತರೂ ಅಂಬಿಕೆಯು ಶ್ರೀವೇದವ್ಯಾಸರ ಮಾಯೆಗೆ ಒಳಗಾಗಿ ಭಯಗೊಂಡು ದುರ್ಬುದ್ಧಿಯಿಂದ ತಾನು ಶ್ರೀವೇದವ್ಯಾಸರ ಸಂಗಮ ಮಾಡಬಯಸದೆ ಶೂದ್ರಜಾತಿಯವಳಾದ ತನ್ನ ದಾಸಿಯನ್ನು ವೇದವ್ಯಾಸರಲ್ಲಿಗೆ ಕಳುಹಿದಳು. ಆ ದಾಸಿಯಾದರೋ ನಿರ್ಮಲ ಮನದಿಂದ ಉತ್ಕೃಷ್ಟವಾದ ಆನಂದಮಯ ಶರೀರರೂ, ಗುಣಾರ್ಣವರೂ ಆದ ಶ್ರೀವೇದವ್ಯಾಸದೇವರಿದಲ್ಲಿಗೆ ಬಂದು ಭಕ್ತಿಪೂರ್ವಕವಾಗಿ ಅವರೊಡನೆ ರಮಿಸಿದಳು.

ಆ ಶೂದ್ರ ದಾಸಿಯಲ್ಲಿ ಯಮಧರ್ಮರಾಜನು ಮಾಂಡವ್ಯ ಋಷಿಯ ಶಾಪದಿಂದ ಶೂದ್ರನಾಗಿ ಜನಿಸಿದನು. ಇಲ್ಲಿ ಯಮಧರ್ಮರಾಜನು ನೀಚಯೋನಿಯಲ್ಲಿ ಏಕೆ ಜನಿಸಿದನು? ಮುಂತಾಗಿ ಬರುವ ಸಂದೇಹವನ್ನು ಶ್ರೀ ನಿರ್ಣಯಕಾರರು ಸೂಕ್ತರೀತಿಯಿಂದ ಪರಿಹರಿಸುತ್ತಾ ಪ್ರಸಂಗ ಸಂಗತಿಯಿಂದ ಮಾಂಡವ್ಯರ ಶಾಪ ಮುಂತಾದ ಕಥಾಭಾಗವನ್ನು ವಿವರಿಸುವರು.

ಒಂದೆ ಮಾಂಡವ್ಯ ಋಷಿಗಳು ವಸಿಷ್ಠ ಋಷಿಗಳ ಸಾಮ್ಯವನ್ನು ಬಯಸಿ ತಪೋನಿರತರಾಗಿದ್ದರು. ಒಂದು ದಿನ ಕೆಲ ಚೋರರು ಧನಿಕನೊಬ್ಬನ ದ್ರವ್ಯಾಭರಣಗಳನ್ನು ಅಪಹರಿಸಿ ಪಲಾಯಗೈಯ್ಯುತ್ತಿರುವಾಗ ಅದನ್ನು ಕಂಡ ಧನಿಕನ ಸೇವಕರು

ಅವರನ್ನಟ್ಟಿಸಿಕೊಂಡು ಬಂದರು. ಆಗ ಚೋರರು ಮಾಂಡವ್ಯ ಋಷಿಗಳು ತಪಸ್ಸನ್ನಾಚರಿಸುತ್ತಿದ್ದ ಸ್ಥಳಕ್ಕೆ ಬಂದು ಅವರ ಮುಂದೆ ತಾವು ಕದ್ದು ತಂದ ದ್ರವ್ಯಾಭರಣಗಳನ್ನು ಇರಿಸಿ ಪರಾರಿಯಾದರು. ಧನಿಕನ ಸೇವಕರೂ ಅಲ್ಲಿಗೆ ಬಂದರು. ಮಾಂಡವ್ಯಋಷಿಯ ಮುಂದೆ ಧನಿಕನ ದ್ರವ್ಯಾಭರಣಗಳಿರುವುದನ್ನು ಕಂಡು ಮಾಂಡವ್ಯರೇ ಕಳ್ಳರೆಂದು ನಿರ್ಧರಿಸಿ ಅವರನ್ನು ಶೂಲಕ್ಕೇರಿಸಿಬಿಟ್ಟರು. ತಪಸ್ಸಿನಿಂದ ಬಹಿರ್ಮುಖರಾದ ಮಾಂಡವ್ಯರು ತಮ್ಮನ್ನು ಶೂಲಕ್ಕೇರಿಸಿರುವುದನ್ನರಿತು ದುಃಖಿಸು-ತ್ತಿರುವಾಗ ಯಮಧರ್ಮರಾಜರು ಅವರಲ್ಲಿಗೆ ಬಂದರು. ಮಾಂಡವ್ಯರು ಯಮರಾಜನನ್ನು ಕಂಡು "ದೇವ! ನಾನಾವ ಅಪರಾಧ ಮಾಡಿದೆನೆಂದು ನನಗೀಗತಿ ಪ್ರಾಪ್ತವಾಯಿತು" ಎಂದು ಪ್ರಶ್ನಿಸಿದರು. ಯಮಧರ್ಮರು "ಋಷಿವರ್ಯ! ನೀವು ಮಕ್ಷಿಕ (ನೊಣ)ವನ್ನು ಮುಳ್ಳಿನ ಚೂಪಾದ ತುದಿಯಿಂದ ಸಂಹರಿಸಿದ್ದೀರಿ. ಅದರ ದೋಷದಿಂದಾಗಿ ನಿಮಗೀಗತಿ ಬಂದಿದೆ" ಎಂದು ಮುಖ್ಯಕಾರಣವನ್ನು ಹೇಳದೆ ನೊಣವನ್ನು ಕೊಂದ ಸಣ್ಣ ದೋಷವನ್ನೇ ಹೇಳಿದರು. ಮುಖ್ಯದೋಷ ಬೇರೆಯಾಗಿತ್ತು. ಮಾಂಡವ್ಯ ಋಷಿಗಳು ವಸಿಷ್ಠ ಮಹರ್ಷಿಗಳ ಸಾಮ್ಯವನ್ನು ಆಶಿಸಿ ತಪಸ್ಸು ಮಾಡುತ್ತಿದ್ದರು. ಉತ್ತಮರ ಸಾಮ್ಯವನ್ನು ಅಪೇಕ್ಷಿಸುವುದು ಮಹಾಪಾಪ! ಮಾಂಡವ್ಯರನ್ನು ಆ ಮಹಾಪಾಪದಿಂದ ಮುಕ್ತರನ್ನಾಗಿಸಿ, ಅವರ ತಪಸ್ಸಿನ ಫಲವನ್ನು ನಿರರ್ಥಕಗೊಳಿಸಬೇಕಾಗಿತ್ತು. ಹಾಗಾಗಬೇಕಾದರೆ ಉತ್ತಮರಾದ ತಮಗೆ ಅವರು ಶಾಪ ಕೊಡುವಂತೆ ಸಿಟ್ಟಿಗೆಬ್ಬಿಸಬೇಕು. ಆಗ ಅವರು ತಮಗೆ ಶಾಪ ಕೊಡುತ್ತಾರೆ. ಶ್ರೇಷ್ಠರಾದ ತಮಗೆ ಶಾಪ ಕೊಟ್ಟಿದ್ದರಿಂದ ಮಾಂಡವ್ಯರ ತಪಸ್ಸಿನ ಫಲ ನಷ್ಟವಾಗುವುದು. ಮತ್ತು ಅವರಿಗೆ ವಸಿಷ್ಠರ ಸಾಮ್ಯ ದೊರಕುವುದೂ ಇಲ್ಲ! ವಸಿಷ್ಠರ ಸಾಮ್ಯವನ್ನು ಬಯಸಿದ್ದರಿಂದ ನಿಮಗೀಗತಿ ಪ್ರಾಪ್ತವಾಯಿತೆಂದು ಮುಖ್ಯವಾದ ಸತ್ಯಸಂಗತಿಯನ್ನು ಹೇಳಿಬಿಟ್ಟರೆ ಮಾಂಡವ್ಯರು ಕೋಪಗೊಳ್ಳಲಾರರು. ಆಗ ಅವರಿಗೆ ತಪಸ್ಸಿಗೆ ವಿಘ್ನತರಲೂ, ಆ ತಪಸ್ಸಿನ ಮಹಾಫಲವಿಲ್ಲದಂತೆ ಮಾಡಲೂ ಸಾಧ್ಯವಾಗಲಾರದು. ಅಂತೆಯೇ ಇವೆಲ್ಲವನ್ನೂ ಮನದಲ್ಲಿ ಆಲೋಚಿಸಿ ಯಮಧರ್ಮರಾಜರು ಮಾಂಡವ್ಯರು ನೊಣವನ್ನು ಸಂಹರಿಸಿದ್ದೂ ನಿಜವಾಗಿದ್ದರಿಂದ ಅಲ್ಪವಾದ ಆ ಕಾರಣವನ್ನೇ ಹೇಳಿದರು. ಮಾಂಡವ್ಯರು ಜ್ಞಾನಿಗಳು. ಜ್ಞಾನದೃಷ್ಟಿಯಿಂದ ಸತ್ಯಸಂಗತಿಯನ್ನು ಅರಿತು ಯಮಧರ್ಮರಾಜನು ಅಸತ್ಯವನ್ನಾಡಿದರೆಂದು ಕ್ರುದ್ಧರಾಗಿ "ಸತ್ಯವಿಚಾರವನ್ನು ಮರೆಮಾಡಿ ಸುಳ್ಳನ್ನು ಹೇಳಿದ ನೀನು ಶೂದ್ರನಾಗಿ ಜನಿಸು" ಎಂದು ಶಪಿಸಿದರು. ಯಮಧರ್ಮರಾಜರು ತಮ್ಮ ಕಾರ್ಯ ಸಫಲವಾಯಿತೆಂದು ಸಂತಸಗೊಂಡು ಮಾಂಡವ್ಯಋಷಿಗಳ ಶಾಪವನ್ನು ಸ್ವೀಕರಿಸಿ ತಮ್ಮಿಚ್ಛೆಯಿಂದಲೇ ಶೂದ್ರಯೋನಿಯಲ್ಲಿ ಜನಿಸಿದರು. ಮಾಂಡವ್ಯರ ಶಾಪದ ಫಲವಾಗಿಯೇ ಯಮಧರ್ಮರು ಈಗ ಶ್ರೀ ವೇದವ್ಯಾಸರಿಂದ ಶೂದ್ರದಾಸಿಯಲ್ಲಿ ಪುತ್ರರಾಗಿ ಜನಿಸಿದರು – ಇತ್ಯಾದಿ ಯುಕ್ತಿಯುಕ್ತವೂ ತತ್ತ್ವಾರ್ಥಗರ್ಭಿತವೂ ಆದ ವಿಚಾರವನ್ನು ಶ್ರೀಮದಾಚಾರ್ಯರು ಸಾರಸ್ಯವಾಗಿ ನಿರ್ಣಯಿಸಿ ನಿರೂಪಿಸಿದ್ದಾರೆ.

ಶ್ರೀ ವೇದವ್ಯಾಸರು "ತತ್ತ್ವಜ್ಞಾನಾಸಕ್ತನಾದುದರಿಂದ ಈ ಬಾಲಕನು 'ವಿದುರ'ನೆಂದು ಪ್ರಸಿದ್ಧನಾಗುವನು. ಇವನು ವಿಶೇಷ ಜ್ಞಾನಪೂರ್ಣನೂ, ಶ್ರೇಷ್ಠನಾದ ಮಹಾಧನುವನ್ನು ಪಡೆದು ಭುಜಬಲಪರಾಕ್ರಮದಿಂದ ಉತ್ಕೃಷ್ಟನೂ, ಉತ್ತಮನೀತಿಶಾಸ್ತ್ರ ವಿಶಾರದನೂ ಆಗುತ್ತಾನೆ" ಎಂದು ಅಪ್ಪಣೆ ಕೊಡಿಸಿದರು.

ಸತ್ಯವತೀದೇವಿಯು ಅಂಬಿಕೆಯ ಪ್ರಯತ್ನದಿಂದ ವಿದುರನು ಶೂದ್ರದಾಸಿಯಲ್ಲಿ ಜನಿಸಿದ್ದನ್ನು ತಿಳಿದು ತನ್ನ ಪ್ರಯತ್ನಗಳೆಲ್ಲಾ ಹೀಗೆ ವ್ಯರ್ಥವಾದುದಕ್ಕೆ ಚಿಂತಿಸಿ ಮತ್ತೋರ್ವ ಶ್ರೇಷ್ಠ ಕುವರನನ್ನು ಕರುಣಿಸುವಂತೆ ಶ್ರೀ ವೇದವ್ಯಾಸರನ್ನು ಪ್ರಾರ್ಥಿಸಿದಳು. ಆದರೆ ಮೂವರು ಮಕ್ಕಳನ್ನು ಅನುಗ್ರಹಿಸಿದ ವೇದವ್ಯಾಸರು ಮತ್ತೊಮ್ಮೆ ಪುತ್ರೋತ್ಪತ್ತಿಯನ್ನು ಮಾಡಬಯಸದೆ ಅದೃಶ್ಯರಾದರು. ಮುಂದೆ ಭೀಷ್ಮಾಚಾರ್ಯರು ಮುನಿವೃಂದಸಹಿತರಾಗಿ ಧೃತರಾಷ್ಟ್ರ, ಪಾಂಡು, ವಿದುರರಿಗೆ ಯೋಗ್ಯರೀತಿಯಿಂದ, ಅಂದರೆ, ಧೃತರಾಷ್ಟ್ರ ಮತ್ತು ಪಾಂಡುವಿಗೆ ಕ್ಷತ್ರಿಯಯೋಗ್ಯ ಸಂಸ್ಕಾರಗಳನ್ನೂ, ವಿದುರನಿಗೆ

ಶೂದ್ರಯೋಗ್ಯ ಸಂಸ್ಕಾರಗಳನ್ನೂ ಮಾಡಿಸಿದರು. ಶ್ರೀ ವೇದವ್ಯಾಸದೇವರು ಆ ಮೂವರಿಗೂ ಸಕಲವಿದ್ಯೆಗಳನ್ನು ಉಪದೇಶಿಸಿದರು. ಭೀಷ್ಮರು ಪಾಂಡುರಾಜನಿಗೆ ಶಸ್ತ್ರಾಸ್ತ್ರ ವಿದ್ಯೆಗಳನ್ನು ಉಪದೇಶಿಸಿದರು. ಆ ಮೂರು ಜನ ರಾಜಕುಮಾರರೂ ಸಕಲವಿದ್ಯೆಗಳಲ್ಲಿಯೂ ಕುಶಲರಾದರು. ವಿದುರನು ಮೂವರಲ್ಲಿ ವಿಶೇಷವಾಗಿ ಸಮಸ್ತ ವಿಚಾರಗಳಲ್ಲಿ ಬಲ್ಲಿದನಾದನು. ಸಕಲ ಅಸ್ತ್ರಶಾಸ್ತ್ರ ನಿಪುಣರಲ್ಲಿ ಶ್ರೇಷ್ಠನಾದ ಪಾಂಡುರಾಜನು ಉತ್ತಮ ಬಿಲ್ಲಾಳುವಾಗಿ ಹೆಸರು ಪಡೆದು ಧನುರ್ಧಾರಿಯಾಗಿ ಸಮಸ್ತ ಧರೆಯನ್ನೂ ಜಯಿಸಿದನು.

ಇದೇ ಕಾಲದಲ್ಲಿ ಗಂಧರ್ವಾಧಿಪತಿಯಾದ ತುಂಬುರುನಾಮಕ ಗಂಧರ್ವರಾಜನು 'ಉದ್ವಹ'ವೆಂದು ಪ್ರಸಿದ್ಧ ವಾಯುದೇವರ ಅಂಶದಿಂದ ಯುಕ್ತನಾಗಿ ವಿಚಿತ್ರವೀರ್ಯನ ಸಾರಥಿಯಾದ ಗವಲ್ಗಣನಿಗೆ 'ಸಂಜಯ' ಎಂಬ ಹೆಸರಿನಿಂದ ಮಗನಾಗಿ ಜನಿಸಿದನು. ಸರ್ವಜ್ಞನೂ, ವಿವೇಕಿಯೂ, ಶ್ರೀವೇದವ್ಯಾಸರ ಶಿಷ್ಯನೂ, ವಿಚಿತ್ರವೀರ್ಯನ ಸಾರಥಿಯಾದ ಗವಲ್ಗಣನ ಪುತ್ರನೂ ಆದ ಸಂಜಯನು ಧೃತರಾಷ್ಟ್ರ, ಪಾಂಡು, ವಿದುರರಿಗೆ ಮಿತ್ರನೂ, ಪ್ರಿಯನೂ ಆಗಿದ್ದನು. ಆದರೆ ಅವನಿಗೆ ಧೃತರಾಷ್ಟ್ರನಲ್ಲಿಯೇ ಹೆಚ್ಚು ಪ್ರೇಮಾದರವಿದ್ದು ಅವನಿಗೆ ಅತ್ಯಂತ ಅನುಕೂಲನಾಗಿರಹತ್ತಿದನು.

ಅಣ್ಣನಾದ ಧೃತರಾಷ್ಟ್ರನು ಗಾಂಧಾರದೇಶದ ರಾಜನಾದ ಸುಬಲರಾಜನ ಪುತ್ರಿಯಾದ ಗಾಂಧಾರಿಯನ್ನು ವಿವಾಹವಾದನು. ಪರಲೋಕಾದಿಗಳಿಲ್ಲ, ಸರ್ವೋತ್ತಮನಾದ ದೇವರೊಬ್ಬರಿಲ್ಲ - ಮುಂತಾಗಿ ಹೇಳುವ ಮಿಥ್ಯಾಜ್ಞಾನ ರೂಪನೂ, ಕುಕರ್ಮಗಳಿಗೆ ಕಾರಣನೂ, ಮೂಲರೂಪದಲ್ಲಿ ದ್ವಾಪರ[5] ಎಂಬ ಹೆಸರಿನ ಶಕುನಿಗೆ ಅವರು ಜ್ಯೇಷ್ಠ ಸಹೋದರಿಯು. ಅವಳು ಹಿಂದಿನ ಜನ್ಮದಲ್ಲಿ ಮತಿ ಎಂಬ ಹೆಸರಿನವಳು. ಇಂಥ ಗಾಂಧಾರಿಯನ್ನು ಧೃತರಾಷ್ಟ್ರನು ಮದುವೆಯಾದನು.

ಪಾಂಡುರಾಜನು ಶೂರರಾಜನ ಮಗಳಾದ ಸದ್ಗುಣ-ಶೀಲ-ಮಂಡಿತಳಾದ ಪೃಥಾ ಎಂಬ ಕನ್ಯೆಯನ್ನು ವಿವಾಹವಾದನು. ಪಾಂಡುರಾಜನು ಮೂಲರೂಪದಲ್ಲಿ "ಪರಾವಹ"ವೆಂಬ ವಾಯುವು. ಅವನಿಗೆ ಸಿದ್ಧಿ (ಕುಂತಿ) - ಧೃತಿ ಎಂಬ ಪತ್ನಿಯರಿದ್ದರು. ಅವರೇ ಕುಂತಿ - ಮಾದ್ರಿ ಎಂಬ ಹೆಸರಿನ ಪಾಂಡವರ ತಾಯಿಯರು. ಸಿದ್ಧಿಯೇ (ಕುಂತಿ) ಪೃಥಾ ಎಂಬ ಹೆಸರಿನಿಂದ ಶೂರರಾಜನಿಗೆ ಮಗಳಾಗಿ ಜನಿಸಿದ್ದಳು. ಈ ಪೃಥೆಯನ್ನು ಶೂರರಾಜನು ತನ್ನ ಗೆಳೆಯನಾದ ಮಕ್ಕಳಿಲ್ಲದ ಕುಂತೀಭೋಜನಿಗೆ 'ಇವಳನ್ನು ನಿನ್ನ ಮಗಳೆಂದೇ ತಿಳಿದು ಪಾಲಿಸು' ಎಂದು ಹೇಳಿ ಕೊಟ್ಟನು. ಕುಂತಿಭೋಜನಿಗೆ ಪೃಥೆಯನ್ನು ಕೊಟ್ಟದ್ದರಿಂದಲೂ, ಅವನು ಅವಳನ್ನು ಮಗಳಂತೆ ಸಾಕಿದ್ದರಿಂದಲೂ ಅವಳಿಗೆ ಕುಂತಿ ಎಂದು ಹೆಸರಾಯಿತು. ಮತಿಯು ಸುಬಲರಾಜನ ಮಗಳಾಗಿ ಗಾಂಧಾರಿಯೆಂಬ ಹೆಸರಿನಿಂದ ಹುಟ್ಟಿ ಧೃತರಾಷ್ಟ್ರನ ಪತ್ನಿಯಾದಳು.

ಕೂರ್ಮ ಎಂಬ ಹೆಸರಿನ ವಾಯುವೇ ಈಗ ಕುಂತೀಭೋಜನಾಗಿ ಜನಿಸಿದ್ದನು. ಕುಂತೀಭೋಜನು ಕುಂತಿಯನ್ನು ಪುತ್ರಿಯಂತೆ ಪ್ರೇಮದಿಂದ ಸಾಕುತ್ತಿರುವಾಗ ರುದ್ರಾಂಶರೂ, ಶೀಘ್ರಕೋಪಿಗಳೂ ಆದ ದೂರ್ವಾಸರು ಒಮ್ಮೆ ಕುಂತೀಭೋಜನ ರಾಜ್ಯಕ್ಕೆ ಬಂದು ಅವನ ಅರಮನೆಯಲ್ಲಿ ಚಾತುರ್ಮಾಸ್ಯ ಸಂಕಲ್ಪಕ್ಕೆ ಕುಳಿತುಕೊಳ್ಳಲು ಆಶಿಸಿದರು. ರಾಜನಿಗೆ ಶೀಘ್ರಕೋಪಿಗಳಾದ ಅವರನ್ನು ಸುಧಾರಿಸಿ ಸೇವೆ ಮಾಡುವ ಬಗೆ ಹೇಗೆಂಬ ಚಿಂತೆಯಾಯಿತು. ಕುಂತೀಭೋಜನು ಕೊನೆಗೆ

5. ಪರಸ್ಪರ ವಿರುದ್ಧ ಗುಂಪುಗಳಲ್ಲಿ ತಾತ್ಪರ್ಯವುಳ್ಳ ಜ್ಞಾನ - ದ್ವಿಪರವೆನಿಸುವುದು. ಪ್ರಾಯಃ ತತ್ತ್ವಸಂಶಯಕ್ಕೆ ಕಾರಣವಾಗಿರುವುದರಿಂದ ಮೂರನೆಯ ಯುಗಕ್ಕೆ ದ್ವಾಪರವೆಂದು ಹೆಸರುಂಟು. ದ್ವಾಪರ ಯುಗಕ್ಕೆ ಅಭಿಮಾನಿಯೂ, ತತ್ತ್ವಜ್ಞಾನ ವಿರೋಧಿಯೂ ಆದ್ದರಿಂದ ಮೂಲರೂಪದಲ್ಲಿ ಶಕುನಿಗೂ ದ್ವಾಪರನೆಂದು ಹೇಳಿದೆ. ಶಕುನಿಯು ಧೃತರಾಷ್ಟ್ರನಲ್ಲಿ ಸಂಶಯವನ್ನು ಹುಟ್ಟಿಸಿ ಅವನ ಬುದ್ಧಿಯನ್ನು ಕಡೆಗೆ ನಾಸ್ತಿಕ್ಯದಲ್ಲಿ ಪರ್ಯವಸಾನಗೊಳಿಸಿ ದ್ಯೂತಾದಿ ದುಷ್ಟಕಾರ್ಯಗಳಲ್ಲಿ ಅಭಿರುಚಿ ಹುಟ್ಟಿಸುತ್ತಾನೆಂಬುದನ್ನು ಇಲ್ಲಿ ಸೂಚಿಸಲು ನಾಸ್ತಿಕ್ಯರೂಪಸ್ಯ, ದ್ವಾಪರಸ್ಯ, ಕುಕರ್ಮಹೇತೋಃ ಎಂಬ ಮೂರು ವಿಶೇಷಣಗಳನ್ನು ಹೇಳಿರುವರು.

ಧೈರ್ಯದಿಂದ ಇಂತೆಂದನು - "ತಪೋಧನರೇ! ನನ್ನ ಕುವರಿಯು ಯೋಗ್ಯತಾನುಸಾರ ತಮ್ಮ ಸೇವೆ ಮಾಡುವಳು. ಅವಳು ಬಾಲಕಿಯಾದುದರಿಂದ ಅವಳು ಮಾಡುವ ಸೇವೆಯಲ್ಲಿ ಹೆಚ್ಚು ಕಡಿಮೆಯಾಗಬಹುದು. ನೀವು ಕರುಣೆಯಿಂದ ಅವಳನ್ನು ಕ್ಷಮಿಸಿ ಸೇವೆ ಸ್ವೀಕರಿಸುವುದಾದರೆ ನಾನು ಧನ್ಯನಾಗುತ್ತೇನೆ". ದೂರ್ವಾಸ ಋಷಿಗಳು ಅದಕ್ಕೆ ಸಮ್ಮತಿಸಿದರು. ರಾಜನು ಋಷಿಗಳನ್ನು ಸೇವಿಸಲು ಪೃಥೆಯನ್ನು ನೇಮಿಸಿದನು.

ಪೃಥೆಯು ಕಾಯಾ, ವಾಚಾ, ಮನಸಾ ಮತ್ತೊಬ್ಬರಿಂದ ಮಾಡಲಸದಳವಾದ, ಅತಿ ಸಿಟ್ಟಿನವರಾದ ದೂರ್ವಾಸಮುನಿಗಳ ಪರಿಚರ್ಯೆಯನ್ನು ಅವರ ಮನವೊಪ್ಪುವಂತೆ ಮಾಡಿದ ವಿಚಾರ ಪ್ರಸಿದ್ಧವಾಗಿದೆ. ಹದಿಮೂರು ವರ್ಷಗಳವರೆಗೆ ಏಕಪ್ರಕಾರವಾಗಿ ಕುಂತಿಯಿಂದ ಸೇವೆ ಕೈಗೊಂಡ ದೂರ್ವಾಸರು ಅವಳ ಭಕ್ತಿಶ್ರದ್ಧಾಪೂರ್ವಕ ಸೇವೆಯಿಂದ ಸುಪ್ರೀತರಾಗಿ ಅವಳಿಗೆ ಸಕಲ ದೇವತೆಗಳನ್ನು ಸ್ವಾಧೀನಪಡಿಸತಕ್ಕ ಶಕ್ತಿಪ್ರದವಾದ ಶ್ರೇಷ್ಠ ಮಂತ್ರವನ್ನು ಉಪದೇಶಿಸಿ ಆಶೀರ್ವದಿಸಿ ತೆರಳಿದರು.

ಒಮ್ಮೆ ಋತುಸ್ನಾತಳಾದ ಕುಂತಿಯು ಬಾಲ್ಯಚಾಪಲ್ಯದಿಂದ ದೂರ್ವಾಸರು ತನಗುಪದೇಶಿಸಿದ ಮಂತ್ರವನ್ನು ಪರೀಕ್ಷಿಸಲಾಶಿಸಿ ಸೂರ್ಯಮಂತ್ರವನ್ನು ಭಕುತಿಯಿಂದ ಜಪಿಸಿ ಸೂರ್ಯದೇವನನ್ನು ಆಹ್ವಾನಿಸಿದಳು. ಸೂರ್ಯನು ತಕ್ಷಣವೇ ಪ್ರತ್ಯಕ್ಷನಾದನು. ಸೂರ್ಯದೇವನು ಮೈದೋರಿ ಬಂದುದನ್ನು ನೋಡಿ ಭಯಗೊಂಡ ಕುಂತಿಯು "ದೇವ! ನಾನು ಬಾಲ್ಯಚಾಪಲ್ಯದಿಂದ ಮಂತ್ರದ ಮಹಿಮೆಯನ್ನು ಪರೀಕ್ಷಿಸಲು ಪಠಿಸಿದೆನು. ನಾನಿನ್ನೂ ಕನ್ಯೆಯಾಗಿರುವುದರಿಂದ ನೀನು ನನ್ನೊಡನೆ ಕ್ರೀಡಿಸಬಾರದು. ದಯಮಾಡಿ ಹೊರಟುಹೋಗು" ಮುಂತಾಗಿ ನಯ-ವಿನಯಗಳಿಂದ ಪ್ರಾರ್ಥಿಸಿದರೂ ಸೂರ್ಯನ ಮನ ಒಲಿಸಲಶಕ್ತಳಾದಳು. ಸೂರ್ಯದೇವನು "ದೇವಿ! ಕೇಳಿಲ್ಲಿ. ನನ್ನ ಅನುಗ್ರಹದಿಂದ ನಿನ್ನ ಕನ್ಯತ್ವಕ್ಕೆ ಭಂಗಬಾರದು" ಎಂದು ಕುಂತಿ ಮನ ಒಲಿಸಿ ಅವಳೊಡನೆ ಕ್ರೀಡಿಸಿದಳು. ಅನಂತರ ಕವಚಕುಂಡಲಗಳಿಂದ ಕೂಡಿ ಪ್ರಕಾಶಿಸುತ್ತಾ ಮೂಲರೂಪದಿಂದ ಸೂರ್ಯನೇ ಕುಂತಿಗೆ ಮಗನಾಗಿ ಜನಿಸಿದಳು. ತ್ರೇತಾಯುಗದಲ್ಲಿ ಸೂರ್ಯನು (ಸುಗ್ರೀವನು) ತನ್ನ ಅಣ್ಣನಾದ ವಾಲಿಯ ಸಂಹಾರಕ್ಕೆ ಕಾರಣನಾಗಿದ್ದುದರ ದೋಷದಿಂದ "ಸಹಸ್ರವರ್ಮ"ನೆಂಬ ಅಸುರನಿಂದ ಆವಿಷ್ಟನಾಗಿ ಕುಂತಿಯಲ್ಲಿ ಜನಿಸಿದನು. ಮಾನವನ ಬುದ್ಧಿಯು ಪಿಶಾಚಾವಿಷ್ಟವಾಗಿ ದೂಷಿತವಾಗುವಂತೆ ಸೂರ್ಯಸ್ವರೂಪನಾಗಿದ್ದರೂ ದೈತ್ಯಸಂಸರ್ಗದಿಂದ ಅವನ ಬುದ್ಧಿಯು ದೂಷಿತವಾಯಿತು. ಆದರೂ ತ್ರೇತೆಯಲ್ಲಿ ಶ್ರೀರಾಮಚಂದ್ರಪ್ರಭುವಿನ ಸೇವೆಯನ್ನು ಚೆನ್ನಾಗಿ ಮಾಡಿದ್ದರಿಂದ ಶ್ರೀಹರಿಸನ್ನಿಧಾನಯುಕ್ತವಾಗಿಯೇ ಜನಿಸಿದನು. ದರ್ಶನೀಯವಾದ ಯೋಗ್ಯ ಕರ್ಣಗಳುಳ್ಳ ಆ ಕುಂತೀಕುಮಾರನು ಕರ್ಣನೆಂಬ ಹೆಸರಿನಿಂದ ಪ್ರಸಿದ್ಧನಾದನು. ಕನ್ಯೆಯಾದ ಕುಂತಿಯು ಪುತ್ರವತಿಯಾದಳೆಂದು ಜನರು ನಿಂದಿಸಿಯಾರು. ಅಪವಾದ ಬಂದೀತೆಂಬ ಭಯದಿಂದ ಕುಂತಿಯು ಜನಿಸಿದ ಕುಮಾರನನ್ನು ಮಂಜೂಷದಲ್ಲಿಟ್ಟು ಅಶ್ವನದಿಯಲ್ಲಿ ತೇಲಿಬಿಟ್ಟಳು. ಅದು ಚರ್ಮಣ್ವತಿನದಿಗೆ ಹೋಗಿ ಅಲ್ಲಿಂದ ಯಮುನಾನದಿಯನ್ನು ತಲುಪಿತು. ಯಮನ ತಂಗಿಯಾದ ಯಮುನೆಯು ಶೀಘ್ರವಾಗಿ ಆ ಬಾಲಕನಿಂದೊಡಗೂಡಿದ ಮಂಜೂಷವನ್ನು ಗಂಗಾನದಿಗೆ ಕರೆತಂದುಬಿಟ್ಟಳು. ಗಂಗಾಪ್ರವಾಹದಲ್ಲಿ ಆ ಮಂಜೂಷವು ಚಂಪಾಪಟ್ಟಣಕ್ಕೆ ಬಂದಿತು. ಅಲ್ಲಿ ಸೂತಪುತ್ರನಾದ ಅಧಿರಥನು ರತ್ನಸಹಿತನಾದ ಆ ಕುಮಾರನನ್ನು ಕಂಡು ತನ್ನ ಮನೆಗೆ ಕರೆತಂದು "ದೇವರೇ ನಮಗೆ ಈ ಸುಂದರ ಬಾಲಕನನ್ನು ಪುತ್ರನನ್ನಾಗಿ ಕರುಣಿಸಿದ್ದಾನೆಂದು" ಆನಂದಿಸಿ ಪುತ್ರನಂತೆ ಪಾಲಿಸುವಂತೆ ಪತ್ನಿಯಾದ ರಾಧೆಗೆ ಹೇಳಿ ಆ ಮಗುವನ್ನು ಅವಳ ವಶಕ್ಕೊಪ್ಪಿಸಿದನು. ಆ ಕುಮಾರನು ಅವರ ಮನೆಯಲ್ಲಿ ಬಾಲ್ಯದಿಂದಲೂ ಬೆಳೆದು ಶೌರ್ಯೌದಾರ್ಯಾದಿ ಗುಣಮಂಡಿತನಾದನು. ಕರ್ಣನು ವೇದಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿದನು. ರತ್ನಸಹಿತವಾದ ಕರ್ಣನು ದೊರೆತದ್ದರಿಂದ ಅವನಿಗೆ 'ವಸುಷೇಣ' ಎಂಬ ಹೆಸರೂ ಪ್ರಸಿದ್ಧವಾಯಿತು.

ಕರ್ಣನು ಜನಿಸಿದ ತರುವಾಯ ಕುಂತಿಯು ಪಾಂಡುರಾಜನನ್ನು ಮದುವೆಯಾದಳು. ಪಾಂಡುವು ಪತ್ನಿಯೊಡನೆ ಬಹುಕಾಲ ಕ್ರೀಡಿಸುತ್ತಾ ಸುಖದಿಂದಿದ್ದನು. ಶೂರನೆಂಬ ಯಾದವನಿಂದ ಶೂದ್ರಸ್ತ್ರೀಯಲ್ಲಿ ಜನಿಸಿದ ಅರುಣೀ ಎಂಬ ಗುಣಸಂಪನ್ನ ಕನ್ಯೆಯನ್ನು ವಿದುರನು ವಿವಾಹಮಾಡಿಕೊಂಡನು. ಮದ್ರದೇಶಾಧಿಪತಿಯಾದ ಋತಾಯನ ಮಹಾರಾಜನು ಬ್ರಹ್ಮನನ್ನು ಕುರಿತು "ಇಂದ್ರನಂತಿರುವ ಮಗ ಮತ್ತು ಶ್ರೇಷ್ಠಪುತ್ರಿಯರಿಗಾಗಿ" ತಪಸ್ಸನ್ನೆಸಗಿ, ಬ್ರಹ್ಮದೇವರಿಂದ ವರವನ್ನು ಪಡೆದನು. ಬ್ರಹ್ಮದೇವನು ಋತಾಯನನಿಗೆ ವರವನ್ನು ನೀಡಿದ ಮೇಲೆ ಪ್ರಹ್ಲಾದರಾಜನ ಸಹೋದರನೂ, ಶ್ರೀ ಹರಿಭಕ್ತನೂ ಆದ ಸಹ್ಲಾದನೇ ವಾಯುದೇವರ ಆವೇಶಯುಕ್ತನಾಗಿ ಋತಾಯನನಿಗೆ ಪುತ್ರನಾಗಿ ಹುಟ್ಟಿದನು. ಬ್ರಹ್ಮದೇವರ ವರ ಮತ್ತು ವಾಯುದೇವರ ಆವೇಶಗಳಿಂದ ಅವನು ಜಗತ್ತಿನಲ್ಲಿ ಶ್ರೇಷ್ಠ ಬಲಶಾಲಿಯಾದನು. ಶತ್ರುಗಳಿಗೆ ಶಲ್ಯರೂಪನಾದ್ದರಿಂದ ಅವನಿಗೆ ಶಲ್ಯನೆಂದೇ ಹೆಸರಾಯಿತು. ಋತಾಯನನ ಮಗಳಿಗೆ ಮಾದ್ರಿ ಎಂದು ಹೆಸರು. ಈ ಮಾದ್ರಿಯು ಪೂರ್ವದಲ್ಲಿ ಪಾಂಡುರಾಜನ ಮೂಲರೂಪದ ಪರಾವಹವಾಯುವಿನ ಪತ್ನಿಯಾಗಿದ್ದು ಈಗ ಮತ್ತೆ ಜನಿಸಿದ್ದಳು. ಅವಳನ್ನು ಶಲ್ಯರಾಜನು ಪಾಂಡುರಾಜನಿಗಿತ್ತು ಮದುವೆ ಮಾಡಿದನು. ಪಾಂಡುವು ಕುಂತಿ ಮತ್ತು ಮಾದ್ರಿಯರೊಡನೆ ಸುಖಿಸುತ್ತಾ ಅಣ್ಣ ಧೃತರಾಷ್ಟ್ರನ ಸಂಪತ್ತನ್ನು ತನ್ನ ಬಾಹುಬಲದಿಂದ ವರ್ಧಿಸುತ್ತಾ, ವಿದುರನು ಉಪದೇಶಿಸಿದ ನೀತಿಮಾರ್ಗವನ್ನು ಅನುಸರಿಸಿ ರಾಜ್ಯವನ್ನು ಪಾಲಿಸುತ್ತಿದ್ದನು. ಭೀಷ್ಮಾಚಾರ್ಯನು ಜ್ಯೇಷ್ಠನಾದ ಧೃತರಾಷ್ಟ್ರನನ್ನು ರಾಜನನ್ನಾಗಿಯೂ ಮಾಡಿದ್ದರು. ಆದರೂ ತಾನು ಅಂಧನೆಂದು ಧೃತರಾಷ್ಟ್ರನು ರಾಜ್ಯವನ್ನಾಳದೇ ಇದ್ದುದರಿಂದ ಭೀಷ್ಮ, ಧೃತರಾಷ್ಟ್ರಾದಿಗಳ ಆಣತಿಯಂತೆ ಪಾಂಡುರಾಜನೇ ರಾಜ್ಯವನ್ನಾಳುತ್ತಿದ್ದನು. ಆ ಅಣ್ಣತಮ್ಮಂದಿರು ಅನೇಕ ಯಾಗಾದಿಗಳಿಂದ ಭಗವಂತನನ್ನು ಪೂಜಿಸುತ್ತಿದ್ದರು. ಇದೇ ಸಮಯದಲ್ಲಿ ಉತ್ಕೃಷ್ಟ ಹಾಗೂ ದೋಷರಹಿತ ಗುಣಗಣಮಂಡಿತರಾದ ಶ್ರೀ ವೇದವ್ಯಾಸದೇವರು ಮುಂದೆ ಕುರು-ಪಾಂಡವರಲ್ಲಿ ವಿರೋಧ ಬರುವುದೆಂಬುದನ್ನರಿತು ಆ ಕಾಲದಲ್ಲಿ ಮಾತಾ ಸತ್ಯವತಿದೇವಿಯನ್ನೂ, ಅವಳನ್ನೇ ಹಿಂಬಾಲಿಸಿದ ಅಂಬಿಕೆ ಅಂಬಾಲಿಕೆ ಹಾಗೂ ವಿದುರನ ತಾಯಿಯನ್ನೂ ಕರೆದುಕೊಂಡು ಬದರಿಕಾಶ್ರಮಕ್ಕೆ ತೆರಳಿದರು.

ಸತ್ಯವತೀದೇವಿಯು ವೇದವ್ಯಾಸರ ಉಪದೇಶದಂತೆ ಸಾಧನ ಮಾಡಿಕೊಳ್ಳುತ್ತಾ ಶ್ರೀಹರಿಯನ್ನು ಆರಾಧಿಸುತ್ತಿದ್ದಳು. ಅವಳು ವೇದವ್ಯಾಸರನ್ನು ಪುತ್ರ ಮತ್ತು ಪರಬ್ರಹ್ಮಭಾವಗಳಿಂದ ಧ್ಯಾನಿಸಿ ಪರಮಪದವೆನಿಸಿದ ವೈಕುಂಠಲೋಕವನ್ನು ಹೊಂದಿದಳು. ಅಂಬಿಕೆ-ಅಂಬಾಲಿಕೆಯರು ಸ್ವರ್ಗವನ್ನು ಸೇರಿದರು. ವಿದುರನ ತಾಯಿಯು ವೇದವ್ಯಾಸರ ಅನುಗ್ರಹ ಮತ್ತು ಯಮಾವತಾರಿಯಾದ ಸತ್ಪುತ್ರ ವಿದುರನ ಭಗವದ್ಭಕ್ತ್ಯಾದಿ ಸದ್ಗುಣ ಪ್ರಭಾವದಿಂದ ಉತ್ತಮವಾದ ಸತ್ಯಲೋಕವನ್ನು ಸೇರಿ ಅಲ್ಲಿ ದೋಷರಹಿತನಾದ ಶ್ರೀಹರಿಯಲ್ಲಿ ಮನವಿರಿಸಿದ್ದರಿಂದ ಶ್ರೀ ವ್ಯಾಸಾನುಗ್ರಹ ಮತ್ತು ಪುತ್ರ ವಿದುರನ ಸದ್ಗುಣಗಳ ಪುಣ್ಯಪ್ರಭಾವಗಳಿಂದ ಸಾಧನ ಪೂರ್ತಿಮಾಡಿಕೊಂಡು ಮೋಕ್ಷವನ್ನು ಪಡೆದಳು. ಅವರವರ ಸ್ವರೂಪಯೋಗ್ಯತೆಗೆ ತಕ್ಕಂತೆ ಜೀವರು ತಮ್ಮ ತಮ್ಮ ಗತಿಯನ್ನು ಪಡೆಯುವರು. ಸತ್ಯವತಿಯು ವೇದವ್ಯಾಸರನ್ನು ಪರಾತ್ಪರನಾದ ಪರಬ್ರಹ್ಮನೆಂದು ಉಪಾಸನೆ ಮಾಡಿ ಶ್ರೀಹರಿಯಲ್ಲಿ ಉತ್ತಮ ರೀತಿಯಿಂದ ಭಕ್ತಿಯನ್ನು ಮಾಡಿದ್ದರಿಂದ ಭಗವದನುಗ್ರಹದಿಂದ ಉತ್ಕೃಷ್ಟವಾದ ಮೋಕ್ಷವನ್ನು ಪಡೆದಳು. ದಾಸಿಯಾದರೂ ವಿದುರನ ತಾಯಿಯು ಉತ್ತಮ ಹರಿಭಕ್ತಳಾಗಿದ್ದುದರಿಂದ ಸಂಗಮಕಾಲದಲ್ಲಿ ವೇದವ್ಯಾಸರನ್ನು ಭಕ್ತಿ ಶ್ರದ್ಧೆಗಳಿಂದ ಸೇವಿಸಿದ್ದರಿಂದ ಮತ್ತು ಸರ್ವದಾ ಪರಮಾತ್ಮನನ್ನು ಭಜಿಸುತ್ತಿದ್ದುದರಿಂದಲೂ ಮೋಕ್ಷವನ್ನು ಪಡೆದಳು. ಅಂಬಿಕೆಯು ಸಂಗಮಕ್ಕೆ ದಾಸಿಯನ್ನು ಕಳುಹಿಸಿದ ಅಪರಾಧದಿಂದ ಸತ್ಯವತೀ, ದಾಸಿ ಹಾಗೂ ಅಂಬಾಲಿಕೆಯರಂತೆ ಉತ್ತಮವಾದ ವೈಕುಂಠವನ್ನು ಹೊಂದದೇ ಸಾರೂಪ್ಯ ಮೋಕ್ಷವನ್ನು ಪಡೆದಳು. ಅಂಬಾಲಿಕೆಯು ಸ್ವರ್ಗದಲ್ಲಿರುವಾಗ ಭಗವದಾರಾಧನೆ ಮುಂತಾದ ಮೋಕ್ಷೋಪಾಯಗಳಿಂದ ಶ್ರೇಷ್ಠವಾದ ವಿಷ್ಣುಲೋಕವನ್ನು ಸೇರಿದಳು. ಮುಕ್ತಿಯೋಗ್ಯರಲ್ಲ-ದವರಿಗೆ ಭಗವಂತನ ಅಂಗಸಂಗ ದೊರಕದು. ಆದುದರಿಂದ ಅಂಬಿಕೆ-ಅಂಬಾಲಿಕೆ-ದಾಸಿಯರು ತಮ್ಮ ತಮ್ಮ ಸ್ವರೂಪ-

ಯೋಗ್ಯತೆಗೆ ತಕ್ಕಂತೆ ಮುಕ್ತಿಯನ್ನು ಪಡೆದರು. ಶ್ರೀಹರಿಯಲ್ಲಿ ಜೀವರು ಮಾಡುವ ಭಕ್ತಿ, ಸೇವೆಗಳಿಗನುಗುಣವಾಗಿ ಅವರವರಿಗೆ ಗತಿಯಾಗುವುದು.

ಇತ್ತ ಪಾಂಡುರಾಜನು ಅಣ್ಣ ಧೃತರಾಷ್ಟ್ರ, ಸಹೋದರ ವಿದುರರಿಗೆ ರಾಜ್ಯಭಾರವನ್ನು ವಹಿಸಿ ಕುಂತಿ-ಮಾದ್ರಿಯರೊಡನೆ ಅರಣ್ಯಕ್ಕೆ ತೆರಳಿ, ಬದರಿಕಾಶ್ರಮದಲ್ಲಿ ವಾಸಮಾಡಹತ್ತಿದನು. ಅವನು ಗೃಹಸ್ಥಾಶ್ರಮಿಯಾಗಿಯೇ ಬದರಿಕಾಶ್ರಮದಲ್ಲಿ ಇದ್ದುಕೊಂಡು ಋಷಿಮುನಿಗಳಿಂದೊಡಗೂಡಿ ಶ್ರೀಹರಿಯನ್ನು ಪೂಜಿಸುತ್ತಾ ತಪೋನಿರತನಾಗಿದ್ದನು. ಹೀಗಿರಲೊಂದುದಿನ ಪತ್ನಿಯೊಡನೆ ಕ್ರೀಡಿಸಲು ಇಚ್ಛಿಸಿ, ಕಿಂದಮನೆಂಬ ಋಷಿಯು ಶ್ರೀಹರಿಯ ಇಚ್ಛೆಗೆ ಅಧೀನವಾದ, ತನ್ನಿಚ್ಛೆಯಿಂದ ಜಿಂಕೆಯರೂಪತಾಳಿ ಹೆಣ್ಣುಜಿಂಕೆಯ ರೂಪತಾಳಿದ್ದ ಪತ್ನಿಯೊಡನೆ ಕ್ರೀಡಿಸುತ್ತಿರುವಾಗ ಬೇಟೆಗಾಗಿ ಬಂದ ಪಾಂಡುರಾಜನು ಅವರನ್ನು ನಿಜವಾದ ಜಿಂಕೆಯೆಂದೇ ತಿಳಿದು ಶ್ರೀಹರಿಯ ಇಚ್ಛೆಗನುಸರಿಸಿ ಬಾಣಪ್ರಹಾರದಿಂದ ಸಂಹಾರಮಾಡಿದನು. ನಿಜರೂಪತಾಳಿದ ಕಿಂದಮನು ಮರಣಕಾಲದಲ್ಲಿ, "ಕ್ರೀಡಿಸುತ್ತಿದ್ದ ನಮ್ಮನ್ನು ನಿಷ್ಕಾರುಣವಾಗಿ ಸಂಹರಿಸಿದ ನೀನೂ ಸಹ ಪತ್ನಿಯೊಡನೆ ರಮಿಸುವಾಗ ಮೃತನಾಗು" ಎಂದು ಶಾಪಕೊಟ್ಟು ಮೃತನಾದನು. ಇದರಿಂದ ಪಾಂಡುರಾಜನು ಬಲು ಖತಿಗೊಂಡು ಸನ್ಯಾಸಿಯಾಗಬಯಸಿದನು. ಆಗ ಕುಂತೀದೇವಿಯು ಬಹುಪ್ರಕಾರವಾಗಿ ಪ್ರಾರ್ಥಿಸಿದ್ದರಿಂದ ಪಾಂಡುವು ಗೃಹಸ್ಥಾಶ್ರಮದಲ್ಲೇ ಇದ್ದರೂ ಪತ್ನಿಯರ ಅಂಗಸಂಗವನ್ನು ತ್ಯಜಿಸಿದನು. ಮತ್ತು ನಾರಾಯಣಾಶ್ರಮವಿರುವ ಶತಶೃಂಗ ಪ್ರದೇಶದಲ್ಲಿ ವಾಸಿಸುತ್ತಾ ತಪೋನಿರತನಾಗಿ ಭಗವದಾರಾಧನಾಸಕ್ತನಾದನು.

ಈಗ ನಿರ್ಣಯಕಾರರು ಭಗವದವತಾರಕಥೆಗೆ ಉಪೋದ್ಘಾತವನ್ನು ರಚಿಸುತ್ತಾ ಆ ಕಥೆಯನ್ನು ನಿರೂಪಿಸುತ್ತಾರೆ.

ಪಾಂಡುರಾಜನು ತಪೋನಿರತನಾಗಿರುವ ಸಮಯದಲ್ಲೇ ಇತ್ತ ಬ್ರಹ್ಮ-ರುದ್ರ, ಇಂದ್ರಾದಿದೇವತೆಗಳು, ಭೂಮಿಯಲ್ಲುದಯಿಸಿದ ಪಾಪಾತ್ಮರಾದ ದೈತ್ಯರ ಹಾವಳಿಯನ್ನು ಸಹಿಸಲಶಕ್ತಳಾದ ಭೂದೇವಿಯಿಂದೊಡಗೂಡಿ ದೇವತಾಸಾರ್ವಭೌಮನೂ, ರಕ್ಷಕನೂ, ಬ್ರಹ್ಮದೇವರಿಗೂ ಗುರುವಾದ ಪರಿಪೂರ್ಣ ಷಡ್ಗುಣೈಶ್ವರ್ಯಸಂಪನ್ನನಾದ, ಪಾಲ್ಗಡಲಲ್ಲಿ ಶೇಷದೇವನ ಮೇಲೆ ಪವಡಿಸಿರುವ, ಉಪಮೆಯಿಲ್ಲದ ಆನಂದಸಂದೋಹ ಶರೀರಿಯಾದ ಶ್ರೀಹರಿಯನ್ನು ಮೊರೆ ಹೊಕ್ಕರು. ಚತುರಾನನ ಪ್ರಮುಖ ಅಮರನಿಕರರು ಸರ್ವೋತ್ತಮನಾದ ಶ್ರೀಹರಿಯನ್ನು ಪ್ರತಿಪಾದಿಸುವ ಪುರುಷಸೂಕ್ತ ಮಂತ್ರಗಳಿಂದ ಆ ಪರಮಪುರುಷನಾದ ಶ್ರೀಮನ್ನಾರಾಯಣನನ್ನು ಸ್ತುತಿಸುತ್ತಿದ್ದರು.

"ಶ್ರೇಷ್ಠದೇವತೆಗಳಾದ ಕಮಲಸಂಭವನಾದ ಬ್ರಹ್ಮಾದಿಗಳಿಗೂ ಪ್ರಭುವಾದ, ಹೇ ಪರಮಾತ್ಮ! ಪಾಪರೂಪಿಗಳೂ ನಿನ್ನಲ್ಲಿ ವಿಮುಖರೂ ಆದ ದೈತ್ಯರ ಆಕ್ರಮಣದಿಂದ ಭೂಮಾತೆಯು ದುಃಖಿತಳಾಗಿದ್ದಾಳೆ. ಉತ್ತಮ ಗೋವಿಗೆ ಒಮ್ಮೆ ಕರುಹಾಕಿದ ಗೋಸಂಗದಿಂದ ಕಂಠದಲ್ಲಿ ನೊಗಬಂಧನವು ಪ್ರಸಿದ್ಧವಾಗಿರುವಂತೆ ಪ್ರತಿದಿನವೂ ದುಷ್ಟರ ಸಮಾಗಮವು ಸಜ್ಜನರಿಗೆ ಭಾರವೇ ಆಗುವುದಷ್ಟೇ! ಸ್ವಾಮಿ, ನಮ್ಮ ನುಡಿಯನ್ನಾಲಿಸು. ಯದ್ಯಪಿ ದೈತ್ಯಸಂಹಾರಾದಿಗಳಿಂದ ನಿನಗಾವ ಪ್ರಯೋಜನವೂ ಇಲ್ಲ, ನಿಜ. ಆದರೂ ನೀನು ನಮ್ಮನ್ನು ಸಂತೋಷಪಡಿಸಲು ದೈತ್ಯಸಂಹಾರಕ್ಕಾಗಿ ಅವತರಿಸಬೇಕು. ದೇವ, ಪೂರ್ವದಲ್ಲಿ ನೀನು ಸಂಹರಿಸಿದ ದೈತ್ಯರು ಈಗ ಭೂಮಿಯಲ್ಲಿ ಜನಿಸಿದ್ದಾರೆ. ಪ್ರಭು, ಹಿಂದೆ ನಡೆದ ದೇವಾಸುರಯುದ್ಧ ವಿಚಾರವನ್ನು ನಿನ್ನಲ್ಲಿ ವಿಜ್ಞಾಪಿಸಬಯಸುತ್ತೇವೆ. ಪೂರ್ವದಲ್ಲಿ ದೇವತೆಗಳು, ದೈತ್ಯರು ಬಹುಭೀಕರವಾಗಿ ಹೊಡೆದಾಡಿದರು. ರಕ್ತದ ನದಿಯೇ ಹರಿಯಿತು. ಆಗ ಮಹಾಬಲಶಾಲಿಗಳಾದ ದೇವತೆಗಳು ದೈತ್ಯರ ನೂರುಭಾಗದ ಒಂದಂಶ ಸೈನ್ಯವನ್ನು ನಾಶಪಡಿಸಿದರು. ಅದನ್ನು ಸಹಿಸದೆ ರುದ್ರದೇವರ ವರದಿಂದ ಸಹಿಸಲದಳವಲ್ಲದ, ಅಶಕ್ಯವಾದ ಮಾಯಾವಿದ್ಯೆಯನ್ನು ಪಡೆದ ಶಂಬರನೆಂಬ ದೈತ್ಯನು ತನ್ನ ಇಂದ್ರಜಾಲ ಮಾಯೆಗಳಿಂದ ದೇವತೆಗಳನ್ನು ಮೋಹಗೊಳಿಸಿದನು. ಅವನ ಮಾಯೆಗೆ ಸಿಲುಕಿ ಚಂದ್ರ-ಸೂರ್ಯಾದಿ ದೇವತೆಗಳು ಬಳಲಿದರು. ಅದನ್ನು ಕಂಡು ವಜ್ರಧರನಾದ ಇಂದ್ರನು ಬ್ರಹ್ಮದೇವರಿತ್ತ

ವೈಷ್ಣವೀಮಾಯೆಯನ್ನು ಪ್ರಯೋಗಿಸಿದನು. ರುದ್ರದೇವರ ವರವನ್ನೂ, ಮತ್ತು ಸಕಲ ಮಾಯೆಗಳನ್ನೂ ನಾಶಪಡಿಸುವ, ಸಹಿಸಲಶಕ್ಯವಾದ ವೈಷ್ಣವ ಮಾಯೆಯಿಂದ ಶಂಬರಾಸುರನು ಸೃಜಿಸಿದ ಮಾಯೆಗಳು ನಾಶವಾದವು. ವರುಣ-ಅಗ್ನಿ-ಚಂದ್ರಾದಿಗಳು ಶಂಬರನ ಮಾಯೆಯಿಂದ ಮುಕ್ತರಾದರು. ಅನಂತರ ಮಹಾಪರಾಕ್ರಮಿಗಳಾದ ಯಮ-ಚಂದ್ರ-ಸೂರ್ಯಾದಿ ದೇವತೆಗಳು ಅನೇಕ ಅಸುರರನ್ನು ಕೊಂದುಹಾಕಿದರು. ಇಂದ್ರನು ವಜ್ರಾಯುಧದಿಂದ ಆ ಆದಿ-ಶಂಬರಾಸುರನನ್ನು ಸಂಹರಿಸಿದರು. ಅದನ್ನು ಕಂಡು ದೈತ್ಯರು ಪಲಾಯನಗೈದರು.

ವಿಪ್ರಚಿತ್ತಿಯೆಂಬ ದೈತ್ಯನು ಓಡುತ್ತಿರುವ ದೈತ್ಯರನ್ನು ತರುಬಿ ಇಂದ್ರಾದಿಗಳೊಡನೆ ಯುದ್ಧಕ್ಕೆ ಬಂದನು. ಬ್ರಹ್ಮದೇವರ ವರಬಲದಿಂದ ಅಜೇಯನಾದ ವಿಪ್ರಚಿತ್ತಿಯ ಶರಾಹತಿಯಿಂದ ದೇವೇಂದ್ರಾದಿ ದೇವತೆಗಳು ಮೂರ್ಛಿತರಾದರು. ಅದನ್ನು ಅವಲೋಕಿಸಿದ ಲೋಕಜೀವನರಾದ ವಾಯುದೇವರು ಸರಳಸಂತತಿ (ಬಾಣಗಳ ಸಮೂಹ)ಗಳಿಂದ ಅಡ್ಡಗಟ್ಟಿದರು. ವಿಪ್ರ-ಚಿತ್ತಿಯು ಪ್ರಯೋಗಿಸಿದ ಕೂರಂಬುಗಳನ್ನೂ, ಅಸ್ತ್ರಗಳನ್ನೂ ಅವರು ತಮ್ಮ ಶ್ರೇಷ್ಠ ಅಸ್ತ್ರಗಳಿಂದ ತಡೆದು ಆ ದೈತ್ಯನ ಎದೆಗೆ ಸ್ವರ್ಣಮಯ ಗದೆಯನ್ನೆಸೆದರು. ವಾಯುದೇವರ ಬಲದಿಂದ ಮಹಾಸಾಮರ್ಥ್ಯಶಾಲಿಯಾದ ವಿಪ್ರಚಿತ್ತಿಯೂ ಹಿಟ್ಟಿನಂತಾಗಿ ಮೇರುಪರ್ವತದಲ್ಲಿ ಬಿದ್ದನು. ಅದನ್ನು ನೋಡಿ ಸಹಸ್ರಶಿರಗಳು ಎರಡು ಸಾವಿರಭುಜಗಳಿಂದ ಕೂಡಿದ ಕಾಲನೇಮಿ ಎಂಬ ಅಸುರನು ಕೂಡಲೇ ವಾಯುದೇವರತ್ತ ಧಾವಿಸಿದನು. ದೇವ! ಪೂರ್ವದಲ್ಲಿ ಈ ಕಾಲನೇಮಿಗೆ ನಿನ್ನ ಆಣತಿಯಂತೆ ಪದ್ಮಸಂಭವನು ಅಜೇಯತ್ವವರವನ್ನು ಅನುಗ್ರಹಿಸಿರುವುದರಿಂದ ಆ ಅಸುರನನ್ನು ನೀನೇ ಸಂಹರಿಸಬೇಕೆಂದು ನಿಶ್ಚಯಿಸಿದ ಪವಮಾನದೇವನು ನಿನ್ನನ್ನು ಸ್ಮರಿಸಿದನು ಆಗ ಸ್ವಾಮಿ, ಅನಂತ ಪರಾಕ್ರಮವುಳ್ಳ ನೀನು ತತ್‌ಕ್ಷಣವೇ ಆವಿರ್ಭವಿಸಿದಿ. ಶ್ರೀ ಹರಿ ಆಗ ತನ್ನೆಲ್ಲ ಬಾಹುಗಳಿಂದ ಬಹುವಿಧ ಅಸ್ತ್ರಗಳ ಮಳೆಗರೆಯುತ್ತಿದ್ದ ಆ ಕಾಲನೇಮಿಯ ಭುಜಗಳನ್ನೂ, ಶಿರಸ್ಸುಗಳನ್ನೂ ಸುದರ್ಶನದಿಂದ ಛೇದಿಸಿ ಅವನನ್ನು ಯಮಸದನಕ್ಕೆ ಕಳುಹಿಸಿ ದೇವತೆಗಳಿಗೆ ಸಂತೋಷವನ್ನುಂಟುಮಾಡಿದಿ. ಕಾಲನೇಮಿಯ ಸಂಹಾರಾನಂತರ ನಾಲ್ಕರಲ್ಲಿ ಮೂರಂಶ ಸಕಲ ದೈತ್ಯರು ನಿನ್ನಿಂದ ಸಂಹೃತರಾದರು. ನಾಲ್ಕನೆಯ ಭಾಗಾಂಶದ ದೈತ್ಯರನ್ನು ವಾಯುದೇವರು ಸಂಹರಿಸಿದರು. ಈ ಅಸುರರೇ ಮತ್ತೆ ಈಗ ಧರ್ಮ-ಬಲಯುಕ್ತರಾಗಿ ಧರೆಯಲ್ಲಿ ಜನಿಸಿದ್ದಾರೆ.

ಭಗವನ್! ಶ್ರೇಷ್ಠವಾದ ರಾಜವಂಶಗಳಲ್ಲಿ ಉತ್ತಮರಾದ ತಾಯಿತಂದೆಗಳಿಂದ ಜನಿಸಿರುವ ಈ ದೈತ್ಯರಿಗೆ ದೋಷ-ರಹಿತವಾದ ಧರ್ಮಬುದ್ಧಿಯುಂಟಾಗಿದೆ. ಶ್ರೇಷ್ಠ ಬ್ರಾಹ್ಮಣರಿಂದ ದೀಕ್ಷೆಯನ್ನು ಪಡೆದ ಅವರಿಗೆ ಸ್ಫಟಿಕಶಿಲೆಯಲ್ಲಿ ದಾಸವಾಳ ಪುಷ್ಪದ ಉಪಾಧಿಯಿಂದ ಕೆಂಬಣ್ಣ ತೋರುವಂತೆ, ಸಜ್ಜನ (ಸದ್‌ಬ್ರಾಹ್ಮಣ) ಸಮಾಗಮರೂಪ ಉಪಾಧಿಗೂ ಶಕ್ತಿಯಿರು-ವುದರಿಂದ ಅಯೋಗ್ಯರಾಗಿದ್ದರೂ ಆ ಅಸುರರಿಗೆ ನಿನ್ನಲ್ಲಿ ಸ್ವಲ್ಪ ಭಕ್ತಿಯುಂಟಾಗಬಹುದು. ನಿನ್ನಲ್ಲಿ ಸ್ವಲ್ಪ ಭಕ್ತಿಯುಳ್ಳವರೂ, ಮಂಗಳಕರ್ಮ ಉಳ್ಳವರೂ, ನರಕವನ್ನು ಹೊಂದುವುದಿಲ್ಲ. ಎಲೈ ಸತ್ಯಕಾಮ! ದೈತ್ಯರಿಗೆ ಅಂಧಃತಮಸ್ಸಾಗಬೇಕೆಂದು ನೀನೇ ವ್ಯವಸ್ಥೆ ಮಾಡಿರುವೆ. ಧರ್ಮಿಷ್ಠರಿಗೆ ಸದ್ಗತಿಯಾಗದಿದ್ದರೆ ನಿನ್ನಲ್ಲಿನ ಭಕ್ತಿರೂಪಧರ್ಮವು ವ್ಯರ್ಥವಾದೀತೆಂಬ ಭಯದಿಂದಲೂ, ಒಂದು ವೇಳೆ ನಿನ್ನ ಭಕ್ತಿರೂಪ ಧರ್ಮವು ವ್ಯರ್ಥವಾಗಬಾರದೆಂದು ದೈತ್ಯರಿಗೆ ಸದ್ಗತಿಯಾದಲ್ಲಿ ಅಸುರರಿಗೆ ಸದ್ಗತಿಯಾಗುವುದಿಲ್ಲ ಎಂಬ ಭಯದಿಂದಲೂ ನಾವು ನಿನ್ನನ್ನೀಗ ಪ್ರಾರ್ಥಿಸುತ್ತಿದ್ದೇವೆ. ದೇವದೇವ, ದೈತ್ಯರನ್ನು ಸತ್ಕರ್ಮ ಹಾಗೂ ನಿನ್ನ ಭಕ್ತಿಗಳಿಂದ ತಪ್ಪಿಸುವುದಕ್ಕಾಗಿ ನಿನ್ನನ್ನು ಪ್ರಾರ್ಥಿಸುತ್ತಿದ್ದೇವೆ."

ಹೀಗೆ ವಿಜ್ಞಾಪಿಸಿದ ದೇವತೆಗಳು ಮುಂದುವರೆದು ಶ್ರೀಹರಿಯಲ್ಲಿ ಹೀಗೆ ನಿವೇದಿಸಹತ್ತಿದರು – "ಹೇ ಈಶ! ದೇವ-ಗಾಯಕನಾದ ಉಗ್ರಸೇನನೆಂಬ ಗಂಧರ್ವನು ನಿನ್ನ ಸೇವೆಗಾಗಿಯೇ ಯದುವಂಶದಲ್ಲಿ ಉಗ್ರಸೇನನೆಂಬ ಹೆಸರಿನಿಂದಲೇ ಜನಿಸಿರುವನು. ನಿನ್ನ ಅನುಗ್ರಹಬಲದಿಂದ ಅತ್ಯಂತ ಸಮರ್ಥರಾದ ವಾಯುದೇವರು ನಿನ್ನ ಪ್ರೀತಿಗೋಸ್ಕರ ಸಂಹರಿಸದೇ ಬಿಟ್ಟು, ನಿನ್ನ ಸುದರ್ಶನದಿಂದ ಹತನಾದ ಕಾಲನೇಮಿಯು ಈಗ ಯಾರಿಂದಲೂ ಜಯಿಸಲಾಗದ ವರವನ್ನು ಮುಕ್ಕಣ್ಣನಿಂದ

ಪಡೆದು ಭೋಜರೆಂದು ಖ್ಯಾತರಾದ ಯಾದವರಲ್ಲಿ ಮತ್ತೆ ಹುಟ್ಟಿರುವನು. ಗಂಧರ್ವಮಾಯೆಯಿಂದ ಉಗ್ರಸೇನರಾಜನ ರೂಪತಾಳಿದ ದ್ರುಮಿಲನೆಂಬ ಗಂಧರ್ವರಿಂದ ಉಗ್ರಸೇನನ ಪತ್ನಿಯಲ್ಲಿ ಶೂಲಪಾಣಿಯ ವರದಿಂದ ದೇವೇಂದ್ರನನ್ನು ಧಿಕ್ಕರಿಸಿ ಪರಾಭವಗೊಳಿಸಿದ ಕಾಲನೇಮಿಯು 'ಕಂಸ'ನೆಂಬ ಹೆಸರಿನಿಂದ ಜನಿಸಿದ್ದಾನೆ. ಆ ಕಂಸನು ಸಾಮಾನ್ಯನಲ್ಲ. ಅವನು ವರುಣನನ್ನು ಗೆದ್ದು ಅನರ್ಘ್ಯ ರತ್ನಗಳನ್ನು ಅಪಹರಿಸಿದ್ದಲ್ಲದೆ, ಮಗಧದೇಶಾಧಿಪನಾದ ಜರಾಸಂಧನು ತನ್ನ ಕುವರಿಯರ ರಕ್ಷಣೆಗಾಗಿ ನೇಮಿಸಿದ್ದ ಶಿವನ ಯಕ್ಷರನ್ನೂ ಸೋಲಿಸಿ ಜರಾಸಂಧನ ಪುತ್ರಿಯರಾದ ಅಸ್ತಿ-ಪ್ರಾಸ್ತಿ ಎಂಬಿಬ್ಬರು ಕನ್ನಿಕೆಯರನ್ನೂ ಬಲಾತ್ಕಾರದಿಂದ ಅಪಹರಿಸಿದ್ದಾನೆ. ದೈತ್ಯ ವಿಪ್ರಚಿತ್ತಿಯೇ ಈಗ ಜರಾಸಂಧನಾಗಿ ಹುಟ್ಟಿರುವನು. ಆ ಮಾಗಧರಾಜನು ಬ್ರಹ್ಮ ಹಾಗೂ ರುದ್ರದೇವರ ವರದಿಂದ ಅಜೇಯನಾಗಿದ್ದಾನೆ. ಇಂತು ಮಹಾಬಲವಂತನಾಗಿದ್ದರೂ ಆ ಜರಾಸಂಧನು ಕಂಸನು ಇಂದ್ರಾದಿಗಳನ್ನು ಗೆಲಿದು ಪ್ರಸಿದ್ಧನಾದ ಮಹಾಬಲಶಾಲಿಯೆಂದರಿತು ಸಂತೋಷದಿಂದ ಅಪಹೃತರಾದ ತನ್ನ ಪುತ್ರಿಯರನ್ನೂ ಕಂಸನಿಗೇ ಮದುವೆ ಮಾಡಿಕೊಟ್ಟನು. ಪಾತಾಲಾದಿ ಸಪ್ತ ಲೋಕಗಳಲ್ಲಿಯೂ ಯಾವಾಗಲೂ, ಜರಾಸಂಧನಿಗೆ ಸಮಾನರಾದ ಬಲಶಾಲಿಗಳಾದವರು ಯಾರೂ ಇಲ್ಲ. ಶಲ್ಯ, ಬಾಹ್ಲೀಕಾದಿ ರಾಜರನ್ನು ತನ್ನ ಸ್ವಾಧೀನದಲ್ಲಿಟ್ಟುಕೊಂಡಿರುವ ಮಹಾಬಲಿಷ್ಠನಾದ ಜರಾಸಂಧನು ತನ್ನ ಕುವರಿಯರನ್ನು ಅಪಹರಿಸುತ್ತಿರುವಾಗ ಕಂಸನನ್ನು ತಡೆಯಲು ಸಮರ್ಥನೇ ಆಗಿದ್ದರೂ ಉದ್ಧತನಾದ ಕಂಸನನ್ನು ತಡೆಯಲಿಲ್ಲ, ಮತ್ತು ಕಂಸನ ಬಲವರಿತು ಆನಂದದಿಂದ ತನ್ನ ಪುತ್ರಿಯರನ್ನು ಅವನಿಗೇ ಮದುವೆ ಮಾಡಿಕೊಟ್ಟನು.

ಸ್ವಾಮಿ, ಪೂರ್ವದಲ್ಲಿ ಹಯಗ್ರೀವಾವತಾರವನ್ನು ತಾಳಿದಾಗ ಮಧುಕೈಟಭರೆಂಬ ದೈತ್ಯರನ್ನು ಸಂಹರಿಸಿದೆ. ಆ ಮಧುಕೈಟಭರೇ ಈಗ ಬ್ರಹ್ಮದತ್ತನ ಮಕ್ಕಳಾಗಿ ಹಂಸ-ಡಿಂಭಕರೆಂದು ಪ್ರಸಿದ್ಧರಾಗಿ ಜನಿಸಿದ್ದಾರೆ. ತ್ರಿನೇತ್ರನ ವರದಿಂದ ಗೆಲಿಯಲಳವಲ್ಲದ ಪರಾಕ್ರಮಿಗಳಾದ ಅವರು ಜರಾಸಂಧನ ನಂತರದಲ್ಲಿ ಶಿವನ ಪರಮಭಕ್ತರಾಗಿದ್ದಾರೆ. ಹಿಂದೆ ದೇವಾಸುರ ಕಾಳಗದಲ್ಲಿ ನಿನ್ನಿಂದ ಕೊಲ್ಲಲ್ಪಟ್ಟ ಇತರ ಅಸುರರೂ, ಅದರಂತೆಯೇ ಸಂಹೃತರಾದ ಇತರ ನಿನ್ನ ದ್ವೇಷಿಗಳೂ ಅಂಧಃತಮಸ್ಸನ್ನು ಹೊಂದಿದರು. ಕೆಲವರು ಧರೆಯಲ್ಲಿ ಜನಿಸಿರುವರು. ಹೀಗೆ ಹುಟ್ಟಿರುವ ಆ ಅಸುರರನ್ನು ನೀನು ತಮಸ್ಸಿಗೆ ಕಳುಹಿಸಬೇಕು.

ದೇವ, ವೇದವ್ಯಾಸಾವತಾರಕಾಲದಲ್ಲಿ ನಿನ್ನ ಮಂಗಳಕರವಚನಗಳಿಂದ (ಬ್ರಹ್ಮಮೀಮಾಂಸಾಶಾಸ್ತ್ರವಾಕ್ಯಗಳಿಂದ) ಸಂಹೃತನಾದ, ಅಂದರೆ ಕಾಲನೇಮಿಯಂತೆ ನಿನ್ನ ಸುದರ್ಶನಾದ್ಯಾಯುಧಗಳಿಂದ ಸರ್ವದಾ ಸಂಹೃತನಾಗದ, ಮಿಥ್ಯಾ-ಜ್ಞಾನರೂಪಿಯಾದ ಕಲಿಯು ಈಗ ಅಳಿದುಳಿದ ನಿಜರೂಪದಿಂದ ಸಜ್ಜನರಲ್ಲಿದ್ದು, ಆ ಸಜ್ಜನರು ಅಧ್ಯಯನ ಮಾಡುವ ಬ್ರಹ್ಮಮೀಮಾಂಸಶಾಸ್ತ್ರಾದಿ ನಿರ್ಣಯವಾಕ್ಯಗಳನ್ನು ಶ್ರವಣಮಾಡಿ, ನಿನ್ನಲ್ಲಿ ಸ್ವಲ್ಪ ಮನವಿರಿಸಿದಂತಿದ್ದಾನೆ. ಆದಕಾರಣ ಅವನಿಗೆ ತಮಸ್ಸಾಗದು. ಕಲಿಗೂ ಇತರ ದೈತ್ಯರಿಗೂ ಸದ್ಗತಿಯಾಗಬೇಕಿರುತ್ತದೆ. ಅದು ಹಾಗಾಗಬಾರದು. ಕಲಿಯು ದುರ್ಯೋಧನ ರೂಪದಿಂದ ಭೂಮಿಯಲ್ಲಿ ಜನಿಸಿದ್ದಾನೆ. (ಅವನನ್ನು ಭೀಮಸೇನದೇವರ ಗದಾಪ್ರಹಾರದಿಂದ ಸಂಹಾರ ಮಾಡಿಸಬೇಕೆಂದು ಭಾವ).

ರಾಮಾವತಾರಕಾಲದಲ್ಲಿ ನಿನ್ನಿಂತ ಹತರಾದ ರಾಕ್ಷಸರೂ ಸಹ ಪಾಪಿಷ್ಠರಾಗಿದ್ದರೂ ಅವರು ನಿನ್ನ ಬಲವನ್ನು ನೋಡಿ ನಿನಗೆ ಸಮಾನರು ಮತ್ತೊಬ್ಬರು ಇಲ್ಲವೆಂದೂ, ಅದರಂತೆಯೇ ಹನುಮಂತನಿಗೆ ಸಮರು ಬೇರೊಬ್ಬರಿಲ್ಲವೆಂದು ತಿಳಿಯುವರು.

ಬ್ರಹ್ಮ-ರುದ್ರಾದಿ ಅಮನಿಕರರನ್ನು ಅವರವರ ಸ್ಥಾನಗಳಲ್ಲಿಟ್ಟಿರುವ ಪರಮಾತ್ಮ! ನೀನು ಮತ್ತು ವಾಯುದೇವರು ಮಹಾ ಮಹಿಮರೆಂದರಿತು ನಿಮ್ಮಲ್ಲಿ ಭಕ್ತಿಯಿಂದ ಮಹತ್ವಬುದ್ಧಿಯಿಟ್ಟಿರುವ ಜೀವರು ಖಂಡಿತವಾಗಿ ಅಂಧಂತಮಸ್ಸಿಗೆ

ವೈಷ್ಣವೀಮಾಯೆಯನ್ನು ಪ್ರಯೋಗಿಸಿದನು. ರುದ್ರದೇವರ ವರವನ್ನೂ, ಮತ್ತು ಸಕಲ ಮಾಯೆಗಳನ್ನೂ ನಾಶಪಡಿಸುವ, ಸಹಿಸಲಶಕ್ಯವಾದ ವೈಷ್ಣವ ಮಾಯೆಯಿಂದ ಶಂಬರಾಸುರನು ಸೃಜಿಸಿದ ಮಾಯೆಗಳು ನಾಶವಾದವು. ವರುಣ-ಅಗ್ನಿ-ಚಂದ್ರಾದಿಗಳು ಶಂಬರನ ಮಾಯೆಯಿಂದ ಮುಕ್ತರಾದರು. ಅನಂತರ ಮಹಾಪರಾಕ್ರಮಿಗಳಾದ ಯಮ-ಚಂದ್ರ-ಸೂರ್ಯಾದಿ ದೇವತೆಗಳು ಅನೇಕ ಅಸುರರನ್ನು ಕೊಂದುಹಾಕಿದರು. ಇಂದ್ರನು ವಜ್ರಾಯುಧದಿಂದ ಆ ಆದಿ-ಶಂಬರಾಸುರನನ್ನು ಸಂಹರಿಸಿದರು. ಅದನ್ನು ಕಂಡು ದೈತ್ಯರು ಪಲಾಯನಗೈದರು.

ವಿಪ್ರಚಿತ್ತಿಯೆಂಬ ದೈತ್ಯನು ಓಡುತ್ತಿರುವ ದೈತ್ಯರನ್ನು ತರುಬಿ ಇಂದ್ರಾದಿಗಳೊಡನೆ ಯುದ್ಧಕ್ಕೆ ಬಂದನು. ಬ್ರಹ್ಮದೇವರ ವರಬಲದಿಂದ ಅಜೇಯನಾದ ವಿಪ್ರಚಿತ್ತಿಯ ಶರಾಹತಿಯಿಂದ ದೇವೇಂದ್ರಾದಿ ದೇವತೆಗಳು ಮೂರ್ಛಿತರಾದರು. ಅದನ್ನು ಅವಲೋಕಿಸಿದ ಲೋಕಜೀವನರಾದ ವಾಯುದೇವರು ಸರಳಸಂತತಿ (ಬಾಣಗಳ ಸಮೂಹ)ಗಳಿಂದ ಅಡ್ಡಗಟ್ಟಿದರು. ವಿಪ್ರ-ಚಿತ್ತಿಯು ಪ್ರಯೋಗಿಸಿದ ಕೂರಂಬುಗಳನ್ನೂ, ಅಸ್ತ್ರಗಳನ್ನೂ ಅವರು ತಮ್ಮ ಶ್ರೇಷ್ಠ ಅಸ್ತ್ರಗಳಿಂದ ತಡೆದು ಆ ದೈತ್ಯನ ಎದೆಗೆ ಸ್ವರ್ಣಮಯ ಗದೆಯನ್ನೆಸದರು. ವಾಯುದೇವರ ಬಲದಿಂದ ಮಹಾಸಾಮರ್ಥ್ಯಶಾಲಿಯಾದ ವಿಪ್ರಚಿತ್ತಿಯೂ ಹಿಟ್ಟಿನಂತಾಗಿ ಮೇರುಪರ್ವತದಲ್ಲಿ ಬಿದ್ದನು. ಅದನ್ನು ನೋಡಿ ಸಹಸ್ರಶಿರಗಳು ಎರಡು ಸಾವಿರಭುಜಗಳಿಂದ ಕೂಡಿದ ಕಾಲನೇಮಿ ಎಂಬ ಅಸುರನು ಕೂಡಲೇ ವಾಯುದೇವರತ್ತ ಧಾವಿಸಿದನು. ದೇವ! ಪೂರ್ವದಲ್ಲಿ ಈ ಕಾಲನೇಮಿಗೆ ನಿನ್ನ ಆಣತಿಯಂತೆ ಪದ್ಮಸಂಭವನು ಅಜೇಯತ್ವವರವನ್ನು ಅನುಗ್ರಹಿಸಿರುವುದರಿಂದ ಆ ಅಸುರನನ್ನು ನೀನೇ ಸಂಹರಿಸಬೇಕೆಂದು ನಿಶ್ಚಯಿಸಿದ ಪವಮಾನದೇವನು ನಿನ್ನನ್ನು ಸ್ಮರಿಸಿದನು ಆಗ ಸ್ವಾಮಿ, ಅನಂತ ಪರಾಕ್ರಮವುಳ್ಳ ನೀನು ತತ್‌ಕ್ಷಣವೇ ಆವಿರ್ಭವಿಸಿದಿ. ಶ್ರೀ ಹರಿ ಆಗ ತನ್ನೆಲ್ಲ ಬಾಹುಗಳಿಂದ ಬಹುವಿಧ ಅಸ್ತ್ರಗಳ ಮಳೆಗರೆಯುತ್ತಿದ್ದ ಆ ಕಾಲನೇಮಿಯ ಭುಜಗಳನ್ನೂ, ಶಿರಸ್ಸುಗಳನ್ನೂ ಸುದರ್ಶನದಿಂದ ಛೇದಿಸಿ ಅವನನ್ನು ಯಮಸದನಕ್ಕೆ ಕಳುಹಿಸಿ ದೇವತೆಗಳಿಗೆ ಸಂತೋಷವನ್ನುಂಟುಮಾಡಿದಿ. ಕಾಲನೇಮಿಯ ಸಂಹಾರಾನಂತರ ನಾಲ್ಕರಲ್ಲಿ ಮೂರಂಶ ಸಕಲ ದೈತ್ಯರು ನಿನ್ನಿಂದ ಸಂಹೃತರಾದರು. ನಾಲ್ಕನೆಯ ಭಾಗಾಂಶದ ದೈತ್ಯರನ್ನು ವಾಯುದೇವರು ಸಂಹರಿಸಿದರು. ಈ ಅಸುರರೇ ಮತ್ತೆ ಈಗ ಧರ್ಮ-ಬಲಯುಕ್ತರಾಗಿ ಧರೆಯಲ್ಲಿ ಜನಿಸಿದ್ದಾರೆ.

ಭಗವನ್! ಶ್ರೇಷ್ಠವಾದ ರಾಜವಂಶಗಳಲ್ಲಿ ಉತ್ತಮರಾದ ತಾಯಿತಂದೆಗಳಿಂದ ಜನಿಸಿರುವ ಈ ದೈತ್ಯರಿಗೆ ದೋಷ-ರಹಿತವಾದ ಧರ್ಮಬುದ್ಧಿಯುಂಟಾಗಿದೆ. ಶ್ರೇಷ್ಠ ಬ್ರಾಹ್ಮಣರಿಂದ ದೀಕ್ಷೆಯನ್ನು ಪಡೆದ ಅವರಿಗೆ ಸ್ಫಟಿಕಶಿಲೆಯಲ್ಲಿ ದಾಸವಾಳ ಪುಷ್ಪದ ಉಪಾಧಿಯಿಂದ ಕೆಂಬಣ್ಣ ತೋರುವಂತೆ, ಸಜ್ಜನ (ಸದ್‌ಬ್ರಾಹ್ಮಣ) ಸಮಾಗಮರೂಪ ಉಪಾಧಿಗೂ ಶಕ್ತಿಯಿರು-ವುದರಿಂದ ಅಯೋಗ್ಯರಾಗಿದ್ದರೂ ಆ ಅಸುರರಿಗೆ ನಿನ್ನಲ್ಲಿ ಸ್ವಲ್ಪ ಭಕ್ತಿಯುಂಟಾಗಬಹುದು. ನಿನ್ನಲ್ಲಿ ಸ್ವಲ್ಪ ಭಕ್ತಿಯುಳ್ಳವರೂ, ಮಂಗಳಕರ್ಮ ಉಳ್ಳವರೂ, ನರಕವನ್ನು ಹೊಂದುವುದಿಲ್ಲ. ಎಲೈ ಸತ್ಯಕಾಮ! ದೈತ್ಯರಿಗೆ ಅಂಧಂತಮಸ್ಸಾಗಬೇಕೆಂದು ನೀನೇ ವ್ಯವಸ್ಥೆ ಮಾಡಿರುವೆ. ಧರ್ಮಿಷ್ಠರಿಗೆ ಸದ್ಗತಿಯಾಗದಿದ್ದರೆ ನಿನ್ನಲ್ಲಿನ ಭಕ್ತಿರೂಪಧರ್ಮವು ವ್ಯರ್ಥವಾದೀತೆಂಬ ಭಯದಿಂದಲೂ, ಒಂದು ವೇಳೆ ನಿನ್ನ ಭಕ್ತಿರೂಪ ಧರ್ಮವು ವ್ಯರ್ಥವಾಗಬಾರದೆಂದು ದೈತ್ಯರಿಗೆ ಸದ್ಗತಿಯಾದಲ್ಲಿ ಅಸುರರಿಗೆ ಸದ್ಗತಿಯಾಗುವುದಿಲ್ಲ ಎಂಬ ಭಯದಿಂದಲೂ ನಾವು ನಿನ್ನನ್ನೀಗ ಪ್ರಾರ್ಥಿಸುತ್ತಿದ್ದೇವೆ. ದೇವದೇವ, ದೈತ್ಯರನ್ನು ಸತ್ಕರ್ಮ ಹಾಗೂ ನಿನ್ನ ಭಕ್ತಿಗಳಿಂದ ತಪ್ಪಿಸುವುದಕ್ಕಾಗಿ ನಿನ್ನನ್ನು ಪ್ರಾರ್ಥಿಸುತ್ತಿದ್ದೇವೆ."

ಹೀಗೆ ವಿಜ್ಞಾಪಿಸಿದ ದೇವತೆಗಳು ಮುಂದುವರೆದು ಶ್ರೀಹರಿಯಲ್ಲಿ ಹೀಗೆ ನಿವೇದಿಸಹತ್ತಿದರು - "ಹೇ ಈಶ! ದೇವ-ಗಾಯಕನಾದ ಉಗ್ರಸೇನನೆಂಬ ಗಂಧರ್ವನು ನಿನ್ನ ಸೇವೆಗಾಗಿಯೇ ಯದುವಂಶದಲ್ಲಿ ಉಗ್ರಸೇನನೆಂಬ ಹೆಸರಿನಿಂದಲೇ ಜನಿಸಿರುವನು. ನಿನ್ನ ಅನುಗ್ರಹಬಲದಿಂದ ಅತ್ಯಂತ ಸಮರ್ಥರಾದ ವಾಯುದೇವರು ನಿನ್ನ ಪ್ರೀತಿಗೋಸ್ಕರ ಸಂಹರಿಸದೇ ಬಿಟ್ಟು, ನಿನ್ನ ಸುದರ್ಶನದಿಂದ ಹತನಾದ ಕಾಲನೇಮಿಯು ಈಗ ಯಾರಿಂದಲೂ ಜಯಿಸಲಾಗದ ವರವನ್ನು ಮುಕ್ಕಣ್ಣನಿಂದ

ಪಡೆದು ಭೋಜರೆಂದು ಖ್ಯಾತರಾದ ಯಾದವರಲ್ಲಿ ಮತ್ತೆ ಹುಟ್ಟಿರುವನು. ಗಂಧರ್ವಮಾಯೆಯಿಂದ ಉಗ್ರಸೇನರಾಜನ ರೂಪತಾಳಿದ ದ್ರುಮಿಲನೆಂಬ ಗಂಧರ್ವರಿಂದ ಉಗ್ರಸೇನನ ಪತ್ನಿಯಲ್ಲಿ ಶೂಲಪಾಣಿಯ ವರದಿಂದ ದೇವೇಂದ್ರನನ್ನು ಧಿಕ್ಕರಿಸಿ ಪರಾಭವಗೊಳಿಸಿದ ಕಾಲನೇಮಿಯು 'ಕಂಸ'ನೆಂಬ ಹೆಸರಿನಿಂದ ಜನಿಸಿದ್ದಾನೆ. ಆ ಕಂಸನು ಸಾಮಾನ್ಯನಲ್ಲ. ಅವನು ವರುಣನನ್ನು ಗೆದ್ದು ಅನರ್ಘ್ಯ ರತ್ನಗಳನ್ನು ಅಪಹರಿಸಿದ್ದಲ್ಲದೆ, ಮಗಧದೇಶಾಧಿಪನಾದ ಜರಾಸಂಧನು ತನ್ನ ಕುವರಿಯರ ರಕ್ಷಣೆಗಾಗಿ ನೇಮಿಸಿದ್ದ ಶಿವನ ಯಕ್ಷರನ್ನೂ ಸೋಲಿಸಿ ಜರಾಸಂಧನ ಪುತ್ರಿಯರಾದ ಅಸ್ತಿ-ಪ್ರಾಸ್ತಿ ಎಂಬಿಬ್ಬರು ಕನ್ನಿಕೆಯರನ್ನೂ ಬಲಾತ್ಕಾರದಿಂದ ಅಪಹರಿಸಿದ್ದಾನೆ. ದೈತ್ಯ ವಿಪ್ರಚಿತ್ತಿಯೇ ಈಗ ಜರಾಸಂಧನಾಗಿ ಹುಟ್ಟಿರುವನು. ಆ ಮಾಗಧರಾಜನು ಬ್ರಹ್ಮ ಹಾಗೂ ರುದ್ರದೇವರ ವರದಿಂದ ಅಜೇಯನಾಗಿದ್ದಾನೆ. ಇಂತು ಮಹಾಬಲವಂತನಾಗಿದ್ದರೂ ಆ ಜರಾಸಂಧನು ಕಂಸನು ಇಂದ್ರಾದಿಗಳನ್ನು ಗೆಲಿದು ಪ್ರಸಿದ್ಧನಾದ ಮಹಾಬಲಶಾಲಿಯೆಂದರಿತು ಸಂತೋಷದಿಂದ ಅಪಹೃತರಾದ ತನ್ನ ಪುತ್ರಿಯರನ್ನೂ ಕಂಸನಿಗೇ ಮದುವೆ ಮಾಡಿಕೊಟ್ಟನು. ಪಾತಾಲಾದಿ ಸಪ್ತ ಲೋಕಗಳಲ್ಲಿಯೂ ಯಾವಾಗಲೂ, ಜರಾಸಂಧನಿಗೆ ಸಮಾನರಾದ ಬಲಶಾಲಿಗಳಾದವರು ಯಾರೂ ಇಲ್ಲ. ಶಲ್ಯ, ಬಾಹ್ಲೀಕಾದಿ ರಾಜರನ್ನು ತನ್ನ ಸ್ವಾಧೀನದಲ್ಲಿಟ್ಟುಕೊಂಡಿರುವ ಮಹಾಬಲಿಷ್ಠನಾದ ಜರಾಸಂಧನು ತನ್ನ ಕುವರಿಯರನ್ನು ಅಪಹರಿಸುತ್ತಿರುವಾಗ ಕಂಸನನ್ನು ತಡೆಯಲು ಸಮರ್ಥನೇ ಆಗಿದ್ದರೂ ಉದ್ಧತನಾದ ಕಂಸನನ್ನು ತಡೆಯಲಿಲ್ಲ, ಮತ್ತು ಕಂಸನ ಬಲವರಿತು ಆನಂದದಿಂದ ತನ್ನ ಪುತ್ರಿಯರನ್ನು ಅವನಿಗೇ ಮದುವೆ ಮಾಡಿಕೊಟ್ಟನು.

ಸ್ವಾಮಿ, ಪೂರ್ವದಲ್ಲಿ ಹಯಗ್ರೀವಾವತಾರವನ್ನು ತಾಳಿದಾಗ ಮಧುಕೈಟಭರೆಂಬ ದೈತ್ಯರನ್ನು ಸಂಹರಿಸಿದೆ. ಆ ಮಧುಕೈಟಭರೇ ಈಗ ಬ್ರಹ್ಮದತ್ತನ ಮಕ್ಕಳಾಗಿ ಹಂಸ-ಡಿಂಭಕರೆಂದು ಪ್ರಸಿದ್ಧರಾಗಿ ಜನಿಸಿದ್ದಾರೆ. ತ್ರಿನೇತ್ರನ ವರದಿಂದ ಗೆಲಿಯಲಳವಲ್ಲದ ಪರಾಕ್ರಮಿಗಳಾದ ಅವರು ಜರಾಸಂಧನ ನಂತರದಲ್ಲಿ ಶಿವನ ಪರಮಭಕ್ತರಾಗಿದ್ದಾರೆ. ಹಿಂದೆ ದೇವಾಸುರ ಕಾಳಗದಲ್ಲಿ ನಿನ್ನಿಂದ ಕೊಲ್ಲಲ್ಪಟ್ಟ ಇತರ ಅಸುರರೂ, ಅದರಂತೆಯೇ ಸಂಹೃತರಾದ ಇತರ ನಿನ್ನ ದ್ವೇಷಿಗಳೂ ಅಂಧಃತಮಸ್ಸನ್ನು ಹೊಂದಿದರು. ಕೆಲವರು ಧರೆಯಲ್ಲಿ ಜನಿಸಿರುವರು. ಹೀಗೆ ಹುಟ್ಟಿರುವ ಆ ಅಸುರರನ್ನು ನೀನು ತಮಸ್ಸಿಗೆ ಕಳುಹಿಸಬೇಕು.

ದೇವ, ವೇದವ್ಯಾಸಾವತಾರಕಾಲದಲ್ಲಿ ನಿನ್ನ ಮಂಗಳಕರವಚನಗಳಿಂದ (ಬ್ರಹ್ಮಮೀಮಾಂಸಾಶಾಸ್ತ್ರವಾಕ್ಯಗಳಿಂದ) ಸಂಹೃತನಾದ, ಅಂದರೆ ಕಾಲನೇಮಿಯಂತೆ ನಿನ್ನ ಸುದರ್ಶನಾದ್ಯಾಯುಧಗಳಿಂದ ಸರ್ವದಾ ಸಂಹೃತನಾಗದ, ಮಿಥ್ಯಾ-ಜ್ಞಾನರೂಪಿಯಾದ ಕಲಿಯು ಈಗ ಅಳಿದುಳಿದ ನಿಜರೂಪದಿಂದ ಸಜ್ಜನರಲ್ಲಿದ್ದು, ಆ ಸಜ್ಜನರು ಅಧ್ಯಯನ ಮಾಡುವ ಬ್ರಹ್ಮಮೀಮಾಂಸಶಾಸ್ತ್ರಾದಿ ನಿರ್ಣಯವಾಕ್ಯಗಳನ್ನು ಶ್ರವಣಮಾಡಿ, ನಿನ್ನಲ್ಲಿ ಸ್ವಲ್ಪ ಮನವರಿಸಿದಂತಿದ್ದಾನೆ. ಆದಕಾರಣ ಅವನಿಗೆ ತಮಸ್ಸಾಗದು. ಕಲಿಗೂ ಇತರ ದೈತ್ಯರಿಗೂ ಸದ್ಗತಿಯಾಗಬೇಕಿರುತ್ತದೆ. ಅದು ಹಾಗಾಗಬಾರದು. ಕಲಿಯು ದುರ್ಯೋಧನ ರೂಪದಿಂದ ಭೂಮಿಯಲ್ಲಿ ಜನಿಸಿದ್ದಾನೆ. (ಅವನನ್ನು ಭೀಮಸೇನದೇವರ ಗದಾಪ್ರಹಾರದಿಂದ ಸಂಹಾರ ಮಾಡಿಸಬೇಕೆಂದು ಭಾವ).

ರಾಮಾವತಾರಕಾಲದಲ್ಲಿ ನಿನ್ನಿಂತ ಹತರಾದ ರಾಕ್ಷಸರೂ ಸಹ ಪಾಪಿಷ್ಠರಾಗಿದ್ದರೂ ಅವರು ನಿನ್ನ ಬಲವನ್ನು ನೋಡಿ ನಿನಗೆ ಸಮಾನರು ಮತ್ತೊಬ್ಬರು ಇಲ್ಲವೆಂದೂ, ಅದರಂತೆಯೇ ಹನುಮಂತನಿಗೆ ಸಮರು ಬೇರೊಬ್ಬರಿಲ್ಲವೆಂದು ತಿಳಿಯುವರು.

ಬ್ರಹ್ಮ-ರುದ್ರಾದಿ ಅಮನಿಕರರನ್ನು ಅವರವರ ಸ್ಥಾನಗಳಲ್ಲಿಟ್ಟಿರುವ ಪರಮಾತ್ಮ! ನೀನು ಮತ್ತು ವಾಯುದೇವರು ಮಹಾ ಮಹಿಮರೆಂದರಿತು ನಿಮ್ಮಲ್ಲಿ ಭಕ್ತಿಯಿಂದ ಮಹತ್ತ್ವಬುದ್ಧಿಯಿಟ್ಟಿರುವ ಜೀವರು ಖಂಡಿತವಾಗಿ ಅಂಧಂತಮಸ್ಸಿಗೆ

ಅರ್ಹರಲ್ಲ. ಆದಕಾರಣ ನೀನು ಆ ಅಸುರರನ್ನು ಸನ್ಮಾರ್ಗದಿಂದ ಚ್ಯುತಿಗೊಳಿಸಲೇಬೇಕು. ಅವರಿಗೆ ನಿನ್ನಲ್ಲಿ, ವಾಯುದೇವರಲ್ಲಿ ಮತ್ತು ಸಕಲ ದೇವತೆಗಳಲ್ಲಿಯೂ ಅತ್ಯಂತ ವಿರೋಧವನ್ನು ಅನೇಕ ವಿಧವಾಗಿ ಹುಟ್ಟಿಸಿ, ಅನಂತರ ಕಲಿ ಮುಂತಾದವರನ್ನು ಅಂಧಂತಮಸ್ಸಿಗೆ ತಳ್ಳಬೇಕು. ಹಿಂದೆ ಸನಕಾದಿಗಳ ಶಾಪಕ್ಕೆ ಗುರಿಯಾದ ನಿನ್ನ ಭಕ್ತರಾದ ಜಯವಿಜಯರು ಶ್ರೇಷ್ಠ ಅಸುರರಿಂದ ಆವಿಷ್ಟರಾಗಿ ರಾವಣ-ಕುಂಭಕರ್ಣರಾಗಿ ಜನಿಸಿ ನಿನ್ನಿಂದ ಹತರಾಗಿದ್ದರು. ಅವರೀಗ ಶಿಶುಪಾಲ-ದಂತವಕ್ತ್ರರಾಗಿ ಹುಟ್ಟಿರುವರು. ಸನಕಾದಿಗಳ ಶಾಪದಿಂದ ಅವರನ್ನು ನೀನೇ ಮುಕ್ತಗೊಳಿಸಬೇಕು. ಸ್ವಾಮಿ, ನಿನಗೆ ಅಹಿತರಾದ ಶಿಶುಪಾಲ ದಂತವಕ್ತ್ರರೆಂಬ ಅಸುರರು ಜಯವಿಜಯರಲ್ಲಿ ಪ್ರವಿಷ್ಟರಾಗಿದ್ದಾರೆ. ಆ ಶಿಶುಪಾಲ-ದಂತವಕ್ತ್ರರು ಅಂಧಃತಮಸ್ಸಿಗೆ ಹೋಗಬೇಕು. ನಿನ್ನ ಪರಮಭಕ್ತರಾದ ಜಯ-ವಿಜಯರು ವೈಕುಂಠವನ್ನು ಹೊಂದಲರ್ಹರಾಗಿರುವರು.

ದೇವ, ಪ್ರಹ್ಲಾದರ ಪುತ್ರನಾದ ಬಲಿರಾಜನಲ್ಲಿ ಆವಿಷ್ಟನಾಗಿ ನಿನ್ನಲ್ಲಿ ಮತ್ತು ದೇವತೆಗಳಲ್ಲಿ ಅತಿದ್ವೇಷ ಸಾಧಿಸಿದ ಬಲಿ ನಾಮಕ ಅಸುರನು ಈಗ ಬ್ರಹ್ಮದತ್ತ ಪುತ್ರನಾಗಿ ಹುಟ್ಟಿ ಸಾಲ್ವನೆಂಬ ಹೆಸರಿನಿಂದ ವಿಖ್ಯಾತನಾಗಿದ್ದಾನೆ. ಆ ಸಾಲ್ವನು ಭೃಗುಕುಲದಲ್ಲಿ ಪರಶುರಾಮರೂಪದಿಂದ ಅವತರಿಸಿದ ನಿನ್ನ ಜೊತೆಯಲ್ಲಿ ಅನೇಕಬಾರಿ ಯುದ್ಧಮಾಡಿ ಪರಾಜಿತನಾಗಿ ಓಡಿದ್ದಾನೆ. ಅವನು ಶೂಲಪಾಣಿಯನ್ನು ತಪಸ್ಸಿನಿಂದ ಮೆಚ್ಚಿಸಿ ರುದ್ರದೇವರಿಂದ ಅಭೇದ್ಯವೂ ಇಂದ್ರಜಾಲಮಾಯಾಮಯವೂ ಆದ ಸೌಭವೆಂಬ ವಿಮಾನವನ್ನು ಪಡೆದಿದ್ದಾನೆ. ಸಾಲ್ವನನ್ನು ಕೃಷ್ಣಾವತಾರ ಕಾಲದಲ್ಲಿಯೇ ಸಂಹರಿಸಬೇಕೆಂಬ ನಿನ್ನ ಸಂಕಲ್ಪವನ್ನು ಸತ್ಯವನ್ನಾಗಿಸಲು, ಕ್ಷಣಮಾತ್ರದಲ್ಲಿ ಅವನನ್ನು ಸಂಹರಿಸಲು ಮಹಾಶಕ್ತಿಂತನಾಗಿದ್ದರೂ ನೀನು ಪರಶುರಾಮಾವತಾರದಲ್ಲಿ ಸಂಹರಿಸದೆ ಬಿಟ್ಟಿದ್ದೀಯೆ! ಈಗ ನಿನ್ನಿಂದಲೇ (ಕೃಷ್ಣಾವತಾರದಲ್ಲಿ) ಅವನ ಸಂಹಾರವಾಗಬೇಕಾಗಿದೆ. ಯದ್ಯಪಿ ಸೌಭಪತಿಯು ಸಾಲ್ವನೇ ಆಗಿದ್ದರೂ ಸಾಲ್ವನ ತಂದೆಯಾದ ಬ್ರಹ್ಮದತ್ತನು ಸೌಭವಿಮಾನವನ್ನೇರಿ ಸಂಚರಿಸುತ್ತಿದ್ದುದರಿಂದ ಅವನು ಸೌಭಪತಿಯೆಂದು ಖ್ಯಾತನಾದನು. ಸಾಲ್ವನು ತಪೋನಿರತನಾಗಿರುವಾಗ ಭೀಷ್ಮರು ಬ್ರಹ್ಮದತ್ತನನ್ನು ಸೋಲಿಸಿದರು. ಈಗ ಸಾಲ್ವನು ತಪಸ್ಸಿನಿಂದ ಉಮಾಪತಿಯನ್ನು ಒಲಿಸಿಕೊಂಡು ಅವರಿಂದ ಸೌಭವಿಮಾನವನ್ನು ಪಡೆದುಬಂದು ಜರಾಸಂಧನಿಗೆ ಅನುಕೂಲನಾಗಿದ್ದಾನೆ. ನಿನ್ನ ವಿನಃ ಅವನು ಬೇರೊಬ್ಬರಿಂದ ಅವಧ್ಯನಾಗಿದ್ದಾನೆ. ಆದುದರಿಂದ ಈಗವನನ್ನು ನೀನೇ (ಕೃಷ್ಣಾವತಾರದಲ್ಲಿ) ಸಂಹರಿಸಿ ಅಂಧಃತಮಸ್ಸಿಗೆ ಕಳುಹಿಸಬೇಕಾಗಿದೆ. ಕರ್ಮದೇವತೆಯಾದ ಬಲಿಯ ಮಗನಾದ ಬಾಣನೆಂಬ ದೇವತೆಯಲ್ಲಿ ಅವಿಷ್ಟನಾಗಿದ್ದ ಬಾಣಾಸುರನು ಈಗ ಕೀಚಕನೆಂಬ ಹೆಸರಿನಿಂದ ಜನಿಸಿ ಖ್ಯಾತನಾಗಿದ್ದಾನೆ. ಶಿವನನ್ನು ಮೆಚ್ಚಿಸಿ ಅವಧ್ಯನಾಗಿರುವ ಅವನೂ ತಮಸ್ಸಿಗೆ ಅರ್ಹನಾಗಿದ್ದಾನೆ. ಆದುದರಿಂದ ಹೇ ಮಹಾಪ್ರಭು, ಶ್ರೀಹರಿ! ನೀನು ಭೂಮಿಯಲ್ಲಿ ಅವತರಿಸಿ ದೇವತೆಗಳಿಗೆ ಹಿತವಾಗುವಂತೆ ಮಹಾ ಅದ್ಭುತಕಾರ್ಯಗಳನ್ನು ನೆರವೇರಿಸಿ ನಮ್ಮ ಮನೋಭೀಷ್ಟಗಳನ್ನು ಪೂರ್ಣಮಾಡಬೇಕು. ಸಕಲ ದೇವತೆಗಳಿಗೂ ನಿಯಾಮಕನಾದ ನೀನೇ ಬ್ರಹ್ಮ-ರುದ್ರ-ಇಂದ್ರ-ಚಂದ್ರ ಯಾಮಾದ್ಯರನಿಕರರಿಗೆ ಪ್ರಾಪ್ಯನಾಗಿರುವೆ. ನೀನು ಸರ್ವದಾ ಪರಿಪೂರ್ಣ ಶಕ್ತಿಸಂಪನ್ನನು. ಪೂರ್ಣಜ್ಞಾನಸಾಂದ್ರನು, ದುಃಖಾಸ್ಪೃಷ್ಟವಾದ ಆನಂದಮಯನೂ ನೀನೇ ಆಗಿರುವೆ. ನಿನಗೆ ಸಮಾನರು ಬೇರೆ ಯಾರೂ ಇಲ್ಲ. ಅಂದಮೇಲೆ ನಿನಗಿಂತ ಉತ್ತಮರು ಖಂಡಿತವಾಗಿಯೂ ಇಲ್ಲವೇ ಇಲ್ಲ. ಸ್ವಾಮಿ ನಿನ್ನ ಭಕ್ತರಾದ ನಮ್ಮ ಪ್ರಾರ್ಥನೆಯನ್ನು ನೆರವೇರಿಸಿಕೊಟ್ಟು ಅನುಗ್ರಹಿಸು".

ಹೀಗೆ ಬ್ರಹ್ಮಾದಿ ದೇವತೆಗಳಿಂದ ಸ್ತುತನಾಗಿ, ಉದಾರಜ್ಞಾನಾನಂದಾದಿ ಗುಣಸಾಗರನೂ, ಅಕ್ಷೋಭ್ಯವೂ, ಸರ್ವದಾ ಮೃತಿರಹಿತವೂ ಆದ ಆಕಾರವುಳ್ಳ, ಅನಂತಸೂರ್ಯಚಂದ್ರರ ಕಾಂತಿ-ಪ್ರಕಾರಗಳಿಂದ ಕಂಗೊಳಿಸುವ, ಶ್ರೀ ಶೇಷಶಾಯಿಯು ಮೇಲೆದ್ದು ನಿಖಿಲವೃಂದಾರಕ ಸಂದೋಹಸಂಯುಕ್ತನಾಗಿ ಮೇರುಪರ್ವತಕ್ಕೆ ದಯಮಾಡಿಸಿದನು. ಸರ್ವಶಕ್ತನಾದ ಆ ಪ್ರಭುವು ಬ್ರಹ್ಮದೇವರನ್ನು ನೋಡಿ ನಗೆಮೊಗದಿಂದ "ಕಮಲಾಸನ! ನಾನು ಸ್ವತಂತ್ರನಾದರೂ ಭಕ್ತಾಧೀನನು! ವಿಶೇಷವಾಗಿ

ನಿನ್ನ ಭಕ್ತಿಯಿಂದ ನನ್ನಿಚ್ಛೆಯಿಂದಲೇ ನಿನಗೆ ವಶನಾಗಿದ್ದೇನೆ. ಆದಕಾರಣ ನೀನೇ ಹೇಳು, ನಾನು ಎಲ್ಲಿ ಯಾವ ವಂಶದಲ್ಲಿ ಅವತರಿಸಬೇಕು? ನೀನು ಹೇಳುವ ವಂಶದಲ್ಲಿಯೇ ಅವತರಿಸಿ ನಿಮ್ಮ ಕಾರ್ಯವನ್ನು ನೆರವೇರಿಸುವೆನು'' ಎಂದು ಅಪ್ಪಣೆಕೊಡಿಸಿದನು.

ಪರಾತ್ಪರನ ಪ್ರೀತಿಕರ ನುಡಿಗಳನ್ನಾಲಿಸಿ ಮುದಿಸಿದ ಚತುರಾನನನು ತಮ್ಮ ಉತ್ಪತ್ತಿಗೆ ಕಾರಣನಾದ ದೇವದೇವನಾದ ಶ್ರೀಹರಿಗೆ ನಮಸ್ಕರಿಸಿ ಇಂತು ವಿಜ್ಞಾಪಿಸಿದರು - ''ಸ್ವಾಮಿ, ಪೂರ್ವದಲ್ಲಿ ನಾನು ವಿಶೇಷವಾಗಿ ಪಾಲ್ಗರೆಯುವ ಮಂಗಳಕರ ಗೋವುಗಳನ್ನು ವರುಣನಿಗೆ ಕೊಟ್ಟಿದ್ದೇನೆ. ಕಶ್ಯಪನು ದೇವತೆಗಳ ತಂದೆ ತಾನೆಂಬ ಗರ್ವದಿಂದಲೂ, ಪತ್ನಿಯರಾದ ಅದಿತಿ, ಸುರಭಿಯರ ಪ್ರೇರಣೆಯಿಂದಲೂ ವರುಣನಲ್ಲಿದ್ದ ಗೋವುಗಳನ್ನು ಅಪಹರಿಸಿದನು. ಕಶ್ಯಪನು ಗೋವುಗಳನ್ನು ಕದಿಯುತ್ತಿರುವುದನ್ನು ಕಂಡ ವರುಣನು ಆ ವಿಷಯವನ್ನು ನನಗೆ ತಿಳಿಸಿದನು. ಆದುದರಿಂದ ಅಸಮಾಧಾನಗೊಂಡ ನಾನು ಕಶ್ಯಪನಿಗೆ ''ಗೋವುಗಳನ್ನು ಅಪಹರಿಸಿದ ನೀನು ಕ್ಷತ್ರಿಯರಲ್ಲಿ ಗೋವುಗಳಿಂದಲೇ ಜೀವಿಸು'' ಎಂದು ಶಾಪಕೊಟ್ಟೆನು. ಆ ಕಶ್ಯಪನು ಈಗ ಶೂರನಾಮಕ ಯಾದವರಾಜನಿಗೆ ವಸುದೇವನೆಂಬ ಹೆಸರಿನಿಂದ ಜನಿಸಿದ್ದಾನೆ. ಗೋಧನಕ್ಕೆ ಸ್ವಾಮಿಯಾದುದರಿಂದ ಜನರು ಶೂರರಾಜನ ಮಗನನ್ನು ವಸುದೇವನೆಂದೇ ಕರೆಯುವರು. ಕಶ್ಯಪನ ಪತ್ನಿಯರಾದ ಅದಿತಿ ಮತ್ತು ಸುರಭಿಯರೂ ಸಹ ದೇವಕಿ, ರೋಹಿಣಿಯರೆಂಬ ಹೆಸರಿನಿಂದ ಹುಟ್ಟಿ ವಸುದೇವನ ಸತಿಯರಾಗಿದ್ದಾರೆ. ಸ್ವಾಮಿ, ಈಗ ಮೊದಲು ನೀನು ವಸುದೇವ-ದೇವಕಿಯರಿಗೆ ಮೈದೋರಿ ಅವರ ಮಗನಾಗು. ಅನಂತರ ನೀನು ನಂದಗೋಪನಿಗೆ ಮಗನಾಗಲು ಗೋಕುಲಕ್ಕೆ ದಯಮಾಡಿಸು. ಹೀಗೆ ಮಾಡುವುದು ಅವಶ್ಯವಾಗಿದೆ, ಅದಕ್ಕೆ ಕಾರಣವೂ ಇದೆ. ಹಿಂದೆ ದ್ರೋಣನೆಂಬ ವಸುವು ಸತಿಯಾದ ಧರಾದೇವಿಯಿಂದೊಡಗೂಡಿ ಉದಾರಾಂತಃಕರಣವುಳ್ಳವನಾಗಿ ನಿನ್ನ ತಂದೆಯಾಗಬಯಸಿ ನನ್ನನ್ನು ಕುರಿತು ತಪಸ್ಸು ಮಾಡಿದ್ದನು. ಆಗ ನಾನು ಅವನಿಗೆ ಪರಮಾತ್ಮನು ನಿನಗೆ ಮಗನಾಗುವನು, ಅಂದರೆ, ನೀನು ಭಗವಂತನಿಗೆ ತಂದೆಯಾಗು ಎಂದು ವರವನ್ನು ನೀಡಿದೆನು. ಆ ದ್ರೋಣನೀಗ ನಂದಗೋಪನಾಗಿ ಹುಟ್ಟಿದ್ದಾನೆ. ಅವನ ಪತ್ನಿಯಾದ ಧರಾದೇವಿಯು ಯಶೋದೆಯಾಗಿ ಹುಟ್ಟಿರುವಳು. ಆ ನಂದಗೋಪನು ಶೂರರಾಜನಿಂದ ವಿವಾಹವಿಧಿಪೂರ್ವಕವಾಗಿ ಸ್ವೀಕೃತಳಾದ ವೈಶ್ಯಸ್ತ್ರೀಯಲ್ಲಿ ಹುಟ್ಟಿರುವನು. ಅಂತೆಯೇ ಅವನು ಗೋಪಾಲಕನಾಗಿದ್ದಾನೆ. ದೇವಕೀ-ವಸುದೇವರು ನಿನ್ನನ್ನು ಪುತ್ರನನ್ನಾಗಿ ಪಡೆಯಲು ಅಪೇಕ್ಷಿಸಿ ನಿನ್ನನ್ನು ಕುರಿತು ತಪಸ್ಸು ಮಾಡಿದ್ದಾರೆ. ಅವರೀರ್ವರ ಅಭೀಷ್ಟವನ್ನೂ ಪೂರ್ಣಗೊಳಿಸಲು ನೀನು ಮೊದಲು ದೇವಕಿ-ವಸುದೇವರಿಗೆ ಪುತ್ರನಾಗಿ (ಪ್ರಾದುರ್ಭವಿಸಿ ನಿನ್ನ ಸ್ವರೂಪವನ್ನು ತೋರಿ) ತರುವಾಯ ನಂದಗೋಪನ ಮನೆಗೆ ತೆರಳಿ ಅವನ ಮಗನಾಗು'' ಎಂದು ಪ್ರಾರ್ಥಿಸಿದನು.

ಶ್ರೀ ಹರಿಯು ವಿರಿಂಚನ ಪ್ರಾರ್ಥನೆಯನ್ನು ಮನ್ನಿಸಿ ''ಹಾಗೆಯೇ ಆಗಲಿ'' ಎಂದು ಅಭಯವಿತ್ತು, ''ಪ್ರಿಯ-ದೇವತೆಗಳಿರಾ! ನೀವೆಲ್ಲರೂ ಯಥಾಯೋಗ್ಯವಾಗಿ ಯಥಾನುರೂಪವಾಗಿ ಚತುರ್ವರ್ಣಗಳಲ್ಲಿ ಜನಿಸಿರಿ'' ಎಂದಜು ಆಜ್ಞಾಪಿಸಿದನು. ಸಕಲ ದೇವತೆಗಳೂ ಶ್ರೀಹರಿಯ ಅಪ್ಪಣೆಯಂತೆ ಅವನು ಆಜ್ಞಾಪಿಸಿದ ಕ್ರಮದಲ್ಲಿ ಭೂಮಿಯಲ್ಲಿ ಅವತರಿಸಿದರು.

ಶ್ರೀ ವರಾಹರೂಪಿ ಶ್ರೀಹರಿಯ ಪುತ್ರನಾದರೂ ಅಸುರನೇ ಆಗಿದ್ದ ಭೂಮಾತೆಯ ಮಗನಾದ ನರಕಾಸುರನಿಗೆ, ಶ್ರೀ ಹರಿಯ ಇಚ್ಛೆಯಿಂದಲೇ ಧನೇಶ್ವರನಾದ ಕುಬೇರನು ಮಗನಾಗಿ ಜನಿಸಿದನು. ಹಿಂದೆ ಕುಬೇರನಿಗೆ ರುದ್ರದೇವರು ಸುಪ್ರತೀಕವೆಂಬ ಗಜವನ್ನು ಕೊಟ್ಟಿದ್ದರು. ಅದನ್ನು ನರಕಾಸುರನು ಅಪಹರಿಸಿದ್ದನು. ಆ ಸುಪ್ರತೀಕ ಗಜವನ್ನು ಪಡೆಯಲೆಂದೇ ಕುಬೇರನು ನರಕಾಸುರನಿಗೆ ಭಗದತ್ತನೆಂಬ ಹೆಸರಿನಿಂದ ಮಗನಾಗಿ ಹುಟ್ಟಿರುವನು. ಭಗದತ್ತನು ಬಾಷ್ಕಲನೆಂಬ ಅಸುರಾವೇಶಯುಕ್ತನೂ, ಹಾಗೂ ರುದ್ರದೇವರ ಆವೇಶಸಹಿತನೂ ಆಗಿದ್ದರಿಂದ ಮಹಾಬಲಿಷ್ಠನಾಗಿ, ಇಂದ್ರದೇವರ

ಶಿಷ್ಯನಾದ್ದರಿಂದ ಅಸ್ತ್ರಜ್ಞನಾಗಿದ್ದಾನೆ. ನರಕಾಸುರನು ಹತನಾದ ಮೇಲೆ ಅವನ ಅಸುರಾವೇಶವೂ ಹೋಗಿ ಅವನು ದೇವತಾಯೋಗ್ಯ ಕರ್ಮಗಳಲ್ಲಿ ಆಸಕ್ತನಾದನು. ಶನಿ ಎಂಬ ಯಾದವಶ್ರೇಷ್ಠನಿಗೆ ಸತ್ಯಕನೆಂಬ ಮಗನಿದ್ದನು. ಆ ಸತ್ಯಕನಿಗೆ ಕೃಷ್ಣಪಕ್ಷದ ಅಭಿಮಾನಿದೇವತೆಯು ಗರುಡನ ಅಂಶದಿಂದ ಯುಕ್ತನಾಗಿ ಯುಯುಧಾನ ಎಂಬ ನಾಮದಿಂದ ಮಗನಾದನು. ಯುಯುಧಾನನು ಸಂವಹವಾಯುವಿನ ಸುದರ್ಶನಾಭಿಮಾನಿ ಕಾಮನ ಅಂಶ, ಹಾಗೂ ವಿಷ್ಣುವಿನ ಅಂಶದಿಂದ ಕೂಡಿದ್ದನು. ಯಾದವರಲ್ಲಿ ಭೋಜವಂಶದಲ್ಲಿ ಹೃದಿಕನೆಂಬುವವನು ಖ್ಯಾತನಾಗಿದ್ದನು. ಆ ಹೃದಿಕನಲ್ಲಿ ಶುಕ್ಲಪಕ್ಷಕ್ಕೆ ಅಭಿಮಾನಿಯಾದ ದೇವತೆಯು, ಶ್ರೀಹರಿಯ ಪಾಂಚಜನ್ಯವೆಂಬ ಶಂಖಾಭಿಮಾನಿಯಾದ ಅನಿರುದ್ಧಾಂಶ ಮತ್ತು ಪ್ರವಹನೆಂಬ ವಾಯುವಿನ ಅಂಶಗಳಿಂದ ಕೂಡಿ ಕೃತವರ್ಮ ಎಂಬ ಅಭಿಧಾನದಿಂದ ಪುತ್ರರಾಗಿ ಜನಿಸಿದನು. ಅನೇಕ ದೇವತೆಗಳು ಯಾದವರಾಗಿ, ಗೋಪರಾಗಿ ಜನಿಸಿದರು. ಪಾಂಡವರಿಗೆ ಸಹಾಯಕರಾಗಿದ್ದವರೆಲ್ಲರೂ ದೇವತೆಗಳು. ದೇವತೆಗಳಿಗೆ ಅನುಕೂಲರಾಗಿದ್ದವರು ಗಂಧರ್ವರು. ಪಾಂಡವರಿಗೆ ಪ್ರತಿಕೂಲವಾಗಿದ್ದವರೆಲ್ಲರೂ ಸಂಶಯಜ್ಞಾನವುಳ್ಳ ಅಸುರರು. ಈ ಎರಡು ಬಣಗಳ ಬಗೆಗೆ ಉದಾಸೀನರಾಗಿದ್ದ ಮಧ್ಯಮರು ಮನುಷ್ಯರು.

ಶ್ರೀಹರಿಯಲ್ಲಿ ಉತ್ತಮಭಕ್ತಿಯೇ ದೇವತೆಗಳ ಲಕ್ಷಣ. ಹರಿಭಕ್ತಿಯಿಲ್ಲದಿರುವುದು, ಹರಿಯಲ್ಲಿ ದ್ವೇಷ ಇವು ಅಸುರರ ಲಕ್ಷಣ. ಶ್ರೀಹರಿಯಲ್ಲಿ ಉತ್ಕೃಷ್ಟ ಭಕ್ತಿಯೇ ದೇವ-ಗಂಧರ್ವರ ಲಕ್ಷಣ. ಶ್ರೀವಿಷ್ಣು ಮತ್ತು ಹರಿಭಕ್ತರಾದ ದೇವತೆಗಳಲ್ಲಿ ದ್ವೇಷ-ವಿರೋಧವಿರುವುದೇ ಅಸುರರ ಲಕ್ಷಣವು. ಆದುದರಿಂದ ಕುರುಪಾಂಡವರ ಸೈನ್ಯಗಳಲ್ಲಿ ಯಾರು ಯಾರು ಶ್ರೀಹರಿಭಕ್ತಿ ತತ್ಪರರಾಗಿದ್ದರೋ, ಅಂದರೆ ಧರ್ಮರಾಜ, ಭೀಮಸೇನ, ಅರ್ಜುನ, ದ್ರೋಣ, ಕರ್ಣ, ಭೀಷ್ಮ ಮುಂತಾದವರು ಸಾಕ್ಷಾತ್ ದೇವತೆಗಳು. ಹರಿಭಕ್ತಿಯಲ್ಲಿ ಅಭಿಪ್ರಾಯವುಳ್ಳ ಧೃತರಾಷ್ಟ್ರ, ದ್ರುಪದ, ವಿರಾಟ ಮುಂತಾದವರೆಲ್ಲರೂ (ವಿಶೇಷವಾಗಿ ಆಯಾ ದೇವತೆಗಳಿಂದ ಆವಿಷ್ಟರಾದವರು ಗಂಧರ್ವರು) ಶ್ರೀ ವಿಷ್ಣು ವೈಷ್ಣವ ವಿರೋಧವು ಅಸುರಲಕ್ಷಣವಾದುದರಿಂದ ಶ್ರೀಹರಿಭಕ್ತಿಯಲ್ಲಿ ಆಸಕ್ತರಲ್ಲದ ಮತ್ತು ಶ್ರೀಹರಿಗೆ, ಹರಿಭಕ್ತರಿಗೆ ವಿರುದ್ಧರಾದ ದುರ್ಯೋಧನಾದಿಗಳೆಲ್ಲರೂ ಅಸುರರಂದೇ ತಿಳಿಯಬೇಕು.

ಇಂತು ಶ್ರೀಮಧ್ವಾಚಾರ್ಯರು ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ವಿಸ್ತಾರವಾಗಿ ನಿರೂಪಿಸಿದ "ಭಗವದವತಾರ ಪ್ರತಿಜ್ಞೆ" ಎಂಬ ಹನ್ನೊಂದನೆಯ ಅಧ್ಯಾಯದ ಕಥಾಭಾಗವನ್ನು ಶ್ರೀ ಗುರುಸಾರ್ವಭೌಮರವರು ತಮ್ಮ ತಾತ್ಪರ್ಯನಿರ್ಣಯ ಭಾವಸಂಗ್ರಹವೆಂಬ ಗ್ರಂಥದಲ್ಲಿ ಸಂಗ್ರಹಿಸಿ ನಿರೂಪಿಸಿ ಅನುಗ್ರಹಿಸಿದ್ದಾರೆ.

***ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದ ಹನ್ನೊಂದನೆಯ ಅಧ್ಯಾಯದ ಕಥಾಸಂಗ್ರಹವು ಮುಗಿದುದು.***



# ದ್ವಾದಶಾಧ್ಯಾಯಭಾವಸಂಗ್ರಹ

ಅವತಾರಿಕೆ:-

**ದೇವಕ್ಯಾಂ ವಸುದೇವತೋಽಗ್ರಜಯುತೋ ಜಾತೋ ವ್ರಜಂ ಯೋಗತಃ**
**ಬಾಲಘ್ನೀ ಶಕಟಾಕ್ಷಹಾ ಸ್ವಜನನೀಮಾನ್ಯಸ್ತೃಣಾವರ್ತಹಾ ।**
**ಯತ್ಪೂರ್ವಂ ಭರತಶ್ಚ ಪಾಂಡುತನಯಾ ಯತ್ಸೇವನಂ ಜಜ್ಞಿರೇ**
**ಕರ್ತುಂ ಧರ್ಮಮರುದ್ವಷಾಶ್ವಿನರಜಂ ನಂದಾತ್ಮಜಂ ನೌಮಿ ತಮ್ ॥ 12 ॥**

**ಅನ್ವಯಾರ್ಥ :-** **ಯಃ** = ಯಾವನು, **ದೇವಕ್ಯಾಂ** - ದೇವಕೀದೇವಿಯಲ್ಲಿ, **ವಸುದೇವತಃ** - ಶೂರಪುತ್ರನಾದ ವಸುದೇವನ ದೆಸೆಯಿಂದ, **ಅಗ್ರಜಯುತಃ ಸನ್** = ಬಲರಾಮನಿಂದೊಡಗೂಡಿ, **ಜಾತಃ** = ಅವತರಿಸಿದನೋ, **ಯಃ** = ಯಾವನು, **ವ್ರಜಂ** = ಗೋಕುಲವನ್ನು, **ಪ್ರಾಪ್ತಃ** = ಹೊಂದಿದನೋ, **ಬಾಲಘ್ನೀಶಕಟಾಕ್ಷಹಾ** - **ಬಾಲಘ್ನೀ** = ಪೂತನಾ, **ಶಕಟಾಕ್ಷಃ** = ಶಕಟಾಸುರನಾಮಕ ದೈತ್ಯನು, ಇವರಿಬ್ಬರ ಹಾ = ಸಂಹಾರಕನಾದ, **ಸ್ವಜನೀಮಾನ್ಯಃ** - **ಸ್ವ** = ತನ್ನ, ಜನನೀ = ತಾಯಿಯಾದ ಯಶೋದಾದೇವಿಯಿಂದ, **ಮಾನ್ಯಃ** = ಮಾನ್ಯನಾದ, **ತೃಣಾವರ್ತಹಾ** - ತೃಣಾವರ್ತನೆಂಬ ಅಸುರಸಂಹಾರಕನಾದ, **ಯತ್ಪೂರ್ವಂ** = ಯಾವ ಶ್ರೀಕೃಷ್ಣನ ಅವತಾರಕ್ಕೆ ಮೊದಲು, **ಭರತಶ್ಚ** = (ಭಗವದ್ಧರಣೇ ರತಃ = ಶೇಷಃ) ಭಗವಂತನ ಶಯ್ಯಾ-ರೂಪನಾದ ಶೇಷದೇವನು ಅರ್ಥಾತ್ ಬಲರಾಮನು, **ಪಾಂಡುತನಯಾಃ** = ಪಾಂಡುರಾಜನ ಪುತ್ರರಾದ, **ಧರ್ಮ-ಮರುದ್ವಷಾಶ್ವಿನರಜಂ** - **ಧರ್ಮೋ** = ಯಮಧರ್ಮನು, **ಮರುತ್** = ವಾಯುದೇವನು, **ವೃಷಃ** = ಇಂದ್ರದೇವರು, **ಅಶ್ವಿನೌ** = ಅಶ್ವಿನೀದೇವತೆಗಳು, **ನರಃ** = ಶೇಷ, ಇವರ ಅವತಾರರಾದವರು, ತಮ್ಮ ತಮ್ಮ ಯೋಗ್ಯ ರೀತಿಯಲ್ಲಿ, **ಯತ್ಸೇವನಂ** = ಯಾವ ಕೃಷ್ಣನ ಸೇವೆಯನ್ನು, **ಕರ್ತುಂ** = ಮಾಡಲೋಸುಗ, **ಜಜ್ಞಿರೇ** = ಅವತರಿಸಿದರೋ, **ತಂ** = ಅಂಥ ಸಾಕ್ಷಾತ್ ನಾರಾಯಣಾವತಾರಿಯಾದ, **ನಂದಾತ್ಮಜಂ** = ನಂದಕುಮಾರನಾದ ಭಗವಾನ್ ಶ್ರೀಕೃಷ್ಣನನ್ನು, **ನೌಮಿ** = ನಮಸ್ಕರಿಸುತ್ತೇನೆ.

**ತಾತ್ಪರ್ಯ :-** ಜಗಜ್ಜನ್ಮಾದಿಕಾರಣನಾದ ಸಾಕ್ಷಾತ್ ಶ್ರೀಮನ್ನಾರಾಯಣನು ದೇವಕೀದೇವಿಯಲ್ಲಿ ವಸುದೇವನಿಂದ ಅಗ್ರಜನಾದ ಬಲರಾಮನಿಂದೊಡಗೂಡಿ ಕೃಷ್ಣ ಎಂಬ ಹೆಸರಿನಿಂದ ಅವತರಿಸಿದನು. ಶ್ರೀಕೃಷ್ಣನು ಗೋಕುಲಕ್ಕೆ ಪ್ರಯಾಣ ಬೆಳೆಸಿದನು. ಅಲ್ಲಿ ಬಾಲಕರನ್ನು ಸಂಹರಿಸುವ ಮತ್ತು ತನ್ನನ್ನು ಕೊಲ್ಲಲು ಬಂದ ಪೂತನಾ ಎಂಬ ರಾಕ್ಷಸಿಯನ್ನೂ, ಶಕಟಾಸುರನೆಂಬ ರಾಕ್ಷಸನನ್ನು ಶ್ರೀಕೃಷ್ಣನು ಸಂಹರಿಸಿದನು. ಅವನು ತಾಯಿಯಾದ ಯಶೋದಾದೇವಿಯಿಂದ ಮಾನ್ಯ-ನಾದನು, ಮತ್ತು ಸುಂಟರಗಾಳಿರೂಪದಿಂದ ತನ್ನನ್ನು ಕೊಲ್ಲಲು ಬಂದಿದ್ದ ತೃಣಾವರ್ತನೆಂಬ ಅಸುರನನ್ನು ಸಂಹರಿಸಿದನು. ಶ್ರೀಕೃಷ್ಣನು ಅವತರಿಸುವುದಕ್ಕೆ ಮುಂಚಿತವಾಗಿ ಶ್ರೀಹರಿಗೆ ಶಯ್ಯಾರೂಪನಾದ ಶೇಷದೇವರು (ಬಲರಾಮನಾಗಿಯೂ) ಪಾಂಡುರಾಜನ ಮಕ್ಕಳಾದ ಯಮಧರ್ಮ, ವಾಯುದೇವ, ಇಂದ್ರ, ಅಶ್ವಿನೀ ದೇವತೆಗಳು (ಧರ್ಮರಾಜ-ಭೀಮ-ಅರ್ಜುನ-ನಕುಲ-ಸಹದೇವರಾಗಿ) ಶ್ರೀಕೃಷ್ಣನ ಸೇವೆ ಮಾಡಲೆಂದು ಅವತರಿಸಿದರು. ಅಂಥ ಭಗವಂತನಾದ, ನಂದ-ಗೋಪಕುಮಾರನಾದ ಶ್ರೀಕೃಷ್ಣನಿಗೆ ನಮಸ್ಕರಿಸುತ್ತೇನೆ ಎಂದು ಭಾವ.

# ದ್ವಾದಶೋಽಧ್ಯಾಯ ಕಥಾಸಂಗ್ರಹ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಈವರೆಗೆ ಶ್ರೀಕೃಷ್ಣನ ಪಿತೃವಂಶವನ್ನು ಸಂಕ್ಷೇಪವಾಗಿ ನಿರೂಪಿಸಿ ಈಗ ತಾಯಿಯ ವಂಶವನ್ನು ಹೇಳುತ್ತಾರೆ -

ಪೂರ್ವದಲ್ಲಿ ದೇವಕನೆಂಬ ಗಂಧರ್ವಋಷಿಯೊಬ್ಬನಿದ್ದನು. ಅವನು ಶ್ರೀಹರಿಯ ಸೇವೆ ಮಾಡಲು ಉಗ್ರಸೇನ ಮಹಾರಾಜನ ತಂದೆಯಾದ ಆಹುಕನೆಂಬ ಯಾದವರಾಜನಿಂದ ಉಗ್ರಸೇನನಿಗೆ ತಮ್ಮನಾಗಿ ದೇವಕ ಎಂಬ ಹಿಂದಿನ ಹೆಸರಿನಿಂದಲೇ ಜನಿಸಿದನು. ಆ ದೇವಕನ ಮಗಳೇ ದೇವಕಿಯು.

ಕಶ್ಯಪರಿಗೆ ಹದಿಮೂರು ಜನ ಹೆಂಡರಿದ್ದರು. ಅದಿತಿ, ಸುರಭಿ, ದಿತಿ, ಧನು, ಮುಂತಾದವರೇ ಆ ಪತ್ನಿಯರು. ಅವರಲ್ಲಿ ಹತ್ತು ಜನ ಪತ್ನಿಯರೂ ಈಗ ಮತ್ತೆ ಅವತರಿಸಿದ್ದರು. ಅವರೆಲ್ಲರೂ ಶೂರಸೇನನ ಮಗನಾದ ವಸುದೇವನ (ಹಿಂದೆ ತಮ್ಮ ಪತಿಯಾಗಿದ್ದ ಕಶ್ಯಪನೇ ಈಗ ವಸುದೇವನಾಗಿ ಅವತರಿಸಿದ್ದರಿಂದ) ಪತ್ನಿಯರಾದರು.

ದೇವಕನಿಗೆ ಕಶ್ಯಪಪತ್ನಿಯಾಗಿದ್ದ ಅದಿತಿಯು ಜ್ಯೇಷ್ಠಪುತ್ರಿಯಾಗಿ ಜನಿಸಿದಳು. ಅವಳೇ ದೇವಕಿಯು. ದೇವಕನ ತಂದೆಯಾದ ಆಹುಕನು ತನ್ನ ಪೌತ್ರಿಯಾದ ದೇವಕಿಯನ್ನು ಪುತ್ರಿಯನ್ನಾಗಿ ಸ್ವೀಕರಿಸಿ ಮಗಳಂತೆ ಪಾಲಿಸಿದನು. ಅಂತೆಯೇ ದೇವಕಿಯು ಕಂಸನಿಗೆ ಸೋದರತ್ತೆಯೂ (ಪೌತ್ರಿಯಾದ ದೇವಕಿಯನ್ನು ಆಹುಕನು ಪುತ್ರಿಯಾಗಿ ಸ್ವೀಕರಿಸಿದ್ದರಿಂದ ಅವಳು ಉಗ್ರಸೇನನಿಗೆ ತಂಗಿಯಾಗಿದ್ದಳಾದ್ದರಿಂದ ಕಂಸನಿಗೆ ಸೋದರತ್ತೆಯಾದಳು) ಚಿಕ್ಕಪ್ಪನಾದ ದೇವಕನ ಮಗಳಾದುದರಿಂದ ತಂಗಿಯೂ ಆದಳು. ಈ ದೇವಕಿಯನ್ನು ಶೂರರಾಜನ ಮಗನಾದ ವಸುದೇವನಿಗೆ ವೈದಿಕವಿಧಿಪೂರ್ವಕವಾಗಿ ಕೊಟ್ಟು ಲಗ್ನವಾಯಿತು. ಕಂಸನೇ ಸಹೋದರಿಯಾದ ದೇವಕಿಯ 'ಗೃಹಪ್ರವೇಶ' ಸಮಾರಂಭದ ಮಂಗಳೋತ್ಸವ ರಥವನ್ನು ನಡೆಸುತ್ತಿದ್ದಾಗ ಅಶರೀರವಾಣಿಯು ಕಂಸನನ್ನು ಹೀಗೆ ಎಚ್ಚರಿಸಿತು. "ಎಲವೋ ಮೂಢ! ಕಂಸ! ಈ ದೇವಕಿಯ ಅಷ್ಟಮಪುತ್ರನು ನಿನ್ನನ್ನು ಸಂಹರಿಸುವನು".

ಹೀಗೆ ಆಕಾಶವಾಣಿಯಾಗಲು ಕಾರಣವನ್ನು ನಿರ್ಣಯಾಚಾರ್ಯರು ಹೀಗೆ ಅಪ್ಪಣೆ ಕೊಡುತ್ತಾರೆ – "ಶ್ರೀಹರಿಯು ಲೋಕಧರ್ಮವನ್ನನುಸರಿಸಿ ಶ್ರೀಕೃಷ್ಣನಾಗಿ ಅವತರಿಸಿದ್ದಾನೆ. ಕಂಸನು ಕೃಷ್ಣನಿಗೆ ಸೋದರಮಾವನಾಗಬೇಕು. ಲೋಕಧರ್ಮದ ಪ್ರಕಾರ ಸೋದರಮಾವನು ವಧಾರ್ಹನಲ್ಲ. ಕಂಸನು ಅಸುರನು. ಅವನ ಸಂಹಾರವಾಗಬೇಕಾಗಿದೆ. ಶ್ರೀಕೃಷ್ಣನು ಕಂಸನನ್ನು ಸಂಹರಿಸಬೇಕಾದರೆ ಅವನು ಉತ್ತಮರಿಗೆ ಅಪರಾಧಮಾಡಬೇಕು. ಆಗ ಅವನನ್ನು (ಉತ್ತಮರ ದ್ರೋಹಕಾರಿಯಾದ ಕಂಸನನ್ನು) ಕೃಷ್ಣನು ಸಂಹರಿಸಬಹುದು. ಶ್ರೀಕೃಷ್ಣನ ಮಾತಾಪಿತೃಗಳಾದ ವಸುದೇವ-ದೇವಕಿಯರು ಉತ್ತಮರು. ಅವರ ವಿರೋಧಿಯಾಗಿ ಕಂಸನು ಅವರಿಗೆ ಅಪರಾಧ ಮಾಡುವಂತಾಗಬೇಕು. ಅಂತೆಯೇ ಶ್ರೀ ವಾಯುದೇವರು ಕಂಸನಿಗೆ ವಸುದೇವ-ದೇವಕಿಯರಲ್ಲಿ ವಿರೋಧಹುಟ್ಟಿಸಲು ಆಕಾಶವಾಣಿಯಿಂದ "ದೇವಕಿಯ ಎಂಟನೆಯ ಪುತ್ರನಿಂದ ಮರಣವಾಗುವುದು" ಎಂದು ಎಚ್ಚರಿಸಿ ವಿರೋಧೋತ್ಪತ್ತಿಯಾಗುವಂತೆ ಮಾಡಿದರು.

ಹರ್ಷನಿರ್ಭರನಾಗಿ ರಥವನ್ನು ನಡೆಸುತ್ತಿದ್ದ ಕಂಸನು "ಆಕಾಶವಾಣಿ"ಯನ್ನು ಕೇಳಿದ ಕೂಡಲೇ ಕಡುಕೋಪದಿಂದ ರಥದಿಂದ ಧುಮುಕಿ ದೇವಕಿಯನ್ನು ಸಂಹರಿಸಲುದ್ಯುಕ್ತನಾದನು. "ಈ ದೇವಕಿಯು ಬದುಕಿದ್ದರೆ ತಾನೇ ಇವಳು ಗರ್ಭಿಣಿಯಾಗಿ ಪುತ್ರರನ್ನು ಪಡೆಯುವಳು? ಆ ಪುತ್ರರಲ್ಲಿ ಎಂಟನೆಯವನಲ್ಲವೇ ನನ್ನನ್ನು ಕೊಲ್ಲುವವನು. ಈಗ ನಾನು ದೇವಕಿಯನ್ನೇ ಸಂಹರಿಸಿಬಿಟ್ಟರೆ ನನ್ನನ್ನು ಕೊಲ್ಲುವವರಾರು? ಇದೇ ಸರಿಯಾದ ಮಾರ್ಗ" ಎಂದು ಯೋಚಿಸಿ ಕಂಸನು ಖಡ್ಗವನ್ನು ಹಿರಿದು ದೇವಕಿಯನ್ನು ರಥದಿಂದ ಕೆಳಗೆಳೆದು ಅವಳನ್ನು ಸಂಹರಿಸಲು ಉದ್ಯುಕ್ತನಾದನು. ಮಂಗಳಕರ ಸನ್ನಿವೇಶವು ಇದ್ದಕ್ಕಿದ್ದಂತೆ ದುಃಖಾಂತವಾಗಲಿರುವುದನ್ನು ಕಂಡು ನೊಂದ ವಸುದೇವನು ಕಂಸನತ್ತ ಧಾವಿಸಿ "ಕಂಸ! ಬೇಡ ಬೇಡ, ದೇವಕಿಯನ್ನು ಕೊಲ್ಲಬೇಡ. ನಿನಗೆ ಇವಳ ಅಷ್ಟಮಪುತ್ರನಿಂದ ಮರಣವಾಗುವುದೆಂದು ನೀನು ಭಾವಿಸುವುದಾದರೆ ದೇವಕಿಗೆ ಜನಿಸುವ ಎಲ್ಲ ಮಕ್ಕಳನ್ನೂ ಹುಟ್ಟಿದಕೂಡಲೇ ನಿನಗೆ ಅರ್ಪಿಸಿಬಿಡುತ್ತೇನೆ, ಇದು ಸತ್ಯ" ಮುಂತಾಗಿ ಸಮಾಧಾನ

ವಚನಗಳಿಂದಲೂ, ಪ್ರತಿಜ್ಞಾವಚನದಿಂದಲೂ ಕಂಸನನ್ನು ಸಮಾಧಾನಗೊಳಿಸಿ ಪತ್ನಿಯಾದ ದೇವಕಿಯನ್ನು ಸಂರಕ್ಷಿಸಿ ಅವಳೊಡನೆ ತನ್ನ ಮನೆಗೆ ತೆರಳಿದನು.

ದೇವಕಿಯನ್ನು ವಿವಾಹವಾದ ಮೇಲೆ ದೇವಕನಿಗೆ ಆರು ಜನ (ಹಿಂದೆ ಕಶ್ಯಪನ ಪತ್ನಿಯರಾಗಿದ್ದವರೇ ಈಗ ದೇವಕಿಯ ನಂತರ ದೇವಕನಿಗೆ ಪುತ್ರಿಯರಾಗಿ ಜನಿಸಿದರು) ಪುತ್ರಿಯರು ಜನಿಸಿದರು. ಈ ಆರೂ ಜನರನ್ನು ವಸುದೇವನು ಪತ್ನಿಯರನ್ನಾಗಿ ಸ್ವೀಕರಿಸಿ ವಿವಾಹವಾದನು. ಇದಕ್ಕೆ ಮೊದಲು ಹಿಂದೆ ಕಶ್ಯಪನ ಪತ್ನಿಯಾಗಿದ್ದ ಸುರಭಿಯು ಬಾಹ್ಲೀಕ-ರಾಜನಿಗೆ ರೋಹಿಣೀ ಎಂಬ ಹೆಸರಿನಿಂದ ಮಗಳಾಗಿ ಜನಿಸಿದಳು. ವಸುದೇವನು ದೇವಕಿಯನ್ನು ವಿವಾಹವಾದ ಮೇಲೆ, ಅವಳ ಆರು ಜನ ತಂಗಿಯರನ್ನು ಮದುವೆಯಾಗುವ ಮೊದಲು ಬಾಹ್ಲಿಕರಾಜನ ಪುತ್ರಿಯಾದ ರೋಹಿಣಿಯನ್ನು ವಿವಾಹವಾದನು.

ಇದಕ್ಕೆ ಮೊದಲು ಅಂದರೆ ದೇವಕಿಯನ್ನು ಮದುವೆಯಾಗುವುದಕ್ಕೂ ಮೊದಲು ಕಾಶಿರಾಜನ ಮಗಳನ್ನು ಲಗ್ನವಾಗಿದ್ದನು. ಹಿಂದೆ ಕಶ್ಯಪನ ಪತ್ನಿಯಾಗಿದ್ದ ದಿತಿಯೇ ಈಗ ಕಾಶಿರಾಜನ ಮಗಳಾಗಿ ಹುಟ್ಟಿದ್ದಳು. ಕಾಶೀರಾಜನು ಅವಳನ್ನು "ಪುತ್ರಿಕಾಪುತ್ರ" ಧರ್ಮದಿಂದ ಅಂದರೆ 'ಈ ನನ್ನ ಪುತ್ರಿಯಲ್ಲಿ ಜನಿಸುವ ಪುತ್ರನು ನನಗೆ ಪುತ್ರನಾಗಬೇಕು' ಎಂದು 'ಕನ್ಯಾದಾನ' ಸಂಕಲ್ಪಪೂರ್ವಕವಾಗಿ ಕೊಟ್ಟು ವಿವಾಹಮಾಡಿದನು. ಅದೇ ರೀತಿ 'ಪುತ್ರಿಕಾಪುತ್ರ' ಧರ್ಮದಿಂದಲೇ ಕರವೀರಪುರಾಧೀಶರೂ ಸಹ ತನ್ನ ಮಗಳನ್ನು (ಇವಳು ಹಿಂದೆ ಕಶ್ಯಪಪತ್ನಿಯಾದ ದನು ಎಂಬುವವಳು. ಈಗ ಕರವೀರಪುರಾಧಿಪತಿಗೆ ಮಗಳಾಗಿ ಜನಿಸಿದ್ದಳು) ವಸುದೇವನಿಗೆ ಕೊಟ್ಟು ಲಗ್ನ ಮಾಡಿದ್ದನು. ಕಾಶೀರಾಜನ ಪುತ್ರಿಯಲ್ಲಿ ವಸುದೇವನಿಗೆ ಪೌಂಡ್ರಕವಾಸುದೇವನೆಂಬ ಹೆಸರಿನಿಂದ ಪಾಪಾತ್ಮನಾದ ವೇನನೆಂಬ ಅಸುರನು ಮಗನಾಗಿ ಹುಟ್ಟಿದನು. ಆ ವೇನನು ತಾನೇ ವಿಷ್ಣುವೆಂದು ತಿಳಿದಿದ್ದನು. ಸತ್ಕುಲದಲ್ಲಿ ಜನಿಸಿದ್ದರೂ ಪಾಪಾತ್ಮನಾದ ವೇನನು 'ನನ್ನ ಹೊರತಾಗಿ ಬೇರೊಬ್ಬ ವಿಷ್ಣುವಿಲ್ಲ! ನಾನೇ ಸಾಕ್ಷಾತ್ ವಿಷ್ಣುವು' ಎಂದು ಹೇಳಿಕೊಳ್ಳುತ್ತಿದನು.

ಹಿಂದೆ ಕುವಲಯಾಶ್ವನಲ್ಲಿ ಸನ್ನಿಹಿತನಾಗಿದ್ದ, ಶ್ರೀಹರಿಯಿಂದ ಸಂಹೃತನಾಗಿದ್ದ ಮಧುದೈತ್ಯನ ಪುತ್ರನಾದ ದುಂಧುನಾಮಕ ಅಸುರನು ಕರವೀರಪುರಾಧೀಶನ ಮಗಳಲ್ಲಿ ವಸುದೇವನಿಗೆ ಮಗನಾಗಿ ಜನಿಸಿದನು. ಅವನಿಗೆ ಸೃಗಾಲವಾಸುದೇವನೆಂದು ಹೆಸರು. ಈ ಪೌಂಡ್ರಕವಾಸುದೇವ ಮತ್ತು ಸೃಗಾಲವಾಸುದೇವರು ಹುಟ್ಟಿದ ತರುವಾಯ ಶೂರಸುತನಾದ ವಸುದೇವನು ದೇವಕಿಯನ್ನೂ, ರೋಹಿಣಿಯನ್ನೂ ಮತ್ತು ದೇವಕಿಯ ತಂಗಿಯಾದ ಆರುಜನ ಕನ್ಯೆಯರನ್ನೂ ವಿವಾಹವಾಗಿ ಅವರಲ್ಲಿ ರಮಿಸುತ್ತಾ, ಕಾಶೀರಾಜನ ಪುತ್ರಿ ಮತ್ತು ಕರವೀರಪುರೇಶನ ಪುತ್ರಿಯರನ್ನು ಪರಿತ್ಯಾಗ ಮಾಡಿದನು. ತಮ್ಮ ತಮ್ಮ ತಾಯಂದಿರನ್ನು ವಸುದೇವನು ತ್ಯಾಗಮಾಡಿದನೆಂಬ ದ್ವೇಷದಿಂದ ಪೌಂಡ್ರಕವಾಸುದೇವ ಮತ್ತು ಸೃಗಾಲವಾಸುದೇವರು ಯಾದವರಿಗೆ ನಿತ್ಯಶತ್ರುಗಳಾದರು. ಸರ್ವಜ್ಞನಾದ ವಸುದೇವನು ಇತರ ಪತ್ನಿಯರಲ್ಲಿ ಉದಾರರೂ, ಉತ್ತಮರೂ ಆದ ದೇವತಾವತಾರಿಗಳಾದ ಪುತ್ರರನ್ನೂ ಪಡೆದನು.

ಧರೆಯಲ್ಲಿ ಅವತರಿಸಿದ ದೇವತೆಗಳೆಲ್ಲರೂ ಸತ್ಯವತೀಸುತನಾದ ಶ್ರೀವ್ಯಾಸಾವತಾರನಾದ ಶ್ರೀಹರಿಯ ಶಿಷ್ಯರಾದರು. ಅಂದರೆ ಅವರು ಸ್ವಸ್ವರೂಪ ಯೋಗ್ಯತೆಗೆ ಮೀರದಂತೆ ಅನುಸರಿಸಿ ಶ್ರೀ ವೇದವ್ಯಾಸರಿಂದ ಜ್ಞಾನವನ್ನು ಪಡೆದು ಸ್ವಯೋಗ್ಯತಾನುಸಾರವಾಗಿ ಸರ್ವಜ್ಞರಾದರು. ಆದುದರಿಂದ ಅವರೆಲ್ಲರೂ ಸತ್ಯವತೀಹೃದಯನಂದನರಾದ ಶ್ರೀವೇದವ್ಯಾಸರ ಶಿಷ್ಯರಾದರು.

ಪೂರ್ವದಲ್ಲಿ ಮರೀಚಿಋಷಿಗಳಿಗೆ ಆರುಜನ ಮುನಿಗಳಾದ ಮಕ್ಕಳಿದ್ದರು. ಅವರೊಮ್ಮೆ ತಪೋವ್ರತಾದಿ ನಿಯಮಗಳಿಂದ ಬಹಳ ಕೃಶಾಂಗನಾಗಿದ್ದ ದೇವಲ (ದೇವಕ) ಋಷಿಯನ್ನು ಕಂಡು ಅಪಹಾಸ್ಯಮಾಡಿದರು. ಆದರಿಂದ ಕುಪಿತರಾದ

ದೇವಲ(ಕ) ಋಷಿಗಳು "ನೀವು ಆರೂ ಜನರೂ ಅಸುರರಾಗಿ ಜನಿಸಿರಿ" ಎಂದು ಶಾಪ ನೀಡಿದರು. ಆ ಶಾಪದಂತೆ ಮರೀಚಿಪುತ್ರರಾದ ಆ ಆರುಜನರು ಮಹಾ ಅಸುರನಾದ ಕಾಲನೇಮಿಗೆ ಮಕ್ಕಳಾಗಿ ಹುಟ್ಟಿದರು. ಆಗ ಅವರು ಬ್ರಹ್ಮ-ದೇವರನ್ನು ಕುರಿತು ತಪಸ್ಸು ಮಾಡಿ ಅವರನ್ನು ಮೆಚ್ಚಿಸಿ ಬ್ರಹ್ಮದೇವರಿಂದ ಅವಧ್ಯತ್ವ ವರವನ್ನು ಪಡೆದರು. ಈ ವಿಚಾರವನ್ನು ತಿಳಿದು ಹಿರಣ್ಯಕಶ್ಯಪನು ಕಾಲನೇಮಿಯ ಪುತ್ರರು ತನ್ನನ್ನು ಕುರಿತು ತಪಸ್ಸು ಮಾಡದೇ ಬೇರೊಬ್ಬ ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ಅವನಿಂದ ಅವಧ್ಯತ್ವ ವರವನ್ನು ಪಡೆದರೆಂಬ ಕೋಪದಿಂದ ಆ ಆರೂಜನರಿಗೆ "ನೀವು ಭೂತಳದಲ್ಲಿ ಜನ್ಮತಾಳಿ ನಿಮ್ಮ ತಂದೆಯಾದ ಕಾಲನೇಮಿಯಿಂದಲೇ ಹತರಾಗಿರಿ" ಎಂದು ಶಾಪಪ್ರದಾನ ಮಾಡಿದ್ದನು.

ಈಗ ಭಗವಾನ್ ಶ್ರೀಹರಿಯ ಪ್ರಚೋದನೆ-ಪ್ರೇರಣೆಗಳಿಂದ ವಿಷ್ಣುಮಾಯೆಯಾದ ದುರ್ಗಾದೇವಿಯು ಆ ಬ್ರಹ್ಮ-ಹಿರಣ್ಯಕಶ್ಯಪರ ವರ-ಶಾಪಗಳೆರಡನ್ನೂ ಸರಿಹೊಂದಿಸಲು (ಸಾರ್ಥಕಗೊಳಿಸಲು) ಹಿರಣ್ಯಕಶಿಪುವು ಶಾಪಪ್ರದಾನ ಮಾಡುವಾಗ ಅಸುರದೇಹದಲ್ಲಿರುವ ಕಾಲನೇಮಿಯ ಆರುಜನ ಪುತ್ರರಿಗೆ ನಿದ್ರೆಯನ್ನು ತಂದೊಡ್ಡಿ, ಒಂದೊಂದು ವರುಷಕಾಲ ಅವರನ್ನು ನಿದ್ರಾಪರವಶರನ್ನಾಗಿಸಿ, ಕ್ರಮವಾಗಿ ಒಂದು ವರ್ಷ ಒಬ್ಬನನ್ನು, ಮತ್ತೊಂದುವರುಷ ಮತ್ತೊಬ್ಬನನ್ನು, ಇನ್ನೊಂದುವರ್ಷ ಇನ್ನೊಬ್ಬನನ್ನು ಹೀಗೆ ಜ್ಯೇಷ್ಠಾದಿಕ್ರಮದಿಂದ ಆ ಆರುಜನ ಅಸುರಜೀವರನ್ನು ಆಕರ್ಷಿಸಿ ಒಂದೊಂದು ವರುಷಕಾಲ ಅವರನ್ನು ಕ್ರಮವಾಗಿ ದೇವಕೀದೇವಿಯ ಗರ್ಭಾಶಯದಲ್ಲಿ ಪ್ರವೇಶಗೊಳಿಸಿದಳು. ಕಾಲನೇಮಿಯು ಈಗ ಕಂಸನಾಗಿ ಹುಟ್ಟಿದ್ದನು. ಅವನು ದೇವಕಿಯಲ್ಲಿ ಜನಿಸಿದ ಆ ಆರುಜನರನ್ನು ಶಿಶುವಾಗಿರುವಾಗಲೇ, ಜನಿಸಿದ ಕೂಡಲೇ ಸಂಹಾರ ಮಾಡಿದನು. ದುರ್ಗಾದೇವಿಯು ಹೀಗೆ ಕಂಸನಿಂದ ಹತರಾದ ಆರೂ ಜನರ ಜೀವವನ್ನು ಕಾಲನೇಮಿಯಿಂದ ಜನಿಸಿದ್ದ ಸುಪ್ತವಾಗಿದ್ದ ಆ ಆರುಜನರ ಮೊದಲಿನ ಶರೀರದಲ್ಲಿ (ಬ್ರಹ್ಮದೇವರಿಂದ ಅವಧ್ಯತ್ವಪಡೆದಿದ್ದ ದೇಹದಲ್ಲಿ) ಮತ್ತೆ ಪ್ರವೇಶ ಮಾಡಿಸಿದಳು. ದುರ್ಗಾದೇವಿಯು ಕಾಲನೇಮಿಯು ಮಕ್ಕಳನ್ನು ನಿದ್ರಾಪರವಶಗೊಳಿಸಿ ಒಬ್ಬೊಬ್ಬ ಪುತ್ರರ ಜೀವವನ್ನೂ ಆಕರ್ಷಿಸಿ ದೇವಕೀದೇವಿಯ ಗರ್ಭದಲ್ಲಿಟ್ಟು ಜನಿಸಿದ ಕೂಡಲೇ ಕಾಲನೇಮಿ ಸ್ವರೂಪನಾದ ಕಂಸನಿಂದ ಸಂಹೃತನಾದ ಒಬ್ಬೊಬ್ಬ ಪುತ್ರರ ಜೀವವನ್ನೂ ಮತ್ತೆ ಅವರವರ ನಿದ್ರಾಪರವಶರಾಗಿದ್ದ (ಚೇತನವಿಹೀನರಾಗಿ ನಿರ್ವಿಕಾರವಾಗಿದ್ದ) ದೇಹಗಳಲ್ಲಿ ಪ್ರವೇಶ ಮಾಡಿಸಿದಳು. ಇದರಿಂದ ಬ್ರಹ್ಮದೇವರ ವರವಿಶಿಷ್ಟಗಳಾದ ಶರೀರಗಳು ಅವಧ್ಯವೇ ಆದ್ದರಿಂದ ಬ್ರಹ್ಮದೇವರ ವರವು ಸತ್ಯವಾಯಿತು. ಇದರಂತೆ ಬೇರೆ ಬೇರೆ ಶರೀರಗಳಲ್ಲಿದ್ದ ಆ ಆರು ಜೀವರನ್ನೂ ಕಾಲನೇಮಿಯು (ಕಂಸನು) ಸಂಹರಿಸಿದ್ದರಿಂದ ಹಿರಣ್ಯಕಶ್ಯಪನ ಶಾಪವೂ ಸಾರ್ಥಕವಾಯಿತು. ಅಘಟಿತಘಟನಾಶಕ್ತಿಯುಳ್ಳ ಶ್ರೀದುರ್ಗಾದೇವಿಯು ಇದನ್ನು ಸಂಘಟನಮಾಡಿಸಿದಳು.

ಈಗ ನಿರ್ಣಯಕಾರರು ಶ್ರೀಕೃಷ್ಣಾವತಾರಕ್ಕೆ ಮೊದಲು ಪಾಂಡವರ ಉತ್ಪತ್ತಿಯನ್ನು ನಿರೂಪಿಸಲು ಅದಕ್ಕೆ ಸಂಗತಿಯನ್ನು ಹೇಳುವರು.

ಅದೇ ಕಾಲದಲ್ಲಿ, ಅಂದರೆ ದೇವಕಿಯ ಆರುಜನ ಮಕ್ಕಳನ್ನು ಕಂಸನು ಸಂಹರಿಸಿದ ಕಾಲದಲ್ಲೇ, ಇತ್ತ ಮುನೀಂದ್ರರಿಂದ ಸಹಿತನಾಗಿ ತಪಸ್ಸನ್ನಾಚರಿಸುತ್ತಿದ್ದ ಪಾಂಡುರಾಜನು ಯೋಗಬಲದಿಂದ ಮಾನುಷದೇಹವನ್ನು ತ್ಯಜಿಸಿ ಬ್ರಹ್ಮದೇವರನ್ನು ಸೇವಿಸಲು ಅವರ ಸಭೆಗೆ ತೆರಳಲು ಇಷ್ಟಪಟ್ಟನು. ಆಗ ಹಸ್ತಿನಾವತಿಯಿಂದ ಬಂದಿದ್ದ ಮುನಿಗಳೂ, ಪಾಂಡುರಾಜನ ಜೊತೆಗಿದ್ದ ಮುನಿಗಳೂ ಅವನನ್ನು ಶರೀರತ್ಯಾಗ ಮಾಡದಂತೆ ತಡೆದರು. "ಯಾವನು ಯಾವ ಉದ್ದಿಶ್ಯದಿಂದ ಜನಿಸಿರುವನೋ ಆ ಕಾರ್ಯಮಾಡದೆ ಮೃತನಾದಲ್ಲಿ ಅಂಥವನು ಉತ್ತಮಗತಿ ಪಡೆಯುವುದಿಲ್ಲವಾದ್ದರಿಂದ ಎಲೈ ಪಾಂಡುರಾಜ! ನೀನೀಗ ಯೋಗಬಲದಿಂದ ದೇಹತ್ಯಾಗ ಮಾಡಬಾರದು" ಎಂದು ಮುನಿಗಳು ಅವನನ್ನು ತಡೆದರು. ಪಾಂಡುರಾಜನು ಏತಕ್ಕಾಗಿ ಜನಿಸಿದ್ದನೆಂಬುದನ್ನು ಅದರ ಪ್ರಯೋಜನವನ್ನೂ ಈಗ ವಿವರಿಸುತ್ತಾರೆ.

ಪಾಂಡುರಾಜನು ಪ್ರಧಾನದೇವತೆಗಳಾದ ಶ್ರೀ ವಾಯುದೇವರೇ ಮೊದಲಾದ ಉತ್ತಮದೇವತೆಗಳ ಅವತಾರಕ್ಕೆ, ಪತ್ನಿಯಾದ ಕುಂತಿಯನ್ನು "ನಿಯೋಗಕ್ಕೆ" ನಿಯೋಜಿಸಿ ಆಜ್ಞಾಪಿಸುವುದಕ್ಕಾಗಿಯೇ ಜನಿಸಿದ್ದನು. ಆದ್ದರಿಂದ ಪತ್ನಿಯಾದ ಕುಂತೀದೇವಿಗೆ ಪ್ರಧಾನದೇವತೆಗಳನ್ನು 'ನಿಯೋಗ'ದಿಂದ ಪುತ್ರರಾಗಿ ಪಡೆಯಲು ಆಜ್ಞಾಪ್ರದಾನ ಮಾಡದೆ ಮೃತನಾದಲ್ಲಿ ಪರಲೋಕದಲ್ಲಿ ಸದ್ಗತಿಯಾಗುವುದಿಲ್ಲ. ಅದಕ್ಕಾಗಿಯೇ ಮುನಿಗಳು ಅವನನ್ನು ತಡೆದರೆಂದು ತಿಳಿಯಬೇಕು. ಅದು ಸರಿ, 'ನಾಪುತ್ರಸ್ಯ ಲೋಕೋಸ್ತಿ' ಅಂದರೆ ಅಪುತ್ರವಂತನಿಗೆ ಸದ್ಗತಿಯಿಲ್ಲವೆಂದು ಪ್ರಮಾಣವಿದೆ. ಪಾಂಡುರಾಜನಿಗೆ ಮಕ್ಕಳಿಲ್ಲದ್ದರಿಂದ ಅದಕ್ಕಾಗಿ ಅವನನ್ನು ತಡೆದರು ಎಂದೇಕೆ ಹೇಳಬಾರದು? ಎಂದರೆ "ನಾಪುತ್ರಸ್ಯ ಲೋಕೋಸ್ತಿ" ಎಂಬ ಶ್ರುತಿಗೆ ಯಾವನು ಪುತ್ರಜನನಾರ್ಥವಾಗಿ ಹುಟ್ಟಿರುವನು, ಅವನು ಸತ್ಪುತ್ರರನ್ನು ಪಡೆಯದ ವಿನಃ ಸದ್ಗತಿಯನ್ನು ಪಡೆಯುವುದಿಲ್ಲವೆಂದು ಆ ಶ್ರುತಿಗೆ ಅರ್ಥವೆಂದು ತಿಳಿಯಬೇಕು. ಆದ್ದರಿಂದಲೇ ಮುಂದೆ 'ನಿರ್ಣಯಕಾರ'ರು "ಅಥೋನ್ಯಥಾ ಸುತಾನ್ಯತೇ ವ್ರಜಂತಿ ಸದ್ಗತಿಂ ನರಾಃ" ಅಂದರೆ ಪುತ್ರರಿಲ್ಲದಿದ್ದರೂ ನರರು ಸದ್ಗತಿಯನ್ನು ಹೊಂದುತ್ತಾರಾದ್ದರಿಂದ "ನಾಪುತ್ರಸ್ಯ ಲೋಕೋಸ್ತಿ" ಎಂಬ ಶ್ರುತಿಗೆ ಯಾರು ಪುತ್ರಜನನಕ್ಕಾಗಿ ಹುಟ್ಟಿರುವನೋ ಅವನು ಸತ್ಪುತ್ರೋತ್ಪತ್ತಿಯಿಲ್ಲದೆ ಸದ್ಗತಿಯನ್ನು ಹೊಂದಲಾರ ಎಂದು ಆ ಶ್ರುತಿಗೆ ಅರ್ಥ ಮಾಡುವುದೇ ಯುಕ್ತವಾಗಿದೆ. ಹಾಗಾದರೆ ಅಪುತ್ರವಂತರು ಯಾರು ಸದ್ಗತಿಯನ್ನು ಪಡೆದಿದ್ದಾರೆ? ಅದಕ್ಕಾಗಿ ಈ ಶ್ರುತಿಗೆ ಹೇಗೆ ಸಂಕೋಚಾರ್ಥವನ್ನು ಮಾಡಬೇಕು? ಎಂದರೆ ಹೇಳುತ್ತಾರೆ – ರುಕ್ಮಾಂಗದರಾಜನಿಂದ ಜನಿಸಿದ ಸಂಧ್ಯಕೆಯ ಮಗನಾದ ಧರ್ಮಭೂಷಣನು ಅಪುತ್ರವಂತನಾಗಿದ್ದರೂ ಏಕಾದಶೀ ಉಪವಾಸ ಪ್ರಭಾವದಿಂದ ಸದ್ಗತಿಯನ್ನು ಪಡೆದಿದ್ದಾರೆ. ಆದುದರಿಂದ ಮೇಲಿನಂತೆಯೇ ಶ್ರುತಿಗೆ ಅರ್ಥ ಮಾಡಬೇಕೆಂದು ನಿರ್ಣಯಾಚಾರ್ಯರು ಅಪ್ಪಣೆ ಕೊಡಿಸಿದ್ದಾರೆ.

ಅದೇ ಸಮಯದಲ್ಲಿ ಕಲಿಯೂ, ಇಂದ್ರಜಿತ್ತೂ ಮುಂತಾದ ಪ್ರಮುಖ ರಾಕ್ಷಸರು ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರನ ಪತ್ನಿಯಾದ ಗಾಂಧಾರಿದೇವಿಯ ಗರ್ಭದಲ್ಲಿ ಸ್ಥಾನ ಪಡೆದಿದ್ದರು. ಹಸ್ತಿನಾವತಿಯಿಂದ ಬಂದಿದ್ದ ಋಷಿಗಳಿಂದ ಕಲಿ ಮುಂತಾದವರು ಗಾಂಧಾರಿಯ ಗರ್ಭದಲ್ಲಿರುವುದನ್ನು ಕೇಳಿ ತಿಳಿದು ಧೃತರಾಷ್ಟ್ರನ ತಮ್ಮನಾದ ಪಾಂಡುರಾಜನು ಪುತ್ರೋತ್ಪಾದನೆಯಿಲ್ಲದೆ ಸದ್ಗತಿಯಿಲ್ಲ, ನೀನೀಗ ಯೋಗಬಲದಿಂದ ದೇಹತ್ಯಾಗ ಮಾಡಬಾರದು ಎಂಬ ಮುನಿಗಳ ಮಾತನ್ನು ಪರಿಶೀಲಿಸಿ, ವಿಚಾರಮಾಡಿ ಪುತ್ರೋತ್ಪಾದನವು ಹರಿಯಸೇವೆಯೇ ಎಂದು ಬುದ್ಧಿಯುಳ್ಳ ಪಾಂಡುರಾಜನು ಪತ್ನಿಯಾದ ಕುಂತಿಯನ್ನು ಕುರಿತು "ಮಂಗಳಕರಳೇ! ಸತ್ಪುತ್ರರಿಲ್ಲದೆ ಸದ್ಗತಿಯಾಗುವುದಿಲ್ಲವೆಂದು ಈ ಋಷಿಮುನಿಗಳು ಹೇಳುತ್ತಿದ್ದಾರೆ. ಆದುದರಿಂದ ನೀನು 'ನಿಯೋಗ'ದಿಂದ ಮಂಗಳಗುಣಾಧಿಕರಾದವರಿಂದ ಪುತ್ರರನ್ನು ಪಡೆ" ಎಂದು ಆಜ್ಞಾಪಿಸಿದನು.

ಆಗ ಸಾಧ್ವಿಯಾದ ಕುಂತೀದೇವಿಯು ಪತಿಯ ಆಜ್ಞೆ ತನಗಿಷ್ಟವಲ್ಲದಿದ್ದರೂ ಪತಿಯ ಆಜ್ಞೆಯನ್ನು ಪರಿಪಾಲಿಸುವುದು ಪತ್ನಿಯ ಧರ್ಮವೆಂದು ತಿಳಿದು ಪಾಂಡುರಾಜನ ಅಪ್ಪಣೆಯನ್ನು ಸ್ವೀಕರಿಸಿ "ಸ್ವಾಮಿ, ಶ್ರೇಷ್ಠದೇವತೆಗಳನ್ನು ವಶಪಡಿಸಿಕೊಳ್ಳುವ ಮತ್ತು ಉತ್ಕೃಷ್ಟಪುತ್ರಪ್ರದವಾದ ಉತ್ತಮವಾದ ಮಂತ್ರಗಳು ನನ್ನಲ್ಲಿವೆ. (ನನಗೆ ಗೊತ್ತಿದೆ)' ಎಂದು ವಿಜ್ಞಾಪಿಸಿ ಮತ್ತೆ 'ಸ್ವಾಮಿ, ಶುಭಗುಣಾಧಿಕರಿಂದ ಮಕ್ಕಳನ್ನು ಪಡೆ ಎಂದು ನೀವು ಅಪ್ಪಣೆ ಮಾಡಿರುವಿರಿ. ದೇವತೆಗಳನ್ನು ಬಿಟ್ಟು ನಿಮಗೆ ಸಮರಾದವರು ಯಾರೂ ಇಲ್ಲ. ದೇವತೆಗಳಲ್ಲಿ ನಿಮಗೆ ಸಮರಾದವರು ಕೆಲವರಿದ್ದಾರೆ. ನಿಮಗಿಂತ ಅಧಿಕರಾದವರೂ ಇದ್ದಾರೆ. ಅಂತಹವರನ್ನು ಆಹ್ವಾನಿಸಿ ವಶಪಡಿಸಿಕೊಳ್ಳುವ ಉತ್ತಮ ಮಂತ್ರವು ನನಗ ತಿಳಿದಿದೆ. ಆದ್ದರಿಂದ ನಿಮಗಿಂತ ಶ್ರೇಷ್ಠರಾದ ಯಾವ ದೇವತೆಗಳನ್ನು ನೀವು ಆಣೆಮಾಡುವಿರೋ ಅವರನ್ನು ಆಹ್ವಾನಿಸುವೆನು" ಎಂದು ಬಿನ್ನವಿಸಿದಳು.

"ಉತ್ತಮನಾದ ಪತಿಯಿದ್ದರೂ ಅಂಥ ಪತಿಗಿಂತ ಯೋಗ್ಯತೆಯಲ್ಲಿ ನೀಚನಾದವನೊಡನೆ ಸಂಬಂಧಮಾಡಿದ ಸತಿಗೆ ಪ್ರಾಯಶ್ಚಿತ್ತವೇ ಇಲ್ಲ. ಅವರನಾದವರೊಡನೆ ಸಂಬಂಧ ಬೆಳೆಸಿದವಳು ತನ್ನ ಪತಿಯು ವಾಸಿಸುವ ಉತ್ತಮಲೋಕವನ್ನು ಪಡೆಯುವುದಿಲ್ಲ".

ಇಲ್ಲಿ ಒಂದು ಆಶಂಕೆ ಬರುತ್ತದೆ. ಉತ್ತಮನಾದ ಪತಿಯನ್ನು ಪಡೆದಿದ್ದರೂ ಕೆಲವು ದೇವತಾಸ್ತ್ರೀಯರು ಪತಿಗಿಂತ ಯೋಗ್ಯತೆಯಲ್ಲಿ ಅವರನಾದವನೊಡನೆ ಸಂಬಂಧ ಬೆಳೆಸಿರುವುದು ಕಂಡುಬಂದಿದೆ. ಆದ್ದರಿಂದ ಮೇಲಿನ ಮಾತು ಕೂಡುವುದಿಲ್ಲವಲ್ಲ ಎಂಬ ಆಶಂಕೆಗೆ ದೇವತಾಸ್ತ್ರೀಯರು ನೀಚನಾದ ಪತಿಯನ್ನು ಪಡೆದ ನಿದರ್ಶನವು ಕೃತಯುಗದಲ್ಲಿಯೋ ಅಥವಾ ಕೃತಯುಗಾಂತ್ಯದಲ್ಲಿಯೋ? ಎಂದು ಎರಡು ವಿಧವಾಗಿ ಆಶಂಕಿಸಿ ಮೊದಲನೆಯದನ್ನು ನಿಷೇಧಿಸುತ್ತಾರೆ. ಪೂರ್ವದಲ್ಲಿ ಕೃತಯುಗದಲ್ಲಿ ದೇವತೆಗಳು ವಿಶೇಷವಾದ ಯಾವುದೋ ಒಂದು ಕಾರಣದಿಂದಾಗಿ ತಮ್ಮ ತಮ್ಮ ನಿಯತ-ಪತ್ನಿಯರನ್ನು ಬಿಟ್ಟು ನಿಯತರಲ್ಲದ ಇತರ ಸ್ತ್ರೀಯರೊಡನೆ ರಮಿಸುತ್ತಿದ್ದರು. ಆದರೆ ದೇವತೆಗಳ ನಿಯತಪತ್ನಿಯರು ಮಾತ್ರ ಯಾವುದೇ ಕಾರಣದಿಂದಲೂ ಸಹ ಎಲ್ಲಿಯೂ ನಿಯತಪತಿಗಳನ್ನಲ್ಲದೆ ಬೇರೆ ಪುರುಷರೊಡನೆ ರಮಿಸುವುದಿಲ್ಲ. ಆ ದೇವತಾಸ್ತ್ರೀಯರು ಅನಾದಿಕಾಲದಿಂದ ಮನೋವಾಕ್ಕಾಯಗಳಿಂದ ತಮ್ಮ ತಮ್ಮ ನಿಯತಪತಿಗಳಲ್ಲಿಯೇ ಆಸಕ್ತರಾಗಿರು-ವುದರಿಂದ ಪತಿವ್ರತೆಯರಾದ ಅವರು ತಮ್ಮ ತಮ್ಮ ನಿಯತಪತಿಗಳಿಂದ ಕೂಡಿಯೇ ಇರುವರು. ಇದು ಶ್ರುತ್ಯಾದಿಗಳಿಂದ ಪ್ರಸಿದ್ಧವಾಗಿದೆ. ಪತಿವ್ರತೆಯರಾದ ಆ ದೇವತಾಸ್ತ್ರೀಯರು ತಮ್ಮ ತಮ್ಮ ನಿಯತಪತಿಗಳಿಂದೊಡಗೂಡಿಯೇ ಮೋಕ್ಷವನ್ನು ಪಡೆಯುವರು.

ಇದರ ಮೇಲೆ ಮತ್ತೊಂದು ಆಶಂಕೆ. ಹಾಗಾದರೆ ಊರ್ವಶೀ ಮುಂತಾದವರೊಡನೆ ದೇವತೆಗಳು ಭೋಗ ಪಡೆಯುತ್ತಿದ್ದುದು ಹೇಗೆ ಕೂಡುವುದು? ಇದಕ್ಕೆ ಉತ್ತರ ಹೇಳುತ್ತಿದ್ದಾರೆ. ಕೃತಯುಗಾಂತ್ಯದ ಅನಂತರದಲ್ಲಿ ಶ್ರೇಷ್ಠರಾದ ಅನೇಕ ಸ್ತ್ರೀಯರು ಅಪ್ಸರಸ್ತ್ರೀಯರು ಆದರು. ಅಂದರೆ ಅನೇಕ ಭೋಗಾಂಗನೆಯರಾದರು. ಆ ಅಪ್ಸರೆಯರು ಪಾಣಿಗ್ರಹಣ ವಿಧಿಯಿಂದ ಲಗ್ನವಾಗದೆ, ನಿರ್ಲಜ್ಜರಾಗಿ ಮತ್ತು ಸದಾ ಅನೇಕಪತಿಗಳುಳ್ಳರಾದ್ದರಿಂದ, ಅಥವಾ ತಮ್ಮ ಮನಸ್ಸಿಗೆ ಬಂದ ಪ್ರಿಯರೊಡನೆ ವಿಹರಿಸುವವರಾದುದರಿಂದ ಅವರು, ನಿಯತಪತಿಗಳುಳ್ಳ ದೇವತಾಸ್ತ್ರೀಯರಂತೆ ಪತಿಗಳೊಡನೆ ಉತ್ತಮವಾದ ಮುಕ್ತಿಯನ್ನು ಪಡೆಯಲಿಲ್ಲ.

ಇದರ ಮೇಲೆ ಮತ್ತೂ ಒಂದು ವಿಧವಾಗಿ ಆಶಂಕಿಸಿ ಉತ್ತರ ಹೇಳುತ್ತಾರೆ – ಕೃತಯುಗಾಂತ್ಯದಲ್ಲಿ ನಿಯತ-ಪತಿಗಳನ್ನು ಪಡೆದ ತಾರಾ ಮುಂತಾದವರಲ್ಲಿ ವ್ಯಭಿಚಾರದೋಷ ಕಂಡುಬಂದಿದೆ. ಇದರ ಪರಿಹಾರ ಹೇಗೆ? ಎಂದರೆ ನಿರೂಪಿಸುತ್ತಾರೆ. ಪ್ರಬಲವಾದ ಕಾರಣಗಳಿಂದ ನಿಯತಪತಿಗಳುಳ್ಳ ದೇವತಾಸ್ತ್ರೀಯರು ಪ್ರಾರಬ್ಧಕರ್ಮವನ್ನು ಅನುಸರಿಸಿ ಉತ್ತಮರ ಶಾಪಾದಿಗಳಿಗೆ ಗುರಿಯಾದ ಕಾರಣಗಳಿಂದ ತಮ್ಮ ನಿಯತಪತಿಗಳನ್ನು ತೊರೆದು ಇತರ ಪುರುಷರ ಸಂಬಂಧ ಮಾಡಿದಲ್ಲಿ ಆಗ ಅವರು ದುಃಖಪ್ರದವಾದ, ಅನ್ಯಸಂಬಂಧದಿಂದ ಪಾತಿವ್ರತ್ಯಕ್ಕೆ ಭಂಗ ಉಂಟಾದ ಕಾರಣದಿಂದ ಸಹಿಸಲಳವಲ್ಲದ ವಿಪತ್ತಿಗೆ ಸಿಲುಕಿ ಬಹುಕಾಲ ಮೂಲರೂಪವನ್ನು ಹೊಂದಲಾಗದೆ ಕಷ್ಟಪಡುತ್ತಾರೆ. ಅಷ್ಟು ಮಾತ್ರವಲ್ಲ, ಆ ಕಾರಣದಿಂದಾಗಿಯೇ ಭೂಲೋಕದಲ್ಲಿಯೂ ಸಹ ತಮ್ಮ ಪತಿಯ ಸಾಮೀಪ್ಯದಿಂದ ವಂಚಿತರಾಗಿ ಅಶಕ್ಯವಾದ ವಿಪತ್ತಿಗೆ ಭಾಗಿಗಳಾಗುತ್ತಾರೆ.

ಕುಂತೀದೇವಿ ಮುಂದುವರೆದು ಹೇಳುತ್ತಾಳೆ – "ಸ್ವಾಮಿ, ನೀವು ಯದ್ಯಪಿ ನನಗೆ ಯೋಗ್ಯವಲ್ಲದ ಅಪ್ಪಣೆಯನ್ನು ಮಾಡಿರುವಿರಿ. ಆದರೂ ನಿಮ್ಮ ವಚನವನ್ನು ನಾನು ಮೀರುವುದು ಸತಿಗೆ ಶೋಭೆ ತರುವಂತಹುದಲ್ಲ. ಆದ್ದರಿಂದ ನಿಮ್ಮಾಣತಿಯನ್ನು ನಾನು ಮೀರಲಾರೆ. ಸ್ವಾಮಿ, ಶ್ರೇಷ್ಠಪುತ್ರನನ್ನು ಕರುಣಿಸುವ ಯಾವ ಶ್ರೇಷ್ಠದೇವತೆಯನ್ನು ಆಹ್ವಾನಿಸಲಿ ಹೇಳಿ?" ಎಂದೆನಲು ಕುಂತಿಯ ವಾಕ್ಯವನ್ನಾಲಿಸಿ ಪಾಂಡುರಾಜನು "ಧರ್ಮವನ್ನು ಬಿಟ್ಟು ರಾಜನು ಭೂಮಿಯನ್ನು ರಕ್ಷಿಸಲಾಗುವುದಿಲ್ಲ. ಆದ್ದರಿಂದ ಪುತ್ರನನ್ನು ಕರುಣಿಸಲು ಸಮರ್ಥನಾದ ಧರ್ಮಾತ್ಮಕನಾದ ಯಮಧರ್ಮನನ್ನು ಆಹ್ವಾನಿಸು. ಅವನಿಂದ ಜನಿಸಿದ ಪುತ್ರನು ಶ್ರೇಷ್ಠ ಧಾರ್ಮಿಕನಾಗುವನು" ಎಂದನು.

ಆಗ ಪತಿಯ ಆಜ್ಞೆಯಂತೆ ಕುಂತೀದೇವಿಯು, ಗಾಂಧಾರಿದೇವಿಯು ಗರ್ಭವತಿಯಾದ ಒಂದು ವರ್ಷದ ಮೇಲೆ, ಮಂತ್ರಜಪಪೂರ್ವಕವಾಗಿ ಯಮಧರ್ಮನನ್ನು ಆಹ್ವಾನಿಸಿದಳು. ಯಮಧರ್ಮನು ಪ್ರತ್ಯಕ್ಷನಾಗಿ ಕುಂತಿಯಲ್ಲಿ ಅನುಗ್ರಹ ಮಾಡಿದನು. ಯಮಧರ್ಮನ ಅನುಗ್ರಹದಿಂದ ಕುಂತೀದೇವಿಯು ಯುಧಿಷ್ಠಿರನೆಂಬ ಹೆಸರಿನ ಪುತ್ರನನ್ನು ಪ್ರಸವಿಸಿದಳು. ಯುಧಿಷ್ಠಿರನೆಂದರೆ ಯಮಧರ್ಮ. ಆದ್ದರಿಂದ ಯಮಧರ್ಮನು ತಾನೇ ಯುಧಿಷ್ಠಿರನೆಂಬ ಹೆಸರಿನಿಂದ ಪುತ್ರನಾಗಿ ಜನಿಸಿದನು.

ಅತ್ತ ಹಸ್ತಿನಾವತಿಯಲ್ಲಿ ಕುಂತೀದೇವಿಗೆ ಪುತ್ರೋತ್ಪತ್ತಿಯಾದ ವಿಚಾರವನ್ನು ಕೇಳಿ, ಗಾಂಧಾರಿದೇವಿಯು ತನಗಿಂತ ಮೊದಲು ಕುಂತೀದೇವಿಗೆ ಪುತ್ರೋತ್ಪತ್ತಿಯಾಯಿತಲ್ಲಾ ಎಂದು ಮಾತ್ಸರ್ಯಾಗ್ನಿಯಿಂದ ದಗ್ಧಳಾಗಿ ಕೂಡಲೇ ತನ್ನ ಮುಷ್ಟಿಗಳಿಂದ ಗರ್ಭವನ್ನು ಕುಟ್ಟಿಕೊಂಡು ಗರ್ಭಪಾತ ಮಾಡಿಕೊಂಡಳು. ಗಾಂಧಾರಿದೇವಿಗೆ ಗರ್ಭಪಾತದ ಸಮಯದಲ್ಲಿ ಅಲ್ಲಿಗೆ ಬಂದಿದ್ದ ಪರಾಶರಪುತ್ರರಾದ ಶ್ರೀ ವೇದವ್ಯಾಸದೇವರು ಆ ವಿಚಾರವನ್ನು ಕೇಳಿ ಕಡುನೊಂದು ಗರ್ಭಪಾತವಾದ ಮೇಲೆ ಬಿಸುಡಲ್ಪಟ್ಟಿದ್ದ ಮಾಂಸಖಂಡಗಳಲ್ಲಿರುವ ಜಂತುಗಳನ್ನು ಒಂದೊಂದು ಅಂಗುಷ್ಠ ಪ್ರಮಾಣದಲ್ಲಿ ನೂರಾ ಒಂದು ಭಾಗ ಮಾಡಿ ಅವೆಲ್ಲವನ್ನೂ ಬೇರೆ ಬೇರೆ ಘೃತಪೂರ್ಣ ಗಡಿಗೆಗಳಲ್ಲಿಟ್ಟರು. ಹೀಗೆ ನೂರು ಭಾಗವಾಗಿ ವಿಂಗಡಿಸಲ್ಪಟ್ಟ ಆ ಗಡಿಗೆಗಳಿಂದ ಪ್ರತಿದಿನವೂ ಸುಯೋಧನಾದಿ ನೂರು ಜನರು ಜನಿಸಿದರು. ಉಳಿದ ಮಾಂಸಖಂಡದಿಂದ ದುಃಶಲಾ ಎಂಬ ಕನ್ನಿಕೆಯೂ ಜನಿಸಿದಳು.

ಹೀಗೆ ಸರ್ವನಿಯಾಮಕರೂ, ಪರಾಶರಸುತರೂ ಆದ ಭಗವಾನ್ ವೇದವ್ಯಾಸರು ದೇವತಾಕಾರ್ಯಸಿದ್ಧಿಗಾಗಿ ವಿಚಿತ್ರವೀರ್ಯನ ಪುತ್ರನಾದ ಧೃತರಾಷ್ಟ್ರನಿಂದ ಉತ್ಪನ್ನವಾದ ಆ ಗರ್ಭವನ್ನು ರಕ್ಷಿಸಿದರು.

ಕಲಿಯು ಉತ್ಕೃಷ್ಟವಾದ ಭುಜಬಲಪರಾಕ್ರಮದಿಂದ ಯುಕ್ತನಾಗಿ ಸುಯೋಧನನೆಂಬ ಹೆಸರಿನಿಂದ ಹುಟ್ಟಿದನು. ಅವನಿಗೆ ಅಂಥ ಅಧಿಕಬಲ ವೀರ್ಯಾದಿಗಳಿಗೆ ಶ್ರೀಮುಖ್ಯಪ್ರಾಣದೇವರ ಸನ್ನಿಧಾನವೇ ಕಾರಣವೆಂದು ತಿಳಿಯಬೇಕು.

ಕಲಿಯ ಜನನಕಾರಣವನ್ನೀಗ ನಿರೂಪಿಸುತ್ತಾರೆ.

ಹಿಂದೆ ಮೇರುಪರ್ವತದ ಮೇಲ್ಭಾಗದಲ್ಲಿ ಸೇರಿದ್ದ ಸಕಲ ದೇವತೆಗಳು ದುಷ್ಟಶಿಕ್ಷಣ-ಶಿಷ್ಟರಕ್ಷಣೆಗಾಗಿ ಶ್ರೀಮನ್ನಾರಾಯಣನನ್ನು ಪ್ರಾರ್ಥಿಸಿದಾಗ ಶ್ರೀಹರಿಯು ಅವರ ಪ್ರಾರ್ಥನೆಯಂತೆ ಅವತರಿಸುವುದಾಗಿ ಭರವಸೆಯಿತ್ತು ದೇವತೆಗಳೂ ಸಹ ಭೂಮಿಯಲ್ಲಿ ಅವತರಿಸಬೇಕೆಂದು ಅಪ್ಪಣೆ ನೀಡಿದ್ದನಷ್ಟೇ. ಆಗ ದೇವತೆಗಳೂ ತಾವುಗಳೂ ಅವತರಿಸುವುದಾಗಿ ಮಾತನಾಡಿಕೊಂಡ ವಿಚಾರವನ್ನು ದೈತ್ಯರೂ ಕೇಳಿ ತಿಳಿದುಕೊಂಡರು. ಅನಂತರ ದೇವತೆಗಳಿಗೆ ವಿರೋಧಿಗಳಾದ ಆ ದೈತ್ಯರೆಲ್ಲರೂ ತಮ್ಮ ಅಧಿಪತಿಯಾದ ಕಲಿಯಲ್ಲಿಗೆ ಬಂದು ಆ ವಿಚಾರವನ್ನು ತಿಳಿಸಿದರು. ಆಗ ಕಲಿ ಮತ್ತು ದೈತ್ಯರು ರುದ್ರದೇವರನ್ನು ಕುರಿತು ತಪಸ್ಸು ಮಾಡಿ ಉಮಾಪತಿಯನ್ನು ಸಂತೋಷಗೊಳಿಸಿದರು. ಅವರ ತಪಸ್ಸಿಗೆ ಮೆಚ್ಚಿ ಪ್ರೈದೋರಿದ ಶಿವನನ್ನು ಕಲಿಯು 'ತಾನು ಯಾರಿಂದಲೂ ಸಂಹೃತನಾಗದಂತೆ ವರ ಕರುಣಿಸಬೇಕೆಂದು' ಬೇಡಿದನು. ಸಕಲ ದೈತ್ಯರೂ ಸಹ ತಮ್ಮ ನಾಯಕನಾದ ಕಲಿಯು ಸರ್ವರಿಂದ ಅವಧ್ಯನಾಗಿರಬೇಕೆಂದು ಬಯಸಿ ರುದ್ರದೇವರನ್ನು, ಕಲಿಗೆ ಅವಧ್ಯತ್ವವನ್ನು ನೀಡಬೇಕೆಂದು ಪ್ರಾರ್ಥಿಸಿದರು. ಸಂತುಷ್ಟರಾದ ರುದ್ರದೇವರು ಕಲಿಗೆ ಅದರಂತೆಯೇ ವರವನ್ನು ಅನುಗ್ರಹಿಸಿದರು.

ರುದ್ರದೇವರ ವರಬಲದಿಂದ ದೇವತೆಗಳಿಗೆ ಶತ್ರುವಾದ, ಮಹಾಬಲಶಾಲಿಯಾದ ಕಲಿಯು ವಜ್ರಕಾಯನಾಗಿ ಸುಯೋಧನನೆಂಬ ಹೆಸರಿನಿಂದ ಜನಿಸಿದನು. ತುಪ್ಪತುಂಬಿದ ಗಡಿಗೆಯಿಂದ ಸಕಲರಿಂದಲೂ ಅವಧ್ಯನೇ ಆದ ಸುಯೋಧನನು ಜನಿಸಿದ ಮೇಲೆ ರಾವಣನ ಮಗನಾದ ಇಂದ್ರಜಿತ್ತು ಎಂಬ ರಾಕ್ಷಸನು ಘೃತಘಟದಿಂದ ದುಃಶಾಸನನೆಂಬ

ಹೆಸರಿನಿಂದ ಹುಟ್ಟಿದನು. ಆ ತರುವಾಯ ಅತಿಕಾಯನೆಂಬ ರಕ್ಕಸನು ವಿಕರ್ಣನಾಗಿ ಜನಿಸಿದನು. ಅನಂತರ ಬಲಿಷ್ಠನಾದ ಖರಾಸುರನು ಚಿತ್ರಸೇನನೆಂಬ ಹೆಸರಿನಿಂದುದಯಿಸಿದನು. ಇದರಂತೆಯೇ ಬಲು ಬಲವಂತರಾದ ಅನೇಕ ರಾಕ್ಷಸರು ಧೃತರಾಷ್ಟ್ರನಿಗೆ ಪುತ್ರರಾಗಿ ಜನಿಸಿದರು. ಗಡಿಗೆಯಲ್ಲಿದ್ದ ಮಾಂಸಪಿಂಡದಿಂದ ಹುಟ್ಟಿದ ಶರೀರವುಳ್ಳ ಆ ದುರ್ಯೋಧನಾದಿಗಳು, ಅಜ್ಞಾನ, ಶ್ರೀಹರಿದ್ವೇಷ ಮುಂತಾದ ಸಕಲ ದೋಷಗಳಿಗೂ ಅಭಿಮಾನಿಗಳಾದರು. ಇದರಂತೆ ಮೂಲರೂಪದಲ್ಲಿ 'ಮೃಷಾ' ಎಂಬ ಹೆಸರಿನ ಮತ್ತು ಅಮಾವಾಸ್ಯೆಗೆ ಅಭಿಮಾನಿನಿಯಾದ ಅಸುರಸ್ತ್ರೀಯು 'ದುಃಶಲಾ' ಎಂಬ ಹೆಸರಿನಿಂದ ಜನಿಸಿದಳು. ಪೂರ್ವದಲ್ಲಿ ಈ ಮೃಷಾ ಎಂಬ ಅಸುರಳು ರುದ್ರದೇವರನ್ನು ತಪಸ್ಸಿನಿಂದ ಮೆಚ್ಚಿಸಿ, ಅರ್ಜುನನ ಪುತ್ರನಾದ ಅಭಿಮನ್ಯುವಿನ ಮರಣಕ್ಕೆ ತಾನು ಕಾರಣಳಾಗಬೇಕೆಂಬ ವರವನ್ನು ಪಡೆದಿದ್ದಳು. ಅಂತೆಯೇ ಈಗ ಆ ಮೃಷಾ ಎಂಬ ಹೆಸರಿನ ಅಸುರಸ್ತ್ರೀಯೇ ಧೃತರಾಷ್ಟ್ರನಿಗೆ ಮಗಳಾಗಿ ದುಃಶಲಾ ಎಂಬ ಹೆಸರಿನಿಂದ ಹುಟ್ಟಿದಳು.

ಅಭಿಮನ್ಯುವನ್ನು ವಧಿಸಿದವನು ದುಶ್ಶಾಸನ ಪುತ್ರನು. ಆದ್ದರಿಂದ ಮೃಷೆಯು ಅವನ ವಧಕ್ಕಾಗಿ ಜನಿಸಿದಳೆಂದು ಹೇಳುವುದು ಕೂಡುವುದಿಲ್ಲವಲ್ಲಾ ಎಂದರೆ ಸಮಾಧಾನ ಹೇಳುತ್ತಾರೆ. ದುಃಶಲೆಯ ಪ್ರಚೋದನೆ ಮತ್ತು ಮಾತಿನಂತಯೇ ಜಯದ್ರಥನು ಅಭಿಮನ್ಯುವು ಚಕ್ರವ್ಯೂಹವನ್ನು ಪ್ರವೇಶಿಸಿದ ಮೇಲೆ ಅವನ ಸಹಾಯಕ್ಕಾಗಿ ಬಂದ ಪಾಂಡವರು ಮತ್ತು ಅವರ ಸೈನ್ಯವನ್ನು ಒಳಗೆ ಹೋಗದಂತೆ ತಡೆಹಿಡಿದಿದ್ದರಿಂದ ಅಸಹಾಯಕನಾದ ಅಭಿಮನ್ಯುವನ್ನು ದುಶ್ಶಾಸನನ ಮಗನು ಸಂಹರಿಸಿದನು. ಆದುದರಿಂದ ಅವನ ಮರಣಕ್ಕೆ ದುಃಶಲೆಯು ಕಾರಣಳಾದಳು. ಅದರಂತೆ ದುಃಶಲೆಯಿಂದ ಪ್ರೇರಿತನಾದ ಸೈಂಧವನೂ (ಜಯದ್ರಥನ) ಸಹ ಅಭಿಮನ್ಯುವಿನ ವಧೆಗೆ ಕಾರಣನಾದನು. ಆ ಜಯದ್ರಥನು ಮೂಲರೂಪದಲ್ಲಿ ಕಾಲಿಕೇಯ ಎಂಬ ದಾನವಗಣದಲ್ಲಿ ಒಬ್ಬನು. ಅವನು ಅಭಿಮನ್ಯುವನ್ನು ಸಂಹರಿಸಬೇಕೆಂದೇ ಭೂಮಿಯಲ್ಲಿ ಹುಟ್ಟಿದವನು.

ನಿಯುತಿದೇವನ ಸಹೋದರನು ದೇವತೆಗಳಲ್ಲಿ ನಿಯುತನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದವನು. ಅವನು ನಾಸಿಕಾ-ಗೋಳಕ್ಕೆ ಅಭಿಮಾನಿಯಾದ ವಾಯುದೇವರ ಸನ್ನಿಧಾನಯುಕ್ತನಾಗಿ ಯುಯುತ್ಸು ಎಂಬ ಹೆಸರಿನಿಂದ ಭೂಮಿಯಲ್ಲಿ ಜನಿಸಿದನು. ಅವನು ಸತ್ಕರ್ಮಾಚರಣದುರಂಧರನು. ಈ ಯುಯುತ್ಸುವು ಅಂಬಿಕೆಯ ಮಗನಾದ ಧೃತರಾಷ್ಟ್ರನ ಮಡದಿಯಾದ ವೈಶ್ಯಸ್ತ್ರೀಯಲ್ಲಿ ಹುಟ್ಟಿದವನು. ಅವನು ಸುಯೋಧನನು ಹುಟ್ಟಿದ ಮೇಲೆ ಅವನಿಗೆ ತಮ್ಮನಾಗಿ ದುಶ್ಶಾಸನ ಹುಟ್ಟುವುದಕ್ಕೆ ಮೊದಲು, ಅವನಿಗೆ ಅಣ್ಣನಾಗಿ ಹುಟ್ಟಿದನು. ಅವನು ಶ್ರೀಹರಿಗೆ ಅತ್ಯಂತ ಪ್ರಿಯನು ಮತ್ತು ಭಕ್ತನು.

ಈಗ ಶ್ರೀ ವಾಯುದೇವರ ಅವತಾರಪ್ರಸಂಗವನ್ನು ನಿರೂಪಿಸುತ್ತಾರೆ.

ಅತ್ತ ಧರ್ಮರಾಜನು ಜನಿಸಿದ ತರುವಾಯ ಪಾಂಡುರಾಜನು ಕುಂತೀದೇವಿಯನ್ನು ಕುರಿತು ಹೀಗೆ ಹೇಳಿದನು. "ದೇವಿ! ಬಾಹುಬಲ ಮತ್ತು ಜ್ಞಾನಬಲಗಳಿಂದ ಮಾತ್ರವೇ ಧರ್ಮವು ರಕ್ಷಿಸಲ್ಪಡುವುದು. ಬಾಹುಬಲ ಹಾಗೂ ಜ್ಞಾನಬಲಗಳಿಲ್ಲದಿದ್ದರೆ ಧರ್ಮವು ನಾಶವಾಗುವುದು. ಆದಕಾರಣ ನೀನು ಈಗ ಬಾಹುಬಲ ಮತ್ತು ಜ್ಞಾನಬಲದಿಂದ ಯುಕ್ತನಾದ ಪುತ್ರನನ್ನು ಶೀಘ್ರವಾಗಿ ಪಡೆ". ಅಂಥವರಾರೆಂಬುದನ್ನು ಪಾಂಡುರಾಜ ಹೇಳುತ್ತಿದ್ದಾನೆ – "ಯಜ್ಞಗಳಲ್ಲಿ ಅಶ್ವಮೇಧವು ಶ್ರೇಷ್ಠವಾದದ್ದು. ತೇಜಸ್ಸುಗಳಲ್ಲಿ (ತೇಜಸ್ವಿಗಳಲ್ಲಿ ಭಾಸ್ಕರನು ಉತ್ತಮನು), ಚಾತುರ್ವರ್ಣ್ಯದವರಲ್ಲಿ ಬ್ರಾಹ್ಮಣನು ಶ್ರೇಷ್ಠನು. ಮನುಷ್ಯರಿಂದ ನೋಡಲು ಯೋಗ್ಯರಾದ ದೇವತೆಗಳಲ್ಲಿ (ಇಲ್ಲಿ ಇಂದ್ರಾದಿತೇಜೋ ವ್ಯಾವೃತ್ತ್ಯರ್ಥವಾಗಿ 'ಮನುಷ್ಯದೃಶ್ಯೇಷು' ಎಂದು ಹೇಳಿದ್ದಾರೆ.) ಮುಖ್ಯಪ್ರಾಣದೇವರು ಶ್ರೀ ಪುರುಷೋತ್ತಮನಾದ ಶ್ರೀಮನ್ನಾರಾಯಣನನ್ನು ಬಿಟ್ಟು ಅನಂತರ ಸಕಲ ಗುಣಗಳಿಂದ ಉತ್ತಮರಾಗಿದ್ದಾರೆ.

ಇಲ್ಲಿ ಪುರುಷೋತ್ತಮನಾದ ಶ್ರೀಮನ್ನಾರಾಯಣನನ್ನು ಬಿಟ್ಟು ವಾಯುದೇವರು ಸಕಲ ಗುಣಗಳಿಂದ ಉತ್ತಮರೆಂದು ಹೇಳಿದರಷ್ಟೇ? ಹಾಗಾದರೆ ವಾಯುದೇವರಿಗಿಂತ ಶ್ರೇಷ್ಠನಾದ ಪುರುಷೋತ್ತಮನಿಂದಲೇ ಪುತ್ರನನ್ನು ಪಡೆಯೆಂದು ಏಕೆ ಹೇಳಲಿಲ್ಲ? ಎಂಬುದನ್ನು ಪಾಂಡುರಾಜನೇ ಅದಕ್ಕೆ ಕಾರಣವನ್ನೂ ಹೇಳುತ್ತಿದ್ದಾನೆ.

"ಸರ್ವಸಮರ್ಥನೂ, ಅಪರಿಮಿತ ಪರಾಕ್ರಮಶಾಲಿಯೂ ಆದ ಶ್ರೀಹರಿಯು ಶ್ರೀ ವೇದವ್ಯಾಸರೂಪದಿಂದ ನನಗೆ ವಿಶೇಷವಾಗಿ (ವಿಚಿತ್ರವೀರ್ಯನಂತೆ ನಾಮಮಾತ್ರದಿಂದಲ್ಲ) ತಂದೆಯೇ ಆಗಿದ್ದಾರೆ. ಅವರಿಂದಲೇ ನನ್ನ ತಾಯಿಯು ನನ್ನನ್ನು ಪಡೆದಳಾದುದರಿಂದ ಅವರೆನಗೆ ತಂದೆಯು. ನಿನಗೆ ಅವರು ಮಾವನಾಗಬೇಕು. ನಿನಗೆ ಮಾವನಾದ ಅವರು ನಿನ್ನಲ್ಲಿ ಪುತ್ರೋತ್ಪಾದನೆ ಮಾಡುವುದು ಸರಿಯಲ್ಲ. ಆದುದರಿಂದ ಪ್ರಿಯೇ, ನೀನೀಗ ವಾಯುದೇವರನ್ನು ಆಹ್ವಾನಿಸು".

ಪಾಂಡುರಾಜನ ಆಣತಿಯಂತೆ ಕುಂತೀದೇವಿಯು ಭಕ್ತಿಪೂರ್ವಕವಾಗಿ ಮಂತ್ರವನ್ನು ಜಪಿಸಿ, ಪ್ರಾರ್ಥಿಸಿದಳು. ಕೂಡಲೇ ಮುಖ್ಯಪ್ರಾಣದೇವರು ಪ್ರತ್ಯಕ್ಷರಾಗಿ ಕುಂತಿಯನ್ನು ಸ್ಪರ್ಶಿಸಿದರು. ಆ ಸ್ಪರ್ಶಮಾತ್ರದಿಂದ ಲೋಕದಲ್ಲಿ ಬಾಹುಬಲ ಮತ್ತು ಜ್ಞಾನಬಲಗಳೆರಡರಲ್ಲೂ, ಶ್ರೀಹರಿಭಕ್ತಿಯಲ್ಲಿಯೂ ಸಮರಾರೂ ಇಲ್ಲದ, ಮತ್ತು ತಮ್ಮ ಭಕ್ತಿಯಿಂದ ಶ್ರೀಹರಿಯನ್ನು ವಶಪಡಿಸಿಕೊಂಡಿರುವ ಶ್ರೀ ಮುಖ್ಯಪ್ರಾಣದೇವರಿಂದ ಅದೇ ಸಕಲ ಗುಣವಿಶಿಷ್ಟರಾದ ಪುತ್ರನು ಜನಿಸಿದನು. ವಾಯುದೇವರೇ ಪುತ್ರರಾಗಿ ಜನಿಸಿದರು. ಪುತ್ರರಾದ ಆ ವಾಯುದೇವರೇ ಧರಾತಲದಲ್ಲಿ ಭೀಮಸೇನೆಂಬ ಹೆಸರಿನಿಂದ ಖ್ಯಾತರಾದರು. ಎಲ್ಲಾ ವಿದ್ಯೆಗಳೂ ಅವರಲ್ಲಿ ಪರಿಪೂರ್ಣವಾಗಿರುವುದರಿಂದ ಅವರು ಭೀಮಸೇನನೆನಿಸಿದರು. (ಭೃತಾಃ ಮಾಃ ಯಸ್ಮಿನ್ ಇತಿ ಭೀಮಃ) ಭೀಮನು ಸರ್ವದಾ ಪ್ರಭುವಾದ ಶ್ರೀಹರಿಯಿಂದ ಕೂಡಿದವನು. ಅಂತೆಯೇ ಅವರು ಸೇನರು. (ಇನೇನ ಸಹಿತಃ ಸೇನಃ) ಸಕಲ ವಿದ್ಯೆಗಳನ್ನು ಧರಿಸಿರುವುದರಿಂದಲೂ (ಭೀಮಃ +) ಸರ್ವಪ್ರಭುವಾದ ಶ್ರೀ ಹರಿಪರಮಾತ್ಮನಿಂದ ಕೂಡಿರುವುದರಿಂದಲೂ (ಸೇನಃ = ) ಈ ವಾಯುನಂದನರು ಭೀಮಸೇನರೆನಿಸಿಕೊಂಡಿದ್ದಾರೆ. ಭೀಮಸೇನದೇವರು ಅವತರಿಸಿದ ಕೂಡಲೇ ಭೂಮಿಯು ಇಬ್ಭಾಗವಾಯಿತು! ಕುಂತೀದೇವಿಯು ಭೀಮನನ್ನು ಎತ್ತಿಕೊಂಡು ಬರುವಾಗ ಹುಲಿಯೊಂದರ ಗರ್ಜನೆಯನ್ನು ಕೇಳಿ ಬೆದರಿದ ಕುಂತಿದೇವಿಯ ಕರಗಳು ಕಂಪಿಸಿ ಭೀಮಸೇನದೇವರು ಪರ್ವತದ ಮೇಲೆ ಬಿದ್ದರು. ಭೀಮಸೇನರು ಶತಶೃಂಗಪರ್ವತದ ಮೇಲೆ ಬಿದ್ದ ಕೂಡಲೇ ಆ ಪರ್ವತದ ಅವಯವಗಳೆಲ್ಲವೂ ಚೂರ್ಣೀಕೃತವಾದವು. ಭೀಮಸೇನ ದೇವರು ಅವತರಿಸಿದ ಕೂಡಲೇ ವಾಹನ, ಸೈನ್ಯ ಸಮೇತರಾದ, ಪಾತಾಳಾದಿಗಳಲ್ಲಿರುವ ಮೂಲರೂಪದ ಮಹಾ ಅಸುರರು ಮತ್ತು ಆ ಅಸುರಪಕ್ಷದವರಾಗಿ ಭೂಮಿಯಲ್ಲಿ ಹುಟ್ಟಿದ ಅಸುರಸ್ವರೂಪರೂ ಆದ ಎಲ್ಲಾ ರಾಜರೂ ಭಯಗೊಂಡು ರಕ್ತಕಾರಿದರು.

ವಾಯುನಂದನರಾದ ವೃಕೋದರರು (ಭೀಮಸೇನದೇವರು) ದೇವತೆಗಳಿಗೂ ಋಷಿಮುನಿಗಳಿಗೂ ಆನಂದವನ್ನು ಅಭಿವೃದ್ಧಿಗೊಳಿಸುತ್ತಾ ಬದರಿಕಾಶ್ರಮದಲ್ಲಿಯೇ ಚೆನ್ನಾಗಿ ಅಭಿವೃದ್ಧರಾಗಹತ್ತಿದರು. ಇಲ್ಲಿ ವೃಕೋದರನೆಂದು ಭೀಮಸೇನ ದೇವರನ್ನು ಕರೆದಿರುವುದು ಸ್ವಾರಸಿಕವೂ, ಅರ್ಥಪೂರ್ಣವೂ ಆಗಿದೆ. "ವೃಕೋ ನಾಮ ಮಹಾವಹ್ನಿಃ" ಎಂಬ ಪ್ರಮಾಣದಂತೆ ವೃಕ ಎಂದರೆ ಅದೊಂದು ಮಹಾಅಗ್ನಿಯು. ಭೀಮಸೇನದೇವರ ಉದರದಲ್ಲಿ ವೃಕವಹ್ನಿಯಿರುವುದರಿಂದ ಅವರಿಗೆ ವೃಕೋದರ ಎಂದು ಹೆಸರು. ಅಂತೆಯೇ ಅವರು ಬಹುವಾಗಿ ಅನ್ನವನ್ನುಂಡರೂ ಜೀರ್ಣಿಸಿಕೊಳ್ಳುವ ಶಕ್ತಿಯುಳ್ಳವರಾಗಿದ್ದಾರೆ. ಈ ಸಾಮರ್ಥ್ಯವು ಬೇರಾರಿಗೂ ಇಲ್ಲ. ಏಕಚಕ್ರನಗರದಲ್ಲಿ ಬಂಡಿ ಅನ್ನವನ್ನುಂಡು ಬಕನ ಪ್ರಾಣವನ್ನು ಕೊಂದ ವಿಚಾರವನ್ನು ಇಲ್ಲಿ ನೆನೆಯಬಹುದು.

ನಿರ್ಣಯಾಚಾರ್ಯರೀಗ ಶೇಷದೇವರ ಅವತಾರಕ್ರಮವನ್ನು ನಿರೂಪಿಸುತ್ತಾರೆ.

ಹೆಸರಿನಿಂದ ಹುಟ್ಟಿದನು. ಆ ತರುವಾಯ ಅತಿಕಾಯನೆಂಬ ರಕ್ಕಸನು ವಿಕರ್ಣನಾಗಿ ಜನಿಸಿದನು. ಅನಂತರ ಬಲಿಷ್ಠನಾದ ಖರಾಸುರನು ಚಿತ್ರಸೇನನೆಂಬ ಹೆಸರಿನಿಂದುದಯಿಸಿದನು. ಇದರಂತೆಯೇ ಬಲು ಬಲವಂತರಾದ ಅನೇಕ ರಾಕ್ಷಸರು ಧೃತರಾಷ್ಟ್ರನಿಗೆ ಪುತ್ರರಾಗಿ ಜನಿಸಿದರು. ಗಡಿಗೆಯಲ್ಲಿದ್ದ ಮಾಂಸಪಿಂಡದಿಂದ ಹುಟ್ಟಿದ ಶರೀರವುಳ್ಳ ಆ ದುರ್ಯೋಧನಾದಿಗಳು, ಅಜ್ಞಾನ, ಶ್ರೀಹರಿದ್ವೇಷ ಮುಂತಾದ ಸಕಲ ದೋಷಗಳಿಗೂ ಅಭಿಮಾನಿಗಳಾದರು. ಇದರಂತೆ ಮೂಲರೂಪದಲ್ಲಿ 'ಮೃಷಾ' ಎಂಬ ಹೆಸರಿನ ಮತ್ತು ಅಮಾವಾಸ್ಯೆಗೆ ಅಭಿಮಾನಿನಿಯಾದ ಅಸುರಸ್ತ್ರೀಯು 'ದುಃಶಲಾ' ಎಂಬ ಹೆಸರಿನಿಂದ ಜನಿಸಿದಳು. ಪೂರ್ವದಲ್ಲಿ ಈ ಮೃಷಾ ಎಂಬ ಅಸುರಳು ರುದ್ರದೇವರನ್ನು ತಪಸ್ಸಿನಿಂದ ಮೆಚ್ಚಿಸಿ, ಅರ್ಜುನನ ಪುತ್ರನಾದ ಅಭಿಮನ್ಯುವಿನ ಮರಣಕ್ಕೆ ತಾನು ಕಾರಣಳಾಗಬೇಕೆಂಬ ವರವನ್ನು ಪಡೆದಿದ್ದಳು. ಅಂತೆಯೇ ಈಗ ಆ ಮೃಷಾ ಎಂಬ ಹೆಸರಿನ ಅಸುರಸ್ತ್ರೀಯೇ ಧೃತರಾಷ್ಟ್ರನಿಗೆ ಮಗಳಾಗಿ ದುಃಶಲಾ ಎಂಬ ಹೆಸರಿನಿಂದ ಹುಟ್ಟಿದಳು.

ಅಭಿಮನ್ಯುವನ್ನು ವಧಿಸಿದವನು ದುಶ್ಯಾಸನ ಪುತ್ರನು. ಆದ್ದರಿಂದ ಮೃಷೆಯು ಅವನ ವಧಕ್ಕಾಗಿ ಜನಿಸಿದಳೆಂದು ಹೇಳುವುದು ಕೂಡುವುದಿಲ್ಲವಲ್ಲಾ ಎಂದರೆ ಸಮಾಧಾನ ಹೇಳುತ್ತಾರೆ. ದುಃಶಲೆಯ ಪ್ರಚೋದನೆ ಮತ್ತು ಮಾತಿನಂತಯೇ ಜಯದ್ರಥನು ಅಭಿಮನ್ಯುವು ಚಕ್ರವ್ಯೂಹವನ್ನು ಪ್ರವೇಶಿಸಿದ ಮೇಲೆ ಅವನ ಸಹಾಯಕ್ಕಾಗಿ ಬಂದ ಪಾಂಡವರು ಮತ್ತು ಅವರ ಸೈನ್ಯವನ್ನು ಒಳಗೆ ಹೋಗದಂತೆ ತಡೆಹಿಡಿದಿದ್ದರಿಂದ ಅಸಹಾಯಕನಾದ ಅಭಿಮನ್ಯುವನ್ನು ದುಶ್ಯಾಸನನ ಮಗನು ಸಂಹರಿಸಿದನು. ಆದುದರಿಂದ ಅವನ ಮರಣಕ್ಕೆ ದುಃಶಲೆಯು ಕಾರಣಳಾದಳು. ಅದರಂತೆ ದುಃಶಲೆಯಿಂದ ಪ್ರೇರಿತನಾದ ಸೈಂಧವನೂ (ಜಯದ್ರಥನ) ಸಹ ಅಭಿಮನ್ಯುವಿನ ವಧೆಗೆ ಕಾರಣನಾದನು. ಆ ಜಯದ್ರಥನು ಮೂಲರೂಪದಲ್ಲಿ ಕಾಲಿಕೇಯ ಎಂಬ ದಾನವಗಣದಲ್ಲಿ ಒಬ್ಬನು. ಅವನು ಅಭಿಮನ್ಯುವನ್ನು ಸಂಹರಿಸಬೇಕೆಂದೇ ಭೂಮಿಯಲ್ಲಿ ಹುಟ್ಟಿದವನು.

ನಿಋುತಿದೇವನ ಸಹೋದರನು ದೇವತೆಗಳಲ್ಲಿ ನಿಋುತನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದವನು. ಅವನು ನಾಸಿಕಾ-ಗೋಳಕ್ಕೆ ಅಭಿಮಾನಿಯಾದ ವಾಯುದೇವರ ಸನ್ನಿಧಾನಯುಕ್ತನಾಗಿ ಯುಯುತ್ಸು ಎಂಬ ಹೆಸರಿನಿಂದ ಭೂಮಿಯಲ್ಲಿ ಜನಿಸಿದನು. ಅವನು ಸತ್ಕರ್ಮಾಚರಣಧುರಂಧರನು. ಈ ಯುಯುತ್ಸುವು ಅಂಬಿಕೆಯ ಮಗನಾದ ಧೃತರಾಷ್ಟ್ರನ ಮಡದಿಯಾದ ವೈಶ್ಯಸ್ತ್ರೀಯಲ್ಲಿ ಹುಟ್ಟಿದವನು. ಅವನು ಸುಯೋಧನನು ಹುಟ್ಟಿದ ಮೇಲೆ ಅವನಿಗೆ ತಮ್ಮನಾಗಿ ದುಶ್ಯಾಸನ ಹುಟ್ಟುವುದಕ್ಕೆ ಮೊದಲು, ಅವನಿಗೆ ಅಣ್ಣನಾಗಿ ಹುಟ್ಟಿದನು. ಅವನು ಶ್ರೀಹರಿಗೆ ಅತ್ಯಂತ ಪ್ರಿಯನು ಮತ್ತು ಭಕ್ತನು.

ಈಗ ಶ್ರೀ ವಾಯುದೇವರ ಅವತಾರಪ್ರಸಂಗವನ್ನು ನಿರೂಪಿಸುತ್ತಾರೆ.

ಅತ್ತ ಧರ್ಮರಾಜನು ಜನಿಸಿದ ತರುವಾಯ ಪಾಂಡುರಾಜನು ಕುಂತೀದೇವಿಯನ್ನು ಕುರಿತು ಹೀಗೆ ಹೇಳಿದನು. "ದೇವಿ! ಬಾಹುಬಲ ಮತ್ತು ಜ್ಞಾನಬಲಗಳಿಂದ ಮಾತ್ರವೇ ಧರ್ಮವು ರಕ್ಷಿಸಲ್ಪಡುವುದು. ಬಾಹುಬಲ ಹಾಗೂ ಜ್ಞಾನಬಲಗಳಿಲ್ಲದಿದ್ದರೆ ಧರ್ಮವು ನಾಶವಾಗುವುದು. ಆದಕಾರಣ ನೀನು ಈಗ ಬಾಹುಬಲ ಮತ್ತು ಜ್ಞಾನಬಲದಿಂದ ಯುಕ್ತನಾದ ಪುತ್ರನನ್ನು ಶೀಘ್ರವಾಗಿ ಪಡೆ". ಅಂಥವರಾರೆಂಬುದನ್ನು ಪಾಂಡುರಾಜ ಹೇಳುತ್ತಿದ್ದಾನೆ - "ಯಜ್ಞಗಳಲ್ಲಿ ಅಶ್ವಮೇಧವು ಶ್ರೇಷ್ಠವಾದದ್ದು. ತೇಜಸ್ಸುಗಳಲ್ಲಿ (ತೇಜಸ್ವಿಗಳಲ್ಲಿ ಭಾಸ್ಕರನು ಉತ್ತಮನು), ಚಾತುರ್ವರ್ಣ್ಯದವರಲ್ಲಿ ಬ್ರಾಹ್ಮಣನು ಶ್ರೇಷ್ಠನು. ಮನುಷ್ಯರಿಂದ ನೋಡಲು ಯೋಗ್ಯರಾದ ದೇವತೆಗಳಲ್ಲಿ (ಇಲ್ಲಿ ಇಂದ್ರಾದಿತೇಜೋ ವ್ಯಾವೃತ್ಯರ್ಥವಾಗಿ 'ಮನುಷ್ಯದೃಶ್ಯೇಷು' ಎಂದು ಹೇಳಿದ್ದಾರೆ.) ಮುಖ್ಯಪ್ರಾಣದೇವರು ಶ್ರೀ ಪುರುಷೋತ್ತಮನಾದ ಶ್ರೀಮನ್ನಾರಾಯಣನನ್ನು ಬಿಟ್ಟು ಅನಂತರ ಸಕಲ ಗುಣಗಳಿಂದ ಉತ್ತಮರಾಗಿದ್ದಾರೆ.

ಇಲ್ಲಿ ಪುರುಷೋತ್ತಮನಾದ ಶ್ರೀಮನ್ನಾರಾಯಣನನ್ನು ಬಿಟ್ಟು ವಾಯುದೇವರು ಸಕಲ ಗುಣಗಳಿಂದ ಉತ್ತಮರೆಂದು ಹೇಳಿದರಷ್ಟೇ? ಹಾಗಾದರೆ ವಾಯುದೇವರಿಗಿಂತ ಶ್ರೇಷ್ಠನಾದ ಪುರುಷೋತ್ತಮನಿಂದಲೇ ಪುತ್ರನನ್ನು ಪಡೆಯೆಂದು ಏಕೆ ಹೇಳಲಿಲ್ಲ? ಎಂಬುದನ್ನು ಪಾಂಡುರಾಜನೇ ಆದಕ್ಕೆ ಕಾರಣವನ್ನೂ ಹೇಳುತ್ತಿದ್ದಾನೆ.

"ಸರ್ವಸಮರ್ಥನೂ, ಅಪರಿಮಿತ ಪರಾಕ್ರಮಶಾಲಿಯೂ ಆದ ಶ್ರೀಹರಿಯು ಶ್ರೀ ವೇದವ್ಯಾಸರೂಪದಿಂದ ನನಗೆ ವಿಶೇಷವಾಗಿ (ವಿಚಿತ್ರವೀರ್ಯನಂತೆ ನಾಮಮಾತ್ರದಿಂದಲ್ಲ) ತಂದೆಯೇ ಆಗಿದ್ದಾರೆ. ಅವರಿಂದಲೇ ನನ್ನ ತಾಯಿಯು ನನ್ನನ್ನು ಪಡೆದಳಾದುದರಿಂದ ಅವರೆನಗೆ ತಂದೆಯು. ನಿನಗೆ ಅವರು ಮಾವನಾಗಬೇಕು. ನಿನಗೆ ಮಾವನಾದ ಅವರು ನಿನ್ನಲ್ಲಿ ಪುತ್ರೋತ್ಪಾದನೆ ಮಾಡುವುದು ಸರಿಯಲ್ಲ. ಆದುದರಿಂದ ಪ್ರಿಯೇ, ನೀನೀಗ ವಾಯುದೇವರನ್ನು ಆಹ್ವಾನಿಸು".

ಪಾಂಡುರಾಜನ ಆಣತಿಯಂತೆ ಕುಂತೀದೇವಿಯು ಭಕ್ತಿಪೂರ್ವಕವಾಗಿ ಮಂತ್ರವನ್ನು ಜಪಿಸಿ, ಪ್ರಾರ್ಥಿಸಿದಳು. ಕೂಡಲೇ ಮುಖ್ಯಪ್ರಾಣದೇವರು ಪ್ರತ್ಯಕ್ಷರಾಗಿ ಕುಂತಿಯನ್ನು ಸ್ಪರ್ಶಿಸಿದರು. ಆ ಸ್ಪರ್ಶಮಾತ್ರದಿಂದ ಲೋಕದಲ್ಲಿ ಬಾಹುಬಲ ಮತ್ತು ಜ್ಞಾನಬಲಗಳೆರಡರಲ್ಲೂ, ಶ್ರೀಹರಿಭಕ್ತಿಯಲ್ಲಿಯೂ ಸಮರಾರೂ ಇಲ್ಲದ, ಮತ್ತು ತಮ್ಮ ಭಕ್ತಿಯಿಂದ ಶ್ರೀಹರಿಯನ್ನು ವಶಪಡಿಸಿಕೊಂಡಿರುವ ಶ್ರೀ ಮುಖ್ಯಪ್ರಾಣದೇವರಿಂದ ಅದೇ ಸಕಲ ಗುಣವಿಶಿಷ್ಟರಾದ ಪುತ್ರನು ಜನಿಸಿದನು. ವಾಯುದೇವರೇ ಪುತ್ರರಾಗಿ ಜನಿಸಿದರು. ಪುತ್ರರಾದ ಆ ವಾಯುದೇವರೇ ಧರಾತಲದಲ್ಲಿ ಭೀಮಸೆಂಬ ಹೆಸರಿನಿಂದ ಖ್ಯಾತರಾದರು. ಎಲ್ಲಾ ವಿದ್ಯೆಗಳೂ ಅವರಲ್ಲಿ ಪರಿಪೂರ್ಣವಾಗಿರುವುದರಿಂದ ಅವರು ಭೀಮಸೇನೆನಿಸಿದರು. (ಭೃತಾಃ ಮಾಃ ಯಸ್ಮಿನ್ ಇತಿ ಭೀಮಃ) ಭೀಮನು ಸರ್ವದಾ ಪ್ರಭುವಾದ ಶ್ರೀಹರಿಯಿಂದ ಕೂಡಿದವನು. ಅಂತೆಯೇ ಅವರು ಸೇನರು. (ಇನೇನ ಸಹಿತಃ ಸೇನಃ) ಸಕಲ ವಿದ್ಯೆಗಳನ್ನು ಧರಿಸಿರುವುದರಿಂದಲೂ (ಭೀಮಃ +) ಸರ್ವಪ್ರಭುವಾದ ಶ್ರೀ ಹರಿಪರಮಾತ್ಮನಿಂದ ಕೂಡಿರುವುದರಿಂದಲೂ (ಸೇನಃ = ) ಈ ವಾಯುನಂದನರು ಭೀಮಸೇನರನಿಸಿಕಂಡಿದ್ದಾರೆ. ಭೀಮಸೇನದೇವರು ಅವತರಿಸಿದ ಕೂಡಲೇ ಭೂಮಿಯು ಇಬ್ಭಾಗವಾಯಿತು! ಕುಂತೀದೇವಿಯು ಭೀಮನನ್ನು ಎತ್ತಿಕೊಂಡು ಬರುವಾಗ ಹುಲಿಯೊಂದರ ಗರ್ಜನೆಯನ್ನು ಕೇಳಿ ಬೆದರಿದ ಕುಂತಿದೇವಿಯ ಕರಗಳು ಕಂಪಿಸಿ ಭೀಮಸೇನದೇವರು ಪರ್ವತದ ಮೇಲೆ ಬಿದ್ದರು. ಭೀಮಸೇನರು ಶತಶೃಂಗಪರ್ವತದ ಮೇಲೆ ಬಿದ್ದ ಕೂಡಲೇ ಆ ಪರ್ವತದ ಅವಯವಗಳೆಲ್ಲವೂ ಚೂರ್ಣಿಕೃತವಾದವು. ಭೀಮಸೇನ ದೇವರು ಅವತರಿಸಿದ ಕೂಡಲೇ ವಾಹನ, ಸೈನ್ಯ ಸಮೇತರಾದ, ಪಾತಾಳಾದಿಗಳಲ್ಲಿರುವ ಮೂಲರೂಪದ ಮಹಾ ಅಸುರರು ಮತ್ತು ಆ ಅಸುರಪಕ್ಷದವರಾಗಿ ಭೂಮಿಯಲ್ಲಿ ಹುಟ್ಟಿದ ಅಸುರಸ್ವರೂಪರೂ ಆದ ಎಲ್ಲಾ ರಾಜರೂ ಭಯಗೊಂಡು ರಕ್ತಕಾರಿದರು.

ವಾಯುನಂದನರಾದ ವೃಕೋದರರು (ಭೀಮಸೇನದೇವರು) ದೇವತೆಗಳಿಗೂ ಋಷಿಮುನಿಗಳಿಗೂ ಆನಂದವನ್ನು ಅಭಿವೃದ್ಧಿಗೊಳಿಸುತ್ತಾ ಬದರಿಕಾಶ್ರಮದಲ್ಲಿಯೇ ಚೆನ್ನಾಗಿ ಅಭಿವೃದ್ಧರಾಗಹತ್ತಿದರು. ಇಲ್ಲಿ ವೃಕೋದರನೆಂದು ಭೀಮಸೇನ ದೇವರನ್ನು ಕರೆದಿರುವುದು ಸ್ವಾರಸಿಕವೂ, ಅರ್ಥಪೂರ್ಣವೂ ಆಗಿದೆ. "ವೃಕೋ ನಾಮ ಮಹಾವಹ್ನಿಃ" ಎಂಬ ಪ್ರಮಾಣದಂತೆ ವೃಕ ಎಂದರೆ ಅದೊಂದು ಮಹಾಅಗ್ನಿಯು. ಭೀಮಸೇನದೇವರ ಉದರದಲ್ಲಿ ವೃಕವಹ್ನಿಯಿರುವುದರಿಂದ ಅವರಿಗೆ ವೃಕೋದರ ಎಂದು ಹೆಸರು. ಅಂತೆಯೇ ಅವರು ಬಹುವಾಗಿ ಅನ್ನವನ್ನುಂಡರೂ ಜೀರ್ಣಿಸಿಕೊಳ್ಳುವ ಶಕ್ತಿಯುಳ್ಳವರಾಗಿದ್ದಾರೆ. ಈ ಸಾಮರ್ಥ್ಯವು ಬೇರಾರಿಗೂ ಇಲ್ಲ. ಏಕಚಕ್ರನಗರದಲ್ಲಿ ಬಂಡಿ ಅನ್ನವನ್ನುಂಡು ಬಕನ ಪ್ರಾಣವನ್ನು ಕೊಂದ ವಿಚಾರವನ್ನು ಇಲ್ಲಿ ನೆನೆಯಬಹುದು.

ನಿರ್ಣಯಾಚಾರ್ಯರೀಗ ಶೇಷದೇವರ ಅವತಾರಕ್ರಮವನ್ನು ನಿರೂಪಿಸುತ್ತಾರೆ.

ಬ್ರಹ್ಮಾದಿ ದೇವತೆಗಳು ಶ್ರೀಹರಿಯನ್ನು ಅವತರಿಸುವಂತೆ ಪ್ರಾರ್ಥಿಸಿದ ಸಮಯದಲ್ಲೇ "ನೀನೂ ಭೂಮಿಯಲ್ಲಿ ಅವತರಿಸು" ಎಂದು ಶ್ರೀ ಹರಿಯ ಅಪ್ಪಣೆಯಂತೆ ಶೇಷದೇವರು ದೇವಕರಾಜನ ಮಗಳಾದ ದೇವಕಿಯ ಗರ್ಭದಲ್ಲಿ ಪ್ರವೇಶಿಸಿದರು. ಶೇಷದೇವರು ಭೀಮಸೇನದೇವರು ಅವತರಿಸುವುದಕ್ಕಿಂತ ಎಂಟು ತಿಂಗಳು ಮೊದಲು ದೇವಕೀದೇವಿಯ ಗರ್ಭವನ್ನು ಪ್ರವೇಶಿಸಿದರು. ದೇವಕೀದೇವಿಯ ಗರ್ಭದಲ್ಲಿ ಶೇಷದೇವರು ಮೂರು ತಿಂಗಳು ವಾಸಮಾಡಿದ ಮೇಲೆ ಶ್ರೀಹರಿಯ ಆಜ್ಞೆಯಂತೆ ದುರ್ಗಾದೇವಿಯು ದೇವಕೀದೇವಿಯ ಗರ್ಭದಿಂದ ಶೇಷದೇವರನ್ನು ಆಕರ್ಷಿಸಿ ರೋಹಿಣಿಯ ಗರ್ಭದಲ್ಲಿ ಸ್ಥಾಪಿಸಿದಳು. ಶೇಷದೇವರು ರೋಹಿಣಿಯ ಗರ್ಭದಲ್ಲಿ ಏಳುತಿಂಗಳ ಕಾಲ ವಾಸಮಾಡಿ ಅನಂತರ ಭೂಮಿಯಲ್ಲಿ ಅವತರಿಸಿದನು. ಆ ರೋಹಿಣೀಪುತ್ರನು ಬಲಯುಕ್ತನಾಗಿ ಹೆಸರಿನಿಂದ ಬಲದೇವನಾದನು. ಬಲರಾಮನು ಜನಿಸಿದ ಮೂರು ತಿಂಗಳ ತರುವಾಯ ಸರ್ವಸಮರ್ಥನೂ, ಸಕಲ ಸದ್ಗುಣೈಕಪೂರ್ಣನೂ ಆದ ಶ್ರೀಹರಿಯು ದೇವಕರಾಜನ ಪುತ್ರಿಯಾದ ದೇವಕೀದೇವಿಯಲ್ಲಿ ಆವಿರ್ಭವಿಸಿದನು.

ಸರ್ವಸಮರ್ಥನೂ ಸದ್ಗುಣೈಕಪೂರ್ಣನೂ ಆದ ಶ್ರೀಹರಿಪರಮಾತ್ಮನು ದೇವಕೀದೇವಿಯಲ್ಲಿ ಆವಿರ್ಭವಿಸಿದನು. ದೋಷರಹಿತಗಳಾದ ಸುಖ, ಜ್ಞಾನ ಮತ್ತು ಬಲಗಳೇ ಮುಖ್ಯ (ಕೇವಲ) ಶರೀರವಾಗುಳ್ಳ ಅರ್ಥಾತ್ ನಿರ್ದುಷ್ಟ ಜ್ಞಾನಾನಂದ ಬಲೈಕವಿಗ್ರಹನಾದ ಸರ್ವದಾ ಪಾರತಂತ್ರ್ಯಾದಿ ಸಮಸ್ತದೋಷ ಸಂಬಂಧರಹಿತವಾದ, ಸರ್ವದೇಶ-ಕಾಲಗಳಲ್ಲಿಯೂ ಮೂಲಪ್ರಕೃತಿ ಹಾಗೂ ಅದರ ಕಾರ್ಯವಾದ ಪಂಚಭೂತಗಳೂ ಮತ್ತು ಅವುಗಳ ವಿಕಾರಗಳ ಸಂಬಂಧವಿಲ್ಲದ ಶರೀರವುಳ್ಳ ಶ್ರೀಹರಿಯು ಅಜನೆನಿಸಿದ್ದಾರೆ. ಅಂದರೆ ಜನನರಹಿತನಾಗಿದ್ದಾನೆ. ಶುಕ್ಲಶೋಣಿತ ಸಂಬಂಧವಿಲ್ಲದ (ಅಪ್ರಾಕೃತ) ಶರೀರಿಯಾಗಿದ್ದರೂ ಅಪಂಡಿತರು ಅವನನ್ನು ಎಲ್ಲರಂತೆ ತಂದೆತಾಯಿಗಳ ಸಂಬಂಧದಿಂದ ಜನಿಸಿದವನೆಂದು ಅಜ್ಞಾನದಿಂದ ಹೇಳುತ್ತಾರೆ. ನಿರ್ದುಷ್ಟ ಸ್ವರೂಪಿಯಾದ ಶ್ರೀಹರಿಯು ಅಸುರಜನರನ್ನು ಮೋಹಗೊಳಿಸಲು ದೇವಕೀವಸುದೇವರಿಗೆ ಮಗನಾಗಿ ಜನಿಸಿದಂತೆ ನಟಿಸಿದ್ದಾನೆ. ಶ್ರೀಹರಿಯು ಮೊದಲು ವಸುದೇವನಲ್ಲಿ ಆವಿಷ್ಟನಾಗಿ ಅನಂತರ ಗರ್ಭಾದಾನ ಸಮಯದಲ್ಲಿ ದೇವಕಿಯ ಗರ್ಭವನ್ನು ಪ್ರವೇಶಿಸಿದನು. ಆವಿವೇಶ-ಎಂದಿರುವುದರಿಂದ ಶ್ರೀಹರಿಯು ಭೂತಾವೇಶದಂತೆ ವಸುದೇವದೇವಕಿಯರಲ್ಲಿ ಆವಿಷ್ಟನಾದವನೇ ವಿನಃ ಪ್ರಾಕೃತದೇಹಿಗಳು ಜನಿಸುವಂತೆ ಶುಕ್ಲ-ರೇತಸ್ಸು-ಶೋಣಿತಾದಿ ಸಂಬಂಧದಿಂದ ಉತ್ಪನ್ನನಾದನೆಂದು ತಿಳಿಯಬಾರದು. ಆವೇಶ ಮಾತ್ರವೇ ಹೊರತು ಸಾಮಾನ್ಯರಂತೆ ಜನಿಸಿದವನಲ್ಲ ಎಂದು ತಿಳಿಯಬೇಕು. ಶ್ರೀಹರಿಯು ದೇವಕಿಯ ಗರ್ಭದಲ್ಲಿ ಆವಿಷ್ಟನಾಗಿ ಏಳುತಿಂಗಳು ಮತ್ತು ಹದಿನೈದು ದಿನಗಳ ಕಾಲ ವಾಸಮಾಡಿ ಜನನರಹಿತನಾದ ಆ ಪ್ರಭುವು ಎಂಟನೆಯ ತಿಂಗಳಿನಲ್ಲಿ ಆವಿರ್ಭೂತನಾದನು.

ಹಿಂದೆ ಶ್ರೀ ಹರಿಯು ಹಿರಣ್ಯಕಶ್ಯಪನ ಸಭೆಯಲ್ಲಿ ಸ್ತಂಭದಲ್ಲಿ ಶ್ರೀನರಸಿಂಹರೂಪದಿಂದ ಆವಿರ್ಭವಿಸಿ ತಾನು ಶುಕ್ಲಶೋಣಿತ, ರೇತಸ್ಸುಗಳ ಸಂಬಂಧವಿಲ್ಲದವನು, ಅಜನು ಎಂಬುದನ್ನು ಜಗತ್ತಿಗೆ ತೋರಿಸಿಕೊಟ್ಟಿದ್ದಾನೆ. ಶುಕ್ಲಶೋಣಿತ ಸಂಬಂಧವಿಲ್ಲದೆ ಸ್ತಂಭದಲ್ಲಿ ನೃಸಿಂಹರೂಪದಿಂದ ಆವಿರ್ಭವಿಸಿದಂತೆಯೇ ಶ್ರೀಕೃಷ್ಣನು ಸಹ ಶುಕ್ಲಶೋಣಿತ ಸಂಬಂಧರಹಿತನಾಗಿ ಆವಿರ್ಭವಿಸಿದನು. ಆದರೂ ಅಜಭವಾದಿವಂದ್ಯನಾದ, ಅಜನಾದ ಆ ಅಧೋಕ್ಷಜನು (ಶ್ರೀಕೃಷ್ಣನು) ಮಾತಾಪಿತೃ ಸಂಬಂಧದಿಂದ ಜನಿಸಿದವನಂತೆ ನಟಿಸಿ ಅಸುರರನ್ನು ಮೋಹಗೊಳಿಸಿದ್ದಾನೆ. ಶ್ರೀಹರಿಯು ದೈತ್ಯಮೋಹನಾರ್ಥವಾಗಿ ಪಿತೃಕ್ರಮವನ್ನು ಹೊಂದಿದರೂ ತಂದೆಯಮೂಲಕ ತಾಯಿಯಗರ್ಭವನ್ನು ಸೇರಿದ್ದರೂ ಅವನ ಶರೀರವು ಶುಕ್ಲ ಶೋಣಿತದಿಂದ ಹುಟ್ಟಿದುದಲ್ಲ. ಇದನ್ನು ಸ್ಪಷ್ಟಗೊಳಿಸಿ ಮಾತಾಪಿತೃಗಳಿಗೆ ಸ್ವವಿಷಯಕ ವಿಶೇಷಜ್ಞಾನವನ್ನು ಕರುಣಿಸಲು ಶ್ರೀಹರಿಯು ಶಂಖ, ಚಕ್ರ, ಪದ್ಮ, ಗದಾದಿಗಳಿಂದ ಚತುರ್ಭುಜಯುಕ್ತನಾಗಿ ಪ್ರಾದುರ್ಭವಿಸಿ ತಂದೆತಾಯಿಗಳಿಗೆ ದರ್ಶನವಿತ್ತನು.

ಎಣೆಸಲಳವಲ್ಲದ ಅನಂತಸೂರ್ಯರ ಕಾಂತಿಯಂತೆಸೆವ ತೇಜಸ್ಸಿನಿಂದ ಶೋಭಿಸುವ ಕಿರೀಟ, ಮಿಂಚಿನ ಗೊಂಚಲಿನಂತೆ ಚಂಚಲವಾದ ಕುಂಡಲಗಳಿಂದ ಯುಕ್ತನಾಗಿ, ಕಮನೀಯ ಪೀತಾಂಬರ, ವೈಜಯಂತೀಮಾಲೆ - ಇವುಗಳನ್ನು ಧರಿಸಿದ ಶ್ರೀಹರಿಯು ಮೋಡ, ಕತ್ತಲು, ರಾಹುಗಳ ಸಂಬಂಧವಿಲ್ಲದ ಶೋಭನಕರಾನೇಕ ಸೂರ್ಯರಿಗಿಂತ ಶ್ರೇಷ್ಠವಾದ ಕಾಂತಿ ಪರಿಪೂರ್ಣನು. ಸದ್ಗುಣಸಾಗರನು. ಇಂತು ವೈಭವೋಪೇತನಾದ ಭಗವಂತನು ಚತುರ್ಭುಜಮೂರ್ತಿಯಾಗಿ ಶಂಖ, ಪದ್ಮ, ಚಕ್ರ, ಗದಾ, ಕಿರೀಟ, ಕುಂಡಲ, ಹಾರ, ಪೀತಾಂಬರಧಾರಿಯಾಗಿ ವಸುದೇವ-ದೇವಕಿಯರಿಗೆ ತನ್ನ ದಿವ್ಯದರ್ಶನವನ್ನು ಕರುಣಿಸಿದನು.

ಭಾಗವತದಲ್ಲಿ ಶ್ರೀಕೃಷ್ಣಾವತಾರವನ್ನು ಇಂತು ಬಣ್ಣಿಸಿದ್ದಾರೆ.

**"ತಮದ್ಭುತಂ ಬಾಲಕಮಂಬುಜೇಕ್ಷಣಂ ಚತುರ್ಭುಜಂ ಶಂಖಗದಾದ್ಯುದಾಯುಧಮ್ ।**
**ಶ್ರೀವತ್ಸಲಕ್ಷಂ ಗಲಶೋಭಿ ಕೌಸ್ತುಭಂ ತ್ವಿಷಾಪರಿಷ್ವಕ್ತ ಸಹಸ್ರಕುಂಡಲಮ್ ।**
**ಉದ್ದಾಮಕಾಂಚ್ಯಂಗದ ಕಂಕಣಾದಿಭಿಃ ವಿರೋಚಮಾನಂ ವಸುದೇವ ಐಕ್ಷತ" ॥**

ಕಮಲಸಂಭವನಾದ ಚತುರ್ಮುಖದೇವರೇ ಮೊದಲಾದ ವೃಂದಾರಕವೃಂದದಿಂದ ಸ್ತುತಿಸಿಕೊಳ್ಳುವ ಶ್ರೀಹರಿಯು ವಸುದೇವದೇವಕಿಯರಿಂದ ಸ್ತೋತ್ರಮಾಡಿಸಿಕೊಂಡನು. ಅನಂತರ ಶ್ರೀಕೃಷ್ಣನು ಶೂರಸುತನಾದ ವಸುದೇವನಿಗೆ "ನನ್ನನ್ನು ನಂದಗೋಪನ ಮನೆಗೆ ತೆಗೆದುಕೊಂಡು ಹೋಗು" ಎಂದು ಆಜ್ಞಾಪಿಸಿ ಚತುರ್ಭುಜನಾದ ಆ ಜನಾರ್ದನನು ತಕ್ಷಣವೇ ಸಾಮಾನ್ಯ ಶಿಶುವಿನಂತೆ ಎರಡುಭುಜಗಳಿಂದಯುಕ್ತನಾಗಿ ಶಯ್ಯೆಯಲ್ಲಿ ಶೋಭಿಸಿದನು.

ವಸುದೇವ-ದೇವಕಿಯರಿಗೆ ಶ್ರೀಹರಿಯು ಪ್ರಾದುರ್ಭವಿಸಿದ ಸಮಯದಲ್ಲೇ ಅಂದರೆ ಶ್ರೀಕೃಷ್ಣನು ಅವತರಿಸಿದ ಸ್ವಲ್ಪ ಕಾಲದಲ್ಲಿಯೇ ಅತ್ತ ಶ್ರೀಕೃಷ್ಣನ ಆಜ್ಞಾನುಸಾರವಾಗಿ 'ದುರ್ಗಾ' ಎಂಬ ಹೆಸರುಳ್ಳ ಶ್ರೀ ಲಕ್ಷ್ಮೀದೇವಿಯು ಶ್ರೀಹರಿಗೆ ಅನುಕೂಲಳಾಗಿ ಸೇವೆ ಸಲ್ಲಿಸಲೋಸುಗ ನಂದಗೋಪನ ಪತ್ನಿಯಾದ ಯಶೋದಾದೇವಿಯಲ್ಲಿ ಅವತರಿಸಿದಳು. ಶ್ರೀಕೃಷ್ಣನು ದ್ವಿಭುಜಶಿಶುವಾಗಿ ಪ್ರಕಟವಾದ ಕೂಡಲೇ, ವಸುದೇವನು ಪರಮಾತ್ಮನ ಆಣತಿಯಂತೆ ಶ್ರೀಕೃಷ್ಣನನ್ನು ಆ ಅರ್ಧ-ರಾತ್ರಿಯಲ್ಲಿಯೇ ನಂದಗೋಪನ ಮನೆಗೆ ಕರೆದೊಯ್ದನು. ವಸುದೇವನು ಕೃಷ್ಣನನ್ನು ನಂದಗೋಪನ ಶಯ್ಯೆಯಲ್ಲಿಟ್ಟು ಆಗತಾನೇ ಯಶೋದಾದೇವಿಯಲ್ಲಿ ಪ್ರಾದುರ್ಭವಿಸಿದ್ದ ಶ್ರೀದುರ್ಗಾದೇವಿಯನ್ನು ಎತ್ತಿಕೊಂಡು ತನ್ನ ಮನೆಗೆ ಆಗಮಿಸಿದನು. ಕಂಸನು ಈವರೆವಿಗೆ ಸೋದರಿಯಾದ ದೇವಕಿಯ ಆರೂಜನ ಮಕ್ಕಳನ್ನು ಜನಿಸಿದ ಕ್ಷಣದಲ್ಲಿಯೇ ಸಂಹರಿಸಿದ್ದನು. ಸೇವಕರಿಂದ ದೇವಕಿಯು ಈಗ ಪ್ರಸವಿಸಿದ ವಿಚಾರವನ್ನು ತಿಳಿದು ಕೂಡಲೇ ಆ ಶಿಶುವನ್ನು ಸಂಹರಿಸಲು ಸೂತಿಕಾಗೃಹಕ್ಕೆ ಧಾವಿಸಿದನು.

ಕಂಸನು ಈವರೆಗೆ ಆರು ಶಿಶುಗಳನ್ನು ಸಂಹರಿಸಿದ್ದನು. ಈಗ ಜನಿಸಿದ್ದು ಏಳನೆಯ ಮಗುವಾಗಬೇಕಷ್ಟೇ? ಅದನ್ನು ಅವನು ಎಂಟನೆಯದೆಂದು ಹೇಗೆ ತಿಳಿದನೆಂಬ ಶಂಕೆಯನ್ನು ಈಗ ಶ್ರೀನಿರ್ಣಯಾಚಾರ್ಯರು ಪರಿಹರಿಸುತ್ತಿದ್ದಾರೆ.

ದೇವಕಿಯ ಏಳನೆಯ ಗರ್ಭದಲ್ಲಿ ಶೇಷ (ಬಲರಾಮ) ದೇವರಿರುವಾಗ ಶ್ರೀ ಹರಿಯ ಅಪ್ಪಣೆಯಂತೆ ದುರ್ಗಾದೇವಿಯು ಶೇಷದೇವನನ್ನು (ಗರ್ಭವನ್ನು) ದೇವಕಿಯ ಗರ್ಭದಿಂದ ಆಕರ್ಷಿಸಿ ರೋಹಿಣಿಯ ಗರ್ಭದಲ್ಲಿ ಸ್ಥಾಪಿಸಿದಳು. ಇದು ಹೀಗಾದ್ದರಿಂದ ಜನರು ದೇವಕಿಗೆ ಗರ್ಭಸ್ರಾವವಾಯಿತೆಂದು ತಿಳಿದರು ಮತ್ತು ಅದರಂತೆ ಹೇಳಹತ್ತಿದರು. ಹೀಗೆ ದೇವಕಿಯ ಏಳನೆಯ ಮಗುವು ಗರ್ಭಸ್ರಾವದಿಂದ ನಷ್ಟವಾಯಿತೆಂದು ಕಂಸನು ತಿಳಿದನು. ಅಂತೆಯೇ ಈಗ ಜನಿಸಿದ ಮಗುವು ಎಂಟನೆಯದೆಂದು ತಿಳಿದು 'ಅಷ್ಟಮಪುತ್ರನಿಂದ ತನಗೆ ಮರಣ'ವಾಗುವುದೆಂದು ಭೀತನಾಗಿದ್ದ ಕಂಸನು

ಮೊದಲು ಆ ಶಿಸುವನ್ನು ಸಂಹರಿಸಬೇಕೆಂದು ಸೂತಿಕಾಗೃಹಕ್ಕೆ ಬಂದು ದೇವಕಿಯ ಮಗ್ಗುಲಿನಲ್ಲಿ ಮಲಗಿದ್ದ ಶಿಶುರೂಪಳಾದ ದುರ್ಗಾದೇವಿಯನ್ನು ಎಂಟನೆಯ ಮಗುವೆಂದು ಬಗೆದು ಅದರ ಎರಡೂ ಪಾದಗಳನ್ನು ಹಿಡಿದು ಅಲ್ಲಿಯೇ ಇದ್ದ ಬಂಡೆಗಲ್ಲಿಗೆ ಅಪ್ಪಳಿಸಿ ಕೊಲ್ಲಲು ಉದ್ಯುಕ್ತನಾದನು. ಆ ಕೂಡಲೇ ದುರ್ಗಾದೇವಿಯು ಕಂಸನ ಕರಗಳಿಂದ ಅಂಬರಕ್ಕೆ ಜಿಗಿದು ಅಷ್ಟಭುಜಗಳಿಂದ ಯುಕ್ತಳಾಗಿ ರೂಪಲಾವಣ್ಯ ತಾರುಣ್ಯಗಳಿಂದ ಶೋಭಿಸಿ, ಬ್ರಹ್ಮಾದಿ ದೇವತೆಗಳಿಂದ ಪೂಜೆಗೊಳ್ಳುವವಳೂ, ಲೋಕವಿಲಕ್ಷಣ ಸ್ವರೂಪಳೂ, ಶ್ರೀಹರಿಯ ಪ್ರಿಯಳೂ ಆದ ಆ ಲೋಕಮಾತೆಯು ಆಕಾಶದಲ್ಲಿ ತನ್ನ ವಿಲಕ್ಷಣತೇಜಸ್ಸು-ಕಾಂತಿಗಳಿಂದ ಕಂಗೊಳಿಸುತ್ತಾ ಧರಣಿಯ ಜನರಿಗೆ ದರ್ಶನವಿತ್ತಳು. ಮತ್ತು ಕಂಸನನ್ನು ಕುರಿತು "ಎಲವೋ ಪಾಪರೂಪನಾದ ಕಂಸನೇ! ನಿನ್ನನ್ನು ಸಂಹರಿಸುವ ಪ್ರಭುವು ಬೇರೊಂದೆಡೆಯಲ್ಲಿ ಅವತರಿಸಿದ್ದಾನೆ! ಮೂರ್ಖ, ಯಾವ ಅಪರಾಧವನ್ನೂ ಮಾಡದ ನನ್ನನ್ನು ವ್ಯರ್ಥವಾಗಿ ಸಂಹರಿಸಲು ಆಶಿಸುತ್ತಿರುವೆಯಲ್ಲವೆ? ನನ್ನನ್ನು ಸಂಹರಿಸುವುದು ನಿನ್ನಿಂದಾಗದ ಕಾರ್ಯ! ನಿನ್ನೀ ಪ್ರಯತ್ನವು ವ್ಯರ್ಥವಾದುದು" ಎಂದು ಹೇಳಿ ಶ್ರೀದುರ್ಗಾದೇವಿಯು ಪುನಃ ಶಿಶುರೂಪತಾಳಿ ಸುಪ್ತಳಾದವಳಂತೆ ದೇವಕಿಯ ಹಾಸಿಗೆಯಲ್ಲಿ ಮಲಗಿದಳು. ದುರ್ಗಾದೇವಿಯು ಶಯ್ಯೆಯಲ್ಲಿ ಪವಡಿಸಿದ ಮೇಲೆ ಈ ಭೂಮಿಯಲ್ಲಿ ವಸುದೇವದೇವಕಿಯರ ಹೊರತು ಬೇರಾರೂ ಆ ಮಗುವನ್ನು ಗುಣಮಂಡಿತಳಾದ ದುರ್ಗಾದೇವಿಯೆಂದು ಅರಿಯದಾದರು.

ದುರ್ಗಾದೇವಿಯ ವಚನವನ್ನನುಸರಿಸಿ ಕಂಸನು ತಂಗಿಯಾದ ದೇವಕಿ ಮತ್ತು ಭಾವ ವಸುದೇವರಿಗೆ ತಾನು ವ್ಯರ್ಥವಾಗಿ ದುಃಖವನ್ನುಂಟುಮಾಡಿದೆನೆಂಬ ಪಶ್ಚಾತ್ತಾಪದಿಂದ ನೊಂದು ವಸುದೇವದೇವಕಿಯರನ್ನು ಸ್ವತಂತ್ರಗೊಳಿಸಿ ಮೃದುವಚನಗಳಿಂದ ಸಂತೈಸಿ ಸಂತೋಷಗೊಳಿಸಿದನು. ವಸುದೇವ ದೇವಕಿಯರು ಕಂಸನೆಸಗಿದ ದುಷ್ಕೃತ್ಯಗಳನ್ನು ಮರೆತು, ಕೋಪರಹಿತರಾಗಿ "ರಾಜನ್! ಸುಖ-ದುಃಖಗಳನ್ನು ನೀಡುವವನು, ಶ್ರೀಹರಿವಾಸುದೇವನಲ್ಲದೆ ಮತ್ತಾರೂ ಅಲ್ಲ. ಇದಕ್ಕಾಗಿ ನೀನು ಚಿಂತಿಸದಿರು" ಎಂದು ಸಮಾಧಾನ ಹೇಳಿದರು.

ತರುವಾಯ ಕಂಸನು ಅರಮನೆಗೆ ತೆರಳಿ ಎಲ್ಲ ಮಂತ್ರಿಗಳನ್ನೂ ಆಹ್ವಾನಿಸಿ ಅವರೆಲ್ಲರಿಗೂ ಜರುಗಿದ ಅದ್ಭುತ ವ್ಯಾಪಾರವನ್ನೂ, ದುರ್ಗಾದೇವಿಯು ಹೇಳಿದ ಮಾತನ್ನೂ ತಿಳಿಸಿ ಮುಂದೇನು ಮಾಡುವುದೆಂದು ಅವರೊಡನೆ ಮಂತ್ರಾಲೋಚನೆ ಮಾಡಿದನು. ಮಹಾಕ್ರೂರಿಗಳೂ, ಪಾಪಿಷ್ಠರೂ ಆದ ಆ ಮಂತ್ರಿಗಳು ತಮ್ಮ ರಾಜ್ಯದಲ್ಲಿ ಆಗ ತಾನೇ ಜನಿಸಿದ ಎಲ್ಲಾ ಶಿಶುಗಳನ್ನೂ ಸಂಹಾರ ಮಾಡಿಬಿಡಬೇಕು – ಎಂದು ಸಲಹೆ ನೀಡಿದರು. ಕಂಸನು ಅವರ ಮಾತಿಗೆ ಒಪ್ಪಿ ಎಲ್ಲಾ ಶಿಶು-ಬಾಲಕರನ್ನೂ ಸಂಹರಿಸುವ ಕಾರ್ಯವನ್ನು ತ್ವರೆಯಿಂದೆಸಗಲು ಅವರಿಗೆ ಆದೇಶ ನೀಡಿ ತನ್ನ ವಿಶ್ರಾಂತಿಮಂದಿರಕ್ಕೆ ತೆರಳಿದನು. ಸ್ವಾಭಾವಿಕವಾಗಿಯೇ ಸರ್ವದಾ ಹಿಂಸಾಚಾರರತರಾದ ಆ ದುರ್ಮಂತ್ರಿಗಳು ದೇಶದಲ್ಲೆಲ್ಲಾ ಸಂಚರಿಸುತ್ತಾ, ಶಿಶುಗಳನ್ನೂ, ಸಣ್ಣಪುಟ್ಟ ಬಾಲಕರನ್ನೂ ಸಂಹರಿಸುವ ದುಷ್ಟಕಾರ್ಯದಲ್ಲಿ ಸದಾ ಪ್ರವೃತ್ತರಾದರು.

ಇತ್ತ ನಂದಗೋಪನ ಮನೆಯಲ್ಲಿ ಬೆಳಗಾದ ಕೂಡಲೇ ಮೇಲೆದ್ದ ನಂದಗೋಪ-ಯಶೋದೆಯರು ಶಯ್ಯೆಯಲ್ಲಿ ಪವಡಿಸಿ ಕಂಗೊಳಿಸುತ್ತಿರುವ, ಕಮಲದಳಗಳಂತೆ ವಿಸ್ತಾರವಾದ ನಯನಗಳಿಂದ ಶೋಭಿಸುವ, ಆನಂದಸಾಂದ್ರನೂ, ಅಪ್ರಮೇಯನೂ ಆದ ಶ್ರೀಕೃಷ್ಣನನ್ನು ಕಂಡು ಪರಮಾನಂದದಿಂದ ನಲಿದಾಡಿದರು. ಕಮಲಸಂಭವನಾದ ನಾಲ್ಮೊಗನನ್ನು ಸೃಜಿಸುವ ಮಹಾಮಹಿಮನೂ ಸಮಸ್ತಚರಾಚರಪ್ರಪಂಚಕ್ಕೆ ಪ್ರಭುವೂ ಆದ ಶ್ರೀಕೃಷ್ಣನನ್ನು ಯಶೋದಾ-ನಂದಗೋಪರು ತಮ್ಮ ಮಗನೆಂದು ತಿಳಿದರು. ಪುತ್ರೋತ್ಪತ್ತಿಯಿಂದ ಪೂರ್ಣ ಮನೋರಥನಾದ ನಂದಗೋಪನು ಪರಮಾನಂದಭರಿತನಾಗಿ ಲಕ್ಷಗಟ್ಟಲೆ ಗೋವುಗಳನ್ನು ದಾನಮಾಡಿದನು. ಗೋಕ್ಷೀರಾದಿಗಳಿಂದ ಜೀವಿಸುವ ಗೊಲ್ಲಸಮುದಾಯಕ್ಕೆ ಅಧಿಪತಿಯಾದ ನಂದಗೋಪನು ಸುವರ್ಣರತ್ನಾಭರಣಗಳಿಂದ ಅಲಂಕೃತವಾದ ಗೋವುಗಳನ್ನು ಬ್ರಾಹ್ಮಣರಿಗೆ ದಾನಮಾಡಿದನು. ಆ

ತರುವಾಯ ಪುತ್ರೋತ್ಸವದ ಮಂಗಳಸಂದರ್ಭದಲ್ಲಿ ಉಡುಗೊರೆಗಳನ್ನು ಕೊಡುವ ವಾಡಿಕೆಯಂತೆ ಸಕಲ ಗೊಲ್ಲರೂ ಮತ್ತು ಗೋಪಸ್ತ್ರೀಯರು ವಸ್ತ್ರಾದಿ ಉಪಾಯನಗಳೊಡನೆ ಬಂದು ನಂದಗೋಪ-ಯಶೋದಾದೇವಿಯರಿಗೆ ಉಡುಗೊರೆಗಳನ್ನಿತ್ತು ಪುತ್ರೋತ್ಸವವಾದುದಕ್ಕೆ ಅವರನ್ನು ಅಭಿನಂದಿಸಿ ತಮ್ಮ ಆನಂದವನ್ನು ವ್ಯಕ್ತಪಡಿಸಿದರು.

ಹೀಗೆ ಆನಂದದಿಂದ ಮೂವತ್ತು ದಿನಗಳನ್ನು ಕಳೆದು ನಂದಗೋಪನು ರಾಜಾಧಿರಾಜನಾದ ಕಂಸನನ್ನು ಕಾಣಲು ಯಮುನಾತೀರದ ತನ್ನ ಬಿಡಾರದಿಂದ ಮಧುರೆಗೆ ತೆರಳಿದನು.

ಬೃಹದ್ವನದಲ್ಲಿ ವಾಸಿಸುತ್ತಿದ್ದ ನಂದಗೋಪನು ಬೃಹದ್ವನವನ್ನು ಬಿಟ್ಟು ಯಮುನಾತೀರದಲ್ಲಿ ವಾಸಮಾಡಿದ್ದ ಕಾರಣವನ್ನೀಗ ನಿರೂಪಿಸುತ್ತಾರೆ.

ಯಶೋದೆಯು ಪ್ರಸವಿಸುವುದಕ್ಕೆ ಮೊದಲು ರಾಜಾಧಿರಾಜನಾದ ಕಂಸನಿಗೆ ಕಪ್ಪಕಾಣಿಕೆಗಳನ್ನು ಒಪ್ಪಿಸಲು ಮಧುರೆಗೆ ಹೊರಡಲು ಪತಿಯು ಸಿದ್ಧನಾದಾಗ ಯಶೋದಾದೇವಿಯು ಅವನೊಡನೆ ಹೊರಡುವುದಾಗಿ ಹೇಳಿದಳು. ನಂದಗೋಪನು ಪತ್ನಿಯನ್ನೂ ಮಿತಪರಿವಾರದವರನ್ನೂ ಕರೆದುಕೊಂಡು ಮಹಾವನ (ಬೃಹದ್ವನ)ದಿಂದ ಹೊರಟು ಮಧುರಾನಗರಕ್ಕೆ ಹೋಗುವ ರಾಜಮಾರ್ಗ ಸೇರಲು ಯಮುನಾನದಿಯ ತೀರಕ್ಕೆ ಬಂದನು. ಆಗಲೇ ಯಶೋದೆಗೆ ಪ್ರಸವವೇದನೆ ಪ್ರಾರಂಭವಾಯಿತು. ಆದ್ದರಿಂದ ನಂದಗೋಪನ ಅಪ್ಪಣೆಯಂತೆ ಯಮುನಾತೀರದ ಮಧುರೆಯ ರಾಜಮಾರ್ಗದ ಬಯಲಿನಲ್ಲಿ ವಸನಮಂದಿರ (ಡೇರೆ)ಗಳನ್ನು ನಿರ್ಮಿಸಲಾಯಿತು. ಅಂದುರಾತ್ರಿಯೇ ಯಶೋದಾದೇವಿಯು ದುರ್ಗಾ-ದೇವಿಯನ್ನು ಪ್ರಸವಿಸಿದಳು. (ದುರ್ಗಾದೇವಿಯು ಆವಿರ್ಭವಿಸಿದಳೆಂದು ತಿಳಿಯಬೇಕು). ನಂದಪತ್ನಿಯು ಪ್ರಸವಿಸಿ-ದ್ದರಿಂದ ಆ ಉತ್ಸವವು ಪೂರ್ಣವಾಗುವರರೆಗೆ ಯಮುನಾತೀರದ ವಸನಮಂದಿರ (ಗುಡಾರ)ದಲ್ಲಿಯೇ ವಾಸಿಸಿರಲು ನಂದಾದಿಗಳು ನಿಶ್ಚಯಿಸಿದರು. ಅಂದುರಾತ್ರಿಯೇ ಶ್ರೀಕೃಷ್ಣನ ಆಜ್ಞೆಯಂತೆ ವಸುದೇವನು ಶ್ರೀಕೃಷ್ಣನನ್ನು ನಂದಗೋಕುಲಕ್ಕೆ ಕರೆದೊಯ್ಯಲು ಹೊರಟು ಯಮುನಾತೀರದ ವಸನಗೃಹದಲ್ಲಿಯೇ ಯಶೋದೆಯು ಪ್ರಸವಿಸಿರುವುದನ್ನು ಅರಿತು ಶಯ್ಯೆಯಲ್ಲಿ ನಿದ್ರಾಸಕ್ತಳಾಗಿ ಮಲಗಿರುವ ಯಶೋದೆಯ ಪಕ್ಕದಲ್ಲಿ ಶ್ರೀಕೃಷ್ಣನನ್ನು ಮಲಗಿಸಿ ಅಲ್ಲಿದ್ದ ದುರ್ಗಾದೇವಿಯನ್ನು ಎತ್ತಿಕೊಂಡು ಮಧುರೆಗೆ ಆ ರಾತ್ರಿಯೇ ಹಿಂದಿರುಗಿದ್ದನು.

ಹೀಗೆ ನಂದಗೋಪನು ಮೂವತ್ತು ದಿವಸಗಳ ಕಾಲ ಯಮುನಾತೀರದ ವಸ್ತ್ರಸದನದಲ್ಲಿ ವಾಸಮಾಡಿ ಅನಂತರ ಕಂಸನನ್ನು ಕಂಡು ಕಪ್ಪಕಾಣಿಕೆಗಳನ್ನು ಸಲ್ಲಿಸಲು ಮಧುರಾನಗರಿಗೆ ಬಂದು ಕಂಸನಿಗೆ ಕಪ್ಪಕಾಣಿಕೆಗಳನ್ನು ಒಪ್ಪಿಸಿದನು. ಆ ಕಾಲದಲ್ಲಿ ನಂದಗೋಪನನ್ನು ಕಂಡ ವಸುದೇವನು ಯಶೋದಾದೇವಿಯು ವಾಸಿಸುವ ಸ್ಥಳದಲ್ಲಿ ಉತ್ಪಾತ-ಗಳಾಗುತ್ತಿವೆಯೆಂದೂ, ಜಾಗ್ರತೆಯಾಗಿ ಅಲ್ಲಿಗೆ ಹೋಗುವಂತೆಯೂ ಹೇಳಿದನು. ನಂದಗೋಪನು ಶೂರಸುತನ ಮಾತಿನಂತೆ ತ್ವರೆಯಿಂದ ಯಮುನಾನದಿಯ ತೀರಕ್ಕೆ ಪ್ರಯಾಣ ಬೆಳೆಸಿದನು. ಇಂತು ರಾತ್ರಿಯಲ್ಲಿಯೇ ಯಮುನೆಯ ದಡಕ್ಕೆ ನಂದಗೋಪನು ಬರುತ್ತಿರುವಷ್ಟರಲ್ಲಿಯೇ ಕಂಸನ ಸಾಕುತಾಯಿಯಾದ ಪೂತನೆಯೆಂಬ ರಕ್ಕಸಿಯು ಕೃಷ್ಣನನ್ನು ಸಂಹರಿಸಲು ನಂದಗೋಕುಲಕ್ಕೆ ಹೋದಳು.

ಕಂಸನ ಉಪಮಾತೆಯಾದ ಪೂತನೆಯು ತನ್ನ ರಾಕ್ಷಸಮಾಯೆಯಿಂದ ತನ್ನ ಸ್ವರೂಪವನ್ನು ಮರೆಮಾಚಿ ಸುಂದರ ತರುಣಿಯ ರೂಪಧರಿಸಿ ಬೃಹದ್ವನಕ್ಕೆ ಹೋಗುವ ಯಮುನಾತಟದ ಬಳಿಯ ಮಧುರೆಯ ರಾಜಮಾರ್ಗದಲ್ಲಿ ನಿರ್ಮಿತವಾಗಿದ್ದ ನಂದಗೋಪನ 'ವಸನಗೃಹ'ವನ್ನು ಪ್ರವೇಶಿಸಿದಳು. ಅಲ್ಲಿ ಶಯ್ಯೆಯಲ್ಲಿ ಯಶೋದೆಯು ಕೃಷ್ಣನೊಡನೆ ಮಲಗಿದ್ದಳು. ಅರ್ಧನಿದ್ರೆ, ಅರ್ಧಎಚ್ಚರ ಈ ಅವಸ್ಥೆಯಲ್ಲಿಯೇ ಯಶೋದೆಯು ಸುಂದರರೂಪದಿಂದ ಒಳಬಂದ ಪೂತನೆಯನ್ನು ನೋಡಿದಳು. ಮೊದಲೇ ನಿದ್ರೆಯ ಭರದಲ್ಲಿದ್ದ ಯಶೋದೆಯು ಪೂತನೆಯ 'ಮೋಹಿನಿ'ಗೆ ಒಳಗಾಗಿದ್ದರಿಂದ

ಪೂತನೆಯು ಕೃಷ್ಣನನ್ನು ಎತ್ತಿಕೊಂಡರೂ, ಅವಳನ್ನು ಓರ್ವ ಸಾಧ್ವಿಯೆಂದೇ ಭಾವಿಸಿ ಅವಳನ್ನು ಪ್ರತಿಭಟಿಸಲಿಲ್ಲ. ಆಗ ಪೂತನೆಯು ವಿಷಯುಕ್ತವಾದ ತನ್ನ ಸ್ತನ್ಯಪಾನ ಮಾಡಿಸಿ ಶ್ರೀಕೃಷ್ಣನನ್ನು ಸಂಹರಿಸಬೇಕಂದು ಬಯಸಿ ಕೃಷ್ಣನಿಗೆ ಸ್ತನ್ಯಪಾನ ಮಾಡಿಸಹತ್ತಿದಳು. ಸರ್ವಸಮರ್ಥನೂ ಸರ್ವೋತ್ತಮನೂ ಆದ ಶ್ರೀಕೃಷ್ಣನು ಸ್ತನ್ಯಪಾನ ಮಾಡುತ್ತಾ ಶೀಘ್ರವಾಗಿ ಪೂತನೆಯ ಪ್ರಾಣಗಳನ್ನೂ ಪಾನಮಾಡಿಬಿಟ್ಟನು. ಸ್ತನ್ಯಪಾನದ ನೆಪದಲ್ಲಿ ತನ್ನನ್ನು ಕೊಲ್ಲಲು ಬಂದ ಪೂತನೆಯ ಅಸುಗಳನ್ನು ಹೀರಿ ಅವಳನ್ನು ಸಂಹರಿಸಿದನು. ಕೂಡಲೇ ಪೂತನೆಯು ತನ್ನ ನೈಜ ರಾಕ್ಷಸೀ ರೂಪವನ್ನು ತಾಳಿ ಬೃಹದಾಕಾರದಿಂದ ಆ ಮಹಾವನವನ್ನೆಲ್ಲಾ ವ್ಯಾಪಿಸಿ ಬಿದ್ದು ಅಸುನೀಗಿದಳು. ಅದೇ ಸಮಯದಲ್ಲಿ ಮಧುರೆಯಿಂದ ಯಮುನಾ ತೀರದ ಬಿಡಾರಕ್ಕೆ ಬಂದು ಸೇರಿದ ನಂದಗೋಪಾದಿಗಳು ಭಯಂಕರ ಸ್ವರೂಪದ ಆ ಪೂತನೆಯ ದೊಡ್ಡ ಶರೀರವನ್ನು ಕಂಡು ಆತ್ಯಾಶ್ಚರ್ಯ-ಭರಿತರಾದರು. ಮತ್ತು ಶ್ರೀಕೃಷ್ಣನು ಆನಂದದಿಂದ ಕಿಲಕಿಲನೆ ನಗುತ್ತಾ ಶಯ್ಯೆಯಲ್ಲಿ ಪವಡಿಸಿರುವುದನ್ನು ಕಂಡು ಸಮಾಧಾನ ತಾಳಿದರು.

ಪೂತನೆಯು ಪೂರ್ವದಲ್ಲಿ ತಾಟಕಾ ಎಂಬ ರಾಕ್ಷಸಿಯು. ಅವಳಲ್ಲಿ ಊರ್ವಶಿಯು ಪ್ರವಿಷ್ಟಳಾಗಿದ್ದಳು. ಆ ತಾಟಕಿಯೇ ಈಗ ಪೂತನೆಯಾಗಿ ಕಂಸನ ಉಪಮಾತೆಯಾಗಿದ್ದಳು. ಪೂತನೆಯು ತನ್ನ ಸ್ತನಗಳಲ್ಲಿರುವ ಕಾಲಕೂಟ ವಿಷದಿಂದ ಶ್ರೀಕೃಷ್ಣನನ್ನು ಸಂಹಾರ ಮಾಡಬಯಸಿ ವಿಷಯುಕ್ತ ಸ್ತನ್ಯವನ್ನು ಉಣಿಸಿ ಅಪರಾಧಮಾಡಿದ್ದರಿಂದ ಆ ಪೂತನೆಯು (ತಾಟಕಾ) ಅಂಧಃತಮಸ್ಸಿಗೆ ಹೋದಳು. ಅವಳಲ್ಲಿ ಆವಿಷ್ಟಳಾಗಿದ್ದ ಊರ್ವಶಿಯು ಶ್ರೀಕೃಷ್ಣನು ಸ್ತನಪಾನಮಾಡಿದ್ದರಿಂದ ಆ ಪುಣ್ಯ-ಪ್ರಭಾವದಿಂದ ತುಂಬುರುಸಂಗದ ದೋಷದಿಂದ ಪ್ರಾಪ್ತವಾಗಿದ್ದ ಶಾಪದಿಂದ ಮುಕ್ತಳಾಗಿ, ಶ್ರೀಕೃಷ್ಣಸ್ಪರ್ಶದಿಂದ ಶುದ್ಧಳಾಗಿ ಸ್ವರ್ಗವನ್ನು ಸೇರಿದಳು.

ಹಿಂದೆ ಊರ್ವಶಿಯು ಒಮ್ಮೆ ತುಂಬುರು ಎಂಬ ಗಂಧರ್ವನೊಡನೆ ವಿಹರಿಸಿ ಧನಪತಿಯಾದ ಕುಬೇರನ ಶಾಪಕ್ಕೊಳಗಾಗಿ ತಾಟಕಾರಾಕ್ಷಸಿಯಲ್ಲಿ ಆವಿಷ್ಟಳಾಗಿದ್ದಳು. ಆ ತಾಟಕಿಯೇ ಪೂತನೆಯಾಗಿ ಜನಿಸಿ ಕೃಷ್ಣನನ್ನು ಸಂಹರಿಸಲು ಉದ್ಯುಕ್ತಳಾಗಿ ಶ್ರೀಕೃಷ್ಣನಿಂದ ಸಂಹೃತಳಾದಳು. ಅವಳಲ್ಲಿ ಆವಿಷ್ಟಳಾಗಿದ್ದ ಊರ್ವಶಿಯು ಶ್ರೀಕೃಷ್ಣಸ್ಪರ್ಶದಿಂದ ಪರಿಶುದ್ಧಳಾಗಿ ಶಾಪಮುಕ್ತಳಾಗಿ ಮತ್ತೆ ತನ್ನ ನಿವಾಸವಾದ ಸ್ವರ್ಗಲೋಕಕ್ಕೆ ತೆರಳಿದಳು. ನಿಜ. ಸಾಕ್ಷಾತ್ ಲಕ್ಷ್ಮೀರಮಣನು ಪ್ರಸನ್ನನಾದೊಡೆ ಅದಾವುದು ತಾನೇ ಅಲಭ್ಯವಾದೀತು!

ಶ್ರೀಕೃಷ್ಣನು ಶುಕ್ಲಪಕ್ಷದ ಚಂದ್ರಮನಂತೆ ಅಭಿವೃದ್ಧನಾಗಹತ್ತಿದನು. ಕೃಷ್ಣನಿಗೆ ನಾಲ್ಕುತಿಂಗಳು ವಯಸ್ಸಾದಾಗ ಮಂಗಳ-ಮಹೋತ್ಸವವೊಂದು ಜರುಗಿತು. ಪ್ರಪ್ರಥಮವಾಗಿ ಮನೆಯಿಂದ ಸೋದರಮಾವ ಮುಂತಾದವರ ಮನೆಗಳಿಗೆ ಹೋಗುವ (ದೇವರ ಗುಡಿಗೆ ಹೋಗಿ ಬರುವ ಉತ್ಸವ) ಮಹೋತ್ಸವವು ಜರುಗಿತು. ಅಂದು ಪ್ರಾತಃಕಾಲದಲ್ಲಿ ಶ್ರೀಕೃಷ್ಣನ ಜನ್ಮನಕ್ಷತ್ರವೂ (ರೋಹಿಣೀನಕ್ಷತ್ರ) ಇದ್ದಿತು. ಆದ್ದರಿಂದ ಅಂದೇ ಮಹೋತ್ಸವವು ನೆರವೇರಿತು. ಅಂದು ಯಶೋದೆಯು ಶ್ರೀಕೃಷ್ಣನನ್ನು ಹಾಲುಹಣ್ಣು ಸಂಭಾರಗಳಿಟ್ಟಿದ್ದ ಒಂದು ರಥದ (ಬಂಡಿಯ) ಕೆಳಗೆ ರತ್ನಕಂಬಳಿಯ ಮೇಲೆ ಮಲಗಿಸಿ ಸರೀಕ (ಸಮಾನವಯಸ್ಕರಾದ) ಹೆಂಗಳೆಯರೊಡನೆ ಸಮೀಪದಲ್ಲಿದ್ದ ಯಮುನಾನದಿಯ ತಟದಲ್ಲಿ ಮಾತುಕಥೆಯಲ್ಲಿ ತಲ್ಲೀನಳಾಗಿ ವಿಹಾರ ಮಾಡುತ್ತಿದ್ದಳು.

ಕಂಸನಿಂದ ಪ್ರೇರಿತನಾದ ಶಕಟಾಕ್ಷನೆಂಬ ಅಸುರನು ಶ್ರೀಕೃಷ್ಣನಿಗೆ ಪ್ರತಿಕೂಲ ಮಾಡಲು ಆ ರಥದ ದೂರಿಯಲ್ಲಿ ಪ್ರವಿಷ್ಟನಾಗಿ ಕೃಷ್ಣನಿಗೆ ಉಪಹತಿ ಮಾಡಲು ಸಮಯವನ್ನು ನಿರೀಕ್ಷಿಸುತ್ತಿದ್ದನು. ರಥದ ಕೆಳಭಾಗದಲ್ಲಿ ಮಲಗಿದ್ದ ಶ್ರೀಕೃಷ್ಣನು ತನ್ನ ಪಾದಗಳಿಂದ ರಥವನ್ನು ಒದೆದನು. ಕೂಡಲೇ ರಥದ ದೂರಿಯಲ್ಲಿ ಆವಿಷ್ಟನಾಗಿದ್ದ ಶಕಟಾಕ್ಷನು ಛಿನ್ನಭಿನ್ನಾಂಗನಾಗಿ ಕೆಳಗೆ ಬಿದ್ದು ಮೃತನಾದನು. ಕೃಷ್ಣನ ಪಾದಾಘಾತದಿಂದ ರಥವೂ ಕೂಡ ಪುಡಿಪುಡಿಯಾಗಿ ಮುರಿದು ಬಿದ್ದಿತು. ಅದರಲ್ಲಿದ್ದ ಸಂಭಾರಗಳೂ ಚೆಲ್ಲಾಪಿಲ್ಲಿಯಾದವು.

ಯಮುನಾನದಿಯ ತೀರದಲ್ಲಿ ಗೆಳತಿಯರೊಡನೆ ನಗೆಚಾಟಿಕೆಯಾಡುತ್ತಾ ಅತ್ತಿಂದಿತ್ತ ಚಲಿಸುತ್ತಿದ್ದ ಯಶೋದಾ-ದೇವಿಯನ್ನು ಕಂಡ ನಂದಗೋಪನು "ಕೃಷ್ಣನನ್ನು ಬಿಟ್ಟು ಹೀಗೆ ಇಲ್ಲಿ ಏಕೆ ತಿರುಗಾಡುತ್ತಿರುವೆ" ಎಂದು ಗರ್ಜಿಸಿದನು. ಆಗ ಅವಳಿಗೆ ಕೃಷ್ಣನ ನೆನಪಾಯಿತು. ಕೂಡಲೇ ಭಯಸಂಭ್ರಮಗಳಿಂದ ಯಶೋದೆಯು ರಥದ ಬಳಿಗೆ ಬಂದಳು. ಅಲ್ಲಿ ನಡೆದಿದ್ದ ಅದ್ಭುತವ್ಯಾಪಾರವನ್ನು ಕಂಡು ಇದು ಭೂತಚೇಷ್ಟೆಯಿರಬಹುದೆಂಬ ಭಯ ಮತ್ತು ಅನುಮಾನಗಳಿಂದ ಬ್ರಾಹ್ಮಣರನ್ನು ಕರೆಯಿಸಿ ಮಂತ್ರಪಾರಾಯಣಗಳಿಂದಲೂ, ಮಂತ್ರೋದಕ ಪ್ರೋಕ್ಷಣಾದಿಗಳಿಂದಲೂ ಶ್ರೀಕೃಷ್ಣನಿಗೆ ಮಂಗಳಸ್ನಾನ ಮಾಡಿಸಿದಳು.

ಸರ್ವರನ್ನೂ ಶಾಸನಮಾಡುವ ಶ್ರೀಕೃಷ್ಣಪರಮಾತ್ಮನು ಕಂಸಭೃತ್ಯನಾದ ಶಕಟಾಕ್ಷನನ್ನು ಲೀಲೆಯಿಂದ ಸಂಹರಿಸಿ ಮತ್ತೆ ಏನೂ ಅರಿಯದ ಹಸುಳೆಯಂತೆ ಮಲಗಿದ್ದನು. ಕ್ರೀಡಾದಿಗುಣವಿಶಿಷ್ಟನಾದ ಶ್ರೀಕೃಷ್ಣನು ತನ್ನ ಬಾಲಲೀಲೆ ಮತ್ತು ವಿನೋದಗಳಿಂದ ಗೋಪಾಲಕರನ್ನು ಸಂತೋಷಗೊಳಿಸುತ್ತಾ ಗೋಕುಲದಲ್ಲಿ ವಾಸಮಾಡಹತ್ತಿದನು.

ಲೋಕದೃಷ್ಟಿಯಿಂದ ಪರಾತ್ಪರನಾದ ಶ್ರೀಕೃಷ್ಣಪರಮಾತ್ಮನು ಮಾನವನಂತೆ ದಿನೇದಿನೇ ಅಭಿವೃದ್ಧನಾಗುತ್ತಿದ್ದನು. ಇತ್ತ ಪಾಂಡುರಾಜನು ಪತ್ನಿಯಾದ ಕುಂತೀದೇವಿಯನ್ನು ಕುರಿತು ಇಂತೆಂದನು - "ದೇವಿ! ನಮಗೆ ಧರ್ಮಿಷ್ಠನಾದ ಧರ್ಮರಾಜನು ಮೊದಲು ಪುತ್ರನಾಗಿ ಜನಿಸಿದನು. ತರುವಾಯ ಬಾಹುಬಲದಿಂದಲೂ ಜ್ಞಾನಬಲದಿಂದಲೂ ಜ್ಯೇಷ್ಠನಾದ ವಾಯುದೇವನು ಭೀಮಸೇನರೂಪದಿಂದ ಪುತ್ರನಾದನು. ಅತಿಬಲಸಂಪನ್ನನಾದ ಪುತ್ರನೋರ್ವನೇ ಇದ್ದರೇ ಅಂತಹ ಬಲವಂತನಾದ ಮಗನು ಶತ್ರುಗಳೊಡನೆ ಹೋರಾಡುತ್ತಿರುವಾಗ ವೈರಿಗಳು ಕಳ್ಳತನದಿಂದ ಅಂಥವನ ರಾಜಧಾನಿಯನ್ನು ಮುತ್ತಿ ಅಪಹರಿಸಬಹುದು. ಆದುದರಿಂದ ರಾಜ್ಯವನ್ನು ರಕ್ಷಿಸಲೂ, ಪರಿಪಾಲಿಸಲೂ ಜ್ಞಾನಬಲ ಹಾಗೂ ಬಾಹುಬಲಗಳಿಂದ ಕೂಡಿ ಸಮರ್ಥರಾದ ಈರ್ವರು ಮಕ್ಕಳಿರುವುದು ಯೋಗ್ಯವೆಂದು ನಾನು ಭಾವಿಸುತ್ತೇನೆ. ಆದುದರಿಂದ ಶಸ್ತ್ರಾಸ್ತ್ರಗಳಲ್ಲಿ ಅತ್ಯಂತ ನಿಪುಣನೂ, ಭೀಮಸೇನನಿಂದ ಭಿನ್ನನೂ, ಬಲವೀರ್ಯವಂತನೂ ಆದ ಮತ್ತೊಬ್ಬ ಪುತ್ರನು ನಮಗೆ ಬೇಕು. ಆದ್ದರಿಂದ ಬಲವಂತನಾದ ಪುತ್ರರನ್ನು ಕರುಣಿಸಲು ಯೋಗ್ಯತೆಯುಳ್ಳ ದೇವತೆಯನ್ನೀಗ ನೀನು ಆಹ್ವಾನಿಸಬೇಕು". ಅಂತಹ ಯೋಗ್ಯತೆಯುಳ್ಳ ದೇವತೆಯು ಇಂದ್ರದೇವರೇ ಎಂದು ಸೂಚಿಸುತ್ತಾ ಪಾಂಡುರಾಜನು ಮತ್ತೆ ಹೇಳುತ್ತಾನೆ - "ಜ್ಞಾನ-ಬಾಹುಬಲಗಳಲ್ಲಿ ವಾಯುದೇವರ ತರುವಾಯ ಶ್ರೇಷ್ಠರಾದವರು ಶೇಷದೇವರು. ಆ ಶೇಷದೇವನು ಈಗ ನಿನ್ನ ಅನುಜನಾದ ವಸುದೇವನಿಗೆ ಬಲಭದ್ರನೆಂಬ ಹೆಸರಿನಿಂದ ಪುತ್ರನಾಗಿ ಜನಿಸಿರುವನು. ಆದುದರಿಂದ ಶೇಷದೇವನು ನಿನಗೆ ಪುತ್ರನನ್ನು ಕರುಣಿಸಲು ಯೋಗ್ಯನೆನಿಸಲಾರ. ಶ್ರೀಕೃಷ್ಣನು ಮನುಷ್ಯನಾಗಿ ಅವತರಿಸಬಾರದೆಂದು ಗರುಡದೇವನಿಗೆ ಆಜ್ಞಾಪಿಸಿ-ರುವುದರಿಂದ ಆ ಗರುಡದೇವನು ಪುತ್ರೋತ್ಪಾದನೆಗಾಗಿ ಮಾನವರಲ್ಲಿ ಖಂಡಿತವಾಗಿಯೂ ಜನಿಸಲಾರ. ಅವನನ್ನು ಬಿಟ್ಟರೆ ಉಳಿದವನು ಶಂಕರನು. ರುದ್ರದೇವನು ತಮೋಗುಣಕ್ಕೆ ಅಭಿಮಾನಿಯಾದುದರಿಂದ ಅವನು ರಾಜ್ಯರಕ್ಷಣೆಗೆ ಯೋಗ್ಯನಲ್ಲ. ಆದುದರಿಂದ ಶೇಷದೇವರು, ಗರುಡದೇವ, ರುದ್ರದೇವರು ಈ ಮೂವರ ತರುವಾಯ ತಾರತಮ್ಯದಲ್ಲಿ ಜ್ಞಾನ-ಭಕ್ತಿಸಂಪನ್ನರಾದವರೂ, ಬಲಿಷ್ಠರೂ ಆದವರಂದರೆ ಇಂದ್ರದೇವರು. ಆದ್ದರಿಂದ ನೀನೀಗ ಆ ಇಂದ್ರದೇವರನ್ನು ಆಹ್ವಾನಿಸುವುದೇ ಯೋಗ್ಯವಾಗಿದೆ. ದೇವಿ, ನೀನು ಬಲ-ಜ್ಞಾನ ಸಂಪನ್ನನಾದ ಉತ್ತಮ ಪುತ್ರನಿಗಾಗಿ ಇಂದ್ರದೇವರನ್ನು ಆಹ್ವಾನಿಸು". ಪತಿಯ ಆಜ್ಞೆಯಂತೆ ಕುಂತೀದೇವಿಯು ಭಕ್ತಿಶ್ರದ್ಧೆಗಳಿಂದ ಇಂದ್ರದೇವರನ್ನು ಕರೆದಳು. ಕುಂತಿಯ ಕರೆಗೆ ಓಗೊಟ್ಟು ಬಂದ ಇಂದ್ರದೇವರು ಕುಂತಿಯಲ್ಲಿ ಅನುಗ್ರಹ ಮಾಡಿ ಅವಳಿಗೆ ತಾವೇ ಪುತ್ರರಾಗಿ ಜನಿಸಿದರು.

ಶ್ರೀಹರಿ-ವಾಯು-ಶೇಷಾಂಶಸಂಭೂತನೂ, ಶ್ರೀವಿಷ್ಣುವಿನ ವಿಶೇಷಾವೇಶಯುಕ್ತನೂ, ಮಹಾಬಲಿಷ್ಠನೂ, ಶಸ್ತ್ರಾಸ್ತ್ರ-ಕುಶಲನೂ ಆದ ಆ ಕುಂತೀಕುಮಾರನು ಅರ್ಜುನನೆಂಬ ಹೆಸರಿನಿಂದ ಪ್ರಸಿದ್ಧನಾದನು. ಭೀಮಾರ್ಜುನರು ಅತಿಸುಂದರ

ಮತ್ತು ಮನೋಹರರಾಗಿದ್ದರೂ ವಜ್ರಕಾಯರಾದುದರಿಂದ ಅತ್ಯಂತ ಮನೋಹರ, ಮೃದು ಶರೀರಿಯಾದ ಮತ್ತೊಬ್ಬ ರೂಪವಂತನಾದ ಪುತ್ರನು ಬೇಕೆಂದು ಪಾಂಡುರಾಜನು ಅಪೇಕ್ಷಿಸಿ ಕುಂತಿಗೆ ತನ್ನ ಮನದಾಶೆಯನ್ನು ನಿವೇದಿಸಿದನು. ಆದರೆ ಕುಂತೀದೇವಿಯ ಅತ್ಯಂತ ಮಹತ್ವಪೂರ್ಣ ಕಾರ್ಯಕ್ಕಲ್ಲದೆ ಕೇವಲ ಪುತ್ರೋತ್ಪತ್ತಿಗಾಗಿಯೇ ಪರಪುರುಷರ ಸಂಪರ್ಕ ಮಾಡುವುದು ಮಹಾ ಅನರ್ಥಕರವೆಂದು ಧರ್ಮಶಾಸ್ತ್ರವು ಸಾರುವುದರಿಂದ ಈ ಬಯಕೆಯು ಯೋಗ್ಯವಾದುದಲ್ಲವೆಂದು ವಿನಯಪೂರ್ವಕ ವಿಜ್ಞಾಪಿಸಿದಳು.

ಈಗ ನಿರ್ಣಯಾಚಾರ್ಯರು, ಬೃಹಸ್ಪತ್ಯಾಚಾರ್ಯರು ಮತ್ತೆ ಅವತರಿಸಿದ ವಿಚಾರವನ್ನು ನಿರೂಪಿಸುತ್ತಾರೆ.

ಧರ್ಮರಾಜ, ಭೀಮಾದಿಗಳಿಗಿಂತಲೂ, ಬಲರಾಮ-ಶ್ರೀಕೃಷ್ಣಾದಿಗಳಗಿಂತಲೂ[6] ಮೊದಲು ಬೃಹಸ್ಪತ್ಯಾಚಾರ್ಯರು ಶ್ರೀಹರಿಯ ಪಾದಸೇವೆಗೋಸ್ಕರವಾಗಿ ದ್ರೋಣಾಚಾರ್ಯರೆಂಬ ಹೆಸರಿನಿಂದ ಅವತರಿಸಿದ್ದರು. ಆ ಬೃಹಸ್ಪತ್ಯಾಚಾರ್ಯರೇ ಮತ್ತೆ ಈಗ ಶ್ರೀ ವಾಯುದೇವರ ಆವೇಶದಿಂದ ಯುಕ್ತರಾಗಿ ಉಪಗವನೆಂಬ ಯದುಶ್ರೇಷ್ಠನಿಗೆ ಮಕ್ಕಳಾಗಿ ಜ್ಞಾನಿಯಾದ ಉದ್ಧವನೆಂಬ ಹೆಸರಿನಿಂದ ಜನಿಸಿ ಪ್ರಸಿದ್ಧರಾದರು.

ಹಾಗಾದರೆ ದ್ರೋಣಾಚಾರ್ಯರಾಗಿ ಜನಿಸಿರುವ ಬೃಹಸ್ಪತ್ಯಾಚಾರ್ಯರು ಮತ್ತೆ ಉದ್ಧವಸ್ವರೂಪದಿಂದೇಕೆ ಜನಿಸಿದರು ಎಂಬುದನ್ನೀಗ ನಿರೂಪಿಸುತ್ತಾರೆ.

ಬೃಹಸ್ಪತ್ಯಾಚಾರ್ಯರು ಶ್ರೀಕೃಷ್ಣನ ಅಂತರಂಗ ಸೇವೆಯನ್ನು ಚೆನ್ನಾಗಿ ನೆರವೇರಿಸಲು ಆಶಿಸಿದ್ದರು. ಈಗ ದ್ರೋಣಾಚಾರ್ಯರಾಗಿ ನಾನು ಬ್ರಾಹ್ಮಣಯೋನಿಯಲ್ಲಿ ಜನಿಸಿದ್ದೇನೆ. ಆದ್ದರಿಂದ ಬ್ರಾಹ್ಮಣನಾದ ನನ್ನನ್ನು ಶ್ರೀಕೃಷ್ಣನು ತನ್ನ ಅತ್ಯಂತ ಅಂತರಂಗ ಸೇವಾದಿಗಳನ್ನು ಮಾಡುವ ಆತ್ಮೀಯ ಸೇವಕನನ್ನಾಗಿ ಸ್ವೀಕರಿಸಲಾರ. ಆದರಿಂದ ಶ್ರೀಕೃಷ್ಣನು ಧರಿಸಿದ ವಸ್ತ್ರ, ಗಂಧ, ಮಾಲ್ಯಾನುಲೇಪನ, ಅವನ ಉಚ್ಚಿಷ್ಟ ಭೋಜನ, ಮೊದಲಾದ ಅಂತರಂಗ ಸೇವಾಭಾಗ್ಯವು ದ್ರೋಣಸ್ವರೂಪದ ನನಗೆ ದೊರಕಲಾರದು. ಅದು ನನಗೆ ಅವಶ್ಯ ಲಭಿಸಲೇಬೇಕು. ಅಂತೆಯೇ ಆ ರೀತಿ ಶ್ರೀಹರಿಯ ಸೇವೆಯನ್ನು ಮಾಡಿ ಉದ್ಧೃತನಾಗಬೇಕೆಂಬ ಮಹದಾಶೆಯಿಂದ ಬೃಹಸ್ಪತ್ಯಾಚಾರ್ಯರು ಈಗ ಮತ್ತೆ ಉದ್ಧವರಾಗಿ ಯಾದವರಲ್ಲಿ ಜನಿಸಿದರು.

ಹೀಗೆ ಶ್ರೀಕೃಷ್ಣನ ಸೇವಾರ್ಥವಾಗಿ ಹುಟ್ಟಿದ ಉದ್ಧವನು ಮೂಲರೂಪದ ಬೃಹಸ್ಪತ್ಯಾಚಾರ್ಯರಿಂದಲೇ ಸಕಲ ವಿದ್ಯೆಗಳನ್ನೂ ಪಡೆದನು. ಸಂಧಿ, ವಿಗ್ರಹಾದಿಕರಣಗಳನ್ನು ಅರಿತವನೂ, ಅತಿ ಚತುರನೂ, ಸರ್ವವನ್ನೂ ಬಲ್ಲವನೂ ಆದನು. ಈಗ, ಅವತರಿಸಿದ ದೇವತೆಗಳ ವಯಸ್ಸಿನ ತಾರತಮ್ಯವನ್ನು ನಿರೂಪಿಸುವರು.

ಉದ್ಧವನು ಜನಿಸಿದ ಮೂರುವರ್ಷಗಳಾದ ಮೇಲೆ ಸಾತ್ಯಕಿಯು ಜನಿಸಿದನು. ಅಂದೇ ಯಾದವರಲ್ಲಿ ಖ್ಯಾತನಾದ ಚೇಕಿತಾನನೂ ಜನಿಸಿದನು. ವಾಯುಗಳಲ್ಲಿ ಪ್ರವಹವಾಯುವೆಂದು ಖ್ಯಾತನಾದವನವನು. ಅಂದರೆ ಪ್ರವಹವಾಯುವು ಶ್ರೀಹರಿಸೇವೆಗಾಗಿ ಚೇಕಿತಾನನಾಗಿ ಹುಟ್ಟಿದನು. ಅದೇ ದಿನ ಹೃದಿಕನಿಗೆ ಪುತ್ರನಾಗಿ ಕೃತವರ್ಮನು ಜನಿಸಿದನು. ಕೃತವರ್ಮನು ಜನಿಸಿದ ತರುವಾಯ ಮೂರು ವರ್ಷಗಳಾದ ಮೇಲೆ ಧರ್ಮರಾಜನು ಹುಟ್ಟಿದನು. ಯುಧಿಷ್ಠಿರನು ಜನಿಸಿದ ಒಂದು ವರ್ಷವಾದ ಮೇಲೆ ಎರಡನೆಯ ವರ್ಷದಲ್ಲಿ ರುದ್ರದೇವರು ಭೂಭಾರಹರಣ ದೈತ್ಯಸಂಹಾರಾದಿ ಬಲಕಾರ್ಯದಲ್ಲಿ ಶ್ರೀಕೃಷ್ಣನಿಗೆ ಸಹಾಯಮಾಡಿ ಸೇವಿಸಲು ಭೂಮಿಯಲ್ಲಿ ಜನಿಸಿದರು. ಹುಟ್ಟುವಾಗ ಶ್ರೇಷ್ಠರಾದ

6. ಜನಾರ್ದನ ಭಟ್ಟರ ವ್ಯಾಖ್ಯಾನದಲ್ಲಿ 'ಬೃಹಸ್ಪತಿಃ ಪೂರ್ವಮಭೂತ್' ಎಂಬ ನಿರ್ಣಯವಾಕ್ಯಕ್ಕೆ ಪೂರ್ವದಲ್ಲಿ ಭೀಷ್ಮ ಮತ್ತು ಕೃಷ್ಣೋತ್ಪತ್ತಿ ಕಾಲದಲ್ಲಿ ಯಾವ ಬೃಹಸ್ಪತ್ಯಾಚಾರ್ಯರು ಶ್ರೀಹರಿಯಪಾದಸೇವೆಗೋಸುಗ ದ್ರೋಣಾಚಾರ್ಯರಾಗಿ ಜನಿಸಿದರೋ ಅವರೇ ಈಗ ಉದ್ಧವರಾಗಿ ಜನಿಸಿದರೆಂದು ಬರೆದಿದ್ದಾರೆ.

ರುದ್ರದೇವರು ಉಚ್ಚೈಃಶ್ರವಸ್ಸಂಬ ಕುದುರೆಯಂತೆ ಧ್ವನಿಮಾಡಿದ್ದರಿಂದ ಅವರು ಅಶ್ವತ್ಥಾಮಾ ಎಂಬ ಹೆಸರಿನಿಂದ ಖ್ಯಾತರಾದರು. ಕೃಪಾಚಾರ್ಯರ ತಂಗಿಯಾದ ಕೃಪಿಯಲ್ಲಿ ದ್ರೋಣಾಚಾರ್ಯರಿಂದ ಜನಿಸಿದ ಅಶ್ವತ್ಥಾಮನು ಸರ್ವಜ್ಞನೂ, ಬಲಿಷ್ಠನೂ, ಅಸ್ತ್ರವಿದ್ಯೆಯಲ್ಲಿ ನಿಪುಣನೂ ಆದನು. ಅಶ್ವತ್ಥಾಮನು ಜನಿಸಿದ ನಾಲ್ಕನೆಯ ದಿವಸ ದುರ್ಯೋಧನನು ಜನಿಸಿದನು. ಸುಯೋಧನನು ಹುಟ್ಟಿದ ಎರಡನೆಯ ದಿವಸ ಅತ್ಯಂತಧೀರನಾದ ಭೀಮಸೇನನು ಅವತರಿಸಿದನು. ಭೀಮಸೇನನು ಜನಿಸಿದ ದಿನವೇ ಎರಡನೆಯ ಘಟದಿಂದ ದುಶ್ಶಾಸನನು ಹುಟ್ಟಿದನು. ಭೀಮಸೇನನಿಗೆ ಎರಡು ತಿಂಗಳು ವಯಸ್ಸಾದಾಗ, ಅಂದಿನ ದಿನವೇ ಹಿಂದೆ ತ್ರೇತಾಯುಗದಲ್ಲಿ ರಾಮನಿಗೆ ತಮ್ಮನಾಗಿ ಜನಿಸಿ ಬಹುಸೇವೆ ಮಾಡಿದ್ದ ಲಕ್ಷ್ಮಣನು ಪುನಃ ಅತಿ ಬಾಹುಬಲದಿಂದಲೂ, ಶ್ರೀಹರಿಭಕ್ತ್ಯಾದಿ ಗುಣಗಳಿಂದ ಶ್ರೇಷ್ಠನೂ, ಸರ್ವಜ್ಞನೂ ಆಗಿ ಬಲರಾಮನೆಂಬ ಹೆಸರಿನಿಂದ ರೋಹಿಣಿಗೆ ಪುತ್ರನಾಗಿ ಜನಿಸಿದನು.

ಪಾಪಿಯಾದ ಕಂಸನು ದೇವಕಿಯ ಪುತ್ರರನ್ನು ಸಂಹರಿಸಬೇಕೆಂದು ಯಾವ ಪಾಪವನ್ನೂ ಮಾಡದ ದೇವಕೀ-ವಸುದೇವರನ್ನು ಒಟ್ಟಿಗೆ ಶೃಂಖಲಾಬದ್ಧರನ್ನಾಗಿ ಮಾಡಿ ಬಂಧನದಲ್ಲಿರಿಸಿದನು. ದೇವಕಿಯ ಹೊರತು ವಸುದೇವನ ಇತರ ಪತ್ನಿಯರಾದ ರೋಹಿಣೀ ಮೊದಲಾದವರನ್ನು ಬೇರೆ ಕಡೆ ಇರಿಸಿದನು. ದೇವಕಿಯ ಮಕ್ಕಳಾರು ಎಂದು ಸ್ಪಷ್ಟವಾಗಿ ತಿಳಿಯುವುದಕ್ಕಾಗಿ ಗರ್ಭಿಣಿಯಾದ ದೇವಕಿಯಿಂದ ಭಿನ್ನರಾದ ರೋಹಿಣಿ ಮೊದಲಾದ ವಸುದೇವನ ಪತ್ನಿಯರನ್ನು ಅವರು ಪ್ರಸವಿಸುವವರೆಗೆ ಅವರನ್ನು ಬೇರೆ ಕಡೆ ಇರಿಸಿದನು. ಅಂತೆಯೇ ಕಂಸನು ನಂದಗೋಪನ ಮನೆಗೆ ರೋಹಿಣಿಯನ್ನು ಪ್ರಸವಿಸಲು ಕಳುಹಿಸಿದ್ದನು. ರೋಹಿಣಿಯು ನಂದಗೋಪನ ಗೃಹದಲ್ಲಿ ಷೋಡಶಕಲಾಪೂರ್ಣನಾದ ಚಂದ್ರಮನಂತೆ ಮನೋಹರಮುಖ-ಮಂಡಲದಿಂದ ಕಂಗೊಳಿಸುವ ಮತ್ತು ಶುಕ್ಲವರ್ಣನಾದ ಬಲಭದ್ರ ಎಂಬ ಹೆಸರಿನ ಪುತ್ರನನ್ನು ಗೋಕುಲದಲ್ಲಿ ಪ್ರಸವಿಸಿದಳು.

ಬಲರಾಮನಿಗೆ ಮೂರು ತಿಂಗಳು ವಯಸ್ಸಾಗಿದ್ದಾಗ ಉತ್ಪತ್ತಿರಹಿತನಾದ ಸಾಕ್ಷಾತ್ ಶ್ರೀಪುರುಷೋತ್ತಮನು ದೇವಕೀದೇವಿಯಲ್ಲಿ ಆವಿರ್ಭೂತನಾದನು. ಶೇಷದೇವರು ಮೊದಲು ಮೂರು ತಿಂಗಳು ದೇವಕಿಯ ಗರ್ಭದಲ್ಲಿದ್ದು ಅನಂತರ ರೋಹಿಣಿಯ ಗರ್ಭವನ್ನು ಪ್ರವೇಶಿಸಿದ ಕಾರಣವನ್ನೀಗ ಹೇಳುತ್ತಾರೆ:

ದೇವಕೀವಸುದೇವರು ಶ್ರೀಕೃಷ್ಣ ಮತ್ತು ಶೇಷರು ತಮಗೆ ಪುತ್ರರಾಗಬೇಕೆಂಬ ಅಪೇಕ್ಷೆಯಿಂದ ತಪಸ್ಸುಮಾಡಿದ್ದರು. ಅದರಂತೆಯೇ ರೋಹಿಣಿಯೂ ವಿಷ್ಣುವಿನ ಆವೇಶಯುಕ್ತನಾದ ಬಲವಂತನೂ ಜ್ಞಾನಾದಿಗುಣಶ್ರೇಷ್ಠನೂ ಆದ ದೇವನು ತನಗೆ ಮಗನಾಗಬೇಕೆಂದು ತಪಸ್ಸು ಮಾಡಿದ್ದಳು. ಅಂತೆಯೇ ಶೇಷದೇವನು ತನಗೆ ಮಗನಾಗಬೇಕೆಂದು ತಪಸ್ಸು ಮಾಡಿದ್ದಳು. ಅಂತೆಯೇ ಶೇಷದೇವನು ಶ್ರೀ ಹರಿಯ ಶುಕ್ಲಕೇಶದಿಂದ ಕೂಡಿ ದೇವಕೀ-ರೋಹಿಣಿಯರಿಬ್ಬರಿಗೂ ಮಗನಾಗಿ ಜನಿಸಿದನು. ಶ್ರೀಹರಿಯ ಶುಕ್ಲಕೇಶಾವೇಶವುಳ್ಳ ರೋಹಿಣೀಕುಮಾರನಾದ ಬಲರಾಮನು ನಂದಗೋಕುಲದಲ್ಲಿ ಬೆಳೆಯ-ಹತ್ತಿದನು. ಬಲರಾಮನೊಡನೆ ಶ್ರೀಕೃಷ್ಣನೂ ಸಹ ಮನೋಹರಕ್ರೀಡೆಗಳಿಂದ ನಂದಗೋಕುಲದ ಜನರನ್ನು ಆನಂದಗೊಳಿಸುತ್ತಾ ಅಭಿವೃದ್ಧನಾಗುತ್ತಿದ್ದನು.

ಸರ್ವರಿಗೂ ಪ್ರಭುವಾದ ಶ್ರೀಕೃಷ್ಣನು ಒಮ್ಮೆ ಗಟ್ಟಿಯಾಗಿ ವಿಜೃಂಭಿಸುತ್ತಾ ತನ್ನನ್ನು ಇತರ ಬಾಲಕರಂತೆ ಪ್ರಾಕೃತ-ಶರೀರಿಯಾದ ಮಗುವೆಂದು ತಿಳಿದಿರುವ ತಾಯಿ ಯಶೋದಾದೇವಿಗೆ ತನ್ನಲ್ಲಿರುವ ಸ್ಥಾವರಜಂಗಮಾತ್ಮಕ ಜಗತ್ತನ್ನೂ ತನ್ಮೂಲಕ ತನ್ನ ಮಹಾಮಹಿಮೆಯನ್ನೂ ಪ್ರದರ್ಶಿಸಿದನು. ಶ್ರೀಕೃಷ್ಣನು ಮಾತೆಗೆ ಸಕಲಚರಾಚರಾತ್ಮಕಪ್ರಪಂಚವನ್ನು ತೋರಿದ ಬಗೆಯನ್ನೀಗ ಶ್ರೀ ನಿರ್ಣಯಾಚಾರ್ಯರು ಸುಂದರಶೈಲಿಯಲ್ಲಿ ವರ್ಣಿಸುವರು.

ಯಶೋದಾದೇವಿಯು ಶ್ರೀಕೃಷ್ಣನಲ್ಲಿ ಮಹಾಭೂತಗಳನ್ನು ಅಂದರೆ ಪೃಥಿವೀ, ಜಲ, ತೇಜಸ್ಸು, ವಾಯು ಮತ್ತು ಆಕಾಶಗಳೆಂಬ ಮಹಾಭೂತಗಳನ್ನೂ, ಪಂಚತನ್ಮಾತ್ರಗಳನ್ನೂ, ಅಂದರೆ ರಸ, ಗಂಧ, ರೂಪ, ಸ್ಪರ್ಶ, ಶಬ್ದಗಳನ್ನೂ, ಮನಸ್ತತ್ತ್ವ

ದಶೇಂದ್ರಿಯಗಳು, ಬುದ್ಧಿತತ್ವ, ಅಹಂಕಾರತತ್ವ, ಮಹತ್ತತ್ವ, ಅವ್ಯಕ್ತವೆಂಬ ಮೂಲತತ್ತ್ವ ಹೀಗೆ ಇಪ್ಪತ್ನಾಲ್ಕು ತತ್ವ, ಮೂಲತತ್ತ್ವರೂಪಗಳಿಂದ ಅವರವರ ಯೋಗ್ಯತೆಗೆ ತಕ್ಕಂತೆ ತಾರತಮ್ಯಾನುಸಾರವಾಗಿ ಉತ್ತರೋತ್ತರಾಧಿಕ್ಯದಿಂದ ಕೂಡಿದ ಚತುರ್ಮುಖ ಬ್ರಹ್ಮದೇವರೇ ಮೊದಲಾಗುಳ್ಳ ಮತ್ತು ರುದ್ರದೇವರಿಂದ ಸಹಿತರಾದ ದೇವತೆಗಳು, ಮನುಷ್ಯರು, ದೈತ್ಯರೂ ಹೀಗೆ ಇವರೆಲ್ಲರ ಗುಂಪಿನಿಂದ ಸಹಿತವಾದ ಬ್ರಹ್ಮಾಂಡವನ್ನು ನೋಡಿದಳು.

ಅದ್ಭುತವಾದ ಆ ದೃಶ್ಯವನ್ನು ಕಂಡ ಯಶೋದಾದೇವಿಯು ಅತ್ಯಂತ ಭಯಗೊಂಡು ತನ್ನ ಕಣ್ಣುಗಳನ್ನು ಮುಚ್ಚಿ-ಕೊಂಡಳು. ಆಗ ಲಕ್ಷ್ಮೀಪತಿಯಾದ ಶ್ರೀಕೃಷ್ಣನು ತನ್ನ ಸ್ವರೂಪವನ್ನು ಮರೆಮಾಡಿದನು. ಶ್ರೀಕೃಷ್ಣನು ತಾನು ಪ್ರಾಕೃತ ಶರೀರಿಯಲ್ಲ, ಅಪ್ರಾಕೃತನು. ತನ್ನ ಶರೀರವು ಸುಖಚಿತ್ಸ್ವರೂಪವಾದುದು ಅಂದರೆ ಆನಂದಜ್ಞಾನಾತ್ಮಕವೂ, ಪೂರ್ಣವೂ ಆದುದೆಂದು ಸಜ್ಜನರಿಗೆ ತಿಳಿಸಲೋಸುಗವೇ ಪರಾತ್ಪರನಾದ ಪರಮಾತ್ಮನು ಅಂಥ ತನ್ನ ವ್ಯಾಪ್ತವಾದ ಸ್ವರೂಪವನ್ನು ತೋರಿಸಿದನು.

ಇನ್ನೊಮ್ಮೆ ಯಶೋದಾದೇವಿಯು ಬಾಲಕೃಷ್ಣನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಆಟವಾಡಿಸುತ್ತಿದ್ದಳು. "ಅಣೋರಣೀಯಾನ್ ಮಹತೋಮಹೀಯಾನ್" ಮುಂತಾಗಿ ವೇದಪ್ರತಿಪಾದ್ಯ ಮಹಾಮಹಿಮನೇ ತಾನೆಂದು ಮಾತೆಗೆ ತೋರಬಯಸಿ ತನ್ನ ಮಹತ್ವವನ್ನು ತೋರಿದನು. ಅಂದರೆ ಹೆಚ್ಚು ಭಾರವನ್ನು ಪ್ರದರ್ಶಿಸಿದನು. ಶ್ರೀಕೃಷ್ಣನ ಭಾರವನ್ನು ತಾಳಲಾರದೆ ಯಶೋದಾದೇವಿಯು "ಆಹಾ! ಶ್ರೀಕೃಷ್ಣನು ಎಷ್ಟು ಭಾರವಾಗಿದ್ದಾನಲ್ಲಾ!" ಎಂದು ಅಚ್ಚರಿಗೊಂಡು ಕೃಷ್ಣನನ್ನು ನೆಲದ ಮೇಲೆ ಕುಳ್ಳಿರಿಸಿ ಮನೆಗೆಲಸದಲ್ಲಿ ತೊಡಗಿದಳು.

ಅದೇ ಕಾಲದಲ್ಲಿ ಅತ್ಯಂತ ಕ್ರೂರನಾದ ಓರ್ವದೈತ್ಯನು ಅಲ್ಲಿಗೆ ಬಂದನು. ಅವನು ಮತ್ತಾರೂ ಅಲ್ಲ, ಕಂಸನ ಭೃತ್ಯ. ಅವನ ಹೆಸರು ತೃಣಾವರ್ತ ಎಂದು. ಕಂಸನ ಪ್ರೇರಣೆಯಿಂದ ಅವನು ಶ್ರೀಕೃಷ್ಣನನ್ನು ಸಂಹರಿಸಲು ಬಂದಿದ್ದನು. ಕ್ರೂರನಾದ ತೃಣಾವರ್ತನು ಕೂಡಲೇ ತನ್ನ ಅತ್ಯಂತ ಉಗ್ರವಾದ, ಚಕ್ರಾಕಾರವಾಗಿ ತಿರುಗುತ್ತಿರುವ ಗಾಳಿಯನ್ನು (ಸುಂಟರಗಾಳಿ) ತನ್ನ ಮಾಯೆಯಿಂದ ಸೃಜಿಸಿ ಕೃಷ್ಣನನ್ನು ಅಪಹರಿಸಿಕೊಂಡು ಆಕಾಶಕ್ಕೆ ಹಾರಿದನು. ಆಗ ನಂದನಂದನನು ವದನಾರವಿಂದದಲ್ಲಿ ಸುಂದರ ಮಂದಹಾಸವನ್ನು ಹೊರಸೂಸುತ್ತಾ ತನ್ನ ಪುಟ್ಟಕರಗಳಿಂದ ತೃಣಾವರ್ತನ ಕಂಠವನ್ನು ಬಿಗಿದನು. ಅದರಿಂದ ದೈತ್ಯನ ಶ್ವಾಸೋಚ್ಛ್ವಾಸಗಳು ನಿಂತುಹೋಗಿ ತತ್‌ಕ್ಷಣ ಮೃತನಾದನು. ಕೃಷ್ಣನು ದೈತ್ಯನನ್ನು ದೊಡ್ಡ ಶಿಲಾತಲದ ಮೇಲೆ ಅಪ್ಪಳಿಸಿದನು. ತೃಣಾವರ್ತನು ಬಂಡೆಗಲ್ಲಿನ ಪರ್ವತದಂತೆ ದೀರ್ಘದೇಹಿಯಾಗಿ ಬಿದ್ದನು. ಇಂತು ಶ್ರೀಕೃಷ್ಣನ ಲೀಲೆಯಿಂದಲೇ ಅಸುರನ ಅಸುಹೀರಿ ತನ್ನ ಅಸುರಾಂತಕನೆಂಬ ಬಿರುದು ಅನ್ವರ್ಥಕವೆಂಬುದನ್ನು ತೋರಿಸಿಕೊಟ್ಟನು. ಪುಡಿಪುಡಿಯಾಗಿ ಬಿದ್ದಿದ್ದ ಪರ್ವತಾ-ಕಾರನಾದ ತೃಣಾವರ್ತನ ಆ ದೊಡ್ಡದೇಹವನ್ನು ಕಂಡು ಮಹಾವನವಾಸಿಗಳಾದ ಸಕಲರೂ ಆಶ್ಚರ್ಯಚಕಿತರಾದರು.

ಸ್ವರೂಪಭೂತ ನಿರ್ದುಷ್ಟ-ಆನಂದಪೂರ್ಣಸಮುದ್ರನೂ, ಸ್ವಾಮಿಯೂ ಆದ ಶ್ರೀಕೃಷ್ಣನು ಕೋಪತಾಪಾದಿ ರಹಿತನೂ, ಸಾತ್ವಿಕರೂ ಆದ ಗೋಪಸ್ತ್ರೀಯರಿಗೆ ಅವರವರ ಯೋಗ್ಯತೆಗೆ ತಕ್ಕಂತೆ ಪುಣ್ಯವನ್ನು ಅಭಿವೃದ್ಧಿಪಡಿಸಲೂ, ಕೋಪಿಷ್ಠರಾದ ಗೋಪಗೋಪನೆಯರು (ಗೋಪಸ್ತ್ರೀಯರು) ತಮ್ಮ ತಮ್ಮ ಯೋಗ್ಯತೆಗೆ ಮೀರಿ ಸಂಪಾದಿಸಿದ ಹೆಚ್ಚಿನ ಪುಣ್ಯಗಳನ್ನು ಅಪಹರಿಸಲೂ ಸಹ ಅವರವರ ಮನೆಗಳಲ್ಲಿ ಹಾಲು, ಮೊಸರು, ಬೆಣ್ಣೆಗಳನ್ನು ಕಳ್ಳತನ ಮಾಡಿ ಭಕ್ಷಿಸುತ್ತಾ ಎಲ್ಲೆಡೆ ಸಂಚರಿಸಹತ್ತಿದನು. ಪೂರ್ಣಕಾಮನಾದ ಆ ಮಹಾಪ್ರಭುವಿಗೆ ಐಹಿಕವಾದ ಅಲ್ಪವಾದ ಈ ಹಾಲುಮೊಸರು ಬೆಣ್ಣೆ-ಗಳಿಂದಾಗಬೇಕಾದುದೇನೂ ಇಲ್ಲ. ಆದರೂ ಸಾಮಾನ್ಯ ಮಾನವನಂತೆ ನಟಿಸುತ್ತಾ ಹಾಲು ಮೊಸರು ಬೆಣ್ಣೆಗಳನ್ನು ಅಪಹರಿಸಿದ ಕಾರಣವಿಷ್ಟೆ, ಕೆಲ ಗೋಪಸ್ತ್ರೀಯರು ಕೋಪತಾಪರಹಿತರಾಗಿ ಸರ್ವದಾ ಶ್ರೀಕೃಷ್ಣಪ್ರೇಮಿಗಳಾಗಿ ಅವನನ್ನು ಆರಾಧಿಸುತ್ತಿದ್ದರು. ಅಂಥ ಸಾತ್ವಿಕರೂ, ಸ್ವಭಕ್ತರೂ ಆದ ಆ ಗೋಪಿಕಾಸ್ತ್ರೀಯರ ಯೋಗ್ಯತಾನುಸಾರವಾಗಿ ಅವರವರ

ಪುಣ್ಯಗಳನ್ನು ಅಭಿವೃದ್ಧಿಸಿ ಅನುಗ್ರಹಿಸಲು ಆ ಕರುಣಾಳುವಾದ ಮಹಾಪ್ರಭುವು ಅವರವರ ಮನೆಗಳಲ್ಲಿ ಹಾಲುಮೊಸರು ಬೆಣ್ಣೆಗಳನ್ನು ಮೆದ್ದು ಅದರ ಫಲರೂಪವಾಗಿ ಅವರ ಪುಣ್ಯಗಳನ್ನು ಅಭಿವೃದ್ಧಿಗೊಳಿಸಿದನು. ಅದರಂತೆ ಗರ್ವಿತರೂ, ಕೋಪ-ತಾಪ ಸ್ವಾಭಿಮಾನಯುಕ್ತರೂ ಆದ ಕೆಲಗೋಪಸ್ತ್ರೀಯರು ತಮ್ಮ ಯೋಗ್ಯತೆಗೆ ಮೀರಿ ಪುಣ್ಯಸಂಚಯ ಮಾಡಿದ್ದರು. ಹೀಗೆ ಯೋಗ್ಯತೆಗೆ ಮಿಕ್ಕಿದ ಆ ಪುಣ್ಯಗಳನ್ನು ಹ್ರಾಸಮಾಡಬೇಕೆಂದೇ ಶ್ರೀಕೃಷ್ಣನು ಅವರ ಮನೆಗಳಲ್ಲಿ ಹಾಲುಮೊಸರು ಬೆಣ್ಣೆಗಳನ್ನು ಅಪಹರಿಸಿ, ಕೃಷ್ಣ ಕಳ್ಳತನ ಮಾಡಿದ ಮುಂತಾಗಿ ಅವರು ನಿಂದಿಸುವಂತಾಗಿ ಆ ಫಲರೂಪವಾಗಿ ಅವರ ಪುಣ್ಯ ಹ್ರಾಸವಾಗುವಂತೆ ಮಾಡಿದನು. ಹೀಗೆ ಶ್ರೀಕೃಷ್ಣನು ಜೀವರ ಯೋಗ್ಯತೆಯನ್ನನುಸರಿಸಿ ಫಲನೀಡಲು ಗೋಪಿಕಾಸ್ತ್ರೀಯರ ಮನೆಗಳಲ್ಲಿ ಹಾಲು ಮೊಸರು ಬೆಣ್ಣೆಗಳನ್ನು ತಿಂದು ವಿಹರಿಸುತ್ತಿದ್ದನೇ ಹೊರತು ಪೂರ್ಣನಾದ ಆ ವಾಸುದೇವನಿಗೆ ಆ ಅಲ್ಪವಸ್ತುಗಳಿಂದೇನೂ ಆಗಬೇಕಾಗಿಲ್ಲೆಂದು ತಿಳಿಯಬೇಕು.

ಯಾವ ಸಂವತ್ಸರ ಭಾದ್ರಪದ ಮಾಸದಲ್ಲಿ[7] ಗುರು-ರವಿಗಳು ಸಿಂಹರಾಶಿಯಲ್ಲಿದ್ದಾಗ ಶ್ರೀಕೃಷ್ಣನು ಅವತರಿಸಿದನೋ ಆ ಭಾದ್ರಪದ ಮಾಸವಾದ ಮೇಲೆ ಆರನೆಯ ತಿಂಗಳಿನಲ್ಲಿ ಅಂದರೆ ಫಾಲ್ಗುಣ ಮಾಸದಲ್ಲಿ ಅರ್ಜುನನು ಜನಿಸಿದನು.

ಆ ತರುವಾಯ ಚೈತ್ರಮಾಸದಲ್ಲಿ ಒಂದು ದಿನ - ಇತ್ತ ವನದಲ್ಲಿದ್ದ ಮಾದ್ರಿದೇವಿಯು ಪತಿಯಾದ ಪಾಂಡುರಾಜನನ್ನು ಕುರಿತು - "ಸ್ವಾಮಿ, ನಿಮಗೆ ಮತ್ತು ಕುಂತೀದೇವಿಗೆ ಶ್ರೇಷ್ಠರಾದ ಪುತ್ರರಾಗಿದ್ದಾರೆ. ಆದ್ದರಿಂದ ನೀವು ಪುತ್ರವಂತರೆನಿಸಿರುವಿರಿ. ನನಗೆ ಮಕ್ಕಳಿಲ್ಲದ್ದರಿಂದ ನಾನೊಬ್ಬಳೇ ಅಪುತ್ರವತಿಯಾಗಿದ್ದೇನೆ. ನಿಮ್ಮ ಅನುಗ್ರಹದಿಂದ ಅಂದರೆ, ನೀವು ಮತ್ತು ಕುಂತೀ-ದೇವಿಯು ನನಗೆ ಪುತ್ರರನ್ನು ಪಡೆಯುವ ಮಂತ್ರಗಳನ್ನು ಉಪದೇಶಿಸುವಂತೆ ಆಣತಿಯಿತ್ತು, ಅನುಗ್ರಹಿಸಿದರೆ ನಾನೂ ಸಹ ಪುತ್ರವತಿಯಾಗುತ್ತೇನೆ" ಎಂದು ಬಿನ್ನವಿಸಿದಳು.

ಪಾಂಡುರಾಜನು ಮಾದ್ರಿಯ ಮನೋರಥವನ್ನು ಪೂರ್ಣಮಾಡಬಯಸಿ ಯದುನಂದಿನಿಯಾದ ಕುಂತೀದೇವಿಗೆ ಮಾದ್ರೀದೇವಿಯ ಬಯಕೆಯನ್ನರುಹಿ ಅವಳ ಮನದಾಸೆಯನ್ನು ಪೂರೈಸುವಂತೆ ಹೇಳಿದನು. ಪತಿಯ ಆಜ್ಞೆಯನ್ನು ತಲೆಯಲ್ಲಿ ಹೊತ್ತು ಕುಂತೀದೇವಿಯು "ಸ್ವಾಮಿ, ನಿಮಗಾಗಿ ಉಪಕರಿಸಲು ನಾನು ಮಾದ್ರೀದೇವಿಗೆ ತಕ್ಷಣವೇ ಪುತ್ರನನ್ನು ಪಡೆಯಲು ಮಂತ್ರವನ್ನು ಉಪದೇಶಿಸುತ್ತೇನೆ" ಎಂದು ವಿಜ್ಞಾಪಿಸಿ, ಮಾದ್ರೀದೇವಿಗೆ ಪುತ್ರಪ್ರದ ಮಂತ್ರವನ್ನು ಉಪದೇಶಮಾಡಿ, 'ತಂಗಿ! ಈ ಮಂತ್ರೋಚ್ಚಾರಣೆಯ ಪ್ರಭಾವದಿಂದ ಮಕ್ಕಳಾಗುವುದು. ನೀನು ಪುತ್ರನನ್ನು ಪ್ರಸವಿಸಿದ ಮೇಲೆ ಮತ್ತೆ ಪುತ್ರಪ್ರಾಪ್ತಿರೂಪಫಲವಾಗುವುದಿಲ್ಲ' ಎಂದು ನುಡಿದಳು. ಕುಂತೀದೇವಿಯಿಂದ ಮಂತ್ರೋಪದೇಶ ಪಡೆದ ಮದ್ರರಾಜಪುತ್ರಿಯು ಯಾವ ಉಪಾಯದಿಂದ ಈರ್ವರು ಪುತ್ರರನ್ನು ನಾನು ಪಡೆದೇನು? ಎಂದು ಮನದಲ್ಲಿ ಚಿಂತಿಸಿದಳು. (ಈರ್ವರು ಪುತ್ರರನ್ನು ಪಡೆಯುವ ಕುತರ್ಕ ಮಾಡಿದಳು).

ದೇವತೆಗಳಲ್ಲಿ ಸರ್ವದಾ ವಿಯೋಗರಹಿತರೂ, ಒಂದೇ ಹೆಸರಿನವರೂ, ಸಾಕಾರಾಂತಳಾದ [8]ಉಷಾ ಎಂಬುವಳೇ ಪತ್ನಿಯಾಗುಳ್ಳವಳೂ (ಈರ್ವರಿಗೂ ಓರ್ವಳೇ ಉಷಾ ಎಂಬ ಹೆಸರಿನ ಪತ್ನಿಯು) ಆದ ದಸ್ರುಗಳೆಂದು ಪ್ರಖ್ಯಾತರಾದ

---

7 ಇಲ್ಲಿ 'ಯಸ್ಮಿನ್‌ವರ್ಷೇ' ಅಂದರೆ ಯಾವ ಸಂವತ್ಸರದ ಭಾದ್ರಪದ ಮಾಸದಲ್ಲಿ ಎಂಬ ಪ್ರಯೋಗವು ಸ್ವಾರಸ್ಯಪೂರ್ಣವಾಗಿದೆ. ಅಧಿಕಮಾಸ ಬಂದಾಗ ಭಾದ್ರಪದದಲ್ಲಿ ರವಿಯು ಸಿಂಹರಾಶಿಯನ್ನು ಪ್ರವೇಶಿಸುವನು. ಶ್ರೀಕೃಷ್ಣನು ಅವತರಿಸಿದಾಗ ಗುರುವೂ ಸಿಂಹರಾಶಿಯಲ್ಲಿದ್ದನು. ದರ್ಶಮಾಸ ಕ್ರಮದಿಂದ ಆ ಮಾಸವು ಭಾದ್ರಪದವೂ, ಸೌರಮಾನದಿಂದ ಶ್ರಾವಣಮಾಸವೂ ಆಗುವುದು. ಅಂಥ ಸಂವತ್ಸರದಲ್ಲೇ ಶ್ರೀಕೃಷ್ಣನು ಅವತರಿಸಿದನೆಂದು ಸೂಚಿಸಲು ನಿರ್ಣಯಕಾರರು 'ಯಸ್ಮಿನ್‌ವರ್ಷೇ' ಎಂದು ಪ್ರಯೋಗ ಮಾಡಿದ್ದಾರೆ.

8. ಸಾಕಾರಾಂತಳಾದ ಎಂದಿಲ್ಲಿ ಹೇಳಿರುವುದು ಪ್ರದ್ಯುಮ್ನಪತ್ನಿಯಾದ ಉಷೆಗೂ, ಅಶ್ವಿನೀದೇವತೆಗಳ ಪತ್ನಿಯಾದ ಇನ್ನೊಬ್ಬ ಉಷೆಗೂ ಭೇದವನ್ನು ತಿಳಿಸಲು. ಅಶ್ವಿನೀದೇವತೆಗಳ ಪತ್ನಿಯಾದ ಉಷೆಯು ಸಾಕಾರಾಂತ ವಾಚ್ಯಳು. ಪ್ರದ್ಯುಮ್ನಪತ್ನಿ ಉಷೆಯು ಅಬಂತ ಶಬ್ದವಾಚ್ಯಳು ಎಂದು ತಿಳಿಯಬೇಕು.

ಅಶ್ವಿನೀದೇವತೆಗಳು ಒಮ್ಮೆ ಮಂತ್ರಸದನದಿಂದ ಬರುವರೆಂದು ಯೋಚಿಸಿದ ಆ ಮಾದ್ರೀದೇವಿಯು ಮಂತ್ರವನ್ನು ಪಠಿಸಿ ಅಶ್ವಿನೀದೇವತೆಗಳನ್ನು ಆಹ್ವಾನಿಸಿದಳು. ಕೂಡಲೇ ಅಶ್ವಿನೀದೇವತೆಗಳಿಬ್ಬರೂ ಬಂದು ಮಾದ್ರಿಯಲ್ಲಿ ಅನುಗ್ರಹಮಾಡಿ ತಾವೇ ಮಾದ್ರಿಗೆ ನಕುಲ-ಸಹದೇವರೆಂಬ ಹೆಸರಿನಿಂದ ಪುತ್ರರಾಗಿ ಜನಿಸಿದರು. ಮಾದ್ರಿಗೆ ಪುತ್ರರಾಗಿ ಜನಿಸಿದ ಅಶ್ವಿನೀದೇವತೆಗಳಲ್ಲಿ ಪೂರ್ವದಲ್ಲಿ ಬ್ರಹ್ಮದೇವರಿಂದ ಮೊದಲು ಜನಿಸಿದ 'ನಾಸತ್ಯ' ಎಂಬ ಅಶ್ವಿನೀದೇವತೆಯೇ ನಕುಲನಾಗಿ ಮೊದಲು ಜನಿಸಿದನು. ಅನಂತರ ಜನಿಸಿದ ಸಹದೇವನು ಬ್ರಹ್ಮದೇವರಿಗೆ ನಾಸತ್ಯನ ತರುವಾಯ ಜನಿಸಿದ್ದ ದಸ್ರನು. ಈ ಅಭಿಪ್ರಾಯದಿಂದಲೇ ನಾಸತ್ಯ-ದಸ್ರರು ಕ್ರಮವಾಗಿ ಜನಿಸಿದರೆಂದು ತಿಳಿಯಬೇಕು, ಅಥವಾ ಮೊದಲು ಜನಿಸಿದವನು, ಜ್ಯೇಷ್ಠನಾದ ನಕುಲನೆಂಬುವನು, ಕನಿಷ್ಠನು ಸಹದೇವನೆಂಬ ಹೆಸರಿನವನು. ಆ ನಕುಲಸಹದೇವರೆಂಬ ಅವಳಿಮಕ್ಕಳು ಏಕಕಾಲದಲ್ಲಿ ಮಾದ್ರಿಯ ಗರ್ಭಸ್ಥರಾದರೆಂದು ಭಾವ.

ಈರ್ವರು ಪುತ್ರರನ್ನು ಪಡೆದು ಮಾದ್ರಿಯು, ಆದರಿಂದಲೇ ತೃಪ್ತಳಾಗದೆ ಮತ್ತೆ ಪುತ್ರರೂಪ ಫಲಪ್ರದವಾದ ಮಂತ್ರವನ್ನು ತನಗೆ ಉಪದೇಶಿಸುವಂತೆ ಕುಂತಿಗೆ ಆಜ್ಞಾಪಿಸುವಂತೆ ಪತಿಯಾದ ಪಾಂಡುರಾಜನನ್ನು ಪ್ರಾರ್ಥಿಸಿದಳು. ಪಾಂಡುಮಹಾರಾಜನು ಕುಂತಿಯನ್ನು ಕರೆದು ಮಾದ್ರಿಗೆ ಮತ್ತೊಂದು ಮಂತ್ರವನ್ನುಪದೇಶಿಸಬೇಕೆಂದು ಹೇಳಿದನು. ಆಗ ಪೃಥೆಯು "ಸ್ವಾಮಿ, ಮಾದ್ರಿಯು ಕುಟಿಲಬುದ್ಧಿಯುಳ್ಳವಳಾಗಿದ್ದಾಳೆ. ನಾನು ಓರ್ವ ಪುತ್ರನನ್ನು ಪಡೆಯುವಂತೆ ಹೇಳಿ ಮಂತ್ರೋಪದೇಶಮಾಡಿದೆ. ಆದರೆ ಅವಳು ನನ್ನ ಆಣತಿಯನ್ನು ಮೀರಿ ಅಶ್ವಿನೀ ದೇವತೆಗಳನ್ನು ಆಹ್ವಾನಿಸಿ ಈರ್ವರು ಪುತ್ರರನ್ನು ಪಡೆದಿರುವಳು. ಈಗ ಮತ್ತೆ ಮಂತ್ರೋಪದೇಶಮಾಡಿದರೆ ಅವಳು ಹೆಚ್ಚುಪುತ್ರರನ್ನು ಪಡೆದು ನನಗೂ ನನ್ನ ಮಕ್ಕಳಿಗೂ ಅಪಕಾರ ಮಾಡಬಹುದೆಂಬ ಭಯ ನನಗುಂಟಾಗಿದೆ. ಆದ್ದರಿಂದ ಈಗ ಮತ್ತೆ ನೀವು ಅವಳಿಗೆ ಮಂತ್ರೋಪದೇಶ ಮಾಡುವಂತೆ ನನಗೆ ಆಜ್ಞಾಪಿಸುವುದು ಯುಕ್ತವಲ್ಲವೆಂದು ನಾನು ಭಾವಿಸುವೆನು" ಎಂದು ವಿನಂತಿಸಿದಳು. ಕುಂತಿಯ ವಚನವನ್ನಾಲಿಸಿದ ಪಾಂಡುರಾಜನು ಸುಮ್ಮನಾದನು.

ಪುತ್ರರಿಬ್ಬರು ಜನಿಸಿದ ಮೇಲೆ ಪುತ್ರರನ್ನು ಪಡೆವ ಮಂತ್ರಕ್ಕಾಗಿ ಇಚ್ಛಿಸಿದ ಮಾದ್ರಿಯು ಮೊದಲೇ ಮರುತ್ ರುದ್ರಾದಿಗಳನ್ನು ಆಹ್ವಾನಿಸಿದ್ದಲ್ಲಿ ಬಹುಪುತ್ರರನ್ನು ಪಡೆಯಬಹುದಾಗಿತ್ತಲ್ಲ! ಹಾಗೇಕೆ ಮಾಡಲಿಲ್ಲ? ಅಸಾಧಾರಣ ಹೆಸರಿನಿಂದ (ವಿಶೇಷ) ಆಹ್ವಾನಿತರಾದ ದೇವತೆಗಳು ಮಕ್ಕಳನ್ನು ನೀಡುತ್ತಾರೆ, ನಿಜ. ಆದರೆ ಮರುತ್ ರುದ್ರಾದಿಗಳು ಸಾಮಾನ್ಯ ವಾಚಕಗಳಾದ್ದರಿಂದ ಅವರನ್ನು ಆಹ್ವಾನಿಸುವಂತಿಲ್ಲವೆಂದು ಭಾವ. ಹಾಗಾದರೆ ಸಾಮಾನ್ಯ ನಾಮವುಳ್ಳ ಅಶ್ವಿನೀದೇವತೆಗಳನ್ನು ಹೇಗೆ ಕರೆದಳು ಎಂದರೆ -ನಾಸತ್ಯ - ದಸ್ರ ಎಂದು ಅಸಾಧಾರಣ ಹೆಸರಿದ್ದರೂ ಅದು ವಿಶೇಷ ರಹಿತ (ಅವ್ಯಾವರ್ತಕ) ವಾದ್ದರಿಂದ ಅದು (ಹೆಸರು) ಈರ್ವರಿಗೂ ಅನ್ವಯಿಸುವುದು. ಇಲ್ಲದಿದ್ದರೆ ನಾಸತ್ಯ-ದಸ್ರರು ಕ್ರಮವಾಗಿ ಜನಿಸಿದರೆಂದು ಹೇಳುತ್ತಿರಲಿಲ್ಲ. ಅಂತೆಯೇ ಮಾದ್ರಿಯು ಅಶ್ವಿನೀದೇವತೆಗಳನ್ನು ಆಹ್ವಾನಿಸಿದಳು ಎಂದು ತಾತ್ಪರ್ಯ. ಅಶ್ವಿನೀದೇವತೆಗಳಲ್ಲಿ ವ್ಯಕ್ತಿಭೇದವಿರುವುದರಿಂದ ಮಂತ್ರವನ್ನು ಆವೃತ್ತಿ ಮಾಡಿ ಜಪಿಸದಿದ್ದರೂ ಅಶ್ವಿನೀದೇವತೆಗಳಿಬ್ಬರೂ ಹೇಗೆ ಬಂದರು ಎಂದರೆ - ಕರೆಯಬೇಕಾದ ದೇವತೆಗಳ ನಾಮಭೇದವಿದ್ದರೂ ಏಕಮಂತ್ರವಾಚಕ ನಾಮಭೇದವಿದ್ದಲ್ಲಿ ಮಾತ್ರ ಮಂತ್ರವನ್ನು ಪುನರುಚ್ಚರಿಸಬೇಕೆಂದು ಹೇಳಿದೆಯೇ ವಿನಃ ವ್ಯಕ್ತಿ ಭೇದದಿಂದಲ್ಲವೆಂದು ಭಾವ.

ಗ್ರಂಥಾಂತರಗಳಲ್ಲಿ ಯುಧಿಷ್ಠಿರಾದಿ ಪಂಚವಾಯುಗಳೆಂದು ಹೇಳಿರುವುದರ ಅಭಿಪ್ರಾಯವನ್ನೀಗ ವಿವರಿಸುವರು.

ವಾಯುದೇವರು ಧರ್ಮರಾಜಾದಿ ನಾಲ್ವರಲ್ಲಿ (ಭೀಮನನ್ನು ಬಿಟ್ಟು) ಆವಿಷ್ಟರಾದರು. ಯುಧಿಷ್ಠಿರ, ನಕುಲ, ಸಹದೇವರಿಗಿಂತ ಅರ್ಜುನನಲ್ಲಿ ವಿಶೇಷವಾದ ಸನ್ನಿಧಾನ (ಆವೇಶ)ವನ್ನಿಟ್ಟರು. ವಾಯುದೇವರು ಶಾಂತರೂಪದಿಂದ ಧರ್ಮರಾಜನಲ್ಲಿ, ವೀರವಾಯುರೂಪದಿಂದ ಅರ್ಜುನನಲ್ಲಿ ಆವಿಷ್ಟರಾದರು. ಶ್ರೀಮುಖ್ಯಪ್ರಾಣದೇವರು ಸೌಂದರ್ಯ-

ಸ್ವರೂಪವನ್ನು ಪ್ರದರ್ಶಿಸುತ್ತಾ ನಕುಲ ಸಹದೇವರಲ್ಲಿ ಆವಿಷ್ಟರಾದರು. ಪಾಂಡುರಾಜನು ಶೃಂಗಾರಸೌಂದರ್ಯಯುಕ್ತನಾದ, ನಾಲ್ಕನೆಯ ಪುತ್ರನನ್ನು ಆಶಿಸಿದ್ದರಿಂದ ಸಹದೇವನ ರೂಪಸೌಂದರ್ಯಕ್ಕಿಂತ ವಿಶೇಷ ಶೃಂಗಾರರೂಪವಾಯುವಾಗಿ ನಕುಲನಲ್ಲೂ, ಸುನೀತರೂಪವಾಯುವಾಗಿ ಸಹದೇವನಲ್ಲೂ ಆವಿಷ್ಟರಾದರು. ಜಗತ್ತಿನ ಅಂತರ್ನಿಯಾಮಕರಾದ ಶ್ರೀಮುಖ್ಯಪ್ರಾಣದೇವರು ತಾವೇ ಸ್ವತಃ ಸಮಸ್ತಗುಣಗಳಿಂದಲೂ, ಭಕ್ತಿಜ್ಞಾನಾದಿ ಗುಣಗಳಿಂದಲೂ ಕೂಡಿ ಭೀಮಸೇನ-ದೇವರಾಗಿ ಅವತರಿಸಿದರು.

ಸದ್ಗುಣಿಗಳಾದ ಭೀಮಾರ್ಜುನರು ಅತ್ಯಂತ ರೂಪಸೌಂದರ್ಯಯುಕ್ತರಾಗಿದ್ದರೂ ಮತ್ತೇಕೆ ನಾಲ್ಕನೆಯ ಪುತ್ರನು ರ 'ೂಪಸೌಂದರ್ಯಯುಕ್ತನಾಗಿರಬೇಕೆಂದು ಪಾಂಡುರಾಜ ಆಶಿಸಿದ? ಅತ್ಯಂತ ಮೃದುವಾದ ಲಲಿತಪ್ರವಾಲದಂತೆ ಆಕಾರವುಳ್ಳವರೇ ಕೋಮಲ ಎಂದು ಸಾಮಾನ್ಯವಾಗಿ ಸ್ಥೂಲಜ್ಞಾನಿಗಳು ಹೇಳುತ್ತಾರೆ. ಆದ್ದರಿಂದ ಭೀಮಾರ್ಜುನರು ಸುರೂಪಿಗಳಾಗಿದ್ದರೂ ವಜ್ರಶರೀರಿಗಳಾದುದರಿಂದ ಅವರಿಗಿಂತಲೂ ಕೋಮಲನೂ ಸುಂದರನೂ ಆದ ಪುತ್ರನನ್ನು ಪಾಂಡುರಾಜನು ಬಯಸಿದನು. ಭೀಮಾರ್ಜುನರ ಸ್ವರೂಪವನ್ನು ಉತ್ತಮರು ನೋಡಲು ಶಕ್ಯವೇ ವಿನಃ ಸಾಮಾನ್ಯರಾದ ಸಕಲರೂ ನೋಡಲು ಶಕ್ತರಲ್ಲ! ದ್ವಾತ್ರಿಂಶಲ್ಲಕ್ಷಣೋಪೇತವಾದ ಅಂತೆಯೇ ಅತ್ಯಂತ ಶ್ರೇಷ್ಠರೂಪವುಳ್ಳ ಭೀಮಾರ್ಜುನರು ಸೂಕ್ಷ್ಮ ದೃಷ್ಟಿಯುಳ್ಳವರಿಗೆ ಮಾತ್ರ ಮನೋಹರರಾಗಿ ಕಾಣುವರು. ಸಾಮಾನ್ಯರಿಗದು ಸಾಧ್ಯವಿಲ್ಲ. ಆದ್ದರಿಂದ ಪಾಂಡುರಾಜನು ಕೋಮಲರೂಪಶಾಲಿಯಾದ ನಾಲ್ಕನೆಯ ಪುತ್ರನನ್ನು ಅಪೇಕ್ಷಿಸಿದ್ದರಿಂದ ಕೋಮಲನಾಭನಾದ ವಾಯುವು ನಕುಲನಲ್ಲಿ ಆವಿಷ್ಟನಾದನು. ಹೀಗೆ ವಾಯುದೇವರು ಈ ಶ್ರೀಕೃಷ್ಣಾವತಾರಕಾಲದಲ್ಲಿ ಪಂಚರೂಪಿಯಾಗಿ ಅಂದರೆ, ಸ್ವತಃ ಭೀಮರೂಪಿ-ಯಾಗಿಯೂ, ನಾಲ್ಕು ರೂಪದಿಂದ ಧರ್ಮರಾಜ, ಅರ್ಜುನ, ನಕುಲ ಸಹದೇವರಲ್ಲಿ ಆವಿಷ್ಟರಾಗಿಯೂ ಪಂಚರೂಪರಾಗಿ ವಿರಾಜಿಸಿದರು.

ಶ್ರೀವಿಷ್ಣು - ಪಾಂಡವರನ್ನು ಇಲ್ಲಿ ಪೂರ್ವೇಂದ್ರರೆಂದು ಹೇಳಲಾಗಿದೆ. ಶ್ರೀವಿಷ್ಣು ಮತ್ತು ಪಾಂಡವರು ಕಳೆದ ಮನ್ವಂತರಗಳಲ್ಲಿ ಇಂದ್ರರು. ಇಲ್ಲಿ ವ್ಯುತ್ಕ್ರಮ ಸಂಖ್ಯೆಯಿಂದ ವಿಷ್ಣುವೇ ಆರನೆಯವನಾಗುಳ್ಳ ಪಾಂಡವರು ಪೂರ್ವ ಮನ್ವಂತರಗಳಲ್ಲಿ ಇಂದ್ರರೆಂದು ಹೇಳಿದ್ದಾರೆ. ಪುರಾಣಗಳಲ್ಲಿಯೂ ಕೃಷ್ಣ-ಪಾಂಡವರು ಪೂರ್ವೇಂದ್ರರೆಂದು ಉಕ್ತವಾಗಿದೆ.

ಯಜ್ಞನಾಮಕನಾದ ಶ್ರೀಲಕ್ಷ್ಮೀ ಪತಿಯಾದ ವಿಷ್ಣುವು ಮೊದಲ ಮನ್ವಂತರದ ಇಂದ್ರನು. ಯಜ್ಞನಾಮ ಶ್ರೀಹರಿಯೇ ಶ್ರೀಕೃಷ್ಣನಾಗಿ ಅವತರಿಸಿದನು. ಯಜ್ಞನಾಮಕ ವಿಷ್ಣುವು ಇಂದ್ರನಾದ ಮೇಲೆ ಮುಂದಿನ ಮನ್ವಂತರದಲ್ಲಿ ಶ್ರೀಮುಖ್ಯ-ಪ್ರಾಣದೇವರು 'ರೋಚಕ' ಎಂಬ ಹೆಸರಿನ ಎರಡನೆಯ ಇಂದ್ರರಾದರು. ಆ ರೋಚಕನೆಂಬ ಹೆಸರಿನ ಮುಖ್ಯಪ್ರಾಣನೇ ಈಗ ಭೀಮಸೇನನಾಗಿ ಅವತರಿಸಿದನು. ಅವಾದ ನಂತರ ಮೂರನೆಯ ಮನ್ವಂತರದಲ್ಲಿ ಯಮದೇವರು 'ಸತ್ಯಜಿತ್' ಎಂಬ ಹೆಸರಿನಿಂದ ಇಂದ್ರರಾದರು. ಅವರೇ (ಧರ್ಮರಾಜ) ಯುಧಿಷ್ಠಿರನು. ಆ ತರುವಾಯ ಅಶ್ವಿನೀದೇವತೆಗಳಿಬ್ಬರೂ ನಾಲ್ಕು ಮತ್ತು ಐದನೆಯ ಮನ್ವಂತರಗಳಲ್ಲಿ ಕ್ರಮವಾಗಿ ಇಂದ್ರರಾದರು. ಆ ಅಶ್ವಿನೀದೇವತೆಗಳೇ ಈಗ ನಕುಲ ಸಹದೇವರಾಗಿ ಜನಿಸಿದರು. ಪುರಂದರನು ಆರನೆಯ ಮನ್ವಂತರದಲ್ಲಿ 'ಇಂದ್ರದ್ಯುಮ್ನ'ನೆಂಬ ಇಂದ್ರನು. ಅವನೇ (ಪುರಂದರನೇ) ಏಳನೆಯ ಮನ್ವಂತರದಲ್ಲಿಯೂ ಇಂದ್ರನಾದನು. ಅಂದರೆ ಪುರಂದರನು ಆರು ಮತ್ತು ಏಳನೆಯ ಮನ್ವಂತರ-ಗಳೆರಡರಲ್ಲಿಯೂ ಇಂದ್ರನು. ಆ ಪುರಂದರನೇ ಈಗ ಅರ್ಜುನನಾಗಿ ಅವತರಿಸಿದನು. ಪೂರ್ವೇಂದ್ರನಾದ ಯಜ್ಞನಾಮಕ ಇಂದ್ರನಾದ ವಿಷ್ಣುವು ಶ್ರೀಕೃಷ್ಣನಾಗಿ ಅವತರಿಸಿದನು. ಅಂತೆಯೇ ಶ್ರೀಕೃಷ್ಣ-ಪಾಂಡವರನ್ನು ಪೂರ್ವೇಂದ್ರರೆಂದು ಹೇಳಿರುವುದು ಸಮಂಜಸವಾಗಿದೆ.

ಸ್ವರೂಪದಿಂದಲೇ ಅತ್ಯಂತ ಸಮರ್ಥರಾದ ಸ್ವಾಭಾವಿಕವಾಗಿ ವಿಸ್ತಾರವುಳ್ಳ ಧರೆಯಲ್ಲಿ, ಕುಂತಿ-ಮಾದ್ರಿಯರಿಂದ ಜನಿಸಿದ (ಐವರು ಇಂದ್ರರು) ಪಾಂಡವರು ಕ್ರಮವಾಗಿ ಕ್ಷತ್ರಿಯೋಚಿತ ಸಂಸ್ಕಾರಗಳನ್ನು ಪಡೆದು ಮಹಿಮಾವಂತರಾಗಿ ಅಭಿವೃದ್ಧಿಸಿದರು. ಸರ್ವಜ್ಞರಾದ ಅವರೆಲ್ಲರೂ ತಮಗೆ ವಿಹಿತವಾದ ಶ್ರೀವಿಷ್ಣುವಿಗೆ ಪ್ರಿಯವಾದ ಸದ್ಧರ್ಮರತರಾಗಿ, ವಿಷ್ಣುಭಕ್ತರಾಗಿ ಸರ್ವದಾ ಶ್ರೀಕೇಶವನನ್ನು ಮನಸ್ಸಿನಲ್ಲಿ ಸ್ಥಾಪಿಸಿ, ಶ್ರೀಕೇಶವನಲ್ಲಿ ಅತ್ಯಂತ ಮನೋಯೋಗವುಳ್ಳವರಾಗಿ ಬೆಳೆಯಹತ್ತಿದರು. "ತೇಽವರ್ಧಂತ" ಎಂದು ಶ್ರೀಮದಾಚಾರ್ಯರು ಹೇಳಿರುವುದರಿಂದ ಪಾಂಡವರು ವೇದಪ್ರತಿಪಾದ್ಯ-ಮಹಿಮರೆಂದೂ, ಅದರಂತೆ ಅವರು ಪಂಚೇಂದ್ರರೆಂದೂ ಸ್ಪಷ್ಟವಾಗುವುದು.

ಇಂತು ಶ್ರೀಮಧ್ವಾಚಾರ್ಯರು ತಮ್ಮ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ವಿಸ್ತಾರವಾಗಿ ನಿರೂಪಿಸಿದ ದ್ವಾದಶಾಧ್ಯಾಯಕಥಾಭಾಗವನ್ನು ಶ್ರೀ ಗುರುರಾಜರು ತಮ್ಮ 'ಭಾವಸಂಗ್ರಹ'ದಲ್ಲಿ ಸಂಗ್ರಹಿಸಿ ಅನುಗ್ರಹಿಸಿದ್ದಾರೆ.

*ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದ 'ಶ್ರೀಕೃಷ್ಣಾವತಾರದಲ್ಲಿ ಪಾಂಡವರ ಉತ್ಪತ್ತಿ' ಎಂಬ ದ್ವಾದಶಾಧ್ಯಾಯ ಸಂಗ್ರಹವು ಮುಗಿದುದು.*

॥ ಶ್ರೀಕೃಷ್ಣಾರ್ಪಣಮಸ್ತು ॥





ಶ್ರೀ ಕೃಷ್ಣನಿಂದ ಗೋವರ್ಧನಗಿರಿ ಎತ್ತುವಿಕೆ

# ತ್ರಯೋದಶಾಧ್ಯಾಯಭಾವಸಂಗ್ರಹ

*ಅವತಾರಿಕೆ:-*

ಈಗ ಶ್ರೀರಾಘವೇಂದ್ರ ಗುರುಸಾರ್ವಭೌಮರವರು "ಮಹಾಭಾರತ ತಾತ್ಪರ್ಯ ನಿರ್ಣಯ"ದ ಹದಿಮೂರನೆಯ ಅಧ್ಯಾಯಾರ್ಥವನ್ನು "ಸಂಸ್ಕಾರಾನ್" ಎಂಬ ಪದ್ಯದಿಂದ ಸಂಗ್ರಹಿಸುತ್ತಾರೆ:-

**ಸಂಸ್ಕಾರಾನ್ ಪ್ರಾಪ್ಯ ಗರ್ಗಾದ್ ಬಹುಶಿಶುಚರಿತ್ರೈಃ ಪ್ರೀಣಯನ್ ಗೋಪಗೋಪೀಃ**
**ವತ್ಸಾಃ ಧೇನೂಶ್ಚ ರಕ್ಷನ್ ಅಹಿಪತಿದಮನೋ ಯಃ ಪಪೌ ಕಾನನಾಗ್ನಿಮ್ ।**
**ವಿಪ್ರಸ್ತ್ರೀಪ್ರೀತಿಕಾರೀ ಧೃತಧರಣಿಧರೋ ಗೋಪಿಕಾಭಿರ್ನಿಶಾಸು**
**ಕ್ರೀಡನ್ ಮಲ್ಲಾಂಶ್ಚ ಕಂಸಂ ನ್ಯಹನದುಪಗತೋऽವ್ಯಾತ್ಸ ಕೃಷ್ಣಃ ಪುರೀಂ ಸ್ವಾಮ್ ॥13॥**

***ಅನ್ವಯಾರ್ಥ :-*** **ಯಃ** = ಯಾವ ಶ್ರೀಕೃಷ್ಣನು, **ಗರ್ಗಾಚಾರ್ಯಾತ್** = ಗುರುಗಳಾದ ಗರ್ಗಾಚಾರ್ಯರಿಂದ, **ಸಂಸ್ಕಾರಾನ್** = ಜಾತಕರ್ಮ, ನಾಮಕರಣಾದಿ ಸಂಸ್ಕಾರಗಳನ್ನು, **ಲಬ್ಧ್ವಾ** = ಹೊಂದಿ, **ಬಹುಶಿಶುಚರಿತ್ರೈಃ** = ಬಹುವಿಧವಾದ ಬಾಲಲೀಲೆಗಳಿಂದ, **ಗೋಪಗೋಪೀಃ** = ಗೋಕುಲದ ಗೋಪಾಲಕರು ಮತ್ತು ಗೋಪಿಕಾಸ್ತ್ರೀಯರನ್ನು, **ಪ್ರೀಣಯನ್** = ಸಂತೋಷಗೊಳಿಸಿ, **ಧೇನೂಃ** = ಗೋವುಗಳು, **ವತ್ಸಾಶ್ಚ** = ಕರುಗಳನ್ನು ಸಹ, **ರಕ್ಷನ್** = ಕಾಪಾಡತಕ್ಕವನಾಗಿ, **ಅಹಿಪತಿದಮನಃ** - **ಅಹಿಪತಿ** = ಕಾಲಿಯನೆಂಬ ಸರ್ಪರಾಜನನ್ನು, **ದಮನಃ** = ಮರ್ದನಮಾಡಿ, **ಕಾನನಾಗ್ನಿಂ** = ಕಾಡುಗಿಚ್ಚನ್ನು, **ಪಪೌ** = ಕುಡಿದನು (ಪಾನ ಮಾಡಿದನು). **ವಿಪ್ರಸ್ತ್ರೀಪ್ರೀತಿಕಾರೀ** - **ವಿಪ್ರಸ್ತ್ರೀ** = ಬ್ರಾಹ್ಮಣರಾದ ಋಷಿಮುನಿಗಳ ಪತ್ನಿಯರನ್ನು, **ಪ್ರೀತಿಕಾರೀ** = ಅವರು ಭಕ್ತಿಪೂರ್ವಕವಾಗಿ ತಂದು ಬಡಿಸಿದ ಮೊಸರನ್ನ ಮೊದಲಾದುವುಗಳನ್ನು ಭೋಜನ ಮಾಡುವ ಮೂಲಕವಾಗಿ ಆನಂದಗೊಳಿಸಿ (ಪ್ರೀತಿಪಡಿಸಿ), **ಧೃತಧರಣಿಧರಃ** - **ಧೃತ** = ಧರಿಸಲ್ಪಟ್ಟ (ಕರಾಗ್ರದಿಂದ ಮೇಲಕ್ಕೆತ್ತಿ ಹಿಡಿಯಲ್ಪಟ್ಟ ), **ಧರಣಿಧರಃ** = ಗೋವರ್ಧನ ಪರ್ವತವುಳ್ಳ, **ನಿಶಾಸು** (ನಿಶಾಯಾಂ) = ರಾತ್ರಿಕಾಲದಲ್ಲಿ, **ಗೋಪಿಕಾಭಿಃ** = ಗೋಪಸ್ತ್ರೀಯರಿಂದೊಡಗೂಡಿ, **ಕ್ರೀಡನ್‌ಸನ್** = ಕ್ರೀಡಿಸುವವನಾಗಿ, **ಸ್ವಾಂ ಪುರೀಂ** = ತಾನು ಜನಿಸಿದ ಸ್ಥಳವಾದ ಮಥುರಾಪಟ್ಟಣಕ್ಕೆ, **ಉಪಗತಃ** = ಬಂದವನಾಗಿ, **ಮಲ್ಲಾನ್** = ಚಾಣೂರ, ಮುಷ್ಟಿಕರೇ ಮೊದಲಾದ ಮಲ್ಲರನ್ನು, **ಕಂಸಂ ಚ** = ಸೋದರಮಾವನಾದ ಕಂಸನನ್ನೂ ಸಹ, **ನ್ಯಹನತ್** = ಸಂಹಾರಮಾಡಿದನೋ. **ಸಃ** = ಅಂಥ, **ಕೃಷ್ಣಃ** = ಶ್ರೀಕೃಷ್ಣನು, **ಅವ್ಯಾತ್** = ನಮ್ಮನ್ನು ರಕ್ಷಿಸಲಿ.

***ತಾತ್ಪರ್ಯ :-*** ಶ್ರೀಕೃಷ್ಣ ಪರಮಾತ್ಮನು ಯಾದವರಿಗೆ ಗುರುಗಳಾದ ಗರ್ಗಾಚಾರ್ಯರಿಂದ ಜಾತಕರ್ಮ, ನಾಮಕರಣಾದಿ ಸಂಸ್ಕಾರಗಳನ್ನು ಪಡೆದು ತನ್ನ ಅನೇಕ ಬಾಲಲೀಲೆಗಳಿಂದ ಗೋಪಾಲಕರು ಮತ್ತು ಗೋಪಸ್ತ್ರೀಯರನ್ನು ಸಂತೋಷಗೊಳಿಸಿದನು. ಅದರಂತೆ ಶ್ರೀಕೃಷ್ಣನು ಗೆಳೆಯರಾದ ಗೋಪಾಲಕರೊಡನೆ ಗೋವು ಕರುಗಳಿಂದ ಕೂಡಿ ಅರಣ್ಯದಲ್ಲಿ ಸಂಚರಿಸುತ್ತಾ ಆಕಳು ಕರುಗಳನ್ನು ಹುಲ್ಲು ನೀರುಗಳಿಂದ ತೃಪ್ತಿಪಡಿಸುತ್ತಾ ಅವುಗಳನ್ನು ರಕ್ಷಿಸುತ್ತಿದ್ದನು. ಒಂದು ದಿನ ವಿಷಭರಿತವಾದ, ಕುಡಿಯಲು ಯೋಗ್ಯವಲ್ಲದ ಯಮುನೆಯ ಜಲವನ್ನು ಪಾನಮಾಡಿ ಗೋವು-ಕರುಗಳು ಮೂರ್ಛೆ ಹೊಂದಲು, ಅದಕ್ಕೆ ಕಾರಣವನ್ನು ತರ್ಕಿಸಿ ಕಾಳಿಂದಿ ಮಡುವಿನಲ್ಲಿ ಧುಮುಕಿ ಅಲ್ಲಿದ್ದ ಕಾಲೀಯ ಎಂಬ ಸರ್ಪರಾಜನ ಹೆಡೆಯೇರಿ ಕುಣಿದು ಸರ್ಪರಾಜನನ್ನು ಮರ್ದಿಸಿ, ಸರ್ಪಪತ್ನಿಯರಿಂದ ಪ್ರಾರ್ಥಿತನಾಗಿ ಸಪರಿವಾರನಾದ ಕಾಲಿಯನನ್ನು ರಮಣಕದ್ವೀಪಕ್ಕೆ ಕಳುಹಿಸಿ ಅವನನ್ನು ಅನುಗ್ರಹಿಸಿದನು. ಒಮ್ಮೆ ಗೋವುಗಳೊಡನೆ ಅರಣ್ಯದಲ್ಲಿರುವಾಗ ಗೋಪಾಲಕರು,

ಗೋವುಗಳು ಕಾಡುಗಿಚ್ಚಿನ ಬೇಗೆಗೆ ಸಿಲುಕಿ ಬಳಲುತ್ತಿರುವಾಗ, ಸ್ವಜನವತ್ಸಲನಾದ ಶ್ರೀಕೃಷ್ಣನು ತಾನೇ ಕಾಡುಗಿಚ್ಚನ್ನು ಪಾನಮಾಡಿ ಅವರೆಲ್ಲರನ್ನೂ ರಕ್ಷಿಸಿದನು. ಮತ್ತೊಮ್ಮೆ ಅರಣ್ಯದಲ್ಲಿ ಸಂಚರಿಸಿ ಬಳಲಿರುವಾಗ ಬ್ರಾಹ್ಮಣ ಸ್ತ್ರೀಯರು ಪ್ರೀತಿಯಿಂದ ತಂದು ನೀಡಿದ ಮೊಸರನ್ನ ಮೊದಲಾದ ಭೋಜನವನ್ನು ಗೆಳೆಯರಿಂದೊಡಗೂಡಿ ಭುಂಜಿಸಿ ಬ್ರಾಹ್ಮಣ ಸ್ತ್ರೀಯರನ್ನು ಪ್ರೀತಿಪಡಿಸಿದನು. ಇನ್ನೊಂದುಸಲ ಇಂದ್ರೋತ್ಸವವನ್ನು ನಡೆಸಲಿಲ್ಲವೆಂದು ಗೋಪಾಲಕರ ಮೇಲೆ ಕುಪಿತನಾದ ಇಂದ್ರನು, ಧಾರಾಕಾರವಾಗಿ ಮಳೆ ಸುರಿಸಲು, ಅದರಿಂದ ಭೀತರಾಗಿ ಕಷ್ಟಪಡುತ್ತಿದ್ದ ಸರ್ವರನ್ನೂ ಕಾಪಾಡಲು ಗೋವರ್ಧನ ಗಿರಿಯನ್ನು ತನ್ನ ಕರಾಗ್ರದಿಂದ ಛತ್ರಿಯಂತೆ ಮೇಲೆತ್ತಿ ಹಿಡಿದು ಗೋಪ-ಗೋಪಿಯರು, ಹಸು-ಕರುಗಳನ್ನು ಸಂರಕ್ಷಿಸಿದನು. ಮತ್ತೊಮ್ಮೆ ಚಂದ್ರಿಕೆಯ ಭವ್ಯ ರಾತ್ರಿ(ರಾತ್ರಿಗಳು)ಯಲ್ಲಿ ಗೋಪಿಯರು, ಗೋಪಾಲಕರೊಡನೆ ಸೇರಿ ರಾಸಕ್ರೀಡೆಯಾಡಿ ಸರ್ವರನ್ನೂ ಮುದಗೊಳಿಸಿದನು. ಕೃಷ್ಣನನ್ನು "ಧನುರ್ಯಜ್ಞ"ದ ನೆಪದಿಂದ ಸಂಹರಿಸಲು ನಿಶ್ಚಯಿಸಿದ ಕಂಸನು ಅಕ್ರೂರನ ಮೂಲಕ ಕೃಷ್ಣನಿಗೆ ಆಹ್ವಾನ ಕಳಿಸಿದನು. ಆಗ ಕೃಷ್ಣನು ತಂದೆ, ಬಾಂಧವರು, ಗೋಪಾಲಕರು, ಬಲರಾಮಾದಿಗಳೊಡನೆ ಮಥುರಾಪಟ್ಟಣಕ್ಕೆ ಬಂದು, ಬಾಹುಯುದ್ಧವಿಶಾರದರಾದ ಚಾಣೂರ, ಮುಷ್ಟಿಕ ಮೊದಲಾದ ಮಲ್ಲರನ್ನು ಸಂಹರಿಸಿ ಕೊನೆಗೆ ಸೋದರಮಾವನಾದ ಕಂಸನನ್ನು ಸಂಹರಿಸಿದನು. ಇಂತು ಮಹಾಮಹಿಮನಾದ ಶ್ರೀಕೃಷ್ಣಪರಮಾತ್ಮನು ನಮ್ಮೆಲ್ಲರನ್ನು ಕಾಪಾಡಲಿ ಎಂದು ಭಾವ.

## ತ್ರಯೋದಶೋಽಧ್ಯಾಯ ಕಥಾ ಸಂಗ್ರಹ

"ಅಕ್ಷತ್ರ ಸಂಸ್ಕಾರಯತೋ ಜಾತೋಽಪಿ ಕ್ಷತ್ರಿಯಕುಲೇ। ನ ಕ್ಷತ್ರಿಯೋಹಿ ಭವತಿ"॥ ಅಂದರೆ ಕ್ಷತ್ರಿಯೋಚಿತ ಸಂಸ್ಕಾರವಿಲ್ಲದವನು ಕ್ಷತ್ರಿಯ ಕುಲದಲ್ಲಿ ಜನಿಸಿದ್ದರೂ ಸಹ ಕ್ಷತ್ರಿಯನಾಗಲಾರ - ಎಂದು ಸ್ಮೃತಿಯಲ್ಲಿ ಹೇಳಿದೆ. ಶ್ರೀ ಕೃಷ್ಣನು ವಸುದೇವನ ಮಗನೆಂದು ತಿಳಿಯದ ನಂದಗೋಪನು ಶ್ರೀಕೃಷ್ಣನು ತನ್ನ ಔರಸಪುತ್ರನೆಂದೇ ತಿಳಿದು ಅವನಿಗೆ ವೈಶ್ಯಯೋಗ್ಯವಾದ ಸಂಸ್ಕಾರಗಳನ್ನು ಮಾಡಿಸಿದ್ದರಿಂದ ಶ್ರೀ ಕೃಷ್ಣನಿಗೆ ಕ್ಷತ್ರಿಯತ್ವವಿಲ್ಲವೆಂಬ ಆಶಂಕೆಯನ್ನು ಪರಿಹರಿಸಲು ಗರ್ಗಾಚಾರ್ಯರು ಕೃಷ್ಣ-ಬಲರಾಮರಿಗೆ ರಹಸ್ಯವಾಗಿ ಕ್ಷತ್ರಿಯೋಚಿತವಾದ ಸಂಸ್ಕಾರಗಳನ್ನು ನೆರವೇರಿಸಿದರೆಂದು ಶ್ರೀ ತಾತ್ಪರ್ಯನಿರ್ಣಯ-ಕಾರರು ಅಪ್ಪಣೆ ಕೊಡಿಸುತ್ತಿದ್ದಾರೆ -

ಯಾದವ ಸಮೂಹಕ್ಕೆ ಕುಲಪುರೋಹಿತರಾದ ಗರ್ಗಾಚಾರ್ಯರು ಶೂರಸುತನಾದ ವಸುದೇವನು ಕೃಷ್ಣ-ಬಲರಾಮರಿಗೆ ಕ್ಷತ್ರಿಯರಿಗೆ ಯೋಗ್ಯವಾದ ಸಂಸ್ಕಾರಗಳನ್ನು ನೆರವೇರಿಸಿ ಎಂದು ವಿಜ್ಞಾಪಿಸಿದಂತೆ ವ್ರಜಕ್ಕೆ ಬಂದು ಶ್ರೀಕೃಷ್ಣಪರಮಾತ್ಮನಿಗೂ ಮತ್ತು ರೋಹಿಣಿಯ ಪುತ್ರನಾದ ಬಲರಾಮನಿಗೂ ಸಹ ಕ್ಷತ್ರಿಯರಿಗೆ ಉಚಿತವಾದ ರೀತಿಯಲ್ಲಿ ಜಾತಕರ್ಮಾದಿ ಸಂಸ್ಕಾರಗಳನ್ನು ನೆರವೇರಿಸಿದರು. ಇದನ್ನು ಸ್ಪಷ್ಟಪಡಿಸಲೆಂದೇ ಶ್ರೀಮದಾಚಾರ್ಯರು "ಯಶೋದಾ ರೋಹಿಣೀ ಸೂನ್ವೋಃ" ಎಂದು ಹೇಳದೆ "ಕೃಷ್ಣ ರೋಹಿಣೀ ಸೂನ್ವೋಃ" ಎಂದು ಅಪ್ಪಣೆ ಕೊಡಿಸಿದ್ದಾರೆ.

ಗರ್ಗಾಚಾರ್ಯರು ನಂದಗೋಪನನ್ನು ಕುರಿತು "ಎಲೈ ನಂದ! ನಿನ್ನ ಮಗನಾದ ಶ್ರೀ ಕೃಷ್ಣನು ಸರ್ವಗುಣಗಳಿಂದ ಶ್ರೀ ವಿಷ್ಣುವಿಗೆ ಕಡಿಮೆಯೇನಲ್ಲ! ಅವನು ವಿಷ್ಣುವಿಗೆ ಸಮಾನನಾಗಿದ್ದಾನೆ. ಶ್ರೀ ವಿಷ್ಣುವಿಗೆ ಸಮನೂ, ಅಧಿಕನೂ ಇಲ್ಲವಾದ್ದರಿಂದ ಶ್ರೀ ಕೃಷ್ಣನು ವಿಷ್ಣುವಿಗೆ ಸಮಾನನಾಗಿದ್ದಾನೆಂದ ಮೇಲೆ ಇವನು ವಿಷ್ಣುವಿನ ಅವತಾರನೇ ಆಗಿದ್ದಾನೆ. ಇಂಥ ಮಹಾನುಭಾವನಾದ ಶ್ರೀ ಕೃಷ್ಣನಿಂದ ರಕ್ಷಿತರಾದ ನೀವು ಉಚ್ಚ ಸುಖವನ್ನು ಪಡೆಯುವಿರಿ" ಎಂದು ಹೇಳಿದರು. ಅದನ್ನು ಕೇಳಿ ನಂದಗೋಪನು ಪರಮಾನಂದಭರಿತನಾದನು. ತಾವು ಬಂದ ಕಾರ್ಯವನ್ನು ಪೂರೈಸಿ ಗರ್ಗಾಚಾರ್ಯರು ಮಥುರೆಗೆ ಹಿಂದಿರುಗಿದರು.

ಅನಂತರ ಆದಿಪುರುಷನಾದ ಕೇಶವನು ಅಗ್ರಜನಾದ ಬಲರಾಮನಿಂದೊಡಗೂಡಿ ವ್ರಜಸ್ಥಾನದಲ್ಲೆಲ್ಲಾ ಅತ್ತಿತ್ತ ಸಂಚರಿಸುತ್ತಾ ತನ್ನ ಪಾದವಿನ್ಯಾಸದಿಂದ ಪುಣ್ಯಭೂಮಿಯಾದ ವ್ರಜವನ್ನು ಅತ್ಯಂತ ಪುಣ್ಯಭೂಮಿಯನ್ನಾಗಿ ಮಾಡಿದನು. ಒಂದಾನೊಂದು ದಿವಸ ಪರಮಸಮರ್ಥನಾದ ಆ ಭಗವಂತನು 'ಶ್ರೀ ಕೃಷ್ಣನು ನನ್ನ ಮಗ'ನೆಂದು ಭಾವಿಸಿದ್ದ ತಾಯಿಯಾದ ಯಶೋದಾ ದೇವಿಗೆ 'ಕೃಷ್ಣನು ನನ್ನ ಮಗ'ನೆಂಬ ಅಜ್ಞಾನವನ್ನು ಪರಿಹರಿಸಲು ತನ್ನ ಸಮವಯಸ್ಕರಾದ ಗೋಪಗೆಳೆಯರು ನೋಡುತ್ತಿರುವಂತೆ ಮಣ್ಣನ್ನು ತಿಂದನು. ಅದನ್ನು ಕಂಡ ಅವನ ಗೆಳೆಯರು ಆ ವಿಚಾರವನ್ನು ಯಶೋದಾದೇವಿಗೆ ತಿಳಿಸಿದರು. ಯಶೋದೆಯು "ಕೃಷ್ಣಾ! ಮಣ್ಣು ತಿಂದೆಯಾ?" ಎಂದು ಬೆದರಿಸಿದಳು. ಆಗ ಕೃಷ್ಣನು "ಅಮ್ಮಾ, ನಾನು ಮಣ್ಣು ತಿಂದಿಲ್ಲಮ್ಮಾ, ಬೇಕಾದರೆ ನನ್ನ ಬಾಯಿಯನ್ನು ಪರೀಕ್ಷಿಸಿ ನೋಡು" ಎಂದು ಹೇಳಿ ತನ್ನ ಪುಟ್ಟ ಬಾಯಿಯನ್ನು ವಿಸ್ತಾರವಾಗಿ ತೆರೆದನು. ಇದೇನಾಶ್ಚರ್ಯ! ಶ್ರೀ ಕೃಷ್ಣನ ಮುದ್ದಾದ ಪುಟ್ಟ ವದನದಲ್ಲಿ ಯಶೋದಾದೇವಿಯು ಮೂಲಪ್ರಕೃತಿ ಮತ್ತು ಪ್ರಕೃತಿ ವಿಕಾರಗಳಿಂದಲೂ (ತ್ರಿಗುಣಾತ್ಮಕ ಜಡಪ್ರಕೃತಿ ವಿಕೃತಿಗಳಿಂದಲೂ) ಮಹತ್ತತ್ತ್ವಾದಿಗಳಿಂದಲೂ ಯುಕ್ತವಾದ ಸಮಸ್ತ ಜಗತ್ತನ್ನೂ ಕಂಡು ಅಚ್ಚರಿಗೊಂಡಳು!! ಹೀಗೆ ಸ್ವಾಮಿಯಾದ ಶ್ರೀಕೃಷ್ಣನು ಅನೇಕ ಪ್ರಕಾರವಾದ, ಸ್ಮರಿಸಲೂ ಅಶಕ್ಯವಾದ, ತನ್ನ ವಿನಃ ಮತ್ತೊಬ್ಬರಿಂದ ಅಂದರೆ ರಮಾದೇವಿ ಮೊದಲಾದವರಿಂದಲೂ ತಿಳಿಯಲು ಸಾಧ್ಯವಿಲ್ಲದ, ಅತ್ಯುತ್ಕೃಷ್ಟವಾದ ತನ್ನ ಸ್ವರೂಪಶಕ್ತಿಯನ್ನು ತಾಯಿಯಾದ ಯಶೋದಾದೇವಿಗೆ ತೋರಿಸಿ ಅವಳು ತನ್ನ ಪರಮಾತ್ಮ ಸ್ವರೂಪವನ್ನು ಚೆನ್ನಾಗಿ ತಿಳಿಯುವಂತೆ ಅನುಗ್ರಹಿಸಿ ಪುನಃ ತನ್ನ ಮಾತೆಯಾದ ಯಶೋದಾದೇವಿಯನ್ನು ತನ್ನ ವೈಷ್ಣವ-ಮಾಯೆಯಿಂದ ಮೋಹಗೊಳಿಸಿ ಪೂರ್ವದಂತೆ ಪುತ್ರಸ್ನೇಹಮಯಿಯನ್ನಾಗಿ ಮಾಡಿದನು, ಅಂದರೆ ತನ್ನ ಆತ್ಮತತ್ತ್ವ-ಸ್ವರೂಪವನ್ನು ಮರೆ ಮಾಡಿದನು. ಶ್ರೀ ಹರಿಯ ಮಾಯೆಯಿಂದ ಮುಗ್ಧಳಾದ ಯಶೋದಾದೇವಿಯು ಶ್ರೀ ಕೃಷ್ಣನು ಮಗನೆಂದೇ ತಿಳಿದು ಮುದಗೊಂಡಳು. ಇಂತು ಅನಂತಜ್ಞಾನಸುಖನಿಧಿಯಾದ, ಸರ್ವಸಮರ್ಥನೂ, ಶತ್ರುಸಂಹಾರಕನೂ ಆದ ಶ್ರೀಕೃಷ್ಣನು ತನ್ನ ಅಪೂರ್ವ ಲೀಲಾವಿಲಾಸಗಳಿಂದ ಜಗತ್ತನ್ನು ಮೋಹಗೊಳಿಸುತ್ತಾ ವ್ರಜ ದೇಶದಲ್ಲೆಲ್ಲಾ ಸಂಚರಿಸಹತ್ತಿದನು.

ಒಂದು ದಿನ ಯಶೋದಾದೇವಿಯು ಶ್ರೀ ಕೃಷ್ಣನಿಗೆ ಹಾಲು ಕುಡಿಸುತ್ತಿರುವಾಗ ಒಲೆಯ ಮೇಲಿಟ್ಟಿದ್ದ ಹಾಲು ಉಕ್ಕುತ್ತಿರುವುದನ್ನು ಕಂಡು ಅದನ್ನು ಕೆಳಗಿಳಿಸಲೋಸುಗ ತೊಡೆಯಮೇಲಿದ್ದ ಕೃಷ್ಣನನ್ನು ಕೆಳಗೆ ಕೂಡಿಸಿ ಹೋದಳು. ಇದರಿಂದ ಕೋಪಗೊಂಡ ಶ್ರೀ ಕೃಷ್ಣನು ಮೊಸರು ಕಡೆಯುವ ಪಾತ್ರೆಯನ್ನು ಒಡೆದುಹಾಕಿದನು. ಭಾಜನವು ಭಗ್ನವಾಗಿ ಅದರಲ್ಲಿದ್ದ ಮೊಸರು, ಜೊತೆಗೆ ಚಂದ್ರನಂತೆ ಬೆಳ್ಳಗಿರುವ ಬೆಣ್ಣೆಯೂ ನೆಲದ ಮೇಲೆಲ್ಲಾ ಹರಿಯಿತು. ಶ್ರೀ ಕೃಷ್ಣನು ಆಗ ಅದನ್ನು ತೆಗೆದುಕೊಂಡು ಹೋಗಿ ಏಕಾಂತದಲ್ಲಿ ಬೆಣ್ಣೆಯನ್ನು ಮೆದ್ದನು.

ಪರಮಾತ್ಮನಾದ ಶ್ರೀಕೃಷ್ಣನು ಬೆಣ್ಣೆ ತಿನ್ನುವುದೇ ಮೊದಲಾದ ಕಾರ್ಯಗಳನ್ನು ಏಕೆ ಮಾಡಿದನು? ಎಂಬ ಆಶಂಕೆಯನ್ನು ಈಗ ಶ್ರೀನಿರ್ಣಯಕಾರರು ಪರಿಹರಿಸುತ್ತಾರೆ.

ಜನಾರ್ದನನು, ದೇವತೆಗಳು ಭೂಮಿಯಲ್ಲಿ ಅವತರಿಸಿದಾಗ, ಅಂದರೆ ಯಾವ ಯುಗ, ಯಾವ ರೂಪ, ಯಾವ ವಯಸ್ಸು, ಯಾವ ಕುಲದಲ್ಲಿ ಜನಿಸಿರುತ್ತಾರೋ ಅದಕ್ಕೆ ತಕ್ಕಂತೆ ಆಯಾ ಕುಲ, ಯುಗ, ವಯಸ್ಸುಗಳಿಗೆ ಅನುರೂಪವಾಗಿ ನಡೆಯುವುದು ಅವರಿಗೆ ಸ್ವಧರ್ಮವೆಂದೂ, ಭಗವಂತನಾದ ತನಗೆ ಪ್ರೀತಿಕರವಾದ ಧರ್ಮವೆಂದು ಪ್ರದರ್ಶಿಸಲು ಶ್ರೀ ಜನಾರ್ದನನು ಅಧರ್ಮಕರ್ಮಗಳನ್ನು ದಹಿಸುವ ಅಗ್ನಿಯಾಗಿದ್ದರೂ ಯಾದವ ಕುಲದಲ್ಲೀಗ ಕೃಷ್ಣರೂಪದಿಂದ ಜನಿಸಿರುವುದರಿಂದ ಅವನು ಅದಕ್ಕೆ ತಕ್ಕಂತೆ ನಟನೆ ಮಾಡುತ್ತಾನೆಂದು ತಿಳಿಯಬೇಕು. ನರ-ತೀರ್ಯಗಾದಿ ವಿಪ್ರರೂಪಗಳನ್ನು ಅಂದರೆ, ರಾಮ-ಕೃಷ್ಣಾದಿ ಮಾನವ ರೂಪಗಳು, ಮತ್ಸ್ಯ-ಕೂರ್ಮಾದಿ ತಿರ್ಯಗ್ರೂಪಗಳು, ನೃಸಿಂಹ-ಹಯಗ್ರೀವಾದಿ

ರೂಪಗಳನ್ನು ಧರಿಸಿದ ಶ್ರೀ ಹರಿಯು ಶಶ್ವದೇಕಪ್ರಕಾರನಾಗಿದ್ದರೂ ಕೂಡ ಬಾಲ್ಯ, ಯೌವನಾದಿ ರೂಪ ವಯಸ್ಸಿಗೆ ತಕ್ಕಂತೆ ಕ್ರೀಡೆಗಳನ್ನು ಮಾಡುತ್ತಾನೆ. ವ್ಯಾಸ-ಭಾರ್ಗವಾದಿ ವಿಪ್ರರೂಪದಿಂದ, ರಾಮಚಂದ್ರನಾಗಿ ಕ್ಷತ್ರಿಯ ರೂಪದಿಂದ, ಗೋಪಾಲಕ ರೂಪದಿಂದ ಕೃಷ್ಣನಾಗಿ, ಅವತರಿಸಿದಾಗ ಆಯಾ ಅವತಾರಗಳಿಗೆ ಅನುರೂಪವಾಗಿ, ಬ್ರಾಹ್ಮಣರೂಪದಿಂದ ಅವತರಿಸಿದಾಗ ಅದಕ್ಕುಚಿತವಾದ ರೀತಿಯಲ್ಲಿ, ಕ್ಷತ್ರಿಯ ಮತ್ತು ಗೋಪರ ರೂಪದಿಂದ ಅವತರಿಸಿದಾಗ ಅವುಗಳಿಗನುಗುಣವಾಗಿ ಕರ್ಮ ಮಾಡುತ್ತಾ ಶ್ರೀಹರಿಯು ಕ್ರೀಡಿಸುತ್ತಾನೆ. ಹೀಗೆ ದೇವತೆಗಳ ಶಿಕ್ಷಣಕ್ಕಾಗಿ ಕಾರ್ಯಾಸಕ್ತನಾಗಿದ್ದರೂ ಉತ್ಪತ್ತಿರಹಿತನಾದ ಆ ಪ್ರಭುವು ಇತರ ದೇವತೆಗಳಿಂದ ಮಾಡಲಸದಳವಾದ ತನ್ನ ಅಚಿಂತ್ಯಾದ್ಭುತ ಬಲವನ್ನೂ, ತನ್ನ ಸರ್ವೋತ್ತಮತ್ವ, ಸರ್ವಜ್ಞತ್ವ, ಸರ್ವಶಕ್ತಿತ್ವಾದಿ ಗುಣಗಳನ್ನು ಮತ್ತೆ ಮತ್ತೆ ಪ್ರಕಟಿಸುತ್ತಾನೆ.

ಜಗದ್ಗುರುವಾದ ಶ್ರೀ ಕೃಷ್ಣನು ಮೊಸರಿನ ಪಾತ್ರೆಯನ್ನೊಡೆದು ಹಾಕಿದನೆಂಬ ಕೋಪದಿಂದ ಯಶೋದೆಯು ಅವನನ್ನು ಶಿಕ್ಷಿಸಲು ಉದ್ಯುಕ್ತಳಾದಳು. ಕುಪಿತಳಾಗಿ ಬೆತ್ತವನ್ನು ಹಿಡಿದು ಹೊಡೆಯಲು ಬಂದ ತಾಯಿಯನ್ನು ಕಂಡು ಹೆದರಿದವನಂತೆ ಓಡಹತ್ತಿದನು. ಅಬಲೆಯಾದ ಯಶೋದೆಯು ಮನೋವಿದೂರನಾದ ಅಂದರೆ ಯೋಗಿಗಳಿಂದಲೂ ಸಹ ಮನಸ್ಸಿನಿಂದಲೂ ಸಹ ಹೊಂದಲಶಕ್ಯನಾದ ಶ್ರೀ ಕೃಷ್ಣಪರಮಾತ್ಮನನ್ನು ಹಿಡಿಯಹೊರಟಳು! ಕೃಷ್ಣ-ಯಶೋದೆಯರಿಬ್ಬರೂ ಓಡಹತ್ತಿದ್ದಾರೆ. ಉತ್ಕೃಷ್ಟಪರಾಕ್ರಮನಾದ ಅಥವಾ ತ್ರಿವಿಕ್ರಮನಂತೆ ದೂರಪಾದವಿಕ್ಷೇಪಸಮರ್ಥನಾದ, ಪ್ರಭುವಾದ ಶ್ರೀಕೃಷ್ಣನು ಯಶೋದೆಯು ತನ್ನನ್ನು ಹಿಡಿಯಲು ಓಡಿ ಓಡಿ ಶ್ರಾಂತಳಾದುದನ್ನು ಕಂಡು ಕರುಣೆಯಿಂದ, 'ತಾನು ಭಕ್ತರಿಗೆ ಯಾವಾಗಲೂ ವಶನಾದವನು' ಎಂದು ತಿಳಿಸಿಕೊಡಲು ತಾನಾಗಿ ಅವಳ ಕೈಗೆ ಸಿಲುಕಿದನು. ಸರ್ವದಾ ಬಂಧರಹಿತನೂ, ಈಶ್ವರನೂ ಆದ ಕೃಷ್ಣನನ್ನು ಚೆನ್ನಾಗಿ ಕಟ್ಟಿಹಾಕಬೇಕೆಂದು ಯತ್ನಿಸುತ್ತಿದ್ದಾಳೆ ಆ ತಾಯಿ ಯಶೋದಾದೇವಿ! 'ಇಂದು ಈ ಕಳ್ಳ ಕೃಷ್ಣನನ್ನು ಕಟ್ಟಿಹಾಕಿ ಬುದ್ಧಿ ಕಲಿಸುತ್ತೇನೆ' ಎಂದು ತೀರ್ಮಾನಿಸಿ ಯಶೋದಾದೇವಿ ಹಸುವನ್ನು ಕಟ್ಟುವ ಹಗ್ಗ ಒಂದನ್ನು ಹಿಡಿದು ಬಂದು ಆ ಹಗ್ಗದಿಂದ ಕೃಷ್ಣನನ್ನು ಕಟ್ಟಲು ಯತ್ನಿಸಿದಳು. ಅದು ಸಾಕಾಗಲಿಲ್ಲ! ಇದರಿಂದ ಆಚ್ಚರಿಗೊಂಡ ಯಶೋದೆಯು ಇನ್ನೊಂದು ಹಗ್ಗವನ್ನು ತಂದಳು, ಉಹೂಂ, ಅದೂ ಸಾಕಾಗಲಿಲ್ಲ! ಮತ್ತೆ ಅನೇಕ ಹಗ್ಗಗಳನ್ನು ಒಂದಕ್ಕೊಂದು ಗಂಟುಹಾಕಿ ಅದರಿಂದ ಕೃಷ್ಣನನ್ನು ಬಂಧಿಸಲು ಪ್ರಯತ್ನಿಸಿದಳು ಆ ತಾಯಿ! ಆದರೂ ಶ್ರೀ ಕೃಷ್ಣನನ್ನು ಬಂಧಿಸಲು ಅವು ಅಪೂರ್ಣವಾದವು! ತನ್ನ ಉದರದಲ್ಲಿ ಜಗತ್ತನ್ನು ಧರಿಸಿ 'ವಿಶ್ವಂಭರ'ನೆಂದು ಗೇಗೀಯಮಾನನಾದ ಸ್ವಾಮಿಯಾದ ಶ್ರೀಕೃಷ್ಣನು ತನ್ನನ್ನು ಬಂಧಿಸಲು ಯಾರಿಗೂ ಸಾಧ್ಯವಿಲ್ಲವೆಂದು ತೋರಿಸಿಕೊಟ್ಟು, ಆ ತರುವಾಯ ತಾಯಿಗೆ ಮಗನು ವಶ್ಯನೆಂಬ ಧರ್ಮವನ್ನು ಪ್ರದರ್ಶಿಸಲು, ಉಪದೇಶಿಸಲು ಶ್ರೀ ಕೃಷ್ಣನು ಒಂದೇ ಒಂದು ಸಣ್ಣ ಕರುವಿನ ಹಗ್ಗದಿಂದಲೇ ಬಂಧನಕ್ಕೊಳಗಾದನು. ಯಶೋದೆಯು ಕೃಷ್ಣನನ್ನು ಒಂದು ಮರದ ವರಳಿಗೆ ಕಟ್ಟಿಹಾಕಿದಳು.

ನಂದಕುಮಾರನನ್ನು ಕಟ್ಟಿಹಾಕಿ ತೃಪ್ತಿಯಿಂದ ಯಶೋದೆಯು ಅತ್ತ ಹೋಗುತ್ತಲೂ ಇತ್ತ ಶ್ರೀ ಕೃಷ್ಣನು ತನ್ನನ್ನು ಕಟ್ಟಿದ್ದ ವರಳನ್ನು ಎಳೆಯುತ್ತಾ ಮುಂದುವರಿದು ಅಲ್ಲಿಯೇ ಇದ್ದ ಅತಿ ದೀರ್ಘಗಳಾದ ಯಮಳಾರ್ಜುನ ವೃಕ್ಷ (ಕಕುಭದ್ರುಮ) ವನ್ನು ವರಳನ್ನು ಎಳೆಯುವ ನೆಪದಿಂದ ಮುರಿದುಹಾಕಿದನು.

ಆ ಯಮಳಾರ್ಜುನ ವೃಕ್ಷಗಳು ಪೂರ್ವದಲ್ಲಿ ಕುಬೇರನ ಅವಳಿ ಮಕ್ಕಳು. ಆ ವೃಕ್ಷದಲ್ಲಿ ಅಸುರರು ಪ್ರವೇಶಿಸಲಿಕ್ಕೂ, ಕುಬೇರನ ಪುತ್ರರು ಮರಗಳಾಗಲಿಕ್ಕೂ ಈಗ ಕಾರಣವನ್ನು ನಿರೂಪಿಸುತ್ತಾರೆ.

ಪೂರ್ವದಲ್ಲಿ ಪೂತನಿಯಿಂದೊಡಗೂಡಿದ ಶಕಟಾಸುರನಿಂದ ಯುಕ್ತರಾದ ಧುನಿ ಮತ್ತು ಚಮು ಎಂಬ ಅಸುರರು ಪಾರ್ವತಿಯನ್ನು ಕುರಿತು ತಪಸ್ಸು ಮಾಡಿದರು. ಆ ನಾಲ್ವರೂ ಅಂದರೆ, ಪೂತನಾ, ಶಕಟಾಸುರ, ಧುನಿ ಮತ್ತು ಚಮು ಅಸುರರೂ ಒಟ್ಟಿಗೆ ಪಾರ್ವತಿಯನ್ನು ಕುರಿತು ತಪಸ್ಸನ್ನೆಸಗಿ ಅವಳಿಂದ ಅವಧ್ಯತ್ವ ವರವನ್ನು ಆ ನಾಲ್ವರೂ ಪಡೆದರು. ಮುಂದೆ

ಶಿಶುರೂಪದಿಂದಿದ್ದ ವಿಷ್ಣುವಿನಿಂದ (ಕೃಷ್ಣನಿಂದ) ಪೂತನಾ, ಶಕಟಾಸುರ ಮತ್ತು ತೃಣಾಸುರರು ಹತರಾದರು. ಈಗ ಅವರು ಆ ಯಮಳಾರ್ಜುನ ವೃಕ್ಷದಲ್ಲಿ ಆವಿಷ್ಟರಾಗಿದ್ದರು. ಕೃಷ್ಣನು ಆ ವೃಕ್ಷಗಳನ್ನು ಮುರಿದುಹಾಕಿದ್ದರಿಂದ ಧುನಿ ಮತ್ತು ಚಮು ಎಂಬ ಅಸುರರಿಬ್ಬರೂ ಸಂಹೃತರಾದರು.

ಈಗ ಕುಬೇರ ಪುತ್ರರು ಯಮಳಾರ್ಜುನ ವೃಕ್ಷರೂಪ ತಾಳಲು ಕಾರಣವನ್ನು ನಿರೂಪಿಸುತ್ತಾರೆ –

ಪೂರ್ವದಲ್ಲಿ ಒಮ್ಮೆ ನಾರದ ಮಹರ್ಷಿಗಳ ಮುಂದೆ ಕುಬೇರನ ಪುತ್ರರಾದ ನಳಕೂಬರ-ಮಣಿಗ್ರೀವರು ದಿಗಂಬರರಾಗಿ ಬಂದಾಗ ಅದನ್ನು ಕಂಡ ನಾರದರು 'ನೀವು ಬಹುಕಾಲ ವೃಕ್ಷರೂಪವನ್ನು ತಾಳಿ ಇರಿ' ಎಂದು ಶಾಪನೀಡಿದ್ದರು. ಆ ಮಣಿಗ್ರೀವ-ನಳಕೂಬರರೇ ಈಗ ಈ ಯಮಳಾರ್ಜುನ ವೃಕ್ಷರಾಗಿದ್ದರು. ಅದನ್ನು ಈಗ ಶ್ರೀ ಕೃಷ್ಣನು ಮುರಿದು ಹಾಕಿದ್ದರಿಂದ ಕೃಷ್ಣನ ಪ್ರಸಾದದಿಂದ ನಳಕೂಬರ-ಮಣಿಗ್ರೀವರು ಶಾಪಮುಕ್ತರಾಗಿ ಸ್ವಸ್ವರೂಪವನ್ನು ಪಡೆದು ಪ್ರಭುವಾದ ಶ್ರೀ ಕೃಷ್ಣನನ್ನು ಸ್ತೋತ್ರಮಾಡಿ ತಮ್ಮ ಲೋಕಕ್ಕೆ ತೆರಳಿದರು. ಅನಂತರ ಗೋಪಾಲಕರು ಕೃಷ್ಣನು ಆ ಯಮಳಾರ್ಜುನ ವಕ್ಷಗಳನ್ನು ಮುರಿದಿರುವ ಅದ್ಭುತ ವ್ಯಾಪಾರವನ್ನು ಕಂಡು ವಿಸ್ಮಿತರಾದರು.

ಬೃಹದ್ವನದಿಂದ ವೃಂದಾವನಕ್ಕೆ ಹೋಗಬೇಕೆಂದು ಶ್ರೀ ಕೃಷ್ಣನು ಅಪೇಕ್ಷಿಸಿದನು. ನಂದಕುಮಾರನಾದ ಕೃಷ್ಣನು ಬೃಹದ್ವನದಲ್ಲಿ ತನ್ನ ರೋಮಕೂಪಗಳಿಂದ ಅತ್ಯಂತ ಬಲವುಳ್ಳ ಹುಲಿಗಳಂತಿರುವ ವೃಕ (ಸಾರಮೇಯ) ಮುಂತಾದ ಹಿಂಸ್ರ ಪಶುಗಳನ್ನು ಸೃಷ್ಟಿಸಿದನು. ಅನೇಕ ಕೋಟಿ ಸಂಖ್ಯಾಕವಾದ ಆ ವೃಕಗಳಿಂದ ಪೀಡಿತರಾದ ವ್ರಜನಿವಾಸಿಗಳಾದ ಗೋಪಜನರು ಅವಿಚ್ಛಿನ್ನ ಆನಂದವುಳ್ಳ ನಂದಗೋಪನೊಡನೆ ಮಾತನಾಡಿ ಇನ್ನು ಇಲ್ಲಿರುವುದು ಅಪಾಯವೆಂದು ಭಾವಿಸಿ ಶ್ರೀಕೃಷ್ಣ – ಬಲರಾಮ-ನಂದಗೋಪಾದಿಗಳೊಡನೆ ವೃಂದಾವನಕ್ಕೆ ಪ್ರಯಾಣ ಬೆಳೆಸಿ ಅಲ್ಲಿ ವಾಸಿಸಹತ್ತಿದನು. ವೃಂದಾವನದಲ್ಲಿ ಇಂದಿರಾಪತಿಯಾದ, ಆನಂದಪೂರ್ಣನೂ ಪ್ರಭುವೂ ಆದ ಶ್ರೀಕೃಷ್ಣನು ತನ್ನ ಅತಿಪ್ರೌಢ ವ್ಯಾಪಾರಗಳಿಂದ ನಂದ-ಗೋಪಾದಿಗಳನ್ನು ಪರಮಾನಂದಗೊಳಿಸಿದನು.

ಅನಂತರ ಚಂದ್ರಮನನ್ನು ತನ್ನ ಮುಖಕಾಂತಿಯಿಂದ ತಿರಸ್ಕರಿಸುವ ವದನಾರವಿಂದನಾದ, ಚಂದ್ರನಂತೆ ಬೆಳಗುವ, ರೋಹಿಣಿಯ ಕುಮಾರನಾದ ಅಣ್ಣ ಬಲರಾಮನಿಂದೊಡಗೂಡಿದ ಶ್ರೀ ಕೃಷ್ಣನು ವೃಂದಾವನದಲ್ಲಿ ಗೋವತ್ಸಗಳನ್ನು ಪರಿಪಾಲಿಸುತ್ತಾ ಆನಂದದಿಂದ ವಾಸಮಾಡಹತ್ತಿದನು. ಆಗ ಒಂದು ದಿನ ರುದ್ರದೇವರ ವರದಿಂದ ಅವಧ್ಯನೂ, ಕರುವಿನಂತೆ ದೇಹವುಳ್ಳವನೂ ಆದ ವತ್ಸಾಸುರನೆಂಬ ಕಂಸಭೃತ್ಯನು ಕೃಷ್ಣನನ್ನು ಸಂಹರಿಸಲು ಅವನೆಡೆಗೆ ಬಂದನು. ಆಗ ಜ್ಞಾನರೂಪನೂ, ಮತ್ತೊಬ್ಬರಿಂದ ತಿಳಿಯಲಶಕ್ಯನೂ ಆದ ಶ್ರೀ ಕೃಷ್ಣನು ಕಂಸನ ಅನುಚರನಾದ ಆ ವತ್ಸಾಸುರನನ್ನು ಹಿಂಭಾಗದ ಕಾಲುಗಳನ್ನು ಹಿಡಿದು ಗಿರಗಿರನೆ ತಿರುಗಿಸಿ ವೃಕ್ಷವೊಂದರ ಮೇಲ್ಭಾಗಕ್ಕೆಸೆದು ಸಂಹಾರ ಮಾಡಿದನು.

ಆ ತರುವಾಯ ಷಣ್ಮುಖನನ್ನು ತಪಸ್ಸಿನಿಂದ ಸಂತೋಷಪಡಿಸಿ ಅವನ ಪ್ರಸಾದರೂಪವಾದ ಅಭೇದ್ಯವಾದ ಕವಚದಿಂದ ಯುಕ್ತನಾದ ಬಕಪಕ್ಷಿಯ ರೂಪದ ಕಂಸನ ಸಹಚರನಾದ ಅಸುರನು ಪ್ರಭುವಾದ ಅಚ್ಯುತನ ಬಳಿಗೆ ಬಂದನು ಮತ್ತು ಶ್ರೀಕೃಷ್ಣನನ್ನು (ಗೋವಿಂದನನ್ನು) ತನ್ನ ಬಾಯ್ತೆರೆದು ನುಂಗಿದನು. ತರುವಾಯ ಅಗ್ನಿಯಂತೆ ತನ್ನ ದೇಹವನ್ನು ದಹಿಸುತ್ತಿರುವ ಶ್ರೀಕೃಷ್ಣನನ್ನು ನುಂಗಿ ಜೀರ್ಣಿಸಿಕೊಳ್ಳಲಾರದೆ ವಾಂತಿಮಾಡಿ ಹೊರಕ್ಕೆ ಚೆಲ್ಲಿಬಿಟ್ಟನು. ಆಗ ಯಾದವರಿಗೆ ಪ್ರಭುವಾದ ಶ್ರೀ ಕೃಷ್ಣನು, ಚಂಚುವಿನ ಅಗ್ರಭಾಗದಿಂದ ಚುಚ್ಚಿ ತನ್ನನ್ನು ಕೊಲ್ಲಬಯಸಿದ ಆ ಬಕಾಸುರನನ್ನು ನೋಡಿ ನಸುನಕ್ಕು ತನ್ನ ಕರಪಲ್ಲವಗಳಿಂದ ಬಕಾಸುರನ ಕೊಕ್ಕಿನ ಎರಡು ಭಾಗಗಳನ್ನು ಹಿಡಿದು ಸೀಳಿಹಾಕಿ ಬಕಪಕ್ಷಿರೂಪದ ಆ ದೈತ್ಯನನ್ನು ಸಂಹರಿಸಿದನು. ಪರಮಾತ್ಮನ ಈ ಲೀಲಾ ವಿಲಾಸವನ್ನು ಕಂಡು ಹರ್ಷನಿರ್ಭರರಾದ ಬ್ರಹ್ಮಾದಿ ದೇವತೆಗಳು ಸುಮವರ್ಷ

ಗೈದು ಕೃಷ್ಣನನ್ನು ಸ್ತೋತ್ರಮಾಡಿದರು. ಇಂತು ಬ್ರಹ್ಮಾದಿಗಳಿಂದ ನುತನೂ ಸ್ತುತನೂ ಆದ ಮಾಧವನು ಅಗ್ರಜನಾದ ಬಲಭದ್ರನಿಂದ ಸಹಿತನಾಗಿ ಸಂಧ್ಯಾಕಾಲದಲ್ಲಿ ವೃಂದಾವನಕ್ಕೆ ಮರಳಿದನು. ಹೀಗೆ ಶ್ರೇಷ್ಠ ದೇವತೆಗಳಾದ ಬ್ರಹ್ಮಾದಿಗಳಿಂದ ವಂದ್ಯ ಪಾದಾರವಿಂದನಾದ ಸಿರಿಕೃಷ್ಣನು ಸಮವಯಸ್ಕರಾದ ಗೋಪಾಲಕರೊಡನೆ ಕ್ರೀಡಿಸುತ್ತಾ ಆರನೆಯ ವಯಸ್ಸಿಗೆ ಬಂದನು. ಬ್ರಹ್ಮರುದ್ರಾದಿಗಳಿಗೆ ನಿಯಾಮಕನಾಗಿ ವಿಶ್ವಪಾಲಕನಾಗಿದ್ದರೂ ಆ ನಮ್ಮ ಸ್ವಾಮಿಯಾದ ಶ್ರೀಕೃಷ್ಣನು ನಿಬಿಡವಾದ ಲತಾವಿತಾನಗಳಿಂದ ಅಲಂಕೃತವಾದ ಬೃಂದಾವನದಲ್ಲಿ ಗೋಪಾಲಕನಾಗಿ ವಿರಾಜಿಸಿದನು.

ನಂದಕುಮಾರನು ಅಗ್ರಜನಾದ ಬಲರಾಮನೊಬ್ಬನನ್ನು ಬಿಟ್ಟು ಉಳಿದೆಲ್ಲ ಗೋಪಾಲಕರು ಮತ್ತು ಗೋಪ-ಸಮೂಹದೊಡನೆ ಯಮುನಾನದಿಯ ತೀರಗಳಲ್ಲಿ ರಮಿಸಿದನು. ಶ್ರೀ ಕೃಷ್ಣನು ಗೋಪಜನರಿಗೆ ಮುಂಬರಲಿರುವ ದುಃಖವನ್ನೆ ಅರಿತು ಅವರಿಗೆ ತನ್ನ (ಕೃಷ್ಣನ) ಸಾಮರ್ಥ್ಯವನ್ನು ನಿರೂಪಿಸಿ ಸಮಾಧಾನ ಪಡಿಸಲೆಂದೇ ಅಣ್ಣನಾದ ಬಲರಾಮನನ್ನು ಆ ಗೋಪಜನರಲ್ಲಿ ಬಿಟ್ಟು ಗೋವುಗಳು ಮತ್ತು ಗೋವಳರೊಡನೆ ಯಮುನೆಯ ತಟದತ್ತ ನಡೆದನು.

ಯಮುನೆಯ ಮಡುವಿನಲ್ಲಿ ಕಾಳೀಯನೆಂಬ ಸರ್ಪರಾಜನು ವಾಸಮಾಡುತ್ತಿದ್ದನು. ಬ್ರಹ್ಮದೇವರ ವರಬಲದಿಂದ ಗರುಡನೊಬ್ಬನನ್ನು ಬಿಟ್ಟು ಮಿಕ್ಕವರಿಂದ ಅವಧ್ಯನಾದ, ತಡೆಯಲಸದಳವಾದ ವಿಷಪ್ರಭಾವದಿಂದ ವೀರ್ಯವಂತನಾದ ಕಾಳಿಯನೆಂಬ ಸರ್ಪರಾಜನು ಯಮುನೆಯ ಮಡುವಿನಲ್ಲಿರುವುದನ್ನು ಶ್ರೀ ಕೃಷ್ಣನು ಅರಿತನು. ಆ ಸರ್ಪರಾಜನ ವಿಷದಿಂದ ದೂಷಿತವಾದ ಯಮುನೆಯ ಜಲಪಾನ ಮಾಡಿ ಗೋವುಗಳು, ಗೋಪಾಲರು ಮೂರ್ಛಿತರಾಗಿ ಬಿದ್ದರು ಅಥವಾ ಮೃತರಾದರು. ಇವುಗಳನ್ನು ಕಂಡು ಶ್ರೀ ಕೃಷ್ಣನು ಸಮವಯಸ್ಕರಾದ ಗೆಳೆಯರಾದ ಗೋಪಾಲಕರನ್ನೂ ಗೋವುಗಳನ್ನೂ ಕಾಪಾಡಿದನು. ಶ್ರೀ ಗೋವಿಂದನ ಮಂಗಲಕರ ಕೃಪಾದೃಷ್ಟಿವೀಕ್ಷಣಪೀಯೂಷಧಾರೆಯಿಂದ ಅಭಿಷಿಕ್ತರಾದ ಸಕಲ ಗೋಪಾಲಕರೂ, ಗೋವುಗಳೂ ಕೂಡಲೇ ಜೀವಂತರಾದರು.

ಅನಂತರ ವಾಸುದೇವನು ಎತ್ತರವಾದ ಕೊಂಬೆಗಳಿಂದ ಶೋಭಿಸುವ ಕದಂಬವೃಕ್ಷದ ಮೇಲೆ ಹತ್ತಿ ದೃಢವಾಗಿ ಟೊಂಕಕ್ಕೆ ವಸ್ತ್ರವನ್ನು ಬಿಗಿದು ತನ್ನ ಕರಗಳಿಂದ ಭುಜಗಳನ್ನು ತಟ್ಟುತ್ತಾ ವಿಷಪೂರ್ಣವಾದ ಯಮುನೆಯ ಮಡುವಿಗೆ ಜಿಗಿದನು. ಪರಮಪುರುಷಾದ ಶ್ರೀ ಕೃಷ್ಣನು ಕದಂಬವೃಕ್ಷದ ಮೇಲಿನಿಂದ ಹಾರಿದ ರಭಸಕ್ಕೆ ಯಮುನೆಯ ಜಲವು ಸಂಕ್ಷೋಭಿತವಾಗಲು ಮಡುವಿನಲ್ಲಿ ಅಡಗಿದ್ದ ಕಾಳಿಯನು ಆ ರಭಸವನ್ನು ತಾಳಲಾರದೆ ಉಛ್ವಾಸವನ್ನು ಬಿಡಹತ್ತಿದನು. ಅದರಿಂದ ಜಲರಾಶಿಯು ಉಬ್ಬರಿಸಿತು. ವಿಶಮಿಶ್ರಿತವಾದ ಭಯಂಕರ ತರಂಗಗಳಿಂದ ಭಯಜನಕವಾದ ಸರ್ಪದಿಂದ ಸಹಿತವಾದ ಯಮುನೆಯ ಜಲವು ನೂರಾರು ಮಾರುಗಳ ವರೆಗೆ ಸುತ್ತ ಮೇಲಕ್ಕೆ ಉಕ್ಕಿ ಎಗರಿತು. ಅನಂತಬಲನಾದ ಶ್ರೀಕೃಷ್ಣನ ಎಗರುವಿಕೆಯಿಂದ ನೂರಾರುಮಾರು ಪರ್ಯಂತ ನೀರು ಮೇಲೆರಚಲ್ಪಟ್ಟಿದ್ದು ಆಶ್ಚರ್ಯವೇನಲ್ಲ.

ಆಗ ವಸುದೇವಸುತನಾದ ಶ್ರೀಕೃಷ್ಣನು ತನ್ನೆರಡು ಕರಗಳಿಂದ ಯಮುನಾಹೃದಯವನ್ನು ಆಸ್ಫೋಟಮಾಡುತ್ತಾ ಕಲುಷಗೊಳಿಸುತ್ತಿರಲು ಕಾಳಿಯನು ತನ್ನ ಪರಿವಾರದೊಡನೆ ಬಂದ ಕೃಷ್ಣನನ್ನು ಕಚ್ಚಿದನು. ಶ್ರೀಕೃಷ್ಣನು ತನ್ನ ಪ್ರಭುವೆಂದರಿಯದ ವಿವೇಕಶೂನ್ಯನಾದ ಆ ಸರ್ಪರಾಜನು ಶ್ರೀ ವಾಸುದೇವನನ್ನು ತನ್ನ ಬಾಲ ಮುಂತಾದ ದೇಹದಿಂದ ಬಂಧಿಸಿದನು. ಸರ್ವಸಮರ್ಥನಾದ ಶ್ರೀಕೃಷ್ಣನು ಭಕ್ತವಶನಾಗಿ ಕಾಲಿಯನ ಈ ಅಪರಾಧವನ್ನು ಸಹಿಸಿದನು.

ಮುಸಲಿಯಾದ (ನೇಗಿಲೇ ಆಯುಧವಾಗುಳ್ಳವನು) ಬಲರಾಮನು, ಕಾಲೀಯನನ್ನು ಶಿಕ್ಷಿಸಲು ಶ್ರೀಕೃಷ್ಣನು ಹೋಗಿ ಯಮುನೆಯ ಮಡುವಿಗೆ ಹಾರಿದ ವಿಚಾರ ತಿಳಿದು ಭಯಗೊಂಡ ಗೋಪಾಲಕರಿಗೆ ಶ್ರೀಕೃಷ್ಣನ ಸಾಮರ್ಥ್ಯವನ್ನು ಹೇಳಿ ಧೈರ್ಯ ಹೇಳಿದರೂ ಸಹ ಗೋಪಜನರು ಅನೇಕ ಉತ್ಪಾತಗಳನ್ನು ನೋಡಿ ಶ್ರೀಕೃಷ್ಣನಿಗೇನಾಗುವುದೋ ಎಂಬ ಭಯದಿಂದ

ಎಲ್ಲರೂ ಕಾಳಿಯನಿದ್ದ ಯಮುನೆಯ ಮಡುವಿನತ್ತ ಧಾವಿಸಿಬಂದರು. ಸ್ವಭಕ್ತರಾದ ಗೋಪಜನರ ದುಃಖವನ್ನು ಕಂಡು, ತನ್ನ ಭಕ್ತನಾಗಿದ್ದರೂ ಅನೇಕ ನಾಗಗಳಿಗೆ ಅಧಿಪತಿಯಾದ ಕಾಳಿಯನನ್ನು ಪ್ರಭುವು ಮರ್ದಿಸಿದನು. ಹಲ-ಕೆಲ ಭಕ್ತರಿಗಿಂತ ಬಹುಜನ ಭಕ್ತರ ದುಃಖವನ್ನು ಸ್ವಾಮಿಯಾದ ಶ್ರೀಕೃಷ್ಣನು ಪರಿಹರಿಸಲಿಚ್ಛಿಸಿದ್ದು ಯುಕ್ತವೇ ಆಗಿದೆ. ಅದನ್ನು ಕಂಡು ಚತುರಾನನಾದಿ ದೇವತೆಗಳು ಕೃಷ್ಣನ ಮೇಲೆ ಪುಷ್ಪವೃಷ್ಟಿ ಮಾಡಿ ಸ್ತುತಿಸಿದರು. ಇಂತು ಅಮರನಿಕರರಿಂದ ಸ್ತೂಯಮಾನನಾದ ವಾಸುದೇವನು ಆ ಕಾಳಿಯನಾಗನ ಉನ್ನತವಾದ ಫಣಿಯಲ್ಲಿ ಆನಂದದಿಂದ ನರ್ತಿಸಲಾರಂಭಿಸಿದನು. ಶ್ರೀಕೃಷ್ಣನ ನರ್ತನಾ-ವಿಲಾಸದಿಂದ ಆರ್ತನಾಗಿ, ಪೀಡಿತನಾಗಿ ಸರ್ಪರಾಜನು ಮುಖದಿಂದ ರಕ್ತವನ್ನು ಕಾರುತ್ತಾ ಮನಸ್ಸಿನಲ್ಲಿಯೇ ಭಕ್ತರಕ್ಷಕನೆಂದು ಪ್ರಸಿದ್ಧನಾದ ನಾರಾಯಣನನ್ನು ಸ್ಮರಿಸಿ ಅವನಿಗೆ ಶರಣುಹೋದನು. ಕಾಲಿಯನಾಗನ ಪತ್ನಿಯರು ಕೃಷ್ಣನ ವಿಚಿತ್ರತಾಂಡವ ನೃತ್ಯದಿಂದ ಭಗ್ನವಾದ ಫಣರೂಪ ಛತ್ರವುಳ್ಳ ಮತ್ತು ಮುಖದಿಂದ ರಕ್ತವನ್ನು ಕಾರುತ್ತಾ ಮೂರ್ಛಾವಸ್ಥೆ ಬುದ್ಧಿಯುಳ್ಳ ಆ ಸರ್ಪರಾಜನನ್ನು ನೋಡಿ ಬಳಿಗೈತಂದರು. ಸರ್ಪರಾಜನ ಪತ್ನಿಯರು ಸಕಲಜಗತ್ತಿಗೆ ಮೂಲಗುರುವಾದ (ಅಥವಾ ಸರ್ವ ಜಗತ್ತಿನ ಸೃಷ್ಟಿಕರ್ತನೂ ಗುರುವೂ ಆದ) ಅಥವಾ ರುದ್ರಾದಿ ಸರ್ವಜಗತ್ತಿಗೂ ಆದಿಯಾದ, ಸೃಷ್ಟಿಕರ್ತನಾದ ಬ್ರಹ್ಮದೇವನಿಗೆ ಗುರುವಾದ, ಅತ ಏವ ಸರ್ವಸಮರ್ಥನಾದ ಶ್ರೀಕೃಷ್ಣನಿಗೆ ಸಾಷ್ಟಾಂಗ ಪ್ರಣಾಮಮಾಡಿದರು. ನಾಗವಧುಗಳೂ ಕಾಳಿಯನೂ ಸಹ ಶ್ರೀಕೃಷ್ಣನನ್ನು ಪರಿಪರಿಯಾಗಿ ಸ್ತೋತ್ರಮಾಡಿದರು. ಆಗ ಭಗವಂತನಾದ ಶ್ರೀಕೃಷ್ಣನು ಕಾಲಿಯನಿಗೆ "ನಿನಗೆ ಗರುಡನಿಂದ ಭಯವಿಲ್ಲದಂತಾಗಲಿ" ಎಂದು ಅಭಯವಿತ್ತು ಯಮಸಹೋದರಿಯಾದ ಯಮುನೆಯ ಜಲದಿಂದ ಆ ಕಾಳಿಯನನ್ನು ಹೊರಗೆಹಾಕಿ (ರಮಣಕದ್ವೀಪಕ್ಕೆ ಕಳುಹಿಸಿಕೊಟ್ಟು) ವೃಂದಾರಕವೃಂದಗೇಗೀಯಮಾನಚರಿತನಾದ ಶ್ರೀಕೃಷ್ಣನು ಯಮುನೆಯು ವಿಷರಹಿತವಾಗುವಂತೆ ಮಾಡಿದನು. ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಕೃಷ್ಣನು ಯಮುನಾಜಲದಿಂದ ಹೊರಬಂದು ಯಮುನಾತೀರದಲ್ಲಿ ಅತ್ಯುತೃಪ್ತ ಆನಂದತುಂದಿಲರಾದ ಗೋಪಾಲಕರಿಂದೊಡಗೂಡಿ ಆ ರಾತ್ರಿಯನ್ನು ಅಲ್ಲಿಯೇ ಕಳೆದನು. ಅಂದು ರಾತ್ರಿಯಲ್ಲಿ ಅತಿಶಯ ಬಲಯುಕ್ತವಾದ ದಾವಾಗ್ನಿಯು ಪ್ರಜ್ವಲಿಸುತ್ತಾ ಎಲ್ಲರನ್ನೂ ನಾಶಮಾಡಲು ಬರುತ್ತಿರುವುದನ್ನು ಕಂಡು ಶ್ರೀಕೃಷ್ಣನು ವೃಂದಾವನದ ಮತ್ತು ಗೋಪಾಲಕರ ರಕ್ಷಣೆಗಾಗಿ ಆ ದಾವಾಗ್ನಿಯನ್ನು ತಾನೇ ಪಾನಮಾಡಿಬಿಟ್ಟನು.

ಹೀಗೆ ಅಪರಿಮಿತ ಶಕ್ತಿಸಂಪನ್ನನಾದ ಮತ್ತು ಅಜನಾದ (ಜನ್ಮರಹಿತನಾದ) ಶ್ರೀಕೃಷ್ಣನು ಗೋಕುಲದಲ್ಲಿ ಅನೇಕವಿಧವಾಗಿ ಚಿಂತಿಸಲು ಅಶಕ್ಯವಾದ ಅಲೌಕಿಕವಾದ ಕಾರ್ಯಗಳನ್ನೆಸಗುತ್ತಾ ಕ್ರೀಡಿಸುತ್ತಿರಲು ವೃಕ್ಷರೂಪನಾದ 'ಉಗ್ರ'ಎಂಬ ಹೆಸರಿನ ಅಸುರನೋರ್ವನು ವ್ರಜೋದ್ಭವರಾದ ಗೋಪಾಲಕರ ವಿನಾಶಕಾರ್ಯದಲ್ಲಿ ಉದ್ಯುಕ್ತನಾದನು. ಆ ವೃಕ್ಷರೂಪಿಯಾದ ಉಗ್ರಾಸುರನು ತನ್ನ (ವೃಕ್ಷದ) ವಿಷಯುಕ್ತ ಗಂಧ (ಪರಿಮಳ)ದಿಂದ ಜಗತ್ತನ್ನು ವಿನಾಶಮಾಡುವ ಬುದ್ಧಿಯುಳ್ಳವನಾದನು. ಅಂದರೆ ಆ ವಿಷಯುಕ್ತವಾದ ಗಂಧದಿಂದ ವ್ರಜದ ಗೋವುಗಳು, ಗೋಪಾಲಕರೇ ಆದಿಯಾಗಿ ಸಕಲ ಪ್ರಾಣಿಗಳೂ ವ್ಯಾಧಿಪೀಡಿತರಾಗಿ ಸಂಕಟದಿಂದ ಮರಣಸಹತ್ತಿದರು. ಬಲರಾಮನೂ ಸಹಿತ ಆ ವೃಕ್ಷಾಸುರನ ವಿಷಮಯ ಪರಿಮಳದಿಂದ ಪೀಡಿತರಾದರು. ಅದನ್ನು ಕಂಡು ಶ್ರೀಕೃಷ್ಣನು ತನ್ನ ಕರಸ್ಪರ್ಶದಿಂದ ಸರ್ವರನ್ನೂ, ಆಲಿಂಗನದಿಂದ ಬಲರಾಮನನ್ನೂ ರೋಗಮುಕ್ತರಾಗುವಂತೆ ಕಾಪಾಡಿದನು. ಅನಂತರ ವೃಕ್ಷಾಕಾರದ ಸಕಲ ಸಹಚರರಿಂದ ಕೂಡಿದ ಉಗ್ರಾಸುರನನ್ನು (ವೃಕ್ಷರೂಪಿ ಅಸುರನನ್ನು) ಬೇರುಸಹಿತವಾಗಿ ಕಡಿದುಹಾಕಿ ನಾಶಪಡಿಸಿದನು. ಬ್ರಹ್ಮದೇವರ ವರಬಲದಿಂದ ಅವಧ್ಯರೂ ಮರಣರಹಿತರೂ ಆಗಿದ್ದರೂ ಗೋ ಸ್ವರೂಪಿಗಳಾದ ದೈತ್ಯರು, ವೃಕ್ಷರೂಪಿ ದೈತ್ಯರನ್ನು ಅಂದರೆ ಉಗ್ರಾಸುರನನ್ನೂ, ಗೋರೂಪದ ಅವನ ಪತ್ನಿಯರನ್ನೂ ಗೋರೂಪದ ಅವನ ಮಕ್ಕಳನ್ನು ಬುಡಸಹಿತ ಕಿತ್ತುಹಾಕಿ ಭಸ್ಮಮಾಡಿದನು. ಆ ತರುವಾಯ ಕಮಲನಯನನಾದ ಶ್ರೀಕೃಷ್ಣನು ಬಲರಾಮನಿಂದೊಡಗೂಡಿ ಯಮುನೆಯಲ್ಲಿ ಮಿಂದು ವೃಂದಾವನಕ್ಕೆ ತೆರಳಿ ವೃಂದಾವನವನ್ನು ರೋಗರಹಿತವನ್ನಾಗಿ ಮಾಡಿದನು.

ವಿಭುವಾದ ಶ್ರೀಕೃಷ್ಣನು ರುದ್ರದೇವರ ವರದಿಂದ ಯಾರಿಂದಲೂ ನಿಗ್ರಹಿಸಲಾಗದ ಅತ್ಯಂತ ಬಲವೀರ್ಯಗಳಿಂದ ಯುಕ್ತರಾದ ಏಳು ವೃಷಭಗಳ ರೂಪದಲ್ಲಿದ್ದ ಏಳುಜನ ದೈತ್ಯರನ್ನು ಸಂಹರಿಸಿ, ಯಶೋದಾದೇವಿಯ ಸಹೋದರನಾದ ಕುಂಭಕನ ಮಗಳಾದ ನೀಲಾದೇವಿಯನ್ನು ವರಿಸಿದನು. ಆ ನೀಲಾದೇವಿಯು ಪೂರ್ವದಲ್ಲಿ ತಾನು ಕೃಷ್ಣನ ಮೊಟ್ಟಮೊದಲ ಹೆಂಡತಿಯಾಗಬೇಕೆಂದು ತಪಸ್ಸನ್ನಾಚರಿಸಿ ವರಪಡೆದಿದ್ದಳು. ಆ ತಪಸ್ಸನ್ನಾಚರಿಸಿ ವರಬಲದಿಂದ ನೀಲಾದೇವಿಯಾಗಿ ಜನಿಸಿದ ಮೇಲೆ ಶ್ರೀಕೃಷ್ಣಾವತಾರದಲ್ಲಿ ಶ್ರೀಹರಿಯು ಅವತರಿಸಿದ್ದಾಗ ರುಕ್ಮಿಣೀ ಮೊದಲಾದ ಸಕಲ ಉತ್ತಮ ಸ್ತ್ರೀಯರಿಗಿಂತ ಮೊದಲು ತಾನು ಕೃಷ್ಣನೊಡನೆ ರಮಿಸಬೇಕೆಂಬ ಇಚ್ಛೆಯಿಂದ ವಿಶೇಷರೀತಿಯಾಗಿ ತಪಸ್ಸು ಮಾಡಿದ್ದಳು. ಅಂತೆಯೇ ಶ್ರೀಕೃಷ್ಣನು ರುಕ್ಮಿಣೀ ಮೊದಲಾದ ಸಕಲ ಉತ್ತಮಸ್ತ್ರೀಯರಿಗಿಂತ ಈ ನೀಲಾದೇವಿಯನ್ನು ಮದುವೆಯಾದನು. ಶ್ರೀಕೃಷ್ಣನು ತನಗೆ ಉಪನಯನವಾಗುವುದಕ್ಕಿಂತ ಪೂರ್ವದಲ್ಲೇ ನೀಲಾದೇವಿಯನ್ನು ಲಗ್ನವಾದನು. ಸರಿ, ತಪಸ್ಸನ್ನಾಚರಿಸಿದ್ದ ನೀಲಾದೇವಿಯೇ ಮೊದಲ ಪತ್ನಿಯಾಗಲಿ, ಮತ್ತು ಪ್ರಥಮ ಸಂಗಮವೂ ಅವಳೊಡನೆಯೇ ಆಗಲಿ, ಆದರೆ ಉಪನಯನವಾಗುವುದಕ್ಕಿಂತ ಮೊದಲೇ ಗೋಪಾಂಗನೆಯರನ್ನು ಕೃಷ್ಣನು ಏಕೆ ವರಿಸಿದ? ಎಂಬುದನ್ನೀಗ ನಿರೂಪಿಸುತ್ತಾರೆ - ಪೂರ್ವಜನ್ಮದಲ್ಲಿ ಗೋಪಿಕಾ-ಸ್ತ್ರೀಯರು ಶ್ರೇಷ್ಠ ಅಪ್ಸರಸ್ತ್ರೀಯರು. ಆ ಅಪ್ಸರಸ್ತ್ರೀಯರು ಹಿಂದೆ ಶ್ರೀಕೃಷ್ಣನು ಉಪನಯನ ಸಂಸ್ಕಾರಗಳನ್ನು ಪಡೆಯುವ ಮೊದಲೇ ಅವನ ಸಂಗಮವು ತಮಗಾಗಬೇಕೆಂದು ತಪಸ್ಸನ್ನು ಮಾಡಿ ವರಪಡೆದಿದ್ದರು. ಆದುದರಿಂದ ಶ್ರೀಕೃಷ್ಣನು ಮೊದಲು ನೀಲಾದೇವಿಯನ್ನು ಮದುವೆಯಾಗಿ ಅವಳೊಡನೆ ಕ್ರೀಡಿಸಿದನು. ನಂತರ ಗೋಪಕನ್ಯೆಯರೊಡನೆ ರಮಿಸಿದನು.

ಗೋಕುಲದ ಬಳಿಯಲ್ಲಿ ಅನೇಕ ತಾಳೆಯ ವನಗಳಿದ್ದವು. ಅಲ್ಲಿ ಧೇನುಕನೆಂಬ ದೈತ್ಯನು ವಾಸವಾಗಿದ್ದನು. ಅವನ ಭಯದಿಂದ ಅತ್ತ ಯಾರೂ ಸಂಚರಿಸುತ್ತಿರಲಿಲ್ಲ. ಒಂದು ದಿನ ಕೃಷ್ಣನ ಗೆಳೆಯರಾದ ಗೋಪಾಲಕರು ಬಲರಾಮಸಹಿತವಾದ ಶ್ರೀಕೃಷ್ಣನ ಬಳಿಗೆ ಬಂದು "ಕೃಷ್ಣ! ತಾಲಾವನದಲ್ಲಿರುವ ಪಕ್ವವಾದ ತಾಳೆಯ ಹಣ್ಣುಗಳನ್ನು ತಿನ್ನಬೇಕೆಂದು ಆಸೆಯಾಗಿದೆ. ನಮ್ಮ ಅಭೀಷ್ಟವನ್ನು ಪೂರ್ಣಮಾಡು" ಎಂದು ಕೋರಿದರು. ಗೆಳೆಯರ ವಿನಂತಿಯನ್ನಾಲಿಸಿ ಕೃಷ್ಣನು ಬಲರಾಮ ಮತ್ತು ಗೋಪಾಲರೊಡಗೂಡಿ ತಾಲಾವನ ಸಮೂಹಕ್ಕೆ ಬಂದನು.

ಧೇನುಕಾಸುರನು ಅತ್ಯಂತ ದುಷ್ಟನಾಗಿದ್ದನು. ಅವನು ವಿಘ್ನೇಶ್ವರನ ವರದಿಂದ ದೀರ್ಘಾಯುವೂ ಅತ್ಯಂತ ಪರಾಕ್ರಮಿಯೂ, ಸದಾ ಯುದ್ಧಪ್ರಿಯನೂ ಆಗಿ ಮದಿಸಿದ್ದನು. ಕ್ರೂರಿಯಾದ ಆ ಧೇನುಕನ ಆವಾಸಸ್ಥಾನವಾದ ತಾಲಾವನಕ್ಕೆ ಬಂದ ಮೇಲೆ ಶ್ರೀಕೃಷ್ಣನ ಸಲಹೆಯಂತೆ ಬಲರಾಮನು ಪುಷ್ಟವಾದ ತನ್ನ ಬಾಹುಗಳಿಂದ ತಾಳೆಯ ಮರಗಳನ್ನು ತಬ್ಬಿಹಿಡಿದು ಬಲವಾಗಿ ಅಲುಗಾಡಿಸಿ ಮಾಗಿದ ತಾಳೆಯ ಹಣ್ಣುಗಳನ್ನು ಬೀಳಿಸಹತ್ತಿದನು. ಅದನ್ನು ಕಂಡು ಕ್ರುದ್ಧನಾದ ಖರರೂಪಿಯಾದ (ಕತ್ತೆರೂಪದ) ಧೇನುಕನು ಬಲರಾಮನಿಗೆದುರಾಗಿ ಧಾವಿಸಿ ಬಂದು ತನ್ನ ಹಿಂಗಾಲುಗಳಿಂದ ಬಲರಾಮನನ್ನು ಪ್ರಹರಿಸಲು ಉದ್ಯುಕ್ತನಾದನು. ಆಗ ಗಾರ್ದಭರೂಪಿಯಾದ ಧೇನುಕನ ಹಿಂಭಾಗದ ಎರಡು ಕಾಲುಗಳನ್ನು ಬಲವಾಗಿ ಹಿಡಿದು ಗಿರಗಿರನೆ ತಿರುಗಿಸಿ ತಾಳಾವೃಕ್ಷದ ಮೇಲ್ಭಾಗಕ್ಕೆ ಹೊಡೆದು ಗಿಡವನ್ನು ಛೇದಿಸಿದನು ಮತ್ತು ಧೇನುಕ ದೈತ್ಯನನ್ನು ಸಂಹರಿಸಿದನು. ಬಹುಕ್ರೂರಿಯಾದ ಆ ಧೇನುಕದೈತ್ಯನು ಮೃತನಾದ ಮೇಲೆ ಆ ಖರ (ಶ್ರೀತಾಲಾ) ತಾಲವನದ ಮಧ್ಯದಲ್ಲಿರುವ ಕ್ರೂರಿಗಳೂ, ಕರ್ಕಶಸ್ವರರೂ, ಧೇನುಕ ದೈತ್ಯನ ಸಂಬಂಧಿಗಳೂ ಆದ ಖರ-ರಾಸಭ ರೂಪದ ರಾಕ್ಷಸರು ತಮ್ಮ ಶತ್ರುವಾದ, ಬಲರಾಮನಿಂದೊಡಗೂಡಿದ ಶ್ರೀಕೃಷ್ಣನ ಮೇಲೇರಿಬಂದರು. ಅವರೆಲ್ಲರನ್ನೂ ಶ್ರೀಕೃಷ್ಣನು ಸಂಹಾರಮಾಡಿದನು. ಹೀಗೆ ಅಪ್ರತಿಹತ ಪರಾಕ್ರಮಿಯೂ ಮತ್ತು ಗುಣಪರಿಪೂರ್ಣನೂ ರಮಾರಮಣನೂ ಆದ ಶ್ರೀಕೃಷ್ಣನು ವಿನಾಯಕನ ವರಬಲದಿಂದ ಮತ್ತೊಬ್ಬರಿಂದ ಅವಧ್ಯರಾದ ಗಾರ್ದಭ ಸ್ವರೂಪಿಗಳಾದ ಆ ಎಲ್ಲ ದೈತ್ಯರನ್ನೂ ಸಂಹಾರ ಮಾಡಿ ತನ್ನವರಾದ ಗೋಪಾಲಕರಿಗೆ ಮಾಗಿದ ತಾಲಾಫಲಗಳನ್ನು ಯಥೇಚ್ಛವಾಗಿ ನೀಡಿ ಪರಮಾನಂದಗೊಳಿಸಿದನು.

ಮತ್ತೊಂದು ದಿವಸ ಗೋಪಾಲಕರು ಶ್ರೀಕೃಷ್ಣ ನಾಯಕನಾಗಿರುವ ಒಂದು ಪಕ್ಷ (ಪಂಗಡ), ಬಲರಾಮ ನಾಯಕನಾಗಿರುವ ಒಂದು ಪಂಗಡ, ಹೀಗೆ ಎರಡು ಪಂಗಡ ಮಾಡಿ, ಕೆಲವರು ಶ್ರೀ ಕೃಷ್ಣನ ಪಂಗಡಕ್ಕೂ, ಶ್ರೀದಾಮ ಮೊದಲಾದ ಉಳಿದವರು ಬಲರಾಮನ ಗುಂಪಿಗೂ ಸೇರಿ ವಿವಿಧ ಆಟಗಳನ್ನು ಆಡಹತ್ತಿದರು. ಆ ಆಟದಲ್ಲಿ ಒಂದು ನಿಯಮವಿತ್ತು. ಸೋತವರು ಗೆದ್ದವರನ್ನು ಭುಜದ ಮೇಲೆ ಹೊತ್ತುಕೊಂಡು ತಿರುಗಬೇಕು. ಇದಕ್ಕೆ "ವಾಹ್ಯವಾಹಕ ಕ್ರೀಡೆ" ಎಂದು ಹೆಸರು. ಹೀಗೆ ಪಣಬಂಧವಿರಿಸಿ ಆ ಎರಡೂ ಪಂಗಡದವರೂ ಕ್ರೀಡಿಸುತ್ತಿರುವಾಗ ಕಂಸನಿಂದ ಪ್ರೇರಿತರಾದ ಪಾಪಿಯಾದ 'ಪ್ರಲಂಬ'ನೆಂಬ ದೈತ್ಯನು ಬಂದು ಕೃಷ್ಣನ ಗುಂಪಿನಲ್ಲಿ ಮೆಲ್ಲನೆ ನುಸುಳಿದನು. ಕ್ರೀಡೆ ಭರದಿಂದ ಸಾಗಿತ್ತು. ಪ್ರತಿಯೊಂದು ಆಟದಲ್ಲೂ ಶ್ರೀಕೃಷ್ಣನ ಗುಂಪಿನವರು ಜಯಿಸುತ್ತಿದ್ದರು. ಶ್ರೀಕೃಷ್ಣನ ಪಂಗಡದಲ್ಲಿ ಪರಾಜಿತರಾದವರೆಂದರೆ ದೈತ್ಯನಾದ ಪ್ರಲಂಬ ಮತ್ತು ಭದ್ರಸೇನ ಎಂಬ ಇಬ್ಬರು ಮೂವರು ಮಾತ್ರ. ಬಲರಾಮನ ಗುಂಪಿನಲ್ಲಿ ಶ್ರೀದಾಮಾದಿ ಸಕಲರೂ ಸೋತರು. ಆ ಗುಂಪಿನಲ್ಲಿ ಜಯಿಸಿದವರೆಂದರೆ ಬಲರಾಮ ಮತ್ತು ವೃಷಭ ಎಂಬ ಇಬ್ಬರು ಮೂವರು ಮಾತ್ರ. ಕೃಷ್ಣನ ಪಂಗಡದಲ್ಲಿದ್ದು ಪರಾಜಿತನಾದ, ಪಾಪಿಷ್ಠನೂ ಕ್ರೂರಿಯೂ ಆದ ಆ ದೈತ್ಯ ಪ್ರಲಂಬನು ಪಣಬಂಧಪ್ರಕಾರವಾಗಿ ಬಲರಾಮನನ್ನು ಭುಜದಮೇಲೆ ಹೊತ್ತು ತಿರುಗುವವನಂತೆ ನಟಿಸಿ ಆಕಾಶಕ್ಕೆ ಹಾರಿಹೋದನು. ಇದರಿಂದ ಭಯಗೊಂಡ ರೋಹಿಣಿಯ ಸುತನಾದ ಬಲರಾಮನು "ಕಾಪಾಡು ಕೃಷ್ಣಾ" ಎಂದು ಪ್ರಾರ್ಥಿಸಹತ್ತಿದನು. ಆಗ ಶ್ರೀಕೃಷ್ಣನು ಬಲರಾಮನಿಗೆ ಅಪೂರ್ವಶಕ್ತಿಯನ್ನು ದಯಪಾಲಿಸಲು, ಬಲರಾಮನಲ್ಲಿ ತನ್ನ ಶುಕ್ಲಕೇಶಾವೇಶವನ್ನು ವಿಶೇಷಾಕಾರವಾಗಿ ಅಭಿವ್ಯಕ್ತಿಗೊಳಿಸಿ "ಅಂಜಬೇಡ ಅಣ್ಣಾ! ನಾನು ನಿನ್ನಲ್ಲಿ ಶುಕ್ಲಕೇಶರೂಪದಿಂದ ಆವಿಷ್ಟನಾಗಿದ್ದೇನೆ" ಎಂದು ಅಭಯವಿತ್ತನು. ಶ್ರೀ ಹರಿಯ ಶುಕ್ಲಕೇಶಾವೇಶ ಬಲದಿಂದ ಪೂರ್ಣನಾದ ಬಲರಾಮನು ತನ್ನಲ್ಲಿ ಹಿಂದೆಂದೂ ಕಾಣದ ಮಹಾಶಕ್ತಿ ಸಂಚರಿಸುತ್ತಿರುವುದನ್ನು ಮನಗಂಡು ಆನಂದೋತ್ಸಾಹಭರಿತನಾಗಿ ಆಕಾಶಮಾರ್ಗದಲ್ಲಿ ಸಂಚರಿಸುತ್ತಿರುವ ಆ ಪ್ರಲಂಬಾಸುರನನ್ನು ತನ್ನ ಮುಷ್ಟಿಗಳ ಪ್ರಹಾರಗಳಿಂದ ಮರ್ದಿಸಿ ಸಂಹಾರ ಮಾಡಿದನು. ಪ್ರಲಂಬನು ಹತನಾದ ಮೇಲೆ ಅಮರನಿಕರರು (ಶ್ರೀಕೃಷ್ಣನೂ ಸಹ) ರೋಹಿಣೀಪುತ್ರನಾದ ರಾಮನಿಗೆ 'ಬಲದೇವ' ಎಂದು ನಾಮವಿರಿಸಿದರು. ಅಂದರೆ ಬಲರಾಮನಿಗೆ 'ಬಲದೇವ'ನೆಂಬ ಬಿರುದಿತ್ತರು. ಅಂದಿನಿಂದ ಅವನು 'ಬಲದೇವ'ನೆಂದು ಖ್ಯಾತನಾದನು.

ಮತ್ತೊಮ್ಮೆ ಭಯಂಕರವಾದ ಕಾಡುಗಿಚ್ಚಿನಲ್ಲಿ ಸಿಲುಕಿ ಅಪಾಯಕ್ಕೆ ಗುರಿಯಾದ ಗೋಕುಲದ ಜನತೆಯನ್ನು ಸಂರಕ್ಷಿಸಲು, ಅನಂತಕಲ್ಯಾಣಗುಣಸಾಗರನಾದ ಶ್ರೀಕೃಷ್ಣನು ಆ ಕಾಳ್ಗಿಚ್ಚನ್ನು ಪಾನಮಾಡಿ ಗೋಪಾಲಕರನ್ನೂ, ಗೋವುಗಳನ್ನೂ ಕಾಪಾಡಿದನು.

ಒಂದು ಸಲ ಅರಣ್ಯದಲ್ಲಿ ಕೃಷ್ಣಬಲರಾಮನೊಡನೆ ಸಂಚರಿಸುತ್ತಿದ್ದಾಗ ಅವರು ಹಸಿವೆಯಿಂದ ಬಳಲಿದರು. ಕ್ಷುಧಾರ್ತರಾದ ಗೆಳೆಯರಾದ ಗೋಪಾಲಕರು "ಕೃಷ್ಣ! ನಮಗೆ ಬಹಳ ಹಸಿವಾಗಿದೆ. ಭಕ್ತರ ಅಭೀಷ್ಟಗಳನ್ನು ಅನುಗ್ರಹಿಸುವ ಸ್ವಾಮಿ, ನೀನು ನಮಗೀಗ ಭೋಜನ ಮಾಡಿಸಬೇಕು" ಎಂದು ಅರ್ಥಿಸಿದರು. ಪರಿಪೂರ್ಣ ಸಮಸ್ತ ಅಭೀಷ್ಟಗಳುಳ್ಳ ಶ್ರೀಕೃಷ್ಣನು ತನ್ನ ಮಹಿಮೆಯಿಂದ ಅಲ್ಲಿಯೇ ಅವರ ವಾಂಛಿತವನ್ನು ಪೂರ್ಣಮಾಡಲು ಶಕ್ತನಾಗಿದ್ದರೂ ಆ ಫಲವನ್ನು ತನ್ನ ಭಕ್ತರಾದ ಇತರರಿಗೂ ನೀಡಬೇಕೆಂಬ ಉದಾರಾಂತಃಕರಣದಿಂದ ಶ್ರೀಕೃಷ್ಣನು "ಗೆಳೆಯರೇ, ಇಲ್ಲಿಯೇ ಸಮೀಪದಲ್ಲಿ ಅನೇಕ ಬ್ರಾಹ್ಮಣರು ಒಂದು ಯಾಗವನ್ನು ಮಾಡುತ್ತಿದ್ದಾರೆ. ನೀವು ಅವರಲ್ಲಿಗೆ ಹೋಗಿ ಯಾಚಿಸಿರಿ. ಅವರು ನಿಮಗೆ ಭೋಜನವನ್ನು ನೀಡುತ್ತಾರೆ" ಎಂದು ಹೇಳಿದನು. ಗೋಪಾಲಕರು ಅದರಂತೆಯೇ ಯಾಗಶಾಲೆಗೆ ಹೋಗಿ ಯಜ್ಞರತರಾದ ವಿಪ್ರರನ್ನು ಭೋಜನಕ್ಕಾಗಿ ಪ್ರಾರ್ಥಿಸಿದರು. ಆದರೆ ಅವರು ಭೋಜನವನ್ನು ನೀಡಲಿಲ್ಲವಾದ್ದರಿಂದ ಮತ್ತೆ ಕೃಷ್ಣನೆಡೆಗೆ ಬಂದು ಸಮಾಚಾರವನ್ನು ಅರುಹಿದರು. ಅದಕ್ಕೆ ಕೃಷ್ಣನು "ನೀವೀಗ ವಿಪ್ರಪತ್ನಿಯರನ್ನು ಕಂಡು, ಶ್ರೀಕೃಷ್ಣ ಬಂದಿದ್ದಾನೆ. ಅವನು

ನಿಮ್ಮಲ್ಲಿಗೆ ನಮ್ಮನ್ನು ಕಳುಹಿಸಿದ್ದಾನೆ. ನಾವೆಲ್ಲರೂ ಹಸಿದಿದ್ದೇವೆ. ನಮಗೆ ಭೋಜನವನ್ನು ನೀಡಿರಿ" ಎಂದು ಹೇಳಿರಿ. ಅವರು ನಿಮ್ಮ ಅಭೀಷ್ಟವನ್ನು ಪೂರ್ಣಮಾಡುತ್ತಾರೆ" ಎಂದು ಹೇಳಿದನು. ಅದರಂತೆ ಗೋಪಬಾಲಕರು ವಿಪ್ರಸ್ತ್ರೀಯರಲ್ಲಿ ನಿವೇದಿಸಿದರು. ಅದನ್ನು ಕೇಳಿ ಆನಂದಭರಿತರಾದ ಆ ಬ್ರಾಹ್ಮಣ ಸ್ತ್ರೀಯರು ಆರು ಬಗೆಯ ಪಕ್ವಾನ್ನಗಳನ್ನೂ, ಷಡ್ರಸೋಪೇತವಾದ ಭೋಜನವನ್ನು ಕರದಲ್ಲಿ ಪಿಡಿದು ಗೊಲ್ಲರೊಡನೆ ಶ್ರೀಕೃಷ್ಣನ ಸನ್ನಿಧಿಗೆ ಬಂದು ತಾವು ತಂದಿದ್ದ ಮೃಷ್ಟಾನ್ನವನ್ನು ಸಮರ್ಪಿಸಿ ಮುದಿಸಿದರು. ಪತಿಗಳು ಹೋಗಬೇಡಿ ಎಂದು ನಿರ್ಬಂಧಿಸಿದರೂ ಕೇಳದೆ ಶ್ರೀ ಕೃಷ್ಣನನ್ನು ಆರಾಧಿಸಬೇಕೆಂಬ ಮುಖ್ಯಾಭಿಪ್ರಾಯದಿಂದ ಆ ವಿಪ್ರಪತ್ನಿಯರು ತಮ್ಮ ಪತಿಗಳು, ಮಕ್ಕಳು, ಸಮಸ್ತಬಂಧುಗಳನ್ನು ಬಿಟ್ಟು ಶ್ರೀಕೃಷ್ಣನ ಸಮೀಪಕ್ಕೆ ಬಂದಿದ್ದರು. ಇದನ್ನರಿತ ಶ್ರೀಕೃಷ್ಣನು ಅವರ ಭಕ್ತಿಗೆ ಮೆಚ್ಚಿ ಅವರನ್ನು ಮಧುರವಚನಗಳಿಂದ ಸಂತೋಷಗೊಳಿಸಿ ಮತ್ತೆ ಅವರನ್ನು ಅವರವರ ಪತಿಗಳ ಬಳಿಗೆ (ಅಂದರೆ ಯಾಗಶಾಲೆಗೆ) ಕಳುಹಿಸಿಕೊಟ್ಟನು. ಶ್ರೀಕೃಷ್ಣನ ಬಳಿಗೆ ಮೃಷ್ಟಾನ್ನದೊಡನೆ ಹೊರಟಾದ ತಮ್ಮ ತಮ್ಮ ಪತಿಗಳು ತಡೆದರೂ ಅದನ್ನು ಗಮನಿಸದೆ ಅವರೆಲ್ಲರೂ ಹೊರಟು-ಬಂದಿದ್ದರು. ಆದರೆ ಒರ್ವ ವಿಪ್ರಪತ್ನಿಯು ಮಾತ್ರ ಬರಲು ಆಗಲಿಲ್ಲ, ಏಕೆಂದರೆ ಅವಳ ಪತಿಯು ಅವಳನ್ನು ಅಡ್ಡಗಟ್ಟಿ ಕೈಹಿಡಿದು ಎಳೆದುಕೊಂಡು ಹೋದನು. ಶ್ರೀಕೃಷ್ಣ ದರ್ಶನ ಮತ್ತು ಸೇವೆ ತನಗೆ ಲಭಿಸಲಿಲ್ಲವೆಂಬ ದುಃಖದಿಂದ ಆ ಬ್ರಾಹ್ಮಣಿಯು ಅತ್ಯಂತ ದುಃಖಿತಳಾಗಿ ಯೋಗಶಕ್ತಿಯಿಂದ ದೇಹತ್ಯಾಗ ಮಾಡಿ ಶ್ರೀಕೃಷ್ಣಾನುಗ್ರಹದಿಂದ ಕೃಷ್ಣಪದವನ್ನು ಅಂದರೆ ವಿಷ್ಣುಪದ (ಮೋಕ್ಷ)ವನ್ನು ಹೊಂದಿದಳು. ಎಲ್ಲಾ ವಿಪ್ರಪತ್ನಿಯರನ್ನು ಕಳುಹಿಸಿಕೊಟ್ಟ ಮೇಲೆ ಸರ್ವಪ್ರಭುವಾದ ಶ್ರೀಕೃಷ್ಣನು ಸರ್ವರೊಡನೆ ವಿಪ್ರಪತ್ನಿಯರಿತ್ತ ಷಡ್ರಸೋಪೇತವಾದ ಮೃಷ್ಟಾನ್ನವನ್ನು ಭುಂಜಿಸಿ ಗೋಕುಲಕ್ಕೆ ಬಂದು ಅಲ್ಲಿ ಷಡ್ಗುಣೈಶ್ವರ್ಯ ಸಂಪನ್ನನಾದ ನಂದಕುಮಾರನು ಮಿತ್ರರೊಡನೆ ವಿಹರಿಸಿದನು. ಅತ್ತ ಸತ್ರಯಾಗದಲ್ಲಿ ವಿಪ್ರರೆಲ್ಲರೂ ತಮ್ಮ ಪತ್ನಿಯರು ಶ್ರೀಕೃಷ್ಣನ ಆಜ್ಞೆಯಂತೆ ಭೋಜನವನ್ನು ತೆಗೆದುಕೊಂಡು ಹೋಗುತ್ತಿದ್ದಾಗ ತಾವು ಅವರನ್ನು ತಡೆದು ಶ್ರೀಕೃಷ್ಣನ ಆಜ್ಞೆಯನ್ನು ಉಲ್ಲಂಘಿಸಿದ್ದರಿಂದ ಬಹು ಖೇದಗೊಂಡರು ಹಾಗೂ ಪಶ್ಚಾತ್ತಾಪ ಪಟ್ಟಿದ್ದರಿಂದ ತಪ (ಪರಿಶುದ್ಧ) ಮನಸ್ಕರಾದರು.

ಗೋಕುಲದಲ್ಲಿ ಪ್ರತಿವರ್ಷವೂ ಇಂದ್ರನ ಪ್ರೀತಿಗೋಸ್ಕರ ನಂದಗೋಪಾದಿಗಳು "ಇಂದ್ರೋತ್ಸವ"ವನ್ನು ಬಹು ವಿಜೃಂಭಣೆಯಿಂದ ನೆರವೇರಿಸುತ್ತಿದ್ದರು. ಅದೊಂದು ಸಂಪ್ರದಾಯವಾಗಿತ್ತು. ಈ ಸಲವೂ ಆ ಉತ್ಸವದ ಏರ್ಪಾಟುಗಳು ಜರುಗಹತ್ತಿದವು. ಅದನ್ನು ಕಂಡು ಶ್ರೀಕೃಷ್ಣನು ಶ್ರೀನಾರಾಯಣಾಭಿನ್ನನಾದ ತಾನು ಭೂಲೋಕದಲ್ಲಿ ಅವತರಿಸಿರುವ ವಿಚಾರ ಇಂದ್ರನಿಗೆ ಮರೆಯದಂತೆ ಮಾಡಲು ಇಂದ್ರೋತ್ಸವವನ್ನು ಮಾಡಬೇಡಿ ಎಂದು ಅಡ್ಡಿ ಮಾಡಿದನು. ಕೃಷ್ಣರೂಪದಿಂದ ನಾನು ಮನುಷ್ಯನಾಗಿ ಅವತರಿಸಿದ್ದೇನೆ. ನಾನು ಮಾನವನಲ್ಲ ಎಂಬುದನ್ನು ಇಂದ್ರನು ಮರೆಯದಿರಲಿ ಎಂದೇ ಕ್ಷಯರಹಿತ (ನಾಶರಹಿತ)ನಾದ ಆ ಸ್ವಾಮಿಯು ಇಂದ್ರಪೂಜೆಗೆ ಭಂಗವನ್ನುಂಟುಮಾಡಿದನು. ಶ್ರೀಕೃಷ್ಣನು "ನಾವು ಪರ್ವತವನ್ನು ಆಶ್ರಯಿಸಿಕೊಂಡು ಜೀವಿಸುತ್ತಿದ್ದೇವೆ. ಆದ್ದರಿಂದ ಗಿರಿ (ಅರ್ಥಾತ್ ನನ್ನ) ಪೂಜೆ ಮಾಡುವುದೇ ನಮಗೆ ಅತ್ಯಂತ ಉಚಿತ-ವಾದ ಮತ್ತು ಶ್ರೇಷ್ಠವಾದ ಧರ್ಮವಾಗಿದೆ. ಆದ್ದರಿಂದ ನಾವು ಗಿರಿಪೂಜೆಯನ್ನೇ ಮಾಡೋಣ" (ಅಂದರೆ ನೀವೆಲ್ಲರೂ ನನ್ನನ್ನೇ ಪೂಜಿಸಿರಿ) ಎಂದು ದ್ವಂದ್ವಾರ್ಥ ಬರುವಂತೆ ಹೇಳಿ ಇಂದ್ರಪೂಜೆ ಮಾಡದಂತೆ ಗೋಪಜನರನ್ನು ಒಪ್ಪಿಸಿ ತಾನೇ ಬೃಹದಾಕಾರವಾಗಿ ಬೆಳೆದು, ವಿಸ್ತೃತಶರೀರನಾಗಿ ಗೊಲ್ಲರು ಮಾಡಿದ ಪೂಜೆಯನ್ನು ಸ್ವೀಕರಿಸಿ, ಪೂಜಾನಂತರ ಅನ್ನ, ರಸ, ಪಾನರೂಪವಾಗಿ ಬಹುವಿಧವಾದ ಬಲಿಯನ್ನು ಶ್ರೀಕೃಷ್ಣನು ಭುಂಜಿಸಿದನು.

ವಿಶೇಷಾಂಶ : 'ನಾಮಾನಿ ಸರ್ವಾಣಿ ಯಮಾವಿಶಂತಿ' ಮುಂತಾದ ಶ್ರುತಿಗಳಿಂದ, 'ಅರ್ಚಂತು ಪುತ್ರಕಾ ಉತಪರನ್ನದೃಷ್ಣ್ವರ್ಚತ' ಎಂಬ ಶ್ರುತಿಯಿಂದಲೂ ಸಹ ಶ್ರೀಹರಿಯೇ ಶಬ್ದವಾಚ್ಯನಾದುದರಿಂದ ಆ ಶ್ರೀಹರಿ ಪರಮಾತ್ಮನೇ

ತಾನಾದ್ದರಿಂದ ಗಿರಿಶಬ್ದದಿಂದ ತಾನೇ ವಾಚ್ಯನಾದ್ದರಿಂದ ಗಿರಿಪೂಜಾ ವ್ಯಾಜದಿಂದ ತನ್ನ ಪೂಜೆಯನ್ನೇ ಗೊಲ್ಲರು ಮಾಡುವಂತೆ ಮಾಡಿದನು. ಮತ್ತು ಗಿರಿರೂಪನಾಗಿ ಅಂದರೆ ಗಿರಿಯಂತೆ ಬೃಹದಾಕಾರ ತಾಳಿ ಪೂಜೆ ಸ್ವೀಕರಿಸಿದನು. ಅಂತೆಯೇ ಕೃಷ್ಣನು ಗಿರಿಪೂಜೆ ಮಾಡೋಣವೆಂದು (ಛಲ) ವಿನೋದಲೀಲೆಯಿಂದ ಹೇಳಿದರೂ ಅವನ ಮಾತು ಅಸತ್ಯವಲ್ಲ ಎಂದು ತಿಳಿಸಲೆಂದೇ ಶ್ರೀಮದಾಚಾರ್ಯರು 'ಆತ್ಮಮಹೇsವತಾರ್ಯ' ಎಂದು ಪ್ರಯೋಗ ಮಾಡಿ ಅಪ್ಪಣೆ ಕೊಡಿಸಿದ್ದಾರೆ.

ತನ್ನ ಪೂಜೆಯನ್ನು ಮಾಡದೆ ಪರ್ವತಪೂಜೆ ಮಾಡಿ ಬಲಿಯನ್ನು ಅರ್ಪಿಸಿದ್ದನ್ನು ಕಂಡ ಇಂದ್ರನು ಚಕ್ರಧಾರಿಯಾದ (ಅಂದರೆ ಬಾಲಕೃಷ್ಣನ ಪುಟ್ಟಕರದಲ್ಲಿ ಚಕ್ರವನ್ನು ಕಾಣದ್ದರಿಂದ) ಅವನು ಚಕ್ರಧರನಾದ ಶ್ರೀ ನಾರಾಯಣನಲ್ಲವೆಂಬ ವಿಸ್ಮೃತಿಯಿಂದ ("ರಥಾಂಗಧರಾವತಾರಃ" ಎಂದು ನಿರ್ಣಯಕಾರರು ಪ್ರಯೋಗಿಸಿರುವುದು ಇದನ್ನೇ ಸೂಚಿಸುವುದು.) ಗೋಕುಲದ ನಾಶಕ್ಕಾಗಿ ಮೇಘಗಳಿಗೆ ಆಜ್ಞಾಪಿಸಿದನು. ಅಸಂಖ್ಯ ಮೇಘವೃಂದವು ಆನೆಯ ಸೊಂಡಿಲಿನ ಆಕಾರದಲ್ಲಿ ಅಸಾಧ್ಯವಾಗಿ ಮಳೆಸುರಿಸಿ ಗೋಕುಲವನ್ನು ನಾಶಮಾಡಲು ಪ್ರಯತ್ನಿಸಿದವು. ಹೀಗೆ ಧಾರಾಕಾರವಾಗಿ ಜಲವೃಷ್ಟಿಯಾದ್ದರಿಂದ ಗೋಕುಲದ ಸಮಸ್ತ ಜನರೂ, ಗೋವುಗಳೂ ಮಳೆಯ ಬಾಧೆಯಿಂದಾಗಿ ಬಹುವಾಗಿ ಪರಿತಪಿಸುತ್ತಿರಲು ಅದನ್ನು ಕಂಡು ಪಂಕಜನಾಭನಾದ ಶ್ರೀಕೃಷ್ಣಪರಮಾತ್ಮನು ಕಮಲದಳದಂತಿರುವ ಮೃದುವಾದ ತನ್ನ ವಾಮಕರದಿಂದ ಗೋವರ್ಧನ ಪರ್ವತವನ್ನು ದೃಢವಾಗಿ ಮೇಲೆತ್ತಿ ಹಿಡಿದನು. ಗೋವರ್ಧನ ಪರ್ವತವನ್ನು ಮೇಲೆತ್ತಿ ಹಿಡಿದಿದ್ದರಿಂದ ಅದು ಛತ್ರಿಯಾಕಾರದಲ್ಲಿ ಕಂಗೊಳಿಸಿತು. ಪರ್ವತದ ಕೆಳಭಾಗದಲ್ಲಿ ಸಮಸ್ತ ಗೋಕುಲದ ಪ್ರಜೆಗಳು ಗೋವುಗಳೊಡನೆ ಆಶ್ರಯ ಪಡೆದರು. ಇಂದ್ರನು ಏಳುದಿನ ಪರ್ಯಂತ ಏಕಪ್ರಕಾರವಾಗಿ ಮಹಾವೃಷ್ಟಿಗೈದನು. ಆದರೂ ಶ್ರೀಕೃಷ್ಣನ ಅನುಗ್ರಹದಿಂದ ಗೋಕುಲದ ಸಮಸ್ತ ಜನರೂ ಯಾವ ಭೀತಿಯೂ ಇಲ್ಲದೆ ನಿರಾಯಾಸವಾಗಿ ಸಂರಕ್ಷಿತರಾಗಿರುವುದನ್ನು ಕಂಡ ದೇವೇಂದ್ರನು ಪರಮಾಶ್ಚರ್ಯಪಟ್ಟನು. ಆಗವನಿಗೆ ಸಾಕ್ಷಾತ್ ಶ್ರೀ ನಾರಾಯಣನು ಶ್ರೀಕೃಷ್ಣರೂಪದಿಂದ ಅವತರಿಸಿರುವ ವಿಷಯ ಸ್ಮರಣೆಗೆ ಬಂದಿತು. ಕೂಡಲೇ ಇಂದ್ರನು ತಾನು ಮಹಾಪರಾಧಮಾಡಿದನೆಂದು ಮನಗಂಡು ಪಶ್ಚಾತ್ತಪ್ತ ಹೃದಯನಾಗಿ ಮತ್ತು ಭಯದಿಂದ ಯಾದವನಾಥನಾದ ಶ್ರೀಕೃಷ್ಣನ ಪಾದಕಮಲಗಳಿಗೆ ಶರಣುಹೊಕ್ಕನು.

ವಜ್ರಧರನೂ, ಸಾಸಿರಗಣ್ಣನೂ ಆದ ಇಂದ್ರದೇವನು, ನಾಕದ ಸುರಭಿ ಮುಂತಾದ ಗೋತತಿ ಸಹಿತನಾಗಿ ಶ್ರೀಕೃಷ್ಣನೆಡೆಗೈತಂದು ಯಾವಾಗಲೂ ಎಣಿಸಲಳವಲ್ಲದ ಪೂರ್ಣಗುಣಗಳಿಂದ ಸಮುದ್ರದಂತೆಸೆವ, ಮುಕ್ಕಣ್ಣನಿಗೆ ಗುರುವಾದ ಚತುರಾನನ ಬ್ರಹ್ಮದೇವನಿಗೂ ಗುರುವಾದ ಸಹಿಸಲಳವಲ್ಲದ ಕಾಂತಿಪುಂಜಗಳಿಂದ ಕಂಗೊಳಿಸುವ ಅಥವಾ ಅಪರಿಮಿತ ಕಾಂತಿತನುವಿರಾಜಿತನಾದ, ಅಥವಾ ಅಮಿತವಾಗ್ವೈಭವ ಸಂಶೋಭನೀಯನಾದ, ಶ್ರೇಷ್ಠರಾದ ಸರ್ವದೇವತೆಗಳಿಗಿಂತಲೂ ಅತ್ಯಂತ ಉತ್ತಮನಾದ ಅಂದರೆ ಸರ್ವೋತ್ತಮನಾದ ಪರಬ್ರಹ್ಮಸ್ವರೂಪನಾದ ಶ್ರೀ ನಂದಕಿಶೋರ - ಕೃಷ್ಣನನ್ನು ಅನಂತವೇದಶಿರಸ್ಸೆಂದು ವಿಖ್ಯಾತವಾದ ಉಪನಿಷನ್ಮಹಾಮಂತ್ರವಚನಗಳಿಂದ ಇಂತು ಸ್ತುತಿಸಿ ಸಂತೋಷಪಡಿಸಿದನು.

"ದೇವದೇವ! ಅಗಣಿತ ಜ್ಞಾನಾನಂದಾದ್ಯನಂತಗುಣಗಳಿಗೆ ನೀನು ಆಶ್ರಯನಾಗಿರುವೆ. ಅಥವಾ ಅಪರಿಮಿತ ತೇಜೋಮೂರ್ತಿಯು ನೀನು. ಅಥವಾ ಅವಧಿಸಹಿತ ವೈಕುಂಠ, ಶ್ವೇತದ್ವೀಪ, ಅನಂತಾಸನವೆಂಬ ಸ್ಥಾನತ್ರಯವು ನಿನ್ನ ಲೀಲಾವಿಲಾಸಕ್ಕೆ ಹೆಸರಾಗಿದೆ. ಅಂದರೆ ಈ ಮೂರು ಸ್ಥಾನಗಳಿಗೆ ಅಧಿಪತಿಯಾಗಿರುವೆ. ನಿನ್ನಿಂದಲೇ ಈ ಜಗತ್ತು ಉತ್ಪನ್ನವಾಯಿತು. ಈ ಸಕಲ ಜಗತ್ತಿನ ಪಾಲಕನೂ (ಸ್ಥಿತಿಕರ್ತನೂ) ನೀನೇ ಆಗಿದ್ದೀಯೆ. ಕೊನೆಗೆ ಸಕಲ ಬ್ರಹ್ಮಾಂಡವನ್ನು ನೀನು ಭಕ್ಷಿಸಿ ನಿನ್ನ ಉದರದಲ್ಲಿಟ್ಟುಕೊಳ್ಳುತ್ತೀಯೆ. ಅಂದರೆ ಸಕಲ ಜಗತ್ತನ್ನೂ ಅಂತ್ಯದಲ್ಲಿ ನೀನೇ ಲಯಗೊಳಿಸುತ್ತೀಯೆ. ಈ ಜಗತ್ತಿನ ಬಂಧ-ಮೋಕ್ಷಗಳಿಗೆ ನೀನೇ ಕಾರಣನಾಗಿರುವೆ. ಅಂದರೆ ಈ ಜಗತ್ತಿಗೆ ಸಂಸಾರ ಮೋಕ್ಷಗಳು ನಿನ್ನಿಂದಲೇ ಉಂಟಾಗುವುವು. ಎಲೈ ಪರಿಪೂರ್ಣಶಕ್ತನಾದ ಪ್ರಭುವೇ! ಇಲ್ಲಿಯೂ, ಯಾವ ದೇಶ-ಕಾಲಗಳಲ್ಲಿಯೂ ನಿನಗೆ

ಸಮಾನರಾದವರು ಬೇರೊಬ್ಬರಾರೂ ಇಲ್ಲವೇ ಇಲ್ಲ! ಅಂದಮೇಲೆ ನಿನಗಿಂತ ಅಧಿಕರೆಲ್ಲಿಂದ ಬರಬೇಕು? ಅಂತೆಯೇ ಸಕಲರಿಗೂ ಸ್ವಾಮಿಯಾದ ನಿನ್ನನ್ನೇ ನಾನು ಸರ್ವದಾ ಆಶ್ರಯಿಸಿದ್ದೇನೆ. ಆದ್ದರಿಂದ ಪ್ರಭು, ಅಜ್ಞಾನ ಮೂಢತನದಿಂದ ನಾನು ಮಾಡಿದ ಅಪರಾಧವನ್ನು ಸಹಿಸಿ ಬಾಲಕನ ಮೂಢತನವೆಂದು ಬಗೆದು ನನ್ನ ಮೂಢತನವನ್ನೂ, ಅಪರಾಧವನ್ನೂ ನೀನು ಕ್ಷಮಿಸಬೇಕು'' ಎಂದು ಪ್ರಾರ್ಥಿಸಿ ಇಂದ್ರದೇವನು ಗೋವಿಂದನ ಚರಣಾರವಿಂದಗಳಿಗೆ ಸಾಷ್ಟಾಂಗವೆರಗಿದನು.

ನಾಕನಾಯಕನ ನಮನ-ಸ್ತವನಗಳಿಂದ ಮುದಗೊಂಡ, ಉತ್ಪತ್ತಿರಹಿತನಾದ ರಮಾಧವನು ''ದೇವರಾಜ! ನನ್ನ ಭಕ್ತನಾದ ನಿನ್ನ ಅಪರಾಧವನ್ನು ನಾನಾವಾಗಲೋ ಕ್ಷಮಿಸಿರುವೆನು. (ನಿನ್ನನ್ನು ಯಾವಾಗಲೂ ಕ್ಷಮಿಸುತ್ತೇನೆ) ನಿನ್ನನ್ನು ಸನ್ಮಾರ್ಗಗಾಮಿಯನ್ನಾಗಿಸಲೆಂದೇ ನಿನಗೆ ಸಲ್ಲುತ್ತಿದ್ದ ಪೂಜೆಯನ್ನು ಅಪರಾಧದ ಶಿಕ್ಷಾರೂಪವಾಗಿ ನಿಲ್ಲಿಸಿದ್ದೇನೆಯೇ ಹೊರತು ಅದು ನಿನ್ನ ಮೇಲಿನ ಕೋಪದಿಂದ ಅಲ್ಲ. ನಿನಗೆ ನನ್ನ ಅವತಾರ ಸ್ಮರಣ ಮಾಡಿಕೊಟ್ಟು ಅನುಗ್ರಹಿಸಲೆಂದೇ ಹೀಗೆ ಮಾಡಿದ್ದೇನೆ'' ಎಂದು ಮುಂತಾಗಿ ಹೇಳಿ ಇಂದ್ರನನ್ನು ಸಂತೈಸಿ ಸಂತಸಗೊಳಿಸಿದನು.

ಪರಮಪುರುಷನ ಅಮೃತಸ್ಯಂದಿಯಾದ ಅಮರವಾಣಿಯಿಂದ ಪುಲಕಿತಗಾತ್ರನಾದ ಸ್ವರ್ಗೇನುಸಂಘಕ್ಕೆ ಅಧಿಪತಿಯಾದ ಶಚೀಪತಿಯು ತನ್ನ ಸೊಂಡಿಲುಗಳಿಂದ ಐರಾವತವು ತಂದ ಸ್ವರ್ಗಗಂಗೆಯ (ಆಕಾಶಗಂಗೆಯ) ಪವಿತ್ರಜಲಗಳಿಂದ ಪರಮಾನಂದದಿಂದ ಗೋವಿಂದನಿಗೆ ಅಮೃತಾಭಿಷೇಕಗೈದು ಜ್ಞಾನಾನಂದಾದಿಗುಣಪೂರ್ಣನಾದ ಶ್ರೀಕೃಷ್ಣನಿಗೆ ನಮಸ್ಕರಿಸಿ ಪರಿವಾರಸಹಿತನಾಗಿ ಸಗ್ಗಕ್ಕೆ ಹಿಂದಿರುಗಿದನು.

ಅನಂತರ 'ಶ್ರೀಕೃಷ್ಣನು, ಮಾನವನೋ, ಭಗವಂತನೋ ಎಂದು ನಿಶ್ಚಯಿಸಲಾಗದೆ ಸಂಶಯದಲ್ಲಿದ್ದ ಗೋಪಜನರು ಇಂದ್ರನ ಭಯವನ್ನು ತಪ್ಪಿಸಿ ಗೋವರ್ಧನ ಗಿರಿಯನ್ನು ತನ್ನ ಕರಕಮಲದಿಂದ ಮೇಲೆತ್ತಿ ತಮ್ಮೆಲ್ಲರನ್ನೂ ರಕ್ಷಿಸಿದ್ದರಿಂದ ಸಂಶಯದೂರರಾಗಿ ಸಕಲ ವೇದವಚನಗಳಿಗೂ ಸ್ವಾಮಿಯಾದ ದೇವೋತ್ತಮನೆಂದು ನಿಶ್ಚಯಿಸಿ ಅವನ ಮುಂಭಾಗದಲ್ಲಿ ಬಂದು ಸಕಲರೂ ನಮಸ್ಕರಿಸಿದರು. ನಂತರ ಶ್ರೀಕೃಷ್ಣನು ಗೋಕುಲಕ್ಕೆ ಮರಳಿದನು. ಅಂದಿನಿಂದ ಅಂದರೆ ಗೋವರ್ಧ-ನೋದ್ಧಾರಣ ಮಾಡಿದಂದಿನಿಂದ ಗೋಕುಲದ ಸಮಸ್ತ ಜನರೂ ಶ್ರೀಕೃಷ್ಣನು ಸಾಕ್ಷಾತ್ ನಾರಾಯಣನೆಂದು ತಿಳಿದರು. ನಂದಗೋಪನು, ಹಿಂದೆ ಗರ್ಗಾಚಾರ್ಯರು ಶ್ರೀಕೃಷ್ಣನು ಸಾಮಾನ್ಯನಲ್ಲ, ಸಾಕ್ಷಾತ್ ನಾರಾಯಣನಿಗೆ ಸಮನು. ಅವನಿಂದ ನಿಮ್ಮೆಲ್ಲರ ರಕ್ಷಣೆ, ಉದ್ಧಾರವಾಗುತ್ತದೆ ಎಂದು ತನಗೆ ಏಕಾಂತದಲ್ಲಿ ಹೇಳಿದ್ದ ಮಾತನ್ನು ಗೋಪಜನರಿಗೆ ತಿಳಿಸಿದನು. ಆದರಿಂದಲೂ ಅರವಿಂದಾಕ್ಷನಾದ ಗೋವಿಂದನು ಸರ್ವೋತ್ತಮನೆಂಬ ಭಾವವುಳ್ಳವರಾಗಿ ಗೋಕುಲದ ಜನರು ಶ್ರೀಕೃಷ್ಣನನ್ನು ಪೂಜಿಸಹತ್ತಿದರು.

ಷಣ್ಮುಖನ ವರಬಲದಿಂದ ಅವಧ್ಯನೂ ಅತ್ಯಂತ ಬಲಿಷ್ಠನೂ ಆಗಿದ್ದ ಪ್ರಲಂಬನನ್ನು ಬಲರಾಮದೇವರು ಸಂಹರಿಸಿದ್ದರಿಂದ ಗೋಪಜನರು ಅವನು ದೇವತಾಶ್ರೇಷ್ಠನೆಂದು ತಿಳಿದರು ಮತ್ತು ಪೂಜಿಸಿದರು. ಹಾಗಾದರೆ ಶ್ರೀ ಕೃಷ್ಣನಿಗಿಂತ ಅಧಿಕರೀತಿಯಿಂದ ಪೂಜಿಸಿದರೇನು? ಎಂದರೆ ಹಾಗಲ್ಲ. ಕೃಷ್ಣನನ್ನು ಸರ್ವೋತ್ತಮನೆಂದರಿತು ಅದಕ್ಕೆ ತಕ್ಕಂತೆ ಅವನನ್ನು ಪೂಜಿಸಿದರು. ಬಲರಾಮನು ದೇವತಾಶ್ರೇಷ್ಠನೆಂದು ತಿಳಿದು ಕೃಷ್ಣನಿಗೆ ಅಸಮವಾಗಿ ತಾರತಮ್ಯವನ್ನನುಸರಿಸಿ ಕಡಿಮೆಯಾಗಿ ಪೂಜಿಸಿದರೆಂದು ತಿಳಿಯಬೇಕು.

ಶ್ರೀಕೃಷ್ಣನು ಗೋಪಕನ್ಯೆಯರನ್ನು ಪರಿಗ್ರಹಿಸಿದ ವಿಚಾರವನ್ನೀಗ ನಿರೂಪಿಸುವರು.

ಹಿಂದೆ ಅನೇಕ ಅಪ್ಸರೆಯರು ಶ್ರೀಕೃಷ್ಣನು ತಮಗೆ ಪತಿಯಾಗಬೇಕೆಂದು ಗೌರೀದೇವಿಯ ವ್ರತವನ್ನು ಮಾಡಿ ಕಾತ್ಯಾಯಿನಿಯನ್ನು ಪ್ರಾರ್ಥಿಸಿ ಅವಳಿಂದ ವರವನ್ನು ಪಡೆದಿದ್ದರು. ಆ ಅಪ್ಸರೆಯರೇ ಈಗ ಗೋಪಕನ್ಯೆಯರಾಗಿ ಜನಿಸಿದ್ದರು.

ಶ್ರೀಕೃಷ್ಣನು ಅವರನ್ನು ವಿವಾಹವಾದನು. ಈ ಗೋಪಕನ್ಯೆಯರು ಇನ್ನೂ ಕೆಲವರು ಅಂದರೆ ಇತರ ಗೋಪಾಲಕರೊಡನೆ ವಿವಾಹವಾಗಿದ್ದ ಗೋಪಸ್ತ್ರೀಯರೂ ಸಹ ಮನ್ಮಥಶರಾಹತಿಯಿಂದ ತಪ್ತರಾಗಿ ಬೆಳದಿಂಗಳಿನಿಂದ ಶೋಭಾಯಮಾನವಾದ ರಾತ್ರಿಯಲ್ಲಿ ಕೃಷ್ಣನೆಡೆಗೆ ಬಂದರು. ಇಂತು ತನ್ನನ್ನರಸಿ ಬಂದ ಅವರೆಲ್ಲರೊಡನೆ ರಮಿಸಿದನು. ಇದರಂತೆ ಅವಿವಾಹಿತರಾದ ಅನ್ಯ ಗೋಪಕನ್ನಿಕೆಯರೊಡನೆಯೂ ವಿಹರಿಸಿದನು. ವ್ರಜದಲ್ಲಿ ತನ್ನೊಡನೆ ಮದುವೆಯಾದ ಗೋಪಕನ್ಯೆಯರಲ್ಲಿ ಕೃಷ್ಣನಿಂದ 'ನಾರಾಯಣ' ಎಂಬ ಹೆಸರುಳ್ಳ ಬಲಿಷ್ಠರಾದ ಹತ್ತುಲಕ್ಷಪುತ್ರರು ಜನಿಸಿದರು. ಅವರೆಲ್ಲರೂ ಗೋಪಕನ್ಯೆಯರಲ್ಲಿ ಜನಿಸಿದ್ದ ಮಾತೃಜಾತಿಯವರೇ ಅಂದರೆ ಗೋಪಜನರೇ ಆದರು. ಪೂರ್ವದಲ್ಲಿ ದೇವತೆಗಳಾಗಿದ್ದ ಅವರು ಜಗತ್ಪಿತನಾದ ಶ್ರೀಹರಿಯ ಮಕ್ಕಳಾಗಿ ಜನಿಸಿ ಅವರನ್ನು ಸೇವಿಸಬೇಕೆಂದು ಭಕ್ತಿಯಿಂದ ಆರಾಧಿಸಿ ಈಗ ಶ್ರೀಕೃಷ್ಣನಿಗೆ ಪುತ್ರರಾಗಿ ಭೂಲೋಕದಲ್ಲಿ ಅವತರಿಸಿದರು.

ಅದು ಸರಿ. ಶ್ರೀಕೃಷ್ಣನು ಉಪನಯನಾದಿ ಸಂಸ್ಕಾರವಾಗುವ ಮೊದಲೇ ಗೋಪಕನ್ಯೆಯರನ್ನು ಹೇಗೆ ವಿವಾಹವಾದನು? ಎಂಬ ಆಶಂಕೆಗೆ ನಿರ್ಣಯಾಚಾರ್ಯರು ಅಪ್ಪಣೆ ಕೊಡಿಸುತ್ತಾರೆ - ಪೂರ್ವದಲ್ಲಿ ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಕೃಷ್ಣನು ಆ ಗೋಪಕನ್ಯೆಯರಿಗೆ (ಅಪ್ಸರೆಯರಿಗೆ) "ವೃಂದಾವನದಲ್ಲಿ ನನಗೆ ಸಂಸ್ಕಾರಗಳಾಗುವುದಕ್ಕಿಂತ ಮೊದಲೇ ನಿಮ್ಮೊಡನೆ ಸಂಗಮವಾಗಲಿ" ಎಂದು ವರಪ್ರದಾನ ಮಾಡಿದ್ದರಿಂದಲೂ, ಅಗ್ರಜನಾದ ಬಲರಾಮನು ವಿವಾಹಿತನಾಗುವುದಕ್ಕೆ ಅಥವಾ ಸ್ವಪತ್ನಿಯೊಡನೆ ರಮಿಸುವುದಕ್ಕಿಂತ ಮುಂಚಿತವಾಗಿಯೇ ಮತ್ತು ತನಗೆ ಉಪನಯನವಾಗುವುದಕ್ಕಿಂತ ಮೊದಲೇ ವಿವಾಹಿತರಾದ ಆ ಗೋಪಕನ್ಯೆಯರು ಮತ್ತು ಇತರ ಗೋಪಸ್ತ್ರೀಯರೊಡನೆ ಶ್ರೀಕೃಷ್ಣನು ರಮಿಸಿದನು. ಒಬ್ಬನೇ ಅಷ್ಟು ಜನರೊಡನೆ ಅದೆಂತು ಕ್ರೀಡಿಸಿದನು ಎಂದರೆ - ಅವನು ನಿರ್ದುಷ್ಟವಾದ ಅಭೀಷ್ಟಸಿದ್ಧಿಯನ್ನು ಕರುಣಿಸುವುದರಲ್ಲಿ ಪ್ರಸಿದ್ಧವಾದ ಚಿಂತಾಮಣಿ ಸದೃಶನಾದುದರಿಂದ ಅಭೀಷ್ಟಫಲನಾದ ಆ ಮಹಾನುಭಾವನಿಗೆ ಎಲ್ಲ ಗೋಪಸ್ತ್ರೀಯರೊಡನೆ ವಿಹರಿಸಿ ಸಂತೋಷಪಡಿಸುವುದೊಂದು ಮಹತ್ಕಾರ್ಯ ಅಥವಾ ಅಸಾಧ್ಯಕಾರ್ಯವೇನಲ್ಲ. ಅದು ಸರಿ, ಬಲರಾಮನು ವಿವಾಹವಾಗುವ ಪೂರ್ವದಲ್ಲೇ ಗೋಪಸ್ತ್ರೀಯರನ್ನು ಸ್ವೀಕರಿಸಿದ್ದು ಗೋಪಿಯರೊಡನೆ ರಮಿಸಿದ್ದು ಕೃಷ್ಣನಿಗೆ ದೋಷಾವಹವಲ್ಲವೆ? ಎಂದರೆ ಅವನು ಸಾಕ್ಷಾತ್ ಭಗವಂತನು, ಅಲಿಪ್ತನು. ಅಂದರೆ ಅಶುಭಕರ್ಮ ಹಾಗೂ ದೋಷಗಳಿಂದ ಅವನು ಅಸ್ಪೃಷ್ಟನು. ಆದ್ದರಿಂದ ಅವನಿಗೆ ಯಾವ ದೋಷವೂ ತಟ್ಟುವುದಿಲ್ಲವೆಂದು ತಿಳಿಯಬೇಕು. "ರಾಮಾತ್ ದ್ವಿಜತ್ವ-ಗಮನಾತ್" ಎಂಬ ಪಾಠವನ್ನು ಅರ್ಥವಿಸುವಾಗ ರಮಾರಮಣನಾದ ಶ್ರೀಕೃಷ್ಣನನ್ನು ಪೂರ್ವದಲ್ಲಿ "ನನ್ನ ಉಪಯನ-ವಾಗುವ ಮೊದಲೇ ನಿಮ್ಮೊಡನೆ ರಮಿಸಿ ನಿಮ್ಮ ಅಭೀಷ್ಟವನ್ನು ಪೂರೈಸುತ್ತೇನೆ" ಎಂದು ವರಪ್ರದಾನ ಮಾಡಿದ್ದರಿಂದ ಉಪನಯನ ಸಂಸ್ಕಾರವಾಗುವ ಮೊದಲೇ ಆ ಎಲ್ಲ ಗೋಪಿಯರೊಡನೆ ರಮಿಸಿದನೆಂದು ತಿಳಿಯಬೇಕು.

ಅದೊಂದು ಭವ್ಯರಾತ್ರಿ! ಷೋಡಶಕಲೆಗಳಿಂದ ಪರಿಪೂರ್ಣನಾದ ಚಂದ್ರನ ಶೀತಲಕಿರಣಗಳಿಂದ ಕಂಗೊಳಿಸುವ ಮನೋಹರವಾದ ರಾತ್ರಿ. ಕುಮುದಪುಷ್ಪಗಳ ಸುಗಂಧಕಂಪಿನಿಂದ ತಂಪಾದ ಗಾಳಿ ಬೀಸುತ್ತಿದೆ. ಇಂತಹ ರಮಣೀಯಕ ಸುಂದರ ಸನ್ನಿವೇಶದ ರಸನಿಮಿಷಗಳಲ್ಲಿ ಶ್ರೀಕೃಷ್ಣನ ಮುಖಾರವಿಂದದಿಂದ ಜಗತ್ತನ್ನೇ ಮೈಮರೆಸುವ ಇಂಪಾದ ಉತ್ತಮ ಗಾನವಾಹಿನಿಯು ಹೊರಹೊಮ್ಮುತ್ತಿದೆ. ಮೈಮನಗಳನ್ನಪಹರಿಸುವ ಮಾಧವನ ಮಂಜುಳ ಗಾನಸುಧೆಯನ್ನಾಸ್ವಾದಿಸಿ ವೃಂದಾವನದ ಸುಂದರವನಿತೆಯರೆಲ್ಲರೂ ಮೋಹಪರವಶರಾದರು. ಮಂತ್ರದ ಮೋಹಕ ಮೋಡಿಯಲ್ಲಿ ಮಗ್ನವಾದ ಸರ್ಪದಂತೆ ಮಾಧವನ ಮನಮೋಹಕ ಗಾನಶ್ರೀಯ ಇಂಚರಕ್ಕೆ ಮನಸೋತು ಮನ್ಮಥನ ಮಾದಕ ಶರಾಹತಿಗೊಳಗಾಗಿ ಮೈಮನಗಳನ್ನು ಮರೆತು ಮತ್ತೇರಿದವರಂತೆ ಮನೆಗೆಲಸಗಳನ್ನೂ ಗಮನಿಸದೆ ನಂದನಂದನನ ಆನಂದವಿಹಾರ ರಂಗ-ಭೂಮಿಯತ್ತ ಧಾವಿಸಿ ಜಗತ್ಪತಿಯ ಜಗನ್ಮೋಹಕ ಗಾನವಾಹಿನಿಯಲ್ಲಿ ಮಿಂದು ಆನಂದಮಗ್ನರಾದರು.

"ಮುಖನಿಃಸೃತಗೀತಸಾರಂ" ಎಂಬ ಪ್ರಯೋಗವು ವೇಣುವಿಲ್ಲದಿದ್ದರೂ ಶ್ರೀಕೃಷ್ಣನ ಮುಖದಿಂದ ಮುರಳಿಯ-ನಾದವು ಹೊರಹೊಮ್ಮಿತು ಎಂಬ ಭಗವನ್ಮಹಾತ್ಮ್ಯವನ್ನು ಸೂಚಿಸುವುದು ಅಥವಾ ಭಗವಂತನ ಮುಖದಿಂದ ಅತ್ಯುತ್ಕೃಷ್ಟವಾದ ಮಧುರಾಲಾಪ ಸಹಕೃತವಾದ ಸಂಗೀತವು ಹೊರಹೊಮ್ಮಿತು ಎಂದೂ ಅರ್ಥವಾಗುವುದು.

ಈಗ ಶ್ರೀಕೃಷ್ಣನಿಂದ ಹತರಾದ ಅನೇಕ ದೈತ್ಯರ ವಿಚಾರಗಳನ್ನು ನಿರೂಪಿಸುತ್ತಾರೆ.

ಶ್ರೀಕೃಷ್ಣನ ಮಧುರಗಾನದಿಂದ ಆಕರ್ಷಿತರಾಗಿ ಗೋಪಸ್ತ್ರೀಯರು ಕೃಷ್ಣನ ಕ್ರೀಡಾಸ್ಥಾನಕ್ಕೆ ಆಗಮಿಸಿ ಅವನ ಅಮರ ಗಾಯನದಿಂದ ಮೈಮರೆತಿರುವಾಗ ಶಂಖಚೂಡನೆಂಬ ಯಕ್ಷನು ಆ ಗೋಪಸ್ತ್ರೀಯರನ್ನು ಅಲ್ಲಿಂದ ಓಡಿಸಹತ್ತಿ ಶ್ರೀಕೃಷ್ಣನ ಸಮೀಪಕ್ಕೆ ಬಂದನು. ಆ ಶಂಖಚೂಡನು ರುದ್ರದೇವರ ವರದಿಂದ ರಕ್ಷಣೆ ಪಡೆದಿದ್ದನು. ರುದ್ರದೇವರ ಮಿತ್ರನಾದ (ಭೃತ್ಯನಾದ) ಕುಬೇರನ ಸೇವಕನಾದ ಅವನು ಬಲು ಬಲಶಾಲಿಯೂ ಅತ್ಯಂತ ಕ್ರೂರಿಯೂ ಆಗಿದ್ದನು. ರುದ್ರದೇವರ ವರಬಲದಿಂದ ಮದಿಸಿದ್ದ ಆ ಶಂಖಚೂಡನನ್ನು ಭಗವಾನ್ ಶ್ರೀಕೃಷ್ಣನು ತನ್ನ ಅಂಗೈ ಹೊಡೆತಗಳಿಂದ ಲೀಲಾಜಾಲವಾಗಿ ಸಂಹರಿಸಿ ಅವನ ಶಿರದಲ್ಲಿದ್ದ ಅಪೂರ್ವಮಣಿಯನ್ನು ಕಿತ್ತುಕೊಂಡನು.

ಉತ್ತಮಶ್ಲೋಕನಾದ ಶ್ರೀಕೃಷ್ಣನು ಉತ್ತಮರಾದ ಬ್ರಹ್ಮರುದ್ರೇಂದ್ರಾದಿಗಳಿಂದ ಗೇಗೀಯಮಾನನಾದವನು. ಅಥವಾ ಸಾಮಗಾಯನಗಳಿಂದ ಸಂಸೇವ್ಯನು ಮತ್ತು ಅಕಳಂಕ ಯಶೋಭೂಷಿತನು. ಇದಕ್ಕೆ ವಿರುದ್ಧವಾದ ಕುಕರ್ಮಗಳಿಂದ ಯುಕ್ತನಾದ ದುಷ್ಟನು ಅರಿಷ್ಟನೆಂಬ ದೈತ್ಯನು. ಗೋವೃಷಭಾಕೃತಿಯ ಆ ದೈತ್ಯನು ರುದ್ರದೇವರ ವರದಿಂದ ಮತ್ತೊಬ್ಬರಿಂದ ಸಂಹರಿಸಲು ಅಶಕ್ಯನಾಗಿದ್ದನು. ಕಂಸಚಿತ್ತಾನುವರ್ತಿಯಾದ ಆ ಅರಿಷ್ಟನು ವ್ರಜಕ್ಕೆ ಬಂದು ಗೋವುಗಳನ್ನು ಬೆದರಿಸಿ ತಲ್ಲಣಗೊಳಿಸಹತ್ತಿದನು. ಇದರಿಂದ ಕ್ರುದ್ಧನಾದ ವೃಷಭರೂಪಿಯಾದ ಅರಿಷ್ಟಾಸುರನು ತೀಕ್ಷ್ಣವಾದ ಕೊಂಬುಗಳನ್ನು ಮುಂದೆಮಾಡಿ ಕೃಷ್ಣನನ್ನು ಕೊಲ್ಲಲೆಳೆಸಿ ಭರದಿಂದ ಅವನತ್ತ ಧಾವಿಸಿದನು. ಮಹಾಪ್ರಭುವಾದ ಶ್ರೀಕೃಷ್ಣನು ಆ ವೃಷಭರೂಪೀ ಅಸುರನ ಎರಡು ಶೃಂಗ (ಕೊಂಬು)ಗಳನ್ನು ಹಿಡಿದು ಉತ್ಕೃಷ್ಟಬಲಶಾಲಿಯಾದ ಮಾಧವನು ಯಜ್ಞದಲ್ಲಿ ಪಶುವನ್ನು ಸಂಹರಿಸುವಂತೆ ಅರಿಷ್ಟಾಸುರನನ್ನು ಸಂಹರಿಸಿದನು. ಅನಂತರ ಕಂಸನಿಂದ ಪ್ರೇರಿತನಾಗಿ ಬಂದ, ಪಾರ್ವತಿಯ ವರದಿಂದ ಮರಣವಿಲ್ಲದ, ಕುದುರೆಯ ಸ್ವರೂಪದ ಕೇಶಿ ಎಂಬ ಅಸುರನು ಕೇಶವನೆಡೆಗೆ ಬಂದನು. ಆಗ ಪಾಪಿಯಾದ ತುರಗರೂಪದ ಕೇಶಿಯ ಮುಖದಲ್ಲಿ ತನ್ನ ಬಾಹುವನ್ನು ಹೋಗಿಸಿ, ಭಗವಂತನಾದ ಶ್ರೀಕೃಷ್ಣನು ಕೇಶಿಯ ಮುಖದಲ್ಲಿ ಅಭಿವೃದ್ಧಿಸಿದನು. "ಬಾಹುನಾಂ ಭೋಗಿನಾಂ ಕೃತ್ವಾ ಮುಖೇತ್ತಸ್ಯ ಜನಾರ್ದನಃ। ಪ್ರವೇಶಯಾಮಾಸ ತದಾ ಕೇಶಿನೋ ದುಷ್ಟವಾಜಿನಃ ॥ ತಥಾ ಕೃಷ್ಣಸ್ಯ ವವೃಧೇ ಬಾಹುಃ" ಅಂದರೆ ಜನಾರ್ದನನು ತನ್ನ ಬಾಹುವನ್ನು ಹಾವಿನಂತೆ ಮಾಡಿ ದುಷ್ಟ ತುರಗರೂಪಿಯಾದ ಕೇಶಿಯ ಮುಖದಲ್ಲಿ ಪ್ರವೇಶ ಮಾಡಿಸಿದನು. ಆಗ ಕೃಷ್ಣನ ಬಾಹುವು ಕೇಶಿಯ ಮುಖದಲ್ಲಿ ವರ್ಧಿಸಿತು ಎಂದು 'ವಿಷ್ಣುಪುರಾಣ'ದಲ್ಲಿಯೂ ಸಹ ಕೇಶಿಯ ಸಂಹಾರದ ಕ್ರಮವು ಸುಂದರವಾಗಿ ನಿರೂಪಿತವಾಗಿದೆ. ಶ್ರೀಕೃಷ್ಣನ ಬಾಹುವು ದೈತ್ಯನ ಮುಖದಲ್ಲಿ ಬೆಳೆಯಲಾರಂಭಿಸಿತು. ದುಷ್ಟಕೇಶಿಯು ಭಗವಂತನ ಬಾಹುವನ್ನು ಕಡಿದು ತಿನ್ನಬಯಸಿ ಬಹುಪ್ರಕಾರ-ವಾಗಿ ಪ್ರಯತ್ನಿಸಿದನು. ಅದರಿಂದ ಅವನ ಮುಖವು ಸೀಳಲ್ಪಟ್ಟಿತು, ಹಲ್ಲುಗಳುರುಳಿದವು, ತುಟಿಗಳು ಕತ್ತರಿಸಲ್ಪಟ್ಟವು! ಉಸಿರಾಡಲೂ ಅವಕಾಶವಾಗದೆ ಆ ಅಸುರನು ಕೆಳಗೆ ಬಿದ್ದು ಮೃತನಾದನು. ದುಷ್ಟದೈತ್ಯನ ದಮನದಿಂದ ಹೃಷ್ಟರಾದ ಬ್ರಹ್ಮರುದ್ರೇಂದ್ರ ಸೂರ್ಯಾದಿ ದೇವತೆಗಳು ಪರಮಾತ್ಮನನ್ನು ಸ್ತುತಿಸಿದರು.

ಮತ್ತೊಮ್ಮೆ ಮಯನೆಂಬ ದೈತ್ಯನ ಮಗನಾದ, ಬ್ರಹ್ಮದೇವರ ವರಪ್ರಸಾದದಿಂದ ದೀರ್ಘಾಯುಷ್ಯವನ್ನು ಪಡೆದ ವ್ಯೋಮನೆಂಬ ಹೆಸರಿನಿಂದ ಪ್ರಸಿದ್ಧನಾದ ಅಸುರನು ಶ್ರೀಕೃಷ್ಣನ ಮೇಲಿನ ಹಗೆತನದಿಂದ ಸಕಲ ಗೋಪಾಲಕರನ್ನೂ ಒಂದು ಬೆಟ್ಟದ ಗುಹೆಯಲ್ಲಿ ಮುಚ್ಚಿಟ್ಟನು. ಆಗ ಸುರರಿಗೆ ಸ್ವಾಮಿಯಾದ (ಇದರಿಂದ ಗೋಪಾಲಕರು ದೇವತೆಗಳೆಂದೂ ಅವರಿಗೆ

ಸ್ವಾಮಿಯು ಶ್ರೀಕೃಷ್ಣನೆಂದೂ ನಿರೂಪಿತವಾಯಿತು) ಮತ್ತು ಶ್ರೀಪತಿಯಾದ ಕೃಷ್ಣನು ತನ್ನವರಾದ ಗೋಪಾಲಕರನ್ನು ರಕ್ಷಿಸಲು ಆ ವ್ಯೋಮಾಸುರನನ್ನು ಪಶುವಿನಂತೆ ವಧಿಸಿ, ಬಿಲದಲ್ಲಿ ಬಚ್ಚಿಟ್ಟಿದ್ದ ಸಕಲ ಗೋಪಾಲಕರನ್ನೂ ಹೊರಗೆ ಕರೆತಂದು ಕಾಪಾಡಿದನು. ಹೀಗೆ ಗೋಕುಲದಲ್ಲಿ ವಿರಾಜಿಸುವ ದುರಂತ ಶಕ್ತಿಯುಳ್ಳ, ಸರ್ವಲೋಕೇಶ್ವರನಾದ ಶ್ರೀಕೃಷ್ಣನು ಅನನ್ಯಸಾಧ್ಯವಾದ ಅದ್ಭುತಲೀಲೆಗಳನ್ನು ತೋರುತ್ತಿರುವಾಗ ಇತ್ತ ಶ್ರೀ ಬ್ರಹ್ಮದೇವರ ತೊಡೆಯಿಂದ ಜನಿಸಿದ ನಾರದ ಮಹರ್ಷಿಗಳು ಕಂಸನಲ್ಲಿಗೆ ಹೋಗಿ ಶ್ರೀಕೃಷ್ಣನು ಜನಿಸಿದ್ದು, ಆಗ ವಸುದೇವನು ಅವನನ್ನು ನಂದಗೋಕುಲಕ್ಕೆ ಕೊಂಡ್ಯೊದು ಅಲ್ಲಿಬಿಟ್ಟು ಆಗತಾನೇ ಜನಿಸಿದ್ದ ದುರ್ಗಾದೇವಿಯನ್ನು ಕರೆತಂದದ್ದು ಮೊದಲುಗೊಂಡು ಸಮಸ್ತ ವಿಚಾರವನ್ನು ದೇವತಾಕಾರ್ಯಸಾಧನೆಗಾಗಿ ಕಂಸನಿಗೆ ಹೇಳಿದರು. ಅದನ್ನು ಕೇಳಿ ಕಂಸನು ಅತ್ಯಂತ ಕುಪಿತನಾದನು. ಕೋಪದ ಭರದಿಂದ ಅವನ ದೇಹವು ಕಂಪಿಸಹತ್ತಿತು. ಕ್ರೋಧೋನ್ಮತ್ತನಾದ ಕ್ರೂರಿಯಾದ ಹಂಸನು ಆಗ ಕೂಡಲೇ ವಸುದೇವ ದೇವಕಿಯರನ್ನು ಬಂಧಿಸಿ ಕಾರಾಗೃಹದಲ್ಲಿರಿಸಿ, ತನ್ನ ಶತೃಗಳಾದ ಕೃಷ್ಣಬಲರಾಮರನ್ನೂ, ಗೋಪಜನರನ್ನೂ ಕರೆತರುವಂತೆ ಅಕ್ರೂರನಿಗೆ ಆಜ್ಞಾಪಿಸಿದನು.

ನಾರದರು ಕಂಸನಿಗೆ ಈ ರಹಸ್ಯವಿಚಾರವನ್ನು ಏಕೆ ಹೇಳಿದರು ಎಂಬ ಸಂದೇಹ ಬರುವುದು ಸಹಜ. ಅವರು ಆ ಕಾರ್ಯವನ್ನು ದೇವತಾಕಾರ್ಯಸಾಧನೆಗಾಗಿಯೇ ಮಾಡಿದರು. ಕಂಸನು ತನಗೆ ಅಪರಾಧ ಮಾಡದ ವಿನಃ ಕೃಷ್ಣನು ಕಂಸನನ್ನು ಸಂಹರಿಸುವುದಿಲ್ಲ. ಈಗ ಕಂಸನ ವಧೆ ಅನಿವಾರ್ಯವಾಗಿದೆ. ಕಂಸನ ಸಂಹಾರರೂಪ ದೇವತಾಕಾರ್ಯ-ವಾಗಬೇಕಾಗಿದೆ. ವಸುದೇವಾದಿಗಳು ಮಾಡಿದ ಕಾರ್ಯತಂತ್ರಗಳನ್ನು ಕಂಸನಿಗೆ ಹೇಳಿದರೆ ಕೋಪಗೊಂಡ ಕಂಸನು ಭಗವಂತನ (ಶ್ರೀಕೃಷ್ಣನ) ತಾಯಿ-ತಂದೆಯರನ್ನು ಬಂಧಿಸಿ ಕಾರಾಗೃಹದಲ್ಲಿಟ್ಟು ಹಿಂಸಿಸುತ್ತಾನೆ. ಆಗ ಅವನು ಅಪರಾಧಿ-ಯಾಗುತ್ತಾನೆ. ತನ್ನ ತಂದೆತಾಯಿಗಳನ್ನು ಹಿಂಸಿಸಿ ತನಗೆ ಅಪರಾಧ ಮಾಡಿದ ಕಂಸನನ್ನು ಆಗ ಸಂಹರಿಸುತ್ತಾನೆ. ಈ ಮಹೋದ್ದೇಶದಿಂದಲೇ ನಾರದರು ಕಂಸನಿಗೆ ಸಮಸ್ತ ವಿಚಾರಗಳನ್ನೂ ತಿಳಿಸಿದರೆಂದು ತಿಳಿಯಬೇಕು. ಅಸ್ತು.

ಈಗ ಆಚಾರ್ಯರು ಅಕ್ರೂರನ ಮೂಲರೂಪವಿಚಾರವನ್ನು ನಿರೂಪಿಸುವರು. ಅಕ್ರೂರನು ಪೂರ್ವದಲ್ಲಿ ಕಿಶೋರನೆಂಬ ಗಂಧರ್ವನು (ದೇವಗಾಯಕನು). ಅದೇ ಕಿಶೋರನು ಸ್ವಾಯಂಭುವ ಮನುವಿನ ಅಂಶದಿಂದ, ಬ್ರಹ್ಮದೇವರ ಆವೇಶಯುಕ್ತನಾಗಿ ಶ್ರೀಹರಿಯನ್ನು ಸೇವಿಸಲೋಸುಗ ಈಗ ವೃಷ್ಣಿವಂಶದಲ್ಲಿ ಅಕ್ರೂರನೆಂಬ ಹೆಸರಿನಿಂದ ಜನಿಸಿದ್ದನು. ಅಕ್ರೂರನು ಸರ್ವೋತ್ತಮನಾದ ಶ್ರೀಹರಿಗೆ ಪ್ರೀತಿಕರವಾದ ಸತ್ಕರ್ಮಾಚರಣನಿರತನೂ, ಸಜ್ಜನರಿಂದ ಮಾನ್ಯನೂ ಆಗಿ ಶ್ರೇಷ್ಠಜ್ಞಾನಿಯೆಂದು ಸಕಲ ಗೌರವಾದರಗಳಿಗೆ ಪಾತ್ರನಾಗಿದ್ದನು. ಅವನು ಕಂಸನಿಗೆ ಮಂತ್ರಿಯೂ ಆಗಿದ್ದನು. ಕಂಸನು ಕೃಷ್ಣನನ್ನು ಕರೆತರುವಂತೆ ಆಜ್ಞಾಪಿಸಿದಾಗ ಅಕ್ರೂರನಿಗೆ ಶ್ರೀಕೃಷ್ಣ ಪರಮಾತ್ಮನ ದರ್ಶನಮಾಡುವ ಯೋಗ ತನಗೆ ಪ್ರಾಪ್ತವಾಯಿತೆಂದು ಆಮಂದಾನಂದತುಂದಿಲ ಮನಸ್ಕನಾಗಿ ಕೃತಾರ್ಥನಾದನು. ಕಂಸನಿತ್ತ ದಿವ್ಯರಥದಲ್ಲಿ ಕುಳಿತು ಆನಂದಪೂರ್ಣಮನಸ್ಸಿನಿಂದ ಅಕ್ರೂರನು ಮನದಲ್ಲಿ ನಿರಂತರವೂ ಕಮಲಸಂಭವನಾದ ಬ್ರಹ್ಮದೇವರಿಂದ ವಂದ್ಯವಾದ ಪರಮಾತ್ಮನ ಚರಣಾರವಿಂದಗಳನ್ನು ದಾರಿಯಲ್ಲಿ ಚಿಂತಿಸುತ್ತಾ ವೃಂದಾವನಕ್ಕೆ ಬಂದನು. ಬೃಂದಾವನದ ಸಮೀಪದಲ್ಲಿ ಪರಮಾತ್ಮನಾದ ಶ್ರೀಕೃಷ್ಣನ ಪಾದಾಂಕಿತವಾದ ದಿವ್ಯ ಭೂಪ್ರದೇಶವನ್ನು ದೂರದಿಂದಲೇ ಕಂಡು ಅತಿಮುದಗೊಂಡನು. ಅಕ್ರೂರನು, ಆವ ಪ್ರದೇಶವು ಜಗದೀಶ್ವರನಾದ ಶ್ರೀಕೃಷ್ಣನ ಅಂಗಸಂಗ (ಪಾದಸ್ಪರ್ಶಾದಿಗಳಿಂದ) ಪರಮಪುಣ್ಯ ಭೂಮಿಯೆನಿಸಿದೆಯೋ ಮತ್ತು ಸ್ಪರ್ಶಮಾತ್ರದಿಂದ ಸಕಲಪಾಪಸಮೂಹವನ್ನು ಛೇದಿಸಲು ಶಕ್ತವಾಗಿದೆಯೋ ಅಥವಾ ಶ್ರೀಕೃಷ್ಣನ ಅಂಗಸಂಗದಿಂದ ಉತ್ತಮತ್ವವನ್ನು ಪಡೆದು ಸಕಲ ಪಾಪನಿವಹವನ್ನೂ ತುಂಡರಿಸಲು ಶಕ್ತರಾದ ಬ್ರಹ್ಮ-ರುದ್ರೇಂದ್ರ-ಕಾಮಾದಿ ಶ್ರೇಷ್ಠ ದೇವತೆಗಳ ಬೆಳಗುವ ಕಿರೀಟಮಣಿಲೋಚನಗಳು ಭಗವಂತನ ಪಾದಕ್ಕೆ ನಮಿಸುವಾಗ

ಸಂಸಕ್ತವಾದ ಶ್ರೀಹರಿಚರಣಾರವಿಂದಗಳ ರಜ (ಧೂಳು)ಗಳಿಂದ ವಿರಾಜಿಸುತ್ತಿದೆಯೋ ಅಂಥ ಪರಮಪಾವನನಾದ ವೃಂದಾವನ ಭೂಪ್ರದೇಶವನ್ನು ಕಂಡು ಆನಂದಿಸಿದನು.

ಅಥವಾ ಅಕ್ರೂರನು ಜಗದೀಶ್ವರನಾದ ಶ್ರೀಕೃಷ್ಣನ ಅಂಗ ಸಂಗ (ಪಾದಸ್ಪರ್ಶಾದಿಗಳಿಂದ)ದಿಂದ ಉತ್ತಮತ್ವವನ್ನು ಪಡೆದ, ಅಂತೆಯೇ ಸಕಲ ಪಾಪಸಮೂಹಗಳನ್ನು ಛೇದಿಸಲು ಶಕ್ತರಾದ ಬ್ರಹ್ಮದೇವರು, ರುದ್ರದೇವರು ಇವರೇ ಮೊದಲಾದ ಶ್ರೇಷ್ಠ ದೇವತೆಗಳು ಹಾಗೂ ಕಾಮಾದಿಗಳ (ಶಿರದಲ್ಲಿ), ಮಿಂಚಿನಂತೆ ಬೆಳಗುವ ಮಣಿಮಯ ಕಿರೀಟಗಳು ಹಾಗೂ ನಯನಗಳಲ್ಲಿ ಸಂಸಕ್ತವಾದ, ಅಥವಾ ನವರತ್ನಕಿರೀಟಗಳು ಹಾಗೂ ನಯನಗಳಿಗೆ ವಿಷಯಗಳಾದ, ಶ್ರೀಕೃಷ್ಣನ ಪಾದ-ಚಿಹ್ನಗಳಿಂದ ಕಂಗೊಳಿಸುವ ಪರಮಪಾವನನಾದ ಆ ವೃಂದಾವನ ಪ್ರದೇಶವನ್ನು ಕಂಡು ಆನಂದಿಸಿದನು. ಆಗ ಅಕ್ರೂರನು ರಥದಿಂದಿಳಿದು ಆ ಪುಣ್ಯಮಯವಾದ ಭೂಮಿಗೆ ಶಿರವೊಡ್ಡಿ ನಮಸ್ಕರಿಸಿ ಉರುಳಾಡಿದನು. ಅನಂತರ ಅಕ್ರೂರನು ಜಗದೇಕಗುರುವಾದ ಅಗ್ರಜನಾದ ಬಲರಾಮನಿಂದೊಡಗೂಡಿ ತಾನೂ ಸಹ ಗೋದೋಹನ ಕಾರ್ಯಾಸಕ್ತನಾಗಿರುವ ಮತ್ತು ಹಾಲು ಕರೆಯುತ್ತಿರುವ ಇತರ ಗೋಪಾಲಕರಿಂದ ಸಹಿತನಾದ ಆನಂದಸಾಂದ್ರಶರೀರನಾದ ನಾಶರಹಿತನಾದ ಶ್ರೀಕೃಷ್ಣನನ್ನು ಕಂಡು ಪರಮಾನಂದಭರಿತನಾಗಿ ಕ್ಷರಾಕ್ಷರಪುರುಷರಿಗಿಂತ ಉತ್ತಮನಾದ (ಪುರುಷೋತ್ತಮನಾದ) ಶ್ರೀಕೃಷ್ಣನ ಪಾದಗಳಲ್ಲಿ ಬಿದ್ದು ಸಾಷ್ಟಾಂಗವೆರಗಿದನು. ಆಗ ಬಲರಾಮನಿಂದೊಡಗೂಡಿದ ಶ್ರೀಕೃಷ್ಣನು ಅಕ್ರೂರನನ್ನು ಪ್ರೇಮದಿಂದ ಭುಜಹಿಡಿದು ಮೇಲೆತ್ತಿ ತನ್ನ ಮನೆಗೆ ಕರೆದುಕೊಂಡು ಹೋಗಿ ಷೋಡಶೋಪಚಾರಗಳಿಂದ ಅವನನ್ನು ಸತ್ಕರಿಸಿ ನಿತ್ಯವೂ ಪ್ರಕಟವಾಗುತ್ತಿರುವ ಅಕ್ಷಯವಾದ (ಹ್ರಾಸರಹಿತವೂ) ಜ್ಞಾನವುಳ್ಳ ಶ್ರೀಕೃಷ್ಣನು ಸಕಲವನ್ನು ಬಲ್ಲವನಾಗಿದ್ದರೂ ಲೋಕಚರಿತ್ರೆಯನ್ನನುಸರಿಸಿ ಏನೂ ತಿಳಿಯದನಂತೆ ನಟಿಸುತ್ತಾ ಅಕ್ರೂರನಿಂದ ಅವನು ಬಂದ ಕಾರಣವೇ ಮೊದಲಾಗಿ ಸಮಸ್ತವಿಚಾರಗಳನ್ನೂ ಕೇಳಿ ತಿಳಿದುಕೊಂಡನು.

ಅಕ್ರೂರನಿಂದ ಕಂಸನ ಹೃದ್ಗತವನ್ನರಿತ ಅಂಬುಜನಾಭನಾದ ಶ್ರೀಕೃಷ್ಣನು ಮರುದಿನ ಪ್ರಾತಃಕಾಲ ಬಲರಾಮ ಗೋಪಬಾಲಕರೊಡನೆ ಮತ್ತು ಅಕ್ರೂರನೊಡನೆ ರಥದಲ್ಲಿ ಯಮುನಾ ತೀರಕ್ಕೆ ಬಂದನು. ಆಗ ಅಕ್ರೂರನು ಜಗದಭಿವಂದ್ಯರೂ, ಸ್ತುತ್ಯರೂ ಆದ ರಾಮಕೃಷ್ಣರನ್ನು ರಥದಲ್ಲಿಯೇ ಕುಳ್ಳಿರಿಸಿ ತಾನು ಶೀಘ್ರವಾಗಿ ರಥದಿಂದಿಳಿದು ಯಮುನಾನದಿಗೆ ಬಂದು ಅಲ್ಲಿ ಸಂಕಲ್ಪಪೂರ್ವಕವಾಗಿ ಸ್ನಾನಮಾಡಿ ಅಘಮರ್ಷಣ ವಿಧಿಯನ್ನು ಪೂರೈಸಿ ಯಮುನೆಯ ಜಲದಲ್ಲಿ ಶೇಷನಮೇಲೆ ವಿರಾಜಿಸುವ ಸರ್ವೋತ್ತಮನಾದ ಶ್ರೀಕೃಷ್ಣನನ್ನು ಕಂಡನು. ಅಘಮರ್ಷಣ ಮಂತ್ರಸಿದ್ಧಿಯನ್ನು ಪಡೆದ ಮೇಲೆ ಅಕ್ರೂರನು ಪ್ರತಿದಿನ ಶೇಷದೇವರನ್ನು ದರ್ಶನಮಾಡುತ್ತಿದ್ದನು. ಆದರೆ ಇಂದು ಶೇಷನಮೇಲೆ ಕುಳಿತಿರುವ ಶ್ರೀಹರಿಯನ್ನು ದರ್ಶನ ಮಾಡಿದನು. ಅಂದರೆ ಅಂದು ಶೇಷನನ್ನೂ, ಶೇಷಾಸನನಾದ ಬಾಲಕೃಷ್ಣನನ್ನೂ ಕಂಡನೆಂದು ಭಾವ. ಆ ಅದ್ಭುತ ದೃಶ್ಯವನ್ನು ಕಂಡು ಅಚ್ಚರಿಗೊಂಡ ಅಕ್ರೂರನು ಹಾಗಾದರೆ ಶ್ರೀಕೃಷ್ಣನು ರಥದಲ್ಲಿಲ್ಲವೇನೋ ಎಂದು ರಥದತ್ತ ಧಾವಿಸಿ ಅಲ್ಲಿ ನೋಡುತ್ತಾನೆ -ಏನಾಶ್ಚರ್ಯ! ಆ ರಥದಲ್ಲಿಯೂ ಶ್ರೀಕೃಷ್ಣನನ್ನು ಕಂಡು ವಿಸ್ಮಿತನಾಗಿ ಪುನಃ ಯಮುನೆಯಲ್ಲಿ ಮುಳುಗಿ ಸ್ನಾನಮಾಡಿ ಯಮುನೆಯಲ್ಲಿಯೂ ರಥದಲ್ಲಿಯೂ ಶೇಷತಲ್ಪದಲ್ಲಿ ಪವಡಿಸಿ ಬ್ರಹ್ಮ-ರುದ್ರ-ದೇವೇಂದ್ರರೇ ಮೊದಲಾದ ಶ್ರೇಷ್ಠ ದೇವತೆಗಳು, ಋಷಿಮುನಿವರ್ಯರಿಂದಲೂ ವಂದ್ಯಮಾನ ಪಾದಾರವಿಂದದ್ವಂದ್ವನಾದ ಶ್ರೀಲಕ್ಷ್ಮೀದೇವಿಯಿಂದೊಡ-ಗೂಡಿರುವ ಸರ್ವೋತ್ತಮನಾದ ಶ್ರೀಕೃಷ್ಣನನ್ನು ವಿಶೇಷಾಕಾರವಾಗಿ ದರ್ಶನ ಮಾಡಿ ಆನಂದನಿರ್ಭರನಾದನು. ಅನಂತರ ಕಮಲನಾಭನೂ, ನಾಶರಹಿತನೂ ಆದ ಶ್ರೀಕೃಷ್ಣನನ್ನು ಶ್ರೇಷ್ಠಸ್ತೋತ್ರಗಳಿಂದ (ವಿವಿಧ ವೇದವಾಕ್ಯಗಳಿಂದ) ಸ್ತುತಿಸಿ ಶೇಷತಲ್ಪ-ದಲ್ಲಿ ಕಂಗೊಳಿಸುತ್ತಿದ್ದ ಭಗವಂತನು ಅಂತರ್ಧಾನ ಹೊಂದಿದ ಮೇಲೆ ಅಕ್ರೂರನು ರಥವನ್ನೇರಿ ಕುಳಿತನು. ಬಲರಾಮ-ಸಹಿತನಾದ ಭಗವಾನ್‌ಶ್ರೀಕೃಷ್ಣನು ಅಕ್ರೂರನೊಡಗೂಡಿ ಸಾಯಂಕಾಲಸಮಯದಲ್ಲಿ ಮಧುರಾನಗರಕ್ಕೆ ದಯಮಾಡಿಸಿದನು.

ಮಧುರಾಪಟ್ಟಣಕ್ಕೆ ಬಂದಮೇಲೆ ಅಕ್ಷಯಸಾಮರ್ಥ್ಯವುಳ್ಳ, ಪ್ರಭುವಾದ ಶ್ರೀಕೃಷ್ಣನು ತಾನು ಬಂದ ಸಮಾಚಾರವನ್ನರುಹಲು ಅಕ್ರೂರನನ್ನು ಮೊದಲು ಕಳುಹಿಸಿಕೊಟ್ಟು ಬಲರಾಮ ಮತ್ತು ಸಮವಯಸ್ಕರಾದ ಗೋಪಾಲರಿಂದೊಡಗೂಡಿ ನಗರನಿರೀಕ್ಷಣಾ ಕುತೂಹಲದಿಂದ ರಾಜಮಾರ್ಗದಲ್ಲಿ ಹೊರಟನು. ಶ್ರೀಕೃಷ್ಣನ ಅದ್ಭುತ ಬಾಲಲೀಲೆಗಳು, ಅಸುರ ಸಂಹಾರ, ಅಚಿಂತ್ಯಾದ್ಭುತ ಶಕ್ತಿ, ಮಹಿಮೆ, ಜಗತ್ತನ್ನೇ ಮೋಹಗೊಳಿಸುವ ರೂಪಸೌಂದರ್ಯ ಲಾವಣ್ಯಾದಿಗಳನ್ನು ಕೇಳಿ ತಿಳಿದಿದ್ದ ಮಧುರೆಯ ನಾಗರಿಕರು ಶ್ರೀಕೃಷ್ಣನ ಆಗಮನ ವೃತ್ತಾಂತವನ್ನು ಕೇಳಿ ಆ ಮಹಾನುಭಾವನ ದರ್ಶನಾಕಾಂಕ್ಷಿಗಳಾಗಿ ಬಂದು ಜಯಜಯಕಾರಗಳಿಂದ ಕೃಷ್ಣನನ್ನು ಗೌರವಿಸಿ ಪೂಜಿಸಹತ್ತಿದರು. ಕುತೂಹಲಯುಕ್ತರಾದ ಆ ಎಲ್ಲ ಮಧುರಾಪುರಿಯ ಪ್ರಜೆಗಳಿಂದ ಪೂಜೆ ಕೈಗೊಳ್ಳುತ್ತಾ ಮಂದಹಾಸಬೀರುತ್ತಾ ಮೃದುಮಧುರವಚನಗಳಿಂದ ಅವರನ್ನು ಆನಂದಗೊಳಿಸುತ್ತಾ ಶ್ರೀಕೃಷ್ಣನು ಮಧುರೆಯ ರಾಜಬೀದಿಗಳಲ್ಲಿ ಸಂಚರಿಸಹತ್ತಿದನು.

ಹೀಗೆ ಶ್ರೀಕೃಷ್ಣನು ರಾಜಬೀದಿಯಲ್ಲಿ ಬರುತ್ತಿರುವಾಗ ಆನೆಯಮೇಲೆ ಕುಳಿತು ಬರುತ್ತಿರುವ ಕಂಸನಿಗೆ ಪ್ರೀತ್ಯಾಸ್ಪದನಾದ, ಪಾರ್ವತಿಯ ವರದಿಂದ ಮರಣರಹಿತನಾದ ರಜಕ (ಅಗಸ)ನನ್ನು ಕಂಡು ಅವನತ್ತ ಸಾಗಿ "ನನಗೆ ಧರಿಸಲು ಉತ್ತಮ ವಸ್ತ್ರಗಳನ್ನು ಕೊಡು" ಎಂದು ಕೇಳಿದನು. ಅದಕ್ಕೆ ಅಗಸನು ಶ್ರೀಕೃಷ್ಣನನ್ನು ಕೆಟ್ಟವಚನಗಳಿಂದ ನಿಂದಿಸಲು, ಕುಪಿತನಾದ ಶ್ರೀಕೃಷ್ಣನು ಪಾಪಿಯಾದ ಆ ರಜಕನನ್ನು ತನ್ನ ಕರಾಗ್ರಭಾಗದಿಂದ ಮರ್ದಿಸಿ ಯಮಸದನಕ್ಕೆ ಕಳುಹಿಸಿದನು. ಅಪರಿಮಿತ ಬಲಶಾಲಿಯೂ ಪೂಜ್ಯನೂ ಆದ ಕೃಷ್ಣನು ರಜಕನನ್ನು ಸಂಹರಿಸಿದ ಮೇಲೆ ತನಗೆ ಉಚಿತವಾದ ವಸ್ತ್ರಗಳಿಂದ ಅಲಂಕೃತನಾಗಿ, ಅಣ್ಣನಾದ ಬಲರಾಮನಿಗೆ ಉಚಿತವಾದ ವಸ್ತ್ರಗಳನ್ನಿತ್ತನು. ಮತ್ತು ಗೆಳೆಯರಾದ ಗೋಪಾಲಕರಿಗೂ ವಸ್ತ್ರಗಳನ್ನು ಕೊಟ್ಟು ಉಳಿದ ವಸ್ತ್ರಗಳನ್ನು ಬೀದಿಯಲ್ಲಿ ನಡಮುಡಿಯಂತೆ ಬಿಚ್ಚಿಹಾಸಿ ಅದರ ಮೇಲೆ ತನ್ನ ಪಾದಾರವಿಂದಗಳಿಂದ ನಡೆದುಬಂದನು. ಸ್ವೀಕರಿಸಲು ಯೋಗ್ಯ, ತ್ಯಜಿಸಲು ಯೋಗ್ಯ ಇವುಗಳಿಂದ ರಹಿತವಾದ ಗ್ರಾಹ್ಯವೇ ಆದ, ಜ್ಞಾನಾತ್ಮಕವೂ ಆನಂದಸಾಂದ್ರೈಕಪೂರ್ಣಸ್ವರೂಪನೂ ಆದ ಶ್ರೀಕೃಷ್ಣನು ವೃದ್ಧಿಹ್ರಾಸಾದಿ ರಹಿತನಾಗಿದ್ದರೂ ಅಂದರೆ ರೋಮ-ನಖಾದಿ ಅವಯವಗಳ ವೃದ್ಧಿ-ಹ್ರಾಸಗಳಿಲ್ಲದವನಾಗಿದ್ದರೂ ಸಹ ಅಪ್ರಮೇಯನಾದ ಕೃಷ್ಣನು ಲೋಕವಿಡಂಬನೆ ಮಾಡುತ್ತಾ ಲಾಕ್ಷಾವಿಕಾರಾದಿ ಧಾತುಗಳಿಂದ ನಾಪಿತನಿಂದ ಕ್ಷುರಕರ್ಮವನ್ನು (ಕ್ಷೌರವನ್ನು) ಮಾಡಿಸಿಕೊಂಡು ಅಲಂಕೃತನಾದವನಂತೆ ಕಂಗೊಳಿಸಿದನು.

ನಾಪಿತನು ಕೃಷ್ಣನಿಗೆ ಕ್ಷುರಕರ್ಮವನ್ನು ಮಾಡಿದನು ಎಂದು ಹೇಳಿದರೆ ಪರಬ್ರಹ್ಮಸ್ವರೂಪನಾದ, ವೃದ್ಧಿಹ್ರಾಸಾದಿ ರಹಿತನಾದ ಕೃಷ್ಣಪರಮಾತ್ಮನ ಅಪ್ರಾಕೃತತ್ವಕ್ಕೆ ಹಾನಿಯಲ್ಲವೇ? ನಾಪಿತನು ಶ್ರೀಕೃಷ್ಣನ ನಖ-ಶಿಖಾದಿಗಳನ್ನು ತೆಗದು ಅಲಂಕರಿಸಿದನೆಂದು ಹೇಳುವುದರಿಂದ ಪರಮಾತ್ಮನಿಗೂ ನಮ್ಮಂತೆ ನಖ-ಶಿಖಾದಿಗಳು ವೃದ್ಧಿಹ್ರಾಸಾದಿಗಳನ್ನು ಪಡೆಯುವುವೆಂದು ಹೇಳಿದಂತಾಗುವುದಿಲ್ಲವೇ? ಎಂದರೆ ಅದಕ್ಕೆ ಜ್ಞಾನಿಗಳೇ ನಮಗೆ ಪ್ರಮಾಣವಾಗಿದ್ದಾರೆ. ಇಲ್ಲಿ ನಾಪಿತನು ಕೃಷ್ಣನಿಗೆ ಕ್ಷುರಕರ್ಮ ಮಾಡಿ ಅಲಂಕರಿಸಿದನೆಂದರೆ ಅಪ್ರಾಕೃತವಿಗ್ರಹನಾದ ಶ್ರೀಕೃಷ್ಣನು ಲೋಕವಿಡಂಬನೆಗೋಸ್ಕರವಾಗಿ ಆನಂದಮಯವಾದ ಮಂಗಳಕರವಾದ ತನ್ನ ನಖ-ಕೇಶಾದಿಗಳನ್ನು ಸ್ವಶಕ್ತಿಯಿಂದಲೇ ಅಲಂಕಾರಪ್ರಾಯವಾಗುವ ರೀತಿಯಲ್ಲಿ ಸಂಕೋಚಮಾಡಿ ಪ್ರಾಕೃತ ನಖ-ಕೇಶಾಗ್ರಾದಿಗಳನ್ನು ನಿರ್ಮಿಸಿ ಕೆಳಗೆ ಬೀಳಿಸಿದನೆಂದು ಜ್ಞಾನಿಗಳು ತಿಳಿಯುವರು. ನಾವೂ ಅದರಂತೆ ತಿಳಿಯಬೇಕು. ಅಜ್ಞಾನಿಗಳು ಮಾತ್ರ ನಮ್ಮಂತೆಯೇ ಶ್ರೀಕೃಷ್ಣನೂ ಮಾನವನು, ಅವನಿಗೂ ನಮ್ಮಂತೆ ಪ್ರಾಕೃತ ನಖ-ಕೇಶಾದಿಗಳಿವೆ. ಅವು ವೃದ್ಧಿಹ್ರಾಸವನ್ನು ಹೊಂದುವುವು, ಅಂತೆಯೇ ನಾಪಿತನು ಮುಂಡನಮಾಡಿ ಅವನ್ನು ತೆಗೆದನು ಎಂದು ತಿಳಿದರು. ಅಪ್ರಾಕೃತನೂ ಜ್ಞಾನಾನಂದೈಕವಿಗ್ರಹನೂ ಆದ ಪರಮಾತ್ಮನಿಗೆ ಪ್ರಾಕೃತ ನಖ-ಕೇಶಾದಿಗಳು ಇಲ್ಲ, ಹಾಗಾದರೆ ನಾಪಿತನು ಮುಂಡನ ಮಾಡಿದನಲ್ಲ ಎಂದರೆ ಅದು ಪರಮಾತ್ಮನೇ ತನ್ನ ಇಚ್ಛೆಯಿಂದ ತತ್ಕಾಲದಲ್ಲಿ ನಿರ್ಮಿಸಿ ಲೋಕವಿಡಂಬನ ಮಾಡಿದನೆಂದೇ ನಾವು ತಿಳಿಯಬೇಕು. ಯಾವ ಪರಮಾತ್ಮನ ನಖಾಗ್ರಗಳು ಘನೀಭೂತವಾದ

ಶತಕೋಟಿಯೋಜನಪ್ರಮಾಣದ ಸ್ವರ್ಣಮಯ ಬ್ರಹ್ಮಾಂಡವನ್ನು ಭೇದಿಸಿದರೂ ಅವು ಭಿನ್ನವಾಗಲಿಲ್ಲವೋ (ಸ್ವಲ್ಪವೂ ಮುಕ್ಕಾಗಲಿಲ್ಲವೋ) ಅಂಥ ಭಗವಂತನ ನಖಾಗ್ರಗಳನ್ನು ಯಾರು ತಾನೇ ಭೇದಿಸಲು ಸಮರ್ಥರಾದಾರು?

ಶ್ರೀಕೃಷ್ಣನು ತನ್ನ ಪಾರ್ಷದರಾದ ಅಂದರೆ ಈಗ ನಾಪಿತ ಮೂಲಾಕಾರರಾಗಿ ತನ್ನ ಸೇವೆಗಾಗಿ ಭೂಮಿಯಲ್ಲಿ ಅವತರಿಸಿ ಸೇವೆ ಸಲ್ಲಿಸಿದ ಅವರೀರ್ವರಿಗೆ ಇಹಲೋಕದಲ್ಲಿ ಅವರ ಸಕಲ ಮನೋಭೀಷ್ಟಗಳನ್ನೂ, ಅತ್ತ ವೈಕುಂಠದಲ್ಲಿ ತನ್ನ ಸಾರೂಪ್ಯ ವರವನ್ನೂ ಅನುಗ್ರಹಿಸಿದನು. ಅನಂತರ ರಾಜಮಾರ್ಗದಲ್ಲಿ ಬರುತ್ತಿರುವಾಗ ರಾಜನಾದ ಕಂಸನಿಗೆ ರಾಜಯೋಗ್ಯವಾದ ಸುಗಂಧದ್ರವ್ಯಗಳನ್ನು ತೆಗೆದುಕೊಂಡು ಅರಮನೆಗೆ ಹೊರಟಿದ್ದ ಅತ್ಯಂತ ವಕ್ರಳಾದ ಒಬ್ಬ ಸ್ತ್ರೀಯನ್ನು ನೋಡಿದನು.

ಕಂಸನಿಗೆ ಸುಗಂಧದ್ರವನ್ನು ತೆಗೆದುಕೊಂಡು ಹೋಗುತ್ತಿದ್ದ ತ್ರಿವಕ್ರೆಯು ಕೃಷ್ಣನು ಸುಗಂಧವನ್ನು ಅಪೇಕ್ಷಿಸಿದ ಕೂಡಲೇ ಹಿಂದುಮುಂದು ನೋಡದಲೆ ಸಹಾ ನಂದಕುಮಾರನಿಗೆ ಸುಗಂಧವನ್ನು ಸಮರ್ಪಿಸಿದಳು. ಶ್ರೀಕೃಷ್ಣ-ಬಲರಾಮರು ಸುಗಂಧವನ್ನು ಪೂಸಿಕೊಂಡರು. ಆಗ ಕೃಷ್ಣನು ಆ ಸೈರಂಧ್ರಿಯ ವಕ್ರತ್ವವನ್ನು ಪರಿಹರಿಸಿ ಅವಳು ಸರ್ವಾಂಗಸುಂದರಿಯಾಗಿ ಶೋಭಿಸುವಂತೆ ಮಾಡಿ ಅನುಗ್ರಹಿಸಿದನು. ಆಗ ಆನಂದತುಂದಿಲಳಾದ ಆ ಶುಭಾಂಗಿಯು ವಾಸುದೇವನ ಅಂಗಸಂಗವನ್ನು ಬಯಸಿ ಪ್ರಾರ್ಥಿಸಲು ಶ್ರೀಕೃಷ್ಣನು ನಸುನಕ್ಕು ಕಾಲಾಂತರದಲ್ಲಿ ಅವಳ ಅಭಿಲಾಷೆಯನ್ನು ಪೂರೈಸುವುದಾಗಿ ಅಭಯವಿತ್ತು ಅವಳಿಂದ ಬೀಳ್ಕೊಂಡು ಮುನ್ನಡೆದನು. ಷೋಡಶಕಲಾಪರಿಪೂರ್ಣವಾದ ಅನೇಕ ಚಂದ್ರವೃಂದದ ಕಾಂತಿಯನ್ನೆಲ್ಲಾ ಒಂದುಗೂಡಿಸಿದರೆ ಆಗುವ ಮಹಾಕಾಂತಿಪುಂಜದಿಂದ ಕಂಗೊಳಿಸುವ, ತೇಜಸ್ಸಿಗೆ ಹೆಸರಾದ ಸೂರ್ಯನ ಪ್ರಖರ ತೇಜಸ್ಸಿಗಿಂತ ಅತ್ಯಧಿಕವಾದ ಪ್ರಖರ ತೇಜಸ್ಸಿನಿಂದ ಶೋಭಿಸುವ, ಅಂದರೆ ಭಕ್ತರಿಗೆ ಚಂದ್ರನಂತೆ ಹೃದಯಾಹ್ಲಾದಕರ ಕಾಂತಿಯಿಂದ ಸೌಮ್ಯನಾಗಿಯೂ, ದ್ವೇಷಿಗಳಿಗೆ ಪ್ರಚಂಡ-ಪ್ರಖರಣಗಳಿಂದ ಧಗಧಗಿಸುವ ದಿನಮಣಿಯಂತೆ ಕ್ರೂರ-ನಾಗಿಯೂ, ಹಳದಿಯ ಜರಿಮಡಿಯನ್ನುಟ್ಟು ಕನಕಕಾಂತಿಯಂತೆ ಮನೋಹರವಾದ ಗಂಧಮಾಲ್ಯಾದಿಗಳಿಂದ ಅಲಂಕೃತನಾದ, ಎಣಿಸಲಳವಲ್ಲದ ಕಲ್ಯಾಣಗುಣಗಳಿಂದ ಮಂಡಿತನಾದ ಶೃಂಗಾರಸಾಗರದಂತೆ ಶೋಭಿಸುವ ಶ್ರೀಕೃಷ್ಣನು ಅಲ್ಲಿಂದ ಹೊರಟು ಆಯುಧಶಾಲೆಗೆ ಬಂದನು.

ಧನುರ್ಯಜ್ಞಮಹೋತ್ಸವಕ್ಕಾಗಿ ಅಲ್ಲಿಟ್ಟಿದ್ದ, ರುದ್ರಪ್ರದತ್ತವಾದ ಮಹಾಧನುವನ್ನು ವಾಸುದೇವನು ಬಲಾತ್ಕಾರದಿಂದ ತೆಗೆದುಕೊಂಡು ಧನುವನ್ನು ಹೆದೆಯೇರಿಸಿ ಜ್ಯಾಬಂಧನಮಾಡಿ ಮಧ್ಯದಲ್ಲಿಯೇ ಎರಡು ಭಾಗವಾಗಿ ಅದನ್ನು ಮುರಿದುಹಾಕಿದನು. ನಿಖಿಲವೃಂದಾರಕವೃಂದದಿಂದಲೂ ಭೇದಿಸಲಾಗದ ಆ ಮಹಾಧನುವನ್ನು ಶ್ರೀಕೃಷ್ಣನು ಮುರಿದು-ಹಾಕಿದ್ದರಿಂದ, ಹದಿನಾಲ್ಕು ಲೋಕಸಹಿತವಾದ ಬ್ರಹ್ಮಾಂಡದ ಆಸ್ಫೋಟವಾದರೆ ಆಗಬಹುದಾದಂಥ ಭಯಂಕರ ಶಬ್ದವಾಯಿತು. ಆ ಶಬ್ದಶ್ರವಣಮಾತ್ರದಿಂದ ಬಹುಧೈರ್ಯಶಾಲಿಯಾಗಿದ್ದರೂ ಸಹ ಕಂಸನು ಭಗ್ನಬಲನಂತೆ ಸಿಂಹಾಸನದಿಂದ ಕುಸಿದುಬಿದ್ದನು. ಭಗವಾನ್ ಕೃಷ್ಣನು ಧನುರ್ಭಂಗಮಾಡಿದ್ದರಿಂದ ಕುಪಿತನಾದ ಕಂಸನು ಕೃಷ್ಣಬಲರಾಮರ ದಮನಕ್ಕಾಗಿ ದೊಡ್ಡ ಸೈನ್ಯವನ್ನೇ ಕಳುಹಿಸಿದನು. ಅತ್ಯಂತ ಬಲಯುಕ್ತವಾದ ಆ ಸಮಸ್ತ ಸೈನ್ಯವನ್ನೂ ಕೃಷ್ಣಬಲರಾಮರು ಮುರಿದ ಧನುಸ್ಸಿನ ತುಂಡುಗಳಿಂದಲೇ ಸಂಹಾರಮಾಡಿದರು. ಅನಂತರ ಕೃಷ್ಣನು ಬಲರಾಮಸಹಿತನಾಗಿ ನಂದಗೋಪಾದಿ ಸಮಸ್ತರಿದ್ದಲ್ಲಿಗೆ ತೆರಳಿದನು. ಇಲ್ಲಿ 'ಸಬಲ' ಎಂದು ಹೇಳಿರುವುದರಿಂದ, ಶ್ರೀಕೃಷ್ಣ ಒಂದು ಧನುವನ್ನೂ , ಬಲರಾಮನೊಂದು ಧನುವನ್ನೂ ಮುರಿದು ಅದರಿಂದಲೇ ಸೈನ್ಯವನ್ನು ಸಂಹರಿಸಿದರೆಂದು ತಿಳಿಯಬೇಕು. ಈ ವಿಷಯವು 'ಭಾಗವತ'ದಲ್ಲಿ 'ಕ್ರುದ್ಧೌ ಧನ್ವನ ಆದಾಯ ಶಕಲಂತಾಪ್ತ ಜಘ್ನತುಃ' ಎಂದು ನಿರೂಪಿಸಲ್ಪಟ್ಟಿದೆ, ನಂದಗೋಪಾದಿಗಳು ಬಿಡಾರಮಾಡಿದ್ದ ಆ ಸುಂದರೋದ್ಯಾನದಲ್ಲಿ ಕೃಷ್ಣನು ಕ್ಷೀರಾನ್ನಸಹಿತವಾದ ಷಡ್ರಸೋಪೇತವಾದ ಮೃಷ್ಟಾನ್ನವನ್ನುಂಡು ನಿರ್ಭಯದಿಂದ ಅಂದಿನ ರಾತ್ರಿಯನ್ನು ಸುಖದಿಂದ ಕಳೆದನು.

ಮರುದಿನ ಪ್ರಾತಃಕಾಲ ಕಂಸನು ಬಹುಭಯಕಂಪಿತ ಹೃದಯನಾಗಿ, ಯುವತಿಯರಿಂದೊಡಗೂಡಿ, ನಾನಾವಿಧ ಸಣ್ಣಪುಟ್ಟ ಮಂಚಗಳಲ್ಲಿ ಅಲಂಕೃತರಾದ ಪೌರಜಾನಪದರು, ರಾಜನ್ಯರುಗಳಿಂದೊಡಗೂಡಿದ ರಾಜಮಂಡಳಿಯ ಮಧ್ಯದಲ್ಲಿ ಬಹು ಉನ್ನತವಾದ ರಾಜಮಂಟಪದಲ್ಲಿ ಕುಳಿತನು. ಅನಂತರ ಕಂಸನು ಶ್ರೇಷ್ಠವಾದ ಆ ರಂಗಮಂಟಪದ ಮುಖದ್ವಾರದಲ್ಲಿ ಮಾವಟಿಗನಿಂದ ಸಹಿತವಾದ ಬೆಟ್ಟದಂತೆ ಬೃಹದಾಕಾರದ "ಕುವಲಯಾಪೀಡ"ವೆಂಬ ಆನೆಯನ್ನು ನಿಲ್ಲಿಸಿ, ಅಖಾಡದಲ್ಲಿ ಚಾಣೂರ-ಮುಷ್ಟಿಕ ಮೊದಲಾದ ವೀರಮಲ್ಲರನ್ನು ಅಶಕ್ಯವಾದ ಕೃಷ್ಣನಿಗ್ರಹಕ್ಕಾಗಿ ನಿಲ್ಲಿಸಿದನು. ಕಂಸನಲ್ಲಿ ಸಹಿಸಲಶಕ್ಯವಾದ, ಅತ್ಯಂತ ಬಲಿಷ್ಠವಾದ ಇಪ್ಪತ್ತು ಅಕ್ಷೋಹಿಣೀ ಸಂಖ್ಯಾಕವಾದ ಸೈನ್ಯವಿದ್ದಿತು. ಕಂಸನಿಗೆ ಸುನೀತನೆಂಬ ಅನುಜನಿದ್ದನು. ಅವನು ಪೂರ್ವದಲ್ಲಿ "ವೃಕ"ನೆಂಬ ಅರಸನು. ಪೂರ್ವಜನ್ಮದಲ್ಲಿ ಅವನಿಗೆ ಅನುಜರಾಗಿದ್ದ ಏಳು ಜನರು ಈ ಜನ್ಮದಲ್ಲಿಯೂ ಅನುಜರಾಗಿದ್ದರು. ಇಂತಹ ಪಾಪಿಗಳಾದ ಆ ಎಲ್ಲ ಸಹೋದರರೂ ಅಲ್ಲಿಗೆ ಬರಲಿರುವ ಶ್ರೀಕೃಷ್ಣನನ್ನು ಜಯಿಸಲೆಂದು ಸಕಲಾಯುಧಗಳಿಂದ ಯುಕ್ತರಾಗಿ ಕಂಸನ ಮಹಾಸೈನ್ಯದೊಡನೆ ಅಲ್ಲಿ ಸನ್ನದ್ಧರಾಗಿದ್ದರು.

ಉರುವಿಕ್ರಮನಾದ ಜಗತ್ತಿನ ಸೃಷ್ಟ್ಯಾದಿಕಾರ್ಯವನ್ನೆಸಗಲು ಅತ್ಯಂತ ಶಕ್ತನಾದ ಶ್ರೀಕೃಷ್ಣನು ಸೂರ್ಯೋದಯವಾದ ಕೂಡಲೇ ಬಲರಾಮ ಮತ್ತು ಗೆಳೆಯರಿಂದೊಡಗೂಡಿ ದೇವತೆಗಳು ಸ್ತೋತ್ರಮಾಡುತ್ತಿರಲಾಗಿ ಅಸುರರನ್ನು ನಿರ್ಮೂಲ-ಗೊಳಿಸಲೋಸುಗ ಕಂಸನ ರಂಗಮಂಟಪದೆಡೆಗೆ ದಯಮಾಡಿಸಿದನು. ರಂಗಮಂಟಪದ ಮುಖದ್ವಾರದಲ್ಲಿ ರುದ್ರದೇವರ ವರಪ್ರಸಾದದಿಂದ ರಕ್ಷಿತನಾದ ಮಾವಟಿಗನಿಂದ ಕೂಡಿರುವ ಕುವಲಯಾಪೀಡವೆಂಬ ಗಜೇಂದ್ರನನ್ನು ಕೃಷ್ಣನು ಕಂಡನು. ದುಷ್ಟರಿಂದ ತುಂಬಿದ್ದ ರಂಗಮಂಟಪದ ಸಿಂಹದ್ವಾರದಲ್ಲಿದ್ದ ಆನೆಯನ್ನೂ, ಅದರ ಮೇಲಿದ್ದ ಮಾವಟಿಗನನ್ನು ನೋಡಿ ಜಗದ್ಗುರುವಾದ ಕೃಷ್ಣನು "ಎಲವೋ ಪಾಪಿಯೇ! ಪ್ರವೇಶಿಸಲು ಮಾರ್ಗಬಿಟ್ಟು ತೊಲಗು, ತಡಮಾಡಬೇಡ" ಎಂದುಸುರಿದನು. ಗಿರೀಶನ ವರಬಲದಿಂದ ಮದಿಸಿದ ಮತ್ತು ಜಗತ್ತಿನ ಜನರಿಂದ ಅವಧ್ಯನಾದ ಪಾಪಿಯಾದ ಆ ಮಾವಟಿಗನು ರಂಗಮಂಟಪದ ಮುಂಭಾಗಕ್ಕೆ ಅವಧಿರಹಿತ ಮಹಿಮಾಶಾಲಿಯಾದ ವಾಸುದೇವನತ್ತ ಆನೆಯನ್ನು ನಡೆಯಿಸಿದನು. ಆಗ ಶ್ರೀ ಕೃಷ್ಣನು ಸ್ವಲ್ಪಹೊತ್ತು ವಿನೋದವಾಗಿ ಆನೆಯೊಡನೆ ಆಟವಾಡಿ ಅದರ ಸೊಂಡಿಲನ್ನು ಹಿಡಿದು ನೆಲಕ್ಕೆ ಕೆಡಹಿ ಅದರ ಕುಂಭಸ್ಥಳದ ಮೇಲೆ ಪಾದಗಳನ್ನಿಟ್ಟು ಆನೆಯ ಎರಡು ಉದ್ದವಾದ ದಂತಗಳನ್ನು ಕಿತ್ತು ಅದರಿಂದಲೇ ಮಾವಟಿಗನನ್ನೂ, ಆನೆಯನ್ನೂ ಸಂಹರಿಸಿದನು. ಮಾವಟಿಗನನ್ನೂ, ಆನೆಯನ್ನೂ ಸಂಹರಿಸಿದ ಶ್ರೀಕೃಷ್ಣನು ಬಲರಾಮಸಹಿತನಾಗಿ ಆನೆಯ ದಂತವನ್ನು ಆಯುಧದಂತೆ ಭುಜದ ಮೇಲೆ ಹೊತ್ತು ರಂಗಮಂಟಪದತ್ತ ಹೊರಟನು. (ಇಲ್ಲಿ ಕೃಷ್ಣ-ಬಲರಾಮರಿಬ್ಬರೂ ಒಂದೊಂದು ದಂತವನ್ನು ಆಯುಧದಂತೆ ಭುಜದಮೇಲಿಟ್ಟುಕೊಂಡು ಹೊರಟರೆಂದು ತಿಳಿಯಬೇಕು). ಆನೆಯ ಕುಂಭಸ್ಥಳದ ಮದಜಲದಿಂದ ರಂಜಿತವಾದ ದೇಹವುಳ್ಳ ಸಂಪೂರ್ಣಸ್ವರೂಪಶಕ್ತಿಸಂಪನ್ನನಾದ, ನಿರ್ದೋಷನಾದ, ಅಂದರೆ ಗಜರಾಜನ ಮದಜಲ ಸಂಬಂಧದಿಂದುಂಟಾದ ದೋಷ ರಹಿತನಾಗಿ, ಶ್ರೀಕೃಷ್ಣನು ರಂಗಸ್ಥಳವನ್ನು ಪ್ರವೇಶಿಸಿದನು. ಜಗತ್ತಿಗೆ ಮುಖ್ಯಗುರುವೂ, ಬಲಪರಾಕ್ರಮ ಸ್ವರೂಪಿಯೂ ಆದ ಕೃಷ್ಣನು ರಂಗಮಂಟಪವನ್ನು ಪ್ರವೇಶಿಸುತ್ತಿರುವಾಗ ಅಲ್ಲಿದ್ದ ಸಕಲ ಭಕ್ತಜನರೂ ಹರ್ಷಿಸಿದರು. ದ್ವೇಷಿಗಳಾದ ಸಮಸ್ತಜನರೂ ದುಃಖಿತರಾದರು. ಸೂರ್ಯನುದಯಿಸಿದರೆ ಕಮಲಗಳರಳುವಂತೆ ಭಕ್ತರಾದ ಜ್ಞಾನಿಗಳು ಮುದಗೊಂಡರೆ, ಸೂರ್ಯೋದಯ-ವಾದ ಕೂಡಲೇ ಕುಮುದಪುಷ್ಪ (ನೈದಿಲೆ)ಗಳು ಬಾಡುವಂತೆ ವಿಪರೀತಜ್ಞಾನವುಳ್ಳ ಪರಿದ್ವೇಷಿಗಳಾದ ಕೂಡಲೇ ಹೇಗೆ ಏಕಕಾಲದಲ್ಲಿ ಪದ್ಮಗಳರಳಿ, ಕುಮುದಗಳು ಬಾಡುವುವೋ, ಅದರಂತೆ ಶ್ರೀಕೃಷ್ಣನೆಂಬ ಸೂರ್ಯನು ಉದಯಿಸಿದ (ರಂಗ-ಮಂಟಪ ಪ್ರವೇಶಿಸಿದ) ಕೂಡಲೇ ಏಕಕಾಲದಲ್ಲಿ ಭಕ್ತಜನರಿಗೆ ಹರ್ಷ-ದ್ವೇಷಿಗಳಿಗೆ ದುಃಖಗಳಾದವೆಂದು ಭಾವ.

ಶ್ರೀಕೃಷ್ಣಬಲರಾಮರು ರಂಗಸ್ಥಳವನ್ನು ಪ್ರವೇಶಿಸಿದ್ದನ್ನು ಅವಲೋಕಿಸಿ, ಶಂಕರನ ವರಬಲದಿಂದ ಅವಧ್ಯನಾದ ಚಾಣೂರನೆಂಬ ಮಲ್ಲವೀರನು ಕಂಸನಿಗೆ ಪ್ರಿಯಮಾಡಲೆಣಿಸಿ ಜಗತ್ಪ್ರಭುವಾದ ಶ್ರೀಕೃಷ್ಣನನ್ನು ಸಂಬೋಧಿಸಿ, "ಹೇ ಕೃಷ್ಣ!

ನನ್ನ ಮಾತನ್ನಾಲಿಸು. ರಾಜನೇ ದೇವತೆಯೆಂದು ವಿಪ್ರರು ಸಾರುವರು. ರಾಜನಿಗೆ ಪ್ರಿಯವಾದ ಕಾರ್ಯಮಾಡುವ ಮನುಷ್ಯನಿಗೆ ಮೋಕ್ಷವು ಸಿದ್ಧಿಸುವುದೆಂದೂ ಹೇಳುತ್ತಾರೆ. ಆದ್ದರಿಂದ ನಮ್ಮೊಡೆಯನಾದ ಕಂಸನಿಗೆ ಸಂತೋಷ-ವನ್ನುಂಟುಮಾಡಲು ನಾವಿಬ್ಬರೂ ಬಾಹುಯುದ್ಧವನ್ನು ಮಾಡೋಣ! ಬಲರಾಮನೂ ಮುಷ್ಟಿಕನೊಡನೆ ಹೋರಾಡಲಿ" ಎಂದು ಹೇಳಿದನು. ಅದನ್ನಾಲಿಸಿ ಶ್ರೀಕೃಷ್ಣನು ಪರಿಹಾಸಪೂರ್ವಕವಾಗಿ "ಆಹಾ, ಕಂಸನು ದೇವತೆಯಾಗಲಿ! ಹೂಂ, ನೀನಂತೆ ನಾವೀರ್ವರೂ ಹೋರಾಡೋಣ" ಎಂದು ಹೇಳಿ ಚಾಣೂರನೊಡನೆ ಒಂದು ಮುಹೂರ್ತಕಾಲ ಬಾಹು-ಯುದ್ಧಮಾಡಿ ತನ್ನ ಮಲ್ಲವಿದ್ಯಾನೈಪುಣ್ಯವನ್ನು ಪ್ರದರ್ಶಿಸಿ ದೇವತಾಸಾರ್ವಭೌಮನಾದ, ಸಹಿಸಲಸದಳಬಲವಂತನಾದ ಆ ಸ್ವಾಮಿಯು ತನ್ನ ಶತ್ರುವಾದ ಚಾಣೂರನ ಎರಡು ಪಾದಗಳನ್ನು ಹಿಡಿದು ಮೇಲಕ್ಕೆಸೆದನು. ಮಹೇಂದ್ರನ ವಜ್ರಾಯುಧದಿಂದಲೂ ಛೇದಿಸಲಾಗದ, ಆಕಾಶದಲ್ಲಿ ಪರ್ವತದಂತೆ ಕಾಣುತ್ತಿದ್ದ ಚಾಣೂರನ ಕಾಲುಗಳನ್ನು ಹಿಡಿದು ನೂರು ಬಾರಿ ಗಿರಗಿರನೆ ತಿರುಗಿಸಿ ಭೂಮಿಗಪ್ಪಳಿಸಿ ತನ್ನ ಪಾದಾಘಾತಗಳಿಂದ ಚಾಣೂರನ ದೇಹವನ್ನು ಪುಡಿಪುಡಿಮಾಡಿ ಸಂಹರಿಸಿದನು. ಪುರುಷೋತ್ತಮನಾದ ವಾಸುದೇವನನ್ನು ಸ್ವರ್ಗದಲ್ಲಿನ ದೇವತೆಗಳೂ, ಭೂಲೋಕದಲ್ಲಿನ ಮಾನವರೂ ಸಹ ಸ್ತುತಿಸಿ ಮುದಗೊಳಿಸಿದರು. ಅದೇ ಸಮಯದಲ್ಲಿ ಬಲರಾಮನೂ ಸಹ ದೃಢವಾದ ಮುಷ್ಟಿಪ್ರಹಾರಗಳಿಂದ ಮುಷ್ಟಿಕನ ಶಿರಸ್ಸನ್ನು ಮರ್ದಿಸಿ ಪುಡಿಪುಡಿಮಾಡಿದನು. ಹೀಗೆ ಚಾಣೂರ ಮುಷ್ಟಿಕರಿಬ್ಬರೂ ಕೃಷ್ಣಬಲರಾಮರಿಂದ ಹತರಾದರು. ಈ ವಿಚಾರವು 'ಹರಿವಂಶ'ದಲ್ಲಿ "ಮುಷ್ಟಿನೈಕೇನ ತೇಜಸ್ವೀ ಸಾಶನಿಸ್ತನ್ಯಯಿತ್ನುನಾ । ಶಿರಸ್ಯಭ್ಯಹನದ್ವೀರೋ ವಜ್ರೇಣೇವ ಮಹಾ-ಗಿರಿಂ ॥ ಸಸುನಿಷ್ಪಿಷ್ಟಮಸ್ತಿಷ್ಕೋ ವಿಸ್ರಸ್ತ ನಯನಾನನಃ। ಪಪಾತ ನಿಹತಸ್ತೇನ" ಎಂದು ವರ್ಣಿತವಾಗಿದೆ.

ಆಗ ಅಲ್ಲಿ ಘೋರಯುದ್ಧ ಪ್ರಾರಂಭವಾಯಿತು. ಕೂಟ ಮತ್ತು ಕೋಸಲ ಎಂಬಿಬ್ಬರು ಕೃಷ್ಣನಿಂದ ಹತರಾದರು. ಛಲ ಎಂಬುವನು ಬಲರಾಮನಿಂದ ಮುಸಲಾಯುಧದಿಂದ ಸಂಹೃತನಾದನು. ಹೀಗೆ ಸುನೀಥಾದಿಗಳೆಲ್ಲರೂ ಬಲರಾಮನಿಂದ ಹತರಾದರು. ಆಗ ಶಸ್ತ್ರಾಸ್ತ್ರ-ಬಲ-ಶಿಕ್ಷಾದಿಗಳಿಂದ ಸಮರ್ಥವಾದ ಹ್ರಾಸವಿಲ್ಲದ ಅಂತೆಯೇ ಉಗ್ರಬಲ ವೀರ್ಯಯುಕ್ತವಾದ ಇಪ್ಪತ್ತು ಅಕ್ಷೌಹಿಣೀ ಸಂಖ್ಯಾತವಾದ ಸೈನ್ಯವನ್ನು ಪಾಪಿಯಾದ ಕಂಸನು, ಶ್ರೀಕೃಷ್ಣ-ಬಲರಾಮರನ್ನು ಹೊಡೆದೋಡಿಸಲು, ಅವರನ್ನು ಚೆನ್ನಾಗಿ ದಂಡಿಸಲೂ ಆಜ್ಞಾಪಿಸಿದನು. ಆಗ ಸಕಲ ನರಿಗಳೂ ಗುಂಪಾಗಿ ಸೇರಿ ವನರಾಜನಾದ ಸಿಂಹವನ್ನು ಜಯಿಸಬಯಸಿ ಮುತ್ತುವಂತೆ ಸಮಸ್ತ ಸೈನಿಕರೂ ಕೃಷ್ಣ ಬಲರಾಮರನ್ನು ಮುತ್ತಿ ಸುತ್ತುಗಟ್ಟಿದರು. ಸರ್ವಸಂಪತ್ತಿಗೂ ಸಕಲಲೋಕಗಳಿಗೂ ಪ್ರಭುವಾದ, ಅನಂತಬಲಸಂಪನ್ನನಾದ್ದರಿಂದ ರಥ-ಆಯುಧಾದಿಗಳ ಅವಶ್ಯಕತೆಯಿಲ್ಲವೆಂದು ತಿಳಿದಿದ್ದರೂ ಶ್ರೀಹರಿಸೇವೆಯು ನಿತ್ಯವಿಧಿರೂಪವೆಂದರಿತು, ಸಮುದ್ರದಲ್ಲಿನ ಜಲವನ್ನೇ ತೆಗೆದುಕೊಂಡು ಸಮುದ್ರರಾಜನು ತೃಪ್ತನಾಗಲಿ ಎಂದು ಸಮುದ್ರರಾಜನಿಗೆ ಅರ್ಘ್ಯನೀಡುವಂತೆ, ಮಹೇಂದ್ರನು ತನಗೆ ಶ್ರೀ ಹರಿಯು ಅನುಗ್ರಹಿಸಿದ್ದ, ಶಸ್ತ್ರಾಸ್ತ್ರಸಜ್ಜಿತವಾದ ದಿವ್ಯರಥವನ್ನು ಸಾರಥಿಯಾದ ಮಾತಲಿಯೊಡನೆ ಶ್ರೀಕೃಷ್ಣನಿಗೆ ನಿತ್ಯವಿಧಿಯಾದ ಸೇವಾರೂಪವಾಗಿ ಕಳುಹಿಸಿಕೊಟ್ಟನು. ಆಗ ಶ್ರೀಕೃಷ್ಣಪರಮಾತ್ಮನು ದೇವಸಾರಥಿ ಮಾತಲಿಯು ರಥವನ್ನು ನಡೆಸುತ್ತಿರಲು ರಥದಲ್ಲಿ ಕುಳಿತು ಉಗ್ರಕಿರಣಗಳಿಂದ ಕೂಡಿದ ಸೂರ್ಯನು ಅಂಧಕಾರವನ್ನು ನಾಶಪಡಿಸುವಂತೆ ನಾನಾವಿಧ ಆಯುಧವೆಂಬ ಉಗ್ರ-ಕಿರಣಗಳಿಂದ ಸಹಿತನಾದ ಶ್ರೀಕೃಷ್ಣನು ಕಂಸನ ಇಪ್ಪತ್ತು ಅಕ್ಷೋಹಿಣೀ ಸೈನ್ಯವನ್ನೂ ಸಂಪೂರ್ಣವಾಗಿ ಶೀಘ್ರವಾಗಿ ನಾಶಪಡಿಸಿದನು.

ರಂಗಮಂಟಪದಲ್ಲಿ ಉನ್ನತ ಮಂಚಾಗ್ರದಲ್ಲಿ ಕುಳಿತಿದ್ದ ಕಂಸನು ತನ್ನ ಸಮಸ್ತ ಸೈನ್ಯವೂ ನಾಶವಾದ ಮೇಲೆ ಚರ್ಮ (ಚಾಪಟ)ವನ್ನೂ, ಖಡ್ಗವನ್ನೂ ಕರದಲ್ಲಿ ಹಿಡಿದು ಕೃಷ್ಣನತ್ತ ಧಾವಿಸಲು ಅಪೇಕ್ಷಿಸುತ್ತಿರುವಾಗ ಶ್ರೀಕೃಷ್ಣನು ತನ್ನ ಕಡೆಗೇ ಬರುತ್ತಿರುವುದನ್ನು ಕಂಡನು. ಭಗವಂತನಾದ ಶ್ರೀಕೃಷ್ಣನು ಶ್ಯೇನಪಕ್ಷಿಯಂತೆ ಅತಿವೇಗವಾಗಿ ಹಾರಿಬಂದು ಕಂಸನನ್ನು

ಬಲಾತ್ಕಾರವಾಗಿ ತಲೆಗೂದಲನ್ನು ಹಿಡಿದೆಳೆದು ಎಡಕರದಿಂದ ಕಂಸನನ್ನು ಮೇಲೆತ್ತಿ ಬಲಕರದಿಂದ ಅವನ ತಲೆಯ ಮೇಲೆ ಬಲವಾಗಿ ಪೆಟ್ಟುಕೊಟ್ಟನು. ಪುರುಷಶ್ರೇಷ್ಠ (ನರಸಿಂಹ)ನಾದ ಶ್ರೀಕೃಷ್ಣನ ಕರಗಳಲ್ಲಿ ಸಿಕ್ಕಿಹಾಕಿಕೊಂಡ ಕಂಸನ ಕಿರೀಟವು ಉರುಳಿತು. ಕಿವಿಗಳಲ್ಲಿದ್ದ ಕರ್ಣಕುಂಡಲಗಳು ಕಳಚಿದವು. ವಕ್ಷಸ್ಥಳದಲ್ಲಿ ವಿರಾಜಿಸಿದ್ದ ವಸ್ತ್ರವೂ, ಜಘನಪ್ರದೇಶದಲ್ಲಿ ಕಂಗೊಳಿಸುತ್ತಿದ್ದ ವಡ್ಯಾಣ (ನಡುಪಟ್ಟಿ)ವೂ ಅಸ್ತವ್ಯಸ್ತವಾದವು. ನರಸಿಂಹದೇವರ ಕರದಲ್ಲಿ ಸಿಕ್ಕಿ ಹಿರಣ್ಯಕಶಿಪುವು ಶೋಚನೀಯ ಸ್ಥಿತಿಗೊಳಗಾದಂತೆ ಕಂಸನೂ ಕೃಷ್ಣನ ಕರಗಳಲ್ಲಿ ಸಿಲುಕಿ ಅತ್ಯಂತ ಶೋಚನೀಯಸ್ಥಿತಿಗೊಳಗಾದನು. ಅತ್ಯಂತ ಶಕ್ತಿಶಾಲಿಯೂ, ಅಜೇಯನೂ, ಅತಿವೀರ್ಯಸಾಮರ್ಥ್ಯಯುಕ್ತನೂ, ಬ್ರಹ್ಮ-ರುದ್ರ ದೇವರುಗಳ ವರದಿಂದ ರಕ್ಷಿತನೂ ಆದ ಕಂಸನನ್ನು ದೇವತೆಗಳಿಗೆ ಪ್ರಭುವಾದ ಅಚಿಂತ್ಯಾದ್ಭುತಶಕ್ತಿಸಂಪನ್ನನಾದ ಶ್ರೀಕೃಷ್ಣನು ಉನ್ನತ ಮಂಚಾಗ್ರಭಾಗದಿಂದ ಕೆಳಗಿಳಿದು ನೆಲದಮೇಲೆ ಕೆಡಹಿ ತನ್ನ ಎರಡು ಪಾದಗಳಿಂದ ಪ್ರಹಾರ ಮಾಡಿದನು. ಆಗ ಕಂಸನ ದೇಹದಲ್ಲಿದ್ದ ಲಕ್ಷ್ಮೀವಲ್ಲಭನ ಮಿತ್ರರಾದ ವಾಯುದೇವರು ಕಂಸನ ದೇಹವನ್ನು ತ್ಯಜಿಸಿ ಭಗವಂತನ ಶರೀರವನ್ನು ಆಶ್ರಯಿಸಿದರು, ಅಂದರೆ ಪಾಪಿಯಾದ ಕಂಸನು ಮೃತನಾದನು.

ಪಾಪಿಯಾದ ಕಂಸನಿಗೆ ಸಾಯುಜ್ಯಪ್ರಾಪ್ತಿಯಾಯಿತೆಂದು ಪುರಾಣದಲ್ಲುಕ್ತವಾದುದನ್ನು ನಿರ್ಣಯಾಚಾರ್ಯರು ಇಂತು ನಿರೂಪಿಸಿ ಸಮಾಧಾನ ಹೇಳುತ್ತಾರೆ - ಕಂಸನ ದೇಹದಲ್ಲಿದ್ದ ರಮಾರಮಣನ ಮಿತ್ರರಾದ ಅಥವಾ ರಮಾದೇವಿಯ ಪತಿಯು, ಆವಳಿಗೆ ಸ್ವಾಮಿ ಅಂದರೆ ಪತಿಯು ಸಂಕರ್ಷಣ ದೇವರು, ಆವರ ಬಂಧು ಅಂದರೆ ಪುತ್ರರು ವಾಯುದೇವರು. ಕಂಸನ ಶರೀರದಲ್ಲಿದ್ದ ವಾಯುದೇವರು ಶ್ರೀಕೃಷ್ಣನ ಶರೀರ ಸೇರಿದರು. ಅನಂತರ ನಾಶರಹಿತನಾದ ಶ್ರೀಕೃಷ್ಣನು ಬ್ರಹ್ಮರುದ್ರಾದಿ ದೇವತೆಗಳು ನೋಡುತ್ತಿರುವಂತೆ ಕಂಸನ ದೇಹದಲ್ಲಿದ್ದ ಪಾಪಿಯಾದ ಮತ್ತೊಬ್ಬನನ್ನು, ಅಂದರೆ ಮೇಲೆ ಹೇಳಿದ ವಾಯು-ದೇವರಿಂದ ಬಿನ್ನವಾದ 'ಕಾಲನೇಮಿ' ಎಂಬ ದೈತ್ಯನನ್ನು ತಮಸ್ಸಿಗೆ ಸೆಳೆದನು. ಇದಕ್ಕೆ ಯೋಗಿಪ್ರತ್ಯಕ್ಷವೇ ಪ್ರಮಾಣವೆಂದು ತಿಳಿಸಲೆಂದೇ "ಬ್ರಹ್ಮರುದ್ರಾದಿ ಸುರರು ನೋಡುತ್ತಿರುವಾಗ" ಎಂಬ ವಿಶೇಷಣ ಕೊಟ್ಟಿದ್ದಾರೆ ಎಂದು ತಿಳಿಯಬೇಕು.

ಪಾಪಬುದ್ಧಿಯುಳ್ಳವನಾದ್ದರಿಂದಲೇ ಕಂಸನು ಸಕಲ ಜಗತ್ತಿಗೆ ಮುಖ್ಯಗುರುವಾದ ಕೃಷ್ಣನ ಮೇಲಿನ ದ್ವೇಷದಿಂದ ಈ ಮೊದಲೇ ಹತರಾಗಿದ್ದ ತನ್ನ ಸಾಕು ತಾಯಿ (ಉಪಮಾತೆಯ) ಮೊದಲಾದ ಸಮಸ್ತ ಜನರೊಂದಿಗೆ ಅಂಧಂತಮಸ್ಸಿನಲ್ಲಿ ಬಿದ್ದನು. ಹರಿದ್ವೇಷಿಗಳಾದ ಇನ್ನಿತರರಿಗೂ ಅಂಧಂತಮಸ್ಸೇ ಉಂಟಾಗುತ್ತದೆ. ತಮಸ್ಸ್ವರೂಪವನ್ನು ಹೇಳಿ ಅದನ್ನೇ ಈಗ ವಿಶದೀಕರಿಸುತ್ತಾರೆ.

ಬ್ರಹ್ಮಾದಿದೇವತೆಗಳಲ್ಲಿ ಭಕ್ತನಾಗಿದ್ದರೂ, ಸರ್ವಧರ್ಮಗಳನ್ನು ಅನುಷ್ಠಾನ ಮಾಡುತ್ತಿದ್ದರೂ ಸಹ ಶ್ರೀಹರಿಯ ಭಕ್ತನಾಗಿರದಿದ್ದಲ್ಲಿ ಅಂದರೆ ಹರಿ ದ್ವೇಷಿಯಾಗಿದ್ದಲ್ಲಿ ಅಂಥವನು ಪುನರಾವೃತ್ತಿರಹಿತವಾದ ಸುಖರಹಿತವೂ, ಅಷ್ಟೇ ಅಲ್ಲ, ಸುಖಲೇಶವೂ ಇಲ್ಲದ, ಅಂಧಂತಮಸ್ಸಿಗೆ ನಿಶ್ಚಯವಾಗಿಯೂ ಹೋಗುತ್ತಾನೆ. ಇದು ಸಕಲಾಗಮಗಳ ನಿರ್ಣಯವಾಗಿದೆ. ಮಹಾತ್ಮ್ಯಜ್ಞಾನಪೂರ್ವಕವಾಗಿ ಶ್ರೀಹರಿಯಲ್ಲಿ ಭಕ್ತಿಯುಳ್ಳವರಿಗೇ ಮೋಕ್ಷವು ಲಭಿಸುವುದು. ಶ್ರೀಹರಿಯು ಬ್ರಹ್ಮದೇವರು, ರುದ್ರದೇವರೇ ಮೊದಲಾದ ಸಮಸ್ತ ಜಗತ್ತಿಗೂ ಸರ್ವಕಾಲದಲ್ಲಿಯೂ ಸೃಷ್ಟಿ, ಸ್ಥಿತಿ, ಪ್ರಲಯ ಮತ್ತು ಮೋಕ್ಷಗಳನ್ನು ಕರುಣಿಸುವವನು - ಆವನು ಸರ್ವಸ್ವತಂತ್ರನು, ಶ್ರೀಲಕ್ಷ್ಮೀದೇವಿಗೂ ನಿಯಾಮಕನು ಎಂಬ ನಿಶ್ಚಯವಾದ ಜ್ಞಾನವುಳ್ಳವನಾಗಿ ಯಾವನು ಶ್ರೀಹರಿಯಲ್ಲಿ ಅತ್ಯಂತ ಭಕ್ತಿಯನ್ನು ಮಾಡುವನೋ, ಅಂಥವನು ಮೋಕ್ಷಕ್ಕೆ ತೆರಳುವನು (ಮುಕ್ತನಾಗುವನು). ಆದುದರಿಂದ ಜ್ಞಾನಿಯು, ಶ್ರೀಹರಿಯು ಅನಂತಗುಣಪೂರ್ಣನು, ದೋಷರಹಿತನು, ರಮಾಪತಿಯು ಎಂದು ತಿಳಿದು ಆವನಲ್ಲಿ ಸರ್ವೋತ್ಕೃಷ್ಟವಾದ ಭಕ್ತಿಯನ್ನು ಮಾಡಬೇಕು. ಅಂದರೆ ಬ್ರಹ್ಮರುದ್ರಾದಿ ಸಕಲ ದೇವತೆಗಳಲ್ಲಿ ಮಾಡುವುದಕ್ಕಿಂತ ಅತ್ಯಂತ ಅಧಿಕವಾದ ಭಕ್ತಿಯನ್ನು ಮಾಡಬೇಕು. ಸರ್ವದಾ ಅಂದರೆ ಮುಖ್ಯಾವಸ್ಥೆಯಲ್ಲಿಯೂ ಆವನನ್ನು ಪರಮಭಕ್ತಿಯಿಂದ

ಭಜಿಸಬೇಕು. ಬ್ರಹ್ಮ-ರುದ್ರಾದಿ ದೇವತೆಗಳಲ್ಲಿ ತಾರತಮ್ಯಾನುಸಾರವಾಗಿ, ಅವರು ಶ್ರೀಹರಿಯ ಭಕ್ತರೆಂಬ ಬುದ್ಧಿಯಿಂದ ಅವರಲ್ಲಿಯೂ ಭಕ್ತಿ ಮಾಡಿ ಭಜಿಸಬೇಕು. ಇದು ವೇದೋಪನಿಷದಾದಿ ಸಕಲ ಶಾಸ್ತ್ರಾರ್ಥಸಾರವು.

ಕಂಸನನ್ನು ಶ್ರೀಕೃಷ್ಣಪರಮಾತ್ಮನು ಸ್ವಸಾಮರ್ಥ್ಯಾತಿಶಯದಿಂದ ಸಂಹಾರಮಾಡಿ, ಬ್ರಹ್ಮ-ರುದ್ರೇಂದ್ರಾದಿ ದೇವತೆಗಳಿಂದ ಕುಸುಮವೃಷ್ಟಿ ಪೂರ್ವಕವಾಗಿ ಸ್ತುತಿಮಾಡಿಸಿಕೊಂಡು, ವಿಶೇಷಾನಂದವನ್ನು ಹೊಂದಿದನು. ನಿರಂತರಾನಂದ ಸ್ವರೂಪನಾದ ಶ್ರೀಕೃಷ್ಣನು ಆನಂದ ಹೊಂದಿದನೆಂದು ಹೇಳಿರುವುದು ಲೌಕಿಕ ದೃಷ್ಟಿಯಿಂದ. ಅಂದರೆ ಅಜ್ಞರಾದ ಮಾನವರ ಬುದ್ಧಿಯನ್ನು ಅನುಸರಿಸಿ ಹೇಳಲಾಗಿದೆ. ಸರ್ವದಾ ಉದಯಿಸಿರುವ ಸೂರ್ಯನಿಗೆ ಲೋಕದಿಂದಲೇ ಉದಯವಾಯಿತೆಂದು ಹೇಳುವಂತೆ ಇಲ್ಲಿಯೂ ಲೌಕಿಕವಾಗಿ ಸದಾ ಮೋದರೂಪಿಯಾದ ಮಾಧವನು ಮುದಗೊಂಡನೆಂದು ಹೇಳಿದ್ದು, ಅಜ್ಞ ಜನರ ಬುದ್ಧಿಯನ್ನು ದೃಷ್ಟಿಯಲ್ಲಿಟ್ಟುಕೊಂಡೆಂದು ತಿಳಿಯಬೇಕು.

ಈಗ ಅಧ್ಯಾಯವನ್ನು ಮುಗಿಸುತ್ತಾ ಶ್ರೀ ಹರಿಯು ಸರ್ವದಾ ಮೋದರೂಪಿಯೆಂದು ಸಾಧಿಸಲು ಅವನ ಸ್ವರೂಪವನ್ನು ನಿರೂಪಿಸುತ್ತಾರೆ.

ಶ್ರೀಹರಿಯು ಸರ್ವದಾ ಸುಖ ಜ್ಞಾನಾನಂದಸಾಗರನು. ಸರ್ವದಾ ಅಭಿವ್ಯಕ್ತವಾದ ಮುಖ್ಯಸ್ವರೂಪವುಳ್ಳವನು. ನಿಖಿಲ ದೋಷವರ್ಜಿತನು. ಶ್ರೀಮನ್ನಾರಾಯಣನು ಆನಂದಾದಿ ಗುಣಗಳೇ ಶರೀರವಾಗುಳ್ಳವನಾಗಿದ್ದಾನೆ.

***ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯದ 'ಕಂಸವಧೆ'ಯೆಂಬ ತ್ರಯೋದಶೋಧ್ಯಾಯದ ಕಥಾಸಂಗ್ರಹವು ಮುಗಿದುದು.***



## ಚತುರ್ದಶಾಧ್ಯಾಯಭಾವಸಂಗ್ರಹ

*ಅವತಾರಿಕೆ:-*

ಶ್ರೀಗುರುಸಾರ್ವಭೌಮರು ಈಗ ಶ್ರೀಮದಾಚಾರ್ಯರು ರಚಿಸಿದ ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದ ಹದಿನಾಲ್ಕನೆಯ ಅಧ್ಯಾಯದ ಕಥಾಭಾಗವನ್ನು "ಪಿತ್ರೋರ್ಬಂಧಂ" ಎಂಬ ಪದ್ಯದಿಂದ ಸಂಗ್ರಹಿಸುತ್ತಾರೆ.

**ಪಿತ್ರೋರ್ಬಂಧಂ ನಿರಸ್ಯ ಕ್ಷಿತಿಪತಿಮಕರೋದುಗ್ರಸೇನಂ ಗುರೋರ್ಯಃ**
**ಪುತ್ರಂ ಪ್ರಾದಾತ್ಪರೇತಂ ಯುಧಿವಿಜಿತಜರಾಸಂಧಪೂರ್ವಾರಿವರ್ಗಃ ।**
**ಪಾರ್ಥಾನ್ ಪಿತ್ರಾವಿಹೀನಾನುಪಗತನಗರಾನ್ ಯಸ್ತ್ವಜೋಪಾದ್ವಿಪದ್ಭ್ಯೋ**
**ನಂದಾದೀನುದ್ಧವೋಕ್ತ್ಯಾ ಗತವಿರಹಶುಚಃ ಕಾರಯನ್ ಮಾವತಾತ್ಸಃ ॥ 14 ॥**

*ಅನ್ವಯಾರ್ಥ :-* **ಯಃ** = ಯಾವ, **ಅಜಃ** = ಹುಟ್ಟಿಲ್ಲದ ಶ್ರೀಕೃಷ್ಣನು, (ಪಾಠಾಂತರ- **ಅಜಃ** = ಹುಟ್ಟಿಲ್ಲದ, **ಯಸ್ತು** = ಯಾವ ಕೃಷ್ಣನು), **ಪಿತ್ರೋಃ** = ತಾಯಿತಂದೆಗಳಾದ ದೇವಕಿವಸುದೇವರ, **ಬಂಧಂ** = ನಿಗಡಬಂಧನವನ್ನು, **ನಿರಸ್ಯ** = ಪರಿಹರಿಸಿ (ಕಾರಾಗ್ರಹದಿಂದ ಬಿಡಿಸಿ), **ಉಗ್ರಸೇನಂ** = ಕಂಸನ ತಂದೆಯಾದ ಉಗ್ರಸೇನನನ್ನು, **ಕ್ಷಿತಿಪತಿಂ** = ರಾಜ್ಯಕ್ಕೆ ದೊರೆಯನ್ನಾಗಿ, **ಅಕರೋತ್** = ಮಾಡಿದನೋ, **ಗುರೋಃ** = ವಿದ್ಯಾಗುರುಗಳಾದ ಸಾಂದೀಪಿನ್ಯಾಚಾರ್ಯರ, **ಪರೇತಂ** = ಮೃತನಾದ, **ಪುತ್ರಂ** = ಮಗನನ್ನು, **ಪ್ರಾದಾತ್** = ಪುನರುಜ್ಜೀವನಗೊಳಿಸಿ ಗುರುಗಳಿಗೆ ತಂದುಕೊಟ್ಟನೋ, **ಯುಧಿ** = ಯುದ್ಧದಲ್ಲಿ, **ವಿಜಿತಜರಾಸಂಧಪೂರ್ವಾರಿವರ್ಗಃ** - **ವಿಜಿತ** = ಜಯಿಸಲ್ಪಟ್ಟ, **ಜರಾಸಂಧಪೂರ್ವ** = ಜರಾಸಂಧನೇ ಮೊದಲಾದ, **ಅರಿವರ್ಗಃ** = ಶತ್ರು ಸಮೂಹವುಳ್ಳ, **ಪಿತ್ರಾ** = ತಾಯಿತಂದೆಗಳಿಂದ, **ವಿಹೀನಾನ್** = ರಹಿತರಾದ, ಅಂದರೆ ತಾಯಿಯಾದ ಮಾದ್ರಿ ಮತ್ತು ತಂದೆಯಾದ ಪಾಂಡುರಾಜರನ್ನು ಕಳೆದುಕೊಂಡ, **ಉಪಗತನಗರಾನ್** = ರಾಜಧಾನಿಗೆ ಬಂದ (ಪಟ್ಟಣವನ್ನು ಸೇರಿದ), **ಪಾರ್ಥಾನ್** = ಪಾಂಡವರನ್ನು, **ವಿಪದ್ಭ್ಯಃ** = ವಿಪತ್ತುಗಳಿಂದ, **ಅಪಾತ್** = ರಕ್ಷಿಸಿದನೋ, **ಉದ್ಧವೋಕ್ತ್ಯಾ** = ಉದ್ಧವನ ವಚನದಿಂದ (ಉದ್ಧವನ ದ್ವಾರಾ ತಾನು ಹೇಳಿಕಳಿಸಿದ ಸಂದೇಶವಚನದಿಂದ), **ನಂದಾದೀನ್** = ನಂದಗೋಪನೇ ಮೊದಲಾದವರನ್ನು, **ಗತವಿರಹಶುಚಃ** = ಕಳೆಯಲ್ಪಟ್ಟ ವಿರಹದುಃಖವುಳ್ಳವರನ್ನಾಗಿ (ತನ್ನ ವಿರಹ-ದುಃಖವಿಲ್ಲದವರನ್ನಾಗಿ), **ಕಾರಯನ್** = ಮಾಡುವವನಾದ, **ಸಃ** = ಆ ಕೃಷ್ಣನು, **ಮಾ** = ನನ್ನನ್ನು, **ಅವತಾತ್** = ಕಾಪಾಡಲಿ. (ಪಾಠಾಂತರ- **ಸಃ** = ಶ್ರೀಕೃಷ್ಣನು, **ಮಾಂ** = ನನ್ನನ್ನು, **ಅವತಾತ್** = ಕಾಪಾಡಲಿ).

**ತಾತ್ಪರ್ಯ :-** ಜನನರಹಿತನಾದ ಶ್ರೀಕೃಷ್ಣಪರಮಾತ್ಮನು ಕಂಸನನ್ನು ಸಂಹಾರಮಾಡಿ ಕಾರಾಗೃಹದಲ್ಲಿದ್ದ ತಾಯಿ-ತಂದೆಗಳಾದ ದೇವಕೀವಸುದೇವರನ್ನು ನಿಗಡಬಂಧನದಿಂದ ಬಿಡುಗಡೆ ಮಾಡಿದನು. ಕಂಸನ ತಂದೆಯಾದ ಉಗ್ರಸೇನನನ್ನು ಯಾದವ ರಾಜ್ಯಕ್ಕೆ ದೊರೆಯನ್ನಾಗಿ ಮಾಡಿದನು. ಅನಂತರ ತನ್ನ ವಿದ್ಯಾಗುರುಗಳಾದ ಸಾಂದೀಪಿನ್ಯಾಚಾರ್ಯರ ಮೃತನಾದ ಪುತ್ರನನ್ನು ಮತ್ತೆ ಬದುಕಿಸಿ ಗುರುಗಳಿಗೆ ತಂದೊಪ್ಪಿಸಿದನು. ಯುದ್ಧದಲ್ಲಿ ಜರಾಸಂಧನೇ ಮೊದಲಾದ ಶತ್ರುಸಮೂಹವನ್ನು ಜಯಿಸಿದನು. ಅರಣ್ಯದಲ್ಲಿ ಪಾಂಡುರಾಜನು ಮೃತನಾಗಿ, ಮಾದ್ರಿದೇವಿಯು ಸತೀಹೋಗಿ, ಅನಾಥರಾಗಿದ್ದ ಪಾಂಡವರು ಕುಂತೀಸಹಿತರಾಗಿ ರಾಜಧಾನಿಗೆ ಮರಳಿದಾಗ ಅವರಿಗೆ ಬಂದೊದಗಿದ ಸಕಲವಿಪತ್ತುಗಳನ್ನು ಪರಿಹರಿಸಿ ಕಾಪಾಡಿದನು. ತನ್ನ ವಿರಹದುಃಖದಿಂದ ಬಳಲುತ್ತಿದ್ದ ನಂದಗೋಪ ಮೊದಲಾದವರನ್ನು ಉದ್ಧವನ ಮೂಲಕ ಸಂದೇಶ ಕಳುಹಿಸಿ ಪ್ರಿಯ-ವಚನಗಳಿಂದ ಸಾಂತ್ವನಗೊಳಿಸಿ ಅವರ ವಿರಹದುಃಖವನ್ನು ಪರಿಹರಿಸಿದನು. ಇಂತು ಮಹಿಮಾವಂತನಾದ ಆ ಶ್ರೀಕೃಷ್ಣನು ನನ್ನನ್ನು ಸಂರಕ್ಷಿಸಲಿ ಎಂದು ಭಾವ.

# ಚತುರ್ದಶೋऽಧ್ಯಾಯ ಕಥಾಸಂಗ್ರಹ

ಈ ಅಧ್ಯಾಯದಲ್ಲಿ ಶ್ರೀಮದಾನಂದತೀರ್ಥಭಗವತ್ಪಾದರು, ಕಂಸ ವಧಾನಂತರ ದೈತ್ಯಪರಾಭವರೂಪವೂ ಮತ್ತು ಸಜ್ಜನವೃಂದಕ್ಕೆ ಧರ್ಮಶಿಕ್ಷಣ ರೂಪವೂ ಆದ ಭಗವಾನ್ ಶ್ರೀಕೃಷ್ಣನ ಲೀಲೆಗಳನ್ನು ನಿರೂಪಿಸುತ್ತಾರೆ.

ಶ್ರೀಕೃಷ್ಣನು ತನ್ನ ತಾಯಿತಂದೆಗಳಾದ ದೇವಕೀ-ವಸುದೇವರನ್ನು ನಿಗಡಬಂಧನದಿಂದ ಬಿಡಿಸಿ ಸದ್ಧರ್ಮಪರಿಪಾಲನೆ-ಗಾಗಿಯೂ, ಸುಜನವೃಂದಕ್ಕೆ ಧರ್ಮರಹಸ್ಯಗಳನ್ನು ಬೋಧಿಸಲೂ ಸಹ ಅಗ್ರಜಸಹಿತನಾಗಿ ಸ್ವತಃ ಸರ್ವವಂದ್ಯನಾಗಿದ್ದರೂ ತಾಯಿತಂದೆಗಳಿಗೆ ನಮಸ್ಕಾರ ಮಾಡಿದನು. ಧರ್ಮಶಿಕ್ಷಣಕ್ಕಾಗಿಯೇ ಉಗ್ರಸೇನನನ್ನು ಮಧುರಾರಾಜ್ಯದ ಮಂಡಲಾ-ಧಿಪತಿಯನ್ನಾಗಿ, ಅಂದರೆ ರಾಜನನ್ನಾಗಿ ಮಾಡಿದನು. ಅದರಂತೆಯೇ ಧರ್ಮಶಿಕ್ಷಣಕ್ಕಾಗಿ ಉಪನಯನ ಸಂಸ್ಕಾರವನ್ನು ಪಡೆದು ತಂದೆಯಾದ ವಸುದೇವನಿಂದ ಗಾಯತ್ರೀ ಉಪದೇಶವನ್ನು ಪಡೆದು ದ್ವಿಜತ್ವವನ್ನು ಪಡೆದನು. ಅನಂತರ ತನ್ನನ್ನು ಬಿಟ್ಟಿರಲು ಸಾಧ್ಯವಾಗದೆ ವಿರಹದಿಂದ ಕಡುನೊಂದ ನಂದಗೋಪನನ್ನು ವಿವಿಧ ರೀತಿಯಿಂದ ಸಾಂತ್ವನಗೊಳಿಸಿ ಅವನ ದುಃಖಪರಿಹಾರ ಮಾಡಿ ಅವನನ್ನು ಬೀಳ್ಕೊಟ್ಟನು. ನಂದಗೋಪನು ಶ್ರೀಕೃಷ್ಣನ ಚರಣಾರವಿಂದವನ್ನು ಹೃನ್ಮಂದಿರದಲ್ಲಿ ಸ್ಥಿರಗೊಳಿಸಿ ಗೋಪಜನರಿಂದೊಡಗೂಡಿ ತನ್ನ ಗ್ರಾಮಕ್ಕೆ ತೆರಳಿದನು ಮತ್ತು ಯಶೋದಾದೇವಿಯಿಂದ ಕೂಡಿಕೊಂಡು ಶ್ರೀಕೃಷ್ಣನನ್ನು ಧ್ಯಾನಿಸುತ್ತಾ ವೃಂದಾವನದಲ್ಲಿ ವಾಸಮಾಡಿದನು.

ಶ್ರೀಕೃಷ್ಣನು ಧರ್ಮರಕ್ಷಣೆ, ಲೋಕಶಿಕ್ಷಣ (ಧರ್ಮಶಿಕ್ಷಣ)ಕ್ಕಾಗಿಯೇ ಸ್ವಯಂ ಲೋಕಪೂಜ್ಯನಾಗಿದ್ದರೂ, ತಂದೆ-ತಾಯಿಗಳ ಅಭಿನಂದನ, ಉಗ್ರಸೇನನಿಗೆ ರಾಜ್ಯದಲ್ಲಿ ಆಧಿಪತ್ಯ, ತಂದೆಯಿಂದ ಗಾಯತ್ರ್ಯುಪದೇಶಾದಿಗಳನ್ನು ಪಡೆದು ದ್ವಿಜತ್ವವನ್ನು ಪಡೆಯುವಿಕೆ ಮುಂತಾದ ಕಾರ್ಯಗಳನ್ನು ನೆರವೇರಿಸಿ ಜಗತ್ತಿನಲ್ಲಿ ಮಾನವರು ಹೇಗೆ ವರ್ತಿಸಬೇಕೆಂದು ತಿಳಿಸಿಕೊಡಲು ಈ ಕಾರ್ಯಗಳನ್ನು ಮಾಡಿದನೆಂದು ತಿಳಿಯಬೇಕು.

ಅನಂತರ ಬಲರಾಮಸಹಿತನಾಗಿ ಶ್ರೀಕೃಷ್ಣನು ಅವಂತೀಪುರವಾಸಿಗಳಾದ ಸಾಂದೀಪಿನ್ಯಾಚಾರ್ಯರೆಂಬ ಶ್ರೇಷ್ಠ ಗುರುಗಳಲ್ಲಿಗೆ ಹೋಗಿ ವಿದ್ಯಾಭ್ಯಾಸ ಮಾಡಿದನು. ಸ್ವಯಂಜ್ಞಾನಪೂರ್ಣನೂ, ಸಕಲವಿದ್ಯಾಪಾರಂಗತನಾಗಿದ್ದರೂ ಶ್ರೀಕೃಷ್ಣನು ಸಾಂದೀಪಿನಿಗಳು ಹೇಳಿಕೊಟ್ಟ ವೇದಾದಿವಿದ್ಯೆಗಳನ್ನು ದೇವತೆಗಳ ಶಿಕ್ಷಣಕ್ಕಾಗಿ ಒಂದೇ ಒಂದು ಸಲ ಹೇಳಿಕೊಡುವ ಮಾತ್ರದಿಂದಲೇ ಗ್ರಹಿಸಿ ಅಭ್ಯಾಸ ಮಾಡಿದನು.

ಸಕಲ ವಿದ್ಯಾಪರಿಪೂರ್ಣರಾಗಿದ್ದರೂ, ಸರ್ವಜ್ಞರಾಗಿದ್ದರೂ ದೇವತೆಗಳು ಮಾನವರಾಗಿ ಅವತಾರ ಮಾಡಿದಾಗ ತಮ್ಮ ಜ್ಞಾನ-ಬಲಾದಿಗಳನ್ನು ಗೂಹನ (ಮರೆ) ಮಾಡಿ ಆಯಾ ಅವತಾರಕ್ಕೆ ತಕ್ಕಂತೆ ವರ್ತಿಸಬೇಕು. ಗುರುಗಳಲ್ಲಿ ಸ್ವವರ್ಣಾ-ಶ್ರಮೋಚಿತ ಧರ್ಮಗಳನ್ನೂ, ವೇದಾದಿಶಾಸ್ತ್ರಗಳನ್ನೂ ಅಧ್ಯಯನ ಮಾಡಬೇಕು. ಅದು ಅವರ ಧರ್ಮ ಎಂದು ತೋರಿ-ಕೊಡಲೂ, ಸ್ವಯಂ ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಕೃಷ್ಣ ಪರಮಾತ್ಮನು ಸಾಂದೀಪಿನ್ಯಾಚಾರ್ಯರಲ್ಲಿ ಸಕಲ ವೇದಾದಿ ವಿದ್ಯೆಗಳನ್ನು ಅಧ್ಯಯನ ಮಾಡಿದನು. ಮಾನುಷಾದಿ ಜನ್ಮಗಳಲ್ಲಿ ಅವತಾರ ಮಾಡಿದಾಗ ದೇವತೆಗಳು ಹೇಗೆ ಮನುಷ್ಯ-ರಂತೆಯೇ ವರ್ತಿಸಿ ಅದಕ್ಕನುಗುಣವಾಗಿ ಕಾರ್ಯ ಮಾಡಬೇಕೆಂಬುದನ್ನೂ, ಆ ಧರ್ಮವನ್ನು ದೇವತೆಗಳಿಗೆ ತಿಳಿಸಿಕೊಡ-ಲೋಸುಗ, ಉಪದೇಶಿಸಲೂ ಸಹ ಸ್ವಯಂ ಸಾಂದೀಪಿನ್ಯಾಚಾರ್ಯರಲ್ಲಿ ಶಿಷ್ಯತ್ವವನ್ನು ವಹಿಸಿ ವಿದ್ಯಾಭ್ಯಾಸ ಮಾಡಿದನೆಂದು ತಿಳಿಯಬೇಕು.

ಸಾಂದೀಪಿನ್ಯಾಚಾರ್ಯರಲ್ಲಿ ವಿದ್ಯಾಭ್ಯಾಸವು ಪೂರ್ಣವಾದ ಮೇಲೆ ಶ್ರೀಕೃಷ್ಣನು ಮೃತನಾಗಿದ್ದ ಗುರುಗಳ ಪುತ್ರನನ್ನು ಪುನರುಜ್ಜೀವನಗೊಳಿಸಿ ಗುರುದಕ್ಷಿಣಾರೂಪವಾಗಿ ಸಮರ್ಪಿಸಿ ಅವರನ್ನು ಸಂತೋಷಗೊಳಿಸಿದನು. ಅನಂತರ ಅಣ್ಣ

ಬಲರಾಮನೊಡನೆ ಮಧುರಾಪಟ್ಟಣಕ್ಕೆ ಬಂದು, ಬಂಧು-ಬಾಂಧವರು, ಪೌರಜಾನಪದರಿಂದ ಸೇವಿತನಾಗಿ ತಾಯಿ-ತಂದೆಗಳ ಮನೋಭೀಷ್ಟಗಳನ್ನು ಪೂರ್ಣಮಾಡುತ್ತಾ, ಸರ್ವರನ್ನೂ ಆನಂದಪಡಿಸುತ್ತಾ ಮಧುರಾಪಟ್ಟಣದಲ್ಲಿ ವಾಸ ಮಾಡಿದನು. ಕಂಸನಿಂದ ಸಂತಪ್ತರಾದ ಸಕಲಜನರೂ ಶ್ರೀಕೃಷ್ಣನನ್ನು ಪಡೆದು ಅತ್ಯಂತ ಹರ್ಷಭರಿತರಾದರು. ಸರ್ವಜನರಿಗೂ ಆನಂದವಾಯಿತೆಂದ ಮೇಲೆ ಕೃಷ್ಣನನ್ನು ಮಗನಾಗಿ ಪಡೆದ ತಾಯಿತಂದೆಗಳಿಗೆ ಹರ್ಷವಾಯಿತೆಂದು ಹೇಳುವುದೇನಿದೆ?

ಶ್ರೀಕೃಷ್ಣನೇ ಆಶ್ರಯವಾಗುಳ್ಳ ದೇಶದಲ್ಲಿ ವಾಸಮಾಡುವ ಜನರು ಸಂಪತ್ತಿನಿಂದ ಪೂರ್ಣರಾಗಿ ಅಭಿವೃದ್ಧರಾಗುವುದರಲ್ಲಿ ಸಂಶಯವುಂಟೆ? ಇಂದ್ರಾದಿ ದೇವತೆಗಳಿಗೆ ಸಂಪತ್ಪ್ರದಳು ಶ್ರೀ ರಮಾದೇವಿ. ಅಂಥ ಸಂಪದಭಿಮಾನಿಯಾದ ಶ್ರೀಲಕ್ಷ್ಮೀ-ದೇವಿಗೆ ಮುಖ್ಯಸ್ವಾಮಿಯೂ, ಇಂದ್ರಾದಿಗಳಿಗೆ ಸ್ವಾಮಿಯೂ, ಸಂಪತ್ಪ್ರದನೂ ಆದ ಶ್ರೀಕೃಷ್ಣನು ವೃಂದಾವನದಲ್ಲಿ ವಾಸಿಸುತ್ತಿರುವುದರಿಂದ ಆ ವೃಂದಾವನವು ಇಂದ್ರಪುರಿಯಾದ ಸ್ವರ್ಗದಂತೆ ವೈಭವ-ಸಿರಿ-ಸಂಪತ್ತುಗಳಿಂದ ಪೂರ್ಣವಾಗಿ ಕಂಗೊಳಿಸುತ್ತಿತ್ತು. ಅದರಂತೆಯೇ ಭಗವಾನ್ ಶ್ರೀಕೃಷ್ಣನು ವಾಸಮಾಡುವ ಮಧುರಾಪಟ್ಟಣವೂ ಸಿರಿಸಂಪತ್ತುಗಳಿಂದ ಶೋಭಿಸಿತೆಂದು ಬೇರೆ ಹೇಳಬೇಕಾಗಿಲ್ಲವಷ್ಟೇ! ಸರ್ವಜಗತ್ತಿನಲ್ಲಿಯೂ ಅತ್ಯಂತ ಶ್ರೇಷ್ಠವಾದ ವಿಷ್ಣುವು ಬ್ರಹ್ಮನಿವಾಸವಾದ ಸತ್ಯಲೋಕದಲ್ಲಿ ಉತ್ತಮತ್ವಪ್ರಾಪ್ತವಾದಂತೆ ಪ್ರಭುವಾದ ಶ್ರೀಕೃಷ್ಣನು ಮಧುರಾಪಟ್ಟಣದಲ್ಲಿ ವಾಸಮಾಡುತ್ತಿದ್ದುದರಿಂದ ಆ ಪಟ್ಟಣವು ನಿರಂತರವೂ ಸರ್ವವಿಧದಿಂದ ಸಿರಿಸಂಪತ್ಪೂರ್ಣವಾಗಿ ಜನಸಮೃದ್ಧವಾಗಿ ರಾರಾಜಿಸಿತು.

ಹೀಗೆ ತ್ರಿಲೋಕರಕ್ಷಕನಾದ, ಮೃತೀರಹಿತನಾದ ಶ್ರೀಕೃಷ್ಣನು ಸಕಲ ಯಾದವರನ್ನು ಸಂರಕ್ಷಿಸುತ್ತಿದ್ದನು. ಅತ್ತ ಮಗಧರಾಜನ ಪುತ್ರಿಯರೂ, ಕಂಸನ ಪತ್ನಿಯರೂ ಆದ ಅಸ್ತಿ-ಪ್ರಾಸ್ತಿ ಎಂಬುವರು ವೈಧವ್ಯದ ಮಹಾದುಃಖದಿಂದ ತಪ್ತರಾಗಿ ತಂದೆಯಾದ ಜರಾಸಂಧನ ಬಳಿಗೆ ಬಂದು ಕೃಷ್ಣನು ತಮ್ಮ ಪತಿಯಾದ ಕಂಸನನ್ನು ಸಂಹರಿಸಿದ ವಿಚಾರವನ್ನು ಕೇಳಿ ಗೋಳಿಟ್ಟರು. ಅದನ್ನು ಕೇಳಿ ಜರಾಸಂಧನು ಬಹು ಕೋಪಗೊಂಡನು. ಭುಜಬಲಪರಾಕ್ರಮದಿಂದ, ಸರ್ವಲೋಕದ ಜನರಿಂದ ಅಪರಾಜಿತನಾದ (ಪರಾಭವವಿಲ್ಲದ), ಅಜೇಯನಾದ, ಬ್ರಹ್ಮ-ರುದ್ರ-ದೂರ್ವಾಸಮುನಿ ಮುಂತಾದವರ ವರಬಲದಿಂದ ಸರ್ವಲೋಕವಿಜಯಿಯೂ, ಮೃತ್ಯುರಹಿತನೂ ಆದ ಜರಾಸಂಧನು ಕೃಷ್ಣನ ಮೇಲೆ ಅತ್ಯಂತ ಕ್ರುದ್ಧನಾದನು. ಸಕಲ ಶೈವಾಗಮಗಳನ್ನು ಬಲ್ಲವನೂ, ಆ ಶೈವಾಗಮಗಳಿಂದ ಸಕಲವನ್ನು ತಿಳಿದವನೂ, ಶಿವಭಕ್ತನೂ, ಶಿವಭಕ್ತರಿಂದ ವಂದ್ಯನೂ ಆದ ಜರಾಸಂಧನು ಕೃಷ್ಣನನ್ನು ಸಂಹರಿಸಲು ರುದ್ರದೇವರು ಕೊಟ್ಟಿದ್ದ ಅಮೋಘವಾದ ಗದೆಯನ್ನು ಮಧುರಾ-ನಗರದ ಮೇಲೆ ತಾನಿದ್ದಲ್ಲಿಂದಲೇ ಪ್ರಯೋಗಿಸಿದನು. ಅದು ಮಧುರಾಪಟ್ಟಣಕ್ಕೆ ಒಂದು ಯೋಜನದ ಹಿಂದೆಯೇ ಬಿದ್ದಿತು. ಹೀಗಾಗಲು ಕಾರಣವೇನೆಂದರೆ - ಕಂಸನನ್ನು ಕೃಷ್ಣನು ಸಂಹರಿಸಿದ ವಿಚಾರವನ್ನು ಅಸ್ತಿ-ಪ್ರಾಸ್ತಿಯರು ಜರಾಸಂಧನ ಮುಂದೆ ಹೇಳಿದಾಗ, ಅವನು ಕೋಪಪೂರ್ಣನಾಗಿ ಅಲ್ಲಿಯೇ ಇದ್ದ ನಾರದ ಮಹರ್ಷಿಗಳನ್ನು 'ನಾರದರೇ! ಇಲ್ಲಿಂದ ಮಧುರಾ-ಪಟ್ಟಣ ಎಷ್ಟು ದೂರದಲ್ಲಿದೆ? ಶಿವನು ಅನುಗ್ರಹಿಸಿರುವ ಈ ಅಮೋಘ ಗದೆಯನ್ನು ನಾನು ಪ್ರಯೋಗಿಸಿ ಶ್ರೀಕೃಷ್ಣನನ್ನು ಸಂಹರಿಸುತ್ತೇನೆ' ಎಂದು ಕೇಳಿದನು. ಆಗ ನಾರದರು ಯದ್ಯಪಿ ಶ್ರೀಹರಿಯು ಅಚಿಂತ್ಯಾದ್ಭುತ ಶಕ್ತನು, ಅವನಿಗೆ ಈ ಶಿವನ ಗದೆಯನ್ನು ಎದುರಿಸುವುದು ಲೀಲಾಮಾತ್ರ. ಆದರಿಂದ ಆ ಮಹಾಪ್ರಭುವಿಗೆ ಏನೂ ಆಗಲಾರದು. ಆದರೂ ನಾನು ಇವನಿಗೆ ಎಷ್ಟು ದೂರವಿದೆಯೆಂದು ಸರಿಯಾಗಿ ಹೇಳಬಾರದು. ಇದು ಶ್ರೀ ಹರಿಸೇವೆ ಎಂದು ಮನದಲ್ಲೇ ನಿಶ್ಚಯಿಸಿದ ನಾರದರು 'ರಾಜನ್! ಮಧುರಾಪಟ್ಟಣವು ಇಲ್ಲಿಂದ ಒಂದು ನೂರುಯೋಜನ ದೂರದಲ್ಲಿದೆ' ಎಂದು ಹೇಳಿದರು. ನಿಜವಾಗಿ ಮಧುರಾಪಟ್ಟಣವು ಮಗಧರಾಜಧಾನಿಯಿಂದ ಒಂದುನೂರಾಒಂದು ಯೋಜನ ದೂರದಲ್ಲಿದ್ದಿತು. ನಾರದರ ವಚನವನ್ನು ನಂಬಿ ಜರಾಸಂಧನು ಒಂದು ನೂರುಯೋಜನದ ದೂರದ ಮಧುರಾಪಟ್ಟಣದಲ್ಲಿರುವ ಶ್ರೀಕೃಷ್ಣನನ್ನು ಈ ಗದೆಯು ಪ್ರಹರಿಸಿ ಸಂಹರಿಸಲಿ ಎಂದು ಸಂಕಲ್ಪಿಸಿ ಆ ಶಿವದತ್ತ ಮಹಾಗದೆಯನ್ನು ಎಸೆದನು. ಆದ್ದರಿಂದ ಅದು

ಮಧುರಾಪಟ್ಟಣಕ್ಕೆ ಒಂದು ಯೋಜನ ಹಿಂದೆಯೇ ಬಿದ್ದಿತು. ಅಷ್ಟು ಮಾತ್ರವಲ್ಲ. ಆ ಗದೆಯು ಅತ್ಯಂತ ಪಾಪಿಷ್ಠಳೂ, ನರಭಕ್ಷಕಿಯೂ, ಜರಾಸಂಧನ ದೇಹದ ಎರಡು ಹೋಳುಗಳನ್ನು ಸೇರಿಸಿದ ಸಾಕುತಾಯಿಯಾದ ಜರಾ ಎಂಬ ರಾಕ್ಷಸಿಯ ಮೇಲೆ ಬಿದ್ದು ಅವಳನ್ನು ಸಂಹರಿಸಿ ಶ್ರೀ ಹರಿಯ ಆಜ್ಞೆಯಂತೆ ಅದು ಮಗಧ ರಾಜನನ್ನು ತ್ಯಜಿಸಿ ಕೈಲಾಸಪರ್ವತಕ್ಕೆ, ಶ್ರೀಶಿವಸನ್ನಿಧಿಗೆ ಹೋಯಿತು.

ಹೀಗೆ ರುದ್ರದತ್ತ ಮಹಾಗದೆಯನ್ನೂ, ತಾಯಿಯಾದ ಜರಾರಾಕ್ಷಸಿಯನ್ನೂ ಕಳೆದುಕೊಂಡ ಜರಾಸಂಧನು ಬಹಳ ಕ್ರೋಧೋನ್ಮತ್ತನಾಗಿ ತನ್ನ ಸಕಲ ಸಾಮಂತರಾಜರಿಂದಲೂ, ಇಪ್ಪತ್ತಮೂರು ಅಕ್ಷೋಹಿಣೀ ಸೈನ್ಯದಿಂದೊಡಗೂಡಿ ಅತ್ಯಂತ ದರ್ಪದಿಂದ ಉದ್ಧೃತನಾಗಿ ಕೂಡಲೇ ಕೃಷ್ಣನನ್ನು ಸಂಹರಿಸಲು ಹಾತೊರೆದು ಮಧುರಾನಗರದತ್ತ ಧಾವಿಸಿ ಮಧುರಾಪಟ್ಟವನ್ನು ಎಲ್ಲ ಕಡೆಯಿಂದಲೂ ಮುತ್ತಿದನು. ಅನಂತರ ಕುಬುದ್ಧಿಗಳಾದ ವಿಂದ-ಅನುವಿಂದ ಎಂಬ ಇಬ್ಬರು ರಾಜಪುತ್ರರನ್ನು ಕೃಷ್ಣನೆಡೆಗೆ ದೂತರನ್ನಾಗಿ ಸಂದೇಶದೊಡನೆ ಕಳಿಸಿದನು. ಅವರು ಕೃಷ್ಣನಲ್ಲಿಗೆ ಬಂದು ಜರಾಸಂಧನ ದರ್ಪಪೂರ್ಣವಾದ, ಶ್ರೀಕೃಷ್ಣನನ್ನು ಅಪಹಾಸಗೊಳಿಸುವ ಮಗಧರಾಜನ ಸಂದೇಶವನ್ನು ಹೀಗೆ ಹೇಳಿದರು –

"ಕೃಷ್ಣ! ನೀನು ಮಹಾಪರಾಕ್ರಮಿಯಲ್ಲವೆ? ಹೌದು, ಹೌದು! ಜಗತ್ತಿನಲ್ಲಿ ಅಪ್ರಸಿದ್ಧ ಬಲ-ಪೌರುಷಗಳಿಗೆ ಸಾರಭೂತನು ನೀನೊಬ್ಬನೇ ಎಂದು ಪ್ರಸಿದ್ಧಿಯಿದೆ! ನಾನು ಎಂಥಾ ಮೂರ್ಖ ಕೆಲಸ ಮಾಡಿದೆ! ಪೌರುಷರಹಿತನಾದ ನಾನು ಇಂಥಾ ನಿನ್ನ ಬಲವೀರ್ಯಗಳ ಆಧಿಕ್ಯವನ್ನು ಅರಿಯದೇ ಕಂಸನಿಗೆ ನನ್ನ ಪುತ್ರಿಯರನ್ನು ಕೊಟ್ಟುಬಿಟ್ಟೆ! (ಅಥವಾ ಅವನೇ ಪೌರುಷದಿಂದ ಅವರನ್ನು ಹಾರಿಸಿಕೊಂಡು ಹೋಗಿ ಮದುವೆಯಾದ!) ನನಗೆ ನೀನಿಂಥ ಪರಾಕ್ರಮಿಯಂದು ಗೊತ್ತಾಗಿದ್ದರೆ ನಿನಗೇ ನನ್ನ ಮಕ್ಕಳನ್ನು ಕೊಡಬಹುದಾಗಿತ್ತು!! ನಾನು ಹಾಗೆ ಮಾಡದಿದ್ದುದರಿಂದ ಕಂಸನು ನಿನ್ನಿಂದ ಹತನಾದನು. ಅತ್ಯಂತ ದುರ್ಬಲನಾದ ನಾನು ಪರಾಕ್ರಮಿಗಳಲ್ಲಿ ಶ್ರೇಷ್ಠನಾದವನು ನೀನೆಂಬುದನ್ನು ಕಂಡು ಜಗತ್ತಿಗೆ ತೋರಿಕೊಟ್ಟು ನಷ್ಟಪ್ರತಾಪನಾದ ನಾನು ನನ್ನ ಪುತ್ರಿಯರೊಡನೆ ತಪೋವನಕ್ಕೆ ಹೊರಟುಹೋಗುತ್ತೇನೆ! ಆದ್ದರಿಂದ ಮಹಾಪರಾಕ್ರಮಿಯಾದ ನೀನು ಕೂಡಲೇ ನನ್ನನ್ನು ನೋಡಲು ಬಾ" ಹೀಗೆ ಅಪಹಾಸಯುಕ್ತ ವಚನಪೂರ್ಣವಾದ ಜರಾಸಂಧನ ಸಂದೇಶವನ್ನು ವಿಂದ-ಅನುವಿಂದರು ಶ್ರೀಕೃಷ್ಣನಿಗೆ ತಿಳಿಸಿದರು. ಆಕ್ಷೇಪಪೂರ್ಣವೂ, ಉಪಹಾಸಪೂರ್ಣವೂ ಆದ ಆ ಸಂದೇಶವನ್ನು ಕೇಳಿ ಶ್ರೀಕೃಷ್ಣನು ನಸುನಗುತ್ತಾ (ನಿಮ್ಮ ಮಗಧ ರಾಜನು ವಿಗತಪ್ರತಾಪನಾಗಿ ಹೋಗುತ್ತೇನೆ ಎಂದು ಹೇಳಿದ್ದು ಸತ್ಯಭೂತವಾದೀತು! ಆದರೆ ತಪೋವನಕ್ಕೆ ಹೋಗುತ್ತೇನೆಂಬುದು ಆಗದಿದ್ದೀತು ಎಂಬ ಅಭಿಪ್ರಾಯದೊಂದಿಗೆ) "ನಿಜ! ನಿಜ!" ಎಂದು ಹೇಳಿದನು ಮತ್ತು 'ಇಕೋ! ನಿಮ್ಮ ಮಗಧರಾಜನನ್ನು ನೋಡಲು ಹೊರಟೆ' ಎಂದು ಹೇಳಿ ಬಲರಾಮಸಹಿತನಾಗಿ ಶ್ರೀಕೃಷ್ಣನು ಮಧುರಾನಗರದಿಂದ ಹೊರಟನು.

ಪರೇಶನಾದ ಭಗವಾನ್ ಶ್ರೀಕೃಷ್ಣನು ದ್ವಾರಕಾಪಟ್ಟಣದ ಮೂರು ದ್ವಾರಗಳಲ್ಲಿ ಸಾತ್ಯಕಿ ಮೊದಲಾದ ಯಾದವವೀರರನ್ನು ಪುರರಕ್ಷಣೆಗೆ ನಿಲ್ಲಿಸಿ, ಉತ್ತರದ್ವಾರದಿಂದ ಸೈನ್ಯಸಮೇತನಾಗಿ ಬಲರಾಮನಿಂದ ಸಹಿತನಾಗಿ ರಾಜಸಮುದಾಯದಿಂದ ಯುಕ್ತನಾದ ಜರಾಸಂಧನೊಡನೆ ಯುದ್ಧಮಾಡಲು ದಯಮಾಡಿಸಿದನು.

ಶ್ರೀಕೃಷ್ಣನ ಇಚ್ಛಾಮಾತ್ರದಿಂದ ಬಲರಾಮಸಹಿತನಾದ ತನ್ನ (ಶ್ರೀಕೃಷ್ಣ ಪರಮಾತ್ಮನ) ದೇದೀಪ್ಯಮಾನವಾದ ಆಯುಧಗಳು ಭೂಮಿಗವತರಿಸಿದವು. ಶ್ರೀ ಹರಿಯ ರಥವೂ ಬಂದಿತು. ಆಗ ಶ್ರೀಕೃಷ್ಣನು ತನ್ನದಾದ ಶಾರ್ಙ ಎಂದ ಧನುಸ್ಸು, ಖಡ್ಗ, ಸುದರ್ಶನ ಚಕ್ರ, ಶಂಖ, ಬಾಣ, ಬತ್ತಳಿಕೆ, ಗದೆ ಮೊದಲಾದ ಆಯುಧಗಳನ್ನು ಸ್ವೀಕಾರ ಮಾಡಿ ದಾರುಕನೆಂಬ ಹರಿಸಾರಥಿಯು ತಂದ ರಥದಲ್ಲಿ ಕುಳಿತನು. ಆ ಮಹಾನುಭಾವನು ಕುಳಿತ ರಥವು ಸಾಮಾನ್ಯ ರಥವಲ್ಲ! ಭೂದೇವಿಯಿಂದ ಅಭಿಮನ್ಯವಾದ ರಥವದು. ಯುಗಾದಿ ವೇದಾಭಿಮಾನಿ ದೇವತಾತ್ಮಕ ಅಶ್ವಗಳನ್ನು ಹೂಡಿದ್ದ

ಪರಮಶ್ರೇಷ್ಠವಾದ ರಥ! ಇಂಥ ಮಹಾರಥದಲ್ಲಿ ಕುಳಿತ ಶ್ರೀಕೃಷ್ಣನು ಶಾರ್ಙ್ಗಧನುವನ್ನು ಹೆದೆಯೇರಿಸಿ ತೀಕ್ಷ್ಣಗಳಾದ ಬಾಣಗಳನ್ನು ಹೂಡಿ ಮಗಧರಾಜನೆಡೆಗೆ ಹೊರಟನು. ಶತ್ರುಗಳಿಂದ ಸಹಿಸಲಳವಲ್ಲದ ಮಹಾಪರಾಕ್ರಮಶಾಲಿಯಾದ ಬಲರಾಮನು ತನ್ನ ಆಯುಧವಾದ ಹಲ (ನೇಗಿಲು), ಮುಸಲ (ಒನಕೆ)ಗಳನ್ನು ಸ್ವೀಕರಿಸಿ ರಥವೇರಿ ಬಾಣ-ಧನುಸ್ಸು, ಬತ್ತಳಿಕೆಯಿಂದ ಯುಕ್ತನಾಗಿ ಜರಾಸುತನಾದ ಮಗಧಾಧಿಪತಿಯಿಂದ ಸುರಕ್ಷಿತವಾದ ಸೈನ್ಯದೆಡೆಗೆ ಧಾವಿಸಿ ಹರ್ಷದಿಂದ ಜಯಧ್ವನಿ ಮಾಡಿದನು. ಅನಂತಶಕ್ತಿ ಸಂಪನ್ನನಾದ ಶ್ರೀಕೃಷ್ಣನು ತನ್ನೆಡೆಗೆ ಬರುತ್ತಿರುವುದನ್ನು ಅವಲೋಕಿಸಿ, ರಾಜೇಂದ್ರರ ಸಮೂಹದಿಂದ ಸಹಿತನಾದ ಮಗಧದೇಶಾಧಿಪತಿಯಾದ ಜರಾಸಂಧನು ಕೋಪಯುಕ್ತನಾಗಿ ಶ್ರೇಷ್ಠವಾದ ವಿವಿಧಾ-ಯುಧಗಳನ್ನು ವರ್ಷಿಸುತ್ತಾ ಅತಿಕ್ರಾಂತಸೀಮೆಯುಳ್ಳ ಸಾಗರದಂತೆ ಭಗವಾನ್ ಶ್ರೀಕೃಷ್ಣನ ಕಡೆಗೆ ಹೊರಟನು. ಶ್ರೀಕೃಷ್ಣನು ಜರಾಸಂಧನನ್ನು ರೇಗಿಸಲೆಂದು ಉಗ್ರಸೇನ ಮಹಾರಾಜನನ್ನು ಮುಂದೆ ಮಾಡಿಕೊಂಡು ಅವನ ಹಿಂದೆ ತಾನು ನಿಂತು ಮಗಧರಾಜನ ಸಮೀಪಕ್ಕೆ ಬಂದನು. ಅದನ್ನು ನಿರೀಕ್ಷಿಸಿದ ಜರಾಸಂಧನು ಕ್ರೋಧಾತಿರೇಕದಿಂದ ಮೈಕಂಪಿಸುತ್ತಿರಲು ಇಂತೆಂದನು. "ಎಲವೋ ಪಾಪಿ, ಉಗ್ರಸೇನ, ತೊಲಗಾಚೆ! ನಾಚಿಕೆಯಿಲ್ಲದವನೆ, ರಾಜ್ಯವನ್ನು ಪಡೆಯಬೇಕೆಂಬ ದುರಾಶೆಯುಳ್ಳವನೆ, ನಿನ್ನ ಪುತ್ರನ ಮರಣಕ್ಕೆ ಕಾರಣನಾದ ಕೃಷ್ಣನ ಪಕ್ಷಕ್ಕೆ ಸೇರಿದ ನೀನು ನನ್ನೆದುರು ಬರಬೇಡ, ತೊಲಗು! ಸೊರಗಿದ ಆಡಿನಂತಿರುವ ನೀನು ನನ್ನಿಂದ ಸಂಹಾರಾರ್ಹನಲ್ಲ! ಸಿಂಹವು ಮದಿಸಿದ ಮತ್ತೊಂದು ಸಿಂಹದೊಡನೆ ಸೆಣಸುವುದೇ ಹೊರತು ಎಂದಿಗಾದರೂ ನರಿಯೊಡನೆ ಹೋರಾಡುವುದೇ?"

ಇಂತು ಆಕ್ಷೇಪಿಸಲ್ಪಟ್ಟ ಬಲಾಢ್ಯನಾದ ಭೋಜಾಧಿಪನಾದ ಉಗ್ರಸೇನನು ಶೀಘ್ರವಾಗಿ ಧನುಸ್ಸಿಗೆ ತೀಕ್ಷ್ಣವಾದ ಬಾಣವನ್ನು ಹೂಡಿ ಜರಾಸಂಧನ ಧನುಸ್ಸನ್ನು ಛೇದಿಸಿ ಅನೇಕ ಬಾಣಗಳಿಂದ ಮತ್ತೆ ಅವನನ್ನು ಉಗ್ರವಾಗಿ ತಾಡನಮಾಡಿ ಜಯಧ್ವನಿ ಮಾಡಿದನು. ತನ್ನ ಧನುಸ್ಸು ಭಗ್ನವಾದ್ದರಿಂದ ಅತ್ಯಂತ ಕುಪಿತನಾಗಿ ಕಣ್ಣನ್ನು ಕೆಂಪಗೆ ಮಾಡಿಕೊಂಡು ಬೇರೊಂದು ಧನುವನ್ನು ಹಿಡಿದು ಉಗ್ರಸೇನನನ್ನು ಸಂಹರಿಸಬೇಕೆಂದು ಅತಿಶೀಘ್ರವಾಗಿ ಬರುತ್ತಿರುವ ಜರಾಸಂಧನನ್ನು ಕಂಡು ಶ್ರೇಷ್ಠನಾದ ಶ್ರೀಕೃಷ್ಣನು ರಥದಲ್ಲಿ ಮಂಡಿಸಿ ಅವನಿಗೆ ಅಭಿಮುಖನಾಗಿ ಹೊರಟನು. ಅನಂತವೀರ್ಯಗಳಿಂದ ಶೋಭಿಸುವ ಭಗವಂತನಾದ ವಾಸುದೇವನು ತನ್ನ ಕಡೆ ಬರುತ್ತಿರುವುದನ್ನು ಕಂಡು ಶಿಶುಪಾಲ – ಪೌಂಡ್ರಕ ಮೊದಲಾದ ರಾಜರುಗಳಿಂದ ಸಮೇತನಾದ ಜರಾಸಂಧನು, ಮೇರುಪರ್ವತದ ಮೇಲೆ ಘನಘೋಷ ಮಾಡುತ್ತಾ ಮೇಘಗಳು ಜಲಧಾರೆಯಿಂದ ವರ್ಷಿಸುವಂತೆ 'ನಾನಾ' ವಿಧವಾದ, ಉತ್ತಮವಾದ ಅಸ್ತ್ರ-ಶಸ್ತ್ರ ಸಮೂಹದಿಂದ ಮಳೆಗರೆದನು. ಆಗ ತನ್ನ ಶಾರ್ಙ್ಗ ಧನುಸ್ಸಿನಿಂದ ಹೊರ ಹೊಮ್ಮಿಸಿದ ಶರಸಮೂಹಗಳಿಂದ ಮಗಧರಾಜನ ಎಲ್ಲ ಶಸ್ತ್ರಾಸ್ತ್ರವೃಷ್ಟಿಯನ್ನು ಛೇದಿಸಿ ಜರಾಸಂಧನ ರಥದಲ್ಲಿ ರಾರಾಜಿಸುತ್ತಿದ್ದ ಶ್ವೇತಛತ್ರ, ರಥದ ಮೇಲೆ ಹಾರಾಡುತ್ತಿದ್ದ ಪತಾಕೆಗಳನ್ನು ಭಗ್ನಗೊಳಿಸಿ, ರಥ-ತುರಗ-ಸಾರಥಿಗಳನ್ನು ನಾಶಪಡಿಸಿ ಅಚಿಂತ್ಯ ಶಕ್ತಿಸಂಪನ್ನನಾದ ಭಗವಂತನು ಮಗಧೇಶನನ್ನು ನಿರಾಯುಧಗೊಳಿಸಿದನು. ಆಗ ವಾಸುದೇವನು ಜರಾಸಂಧನನ್ನು ಸಂಹರಿಸಬಹುದಾಗಿತ್ತು. ಆದರೂ ಕೊಲ್ಲಲಿಲ್ಲ. ತನ್ನ ಮೇಲೆ ಭೀಮಸೇನ ದೇವರಿಗಿರುವ ಭಕ್ತಿಯನ್ನು ಜಗತ್ತಿನಲ್ಲಿ ಪ್ರಖ್ಯಾತಗೊಳಿಸಿ ಅವನಿಗೆ ಮುಂದೆ ಜರಾಸಂಧನನ್ನು ಸಂಹರಿಸಿದ ಕೀರ್ತಿಯನ್ನು ಕೊಡಬೇಕೆಂಬ ಶ್ರೇಷ್ಠಧರ್ಮವನ್ನು ಬೋಧಿಸಲೂ ಸ್ವಯಂ ಜರಾಸಂಧನನ್ನು ಸಂಹರಿಸದೆ ಉಳಿಸಿದನು.

ಭಗವಂತನು ಚೇದಿರಾಜನಾದ ಶಿಶುಪಾಲ, ಪೌಂಡ್ರಕ, ಕೀಚಕ, ಮದ್ರರಾಜ, ಸಾಲ್ವ, ಏಕಲವ್ಯನೇ ಮೊದಲಾದ ವೀರರ ರಥಗಳನ್ನು ಭಗ್ನಗೊಳಿಸಿ ಅವರೆಲ್ಲರನ್ನೂ ವಿರಥರನ್ನಾಗಿಸಿದನು. ಇವರೇ ಅಲ್ಲದೆ ಹಂಸ, ಡಿಭಿಕ, ಕದ್ರುಮ, ರುಕ್ಮಿ, ಬಾಹ್ಲೀಕ, ನರಕಾಸುರ, ಅವನ ಮಗನಾದ ಭಗದತ್ತ, ಮೈಂದ ಮತ್ತು ವಿವಿದ ಇವರೆಲ್ಲರೂ, ಜನನವಿಲ್ಲದ ಜಗದೀಶನ ಶರಾಹುತಿಯಿಂದ ಛಿನ್ನಭಿನ್ನರಾಗಿ ಪಲಾಯನ ಮಾಡಿದರು. ಭೂಮಿಯಲ್ಲಿ ಇನ್ನುಳಿದ ರಾಜರುಗಳೂ ಸಹ ಪಲಾಯನಗೈದರು.

ಮೇಲ್ಗಂಡ ಮಹಾವೀರರೂ, ಭೂಪತಿಗಳೂ, ಶ್ರೀಕೃಷ್ಣನ ಧನುಸ್ಸಿನಿಂದ ಹೊರಹೊಮ್ಮಿದ ತೀಕ್ಷ್ಣಬಾಣಗಳ ಆಘಾತಗಳಿಂದ ಅವರ ಆಯುಧಗಳು ಕತ್ತರಿಸಲ್ಪಟ್ಟವು. ರಥದ ಮಧ್ಯದಲ್ಲಿ ಎತ್ತರವಾಗಿದ್ದ ಸ್ತಂಭಗಳಲ್ಲಿ ರಾಜಿಸುತ್ತಿದ್ದ ಧ್ವಜಗಳು ರಥದ ಸುತ್ತಲೂ ಮೇಲೆ ಹಾರಾಡುತ್ತಿದ್ದ ಪತಾಕೆಗಳು ಚೂರುಚೂರಾದವು. ಅವರ ರಥ, ಅಶ್ವಗಳು, ಸಾರಥಿಗಳು ಅವರು ಧರಿಸಿದ್ದ ಕವಚಗಳೆಲ್ಲವೂ ಛೇದಿಸಲ್ಪಟ್ಟವು. ಅವರ ವಸ್ತ್ರಗಳು ಅಸ್ತವ್ಯಸ್ತವಾದವು. ಆಭರಣಗಳು ಕಳಚಿಬಿದ್ದವು. ಕಟ್ಟಿದ ಕೇಶಗಳು ಬಿಚ್ಚಿಹೋದವು, ಧರಿಸಿದ್ದ ಹಾರಗಳು ಛಿನ್ನಭಿನ್ನವಾದವು. ಹೀಗೆ ಶ್ರೀಕೃಷ್ಣನ ತೀಕ್ಷ್ಣವಾದ ಬಾಣಗಳ ಹೊಡೆತದಿಂದ ಮೈಕೈ ಮುರಿದುಕೊಂಡ ಆ ಸಮಸ್ತ ವೀರರೂ ರಕ್ತವನ್ನು ಕಾರುತ್ತಾ ಬಹುಭಯಗೊಂಡು ಜೀವವುಳಿದರೆ ಸಾಕೆಂದು ಶೀಘ್ರವಾಗಿ ಓಡಹತ್ತಿದರು.

ಶ್ರೀಕೃಷ್ಣನು ಸಕಲರಾಜರ ಎಲ್ಲ ಆಯುಧಗಳನ್ನೂ ಕಸಿದುಕೊಂಡು ಅವರನ್ನು ನಿಶ್ಶಸ್ತ್ರರನ್ನಾಗಿ ಮಾಡಿದನು. ಇಂತು ಶ್ರೀಕೃಷ್ಣನಿಂದಾಗಿ ಈ ಬಗೆಯ ದುಃಖಾಸ್ಪದ ದುಸ್ಥಿತಿಗಳಿಗೀಡಾದ ಸಕಲ ನೃಪತಿಗಳೂ ಭಯಗ್ರಸ್ತರಾಗಿ ಯುದ್ಧಭೂಮಿಯಿಂದ ಪಲಾಯನಗೈಯಹತ್ತಿದರು. ಅದನ್ನು ಕಂಡು ಮಗಧಾಧಿಪನಾದ ಜರಾಸಂಧನು ಸಕಲ ಆಯುಧಗಳಿಂದ ಸಜ್ಜೀಕೃತವಾದ ಬಲಯುತವಾದ ಮತ್ತೊಂದು ರಥವನ್ನೇರಿ ಅತ್ಯುಗ್ರ ಪರಾಕ್ರಮಿಯಾದ ಬಲರಾಮನೆಡೆಗೆ ಧಾವಿಸಿ ಬಂದನು. ರಥದಲ್ಲಿ ಕುಳಿತು ತನ್ನತ್ತ ಬರುತ್ತಿರುವ ಜರಾಸಂಧನನ್ನು ಅವಲೋಕಿಸಿ ಬಲರಾಮನು ಮುಸಲಾಯುಧದಿಂದ ಅವನ ರಥವನ್ನು ಪುಡಿಪುಡಿ ಮಾಡಿದನು. ಆದರಿಂದ ಕುಪಿತನಾದ ಮಾಗಧೇಶನು ಭಯಂಕರವಾದ ತನ್ನ ಗದೆಯನ್ನು ಬಲರಾಮನ ವಿಸ್ತಾರವಾದ ವಕ್ಷಸ್ಥಳದ ಮೇಲೆ ಪ್ರಹರಿಸಿದನು. ಆಗ ಬಲರಾಮನೂ ಮುಸಲಾಯುಧದಿಂದ ಜರಾಸಂಧನನ್ನು ಅಪ್ಪಳಿಸಿದನು. ಪರಾಕ್ರಮಿಗಳಲ್ಲಿ ಅಗ್ರಗಣ್ಯನಾದ ಆ ಬಲರಾಮ ಜರಾಸಂಧರು ಭೀಕರ ಆಯುಧಗಳಿಂದ ಅತ್ಯುಗ್ರವಾಗಿ ಯುದ್ಧಮಾಡತೊಡಗಿದರು. ಅವರೀರ್ವರೂ ರಣಭೂಮಿಯ ಸನಿಹದಲ್ಲಿದ್ದ ಗಿರಿ-ವೃಕ್ಷ-ಪಾಷಾಣಗಳಿಂದ ಪರಸ್ಪರ ಬಡಿದಾಡಿ ಅವೆಲ್ಲವನ್ನೂ ಧೂಳೀಪಟ ಮಾಡಿದರು. ಅನಂತರ ವಜ್ರಕ್ಕಿಂತಲೂ ಅತ್ಯಂತ ಕಠಿಣ ಶರೀರಿಗಳಾದ ಬಲಾಢ್ಯರಾದ ಬಲರಾಮ-ಜರಾಸಂಧರು ಬಾಹುಯುದ್ಧದಲ್ಲಿ ಪ್ರವೃತ್ತರಾದರು. ಅವರು ಬಹುಕಾಲ ರೋಷಾವೇಶದಿಂದ ಪರಸ್ಪರ ಮುಷ್ಟಿಯುದ್ಧದಲ್ಲಿ ನಿರತರಾಗಿರುವಾಗ ಬಲರಾಮದೇವನು ಪುಂಡರೀಕಾಕ್ಷನಾದ ಶ್ರೀ ಪುರುಷೋತ್ತಮನಾದ ಸಿರಿಕೃಷ್ಣನ ವಿಜಯಸೂಚಕ ಶಂಖಧ್ವನಿಯನ್ನಾಲಿಸಿ, ರಣರಂಗದಿಂದ ಓಡಿಹೋಗುತ್ತಿರುವ ರಾಜನ್ಯನಿವಹವನ್ನು ನೋಡಿ ತನ್ನೊಡನೆ ಸೆಣಸುತ್ತಿರುವ ಅರಿರಾಜನಾದ ಜರಾಸಂಧನನ್ನು ಬಿಟ್ಟು ಭಯಂಕರವಾದ ತನ್ನ ಮುಸಲಾಯುಧವನ್ನು ಹಿಡಿದು ಜರಾಸಂಧನ ಶಿರದ ಮೇಲೆ ಬಲವಾಗಿ ಪ್ರಹರಿಸಿದನು. ಆದರಿಂದ ತತ್ತರಿಸಿ ನೆಲಕ್ಕುರುಳಿದ ಮಗಧರಾಜನು ಮೂರ್ಛೆಹೋದನು.

ಇತ್ತ ವಾಸುದೇವನ ಶರಾಘಾತದಿಂದ ಖತಿಗೊಂಡು ಓಡುತ್ತಿದ್ದ ಏಕಲವ್ಯನು, ಜರಾಸಂಧನು ಮೂರ್ಛೆಹೋದುದನ್ನು ಕಂಡು ಬಲರಾಮನ ಮೇಲೆ ಅಸ್ತ್ರವನ್ನು ಪ್ರಯೋಗಿಸಿ ಓಡಹತ್ತಿದನು. ಭಗವಾನ್ ಶ್ರೀಕೃಷ್ಣನು ಹೆದರಿ ಪಲಾಯನಗೈಯುತ್ತಿರುವ ಏಕಲವ್ಯನೊಡನೆ ಯುದ್ಧಮಾಡಲಿಚ್ಛಿಸದೆ, ಪುತ್ರನಾದ ಪ್ರದ್ಯುಮ್ನನನ್ನು ಕೂಡಲೇ ಸೃಷ್ಟಿಸಿದನು. ಅಂದರೆ ಸೃಷ್ಟಿಯ ಆದಿಯಲ್ಲಿ ತನ್ನ ಮನಸ್ಸಿನಿಂದ ಅವತರಿಸಿದ, ಅನಂತರ ಬ್ರಹ್ಮದೇವರ ಮನಸ್ಸಿನಿಂದ ಜನಿಸಿದ ಕಾಮನನ್ನು ಪ್ರದ್ಯುಮ್ನನೆಂಬ ಹೆಸರಿನಿಂದ ತತ್‌ಕ್ಷಣವೇ ಆ ಯುದ್ಧಭೂಮಿಯಲ್ಲಿ ತನ್ನ ಮನಸ್ಸಿನಿಂದ ಸೃಜಿಸಿದನು. ಪ್ರದ್ಯುಮ್ನನು ಮಹಾಸ್ತ್ರಗಳಿಂದ ಏಕಲವ್ಯನನ್ನು ತಾಡಿಸಿ ಅವನನ್ನು ನಿರಾಯುಧಗೊಳಿಸಿದನು. ಬಲರಾಮನು ತನ್ನ ರಥದಲ್ಲಿ ಕುಳಿತು ಜರಾಸಂಧನು ಮೂರ್ಛಿತನಾಗಿ ಬಿದ್ದಿದ್ದ ಕಡೆಗೆ ಹೋದನು. ಏಕಲವ್ಯನು ಪೂರ್ವದಲ್ಲಿ ಕ್ರೋಧವಶರೆಂಬ ರಾಕ್ಷಸರ ಗುಂಪಿನಲ್ಲಿ ಮಣಿಮಾನ್ ಎಂಬ ದೈತ್ಯನು, ಅವನೀಗ ನಿಷಾದ (ಕಿರಾತರ) ಜಾತಿಯಲ್ಲಿ ಜನಿಸಿದ್ದನು. ಅಂಥ ಏಕಲವ್ಯನನ್ನು ಕೃಷ್ಣಮಾನಸಪುತ್ರನಾದ ಪ್ರದ್ಯುಮ್ನನು ಜಯಿಸಿ ನಿರಾಯುಧಗೊಳಿಸಿದನು. ಆಗ ನಾಶರಹಿತ ಪರಾಕ್ರಮಶಾಲಿಯೂ ಉತ್ಪತ್ತಿರಹಿತನೂ ಆದ ಶ್ರೀಕೃಷ್ಣನು ತಾನು

ಸೃಷ್ಟಿಸಿದ್ದ ಪ್ರದ್ಯುಮ್ನನನ್ನು ಪುನಃ ತನ್ನ ಉದರದಲ್ಲಿ ಸೇರಿಸಿಕೊಂಡನು. ತರುವಾಯ ಸಮಸ್ತವಾದ ಮಗಧರಾಜನ ಬಲವನ್ನೂ ಶರಸಮೂಹದಿಂದ ನಾಶಪಡಿಸಿ ಕಾಂತಿರಹಿತನಾಗಿ ಕಂಗೆಟ್ಟು ನಿಂತಿದ್ದ ಜರಾಸಂಧನನ್ನು ನೋಡಿ "ಮಾಗಧೇಶ! ನಡೆ - ಮತ್ತೆ ದೊಡ್ಡ ಸೈನ್ಯದ ಸಮೇತನಾಗಿ ಯುದ್ಧಕ್ಕೆ ಬಾ" ಎಂದು ಹೇಳಿ ಅವನನ್ನು ಸಂಹರಿಸಲಿಚ್ಛಿಸದೆ ಉದಾರಹೃದಯದಿಂದ ಬಂಧನದಿಂದ ಬಿಡುಗಡೆ ಮಾಡಿದನು. ಪಾಪಾತ್ಮನಾದ ಆ ಜರಾಸಂಧನು ಕೃಷ್ಣನ ಮೇಲೆ ಯುದ್ಧಕ್ಕೆ ಬರುವಾಗ ಕಂಸ-ಪುತ್ರನಾದ ತನ್ನ ಪೌತ್ರನನ್ನು ಭೋಜಶ್ರೇಷ್ಠರ ಮಧುರಾರಾಜ್ಯಕ್ಕೆ ಅಧಿಪತಿಯೆಂದು ತಾನೇ ಪಟ್ಟಾಭಿಷೇಕ ಮಾಡಿ ಆ ಹುಡುಗನನ್ನು ಮುಂದುಮಾಡಿಕೊಂಡು ಬಂದಿದ್ದನು. ಈಗ ಯುದ್ಧದಲ್ಲಿ ಪರಾಜಿತನಾಗಿ ಲಜ್ಜೆಯಿಂದ ತಲೆತಗ್ಗಿಸಿ ನಿಂತಿದ್ದ ಕರ್ತವ್ಯಪರಿಜ್ಞಾನಶೂನ್ಯನಾದ ಆ ಪಾಪಾತ್ಮನು ತನ್ನ ಪೌತ್ರನೇ ಮಧುರಾರಾಜ್ಯದ ಅಧಿಪತಿಯೆಂದು ಘೋಷಿಸಿ ರಣರಂಗ-ದಿಂದ ತನ್ನ ರಾಜ್ಯಕ್ಕೆ ತೆರಳಿದನು.

ಹೀಗೆ ಅತ್ಯಂತ ಬಲವಂತನಾದ ಜರಾಸಂಧನನ್ನು ಜಯಿಸಿ ಬ್ರಹ್ಮರುದ್ರೇಂದ್ರಾದಿ ದೇವತೆಗಳು ಪರಮಾನಂದಭರಿತರಾಗಿ ಪುಷ್ಪವೃಷ್ಟಿ ಮಾಡುತ್ತಿರಲು, ತನ್ನವರಾದ ಸಮಸ್ತ ಜನರಡನೆ ಬಲರಾಮಸಹಿತನಾಗಿ, ಜಾಗ್ರತೆಯಾಗಿ ಮಧುರಾಪಟ್ಟಣವನ್ನು ಪ್ರವೇಶಿಸಿ ಉತ್ತಮರಾದ ಸಜ್ಜನ ಸಮೂಹದಿಂದ ವಂದ್ಯಮಾನಪಾದಾರವಿಂದನಾದ ಶ್ರೀವಾಸುದೇವನು ಕ್ರೀಡಿಸಿದನು.

ಪಾಂಡುಮಹಾರಾಜನ ಮಕ್ಕಳು ಅಭಿವೃದ್ಧಿಸುತ್ತಿರಲು ಸಹಸ್ರಾಕ್ಷನಾದ ಇಂದ್ರದೇವನ ಪುತ್ರನಾದ ಅರ್ಜುನನ ಜನ್ಮ-ನಕ್ಷತ್ರಸಹಿತವಾದ ಹದಿನಾಲ್ಕನೆಯ ವರ್ಷದ ಹುಟ್ಟಿದ ಹಬ್ಬವು ಬಂದೊದಗಿತು. ಅಂದು ನೀತಿಕೋವಿದಳಾದ ಕುಂತೀದೇವಿಯು ಅರ್ಜುನನ ವರ್ಧಂತ್ಯುತ್ಸವದ ಅಂಗವಾದ ಬಹುಕಾರ್ಯಗಳಲ್ಲಿ ಆಸಕ್ತಳಾಗಿ ಆ ವರ್ಧಂತಿಯಲ್ಲಿ ಭಾಗವಹಿಸಿದ ಅನೇಕ ಋಷಿಮುನಿಗಳಿಗೆ ದಿವ್ಯವಾದ ಭೋಜನವನ್ನೇರ್ಪಡಿಸಿ ಅವರೆಲ್ಲರಿಗೂ ಸ್ವತಃ ಮೃಷ್ಟಾನವನ್ನು ಬಡಿಸಿ ಮುದಗೊಳಿಸಿದಳು.

ಆ ಕಾಲದಲ್ಲಿ ನರಪತಿಯಾದ ಪಾಂಡುಮಹಾರಾಜನು ಗಂಡುಕೋಗಿಲೆ ಮತ್ತಿತರ ವಿವಿಧ ಪಕ್ಷಿಗಳಿಂದ ಸಂಕುಲಿತವಾದ, ಪುಷ್ಪರಾಜಿಗಳಿಂದ್ರ ವಿಕಸಿತವಾದ, ದರ್ಶನಮಾತ್ರದಿಂದ ಕಣ್ಮನಗಳಿಗೆ ಆನಂದವನ್ನೀಯುವ ಸುಂದರವನಪ್ರದೇಶವನ್ನು ಕಂಡು ವಸಂತಕಾಲೀನ ಮಂದಮಾರುತನ ಸ್ಪರ್ಶದಿಂದ ಉದ್ರಿಕ್ತನಾಗಿ ತನಗೆ ಮುನಿಶಾಪವಿರುವುದನ್ನೂ ವಿಚಾರಿಸದೆ, ಕೂಡಲೇ ಮನ್ಮಥನ ಶರಾಹುತಿಗೊಳಗಾದನು. (ಸೌರಮಾಸಾನುಸಾರವಾಗಿ ಒಮ್ಮೊಮ್ಮೆ ಫಾಲ್ಗುಣ ಮಾಸದಲ್ಲೂ ವಸಂತ-ಋತುವು ಬರುವುದುಂಟು.) ಶ್ರೀಹರಿಪರಮಾತ್ಮನ ಭಕ್ತನಾದ ಪಾಂಡುಮಹಾರಾಜನು ಮಾದ್ರೀದೇವಿಯನ್ನು ಸುರತ-ಕೇಳಿಗೆ ಬಲವಂತದಿಂದ ಒಡಂಬಡಿಸಿ ಅವಳೊಡನೆ ರಮಿಸುತ್ತಿರುವಾಗಲೇ ಮುನಿಶಾಪದಿಂದ ತಕ್ಷಣವೇ ಮೃತನಾಗಿ ಯಮಸದನಕ್ಕೆ ತೆರಳಿದನು. ರತಿಕಾಲದಲ್ಲಿ ಮೃತನಾಗಿದ್ದರೂ ಪಾಂಡುರಾಜನು ಸಮೀಚೀನ ಪುಣ್ಯಪ್ರಭಾವದಿಂದ ರಾಜರಿಂದ ಪ್ರಾಪ್ಯವಾದ ಯಮಸದನಕ್ಕೆ ಹೋದುದಕ್ಕೆ ಅವನ ಹರಿಪಾದಸಂಗಿತ್ವರೇ ಕಾರಣವೆಂದು ಅಭಿಪ್ರಾಯ.

ಪಾಂಡುರಾಜನು ರತಿಕಾಲದಲ್ಲಿ ಮೃತನಾಗಲು ಕಾರಣವಾದ ಮುನಿಶಾಪಕ್ಕಿಂತಲೂ ಮಹತ್ತರವಾದ ಮತ್ತೊಂದು ಕಾರಣ ಉಂಟೆಂದು ಈಗ ನಿರೂಪಿಸುತ್ತಾರೆ. ಪಾಂಡುರಾಜನ ಮೂಲರೂಪ 'ಪರಾವಹ' ಎಂಬ ಮರುತ್ತು. ಪೂರ್ವದಲ್ಲಿ ಈ ಪರಾವಹಮರುತ್ತು ಒಮ್ಮೆ ಇಂದ್ರದೇವನ ದರ್ಶನಕ್ಕಾಗಿ ಮಹೇಂದ್ರಭವನಕ್ಕೆ ಹೋದನು. ಆಗ ಇಂದ್ರನು ಶಚೀದೇವಿಯೊಡನೆ ಕ್ರೀಡಿಸಲು ಹಾತೊರೆಯುತ್ತಿದ್ದನು. ಪರಾವಹ ಮರುತ್ತು ಆ ಸಮಯದಲ್ಲೇ ಅಲ್ಲಿಗೆ ಹೋಗಿದ್ದರಿಂದ ಇಂದ್ರ-ಶಚಿಯರ ಕ್ರೀಡೆಗೆ ವಿಘ್ನವುಂಟಾಯಿತು. ಆ ಕಾರಣದಿಂದ ಈಗ ಪರಾವಹ ವಾಯುವು ಮಾನವನಾಗಿ ಪಾಂಡು-ರಾಜನೆಂಬ ಹೆಸರಿನಿಂದ ಹುಟ್ಟಿರುವಾಗ ಸ್ವಪತ್ನಿಯೊಡನೆ ರತಿಕಾರ್ಯಾಸಕ್ತನಾಗಿರುವಾಗಲೇ ಮರಣಹೊಂದಿದನು ಮತ್ತು ಔರಸಪುತ್ರರಹಿತನೂ ಅಂದರೆ ಸ್ವಂತಮಕ್ಕಳಿಲ್ಲದವನಾದನು.

ಮೇಲ್ಕಂಡ ಮಹಾವೀರರೂ, ಭೂಪತಿಗಳೂ, ಶ್ರೀಕೃಷ್ಣನ ಧನುಸ್ಸಿನಿಂದ ಹೊರಹೊಮ್ಮಿದ ತೀಕ್ಷ್ಣಬಾಣಗಳ ಆಘಾತಗಳಿಂದ ಅವರ ಆಯುಧಗಳು ಕತ್ತರಿಸಲ್ಪಟ್ಟವು. ರಥದ ಮಧ್ಯದಲ್ಲಿ ಎತ್ತರವಾಗಿದ್ದ ಸ್ತಂಭಗಳಲ್ಲಿ ರಾಜಿಸುತ್ತಿದ್ದ ಧ್ವಜಗಳು ರಥದ ಸುತ್ತಲೂ ಮೇಲೆ ಹಾರಾಡುತ್ತಿದ್ದ ಪತಾಕೆಗಳು ಚೂರುಚೂರಾದವು. ಅವರ ರಥ, ಅಶ್ವಗಳು, ಸಾರಥಿಗಳು ಅವರು ಧರಿಸಿದ್ದ ಕವಚಗಳೆಲ್ಲವೂ ಭೇದಿಸಲ್ಪಟ್ಟವು. ಅವರ ವಸ್ತ್ರಗಳು ಅಸ್ತವ್ಯಸ್ತವಾದವು. ಆಭರಣಗಳು ಕಳಚಿಬಿದ್ದವು. ಕಟ್ಟಿದ ಕೇಶಗಳು ಬಿಚ್ಚಿಹೋದವು, ಧರಿಸಿದ್ದ ಹಾರಗಳು ಛಿನ್ನಭಿನ್ನವಾದವು. ಹೀಗೆ ಶ್ರೀಕೃಷ್ಣನ ತೀಕ್ಷ್ಣವಾದ ಬಾಣಗಳ ಹೊಡೆತದಿಂದ ಮೈಕೈ ಮುರಿದುಕೊಂಡ ಆ ಸಮಸ್ತ ವೀರರೂ ರಕ್ತವನ್ನು ಕಾರುತ್ತಾ ಬಹುಭಯಗೊಂಡು ಜೀವವುಳಿದರೆ ಸಾಕೆಂದು ಶೀಘ್ರವಾಗಿ ಓಡಹತ್ತಿದರು.

ಶ್ರೀಕೃಷ್ಣನು ಸಕಲರಾಜರ ಎಲ್ಲ ಆಯುಧಗಳನ್ನೂ ಕಸಿದುಕೊಂಡು ಅವರನ್ನು ನಿಶ್ಶಸ್ತ್ರರನ್ನಾಗಿ ಮಾಡಿದನು. ಇಂತು ಶ್ರೀಕೃಷ್ಣನಿಂದಾಗಿ ಈ ಬಗೆಯ ದುಃಖಾಸ್ಪದ ದುಸ್ಥಿತಿಗಳಿಗೀಡಾದ ಸಕಲ ನೃಪತಿಗಳೂ ಭಯಗ್ರಸ್ತರಾಗಿ ಯುದ್ಧಭೂಮಿಯಿಂದ ಪಲಾಯನಗೈಯಹತ್ತಿದರು. ಅದನ್ನು ಕಂಡು ಮಗಧಾಧಿಪನಾದ ಜರಾಸಂಧನು ಸಕಲ ಆಯುಧಗಳಿಂದ ಸಜ್ಜೀಕೃತವಾದ ಬಲಯುತವಾದ ಮತ್ತೊಂದು ರಥವನ್ನೇರಿ ಅತ್ಯುಗ್ರ ಪರಾಕ್ರಮಿಯಾದ ಬಲರಾಮನೆಡೆಗೆ ಧಾವಿಸಿ ಬಂದನು. ರಥದಲ್ಲಿ ಕುಳಿತು ತನ್ನತ್ತ ಬರುತ್ತಿರುವ ಜರಾಸಂಧನನ್ನು ಅವಲೋಕಿಸಿ ಬಲರಾಮನು ಮುಸಲಾಯುಧದಿಂದ ಅವನ ರಥವನ್ನು ಪುಡಿಪುಡಿ ಮಾಡಿದನು. ಅದರಿಂದ ಕುಪಿತನಾದ ಮಾಗಧೇಶನು ಭಯಂಕರವಾದ ತನ್ನ ಗದೆಯನ್ನು ಬಲರಾಮನ ವಿಸ್ತಾರವಾದ ವಕ್ಷಸ್ಥಳದ ಮೇಲೆ ಪ್ರಹರಿಸಿದನು. ಆಗ ಬಲರಾಮನೂ ಮುಸಲಾಯುಧದಿಂದ ಜರಾಸಂಧನನ್ನು ಅಪ್ಪಳಿಸಿದನು. ಪರಾಕ್ರಮಿಗಳಲ್ಲಿ ಅಗ್ರಗಣ್ಯನಾದ ಆ ಬಲರಾಮ ಜರಾಸಂಧರು ಭೀಕರ ಆಯುಧಗಳಿಂದ ಅತ್ಯುಗ್ರವಾಗಿ ಯುದ್ಧಮಾಡತೊಡಗಿದರು. ಅವರೀರ್ವರೂ ರಣಭೂಮಿಯ ಸನಿಹದಲ್ಲಿದ್ದ ಗಿರಿ-ವೃಕ್ಷ-ಪಾಷಾಣಗಳಿಂದ ಪರಸ್ಪರ ಬಡಿದಾಡಿ ಅವೆಲ್ಲವನ್ನೂ ಧೂಳೀಪಟ ಮಾಡಿದರು. ಅನಂತರ ವಜ್ರಕ್ಕಿಂತಲೂ ಅತ್ಯಂತ ಕಠಿಣ ಶರೀರಿಗಳಾದ ಬಲಾಢ್ಯರಾದ ಬಲರಾಮ-ಜರಾಸಂಧರು ಬಾಹುಯುದ್ಧದಲ್ಲಿ ಪ್ರವೃತ್ತರಾದರು. ಅವರು ಬಹುಕಾಲ ರೋಷಾವೇಶದಿಂದ ಪರಸ್ಪರ ಮುಷ್ಟಿಯುದ್ಧದಲ್ಲಿ ನಿರತರಾಗಿರುವಾಗ ಬಲರಾಮದೇವನು ಪುಂಡರೀಕಾಕ್ಷನಾದ ಶ್ರೀ ಪುರುಷೋತ್ತಮನಾದ ಸಿರಿಕೃಷ್ಣನ ವಿಜಯಸೂಚಕ ಶಂಖಧ್ವನಿಯನ್ನಾಲಿಸಿ, ರಣರಂಗದಿಂದ ಓಡಿಹೋಗುತ್ತಿರುವ ರಾಜನ್ಯನಿವಹವನ್ನು ನೋಡಿ ತನ್ನೊಡನೆ ಸೆಣಸುತ್ತಿರುವ ಅರಿರಾಜನಾದ ಜರಾಸಂಧನನ್ನು ಬಿಟ್ಟು ಭಯಂಕರವಾದ ತನ್ನ ಮುಸಲಾಯುಧವನ್ನು ಹಿಡಿದು ಜರಾಸಂಧನ ಶಿರದ ಮೇಲೆ ಬಲವಾಗಿ ಪ್ರಹರಿಸಿದನು. ಅದರಿಂದ ತತ್ತರಿಸಿ ನೆಲಕ್ಕುರುಳಿದ ಮಗಧರಾಜನು ಮೂರ್ಛೆಹೋದನು.

ಇತ್ತ ವಾಸುದೇವನ ಶರಾಘಾತದಿಂದ ಖತಿಗೊಂಡು ಓಡುತ್ತಿದ್ದ ಏಕಲವ್ಯನು, ಜರಾಸಂಧನು ಮೂರ್ಛೆಹೋದುದನ್ನು ಕಂಡು ಬಲರಾಮನ ಮೇಲೆ ಅಸ್ತ್ರವನ್ನು ಪ್ರಯೋಗಿಸಿ ಓಡಹತ್ತಿದನು. ಭಗವಾನ್ ಶ್ರೀಕೃಷ್ಣನು ಹೆದರಿ ಪಲಾಯನಗೈಯುತ್ತಿರುವ ಏಕಲವ್ಯನೊಡನೆ ಯುದ್ಧಮಾಡಲಿಚ್ಛಿಸದೆ, ಪುತ್ರನಾದ ಪ್ರದ್ಯುಮ್ನನನ್ನು ಕೂಡಲೇ ಸೃಷ್ಟಿಸಿದನು. ಅಂದರೆ ಸೃಷ್ಟಿಯ ಆದಿಯಲ್ಲಿ ತನ್ನ ಮನಸ್ಸಿನಿಂದ ಅವತರಿಸಿದ, ಅನಂತರ ಬ್ರಹ್ಮದೇವರ ಮನಸ್ಸಿನಿಂದ ಜನಿಸಿದ ಕಾಮನನ್ನು ಪ್ರದ್ಯುಮ್ನನೆಂಬ ಹೆಸರಿನಿಂದ ತತ್‌ಕ್ಷಣವೇ ಆ ಯುದ್ಧಭೂಮಿಯಲ್ಲಿ ತನ್ನ ಮನಸ್ಸಿನಿಂದ ಸೃಜಿಸಿದನು. ಪ್ರದ್ಯುಮ್ನನು ಮಹಾಸ್ತ್ರಗಳಿಂದ ಏಕಲವ್ಯನನ್ನು ತಾಡಿಸಿ ಅವನನ್ನು ನಿರಾಯುಧಗೊಳಿಸಿದನು. ಬಲರಾಮನು ತನ್ನ ರಥದಲ್ಲಿ ಕುಳಿತು ಜರಾಸಂಧನು ಮೂರ್ಛಿತನಾಗಿ ಬಿದ್ದಿದ್ದ ಕಡೆಗೆ ಹೋದನು. ಏಕಲವ್ಯನು ಪೂರ್ವದಲ್ಲಿ ಕ್ರೋಧವಶರೆಂಬ ರಾಕ್ಷಸರ ಗುಂಪಿನಲ್ಲಿ ಮಣಿಮಾನ್ ಎಂಬ ದೈತ್ಯನು, ಅವನೀಗ ನಿಷಾದ (ಕಿರಾತರ) ಜಾತಿಯಲ್ಲಿ ಜನಿಸಿದ್ದನು. ಅಂಥ ಏಕಲವ್ಯನನ್ನು ಕೃಷ್ಣಮಾನಸಪುತ್ರನಾದ ಪ್ರದ್ಯುಮ್ನನು ಜಯಿಸಿ ನಿರಾಯುಧಗೊಳಿಸಿದನು. ಆಗ ನಾಶರಹಿತ ಪರಾಕ್ರಮಶಾಲಿಯೂ ಉತ್ಪತ್ತಿರಹಿತನೂ ಆದ ಶ್ರೀಕೃಷ್ಣನು ತಾನು

ಸೃಷ್ಟಿಸಿದ್ದ ಪ್ರದ್ಯುಮ್ನನನ್ನು ಪುನಃ ತನ್ನ ಉದರದಲ್ಲಿ ಸೇರಿಸಿಕೊಂಡನು. ತರುವಾಯ ಸಮಸ್ತವಾದ ಮಗಧರಾಜನ ಬಲವನ್ನೂ ಶರಸಮೂಹದಿಂದ ನಾಶಪಡಿಸಿ ಕಾಂತಿರಹಿತನಾಗಿ ಕಂಗೆಟ್ಟು ನಿಂತಿದ್ದ ಜರಾಸಂಧನನ್ನು ನೋಡಿ "ಮಾಗಧೇಶ! ನಡೆ - ಮತ್ತೆ ದೊಡ್ಡ ಸೈನ್ಯದ ಸಮೇತನಾಗಿ ಯುದ್ಧಕ್ಕೆ ಬಾ" ಎಂದು ಹೇಳಿ ಅವನನ್ನು ಸಂಹರಿಸಲಿಚ್ಛಿಸದೆ ಉದಾರಹೃದಯದಿಂದ ಬಂಧನದಿಂದ ಬಿಡುಗಡೆ ಮಾಡಿದನು. ಪಾಪಾತ್ಮನಾದ ಆ ಜರಾಸಂಧನು ಕೃಷ್ಣನ ಮೇಲೆ ಯುದ್ಧಕ್ಕೆ ಬರುವಾಗ ಕಂಸ-ಪುತ್ರನಾದ ತನ್ನ ಪೌತ್ರನನ್ನು ಭೋಜಶ್ರೇಷ್ಠರ ಮಧುರಾರಾಜ್ಯಕ್ಕೆ ಅಧಿಪತಿಯೆಂದು ತಾನೇ ಪಟ್ಟಾಭಿಷೇಕ ಮಾಡಿ ಆ ಹುಡುಗನನ್ನು ಮುಂದುಮಾಡಿಕೊಂಡು ಬಂದಿದ್ದನು. ಈಗ ಯುದ್ಧದಲ್ಲಿ ಪರಾಜಿತನಾಗಿ ಲಜ್ಜೆಯಿಂದ ತಲೆತಗ್ಗಿಸಿ ನಿಂತಿದ್ದ ಕರ್ತವ್ಯಪರಿಜ್ಞಾನಶೂನ್ಯನಾದ ಆ ಪಾಪಾತ್ಮನು ತನ್ನ ಪೌತ್ರನೇ ಮಧುರಾರಾಜ್ಯದ ಅಧಿಪತಿಯೆಂದು ಘೋಷಿಸಿ ರಣರಂಗ-ದಿಂದ ತನ್ನ ರಾಜ್ಯಕ್ಕೆ ತೆರಳಿದನು.

ಹೀಗೆ ಅತ್ಯಂತ ಬಲವಂತನಾದ ಜರಾಸಂಧನನ್ನು ಜಯಿಸಿ ಬ್ರಹ್ಮರುದ್ರೇಂದ್ರಾದಿ ದೇವತೆಗಳು ಪರಮಾನಂದಭರಿತರಾಗಿ ಪುಷ್ಪವೃಷ್ಟಿ ಮಾಡುತ್ತಿರಲು, ತನ್ನವರಾದ ಸಮಸ್ತ ಜನರಡನೆ ಬಲರಾಮಸಹಿತನಾಗಿ, ಜಾಗ್ರತೆಯಾಗಿ ಮಧುರಾಪಟ್ಟಣವನ್ನು ಪ್ರವೇಶಿಸಿ ಉತ್ತಮರಾದ ಸಜ್ಜನ ಸಮೂಹದಿಂದ ವಂದ್ಯಮಾನಪಾದಾರವಿಂದನಾದ ಶ್ರೀವಾಸುದೇವನು ಕ್ರೀಡಿಸಿದನು.

ಪಾಂಡುಮಹಾರಾಜನ ಮಕ್ಕಳು ಅಭಿವೃದ್ಧಿಸುತ್ತಿರಲು ಸಹಸ್ರಾಕ್ಷನಾದ ಇಂದ್ರದೇವನ ಪುತ್ರನಾದ ಅರ್ಜುನನ ಜನ್ಮ-ನಕ್ಷತ್ರಸಹಿತವಾದ ಹದಿನಾಲ್ಕನೆಯ ವರ್ಷದ ಹುಟ್ಟಿದ ಹಬ್ಬವು ಬಂದೊದಗಿತು. ಅಂದು ನೀತಿಕೋವಿದಳಾದ ಕುಂತೀದೇವಿಯು ಅರ್ಜುನನ ವರ್ಧಂತ್ಯುತ್ಸವದ ಅಂಗವಾದ ಬಹುಕಾರ್ಯಗಳಲ್ಲಿ ಆಸಕ್ತಳಾಗಿ ಆ ವರ್ಧಂತಿಯಲ್ಲಿ ಭಾಗವಹಿಸಿದ ಅನೇಕ ಋಷಿಮುನಿಗಳಿಗೆ ದಿವ್ಯವಾದ ಭೋಜನವನ್ನೇರ್ಪಡಿಸಿ ಅವರೆಲ್ಲರಿಗೂ ಸ್ವತಃ ಮೃಷ್ಟಾನವನ್ನು ಬಡಿಸಿ ಮುದಗೊಳಿಸಿದಳು.

ಆ ಕಾಲದಲ್ಲಿ ನರಪತಿಯಾದ ಪಾಂಡುಮಹಾರಾಜನು ಗಂಡುಕೋಗಿಲೆ ಮತ್ತಿತರ ವಿವಿಧ ಪಕ್ಷಿಗಳಿಂದ ಸಂಕುಲಿತವಾದ, ಪುಷ್ಪರಾಜಿಗಳಿಂದ ವಿಕಸಿತವಾದ, ದರ್ಶನಮಾತ್ರದಿಂದ ಕಣ್ಮನಗಳಿಗೆ ಆನಂದವನ್ನೀಯುವ ಸುಂದರವನಪ್ರದೇಶವನ್ನು ಕಂಡು ವಸಂತಕಾಲೀನ ಮಂದಮಾರುತನ ಸ್ಪರ್ಶದಿಂದ ಉದ್ರಿಕ್ತನಾಗಿ ತನಗೆ ಮುನಿಶಾಪವಿರುವುದನ್ನೂ ವಿಚಾರಿಸದೆ, ಕೂಡಲೇ ಮನ್ಮಥನ ಶರಾಹುತಿಗೊಳಗಾದನು. (ಸೌರಮಾಸಾನುಸಾರವಾಗಿ ಒಮ್ಮೊಮ್ಮೆ ಫಾಲ್ಗುಣ ಮಾಸದಲ್ಲೂ ವಸಂತ-ಋತುವು ಬರುವುದುಂಟು.) ಶ್ರೀಹರಿಪರಮಾತ್ಮನ ಭಕ್ತನಾದ ಪಾಂಡುಮಹಾರಾಜನು ಮಾದ್ರೀದೇವಿಯನ್ನು ಸುರತ-ಕೇಳಿಗೆ ಬಲವಂತದಿಂದ ಒಡಂಬಡಿಸಿ ಅವಳೊಡನೆ ರಮಿಸುತ್ತಿರುವಾಗಲೇ ಮುನಿಶಾಪದಿಂದ ತಕ್ಷಣವೇ ಮೃತನಾಗಿ ಯಮಸದನಕ್ಕೆ ತೆರಳಿದನು. ರತಿಕಾಲದಲ್ಲಿ ಮೃತನಾಗಿದ್ದರೂ ಪಾಂಡುರಾಜನು ಸಮೀಚೀನ ಪುಣ್ಯಪ್ರಭಾವದಿಂದ ರಾಜರಿಂದ ಪ್ರಾಪ್ಯವಾದ ಯಮಸದನಕ್ಕೆ ಹೋದುದಕ್ಕೆ ಅವನ ಹರಿಪಾದಸಂಗಿತ್ವರೇ ಕಾರಣವೆಂದು ಅಭಿಪ್ರಾಯ.

ಪಾಂಡುರಾಜನು ರತಿಕಾಲದಲ್ಲಿ ಮೃತನಾಗಲು ಕಾರಣವಾದ ಮುನಿಶಾಪಕ್ಕಿಂತಲೂ ಮಹತ್ತರವಾದ ಮತ್ತೊಂದು ಕಾರಣ ಉಂಟೆಂದು ಈಗ ನಿರೂಪಿಸುತ್ತಾರೆ. ಪಾಂಡುರಾಜನ ಮೂಲರೂಪ 'ಪರಾವಹ' ಎಂಬ ಮರುತ್ತು. ಪೂರ್ವದಲ್ಲಿ ಈ ಪರಾವಹಮರುತ್ತು ಒಮ್ಮೆ ಇಂದ್ರದೇವನ ದರ್ಶನಕ್ಕಾಗಿ ಮಹೇಂದ್ರಭವನಕ್ಕೆ ಹೋದನು. ಆಗ ಇಂದ್ರನು ಶಚೀದೇವಿಯೊಡನೆ ಕ್ರೀಡಿಸಲು ಹಾತೊರೆಯುತ್ತಿದ್ದನು. ಪರಾವಹ ಮರುತ್ತು ಆ ಸಮಯದಲ್ಲೇ ಅಲ್ಲಿಗೆ ಹೋಗಿದ್ದರಿಂದ ಇಂದ್ರ-ಶಚಿಯರ ಕ್ರೀಡೆಗೆ ವಿಘ್ನವುಂಟಾಯಿತು. ಆ ಕಾರಣದಿಂದ ಈಗ ಪರಾವಹ ವಾಯುವು ಮಾನವನಾಗಿ ಪಾಂಡು-ರಾಜನೆಂಬ ಹೆಸರಿನಿಂದ ಹುಟ್ಟಿರುವಾಗ ಸ್ವಪತ್ನಿಯೊಡನೆ ರತಿಕಾರ್ಯಾಸಕ್ತನಾಗಿರುವಾಗಲೇ ಮರಣಹೊಂದಿದನು ಮತ್ತು ಔರಸಪುತ್ರರಹಿತನೂ ಅಂದರೆ ಸ್ವಂತಮಕ್ಕಳಿಲ್ಲದವನಾದನು.

ಅಲ್ಪಾಪರಾಧದಿಂದ ಮಹಾ ಅನರ್ಥಪ್ರಾಪ್ತಿ ಹೇಗಾಯಿತು? ಎಂದರೆ ನಿರೂಪಿಸುತ್ತಾರೆ. ಸ್ವೋತ್ತಮರಲ್ಲಿ ಅಂದರೆ ತನಗಿಂತ ಶ್ರೇಷ್ಠ ಗುಣವುಳ್ಳವರಲ್ಲಿ ಮಾಡಿದ ಅಪರಾಧವು ಅಲ್ಪವಾಗಿದ್ದರೂ ಆ ದೋಷವು ಫಲದಲ್ಲಿ ಮಹತ್ತಾಗಿ ತತ್ಫಲವಾಗಿ ಅಧಿಕಶಿಕ್ಷೆಗೆ ಪಾತ್ರರಾಗಬೇಕಾಗುತ್ತದೆ. ತನಗಿಂತ ಗುಣಾಧಿಕರಾದವರಲ್ಲಿ ಮಾಡಿದ ಅಪರಾಧಕ್ಕಿಂತಲೂ ದೇವತೆಗಳಲ್ಲಿ ಮಾಡಿದ ಸ್ವಲ್ಪವಾದ (ಅಲ್ಪದೋಷವೂ) ಅಪರಾಧವು ಬಹಳವಾಗುತ್ತದೆ. ಆದಕಾರಣದಿಂದ ಪಾಂಡುರಾಜನಿಗೆ ಮಾನುಷತ್ವ ಔರಸಪುತ್ರಾಭಾವಗಳುಂಟಾದುದು (ಅಂದರೆ ಸ್ವಂತವಾಗಿ ಮಕ್ಕಳಿಲ್ಲದಂತಾದುದು) ಯುಕ್ತವೇ ಎಂದರಿಯಬೇಕು.

ಇತ್ತ ಪತಿಯು ಮರಣಹೊಂದಿದ್ದನ್ನು ಕಂಡು ಶೋಕನಿರ್ಭರಳಾದ ಮಾದ್ರೀದೇವಿಯು ಅತಿದುಃಖದಿಂದ ರೋದಿಸಹತ್ತಿದಳು. ಅವಳ ರೋದನ ಪ್ರಲಾಪಗಳು ದೂರದಲ್ಲಿದ್ದ ಕುಂತೀದೇವಿ ಮತ್ತು ಪಾಂಡುಕುಮಾರರು ಕೇಳಿದರು. ಏನೋ ವಿಪತ್ತುಂಟಾಗಿದೆಯೆಂದೂ ಕುಂತೀದೇವಿಯು ಅತ್ತ ಹೊರಟಾಗ ಪಾಂಡುಪುತ್ರರೂ ಅವಳೊಡನೆ ಹೊರಡಲು ಆಶಿಸಿದರು. ಮಾದ್ರೀದೇವಿಯು ಹುಡುಗರನ್ನು ಕರೆತರಬಾರದೆಂದೂ, ಕುಂತಿಯೊಬ್ಬಳೇ ಬರಬೇಕೆಂದೂ ಹೇಳಿದ್ದರಿಂದ ಪಾಂಡವರನ್ನು ಅಲ್ಲಿಯೇ ಇರುವಂತೆ ಹೇಳಿ ಕುಂತಿಯು ತಾನೊಬ್ಬಳೇ ಮಾದ್ರಿಯಿದ್ದಲ್ಲಿಗೆ ಧಾವಿಸಿದಳು. ಅಲ್ಲಿ ಪತಿಯು ಮೃತನಾಗಿರುವುದನ್ನು ಕಂಡು ಮಾದ್ರೀದೇವಿಯಿಂದ ಜರುಗಿದ ಸಮಸ್ತವೃತ್ತಾಂತವನ್ನೂ ಕೇಳಿ ತಿಳಿದು ಅತ್ಯಂತ ದುಃಖಿತ-ಹೃದಯಕಮಲವುಳ್ಳವಳಾಗಿ ಮಾದ್ರೀದೇವಿಯನ್ನು ಧಿಕ್ಕರಿಸಿ, ಪತಿಮರಣದಿಂದ ಶೋಕತಪ್ತಳಾಗಿ ತಾನೂ ಪತಿಯೊಡನೆ ಸಹಗಮನ ಮಾಡಲು ನಿಶ್ಚಯಿಸಿದಳು. ಕುಂತೀದೇವಿಯೂ ಮಾದ್ರೀದೇವಿಯೂ ದುಃಖಾರ್ತರಾಗಿ ರೋದಿಸುತ್ತಿರಲು ಆ ರೋದನಧ್ವನಿಯನ್ನು ದೂರದಲ್ಲಿದ್ದ ಪಾಂಡವರು ಆಲಿಸಿದರು ಮತ್ತು ಜನಕನು ಮೃತನಾದನೆಂದು ತಿಳಿದು ದುಃಖದಿಂದ ಅವರು ಅಳಹತ್ತಿದರು. ಇವರೆಲ್ಲರ ರೋದನ ಧ್ವನಿಯು ಎಲ್ಲಕಡೆ ಕೇಳುತ್ತಿತ್ತು. ಆಗ ಋಷಿಗಳ ಮಧ್ಯದಲ್ಲಿ ದಯಾಶಾಲಿಗಳಾದ ಅನೇಕ ಮುನಿಪುಂಗವರು ಕೂಡಲೇ ಅಲ್ಲಿಗೆ ಭರದಿಂದ ಬಂದು ವಿಷಯವನ್ನು ಅರಿತರು. ಆಗ ಕುಂತೀ-ಮಾದ್ರಿಯರು ಪತಿಯೊಡನೆ ಸಹಗಮನಕ್ಕಾಗಿ ಸ್ಪರ್ಧಿಸಹತ್ತಿದರು. ಉತ್ತಮ ಭಾಗವತಧರ್ಮತಜ್ಞರಾದ ಋಷಿಶ್ರೇಷ್ಠರು ಕುಂತೀದೇವಿಯನ್ನು ತಡೆಹಿಡಿದು, ಮಾದ್ರೀದೇವಿಯ ಕಾರಣದಿಂದಾದ ಪಾಂಡುರಾಜನ ಮರಣವಿಚಾರ, ಆ ಸಂದರ್ಭಗಳನ್ನು ತಿಳಿದು ವಿಚಾರಮಾಡಿ, ತನ್ನ ಅಪರಾಧದಿಂದಾಗಿ ಪತಿಯು ಮೃತನಾದುದರಿಂದ ತಾನೇ ಪತಿಯೊಡನೆ ಸಹಗಮನ ಮಾಡಬೇಕೆಂದೂ, ಅದಕ್ಕೆ ಅಪ್ಪಣೆ ನೀಡಬೇಕೆಂದೂ ಬಾರಿಬಾರಿಗೂ ಪ್ರಾರ್ಥಿಸುತ್ತಿರುವ ಮಾದ್ರೀದೇವಿಗೆ ಸಹಗಮನಕ್ಕೆ ಅಪ್ಪಣೆಯನ್ನು ದಯಪಾಲಿಸಿದರು.

ಪಾಂಡುರಾಜನ ಮೂಲಸ್ವರೂಪ ಪರಾವಹವಾಯುವು. ಅವನೇ ಈಗ ಪಾಂಡುರಾಜನಾಗಿ ಜನಿಸಿದ್ದನು. ಇಂತು ಉತ್ತಮನಾದ ಪರಾವಹ ವಾಯುವಿನ ಅವತಾರನಾದ ಪಾಂಡುರಾಜ ಗುಣದಲ್ಲಿ ಶ್ರೇಷ್ಠನು, ಗುಣಾಧಿಕನಾದ ಪತಿಯಾದ ಪಾಂಡುರಾಜನಿಗಿಂತ ಗುಣದಲ್ಲಿ ಅಧಿಕರಲ್ಲದ (ಸಮ-ನೀಚರಾದವರನ್ನು), ಆದರೆ ತನಗಿಂತ ಗುಣಾಧಿಕರಾದ ಸುರೋತ್ತಮರಾದ ಅಶ್ವಿನೀದೇವತೆಗಳನ್ನು ಪುತ್ರರಿಗಾಗಿ ಮಾದ್ರಿಯು ಸ್ವೀಕರಿಸಿದಳು. ಅಂತೆಯೇ ಪತಿಗಿಂತ ಅಧಿಕರಲ್ಲದವರನ್ನು ಸ್ವೀಕರಿಸಿದ ದೋಷದಿಂದಲೇ ಪತಿಯ ಮರಣಕ್ಕೆ ಕಾರಣವಾಯಿತು. ಆದ್ದರಿಂದಲೇ ಮಾದ್ರೀದೇವಿಯು ಸುಗುಣೆಯಾದರೂ ಸಕಲ ಜನರಿಂದ ಅವಳು ಚೆನ್ನಾಗಿ ಪೂಜ್ಯಳಾಗಲಿಲ್ಲ.

ಅನಂತರ ಪಾಂಡುಕುಮಾರರು ವ್ಯಾಸಾಶ್ರಮದಲ್ಲಿ ಮುನಿಗಣಸಹಿತರಾಗಿ ತಂದೆಯ ದೇಹದಾಹನರೂಪ ಯಜ್ಞವನ್ನು ಅಂದರೆ ಪಿತೃಮೇಧವನ್ನು ವಿಧ್ಯುಕ್ತಪ್ರಕಾರಕವಾಗಿ ನೆರವೇರಿಸಿದರು. ಮಾದ್ರೀದೇವಿಯು ಚಿತೆಯಮೇಲೆ ಕುಳಿತು ದಹನ-ವಾಗುತ್ತಿರುವ ಪತಿಯ ದೇಹದೊಡನೆ ತನ್ನ ದೇಹವನ್ನೂ ಹೋಮರೂಪವಾಗಿ ದಹಿಸಿಕೊಂಡು ಈ ಜನ್ಮದಲ್ಲಿ ಮಾಡಿದ ಅಲ್ಪಪ್ರಾಯವಾದರೂ ಅಪರಿಹಾರ್ಯವಾದ ಪಾಪವನ್ನು, ಅಂದರೆ ಅಶ್ವಿನೀದೇವತೆಗಳ ಸಂಬಂಧಜನ್ಯ ಪಾಪದಿಂದುಂಟಾದ

ಪತಿಮರಣ ಕಾರಣರೂಪ ಪಾಪವನ್ನು ತೊಳೆದುಕೊಂಡು ತನ್ನ ಪತಿಲೋಕವನ್ನೇ ಸೇರಿದಳು. ("ವರಂ ಸಮಾಶ್ರಿತಾಂ ಪತಿಂ" ಮುಂತಾಗಿ ಹೇಳಿದ್ದು ದೇಹಹಾನಿ ಪ್ರಾಯಶ್ಚಿತ್ತವನ್ನೇ ಕುರಿತು ಎಂದು ತಿಳಿಯಬೇಕು.)

ಇಂದ್ರಾಪರಾಧದಿಂದ ಅಶುಚಿತ್ವ ಸಮಯದಲ್ಲಿ ಅಂದರೆ ಅಶುದ್ಧವಾದ ರತಿಕಾಲದಲ್ಲಿ ಮೃತನಾದ ಪಾಂಡುವಿಗೆ ಉತ್ತಮಲೋಕಪ್ರಾಪ್ತಿ ಹೇಗಾಯಿತು? ಎಂಬ ಸಂದೇಹಕ್ಕೆ ಉತ್ತರವನ್ನು ಹೇಳುತ್ತಾರೆ. ಪಾಂಡುಮಹಾರಾಜನು ಸಾಕ್ಷಾನ್ನಾರಾಯಣಾವತಾರರಾದ ಶ್ರೀವೇದವ್ಯಾಸದೇವರ ಸಾಕ್ಷಾತ್ ಪುತ್ರನು ಮತ್ತು ಅವನು ಸರ್ವದಾ ಶ್ರೀಕೃಷ್ಣನ ಭಕ್ತನು. ಆದ್ದರಿಂದ ಅವನು ಗುಣಾಢ್ಯರಾದ ಪುತ್ರರ ಗುಣದಿಂದ ಮತ್ತು ತನ್ನ ಗುಣದಿಂದಲೂ ಸಹ ಶ್ರೇಷ್ಠಪುರುಷರಿಂದ ಪೂಜ್ಯವಾದ, ಆದ್ದರಿಂದಲೇ ದೋಷರಹಿತವಾದ ಉತ್ತಮಲೋಕವನ್ನು ಹೊಂದಿದನು. ಅಂತೆಯೇ ಶ್ರೀಹರಿಯ ಪಾದಕಮಲಗಳಲ್ಲಿ ವಿನಮ್ರಚಿತ್ತನಾದ ಪಾಂಡುರಾಜನು ಉತ್ತಮಲೋಕವನ್ನು ಪಡೆದುದು ಆಚ್ಚರಿಯೇನಲ್ಲ ಎಂದು ಭಾವ.

ಅನಂತರ ಪಾಂಡವರು ತಾಯಿಯಾದ ಕುಂತೀದೇವಿಯೊಡನೆ ನಾರಾಯಣಾಶ್ರಮದಿಂದ ಮುನಿಪುಂಗವರೊಡನೆ ಹೊರಟು ಕೆಲದಿನಗಳಲ್ಲಿ ತಮ್ಮೂರಾದ ಹಸ್ತಿನಾವತಿಗೆ ಬಂದು ಸೇರಿದರು. ಮುನಿಗಳು ಧೃತರಾಷ್ಟ್ರನನ್ನು ಕಂಡು ಅವನ ಮುಂದೆ ನಡೆದ ಸಕಲ ಸಮಾಚಾರಗಳನ್ನು ನಿರೂಪಿಸಿ ಪಾಂಡುರಾಜನು ಮೃತರಾದ ವಿಷಯವನ್ನೂ ತಿಳಿಸಿದರು. ಅದನ್ನು ಕೇಳಿ ಧೃತರಾಷ್ಟ್ರ ಮತ್ತು ಭೀಷ್ಮಾಚಾರ್ಯರುಗಳು ಏನೂ ಉತ್ತರ ಹೇಳದೆ ತೂಷ್ಣೀಭಾವವನ್ನು ವಹಿಸಿದರು. ವಿದುರನು ಮಾತ್ರ ಪಾಂಡುಕುಮಾರರ ಆಗಮನದಿಂದ ಹರ್ಷಭರಿತನಾದನು. ಆಗ ಪಾಪಿಗಳಾದ, ಶಕುನಿಯಿಂದೊಡಗೂಡಿದ ಧೃತರಾಷ್ಟ್ರನ ಪುತ್ರರಾದ ಧುರ್ಯೋಧನಾದಿಗಳು "ಪಾಂಡುರಾಜನು ಹಿಂದೆಯೇ ಮರಣ ಹೊಂದಿದನು. ಅವನಿಗೆ ಮಕ್ಕಳೇ ಇರಲಿಲ್ಲ. ಅಂದಮೇಲೆ ಈಗೆಲ್ಲಿ ಬಂದರು? ಹೋಗಲಿ; ಔರಸಪುತ್ರರಲ್ಲದಿದ್ದರೂ ಕ್ಷೇತ್ರಜರಾಗಿ ಇವರು ಪಾಂಡುಪುತ್ರರು ಎಂದಾದರೆ, ಪತಿಯು ಮೃತನಾದ ಮೇಲೆ ಪ್ರೀತಿಪೂರ್ವಕವಾಗಿ ಸ್ವಬಾಂಧವರಿಂದ ನಿಯೋಗಕ್ಕೆ ಅಪ್ಪಣೆ ಪಡೆಯದೆಯೇ, ಪತಿಯ ಕ್ಷೇತ್ರದಲ್ಲಿಯೇ (ಕುಂತಿಯಲ್ಲಿ) ಮತ್ತೊಬ್ಬರಿಂದ ಜನಿಸಿದರೂ ಯದ್ಯಪಿ ಕ್ಷೇತ್ರಜರಾಗಿದ್ದರೂ ಅಂಥವರು ಆ ವಂಶಕ್ಕೆ ಯೋಗ್ಯರಾಗಲಾರರು. ಅಥವಾ ಪತಿಯು ಮೃತನಾಗಿರಲು ನಿಯೋಗದಿಂದಲ್ಲದೆ ಹುಟ್ಟಿದ್ದ ಮಕ್ಕಳು ಕ್ಷೇತ್ರಜರಾದರೂ ಅವರ ಜನಕನ ಕುಲಕ್ಕೆ ಯೋಗ್ಯರಾಗಲಾರರು. ಆದ್ದರಿಂದ ಇವರು ಪಾಂಡುವಿನ ಕ್ಷೇತ್ರಜರಾದ ಪುತ್ರರೂ ಆಗಲಾರರು" ಮುಂತಾಗಿ ಹೇಳಿದರು. ದುರ್ಯೋಧನಾದಿಗಳು ಹೀಗೆ ಹೇಳುತ್ತಿರುವಾಗಲೇ ಗಗನಸ್ಥನಾದ ವಾಯುದೇವನು ಕೌರವರನ್ನು ಕುರಿತು ಹೀಗೆ ಹೇಳಿದನು - "ಉತ್ಕೃಷ್ಟಗಳಾದ ಭಗವತ್ಪ್ರೀತಿಕರವಾದ ಧರ್ಮಶೀಲರಾದ, ಅಂತೆಯೇ ಅತ್ಯಂತ ಶ್ರೇಷ್ಠರಾದ ಯಮ-ವಾಯು-ಇಂದ್ರ-ಅಶ್ವಿನೀ ದೇವತೆಗಳ ವರದಿಂದ ಜನಿಸಿದ ಈ ಪಾರ್ಥರು ಮತ್ತು ಮಾದ್ರೀಸುತರು, ಪಾಂಡುರಾಜನು ಪ್ರಕೃಷ್ಟಜ್ಞಾನಾವಯವಯುಕ್ತನಾಗಿ ಜೀವಿಸಿರುವಾಗಲೇ, ಅಂದರೆ ಪಾಂಡುರಾಜನು ಬದುಕಿರುವಾಗಲೇ ಅವನ ಅಪೇಕ್ಷೆಯಂತೆಯೇ ಇವರೆಲ್ಲರೂ ಅವತರಿಸಿದ್ದಾರೆ. ಆದ್ದರಿಂದ ಈ ರಾಜಕುಮಾರರು ಪಾಂಡುಪುತ್ರರೇ ಅಹುದು. ಇವರನ್ನು ನೀವು ಬಿಡಲು ಸ್ವಲ್ಪವೂ ಸಾಧ್ಯವಿಲ್ಲ. ಏಕೆಂದರೆ ಪವಿತ್ರಾತ್ಮರಾದ ಇವರು ನಿಮ್ಮ ಪಿತಾಮಹರಾದ ಶ್ರೀವೇದವ್ಯಾಸ-ದೇವರಿಂದ ಮತ್ತು ಅಂದರೆ ಶ್ರೀನಾರಾಯಣ(ಮೂಲರೂಪ)ನಿಂದಲೂ ಸರ್ವದಾ, ಈ ಅವತಾರಕಾಲದಲ್ಲಿಯೂ, ಮುಕ್ತಿಯಲ್ಲಿಯೂ ಸಹ, ಸಂರಕ್ಷಿತರಾಗಿದ್ದಾರೆ. ಆದ್ದರಿಂದ ಇವರನ್ನು ನೀವು ಖಂಡಿತ ಸ್ವೀಕರಿಸಬೇಕು" ಹೀಗೆ ಆಕಾಶ-ವಾಣಿಯಾಯಿತು. ಅದೃಶ್ಯರೂಪದಿಂದ ಹೀಗೆ ಆಕಾಶವಾಣಿಯಾದುದನ್ನು ಕೇಳಿ ಇದನ್ನು ಹೇಗೆ ನಂಬುವುದು? ಎಂದು ಕೌರವಾದಿಗಳು ಶಂಕಿತರಾಗಿರುವಾಗ ಅಮಿತಸದ್ಗುಣೈಕದೇಹನೂ, ಕಮಲನಾಭನೂ, ಶ್ರೀವೇದವ್ಯಾಸ ರೂಪಿಯೂ ಆದ ಸಾಕ್ಷಾತ್ ಭಗವಾನ್‌ಶ್ರೀಹರಿಯು ಕೂಡಲೇ ಆವಿರ್ಭವಿಸಿ ಪಾಂಡುಕುಮಾರನನ್ನು ಪ್ರೀತಿಯಿಂದ ಕೈಪಿಡಿದು ಕರೆತಂದು "ಇವರು ಪಾಂಡುಕುಮಾರರು. ಇವರನ್ನು ಸ್ವೀಕರಿಸಿ" ಎಂದು ಹೇಳಿದನು. ಕೂಡಲೇ ಭೀಷ್ಮಾಚಾರ್ಯರೇ ಮೊದಲಾದವರು,

ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರ ಸಹಿತರಾಗಿ, ಕುಂತೀದೇವಿಯನ್ನೂ ಸನ್ಮಾನಿಸಿ ಅವರನ್ನು ಆದರದಿಂದ ಸ್ವೀಕರಿಸಿದರು. ಆಗ ಶಕುನಿ ಸಹಕೃತರಾದ ಧೃತರಾಷ್ಟ್ರಪುತ್ರರಾದ ದುರ್ಯೋಧನಾದಿಗಳು, ಪಾಂಡವರು ರಾಜ್ಯಕ್ಕೆ ಭಾಗಿಗಳಾಗಿ ಬಂದು ಸೇರಿದರಲ್ಲ ಎಂದು ಬಹುವಾಗಿ ದುಃಖಾರ್ತರಾದರು. ಅನಂತರ ವಿವಿಧ ಬಾಲಕ್ರೀಡೆಗಳನ್ನು ಮಾಡುತ್ತಾ ಪಾಂಡವರು ಕೃಪಾಚಾರ್ಯರಿಂದ ದುರ್ಯೋಧನಾದಿಗಳ ಜೊತೆಯಲ್ಲಿ ಸಕಲ ರಾಜಕುಮಾರರೊಡನೆ ಶಸ್ತ್ರಾಸ್ತ್ರವಿದ್ಯೆಯನ್ನು ಕಲಿತು ಅನೇಕ ಮಹಾಸ್ತ್ರಗಳನ್ನು ಪಡೆದರು. ಪಾಂಡವರು, ಧಾರ್ತರಾಷ್ಟ್ರರು, ಇನ್ನಿತರ ರಾಜಕುಮಾರರೊಡನೆ ವಿವಿಧ ಬಾಲ-ಕ್ರೀಡೆಗಳನ್ನಾಡುತ್ತಾ ಶಸ್ತ್ರಾಭ್ಯಾಸ ಮಾಡಿದರು. ಮತ್ತು ವಾಯುನಂದನನಾದ ಭೀಮಸೇನನು ವಿವಿಧ ಆಟಪಾಟಗಳಲ್ಲಿ ದುರ್ಯೋಧನಾದಿಗಳನ್ನು ಸುಲಭವಾಗಿ ಜಯಿಸುತ್ತಿದ್ದನು.

. ಕೌರವರನ್ನು ಭೀಮಸೇನನು ಪರಾಭವಗೊಳಿಸುವ ಪ್ರಕಾರವನ್ನೀಗ ನಿರೂಪಿಸುತ್ತಾರೆ –

ಪಾಂಡವರು ಕೌರವರು ಇತರ ರಾಜಪುತ್ರರು ಪ್ರತಿದಿನ ವಿವಿಧ ಆಟಪಾಟಗಳನ್ನಾಡುತ್ತಿದ್ದರು. ಪಕ್ವವಾದ ಫಲಗಳನ್ನು ತಿನ್ನುವ ಆಸೆಯಿಂದ ದುರ್ಯೋಧನಾದಿಗಳು ಫಲಭರಿತವಾದ ಮರಗಳ ಮೇಲೆ ಹತ್ತಿ ಕುಳಿತು ಆನಂದದಿಂದ ಹಣ್ಣುಗಳನ್ನು ತಿನ್ನುತ್ತಿದ್ದರೆ, ಭೀಮಸೇನನು ಆ ಮರವನ್ನೇ ತನ್ನ ಪಾದಾಘಾತದಿಂದ ಅಲುಗಾಡಿಸುತ್ತಿದ್ದನು. ಆಗ ಗಿಡದಲ್ಲಿರುವ ಹಣ್ಣುಗಳೆಲ್ಲ ಪಟಪಟನೆ ಉದುರಿ ಬೀಳುತ್ತಿತ್ತು. ಮರದ ಮೇಲೆ ಕುಳಿತಿದ್ದ ದುರ್ಯೋಧನ ಮುಂತಾದವರೂ ಕೆಳಗೆ ಉರುಳಿ ಬೀಳುತ್ತಿದ್ದರು. ಆಗ ಭೀಮನು ನಗುನಗುತ್ತಾ ಆ ಎಲ್ಲ ಫಲಗಳನ್ನು ತಾನೇ ತಿನ್ನುತ್ತಿದ್ದನು. ಯುದ್ಧದಲ್ಲಿ, ಇಬ್ಬಗೆಯ ಯುದ್ಧ, ಬಾಹುಯುದ್ಧ, ಮುಷ್ಟಿಯುದ್ಧ, ಓಡುವುದರಲ್ಲಿ, ಹಾರುವುದು, ಮೇಲೆಗರುವುದು, ಅಥವಾ ಮೇಲಿನಿಂದ ಕೆಳಗೆ ಧುಮುಕುವುದು, ನದಿಯಲ್ಲಿ ಈಜುವುದರಲ್ಲಿ, ಜಲವನ್ನು ಬಾಹು-ಕರಾಘಾತಗಳಿಂದ ಮೇಲೆಗರಿಸುವುದೇ ಮುಂತಾದ ಸಕಲ ವಿಧ ಕ್ರೀಡೆಗಳಲ್ಲಿಯೂ ಪೂಜ್ಯಕರ್ಮನಿಷ್ಠನಾದ ಭೀಮನೊಬ್ಬನೇ ಆ ಸಕಲ ಕೌರವರು ಮತ್ತು ಇತರ ರಾಜಪುತ್ರರನ್ನು ಶೀಘ್ರವಾಗಿ, ಸುಲಭವಾಗಿ ಜಯಿಸುತ್ತಿದ್ದನು. ಶ್ರೀ ವಿಷ್ಣುವಿನ ಸಂಪೂರ್ಣ ಅನುಗ್ರಹವು ಶ್ರೀ ಭೀಮಸೇನದೇವರಲ್ಲಿ ಸದಾಸರ್ವದಾ ಇರುವುದರಿಂದ, ದುರ್ಯೋಧನಾದಿಗಳನ್ನೂ ಮತ್ತು ಸಕಲ ರಾಜಪುತ್ರರನ್ನೂ ಏಕಾಕಿಯಾಗಿ ಶಕ್ತಿ, ಬಲ-ಸಂಪನ್ನರಾಗಿ, ಸುಲಭವಾಗಿ ಜಯಿಸಲು ಸಮರ್ಥರಾದರು ಎಂದು ತಿಳಿಯಬೇಕು. ಶ್ರೇಷ್ಠಪೌರುಷ ಸಂಪನ್ನನಾದ ಭೀಮಸೇನನು ನದಿಯಲ್ಲಿ ಆಡುತ್ತಿರುವಾಗ ಸರ್ವರನ್ನೂ ತನ್ನ ಬಾಹುಗಳಲ್ಲಿ ಬಂಧಿಸಿ ನದಿಯಲ್ಲಿ ಮುಳುಗಿಸುತ್ತಿದ್ದನು. ಆಗ ಅನೇಕರು ಶ್ರಾಂತರಾಗಿ, ಆರ್ತರಾಗಿ, "ಭೀಮಸೇನ! ನಮ್ಮನ್ನು ಬಿಟ್ಟುಬಿಡಪ್ಪಾ" ಎಂದು ಅಂಗಲಾಚಿದರೆ, ಪ್ರಾರ್ಥಿಸಿದರೆ ಅಂತಹರವನ್ನು ದಯೆಯಿಂದ ಬಿಟ್ಟು ಗಹಗಹಿಸಿ ನಗುತ್ತಿದ್ದನು. ಕೆಲವೊಮ್ಮೆ ಪೂರ್ಣಪ್ರವಾಹದಿಂದ ಮೇರೆಮೀರಿ ಹರಿಯುವ ಗಂಗಾನದಿಯಲ್ಲಿ ಈಜುತ್ತಾ ಸುಲಭವಾಗಿ ಆಚೆ ದಂಡೆಯನ್ನು ಸೇರುತ್ತಿದ್ದನು. ಹೀಗೆ ಅನಂತಬಲ-ಪರಾಕ್ರಮ ಸಂಪನ್ನನಾದ ಭೀಮನು ಎಲ್ಲ ಕ್ರೀಡೆಗಳಲ್ಲಿಯೂ ಅಗ್ರಗಣ್ಯನಾಗಿ ಸರ್ವರನ್ನೂ ಜಯಿಸಿ ಮೆರೆಯುತ್ತಿದ್ದನು. ಸರಿ, ಭೀಮಸೇನನು ಹಾಗೇಕೆ ಮಾಡುತ್ತಿದ್ದನು? ಎಂದರೆ ಕಾರಣ ನಿರೂಪಿಸುತ್ತಾರೆ : ದೇವತೆಗಳನ್ನು ದ್ವೇಷಿಸುವ ಅಸುರರಿಗೆ ಶ್ರೀ ಹರಿ ಮತ್ತು ವಾಯುದೇವರಲ್ಲಿ ಯಾವಾಗಲೂ ಪರಮದ್ವೇಷವುಂಟು. ಆ ಅಸುರರು ಶ್ರೀಹರಿ-ವಾಯುಗಳಲ್ಲಿ ದ್ವೇಷಮಾಡದ ವಿನಃ ಅವರಿಗೆ ತಮಸ್ಸಿನಲ್ಲಿ ಪ್ರವೇಶವಿಲ್ಲ. ಅದಕ್ಕಾಗಿಯೇ ಶ್ರೀಹರಿ-ವಾಯುಗಳು ಶ್ರೀಕೃಷ್ಣಭೀಮರಾಗಿ ಒಟ್ಟಿಗೆ ಭೂಮಿಯಲ್ಲಿ ಅವತರಿಸಿದ್ದಾರೆ. ಅವರು ಮಹಾಬಲಸಮನ್ವಿತರು.ಅವರು ಸರ್ವದಾ ವಿಸ್ತಾರವಾದ, ಪೂರ್ಣವಾದ, ನಿರ್ದುಷ್ಟವಾದ (ಮಂತ್ರಾದಿ ಸಾಮರ್ಥ್ಯಗಳಿಂದ ಬಂದದ್ದಲ್ಲದೆ) ಸ್ವಾಭಾವಿಕವಾದ ಬಲ-ಗುಣ ಪೂರ್ಣರು. ಆದ್ದರಿಂದರೇ ಪರಮಶ್ರೇಷ್ಠವಾದ ಶ್ರೀಕೃಷ್ಣ-ಭೀಮಸೇನದೇವರು ಭೂಮಿಯಲ್ಲಿ ಅವತರಿಸಿ ಅಸುರರು ತಮ್ಮಲ್ಲಿ ದ್ವೇಷಮಾಡುವಂಥ ಕರ್ಮ(ಕಾರ್ಯ)ಗಳನ್ನು ಮಾಡಿ ಅಸುರರಿಗೆ ಸಾಧನಮಾಡಿಸುತ್ತಿದ್ದಾರೆ ಎಂದು ತಿಳಿಯಬೇಕು.

ವಾಯುಪುತ್ರನಾದ ಭೀಮಸೇನನು ಪ್ರತಿದಿನವೂ ಮಾಡುತ್ತಿರುವ ಅಮಿತವಾದ ವಿಧವಿಧ ಕ್ರೀಡೆಗಳನ್ನು ಕಂಡು, ಅಮಿತಬಲ ಪರಾಕ್ರಮಗಳನ್ನು ನೋಡಿ ನೋಡಿ ಕಡುನೊಂದು ದುರ್ಯೋಧನಾದಿಗಳೂ ಅವನಿಗೆ ಹಿತರಾದ ರಾಜಪುತ್ರರೂ ತತ್ತರಿಸಹತ್ತಿದರು. ಇದರಿಂದ ಅವರಿಗೆ ಭೀಮಸೇನನ ಮೇಲೆ ದಿನೇದಿನೇ ದ್ವೇಷವು ಅಭಿವೃದ್ಧಿಸಹತ್ತಿತು. ಆದ್ದರಿಂದ ಅವರೆಲ್ಲರೂ ಸೇರಿ ಹೇಗಾದರೂ ಮಾಡಿ ಭೀಮಸೇನನನ್ನು ನಾಶಪಡಿಸಬೇಕೆಂದು ಏಕಾಂತದಲ್ಲಿ ಮಂತ್ರಾಲೋಚನೆ ಮಾಡಿದರು. ಆಗ ಯಾರು ಯಾರು ದೇವತೆಗಳ ಅಂಶದಿಂದ ಅವತರಿಸಿದ್ದರೋ ಅಂಥ ರಾಜಪುತ್ರರೆಲ್ಲರೂ ವಾಯು-ನಂದನನಾದ ಭೀಮಸೇನನನ್ನು ಅಧಿಕವಾಗಿ ಪ್ರೀತಿಸುತ್ತಾ ಅವನ ಪಕ್ಷವಹಿಸಿ ಅವನಿಗೆ ಅನುಕೂಲರಾಗಿ ವರ್ತಿಸಹತ್ತಿದರು. ಆಯಾ ದೇವಾಂಶಯುಕ್ತರಾಗಿ ಭೀಮಸೇನಪರರಾದ ರಾಜಪುತ್ರರನ್ನು ಬಿಟ್ಟು ಉಳಿದ ರಾಜವಂಶದಲ್ಲಿ ಜನಿಸಿದ ಸುರದ್ವೇಷಿಗಳಾದ ದೈತ್ಯರು (ಅಂದರೆ ದೈತ್ಯಾಂಶಯುಕ್ತರಾದ ರಾಜಪುತ್ರರು) ಭೀಮಸೇನದೇವರನ್ನು ಸಂಹರಿಸಲು ನಿಶ್ಚಯ ಮಾಡಿದರು. "ಅತ್ಯಂತ ಬಲಾಢ್ಯನಾದ ಭೀಮಸೇನನನ್ನು ಸ್ವಶಕ್ತಿಯಿಂದ ಅಥವಾ ಸರಿಯಾದಮಾರ್ಗದಿಂದ ಸಂಹರಿಸಲು ಸಾಧ್ಯವಿಲ್ಲ. ಆದ್ದರಿಂದ ಭೀಮಸೇನನನ್ನು ಹೇಗಾದರೂ ಮಂತ್ರ-ಔಷಧಿ ಮುಂತಾದ ಛದ್ಮಪ್ರಯೋಗ (ವಿಷಪ್ರಯೋಗ) ಮುಂತಾದ ಮಾರ್ಗದಿಂದ ಸಂಹಾರ ಮಾಡಬೇಕು. ಹಾಗೂ ನಾವೆಲ್ಲರೂ ಒಟ್ಟಾಗಿ ಇಂದ್ರಪುತ್ರನಾದ ಅರ್ಜುನನನ್ನು ಶೌರ್ಯದಿಂದ ಸಂಹರಿಸಬೇಕು. ಆಗ ಉಳಿದ ಧರ್ಮರಾಜಾದಿಗಳನ್ನು ಸುಲಭವಾಗಿ ಸೆರೆ ಹಿಡಿದು ಕಾರಾಗೃಹಕ್ಕೆ ಹಾಕಿದರೆ ದುರ್ಯೋಧನನಿಗೆ ಪ್ರಾಪ್ತವಾಗಿರುವ ಕಂಟಕ ಪರಿಹಾರವಾಗಿ ಅವನು ರಾಜ್ಯಕ್ಕೆ ಅಧಿಪತಿಯಾಗಲು ಸಾಧ್ಯವಾಗುತ್ತದೆ. ಬೇರೆ ವಿಧದಿಂದ ಅವನ ಮಾರ್ಗದಲ್ಲಿರುವ ಕಂಟಕ ನಿವಾರಣೆಯಾಗುವುದಿಲ್ಲ. ಆದ್ದರಿಂದ ಭೀಮನು ಹತನಾದರೆ, ಅರ್ಜುನನನ್ನು (ಬಲಿಹಾಕಿ) ಬೀಳಿಸಿದರೆ, ಬಾಕಿ ಧರ್ಮರಾಜಾದಿಗಳು ದುರ್ಯೋಧನನ ದಾಸರಾಗುತ್ತಾರೆ." ಹೀಗೆ ಆ ಪಾಪಿಗಳೆಲ್ಲರೂ ದುರಾಲೋಚನೆ ಮಾಡಿ ತೀರ್ಮಾನಿಸಿ, ಶುಕ್ರಾಚಾರ್ಯರು ರುದ್ರದೇವರನ್ನು ಒಲಿಸಿ ಅವರ ಪ್ರಸಾದದಿಂದ ಪಡೆದಿರುವ, ಆ ಶುಕ್ರಾಚಾರ್ಯರನ್ನು ಸಂತೋಷಪಡಿಸಿ ಶಕುನಿಯು ಸಂಪಾದಿಸಿರುವ, ಮೃತ್ಯುಸದೃಶವಾದ ಕ್ಷೀರಸಮುದ್ರಮಥನಕಾಲದಲ್ಲಿ ಉತ್ಪನ್ನವಾದ ಘೋರವಿಷವನ್ನು ಶಕುನಿಯಿಂದ ಪಡೆದು, ಪವಮಾನನಂದನನಾದ ಭೀಮಸೇನನಿಗೆ ಕೃತ್ರಿಮಮಾರ್ಗದಿಂದ (ಉಣಬಡಿಸಿದರು) ಕೊಟ್ಟರು. ಹೀಗೆ ದೈತ್ಯಾಂಶರಾದ ಅವರೆಲ್ಲರೂ ಸೇರಿ ಕಾರಸ್ಥಾನ ಮಾಡಿ ದುರ್ಯೋಧನನ ಅಡಿಗೆ-ಯವನ ಮೂಲಕ ಸಕಲ ಭಕ್ಷ್ಯಭೋಜ್ಯಗಳಿಗೆ ವಿಷ ಬೆರೆಸಿ ಭೀಮಸೇನದೇವರಿಗೆ ತಿನ್ನಲು ಕೊಡಿಸಿದರು. ಈ ವಿಚಾರವನ್ನು ಧೃತರಾಷ್ಟ್ರಪುತ್ರರಲ್ಲೊಬ್ಬನಾದ ಯೋಗ್ಯನಾದ ಯುಯುತ್ಸುವು "ಭೀಮಸೇನ! ನಿನ್ನನ್ನು ಕೊಲ್ಲಲು ದುರ್ಯೋಧನಾದಿಗಳು ಭಕ್ಷ್ಯಭೋಜ್ಯಗಳಲ್ಲಿ ವಿಷ ಬೆರೆಸಿದ್ದಾರೆ. ಅದನ್ನು ಪಾಚಕನಿಂದ ಈಗ ನಿನಗೆ ಕೊಡಿಸಿದ್ದಾರೆ. ಅದನ್ನು ತಿನ್ನಬೇಡ, ಎಚ್ಚರವಿರಲಿ" ಎಂದು ಹೇಳಿದನು. ಆದರೂ ಮಹಾಬಲವಂತನಾದ ಭೀಮಸೇನನು ಅದನ್ನು ಕಡೆಗಣಿಸಿ ಸಕಲ ಭಕ್ಷ್ಯಭೋಜ್ಯಗಳನ್ನೂ ನಿರಾಲೋಚನೆಗಳಿಂದ ತಿಂದು ತೇಗಿದನು. ಭೀಮನು ಶ್ರೀಹರಿಯ ಅನುಗ್ರಹ ಬಲದಿಂದ ಘೋರವಾದ ಆ ವಿಷವನ್ನುಂಡು ಜೀರ್ಣಿಸಿಕೊಂಡನು.

ಇಂತು ಘೋರವಿಷವೂ ಜೀರ್ಣವಾಗಿ ಭೀಮಸೇನನು ಆನಂದದಿಂದ ನಲಿಯುತ್ತಿರುವುದನ್ನು ಕಂಡು ಕೌರವರು ಬಹು ದುಃಖಿತರಾದರು. ಆದರೂ ದುಷ್ಟಬುದ್ಧಿಯ ಆ ಪಾಪಿಗಳು ಹೇಗಾದರೂ ಭೀಮನನ್ನು ಸಂಹರಿಸಲು ಬೇರೊಂದು ಕೃತ್ರಿಮ ಸಂಧಾನದಲ್ಲಿ ಉದ್ಯುಕ್ತರಾದರು. ದುರ್ಯೋಧನಾದಿಗಳು ಗಂಗಾನದಿಯ ಜಲದಲ್ಲಿ ಒಂದು ವಿಚಿತ್ರಗೃಹವನ್ನು ನಿರ್ಮಾಣ ಮಾಡಿಸಿದರು. ಅಲ್ಲಿ ಭೀಮಸೇನನನ್ನು ಸಂಹರಿಸಬೇಕೆಂದು ಅವರ ಒಳಸಂಚಾಗಿತ್ತು. ಈ ವಿಚಾರವನ್ನು ಯುಯುತ್ಸುವು ಭೀಮನಿಗೆ ಗುಟ್ಟಾಗಿ ತಿಳಿಸಿ ಅಲ್ಲಿಗೆ ಹೋಗಬೇಡವೆಂದೂ ಹೇಳಿದನು. ಆದರೂ ಭೀಮನು ಅದನ್ನು ಗಣನೆಗೆ ತಾರದೆ ದುರ್ಯೋಧನಾದಿಗಳೊಡನೆ ಅಲ್ಲಿಗೆ ಹೋಗಿ ನಿಶ್ಚಿಂತೆಯಿಂದ ನಿದ್ರಿಸಿದನು. ವಿಚಿತ್ರವೀರ್ಯಕುಮಾರನಾದ ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನಾದಿಗಳಲ್ಲಿರುವ ಕಪಟ, ದ್ವೇಷ ಮುಂತಾದ ದೋಷಗಳನ್ನು ಬಯಲಿಗೆಳೆಯಲೆಂದೇ

ಭೀಮಸೇನನು ಅಲ್ಲಿ ಮಲಗಿ ನಿದ್ರಿಸಿದನು. ಆಗ ದುಷ್ಟರಾದ ದುರ್ಯೋಧನ ಮುಂತಾದವರು ಮಲಗಿ ನಿದ್ರಿಸುತ್ತಿರುವ ಮಾನವೋತ್ತಮನಾದ ಭೀಮಸೇನನನ್ನು ಪಾಶದಿಂದ ಬಂಧಿಸಿದರು. ಅಂದರೆ ದುಷ್ಟಮಂತ್ರಗಳಿಂದ ಅಭಿಮಂತ್ರಿಸಲ್ಪಟ್ಟ, ಉಕ್ಕಿನಿಂದ ತಯಾರಿಸಿದ ಅತಿ ಬಲವಾದ ಸರಪಳಿ (ಪಾಶ)ಗಳಿಂದ ಭೀಮನ ಸರ್ವಾಂಗಗಳನ್ನು ಬಂಧಿಸಿ (ಬಿಗಿದುಕಟ್ಟಿ) ಪಾಶಬದ್ಧನಾಗಿ ನಿದ್ರಾವಸ್ಥೆಯಲ್ಲಿದ್ದ ಭೀಮಸೇನನನ್ನು ಗಂಗಾನದಿಯಲ್ಲಿ ಎಸೆದುಬಿಟ್ಟು ತಮ್ಮ ಶತ್ರುವು ಇನ್ನು ಮೃತನಾದನೆಂದು ಹರ್ಷಭರಿತರಾದರು.

ಆದರೆ ಸಾಕ್ಷಾತ್ ವಾಯುಪುತ್ರನೂ ಮಹಾಶಕ್ತಿಸಂಪನ್ನನೂ ಆದ ಆ ಮಹಾನುಭಾವನಾದ ಭೀಮಸೇನನನ್ನು ಸಂಹರಿಸಲು ಯಾರಿಂದ ತಾನೆ ಸಾಧ್ಯ? ಅನಂತಗುಣಮಂದಿರನಾದ ಇಂದಿರಾಹೃದಯಾರವಿಂದಭಾಸ್ಕರನಾದ ಶ್ರೀಹರಿ ಪರಮಾತ್ಮನ ಚರಣಾರವಿಂದಗಳಲ್ಲಿ ಸರ್ವದಾ ನಿರತಿಶಯಭಕ್ತಿಯುಕ್ತನಾದ ವೃಕೋದರನು, ಕೋಟಿಸಂಖ್ಯಾಕ ಯೋಜನ ಗಹ್ವರವಾದ ಅಗಾಧವಾದ ಜಲವನ್ನು ತನ್ನ ಬಾಹುಗಳ ತಾಡನಮಾತ್ರದಿಂದ ಕದಡಿಸಿ, ಒಂದು ವಿಜೃಂಭಣೆ ಮಾತ್ರದಿಂದ ಉಕ್ಕಿನಿಂದ ತಯಾರಾದ ಅತ್ಯಂತ ಬಲಯುತವಾದ ಆ ಸರಪಣಿ (ಪಾಶ)ಯನ್ನು ಭೇದಿಸಿ ಸುಲಭವಾಗಿ ಈಜುತ್ತಾ ಬಂದು ಗಂಗಾನದಿಯ ದಡವನ್ನು ಸೇರಿ ಸುಜನವೃಂದಕ್ಕೆ ಅಪಾರ ಆನಂದವನ್ನುಂಟುಮಾಡಿದನು.

ಹೀಗೆ ಭೀಮಸೇನನು ಯಾವ ಬಾಧೆಯೂ ಇಲ್ಲದೆ ಸುಖವಾಗಿ ನಸುನಗುತ್ತಾ ನದಿಯಿಂದ ಮೇಲೆದ್ದು ಬಂದುದನ್ನು ಕಂಡು ಕೌರವರು ತಮ್ಮ ಈ ಪ್ರಯತ್ನವೂ ನಿಷ್ಫಲವಾದ್ದರಿಂದ ಕಡುದುಃಖಿತರಾದರು. ಪಾಪಿಗಳಾದ ಆ ಕೌರವರು ಮತ್ತೆ ಮಂತ್ರಾಲೋಚನೆ ಮಾಡಿ ದೈತ್ಯಗುರುಗಳಾದ ಶುಕ್ರಾಚಾರ್ಯರಿಂದ ಉಪದಿಷ್ಟವಾದ ಮಂತ್ರಸಾಮರ್ಥ್ಯದಿಂದ "ಅನಂತ -ವಾಸುಕಿ-ಪದ್ಮ-ಮಹಾಪದ್ಮ-ತಕ್ಷಕ-ಕರ್ಕೋಟಕ-ಶಂಖಪಾಲ-ಮಹಾಶಂಖ" ಎಂಬ ಅತ್ಯಂತ ಬಲಿಷ್ಠಗಳಾದ ನಾಗ-ಶ್ರೇಷ್ಠರನ್ನು ಹಸ್ತಿನಾವತಿಯ ಸಮೀಪದ ಏಕಾಂತಸ್ಥಳದಲ್ಲಿ ಆಹ್ವಾನಿಸಿ, ತರುವಾಯ ಆ ಎಂಟು ಮಹಾಸರ್ಪಗಳನ್ನು ಒಂದು ಪಂಜರದಲ್ಲಿಟ್ಟು ಭೀಮಸೇನನ ವಿನಾಶಕ್ಕಾಗಿ ಅದನ್ನು ದುರ್ಯೋಧನನ ಸಾರಥಿಗೆ ಕೊಟ್ಟರು. ನಂತರ ಸುಯೋಧನನ ಸಾರಥಿಯು ತನ್ನೊಡೆಯನು ಅಧಿಕವೀರ್ಯವುಳ್ಳ ಮಂತ್ರಬಲದಿಂದ ಆಹ್ವಾನಿಸಿ ಪಡೆದ ಆ ಎಂಟು ಮಹಾನಾಗಗಳನ್ನು ನಗರದ ಹೊರಭಾಗದಲ್ಲಿ ತನ್ನ ಕ್ರೀಡಾಸ್ಥಳದಲ್ಲಿ ಮಲಗಿ ನಿದ್ರಿಸುತ್ತಿದ್ದ ಭೀಮಸೇನನ ವಿಸ್ತಾರವಾದ ಎದೆಯ ಮೇಲೆ ಬಿಟ್ಟು ಅವುಗಳಿಂದ ಭೀಮಸೇನನನ್ನು ಕಚ್ಚಿಸಿದನು. ಆದರೆ ಭೀಮನ ವಕ್ಷಸ್ಥಳವನ್ನು ದಂಶನಮಾಡಿದ ಆ ಸರ್ಪಗಳು ತಮ್ಮ ಹಲ್ಲುಗಳನ್ನು ಮುರಿದುಕೊಂಡವೇ ವಿನಃ ಅದರಿಂದ ಭೀಮಸೇನನಿಗೆ ಯಾವ ವಿಧವಾದ ಬಾಧೆಯೂ ಉಂಟಾಗಲಿಲ್ಲ. ಹೀಗೆ ಈ ಕಪಟಿಗಳ ಈ ದುಷ್ಟಪ್ರಯತ್ನವೂ ವ್ಯರ್ಥವಾಗಿ ಭೀಮಸೇನನ ಕೀರ್ತಿಯೇ ಬೆಳಗಿತು.

ಶ್ರೀ ಭೀಮಸೇನದೇವರು ಆ ಎಂಟು ನಾಗಶ್ರೇಷ್ಠಗಳನ್ನು ದೂರದಲ್ಲಿ ಬಿಸುಟು ಅವುಗಳ ಕುಲದಲ್ಲಿ ಜನಿಸಿದ್ದ ಅನೇಕ ಸರ್ಪಸಮೂಹವನ್ನು ಇರುವೆಗಳಂತೆ ಸಂಹರಿಸಿ ಅನಂತರ ಸಾರಥಿಯನ್ನು ತಮ್ಮ ಹಸ್ತತಲಾಘಾತದಿಂದ ಕೊಂದು ಮಂಚದಿಂದ ಏಳದೆಯೇ ಮತ್ತೆ ನಿದ್ರಾಪರವಶನಾದರು. ಭೀಮಸೇನದೇವರ ಅಪ್ರತಿದ್ವಂದ್ವವಾದ ಮಹಾಬಲವನ್ನು ನಿರೀಕ್ಷಿಸಿ ಕುಮತಿಗಳಾದ ದುರ್ಯೋಧನನ ಪಕ್ಷಪಾತಿಗಳಾದ ರಾಜಪುತ್ರರು ಬಹು ವಿಷಾದಿಸಿದರು. ಆ ದುರ್ಜನರು ಮತ್ತೆ ಮಂತ್ರಾಲೋಚನೆ ಮಾಡಿ ಸಾಕ್ಷಾತ್ ಶ್ರೀಕೃಷ್ಣನಿಗೂ ಅನೇಕ ಪ್ರತಿಕೂಲ ಕಾರ್ಯಗಳನ್ನೆಸಗಲು ನಿರ್ಧರಿಸಿ ಅದರಂತೆ ಕಾರ್ಯತತ್ಪರರಾದರು. ಅದನ್ನು ಈಗ ನಿರ್ಣಯಕಾರರು ವಿವರಿಸುತ್ತಾರೆ.

ಅತಿಬಲಶಾಲಿಗಳೂ, ಕ್ರೂರವೂ ಆದ ಯಾವ ಎಂಟು ಶ್ರೇಷ್ಠ ಭಯಂಕರ ಸರ್ಪಗಳ ನಿಶ್ವಾಸ ಮತ್ತು ದರ್ಶನ ಮಾತ್ರದಿಂದ ಪ್ರಪಂಚವೇ ನಾಶವಾಗುವುದೋ ಅಂಥ ನಾಗಗಳ ಪ್ರಯತ್ನವೂ ವ್ಯರ್ಥವಾಯಿತಲ್ಲ! ಬಹುಪ್ರಕಾರವಾಗಿ ತಮ್ಮ ಹಲ್ಲುಗಳಿಂದ ಭೀಮಸೇನನನ್ನು ಕಚ್ಚಿ, ದುರ್ಧರ ವಿಷವನ್ನು ಬಿಟ್ಟರೂ ಭೀಮಸೇನನಿಗೆ ಮೂರ್ಛೆಬರುವುದು, ವಿಕಾರ

ಇದಾವುದನ್ನೂ ಉಂಟುಮಾಡಲು ಅವು ಅಸಮರ್ಥವಾದವು! ಆಹಾ ನಮ್ಮೀ ಉದ್ಯಮವೂ ನಿರರ್ಥಕವಾಯಿತು ಎಂದು ಅವರು ವಿಷಾದಿಸಿದರು.

ಭೀಮಸೇನನಿಗೆ ಸಮರಾದ ಬಲಶಾಲಿಗಳಾರಾದರೂ ಹಿಂದೆ ಇದ್ದರೇ ಎಂಬುದನ್ನು ನಾವು ಕೇಳಿಲ್ಲ. ಇನ್ನು ನೋಡುವುದಂತೂ ದೂರವೇ ಉಳಿಯಿತು! ಅತುಲಭುಜಬಲ ವಿಕ್ರಮನಾದ ಹಿರಣ್ಯಕಶ್ಯಪನ ಪುತ್ರನಾದ ಪ್ರಹ್ಲಾದನಲ್ಲೂ ಇಂತಹ ಬಲವಿತ್ತೆಂದು ನಾವು ಕೇಳಿಲ್ಲ.

ಪ್ರಹ್ಲಾದ-ಭೀಮಸೇನರ ಬಲ-ಪರಾಕ್ರಮಗಳನ್ನೀಗ ವಿವೇಚಿಸುತ್ತಾರೆ.

ದೈತ್ಯರಾಜನ ಕುಮಾರನಾದ ಪ್ರಹ್ಲಾದನು ತನ್ನ ಸಂರಕ್ಷಣೆಗಾಗಿ ಶ್ರೀಹರಿಯನ್ನು ಅಧಿಕವಾಗಿ ಸ್ತೋತ್ರಮಾಡಿಯೇ ಅವನಿಂದ ರಕ್ಷಿತನಾದನು. ಪ್ರಹ್ಲಾದನು ತಂದೆಯ ಭೃತ್ಯರಿಂದ ಬಲಾತ್ಕರಿಸಲ್ಪಟ್ಟನು, ಹಿಂಸಿಸಲ್ಪಟ್ಟನಾದ್ದರಿಂದ ಅವನಲ್ಲಿದ್ದುದು ಔರಸಬಲವು, ಸ್ವಾಭಾವಿಕವಾದುದಲ್ಲ. ಈ ಭೀಮನು ಶ್ರೀಹರಿಗೆ ಅತ್ಯಂತ ನಿರುಪಾಧಿಕಪ್ರಿಯತಮನೆಂದು ವಿಪ್ರರು ಹೇಳುತ್ತಾರೆ. ಈ ವಿಪ್ರರ ವಾಕ್ಯವು ನಿಶ್ಚಯವಾಗಿ ಸತ್ಯವೆಂದೇ ಪ್ರಸಿದ್ಧಿಯಿದೆ. ಇಲ್ಲದಿದ್ದರೆ ಭೀಮಸೇನನಿಗಿಂತು ಸ್ವಾಭಾವಿಕಬಲ ಬರಲು ಸಾಧ್ಯವಿಲ್ಲ. ಆದ್ದರಿಂದ ಆ ಹರಿಯೊಡನೆ ಈ ಭೀಮನನ್ನೂ ನಾಶಪಡಿಸಬೇಕು. ಅವರೀರ್ವರ ವಿನಾಶವೇ ನಮ್ಮ ಮುಖ್ಯ ಪ್ರಯೋಜನ.

ಆಗ ಆ ದುಷ್ಟರಾಜಪುತ್ರರು ಹೀಗೆ ವಿಚಾರ ಮಾಡಿದರು "ಲೋಕಾಂತರದಲ್ಲಿರುವ ಆ ಶ್ರೀಹರಿಯನ್ನು ನಾಶ-ಪಡಿಸುವುದೆಂತು? ಎಂದು ಯೋಚಿಸಬೇಕಾಗಿಲ್ಲ. ಏಕೆಂದರೆ ಆ ಹರಿಯೇ ಈಗ ಯಾದವರಲ್ಲಿ ಶ್ರೀಕೃಷ್ಣನಾಗಿ ಅವತರಿಸಿದ್ದಾನೆ. ಆದುದರಿಂದ ನಾವೀಗ ಕೃಷ್ಣನಲ್ಲಿ ಅಧಿಕದ್ವೇಷಮಾಡಿ, ಇದಕ್ಕೆಲ್ಲಾ ಮೂಲಕಾರಣನಾಗಿರುವ ಅವನನ್ನೇ ನಾಶಪಡಿಸಬೇಕು! ಮೊದಲು ಆ ಕೃಷ್ಣನಿಗೆ ಪ್ರತಿಕೂಲಕಾರ್ಯಗಳನ್ನು ಮಾಡಬೇಕು," ಹೀಗೆ ಯೋಚಿಸಿ ಅವರು ತೀರ್ಮಾನಕ್ಕೆ ಬಂದರು, ಮತ್ತು ಅದರಂತೆ ಶ್ರೀಕೃಷ್ಣನಿಗೆ ವಿರುದ್ಧವಾದ ಕಾರ್ಯಗಳಲ್ಲಿ ಆಸಕ್ತರಾದರು.

ಹೀಗೆ ಅಸುರಾಂಶರಾದ ದುರ್ಯೋಧನ ಪಕ್ಷಪಾತಿಗಳಾದ ರಾಜಪುತ್ರರು ಮತ್ತು ಅವರ ಜನಕರಾದ ನೃಪತಿಗಳು ಬಲಶಾಲಿಯಾದ ಬೃಹದ್ರಥನಪುತ್ರನಾದ ಜರಾಸಂಧನ ನಾಯಕತ್ವದಲ್ಲಿ ಕೃಷ್ಣನ ಮೇಲೆ ಯುದ್ಧಕ್ಕಾಗಿ ತೆರಳಿದರು. ಇಂತು ಕದನಕುತೂಹಲಿಗಳಾಗಿ ತನ್ನಲ್ಲಿಗೆ ಬಂದ ಕುಕರ್ಮಿಗಳನ್ನು ಕಂಡು ಕಂತುಜನಕನಾದ ಶ್ರೀಕಾಂತನು ಹದಿನೆಂಟು ಬಾರಿ ಕದನದಲ್ಲಿ ಅವರನ್ನು ಪರಾಜಯಗೊಳಿಸಿದನು. ಆಗ ಬಲ-ದರ್ಪ-ಮದ ಹೀನರಾಗಿ ಅವರೆಲ್ಲರೂ ತಮ್ಮ ತಮ್ಮ ಊರಿಗೆ ತೆರಳಿದರು. ಕೃಷ್ಣನಿಂದ ಪರಾಜಿತರಾದ ಅವರ ಸ್ಥಿತಿ ಶೋಚನೀಯವಾಗಿತ್ತು. ಗಜ-ತುರಗ ರಥಾದಿಗಳನ್ನು ವಾಸುದೇವನು ಅವರಿಂದ ವಶಪಡಿಸಿಕೊಂಡನು. ಶಸ್ತ್ರಾಸ್ತ್ರಗಳಿಂದ ಪೆಟ್ಟುತಿಂದು ಕ್ಷತ-ವಿಕ್ಷತ ಶರೀರಿಗಳಾದ ಅವರು ರಕ್ತವನ್ನು ಕಾರುತ್ತಾ ಭಗ್ನವಾದ ಕವಚ-ಧ್ವಜ ಅಶ್ವ ಶಸ್ತ್ರಾಸ್ತ್ರ ಹಾಗೂ ಸಾರಥಿಗಳಿಂದ ಯುಕ್ತರಾಗಿ, ಅಸ್ತವ್ಯಸ್ತ ವಸನವುಳ್ಳವರಾಗಿ, ಬಿಚ್ಚಿದ ಕೇಶಪಾಶಗಳಿಂದ ಅತಿ ದುರವಸ್ಥೆಗೊಳಗಾಗಿ ರಣಭೂಮಿಯಿಂದ ಜೀವವುಳಿದರೆ ಸಾಕೆಂದು ನಿವೃತ್ತರಾದರು. ಅವರಿಗೆಲ್ಲಾ ನಾಯಕನಾಗಿದ್ದ ಜರಾಸಂಧನ ಅವಸ್ಥೆಯಂತೂ ಅತಿ ಶೋಚನೀಯವಾಗಿತ್ತು. ಶತ್ರುಗಳನ್ನು ಸದೆಬಡೆದು ಜಯಲಕ್ಷ್ಮಿ-ಯನ್ನೊಲಿಸಿಕೊಂಡು ಕಂಗೊಳಿಸುತ್ತಾ ಪೂರ್ಣಬಲ ವೀರ್ಯಾದಿಗಳಿಂದ ಮಂಡಿತನಾದ ಶ್ರೀಕೃಷ್ಣನು ಜರಾಸಂಧನನ್ನು ಕರುಣೆಯಿಂದ "ಹೂಂ, ಹೋಗು, ಬದುಕಿಕೋ" ಎಂದು ಜೀವಸಹಿತ ಬಿಟ್ಟನು. ಹೀಗೆ ಪರಾಭವವನ್ನನುಭವಿಸಿ ಬಹು ಆರ್ತನಾಗಿ ಶ್ವಾಸಾವೇಷನಾಗಿ ಬದುಕಿದೆಯಾ ಬಡಜೀವವೇ ಎಂದು ಜರಾಸಂಧನು ದುರವಸ್ಥೆಗೀಡಾಗಿ ತನ್ನ ಪಟ್ಟಣಕ್ಕೆ ಹೊರಟುಹೋದನು. ಇಂತು ಕದನಕುತೂಹಲಿಗಳಾಗಿ ರಣರಂಗಕ್ಕೆ ಬಂದಿದ್ದ ಅವರೆಲ್ಲರೂ ಅಪಮಾನದಿಂದ ತಲೆತಗ್ಗಿಸಿ ಪಲಾಯನ ಗೈಯಲು ಬಲರಾಮ ಮತ್ತು ಸಕಲ ಯಾದವರಿಂದೊಡಗೂಡಿ, ಉತ್ಕೃಷ್ಟಿರಹಿತನಾದ, ಅಚಿಂತ್ಯಾದ್ಭುತ

ಭೀಮಸೇನನು ಅಲ್ಲಿ ಮಲಗಿ ನಿದ್ರಿಸಿದನು. ಆಗ ದುಷ್ಟರಾದ ದುರ್ಯೋಧನ ಮುಂತಾದವರು ಮಲಗಿ ನಿದ್ರಿಸುತ್ತಿರುವ ಮಾನವೋತ್ತಮನಾದ ಭೀಮಸೇನನನ್ನು ಪಾಶದಿಂದ ಬಂಧಿಸಿದರು. ಅಂದರೆ ದುಷ್ಟಮಂತ್ರಗಳಿಂದ ಅಭಿಮಂತ್ರಿಸಲ್ಪಟ್ಟ, ಉಕ್ಕಿನಿಂದ ತಯಾರಿಸಿದ ಅತಿ ಬಲವಾದ ಸರಪಳಿ (ಪಾಶ)ಗಳಿಂದ ಭೀಮನ ಸರ್ವಾಂಗಗಳನ್ನು ಬಂಧಿಸಿ (ಬಿಗಿದುಕಟ್ಟಿ) ಪಾಶಬದ್ಧನಾಗಿ ನಿದ್ರಾವಸ್ಥೆಯಲ್ಲಿದ್ದ ಭೀಮಸೇನನನ್ನು ಗಂಗಾನದಿಯಲ್ಲಿ ಎಸೆದುಬಿಟ್ಟು ತಮ್ಮ ಶತ್ರುವು ಇನ್ನು ಮೃತನಾದನೆಂದು ಹರ್ಷಭರಿತರಾದರು.

ಆದರೆ ಸಾಕ್ಷಾತ್ ವಾಯುಪುತ್ರನೂ ಮಹಾಶಕ್ತಿಸಂಪನ್ನನೂ ಆದ ಆ ಮಹಾನುಭಾವನಾದ ಭೀಮಸೇನನನ್ನು ಸಂಹರಿಸಲು ಯಾರಿಂದ ತಾನೆ ಸಾಧ್ಯ? ಅನಂತಗುಣಮಂದಿರನಾದ ಇಂದಿರಾಹೃದಯಾರವಿಂದಭಾಸ್ಕರನಾದ ಶ್ರೀಹರಿ ಪರಮಾತ್ಮನ ಚರಣಾರವಿಂದಗಳಲ್ಲಿ ಸರ್ವದಾ ನಿರತಿಶಯಭಕ್ತಿಯುಕ್ತನಾದ ವೃಕೋದರನು, ಕೋಟಿಸಂಖ್ಯಾಕ ಯೋಜನ ಗಹ್ವರವಾದ ಅಗಾಧವಾದ ಜಲವನ್ನು ತನ್ನ ಬಾಹುಗಳ ತಾಡನಮಾತ್ರದಿಂದ ಕದಡಿಸಿ, ಒಂದು ವಿಜೃಂಭಣೆ ಮಾತ್ರದಿಂದ ಉಕ್ಕಿನಿಂದ ತಯಾರಾದ ಅತ್ಯಂತ ಬಲಯುತವಾದ ಆ ಸರಪಣಿ (ಪಾಶ)ಯನ್ನು ಭೇದಿಸಿ ಸುಲಭವಾಗಿ ಈಜುತ್ತಾ ಬಂದು ಗಂಗಾನದಿಯ ದಡವನ್ನು ಸೇರಿ ಸುಜನವೃಂದಕ್ಕೆ ಅಪಾರ ಆನಂದವನ್ನುಂಟುಮಾಡಿದನು.

ಹೀಗೆ ಭೀಮಸೇನನು ಯಾವ ಬಾಧೆಯೂ ಇಲ್ಲದೆ ಸುಖವಾಗಿ ನಸುನಗುತ್ತಾ ನದಿಯಿಂದ ಮೇಲೆದ್ದು ಬಂದುದನ್ನು ಕಂಡು ಕೌರವರು ತಮ್ಮ ಈ ಪ್ರಯತ್ನವೂ ನಿಷ್ಫಲವಾದ್ದರಿಂದ ಕಡುದುಃಖಿತರಾದರು. ಪಾಪಿಗಳಾದ ಆ ಕೌರವರು ಮತ್ತೆ ಮಂತ್ರಾಲೋಚನೆ ಮಾಡಿ ದೈತ್ಯಗುರುಗಳಾದ ಶುಕ್ರಾಚಾರ್ಯರಿಂದ ಉಪದಿಷ್ಟವಾದ ಮಂತ್ರಸಾಮರ್ಥ್ಯದಿಂದ "ಅನಂತ -ವಾಸುಕಿ-ಪದ್ಮ-ಮಹಾಪದ್ಮ-ತಕ್ಷಕ-ಕರ್ಕೋಟಕ-ಶಂಖಪಾಲ-ಮಹಾಶಂಖ" ಎಂಬ ಅತ್ಯಂತ ಬಲಿಷ್ಠಗಳಾದ ನಾಗ-ಶ್ರೇಷ್ಠರನ್ನು ಹಸ್ತಿನಾವತಿಯ ಸಮೀಪದ ಏಕಾಂತಸ್ಥಳದಲ್ಲಿ ಆಹ್ವಾನಿಸಿ, ತರುವಾಯ ಆ ಎಂಟು ಮಹಾಸರ್ಪಗಳನ್ನು ಒಂದು ಪಂಜರದಲ್ಲಿಟ್ಟು ಭೀಮಸೇನನ ವಿನಾಶಕ್ಕಾಗಿ ಅದನ್ನು ದುರ್ಯೋಧನನ ಸಾರಥಿಗೆ ಕೊಟ್ಟರು. ನಂತರ ಸುಯೋಧನನ ಸಾರಥಿಯು ತನ್ನೊಡೆಯನು ಅಧಿಕವೀರ್ಯವುಳ್ಳ ಮಂತ್ರಬಲದಿಂದ ಆಹ್ವಾನಿಸಿ ಪಡೆದ ಆ ಎಂಟು ಮಹಾನಾಗಗಳನ್ನು ನಗರದ ಹೊರಭಾಗದಲ್ಲಿ ತನ್ನ ಕ್ರೀಡಾಸ್ಥಳದಲ್ಲಿ ಮಲಗಿ ನಿದ್ರಿಸುತ್ತಿದ್ದ ಭೀಮಸೇನನ ವಿಸ್ತಾರವಾದ ಎದೆಯ ಮೇಲೆ ಬಿಟ್ಟು ಅವುಗಳಿಂದ ಭೀಮಸೇನನನ್ನು ಕಚ್ಚಿಸಿದನು. ಆದರೆ ಭೀಮನ ವಕ್ಷಸ್ಥಳವನ್ನು ದಂಶನಮಾಡಿದ ಆ ಸರ್ಪಗಳು ತಮ್ಮ ಹಲ್ಲುಗಳನ್ನು ಮುರಿದುಕೊಂಡವೇ ವಿನಃ ಅದರಿಂದ ಭೀಮಸೇನನಿಗೆ ಯಾವ ವಿಧವಾದ ಬಾಧೆಯೂ ಉಂಟಾಗಲಿಲ್ಲ. ಹೀಗೆ ಈ ಕಪಟಿಗಳ ಈ ದುಷ್ಟಪ್ರಯತ್ನವೂ ವ್ಯರ್ಥವಾಗಿ ಭೀಮಸೇನನ ಕೀರ್ತಿಯೇ ಬೆಳಗಿತು.

ಶ್ರೀ ಭೀಮಸೇನದೇವರು ಆ ಎಂಟು ನಾಗಶ್ರೇಷ್ಠಗಳನ್ನು ದೂರದಲ್ಲಿ ಬಿಸುಟು ಅವುಗಳ ಕುಲದಲ್ಲಿ ಜನಿಸಿದ್ದ ಅನೇಕ ಸರ್ಪಸಮೂಹವನ್ನು ಇರುವೆಗಳಂತೆ ಸಂಹರಿಸಿ ಅನಂತರ ಸಾರಥಿಯನ್ನು ತಮ್ಮ ಹಸ್ತತಲಾಘಾತದಿಂದ ಕೊಂದು ಮಂಚದಿಂದ ಏಳದೆಯೇ ಮತ್ತೆ ನಿದ್ರಾಪರವಶನಾದರು. ಭೀಮಸೇನದೇವರ ಅಪ್ರತಿದ್ವಂದ್ವವಾದ ಮಹಾಬಲವನ್ನು ನಿರೀಕ್ಷಿಸಿ ಕುಮತಿಗಳಾದ ದುರ್ಯೋಧನನ ಪಕ್ಷಪಾತಿಗಳಾದ ರಾಜಪುತ್ರರು ಬಹು ವಿಷಾದಿಸಿದರು. ಆ ದುರ್ಜನರು ಮತ್ತೆ ಮಂತ್ರಾಲೋಚನೆ ಮಾಡಿ ಸಾಕ್ಷಾತ್ ಶ್ರೀಕೃಷ್ಣನಿಗೂ ಅನೇಕ ಪ್ರತಿಕೂಲ ಕಾರ್ಯಗಳನ್ನೆಸಗಲು ನಿರ್ಧರಿಸಿ ಅದರಂತೆ ಕಾರ್ಯತತ್ಪರರಾದರು. ಅದನ್ನು ಈಗ ನಿರ್ಣಯಕಾರರು ವಿವರಿಸುತ್ತಾರೆ.

ಅತಿಬಲಶಾಲಿಗಳೂ, ಕ್ರೂರವೂ ಆದ ಯಾವ ಎಂಟು ಶ್ರೇಷ್ಠ ಭಯಂಕರ ಸರ್ಪಗಳ ನಿಶ್ವಾಸ ಮತ್ತು ದರ್ಶನ ಮಾತ್ರದಿಂದ ಪ್ರಪಂಚವೇ ನಾಶವಾಗುವುದೋ ಅಂಥ ನಾಗಗಳ ಪ್ರಯತ್ನವೂ ವ್ಯರ್ಥವಾಯಿತಲ್ಲ! ಬಹುಪ್ರಕಾರವಾಗಿ ತಮ್ಮ ಹಲ್ಲುಗಳಿಂದ ಭೀಮಸೇನನನ್ನು ಕಚ್ಚಿ, ದುರ್ಧರ ವಿಷವನ್ನು ಬಿಟ್ಟರೂ ಭೀಮಸೇನನಿಗೆ ಮೂರ್ಛೆಬರುವುದು, ವಿಕಾರ

ಇದಾವುದನ್ನೂ ಉಂಟುಮಾಡಲು ಅವು ಅಸಮರ್ಥವಾದವು! ಆಹಾ ನಮ್ಮೀ ಉದ್ಯಮವೂ ನಿರರ್ಥಕವಾಯಿತು ಎಂದು ಅವರು ವಿಷಾದಿಸಿದರು.

ಭೀಮಸೇನನಿಗೆ ಸಮರಾದ ಬಲಶಾಲಿಗಳಾರಾದರೂ ಹಿಂದೆ ಇದ್ದರೇ ಎಂಬುದನ್ನು ನಾವು ಕೇಳಿಲ್ಲ. ಇನ್ನು ನೋಡುವುದಂತೂ ದೂರವೇ ಉಳಿಯಿತು! ಅತುಲಭುಜಬಲ ವಿಕ್ರಮನಾದ ಹಿರಣ್ಯಕಶ್ಯಪನ ಪುತ್ರನಾದ ಪ್ರಹ್ಲಾದನಲ್ಲೂ ಇಂತಹ ಬಲವಿತ್ತೆಂದು ನಾವು ಕೇಳಿಲ್ಲ.

ಪ್ರಹ್ಲಾದ-ಭೀಮಸೇನರ ಬಲ-ಪರಾಕ್ರಮಗಳನ್ನೀಗ ವಿವೇಚಿಸುತ್ತಾರೆ.

ದೈತ್ಯರಾಜನ ಕುಮಾರನಾದ ಪ್ರಹ್ಲಾದನು ತನ್ನ ಸಂರಕ್ಷಣೆಗಾಗಿ ಶ್ರೀಹರಿಯನ್ನು ಅಧಿಕವಾಗಿ ಸ್ತೋತ್ರಮಾಡಿಯೇ ಅವನಿಂದ ರಕ್ಷಿತನಾದನು. ಪ್ರಹ್ಲಾದನು ತಂದೆಯ ಭೃತ್ಯರಿಂದ ಬಲಾತ್ಕರಿಸಲ್ಪಟ್ಟನು, ಹಿಂಸಿಸಲ್ಪಟ್ಟನಾದ್ದರಿಂದ ಅವನಲ್ಲಿದ್ದುದು ಔರಸಬಲವು, ಸ್ವಾಭಾವಿಕವಾದುದಲ್ಲ. ಈ ಭೀಮನು ಶ್ರೀಹರಿಗೆ ಅತ್ಯಂತ ನಿರುಪಾಧಿಕಪ್ರಿಯತಮನೆಂದು ವಿಪ್ರರು ಹೇಳುತ್ತಾರೆ. ಈ ವಿಪ್ರರ ವಾಕ್ಯವು ನಿಶ್ಚಯವಾಗಿ ಸತ್ಯವೆಂದೇ ಪ್ರಸಿದ್ಧಿಯಿದೆ. ಇಲ್ಲದಿದ್ದರೆ ಭೀಮಸೇನನಿಗಿಂತು ಸ್ವಾಭಾವಿಕಬಲ ಬರಲು ಸಾಧ್ಯವಿಲ್ಲ. ಆದ್ದರಿಂದ ಆ ಹರಿಯೊಡನೆ ಈ ಭೀಮನನ್ನೂ ನಾಶಪಡಿಸಬೇಕು. ಅವರೀರ್ವರ ವಿನಾಶವೇ ನಮ್ಮ ಮುಖ್ಯ ಪ್ರಯೋಜನ.

ಆಗ ಆ ದುಷ್ಟರಾಜಪುತ್ರರು ಹೀಗೆ ವಿಚಾರ ಮಾಡಿದರು "ಲೋಕಾಂತರದಲ್ಲಿರುವ ಆ ಶ್ರೀಹರಿಯನ್ನು ನಾಶ-ಪಡಿಸುವುದೆಂತು? ಎಂದು ಯೋಚಿಸಬೇಕಾಗಿಲ್ಲ. ಏಕೆಂದರೆ ಆ ಹರಿಯೇ ಈಗ ಯಾದವರಲ್ಲಿ ಶ್ರೀಕೃಷ್ಣನಾಗಿ ಅವತರಿಸಿದ್ದಾನೆ. ಆದುದರಿಂದ ನಾವೀಗ ಕೃಷ್ಣನಲ್ಲಿ ಅಧಿಕದ್ವೇಷಮಾಡಿ, ಇದಕ್ಕೆಲ್ಲಾ ಮೂಲಕಾರಣನಾಗಿರುವ ಅವನನ್ನೇ ನಾಶಪಡಿಸಬೇಕು! ಮೊದಲು ಆ ಕೃಷ್ಣನಿಗೆ ಪ್ರತಿಕೂಲಕಾರ್ಯಗಳನ್ನು ಮಾಡಬೇಕು," ಹೀಗೆ ಯೋಚಿಸಿ ಅವರು ತೀರ್ಮಾನಕ್ಕೆ ಬಂದರು, ಮತ್ತು ಅದರಂತೆ ಶ್ರೀಕೃಷ್ಣನಿಗೆ ವಿರುದ್ಧವಾದ ಕಾರ್ಯಗಳಲ್ಲಿ ಆಸಕ್ತರಾದರು.

ಹೀಗೆ ಅಸುರಾಂಶರಾದ ದುರ್ಯೋಧನ ಪಕ್ಷಪಾತಿಗಳಾದ ರಾಜಪುತ್ರರು ಮತ್ತು ಅವರ ಜನಕರಾದ ನೃಪತಿಗಳು ಬಲಶಾಲಿಯಾದ ಬೃಹದ್ರಥನಪುತ್ರನಾದ ಜರಾಸಂಧನ ನಾಯಕತ್ವದಲ್ಲಿ ಕೃಷ್ಣನ ಮೇಲೆ ಯುದ್ಧಕ್ಕಾಗಿ ತೆರಳಿದರು. ಇಂತು ಕದನಕುತೂಹಲಿಗಳಾಗಿ ತನ್ನಲ್ಲಿಗೆ ಬಂದ ಕುಕರ್ಮಿಗಳನ್ನು ಕಂಡು ಕಂತುಜನಕನಾದ ಶ್ರೀಕಾಂತನು ಹದಿನೆಂಟು ಬಾರಿ ಕದನದಲ್ಲಿ ಅವರನ್ನು ಪರಾಜಯಗೊಳಿಸಿದನು. ಆಗ ಬಲ-ದರ್ಪ-ಮದ ಹೀನರಾಗಿ ಅವರೆಲ್ಲರೂ ತಮ್ಮ ತಮ್ಮ ಊರಿಗೆ ತೆರಳಿದರು. ಕೃಷ್ಣನಿಂದ ಪರಾಜಿತರಾದ ಅವರ ಸ್ಥಿತಿ ಶೋಚನೀಯವಾಗಿತ್ತು. ಗಜ-ತುರಗ ರಥಾದಿಗಳನ್ನು ವಾಸುದೇವನು ಅವರಿಂದ ವಶಪಡಿಸಿಕೊಂಡನು. ಶಸ್ತ್ರಾಸ್ತ್ರಗಳಿಂದ ಪೆಟ್ಟುತಿಂದು ಕ್ಷತ-ವಿಕ್ಷತ ಶರೀರಿಗಳಾದ ಅವರು ರಕ್ತವನ್ನು ಕಾರುತ್ತಾ ಭಗ್ನವಾದ ಕವಚ-ಧ್ವಜ ಅಶ್ವ ಶಸ್ತ್ರಾಸ್ತ್ರ ಹಾಗೂ ಸಾರಥಿಗಳಿಂದ ಯುಕ್ತರಾಗಿ, ಅಸ್ತವ್ಯಸ್ತ ವಸನವುಳ್ಳವರಾಗಿ, ಬಿಚ್ಚಿದ ಕೇಶಪಾಶಗಳಿಂದ ಅತಿ ದುರವಸ್ಥೆಗೊಳಗಾಗಿ ರಣಭೂಮಿಯಿಂದ ಜೀವವುಳಿದರೆ ಸಾಕೆಂದು ನಿವೃತ್ತರಾದರು. ಅವರಿಗೆಲ್ಲಾ ನಾಯಕನಾಗಿದ್ದ ಜರಾಸಂಧನ ಅವಸ್ಥೆಯಂತೂ ಅತಿ ಶೋಚನೀಯವಾಗಿತ್ತು. ಶತ್ರುಗಳನ್ನು ಸದೆಬಡೆದು ಜಯಲಕ್ಷ್ಮಿ-ಯನ್ನೊಲಿಸಿಕೊಂಡು ಕಂಗೊಳಿಸುತ್ತಾ ಪೂರ್ಣಬಲ ವೀರ್ಯಾದಿಗಳಿಂದ ಮಂಡಿತನಾದ ಶ್ರೀಕೃಷ್ಣನು ಜರಾಸಂಧನನ್ನು ಕರುಣೆಯಿಂದ "ಹೂಂ, ಹೋಗು, ಬದುಕಿಕೋ" ಎಂದು ಜೀವಸಹಿತ ಬಿಟ್ಟನು. ಹೀಗೆ ಪರಾಭವವನ್ನನುಭವಿಸಿ ಬಹು ಆರ್ತನಾಗಿ ನ್ಯಾಸಾವೇಷನಾಗಿ ಬದುಕಿದೆಯಾ ಬಡಜೀವವೇ ಎಂದು ಜರಾಸಂಧನು ದುರವಸ್ಥೆಗೀಡಾಗಿ ತನ್ನ ಪಟ್ಟಣಕ್ಕೆ ಹೊರಟುಹೋದನು. ಇಂತು ಕದನಕುತೂಹಲಿಗಳಾಗಿ ರಣರಂಗಕ್ಕೆ ಬಂದಿದ್ದ ಅವರೆಲ್ಲರೂ ಅಪಮಾನದಿಂದ ತಲೆತಗ್ಗಿಸಿ ಪಲಾಯನ ಗೈಯಲು ಬಲರಾಮ ಮತ್ತು ಸಕಲ ಯಾದವರಿಂದೊಡಗೂಡಿ, ಉತ್ಕೃತ್ತಿರಹಿತನಾದ, ಅಚಿಂತ್ಯಾದ್ಭುತ

ಬಲಶಾಲಿಯೂ, ಜಯಶ್ರೀಯುಕ್ತನೂ ಆದ ವಾಸುದೇವನು ಮಧುರಾಪಟ್ಟಣವನ್ನು ಪ್ರವೇಶಿಸಿ ಅಲ್ಲಿ ಬಲರಾಮ ಹಾಗೂ ಸಕಲ ಯಾದವರೊಡನೆ ಕ್ರೀಡಿಸಹತ್ತಿದನು.

ಹೀಗೆ ತಮ್ಮ ಪ್ರಯತ್ನವೆಲ್ಲಾ ವ್ಯರ್ಥವಾದರೂ ಸಹ ವಿವೇಕಶೂನ್ಯರಾದ ಧಾರ್ತರಾಷ್ಟ್ರನ (ದುರ್ಯೋಧನನ) ಮಿತ್ರರಾದ ಆ ದುಷ್ಟರಾಜಕುಮಾರರು ಮತ್ತೆಮತ್ತೆ ಭೀಮಸೇನನ ಸಂಹಾರಕ್ಕಾಗಿ ವಿವಿಧ ಪ್ರಯತ್ನಗಳನ್ನು ಮಾಡಿದರು. ಭುಜಬಲ ಪರಾಕ್ರಮಗಳಿಂದ ಅತಿಭಯಂಕರನಾಗಿ ಶ್ರೀ ಭೀಮಸೇನನು ಅವರ ಎಲ್ಲಾ ಪ್ರಯತ್ನಗಳನ್ನೂ ವ್ಯರ್ಥಗೊಳಿಸಿ ದಿಗ್ವಿಜಯಯಾತ್ರೆಗಾಗಿ ಹೊರಡಲಾಶಿಸಿ ಸಕಲ ಸಿದ್ಧತೆಗಳನ್ನು ಮಾಡಿಕೊಂಡನು.

ಕುಂತೀಕುಮಾರನಾದ ಕಲಿಭೀಮನು ದಿಗ್ವಿಜಯಕ್ಕೆ ಹೊರಟು, ಮೊದಲು ಪೂರ್ವದಿಕ್ಕು, ಅನಂತರ ದಕ್ಷಿಣದಿಕ್ಕು, ಹಾಗೂ ಜಲಾಧಿಪತಿಯಾದ ವರುಣನಿಂದ ಪಾಲಿತನಾದ ಪಶ್ಚಿಮದಿಕ್ಕು ತರುವಾಯ ಉತ್ತರ ದಿಕ್ಕುಗಳಲ್ಲಿರುವ ದೇಶಗಳನ್ನೂ ಜಯಿಸಿದನು.

ಪೂರ್ವದಲ್ಲಿ ರಾವಣ-ಕುಂಭಕರ್ಣರಾಗಿದ್ದ ದೈತ್ಯರೇ ಈಗ ಕುಂತೀದೇವಿಯ ತಂಗಿಯರ ಮಕ್ಕಳಾಗಿ ಶಿಶುಪಾಲ-ದಂತವಕ್ರರೆಂಬ ಹೆಸರಿನಿಂದ ಜನಿಸಿದ್ದರು. ಅವರನ್ನು ಭೀಮಸೇನನು ಜಯಿಸಿದನು.

ರಾವಣ-ಕುಂಭಕರ್ಣರಲ್ಲಿ ಅಗ್ರಜನಾದ ರಾವಣನು ದಮಘೋಷನ ಮಗನಾಗಿ ಹುಟ್ಟಿದ್ದನು. ಆ ದಮಘೋಷನ ಪುತ್ರನನ್ನು ಜನರು ಶಿಶುಪಾಲನೆಂಬ ಹೆಸರಿನಿಂದ ಕರೆಯುತ್ತಾರೆ. ಕುಂತಿಯ ಮತ್ತೊಬ್ಬ ಸೋದರಿಯ ಮಗನೂ, ಕರೂಶ ದೇಶಾಧಿಪತಿಯೂ ಆಗಿ, ಕುಂಭಕರ್ಣಾಂಶದಿಂದ ಹುಟ್ಟಿದವನನ್ನು ದಂತವಕ್ರನೆಂದು ಕರೆಯುವರು. ಶಿಶುಪಾಲ-ದಂತವಕ್ರರ ತಾಯಂದಿರು ಭೀಮಸೇನನ ತಾಯಿಯಾದ ಕುಂತೀದೇವಿಯ ಸಹೋದರಿಯರು, ಭೀಮನಿಗೆ ಚಿಕ್ಕಮ್ಮಂದಿರೆಂದು ಭಾವ. ಶಿಶುಪಾಲ-ದಂತವಕ್ರರನ್ನು ಜಯಿಸಿದ ಭೀಮಸೇನನು ವಸುದೇವನ ಮಗನಾದ ಪೌಂಡ್ರಕನನ್ನೂ, ಅನಂತರ ಭೀಷ್ಮಕನ ಮಗನಾದ ರುಕ್ಮಿಯನ್ನೂ ಜಯಿಸಿದನು.

ಹಿಂದೆ ನರಭಂಜಕನಾದ (ನರಹಾ) ಇಲ್ವಲನೆಂಬ ರಾಕ್ಷಸನಾಗಿದ್ದವನೇ ಈಗ ಜನಿಸಿ ಕುಂಡಿನೀಪುರಾಧಿಪತಿಯಾಗಿ ರುಕ್ಮಿಯೆಂದು ಪ್ರಸಿದ್ಧನಾಗಿದ್ದನು.

ನರಹಾ (ನರಭಂಜಕ)ನೆಂಬ ಹೆಸರು ಇಲ್ವಲನಿಗೆ ಏಕೆ ಬಂದಿತೆಂಬುದನ್ನೀಗ ಸ್ಪಷ್ಟಪಡಿಸುತ್ತಾರೆ.

ಹಿಂದೆ ಇಲ್ವಲನೆಂಬ ದೈತ್ಯನು ತನ್ನ ತಮ್ಮನಾದ ವಾತಾಪಿಯನ್ನು ತರಕಾರಿ (ಶಾಕಾ)ಯಾಗಿ ಮಾಡಿ ಮನುಷ್ಯರಿಗೆ ಭೋಜನ ಮಾಡಿಸುತ್ತಿದ್ದನು. ಅನಂತರ ತನ್ನ ತಮ್ಮನನ್ನು 'ವಾತಾಪಿ ಹೊರಗೆ ಬಾ' ಎಂದು ಕರೆದರೆ ಅವನು ಮನುಷ್ಯನ ಉದರವನ್ನು ಭೇದಿಸಿಕೊಂಡು ಹೊರಗೆ ಬರುತ್ತಿದ್ದನು. ಆಗ ಮನುಷ್ಯರು ಮೃತರಾಗುತ್ತಿದ್ದರು. ಇದು ಆ ಅಣ್ಣತಮ್ಮಂದಿರ ಪ್ರತಿನಿತ್ಯದ ಕ್ರೀಡೆಯಾಗಿತ್ತು! ಈ ಕ್ರೂರ ವ್ಯಾಪಾರವನ್ನು ಸೂಚಿಸಲೆಂದೇ 'ನರಹಾ' ಎಂದು ನಿರೂಪಿಸಿದ್ದಾರೆ ಎಂದು ತಿಳಿಯಬೇಕು. ಪ್ರಧಾನಾಗ್ನಿಯ ಮಗನಾದ 'ರುಚಿ' ಎಂಬ ಅಗ್ನಿಯ ಅಂಶದಿಂದ ಜನಿಸಿದವನು ರುಕ್ಮಿಯು. ಅವನ ಪಿತನಾದ ಭೀಷ್ಮಕರಾಜನು 'ಮಿತ್ರ' ಎಂಬ ಸೂರ್ಯನ ಅಂಶದಿಂದ ಹುಟ್ಟಿದವನು. ಮತ್ತು ರಾಹುವಿನ ಅಂಶದಿಂದ ಯುಕ್ತನಾದವನು, ಆ ಭೀಷ್ಮಕರಾಜನ ಸಹೋದರರಾದ ಕ್ರಥ ಮತ್ತು ಕೌಶಿ ಎಂಬವರು, ಅಗ್ನಿಪುತ್ರರಾದ 'ಪವಮಾನ' ಮತ್ತು 'ರುಂಧಿ' ಎಂಬುವವರ ಅಂಶಯುಕ್ತರು ಎಂದು ತಿಳಿಯಬೇಕು.

ಭೀಮಸೇನನು ಎಲ್ಲೆಡೆ ಜಯಗಳಿಸುತ್ತಾ ಮದ್ರದೇಶಕ್ಕೆ ಬಂದನು. ಆಗ ಅವನ ಚಿಕ್ಕತಾಯಿಯಾದ ಮಾದ್ರೀದೇವಿಯ ಸಹೋದರನಾದ ಶಲ್ಯರಾಜನು ಭೀಮನಿಗೆದುರಾದನು. ಭೀಮಾರ್ಜುನರು ಶಲ್ಯರಾಜನಿಗೆ ಸೋದರಳಿಯಂದಿರಾಗಬೇಕು. ಶಲ್ಯರಾಜನು ತನ್ನ ಬಂಧುವಾದ ಭೀಮಸೇನನ ಬಲವನ್ನು ಪರೀಕ್ಷಿಸಬೇಕೆಂಬ ಉದ್ದೇಶದಿಂದ ಭೀಮನೊಡನೆ ಯುದ್ಧಮಾಡಿ ಶಿಶುಪಾಲಾದಿಗಳಂತೆಯೇ ಪರಾಜಿತನಾದನು. ತರುವಾಯ ಏಕಲವ್ಯನನ್ನೂ, ಸಮಸ್ತ ರಾಜರನ್ನೂ ಬಲವಂತನಾದ ಕಲಿಭೀಮನು ಜಯಿಸಿದನು. ಭೀಮಸೇನನು ಜಯಿಸಿದವರನ್ನು ಬಿಟ್ಟು ಉಳಿದವರನ್ನು ಭೀಮಪರಾಕ್ರಮದಿಂದ ಪಾಲಿತನಾದ ಅರ್ಜುನನು ಸುಲಭವಾಗಿ ಜಯಿಸಿದನು. ಭೀಮನು ಸಾಲ್ವ, ಹಂಸ, ಡಿಭಿಕ ಮುಂತಾದವರನ್ನು ಸೋಲಿಸಿ ಜಯಶೀಲ-ನಾದನು. ಇಂತು ಸರ್ವತ್ರವಿಜಯಶಾಲಿಯಾದ ಭೀಮಸೇನನು ಅರ್ಜುನನೊಡನೆ ಹಸ್ತಿನಾವತಿಗೆ ಬಂದನು. ಬಾಹುಬಲ ವೀರ್ಯಾದಿಗಳಿಂದ ಕೂಡಿದ ಭೀಮಾರ್ಜುನರ ಈ ದಿಗ್ವಿಜಯದಿಂದ ಕುಂತೀದೇವಿ, ನಕುಲ-ಸಹದೇವರಿಂದ ಕೂಡಿದ ಧರ್ಮರಾಜನು ಅತ್ಯಂತ ಹರ್ಷಿತನಾದನು. ಇದರಿಂದ ಪಿತಾಮಹನಾದ ಭೀಷ್ಮ, ವಿದುರ ಹಾಗೂ ಸಜ್ಜನರಾದ ಪುರಜನರು ಸಹ ಪರಮಾನಂದಭರಿತರಾದರು.

ಹಸ್ತಿನಾವತಿಯಲ್ಲಿ ಧೃತರಾಷ್ಟ್ರಮಹಾರಾಜನು ತನ್ನ ಪುತ್ರನಾದ ದುರ್ಯೋಧನನಲ್ಲಿಯ ಮೋಹದಿಂದ ಅವನಿಗೆ ವಶವರ್ತಿಯಾಗಿ ಪಾಂಡುನಂದನರಲ್ಲಿ ವಿಪರೀತಭಾವವುಳ್ಳವನಾಗಿರುವುದನ್ನು ಅರಿತು ಧೃತರಾಷ್ಟ್ರನಿಗಿರುವ ಈ ದುರ್ಬುದ್ಧಿಯನ್ನು ಹೋಗಲಾಡಿಸಿ ಪಾಂಡವರಲ್ಲಿ ಅವನು ಪ್ರೀತಿಯಿಂದಿರುವಂತೆ ಮಾಡುವುದಕ್ಕೋಸ್ಕರ ಪರಮಾತ್ಮನಾದ ಕೃಷ್ಣನು ಅಕ್ರೂರನನ್ನು ಹಸ್ತಿನಾವತಿಗೆ ಹೋಗಿ ಬರುವಂತೆ ಅಪ್ಪಣೆ ಮಾಡಿದನು. ಕೃಷ್ಣನಾಣತಿಯಂತೆ ಸಾಧುವಾದ ಅಕ್ರೂರನು ಹಸ್ತಿನಾವತಿಗೆ ಹೋಗಿ ಧೃತರಾಷ್ಟ್ರ, ಭೀಷ್ಮ ಮತ್ತಿತರ ಕುರುಜನರಿಂದ ಸಂಪೂಜಿತನಾಗಿ, ಕೌರವರು ಮತ್ತು ಪಾಂಡವರಲ್ಲಿ ಮನಃಪ್ರವೃತ್ತಿ ಹೇಗಿದೆಯೆಂದು ಅರಿಯಲು ಕೆಲಮಾಸಗಳಕಾಲ ಹಸ್ತಿನಾವತಿಯಲ್ಲಿ ವಾಸಮಾಡಿದನು.

ಅಕ್ರೂರನು, ಕುಂತೀದೇವಿ ಮತ್ತು ವಿದುರರು ಹೇಳಿದ ಮಾತಿನಿಂದಲೂ ಸ್ವತಃ ಸರ್ವರೊಡನೆ ಮಾತುಕತೆ ನಡೆಸಿ ಸ್ವಾನುಭವದಿಂದಲೂ ಪಾಂಡವರಿಗೆ ಮಿತ್ರರಾರು? ಶತ್ರುಗಳಾರು? ಉದಾಸೀನರಾರು? ಎಂಬುದನ್ನು ಮನದಟ್ಟು ಮಾಡಿಕೊಂಡನು. ಮತ್ತು ದುರ್ಯೋಧನಾದಿ ಮಕ್ಕಳಮಾತಿಗೆ ಪ್ರತಿಹೇಳದ ಧೃತರಾಷ್ಟ್ರನು ಅವರಿಗೆ ಅಧೀನನಾಗಿರುವನೆಂದು ಖಚಿತಪಡಿಸಿಕೊಂಡು ತನ್ನ ಕರ್ತವ್ಯವನ್ನು ನೆರವೇರಿಸಲು ಉದ್ಯುಕ್ತನಾದನು. ಜ್ಞಾನಿಯಾದ ಅಕ್ರೂರನು ಧೃತರಾಷ್ಟ್ರನಲ್ಲಿಗೈತಂದು ಸಾಮ-ಭೇದೋಪಾಯಗಳಿಂದ ಅವನನ್ನು ದಾರಿಗೆ ತರಲು ಹೀಗೆ ಹೇಳಿದನು -

"ಮಹಾರಾಜ! ನೀನು ನಿನ್ನ ಮಕ್ಕಳಾದ ದುರ್ಯೋಧನಾದಿಗಳನ್ನು ಮತ್ತು ನಿನ್ನ ತಮ್ಮನಾದ ಪಾಂಡುರಾಜನ ಮಕ್ಕಳಾದ ಯುಧಿಷ್ಠಿರಾದಿಗಳನ್ನು ಸರಿಸಮಾನವಾಗಿ ಕಂಡು ಅವರಲ್ಲಿ ಯೋಗ್ಯತಾನುಸಾರವಾಗಿ ಪ್ರೀತಿ ಮಾಡುತ್ತಾ ಅವರನ್ನು ಚೆನ್ನಾಗಿ ನಡೆಸಿಕೊಂಡಲ್ಲಿ ನಿನಗೆ ಕೀರ್ತಿಯೂ, ಹೆಚ್ಚಾದ ಧರ್ಮ-ಅರ್ಥ-ಕಾಮ ಮುಂತಾದ ಪುರುಷಾರ್ಥಗಳೂ ಲಭಿಸುತ್ತವೆ. ಹೀಗೆ ಮಾಡುವುದರಿಂದ ದೇವತೆಗಳಿಂದ ಕೂಡಿದ ವಾಸುದೇವನೂ ಸಹ ನಿನ್ನಲ್ಲಿ ಉತ್ತಮ ಪ್ರೀತಿ ಮಾಡುತ್ತಾನೆ. ಅನುಗ್ರಹ ಮಾಡುತ್ತಾನೆ (ಅಕ್ರೂರನು ಈಗ ಶ್ರೀಕೃಷ್ಣನ ಪ್ರೀತಿಯ ಫಲವನ್ನು ನಿರೂಪಿಸುತ್ತಾನೆ). ಹೇ ರಾಜೇಂದ್ರ! ಭಗವಾನ್ ಶ್ರೀಕೃಷ್ಣನ ಪ್ರೀತಿ ನಿನಗೆ ದೊರಕಿದರೆ ಚತುರ್ವಿಧಪುರುಷಾರ್ಥಗಳಿಗೂ ನೀನು ಭಾಗಿಯಾಗುತ್ತೀಯೆ! ಅಂದರೆ ಧರ್ಮ, ಅರ್ಥ, ಕಾಮ ಕೊನೆಗೆ ಪರಮಪುರುಷಾರ್ಥವೆನಿಸಿದ ಮೋಕ್ಷವನ್ನೂ ಪಡೆಯುತ್ತೀಯೆ. ಒಂದು ವೇಳೆ ನೀನು, ನಾನು ಹೇಳಿದ ಹಿತವಚನಕ್ಕೆ ವಿರುದ್ಧವಾಗಿ ವರ್ತಿಸಿ ನಿನ್ನ ಮಕ್ಕಳು ಮತ್ತು ಪಾಂಡುನಂದನರಲ್ಲಿ ಭೇದವೆಣಿಸಿದರೆ, ಆಗ ಶ್ರೀಕೃಷ್ಣನ ಪ್ರೀತಿಗೆ ಬದಲಾಗಿ, ಅದಕ್ಕೆ ವಿರುದ್ಧವಾದ ಫಲವನ್ನು ಪಡೆಯಬೇಕಾದೀತು! ಅಂದರೆ ನರಕಾದ್ಯನರ್ಥಗಳಿಗೆ ಖಂಡಿತ

ಭಾಗಿಯಾಗುತ್ತೀಯೆ! ಶ್ರೀಕೃಷ್ಣನ ಸಂದೇಶವನ್ನೇ ನಾನೀಗ ನಿನಗೆ ತಿಳಿಸಿದ್ದೇನೆ. ಯುಕ್ತಾಯುಕ್ತ ವಿಚಾರಮಾಡಿ ಸರಿಯಾದ ಮಾರ್ಗದಲ್ಲಿ ನಡೆಯುವುದು ನಿನಗೆ ಶ್ರೇಯಸ್ಕರ''.

ಸಕಲ ಕುರುಜನರ ಮಧ್ಯೆ ಹೇಳಿದ ಅಕ್ರೂರನ ವಚನವನ್ನಾಲಿಸಿ, ಅವನ ಹಿತೋಕ್ತಿಯನ್ನು ಗಮನಿಸದೆ ಪುತ್ರ-ವ್ಯಾಮೋಹದಿಂದ ಅಂಧನಾದ ಕುರುಡರಾಜ ಧೃತರಾಷ್ಟ್ರನು ''ಅಕ್ರೂರ! ದೈತ್ಯರನ್ನು ಸಂಹರಿಸಿ ಭೂಭಾರಹರಣ ಮಾಡಲು ಶ್ರೀಕೃಷ್ಣನು ಅವತರಿಸಿದ್ದಾನೆ! ಎಲ್ಲವೂ ಭಗವಂತನಾದ ಅವನ ವಶದಲ್ಲಿದೆ! ನಾವೆಲ್ಲಾ ಕೇವಲ ಅಸ್ವತಂತ್ರರು. ಅಲ್ಲವೆ'' ಎಂದು ಉಸುರಿದನು. ಕುಟಿಲತನದಿಂದ ಕೂಡಿದ ಧೃತರಾಷ್ಟ್ರನ ಮಾತನ್ನಾಲಿಸಿ ಯದುಕುಲಸಂಜಾತನಾದ ಅಕ್ರೂರನು ಮನದಲ್ಲಿ ''ಈ ಧೃತರಾಷ್ಟ್ರನ ಮನಸ್ಸು ಕಲುಷಿತವಾಗಿದೆ, ಕುಟಿಲತನದಿಂದ ಕೂಡಿದೆ'' ಎಂದು ಯೋಚಿಸಿ, ''ಧೃತರಾಷ್ಟ್ರ, ನಿನಗೆ ಮಕ್ಕಳೇ ಇಲ್ಲ! ಅಂದರೆ ನಿನಗೆ ಪುತ್ರರಿಲ್ಲದಂತಾಗುತ್ತದೆ'' ಎಂದು ಹೇಳಿ, ಭೀಮಾರ್ಜುನರು ಮತ್ತು ಸಹದೇವ ಇವರೊಡನೆ ಮಧುರಾಪಟ್ಟಣಕ್ಕೆ ಹೊರಟನು.

ಮಧುರಾಪಟ್ಟಣದಲ್ಲಿ ಭೀಮಾರ್ಜುನರು ತಮ್ಮ ಸ್ವರೂಪಯೋಗ್ಯವಾದ ಭಗವದ್‌ವಿಷಯಕ ಸದ್‌ಜ್ಞಾನವನ್ನು ಭಗವಾನ್ ಶ್ರೀಕೃಷ್ಣನಿಂದ ಪಡೆದು ಭಗವಂತನೊಡನೆ ಇದ್ದು ತಮಗೆ ಯೋಗ್ಯವಾದ ಸದ್ವ್ಯಾಪಾರವುಳ್ಳವರಾಗಿ ಉತ್ಕೃಷ್ಟ ಕರ್ಮರತರೆನಿಸಿ ಯಾದವರಿಂದ ಸನ್ಮಾನಿತರಾಗಿ ಅಲ್ಲಿ ವಾಸಮಾಡಿದರು.

ಭೀಮಸೇನದೇವರು ಶ್ರೀಹರಿಯ ಪರಮಪ್ರೀತಿಗೆ ಪಾತ್ರರಾದ ಶ್ರೇಷ್ಠ ಭಗವದ್ಭಕ್ತರು. ಅವರು ''ಕೃಷ್ಣನಿಂದ ಗದಾಯುದ್ಧ ಕಲೆಯನ್ನು ಅಭ್ಯಾಸಮಾಡಿದರೆ ಅಭ್ಯಾಸಕಾಲದಲ್ಲಿ ಭಗವಂತನಿಗೆ ಎದುರಾಗಿ ನಿಂತು ಗದಾಪ್ರಹಾರಾದಿಗಳನ್ನು ಮಾಡಬೇಕಾಗುತ್ತದೆ. ಶ್ರೀಕೃಷ್ಣನ ಪರಮಭಕ್ತನಾದ ನನಗೆ ಅದು ಯುಕ್ತವಲ್ಲ. ಅಭ್ಯಾಸದೃಷ್ಟಿಯಿಂದಲೂ ಸಹ ಪರಮಾತ್ಮನ ಮೇಲೆ ಗದೆಯೆತ್ತಬೇಕಾಗುವುದನ್ನೂ ನಾನು ಸಹಿಸಲಾರೆ. ನನ್ನ ಗದೆ ಭಗವದ್ವಿರೋಧಿಗಳ ದಮನಕ್ಕಾಗಿಯೇ ಮೀಸಲು! ಆದುದರಿಂದ ನಾನು ಶ್ರೀಕೃಷ್ಣನಲ್ಲಿ ಗದಾಯುದ್ಧ ಶಿಕ್ಷಣವನ್ನು ಪಡೆಯುವುದಿಲ್ಲ'' ಎಂದು ಮನಸ್ಸಿನಲ್ಲಿಯೇ ಯೋಚಿಸಿ ಉತ್ತಮ ಶ್ಲೋಕರಾದ ಶ್ರೀ ಬಲರಾಮದೇವರಲ್ಲಿ ಗದಾಶಿಕ್ಷಣ ಪಡೆದರು.

ಶ್ರೀಕೃಷ್ಣನ ಅಭಿಮತದಂತೆ ಬಲರಾಮನು ಹಿಂದೆ ಸಾಂದೀಪಿನ್ಯಾಚಾರ್ಯರಲ್ಲಿ ಕೃಷ್ಣನೊಡನೆ ಅಧ್ಯಯನ ಮಾಡುತ್ತಿದ್ದಾಗ, ಗದಾಭ್ಯಾಸಕಾಲದಲ್ಲಿ ತಾನು ಸುದರ್ಶನಧಾರಿಯಾದ ಶ್ರೀಕೃಷ್ಣನಿಂದ ವಿನೂತನವಾಗಿ ಕಲಿತ ಗದಾಯುದ್ಧ ಕಲೆಯ ಅಪೂರ್ವ ವಿಶೇಷಗಳನ್ನು ಕೃಷ್ಣನ ಸಮಕ್ಷಮ ಭೀಮಸೇನನಿಗೆ ಹೇಳಿಕೊಟ್ಟು ಕಲಿಸಿದರು. ಅನಂತರ ಇಂದ್ರಸುತನಾದ ಅರ್ಜುನನು ಉತ್ತಮವಾದ ಅಸ್ತ್ರವಿದ್ಯೆಯನ್ನು ಶ್ರೀಕೃಷ್ಣನಲ್ಲಿ ಕಲಿತನು. ಸಹದೇವನು ಉದ್ಧವನಲ್ಲಿ ಸಕಲ ಕಲೆಯನ್ನೂ, ಉತ್ತಮ ನೀತಿಯನ್ನೂ ಕಲಿತನು.

ನಿರ್ಣಯಕಾರರು ಈಗ ಕಥಾಂತರವನ್ನು ನಿರೂಪಿಸುತ್ತಾರೆ.

ಶ್ರೀಕೃಷ್ಣನು ಉತ್ತಮ ನೀತಿಯುಕ್ತನಾದ 'ಉಪಗಮ'ನ ಮಗನಾದ ಉದ್ಧವನನ್ನು ಕರೆದು – ''ಅಯ್ಯಾ ಉದ್ಧವ! ನನ್ನ ವಿಯೋಗವಿರಹದುಃಖದಿಂದ ಬಳಲುತ್ತಿರುವ ನಂದಾದಿಗಳ, ಗೋಪಸ್ತ್ರೀಯರ ದುಃಖಪರಿಹಾರಕ್ಕೆ ನನ್ನೀ ವಚನಗಳನ್ನು ಅವರಿಗೆ ತಿಳಿಸಲು ಗೋಕುಲಕ್ಕೆ ಪ್ರಯಾಣ ಬೆಳೆಸು'' ಎಂದು ಹೇಳಿ ಅವರಿಗೆ ಹೇಳಬೇಕಾದ ತನ್ನ ಸಂದೇಶವನ್ನಿಂತು ಅರುಹಿದನು –

''ನನ್ನ ಪ್ರೀತಿಯ ನಂದ ಮತ್ತು ಗೋಪಸ್ತ್ರೀಯರೇ, ಗೋಪಾಲಕರೇ! ನಾನು ಸಕಲಮಾನವದೇಹಿಗಳ ಹೃದಯ ಕಮಲಗಳಲ್ಲಿಯೂ ಇದ್ದೇನೆ. ಆದ್ದರಿಂದ ಜಗತ್ತಿನಲ್ಲಿ ವಿಯೋಗವೆಂಬುದೇ ಸರ್ವಥಾ ಇಲ್ಲ. ನಾನು ಕೇವಲ ಮನುಷ್ಯನೆಂಬ

ಬುದ್ಧಿ ನಿಮಗೆ ಯಾವಾಗಲೂ ಬಾರದಿರಲಿ. ಏಕೆಂದರೆ ಸಾಕ್ಷಾತ್ ವೇದಪಾರಗರಾದ ಗರ್ಗಾಚಾರ್ಯರೇ ಮೊದಲಾದವರು ನನ್ನನ್ನು ಸಾಕ್ಷಾತ್ ಪರಬ್ರಹ್ಮನೆಂದು ಹೇಳುತ್ತಾರೆ. ಆದ್ದರಿಂದ ನಿಮಗೆ ನಾನು ಎಲ್ಲರಂತೆ ಮಾನವನೆಂಬ ಬುದ್ಧಿಯುಂಟಾಗುವುದು ಬೇಡ".

ಶ್ರೀಕೃಷ್ಣನು ನಂದಾದಿ ಗೋಪಜನರಿಗೆ ತಾನು ಸಾಕ್ಷಾತ್ ಪರಬ್ರಹ್ಮ ಸ್ವರೂಪನೆಂಬುದರಲ್ಲಿ ಹೆಚ್ಚು ವಿಶ್ವಾಸವನ್ನು ಹುಟ್ಟಿಸುವುದಕ್ಕಾಗಿ ಹಿಂದೆ ಜರುಗಿದ ಕೆಲವು ಅದ್ಭುತ ಪ್ರಸಂಗಗಳನ್ನು ಅವರಿಗೆ ಜ್ಞಾಪಕಕ್ಕೆ ತರುತ್ತಾ 'ಸಂದೇಶ'ವನ್ನು ಮುಂದುವರಿಸಿ ಹೀಗೆ ಹೇಳಿದನು –

"ಪೂರ್ವದಲ್ಲಿ ನಾನು ಗೋಕುಲದಲ್ಲಿದ್ದಾಗ ಅಜಗರ (ಹೆಬ್ಬಾವು)ವೊಂದು ನಂದನನ್ನು ನುಂಗಹತ್ತಿತು. ಆ ನಂದನನ್ನು ಬಿಡಿಸಲು ಯಾರೂ ಸಮರ್ಥರಾಗಲಿಲ್ಲ. ಆಗ ನಾನು ನನ್ನ ಪಾದದಿಂದ ಹೆಬ್ಬಾವನ್ನು ಸ್ಪರ್ಶಿಸಿದೆ. ಕೂಡಲೇ ಆ ಅಜಗರವು ನಂದನನ್ನು ಬಿಟ್ಟು ತನ್ನ ಮೂಲರೂಪವಾದ ವಿದ್ಯಾಧರ ದೇಹವನ್ನು ಪಡೆಯಿತು! ಶಾಪಮುಕ್ತನಾದ ಆ ವಿದ್ಯಾಧರನು ಆಗ ಹೇಳಿದ ಸಮಸ್ತ ವಿಚಾರವನ್ನೂ ಸ್ಮರಿಸಿಕೊಳ್ಳಿರಿ.

ಹಿಂದೆ ಆ ಗಂಧರ್ವನು ತನ್ನ ಸೌಂದರ್ಯಮದದಿಂದ ನಿತ್ಯವೂ ತಪಶ್ಚರಣಾದಿಗಳಿಂದ ಕೃಶರಾಗಿದ್ದ ಅಂಗೀರಸಮುನಿಗಳ ಪುತ್ರರ ವಿರೂಪವನ್ನು ಕಂಡು ಹಾಸ್ಯಮಾಡಿ ನಕ್ಕಿದ್ದರಿಂದ ಕುಪಿತರಾದ ಆ ವಿಪ್ರರು "ಎಲವೋ ರೂಪಗರ್ವಿತನೇ! ನೀನು ಕೂಡಲೇ ಅಜಗರನಾಗು" ಎಂದು ಶಾಪನೀಡಿದರು. ಕೂಡಲೇ ವಿದ್ಯಾಧರನು ಸರ್ಪರೂಪತಾಳಿದನು. ಆ ವಿದ್ಯಾಧರನೇ ನನ್ನ ಪಾದಸ್ಪರ್ಶದಿಂದ ಶಾಪಮುಕ್ತನಾಗಿದ್ದ. ಆ ಗಂಧರ್ವನು ನಂದನನ್ನು ಕುರಿತು ಹೀಗೆ ಹೇಳಿದನು – "ಶ್ರೀಕೃಷ್ಣನು ಮನುಷ್ಯನಲ್ಲ! ಚೇತನಾಚೇತನಾತ್ಮಕ ಸಕಲ ಪ್ರಪಂಚದ ಸೃಷ್ಟಿಸ್ಥಿತಿ ಸಂಹಾರಗಳಿಗೆ ಕಾರಣನಾದ ಶ್ರೀಮನ್ನಾರಾಯಣನೇ ಶ್ರೀಕೃಷ್ಣನು! ಜಗದೀಶ್ವರನೂ, ಸರ್ವಸ್ವತಂತ್ರನೂ, ಶ್ರೇಷ್ಠರಾದ ಬ್ರಹ್ಮ-ರುದ್ರೇಂದ್ರಾದಿಗಳಕ್ಕಿಂತ ಉತ್ಕೃಷ್ಟನೂ ಆದ ಶ್ರೀಕೃಷ್ಣನೇ ನಾರಾಯಣನೆಂದು ತಿಳಿದು ವಿರಕ್ತರಾದ ಮುನಿಗಳು ಸಂಸಾರದಿಂದ ಮುಕ್ತರಾಗಿ ಶ್ರೀಕೃಷ್ಣನ ಪಾದಕಮಲಗಳನ್ನು ಅಂದರೆ ಸ್ವಸ್ವರೂಪಾನಂದಾವಿರ್ಭಾವರೂಪ ಮೋಕ್ಷವನ್ನು ಹೊಂದುತ್ತಾರೆ". ಹೀಗೆ ಹೇಳಿದ ಆ ಗಂಧರ್ವನ ನುಡಿಯನ್ನು ಸ್ಮರಿಸಿರಿ.

ಇಷ್ಟು ಮಾತ್ರವಲ್ಲ! ಇನ್ನೊಂದು ಸಂದರ್ಭವನ್ನು ಜ್ಞಾಪಿಸಿಕೊಳ್ಳಿರಿ. ಒಂದು ಸಲ ವರುಣನ ದೂತನಾದ ಅಸುರನು ಸ್ನಾನಮಾಡುತ್ತಿದ್ದ ನಂದಗೋಪನನ್ನು ಅಪಹರಿಸಿಕೊಂಡು ಹೋದನು. ಆಗ ನಾನು ವರುಣಲೋಕಕ್ಕೆ ಹೋಗಿ ವರುಣನಿಂದ ಪೂಜಿತನಾಗಿ ನಂದನನ್ನು ಬಿಡಿಸಿಕೊಂಡು ಬಂದೆ. ಆಗ ವರುಣನು ನಂದನನ್ನು ಕುರಿತು "ಹೇ ನಂದ! ಕೃಷ್ಣನು ನಿನ್ನ ಪುತ್ರನಲ್ಲ! ಪ್ರಸಿದ್ಧನಾದ ಪುರುಷೋತ್ತಮನಾದ ಶ್ರೀಹರಿಯೇ ಇವನು" ಎಂದು ಹೇಳಿದನು. ಅದನ್ನು ಸ್ಮರಿಸಿಕೊಳ್ಳಿರಿ. ಆಗ ಗೋಪಜನರೆಲ್ಲರೂ ತಮಗೆ ವೈಕುಂಠಲೋಕವನ್ನು ತೋರಿಸು ಎಂದು ಪ್ರಾರ್ಥಿಸಿದಾಗ ಯಾರಿಂದಲೂ ಅಸಾಧ್ಯವಾದ ಲೋಕವನ್ನು ನಾನು ಗೋಪಜನರಿಗೆ ತೋರಿಸಲಿಲ್ಲವೇ? ಉತ್ಪತ್ತಿರಹಿತನಾದ ನಾನು ಕೇವಲ ಮಾನವನಲ್ಲವೆಂಬುದನ್ನು ದೃಢಪಡಿಸಲು ಮೂಲರೂಪ ಮತ್ತು ಈಗಿನ ಕೃಷ್ಣರೂಪಗಳನ್ನು ಏಕಕಾಲದಲ್ಲಿ ದರ್ಶನಮಾಡಿಸಿದ್ದೆ. ಅದನ್ನು ಸ್ಮರಿಸಿಕೊಳ್ಳಿರಿ. ಆದ್ದರಿಂದ ನನ್ನಲ್ಲಿ ಮನಸ್ಸ್ಥೈರ್ಯವನ್ನಿಟ್ಟು ನಾನು ನಿಮ್ಮೆಲ್ಲರಲ್ಲಿಯೂ ಸರ್ವದಾ ಇದ್ದೇನೆಂದು ತಿಳಿದು ನನ್ನ ವಿಯೋಗವಿರಹ ದುಃಖದಿಂದ ಮುಕ್ತರಾಗಿ ಸಂತೋಷಭರಿತರಾಗಿ ನನ್ನ ಸ್ಮರಣ ಮಾಡುತ್ತಾ ಇರಿ".

ಹೀಗೆ ಹೇಳಿದ ಪುರುಷೋತ್ತಮನಾದ ಕೃಷ್ಣನು ನಂದಾದಿಗಳಿಗಿತ್ತ ಸಂದೇಶವನ್ನು ಕೇಳಿ ಹರ್ಷನಿರ್ಭರನಾಗಿ ಉದ್ಧವನು ಗೋಕುಲಕ್ಕೆ ಹೋಗಿ ಅಲ್ಲಿ ನಂದಾದಿಗೋಪಜನರು ಮತ್ತು ಗೋಪಸ್ತ್ರೀಯರನ್ನೂ ಕಂಡು ಅವರೆಲ್ಲರಿಗೂ ಶ್ರೀಕೃಷ್ಣನ ಮೇಲ್ಕಂಡ

ಸಂದೇಶ ಮತ್ತು ಸಮಾಧಾನವಚನಗಳನ್ನು ಹೇಳಿ ಗೋಪಾಲಕರಾದ ಅವರಿಗೆ ಉಂಟಾಗಿದ್ದ ಕೃಷ್ಣವಿಯೋಗವಿರಹ-ದುಃಖವನ್ನು ಪರಿಹರಿಸಿ, ಅವರನ್ನು ಆನಂದಗೊಳಿಸಿ ಮತ್ತೆ ಮಧುರೆಗೆ ವಿಷ್ಣುಭಿನ್ನನಾದ ಶ್ರೀಕೃಷ್ಣನ ಪಾದಸನ್ನಿಧಿಗೆ ಬಂದು ಸೇರಿದನು.

*ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದ ಹದಿನಾಲ್ಕನೆಯ ಅಧ್ಯಾಯದ ಕಥಾಸಂಗ್ರಹವು ಮುಗಿದುದು.*

॥ ಶ್ರೀಕೃಷ್ಣಾರ್ಪಣಮಸ್ತು ॥



# ಪಂಚದಶಾಧ್ಯಾಯಭಾವಸಂಗ್ರಹ

**ಅವತಾರಿಕೆ:-**

ಈಗ ಶ್ರೀಮಂತ್ರಾಲಯಶ್ರೀಪಾದಂಗಳವರು ಶ್ರೀಮದಾಚಾರ್ಯರು ವಿರಚಿಸಿದ ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯ ಗ್ರಂಥದ ಹದಿನೈದನೆಯ ಅಧ್ಯಾಯಾರ್ಥವನ್ನು "ಯಸ್ಮಾತ್" ಎಂಬ ಪದ್ಯದಿಂದ ಸಂಗ್ರಹಿಸುತ್ತಾರೆ.

**ಯಸ್ಮಾದ್ ವ್ಯಾಸಸ್ವರೂಪಾದಪಿ ವಿದಿತಸುವಿದ್ಯಾಪ್ಯಾಯಯುಃಶ್ಚ ಪ್ರಮೋದಂ**
**ಪಾರ್ಥಾ ದ್ರೋಣಸ್ಸುತಾರ್ಥಂ ಪ್ರತಿಗತಭೃಗುಪೋ ಯನ್ನಿಯತ್ಯಾರ್ಥಕಾಮಃ ।**
**ತಸ್ಮಾದಾಪ್ತೋರುವಿದ್ಯೋ ದ್ರುಪದಮುಪಗತೋಽನಾಪ್ತಕಾಮಃ ಸ್ವವಿದ್ಯಾಃ**
**ಶಿಷ್ಯೇಭ್ಯಃ ಕೌರವೇಭ್ಯೋ ದಿತಿಜನಿರಸನೋಽದಾತ್ ಸ ನೋಽವ್ಯಾನ್ಮುರಾರಿಃ ॥ 15 ॥**

**ಅನ್ವಯಾರ್ಥ :-** **ವ್ಯಾಸಸ್ವರೂಪಾತ್** = ಶ್ರೀವೇದವ್ಯಾಸ ಸ್ವರೂಪನಾದ, **ಯಸ್ಮಾದಪಿ** = ಯಾವ ಶ್ರೀಕೃಷ್ಣನಿಂದಲೂ, **ವಿದಿತಸುವಿದ್ಯಾ** - **ವಿದಿತ** = ತಿಳಿದುಕೊಳ್ಳಲ್ಪಟ್ಟ, **ಸುವಿದ್ಯಾ (ಸಂತಃ) ಅಪಿ** = ಉತ್ತಮ ವಿದ್ಯೆಗಳುಳ್ಳವರಾಗಿ, **ಪಾರ್ಥಾಃ** = ಕುಂತೀಪುತ್ರರಾದ ಧರ್ಮರಾಜಾದಿ ಪಾಂಡವರು, **ಪ್ರಮೋದಂ** = ಪ್ರಕರ್ಷ ಹರ್ಷವನ್ನು, **ಆಯಯುಃ** = ಹೊಂದಿದರು, **ಯನ್ನಿಯತ್ಯಾ** = ಶ್ರೀಕೃಷ್ಣನ ಪ್ರೇರಣೆಯಿಂದ, **ದ್ರೋಣಃ** = ದ್ರೋಣಾಚಾರ್ಯರು, **ಸುತಾರ್ಥಂ** = ಮಗನಾದ ಅಶ್ವತ್ಥಾಮನ ಹಾಲಿಗೋಸ್ಕರವಾಗಿ, **ಪ್ರತಿಗತಭೃಗುಪಃ** = ಪರಶುರಾಮದೇವರನ್ನು ಹೊಂದಿದವರಾಗಿ, **ತಸ್ಮಾತ್** = ಶ್ರೀಪರಶುರಾಮ-ದೇವರಿಂದ, **ಆಪ್ತೋರುವಿದ್ಯಃ** - **ಆಪ್ತ** = ಪಡೆಯಲ್ಪಟ್ಟ, **ಉರು** = ಹೆಚ್ಚಾದ, **ವಿದ್ಯಃ** = ವಿದ್ಯೆಯುಳ್ಳವರಾಗಿ, **ಅರ್ಥಕಾಮಃ** = ಗೋಪ್ರಾಪ್ತಿ ಲಕ್ಷಣ ಪ್ರಯೋಜನಕ್ಕಾಗಿ, **ದ್ರುಪದಂ** = ಮಿತ್ರನಾದ ಪಾಂಚಾಲದೇಶಾಧಿಪತಿಯಾದ ದ್ರುಪದರಾಜನನ್ನು, **ಉಪಗತಃ** = ಹೊಂದಿದವನಾಗಿ, **ಅನಾಪ್ತಕಾಮಃ** = ಗೋವುಗಳನ್ನು ಪಡೆಯಲಾರದವರಾಗಿ, **ಶಿಷ್ಯೇಭ್ಯಃ** = ಶಿಷ್ಯರುಗಳಾದ, **ಕೌರವೇಭ್ಯಃ** = ಕುರುವಂಶೋದ್ಭವರಾದ ಧಾರ್ತರಾಷ್ಟ್ರರು ಮತ್ತು ಪಾಂಡವರಿಗೆ, **ಸ್ವವಿದ್ಯಾಃ** = ತಾವು ಕಲಿತ ವಿದ್ಯೆಗಳನ್ನು ಅರ್ಥಾತ್ ಶಸ್ತ್ರಾಸ್ತ್ರವಿದ್ಯೆಗಳನ್ನು, **ಅದಾತ್** = ತನಗೆ ಪ್ರಯೋಜನವಾದೀತೆಂಬ ಅಭಿಪ್ರಾಯದಿಂದ ಹೇಳಿಕೊಟ್ಟರು. **ಸಃ** = ಹೀಗೆ ಕೌರವ-ಪಾಂಡವರು ವಿದ್ಯೆ ಕಲಿಯಲು ಕಾರಣನಾದ, **ದಿತಿಜನಿರಸನಃ** = ದೈತ್ಯಸಂಹಾರಕನಾದ, **ಮುರಾರಿಃ** = ಮುರವೈರಿಯಾದ ಶ್ರೀಕೃಷ್ಣನು, **ನಃ** = ನಮ್ಮನ್ನು, **ಅವ್ಯಾತ್** = ಕಾಪಾಡಲಿ.

**ತಾತ್ಪರ್ಯ :-** ಶ್ರೀಮನ್ನಾರಾಯಣಾಭಿನ್ನನಾದ ಶ್ರೀವೇದವ್ಯಾಸಸ್ವರೂಪಿ ಶ್ರೀಕೃಷ್ಣಪರಮಾತ್ಮನು ತನ್ನ ಭಕ್ತರೂ ಸೋದರತ್ತೆಯ ಮಕ್ಕಳೂ ಆದ ಧರ್ಮರಾಜಾದಿ ಪಾಂಡವರಿಗೆ ಸಕಲ ಶ್ರೇಷ್ಠ ವಿದ್ಯೆಗಳನ್ನು ಹೇಳಿಕೊಟ್ಟು ಅನುಗ್ರಹಿಸಿದನು. ಪಾಂಡವರು ಶ್ರೀಕೃಷ್ಣನಿಂದ ಸಮಸ್ತ ವಿದ್ಯೆಗಳನ್ನು ಕಲಿತು ಬಹು ಸಂತೋಷಭರಿತರಾದರು. ಇದರಂತೆ ಶ್ರೀಕೃಷ್ಣನ ಪ್ರೇರಣೆಯಿಂದ ದ್ರೋಣಾಚಾರ್ಯರಲ್ಲಿ ಕೌರವರೊಡನೆ ಸೇರಿ ಪಾಂಡವರು ಸಕಲ ಶಸ್ತ್ರಾಸ್ತ್ರ ವಿದ್ಯೆಗಳನ್ನು ಕಲಿತರು. ದ್ರೋಣಾಚಾರ್ಯರು ಶ್ರೀಕೃಷ್ಣನ ಪ್ರೇರಣೆಯಿಂದ ತಮ್ಮ ಪುತ್ರ ಅಶ್ವತ್ಥಾಮಾಚಾರ್ಯರಿಗೆ ಹಾಲಿಗೋಸ್ಕರವಾಗಿ ಶ್ರೀಪರಶು-ರಾಮದೇವರಲ್ಲಿ ಹೋಗಿ ಅವರ ಆಶ್ರಯದಲ್ಲಿದ್ದು ಸಮಸ್ತ ವಿದ್ಯೆಗಳನ್ನೂ ಅಭ್ಯಾಸ ಮಾಡಿದರು. ಆದರೆ ಯಾವ ಉದ್ದಿಶ್ಯಕ್ಕಾಗಿ ಅಲ್ಲಿಗೆ ಹೋಗಿದ್ದರೋ ಆ ವಾಂಛಿತ ಮಾತ್ರ ಪೂರ್ಣವಾಗಲಿಲ್ಲ. ಆದರಿಂದ ಅವರು ತಮ್ಮ ಮಿತ್ರನಾದ ಪಾಂಚಾಲ ದೇಶಾಧಿಪತಿಯಾದ ದ್ರುಪದರಾಜನಲ್ಲಿಗೆ ಹೋದರು. ಅಲ್ಲಿಯೂ ಅವರ ಮನೋರಥ ಪೂರ್ಣವಾಗಲಿಲ್ಲ. ಆದ್ದರಿಂದ ದ್ರೋಣಾಚಾರ್ಯರು ಶ್ರೀಕೃಷ್ಣನ ಪ್ರೇರಣೆಯಿಂದ ಹಸ್ತಿನಾವತಿಗೆ ಬಂದು ಅಲ್ಲಿ ರಾಜಾಶ್ರಯವನ್ನು ಸಂಪಾದಿಸಿ,

ಕುರುಕುಲಸಂಜಾತರಾದ ಪಾಂಡವರು ಮತ್ತು ದುರ್ಯೋಧನಾದಿ ಧಾರ್ತರಾಷ್ಟ್ರರಿಗೆ ತಾವು ಕಲಿತಿದ್ದ ಸಕಲ ಶಸ್ತ್ರಾಸ್ತ್ರ-ವಿದ್ಯೆಗಳನ್ನು ಹೇಳಿಕೊಟ್ಟರು. ಹೀಗೆ ಪಾಂಡವರು ಶ್ರೀಕೃಷ್ಣನಲ್ಲಿಯೂ ನಂತರ ಅವನ ಪ್ರೇರಣೆಯಂತೆ ದ್ರೋಣಾಚಾರ್ಯ-ರಲ್ಲಿಯೂ ಸಕಲ ವಿದ್ಯೆಗಳನ್ನೂ, ಕಲಿತರು. ಇಂತಹ ದೈತ್ಯಸಂಹಾರಕನಾದ, ಮುರವೈರಿಯಾದ ಶ್ರೀಕೃಷ್ಣಪರಮಾತ್ಮನು ನಮ್ಮನ್ನು ಕಾಪಾಡಲಿ ಎಂದು ಭಾವ.

## ಪಂಚದಶೋಽಧ್ಯಾಯ ಕಥಾಸಂಗ್ರಹ

ಈಗ ಶ್ರೀ ನಿರ್ಣಯಾಚಾರ್ಯರು ಈ ಅಧ್ಯಾಯದಲ್ಲಿ ಶ್ರೀ ಭೀಮಸೇನದೇವರ ಪ್ರಭಾವವನ್ನು ವರ್ಣಿಸುತ್ತಾ ಪಾಂಡವರ ಕಥೆಯನ್ನು ನಿರೂಪಿಸುತ್ತಾರೆ.

ಹೀಗೆ ತನ್ನ ಭಕ್ತರ ದುಃಖಪರಿಹಾರವೇ ಮುಂತಾದ ಕಾರ್ಯಗಳನ್ನೆಸಗುತ್ತಾ ಶ್ರೀಕೃಷ್ಣಪರಮಾತ್ಮನು ಬಹುಚೆನ್ನಾಗಿ ರಾಜ್ಯಭಾರಮಾಡುತ್ತಿರಲು ತಮ್ಮನಾದ ಸಹದೇವನಿಂದೊಡಗೂಡಿದ ಭೀಮಾರ್ಜುನರು ಮೂರುವರ್ಷಗಳ ಕಾಲ ದ್ವಾರಕೆಯಲ್ಲಿ ಶ್ರೀಕೃಷ್ಣನ ಸನ್ನಿಧಿಯಲ್ಲಿ ವಾಸಮಾಡಿ ಅನಂತರ ಭಗವಾನ್ ಶ್ರೀಕೃಷ್ಣನ ಅಪ್ಪಣೆಯನ್ನು ಪಡೆದು ಶ್ರೀಕೃಷ್ಣನ ಪುತ್ರನಾದ ವಿಶೋಕನೊಡನೆ ತಮ್ಮ ಊರಾದ ಹಸ್ತಿನಾಪುರಕ್ಕೆ ಮರಳಿದರು.

ಈಗ ವಿಶೋಕನ ಬಗೆಗೆ ವಿವರಣೆ ನೀಡುತ್ತಾರೆ – ಈ ವಿಶೋಕನು ಶ್ರೀಕೃಷ್ಣನಿಂದ ತ್ರಿವಕ್ರೆಯಲ್ಲಿ ಜನಿಸಿದ ಪುತ್ರನು, ನಾರದರ ಶಿಷ್ಯನು. ಇವನು ಭೀಮಸೇನದೇವರ ರಥದ ಸಾರಥಿಯೂ ಆಗಿದ್ದನು. ಪಿಂಗಳಾ ಎಂಬ ಗಣಿಕಾಸ್ತ್ರೀಯು ತನ್ನ ಹೃದ್ಗತನಾದ ಉತ್ತಮಶ್ಲೋಕನಾದ ಶ್ರೀಹರಿಯೇ ತನಗೆ ಪತಿಯಾಗಬೇಕೆಂದು ಇಚ್ಛಿಸಿ ಆ ಗಣಿಕಾಶರೀರವನ್ನು ತ್ಯಜಿಸಿ ಈಗ ಸೈರಂಧ್ರಿಯಾಗಿ (ತ್ರಿವಕ್ರೆಯಾಗಿ) ಜನಿಸಿದ್ದಳು. ಆದ್ದರಿಂದಲೇ ಅವಳಿಗೆ ಶ್ರೀಕೃಷ್ಣನ ಸಂಗಮವಾಯಿತು. ಇಂಥ ತ್ರಿವಕ್ರೆಯಲ್ಲಿ ಜನಿಸಿದವನೇ ವಿಶೋಕನು. ಪಂಚರಾತ್ರಾಗಮಗಳನ್ನು ಚೆನ್ನಾಗಿ ತಿಳಿದಿರುವ ವಿಶೋಕನನ್ನು ಭೀಮಸೇನದೇವರು ತಮಗೆ ಯೋಗ್ಯನಾದ ಸಾರಥಿಯನ್ನಾಗಿ ಪಡೆದು ಆನಂದಿಸಿದರು.

ಭೀಮಸೇನದೇವರು ಶ್ರೀಕೃಷ್ಣನಿಂದ ಪ್ರಾಪ್ತವಾದ ವಿದ್ಯಾಪೇಕ್ಷಯಾ ಪುನಃ ಶ್ರೀಹರಿಯ ಉತ್ತಮಸ್ವರೂಪನಾದ ಶ್ರೀ ವೇದವ್ಯಾಸರಿಂದ ತತ್ತ್ವವಿದ್ಯೆಯನ್ನು ಪಡೆದರು. ಇಂತು ಆ ಪರತತ್ತ್ವವಿದ್ಯಾಪ್ರಭಾವದಿಂದ ಸರ್ವವಿಜಯಿಗಳಾದ ಈ ಭೀಮಸೇನದೇವರು ದೇವತೆಗಳ ಅವತಾರರಾದ ಅರ್ಜುನಾದಿಗಳಿಗೆ ಆ ಪರತತ್ತ್ವವಿದ್ಯೆಯನ್ನು ಉಪದೇಶಮಾಡಿದರು. ಸರ್ವವಿಜಯೀಭೀಮಸೇನನೆಂದು ಹೇಳಿದುದನ್ನೀಗ ನಿರ್ಣಯಾಚಾರ್ಯರು ವಿವರಿಸುತ್ತಾರೆ.

ಭಗವಂತನಾದ ಶ್ರೀಹರಿಯ ಉತ್ಕೃಷ್ಟತ್ವಾದಿಗಳನ್ನು ಪ್ರತಿಪಾದಿಸದೇ ಇರುವ (ಅರ್ಥಾತ್ ನಿರಾಕರಿಸುವ) ಸಕಲಶಾಸ್ತ್ರಪಂಥಗಳನ್ನೂ ನಿರಾಕರಿಸಿ ಶ್ರೀಭೀಮಸೇನದೇವರು ನಿರವದ್ಯವೂ, ಅತ್ಯುತ್ಕೃಷ್ಟವೂ ಆದ ಶ್ರೀ ವಿಷ್ಣೂತ್ಕರ್ಷ ಪ್ರತಿಪಾದಕ ಶಾಸ್ತ್ರಪಂಥವನ್ನು ಪ್ರವರ್ತಿಸಿ ಪ್ರಸಾರ ಮಾಡಿದರು. ಅಪರಿಮಿತ ಜ್ಞಾನ-ಬಲಾತ್ಮಕರಾದ ಭೀಮಸೇನದೇವರು ಭುಜಬಲಪರಾಕ್ರಮ ಹಾಗೂ ವಾಗ್ವೈಭವಾದಿಗಳಿಂದ ಯುಕ್ತರಾಗಿ, ಅಂತೆಯೇ ಈ ಬಾಹುಯುದ್ಧ-ವಾಗ್ಯುದ್ಧಗಳೆಂಬ ಎರಡು ವಿಧ ವಿದ್ಯೆಗಳಲ್ಲಿಯೂ ಕ್ರೀಡೆಗಾಗಿ ಬಲರಾಮರನ್ನು ಜಯಿಸಿದರು. ದಿನದಿನವೂ ನೂತನವಾಗಿ ಪ್ರಕಟವಾದ ಅತ್ಯುತ್ತಮ ಪ್ರತಿಭಾಸಾಮರ್ಥ್ಯಶಾಲಿಗಳಾದ ಅವರು ಶ್ರೀಕೃಷ್ಣ-ವ್ಯಾಸಾತ್ಮಕನಾದ ಶ್ರೀಹರಿಯಿಂದ ಪರವಿದ್ಯೆಯನ್ನು ಕೇಳಿ (ಅಭ್ಯಾಸಮಾಡಿ) ಪುನಃ ಶ್ರೇಷ್ಠವಾದ ಪ್ರತಿಭೆ ಮತ್ತು ಜ್ಞಾನವನ್ನು ಪಡೆದರು. ಇದರಿಂದ ಪರಾತ್ಮವಿದ್ಯಾಧ್ಯಯನದಿಂದಾಗಿ ಭೀಮಸೇನದೇವರು ಮಹಾಪ್ರತಿಭಾಶಾಲಿಗಳೆಂಬುದು ಸ್ಪಷ್ಟವಾಗುತ್ತದೆ. ಬ್ರಹ್ಮ-ರುದ್ರೇಂದ್ರಾದಿ ಪದವಿಗಳನ್ನು ಭೂ-

ವಿಭ್ರಮಣಮಾತ್ರದಿಂದ ಅನುಗ್ರಹಿಸಲು ಶಕ್ತಳಾದ ಶ್ರೀರಮಾದೇವಿಯೂ ಸಹ ಯಾವ ಶ್ರೀ ಹರಿಯ ವಕ್ಷಃಸ್ಥಳದಲ್ಲಿ ಆಶ್ರಯಪಡೆದು 'ಶ್ರೀ' ಎನಿಸಿರುವಳೆಂದು ಜಗತ್ತಿನಲ್ಲಿ ವಿಖ್ಯಾತಳಾಗಿರುವಳೋ ಅಂಥ ಶ್ರೀ ಹರಿಯ ಅವತಾರನಾದ ಶ್ರೀಕೃಷ್ಣನನ್ನು ಆಶ್ರಯಿಸದೇ ಯಾರು ತಾನೇ ಜೀವಿಸಬಲ್ಲರು? ಅಂದರೆ ಭಗವಾನ್ ಶ್ರೀಕೃಷ್ಣನನ್ನು ಸರ್ವದಾ ಆಶ್ರಯಿಸಿರುವ ಭೀಮಸೇನಾದಿಗಳು ಶ್ರೀಲಕ್ಷ್ಮೀಕಟಾಕ್ಷಕ್ಕೆ ಪಾತ್ರರಾಗಿ ಉತ್ತಮರೀತಿಯಿಂದ ಜೀವಿಸುವುದು ಆಶ್ಚರ್ಯವಲ್ಲವೆಂದು ಭಾವ. ಭಗವಂತನಲ್ಲಿ ಶರಣಾಗತನಾದ ಧರ್ಮರಾಜನೂ ಸಹ ಪರತತ್ತ್ವವಿದ್ಯೆಯನ್ನು ಶ್ರೀವ್ಯಾಸ-ಶ್ರೀಕೃಷ್ಣರಿಂದ ಪಡೆದನು. ಶ್ರೀವ್ಯಾಸ-ಶ್ರೀಕೃಷ್ಣರಿಂದ ಶಿಕ್ಷಿತರಾದ (ಕಲಿಸಲ್ಪಟ್ಟ) ಧರ್ಮಾದಿ ಪುರುಷಾರ್ಥಗಳುಳ್ಳವರಾದ್ದರಿಂದಲೇ ಭಗವದ್ಧರ್ಮಾಚರಣ-ಸ್ವಭಾವವುಳ್ಳ ಆ ಪಾಂಡವರು ಶ್ರೀಹರಿಯನ್ನು ಶರಣುಹೊಂದಿ ಆಮಂದಾನಂದಭರಿತರಾಗಿ ಸುಖಿಸಿದರು.

ಈಗ ದ್ರೋಣಾಚಾರ್ಯರ ವೃತ್ತಾಂತವನ್ನು ನಿರೂಪಿಸುತ್ತಾರೆ -

ಭರದ್ವಾಜಋಷಿಗಳ ಪುತ್ರರಾದ ದ್ರೋಣಾಚಾರ್ಯರು ತಮ್ಮ ಆಶ್ರಮಕ್ಕೆ ಉಚಿತವಾದ ಧರ್ಮದಂತೆ ನಡೆಯುತ್ತಿದ್ದರು. ಅಂತೆಯೇ ಅವರು ಪ್ರತಿಗ್ರಹಧರ್ಮವನ್ನು (ದಾನಾದಿಸ್ವೀಕಾರ) ಬಿಟ್ಟಿದ್ದರು. ಅಂದರೆ ತಮ್ಮ ಜೀವನಕ್ಕಾಗಿ ಯಾಚಿಸಿ ಮತ್ತೊಬ್ಬರಿಂದ ಅವರು ಏನನ್ನೂ ಪಡೆಯುತ್ತಿರಲಿಲ್ಲ. ಆದುದರಿಂದಲೇ ಅವರು ಜೀವನಕ್ಕೆ ಉಪಯುಕ್ತವೂ ಆವಶ್ಯಕವೂ ಆದ ಪಶುದ್ರವ್ಯಾದಿ ಸಂಗ್ರಹ ಮಾಡದಲೇ ಸ್ವಧರ್ಮನಿರತರಾಗಿ ಜೀವಿಸುತ್ತಿದ್ದರು. ಅವರಿಗೆ ಅಶ್ವತ್ಥಾಮ ಎಂಬ ಪುತ್ರನಿದ್ದನು. ಆ ಅಶ್ವತ್ಥಾಮನು ಧೃತರಾಷ್ಟ್ರನ ಪುತ್ರರೇ ಮೊದಲಾದವರೊಡನೆ ಆಟಪಾಟಗಳಲ್ಲಿ ಕಲೆತಿರುತ್ತಿದ್ದನು. ತನಗೆ ಹಸಿವೆಯಾದಾಗ ಕ್ಷೀರವನ್ನು ಕುಡಿಯಲು ತನ್ನ ಮನೆಗೆ ಬರುತ್ತಿದ್ದನು. ಆಗ ಅವನ ತಾಯಿಯಾದ ಕೃಪಾದೇವಿಯು ಅವನಿಗೆ ಕುಡಿಯಲು ಹಿಟ್ಟನ್ನು ನೀರಿನಲ್ಲಿ ಬೆರಸಿ ಹಾಲೆಂದು ನೀಡುತ್ತಿದ್ದಳು. ಹಾಲಿಗೂ ಹಿಟ್ಟಿನ ನೀರಿಗೂ ವ್ಯತ್ಯಾಸ ತಿಳಿಯದ ಅಶ್ವತ್ಥಾಮನು ಅದನ್ನು ಸಂತೋಷದಿಂದ ಕುಡಿದು ಮತ್ತೆ ಆಟವಾಡಲು ದುರ್ಯೋಧನಾದಿಗಳ ಬಳಿಗೆ ಬಂದು 'ನಾನು ಹಾಲು ಕುಡಿದೆ' ಎಂದು ಹೇಳಿ ನರ್ತಿಸುತ್ತಿದ್ದನು. ಹೀಗೆಯೇ ಪ್ರತಿನಿತ್ಯ ಜರುಗುತ್ತಿತ್ತು. ಒಂದು ದಿವಸ ಹಿಟ್ಟಿನ ಹಾಲನ್ನು ಕುಡಿದು ಬಂದು ಆನಂದದಿಂದ ಕುಣಿದಾಡುತ್ತಿದ್ದ ಅಶ್ವತ್ಥಾಮನಿಗೆ ದುರ್ಯೋಧನಾದಿಗಳು ಅರಮನೆಯಿಂದ ತಮಗೆ ಬಂದ ಶ್ರೇಷ್ಠವಾದ ಹಸುವಿನ ಹಾಲನ್ನು ಕೊಟ್ಟು ಕುಡಿಸಿದರು. ಆಗ ಅವನಿಗೆ ನಿಜವಾದ ಹಾಲಿನ ಮಾಧುರ್ಯದ ಮಹತ್ವ ವ್ಯಕ್ತವಾಯಿತು. ಮರುದಿನ ಹಾಲುಕುಡಿಯಲು ಮನೆಗೆ ಬಂದಾಗ ಕೃಪಾದೇವಿಯು ಹಿಟ್ಟಿನ ಹಾಲನ್ನು ಮಗನಿಗೆ ನೀಡಿದಾಗ ಅಶ್ವತ್ಥಾಮನು "ಅಮ್ಮಾ, ಇದು ಗೋಕ್ಷೀರವಲ್ಲ, ಹಿಟ್ಟಿನ ಹಾಲು. ನನಗೆ ಇದು ಬೇಡ. ಗೋಕ್ಷೀರವನ್ನೇ ಕೊಡು" ಎಂದು ಹಟಮಾಡಿದನು. ಕೃಪಿಯು ಎಷ್ಟು ಸಮಾಧಾನ ಹೇಳಿದರೂ ಕೇಳದೆ ಅಶ್ವತ್ಥಾಮನು 'ಹಾಲು ಹಾಲು' ಎಂದು ಅಳಹತ್ತಿದನು. ಮಗನು ಅಳುತ್ತಿರುವುದನ್ನು ಕಂಡು ಪತ್ನಿಯಿಂದ ವಿಷಯವನ್ನರಿತು ಖಿನ್ನರಾದ ದ್ರೋಣಾಚಾರ್ಯರು ಭಗವಂತನ ಪ್ರೇರಣೆಯಿಂದ ಮಗನ ಮೇಲೆ ಉಂಟಾದ ಮಮತೆ-ಕಾರುಣ್ಯಗಳಿಂದಲೂ, ಶ್ರೀಭಗವತ್ಪ್ರೇರಣೆಗಳಿಂದಲೂ ಶ್ರೀ ಪರಶುರಾಮದೇವರಲ್ಲಿ ಮಗನಿಗಾಗಿ ಗೋವನ್ನು ಪಡೆಯುವುದು ದೋಷಾವಹವಲ್ಲವೆಂದು ತಿಳಿದು ಶ್ರೀಭಾರ್ಗವರಾಮರಲ್ಲಿಗೆ ತೆರಳಿದರು. 'ಶ್ರೀ ಪರಶುರಾಮದೇವರು ಸಾಕ್ಷಾತ್ ಶ್ರೀ ವಿಷ್ಣುವಿನ ಅವತಾರ. ಶ್ರೀ ಹರಿಯೇ ಸಕಲ ಜಗತ್ತಿಗೂ ತಂದೆ, ಸ್ವಾಮಿ, ಗುರು ಮತ್ತು ಪರಾತ್ಪರ ದೇವನು. ಸರ್ವವೂ ಅವನ ಅಧೀನ ಮತ್ತು ಅವನದ್ದೇ ಆಗಿದೆ. ಅಂಥ ಶ್ರೀ ಹರಿಪರಮಾತ್ಮನ ಅವತಾರರಾದ ಶ್ರೀಪರಶುರಾಮದೇವರಲ್ಲಿ ಆಕಳನ್ನು ಪಡೆಯುವುದು ದೋಷವಲ್ಲ' ಎಂದು ಭಾವಿಸಿ ದ್ರೋಣಾಚಾರ್ಯರು ಪರಶು-ರಾಮದೇವರಲ್ಲಿಗೆ ಬಂದರು.

ಜಮದಗ್ನಿಗಳ ಪುತ್ರರಾದ ಶ್ರೀ ಪರಶುರಾಮದೇವರು ತಮ್ಮಲ್ಲಿಗೆ ಬಂದ ದ್ರೋಣಾಚಾರ್ಯರನ್ನು ಕಂಡು ಭೂ-ಭಾರಹರಣ ಮಾಡಲು ದ್ರೋಣರನ್ನು ನಿಮಿತ್ತಮಾತ್ರಕಾರಣರನ್ನಾಗಿ ಮಾಡಲು ಯೋಚಿಸಿದರು. (ಸಂಹಾರಕಾರ್ಯದಲ್ಲಿ

ತಾವೇ ಮುಖ್ಯಕರ್ತೃವಾದ್ದರಿಂದ, ಹಾಗೆ ಚಿಂತಿಸಿದರು). ಮನುಷ್ಯಯೋನಿಯಲ್ಲಿ ಜನಿಸಿದ ದೇವತೆಗಳ ನಾಶಕರು, ಪುತ್ರಸಹಿತರಾದ ದ್ರೋಣಾಚಾರ್ಯರಾಗಲಿ ಎಂದು ಆಲೋಚಿಸಿದರು. ದೇವತೆಗಳ ಸಂರಕ್ಷಣೆಗಾಗಿ ಅವತರಿಸಿದ ಪರಶು-ರಾಮದೇವರು ದೇವತೆಗಳ ನಾಶವನ್ನೇಕೆ ಚಿಂತಿಸಿದರು? ಎಂದರೆ ನಿರ್ಣಯಾಚಾರ್ಯರು ಅಪ್ಪಣೆ ಕೊಡಿಸುತ್ತಾರೆ - ಪಾಂಡವರಿಗಾಗಿ ಸಂಪ್ರಹೃತರಾದ ದೇವತೆಗಳ ಅವತಾರರಾದವರಿಗೆ ವೃದ್ಧಿಯೂ (ಪಾಂಡವರಿಗೆ ಸಹಾಯಕರಲ್ಲದ) ಸ್ವಸಮಾನ ದೇವತೆಗಳ ದೆಶೆಯಿಂದ ಸುಖಾತಿಶಯವು ಸಂಸಾರಾವಸ್ಥೆಯಲ್ಲೂ ಉಂಟಾಗುವುದು. ಮೋಕ್ಷದಲ್ಲಿಯೂ (ಸ್ವಸ್ವರೂಪಾ-ನಂದಾವಿರ್ಭಾವರೂಪ) ಸುಖದ ವೃದ್ಧಿಯಾಗುವುದು. ಅಂತೆಯೇ ಅವರ ಹನನವನ್ನು ಪರಶುರಾಮರು ಚಿಂತಿಸಿದರೆಂದು ಭಾವ. ದೇವತೆಗಳ ನಾಶವನ್ನು ಪರಶುರಾಮದೇವರು ಯೋಚಿಸಿದ ಮತ್ತೊಂದು ಕಾರಣವನ್ನು ನಿರೂಪಿಸುತ್ತಾರೆ - 'ಕಲಿಯುಗದಲ್ಲಿ ದೇವತೆಗಳಿಗೆ ಹುಟ್ಟಿದ ಸಂತತಿಯು ಭೂಮಿಯಲ್ಲಿ ಇರಲು ಯೋಗ್ಯವಲ್ಲ. ಏಕೆಂದರೆ ಕಲಿಯುಗದಲ್ಲಿ ಜನಿಸಿದ ಜೀವರು ಪ್ರಾಯಃ ಅತ್ಯಂತ ಪಾಪಿಷ್ಠರಾಗಿಯೇ ಹುಟ್ಟುತ್ತಾರಾದ್ದರಿಂದ ಸುರಸಂತತಿಯು ಕಲಿಯುಗದಲ್ಲಿರುವುದು ಯೋಗ್ಯವಲ್ಲ.'

ಕಲಿಯುಗದಲ್ಲಿ ಜನಿಸಿದ ದೇವಸಂತಾನರು ಬಹು ಪಾಪಿಷ್ಠರಾಗಿರಲಿ, ಅದರಿಂದೇನು? ಎಂದರೆ ದೇವತೆಗಳ ವಂಶ-ಸಂಜಾತರಾದ ಪುರುಷರು ನೂರು ಸಂತಾನದವರಿಗೆ ಪ್ರಾಯಶಃ ಪಾಪಯೋಗ್ಯರಾಗುವುದಿಲ್ಲ. ಇಲ್ಲಿ 'ಪ್ರಾಯಶಃ' ಎಂಬುದು ದುರ್ಯೋಧನಾದಿಗಳ ವ್ಯಾವೃತ್ತ್ಯರ್ಥವೆಂದು ಅರಿಯಬೇಕು. ಕಾರಣವಿಲ್ಲದೆ ಸ್ವಯಂ ವಂಶನಷ್ಟವಾಗುವುದೆಂದರೆ, ದೋಷರಹಿತವೂ, ವ್ಯರ್ಥವಲ್ಲದುದೂ ಆದ ಅಮೋಘವೀರ್ಯರಾದ ದೇವತೆಗಳ ವಂಶದ ಅಭಾವವೂ ಕೂಡ ಶಾಪ ರೂಪವಾದ ವಧೆಯು ಕಾರಣವಿಲ್ಲದೆ ಆಗುವುದು ಯೋಗ್ಯವಲ್ಲ. ಹಾಗಾದರೆ ಹಾಗೆಯೇ ಆಗಲಿ ಎಂದರೆ ಅದಕ್ಕೆ ಬಾಧಕವನ್ನು ಹೇಳುತ್ತಾ ಉಪಸಂಹರಿಸುತ್ತಾರೆ. ಸಕಲ ದೇವತೆಗಳ ವಂಶವು ನಾಶವಾಗದೇ ಇದ್ದಲ್ಲಿ ಕಲಿಕಾಲದ ವ್ಯಾಪಾರವು ನಡೆಯದೇ ಹೋಗಬೇಕಾಗುತ್ತದೆ. ಅದು ಸರಿಯಲ್ಲ, ಆದ್ದರಿಂದ ಅಶ್ವತ್ಥಾಮರಿಂದ ಕೂಡಿದ ಈ ದ್ರೋಣಾಚಾರ್ಯರು ಭೂಮಿಯಲ್ಲಿ ಜನಿಸಿದ ಸಕಲ ಪರಾಕ್ರಮಿಗಳ ನಾಶಕರಾಗಲು ಅರ್ಹರಾಗಿದ್ದಾರೆ. ಇವರ ಮೂಲಕ ಸಕಲ ವೀರರ ನಾಶವಾಗಲಿ.

ಹೀಗೆ ಆಲೋಚನೆ ಮಾಡಿ ತಾನು ಅನಂತಶಕ್ತಿಯುಳ್ಳ, ಸರ್ವೇಶ್ವರನೂ, ಸ್ವಾಮಿಯೂ ಆಗಿದ್ದರೂ ಕೂಡ ಶ್ರೀ ಪರಶುರಾಮದೇವರು ಕಿರುನಗೆಯನ್ನು ಹೊರಸೂಸಿ ಕಾಂತಿಯನ್ನು ಬೀರುತ್ತಾ 'ದ್ರೋಣಾಚಾರ್ಯರೇ! ನಾನು ಸರ್ವಸ್ವವನ್ನೂ ತ್ಯಾಗ ಮಾಡಿದ್ದೇನೆ. ಈಗ ನನ್ನಲ್ಲಿ ದ್ರವ್ಯಾದಿಗಳಾವುವೂ ಇಲ್ಲ, ಈಗ ನಾನು ಕೇವಲ ನನ್ನನ್ನು, ವಿದ್ಯೆ ಮತ್ತು ಪರಶು-ಶಾರ್ಙ್ಗಾದಿ ಆಯುಧಗಳನ್ನು ಮಾತ್ರ ಹೊಂದಿದ್ದೇನೆ. ಅಂದರೆ ನಾನು, ವಿದ್ಯೆ, ಶಸ್ತ್ರಗಳ ವಿನಃ ಬೇರೇನೂ ಉಳಿದಿಲ್ಲ, ಈ ಮೂವರಲ್ಲಿ ನಾನು, ವಿದ್ಯೆ, ಶಸ್ತ್ರಗಳಲ್ಲಿ ನಿಮಗೆ ಇಷ್ಟವಾದುದನ್ನು ತೆಗೆದುಕೊಳ್ಳಿ" ಎಂದು ಹೇಳಿದರು. ಆಗ ದ್ರೋಣರು ಆಲೋಚನೆ ಮಾಡಿ, "ಪ್ರಭು! ಪರಶುರಾಮರೇ, ನಿನ್ನನ್ನು ಪಡೆದರೆ ಪರಿಚಾರಕರನ್ನಾಗಿ ಸ್ವೀಕರಿಸಬೇಕು, ಹಾಗೆ ನಿನ್ನನ್ನು ಪರಿಚಾರಕರನ್ನಾಗಿ ಪಡೆಯಲಾರು ಸಮರ್ಥರೀ ಧರೆಯೊಳಗೆ? ನಿನ್ನನ್ನು ಪರಿಚಾರಕನನ್ನಾಗಿ ಪಡೆಯಲು ಯಾರೂ ಸಮರ್ಥರಲ್ಲ! ಹೇ ಈಶ, ನೀನು ಎಲ್ಲರಿಗೂ ಸ್ವಾಮಿಯಾಗಿದ್ದೀಯೆ. ಸರ್ವರಂತರಂಕಿತ ನೀನು ಅತ್ಯಂತ ಉತ್ಕೃಷ್ಟನು, ನೀನೇ ಸರ್ವಸ್ವತಂತ್ರನು, ನಿನಗೆ ನೀನೇ ಸಾಟಿ! ನಿನಗೆ ಸದೃಶರು ಬೇರೊಬ್ಬರಿಲ್ಲ. ನಿನ್ನ ಸಾಮ್ಯವನ್ನು ಬಯಸಿದ ಪುರುಷರು ಅಂಧಃತಮಸ್ಸಿಗೆ ಹೋಗುತ್ತಾರೆ. ಅಂಥ ಅಂಧಃತಮಸ್ಸಿನಿಂದ (ಅಧೋಲೋಕದಿಂದ) ಮೇಲೇಳಲು, ಅದರಿಂದ ಹೊರಬರಲು ಯಾರೂ ಯಾವಾಗಲೂ ಶಕ್ತರಲ್ಲ, ಸರ್ವಸ್ವತಂತ್ರನಾದ ಹೇ ಸ್ವಾಮಿ, ದುರ್ಬಲರಾದ ನಮಗೆ ಸರ್ವೋತ್ತಮನಾದ ನಿನ್ನ ಶಸ್ತ್ರಗಳಿಂದ ಏನು ಪ್ರಯೋಜನ? ಆದ್ದರಿಂದ ಹೇ ಜನಿರಹಿತನೇ! ಅತೀಂದ್ರಿಯ ಪದಾರ್ಥಗಳನ್ನು ವಿಷಯೀಕರಿಸುವ (ಸೂಕ್ಷ್ಮಾತಿ-

ಸೂಕ್ಷ್ಮಾರ್ಥ ಪ್ರತಿಪಾದಕವೂ), ಪರಬ್ರಹ್ಮಪ್ರತಿಪಾದಕವೂ ಆದ ನಿರ್ಮಲವಾದ ತತ್ತ್ವವಿದ್ಯೆಯನ್ನೇ ನನಗೆ ನೀನು ಅನುಗ್ರಹಿಸು" ಎಂದು ಪ್ರಾರ್ಥಿಸಿದರು.

ಆಗ ಶ್ರೀ ಪರಶುರಾಮದೇವರು ಅಸ್ತ್ರ-ಶಸ್ತ್ರವಿದ್ಯಾ ಸಹಿತವಾಗಿ, ಪರತತ್ತ್ವವಿದ್ಯಾದಿ (ನೀತಿ ಸ್ತಂಭೋಚ್ಚಾಟನಾದಿ) ಸಕಲ ವಿದ್ಯೆಗಳನ್ನೂ ದ್ರೋಣರಿಗೆ ಉಪದೇಶಪೂರ್ವಕ ಅನುಗ್ರಹಿಸಿದರು. ಅತ್ಯಂತ ಬುದ್ಧಿವಂತರಾದ ದ್ರೋಣಾಚಾರ್ಯರು ಹನ್ನೆರಡು ವರ್ಷಗಳಲ್ಲಿ ಆ ಸಮಸ್ತವಿದ್ಯೆಗಳನ್ನೂ ಭಾರ್ಗವರಾಮರಿಂದ ಕಲಿತು ಅವರ ಅಪ್ಪಣೆಪಡೆದು ತಮ್ಮ ಬಾಲ್ಯಮಿತ್ರನಾದ ದ್ರುಪದರಾಜನು ಹಿಂದೆ 'ನಾವಿಬ್ಬರೂ ನಮ್ಮ ರಾಜ್ಯವನ್ನು ಸಮಾನವಾಗಿ ಆಳೋಣ. ನಿನಗೆ ಅರ್ಧರಾಜ್ಯವನ್ನು ಕೊಡುತ್ತೇನೆ' ಎಂದು ಹೇಳಿದ್ದ ವಿಷಯವನ್ನು ಸ್ಮರಿಸಿಕೊಂಡು ದ್ರುಪದರಾಜನ ಸಹಾಯವನ್ನು ಬಯಸಿ ಪಾಂಚಾಲರಾಜನಾದ ದ್ರುಪದನ ಬಳಿಗೆ ತೆರಳಿದರು.

ದ್ರೋಣಾಚಾರ್ಯರು ಶ್ರೀ ಪರಶುರಾಮದೇವರಲ್ಲಿ ಸಕಲ ವಿದ್ಯೆಗಳನ್ನೂ, ಶಸ್ತ್ರಾಸ್ತ್ರವಿದ್ಯೆಗಳನ್ನೂ ಪಡೆದು ಅವರ ಅಪ್ಪಣೆ ಪಡೆದು ಗೋಧನಸಂಗ್ರಹಕ್ಕಾಗಿ ತಮ್ಮ ಬಾಲ್ಯಮಿತ್ರನಾದ ದ್ರುಪದರಾಜನ ಬಳಿಗೆ ಬಂದು "ಮಿತ್ರ, ಹಿಂದೆ ನೀನು 'ರಾಜ್ಯವನ್ನು ಆಳೋಣ. ನೀನು ನನ್ನ ಮಿತ್ರನಾಗಿದ್ದೀಯೆ' ಎಂದು ಹೇಳಿದ್ದೆ. ನಾನೀಗ ನನ್ನ ಮಗನಿಗಾಗಿ ಗೋಧನಕ್ಕಾಗಿ ಬಂದಿದ್ದೇನೆ" ಎಂದು ಹೇಳಿದನು. ಹಿಂದೆ ದ್ರೋಣರನ್ನು ತನ್ನ ಮಿತ್ರರೆಂದು ಹೇಳಿದ್ದ ದ್ರುಪದರಾಜನು ಅವರ ಮಾತನ್ನಾಲಿಸಿ ಅದೃಷ್ಟನಿಯಾಮಕನಾದ ಶ್ರೀಹರಿಯ ಇಚ್ಛೆಯಿಂದಲೇ ಉಂಟಾದ ಗರ್ವದಿಂದ, ರಾಜ್ಯಮದದಿಂದ, "ಎಲವೋ ದ್ರೋಣ! ನೀನು ನನ್ನನ್ನು ಮಿತ್ರನೆಂದು ಕರೆದೆಯಲ್ಲವೇ? ಎಲವೋ ಬ್ರಾಹ್ಮಣ, ನೀನು ದರಿದ್ರ, ನಾನು ರಾಜಾಧಿರಾಜ! ನಿನ್ನಂಥ ಬಡವನು ಮಹಾರಾಜನಾದ ನನ್ನ ಸಖನಾಗಲು ಸಾಧ್ಯವೇ ಇಲ್ಲ. ನನ್ನ ಯೋಗ್ಯತೆಯೇನು? ನಿನ್ನ ಯೋಗ್ಯತೆಯೇನು? ನಿನ್ನನ್ನು ಮಿತ್ರನೆಂದು ಒಪ್ಪಲು ಸಾಧ್ಯವಿಲ್ಲ. ಆದ್ದರಿಂದ ಬಂದ ಹಾದಿಗೆ ಸುಂಕವಿಲ್ಲದಂತೆ ಹೊರಟುಹೋಗು" ಎಂದು ಸಿರಿವಂತಿಕೆಯ ಮದದಿಂದ ದ್ರೋಣಾಚಾರ್ಯರನ್ನು ಹೀನಾಯವಾಗಿ ನಿಂದಿಸಿದನು. ದ್ರುಪದರಾಜನ ಮರ್ಮಾಹತವಾದ ವಾಕ್ಯಗಳನ್ನಾಲಿಸಿ, ಜಿತೇಂದ್ರಿಯರಾಗಿದ್ದರೂ ಶ್ರೀ ಭಗವತ್ಸಂಕಲ್ಪ-ಇಚ್ಛೆಗಳಂತೆ ದ್ರೋಣಾಚಾರ್ಯರಿಗೆ ಬಹಳ ಕೋಪ-ವುಂಟಾಯಿತು. "ನನ್ನ ತಂದೆಯಾದ ಭರದ್ವಾಜರ ಶಿಷ್ಯನಾದ ದ್ರುಪದನು ನನ್ನ ಶಿಷ್ಯನೂ ಅಹುದು. ಶಿಷ್ಯನ ಸಂಪತ್ತು ಗುರುವಿನ ಸಂಪತ್ತಾಗುವುದು. ಆದ್ದರಿಂದ ಪ್ರತಿಗ್ರಹದಿಂದ ದೂರನಾದ ನಾನು ಶಿಷ್ಯನಾದ ದ್ರುಪದನ ಸಂಪತ್ತನ್ನು ಸ್ವೀಕರಿಸುವುದು ದೋಷಾವಹವಲ್ಲವೆಂದು ಭಾವಿಸಿ, ಮಿತ್ರನೂ, ಶಿಷ್ಯನೂ ಆದ ಇವನಲ್ಲಿ ಗೋಧನವನ್ನು ಪಡೆಯಲು ಬಂದರೆ ರಾಜ್ಯಮದಮತ್ತನೂ, ಮೂಢನೂ ಪಾಪಿಯೂ ಆದ ಇವನು ದುರ್ವಚನಗಳನ್ನಾಡಿ ನನ್ನನ್ನು ತಿರಸ್ಕರಿಸಿ ಅವಮಾನ ಮಾಡಿದನಲ್ಲ! ಇರಲಿ. ಕುರುಕುಲದವರನ್ನು ನನ್ನ ಶಿಷ್ಯರನ್ನಾಗಿ ಮಾಡಿಕೊಂಡು ದುರ್ಬುದ್ಧಿಯಾದ ಈ ದ್ರುಪದನ ಗರ್ವವನ್ನು ಪರಿಹರಿಸುತ್ತೇನೆ" ಎಂದು ಮನದಲ್ಲಿ ಯೋಚಿಸಿ ದ್ರೋಣಾಚಾರ್ಯರು ಕುರುಗಳ ರಾಜಧಾನಿಯಾದ ಹಸ್ತಿನಾವತಿಯತ್ತ ಹೊರಟರು.

"ಈಗ ಪ್ರತಿಗ್ರಹದಿಂದ ದೂರಾದ ನನಗೆ ಬೇಕಾದ ಪ್ರಯೋಜನವೆಂದರೆ ದ್ರುಪದನಿಗ್ರಹರೂಪವಾದುದು ಮತ್ತು ದ್ರವ್ಯಾದಿರೂಪ ಪ್ರಯೋಜನವೂ ಸಹ ನನಗೆ ಕುರುರಾಜರಿಂದ ದೊರಕೀತು" ಎಂದು ಮನಸ್ಸಿನಲ್ಲಿ ಯೋಚಿಸುತ್ತಾ ದ್ರೋಣಾಚಾರ್ಯರು ಹಸ್ತಿನಾಪುರದ ಹೊರಭಾಗದಲ್ಲಿ ಕೌರವರೊಡನೆ ಆಟವಾಡುತ್ತಿದ್ದ ಪಾಂಡವರನ್ನು ಕಂಡರು. ಕೌರವನೊಡನೆ ಚೆಂಡಿನಾಟವನ್ನಾಡುತ್ತಿದ್ದ ಧರ್ಮರಾಜನ ಬೆರಳಿನಲ್ಲಿದ್ದ ರಾಜಮುದ್ರೆಯುಂಗುರ ಮತ್ತು ಕಂದುಕಗಳು ಅಲ್ಲಿಯೇ ಇದ್ದ ಆಳವಾದ ಬಾವಿಯಲ್ಲಿ ಬಿದ್ದುಹೋಯಿತು. ರಾಜಕುಮಾರರೆಲ್ಲರೂ ಒಟ್ಟಾಗಿ ಕಲೆತು ಚೆಂಡನ್ನು, ಮುದ್ರೆ-ಯುಂಗುರವನ್ನು ಭಾವಿಯಿಂದ ಹೊರತೆಗೆಯುವುದೆಂತು ಎಂದು ಯೋಚಿಸಹತ್ತಿದರು. ಆಗ ಭೀಮಸೇನದೇವರು

"ಮಿತ್ರರೇ, ಏಕೆ ಯೋಚಿಸುವಿರಿ? ನಾನು ಸ್ವಸಾಮರ್ಥ್ಯದಿಂದ ಈ ಭಾವಿಯಲ್ಲಿ ಧುಮುಕಿ ನೀರು ಎಷ್ಟೇ ಆಳವಾಗಿದ್ದರೂ ಮುಳುಗಿ ಕಂದುಕವನ್ನೂ ಅಣ್ಣನ ಮುದ್ರೆಯುಂಗುರವನ್ನೂ ತೆಗೆದುಕೊಂಡು ಮೇಲೇರಿ ಬರುತ್ತೇನೆ, ನೀವು ನೋಡುತ್ತಿರಿ" ಎಂದು ಹೇಳಿದರು. ಆಗ ಕುರುಬಾಲಕರನ್ನು ನೋಡಿ ದ್ರೋಣಾಚಾರ್ಯರು "ಎಲೈ ರಾಜಪುತ್ರರೇ! ನೀವು ಭರತಕುಲದಲ್ಲಿ ಜನಿಸಿದ್ದೀರಿ. ಪ್ರಖ್ಯಾತವಾದ ಭರತಕುಲಸಂಜಾತರಾದ ನೀವು ಮುದ್ರೆಯುಂಗರ ಮತ್ತು ಕಂದುಕ (ಚೆಂಡು)ವನ್ನು ಭಾವಿಯಿಂದ ತೆಗೆಯಲು ದೇವತೆಗಳಿಂದಲೂ ಆರಾಧ್ಯವಾದ ಅಸ್ತ್ರವಿದ್ಯೆ, ಮಂತ್ರವಿದ್ಯೆಗಳನ್ನು ಬಿಟ್ಟು ಶಾರೀರಕ ಸಾಮರ್ಥ್ಯದಿಂದ ತೆಗೆಯಲು ಪ್ರಯತ್ನಿಸುತ್ತಿರುವಿರಲ್ಲ. ನಿಮ್ಮ ಪ್ರವೃತ್ತಿಗೆ ಧಿಕ್ಕಾರವಿರಲಿ. ಪ್ರಖ್ಯಾತ ಭರತವಂಶೋದ್ಭವರಾದ ನೀವು ಅಸ್ತ್ರವಿದ್ಯೆಯನ್ನು ಕಲಿಯದಿರುವುದು ಅವಮಾನಕರವಾಗಿದೆ" ಎಂದು ಹೇಳಿದರು. ಸುರರಿಂದ ಪೂಜ್ಯರಾದ ಬೃಹಸ್ಪತ್ಯಾಚಾರ್ಯರ ಪೌತ್ರರಾದ ದ್ರೋಣಾಚಾರ್ಯರನ್ನು ನೋಡಿದ ರಾಜಪುತ್ರರು "ಓಹೋ ಇವರು ಅಸ್ತ್ರವಿದ್ಯಾ-ಪ್ರವೀಣರು" ಎಂದರಿತು ಧರ್ಮರಾಜನ ರಾಜಮುದ್ರಿಕೆಯನ್ನೂ, ಕಂದುಕವನ್ನೂ ಭಾವಿಯಿಂದ ತೆಗೆದುಕೊಡುವಂತೆ ಅವರನ್ನು ಪ್ರಾರ್ಥಿಸಿದರು. ಆಗ ದ್ರೋಣಾಚಾರ್ಯರು ದಿವ್ಯಾಸ್ತ್ರಬಲದಿಂದ, ಒಂದರ ಮೇಲೊಂದರಂತೆ ಹುಲ್ಲಿನ ಕಡ್ಡಿಗಳನ್ನು ಪರಂಪರೆಯಾಗಿ ಅಭಿಮಂತ್ರಿಸಿ ಭಾವಿಯಲ್ಲಿ ಬಿಟ್ಟು ಕಂದುಕವನ್ನು ಸುಲಭವಾಗಿ ತೆಗೆದುಕೊಟ್ಟರು. ಅದನ್ನು ಕಂಡು ಆಶ್ಚರ್ಯಗೊಂಡ ರಾಜಪುತ್ರರು ರಾಜಮುದ್ರಿಕೆಯನ್ನು ತೆಗೆದುಕೊಡುವಂತೆ ದ್ರೋಣರನ್ನು ಪ್ರಾರ್ಥಿಸಲು, ದ್ರೋಣರು "ನನಗೆ ಭೋಜನವನ್ನು ಅಂದರೆ ಜೀವನೋಪಾಯವನ್ನು ಕಲ್ಪಿಸಿಕೊಡಿ, ಅಂದರೆ ನಾನು ಮುದ್ರೆಯುಂಗುರವನ್ನು ತೆಗೆದುಕೊಡುತ್ತೇನೆ" ಎಂದು ಹೇಳಿದರು. ಆಗ ಧರ್ಮರಾಜನು ಕೂಡಲೇ "ಸ್ವಾಮಿ, ವಿಪ್ರೋತ್ತಮರೇ, ನಿಮಗೆ ಯಥೇಚ್ಛ ದ್ರವ್ಯ ಮತ್ತು ಭೋಜನಾದಿಗಳನ್ನು ನಾನು ಒದಗಿಸಿಕೊಡುತ್ತೇನೆ" ಎಂದು ಪ್ರತಿಜ್ಞೆ ಮಾಡಿದನು. ಧರ್ಮಾರ್ಥ ಕಾಮಗಳಲ್ಲಿ ಮುಖ್ಯವಾದ ಧರ್ಮಕ್ಕೆ ಅಭಿಮಾನಿ ದೇವತೆಯಾದ ಯಮಧರ್ಮರಾಜನ ಪುತ್ರನಾದ ಯುಧಿಷ್ಠಿರನು ಹೀಗೆ ಪ್ರತಿಜ್ಞಾ-ಬದ್ಧನಾಗಿ ಮಾತುಕೊಟ್ಟ ಮೇಲೆ ದ್ರೋಣಾಚಾರ್ಯರು ತಮ್ಮ ಶಸ್ತ್ರವಿದ್ಯೆಯ ಬಲದಿಂದ ಧರ್ಮರಾಜನ ರಾಜಮುದ್ರಿಕೆಯನ್ನು ಭಾವಿಯಿಂದ ತೆಗೆದುಕೊಟ್ಟರು. ಪರಮಸಂತೋಷಭರಿತರಾದ ಆ ರಾಜಪುತ್ರರೆಲ್ಲರೂ ಒಟ್ಟಾಗಿ ಸೇರಿ "ಸ್ವಾಮಿ ವಿಪ್ರೋತ್ತಮರೇ, ತಮ್ಮ ಶುಭನಾಮಧೇಯವೇನು?" ಎಂದು ಪ್ರಶ್ನಿಸಿದರು. ಆಗ ದ್ರೋಣಾಚಾರ್ಯರು ನಸುನಕ್ಕು, "ಬಾಲಕರೇ, ನಿಮ್ಮ ಪಿತಾಮಹರಾದ ಭೀಷ್ಮಾಚಾರ್ಯರನ್ನು ಕೇಳಿರಿ. ಅವರೇ, ನಾನಾರು, ನನ್ನ ಹೆಸರೇನು ಎಂಬುದನ್ನು ತಿಳಿಸುತ್ತಾರೆ" ಎಂದು ಹೇಳಿದರು. ಅದನ್ನು ಕೇಳಿ ರಾಜಕುಮಾರರೆಲ್ಲರೂ ಭರದಿಂದ ತಾತ ಭೀಷ್ಮರಲ್ಲಿಗೆ ಬಂದು ನಡೆದ ವಿದ್ಯಮಾನಗಳನ್ನೆಲ್ಲಾ ಹೇಳಿ "ತಾತ! ಈ ಬ್ರಾಹ್ಮಣೋತ್ತಮರಾರು? ಅವರ ಹೆಸರೇನು?" ಎಂದು ಕುತೂಹಲದಿಂದ ಕೇಳಿದರು. ಆಗ ಭೀಷ್ಮರು "ಅವರು ದ್ರೋಣಾಚಾರ್ಯರು" ಎಂದು ತಿಳಿಸಿದರು.

ದ್ರೋಣರು ಹಿಂದೆ ಹಸ್ತಿನಾವತಿಯಲ್ಲೇ ಇದ್ದರು. ಆದರೂ ಕುರುಕುಮಾರರು ಏಕೆ ಅವರನ್ನು ಗುರ್ತಿಸಲಿಲ್ಲ? ಎಂದರೆ, ನಿಜ. ದ್ರೋಣಾಚಾರ್ಯರು ರಾಜಧಾನಿಯಲ್ಲೇ ಇದ್ದರು. ಆದರೆ ದ್ರೋಣರು ಎಂದೂ ಅರಮನೆಗೆ ಹೋಗುತ್ತಿರಲಿಲ್ಲ, ಆದ್ದರಿಂದ ದ್ರೋಣರ ಪರಿಚಯ ರಾಜಕುಮಾರರಿಗೆ ಆಗಿರಲಿಲ್ಲವಾಗಿ ದ್ರೋಣರನ್ನು ಅವರು ತಿಳಿಯಲಿಲ್ಲ. ಹಾಗಾದರೆ ಭೀಷ್ಮರು ಹೇಗೆ ತಿಳಿದರು? ಎಂದರೆ ಹಿಂದೆ ದ್ರೋಣಾಚಾರ್ಯರು ಹಸ್ತಿನಾವತಿಯಲ್ಲಿ ವಾಸಮಾಡುತ್ತಿರುವಾಗ ಅನೇಕ ಸಲ ಅವರ ಆಶ್ರಮಕ್ಕೆ ಬರುತ್ತಿದ್ದ ಭೀಷ್ಮಾಚಾರ್ಯರು ದ್ರೋಣರೊಡನೆ ಅನೇಕ ವೇಳೆ ಅಧ್ಯಾತ್ಮ ವಿದ್ಯಾವಿಚಾರಗಳನ್ನು ಚರ್ಚಿಸುತ್ತಿದ್ದರು. ಆದ್ದರಿಂದ ಅವರಿಗೆ ದ್ರೋಣರ ಪರಿಚಯವಿತ್ತು. ಆದರೆ ದ್ರೋಣರು ಇದ್ದಕ್ಕಿದ್ದಂತೆ ಹಸ್ತಿನಾವತಿಯಿಂದ ಹೊರಟುಹೋಗಿದ್ದರು. ಹನ್ನೆರಡು ವರ್ಷಗಳ ಕಾಲ ಅವನ್ನು ಕಾಣದೆ ದ್ರೋಣರು ಎಲ್ಲಿಗೆ ಹೋದರು? ಈಗೆಲ್ಲಿದ್ದಾರೆ, ಏನು ಮಾಡುತ್ತಿದ್ದಾರೆ ಎಂದು ಚಿಂತಿಸುತ್ತಿದ್ದ ಭೀಷ್ಮರು ಚಾರರ ಮೂಲಕವಾಗಿ ದ್ರೋಣಾಚಾರ್ಯರು ಶ್ರೀ ಪರಶು-ರಾಮದೇವರಲ್ಲಿ ಶಿಷ್ಯತ್ವವಹಿಸಿ ಅವರಲ್ಲಿ ಶಸ್ತ್ರಾಸ್ತ್ರವಿದ್ಯೆಯನ್ನು ಪಡೆದ ವಿಚಾರ ತಿಳಿದಿದ್ದರು. ಮತ್ತು ಕುರುಕುಮಾರರು

ರಾಜಮುದ್ರಿಕೆ ಮತ್ತು ಕಂದುಕರನ್ನು ತೆಗೆದುಕೊಟ್ಟ ಬ್ರಾಹ್ಮಣರ ವಿಚಾರ ಹೇಳಿ ಅವರಾರೆಂದು ಕೇಳಿದಾಗ ಈ ವಿಪ್ರರೇ ದ್ರೋಣರೆಂದು ತಿಳಿದು ಅದರಂತೆ ಅವರು ದ್ರೋಣರೆಂದೇ ಹೇಳಿದರು. ಅದು ಸರಿ, ಭೀಷ್ಮರು ದ್ರೋಣರನ್ನು ನೋಡದಲೇನೇ ಅವರು ದ್ರೋಣರೆಂದು ಹೇಗೆ ಹೇಳಿದರು ಎಂದರೆ ರಾಜಕುಮಾರರು ತಮ್ಮ ಕಂದುಕ-ರಾಜಮುದ್ರಿಕೆಯನ್ನು ಭಾವಿಯಿಂದ ತೆಗೆದುಕೊಟ್ಟವರು ಅಸ್ತ್ರಜ್ಞರೆಂದೂ, ಬ್ರಾಹ್ಮಣರು ವೃದ್ಧರೆಂದೂ, ಕೃಷ್ಣವರ್ಣೋಪೇತರೆಂದೂ, ಅಸ್ತ್ರವಿದ್ಯಾ, ಮಂತ್ರವಿದ್ಯಾ-ಪಾರಂಗತರೆಂದೂ ಹೇಳಿದ್ದರಿಂದ, ಅವರ ಲಕ್ಷಣ, ಮಹಾಸ್ತ್ರವಿದ್ಯಾ ಸಾಮರ್ಥ್ಯ ಹೀಗೆ ಈ ಎರಡು ಕಾರಣಗಳಿಂದ ಆ ಬ್ರಾಹ್ಮಣರೇ ದ್ರೋಣಾಚಾರ್ಯರೆಂದು ನಿಶ್ಚಯಿಸಿ ಹಾಗೆ ಹೇಳಿದರು. ಮಹಾಬುದ್ಧಿಶಾಲಿಗಳಾದ ಭೀಷ್ಮರು ಸ್ವಯಂ ದ್ರೋಣಾಚಾರ್ಯರಲ್ಲಿಗೆ ಬಂದು ಕುಶಲಪ್ರಶ್ನಾದಿಗಳಾದ ಮೇಲೆ, 'ಸ್ವಾಮಿ, ಆಚಾರ್ಯದ್ರೋಣರೇ, ಇನ್ನು ಮುಂದೆ ನೀವೇ ನಮ್ಮ ಈ ಕುರುರಾಜಕುಮಾರರಿಗೆ ಶಸ್ತ್ರಾಸ್ತ್ರವಿದ್ಯೆಗಳನ್ನು ಉಪದೇಶಮಾಡಬೇಕು. ಇವರನ್ನು ನಿಮ್ಮ ಶಿಷ್ಯರನ್ನಾಗಿ ಸ್ವೀಕರಿಸಿ ಯುದ್ಧಕಲೆಯಲ್ಲಿ ಇವರನ್ನು ಪ್ರವೀಣರನ್ನಾಗಿ ಮಾಡಬೇಕು" ಎಂದು ಪ್ರಾರ್ಥಿಸಿ ಪಾಂಡವರು ಮತ್ತು ದುರ್ಯೋಧನಾದಿಗಳು, ಇನ್ನಿತರ ರಾಜಕುಮಾರರಿಗೆ ಶಸ್ತ್ರಾಸ್ತ್ರವಿದ್ಯೆಗಳನ್ನು ಹೇಳಿಕೊಡುವ ಗುರುಗಳನ್ನಾಗಿ ದ್ರೋಣಾಚಾರ್ಯರನ್ನು ನೇಮಕಮಾಡಿದರು ಮತ್ತು ದ್ರೋಣಾಚಾರ್ಯರಿಗೆ ಸಮಸ್ತ ಸೌಕರ್ಯಗಳನ್ನು ಏರ್ಪಡಿಸಿ-ಕೊಟ್ಟರು.

ಕುರುಕುಲಸಂಜಾತರಾದ ಪಾಂಡವರು ಮತ್ತು ದುರ್ಯೋಧನಾದಿಗಳಿಗೆ ಧನುರ್ವಿದ್ಯಾಭ್ಯಾಸವನ್ನು ಪ್ರಾರಂಭಿಸುವ ಮುನ್ನ ದ್ರೋಣಾಚಾರ್ಯರು, 'ರಾಜಕುಮಾರರೇ, ನಿಮ್ಮಲ್ಲಿ ಮೊದಲು ಯಾರು 'ನನ್ನ ಅಭೀಷ್ಟವನ್ನು ನೆರವೇರಿಸುವಂತೆ ಪ್ರತಿಜ್ಞೆ ಮಾಡುವಿರೋ, ಅಂಥವರನ್ನು ನಾನು ಜಗತ್ತಿನಲ್ಲೇ ಶ್ರೇಷ್ಠಧನ್ವಿಯನ್ನಾಗಿ (ಸರ್ವೋತ್ತಮ ಬಿಲ್ಲುಗಾರನನ್ನಾಗಿ) ಮಾಡುತ್ತೇನೆ' ಎಂದು ಹೇಳಿದರು. ಆಗ ಅರ್ಜುನನು, ಭೀಮಸೇನದೇವರ ಸಲಹೆಯಂತೆ 'ಆಚಾರ್ಯರೇ! ನಿಮ್ಮ ಅಭೀಷ್ಟವು ಅದೇನೇ ಆಗಿರಲಿ, ನಾನು ಖಂಡಿತ ನಿಮ್ಮ ಮನೋಭೀಷ್ಟವನ್ನು ಪೂರೈಸುತ್ತೇನೆ' ಎಂದು ಪ್ರತಿಜ್ಞೆ ಮಾಡಿದನು.

ಅರ್ಜುನನು ಉನ್ಮಾದನಾದಿ ಅಸ್ತ್ರಗಳನ್ನು ಶ್ರೀಕೃಷ್ಣನಿಂದ ಕಲಿತಿದ್ದನು. ಆಪದ್ರಹಿತಕಾಲದಲ್ಲಿ ಆ ಉನ್ಮಾದನಾದಿ ಅಸ್ತ್ರಗಳನ್ನು ಪ್ರಯೋಗಿಸಬಾರದೆಂದು ಶ್ರೀಕೃಷ್ಣಪರಮಾತ್ಮನು ಆಣತಿಯಿತ್ತಿದ್ದಾನೆ. ಆದ್ದರಿಂದ ಅರ್ಜುನನು ಆಪತ್ಕಾಲ ಮತ್ತು ಆಪತ್ತಿಲ್ಲದ ಕಾಲಗಳಲ್ಲಿ ಪ್ರಯೋಗಿಸಲು ಯೋಗ್ಯವಾದ ಇತರ ಅಸ್ತ್ರಗಳನ್ನು ಅಪೇಕ್ಷಿಸಿದ್ದನು. ಅರ್ಜುನನಿಗಿಂತ ಸಮರ್ಥರಾದ ಭೀಮಸೇನದೇವರು ಏಕೆ ದ್ರೋಣಾಚಾರ್ಯರ ಅಭೀಪ್ಸಿತವನ್ನು ಪೂರ್ಣಮಾಡುವುದಾಗಿ ಪ್ರತಿಜ್ಞೆ ಮಾಡಲಿಲ್ಲ? ಎಂದರೆ ಅದಕ್ಕೆ ಕಾರಣವನ್ನು ಶ್ರೀ ನಿರ್ಣಯಾಚಾರ್ಯರೀಗ ನಿರೂಪಿಸುತ್ತಾರೆ. "ಭೀಷ್ಮಾಚಾರ್ಯರೇ ಮೊದಲಾದವರೊಡನೆ ನಿತ್ಯವೂ ನಮಗೆ ಯಾವಾಗ ಯುದ್ಧಮಾಡುವ ಪ್ರಸಂಗ ಬರುವುದೋ ಆಗ ನಾನು ಪೂಜ್ಯರಾದ ಭೀಷ್ಮಾದಿಗಳೊಡನೆ ಯುದ್ಧ ಮಾಡುವಂತಿಲ್ಲ. ಆದ್ದರಿಂದ ಅರ್ಜುನನೊಬ್ಬನೇ (ಅಸ್ತ್ರಜ್ಞನಾಗಿ) ಅಸ್ತ್ರವಿದ್ಯಾವಿಶಾರದನಾಗಿ ಭೀಷ್ಮಾದಿಗಳನ್ನು ಯುದ್ಧದಲ್ಲಿ ನಿವಾರಿಸುವಂತಾದಲ್ಲಿ ಅದರಿಂದ ನನಗೆ ಧರ್ಮಲಾಭವಾಗುತ್ತದೆ" ಎಂದು ಯೋಚಿಸಿ ಭೀಮಸೇನದೇವರು ಸ್ವತಃ ದ್ರೋಣರ ಮನೋರಥ ಪೂರ್ಣ ಮಾಡುವುದಾಗಿ ಪ್ರತಿಜ್ಞೆ ಮಾಡಲಿಲ್ಲ.

ಅದು ಸರಿ, "ಕ್ಷತ್ರಿಯಾಣಾಂ ವಿಶೇಷತೋಽಪಿ ಪರಮಧರ್ಮಃ ನಾರಾಯಣದ್ವಿಟ್ ತದನುಬಂಧನಿಗ್ರಹಂ" ಎಂದರೆ ಕ್ಷತ್ರಿಯರಿಗೆ ಮುಖ್ಯವಾಗಿ ನಾರಾಯಣದ್ವೇಷಿಗಳು ಮತ್ತು ಅವರ ಅನುಬಂಧಿಗಳ ನಿಗ್ರಹವು ಪರಮಧರ್ಮವು ಎಂಬ 'ಗೀತಾತಾತ್ಪರ್ಯ'ವಚನಕ್ಕೆ ಇದು ವಿರುದ್ಧವಾಗುವುದಿಲ್ಲವೇ ಎಂದರೆ, ಅದು ಸರಿಯಲ್ಲ. ಗೀತಾತಾತ್ಪರ್ಯದಲ್ಲಿ 'ವಿಷ್ಣುದ್ವೇಷಿಗಳು ಮತ್ತು ಅವರ ಅನುಬಂಧಿಗಳ ನಿಗ್ರಹ ಮಾತ್ರವೇ ಧರ್ಮ' ಎಂದು ಉಕ್ತವಾಗಿದೆ. ಸ್ವತಃ ಈ ಕಾರ್ಯ

"ಮಿತ್ರರೇ, ಏಕೆ ಯೋಚಿಸುವಿರಿ? ನಾನು ಸ್ವಸಾಮರ್ಥ್ಯದಿಂದ ಈ ಭಾವಿಯಲ್ಲಿ ಧುಮುಕಿ ನೀರು ಎಷ್ಟೇ ಆಳವಾಗಿದ್ದರೂ ಮುಳುಗಿ ಕಂದುಕವನ್ನೂ ಅಣ್ಣನ ಮುದ್ರೆಯುಂಗುರವನ್ನೂ ತೆಗೆದುಕೊಂಡು ಮೇಲೇರಿ ಬರುತ್ತೇನೆ, ನೀವು ನೋಡುತ್ತಿರಿ" ಎಂದು ಹೇಳಿದರು. ಆಗ ಕುರುಬಾಲಕರನ್ನು ನೋಡಿ ದ್ರೋಣಾಚಾರ್ಯರು "ಎಲೈ ರಾಜಪುತ್ರರೇ! ನೀವು ಭರತಕುಲದಲ್ಲಿ ಜನಿಸಿದ್ದೀರಿ. ಪ್ರಖ್ಯಾತವಾದ ಭರತಕುಲಸಂಜಾತರಾದ ನೀವು ಮುದ್ರೆಯುಂಗರ ಮತ್ತು ಕಂದುಕ (ಚೆಂಡು)ವನ್ನು ಭಾವಿಯಿಂದ ತೆಗೆಯಲು ದೇವತೆಗಳಿಂದಲೂ ಆರಾಧ್ಯವಾದ ಅಸ್ತ್ರವಿದ್ಯೆ, ಮಂತ್ರವಿದ್ಯೆಗಳನ್ನು ಬಿಟ್ಟು ಶಾರೀರಕ ಸಾಮರ್ಥ್ಯದಿಂದ ತೆಗೆಯಲು ಪ್ರಯತ್ನಿಸುತ್ತಿರುವಿರಲ್ಲ. ನಿಮ್ಮ ಪ್ರವೃತ್ತಿಗೆ ಧಿಕ್ಕಾರವಿರಲಿ. ಪ್ರಖ್ಯಾತ ಭರತವಂಶೋದ್ಭವರಾದ ನೀವು ಅಸ್ತ್ರವಿದ್ಯೆಯನ್ನು ಕಲಿಯದಿರುವುದು ಅವಮಾನಕರವಾಗಿದೆ" ಎಂದು ಹೇಳಿದರು. ಸುರರಿಂದ ಪೂಜ್ಯರಾದ ಬೃಹಸ್ಪತ್ಯಾಚಾರ್ಯರ ಪೌತ್ರರಾದ ದ್ರೋಣಾಚಾರ್ಯರನ್ನು ನೋಡಿದ ರಾಜಪುತ್ರರು "ಓಹೋ ಇವರು ಅಸ್ತ್ರವಿದ್ಯಾ-ಪ್ರವೀಣರು" ಎಂದರಿತು ಧರ್ಮರಾಜನ ರಾಜಮುದ್ರಿಕೆಯನ್ನೂ, ಕಂದುಕವನ್ನೂ ಭಾವಿಯಿಂದ ತೆಗೆದುಕೊಡುವಂತೆ ಅವರನ್ನು ಪ್ರಾರ್ಥಿಸಿದರು. ಆಗ ದ್ರೋಣಾಚಾರ್ಯರು ದಿವ್ಯಾಸ್ತ್ರಬಲದಿಂದ, ಒಂದರ ಮೇಲೊಂದರಂತೆ ಹುಲ್ಲಿನ ಕಡ್ಡಿಗಳನ್ನು ಪರಂಪರೆಯಾಗಿ ಅಭಿಮಂತ್ರಿಸಿ ಭಾವಿಯಲ್ಲಿ ಬಿಟ್ಟು ಕಂದುಕವನ್ನು ಸುಲಭವಾಗಿ ತೆಗೆದುಕೊಟ್ಟರು. ಅದನ್ನು ಕಂಡು ಅಚ್ಚರಿಗೊಂಡ ರಾಜಪುತ್ರರು ರಾಜಮುದ್ರಿಕೆಯನ್ನು ತೆಗೆದುಕೊಡುವಂತೆ ದ್ರೋಣರನ್ನು ಪ್ರಾರ್ಥಿಸಲು, ದ್ರೋಣರು "ನನಗೆ ಭೋಜನವನ್ನು ಅಂದರೆ ಜೀವನೋಪಾಯವನ್ನು ಕಲ್ಪಿಸಿಕೊಡಿ, ಅಂದರೆ ನಾನು ಮುದ್ರೆಯುಂಗುರವನ್ನು ತೆಗೆದುಕೊಡುತ್ತೇನೆ" ಎಂದು ಹೇಳಿದರು. ಆಗ ಧರ್ಮರಾಜನು ಕೂಡಲೇ "ಸ್ವಾಮಿ, ವಿಪ್ರೋತ್ತಮರೇ, ನಿಮಗೆ ಯಥೇಷ್ಟ ದ್ರವ್ಯ ಮತ್ತು ಭೋಜನಾದಿಗಳನ್ನು ನಾನು ಒದಗಿಸಿಕೊಡುತ್ತೇನೆ" ಎಂದು ಪ್ರತಿಜ್ಞೆ ಮಾಡಿದನು. ಧರ್ಮಾರ್ಥ ಕಾಮಗಳಲ್ಲಿ ಮುಖ್ಯವಾದ ಧರ್ಮಕ್ಕೆ ಅಭಿಮಾನಿ ದೇವತೆಯಾದ ಯಮಧರ್ಮರಾಜನ ಪುತ್ರನಾದ ಯುಧಿಷ್ಠಿರನು ಹೀಗೆ ಪ್ರತಿಜ್ಞಾ-ಬದ್ಧನಾಗಿ ಮಾತುಕೊಟ್ಟ ಮೇಲೆ ದ್ರೋಣಾಚಾರ್ಯರು ತಮ್ಮ ಶಸ್ತ್ರವಿದ್ಯೆಯ ಬಲದಿಂದ ಧರ್ಮರಾಜನ ರಾಜಮುದ್ರಿಕೆಯನ್ನು ಭಾವಿಯಿಂದ ತೆಗೆದುಕೊಟ್ಟರು. ಪರಮಸಂತೋಷಭರಿತರಾದ ಆ ರಾಜಪುತ್ರರೆಲ್ಲರೂ ಒಟ್ಟಾಗಿ ಸೇರಿ "ಸ್ವಾಮಿ ವಿಪ್ರೋತ್ತಮರೇ, ತಮ್ಮ ಶುಭನಾಮಧೇಯವೇನು?" ಎಂದು ಪ್ರಶ್ನಿಸಿದರು. ಆಗ ದ್ರೋಣಾಚಾರ್ಯರು ನಸುನಕ್ಕು, "ಬಾಲಕರೇ, ನಿಮ್ಮ ಪಿತಾಮಹರಾದ ಭೀಷ್ಮಾಚಾರ್ಯರನ್ನು ಕೇಳಿರಿ. ಅವರೇ, ನಾನಾರು, ನನ್ನ ಹೆಸರೇನು ಎಂಬುದನ್ನು ತಿಳಿಸುತ್ತಾರೆ" ಎಂದು ಹೇಳಿದರು. ಅದನ್ನು ಕೇಳಿ ರಾಜಕುಮಾರರೆಲ್ಲರೂ ಭರದಿಂದ ತಾತ ಭೀಷ್ಮರಲ್ಲಿಗೆ ಬಂದು ನಡೆದ ವಿದ್ಯಮಾನಗಳನ್ನೆಲ್ಲಾ ಹೇಳಿ "ತಾತ! ಈ ಬ್ರಾಹ್ಮಣೋತ್ತಮರಾರು? ಅವರ ಹೆಸರೇನು?" ಎಂದು ಕುತೂಹಲದಿಂದ ಕೇಳಿದರು. ಆಗ ಭೀಷ್ಮರು "ಅವರು ದ್ರೋಣಾಚಾರ್ಯರು" ಎಂದು ತಿಳಿಸಿದರು.

ದ್ರೋಣರು ಹಿಂದೆ ಹಸ್ತಿನಾವತಿಯಲ್ಲೇ ಇದ್ದರು. ಆದರೂ ಕುರುಕುಮಾರರು ಏಕೆ ಅವರನ್ನು ಗುರ್ತಿಸಲಿಲ್ಲ? ಎಂದರೆ, ನಿಜ. ದ್ರೋಣಾಚಾರ್ಯರು ರಾಜಧಾನಿಯಲ್ಲೇ ಇದ್ದರು. ಆದರೆ ದ್ರೋಣರು ಎಂದೂ ಅರಮನೆಗೆ ಹೋಗುತ್ತಿರಲಿಲ್ಲ, ಆದ್ದರಿಂದ ದ್ರೋಣರ ಪರಿಚಯ ರಾಜಕುಮಾರರಿಗೆ ಆಗಿರಲಿಲ್ಲವಾಗಿ ದ್ರೋಣರನ್ನು ಅವರು ತಿಳಿಯಲಿಲ್ಲ. ಹಾಗಾದರೆ ಭೀಷ್ಮರು ಹೇಗೆ ತಿಳಿದರು? ಎಂದರೆ ಹಿಂದೆ ದ್ರೋಣಾಚಾರ್ಯರು ಹಸ್ತಿನಾವತಿಯಲ್ಲಿ ವಾಸಮಾಡುತ್ತಿರುವಾಗ ಅನೇಕ ಸಲ ಅವರ ಆಶ್ರಮಕ್ಕೆ ಬರುತ್ತಿದ್ದ ಭೀಷ್ಮಾಚಾರ್ಯರು ದ್ರೋಣರೊಡನೆ ಅನೇಕ ವೇಳೆ ಅಧ್ಯಾತ್ಮ ವಿದ್ಯಾವಿಚಾರಗಳನ್ನು ಚರ್ಚಿಸುತ್ತಿದ್ದರು. ಆದ್ದರಿಂದ ಅವರಿಗೆ ದ್ರೋಣರ ಪರಿಚಯವಿತ್ತು. ಆದರೆ ದ್ರೋಣರು ಇದ್ದಕ್ಕಿದ್ದಂತೆ ಹಸ್ತಿನಾವತಿಯಿಂದ ಹೊರಟುಹೋಗಿದ್ದರು. ಹನ್ನೆರಡು ವರ್ಷಗಳ ಕಾಲ ಅವನ್ನು ಕಾಣದೆ ದ್ರೋಣರು ಎಲ್ಲಿಗೆ ಹೋದರು? ಈಗೆಲ್ಲಿದ್ದಾರೆ, ಏನು ಮಾಡುತ್ತಿದ್ದಾರೆ ಎಂದು ಚಿಂತಿಸುತ್ತಿದ್ದ ಭೀಷ್ಮರು ಚಾರರ ಮೂಲಕವಾಗಿ ದ್ರೋಣಾಚಾರ್ಯರು ಶ್ರೀ ಪರಶು-ರಾಮದೇವರಲ್ಲಿ ಶಿಷ್ಯತ್ವವಹಿಸಿ ಅವರಲ್ಲಿ ಶಸ್ತ್ರಾಸ್ತ್ರವಿದ್ಯೆಯನ್ನು ಪಡೆದ ವಿಚಾರ ತಿಳಿದಿದ್ದರು. ಮತ್ತು ಕುರುಕುಮಾರರು

ರಾಜಮುದ್ರಿಕೆ ಮತ್ತು ಕಂದುಕರನ್ನು ತೆಗೆದುಕೊಟ್ಟ ಬ್ರಾಹ್ಮಣರ ವಿಚಾರ ಹೇಳಿ ಅವರಾರೆಂದು ಕೇಳಿದಾಗ ಈ ವಿಪ್ರರೇ ದ್ರೋಣರೆಂದು ತಿಳಿದು ಅದರಂತೆ ಅವರು ದ್ರೋಣರೆಂದೇ ಹೇಳಿದರು. ಅದು ಸರಿ, ಭೀಷ್ಮರು ದ್ರೋಣರನ್ನು ನೋಡದಲೇನೇ ಅವರು ದ್ರೋಣರೆಂದು ಹೇಗೆ ಹೇಳಿದರು ಎಂದರೆ ರಾಜಕುಮಾರರು ತಮ್ಮ ಕಂದುಕ-ರಾಜಮುದ್ರಿಕೆಯನ್ನು ಬಾವಿಯಿಂದ ತೆಗೆದುಕೊಟ್ಟವರು ಅಸ್ತ್ರಜ್ಞರೆಂದೂ, ಬ್ರಾಹ್ಮಣರು ವೃದ್ಧರೆಂದೂ, ಕೃಷ್ಣವರ್ಣೋಪೇತರೆಂದೂ, ಅಸ್ತ್ರವಿದ್ಯಾ, ಮಂತ್ರವಿದ್ಯಾ-ಪಾರಂಗತರೆಂದೂ ಹೇಳಿದ್ದರಿಂದ, ಅವರ ಲಕ್ಷಣ, ಮಹಾಸ್ತ್ರವಿದ್ಯಾ ಸಾಮರ್ಥ್ಯ ಹೀಗೆ ಈ ಎರಡು ಕಾರಣಗಳಿಂದ ಆ ಬ್ರಾಹ್ಮಣರೇ ದ್ರೋಣಾಚಾರ್ಯರೆಂದು ನಿಶ್ಚಯಿಸಿ ಹಾಗೆ ಹೇಳಿದರು. ಮಹಾಬುದ್ಧಿಶಾಲಿಗಳಾದ ಭೀಷ್ಮರು ಸ್ವಯಂ ದ್ರೋಣಾಚಾರ್ಯರಲ್ಲಿಗೆ ಬಂದು ಕುಶಲಪ್ರಶ್ನಾದಿಗಳಾದ ಮೇಲೆ, 'ಸ್ವಾಮಿ, ಆಚಾರ್ಯದ್ರೋಣರೇ, ಇನ್ನು ಮುಂದೆ ನೀವೇ ನಮ್ಮ ಈ ಕುರುರಾಜಕುಮಾರರಿಗೆ ಶಸ್ತ್ರಾಸ್ತ್ರವಿದ್ಯೆಗಳನ್ನು ಉಪದೇಶಮಾಡಬೇಕು. ಇವರನ್ನು ನಿಮ್ಮ ಶಿಷ್ಯರನ್ನಾಗಿ ಸ್ವೀಕರಿಸಿ ಯುದ್ಧಕಲೆಯಲ್ಲಿ ಇವರನ್ನು ಪ್ರವೀಣರನ್ನಾಗಿ ಮಾಡಬೇಕು'' ಎಂದು ಪ್ರಾರ್ಥಿಸಿ ಪಾಂಡವರು ಮತ್ತು ದುರ್ಯೋಧನಾದಿಗಳು, ಇನ್ನಿತರ ರಾಜಕುಮಾರರಿಗೆ ಶಸ್ತ್ರಾಸ್ತ್ರವಿದ್ಯೆಗಳನ್ನು ಹೇಳಿಕೊಡುವ ಗುರುಗಳನ್ನಾಗಿ ದ್ರೋಣಾಚಾರ್ಯರನ್ನು ನೇಮಕಮಾಡಿದರು ಮತ್ತು ದ್ರೋಣಾಚಾರ್ಯರಿಗೆ ಸಮಸ್ತ ಸೌಕರ್ಯಗಳನ್ನು ಏರ್ಪಡಿಸಿ-ಕೊಟ್ಟರು.

ಕುರುಕುಲಸಂಜಾತರಾದ ಪಾಂಡವರು ಮತ್ತು ದುರ್ಯೋಧನಾದಿಗಳಿಗೆ ಧನುರ್ವಿದ್ಯಾಭ್ಯಾಸವನ್ನು ಪ್ರಾರಂಭಿಸುವ ಮುನ್ನ ದ್ರೋಣಾಚಾರ್ಯರು, 'ರಾಜಕುಮಾರರೇ, ನಿಮ್ಮಲ್ಲಿ ಮೊದಲು ಯಾರು 'ನನ್ನ ಅಭೀಷ್ಟವನ್ನು ನೆರವೇರಿಸುವಂತೆ ಪ್ರತಿಜ್ಞೆ ಮಾಡುವಿರೋ, ಅಂಥವರನ್ನು ನಾನು ಜಗತ್ತಿನಲ್ಲೇ ಶ್ರೇಷ್ಠಧನ್ವಿಯನ್ನಾಗಿ (ಸರ್ವೋತ್ತಮ ಬಿಲ್ಲುಗಾರನನ್ನಾಗಿ) ಮಾಡುತ್ತೇನೆ' ಎಂದು ಹೇಳಿದರು. ಆಗ ಅರ್ಜುನನು, ಭೀಮಸೇನದೇವರ ಸಲಹೆಯಂತೆ 'ಆಚಾರ್ಯರೇ! ನಿಮ್ಮ ಅಭೀಷ್ಟವು ಅದೇನೇ ಆಗಿರಲಿ, ನಾನು ಖಂಡಿತ ನಿಮ್ಮ ಮನೋಭೀಷ್ಟವನ್ನು ಪೂರೈಸುತ್ತೇನೆ' ಎಂದು ಪ್ರತಿಜ್ಞೆ ಮಾಡಿದನು.

ಅರ್ಜುನನು ಉನ್ಮಾದನಾದಿ ಅಸ್ತ್ರಗಳನ್ನು ಶ್ರೀಕೃಷ್ಣನಿಂದ ಕಲಿತಿದ್ದನು. ಆಪದ್ರಹಿತಕಾಲದಲ್ಲಿ ಆ ಉನ್ಮಾದನಾದಿ ಅಸ್ತ್ರಗಳನ್ನು ಪ್ರಯೋಗಿಸಬಾರದೆಂದು ಶ್ರೀಕೃಷ್ಣಪರಮಾತ್ಮನು ಆಣತಿಯಿತ್ತಿದ್ದಾನೆ. ಆದ್ದರಿಂದ ಅರ್ಜುನನು ಆಪತ್ಕಾಲ ಮತ್ತು ಆಪತ್ತಿಲ್ಲದ ಕಾಲಗಳಲ್ಲಿ ಪ್ರಯೋಗಿಸಲು ಯೋಗ್ಯವಾದ ಇತರ ಅಸ್ತ್ರಗಳನ್ನು ಅಪೇಕ್ಷಿಸಿದ್ದನು. ಅರ್ಜುನನಿಗಿಂತ ಸಮರ್ಥರಾದ ಭೀಮಸೇನದೇವರು ಏಕೆ ದ್ರೋಣಾಚಾರ್ಯರ ಅಭೀಪ್ಸಿತವನ್ನು ಪೂರ್ಣಮಾಡುವುದಾಗಿ ಪ್ರತಿಜ್ಞೆ ಮಾಡಲಿಲ್ಲ? ಎಂದರೆ ಅದಕ್ಕೆ ಕಾರಣವನ್ನು ಶ್ರೀ ನಿರ್ಣಯಾಚಾರ್ಯರೀಗ ನಿರೂಪಿಸುತ್ತಾರೆ. ''ಭೀಷ್ಮಾಚಾರ್ಯರೇ ಮೊದಲಾದವರೊಡನೆ ನಿತ್ಯವೂ ನಮಗೆ ಯಾವಾಗ ಯುದ್ಧಮಾಡುವ ಪ್ರಸಂಗ ಬರುವುದೋ ಆಗ ನಾನು ಪೂಜ್ಯರಾದ ಭೀಷ್ಮಾದಿಗಳೊಡನೆ ಯುದ್ಧ ಮಾಡುವಂತಿಲ್ಲ. ಆದ್ದರಿಂದ ಅರ್ಜುನನೊಬ್ಬನೇ (ಅಸ್ತ್ರಜ್ಞನಾಗಿ) ಅಸ್ತ್ರವಿದ್ಯಾವಿಶಾರದನಾಗಿ ಭೀಷ್ಮಾದಿಗಳನ್ನು ಯುದ್ಧದಲ್ಲಿ ನಿವಾರಿಸುವಂತಾದಲ್ಲಿ ಅದರಿಂದ ನನಗೆ ಧರ್ಮಲಾಭವಾಗುತ್ತದೆ'' ಎಂದು ಯೋಚಿಸಿ ಭೀಮಸೇನದೇವರು ಸ್ವತಃ ದ್ರೋಣರ ಮನೋರಥ ಪೂರ್ಣ ಮಾಡುವುದಾಗಿ ಪ್ರತಿಜ್ಞೆ ಮಾಡಲಿಲ್ಲ.

ಅದು ಸರಿ, ''ಕ್ಷತ್ರಿಯಾಣಾಂ ವಿಶೇಷತೋಽಪಿ ಪರಮಧರ್ಮಂ ನಾರಾಯಣದ್ವಿಟ್ ತದನುಬಂಧನಿಗ್ರಹಂ'' ಎಂದರೆ ಕ್ಷತ್ರಿಯರಿಗೆ ಮುಖ್ಯವಾಗಿ ನಾರಾಯಣದ್ವೇಷಿಗಳು ಮತ್ತು ಅವರ ಅನುಬಂಧಿಗಳ ನಿಗ್ರಹವು ಪರಮಧರ್ಮವು ಎಂಬ 'ಗೀತಾತಾತ್ಪರ್ಯ'ವಚನಕ್ಕೆ ಇದು ವಿರುದ್ಧವಾಗುವುದಿಲ್ಲವೇ ಎಂದರೆ, ಅದು ಸರಿಯಲ್ಲ. ಗೀತಾತಾತ್ಪರ್ಯದಲ್ಲಿ 'ವಿಷ್ಣುದ್ವೇಷಿಗಳು ಮತ್ತು ಅವರ ಅನುಬಂಧಿಗಳ ನಿಗ್ರಹ ಮಾತ್ರವೇ ಧರ್ಮ' ಎಂದು ಉಕ್ತವಾಗಿದೆ. ಸ್ವತಃ ಈ ಕಾರ್ಯ

ಮಾಡಬೇಕೆಂಬ ನಿಯಮವಿಲ್ಲ. 'ನಾರಾಯಣದ್ವಿಟ್‌ತದನುಬಂಧಿನಿಗ್ರಹ'ವನ್ನು ಇನ್ನೊಬ್ಬರಿಂದಲೂ ಮಾಡಿಸಲು ಸಾಧ್ಯವಿದೆ. ತಾನೇ ಮಾಡಬೇಕೆಂಬ ನಿಯಮವಿಲ್ಲ. ದುಷ್ಟಸ್ತ್ರೀಯರು ಕಿತವಾದಿಗಳನ್ನು ಪರರಿಂದಲೇ ನಿಗ್ರಹಿಸುವ ಸಂಭವವಿರುವಂತೆ ನಾರಾಯಣದ್ವಿಟ್ ತದನುಬಂಧಿ ನಿಗ್ರಹವನ್ನು ಪರರಿಂದಲೇ ಮಾಡಿಸಬಹುದು. ಸರ್ವದಾ ಅಸ್ತ್ರಗಳಿಂದಲೂ ನಿಗ್ರಹ ಮಾಡಿಸುವುದೂ ಸಹ ಮತ್ತೊಬ್ಬರಿಂದ ಮಾಡಿಸುವುದೇ ಧರ್ಮವು. ಆದ್ದರಿಂದಲೇ ಇಲ್ಲಿ 'ಗುರುಭಿರ್ನಿತ್ಯಯೋದ್ಧಾ', 'ಅಸ್ತ್ರಜ್ಞ' ಎಂಬ ವಿಶೇಷಗಳನ್ನು ಕೊಟ್ಟಿದ್ದಾರೆ. ಗೀತಾತಾತ್ಪರ್ಯದಲ್ಲಿಯಾದರೋ 'ನಾರಾಯಣದ್ವಿಟ್ ತದನುಬಂಧಿನಿಗ್ರಹ' ಎಂದು ಸಾಮಾನ್ಯವಾಗಿ ಹೇಳಿದ್ದಾರೆ. ಆದ್ದರಿಂದ ನಿರ್ಣಯಕ್ಕೂ-ತಾತ್ಪರ್ಯಕ್ಕೂ ವಿರೋಧವಿಲ್ಲ.

ಭೀಮಸೇನದೇವರು ಸ್ವತಃ ಪ್ರತಿಜ್ಞೆ ಮಾಡದಿರಲು ಇನ್ನೊಂದು ಕಾರಣವನ್ನು ಹೇಳುತ್ತಾರೆ. ಶ್ರೀ ಇಂದಿರಾಪತಿಯಾದ ಶ್ರೀಮನ್ನಾರಾಯಣನನ್ನು ಬಿಟ್ಟು ಬೇರೆಯವರಲ್ಲಿ ನಾನು ಬುದ್ಧಿಪೂರ್ವಕವಾಗಿ ವರವನ್ನು ಸ್ವೀಕರಿಸಬಾರದು. ನಾರಾಯಣನನ್ನು ಬಿಟ್ಟು ಅನ್ಯತ್ರ ವರವು ಗ್ರಾಹ್ಯವಲ್ಲ. ಅಪ್ರಾರ್ಥಿತನಾಗಿ ಗುರು ಮುಂತಾದವರು ತಾವಾಗಿ ನೀಡುವ ವರವನ್ನು ಸ್ವೀಕರಿಸುವುದು ಯುಕ್ತ. ಆದರೆ ಗುರುಗಳು ತಮ್ಮ ಅಭೀಷ್ಟ ನೆರವೇರಿಸುವವನನ್ನು ಶ್ರೇಷ್ಠ ಧನುರ್ಧರನನ್ನಾಗಿ ಮಾಡುತ್ತೇನೆ ಎಂದಿರುವುದರಿಂದ ನಾನೀಗ ಪ್ರತಿಜ್ಞೆ ಮಾಡಬಾರದು, ಎಂದು ಯೋಚಿಸಿ ಭೀಮಸೇನದೇವರು ಮೇಲಿನ ಕಾರಣದಿಂದ ಅರ್ಜುನನೇ ಗುರುಗಳಿಗಾಗಿ ಪ್ರತಿಜ್ಞೆ ಮಾಡಲಿ ಎಂದು ಈ ಎರಡು ಕಾರಣಗಳನ್ನು ಚಿಂತಿಸಿದ ಅವರು ಗುರುವಿಷಯದಲ್ಲೂ, ಅಸ್ತ್ರಪ್ರಾಪ್ತಿ ಸಮಯದಲ್ಲೂ ತಾವಾಗಿ ಪ್ರತಿಜ್ಞೆ ಮಾಡಲಿಲ್ಲ. ಭೀಮಸೇನದೇವರಿಂದ ಪ್ರೇರಿತನಾದ ಅರ್ಜುನನು ಪ್ರತಿಜ್ಞೆ ಮಾಡಿದ ಮೇಲೆ ಭೂಸುರೋತ್ತಮರಾದ ಆಚಾರ್ಯ ದ್ರೋಣರು ಇಂದ್ರಪುತ್ರನಾದ ಅರ್ಜುನನಲ್ಲಿ ಅತಿಶಯ ಪ್ರೇಮವನ್ನು ಮಾಡಿ ಮಹಾಸ್ತ್ರಗಳನ್ನು ಅವನಿಗೆ ದಯಪಾಲಿಸಿದರು. ದ್ರೋಣಾಚಾರ್ಯರು ಪಾರ್ಥನಲ್ಲಿ ವಿಶೇಷ ಪ್ರೇಮ ಮತ್ತು ಪಕ್ಷ-ಪಾತವನ್ನಿಟ್ಟಿದ್ದರು. ಜನರ ಮುಂದೆ ಅರ್ಜುನನಂತಹ ಶ್ರೇಷ್ಠವಿದ್ಯಾರ್ಥಿ, ಏಕಸಂಧಿಗ್ರಾಹಿಯಾದ ಶಿಷ್ಯ ಬೇರೊಬ್ಬರಿಲ್ಲವೆಂದು ಅವನನ್ನು ಪ್ರಶಂಸಿಸುತ್ತಿದ್ದರು. ಅವನಿಗೆ ಅನೇಕ ರಹಸ್ಯವಿದ್ಯೆಗಳನ್ನೆಲ್ಲಾ ಏಕಾಂತದಲ್ಲಿ ಹೇಳಿಕೊಡುತ್ತಿದ್ದರು. ಅರ್ಜುನನನ್ನು ಬಿಟ್ಟು ಮತ್ತಾವ ಶಿಷ್ಯನಿಗೂ ಹಾಗೆ ಏನನ್ನೂ ಹೇಳಿ ಕೊಡುತ್ತಿರಲಿಲ್ಲ. ಹಾಗಾದರೆ ಯಾರಿಗೂ ಏನೂ ಹೇಳಿಕೊಡುತ್ತಿರಲಿಲ್ಲವೆ ಎಂದರೆ ಭೀಮಸೇನ ದೇವರಿಗೆ ಸರ್ವಜ್ಞತ್ವವಿಲ್ಲದಂತಾಗುವುದು – ಎಂದರೆ, ಹಾಗಲ್ಲ. ಭೀಮಸೇನದೇವರು ಸಮಸ್ತ ಅಸ್ತ್ರ (ರಹಸ್ಯಗಳನ್ನು) ತಮ್ಮ ಅಸದೃಶ ಪ್ರತಿಭಾಸಾಮರ್ಥ್ಯದಿಂದಲೇ ತಿಳಿದಿದ್ದರು. ಅಂತೆಯೇ ಅರ್ಜುನನನ್ನು ಸಕಲಾಸ್ತ್ರ-ಪ್ರವೀಣನನ್ನಾಗಿ ಮಾಡಲು ತಮ್ಮನಾದ ಪಾರ್ಥನಲ್ಲಿ ದ್ರೋಣರ ವಿಶೇಷ ಪ್ರೇಮ ಉಂಟಾಗುವಂತೆ ಮಾಡಲೋಸುಗವೇ ಅವನಂತೆ ಪ್ರತಿಜ್ಞಾಪೂರ್ವಕವಾಗಿ ತಾವು ಅಸ್ತ್ರಸಂಗ್ರಹವನ್ನು ಮಾಡಲಿಲ್ಲ. ಅಸ್ತ್ರ-ಶಸ್ತ್ರಾಭ್ಯಾಸ ಕಾಲದಲ್ಲಿ ಲಕ್ಷ್ಯವೇದದಲ್ಲಿ ಅವರು ಹೆಚ್ಚಾಗಿ ಗಮನಕೊಡುತ್ತಿರಲಿಲ್ಲ. ಕಲಿಯಲು ಪ್ರಯತ್ನ ಪಡುತ್ತಿರಲಿಲ್ಲ. ಗುರುಗಳಾದ ದ್ರೋಣಾಚಾರ್ಯರ ಸೇವಾದಿ ವಿಷಯಗಳಲ್ಲೂ ಅರ್ಜುನನನ್ನೇ ಮುಂದುಮಾಡುತ್ತಿದ್ದರು. 'ನಾನು ಶ್ರೀ ಹರಿಯ ಅನುಗ್ರಹಪ್ರಸಾದ. ನನ್ನ ಬಾಹುಬಲ ಸಹಾಯದಿಂದಲೂ ಸಹ ಶತ್ರುಗಳನ್ನು ಸಂಹರಿಸುತ್ತೇನೆ. ಆದ್ದರಿಂದ ಪ್ರತಿಜ್ಞಾಪೂರ್ವಕ ಅಸ್ತ್ರಸಂಗ್ರಹದಿಂದೇನು ಪ್ರಯೋಜನ?' ಎಂಬ ಅಭಿಪ್ರಾಯದಿಂದಲೇ ಭೀಮಸೇನದೇವರು ಅರ್ಜುನನಂತೆ ಪ್ರತಿಜ್ಞಾಪೂರ್ವಕರಾಗಿ ಅಸ್ತ್ರ-ಸಂಗ್ರಹಾದಿಗಳನ್ನು ಮಾಡಲಿಲ್ಲವೆಂದು ಭಾವ.

ಹೀಗೆ ಪಾಂಡವರು ಕೌರವರು ದ್ರೋಣಾಚಾರ್ಯರಲ್ಲಿ ಅಸ್ತ್ರವಿದ್ಯಾಭ್ಯಾಸ ಮಾಡುತ್ತಿರುವಾಗ ಅಲ್ಲಿಗೆ ಸಮಸ್ತ ಕ್ಷತ್ರಿಯ ಕುಮಾರರೂ ಬಂದು ದ್ರೋಣರಲ್ಲಿ ಸಕಲ ಶಸ್ತ್ರಾಸ್ತ್ರಗಳನ್ನು ಪಡೆಯಲು ಅಭ್ಯಾಸಮಾಡಹತ್ತಿದರು. ದ್ರೋಣಾಚಾರ್ಯರು ತ ಸಕಲ ಶಿಷ್ಯರಿಗೂ ಶ್ರೀ ಪರಶುರಾಮದೇವರಲ್ಲಿ ತಾವು ಪಡೆದು ಮತ್ತಾರಿಗೂ ತಿಳಿಯದ ಅಸ್ತ್ರಗಳನ್ನೆಲ್ಲಾ ಹೇಳಿಕೊಟ್ಟರು. ಸಮಸ್ತ ರಾಜಪುತ್ರರೂ ದ್ರೋಣಾಚಾರ್ಯರಿಂದ ಇತರ ರಾಜರು ಮನಸ್ಸಿನಲ್ಲೂ ಯೋಚಿಸಲಾಗದ ಆಶ್ಚರ್ಯಕರ

ಅಸ್ತ್ರಗಳನ್ನೂ, ಚಿತ್ರವಿಚಿತ್ರವಾದ, ಮಹತ್ತರವಾದ ದಿವ್ಯಾಸ್ತ್ರಗಳನ್ನೂ ಪಡೆದು ತಮ್ಮ ಪೂರ್ವಜರಿಗಿಂತಲೂ ಅತ್ಯಂತ ಶಕ್ತಿ-ಸಾಮರ್ಥ್ಯಸಂಪನ್ನರಾದರು. ದ್ರೋಣಾಚಾರ್ಯರ ಶಿಷ್ಯರಾದ ಎಲ್ಲ ಕ್ಷತ್ರಿಯ ರಾಜಪುತ್ರರೂ ಅತ್ಯಂತ ಬಲಶಾಲಿಗಳಾದರು. ಅವರ ಪೂರ್ವಿಕರಾದ ಯಾವ ನರೇಂದ್ರರೂ ಅಸ್ತ್ರ, ಬಲ, ಮತ್ತು ಸರ್ವ ವಿದ್ಯೆಗಳಲ್ಲಿ ಇವರಂತೆ ಶ್ರೇಷ್ಠರಾಗಿರಲಿಲ್ಲ. ಹಿಂದೆ ದುಷ್ಯಂತಕುಮಾರನಾದ ಭರತ, ಮಾಂಧಾತರಾಜ, ಮರುತ್ ರಾಜ ಮುಂತಾದ ಹಿಂದಿನ ರಾಜರು ಉತ್ಕೃಷ್ಟವೀರ್ಯರಾದರೂ ಈ ದ್ರೋಣರ ಶಿಷ್ಯರಿಗೆ ಸಮರಾಗಿರಲಿಲ್ಲ.

ಪಾಂಡವರು ಮತ್ತು ಕೌರವರಿಗೆ ದ್ರೋಣಾಚಾರ್ಯರು ಅಸ್ತ್ರವಿದ್ಯಾಭ್ಯಾಸ ಮಾಡುತ್ತಿರುವಾಗ ಕರ್ಣ ಮತ್ತು ಏಕಲವ್ಯರು ತಾವೂ ಶಸ್ತ್ರಾಸ್ತ್ರವಿದ್ಯೆಯನ್ನು ಕಲಿಯಲು ದ್ರೋಣಾಚಾರ್ಯರನ್ನು "ತಮ್ಮನ್ನು ಶಿಷ್ಯರನ್ನಾಗಿ ಸ್ವೀಕರಿಸಿ ಶಸ್ತ್ರಾಸ್ತ್ರ ವಿದ್ಯೆಯನ್ನು ಕಲಿಸಬೇಕೆಂದು" ಪ್ರಾರ್ಥಿಸಿದರು. ಶ್ರೀ ಪರಶುರಾಮದೇವರ ಶಿಷ್ಯರಾದುದರಿಂದ ಸತ್ಪರಂಪರೆಯುಳ್ಳ ದೀಕ್ಷೆಯುಳ್ಳ ದ್ರೋಣಾಚಾರ್ಯರು ಕರ್ಣನು ಸೂತಪುತ್ರನೆಂದೂ, ಏಕಲವ್ಯನು ನಿಷಾದ (ಕಿರಾತ)ನೆಂದೂ ತಿಳಿದು ಅವರಿಗೆ ಶಸ್ತ್ರಾಸ್ತ್ರ-ವಿದ್ಯೆಯನ್ನು ಹೇಳಿಕೊಡಲು ನಿರಾಕರಿಸಿದರು. ಆಗ ಅತ್ಯಂತ ಗರ್ವಿಷ್ಟನಾದ ಕರ್ಣನು ತನ್ನ ಮನೋರಥವು ಈಡೇರ-ದಿದ್ದುದರಿಂದ 'ಈ ಬ್ರಾಹ್ಮಣರಾದ ದ್ರೋಣರು ಪುರುಷೋತ್ತಮನಾದ ಯಾವ ಮಹನೀಯನಿಂದ ಶಸ್ತ್ರಾಸ್ತ್ರವಿದ್ಯೆ ಹಾಗೂ ಅಸ್ತ್ರಸಮೂಹವನ್ನು ಶಿಷ್ಯರಾಗಿ ಪಡೆದರೋ ಅಂಥ ಉತ್ಪತ್ತಿರಹಿತನಾದ, ಭೃಗುಕುಲದಲ್ಲಿ ಅವತರಿಸಿದ ಶ್ರೀ ಭಾರ್ಗವ-ರಾಮರಲ್ಲಿಯೇ ಕಲಿಯುತ್ತೇನೆ" ಎಂದು ಮನದಲ್ಲಿ ಚಿಂತಿಸಿ ಶ್ರೀ ಪರಶುರಾಮದೇವರ ಆಶ್ರಮಕ್ಕೆ ಹೋದನು. ಆ ಕರ್ಣನು ಪರಶುರಾಮರಲ್ಲಿ ಬಂದು ಸರ್ವಜ್ಞರೂ, ಪ್ರಭುಗಳೂ ಆದ ಶ್ರೀ ಪರಶುರಾಮದೇವರಲ್ಲಿ ತನ್ನ ನೈಜವೃತ್ತಾಂತವನ್ನು ಹೇಳಲು ಭಯಗೊಂಡು, ಉತ್ತಮಾಸ್ತ್ರಗಳನ್ನು ಪಡೆಯಬೇಕೆಂಬ ಅತಿಲೋಭದಿಂದ ಅವರಲ್ಲಿ "ಸ್ವಾಮಿ, ನಾನು ಭೃಗುವಂಶದವನಾದ ಬ್ರಾಹ್ಮಣನು. ನನಗೆ ಶಸ್ತ್ರಾಸ್ತ್ರ ವಿದ್ಯೆಯನ್ನು ಅನುಗ್ರಹಿಸಿರಿ" ಎಂದು ಪ್ರಾರ್ಥಿಸಿದನು. ಕರ್ಣನು ಸೂತ್ರಪುತ್ರನೆಂದು ತಿಳಿದಿದ್ದರೂ 'ಅವ್ಯಯಾತ್ಮ'ರಾದ (ಅವಿನಾಶಿ ಸ್ವಭಾವವುಳ್ಳ) ಶ್ರೀ ಭಾರ್ಗವರಾಮರು ಅವನಿಗೆ ಸಮಸ್ತ ದಿವ್ಯಾಸ್ತ್ರಗಳನ್ನೂ ಉಪದೇಶಿಸಿ ಅನುಗ್ರಹಿಸಿದರು. ಹಾಗಾದರೆ ಸೂತನಿಗೆ ಮಂತ್ರೋಪದೇಶ ಮಾಡಿದ ಪರಶುರಾಮದೇವರಿಗೆ ಅನರ್ಥ-ವಾದೀತಲ್ಲವೆ? ಎಂದರೆ ಆ ಶಂಕೆಯನ್ನು ಪರಿಹರಿಸಲೆಂದೇ ನಿರ್ಣಯಾಚಾರ್ಯರು 'ಅವ್ಯಯಾತ್ಮಾ' ಎಂದು ವಿಶೇಷಣ ಕೊಟ್ಟಿದ್ದಾರೆ.

ಕರ್ಣನು ಸೂತಪುತ್ರನೆಂದು ತಿಳಿದೂ ಅವನಿಗೆ ದಿವ್ಯಾಸ್ತ್ರಗಳನ್ನು ಉಪದೇಶಮಾಡಿದ ಶ್ರೀ ಪರಶುರಾಮರ ಅಂತರ್ಯವನ್ನು (ಕರ್ಣನಿಗೆ ದಿವ್ಯಾಸ್ತ್ರಗಳನ್ನು ನೀಡಲು ಕಾರಣವನ್ನು) ನಿರೂಪಿಸುತ್ತಾರೆ. ಧೃತರಾಷ್ಟ್ರನ ಪುತ್ರನಾದ ದುರ್ಯೋಧನನು ಪಾಂಡವರಲ್ಲಿ ದ್ವೇಷಮಾಡುತ್ತಿದ್ದಾನೆ. ಅವರ ನಾಶಮಾಡುವುದು ಅವನ ಅಂತರ್ಯವಾಗಿದೆ. ಕರ್ಣನು ಸಕಲ ವಿದ್ಯಾಕೋವಿದನೆಂದು ತಿಳಿದ ದುರ್ಯೋಧನನು ಕರ್ಣನನ್ನು ಆಶ್ರಯಿಸಿ ಅಸ್ತ್ರಜ್ಞರಲ್ಲಿ ಚೂಡಾಮಣಿಯಾದ ಇಂದ್ರಪುತ್ರನಾದ ಅರ್ಜುನನನ್ನು ಸಂಹರಿಸಲು ಈ ಕರ್ಣನು ಪ್ರಪಂಚದಲ್ಲಿ ಅತಿ ಸಮರ್ಥನೂ ಧೈರ್ಯಶಾಲಿಯೂ ಎಂದು ನಂಬಲಿ. ಕರ್ಣನನ್ನು ಆಶ್ರಯಿಸಲಿ ಎಂಬ ಅಭಿಪ್ರಾಯದಿಂದಲೇ ಶ್ರೀಶರಾದ ಪರಶುರಾಮರು ಕರ್ಣನು ಸೂತಕುಲ-ಜಾತನೆಂದು ತಿಳಿದಿದ್ದರೂ, ತಿಳಿದೂ ತಿಳಿದೂ ಅವನಿಗೆ ದಿವ್ಯಾಸ್ತ್ರಗಳನ್ನುಪದೇಶಿಸಿದರು.

ಕರ್ಣನು ನಾಲ್ಕು ವರ್ಷಗಳ ಕಾಲ ಶ್ರೀ ಪರಶುರಾಮದೇವರಲ್ಲಿ ಶಿಷ್ಯತ್ವವನ್ನು ವಹಿಸಿ ಭಗವದ್‌ಜ್ಞಾನವನ್ನೂ ಉತ್ತಮವಾದ ಅಸ್ತ್ರವಿದ್ಯಾದಿ ವಿವಿಧ ವಿದ್ಯೆಗಳನ್ನೂ ಪಡೆದು ವಿಜಯಪ್ರದವಾದ ಧನುಸ್ಸು, ಶ್ರೇಷ್ಠರಥ ಮುಂತಾದವನ್ನೂ ಪರಶುರಾಮರಿಂದ ಪಡೆದನು. ವಿದ್ಯಾಭ್ಯಾಸ ಮುಗಿದ ಮೇಲೂ ಸಹ ಉತ್ತಮಶ್ಲೋಕರಾದ ಪರಶುರಾಮದೇವರನ್ನು ಬಿಟ್ಟುಹೋಗಲು ಅಸಮರ್ಥನಾಗಿ ಅವರ ಸನ್ನಿಧಿಯಲ್ಲೇ ವಾಸಿಸಹತ್ತಿದನು.

ಉತ್ಕೃಷ್ಟಜ್ಞಾನವುಳ್ಳ, ನಿದ್ರಾರಹಿತನಾದ, ದೇವತೆಗಳಿಗೆ ಒಡೆಯರಾದ, ಅಂದರೆ ದೇವಶ್ರೇಷ್ಠರಾದ ಶ್ರೀಪರಶು-ರಾಮದೇವರು, ಕರ್ಣ ಪರಾಜಯ ರೂಪ ಸುರಕಾರ್ಯನಿಮಿತ್ತವಾಗಿ ಆ ಕರ್ಣನಿಗೆ ಪ್ರಸಿದ್ಧನಾದ ವಾಲಿಯ ಸಂಹಾರದ ಫಲವನ್ನು ಕೊಡಲೋಸುಗ ಒಂದು ದಿನ ಆ ಕರ್ಣನ ತೊಡೆಯ ಮೇಲೆ ತಮ್ಮ ತಲೆಯನ್ನಿಟ್ಟು ಪರಶುರಾಮರು ನಿದ್ರಿಸುವವರಂತೆ ನಟಿಸುತ್ತಾ ಪವಡಿಸಿದ್ದರು. ಪ್ರಹ್ಲಾದಾದಿಗಳಂತೆ ಸುಜೀವಿಯಾದ ಅಂತೆಯೇ ವೈಷ್ಣವನೆಂದು ಪ್ರಸಿದ್ಧನಾದ ಹೇತಿ ಎಂಬ ರಾಕ್ಷಸಶ್ರೇಷ್ಠನು ತನಗೆ ವಿಹಿತವಾದ ಕಾಲದಲ್ಲಿ ಮಹೇಂದ್ರನನ್ನು ಪೂಜಿಸದೆ, ಅಂದರೆ ಸೇವಿಸುವ ಸಮಯದಲ್ಲಿ ಸೇವೆ ಮಾಡದೆ ಇದ್ದುದರಿಂದ ಇಂದ್ರದೇವರ ಶಾಪದಿಂದ ಕೀಟವಾಗಿ ಪರಶುರಾಮರ ಆಶ್ರಮದಲ್ಲಿ ಇರುತ್ತಿದ್ದನು. ಕೀಟಶರೀರ ಪ್ರಾಪ್ತವಾದ ಮೇಲೆ ಇಂದ್ರದೇವರು ತಮ್ಮ ಪ್ರಿಯಪುತ್ರನಾದ ಅರ್ಜುನನಿಗೆ ಕರ್ಣನನ್ನು ಸಂಹರಿಸುವುದರಲ್ಲಿ ಮತ್ತು ಜಯಗೊಳಿಸಲು ಸಾಮರ್ಥ್ಯವುಂಟಾಗುವುದಕ್ಕಾಗಿ ಕರ್ಣನಿಗೆ ಶಾಪ ಕೊಡಿಸಲೋಸುಗ ಕರ್ಣನ ತೊಡೆಯಮೇಲೆ ಶಿರವಿರಿಸಿ ಪರಶುರಾಮರು ಪವಡಿಸಿದ್ದ ಕಾಲದಲ್ಲಿ ಆ ಕೀಟದಲ್ಲಿ ಇಂದ್ರದೇವರು ಪ್ರವೇಶಮಾಡಿದರು. ಆ ಕೀಟಶರೀರದಲ್ಲಿ ಹೇತಿ ಎಂಬ ಅಸುರನಿಂದೊಡಗೂಡಿದ ಇಂದ್ರದೇವರು ಕರ್ಣನ ತೊಡೆಯ ಕೆಳಭಾಗದಿಂದಾರಂಭಿಸಿ ಮೇಲ್ಭಾಗದ ಮೇಲೆ ಹೋಗಿ ಉತ್ತಮವಾದ ಚರ್ಮವನ್ನು ಬಾಣ-ದೋಪಾದಿಯಲ್ಲಿ ಸೀಳಿದರು. ಆಗ ಕರ್ಣನ ತೊಡೆಯಿಂದ ರಕ್ತವು ಹೊರಹೊಮ್ಮಿತು. ಆದರಿಂದ ನಿದ್ರಾಭಂಗವಾದವರಂತೆ ನಟಿಸುತ್ತಾ ಪರಶುರಾಮರು "ಕರ್ಣ! ನಿನ್ನ ತೊಡೆಯಿಂದ ರಕ್ತವು ಹರಿಯುತ್ತಿದ್ದರೂ ನನ್ನನ್ನು ಎಬ್ಬಿಸಲಿಲ್ಲವೇಕೆ? ಇಂತಹ ಸಹನಶಕ್ತಿ ನಿನಗೆ ಹೇಗೆ ಬಂತು? ನೀನು ಯಾರು ನಿಜವನ್ನು ಹೇಳು" ಎಂದರು. ಆಗ ಕರ್ಣನು "ಸ್ವಾಮಿ, ಗುರುದೇವ! ನಿಮಗೆ ನಿದ್ರಾಭಂಗವಾಗಬಾರದೆಂದು ಕೀಟವು ನನ್ನ ತೊಡೆಯನ್ನು ಸೀಳಿದರೂ ಅದರಿಂದ ನನಗೆ ಅಪಾರ-ವೇದನೆಯಾದರೂ, ಅದನ್ನು ನಿರ್ಲಕ್ಷಿಸಿದೆ" ಎಂದು ವಿಜ್ಞಾಪಿಸಿ ಮತ್ತೆ ಕರಮುಗಿದು ಇಂತೆಂದನು - "ಸ್ವಾಮಿ, ನಾನು ಸೂತಕುಲದವನು. ನಿಮ್ಮ ಶಿಷ್ಯನಾದ ನಾನು ನಿಮ್ಮ ಪುತ್ರನೇ ಆಗಿದ್ದೇನೆ. ಆದ್ದರಿಂದ ನಾನು ಭಾರ್ಗವವಂಶದವನೆಂದು ಭಾವಿಸಿ ನಿಮ್ಮ ಮುಂದೆ ನಾನು ಬ್ರಾಹ್ಮಣ ಎಂದು ಹೇಳಿದೆ, ಅದೂ ಸತ್ಯವಿಚಾರವೇ ಆಗಿದೆ. ಸರ್ವೇಶ! ನೀನು ನನಗೆ ಮಾತ್ರವಲ್ಲ, ಜಗತ್ತಿಗೇ ಸ್ವಾಮಿಯಾಗಿದ್ದೀಯೆ. ನಿನ್ನನ್ನು ಬಿಟ್ಟು ಮುಖ್ಯರಾದ ತಂದೆ ತಾಯಿಗಳು ಬೇರೊಬ್ಬರಿಲ್ಲ. ಸರ್ವರಿಗೂ ನೀನೇ ತಂದೆಯಾಗಿರುವೆ. ಆದ್ದರಿಂದ ನನಗೂ ನೀನೇ ತಂದೆಯಷ್ಟೇ! ಆದ್ದರಿಂದಲೇ ನಾನು ಹಾಗೆ ಹೇಳಿದೆ. ನನ್ನನ್ನು ಕ್ಷಮಿಸು"! ಹೀಗೆ ಕರ್ಣನು ಹೇಳುತ್ತಿರುವಾಗ ಪರಶುರಾಮರ ದೃಷ್ಟಿ ಆ ಕೀಟದ ಮೇಲೆ ಬಿದ್ದಿತು. ಏನಾಶ್ಚರ್ಯ! ಕೂಡಲೇ ಆ ಕೀಟವು ಶಾಪದಿಂದ ಮುಕ್ತವಾಗಿ ತನ್ನ ಮೂಲರೂಪವನ್ನು ಪಡೆದು ಶ್ರೀಪರಶುರಾಮರ ಅನುಗ್ರಹದಿಂದ ವಿಮಾನದಲ್ಲಿ ಕುಳಿತು ಸ್ವರ್ಗ ಸೇರಿತು.

ಆಗ ಪರಶುರಾಮರು "ಕರ್ಣ! ಅಸತ್ಯವನ್ನು ಹೇಳಿದ ನೀನು ನನ್ನ ಬಳಿ ಇರಲು ಯೋಗ್ಯನಲ್ಲ. ಆದರೆ ನಿನಗೆ ನನ್ನಲ್ಲಿರುವ ಭಕ್ತಿಯು ವ್ಯರ್ಥವಾಗಲಾರದು. ನೀನು ನನ್ನ ಭಕ್ತನೂ, ಶಿಷ್ಯನೂ ಆದುದರಿಂದ ಸಕಲ ಶತ್ರುಗಳನ್ನೂ ಜಯಿಸುತ್ತೀಯೆ. ನೀನು ಸಕಲರನ್ನೂ ಜಯಿಸುವಿ ನಿಜ, ಆದರೆ ಕರ್ಣ! ಸ್ಪರ್ಧೆಯಿಲ್ಲದೆ ನೀನು ಯುದ್ಧಮಾಡುವಾಗ ಯಾರೂ ನಿನ್ನನ್ನು ಜಯಿಸಲಾರರು, ನೀನು ಸ್ಪರ್ಧೆಯಿಂದ (ಹೊಟ್ಟೆಕಿಚ್ಚಿನಿಂದ) ಕದನಕ್ಕಿಳಿದು ಹೋರಾಡಿದರೆ ಮಾತ್ರ ಖಂಡಿತ ಪರಾಜಿತನಾಗುವೆ. ಸ್ಪರ್ಧೆಯಿಂದ ಕಾದಾಡುತ್ತಿರುವಾಗ ನಿನಗೆ ವಿಸ್ಮರಣೆಯುಂಟಾಗುವುದು. ಅಂದರೆ ಆಗ ನಿನಗೆ ಮಹಾಸ್ತ್ರಗಳು, ಮಂತ್ರಗಳು ಸ್ಮರಣೆಗೆ ಬಾರದೆ ಪರಾಜಿತನಾಗುತ್ತೀಯೆ. ಇದರಲ್ಲಿ ಸಂಶಯವಿಲ್ಲ. ಹೂಂ, ನೀನಿನ್ನು ಹೊರಡು - ನಿನಗೆ ಮಂಗಳವಾಗಲಿ" ಎಂದು ಭಾರ್ಗವರಾಮರು ಅಪ್ಪಣೆ ಮಾಡಿದರು. ಆಗ ಕರ್ಣನು ಸರ್ವೇಶರಾದ ಶ್ರೀಪರಶು-ರಾಮರಿಗೆ ನಮಸ್ಕರಿಸಿ ಅವರಿಂದ ಬೀಳ್ಕೊಂಡು ತನ್ನೂರಿಗೆ ಪಯಣ ಬೆಳೆಸಿದನು.

ಇದರಂತೆ ದ್ರೋಣಾಚಾರ್ಯರಿಂದ ನಿಷಾದನೆಂದು ತಿರಸ್ಕೃತನಾದ ಏಕಲವ್ಯನು ದ್ರೋಣಾಚಾರ್ಯರಿಂದಲೇ ವಿದ್ಯೆ ಕಲಿಯುತ್ತೇನೆಂದು ಸಂಕಲ್ಪಿಸಿ, ದ್ರೋಣಾಚಾರ್ಯರ ಮಣ್ಣಿನ ಪ್ರತಿಮೆಯನ್ನು ತಯಾರಿಸಿ, ಅದನ್ನು ಗುರುಭಕ್ತಿಯಿಂದ ಪೂಜಿಸುತ್ತಾ ಆ ಪ್ರತಿಮೆಯ ಮುಂದೆ ಸ್ವಯಂ ಅಸ್ತ್ರವಿದ್ಯಾಭ್ಯಾಸವನ್ನು ಮಾಡಹತ್ತಿದನು.

ಇತ್ತ ಅಸ್ತ್ರಸಂಪನ್ನರಾದ ಮೇಲೆ ಒಂದು ದಿನ ದುರ್ಯೋಧನಾದಿಗಳಿಂದೊಡಗೂಡಿ ಪಾಂಡುಕುಮಾರರು ಮೃಗಯಾವಿಹಾರಕ್ಕೆ ವನಕ್ಕೆ ಬಂದರು. ಧರ್ಮರಾಜನ ಸಾರಮೇಯವು (ಬೇಟೆಯ ನಾಯಿ) ಮುಂದೆ ಮುಂದೆ ಹೋಗುತ್ತಾ ಬೇಟೆಯನ್ನು ಕಂಡು ಶಬ್ದಮಾಡ(ಬೊಗುಳ) ಹತ್ತಿತ್ತು. ಆ ಧ್ವನಿಯನ್ನು ಕೇಳಿದ ಏಕಲವ್ಯನು ಶಬ್ದವೇಧಶೀಲನಾದ್ದರಿಂದ ಆ ಶಬ್ದವನ್ನಾಲಿಸಿ ದೂರದಲ್ಲಿಯೇ ತನ್ನ ಬಾಣಸಮೂಹಗಳಿಂದ ಸಾರಮೇಯದ ಮುಖವನ್ನು ಮುಚ್ಚಿದನು. ಆಶ್ಚರ್ಯವೆಂದರೆ ಬಾಣಗಳಿಂದ ಮುಖಮುಚ್ಚಿದರೂ ಅದರಿಂದ ಮುಖವು ವ್ರಣವಾಗಲಿಲ್ಲ. ರಕ್ತ ಹರಿಯಲಿಲ್ಲ. ಸಾರಮೇಯವು ಭಯದಿಂದ ಧರ್ಮರಾಜಾದಿಗಳಿದ್ದಲ್ಲಿಗೆ ಓಡಿ ಬಂದಿತು. ಈ ವಿಚಿತ್ರ ವ್ಯಾಪಾರ, ಹಾಗೆ ದೂರದಿಂದಲೇ ಬಾಣಪ್ರಯೋಗ ಮಾಡಿದವನ ಅಗಾಧ ಕೌಶಲಗಳನ್ನು ಕಂಡು ಕೌರವರು-ಪಾಂಡವರು ಆಶ್ಚರ್ಯ-ಚಕಿತರಾಗಿ ಈ ವಿಚಿತ್ರ ಅಸ್ತ್ರಪ್ರಯೋಗ ಕುಶಲತೆಯನ್ನು ತೋರಿದವರಾರೆಂದು ಆತನನ್ನು ಹುಡುಕುತ್ತಾ ಬಂದರು. ಅಲ್ಲಿ ಅವರು ಕಂಡ ದೃಶ್ಯ ಅವರನ್ನು ದಿಗ್ಭ್ರಾಂತಿಗೊಳಿಸಿತು. ಒಂದು ವನಾಂತರ ಪ್ರದೇಶ. ಅಲ್ಲಿ ಮಣ್ಣಿನಲ್ಲಿ ತಯಾರಿಸಿದ ಗುರು-ದ್ರೋಣರ ಪ್ರತಿಮೆ! ಮುಂದೊಬ್ಬ ತೇಜಸ್ವಿಯಾದ ಯುವಕ ಅಸ್ತ್ರಾಭ್ಯಾಸ ನಿರತನಾಗಿದ್ದಾನೆ! ಆ ಪ್ರತಿಮೆಯನ್ನು ಪೂಜಿಸುತ್ತಿದ್ದಾನೆ. ಅವನೇ ಏಕಲವ್ಯನೆಂದು ಅವರು ಅರಿತರು.

ಏಕಲವ್ಯನು ಪಿಶಾಚಗಳಿಂದ ಪೈಶಾಚಿಕ (ಪಿಶಾಚಿ ಸಂಬಂಧಿಯಾದ) ಅಸ್ತ್ರಗಳನ್ನು ವಿಶೇಷವಾಗಿ ತಿಳಿದಿದ್ದನು. ಹಾಗಿದ್ದರೆ ದ್ರೋಣರ ಮೂರ್ತಿಯನ್ನೇಕೆ ಪೂಜಿಸುತ್ತಿದ್ದ? ಎಂದರೆ ಶಸ್ತ್ರವಿದ್ಯೆಯನ್ನೂ, ದಿವ್ಯಾಸ್ತ್ರಗಳನ್ನೂ, ಶಿಕ್ಷಣದ್ವಾರಾ ಪಡೆಯಲು ಗುರುಭಕ್ತಿಯಿಂದ ದ್ರೋಣರನ್ನು ಸರ್ವದಾ ಪೂಜಿಸುತ್ತಾ ಆ ದಿವ್ಯಾಸ್ತ್ರಗಳನ್ನು ಅಭ್ಯಾಸಮಾಡುತ್ತಿದ್ದನು. ಶಬ್ದವೇಧಿ ವಿದ್ಯೆಯಲ್ಲಿ ಪಾರಂಗತನಾದ ಏಕಲವ್ಯನನ್ನು ಕಂಡು ಅರ್ಜುನನು ದ್ರೋಣರ ಬಳಿಗೆ ಬಂದು "ಗುರುದೇವ! ನಿಮ್ಮ ಮಾತು ಸುಳ್ಳಾಯಿತು. ನೀವು ಜಗತ್ತಿನಲ್ಲಿ ನಾನೊಬ್ಬನೇ ಶ್ರೇಷ್ಠಧನ್ವಿಯಾಗುವಂತೆ ಮಾಡುತ್ತೇನೆ ಎಂದು ಹೇಳಿದ್ದಿರಿ. ಈಗ ನಿಮ್ಮ ಮಾತು ವ್ಯರ್ಥವಾಯಿತು. ಏಕಲವ್ಯನು, ನನಗೂ ತಿಳಿಯದ ಶಬ್ದವೇಧಿ ವಿದ್ಯೆಯಲ್ಲಿ ನಿಪುಣನಾಗಿದ್ದಾನೆ" ಎಂದು ಹೇಳಲು ದ್ರೋಣರು ಏಕಲವ್ಯನ ಬಳಿಗೆ ಬಂದು "ಕುಮಾರ! ನೀನು ನನ್ನ ಶಿಷ್ಯನಾಗಿದ್ದೀಯೆ. ನನಗೆ ಗುರುದಕ್ಷಿಣೆಯನ್ನು ಕೊಡು" ಎಂದು ಕೇಳಿದರು. ಸಾಕ್ಷಾತ್ ದ್ರೋಣರನ್ನು ಕಂಡು ಶ್ರದ್ಧಾಭಕ್ತಿಗಳಿಂದ ಅವರಿಗೆ ನಮಸ್ಕರಿಸಿ, ಪರಮಾನಂದಭರಿತನಾಗಿ "ಸ್ವಾಮಿ, ಗುರುವರ್ಯ, ಧನ್ಯನಾದೆ. ಈ ಬಡಶಿಷ್ಯನಿಂದ ಏನು ಗುರುದಕ್ಷಿಣೆ ಅಪೇಕ್ಷಿಸುವಿರಿ? ದಯಮಾಡಿ ಆಜ್ಞಾಪಿಸಿ, ನೆರವೇರಿಸುತ್ತೇನೆ" ಎಂದು ವಿಜ್ಞಾಪಿಸಿದನು. ಆಗ ದ್ರೋಣರು "ಏಕಲವ್ಯ, ನಿನ್ನ ಬಲಗೈ ಅಂಗುಷ್ಠವನ್ನೇ ನನಗೆ ಗುರು-ದಕ್ಷಿಣೆಯಾಗಿ ಕೊಡು" ಎಂದರು. ದ್ರೋಣರ ಪ್ರಸಾದದಿಂದ ಸಮೃದ್ಧವಾದ ಅಸ್ತ್ರವಿದ್ಯೆಯನ್ನು ಕಲಿತ ನಿಷಾದನಾದ ಆ ಏಕಲವ್ಯನು ದ್ರೋಣರಿಗೆ ಭಕ್ತಿಯಿಂದ ಕೂಡಲೇ ತನ್ನ ಬಲಗೈ ಅಂಗುಷ್ಠ (ಹೆಬ್ಬೆರಳು)ವನ್ನು ಕತ್ತರಿಸಿ ಸಮರ್ಪಿಸಿದನು. ಅವನ ಗುರುಭಕ್ತಿಯ ಪರಾಕಾಷ್ಠತೆಯನ್ನು ಕಂಡು ಸರ್ವರೂ ವಿಸ್ಮಿತರಾದರು. ಅಂಗುಷ್ಠದಾನ ಮಾಡಿದ ಮೇಲೆ ಸನ್ಮುಷ್ಟಿಹೀನನಾದ ಏಕಲವ್ಯನ ಶಸ್ತ್ರಾಭ್ಯಾಸವು ಅಪೂರ್ಣವಾಗಿಯೇ ಉಳಿಯಿತು. ಆದ್ದರಿಂದ ಅವನು ಅರ್ಜುನ ಸಮವಾದ ಶಿಕ್ಷಣ ಮಾತ್ರ ಪಡೆದನು. ಕೃಪಾಳುಗಳಾದ ದ್ರೋಣಾಚಾರ್ಯರು ಏಕಲವ್ಯನ ಭಕ್ತಿ, ತಮ್ಮ ಪ್ರತಿಮಾ ಪೂಜೆ, ಅಂಗುಷ್ಠದಾನಗಳಿಂದ ಸಂತುಷ್ಟರಾಗಿ ಪುನಃ ಅವನಿಗೆ ರೈವತಪರ್ವತದಲ್ಲಿ ಉತ್ತಮ ಅಸ್ತ್ರಗಳನ್ನು ಉಪದೇಶಿಸಿದನು. ಮತ್ತೆ ಅರ್ಜುನನನ್ನು ಶಸ್ತ್ರಾಸ್ತ್ರವಿದ್ಯೆಗಳಲ್ಲಿ ಅತ್ಯಂತ ಪರಿಣತನನ್ನಾಗಿ ಮಾಡಿ "ನಿನ್ನನ್ನು ಜಗತ್ತಿನಲ್ಲಿಯೇ ಅದ್ವಿತೀಯನಾದ ಸರ್ವೋತ್ಕೃಷ್ಟ ಧನ್ವಿಯನ್ನಾಗಿ

ಮಾಡುತ್ತೇನೆ" ಎಂದು ಅಭಯವಿತ್ತಿದ್ದಂತೆ ತಮ್ಮ ವಾಕ್ಯವನ್ನು ಸತ್ಯವನ್ನಾಗಿ ಮಾಡಿ ಜಗತ್ತಿನಲ್ಲೆಲ್ಲಾ ಸಕಲ ಧನುರ್ಧಾರಿಗಳಲ್ಲಿ ಅರ್ಜುನನೊಬ್ಬನೇ ಸರ್ವಶ್ರೇಷ್ಠ ಧನುರ್ಧರನಾಗುವಂತೆ ಅನುಗ್ರಹಿಸಿದರು.

*ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದ ಹದಿನೈದನೆಯ ಅಧ್ಯಾಯದ ಕಥಾಸಂಗ್ರಹವು ಮುಗಿದುದು.*

॥ ಶ್ರೀ ಕೃಷ್ಣಾರ್ಪಣಮಸ್ತು ॥

★ ★ ★



ಗರುಡಧ್ವಜನಿಂದ ಪರಮಾತ್ಮನಿಗೆ ಕಿರೀಟ ಸಮರ್ಪಣೆಗೆ ಸಿದ್ಧತೆ

## ಷೋಡಶಾಧ್ಯಾಯಭಾವಸಂಗ್ರಹ

*ಅವತಾರಿಕೆ:-*

ಈಗ ಶ್ರೀಗುರುಸಾರ್ವಭೌಮರು, ಶ್ರೀಮದಾನಂದತೀರ್ಥ ಭಗವತ್ಪಾದರು ರಚಿಸಿದ ಮಹಾಭಾರತ ತಾತ್ಪರ್ಯ ನಿರ್ಣಯದ ಹದಿನಾರನೆಯ ಅಧ್ಯಾಯದ ಕಥಾಭಾಗವನ್ನು "ಭೂಯಃ" ಎಂಬ ಪದ್ಯದಿಂದ ಸಂಗ್ರಹಿಸುತ್ತಾರೆ.

**ಭೂಯಸ್ತ್ವಾಗತಮಾಜಯೇ ಸಹಜರಾಸಂಧಂ ನೃಪೈರ್ನೀತಯೇ**

**ಜ್ಞಾತ್ವಾಽಯಾತ್ ಸಹಜಾನ್ವಿತೋಽತಿಗಹನಂ ಗೋಮಂತಮತ್ರಾಗತಾನ್ ।**

**ತಾರ್ಕ್ಷ್ಯಾಲ್ಲಬ್ಧಕಿರೀಟ ಉನ್ನತಗಿರೇರಾಪ್ಲುತ್ಯ ಜಿತ್ವಾ ರಿಪೂನ್**

**ಹತ್ವಾ ಸ್ವೀಯಸೃಗಾಲಮಾತ್ಮನಗರೀಂ ಪ್ರಾಪ್ತಃ ಸ ನೋಽವ್ಯಾದ್ ಹರಿಃ ॥ 16 ॥**

**ಅನ್ವಯಾರ್ಥ :-** **ಯಃ** = ಯಾವ ಶ್ರೀಕೃಷ್ಣಪರಮಾತ್ಮನು, **ಸಹಜಾನ್ವಿತಃ ಸನ್** = ಸಹೋದರನಾದ ಬಲರಾಮನಿಂದ ಕೂಡಿಕೊಂಡು, **ನೃಪೈಃ ಸಹ** = ತನ್ನ ಮಾಂಡಲಿಕ ರಾಜರೊಡನೆ, **ಆಜಯೇ** = ಯುದ್ಧಕ್ಕಾಗಿ (**ಆಹವೇ**) = ಯುದ್ಧದಲ್ಲಿ), **ಭೂಯಸ್ತು** = ಮತ್ತೆ (ಪುನಃ), **ಆಗತಂ** = ಬಂದಂಥ, **ಜರಾಸಂಧಂ** = ಜರಾಸಂಧನನ್ನು, **ಜ್ಞಾತ್ವಾ** = ತಿಳಿದು, **ನೀತಯೇ** = ರಾಜನೀತಿಯನ್ನು ಜಗತ್ತಿಗೆ ಉಪದೇಶಿಸಬೇಕೆಂದು, (ಅಷ್ಟೇ ವಿನಃ ಸಾಮರ್ಥ್ಯವಿಲ್ಲದ್ದರಿಂದಲ್ಲ ಎಂದು ಭಾವ), **ಅತಿಗಹನಂ** = ಅತ್ಯಂತ ಗಹನವಾದ (ಪ್ರವೇಶಿಸಲಾಗದ) (ಪಾ.- **ಗೋಮಂತಂ ಅಗಾನ್** = ಗೋಮಂತಕ್ಕೆ ಬಂದನು). **ಗೋಮಂತಂ** = ಗೋಮಂತಪರ್ವತದಲ್ಲಿ (ಅರಿಗಿರಿಯಲ್ಲಿ) **ಆಯಾತ್** = ಬಂದಂಥ, **ತಾರ್ಕ್ಷ್ಯಾತ್** = ಗರುಡನಿಂದ, **ಲಬ್ಧಕಿರೀಟಃ** = ಹೊಂದಲ್ಪಟ್ಟ ಕಿರೀಟವುಳ್ಳವನಾಗಿ (ಅಂದರೆ ಕಿರೀಟವನ್ನು ಪಡೆದು), **ಉನ್ನತಗೀರೇಃ** = ಅತಿ ಎತ್ತರವಾದ ಬೆಟ್ಟದಿಂದ, **ಆಪ್ಲುತ್ಯ** = ಹಾರಿ, **ಆಗತಾನ್** = ಬಂದಂಥ, **ರಿಪೂನ್** = ಶತ್ರುಗಳನ್ನು, **ಜಿತ್ವಾ** = ಜಯಿಸಿ, **ಸ್ವೀಯಸೃಗಾಲಂ** = ತನ್ನ ಸಹೋದರನಾದ ಸೃಗಾಲವಾಸುದೇವನನ್ನು, (ಪಾ.- **ಅನ್ವೀಯ** = ಅನುಸರಿಸಿ). **ಹತ್ವಾ** = ಸಂಹಾರ ಮಾಡಿ, **ಆತ್ಮನಗರೀಂ** = ತನ್ನ ನಗರವಾದ ಮಥುರಾಪಟ್ಟಣವನ್ನು, **ಪ್ರಾಪ್ತಃ** = ಹೊಂದಿದಂಥ (ಸೇರಿದಂತಹ), **ಸಃ** = ಅಂಥ ಮಹಾಮಹಿಮನಾದ, **ಹರಿಃ** = ಶ್ರೀಹರ್ಯಭಿನ್ನವಾದ ಶ್ರೀಕೃಷ್ಣನು, **ನಃ** = ನಮ್ಮಗಳನ್ನು, **ಅವ್ಯಾತ್** = ಕಾಪಾಡಲಿ.

**ತಾತ್ಪರ್ಯ :-** ಮಹಾಭಾರತ ತಾತ್ಪರ್ಯ ನಿರ್ಣಯದ ಹದಿನಾರನೆಯ ಅಧ್ಯಾಯಾರ್ಥವನ್ನು ಶ್ರೀಗುರು-ಸಾರ್ವಭೌಮರು ಈ ಪದ್ಯದಲ್ಲಿ ಸಂಗ್ರಹಿಸಿದ್ದಾರೆ. ಮಥುರೆಯಲ್ಲಿ ಶ್ರೀಕೃಷ್ಣನು ಇರುವಾಗ ತನ್ನ ಅಳಿಯನಾದ ಕಂಸನನ್ನು ಸಂಹರಿಸಿದನೆಂಬ ಕೋಪದಿಂದ ಜರಾಸಂಧನು ಸಕಲ ಸಾಮಂತರಾಜರು ಮತ್ತು ಸೈನಿಕರಿಂದೊಡಗೂಡಿ ಶ್ರೀಕೃಷ್ಣನನ್ನು ಜಯಿಸಿ ಸಂಹರಿಸಬೇಕೆಂಬ ದುರಭಿಸಂಧಿಯಿಂದ ಬಂದನು. ಶ್ರೀಕೃಷ್ಣನು ಜರಾಸಂಧನು ಮತ್ತೆ ತನ್ನ ಮೇಲೆ ಯುದ್ಧ ಮಾಡಲು ಬಂದಿದ್ದಾನೆಂದು ತಿಳಿದು, ಅತ್ಯಂತ ಸಮರ್ಥನೂ, ಅರಿಭಯಂಕರನೂ ತಾನಾಗಿದ್ದರೂ, ಜರಾಸಂಧನನ್ನು ಅಲ್ಲಿಯೇ ಜಯಿಸಲು ಸಮರ್ಥನಾಗಿದ್ದರೂ, ಜಗತ್ತಿಗೆ ಇಂಥ ಸಮಯದಲ್ಲಿ ಹೇಗೆ ವರ್ತಿಸಬೇಕೆಂದು ರಾಜನೀತಿಯನ್ನು ತೋರಿಕೊಡಲೋಸುಗ ಅಣ್ಣ ಬಲರಾಮನಿಂದ ಕೂಡಿಕೊಂಡು ಅತಿಗಹನವಾದ ಗೋಮಂತಪರ್ವತಕ್ಕೆ ಹೋದನು. ಆ ಗೋಮಂತಪರ್ವತದಲ್ಲಿ ಗರುಡನು ತಂದು ಸಮರ್ಪಿಸಿದ ತನ್ನ ಕಿರೀಟವನ್ನು ಪಡೆದು, ಎತ್ತರವಾದ ಆ ಬೆಟ್ಟದಿಂದ ಹಾರಿ, ಅಲ್ಲಿಗೆ ಬಂದ ಸಮಸ್ತ ಶತ್ರುಗಳನ್ನು ಜಯಿಸಿ, ಸೋದರನಾದ ಸೃಗಾಲ ವಾಸುದೇವನನ್ನು ಸಂಹರಿಸಿ ಮಥುರಾಪಟ್ಟಣಕ್ಕೆ ಮರಳಿಬಂದನು. ಇಂತಹ ಮಹಾಮಹಿಮನಾದ ಶ್ರೀಕೃಷ್ಣನು ನಮ್ಮನ್ನು ಕಾಪಾಡಲಿ ಎಂದು ಭಾವ.

# ಷೋಡಶೋಽಧ್ಯಾಯ ಕಥಾಸಂಗ್ರಹ

ಭಗವಾನ್ ಶ್ರೀನಿರ್ಣಯಾಚಾರ್ಯರು, ಅತ್ತ ಕುರುಪಾಂಡವ ರಾಜಕುಮಾರರು ದ್ರೋಣಾಚಾರ್ಯರಿಂದ ಯುದ್ಧ-ಕಲೆಯನ್ನು ಅಭ್ಯಾಸಮಾಡುತ್ತಾ ಅಸ್ತ್ರಗಳನ್ನು ಪಡೆಯುತ್ತಿದ್ದ ಕಾಲದಲ್ಲಿ, ಇತ್ತ ನಡೆದ ಶ್ರೀಕೃಷ್ಣಕಥೆಯನ್ನು ಎರಡು ಅಧ್ಯಾಯಗಳಿಂದ ನಿರೂಪಿಸುತ್ತಾರೆ.

ಹಸ್ತಿನಾವತಿಯಲ್ಲಿ ಕುರು-ಪಾಂಡವರು ಅಸ್ತ್ರ ವಿದ್ಯಾಭ್ಯಾಸ ಮಾಡುತ್ತಾ ಅಸ್ತ್ರ ಪ್ರಾಪ್ತಿಯನ್ನು ಪಡೆಯುತ್ತಿರುವ ಸಮಯದಲ್ಲಿ, ಇತ್ತ ಮಗದಾಧಿಪತಿಯಾದ ಜರಾಸಂಧನು ಸಕಲಸಾಮಂತ ನೃಪರಿಂದೊಡಗೂಡಿ ಅಗಾಧಸೈನ್ಯದೊಡನೆ ಯಾದವರ ಮೇಲೆ ಯುದ್ಧಕ್ಕೆ ತೆರಳಿದನು. ಆ ಯುದ್ಧದಲ್ಲಿ ನಿತ್ಯನಾದ (ನಾಶರಹಿತನಾದ), ಅವ್ಯಯನಾದ (ಹ್ರಾಸ-ರಹಿತನಾದ), ಅತ್ಯಂತಬಲವುಳ್ಳ ಐಶ್ವರ್ಯಯುಕ್ತನಾಗಿದ್ದರೂ ಸಹ ಶ್ರೀಕೃಷ್ಣನು ತನ್ನ ಇಚ್ಛೆಯಿಂದಲೇ ಸ್ವಕೀಯರಾದ ಯಾದವರನ್ನೂ, ಮಧುರಾಪಟ್ಟಣವನ್ನೂ ಬಿಟ್ಟುಹೋದನು. ನಿತ್ಯನೂ ಅವ್ಯಯನೂ ಅತಿಬಲೈಶ್ವರ್ಯಪೂರ್ಣನೂ ಆದ ಶ್ರೀಕೃಷ್ಣನು ಏಕೆ ಯಾದವರನ್ನೂ ಮಧುರಾಪಟ್ಟಣವನ್ನು ತ್ಯಜಿಸಿ ಹೋದನೆಂದರೆ, ಹೇಳುತ್ತಾರೆ - ಅಲ್ಪಬಲ, ಸೇನೆ ಮೊದಲಾದ ಯುದ್ಧಸಾಧನಗಳುಳ್ಳವರು ಅತ್ಯಧಿಕಬಲವಂತರೂ, ಅಗಾಧಸೇನೆ-ಸಾಮಗ್ರಿಗಳಿಂದ ಯುಕ್ತರಾದವರೊಡನೆ ಯುದ್ಧವು ಪ್ರಾಪ್ತವಾದಾಗ ಹೇಗೆ ವರ್ತಿಸಬೇಕೆಂಬ ರಾಜನೀತಿಯನ್ನು ಪ್ರದರ್ಶಿಸುತ್ತಾ ಶ್ರೀಕೃಷ್ಣನು ಬಲರಾಮಸಹಿತನಾಗಿ ದಕ್ಷಿಣದಿಕ್ಕಿನತ್ತ ಪ್ರಯಾಣ ಬೆಳೆಸಿದನು. ಶ್ರೀಕೃಷ್ಣನಿಗೆ ಸಾಮರ್ಥ್ಯವಿರಲಿಲ್ಲ, ಆದ್ದರಿಂದ ಜರಾಸಂಧನ ಭಯದಿಂದ ಮಧುರೆಯನ್ನು ಬಿಟ್ಟುಹೋದನೆಂಬ ಗ್ರಂಥಾಂತರ ವಿರೋಧವನ್ನು ಪರಿಹರಿಸುತ್ತಾ ಶ್ರೀನಿರ್ಣಯಾಚಾರ್ಯರು ಹಿಂದೆ ನಿರೂಪಿಸಿದ ವಿಷಯವನ್ನೇ ಈಗ ವಿಶದೀಕರಿಸುತ್ತಾರೆ.

ಅನಂತವೀರ್ಯನೂ, ಸರ್ವೋತ್ತಮನೂ ಆದ ಶ್ರೀಕೃಷ್ಣ ಪರಮಾತ್ಮನು ಭಯರಹಿತನಾಗಿದ್ದರೂ ಕೂಡ ಜಗತ್ತಿಗೆ ರಾಜನೀತಿಯನ್ನು ಬೋಧಿಸುವುದಕ್ಕಾಗಿ ಮಥುರೆಯನ್ನು ಬಿಟ್ಟು ಹೋದನೇ ವಿನಃ ಭಯದಿಂದಲ್ಲ. ಹಾಗೆ ಹೊರಟ ಶ್ರೀಕೃಷ್ಣನು ಶ್ರೀಪರಶುರಾಮದೇವರನ್ನು ಕಂಡು ಅವರಿಂದ ಗೋಮಂತಪರ್ವತದ ವಿಚಾರವನ್ನು ತಿಳಿದು ಅಲ್ಲಿಗೆ ಹೋದನು. ಶ್ರೀಕೃಷ್ಣ-ಪರಶುರಾಮರಲ್ಲಿ ಭೇದವಿಲ್ಲ. ಎರಡೂ ರೂಪಗಳೂ ಒಂದೇ ನಾರಾಯಣನ ಮೂಲರೂಪದ ಅವತಾರಗಳು. ಆದರೂ ಲೋಕಾನುಕರಣಕ್ಕಾಗಿ ಕ್ರೀಡಾರ್ಥವಾಗಿ ಹಾಗೆ ನಟಿಸುತ್ತಾ ಶ್ರೀಕೃಷ್ಣನು ಪರಶುರಾಮದೇವರಿಂದ ಅತ್ಯಂತ ದುರ್ಗಮವಾದ ಗೋಮಂತಪರ್ವತದ ವಿಚಾರವನ್ನು ತಿಳಿದು ಗೋಮಂತಪರ್ವತಕ್ಕೆ, ಅಣ್ಣನಾದ ಬಲರಾಮನಿಂದ ಸಹಿತನಾಗಿ ಹೋದನು.

ಅದೇ ಸಮಯದಲ್ಲಿ ಉತ್ಪತ್ತಿರಹಿತನಾದ ಶ್ರೀಮನ್ನಾರಾಯಣನು ಸಂಸಾರಸ್ಥರಾದ ದೇವತೆಗಳು - ಋಷಿಗಳು ಮತ್ತು ಬಲಿ ಮೊದಲಾದ ದೈತ್ಯರಿಂದ ಪೂಜೆಯನ್ನು ಸ್ವೀಕರಿಸಲೋಸುಗ ಕ್ಷೀರಸಮುದ್ರದಲ್ಲಿರುವವರನ್ನು ಮುಕ್ತಸ್ಥಾನದಿಂದ ಸಂಸಾರದಲ್ಲಿರುವವರು ಬರಲು ಯೋಗ್ಯವಾದ ಅಮುಕ್ತಸ್ಥಾನಕ್ಕೆ ಕರೆತಂದನು. ಅಲ್ಲಿಗೆ ಸರ್ವರಿಗೂ ಸ್ವಾಮಿಯಾದ ಶ್ರೀಮನ್ನಾರಾಯಣನ ದರ್ಶನಕ್ಕಾಗಿ ಬಲಿಚಕ್ರವರ್ತಿಯೂ ಬಂದನು. ಆಗ ಉತ್ಕೃಷ್ಟಕರ್ಮವುಳ್ಳ, ಅಪ್ರಮೇಯನಾದ ಅಂದರೆ ಸರ್ವಥಾ ಸಂಪೂರ್ಣವಾಗಿ ತಿಳಿಯಲು ಅಶಕ್ಯನಾದ ಶ್ರೀಹರಿಯು ಬಲಿರಾಜನು ಅಸುರಾವೇಶಯುಕ್ತನೆಂದು ತೋರಿಸಿ-ಕೊಡಲು ನಿತ್ಯವೂ ನಿದ್ರಾರಹಿತನಾದಾಗ್ಯೂ, ದೇವತೆಗಳಿಗೆ ನೀವೂ ನಿದ್ದೆಯನ್ನು ಮಾಡಿರಿ ಎಂದು ಸಂಜ್ಞೆ ಮಾಡಲೆಂಬಂತೆ ದೇವತೆಗಳ ಮುಖವನ್ನು ಅವಲೋಕಿಸಿ ತಾನೂ ಮಲಗಿ ಚೆನ್ನಾಗಿ ನಿದ್ರಿಸುವವನಂತೆ ನಟಿಸಿದನು. ಶ್ರೀಹರಿಯ ಅಭಿಪ್ರಾಯ-ವನ್ನರಿತ ಎಲ್ಲ ದೇವತೆಗಳೂ ಸಹ ನಿಮೀಲಿತಾಕ್ಷರಾಗಿ ನಿದ್ರಿಸುವವರಂತೆ ಹಾಸಿಗೆಯಲ್ಲಿ ಮಲಗಿದ್ದರು. ಆಗ ಅಲ್ಲಿಗೆ ಬಂದ

ಬಲಿರಾಜನು ಶ್ರೀಹರಿ ಮೊದಲಾಗಿ ಸರ್ವರೂ ನಿದ್ರಿಸುತ್ತಿರುವುದನ್ನು ಕಂಡು ಶ್ರೀಹರಿಯ ಕಿರೀಟವನ್ನು ಅಪಹರಿಸಿಕೊಂಡು ಪಾತಾಳಕ್ಕೆ ಪಲಾಯನ ಮಾಡಿದನು. ಅದನ್ನು ಕಂಡ ಸಕಲದೇವತೆಗಳು ನಗಹತ್ತಿದರು. ಬ್ರಹ್ಮಾದಿ ಸಮಸ್ತ ಸುರವೃಂದಸಹಿತನಾದ ಶ್ರೀಹರಿಯು ನಗುತ್ತಿರಲು ಗರುಡನು ಪಾತಾಳಕ್ಕೆ ಹೋಗಿ ಅಲ್ಲಿ ಯುದ್ಧದಲ್ಲಿ ಬಲಿರಾಜನನ್ನು ಜಯಿಸಿ ಶ್ರೀಹರಿಯ ಕಿರೀಟವನ್ನು ತೆಗೆದುಕೊಂಡು ಶ್ರೀಕೃಷ್ಣನಿದ್ದ ಗೋಮಂತಪರ್ವತಕ್ಕೆ ಬಂದನು.

ಬ್ರಹ್ಮದೇವರ ವರದಿಂದ ಅಜೇಯನಾದ ಬಲಿರಾಜನನ್ನು ಗರುಡನು ಅದೆಂತು ಜಯಿಸಿದನು? ಎಂದರೆ ನಿಜ. ಹೀಗೆ ಜರಾಸಂಧನನ್ನು ಬಲರಾಮನು ಶ್ರೀಹರಿಯ ವಿಶೇಷಾಂಶವಿದ್ದುದರಿಂದ ಜಯಿಸಿದನೋ ಹಾಗೆಯೇ ಶ್ರೀಹರಿಯ ವಿಶೇಷ ವರದಿಂದ ಗರುಡನು ಬಲರಾಜನನ್ನು ಜಯಿಸಿದನೆಂದು ತಿಳಿಯಬೇಕು. ಈ ವರವಿಚಾರವು "ಅಜೇಯೋ ದೇವದೈತ್ಯಾನಾಂ ಸ್ಯಾಮಹಂ ತೇ ಪ್ರಸಾದತಃ । ಓಮಿತ್ಯುಕ್ತ್ವಾ ತದಾ ವಿಷ್ಣುರುವಾಚ ಚ ಹಿತಂ ವಚಃ ।।" ಎಂದು ಸ್ಕಾಂದಪುರಾಣದಲ್ಲಿ ಬದರೀಮಾಹಾತ್ಮ್ಯದಲ್ಲಿ ಉಕ್ತವಾಗಿದೆ –

ಶ್ರೀವಿಷ್ಣುವಿನ ವಿಶೇಷವರವಿದ್ದುದರಿಂದ ಗರುಡನು ಬಲಿರಾಜನನ್ನು ಗೆದ್ದು ಶ್ರೀನಾರಾಯಣನ ಕಿರೀಟವನ್ನು ಅವನಿಂದ ಪಡೆದು ಗೋಮಂತಪರ್ವತಕ್ಕೆ ಬಂದು ನಾರಾಯಣಾಭಿನ್ನನಾದ ಶ್ರೀಕೃಷ್ಣನ ಶಿರಸ್ಸಿನಲ್ಲಿ ನಿಧಾನವಾಗಿ ಮಂಡಿಸಿ, ಶ್ರೀಕೃಷ್ಣನಿಗೆ ಸಾಷ್ಟಾಂಗ ನಮಸ್ಕಾರಮಾಡಿ ಬಹುವಿಧವಾಗಿ ಸ್ತೋತ್ರಮಾಡಿದನು. ಇದರಿಂದ ಸುಪ್ರೀತನಾದ ಶ್ರೀಕೃಷ್ಣನು "ಸುಪರ್ಣ, ಮತ್ತೆ ನಾನು ಸ್ಮರಿಸಿದಾಗ ಬಾ" ಎಂದು ಆಜ್ಞಾಪಿಸಿ ಗರುಡನನ್ನು ಕಳಿಸಿಕೊಟ್ಟನು. ಆಗ ಗರುಡನು ಶ್ರೀಕೃಷ್ಣರೂಪಿ ನಾರಾಯಣನು ವಿರಾಜಿಸುತ್ತಿದ್ದ ಕ್ಷೀರಸಮುದ್ರಕ್ಕೆ ತೆರಳಿದನು. ಶ್ರೀಕೃಷ್ಣನ ಶಿರಸ್ಸಿನಲ್ಲಿ ಮಂಡಿಸಲ್ಪಟ್ಟ, ಶ್ರೀನಾರಾಯಣನ ಶಿರಸ್ಸಿನಲ್ಲಿದ್ದ ಕಿರೀಟವು ಶ್ರೀಕೃಷ್ಣನ ಶಿರಸ್ಸಿಗೆ ಸರಿಯಾಗಿ ಹೊಂದಿಕೊಂಡಿತು. ಶ್ರೀಹರಿಪರಮಾತ್ಮನ ಮತ್ಸ್ಯ-ಕೂರ್ಮಾ-ದ್ಯವತಾರಗಳಲ್ಲಿ ಅಭೇದವಿರುವುದರಿಂದ ಶ್ರೀಮನ್ನಾರಾಯಣನ ಇಚ್ಛೆಯಿಂದಲೇ ಗೋಮಂತಪರ್ವತದಲ್ಲಿದ್ದ ಶ್ರೀಕೃಷ್ಣನ, ಕ್ಷೀರಸಮುದ್ರದಲ್ಲಿರುವ ನಾರಾಯಣನ ಶಿರಸ್ಸು ಇವರೀರ್ವರ ಶಿರಸ್ಸಿನಲ್ಲೂ ಏಕಕಾಲದಲ್ಲಿ ಕಿರೀಟವು ಶೋಭಿಸಿತು. ಇದೇ ಭಗವಂತನ ಅಸಾಧಾರಣ ಮಹಿಮೆಗೆ ದೃಷ್ಟಾಂತ. ಶ್ರೀಕೃಷ್ಣನಾರಾಯಣರಲ್ಲಿ ಭೇದವಿಲ್ಲವಾದ್ದರಿಂದ ಉಭಯರ ಶಿರದಲ್ಲೂ ಕಿರೀಟವು ಶೋಭಿಸಿತು ಎಂದು ಭಾವ.

ಜರಾಸಂಧನೊಡನೆ ಮೊದಲು ಯುದ್ಧವು ಮುಗಿದಾಗ ಕೃಷ್ಣನೆಡೆಗೆ ಬಂದಿದ್ದ ದಿವ್ಯಾಯುಧಗಳೂ, ಯುದ್ಧವು ಮುಗಿದ ಮೇಲೆ ವೈಕುಂಠಕ್ಕೆ ಮರಳಿದ್ದ ಆಯುಧಗಳೂ, ಶ್ರೀಕೃಷ್ಣನು ಗೋಮಂತ ಪರ್ವತದಲ್ಲಿ ವಾಸಮಾಡುತ್ತಿರುವಾಗ ಪುನಃ ಶ್ರೀಕೃಷ್ಣನಿಗೆ ಸಹಾಯಕವಾಗಿ ಬಂದುಸೇರಿದವು. ಅದೇ ಸಮಯದಲ್ಲಿ ರೋಹಿಣಿಯ ಸುತನಾದ ಬಲರಾಮನ ಆಯುಧಗಳೂ ಬಂದವು. ಅದರಂತೆಯೇ ಮೂಲರೂಪದಲ್ಲಿ ಪತ್ನಿಯಾಗಿ ವಾರುಣಿಯೆಂದು ಪ್ರಸಿದ್ಧಳಾಗಿದ್ದ ಪತ್ನಿಯೂ ಬಂದು ಸೇರಿದಳು. ಆ ವಾರುಣಿಯೇ ಶ್ರೀ ಎಂಬ ಹೆಸರುಳ್ಳ ಲಕ್ಷ್ಮೀದೇವಿಯ ಆವೇಶಯುಕ್ತಳು.

ಹರಿವಂಶದಲ್ಲಿ "ಶ್ರೀಶ್ಚ ದೇವೀ ವರಿಷ್ಠಾ ಸ್ತ್ರೀ ಸ್ವಯಮೇವಾಂಬುಜಧ್ವಜಾ" ಅಂದರೆ ಅಂಬುಜಧ್ವಜಳಾದ ಶ್ರೀ ಎಂಬುವವಳು ಶ್ರೀಹರಿಯ ಜ್ಯೇಷ್ಠಪತ್ನಿಯೆಂದು ಉಕ್ತವಾಗಿದೆ. ಇಂಥ ಶ್ರೀ ಎಂಬ ಇಂದಿರೆಯ ಆವೇಶಯುಕ್ತಳೇ ವಾರುಣಿಯು. ಅವಳು ಶ್ರೇಷ್ಠವಾದ ಮತ್ತೊಂದು ರೂಪದಿಂದ ಬಂದಳು. ಇದರಂತೆ ನಾಗಲೋಕದಿಂದ ಬಲರಾಮನ ಮೂಲರೂಪದ ಪತ್ನಿಯಾದ ಕಾಂತಿಯೆಂಬುವವಳೂ ಬಂದಳು.

"ಕಾಂತಿಶ್ಚ ಶಶಿನಃ ಪ್ರಿಯಾ" ಎಂದು ಹರಿವಂಶದಲ್ಲಿ ಕಾಂತಿಯು ಚಂದ್ರನ ಮಡದಿಯೆಂದಿರುವುದರಿಂದ ಅವಳೆಂತು ಬಲರಾಮಪತ್ನಿಯಾದಾಳು? ಎಂಬ ಶಂಕೆಯನ್ನು 'ಸೋಮಸ್ಯ ಜಾಯಾ' ಎಂದು ನಿರ್ಣಯಾಚಾರ್ಯರು ಸ್ಪಷ್ಟಪಡಿಸಿ ಬಲರಾಮನಲ್ಲಿಗೆ ನಾಗಲೋಕದಿಂದ ಬಂದ ಕಾಂತಿಯೂ, ಸೋಮನಪತ್ನಿಯಾದ ಕಾಂತಿಯೂ ಬೇರೆ ಬೇರೆ ಎಂದು ಅಪ್ಪಣೆ

ಕೊಡಿಸಿದ್ದಾರೆ. ಒಬ್ಬ ಕಾಂತಿಯು ಬಲರಾಮನ ಪತ್ನಿ, ಮತ್ತೊಬ್ಬಳು ಚಂದ್ರನ ಪತ್ನಿ ಎಂದು ತಿಳಿಯಬೇಕು. ಈ ಇಬ್ಬರು ಕಾಂತಿಯರಲ್ಲಿ ಮೊದಲನೆಯವಳಾದ, ಬಲರಾಮಪತ್ನಿಯಾದ ಕಾಂತಿಯು ಅತ್ಯಂತ ಸುಂದರಿಯು.

ಬಲರಾಮನು ಹೀಗೆ ತನ್ನ ಪತ್ನಿಯೊಡನೆ ಗೋಮಂತಪರ್ವತದಲ್ಲಿ ಸಂತೋಷದಿಂದ ವಿಹರಿಸಿದನು. ಅನೇಕ ಚಂದ್ರರಕಿಂತ ಉತ್ಕೃಷ್ಟಕಾಂತಿ ಸಂಪನ್ನನಾದ, ಅಂತೆಯೇ ಮಂಗಳಕರ ಪ್ರಕಾಶದಿಂದ ರಾಜಿಸುವ ಬಲರಾಮನು ವಾರುಣಿಯ ದೇಹಸಮವಾದ ಕದಂಬಕುಸುಮಗಳಿಂದ ಹೊರಹೊಮ್ಮಿದ ಪೇಯರೂಪವಾದ ವಾರುಣಿಯ ಮತ್ತೊಂದು ರೂಪವಾದ ಕಾದಂಬರಿಯನ್ನು ಪಾನಮಾಡಿ ಮುದಿಸಿದನು. ಅಂದರೆ ಗೋಮಂತಪರ್ವತದ ಶಿಖರದಲ್ಲಿರುವ ಕದಂಬವೃಕ್ಷದ ಕೊಟರೆಯಿಂದ ಶ್ರವಿಸಿದ ಅತ್ಯಂತ ಮಧುರಪೇಯವನ್ನು (ವಾರುಣಿಯನ್ನು) ಪಾನಮಾಡಿದನೆಂದು ಭಾವ.

ಹೀಗೆ ಶ್ರೀಕೃಷ್ಣ ಬಲರಾಮರು ಗೋಮಂತಪರ್ವತದಲ್ಲಿ ಸ್ವೇಚ್ಛೆಯಾಗಿ ವಿಹರಿಸುತ್ತಿರುವಾಗ ಜರಾಸಂಧನು ತನ್ನ ಅಧೀನರಾದ ರಾಜರೊಡಗೂಡಿ ಬಂದು ಗೋಮಂತಪರ್ವತವನ್ನು ಸುತ್ತುಗಟ್ಟಿ ಶ್ರೀಕೃಷ್ಣ-ರಾಮರನ್ನು ನಾಶಪಡಿಸಬೇಕೆಂಬ ದುರಭಿಸಂಧಿಯಿಂದ ಪರ್ವತದ ಸುತ್ತ ಹುಲುಸಾಗಿ ಬೆಳೆದಿದ್ದ ಒಣಹುಲ್ಲು-ಮರಗಳಿಗೆ ಬೆಂಕಿ ಹಚ್ಚಿಸಿದನು. ಆ ಬೆಂಕಿಯು ಭಯಂಕರವಾಗಿ ಆ ಪರ್ವತ ಭಾಗವನ್ನೆಲ್ಲಾ ಆಕ್ರಮಿಸಿ ಧಗಧಗನೆ ಉರಿಯಹತ್ತಿತು. ದಹಿಸುತ್ತಿರುವ ಅಗ್ನಿಯನ್ನು ಅಥವಾ ಬೆಂಕಿ ಹಚ್ಚಿದ ಜರಾಸಂಧನನ್ನು ಬಲಾಢ್ಯರೂ ದೇವತೋತ್ತಮರೂ ಆದ ಕೃಷ್ಣ-ಬಲರಾಮರು ಕಂಡು ಅಲ್ಲಿಂದ ಓಡಿದರು. ಓಡುತ್ತಿರುವ ಶ್ರೀಕೃಷ್ಣ-ಬಲರಾಮ ಪಾದನಿಷ್ಪೀಡನದಿಂದ ತತ್ತರಿಸಿ ಆ ಪರ್ವತವು ಹನ್ನೊಂದು ಯೋಜನಪರ್ಯಂತವಾಗಿ ಭೂಮಿಯಲ್ಲಿ ಕುಸಿದು ಹೋಯಿತು. ಹೀಗೆ ಶ್ರೀಕೃಷ್ಣರಾಮರ ಪಾದಾಘಾತದಿಂದ ಪೀಡಿತವಾದ ಪರ್ವತದಿಂದ ಮೇಲಕ್ಕೆಗರಿದ ಪ್ರಚಂಡ ಜಲಧಾರೆಯು ಸಮಸ್ತ ಪರ್ವಭಾಗದಲ್ಲಿ ವ್ಯಾಪಿಸಿ ಎಲ್ಲೆಡೆ ಉರಿಯುತ್ತಿದ್ದ ಬೆಂಕಿಯನ್ನು ಶಮನ-ಗೊಳಿಸಿತು. ದೇವಶ್ರೇಷ್ಠ ಶ್ರೀಕೃಷ್ಣಬಲರಾಮರು ತಮ್ಮ ದಿವ್ಯಾಸ್ತ್ರಗಳಿಂದೊಡಗೂಡಿ ಆ ರಾಜರ ಗುಂಪಿನಲ್ಲಿ ನುಗ್ಗಿ ನೃಪ ಸಮೂಹವನ್ನು ಮಂಥನಮಾಡಿದರು. ಆಗ ಅಲ್ಲಿದ್ದ ಹಂಸ, ಡಿಭಿಕ, ಕೀಚಕನಿಂದೊಡಗೂಡಿದ ಏಕಲವ್ಯ, ಶಿಶುಪಾಲ, ಪೌಂಡ್ರಕ ಮತ್ತು ಭೌಮಪುತ್ರನಾದ ಭಗದತ್ತ, ದಂತವಕ್ರ, ರುಗ್ಮಿ ಹಾಗೂ ಸೌಭದೇಶಾಧಿಪತಿಯಾದ ಸಾಲ್ವ, ಮೈಂದ ಮತ್ತು ಅವನ ಸಹೋದರನಾದ ವಿವಿದ ಇವರಲ್ಲದೆ ಜರಾಸಂಧನೊಡನೆ ಬಂದಿದ್ದ ಇನ್ನಿತರ ರಾಜರುಗಳು ಕ್ರೋಧದಿಂದ ಶ್ರೀಕೃಷ್ಣನನ್ನು ಸುತ್ತುಗಟ್ಟಿ ಶಸ್ತ್ರ, ಅಸ್ತ್ರ, ಗಿಡ, ಮರ, ಕಲ್ಲುಗಳಿಂದ ತಾಡನ ಮಾಡಿದರು.

ಯದ್ಯಪಿ ಭಗದತ್ತ, ಮೈಂದ, ವಿವಿದ ಮುಂತಾದವರು ಶ್ರೀಕೃಷ್ಣನ ಭಕ್ತರು. ಆದರೂ ಅವರಲ್ಲಿ ಅಸುರಾವೇಶ-ವಿರುವುದರಿಂದ ಅವರು ಅಸುರರೆಂದೇ ಪರಿಗಣಿಸಬೇಕು. ಇವರಂತೆ ಸೋಮದತ್ತ, ಅವನ ಮಗನಾದ ಭೂರಿಶ್ರವಸ್ಸು, ವಿರಾಟರಾಜ, ಪಾಂಚಾಲ ರಾಜ್ಯಾಧಿಪತಿಯಾದ ದ್ರುಪದ ಇವರೆಲ್ಲರೂ ಮತ್ತು ಜರಾಸಂಧನ ಕಾರಾಗೃಹದಲ್ಲಿ ಹಿಂದೆ ಬಂಧಿತರಾಗಿದ್ದು ಈಗ ಅವನೊಡನೆ ಬಂದಿರುವ ಶಲ್ಯ, ಬಾಹ್ಲೀಕ ಮೊದಲಾದ ರಾಜರೆಲ್ಲರೂ ಶ್ರೀಕೃಷ್ಣನ ಭಕ್ತರೇ. ಆದರೂ ಅವರು ಜರಾಸಂಧನ ಭಯದಿಂದ ಶ್ರೀಕೃಷ್ಣನ ಮೇಲೆ ಶಸ್ತ್ರಾಸ್ತ್ರ, ವೃಕ್ಷ, ಶಿಲಾದಿಗಳನ್ನು ಸುರಿಸಿದರು.

ಆಗ ಶ್ರೀಕೃಷ್ಣನು ಅವರನ್ನು ಸಾರಥಿ, ಕುದುರೆ, ಧ್ವಜಗಳು, ಶಸ್ತ್ರ, ಕವಚ ವಿಹೀನರನ್ನಾಗಿ ಮಾಡಿ ರಕ್ತಕಾರುವಂತೆ, ದುಃಖಿತರಾಗುವಂತೆ, ಸಿಂಹವು ವನ್ಯಮೃಗಗಳನ್ನು ಓಡಿಸುವಂತೆ ತನ್ನ ಶರವರ್ಷದಿಂದ ಅವರನ್ನೆಲ್ಲಾ ಪಲಾಯನ-ಗೊಳಿಸಿದನು.

ಹೀಗೆ ಶ್ರೀಕೃಷ್ಣನು ಜರಾಸಂಧನ ಇಪ್ಪತ್ತೂರು ಅಕ್ಷೋಹಿಣೀ ಸೈನ್ಯವನ್ನು ನಾಶಪಡಿಸಿದನು. ರುಕ್ಮಿಣಿಯ ಮೇಲಿನ ಪ್ರೇಮದಿಂದ ಅವಳ ತಮ್ಮನಾದ ರುಗ್ಮಿಯನ್ನು ಮಾತ್ರ ಖಿತಿಗೊಳಿಸದೆ ಅವನ ಶಸ್ತ್ರಾಸ್ತ್ರಗಳನ್ನು ಛೇದಿಸಿ ಓಡಿಸಿದನು. ಇತ್ತ ಜರಾಸಂಧನು ಬಲರಾಮನೊಡನೆ ಬಹುಕಾಲ ಘೋರವಾಗಿ ಯುದ್ಧಮಾಡುತ್ತಿರುವಾಗ ಬಲರಾಮನ ಮುಸಲಾಯುಧದ

ತಾಡನದಿಂದ ಚೂರ್ಣೀಕೃತನಾಗಿ ಧರೆಗೊರಗಿ ಮೂರ್ಛಿತನಾದನು. ಸ್ವಲ್ಪಕಾಲವಾದ ಮೇಲೆ ಮೂರ್ಛೆ ತಿಳಿದೆದ್ದ ಜರಾಸಂಧನು ಕೋಪದಿಂದ ಬಲರಾಮನ ವಕ್ಷಃಸ್ಥಳಕ್ಕೆ ಗದೆಯಿಂದ ಹೊಡೆದನು. ಮಗಧದೇಶಾಧಿಪತಿಯ ಗದಾಪ್ರಹಾರದಿಂದ ಖತಿಗೊಂಡ ಬಲರಾಮನು ಕ್ಷಣಕಾಲ ಮೂರ್ಛೆ ಹೋದನು. ಮಹಾಬಲವಂತನಾದ ಬಲರಾಮನು ಹೀಗೆ ಬೀಳಲು ಕಾರಣವನ್ನು ನಿರೂಪಿಸುತ್ತಾರೆ. ಜರಾಸಂಧನಿಗೆ ಬ್ರಹ್ಮದೇವರು 'ಯಾರೂ ನಿನ್ನನ್ನು ಜಯಿಸದಿರಲಿ' ಎಂದು ಅಜೇಯತ್ವ ವರವನ್ನು ಕೊಟ್ಟಿದ್ದರು. ಆದ್ದರಿಂದ ಜರಾಸಂಧನನ್ನು ಜಯಿಸಲಾಗದೆ ಹೋಯಿತು. ಹಾಗಾದರೆ ಹಿಂದೆ ಮಥುರಾಪಟ್ಟಣದಲ್ಲಿ ಸಂಭವಿಸಿದ ಮೊದಲ ಯುದ್ಧದಲ್ಲಿ ಜರಾಸಂಧನನ್ನು ಹೇಗೆ ಜಯಿಸಿ ಹಿಡಿದನು? ಎಂದರೆ ಆಗ ಜರಾಸಂಧನನ್ನು ಬಲರಾಮನನ್ನು ಶುಕ್ಲಕೇಶರೂಪಿಯಾದ ಶ್ರೀವಿಷ್ಣುವೇ ಜಯಿಸಿದನು ಎಂದು ತಿಳಿಯಬೇಕು.

ಬಲಭದ್ರನು ಮೂರ್ಛಿತನಾಗಿ ಬಿದ್ದುದನ್ನು ಕಂಡ ಶ್ರೀಕೃಷ್ಣನು ಗದಾಧಾರಿಯಾಗಿ ಜರಾಸಂಧನತ್ತ ಧಾವಿಸಿ ಅವನ ಕಂಠ-ವಕ್ಷಃಸ್ಥಳಗಳ ಮಧ್ಯಭಾಗದಲ್ಲಿ ಗದೆಯಿಂದ ಜೋರಾಗಿ ಹೊಡೆದನು. ಕೃಷ್ಣನ ಗದಾಘಾತದಿಂದ ಜರಾಸಂಧನು ರಕ್ತಸಿಕ್ತಾಂಗನಾಗಿ ಪ್ರಜ್ಞೆತಪ್ಪಿ ಧರಾಶಾಯಿಯಾದನು. ಸ್ವಲ್ಪ ವೇಳೆಯಾದ ಮೇಲೆ ಬಲರಾಮನು ಮೂರ್ಛೆ ತಿಳಿದು ಮೇಲೆದ್ದನು. ಅದೇ ಸಮಯದಲ್ಲಿ ಜರಾಸಂಧನೂ ಪ್ರಜ್ಞೆ ತಿಳಿದೆದ್ದನು. ಭುಜಬಲಪರಾಕ್ರಮಶಾಲಿಯಾದ ಬಲರಾಮನು ಕೋಪದಿಂದ ಜರಾಸಂಧನ ತಲೆಗೂದಲನ್ನು ಹಿಡಿದು ನೆಲಕ್ಕೆ ಕೆಡಹಿ ಅವನನ್ನು ಸಂಹರಿಸಲು ತನ್ನ ದಿವ್ಯ ಮುಸಲಾಯುಧವನ್ನು ಮೇಲೆತ್ತಿದನು. ಆಗ ವಾಯುದೇವನು (ಆಕಾಶವಾಣಿ) "ಎಲೈ ಬಲರಾಮ! ನೀನು ಈ ಜರಾಸಂಧನನ್ನು ಸಂಹರಿಸಲು ಶಕ್ಯವಿಲ್ಲ, ಅವನನ್ನು ಸಂಹರಿಸಲೆತ್ನಿಸ ಬೇಡ. ನಿನ್ನ ಬಾಹುಬಲವನ್ನು ವ್ಯರ್ಥವಾಗಿ ಪ್ರಯೋಗಿಸಬೇಡ. ನಿನ್ನ ಅಮೋಘವಾದ ಬಲದಂತೆಯೇ ನಿನ್ನ ಶತ್ರುಸಂಹಾರಕವಾದ ಮುಸಲಾಯುಧವೂ ಅಮೋಘವಾದದ್ದು. ಆದ್ದರಿಂದ ಅದನ್ನು ವ್ಯರ್ಥಮಾಡಬೇಡ. ಈ ಜರಾಸಂಧನನ್ನು ಸಂಹರಿಸುವವನು ನಿನಗಿಂತ ಬಲಾಢ್ಯನಾದ ಮತ್ತೊಬ್ಬನಿದ್ದಾನೆ" ಎಂದು ಅಪ್ಪಣೆ ಮಾಡಿದನು. ಆಕಾಶವಾಣಿಯನ್ನು ಕೇಳಿದ ಬಲರಾಮನು ಜರಾಸಂಧನನ್ನು ಬಿಟ್ಟು ತೆರಳಿದನು. ಆಗ ಕೃಷ್ಣನು ಜರಾಸಂಧನನ್ನು ತನ್ನ ಗದೆಯಿಂದ ಪ್ರಹಾರ ಮಾಡಿದನು. ಅಂದರೆ ಜರಾಸಂಧನು ಮೃತನಾಗದಂತೆ ಮೆಲ್ಲನೆ ಗದೆಯಿಂದ ಹೊಡೆದನು. ಕೃಷ್ಣನ ಗದಾಪ್ರಹಾರದಿಂದ ಚ್ಯುತಸಮಸ್ತಗಾತ್ರನಾದ ಜರಾಸಂಧನು ಪ್ರಜ್ಞೆ ತಪ್ಪಿಬಿದ್ದನು. ಬಹುಕಾಲವಾದ ಮೇಲೆ ತಿಳಿವು ತಿಳಿದೆದ್ದು ಭಯ ಮತ್ತು ನಾಚಿಕೆಯಿಂದ ಕೂಡಿ ಮೆತ್ತಗಾಗಿ ಓಡಹೋದನು. ಕೃಷ್ಣನು ಜರಾಸಂಧನನ್ನು "ಹೂಂ, ಓಡು, ಜೀವಸಹಿತ ಬಿಟ್ಟಿದ್ದೇನೆ. ಬದುಕಿಕೋ" ಎಂದು ಹೇಳಲು ಜೀವದುಂದುಳಿದ ಇತರ ರಾಜರೊಡನೆ ಜರಾಸಂಧನು ಯುದ್ಧಭೂಮಿಯಿಂದ ಮರಳಿದನು. ಇದಾದ ಮೇಲೆ ಮತ್ತೆ ಮತ್ತೆ ಅನೇಕ ರಾಜರಿಂದೊಡಗೂಡಿ ಜರಾಸಂಧನು ಶ್ರೀಕೃಷ್ಣನ ಮೇಲೆ ಅನೇಕಾವರ್ತಿ ಯುದ್ಧಮಾಡಿ ಪರಾಜಿತನಾದನು. ಶ್ರೀಕೃಷ್ಣನು ಜರಾಸಂಧನನ್ನು ಜಯಿಸಿ ಬಲರಾಮ ಸಹಕೃತನಾಗಿ ದಮಘೋಷನೊಡನೆ ಪ್ರಯಾಣ ಬೆಳೆಸಿದನು.

ದಮಘೋಷನಾರು? ಕೃಷ್ಣನು ಅವನೊಡನೆ ಎಲ್ಲಿಗೆ ಪ್ರಯಾಣ ಬೆಳೆಸಿದನೆಂಬುದನ್ನು ನಿರ್ಣಯಾಚಾರ್ಯರು ನಿರೂಪಿಸುತ್ತಾರೆ.

ಶ್ರೀಕೃಷ್ಣನ ಸೋದರತ್ತೆಯರ ಪೈಕಿ (ವಸುದೇವನ ಸೋದರಿಯರಲ್ಲಿ) ಶಿಶುಪಾಲನ ತಾಯಿಯೂ ಒಬ್ಬಳು. ಅವಳ ಪತಿಯೇ ದಮಘೋಷನು. ಈ ದಮಘೋಷನು ಕೃಷ್ಣನ ಸೋದರತ್ತೆಯ ಪತಿಯು. ಅವನು ಮೊದಲು ಯುದ್ಧದಲ್ಲಿ ಜರಾಸಂಧನೊಡನೆ ಬಂದು ಯುದ್ಧಮಾಡಿ ಶ್ರೀಕೃಷ್ಣನಿಂದ ಪರಾಜಿತನಾಗಿದ್ದರೂ "ಕೃಷ್ಣ, ಶ್ರೀ ಮಹಾಲಕ್ಷ್ಮಿಯ ದರ್ಶನಕ್ಕೆ ಕರವೀರಪುರಕ್ಕೆ ಹೋಗೋಣ" ಬಾ ಎಂದು ಬಂಧುಸ್ನೇಹದಿಂದ ಕೃಷ್ಣನನ್ನು ಕರೆದನು. ಆದ್ದರಿಂದ ಸೋದರತ್ತೆಯ ಗಂಡನಾದ ದಮಘೋಷನ ಮಾತನ್ನು ಮನ್ನಿಸಿ ಶ್ರೀಕೃಷ್ಣನು ಕರವೀರಪುರಕ್ಕೆ ತೆರಳಿದನು. ಶತ್ರುಪಕ್ಷೀಯನಾದ ದಮಘೋಷನೊಡನೆ

ಹೋಗಿದ್ದು ಯುಕ್ತವೇ ಎಂದರೆ – ದಮಘೋಷನು ಕಪಟವಿಲ್ಲದೆ, ಸ್ವಾಭಾವಿಕವಾಗಿಯೇ ಪ್ರೀತಿಯಿಂದ ಯುಕ್ತನಾಗಿದ್ದ-ರಿಂದಲೂ, ಅಥವಾ ಭಯಾಕ್ರಾಂತನಾಗಿ ಕದನದಲ್ಲಿ ಪರಾಜಿತನಾದ ದಮಘೋಷನು ಪ್ರೇಮದಿಂದ ಕರೆದಿದ್ದಾನೆಂದು ಅರಿತ ಶ್ರೀಕೃಷ್ಣನು ಅವನೊಡನೆ ಕರವೀರಪುರ (ಕೊಲ್ಲಾಪುರ)ಕ್ಕೆ ತೆರಳಿದನೆಂದು ತಿಳಿಯಬೇಕು.

ಪೂರ್ವದಲ್ಲಿ ಈ ದಮಘೋಷನು ಮೂಲರೂಪದಲ್ಲಿ 'ದನು' ಎಂಬ ಗಂಧರ್ವನು. ಆದ್ದರಿಂದ ಅವನ ಅವತಾರನಾದ ದಮಘೋಷನು ಶ್ರೀಕೃಷ್ಣನ ಭಕ್ತನಾದನು. ತ್ರಿಜಟೆಯ ಮಗನಾದ 'ದನು' ಎಂಬ ರಾಕ್ಷಸನು ಬೇರೆ, ಪ್ರಸಕ್ತ 'ದನು' ಬೇರೆ ಎಂದು ಸೂಚಿಸಲು 'ಗಂಧರ್ವ' ಎಂದು ಹೇಳಿದ್ದಾರೆ. ಆ 'ದನು' ಗಂಧರ್ವನೇ ದಮಘೋಷನಾದ್ದರಿಂದ ಅವನು ಶ್ರೀಕೃಷ್ಣನಲ್ಲಿ ಭಕ್ತಿಯುಳ್ಳವನಾಗಿದ್ದನು. ಶ್ರೀಕೃಷ್ಣನು ಬಲರಾಮ, ದಮಘೋಷರೊಡನೆ ಕೊಲ್ಲಾಪುರಕ್ಕೆ ಬಂದ ವಿಚಾರವನ್ನು ತಿಳಿದು ವಸುದೇವನ ಮಗನಾದ, ಪಾಪಿಯಾದ, ಸೃಗಾಲವಾಸುದೇವನೆಂದು ಪ್ರಸಿದ್ಧನಾದ ಶ್ರೀಕೃಷ್ಣಶತ್ರುವು ಸಿಟ್ಟಿನಿಂದ ಕೃಷ್ಣನೊಡನೆ ಯುದ್ಧಮಾಡಲು ಧಾವಿಸಿ ಬಂದನು.

ಪ್ರಖರಕಿರಣನಾದ ಸೂರ್ಯನು ಅನುಗ್ರಹಿಸಿದ ಅವಧ್ಯತ್ವವರವುಳ್ಳ ಸೃಗಾಲವಾಸುದೇವನು ಸೂರ್ಯದೇವನಿತ್ತ ದಿವ್ಯರಥದಲ್ಲಿ ಮಂಡಿಸಿ ಯುದ್ಧಕ್ಕಾಗಿ ಶ್ರೀಕೃಷ್ಣನಿದ್ದಲ್ಲಿಗೆ ಬಂದು ವಿವಿಧಾಸ್ತ್ರಗಳನ್ನು ಕೃಷ್ಣನ ಮೇಲೆ ವರ್ಷಿಸಿದನು. ಆಗ ಶ್ರೀಕೃಷ್ಣಪರಮಾತ್ಮನು ಶೀಘ್ರವಾಗಿ ಸೃಗಾಲವಾಸುದೇವನ ಶಿರಸ್ಸನ್ನು ತನ್ನ ಸುದರ್ಶನಚಕ್ರದಿಂದ ತರಿದುಹಾಕಿದನು ಮತ್ತು ಸೃಗಾಲವಾಸುದೇವನ ಶರೀರವನ್ನು ಎರಡು ಭಾಗವಾಗಿ ಸೀಳಿದನು. ನಂತರ ಮಣಿಭದ್ರನೆಂಬ ದೇವತೆಯ ಅವತಾರನಾದ, ಸೃಗಾಲವಾಸುದೇವನ ಪುತ್ರನಾದ, ತನ್ನ ಭಕ್ತನಾದ ಶಕ್ರದೇವನಿಗೆ ಆ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿ ಅವನಿಂದ ಬೀಳ್ಕೊಂಡು ಅಣ್ಣನಾದ ಬಲರಾಮ ಸಹಿತನಾಗಿ ತನ್ನ ಮಥುರಾಪಟ್ಟಣಕ್ಕೆ ದಯಮಾಡಿಸಿದನು.

ಸಕಲ ವಿಚಾರದಲ್ಲಿ ಸಂಪೂರ್ಣಸ್ವರೂಪಶಕ್ತಿಯುಳ್ಳ ಶ್ರೀಕೃಷ್ಣಪರಮಾತ್ಮನು ತನ್ನ ಸೇನೆಯನ್ನು ರಕ್ಷಿಸುವುದಕ್ಕೋಸ್ಕರವಾಗಿ ಬಲಿಷ್ಠನಾದವನು ಶತ್ರುವು ಯುದ್ಧಕ್ಕೆ ಪ್ರಾಪ್ತನಾದಾಗ ತನ್ನ ಸೇನೆಯನ್ನು ಬಿಟ್ಟು ದೂರಹೋಗಿ ಯುದ್ಧ ಮಾಡಬೇಕೆಂಬ, ಅಂದರೆ ಸೈನ್ಯ ಬಿಟ್ಟು ದೂರ ಹೋದರೆ ಶತ್ರುವೂ ತನ್ನ ಸೈನ್ಯದೊಡನೆ ಅಂಥವನನ್ನು ಹಿಂಬಾಲಿಸುವನು. ಆಗ ತನ್ನ ಸೈನ್ಯದ ರಕ್ಷಣೆಯಾಗುವುದು ಎಂಬ ನೀತಿಯನ್ನು ಪ್ರದರ್ಶಿಸಲು ಪಟ್ಟಣ ಮತ್ತು ಸೇನೆಯನ್ನು ತ್ಯಜಿಸಿ ದೂರಹೋಗಿ ಅಲ್ಲಿ ಶತ್ರುವಿನ ಗರ್ವದಮನಮಾಡಿ ವಿಜಯಶಾಲಿಯಾಗಿ ಮತ್ತೆ ಅಗ್ರಜನಾದ ಬಲಭದ್ರನೊಡನೆ ಮಥುರಾಪಟ್ಟಣಕ್ಕೆ ಬಂದು ಸರ್ವರಿಂದ ಚೆನ್ನಾಗಿ ಪೂಜಿತನಾಗಿ ಮುದದಿಂದ ವಾಸಮಾಡಿದನು.

ಇಂತು ಶ್ರೀಮದಾನಂದತೀರ್ಥಭಗವತ್ಪಾದರು ವಿರಚಿಸಿದ ಮಹಾಭಾರತ ತಾತ್ಪರ್ಯನಿರ್ಣಯಕ್ಕೆ ಶ್ರೀರಾಘ-ವೇಂದ್ರತೀರ್ಥ ಶ್ರೀಪಾದಂಗಳವರು ರಚಿಸಿದ ತಾತ್ಪರ್ಯನಿರ್ಣಯ ಭಾವಸಂಗ್ರಹದ ಅನುವಾದದಲ್ಲಿ ಹದಿನಾರನೆಯ ಅಧ್ಯಾಯದ ಕಥಾಸಂಗ್ರಹವು ಮುಗಿದುದು.

*ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದ ಹದಿನಾರನೆಯ ಅಧ್ಯಾಯದ ಕಥಾಸಂಗ್ರಹವು ಮುಗಿದುದು.*

ಶ್ರೀಕೃಷ್ಣಾರ್ಪಣಮಸ್ತು

★ ★ ★

## ಸಪ್ತದಶಾಧ್ಯಾಯಭಾವಸಂಗ್ರಹ

**ಭಗ್ನಾಶಾನ್ ನೃಪತೀನರೀನ್ ವ್ಯಧಿತ ಯಃ ಸ್ವರ್ಗಾಧಿಪಾಗ್ರ್ಯಾಸನೇ**
**ಲಗ್ನೋ ಭೀಷ್ಮಕಸತ್ಕೃತೋಽಥ ಯವನಂ ಜಘ್ನೇ ಸತೀಮಾತ್ಮನಃ ।**
**ನಿಘ್ನಾಂ ಯೋಽಕೃತ ರುಕ್ಮಿಣೀಂ ಸಮಜಯದ್ದುರ್ಗರ್ವರುಕ್ಮಾದಿಕಾನ್**
**ನಿಘ್ನನ್ ಸತ್ರಜಿದಾತ್ಮಜಾಪತಿರಸೌ ಮೇಽಘಂ ಭವೇತ್ ಸರ್ವದಾ ॥ 17 ॥**

***ಅನ್ವಯಾರ್ಥ:*** - **ಯಃ** = ಯಾವ ಕೃಷ್ಣನು, **ಅರೀನ್** = ಶತ್ರುಗಳಾದ, **ನೃಪತೀನ್** = ಜರಾಸಂಧಾದಿರಾಜರುಗಳನ್ನು, **ಭಗ್ನಾಶಾನ್** = ಭಗ್ನವಾದ ಆಶೆಯುಳ್ಳವರನ್ನಾಗಿ (ನಿರಾಶರನ್ನಾಗಿ), **ವ್ಯಧಿತ** = ಮಾಡಿದನೋ, **ಸ್ವರ್ಗಾಧಿಪಾಗ್ರ್ಯಾಸನೇ** - **ಸ್ವರ್ಗಾಧಿಪ** = ನಾಕಿನಾಯಕನಾದ ಇಂದ್ರನ, **ಅಗ್ರ್ಯಾಸನೇ** = ಸಿಂಹಾಸನದಲ್ಲಿ, **ಲಗ್ನಃ** = ಕುಳಿತುಕೊಂಡನೋ, **ಭೀಷ್ಮಕಸತ್ಕೃತಃ** = ಭೀಷ್ಮಕ ರಾಜನಿಂದ ಪೂಜಿತನಾದನೋ, **ಅಥ** = ಅನಂತರ, **ಯವನಂ** = ಕಾಲಯವನನ್ನು, **ಜಘ್ನೇ** = ಸಂಹಾರಮಾಡಿದನೋ, **ಯಃ** = ಯಾವ ಶ್ರೀಕೃಷ್ಣನು, **ಆತ್ಮನಃ** = ತನಗೆ, **ನಿಘ್ನಾಂ** = ಸ್ವಾಧೀನಳಾದ, **ರುಕ್ಮಿಣೀಂ** = ರುಕ್ಮಿಣೀದೇವಿಯನ್ನು, **ಸತೀಂ** = ಪತ್ನಿಯನ್ನಾಗಿ, **ಅಕೃತ** = ಮಾಡಿದನೋ (ನಿಜಸತಿಯನ್ನಾಗಿ ಮಾಡಿಕೊಂಡನೋ), **ದುರ್ಗರ್ವರುಕ್ಮಾದಿಕಾನ್** - **ದುರ್ಗರ್ವ** = ದುರಹಂಕಾರಿಗಳಾದ, **ರುಕ್ಮಾದಿಕಾನ್** = ರುಕ್ಮಿಣಿಯ ಸಹೋದರನಾದ ರುಕ್ಮಿ ಮೊದಲಾದವರನ್ನು, **ಸಮಜಯತ್** = ಜಯಿಸಿದನೋ, **ಅಸೌ** = ಅಂತಹ, **ಸತ್ರಜಿದಾತ್ಮಜಾಪತಿಃ** = ಸತ್ರಾಜಿದ್ರಾಜನ ಪುತ್ರಿಯಾದ ಸತ್ಯಭಾಮಾದೇವಿಯ ಸ್ವಾಮಿ(ಗಂಡ)ಯಾದ ಶ್ರೀಕೃಷ್ಣನು, **ಸರ್ವದಾ** = ಯಾವಾಗಲೂ, **ಮೇ** = ನನ್ನ, **ಅಘಂ** = ಪಾಪವನ್ನು (**ವಿಘ್ನಂ** = ವಿಘ್ನವನ್ನು) **ನಿಘ್ನನ್** = ಪರಿಹರಿಸುವವನು, **ಭವೇತ್** = ಆಗಲಿ.

***ತಾತ್ಪರ್ಯ*** :- ಶ್ರೀಕೃಷ್ಣಪರಮಾತ್ಮನು ತನ್ನ ಶತ್ರುಗಳಾದ ಜರಾಸಂಧನೇ ಮೊದಲಾದ ರಾಜರುಗಳನ್ನು ಭಗ್ನವಾದ ಆಶೆಯುಳ್ಳವರನ್ನಾಗಿ ಅಂದರೆ ಯುದ್ಧದಲ್ಲಿ ತನ್ನನ್ನು ಜಯಿಸಲಿಚ್ಛಿಸಿ ಬಂದ ಅವರನ್ನು ತಾನೇ ಸೋಲಿಸಿದ್ದರಿಂದ ಅವರು ನಿರಾಶರಾಗುವಂತೆ ಮಾಡಿದನು. ಸ್ವರ್ಗಲೋಕಾಧಿಪತಿಯಾದ ದೇವೇಂದ್ರನ ಶ್ರೇಷ್ಠವಾದ ಸಿಂಹಾಸನದಲ್ಲಿ ಶ್ರೀಕೃಷ್ಣನು ಮಂಡಿಸಿದನು. ಭೀಷ್ಮಕ ಮಹಾರಾಜನಿಂದ ಪೂಜಿತನಾದನು. ಆ ತರುವಾಯ ಶ್ರೀಕೃಷ್ಣನು ಯುದ್ಧದಲ್ಲಿ ಕಾಲಯವನನನ್ನು ಸಂಹಾರಮಾಡಿದನು. ಶ್ರೀ ರುಕ್ಮಿಣೀದೇವಿಯು ಮೊದಲೇ "ನಾನು ನಿನಗೆ ಮನಸೋತಿದ್ದೇನೆ ನೀನು ನನ್ನನ್ನು ಪತ್ನಿಯಾಗಿ ಸ್ವೀಕರಿಸಿ ಅನುಗ್ರಹಿಸು" ಎಂದು ಪತ್ರಬರೆದು ಬ್ರಾಹ್ಮಣೋತ್ತಮನ ಮೂಲಕ ಕಳಿಸಿ ಪ್ರಾರ್ಥಿಸಿದ್ದರಿಂದ ತನಗೆ ಸ್ವಾಧೀನ-ಳಾದ ರುಕ್ಮಿಣೀದೇವಿಯ ಮನೋರಥವನ್ನು ಪೂರ್ಣ ಮಾಡುವುದಕ್ಕಾಗಿ ಪ್ರಯಾಣಬೆಳೆಸಿ ರುಕ್ಮಿಣಿಯನ್ನು ರಥದಲ್ಲಿ ಕೂಡಿಸಿಕೊಂಡು ಹೊರಟನು. ಆಗ ಅದರಿಂದ ಕೋಪೋದ್ರೇಕಗೊಂಡು ಶ್ರೀಕೃಷ್ಣನನ್ನು ಸಂಹರಿಸುತ್ತೇವೆಂಬ ದುರಹಂ-ಕಾರದಿಂದ ಯುದ್ಧಕ್ಕೆ ಬಂದ ರುಕ್ಮಿಣಿಯ ಸಹೋದರನಾದ ರುಕ್ಮಿ ಮೊದಲಾದವರನ್ನು ಯುದ್ಧದಲ್ಲಿ ಜಯಿಸಿದನು. ಇಂತು ಮಹಾಪರಾಕ್ರಮಸಂಪನ್ನನಾದ, ಸತ್ರಾಜಿತ್ ರಾಜನ ಕುವರಿಯಾದ ಸತ್ಯಭಾಮಾದೇವಿಯನ್ನು ವಿವಾಹ ಮಾಡಿಕೊಂಡು ಅವಳಿಗೆ ಪತಿಯಾದ, ಶ್ರೀಕೃಷ್ಣನು ಸರ್ವದಾ ನನ್ನ ಪಾಪವನ್ನು (ವಿಘ್ನವನ್ನು) ಪರಿಹರಿಸುವವನಾಗಲಿ ಎಂದು ಭಾವ.

## ಸಪ್ತದಶಮೋಽಧ್ಯಾಯ ಕಥಾಸಂಗ್ರಹ

ಶ್ರೀಮದಾಚಾರ್ಯರು ಶ್ರೀಕೃಷ್ಣಪರಮಾತ್ಮನು ಮಥುರಾನಗರಕ್ಕೆ ದಯಮಾಡಿಸಿದಾಗ ಅಲ್ಲಿ ಜರುಗಿದ ಕಥಾನಕ-ವನ್ನು "ಮಹಾಭಾರತ ತಾತ್ಪರ್ಯನಿರ್ಣಯ"ದಲ್ಲಿ ನಿರೂಪಿಸಿರುವುದನ್ನು ಸುಜನರಿಗೆ ಸಂತೋಷವಾಗಲೆಂದು ಇಲ್ಲಿ ಸಂಗ್ರಹರೂಪವಾಗಿ ವಿವರಿಸಲಾಗಿದೆ.

ಚೇದಿರಾಜನಾದ ದಮಘೋಷನು ತನ್ನ ಊರಿಗೆ ಪ್ರಯಾಣ ಬೆಳೆಸಿದ ಮೇಲೆ, ಸಾಕ್ಷಾತ್ ರಮಾಸ್ವರೂಪಿಣಿಯಾದ ರುಕ್ಮಿಣಿಯೆಂಬ ಹೆಸರಿನಿಂದ ಖ್ಯಾತಳಾದ ರಾಜನಂದಿನಿಯ ಸ್ವಯಂವರ ವಿಚಾರವನ್ನೂ, ಲಕ್ಷ್ಮೀದೇವಿಯ ಅವತಾರಳಾದ ರುಕ್ಮಿಣಿಯ ಅಣ್ಣನಾದ ರುಗ್ಮಿ ಎಂಬುವವನು ಸರ್ವಸಂಪದಭಿಮಾನಿಯಾದ ಶ್ರೀಲಕ್ಷ್ಮೀಪತಿಯಾದ ಶ್ರೀಕೃಷ್ಣ ಪರಮಾತ್ಮನನ್ನು ಸಂಪದ್ವಿಹೀನನೆಂದು ದ್ವೇಷಿಸಿ, ಹರಿಪ್ರಿಯಳಾದ ರುಕ್ಮಿಣಿಯನ್ನು ಶ್ರೀಕೃಷ್ಣನಿಗೆ ವಿವಾಹಮಾಡಿಕೊಡಬೇಕೆಂದು ಉದ್ಯುಕ್ತರಾದ ಭೀಷ್ಮಕಮಹಾರಾಜನೇ ಮೊದಲಾದ ಸದ್ಬಂಧುಗಳನ್ನು ವಿರೋಧಿಸಿ ಅದಕ್ಕೆ ತಡೆವೊಡ್ಡಿರುವನೆಂಬ ವಿಚಾರವನ್ನೂ ಶ್ರೀಕೃಷ್ಣನು ಚಾರರ ಮುಖಾಂತರವಾಗಿ ತಿಳಿದನು.

ಭಾಗವತದಲ್ಲಿ ಈ ವಿಚಾರವು ಹೀಗೆ ನಿರೂಪಿತವಾಗಿದೆ :- "ಬಂಧೂನಾಮಿಚ್ಛತಾಂ ದಾತುಂ ಕೃಷ್ಣಾಯ ಭಗಿನೀಂ ನೃಪ । ರುಗ್ಮೀ ನಿವಾರ್ಯ ಕೃಷ್ಣದ್ವಿಟ್ ಚೈದ್ಯಾಯ ಸಮಕಲ್ಪಯತ್ ॥" ಅಂದರೆ – ರಮಾವತಾರಳಾದ ತನ್ನ ತಂಗಿಯನ್ನು (ರುಕ್ಮಿಣಿಯನ್ನು) ಕೃಷ್ಣನಿಗೆ ವಿವಾಹಮಾಡಿಕೊಡಬೇಕೆಂದು ಇಚ್ಛಿಸಿದ ಬಂಧುಗಳ ಅಭಿಪ್ರಾಯವನ್ನು ನಿರಾಕರಿಸಿ ಕೃಷ್ಣನ ಶತ್ರುವಾದ ರುಗ್ಮಿಯು ರುಕ್ಮಿಣಿಯನ್ನು ಚೈದ್ಯಭೂಪಾಲನಾದ ಶಿಶುಪಾಲನಿಗೆ ಮದುವೆ ಮಾಡಿಕೊಡಲು ವ್ಯವಸ್ಥೆ ಮಾಡಿದರು.

ರುಗ್ಮಿಯು ಬಂಧುಬಾಂಧವರ ಮಾತನ್ನು ಒಪ್ಪದೆ ರುಕ್ಮಿಣಿಯ ಸ್ವಯಂವರವನ್ನು ಘೋಷಿಸಿದನು. ಅವನು ಭೇರೀತಾಡನಾದಿಗಳ ದ್ವಾರಾ ಸ್ವಯಂವರವನ್ನು ಘೋಷಿಸಿ ತನಗೆ ಬೇಕಾದ ರಾಜ-ಮಹಾರಾಜರನ್ನು ಸ್ವಯಂವರಕ್ಕೆ ಆಹ್ವಾನಿಸಿದನು. ಆಗ ಕ್ರೂರಪರಾಕ್ರಮಿಗಳಾದ ಸಾಲ್ವ, ಪೌಂಡ್ರ, ಚೇದಿದೇಶಾಧಿಪತಿಗಳಿಂದ ಯುಕ್ತರಾದ ಜರಾಸಂಧಾದಿಗಳು ಸ್ವಯಂವರದಲ್ಲಿ ಭಾಗವಹಿಸಲು ಕುಂಡಿನೀಪುರಕ್ಕೆ ಆಗಮಿಸಿದರು.

ಈ ವಿಚಾರವನ್ನರಿತು ಶ್ರೀಕೃಷ್ಣನು ಗರುಡನನ್ನು ಸ್ಮರಿಸಲು ಗರುಡನು ತಕ್ಷಣವೇ ಬಂದು ಪ್ರಭುವಿಗೆ ಅಭಿವಂದಿಸಿ ನಿಂತನು. ಕೃಷ್ಣನು ಗರುಡನ ಮೇಲೆ ಕುಳಿತು ಶೀಘ್ರವಾಗಿ ಕುಂಡಿನೀಪುರಕ್ಕೆ ಚಿತ್ತೈಸಿದನು. ಗರುಡನು ಬಲು ವೇಗವಾಗಿ ಬರುತ್ತಿರಲು ಮಹಾಬಲವಂತನಾದ ಅವನ ರೆಕ್ಕೆಗಳ ಚಲನರಭಸದಿಂದುಂಟಾದ ಗಾಳಿಗೆ ಸಿಲುಕಿ ಜರಾಸಂಧಾದಿ ಸಮಸ್ತ ರಾಜರು ನೆಲಕ್ಕುರುಳಿದರು. ಆಗ ಆ ರಾಜರುಗಳು "ಈ ಗರುಡನ ಬಲವೇ ಇಷ್ಟು ಮಹತ್ತರವಾಗಿರುವಾಗ ಇನ್ನು ಶ್ರೀಹರಿಯ ಬಲವು ಇನ್ನೆಷ್ಟಿರಬೇಕು?" ಎಂದು ಉದ್ಗಾಗ ತೆಗೆಯುತ್ತಿದ್ದರು. ಆಗ ಆ ರಾಜರುಗಳು "ನಾವೇನೋ ಈಗ ಸ್ವಯಂವರಕ್ಕೆ ಬಂದುಬಿಟ್ಟಿದ್ದೇವೆ. ನಾವೀಗ ಯಾವ ರೀತಿಯಿಂದ ಪ್ರವರ್ತಿಸಿದರೆ ನಮಗೆ ಸುಖ ದೊರಕೀತು?" ಮುಂತಾಗಿ ತಮ್ಮತಮ್ಮಲ್ಲಿ ವಿಚಾರ ಮಾಡಲಾರಂಭಿಸಿದರು.

ಆಗ ಜರೆಯ ಮಗನಾದ ಮಗಧಾಧಿಪತಿಯು "ಕ್ಷೀರಸಾಗರಮಂದಿರನಾದ ಈ ಕೃಷ್ಣನು ಜಯಶಾಲಿಯಾಗಿದ್ದಾನೆ. ಅವನು ಪಕ್ಷಿವಾಹನನಾಗಿರುವನು. ಕೃಷ್ಣನು ಸಮುದ್ರಮಂದಿರನಾಗಿರದಿದ್ದರೆ ಗರುಡವಾಹನನೂ ಆಗಲಾರ. ಈಗ ಗರುಡನನ್ನೇರಿ ಕೃಷ್ಣನು ಬರುತ್ತಿದ್ದಾನೆ. ಸಮಸ್ತಸೇನೆಯಿಂದೊಡಗೂಡಿದ ಭೂಪತಿಗಳಾದ ನಾವು ಈ ಒಬ್ಬನೇ ಒಬ್ಬನಾದ ಕೃಷ್ಣನಿಂದ ಅನೇಕ ಸಲ ಪರಾಜಿತರಾಗಿದ್ದೇವೆ. ಅನೇಕ ಬಗೆಯ ಸೈನ್ಯ, ಅನೇಕ ಭೂಪಾಲಕರಾದ ರಾಜರುಗಳಿಂದೊಡಗೂಡಿ ನಾವೆಲ್ಲ ಒಟ್ಟಾಗಿ ಯುದ್ಧಮಾಡಿದರೂ ಕೃಷ್ಣನನ್ನು ನಾವು ಒಮ್ಮೆಯೂ ಜಯಿಸಲಾಗಲಿಲ್ಲ! ಈ ಹಿಂದೆ ಮೊದಲನೆಯ ಯುದ್ಧಕಾಲದಲ್ಲಿ ಕೃಷ್ಣನ ಅಣ್ಣನಾದ ಬಲರಾಮನು ನನ್ನನ್ನು ಸಂಹರಿಸಲು ಉದ್ಯುಕ್ತನಾಗಿದ್ದುದು ನಿಮಗೆ ತಿಳಿದೇ ಇದೆ. ಆಗ ಅಶರೀರವಾಣಿಯಾದ್ದರಿಂದ ಬಲರಾಮನು ತನ್ನ ಹೊಡೆತಗಳಿಂದ ಅತ್ಯಂತ ಪೀಡಿತನಾಗಿದ್ದ ನನ್ನನ್ನು ಸಂಹರಿಸದೆ ಬಿಟ್ಟನು. ಆ ಯುದ್ಧದಲ್ಲಿ ಶ್ರೀಕೃಷ್ಣನ ಕೂದಲೂ ಕೊಂಕಲಿಲ್ಲ! ಕ್ಷತರಹಿತನಾದ ಕೃಷ್ಣನಿಂದ ನಾವು ಪದೇ ಪದೇ ತೃಣೀಕರಿಸಲ್ಪಟ್ಟೆವು. ನಮ್ಮೆಲ್ಲವನು ತೃಣ ಸಮಾನಮಾಡಿಬಿಟ್ಟನು. ಆದುದರಿಂದ ಈ ಕೃಷ್ಣನ ಬಲ-ಪರಾಕ್ರಮಗಳನ್ನು ಹೆಚ್ಚೇನು ಹೇಳಲಿ?

(ಶ್ರೀಕೃಷ್ಣನ ಬಲವು ಸರ್ವೋತ್ಕೃಷ್ಟವೆಂದು ಭಾವ). ಈಗ ಸ್ವಯಂವರಕ್ಕಾಗಿ ಬಂದಿರುವ ನಮಗೆ ದೊಡ್ಡ ಸಂಕಟವು ಬಂದೊದಗಿದೆ. ನಾವು ಯಾವ ರೀತಿ ಕಾರ್ಯಾಸಕ್ತರಾಗುವುದರಿಂದ ಸುಖ ದೊರಕೀತು?'' ಎಂದು ಹೇಳಿ ಕಾಂತಿಹೀನನಾಗಿ ಜರಾಸಂಧನು ತಲೆತಗ್ಗಿಸಿ ನಿಂತನು.

ಆಗ ಶಿಶುಪಾಲನು ತನ್ನ ಅಭಿಪ್ರಾಯವನ್ನು ಇಂತು ಅರುಹಿದನು: (ಈ ಶಿಶುಪಾಲನು ಹಿಂದೆ ವೈಕುಂಠದಲ್ಲಿ ಶ್ರೀ ಹರಿಯ ದ್ವಾರಪಾಲಕನಾದ ಜಯನಾಗಿದ್ದನು. ಆದುದರಿಂದಲೇ ಅಸುರಾವೇಶಯುಕ್ತನಾಗಿದ್ದರೂ ಈ ಶಿಶುಪಾಲನು ಈ ಜನ್ಮದಲ್ಲಿ ಒಮ್ಮೊಮ್ಮೆ ಶ್ರೀಕೃಷ್ಣನ ವಿಷಯದಲ್ಲಿ ಸಂತೋಷಭರಿತನಾಗುತ್ತಾನೆ.) ಅಂತೆಯೇ ದಂತವಕ್ತ್ರನಿಂದ ಸಹಿತನಾದ ಶಿಶುಪಾಲನು ಜರಾಸಂಧನಿಗೆ ಹೀಗೆ ಹೇಳಿದನು :- ''ಎಲೈ ಜರಾಸಂಧ ಚಕ್ರವರ್ತಿ! ನಾನು ಹೇಳುವುದನ್ನು ಆಲಿಸು - ಕೆಲ ಸಜ್ಜನರು ಶ್ರೀಹರಿಯು ಬ್ರಹ್ಮ-ರುದ್ರದೇವರುಗಳಿಗೂ ಪ್ರಭುವೆಂದು ಹೇಳುತ್ತಾರೆ. ಈ ಮಾತು ಸುಳ್ಳಾಗಲಾರದು. ನಾನು ಮತ್ತು ಈ ದಂತವಕ್ತ್ರನೂ ಶ್ರೀಕೃಷ್ಣನನ್ನು ದರ್ಶನಮಾಡಿದಾಗ ನಮಗೆ ಅವನಲ್ಲಿ ಒಮ್ಮೊಮ್ಮೆ ಉತ್ಕೃಷ್ಟ ಭಕ್ತಿಯುಂಟಾಗುವುದು ಅಥವಾ ದ್ವೇಷವುಂಟಾಗುತ್ತದೆ. ಹೀಗೆ ನಮಗೆ ಕೃಷ್ಣನಲ್ಲಿ ಭಕ್ತಿ-ದ್ವೇಷಗಳುಂಟಾಗಲು ಕಾರಣವೇನೋ ನಾವರಿಯೆವು. ಆದರೂ ಶ್ರೀಹರಿಯು ಸರ್ವೋತ್ತಮನೆನ್ನುವುದರಲ್ಲಿ ಸಂಶಯವಿಲ್ಲ. ಈ ಎಲ್ಲ ರಾಜರುಗಳೂ ನಾವು ಏನೂ ಮಾಡುವುದರಿಂದ ಸುಖವುಂಟಾದೀತೆಂದು ಚರ್ಚಿಸಿದರಷ್ಟೇ? ನನಗೆ ಹೀಗೆನಿಸುತ್ತದೆ - ನನ್ನ ಮಾತನ್ನು ಕೇಳು. ರಾಜನ್, ನಾವು ಶ್ರೀಕೃಷ್ಣನಿಗೆ ಶರಣು ಹೋಗೋಣ! ನಮ್ಮ ಸುಖ ಮತ್ತು ಕ್ಷೇಮಕ್ಕಾಗಿ ಶತ್ರುಭಾವವನ್ನು ತ್ಯಜಿಸಿ ಅವನಿಗೆ ಶರಣಾಗತರಾಗೋಣ. ಅದರಿಂದಲೇ ನಮಗೆ ಮಂಗಳವಾಗುವುದು. ಇಲ್ಲದಿದ್ದರೆ ನಮಗೆ ನಿಜವಾಗಿಯೂ ಸ್ವಲ್ಪವೂ ಶುಭವಾಗಲಾರದು.''

ಶಿಶುಪಾಲನ ಈ ಮಾತನ್ನು ಕೇಳಿ ಜರಾಸಂಧನು ಕೆಂಗಣ್ಣಿನಿಂದ ಅವನನ್ನು ಸುಟ್ಟುಬಿಡುವಂತೆ ನೋಡಿದನು. ಆಗ ಸಾಲ್ವಭೂಪತಿಯು ಕ್ರೋಧದಿಂದ ಪ್ರಜ್ವಲಿಸಿ ನಕ್ಕನು. ಮತ್ತು ಕೋಪೋದ್ರಿಕ್ತನಾದ ಜರಾಸಂಧನನ್ನು ನೋಡಿ, ಶಿಶುಪಾಲ-ದಂತವಕ್ತ್ರರನ್ನು ಹಳಿದು, ಹಾಸ್ಯಮಾಡಿ, ಜರಾಸಂಧನನ್ನು ಕುರಿತು ಹೀಗೆ ಹೇಳಿದನು - ''ಶ್ರೀಕೃಷ್ಣನು ಶ್ರೀಹರಿಯೆಂದು ಹೇಳಿದ್ದು ಸುಳ್ಳಲ್ಲ. ಶ್ರೀಹರಿಯಾಗಿದ್ದರೂ ಅವನು ಯಾದವವಂಶದಲ್ಲೇಕೆ ಜನಿಸಿದ್ದಾನೆ ಬಲ್ಲೆಯಾ? ಅವನು ಜನಾರ್ದನನು. ಸುರಪಕ್ಷಪಾತಿಯಾದ ಶ್ರೀಹರಿಯು ಅಸುರದ್ವೇಷಿಯಲ್ಲವೆ? ಅಂತೆಯೇ ನಮ್ಮನ್ನು ಸಂಹರಿಸಲು ಯದುಕುಲದಲ್ಲಿ ಕೃಷ್ಣನಾಗಿ ಜನಿಸಿದ್ದಾನೆ. ಅವನು ನಮ್ಮನ್ನೇಕೆ ಸಂಹರಿಸುತ್ತಾನೆ? ಎಂದು ಕೇಳುವೆಯಾ. ಅದಕ್ಕೆ ಕಾರಣವಿಲ್ಲದಿಲ್ಲ. ನಾವೆಲ್ಲರೂ ಪೂರ್ವ-ದಲ್ಲಿ ದಾನವೇಶ್ವರರು. ಅಂದರೆ ದಾನವರಿಗೆ ನಿಯಾಮಕರು. ಆದ್ದರಿಂದಲೇ ನಮ್ಮ ಸಂಹಾರವೇ ಅವನ ಗುರಿಯಾಗಿದೆ. ಇರಲಿ. ನಮ್ಮಲ್ಲಿನ ಈ ದ್ವೇಷನಿವಾರಣೆಗೆ ಸಂಧಾನವೇಕೆ ಮಾಡಿಕೊಳ್ಳಬಾರದು? ಎಂಬ ಪ್ರಶ್ನೆಯೇ ಹುಟ್ಟುವುದಿಲ್ಲ. ಹರಿಯಲ್ಲಿ ಸರ್ವದಾ (ಸಾರ್ವಕಾಲಿಕವಾಗಿ) ದೃಢವಾದ ಪ್ರತಿಸ್ಪರ್ಧಿತನ ಮತ್ತು ದ್ವೇಷ ಮಾಡುವುದೇ ನಮಗೆ ಸ್ವಧರ್ಮ! ಈ ಸ್ವಧರ್ಮಾಚರಣೆಯನ್ನು ಬಿಡದೆ ನಾವು ಕೃಷ್ಣನೊಡನೆ ಹೋರಾಡುವುದೇ ಯುಕ್ತ. ಕೃಷ್ಣನೊಡನೆ ಯುದ್ಧಮಾಡಿ ಒಂದು ವೇಳೆ ನಾವು ಮೃತರಾದರೂ ಖಂಡಿತವಾಗಿ ಸದ್ಗತಿಯನ್ನು ಹೊಂದುತ್ತೇವೆ. ನಮಗೆ ಶ್ರೀ ರುದ್ರದೇವರೇ ಪರದೈವ. ಹೇ ಜರಾಸಂಧ ಚಕ್ರವರ್ತಿ! ನೀನೇ ನಮಗೆ ಗುರುವು! ಹರಿಗೆ ನೀನು ಶತ್ರುವು ಅಥವಾ ಹರಿಯು ನಮಗೆಲ್ಲಾ ಶತ್ರುವು.''

ಸಾಲ್ವನ ಮಾತನ್ನಾಲಿಸಿದ ಜರಾಸಂಧನು ಆನಂದದಿಂದ ಉಬ್ಬಿ ಅವನ ಮಾತನ್ನು ''ಸಾಧು! ಸಾಧು!'' ಎಂದು ಪ್ರಶಂಸಿಸಿದನು. ಸಾಲ್ವನ ಮಾತು ಜರಾಸಂಧನ ಪ್ರಶಂಸಾತ್ಮಕ ವಚನವನ್ನಾಲಿಸಿದ ಶಿಶುಪಾಲ-ದಂತವಕ್ತ್ರರೂ ಸಹ ಸಾಲ್ವನ ಮಾತನ್ನೇ ಅನುಮೋದಿಸಿ ಮಾತನಾಡಿದರು. ಕುಬುದ್ಧಿಗಳಾದ (ದುರಾತ್ಮರಾದ) ಸಾಲ್ವಮಹಾರಾಜ ಮೊದಲಾದವರು ಕೃಷ್ಣನೊಡನೆ ಯುದ್ಧ ಮಾಡಲು ನಿಶ್ಚಯಿಸಿದರು. ಆಗ ಶಿಶುಪಾಲ-ದಂತವಕ್ತ್ರರು ಕೂಡ ''ನಾವೂ ಸಹ ಇನ್ನು ಮುಂದೆ

ಸರ್ವದಾ ಕೃಷ್ಣನ ವಿಷಯದಲ್ಲಿ ಪ್ರತಿಕೂಲಾಚರಣರತರಾಗಿ ಅವನ ದ್ವೇಷಿಗಳಾಗಿಯೇ ಇರುತ್ತೇವೆ" ಎಂದು ಪ್ರತಿಜ್ಞೆ ಮಾಡಿ, ಅಯೋಗ್ಯರಿಗೆ ಗುರುವಾದ ಜರಾಸಂಧನ ಅನುಗ್ರಹಕ್ಕೆ ಪಾತ್ರರಾದರು.

ಜರಾಸಂಧಾದಿಗಳು ಮತ್ತೆ ಒಟ್ಟಾಗಿ ಸೇರಿ ಹೀಗೆ ಮಂತ್ರಾಲೋಚನೆ ಮಾಡಿದರು. "ಕೃಷ್ಣನು ಈಗ ಸ್ವಯಂವರಕ್ಕೆ ಬಂದರೆ ನಿಶ್ಚಯವಾಗಿ ರುಕ್ಮಿಣಿಯನ್ನು ಪಡೆಯುತ್ತಾನೆ. ಕೃಷ್ಣನು ತ್ರಿಲೋಕಸುಂದರನಾಗಿದ್ದಾನೆ. ರುಕ್ಮಿಣಿಯೂ ಅತ್ಯಂತ ರೂಪಲಾವಣ್ಯವತಿಯಾಗಿ ಕೃಷ್ಣನಿಗೆ ಸದೃಶಳಾಗಿದ್ದಾಳೆ. ಇನ್ನು ಕೃಷ್ಣನು ತನ್ನ ಮುಖದ ತೇಜಸ್ಸಿನಿಂದ ಸಮಸ್ತ ಜನರ ಮುಖಕಾಂತಿಯನ್ನು ತಿರಸ್ಕರಿಸುವ ಕಾಂತಿಸಂಪನ್ನನಾಗಿದ್ದಾನೆ. ಅವನ ಮುಖದರ್ಶನ ಮಾತ್ರದಿಂದ ಸಕಲರೂ ಅವನ ವಶರಾಗುತ್ತಾರೆ. ಬಾಹುಬಲದಿಂದಲೂ ಅವನು ಸರ್ವಲೋಕ ವಿಜಯಿಯಾಗಿರುವನು. ಅಂತೆಯೇ ಅವನು ಸರ್ವರನ್ನೂ ವಶಪಡಿಸಿಕೊಂಡಿದ್ದಾನೆ, ಸರ್ವಜ್ಞರ ಮಧ್ಯದಲ್ಲಿ ಶ್ರೇಷ್ಠನೂ, ಶತ್ರುಗಳನ್ನು ಜಯಿಸಿದವನೂ, ಅತಿರೂಪ-ಯೌವನ ಸಂಪನ್ನನೂ ಆದ ಕೃಷ್ಣನನ್ನು ಸ್ತ್ರೀಯರ ಮಧ್ಯದಲ್ಲಿ ಶ್ರೇಷ್ಠಳಾದ ರುಕ್ಮಿಣಿಯು ಖಂಡಿತವಾಗಿ ವರಿಸುತ್ತಾಳೆ. ಹಾಗಾದಲ್ಲಿ ನಮ್ಮ ಮಾನಭಂಗವಾಗುತ್ತದೆ. ನಾವು ಕೃಷ್ಣನನ್ನು ಬಾಣಗಳಿಂದ ನಿವಾರಿಸಲೂ ಸಾಧ್ಯವಾಗುವುದಿಲ್ಲ. ಆದುದರಿಂದ ಸ್ವಯಂವರ-ಕಾಲದಲ್ಲಿ ನಮಗೂ ಕೃಷ್ಣನಿಗೂ ಯಾವ ವಿಧದಿಂದಲೂ ಸಮ್ಮೇಳನವೇ ಆಗದಂತೆ ಏನಾದರೊಂದು ಉಪಾಯವನ್ನು ಮಾಡುವುದು ಯುಕ್ತವಾಗಿದೆ. ಕೃಷ್ಣನಿಗೂ ನಮಗೂ ಮಿಲನವೇ ಆಗದಂತೆ ಮಾಡುವ ಉಪಾಯವೆಂದರೆ, ರಾಜಾಧಿ-ರಾಜರಾದ ನಮಗೂ ಕೃಷ್ಣನಿಗೂ ಸಮಾಗಮವಾದಾಗ, ಅದು ಇಲ್ಲಾಗಲೀ ಅಥವಾ ಬೇರೆಲ್ಲೇ ಆಗಲಿ, ಅವನಿಗೆ ಯಾರೂ ಆಸನವನ್ನು ಕೊಡಬಾರದು. ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಲೂಕೂಡದು! ಆಗ ಶ್ರೇಷ್ಠವಾದ ಆಸನಗಳಲ್ಲಿ ಕುಳಿತಿರುವ ನಮ್ಮ ಮುಂದೆ ಅವನಿಗೆ ಅಪಮಾನವಾದರೆ, ದೇವತೆಗಳಿಂದ ಮಾನಿತನಾದ್ದರಿಂದ, ಆ ಕೃಷ್ಣನು ಅಗೌರವಾರ್ಹವಾದ್ದರಿಂದ ನಿಶ್ಚಯವಾಗಿ ಭೂಮಿಯ ಮೇಲೆ ಕೂಡುವುದಿಲ್ಲ. ಗರ್ವಿಯೂ ಅಭಿಮಾನಯುಕ್ತನೂ ಆದ ಕೃಷ್ಣನು ಇಲ್ಲಿ ಇರುವುದಿಲ್ಲ. ಕೋಪದಿಂದ ತನ್ನ ಪಟ್ಟಣಕ್ಕೆ ಹೊರಟುಹೋಗುತ್ತಾನೆ. ಇದು ಖಂಡಿತ. ಅವನು ಹೊರಟುಹೋದ ಮೇಲೆ ನಾವು ಸ್ವಯಂವರವನ್ನು ಸುಖವಾಗಿ ನೆರವೇರಿಸೋಣ!!"

ಹೀಗೆ ಜರಾಸಂಧ ಪ್ರಮುಖರು ತೀರ್ಮಾನಿಸಿರುವ ವಿಚಾರವರಿತು ಅವರ ಅಲ್ಪತನ, ಕುಬುದ್ಧಿಗಾಗಿ ಮರುಗಿ ಭೀಷ್ಮಕರಾಜನ ತಮ್ಮನಾದ ಕ್ರಥರಾಜನು ಕೇಶಿರಾಜರು ಶ್ರೀಕೃಷ್ಣನ ಪಾದಾರವಿಂದಗಳಿಗೆ ನಮಸ್ಕರಿಸಿ, ತಮ್ಮ ಅರಮನೆಗೆ ಕರೆತಂದು ಶ್ರೇಷ್ಠಸಿಂಹಾಸನದಲ್ಲಿ ಕೂಡಿಸಿ ಶ್ರೀಕೃಷ್ಣನನ್ನು ಅರ್ಘ್ಯ, ಪಾದ್ಯಾದಿಗಳಿಂದ ಚೆನ್ನಾಗಿ ಪೂಜಿಸಿದರು. ಆಗ ಸುರಪತಿಯಾದ ದೇವೇಂದ್ರನ ದೂತನೊಬ್ಬನು ಇಂದ್ರನ ಆಣತಿಯಂತೆ ಅವನ ಆಜ್ಞಾರೂಪ ಸಂದೇಶದೊಡನೆ ಕುಂಡಿನೀಪುರಕ್ಕೆ ಬಂದು ಜರಾಸಂಧನೇ ಮೊದಲಾದ ರಾಜಮಹಾರಾಜರನ್ನು ಕುರಿತು ಅರ್ಥಪೂರ್ಣವಾದ ಅಂದರೆ ವ್ಯರ್ಥವಲ್ಲದ ಮಾತನ್ನಾಡಿದನು :- "ಎಲೈ ನೃಪಪತಿಗಳಿರಾ, ನಾನು ದೇವೇಂದ್ರನಿಗೆ ಪ್ರೀತಿಪಾತ್ರನು. ಯಾವಾಗಲೂ ಶಚೀಪತಿಗೆ ದೃಷ್ಟಿಗೋಚರನು. ನಾನೀಗ ಇಂದ್ರದೇವರ ಆಜ್ಞಾರೂಪ ಸಂದೇಶವನ್ನು ಹೊತ್ತು ಬಂದಿದ್ದೇನೆ. ನಾನು ಬಂದುದೇಕೆಂದರೆ, ಆ ಸುರಪತಿಯಾದ ದೇವೇಂದ್ರನು ನಿಮಗೆಲ್ಲರಿಗೂ ಪ್ರಭುವಾಗಿದ್ದಾನೆ. ಅಂತೆಯೇ ಅವನಿಂತು ಆಜ್ಞಾಪಿಸಿದ್ದಾನೆ. ಇದು ಬಿನ್ನಹವಲ್ಲ, ಅವನ ಆಜ್ಞೆ! "ಎಲೈ ರಾಜರುಗಳಿರಾ, ಶ್ರೀಕೃಷ್ಣಪರಮಾತ್ಮನು ಸಮಸ್ತ ಭೂಪತಿಗಳಾದ ಜರಾಸಂಧಾದಿ ರಾಜರುಗಳಿಗೂ ಮುಖ್ಯ ಪ್ರಭುವಾಗಿದ್ದಾನೆ. ಅವನ ವಿನಃ ಬೇರೊಬ್ಬರು ಪ್ರಭುಗಳಲ್ಲ! ಶ್ರೀಕೃಷ್ಣನೇ ಸಮಸ್ತರಿಗೂ ಸ್ವಾಮಿ ಎಂಬ ಬುದ್ಧಿಯಿಂದ ಸಂಶಯಕ್ಕೆ ಆಸ್ಪದವಿಲ್ಲದಂತೆ ಮಹಾಪ್ರಭುವಾದ ಶ್ರೀಕೃಷ್ಣನಿಗೆ ನೀವೆಲ್ಲರೂ ಸೇರಿ ಶೀಘ್ರವಾಗಿ ಸಾಮ್ರಾಜ್ಯಾಭಿಷೇಕವನ್ನು ಮಾಡಿ ಗೌರವಿಸಿರಿ! ಹಾಗೊಂದು ವೇಳೆ ನೀವು ನನ್ನ ಆಜ್ಞೆಯನ್ನು ಧಿಕ್ಕರಿಸಿದರೆ, ಶ್ರೀಕೃಷ್ಣನಿಗೆ ಸಾಮ್ರಾಜ್ಯಾಭಿಷೇಕವನ್ನು ನೆರವೇರಿಸದಿದ್ದರೆ - ನಿಮ್ಮೆಲ್ಲರ ಶಿರಸ್ಸಿನ ಮೇಲೆ ವಜ್ರಾಯುಧ ಪ್ರಹಾರ ಮಾಡಿ

ನಿಮ್ಮೆಲ್ಲರನ್ನೂ ಧ್ವಂಸ ಮಾಡುತ್ತೇನೆ" ಇದು ಮಹೇಂದ್ರನ ಸಂದೇಶ. ಆದುದರಿಂದ ನೀವು ಶ್ರೀಕೃಷ್ಣನಿಗೆ ಸಾಮ್ರಾಜ್ಯಾಭಿಷೇಕವನ್ನು ಮಾಡತಕ್ಕದ್ದು" ಎಂದು ಹೇಳಿ ಸ್ವರ್ಗಕ್ಕೆ ತೆರಳಿದನು.

ಇಂದ್ರದೂತನು ಹೇಳಿದ ಮಹೇಂದ್ರನ ಅಪ್ಪಣೆಯನ್ನಾಲಿಸಿದ ಜರಾಸಂಧ ಮುಂತಾದ ರಾಜರು ಇಂದ್ರದೂತನು ತೆರಳಿದ ಮೇಲೆ ಕೋಪತಪ್ತರಾಗಿ "ಓಹೋ, ನೋಡಿದಿರಾ! ಇಂದ್ರನೆಷ್ಟು ಗರ್ವಿಯಾಗಿದ್ದಾನೆ? ನಮಗಿಂತು ಆಜ್ಞಾಪಿಸಲು ಅವನಿಗೆಷ್ಟು ಧೈರ್ಯ? ಈ ಕೃಷ್ಣನು ಅವತರಿಸುವ ಪೂರ್ವದಲ್ಲಿ ಇದೇ ಇಂದ್ರನು ನಮ್ಮಲ್ಲಿ ಒಬ್ಬೊಬ್ಬರನ್ನು ಕಂಡರೂ ಎಷ್ಟು ಭಯಪಡುತ್ತಿದ್ದ? ಈಗ ಕೃಷ್ಣನ ಆಶ್ರಯಬಲದಿಂದ ನಮ್ಮನ್ನು ಹೆದರಿಸುತ್ತಿರುವನಲ್ಲ! ಈಗ ಅವನು ಅದೃಶ್ಯನಾಗಿಯೇ (ಕಣ್ಣಿಗೆ ಕಾಣದಂತೆ) ನಮ್ಮ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿದರೆ, ನಾವು ವರಬಲದಿಂದ ಮೃತಿರಹಿತರಾಗಿದ್ದರೂ ಸುರಪತಿಯು ವಜ್ರಾಘಾತದಿಂದ ಖಂಡಿತ ಪೀಡಿಸಲ್ಪಡುತ್ತೇವೆ. ಇದು ನಿಜ. ಹಿಂದೆ ಅವನು ಸ್ವರ್ಗದಲ್ಲಿದ್ದರೂ ಆ ಇಂದ್ರನನ್ನು ಮರ್ದಿಸಲು ನಾವು ಸಮರ್ಥರಾಗಿದ್ದೆವು. ಆದರೆ ಈಗ ನಾವು ಅವನನ್ನು ಶಿಕ್ಷಿಸಲು ದೇವಲೋಕಕ್ಕೆ ಹೋದರೆ ಈ ಕೃಷ್ಣನು ನಮ್ಮ ಮೇಲೆ ಯುದ್ಧಕ್ಕೆ ಬರುತ್ತಾನೆ. ಆದುದರಿಂದ ನಾವೀಗ ಶಾರ್ಙ್ಗಪಾಣಿಯಾದ ಕೃಷ್ಣನಿಗೆ ಸಾರ್ವಭೌಮನೆಂದು ಅಭಿಷೇಕ ಮಾಡಿದರೆ ದೇವೇಂದ್ರನು ನಮ್ಮ ಮೇಲೆ ವಜ್ರಾಯುಧವನ್ನು ಪ್ರಯೋಗಿಸುವುದಿಲ್ಲ. ಆದ್ದರಿಂದ ಕೃಷ್ಣನಿಗೆ ಅಭಿಷೇಕ ಮಾಡಿ, ಬಂದಿರುವ ಕುತ್ತಿನಿಂದ ಪಾರಾಗೋಣ. ಹಾಗೆ ಮಾಡದಿದ್ದರೆ ಮರಣರಹಿತರಾಗಿದ್ದರೂ ನಾವು ತೊಂದರೆಗೆ ಒಳ-ಗಾಗಲೇಬೇಕಾಗುತ್ತದೆ. ಹಿಂದೆ ದನು ಎಂಬ ರಾಕ್ಷಸನು ಮರಣರಹಿತನಾಗಿದ್ದರೂ ಇಂದ್ರನ ವಜ್ರಾಯುಧದ ಆಘಾತದಿಂದ ಅವನ ಶಿರಸ್ಸು ಉದರದಲ್ಲಿರುವಂತಾಯಿಲ್ಲವೆ? ಅದೇ ಗತಿ ನಮಗೂ ಆದೀತು! ಆ ಕೃಷ್ಣನ ಆಶ್ರಯವುಳ್ಳ ಇಂದ್ರನು ದನುವಿಗೆ ಮಾಡಿದಂತೆ ನಮಗೂ ತೊಂದರೆ ಮಾಡದಿರುವಂತಾಗಲು ನಾವು ಕೃಷ್ಣನಿಗೆ ಅಭಿಷೇಕವನ್ನು ಮಾಡೋಣ" ಎಂದು ಹೇಳಿ ಅದರಂತೆ ಆಚರಿಸಲು ನಿಶ್ಚಯಿಸಿದನು. ಮತ್ತು ಕೆಲರಾಜರನ್ನು ಕೃಷ್ಣನಿಗೆ ಸಾರ್ವಭೌಮನೆಂದು ಅಭಿಷೇಕ ಮಾಡಲು ಕಳಿಸಿದನು. ಜರಾಸಂಧ ಮೊದಲಾದ ನಾಲ್ವರು ಮಾತ್ರ ಹೋಗಲಿಲ್ಲ.

ಜರಾಸಂಧಾದಿ ನಾಲ್ವರೇಕೆ ಹೋಗಲಿಲ್ಲವೆಂಬ ಶಂಕೆಗೆ ಶ್ರೀ ನಿರ್ಣಯಾಚಾರ್ಯರು ಹೀಗೆ ವಿವರಣೆ ನೀಡುತ್ತಾರೆ – ಇಂದ್ರನ ಆಣತಿಯಂತೆಯೇ ಅವರು ಹೋಗಲಿಲ್ಲ. ಇಂದ್ರನು ಹಾಗೇಕೆ ಆಜ್ಞಾಪಿಸಿದ್ದನು? ಎಂದರೆ ಜರಾಸುತ ಮೊದಲಾದವರು ಕೃಷ್ಣನಿಗೆ ಸಾರ್ವಭೌಮನೆಂದು ಪಟ್ಟಾಭಿಷೇಕ ಮಾಡುವುದಿಲ್ಲ. ಅವನನ್ನು ಅನುಸರಿಸುವುದಿಲ್ಲ. ಮಾನಭಂಗ ಕಾಲದಲ್ಲಿ ಅಸುರರೂ ಸಹ ಜೀವಿಸಲು ಆಶಿಸಿ ಶ್ರೀಕೃಷ್ಣನನ್ನೇ ಆಶ್ರಯಿಸುತ್ತಾರೆ. ಹಾಗಾದರೆ ಶರಣಾಗತ ರಕ್ಷಕನಾದ ಶ್ರೀಕೃಷ್ಣನು ಶರಣುಬಂದವರನ್ನು ಸಂಹರಿಸುವುದಿಲ್ಲವಾದ ಕಾರಣ ದೈತ್ಯರ ಸಂಹಾರರೂಪಕಾರ್ಯವಾದ ದೇವತಾಕಾರ್ಯವು ನಡೆಯದೇ ಹೋದೀತು. ಹಾಗಾಗಬಾರದೆಂದು ಯೋಚಿಸಿ ಇಂದ್ರನು ಜರಾಸಂಧ, ಶಿಶುಪಾಲ, ಸಾಲ್ವ, ರುಗ್ಮಿ ಈ ನಾಲ್ವರು ಶ್ರೀಕೃಷ್ಣನ ಸಾಮ್ರಾಜ್ಯಾಭಿಷೇಕಕ್ಕೆ ಹೋಗಕೂಡದೆಂದು ದೂತನ ಮೂಲಕ ಹೇಳಿಕಳಿಸಿದ್ದನು. ಅಂತೆಯೇ ಇನ್ನಿತರ ರಾಜರು ದೇವೇಂದ್ರನ ಆಣತಿಯಂತೆ ಮಗಧಚಕ್ರವರ್ತಿಯಾದ ಜರಾಸಂಧ ಮತ್ತೆ ಮೂವರನ್ನು ಬಿಟ್ಟು ಸಕಲ ಚಕ್ರವರ್ತಿಗಳಿಗೂ ಅಧಿರಾಜನೆಂದು ಶ್ರೀಕೃಷ್ಣನಿಗೆ ಪಟ್ಟಾಭಿಷೇಕ ಮಾಡಲು ಉದ್ಯುಕ್ತರಾದರು ಎಂದು ತಿಳಿಯಬೇಕು.

ಶ್ರೀಕೃಷ್ಣನಿಗೆ ಪಟ್ಟಾಭಿಷೇಕ ಮಾಡಲು ಸಕಲ ನರಪತಿಗಳೂ ಉದ್ಯುಕ್ತರಾದರು. ಆಗ ದೇವಲೋಕದಿಂದ ಇಂದ್ರನು ತನ್ನ ಶ್ರೇಷ್ಠವಾದ ಸಿಂಹಾಸನವನ್ನೇ ಕಳುಹಿಸಿಕೊಟ್ಟನು. ಗಗನಮಾರ್ಗದಿಂದ ಬಂದ ಆ ದಿವ್ಯವಾದ ಆ ಸಿಂಹಾಸನದ ಮೇಲೆ ಶ್ರೀಕೃಷ್ಣನು ಕುಳಿತನು. ಶ್ರೀಕೃಷ್ಣಪರಮಾತ್ಮನನ್ನು ಗರುಡನನೂ ಭೀಷ್ಮಕ ರಾಜನ ಸಹೋದರನಾದ ಕ್ರಥ ಮತ್ತು ಕೇಶಿರಾಜರು ಕರಪಿಡಿದು ಸಿಂಹಾಸನದಲ್ಲಿ ಕೂಡಿಸಿದನು. ಅನಂತರ ಸಮಸ್ತ ರಾಜರುಗಳು ಮುನೀಂದ್ರರಿಂದೊಡಗೂಡಿ ಮಂಗಳಕರವಾದ

ಸುವರ್ಣಮಯ ಕುಂಭಗಳಿಂದ ಆದರಲ್ಲಿರುವ ಪವಿತ್ರಜಲಗಳಿಂದ ಶ್ರೀಕೃಷ್ಣನಿಗೆ ಸಾರ್ವಭೌಮಪದದಲ್ಲಿ ಪಟ್ಟಾಭಿಷೇಕ ಮಾಡಿದರು. ಈ ಮಹೋತ್ಸವ ನೋಡಲು ವ್ಯೋಮಮಂಡಲದಲ್ಲಿ ನೆರೆದಿದ್ದ ಬ್ರಹ್ಮ-ರುದ್ರೇಂದ್ರಾದಿ ನಿಖಿಲ ಸುರಜನರು ಯದುಕುಲಶಿರೋಮಣಿಯಾದ ಶ್ರೀಕೃಷ್ಣನನ್ನು ಸ್ತುತಿಸಿದರು. ಗಂಧರ್ವಾದಿ ಸಕಲ ದೇವಗಾಯಕರು ಶ್ರೀಹರಿಯ ಮಹಿಮಾತಿಶಯಗಳನ್ನು ಸುಸ್ವರದಿಂದ ಗಾನಮಾಡಿದರು. ಇಂತು ಪರಮ ಮಂಗಳಕರವಾಗಿ ವೈಭವಪೂರ್ಣವಾಗಿ ಶ್ರೀಯದುಕುಲಶಿರೋಮಣಿಯ ಅಭಿಷೇಕವಾದ ಮೇಲೆ ಪ್ರಭುವಾದ ಶ್ರೀಕೃಷ್ಣನು ಭೀಷ್ಮಕರಾಜನನ್ನು ಕುರಿತು ಇಂತೆಂದನು:-

"ಭೀಷ್ಮಕರಾಜ! ನಿನ್ನ ಮಗಳಾದ ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಟ್ಟು ಮದುವೆ (ಸ್ವಯಂವರ) ಮಾಡಬೇಕೆಂದು ಆಶಿಸಿದ್ದೀಯೆ. ಆ ಸ್ವಯಂವರವು ಅಂದರೆ ಶಿಶುಪಾಲನಿಗೆ ರುಕ್ಮಿಣಿಯನ್ನಿತ್ತು ಲಗ್ನಮಾಡಿಕೊಡುವುದು ನಿನಗೆ ಶುಭ-ಪ್ರದವಾಗಲಾರದು! ರುಕ್ಮಿಣಿಯನ್ನು ಯಾರೆಂದು ತಿಳಿದಿರುವೆ? ಅವಳು ಸಾಕ್ಷಾತ್ ಲಕ್ಷ್ಮೀದೇವಿಯು. ಈಗ ನಿನಗೆ ಮಗಳಾಗಿ ಅವತರಿಸಿರುವಳು. ಸಕಲ ಸಂಪತ್ತಿಗೂ ಸ್ವಾಮಿನಿಯಾದ ಅವಳು ಶ್ರೀಹರಿಯಪತ್ನಿ. ಅವಳನ್ನು ನೀನು ಹರಿಗೆ (ನನಗೆ) ಕೊಡದಿದ್ದಲ್ಲಿ ಯದ್ಯಪಿ ನೀನು ರುಕ್ಮಿಣಿಗೆ ತಂದೆಯಾಗಿದ್ದರೂ ಸಹ ನೀನು ಸಂಪದ್ರಹಿತವಾಗಿ ತಮಸ್ಸಿಗೆ ಹೋಗುತ್ತೀಯೆ! ಹೇ ರಾಜನ್! ನಾನಿಂತು ಹೇಳುತ್ತಿರುವುದು ನಿನ್ನ ಹಿತಕ್ಕಂದೇ ತಿಳಿ. ನಾನು ರುಕ್ಮಿಣಿಯ ಕರಪಿಡಿಯಬೇಕೆಂಬ ಹೆಣ್ಣಿನ ಆಶೆಯಿಂದ ಸ್ವಾರ್ಥಕ್ಕಾಗಿ ಹೇಳುತ್ತಿರುವೆನೆಂದು ಆಲೋಚಿಸಬೇಡ. ನಾನು ಎಂತಹ ಪರಿಪೂರ್ಣ ಸಂಪದ್ಯುಕ್ತನಾಗಿರುವೆ-ನೆಂಬುದನ್ನು ನೋಡು" ಹೀಗೆ ಹೇಳಿದ ಶ್ರೀಕೃಷ್ಣಪರಮಾತ್ಮನು ತನ್ನ ವಿಶ್ವರೂಪವನ್ನು ಭೀಷ್ಮಕರಾಜನಿಗೆ ದರ್ಶನ ಮಾಡಿಸಿದನು.

ಶ್ರೀಕೃಷ್ಣನು ಶ್ರೇಷ್ಠವಾದ ಅಸಂಖ್ಯ ಶಿರಸ್ಸು, ಬಾಹುಗಳಿಂದ ಯುಕ್ತವಾದ ಅನಂತತೇಜಸ್ಸಿನಿಂದ ವಿರಾಜಿಸುವ ಬ್ರಹ್ಮಾಂಡದ ಒಳಗೂ ಹೊರಗೂ ವ್ಯಾಪ್ತವಾದ ಅನಂತರೂಪಗಳಿಂದ ಕೂಡಿದ ವಿಚಿತ್ರ ಶಿರಸ್ಸುಗಳು, ಕುಂಡಲ, ಕೇಯೂರ, ಉತ್ಕೃಷ್ಟ ಮುಕ್ತಾಮಾಲೆಗಳು, ಪಾದಭೂಷಣಗಳಿಂದ ಸಹಿತವಾದ, ಕಂಗೊಳಿಸುವ ಕೌಸ್ತುಭ ಮಣಿಹಾರಕಾಂತಿಯಿಂದ ಪ್ರಜ್ವಲಿಸುವ ಶೋಭನಕರ ಪೀತಾಂಬರಗಳಿಂದಲೂ ಬೆಳಗುವ ತನ್ನ ವಿಶ್ವರೂಪವನ್ನು ತೋರಿಸಿದನು. ನಂತರ "ರಾಜನ್, ನನ್ನ ಪತ್ನಿಯರು (ಶ್ರೀಯರು) ಎಂತಹವರೆಂಬುದನ್ನೂ, ಅಂತಹ ಶ್ರೇಷ್ಠರಾದ ನನ್ನ ಪತ್ನಿಯರನ್ನೂ ನೋಡು" ಎಂದು ಹೇಳಿ ಮಾನವರ ಜ್ಞಾನವನ್ನು ದೃಷ್ಟಿಯಲ್ಲಿಟ್ಟುಕೊಂಡು ರುಕ್ಮಿಣೀ ಸ್ವರೂಪಳಾದ ಲಕ್ಷ್ಮೀದೇವಿಯ (ರುಕ್ಮಿಣಿಯ) ಅಪೇಕ್ಷಯಾ ರೂಪದಿಂದ ಅಧಿಕಳೂ ಸರ್ವೋತ್ತಮಳೂ ಆದ ಅನಂತಸೌಂದರ್ಯಯುಕ್ತಳಾದ, ಲಾವಣ್ಯಯುಕ್ತಳಾದ ಶ್ರೀರುಕ್ಮಿಣೀ-ದೇವಿಯನ್ನೂ ಅವಳ ಅನಂತರೂಪಗಳನ್ನೂ ಪ್ರದರ್ಶಿಸಿದನು.

ಇಲ್ಲಿ "ವಿಸಂಖ್ಯರೂಪಸಂಯತ" ಎಂದು ಹೇಳಿರುವುದು ಶ್ರೀಹರಿಯು ತನ್ನ ಮತ್ಸ್ಯ-ಕೂರ್ಮಾದಿ ಅನಂತ-ರೂಪಗಳನ್ನೂ, ತನ್ನ ವಿಶ್ವರೂಪದಲ್ಲಿ ತೋರಿಸಿದನು ಎಂಬ ಭಾವದಿಂದ ಎಂದು ತಿಳಿಯಬೇಕು. ಮನುಷ್ಯದೃಷ್ಟಿಯಿಂದ ರುಕ್ಮಿಣಿಯಕಿಂತ ಅಧಿಕಳಾದ ಲಕ್ಷ್ಮಿಯನ್ನು ತೋರಿಸಿದನು - ಎಂದು ಹೇಳಿರುವುದು ಮಾನವ ದೃಷ್ಟಿಯ ಅಪೇಕ್ಷೆಯಿಂದಲೇ ವಿನಃ ಸ್ವಾಭಾವಿಕವಾಗಿ ರುಕ್ಮಿಣಿಯಂತೆ ಲಕ್ಷ್ಮೀದೇವಿಗೆ ಆಧಿಕ್ಯವಲ್ಲ. ಏಕೆಂದರೆ ಅವರಿಬ್ಬರಿಗೂ ಐಕ್ಯವಿರುವುದರಿಂದ (ಅವರಿಬ್ಬರೂ ಒಬ್ಬರೇ ಆದ್ದರಿಂದ) ಅವರಲ್ಲಿ ನೀಚ-ಉಚ್ಚ ಭಾವವೇ ಕೂಡುವುದಿಲ್ಲ. ತನ್ನ ವಿಶ್ವರೂಪದಂತೆಯೇ ಲಕ್ಷ್ಮೀದೇವಿಯ ಶ್ರೇಷ್ಠ ಅನಂತರೂಪಗಳನ್ನೂ ಅಂದರೆ ಜಾಂಬವತಿ ಮುಂತಾದ ಆರುಜನ ಮಹಿಷಿಯರು ಅಥವಾ ವಿಮಲಾದಿ ಸ್ವಸ್ವರೂಪಶಕ್ತಿಯಿಂದ ಯುಕ್ತರಾದವರನ್ನು ಪ್ರದರ್ಶಿಸಿದನು ಎಂದು ತಿಳಿಯಬೇಕು. ಸ್ವಸ್ವರೂಪಾಶ್ರಿತರಾದ ಬ್ರಹ್ಮಾದಿ ಸಮಸ್ತದೇವತೆಗಳನ್ನೂ ಶ್ರೀಕೃಷ್ಣನು ತನ್ನ ವಿಶ್ವರೂಪದಲ್ಲಿ ತೋರಿಸಿದನು. ಭಗವಂತನಾದ ಶ್ರೀಕೃಷ್ಣನ ಆಶ್ಚರ್ಯಕರವಾದ

ವಿಶ್ವರೂಪವನ್ನು ಕಂಡು ಭೀಷ್ಮಕರಾಜನು ಬಹುಭಯಗೊಂಡು ಶ್ರೀಕೃಷ್ಣನ ಪಾದಗಳ ಮೇಲೆ ಬಿದ್ದು "ಪ್ರಭು! ನಿನ್ನ ಅಪ್ಪಣೆಯಂತೆಯೇ ಮಾಡುತ್ತೇನೆ" ಎಂದು ಬಿನ್ನವಿಸಿದನು. ಕಮಲದಳದಂತೆ ಕಂಗೊಳಿಸುವ ಕಣ್ಣುಗಳಿಂದ ರಾಜಿಸುವ ಗರುಡವಾಹನನಾದ ಸಿರಿಕೃಷ್ಣನು ತನ್ನ ವಿಶ್ವರೂಪವನ್ನು ಮರೆಮಾಡಿ ಸ್ವಬಾಹುಬಲದಿಂದ ಪಾಲಿತವಾದ ಮಥುರಾನಗರಿಗೆ ಪ್ರಯಾಣ ಬೆಳೆಸಿದನು.

ಭಗವಾನ್ ವಾಸುದೇವನು ಸ್ವಯಂವರವನ್ನು ನಿಷೇಧಿಸಿದ್ದರಿಂದ ರುಕ್ಮಿಣಿಯ ಸ್ವಯಂವರಕ್ಕೆ ವಿಘ್ನಬಂದಿತು. ಲಕ್ಷ್ಮೀದೇವಿಯು ಅನ್ಯರಿಗೆ ಯೋಗ್ಯಳಲ್ಲದ್ದರಿಂದ ವಿಘ್ನಬಂದಿತು ಎಂದರೆ ಹಾಗಾದರೆ, ಹಿಂದೆ ಜ್ಞಾನಿಯಾದ ವರುಣನೂ, ಜನಕರಾಜನೂ ಸಹ ಸಕಲದೇವತೆಗಳು, ರಾಜರುಗಳನ್ನು ಸೇರಿಸಿ ಶ್ರೀಲಕ್ಷ್ಮೀದೇವಿಗೂ, ಸೀತಾದೇವಿಗೂ ಏಕೆ ಸ್ವಯಂವರವನ್ನು ನೆರವೇರಿಸಿದರು? ಆಗ ಏಕೆ ಸ್ವಯಂವರಕ್ಕೆ ವಿಘ್ನ ಉಂಟಾಗಲಿಲ್ಲ? ಎಂಬ ಶಂಕೆಯನ್ನು ಶ್ರೀ ನಿರ್ಣಯಾಚಾರ್ಯರು ಹೀಗೆ ಪರಿಹರಿಸುತ್ತಾರೆ:- ಯದ್ಯಪಿ ವರುಣನೂ, ಜನಕರಾಜನೂ ಸ್ವಯಂವರಕ್ಕೆ ಪ್ರಯತ್ನ ಮಾಡಿ, ಸ್ವಯಂವರವನ್ನೂ ನೆರವೇರಿಸಿದರು ನಿಜ. ಆದರೆ ಈ ಲಕ್ಷ್ಮೀದೇವಿಯು (ಎಂದು ವರುಣನೂ), ಈ ಸೀತಾದೇವಿಯು (ಲಕ್ಷ್ಮೀದೇವಿ ಎಂದು ಜನಕರಾಜನೂ) ಶ್ರೀಹರಿಯನ್ನು ಅಂದರೆ ಶ್ರೀ ನಾರಾಯಣನನ್ನು, ಶ್ರೀರಾಮಚಂದ್ರನನ್ನು ಖಂಡಿತ ಹೊಂದುತ್ತಾಳೆ ಎಂಬ ಅಭಿಪ್ರಾಯದಿಂದ ಅಂದರೆ ವರುಣನು ಲಕ್ಷ್ಮಿಯು ನಾರಾಯಣನನ್ನೇ ವರಿಸುತ್ತಾಳೆ ಎಂದೂ, ಸೀತೆಯು ಶ್ರೀರಾಮನನ್ನೇ ವರಿಸುತ್ತಾಳೆ ಎಂದು ಜನಕರಾಜನೂ ನಿಶ್ಚಯವಾಗಿ ತಿಳಿದು ಸ್ವಯಂವರವನ್ನು ಏರ್ಪಡಿಸಿದ್ದರು. ಆದ್ದರಿಂದ ಆ ಸ್ವಯಂ-ವರಗಳಿಗೆ ವಿಘ್ನ ಬರಲಿಲ್ಲ. ಅದು ಸರಿ, ತಮ್ಮ ಮಗಳು ಶ್ರೀಹರಿಯನ್ನೇ ವರಿಸಬೇಕೆಂದು ವರುಣ ಮತ್ತು ಜನಕ ಮಹಾರಾಜರು ನಿಶ್ಚಯಿಸಿದ್ದಲ್ಲಿ, ಸ್ವಯಂವರವನ್ನೇರ್ಪಡಿಸಲು ಕಾರಣವೇನು? ಎಂದರೆ - ಸ್ವಯಂವರವನ್ನು ಏರ್ಪಡಿಸು-ವುದು ರಾಜರಿಗೆ ಸ್ವಧರ್ಮವಾಗಿದೆ. ಅಂತೆಯೇ ಸ್ವಯಂವರವನ್ನು ಏರ್ಪಡಿಸಿದ್ದರು. ಆದುದರಿಂದ ಅದು ವರುಣ-ಜನಕರಾಜರಿಗೆ ದೋಷಾವಹವಾಗಲಿಲ್ಲ. ಮೇಲಾಗಿ "ಸ್ವಯಂವರ ಕ್ಷಿತೇರ್ಭುಜಾ" ಎಂದು ಹೇಳಿರುವುದು ಕ್ಷತ್ರಿಯರಿಗೆ ಸ್ವಯಂವರವು ಸ್ವಧರ್ಮ. ಆದರೆ ವರುಣನು ದೇವತೆಯಾದ್ದರಿಂದ ಅವನೇಕೆ ಸ್ವಯಂವರವನ್ನು ಏರ್ಪಡಿಸಿದ? ಎಂದರೆ ದೇವತೆಗಳಲ್ಲೂ ವಾಯು, ಸೋಮ, ಆದಿತ್ಯರು ಕ್ಷತ್ರಿಯರಾದ್ದರಿಂದ ಆದಿತ್ಯಗಣದಲ್ಲಿರುವ ವರುಣನೂ ಕ್ಷತ್ರಿಯನಾದ್ದರಿಂದ ಸ್ವಯಂವರವನ್ನೇರ್ಪಡಿಸಿದನೆಂದು ತಿಳಿಯಬೇಕು. ಅಂತೆಯೇ "ಸ್ವಯಂವರಕ್ಷಿತೇರ್ಭುಜಾಂ" ಎಂದು ಈ ವಿಚಾರವನ್ನು ತಿಳಿಸಲು ಹೇಳಿದ್ದಾರೆ ಎಂದು ಭಾವ. ಇನ್ನು ಭೀಷ್ಮಕರಾಜನು ರುಕ್ಮಿಣಿಯು ಶ್ರೀಹರಿಯನ್ನೇ ಅಂದರೆ ಶ್ರೀಕೃಷ್ಣನನ್ನೇ ವರಿಸಲಿ ಎಂದು ಅಪೇಕ್ಷಿಸಿರಲಿಲ್ಲವಾದ್ದರಿಂದ ಅದು ದೋಷಾವಹವಾದುದರಿಂದ ಆ ದೋಷವು ಭೀಷ್ಮಕರಾಜನಿಗೆ ಬರದಿರಲೆಂದು ಕೃಪಾಪಾರಾವಾರನಾದ ಶ್ರೀಕೃಷ್ಣಪರಮಾತ್ಮನು ಭೀಷ್ಮಕರಾಜನನ್ನು ಸಕಾಲದಲ್ಲಿ ಎಚ್ಚರಿಸಿದನು ಎಂದು ತಿಳಿಯಬೇಕು.

ಹೀಗೆ ಶ್ರೀಕೃಷ್ಣನು ಭೀಷ್ಮಕರಾಜನಿಗೆ ಉಪದೇಶಿಸಿ ಮಧುರೆಗೆ ಪ್ರಯಾಣ ಬೆಳೆಸಿದ ಮೇಲೆ ಜರಾಸಂಧಾದಿ ರಾಜರು ಪುನಃ ಒಂದೆಡೆ ಸೇರಿ ತಮ್ಮತಮ್ಮಲ್ಲಿ ವಿಚಾರವಿನಿಮಯ ಮಾಡಹತ್ತಿದರು. ಜರಾಸಂಧನು ಮತ್ತೆ ಮತ್ತೆ ಶ್ರೀಕೃಷ್ಣನ ಮೇಲೆ ಯುದ್ಧಮಾಡಿ ಪರಾಜಿತನಾಗಿದ್ದರೂ ಪುನಃ ಪುನಃ ಏತಕ್ಕಾಗಿ ಯುದ್ಧಕ್ಕೆ ಪ್ರಯತ್ನಿಸುತ್ತಾನೆ? ಎಂದರೆ ಶ್ರೀಕೃಷ್ಣನು ಜರಾಸಂಧ-ನನ್ನು ವಧಿಸಿದ ಕೀರ್ತಿಯನ್ನು ಭೀಮಸೇನದೇವರಿಗೆ ಕೊಡಬೇಕೆಂದೂ ಪ್ರತಿಯುದ್ಧದಲ್ಲಿಯೂ ಜರಾಸಂಧನನ್ನು ಸಂಹರಿಸದೆ ಬಿಟ್ಟನು. ಆದರೆ ಅದನ್ನು ಜರಾಸಂಧನು ವಿಪರೀತವಾಗಿ ತಿಳಿದಿದ್ದಾನೆ. ಅದೇನೆಂದರೆ - "ಶ್ರೀಕೃಷ್ಣನು ಶ್ರೇಷ್ಠನಾದ ಶ್ರೀರುದ್ರನ ವರದಿಂದ ಬಲಶಾಲಿಯಾದ ನನ್ನನ್ನು ಸಂಹರಿಸಲು ಅಸಮರ್ಥನಾಗಿದ್ದಾನೆ. ನಿಜ, ನಾನು ಮತ್ತೆ ಮತ್ತೆ ಕೃಷ್ಣನಿಂದ ಪರಾಜಿತನಾಗಿದ್ದೇನೆ. ಶ್ರೀರುದ್ರದೇವರ ಪ್ರಸಾದ, ವರವು ನನಗಿರುವುದರಿಂದ ಮುಂದೆ ನಾನು ಖಂಡಿತವಾಗಿ ಕೃಷ್ಣನನ್ನು ಜಯಿಸುತ್ತೇನೆ" ಎಂದು ನಂಬಿದ್ದಾನೆ. ಅಂತೆಯೇ ಅವನು ಪುನಃ ಪುನಃ ಕೃಷ್ಣನನ್ನು ಜಯಿಸಲೋಸುಗ, ಆ ಹಂಬಲದಿಂದ

ಯುದ್ಧ ಮಾಡುತ್ತಾನೆ. ಆದರೆ ಮತ್ತೆ ತಾನೇ ಸೋತರೂ ಎಂದಿಗೂ ಶ್ರೀ ರುದ್ರದೇವರು ನನಗೆ ವಿಜಯ ನೀಡಲಿಲ್ಲ. ಅವರ ವರ ಪ್ರಯೋಜನಕಾರಿಯಾಗಲಿಲ್ಲ – ಮುಂತಾಗಿ ರುದ್ರದೇವರನ್ನು ಅವಮಾನಿಸುವುದಿಲ್ಲ. ಮುಂದೆ ಕೃಷ್ಣನನ್ನು ಗೆಲ್ಲುತ್ತೇನೆ ಎಂದೇ ನಂಬಿದ್ದಾನೆ – ಎಂದು ತಿಳಿಯಬೇಕು.

ತನ್ನನ್ನು ಅನುಸರಿಸುವ ರಾಜರನ್ನು ಕುರಿತು ಜರಾಸಂಧ ಹೀಗೆ ಹೇಳಿದನು – "ನಮ್ಮ ಪೌರುಷಕ್ಕೆ ಧಿಕ್ಕಾರವಿರಲಿ. ಕೃಷ್ಣನು ಪ್ರತಿಸಲವೂ ಯುದ್ಧದಲ್ಲಿ ನಮ್ಮನ್ನು ಪರಾಭವಗೊಳಿಸುತ್ತಿದ್ದಾನೆ. ಅವನು ಗೊಲ್ಲರಾಜನಲ್ಲ ಆದ್ದರಿಂದ ಅವನಿಗೆ ಆಸನವನ್ನೂ ಸಹ ಕೊಡಬಾರದು ಎಂದು ನಾನು ಹೇಳಿದೆನಲ್ಲವೇ? ಆದರೆ ಈಗ ಆದುದೇನು? ನಮ್ಮ ಅಭಿಮತಕ್ಕೆ ವಿರುದ್ಧವೇ ಆಯಿತಲ್ಲ? ಈ ಕೃಷ್ಣನು ರಾಜಾಧಿರಾಜನಾದ ಭೀಷ್ಮಕಮಹಾರಾಜನ ಮನೆಯಲ್ಲಿ (ಅಂಗಳದಲ್ಲಿ) ಮಹೇಂದ್ರನ ಸಿಂಹಾಸನವನ್ನೇರಿ ಸಮಸ್ತ ನೃಪತಿಗಳಿಂದ ಅಭಿಷಿಕ್ತನಾಗಿ ನಿಖಿಲ ರಾಜಾಧಿರಾಜರಿಗೂ ಸಾರ್ವಭೌಮನೆನಿಸಿ ಅಸಾಧಾರಣ ಗೌರವ-ಕೀರ್ತಿಗಳನ್ನು ಗಳಿಸಿಬಿಟ್ಟನಲ್ಲ! ನಾವೀಗ ಕೃಷ್ಣನನ್ನು ಜಯಿಸುವ ಬಗೆಯೆಂತು? ನೀವೇ ವಿಚಾರ ಮಾಡಿರಿ. ನಮ್ಮ ಈ ಶಿಶುಪಾಲನು ಭೀಷ್ಮಕರಾಜ ರಾಜಕುಮಾರಿಯಾದ ರುಕ್ಮಿಣಿಯ ಕರಪಿಡಿಯುವುದೆಂತು? ಅದನ್ನೂ ಯೋಚಿಸಿರಿ. ಈ ಶಿಶುಪಾಲನ ತಂದೆಯಾದ ದಮಘೋಷನು ಇವನನ್ನು ನನ್ನ ಕರದಲ್ಲಿಟ್ಟು ಇವನನ್ನು ರಕ್ಷಿಸು, ಇವನಿಗೆ ವಿವಾಹ ಮಾಡಿಸು ಎಂದು ನನಗೊಪ್ಪಿಸಿದ್ದಾನೆ. ಆದುದರಿಂದ ಈ ಶಿಶುಪಾಲನು ನನಗೆ (ಸ್ವಪುತ್ರನಾದ ಸಹದೇವನಕಿಂತಲೂ) ದತ್ತಕ-ಪುತ್ರನಾಗಿರುವನು. ನನ್ನ ಸ್ವಂತ ಮಗನಾದ ಸಹದೇವನಕಿಂತಲೂ ಪ್ರಾಣಾಧಿಕನಾಗಿದ್ದಾನೆ! ಆದ ಕಾರಣ ನಾನಿವನ ಲಗ್ನ ಮಾಡಿಸುವುದು ಅತ್ಯವಶ್ಯವಾಗಿದೆ. ಇವನಿಗೆ ರುಕ್ಮಿಣಿಯೇ ವಧುವಾಗಿದ್ದಾಳೆ. ರುಗ್ಮಿ, ಸಾಲ್ವ, ಪೌಂಡ್ರಕ, ಮುಂತಾದ ನೀವುಗಳು (ರಾಜರುಗಳು) ಶೈವಾಗಮದಲ್ಲಿ ನನ್ನ ಶಿಷ್ಯರಾಗಿದ್ದೀರಿ. ಆದ್ದರಿಂದ ಎಲ್ಲೆ ನನ್ನ ಪ್ರಿಯ ಶಿಷ್ಯರಾದ ರಾಜರುಗಳಿರಾ! ನೀವೆಲ್ಲರೂ ನಿಮ್ಮ ಗುರುವಾದ ನನ್ನೀ ಆಶೆಯನ್ನು ಪೂರೈಸಿರಿ."

ಇಂತು ಕಳಕಳಿಯಿಂದ ಮಾತನಾಡಿದ ಮಾಗಧನ ವಚನವನ್ನಾಲಿಸಿ ಸಾಲ್ವನು ಹೀಗೆ ಹೇಳಿದನು – "ಹೇ ಚಕ್ರೇಶ್ವರ! ಈಗ ರುಗ್ಮಿಯ ಅನುಮತಿಯಿಂದ ಸ್ವಯಂವರವನ್ನು ನಿಲ್ಲಿಸಲಾಗಿದೆ. (ತನಗೆ ಅನುರೂಪನೆಂದರಿತು ಕನ್ಯೆಯೇ ಪತಿಯನ್ನು ಅಂಗೀಕರಿಸುವುದಕ್ಕೆ 'ಸ್ವಯಂವರ'ವೆಂದು ಹೆಸರು) ಈಗ ರುಗ್ಮಿಯು ತನ್ನ ತಂಗಿಯನ್ನು ಚೇದಿರಾಜನಾದ ಶಿಶುಪಾಲನಿಗೆ ವಿವಾಹ ಮಾಡಿಕೊಡುವನು. ರುಗ್ಮಿಯು ಈ ವಿವಾಹಕ್ಕೆ ಪ್ರಯತ್ನಿಸಿದರೆ ವೃದ್ಧನೂ, ಅಸಮರ್ಥನೂ ಆದ ಭೀಷ್ಮಕರಾಜನು ರುಗ್ಮಿಯ ಅಭಿಪ್ರಾಯಕ್ಕೆ ವಿರುದ್ಧವಾಗಿ ವರ್ತಿಸಲಾರ. ಒಂದು ವೇಳೆ ಶಿಶುಪಾಲನಿಗೆ ರುಕ್ಮಿಣಿಯನ್ನಿತ್ತು ವಿವಾಹ ವಿಚಾರವರಿತು ಕೃಷ್ಣನೇನಾದರೂ ರುಕ್ಮಿಣಿಯನ್ನು ಅಪಹರಿಸಿಕೊಂಡು ಹೋದರೇನು ಮಾಡುವುದೆಂದು ಚಿಂತಿಸಬೇಡ. ಅದಕ್ಕೂ ನಾನೊಂದು ಉಪಾಯವನ್ನು ಹೇಳುವೆನು. ನನ್ನ ಮಾತನ್ನು ಕೇಳಿರಿ – ಕೃಷ್ಣನು ಬಂದು ನಮ್ಮನ್ನು ಜಯಿಸಿ ರುಕ್ಮಿಣಿಯನ್ನು ಅಪಹರಿಸಿಕೊಂಡು ಹೋಗುವ ಮೊದಲೇ ನಾವು ಕೃಷ್ಣನೇ ಇಲ್ಲದಂತೆ ಮಾಡುವುದು ನಮಗೆ ಶುಭಕರವಲ್ಲವೇ? ಕೃಷ್ಣನೇ ಇಲ್ಲದಂತೆ ಮಾಡುವುದೆಂತೆಂದು ಪ್ರಶ್ನಿಸುವಿರಾ? ಕೇಳಿ – ದೈವಯೋಗದಿಂದ ಗರ್ಗಾಚಾರ್ಯರೇ ಆ ಕಾರ್ಯಕ್ಕೆ ನಮಗೆ ಅನುಕೂಲ ಮಾಡಿಬಿಟ್ಟಿದ್ದಾರೆ" ಇಂತು ನಿರೂಪಿಸಿ ಸಾಲ್ವನು ಆ ಕಥೆಯನ್ನು ನಿರೂಪಿಸಹತ್ತಿದನು. "ಪ್ರಭು! ಜರಾಸಂಧ ಚಕ್ರವರ್ತಿಯೇ! ಕೃಷ್ಣನಿಲ್ಲದಂತೆ ಮಾಡುವ ಉಪಾಯವನ್ನು ಹೇಳುವೆನು. ಆಲಿಸು – ಒಂದು ದಿನ ಗರ್ಗಾಚಾರ್ಯರ ಹೆಂಡತಿಯ ತಮ್ಮನು ಮತ್ತು ಕೃಷ್ಣ ಮತ್ತು ಯಾದವರ ಮುಂದೆ ಗರ್ಗಾಚಾರ್ಯರು ನಪುಂಸಕನೆಂದು ನಿಂದಿಸಿದನು. ಆಗ ಕೃಷ್ಣನಿಂದ ಪ್ರೇರಿತರಾದ ಯಾದವರು ಮತ್ತು ಕೃಷ್ಣನೂ ಸಹ ಗರ್ಗಾಚಾರ್ಯರನ್ನು ನೋಡಿ ಅಪಹಾಸ್ಯ ಮಾಡಿ ನಕ್ಕರು. ಅದರಿಂದ ಅಪಮಾನಿತರಾದ ಗರ್ಗಾಚಾರ್ಯರು ಅವರೆಲ್ಲರ ಮೇಲೆ ಕುಪಿತರಾಗಿ ಇದಕ್ಕೆ ಪ್ರತೀಕಾರ ಮಾಡುವುದಾಗಿ ಆರ್ಭಟಿಸುತ್ತಾ "ಯಾದವರನ್ನು ನಾಶಪಡಿಸುವ ಮತ್ತು ಜಗತ್ತು ಕೃಷ್ಣರಹಿತರಾಗುವಂತೆ ಮಾಡುವ, ಅಂದರೆ ಕೃಷ್ಣನೂ ಇಲ್ಲದಂತೆ ಮಾಡಲು ಸಮರ್ಥನಾದ

ಪುತ್ರನ್ನು ನಾನು ಶೀಘ್ರವಾಗಿ ಪಡೆದು ನಿಮ್ಮೆಲ್ಲರನ್ನೂ ನಾಶಪಡಿಸುತ್ತೇನೆ" ಎಂದು ಘೋರ ಪ್ರತಿಜ್ಞೆ ಮಾಡಿದರು. ಈ ಕೃಷ್ಣನ ಆಶ್ರಯದಿಂದ ಕೊಬ್ಬಿದ ಯಾದವರು ತಮಗೆ ಅಪಮಾನ ಮಾಡಿದರಲ್ಲ ಎಂದು ಕಡುನೊಂದು ಅರಣ್ಯಕ್ಕೆ ತೆರಳಿದರು. ತಮ್ಮ ಮನೋರಥವನ್ನು ಯಶಸ್ವಿಗೊಳಿಸಲು ಗರ್ಗಾಚಾರ್ಯರು ಲೋಹಸಂಬಂಧಿಯಾದ ಚೂರ್ಣವನ್ನು ಭಕ್ಷಿಸುತ್ತಾ, ಒಂದು ವರ್ಷದಲ್ಲೇ ರುದ್ರದೇವರನ್ನು ತಪಸ್ಸಿನಿಂದ ಮೆಚ್ಚಿಸಿ ಒಲಿಸಿಕೊಂಡು ಕೃಷ್ಣನಿಲ್ಲದಂತೆ ಮಾಡುವ ಪುತ್ರನನ್ನು ಹೊಂದುವ ವರವನ್ನು ರುದ್ರದೇವರಿಂದ ಪಡೆದರು.

ಗರ್ಗಾಚಾರ್ಯರು ವಿಷ್ಣುಭಕ್ತರು, ಅಂಥವರು ಕೃಷ್ಣವಿರೋಧಿಯಾದ ಕಾರ್ಯವನ್ನು ಹೇಗೆ ಮಾಡಿದರು ಎಂಬ ಸಂಶಯ ಬರುವುದು ಸಹಜವಾಗಿದೆ. ಅದನ್ನು ಆಚಾರ್ಯ ಶ್ರೀ ಮಧ್ವರು (ನಿರ್ಣಯಾಚಾರ್ಯರು) ಹೀಗೆ ಪರಿಹರಿಸಿದ್ದಾರೆ. ಗರ್ಗಾಚಾರ್ಯರು ವಿಷ್ಣುಪಾರಮ್ಯವನ್ನು ನಂಬಿ ಶುದ್ಧವೈಷ್ಣವರಾಗಿದ್ದರೂ, ವಿಷ್ಣುಭಕ್ತರಾಗಿದ್ದರೂ ಕ್ರೂರಿಗಳಾದ ದೈತ್ಯರಿಂದ ಆವಿಷ್ಟರಾಗಿದ್ದುದರಿಂದ ಇಂತು ಆಚರಿಸಿದರು. ತಮ್ಮ ನೈಷ್ಠಿಕ ಬ್ರಹ್ಮಚರ್ಯವನ್ನು ತ್ಯಜಿಸಿದರು. ಆಗ ಕ್ರೂರಳಾದ ವೈಶ್ಯಾಂಗನೆ (ಗಣಿಕೆ)ಯೊಬ್ಬಳು, ಅಥವಾ ಕ್ರೂರ ಅಸುರಾವೇಶಯುಕ್ತಳಾದ ಅಪ್ಸರಾ ಸ್ತ್ರೀಯೊಬ್ಬಳು ಅತ್ಯಂತ ಬಲವಂತನಾದ ಮಗನನ್ನು ಪಡೆಯಲಾಶಿಸಿ, ಗೋಪಿಕಾಸ್ತ್ರೀಯರ ಮಧ್ಯೆ ಪ್ರವೇಶಿಸಿ ಗರ್ಗಾಚಾರ್ಯರನ್ನು ಹೊಂದಿದಳು.

ಆ ಗಣಿಕಾಸ್ತ್ರೀಯು ಗೋಪಿಕಾಸ್ತ್ರೀಯರ ಮಧ್ಯೆ ಸೇರಿ ಬರಲು ಕಾರಣವನ್ನು ಹೀಗೆ ನಿರೂಪಿಸಿದ್ದಾರೆ - "ಗರ್ಗಾ-ಚಾರ್ಯರು ಕೃಷ್ಣನಿಲ್ಲದಂತೆ ಮಾಡುವ ಪುತ್ರನನ್ನು ಪಡೆಯುವಂತೆ ರುದ್ರದೇವರಿಂದ ವರವನ್ನು ಗಳಿಸಿರುವುದನ್ನು ತಿಳಿದ, ಪುತ್ರನಿಲ್ಲದ ಮ್ಲೇಂಛ ರಾಜನೊಬ್ಬನು ಗಣಿಕೆಯನ್ನು, ಅಥವಾ ಅಸುರಾವಿಷ್ಟಳಾದ ಅಪ್ಸರೆಯನ್ನು ಪ್ರೇರೇಪಿಸಿ ಗೋಪಿಯರ ಮಧ್ಯೆ ಇರುವಂತೆ ಮಾಡಿ "ನೀನು ಗರ್ಗಾಚಾರ್ಯರ ಮನಸ್ಸನ್ನು ಒಲಿಸಿಕೊಂಡು ಅವರಿಂದ ಮಗನನ್ನು ಪಡೆದು ನನಗೆ ಕೊಡು" ಎಂದು ಪ್ರಾರ್ಥಿಸಿದ್ದನೆಂದು ತಿಳಿಯಬೇಕು. ಅಂದರೆ ನೀವು ಗರ್ಗಾಚಾರ್ಯರನ್ನು ಒಲಿಸಿಕೊಳ್ಳಲು ಬರಬೇಕೆಂದು ಗೋಪಿಕಾಸ್ತ್ರೀಯರಲ್ಲಿ (ಅವರಲ್ಲಿ ಪ್ರವಿಷ್ಟಳಾದ ಅಪ್ಸರೆಯನ್ನು ಅಥವಾ ಗಣಿಕೆಯನ್ನು) ಪ್ರಾರ್ಥಿಸಿ ಯವನರಾಜನು ಗೋಪಿಕಾಸ್ತ್ರೀಯರ (ಅಪ್ಸರೆಯ) ಮೂಲಕ ಗರ್ಗಾಚಾರ್ಯರನ್ನು ಪೂಜಿಸಿದನು. ಅಸುರಾವಿಷ್ಟ ಅಪ್ಸರ ಸ್ತ್ರೀಯೂ ಗರ್ಗರನ್ನು ಪೂಜಿಸಲು ಗೋಪಿಕಾಸ್ತ್ರೀಯರ ಮಧ್ಯದಲ್ಲಿ ಪ್ರವಿಷ್ಟಳಾದಳು - ಹೀಗೆ ಅವರು ಗರ್ಗಾಚಾರ್ಯರನ್ನು ಪೂಜಿಸಿ ಮನೋರಥವನ್ನು ಪಡೆದರೆಂದು ತಿಳಿಯಬೇಕು. ಅಸ್ತು.

ಸಾಲ್ವರಾಜನು ಮುಂದುವರೆದು ಮಾಗಧನನ್ನು ಕುರಿತು ಇಂತೆಂದನು - "ಕ್ರೋಧಾಭಿಮನ್ಯನಾದ ಅಸುರನಿಂದ ಮೋಹಿತರಾದ ಗರ್ಗಾಚಾರ್ಯರು ಅಪ್ಸರ ಸ್ತ್ರೀಯಲ್ಲಿ ಪುತ್ರನನ್ನು ಪಡೆದು ಯವನರಾಜನಿಗೆ ನೀಡಿದರು. ಹೇ ರಾಜನ್! ರುದ್ರದೇವರಲ್ಲಿ ವರಪಡೆದು, ವೈರಿಯಾದ ಕೃಷ್ಣನಿಗೆ ಅಸುರಾವಿಷ್ಟರೂ, ಯಾದವರ ಪುರೋಹಿತರೂ ಆದ ಗರ್ಗಾಚಾರ್ಯರೇ ಪ್ರತಿಕೂಲರಾಗಿದ್ದು ಕೃಷ್ಣನಾಶಕ ಕಾರ್ಯವನ್ನೆಸಗಿದ್ದು ಅಚ್ಚರಿಯೇನಲ್ಲ! ನೈಷ್ಠಿಕ ಬ್ರಹ್ಮಚರ್ಯಾಶ್ರಮದಿಂದ ಭ್ರಷ್ಟರಾದ ಗರ್ಗಾಚಾರ್ಯರು ಕೃಷ್ಣನ ಪ್ರತೀಕಾರಕ್ಕಾಗಿ ತಾವೆಸಗಿದ ಕುತ್ಸಿತಕಾರ್ಯಕ್ಕಾಗಿ ಪಶ್ಚಾತ್ತಾಪಪಟ್ಟು, ತಮಗೇಕೆ ಇಂತಹ ದುರ್ಬುದ್ಧಿಬಂತೆಂದು ತಮ್ಮ ಬುದ್ಧಿಯನ್ನು ನಿಂದಿಸಿಕೊಂಡು ಕೃಷ್ಣನಿಗೆ ಶರಣು ಹೋಗಿ 'ಮಹಾಪಾಪಿಯಾದ ನನ್ನನ್ನು ರಕ್ಷಿಸು' ಎಂದು ಪ್ರಾರ್ಥಿಸಿದರು. ಮತ್ತು ವಿಷ್ಣು (ಕೃಷ್ಣ)ವಿನ ಆಜ್ಞೆಯಂತೆ ತಾವು ಮಾಡಿದ ಪಾಪಪರಿಹಾರಕ್ಕಾಗಿ ವಿಷ್ಣು-ಸಂಬಂಧಿಯಾದ ತಪಸ್ಸನ್ನಾಚರಿಸಿದರು."

ಹೀಗೆ ಹೇಳಿದ ಸಾಲ್ವನು ಶಿವಾರ್ಚನೆಯನ್ನು ಬಿಟ್ಟು ಗರ್ಗರನ್ನು ನಿಂದಿಸಿ, ದಾನವರನ್ನು ಪ್ರಶಂಸಿಸುತ್ತಾ ಮತ್ತೆ ಹೇಳಲಾರಂಭಿಸಿದನು - "ಗರ್ಗಾಚಾರ್ಯರು ಶಿವಾರ್ಚನೆ ಮಾಡಿದರೇನೋ ನಿಜ. ಆದರೆ ಅದನ್ನು ಸರ್ವದಾ ಆಚರಿಸುವ ಭಾಗ್ಯ ಅವರಿಗೆಲ್ಲಿ ಬರಬೇಕು! ಶ್ರೀ ರುದ್ರದೇವರನ್ನು ಯಾವಾಗಲೂ ನಿಷ್ಠೆಯಿಂದ ಪೂಜಿಸುವ ಭಾಗ್ಯವಂತರೆಂದರೆ ನಿಮ್ಮಂಥ

ದಾನವರೇ ಸರಿ! ಆ ಭಾಗ್ಯ ದಾನವರಿಗೆ ಮಾತ್ರ ಲಭ್ಯ! ಇರಲಿ. ಗರ್ಗಾಚಾರ್ಯರಿಗೆ ಕೃಷ್ಣನನ್ನು ಸಂಹರಿಸಲು ಶಕ್ತನಾದ ಕಾಲ ಎಂಬ ಹೆಸರಿನ ಮಗನು ಜನಿಸಿದನು. ಕಾಲವನ್ನು ನಿರೀಕ್ಷಿಸುತ್ತಲಿದ್ದುದರಿಂದ ಕಾಲನೆಂಬ ಹೆಸರಿನಿಂದ ಪ್ರಸಿದ್ಧನಾದ ಅವನಿಗೆ ಮ್ಲೇಂಛರಾಜನು, ಅವನು ದೊಡ್ಡವನಾದ ಮೇಲೆ ತನ್ನ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದನು. ಈ ಕಾಲಯವನನು ಸರ್ವದಾ ಶ್ರೇಷ್ಠವಾದ ಸೈನ್ಯಯುಕ್ತನಾಗಿ ಸದಾ ಅತಿಬಲೋದ್ಧತನಾಗಿದ್ದಾನೆ. ಆದ್ದರಿಂದ ಪ್ರಭುಗಳೇ! ನೀವು ಆಜ್ಞಾಪಿಸಿದಲ್ಲಿ ನಾನು ಕಾಲಯವನನ ಬಳಿಗೆ ಹೋಗಿ ನಿಮ್ಮ ಅಪ್ಪಣೆಯನ್ನು ತಿಳಿಸಿ, ಅವನನ್ನು ಕರೆತಂದು ಭೂಲೋಕದಲ್ಲಿ ಕೃಷ್ಣನಿಲ್ಲದಂತೆ ಮಾಡೋಣ, ಮತ್ತು ನಿಶ್ಚಿಂತರಾಗಿ ನಾವು ಧರಣಿಯಲ್ಲಿ ಕ್ರೀಡಿಸೋಣ. ಅನಂತರ ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಟ್ಟು ಮದುವೆ ಮಾಡಿಸೋಣ. ದೇವಪಕ್ಷಪಾತಿಗಳನ್ನೆಲ್ಲಾ ಧ್ವಂಸ ಮಾಡಿ ಸರ್ವದಾ ಸಂತೋಷದಿಂದ ಮನಬಂದಂತೆ ವಿಹರಿಸುತ್ತಿರೋಣ".

ಸಾಲ್ವನ ಮಾತನ್ನಾಲಿಸಿ ಜರಾಸಂಧನು ಅತಿದುಃಖಿತನಾದನು. ಮತ್ತು ಕಿರೀಟದಿಂದ ಶೋಭಿಸುವ ತನ್ನ ತಲೆಯನ್ನು ತಗ್ಗಿಸಿ ನಿಂತನು. ತರುವಾಯ ಕೈಕೈ ಹಿಸುಕುತ್ತಾ ತನ್ನ ಭುಜಗಳನ್ನು ನೋಡಿಕೊಂಡು ವ್ಯಾಕುಲಮನದಿಂದ "ಸಾಲ್ವರಾಜ! ಈ ಜಗತ್ತು ನನ್ನ ಭುಜಬಲದ ಆಶ್ರಯದಿಂದ ಜೀವಿಸುತ್ತಿದೆ. ಇಂತಹ ನಾನು ನನ್ನ ಕಾರ್ಯಸಾಧನೆಗೆ ಬೇರೊಬ್ಬರನ್ನು ಹೇಗೆ ಯಾಚಿಸಲಿ? ನನ್ನ ಭುಜಬಲದ ಆಶ್ರಯದಿಂದ ಸಕಲ ರಾಷ್ಟ್ರಗಳ ಯಾವ ರಾಜಾಧಿರಾಜರು ದುರ್ಗಮವಾದ ಕಾರ್ಯಗಳನ್ನೆಲ್ಲಾ ಸುಲಭವಾಗಿ ಹೊಂದುತ್ತಿದ್ದರೋ ಅಂತಹ ನಾನು ಕಾಲಯವನನ ಸಹಾಯವನ್ನು ಕೋರಬೇಕೆ? ರುದ್ರದೇವರ ಪಾದಾಶ್ರಯದಿಂದ ವಿರಾಜಿಸುವ ನಾನು ಯಾರನ್ನೂ ಎಂದೂ ಯಾಚಿಸಿದವನಲ್ಲ! ಈಗ ಹೇಗೆ ಯಾಚಿಸಲಿ?" ಎಂದನು. ಸಾಲ್ವನಾಗ "ಮಹಾಪ್ರಭು! ಚಕ್ರವರ್ತಿಗಳಾದ, ಸರ್ವಶಕ್ತಿಸಂಪನ್ನರಾದ, ರುದ್ರದೇವರ ಪರಮಭಕ್ತರಾದ ನೀವೇ ಹೀಗೆ ಮೋಹಗೊಂಡರೆ, ನಿಮ್ಮ ಅನುಗ್ರಹದಿಂದ ಜೀವಿಸುವ ನಮ್ಮ ಪಾಡೇನು? ಪ್ರಪಂಚದಲ್ಲಿ ರಾಜರು ತಮ್ಮ ಶಿಷ್ಯರಿಂದ (ಸೇವಕವರ್ಗದವರಿಂದ) ಕಾರ್ಯ ಮಾಡಿಸುವರು. ತಮ್ಮ ಆಜ್ಞಾಧಾರಕರು ಮಾಡಿದ್ದು ತಾವೇ ಮಾಡಿದಂತಲ್ಲವೇ? ಅದು ನಿಮ್ಮ ಆಜ್ಞೆಯಂತೆ ನೆರವೇರುವುದರಿಂದ ಅದು ಮತ್ತೊಬ್ಬರು ಮಾಡಿದಂತೆ ಹೇಗಾದೀತು? ನಿಮ್ಮ ಬಲಾಶ್ರಯದಿಂದಲೇ ನಾವು ಪ್ರವರ್ತಿಸುತ್ತೇವೆ. ಕೊಡಲಿಯನ್ನು ಹಿಡಿದು ಒಬ್ಬನು ತನ್ನ ಕೆಲಸವನ್ನು ಪೂರೈಸುವನು. ಅಂದ ಮಾತ್ರಕ್ಕೆ ಅವನು ಅಶಕ್ತನೆಂದು ಹೇಳಲಾದೀತೇ? ಆ ಕಾಲಯವನನೂ ಕೊಡಲಿಯಂತೆ. ನಿಮ್ಮ ಬಲವಿಲ್ಲದೆ ಅವನು ಏನು ಮಾಡಲೂ ಶಕ್ತನಾಗಲಾರ! ಕಾಲಯವನನು ಕೃಷ್ಣನೊಬ್ಬನನ್ನು ನಾಶಪಡಿಸಲು ಪ್ರತ್ಯೇಕವಾಗಿ ವರವನ್ನು ಪಡೆದು ಅದಕ್ಕೆ ಸಮರ್ಥನಾಗಿದ್ದಾನೆ. ನಿಜ, ಆದರೆ ಕೃಷ್ಣನನ್ನು ಬಿಟ್ಟು ಉಳಿದ ಸಕಲ ಶತ್ರುಗಳಿಂದ ತಾನು ಅಪಾಯವಿಲ್ಲದೆ ಜೀವಿಸಲು ನಿಮ್ಮ ಅನುಗ್ರಹವು ಅವನಿಗೆ ಬೇಕೇ ಬೇಕು. ನಿಮ್ಮ ರಕ್ಷಣೆ ಅವನಿಗೆ ಮುಖ್ಯ. ಆ ರಕ್ಷಣೆ ನೀಡುವ ಪ್ರಭು ನೀವೊಬ್ಬರೇ! ಏಕೆಂದರೆ ಜಗತ್ತಿನಲ್ಲಿ ಸರ್ವರಿಂದ ಅಜೇಯತ್ವವರವನ್ನು ಶಿವನಿಂದ ನೀವೊಬ್ಬರೇ ಪಡೆದಿದ್ದೀರಿ. ಕಾಲಯವನನು ಕೃಷ್ಣನನ್ನು ಸಂಹರಿಸಲು ಮಾತ್ರ ವರ ಪಡೆದಿದ್ದಾನೆ. ಆದ್ದರಿಂದ ನಿಮ್ಮ ಸೇವಕನಾದ ಕಾಲಯವನನಿಂದ ಈ ಕಾರ್ಯವನ್ನು ಮಾಡಿಸುವುದು ಅಂದರೆ ನೀವೇ ಮಾಡಿದಂತೆ. ಇದರಲ್ಲಿ ಸಂದೇಹವಿಲ್ಲ" ಎಂದು ಹೇಳಿದರು.

ಹೀಗೆ ಸಾಲ್ವನು ಹೇಳಿದರೂ ಜರಾಸಂಧನು ಇನ್ನೂ ಅತೃಪ್ತನಾಗಿ ಚಿಂತಾಕ್ರಾಂತನಾಗಿರಲು ಸಾಲ್ವನು ಅವನನ್ನು ಸಾಂತ್ವನಗೊಳಿಸಿ ಜರಾಸಂಧನ ಅಪ್ಪಣೆ ಪಡೆದು "ಸೌಭ" ಎಂಬ ತನ್ನ ವಿಮಾನವನ್ನೇರಿ ಕಾಲಯವನನ ಬಳಿಗೆ ತೆರಳಿದನು.

ಸಾಲ್ವ ರಾಜನು ಕಾಲಯವನನ್ನು ಕಂಡು ಅವನಿಗೆ ಸಕಲ ವೃತ್ತಾಂತವನ್ನೂ, ಮಗಧಾಧಿಪತಿ ಜರಾಸಂಧನ ಆಣತಿಯನ್ನೂ ಅರುಹಿದನು. ಆಗ ಕಾಲಯವನನು ಜರಾಸಂಧನ ಕಡೆಯಿಂದ ಬಂದಿರುವ ಸಾಲ್ವನನ್ನು ಚೆನ್ನಾಗಿ ಗೌರವಿಸಿದನು.

ಭಗವದ್ವೇಷಿಗಳಾದವರಿಗೆಲ್ಲಾ (ಕೃಷ್ಣದ್ವೇಷಿಗಳಿಗೆ) ಜರಾಸಂಧನೇ ದೈವತ ಅಂದರೆ ಗುರುವೆಂದು ತಿಳಿದು ಜರಾಸಂಧನಿರುವ ದಿಕ್ಕಿಗೆ ನಮಸ್ಕರಿಸಿ, ಜರಾಸಂಧನ ಆತ್ಮೀಯನಾದ ಸಾಲ್ವನನ್ನು ಪೂಜಿಸಿದನು. ಕೃಷ್ಣನನ್ನು ನಾಶಪಡಿಸಬೇಕೆಂಬ ಮಗಧ ಚಕ್ರವರ್ತಿಯ ಸಂದೇಶವನ್ನು ಕೇಳಿ, ತಕ್ಷಣವೇ ತನ್ನ ಮೂರು ಅಕ್ಷೋಹಿಣಿ ಸಂಖ್ಯೆಯುಳ್ಳ ಸೈನ್ಯದೊಡನೆ ಕಾಲಯವನನು ಕೃಷ್ಣನ ಮೇಲೆ ಯುದ್ಧಕ್ಕೆ ಹೊರಟನು. ಕಾಲಯವನನ ಅಶ್ವಗಳ ಮೂತ್ರ ಮತ್ತು ಲದ್ದಿಗಳಿಂದ ಅತಿ ರಭಸದಿಂದ ಹರಿಯುವ "ಶಕೃತ್" ಎಂಬ ಹೆಸರಿನಿಂದ ಪ್ರಸಿದ್ಧವಾದ ಒಂದು ನದಿಯೇ ಉಂಟಾಯಿತು! ಅದು ಕಲಿಯುಗದಲ್ಲಿ ಬಹುವೇಗವಾಗಿ ಪ್ರವಹಿಸುವ ನದಿಯು. ಆ ನದಿಯ ಉಬ್ಬರದಿಂದ ದೇಶ ನಾಶವಾಗುತ್ತಿರುವುದನ್ನು ಕಂಡು ಶ್ರೀವಾಯುದೇವರು ಶಕೃತ್ ಎಂಬ ನದಿಯು ಹರಿಯುವ ದೇಶದಿಂದ ಭಿನ್ನವಾದ ಬೇರೆ ಬೇರೆ ದೇಶಗಳಲ್ಲಾದ ಅಶ್ವಗಳ ಮೂತ್ರಗಳನ್ನು ಒಣಗಿಸಿಬಿಟ್ಟರು.

ಇತ್ತ ಗರುಡ-ಬಲರಾಮರಿಂದೊಡಗೂಡಿದ ಶ್ರೀಕೃಷ್ಣನು, ಸರ್ವದಾ ಅತ್ಯಂತ ಪರಿಪೂರ್ಣಜ್ಞಾನವುಳ್ಳವನಾದರೂ, ಜನನರಹಿತನಾಗಿದ್ದರೂ ತನ್ನ ಕ್ರೀಡಾವಿಲಾಸವನ್ನು ತೋರುವ ಅಭಿಲಾಷೆಯಿಂದ ಗರುಡ ಬಲರಾಮನೊಡನೆ ಇಂತು ಆಲೋಚಿಸಿದನು.

"ಈ ಕಾಲಯವನನು ನಮ್ಮೊಡನೆ ಯುದ್ಧ ಮಾಡಲು ನಮ್ಮ ಸನಿಹಕ್ಕೆ ಬಂದಿದ್ದಾನೆ. ಇವನು ಯುದ್ಧ ಪ್ರಸಕ್ತನಾದಾಗ ಜರಾಸಂಧನೂ ಯುದ್ಧಕಣಕ್ಕಿಳಿಯುವುದು ನಿಶ್ಚಿತ. ನಮ್ಮಿಂದ ಪರಾಜಿತನಾದ ಕೋಪದಿಂದ ಅವನು ಯಾದವರನ್ನು ಪೀಡಿಸುತ್ತಾನೆ, ಸಂಹರಿಸುತ್ತಾನೆ. ನಮ್ಮನ್ನು ಸಂಹರಿಸಲು ಅಶಕ್ತನಾದ ಅವನು ಯಾದವರ ಮೇಲೆ ಸೇಡು ತೀರಿಸಿಕೊಳ್ಳುತ್ತಾನೆ. ಇದು ನಿಜ. ಅದು ಸರಿ, ಜರಾಸಂಧನು ಹಿಂದೆ ಅನೇಕ ಬಾರಿ ನಮ್ಮ ಮೇಲೆ ಯುದ್ಧ ಮಾಡಿದ್ದಾನೆ. ಆದರೂ ಆಗ ಅವನು ಯಾದವರನ್ನು ಸಂಹರಿಸಲಿಲ್ಲ. ಈಗೇಕೆ ಸಂಹರಿಸುವವನು? ಎಂದರೆ ಅದಕ್ಕೆ ಕಾರಣವಿಲ್ಲದಿಲ್ಲ. ಹಿಂದೆ ಜರಾಸಂಧನು ಯುದ್ಧಮಾಡಿ ಪರಾಜಿತನಾದರೂ, ಮುಂದೆ ತಾನು ಯುದ್ಧದಲ್ಲಿ ಜಯಿಸುವೆನೆಂಬ ನಂಬಿಕೆಯಿಂದಲೂ, ತನ್ನ ಅಳಿಯನಾದ ಕಂಸನಪುತ್ರರು ಅಂದರೆ ತನ್ನ ದೌಹಿತ್ರರು ಈ ರಾಜ್ಯಕ್ಕೆ ಅರಸರಾಗುತ್ತಾರೆ. ತನ್ನ ದೌಹಿತ್ರರ ಪ್ರಜೆಗಳಾದ ಯಾದವರನ್ನು ಕೊಲ್ಲಬಾರದೆಂಬ ಭಾವನೆಯಿಂದ ಯಾದವರನ್ನು ಆಗ ಸಂಹರಿಸಲಿಲ್ಲ. ಆದರೆ ಈಗ ಅವನು ಜಯದ ಆಶೆಯಿಲ್ಲದೆ ನಿರಾಶನಾಗಿದ್ದಾನೆ. ನಮ್ಮಷ್ಟು ಸಾಮರ್ಥ್ಯವಿಲ್ಲದವನಾಗಿದ್ದಾನೆ. ಅಂತೆಯೇ ನಮ್ಮ ಮೇಲಿನ ಪ್ರತಿಹಿಂಸೆಯ ದಳ್ಳುರಿಯಲ್ಲಿ ಪ್ರಜ್ವಲಿಸುತ್ತಿರುವ ಅವನು ಛಲದಿಂದ ಯಾದವರನ್ನು ಪೀಡಿಸುತ್ತಾನಾದ್ದರಿಂದ ಅವನ ಪೀಡೆಯು ಯಾದವರಿಗಿಲ್ಲದಂತೆ ಮಾಡಲು, ಯಾದವರನ್ನು ಸಂರಕ್ಷಿಸಲು ಸಮುದ್ರಮಧ್ಯದಲ್ಲಿ ವಿಸ್ತಾರವಾದ ರಾಜಧಾನಿಯೊಂದನ್ನು ನಾವು ನಿರ್ಮಿಸಬೇಕು. ನೂತನವಾಗಿ ನಿರ್ಮಿಸುವ ಪಟ್ಟಣದಲ್ಲಿ ಸಕಲ ಯಾದವರನ್ನು ಸಂಸ್ಥಾಪಿಸುವುದು ಅತಿ ಮನೋಜ್ಞ ವಿಚಾರವಾಗಿದೆ" ಇಂತು ಯೋಚಿಸಿದ ಶ್ರೀಕೃಷ್ಣ ಪರಮಾತ್ಮನು ದೇವಬಡಗಿಯಾದ (ದೇವಶಿಲ್ಪಿ) ವಿಶ್ವಕರ್ಮನನ್ನು ಸ್ಮರಿಸಿದನು.

ಭುವನನೆಂಬ ದೇವ ಬಡಗಿಯ ಮಗನಾದ ವಿಶ್ವಕರ್ಮನು ಬಂದನು. ಕೃಷ್ಣನು ಅವನಿಗೆ ಪಟ್ಟಣ ನಿರ್ಮಾಣ ವಿಚಾರವನ್ನು ಹೇಳಿ ಸಮುದ್ರಭಾಗವನ್ನು ಜಲರಹಿತವನ್ನಾಗಿ ಮಾಡಿದನು. ಆಗ ವಿಶ್ವಕರ್ಮನು ಶ್ರೀಕೃಷ್ಣನ ಅಪ್ಪಣೆಯಂತೆ ಅಲ್ಲಿ ದ್ವಾರಕಾಪುರವೆಂಬ ರಾಜಧಾನಿಯನ್ನು ನಿರ್ಮಿಸಿದನು. ಜನಾರ್ದನನ ಆಣತಿಯಂತೆ ಸಮುದ್ರವು ದ್ವಾರಕಾಪುರಿಗೆ ಪ್ರಾಕಾರರೂಪವಾಗಿ ವಿರಾಜಿಸಿತು. ದ್ವಾರಕೆಗೆ ಪ್ರಾಕಾರರೂಪವಾದ ಜಲಧಿಯ ಪ್ರದೇಶದಲ್ಲಿ ಹನ್ನೆರಡು ಯೋಜನ ವಿಸ್ತಾರವೂ, ಕ್ಷೀರಸಮುದ್ರದ ಮಧ್ಯದಲ್ಲಿರುವುದೋ ಎಂಬಂತೆ ಕಂಗೊಳಿಸುತ್ತಿರುವುದೂ ಆದ ಅತಿಸುಂದರವೂ ಶ್ರೇಷ್ಠವೂ ಆದ ದ್ವಾರಕಾ ಪಟ್ಟಣವನ್ನು ವಿಶ್ವಕರ್ಮನು ನಿರ್ಮಿಸಿದನು. ಆಗ ವಾಸುದೇವನು ಆ ಲವಣ ಸಮುದ್ರದ (ಉಪ್ಪು) ನೀರನ್ನು ಅಮೃತ ಸದೃಶವನ್ನಾಗಿ ಅಂದರೆ ಸಿಹಿನೀರನ್ನಾಗಿ ಮಾಡಿದನು. ಆಗ ಶ್ರೀವಾಯುದೇವರು ಶ್ರೀಕೃಷ್ಣ ಪರಮಾತ್ಮನಿಗೆ

"ಸುಧರ್ಮಾ" ಎಂಬ ದಿವ್ಯಸಭೆಯನ್ನು ಸಮರ್ಪಿಸಿದರು-ಅಂದರೆ-'ಸುಧರ್ಮಾ' ಎಂಬ ಸಭೆಯು ಇಂದ್ರದೇವರ ಸಭೆಯೆಂದು ವಿಖ್ಯಾತವಾಗಿದೆ. ಅಂತಹ ಸಭೆಯನ್ನು ಸಮಸ್ತ ದೇವತೆಗಳಿಗೂ ಪ್ರಭುಗಳಾದ ಶ್ರೀಪವಮಾನರು ಇಂದ್ರನಿಂದ ಪಡೆದು ತಂದು ಶ್ರೀವಾಸುದೇವನಿಗಾಗಿ ಸಮರ್ಪಿಸಿ, ಶ್ರೀಕೃಷ್ಣನಿಗೆ ಸಕಲ ವಿಧವಾದ ನವನಿಧಿಗಳನ್ನೂ ಅರ್ಪಿಸಿ ಸ್ವಾಮಿಯಾದ ಕೃಷ್ಣನಿಗೆ ನಮಸ್ಕರಿಸಿ ಅಪ್ಪಣೆ ಪಡೆದು ತೆರಳಿದರು.

ವಿಶೇಷ ವಿಚಾರ:- ತಾತ್ಪರ್ಯ ನಿರ್ಣಯದ ಈ ಕಥಾಭಾಗ ಸಂದರ್ಭದಲ್ಲಿ ಒಂದು ವ್ಯಾಖ್ಯಾನದಲ್ಲಿ "ಪಾರ್ಥಿ-ಕಿರ್ಯಯೌ" ಎಂದು ಹಿಡಿದು ವ್ಯಾಖ್ಯಾನ ಮಾಡಿದ್ದಾರೆ. ಅದನ್ನು ಆದರಿಸಬಾರದೆಂದು "ಪದಾರ್ಥದೀಪಿಕಾ" ವ್ಯಾಖ್ಯಾನಕಾರರು ಹೇಳಿ, ಅದು "ಹರಿವಂಶ" ವಾಕ್ಯಕ್ಕೆ ವಿರುದ್ಧವಾಗಿರುವುದರಿಂದ ಅನಾದರಣೀಯವೆಂದೂ ತಿಳಿಸಿ ಶ್ರೀ ಹರಿವಂಶದಲ್ಲಿ ಉಕ್ತವಾಗಿರುವ ವಿಚಾರವನ್ನು ಹೀಗೆ ಉದಾಹರಿಸುತ್ತಾರೆ:-

"ಗಚ್ಛ ಮಾರುತ ದೇವೇಶಮನುಮಾನ್ಯ ಸಹಾಮರೈಃ । ಸಭಾಂ ಸುಧರ್ಮಾಮಾದಾಯ ದೇವೇಭ್ಯಸ್ತಮಿಹಾನಯ॥" ಎಂದೂ ಮತ್ತು ಅಲ್ಲಿಯೇ "ವಾಯುರಾತ್ಮಾಪಿ ಜಗತೋ ಜಗಾಮ ತ್ರಿದಿಶಾಲಯಮ್ । ಸೋನುಮಾನ್ಯ ಸುರಾನ್ ಸರ್ವಾನ್ ಕೃಷ್ಣವಾಕ್ಯಂ ನಿವೇದ್ಯ ಚ । ಸಭಾಂ ಸುಧರ್ಮಾಮಾದಾಯ ಪುನರಾಯಾನ್ಮಹೀತಲಂ । ಸುಧರ್ಮಾಂ ತಾಂ ಸುಧರ್ಮಾಯ ಕೃಷ್ಣಾಯಾಕ್ಲಿಷ್ಟಕಾರಿಣೇ । ದೇವ ದೇವೋ ಸಭಾಂತ್ವಾವಾಯುರಂತರಧೀಯತ ॥" ಇತಿ. ಹೀಗಿರುವುದರಿಂದ ಸುಧರ್ಮಾ ಎಂಬ ಸಭೆಯನ್ನು ಶ್ರೀವಾಯುದೇವರೇ ದೇವಲೋಕದಿಂದ ತಂದು ಶ್ರೀಕೃಷ್ಣನಿಗೆ ಸಮರ್ಪಿಸಿದರೆಂಬುದು ಸಿದ್ಧಿಸುತ್ತದೆ. ಆದುದರಿಂದ "ಪಾರ್ಥಿಕಿಃ ಯಯೌ" ಎಂಬ ವ್ಯಾಖ್ಯಾನವು ಆದರಣೀಯವಲ್ಲವೆಂದು ತಿಳಿಯಬೇಕು.

ಪ್ರಕೃತ ಶ್ರೀವಾಯುದೇವರು ಸುಧರ್ಮಾ ನಾಮ ದೇವಸಭೆಯನ್ನು ಯಾದವ ಶಿರೋಮಣಿಗೆ ಅರ್ಪಿಸಿ ತೆರಳಿದ ನಂತರ ಸಕಲ ಬೃಂದಾರಕರು ತಮ್ಮ ತಮ್ಮಲ್ಲಿದ್ದ ವಿಶೇಷವಾದ ಶ್ರೇಷ್ಠವಸ್ತುಗಳನ್ನು ಶ್ರೀಹರಿಗೆ ಸಮರ್ಪಿಸಿದರು. ಆಗ ಅಚ್ಯುತನು ವೈನತೇಯನನ್ನು ಬಿಟ್ಟು, ತಾನು ಒಂಟಿಯಾಗಿ ಕಾಲಯವನನೊಡನೆ ಯುದ್ಧ ಮಾಡಲು ಸಂಕಲ್ಪಿಸಿದನು. ಪ್ರಭುವಾದ ಕೃಷ್ಣನು ಮಧುರಾಪಟ್ಟಣದಲ್ಲಿರುವ ಸಮಸ್ತ ಯಾದವರೂ ಕ್ಷಣಮಾತ್ರದಲ್ಲಿ ದ್ವಾರಕಾಪುರಿಯಲ್ಲಿರುವಂತೆ ಮಾಡಿ, ತಾನೊಬ್ಬನೇ ತನ್ನ ಬಾಹುಬಲದಿಂದಲೇ ಕಾಲಯವನನೊಡನೆ ಹೋರಾಡಲು ಹೊರಟನು.

ಅನಂತ ಶಕ್ತಿಸಂಪನ್ನನೂ, ಅಜನೂ ಆದ ನಂದನಂದನನು ಬಲಾಢ್ಯನಾದ ಶತ್ರುವು ಯುದ್ಧಕ್ಕೆ ಬಂದಾಗ ಪ್ರಜೆಗಳನ್ನೆಂತು ರಕ್ಷಿಸಬೇಕು. ಹೇಗೆ ನಡೆದುಕೊಳ್ಳಬೇಕೆಂಬುವ ಲೋಕನೀತಿಯನ್ನು ಜನರಿಗೆ ಉಪದೇಶಿಸಲು ತನ್ನವರಾದ ಸಕಲ ಯಾದವರನ್ನೂ ಕ್ರೀಡೆಯಿಂದಲೇ ಸಮುದ್ರ ಮಧ್ಯದಲ್ಲಿರುವ ದ್ವಾರಕಾಪುರಿಯಲ್ಲಿ ವಾಸಮಾಡಿಸಿದನೇ ಹೊರತು ಶತ್ರುವಿನ ಭಯದಿಂದಲ್ಲ. ಕೃಷ್ಣನು ಅಶಕ್ತನಾದ್ದರಿಂದಲೇ ಹೀಗೆ ಮಾಡಿದನೆಂದೇಕೆ ಹೇಳಬಾರದು? ಎಂಬ ಶಂಕೆಯನ್ನು ನಿರ್ಣಯಾಚಾರ್ಯರು ಹೀಗೆ ಪರಿಹರಿಸಿದ್ದಾರೆ - ಅನಾದ್ಯನಂತ ಕಾಲಿಕವಾದ ಅಂದರೆ ಪ್ರಾಗಭಾವರಹಿತವೂ, ನಾಶ ರಹಿತವೂ (ಧ್ವಂಸವಿಲ್ಲದಿರುವಿಕೆ) ಆದ ಕಾಲ ಸಂಬಂಧವಿರುವ ಬಹುಚಿತ್ರವಾದ ಸಮಸ್ತ ಲೋಕಗಳೂ ಯಾವ ಶ್ರೀ ಪರಾತ್ಪರನಾದ ಹರಿಯ ಇಚ್ಛಾ ಮಾತ್ರದಿಂದಲೇ ರಕ್ಷಿತವಾಗುವವೋ ಅಂತಹ ಶ್ರೀಕೃಷ್ಣನಿಗೆ ಯಾದವರ ರಕ್ಷಣೆಯು ಅಸಾಧ್ಯ ಕಾರ್ಯವಾದೀತೇ? ಇಲ್ಲ, ಶ್ರೀಕೃಷ್ಣನಿಗೆ ಅದು ಅಶಕ್ಯವಾದುದಲ್ಲ - ಎಂದು ಭಾವ.

ಹಾಗಾದರೆ ಶ್ರೀಕೃಷ್ಣನೊಬ್ಬನೇ ಸ್ವಬಾಹುಬಲದಿಂದ ಯುದ್ಧ ಮಾಡಲು ಕಾಲಯವನನ ಬಳಿಗೇಕೆ ಹೋದನೆಂದರೆ ವಿವರಿಸುತ್ತಾರೆ. ರುದ್ರದೇವರ ವರದಿಂದ ಮತ್ತನಾಗಿರುವ, ಮಹಾಸೈನ್ಯದಿಂದೊಡಗೂಡಿರುವ ಕಾಲಯವನನು ಒಬ್ಬಂಟಿಗನೂ, ನಿರಾಯುಧನೂ ಆದ ತನ್ನನ್ನು ಯುದ್ಧದಲ್ಲಿ ಜಯಿಸಲು ಅಸಮರ್ಥನೆಂದು ತೋರಿಸಿಕೊಡಲೆಂದೇ ತಾನೊಬ್ಬನೇ ಯುದ್ಧಕ್ಕೆ ತೆರಳಿದನೆಂದು ತಿಳಿಯಬೇಕೆಂದು ತಾತ್ಪರ್ಯ.

ಕೃಷ್ಣನು ತಾನು ಆಯುಧರಹಿತನಾಗಿದ್ದರೂ ಶತ್ರುಗಳನ್ನು ಜಯಿಸಲು ಸಮರ್ಥನಾಗಿದ್ದೇನೆ ಎಂದು ದೃಷ್ಟಾಂತದಿಂದ ತೋರಿಸಲು ಒಂದು ಮಡಿಕೆಯಲ್ಲಿ ಕೃಷ್ಣಸರ್ಪವನ್ನಿಟ್ಟು ಕಾಲಯವನನ ಬಳಿಗೆ ಕಳಿಸಿದನು. ಕಾಲಯವನನು ಗಡಿಗೆಯಲ್ಲಿ ಇರುವೆಗಳನ್ನು ತುಂಬಿ ಇರುವೆಗಳಿಂದ ಮೃತವಾದ ಕೃಷ್ಣಸರ್ಪವಿರುವ ಆ ಮಡಿಕೆಯನ್ನು ಕೃಷ್ಣನಿಗೆ ಕಳುಹಿಸಿ 'ನೀನು ಸಮರ್ಥನಿರಬಹುದು, ಆದರೆ ಸೈನ್ಯಾದಿ ಬಾಹುಲ್ಯವಿರುವ ನಾನು ಇರುವೆಗಳು ಕೃಷ್ಣಸರ್ಪವನ್ನು ಕೊಂದಂತೆ ನಿನ್ನನ್ನು ಜಯಿಸುವೆನು' ಎಂದು ಹೇಳಿ ಕಳಿಸಿದನು. ಆಗ ಶ್ರೀಕೃಷ್ಣನು ಮಂದಹಾಸ ಬೀರಿ 'ನಾನು ಬಲಿಷ್ಠ, ನಾನೊಬ್ಬನೇ ಶತ್ರುಗಳನ್ನು ಸಂಹರಿಸಲು ಸಮರ್ಥನೆಂದು ತೋರಿಸಲು ಕೃಷ್ಣಸರ್ಪವನ್ನು ಕಳುಹಿಸಿದೆ. ನೀನು ಇರುವೆಗಳ ಬಾಹುಳ್ಯದಿಂದ ಅದನ್ನು ನಾಶಪಡಿಸಿ ಸೈನ್ಯಬಾಹುಲ್ಯವಿರುವುದರಿಂದ ಜಯಗಳಿಸುವೆನೆಂದು ದೃಷ್ಟಾಂತದಿಂದ ತೋರಿಸಿರುತ್ತೀಯೆ. ನಮ್ಮಿಬ್ಬರ ಕ್ರಿಯೆಯಲ್ಲಿ ಯಾವುದು ಸತ್ಯವೆಂಬುದನ್ನು ನಾನು ಕೃತಿಯಿಂದಲೇ ತೋರಿಕೊಡುತ್ತೇನೆ' ಎಂದು ಕಾಲಯವನನ ದೂತನ ದ್ವಾರಾ ಹೇಳಿ ಕಳಿಸಿ, ಆ ಕಾಲಯವನ ಸಂಹಾರಕ್ಕಾಗಿ ಹೊರಟನು.

ಪ್ರಭುವಾದ ಶ್ರೀಕೃಷ್ಣನು ಸ್ವಬಾಹುಬಲದಿಂದಲೇ ಕಾಲಯವನನನ್ನು ಜಯಿಸಿ, ಸಮಸ್ತ ಸೈನಿಕರನ್ನೂ ಸಂಹರಿಸಿ, ಕಾಲಯವನನ ಸಕಲ ಗಜತುರಗಾದಿಗಳನ್ನು ದ್ವಾರಕಾನಗರಿಗೆ ಕಳುಹಿಸಿದನು. ಶತ್ರುನಾಶಕನಾದ ಕೇಶವನು ಕಾಲಯವನನು ತನ್ನ ಮೇಲೆ ಪ್ರಯೋಗಿಸಿದ ಮಹಾಸ್ತ್ರ ಶಸ್ತ್ರಗಳನ್ನೂ ಕೂಡಲೇ ತನ್ನ ಹಸ್ತತಲಾಘಾತದಿಂದ ನಿವಾರಿಸಿ ಉತ್ತಮ ರಥದಲ್ಲಿ ಕುಳಿತಿದ್ದ ಕಾಲಯವನನ್ನೂ ಕರಾಘಾತದಿಂದ ಕೆಳಗುರುಳಿಸಿದನು. ಕ್ಷಣಮಾತ್ರದಲ್ಲಿ ಯವನನನ್ನು ವಾಹನ ಹಾಗೂ ಆಯುಧ ರಹಿತನನ್ನಾಗಿ ಮಾಡಿ, ಮೂರ್ಛಿತನಾಗಿದ್ದ ಅವನನ್ನು ಸಂಹರಿಸಬಹುದಾಗಿದ್ದರೂ ದೇವತೆಗಳು ಹಿಂದೆ ಪ್ರಾರ್ಥಿಸಿ, ತನ್ನಿಂದ ವರ ಪಡೆದದ್ದನ್ನು ಸ್ಮರಿಸಿ, ಶ್ರೀಹರಿಯು ಕಾಲಯವನನನ್ನು ಸಂಹರಿಸದೇ ಬಿಟ್ಟುಬಿಟ್ಟನು. ಆ ವರದ ವಿಚಾರವನ್ನೀಗ ನಿರೂಪಿಸುವರು -

ಹಿಂದೆ ದೇವಾಸುರ ಯುದ್ಧಕಾಲದಲ್ಲಿ ದೇವತೆಗಳ ಪರವಾಗಿ ಹೋರಾಡಿದ್ದ ಯುವನಾಶ್ವನ ಮಗನಾದ ಮಾಂಧಾತನ ಪುತ್ರನಾದ ಮುಚುಕುಂದ ರಾಜನು ತಮಗೆ ಮಾಡಿದ ಸಹಾಯಕ್ಕಾಗಿ ವರಬೇಡೆಂದಾಗ ಮುಚುಕುಂದನು 'ನಾನು ಬಹುಕಾಲ ನಿದ್ರೆ ಮಾಡಬೇಕು. ಒಂದು ವೇಳೆ ಯಾರಾದರೂ ನನಗೆ ನಿದ್ರಾಭಂಗ ಮಾಡಿದರೆ ನಾನವರನ್ನು ನೋಡಿದ ಕೂಡಲೇ ಅವರು ಭಸ್ಮವಾಗಬೇಕು - ಇಂತಹ ವರವನ್ನು ದಯಪಾಲಿಸಿರಿ' ಎಂದ ಬೇಡಿದ್ದನು. ದೇವತೆಗಳು ಯುದ್ಧವು ಮುಗಿದ ಮೇಲೆ ಆದರಂತೆ ಅವನಿಗೆ ವರವಿತ್ತು ಎಲ್ಲ ವರ ನೀಡುವವರಿಗೆ ನಿಯಾಮಕನಾದ ಶ್ರೀಹರಿಯನ್ನು ಈ ಮುಚುಕುಂದನು ಅರ್ಥರಹಿತವಾದ ವರವನ್ನು ಬೇಡಿ ನಮ್ಮಿಂದ ವರ ಪಡೆದಿದ್ದಾನೆ. ದೇವ! ಅದು ಸಾರ್ಥಕವಾಗುವಂತೆ ಅಂದರೆ ಮುಂದೆ ಈ ಮುಚುಕುಂದನು ನಿನ್ನ ಶತ್ರುವಾದ ಕಾಲಯವನನನ್ನು ಭಸ್ಮ ಮಾಡುವಂತಾಗಲಿ! ಹೀಗೆ ನೀನು ನಮಗೆ ವರವನ್ನು ಕೊಡು' ಎಂದು ಬೇಡಿದ್ದರು. ಶ್ರೀಹರಿಯು ಅದರಂತೆ ವರವನ್ನು ಕೊಟ್ಟಿದ್ದನು. ಈಗ ಶ್ರೀಕೃಷ್ಣನು ಆ ವರವನ್ನು ಸ್ಮರಿಸಿ, ಅದು ಸಾರ್ಥಕವಾಗುವಂತೆ ಮಾಡಲು ಕಾಲಯವನನನ್ನು ಸಂಹರಿಸದೇ, ಆ ಕಾರ್ಯ ಮುಚುಕುಂದ ರಾಜನಿಂದ ಮಾಡಿಸಲು ನಿಶ್ಚಯಿಸಿ ಯದುನಂದನನು ಮುಚುಕುಂದ ರಾಜನು ಮಲಗಿದ್ದೆಡೆಗೆ ಚಿತ್ತೈಸಿದನು.

ಯುದ್ಧರಂಗದಿಂದ ಶ್ರೀಕೃಷ್ಣನು ಹೊರಟ ಮೇಲೆ ಪ್ರಜ್ಞೆ ತಿಳಿದೆದ್ದ ಕಾಲಯವನನು ತನ್ನನ್ನು ಕೆಳಗುರುಳಿಸಿ ಹೋಗುತ್ತಿರುವ ಕೃಷ್ಣನನ್ನು ನೋಡಿ, ಅವನ ಬೆನ್ನಟ್ಟಿ ಹೋದನು. ಅದನ್ನರಿತ ಕೃಷ್ಣನು ಮುಚುಕುಂದ ರಾಜನು ಪವಡಿಸಿ ನಿದ್ರೆ ಮಾಡುತ್ತಿದ್ದ ಗುಹೆಯನ್ನು ಪ್ರವೇಶಿಸಿ ಅಲ್ಲಿ ಮರೆಯಾಗಿ ನಿಂತನು. ಕ್ರೋಧೋನ್ಮತ್ತನಾಗಿ ಕೃಷ್ಣನ ಬೆನ್ನಟ್ಟಿ ಬಂದ ಕಾಲಯವನನು ಅಲ್ಲೆಲ್ಲಾ ಕೃಷ್ಣನಿಗಾಗಿ ಹುಡುಕಿ, ಒಂದು ಪಾರ್ಶ್ವದಲ್ಲಿ ಮುಸುಗಿಟ್ಟು ಮಲಗಿದ್ದ ಮುಚುಕುಂದ ರಾಜನನ್ನು ಕಂಡು ಅವನೇ ಕೃಷ್ಣನೆಂದು ಭ್ರಮಿಸಿ ಪಾದದಿಂದ ಅವನನ್ನು ಒದೆದನು. ಅದರಿಂದ ಮುಚುಕುಂದನಿಗೆ ನಿದ್ರಾಭಂಗವಾಯಿತು. ತನ್ನ ನಿದ್ರೆಗೆ

ಭಂಗವನ್ನುಂಟುಮಾಡಿದ ಕಾಲಯವನನನ್ನು ರಾಜನು ಸಿಟ್ಟಿನಿಂದ ನೋಡಿದನು. ಮುಚುಕುಂದ ರಾಜನ ದೃಷ್ಟಿ ಯವನನ ಮೇಲೆ ಬಿದ್ದ ತಕ್ಷಣವೇ ಕಾಲಯವನನು ಸುಟ್ಟು ಭಸ್ಮವಾದನು. ದೇವತೆಗಳ ವರವು ಸತ್ಯವಾಗುವಂತೆ ಮಾಡುವುದಾಗಿ ಅವರಿಗೆ ವರವನ್ನು ಕೊಟ್ಟಿದ್ದರಿಂದ ನಾಶರಹಿತನಾದ ಶ್ರೀಹರಿಯು ಮುಚುಕುಂದನ ನೇತ್ರಾಗ್ನಿರೂಪನಾಗಿ ಕಾಲಯವನನನ್ನು ಭಸ್ಮ ಮಾಡಿದನು.

ಯುವನಾಶ್ವನ ಮಗನಾದ, ಮಾಂಧಾತೃವಿನ ಪುತ್ರನಾದ, ಮುಚುಕುಂದ ಮಹಾರಾಜನು ಕಾಲಯವನನನ್ನು ಸಂಹರಿಸಿದ್ದರಿಂದಲೂ, ದೇವತೆಗಳ ಪ್ರಸಾದದಿಂದಲೂ ಅಕ್ಷಯ ಪುಣ್ಯಫಲದಿಂದ ಲಭಿಸುವ ಮೋಕ್ಷವನ್ನು ಪಡೆದನು. "ನ ದೇವತೋಷಣಂ ವೃಥಾ" ದೇವತೆಗಳನ್ನು ಸಂತೋಷಗೊಳಿಸಿದುದು ಎಂದಿಗೂ ವ್ಯರ್ಥವಾಗುವುದಿಲ್ಲವಷ್ಟೆ! ಕಾಲಯವನನು ಭಸ್ಮವಾದ ತರುವಾಯ ಮುಚುಕುಂದ ಮಹಾರಾಜನು ಶ್ರೀಕೃಷ್ಣ ಪರಮಾತ್ಮನನ್ನು ನೋಡಿ ಅತಿಶಯ ಭಕ್ತಿಯಿಂದ ಸ್ತುತಿಸಿ ಶ್ರೀಹರಿಯ ಅಪ್ಪಣೆಯಂತೆ ತಪಸ್ಸನ್ನೆಸಗಿ ಶ್ರೀಹರಿ ಪ್ರಸಾದದಿಂದ ಮೋಕ್ಷವನ್ನು ಪಡೆದನು.

ಅನಂತರ ಸರ್ವೇಶ್ವರನಾದ ಶ್ರೀಕೃಷ್ಣನು ಗುಹೆಯಿಂದ ಹೊರಬಂದು ಸಮಸ್ತರಾಜವೃಂದದಿಂದ ಸಹಿತನಾದ ಜರಾಸಂಧನನ್ನು ತನ್ನ ಬಾಹುಗಳಿಂದಲೇ ಜಯಿಸಿದನು. ಕೃಷ್ಣನ ಹಸ್ತತಲಾಘಾತ, ಮುಷ್ಟಿ ಪ್ರಹಾರಗಳಿಂದ ಮತ್ತು ಕೃಷ್ಣನ ಕರದಿಂದ ಎಸೆಯಲ್ಪಟ್ಟ ವೃಕ್ಷಗಳ ಬಡಿತಗಳಿಂದ ಸಕಲ ಸೈನ್ಯವೂ ಪುಡಿಪುಡಿಯಾಗಿ ಧರೆಗುರುಳಿತು. ಜರಾಸಂಧನೂ ಮೂರ್ಛಾಕ್ರಾಂತನಾಗಿ ನೆಲಕ್ಕೆ ಬಿದ್ದನು.

ಸಾಲ್ವ, ಪೌಂಡ್ರ, ಚೇದಿ ಮೊದಲಾದ ಸಕಲರಾಜರನ್ನೂ ಧರೆಗುರುಳಿಸಿ ಶ್ರೀಜನಾರ್ದನನು ತಾನು ನಿರ್ಮಿಸಿದ ದ್ವಾರಕಾಪುರಿಗೆ ಹಾರಿಹೋದನು. ಶ್ರೀಕೃಷ್ಣನು ತೆರಳಿದ ಮೇಲೆ ಮೂರ್ಛೆಯಿಂದೆಚ್ಚೆತ್ತು, ರಣಭೂಮಿಯಿಂದ ಕಾಲ್ತೆಗೆದ ಜರಾಸಂಧಾದಿ ನೃಪತಿಗಳು ಶಿಶುಪಾಲನಿಗೆ ರುಕ್ಮಿಣಿಯನ್ನು ಕೊಟ್ಟು ವಿವಾಹ ಮಾಡಿಸುವುದರ ಮೂಲಕ ಕೃಷ್ಣನಿಗೆ ಮುಖಭಂಗಮಾಡಿ ಅವನನ್ನು ಜಯಿಸಲಪೇಕ್ಷಿಸಿ ಮತ್ತೆ ಅವರೆಲ್ಲರೂ ಕುಂಡಿನೀಪುರಕ್ಕೆ ಪ್ರಯಾಣ ಬೆಳೆಸಿದರು.

ಕುಂಡಿನೀಪುರಕ್ಕೆ ಬಂದ ಆ ರಾಜರು ಭೀಷ್ಮಕ ರಾಜನಿಂದೊಡಗೂಡಿ ರುಕ್ಮಿಣಿಯನ್ನು ಶಿಶುಪಾಲನಿಗಿತ್ತು ವಿವಾಹವನ್ನು ನೆರವೇರಿಸಲು ನಿಶ್ಚಯಿಸಿ ಆ ಕಾರ್ಯದಲ್ಲಿ ಉದ್ಯುಕ್ತರಾಗಿರುವುದನ್ನರಿತು ವಿದರ್ಭರಾಜನಂದಿನಿಯಾದ ರುಕ್ಮಿಣಿಯು ಪುರೋಹಿತ ಪುತ್ರನೊಡನೆ ಸಕಲರಾಜರು ರಾಜಧಾನಿಯಲ್ಲಿ ನಡೆಸಿರುವ ಕುತಂತ್ರವನ್ನೂ, ತಾನು, ಶ್ರೀಕೃಷ್ಣನೇ ತನ್ನ ಪತಿ-ಯೆಂದು ನಿರ್ಧರಿಸಿರುವುದನ್ನೂ, ಲಗ್ನ ಸಮಯಕ್ಕೆ ಸರಿಯಾಗಿ ಶ್ರೀಕೃಷ್ಣನು ಬಂದು ತನ್ನ ಕರಪಿಡಿದು ಅನುಗ್ರಹಿಸಬೇಕೆಂದೂ ಶ್ರೀಕೃಷ್ಣನಲ್ಲಿ ವಿಜ್ಞಾಪಿಸಿ, ಅವನನ್ನು ಕರತರಬೇಕೆಂದು, ಹೇಳಿಕಳುಹಿಸಿದಳು. ಆ ಬ್ರಾಹ್ಮಣೋತ್ತಮನು ದ್ವಾರಕೆಗೆ ಭರದಿಂದ ಬಂದು ಭಗವಂತನಾದ ಕೃಷ್ಣನಲ್ಲಿ ಸಮಸ್ತ ವಿಚಾರಗಳನ್ನೂ ರುಕ್ಮಿಣಿಯ ಸಂದೇಶವನ್ನು ಅರುಹಿದನು. ಪುರೋಹಿತಪುತ್ರನ ವಿಜ್ಞಾಪನೆಯನ್ನಾಲಿಸಿ ಕೃಷ್ಣನು ಆ ಕೂಡಲೇ ರಥಾರೂಢನಾಗಿ ವಿದರ್ಭಕ್ಕೆ ಹೊರಟನು. ಹಲಾಯುಧನಾದ ಬಲರಾಮನೂ, ಸಕಲಯಾದವರೂ, ಸೈನ್ಯ ಸಮೇತರಾಗಿ ಕೃಷ್ಣನನ್ನು ಅನುಸರಿಸಿ ಕುಂಡಿನೀಪುರಕ್ಕೆ ಹೊರಟರು. ಕೃಷ್ಣನು ಬಂದುದನ್ನು ಕಂಡು ಸಮಸ್ತ ರಾಜರು ರುಕ್ಮಿಣಿಯನ್ನು ಕೃಷ್ಣನಿಂದ ರಕ್ಷಿಸಲೆಂದು ಧನುರ್ಧಾರಿಗಳಾಗಿ ಹೊರಟರು. ಮದುವೆಗೆ ಮೊದಲು, ಕನ್ಯಾಪ್ರದಾನಕ್ಕೆ ಮೊದಲು ವಧುವು ಅಂಬಿಕೆಯ ದರ್ಶನ ಮಾಡುವುದು ಸಂಪ್ರದಾಯ. ಶ್ರೀಕೃಷ್ಣನ ರಹಸ್ಯ ಆದೇಶದಂತೆ ರುಕ್ಮಿಣಿಯು ಗೌರೀ ಪೂಜೆಯ ವ್ಯಾಜ (ನೆಪ)ದಿಂದ ಶ್ರೀಪಾರ್ವತಿಯ ದೇವಾಲಯಕ್ಕೆ ಸಖಿಯರಿಂದೊಡಗೂಡಿ ಹೋದಳು. ಆಗ ಅಲ್ಲಿಗೆ ಬಂದ ಕೃಷ್ಣನು ಸಮಸ್ತರಾಜರೂ ನೋಡುತ್ತಿರುವಂತೆಯೇ ರುಕ್ಮಿಣಿಯ ಕರಪಿಡಿದು ತನ್ನ ರಥದಲ್ಲಿ ಕೂಡಿಸಿಕೊಂಡನು. ಆಗ ಜರಾಸಂಧಾದಿ ರಾಜರು ಕೋಪದಿಂದ ಶರಗಳ ಪರಂಪರೆಯಿಂದ ಕೃಷ್ಣನನ್ನು ತರುಬಿದರು. ಕೃಷ್ಣನು ಕ್ಷಣಮಾತ್ರದಲ್ಲಿ ಅವರನ್ನು ನಿರಾಯುಧಗೊಳಿಸಿದನು ಮತ್ತು ರುಕ್ಮಿಣಿಯನ್ನು ರಥದಲ್ಲಿ ಕೂಡಿಸಿಕೊಂಡು ಮೆಲ್ಲನೆ ಅಲ್ಲಿಂದ ಕದಲಿದನು.

ಜರಾಸುತ ಮೊದಲಾದವರು ಮತ್ತೆ ಧನುರ್ಧಾರಿಗಳಾಗಿ ಹರಿಯನ್ನು ಅಟ್ಟಿಸಿಕೊಂಡು ಹೋಗಲುದ್ಯುಕ್ತರಾಗಲು ಆ ಸಮಯಕ್ಕೆ ಅಲ್ಲಿಗೆ ಬಂದ ಬಲಾಢ್ಯರಲ್ಲಿ ಶ್ರೇಷ್ಠನಾದ ಬಲರಾಮನು ಅವರನ್ನು ಅಡ್ಡಗಟ್ಟಿದನು. ಆಗ ಸಂಭವಿಸಿದ ಯುದ್ಧದಲ್ಲಿ ಮಾಗಧನನ್ನು ಜಯಿಸಲು, ಬಲರಾಮನಲ್ಲಿದ್ದ ಶ್ರೀಹರಿಯ ಶುಕ್ಲ ಕೇಶನು (ಶುಕ್ಲಕೇಶಿರೂಪಿಹರಿಯು) ಬಲರಾಮನಲ್ಲಿ ಹೆಚ್ಚಾದ ತನ್ನ ಶಕ್ತಿಪ್ರಕಾಶವನ್ನು ಚೀರಿದನು. ಆಗ ಬಲಭದ್ರನ ಗದಾಪ್ರಹಾರದಿಂದ ಚೂರ್ಣೀಕೃತನಾದ ಜರಾಸಂಧನು ಭೂಶಾಯಿಯಾದನು. ಬಲರಾಮನು ಮಗಧ ಚಕ್ರವರ್ತಿಯನ್ನು ಜಯಿಸಿ ದ್ವಾರಕೆಗೆ ಹಿಂದಿರುಗಿದನು. ಆಗ ವರನ ಉತ್ತಮ ವಸ್ತ್ರ ಭೂಷಣಗಳಿಂದಲಂಕೃತನಾದ ಶಿಶುಪಾಲನು ಕೃಷ್ಣನನ್ನು ಎದುರಿಸಲು ಬಂದನು. ಅದಕಂಡು ಸಾತ್ಯಕಿಯು ಸಿಂಹಗರ್ಜನೆ ಮಾಡಿ ಅವನಿಗೆದುರಾದನು. ಶ್ರೇಷ್ಠವಾದ ಶಸ್ತ್ರಾಸ್ತ್ರಗಳನ್ನು ವರ್ಷಿಸುತ್ತಾ ಅವರೀರ್ವರೂ ಅತಿ ಚಪಲತೆಯಿಂದ ಬಹುಕಾಲ ಕಾದಾಡಿ ಪರಸ್ಪರ ನಿರೀಕ್ಷಿಸುತ್ತಾ ನಿಂತರು.

ಸಮಬಲರಾಗಿ ಹೋರಾಡುವುದನ್ನು ಸಹಿಸದೆ ಶಿನಿಯ ಮಗನಾದ ಸತ್ಯಕನ ಪುತ್ರನಾದ ಸಾತ್ಯಕಿಯು ಬತ್ತಳಿಕೆಯಿಂದ ಬಾಣವನ್ನು ಹೊರತೆಗೆದು ಅತಿಬಲವಾಗಿ ಅದನ್ನು ಆಕರ್ಷಿಸಿ ಶಿಶುಪಾಲನ ವಕ್ಷಃಸ್ಥಳಕ್ಕೆ ಬಿಟ್ಟನು. ಆಗ ದಮಘೋಷಸುತನು ಆ ಶರಾಘಾತದಿಂದ ತತ್ತರಿಸಿ ಸ್ಮೃತಿ ತಪ್ಪಿ ಭೂಮಿಗುರುಳಿದನು. ಶಿಶುಪಾಲನನ್ನು ಜಯಿಸಿ ಸಾತ್ಯಕಿಯು ಹರ್ಷಚಿತ್ತನಾಗಿ ದ್ವಾರಕಾಪುರಿಗೆ ಮರಳಿದನು. ಆಗ ಉಳಿದ ಯಾದವರು ಪ್ರಖ್ಯಾತವಾದ ಚೇದಿರಾಜನ ಸೈನ್ಯವನ್ನು ಅಥವಾ ಅಲ್ಲಿ ಯುದ್ಧಕ್ಕೆ ಬಂದಿದ್ದ ರಾಜರ ಸೇನೆಯನ್ನು ಪರಾಜಯಗೊಳಿಸಿ ಹೊರಟರು. ಬಲಭದ್ರನೊಡನೆ ಯುದ್ಧಕ್ಕಾಗಿ ಹೊರಟು ಆ ಯುದ್ಧ ಸಂಭವಿಸುವ ಮೊದಲೇ ಕೃಷ್ಣನನ್ನು ಎದುರಿಸಲು ಹೊರಟಿದ್ದ ರುಗ್ಮಿ ಮೊದಲಾದ ರಾಜರು ಅಂದರೆ ಏಕಲವ್ಯ ಮುಂತಾದವರೊಡಗೂಡಿ ಬಾಣಗಳಿಂದ ಕೃಷ್ಣನಿಗೆ ಹೊಡೆಯಲು ಸಿರಿಕೃಷ್ಣನು ಸಿಂಹದಂತೆ ಹಿಂದಿರುಗಿದನು ಮತ್ತು ತನ್ನ ಮೇಲೆ ಯುದ್ಧಕ್ಕಿಳಿದ ಮೂರು ಅಕ್ಷೋಹಿಣೀ ಸೈನ್ಯವನ್ನು ತನ್ನ ಸರಳುಗಳ ಸರಣಿಯಿಂದ ಸದೆಬಡಿದು (ಶರವರ್ಷದಿಂದ ಚೆನ್ನಾಗಿ ಹೊಡೆದು) ಸಂಹರಿಸಿದನು, ಏಕಲವ್ಯನ ರಥ ಆಯುಧಗಳನ್ನು ಭಗ್ನಗೊಳಿಸಿದನು. ಶರೀರನಾಶಕವಾದ ಕೂರಂಬುಗಳನ್ನು ತನ್ನ ಮೇಲೆ ಬಿಡುವುದನ್ನು ಕಂಡು ಏಕಲವ್ಯನು ಭಯಗೊಂಡು ತಕ್ಷಣವೇ ರಣರಂಗವನ್ನು ಬಿಟ್ಟು ಓಡಿದನು. ಶ್ರೇಷ್ಠಧ್ವನಿಯಾದ ಏಕಲವ್ಯನೇ ಕಣದಿಂದ ಪಲಾಯನ ಗೈದುದನ್ನು ನೋಡಿ ಉಳಿದ ಕರೂಶ ದೇಶಾಧಿಪತಿಯಾದ ದಂತವಕ್ರಾದಿರಾಜರು ಪ್ರಾಣಭಯದಿಂದ ಯುದ್ಧಭೂಮಿಯಿಂದ ಕಾಲ್ತೆಗೆದು ಪಲಾಯನವಾದರು. ಅದನ್ನು ಕಂಡು ಸಹಿಸದೆ ಕೋಪದಿಂದ ರುಗ್ಮಿಯು ಶರಧಾರೆಯನ್ನೇ ಸುರಿಸುತ್ತಾ ಬರಲು ಕೃಷ್ಣನು ಅವನ ರಥವನ್ನು ನಾಶಗೊಳಿಸಿದನು. ರುಗ್ಮಿಯು ಧನುವನ್ನು ಭೇದಿಸಿದನು. ಅದರಿಂದ ಖತಿಗೊಂಡು ರುಗ್ಮಿಯ ಖಡ್ಗವನ್ನು ಹಿರಿದು ಕೃಷ್ಣನ ರಥವೇರಲೆತ್ನಿಸಿದನು. ಆಗ ಕೃಷ್ಣನು ಒಂದು ಬಾಣದಿಂದ ರುಗ್ಮಿಯ ಖಡ್ಗವನ್ನು ತುಂಡರಿಸಿ ಅವನನ್ನು ಸಂಹರಿಸಲುದ್ಯುಕ್ತನಾದಾಗ ರುಕ್ಮಿಣಿಯು "ದೇವ! ನನ್ನ ಸಹೋದರನನ್ನು ಕೊಲ್ಲಬೇಡ ರಕ್ಷಿಸು", ಎಂದು ಪ್ರಾರ್ಥಿಸಿದಳು. ಪ್ರಿಯಳ ವಚನವನ್ನು ಮನ್ನಿಸಿ ಮಧುಸೂದನನು ರುಗ್ಮಿಯನ್ನು ನಿರಾಯುಧಗೊಳಿಸಿ ಸಂಹರಿಸದೆ ಬಿಟ್ಟನು, ರುಗ್ಮಿಯನ್ನು ಬಂಧಿಸಿ ಪಂಚಶಿಖಿಯನ್ನಾಗಿ ಮಾಡಿ ಬಿಟ್ಟುಬಿಟ್ಟನು.

ಜಗತ್ತಿನ ತಾಯಿ ತಂದೆಗಳಾದ ರುಕ್ಮಿಣೀ ಕೃಷ್ಣರಲ್ಲಿ ಜರುಗಿದ "ಇವನನ್ನು ಸಂಹರಿಸುತ್ತೇನೆ-ಸಂಹರಿಸಬೇಡ" ಎಂಬ ವಾದ ವಿವಾದ ಸಲ್ಲಾಪವು ಲೋಕ ವಿಡಂಬನೆಯೇ ಹೊರತು ಬೇರೆಯಲ್ಲ. ಅದು ಲೋಕಾನುಕರಣವು. ಒಂದೇ ವಿಧವಾದ ಭಾವಗಳುಳ್ಳವರು ಅವಿರುದ್ಧಾಭಿಪ್ರಾಯದವರಾಗಿದ್ದರೂ, ಆ ಜಗನ್ಮಾತಾಪಿತೃಗಳಾದ ಶ್ರೀರುಕ್ಮಿಣಿ-ಶ್ರೀಕೃಷ್ಣಪರಮಾತ್ಮರು, ಲೋಕದಲ್ಲಿ ಗೃಹಸ್ಥರು ಸ್ವಧರ್ಮದಲ್ಲಿ ಹೇಗೆ ವರ್ತಿಸಬೇಕೆಂಬುದನ್ನು ತೋರಿಕೊಡಲೆಂದೇ ಯುದ್ಧರಂಗದಲ್ಲಿ ಅಥವಾ ರಥದಲ್ಲಿ ಹೀಗೆ ಪರಸ್ಪರ ವಾದ ವಿವಾದ ಮಾಡಿದಂತೆ ನಟಿಸಿ ಕ್ರೀಡಿಸಿದರೆಂದು ತಿಳಿಯಬೇಕು.

ಆಗ ಅಲ್ಲಿಗೆ ಬಂದ ಸೌಭರಾಜ ಸಾಲ್ವನು ಕೃಷ್ಣನ ಮೇಲೆ ಜಲಧಾರೆಯಂತೆ ಬಾಣಗಳನ್ನು ಸುರಿಸಲಾರಂಭಿಸಲು ಜಗದೊಡನೆಯನಾದ ಶ್ರೀಹರಿಯು ಪ್ರತ್ಯಕ್ಷ ಮೃತ್ಯುಸದೃಶವಾದ ಬಾಣವೊಂದರಿಂದ ಸಾಲ್ವನ ಹೃದಯಕ್ಕೆ ಹೊಡೆದನು. ಆ ಶರಾಹತಿಯಿಂದ ಕಡುನೊಂದ ಸಾಲ್ವನು ತಿಳಿವು ಕಳೆದುಕೊಂಡು ನೆಲವನ್ನಪ್ಪಿದನು. ಸ್ವಲ್ಪಕಾಲಾನಂತರ ಸಂಜ್ಞೆ ಪಡೆದು ಮುಕ್ಕಣ್ಣನಾದ ಶ್ರೀರುದ್ರದೇವರನ್ನು ತಪಸ್ಸಿನಿಂದ ಮುದಗೊಳಿಸಿ ಅವನ ಅನುಗ್ರಹವನ್ನುಗಳಿಸಲು ಸಂಕಲ್ಪಿಸಿ ಸಕಲರಾಜರ ಸಮಕ್ಷ "ಈ ಭೂಮಿಯು ಯಾದವರಹಿತವಾಗುವಂತೆ, ಅಂದರೆ ಈ ಧರಾತಳದಲ್ಲಿ ಒಬ್ಬ ಯಾದವನೂ ಉಳಿಯದಂತೆ ಮಾಡುತ್ತೇನೆ" ಎಂದ ಪ್ರತಿಜ್ಞೆ ಮಾಡಿ ಅಲ್ಲಿಂದ ರುದ್ರದೇವರನ್ನು ಒಲಿಸಿಕೊಳ್ಳಲು ತಪಸ್ಸಿಗಾಗಿ ಅರಣ್ಯಕ್ಕೆ ತೆರಳಿದನು.

ಆಗ ಪ್ರಭುವಾದ ಶ್ರೀಕೃಷ್ಣನು ಕಮಲಸಂಭವನಾದ ಚತುರಾನನ ಬ್ರಹ್ಮದೇವ ಪ್ರಮುಖ ಅಮರತತಿಯಿಂದ ಸ್ತುತ್ಯನಾಗಿ ಪ್ರಿಯಕರಳಾದ ರುಕ್ಮಿಣಿಯೊಡನೆ ದ್ವಾರಕಾಪಟ್ಟಣವನ್ನು ಪ್ರವೇಶಿಸಿದನು.

ಶ್ರೀಕೃಷ್ಣನು ರುಕ್ಮಿಣಿಯನ್ನು ಕರತರುವ ಮೊದಲೇ ಬಲರಾಮನು ಪೂರ್ವದಲ್ಲಿ (ಮೂಲ ರೂಪದಲ್ಲಿಯೂ) ವಾರುಣಿಯೆಂಬ ಶುಭನಾಮದ ಪತ್ನಿಯಾದ, ಭೂಮಿಯಲ್ಲಿ ಈಗ ರೇವತಿಯೆಂಬ ಹೆಸರಿನಿಂದ ಜನಿಸಿದವಳನ್ನು ವಿವಾಹವಾದನು.

ಪೂರ್ವದಲ್ಲಿ ರೇವತಿಯ ತಂದೆಯಾದ ಕುಕುದ್ಮಿಯು, ಪುತ್ರಿಯಾದ ರೇವತಿಗೆ ಅನುರೂಪನಾದ ವರನು ದೊರಕಬೇಕೆಂದು, ಪೂರ್ವಜನ್ಮದಲ್ಲಿಯೇ ರೇವತಿಗೆ ಸರಿಯಾದ ಪತಿ ಯಾರೆಂದು ಬ್ರಹ್ಮದೇವರಿಂದ ತಿಳಿಯಲಾಶಿಸಿದನು. ರೇವತಕನ ಸುತನಾದ ಕುಕುದ್ಮಿಯು ಬ್ರಹ್ಮಲೋಕಕ್ಕೆ ಸಶರೀರನಾಗಿ ಹೋಗಿಬರುವಂತೆ ಲಬ್ಧವಾದ ವರಬಲದಿಂದ ಸತ್ಯಲೋಕಕ್ಕೆ ಬ್ರಹ್ಮಸಭೆಗೆ ಹೋದನು. ಆಗ ಅಲ್ಲಿ ದಿವ್ಯ ಗಾಯನವಾಗುತ್ತಿತ್ತು. ಮನಮೋಹಕವಾದ ಆ ಗಾಯನವನ್ನು ಆಲಿಸುತ್ತಾ ಕುಕುದ್ಮಿಯು ಮೈಮರೆತನು. ಅದರಿಂದ ಯುಗದ ಬಹುಕಾಲ ಗತಿಸಿಹೋಯಿತು. ಗಾಯನದಲ್ಲಿ ಪರವಶನಾದ ಕುಕುದ್ಮಿಯು ಅದನ್ನು ತಿಳಿಯದಾದನು. ಆ ಗಂಧರ್ವಗಾನ ಮಾನವರನ್ನು ಮೋಹಗೊಳಿಸುವಂತಹುದು. ಅಂತೆಯೇ ಕುಕುದ್ಮಿಯು ಗಾನಮೂರ್ಛಿತನಾಗಿ ಎಚ್ಚರಗೊಂಡ ಮೇಲೆ ತಾನು ಸ್ವಲ್ಪಕಾಲ ಮಾತ್ರ ಸಂಗೀತವನ್ನು ಕೇಳಿದೆನೆಂದು ಭಾವಿಸಿದನು. ಅಷ್ಟರಲ್ಲಿ ಯುಗಗಳೇ ಉರುಳಿಹೋದವು. ಬ್ರಹ್ಮದೇವರಿಂದ ಜಾಗ್ರತನಾದ ಕುಕುದ್ಮಿಯು ಬ್ರಹ್ಮದೇವರನ್ನು ತನ್ನ ಕುವರಿಗನುರೂಪನಾದ ವರನಾರೆಂದು ಪ್ರಶ್ನಿಸಿದನು. ಕಮಲಸದನರು, ಬಲಭದ್ರನೇ ನಿನ್ನ ಪುತ್ರಿಗೆ ಸರಿಯಾದ ಪತಿಯೆಂದರು. ಆಗ ಕುಕುದ್ಮಿಯು ಬಲರಾಮನಿಗೆ ರೇವತಿಯನ್ನಿತ್ತು ವಿವಾಹ ಮಾಡಿ ಗಂಧಮಾದನ ಶೈಲಕ್ಕೆ ತೆರಳಿ ತಪಸ್ಸು ಮಾಡಿ ಕೊನೆಗೆ ಶ್ರೀಹರಿಮಂದಿರಕ್ಕೆ ಹೋಗಿ ಮೋಕ್ಷಸುಖದಲ್ಲಿ ಮಗ್ನನಾದನು.

ಪ್ರಭುವೂ ಸತ್ಯಕಾಮನೂ ಆದ ಬಲರಾಮನು ಪೂರ್ವಯುಗದಲ್ಲಿದ್ದ ಮಾನವರ ಪ್ರಮಾಣದಂತೆ ಬಹುಎತ್ತರವಾಗಿದ್ದ ರೇವತಿಯು ತನಗಿಂತ ಎತ್ತರವಾಗಿದ್ದುದರಿಂದ ಧರ್ಮಶಾಸ್ತ್ರದಲ್ಲಿ ವರನಕಿಂತ ಎತ್ತರವಿರುವ ವಧುವನ್ನು ಮದುವೆ-ಯಾಗಬಾರದೆಂದು ಪ್ರಮಾಣವಿರುವುದರಿಂದ ತನಗಿಂತ ಎತ್ತರವಾಗಿದ್ದ ರೇವತಿಯನ್ನು ಹಲಾಯುಧದಿಂದ ಕೆಳಕ್ಕೆಳೆದು ತನಗೆ ಸಮಾನಳಾಗುವಂತೆ ಮಾಡಿಕೊಂಡು ರೇವತಿಯೊಡನೆ ರಮಿಸುತ್ತಾ ಶಠ, ಉಲ್ಮುಖರೆಂಬ ಇಬ್ಬರು ಪುತ್ರರನ್ನು ಪಡೆದನು. ಅವರೀರ್ವರೂ ಪೂರ್ವದಲ್ಲಿ ಅರ್ಯಮಾ ಮತ್ತು ಅಂಶಕರೆಂಬ ದೇವತೆಗಳಾದ ದ್ವಾದಶಾದಿತ್ಯರಲ್ಲಿ ಈರ್ವರು ಆದಿತ್ಯರು. ಅವರೇ ಈಗ ಬಲರಾಮದೇವನ ಮಕ್ಕಳಾದರು.

ಜಗತ್ಪ್ರಭುವಾದ ಜನಾರ್ದನನು (ಕೃಷ್ಣನು) ಒಂದು ಶುಭಮುಹೂರ್ತದಲ್ಲಿ ರುಕ್ಮಿಣಿಯನ್ನು ವಿವಾಹವಾದನು. ಕುಶಸ್ಥಲೀನಿವಾಸಿಗಳಿಗೆ ಅದೊಂದು ದೊಡ್ಡ ಸಂಭ್ರಮದ ಉತ್ಸವವಾಯಿತು. ನಾಲ್ಮೊಗನಾದ ಬ್ರಹ್ಮ ಮತ್ತು ರುದ್ರೇಂದ್ರಾದಿ

ದೇವತೆಗಳು ಅಂಬರದಲ್ಲಿ ನಿಂತು ಸಂಭ್ರಮಾನಂದದಿಂದ ಶ್ರೀರಮಾನಾರಾಯಣರ ಅಂದರೆ ರುಕ್ಮಿಣೀಸಹಿತನಾದ ಅವ್ಯಯ (ನಾಶರಹಿತ)ನಾದ ಶ್ರೀಕೃಷ್ಣನ ವೈವಾಹಿಕ ಮಂಗಳ ಮಹೋತ್ಸವವನ್ನು ನಿರೀಕ್ಷಿಸಿ ಕುಸುಮವರ್ಷಗೈದು ಜಗತ್ತಿನ ತಾಯಿ-ತಂದೆಗಳಾದ ರುಕ್ಮಿಣೀ ವಾಸುದೇವರನ್ನು ವಿಶೇಷಾಕಾರವಾಗಿ ಸ್ತೋತ್ರ ಮಾಡಿದರು. ಮುನೀಂದ್ರರು, ಅಮರ ಗಾಯಕರಾದ ಗಂಧರ್ವಾದಿಗಳು, ಸಿದ್ಧ ಚಾರಣಾದಿಗಳೂ ಸಹ ಶ್ರೀರಮಾನಾರಾಯಣ ಯೋಗದ ಆ ಮಹೋತ್ಸವದಲ್ಲಿ ಪಾಲ್ಗೊಂಡು ಆನಂದ ತುಂದಿಲರಾದರು. ಸುರಾಂಶರಾದವರು ಯಾರೋ ಅಂತಹ ರಾಜರನ್ನು ಈ ಕಲ್ಯಾಣ ಮಹೋತ್ಸವಕ್ಕೆ ಆಹ್ವಾನಿಸಲಾಗಿತ್ತು. ಅಂತಹ ಯೋಗ್ಯರಾಜರು ಪಾಂಡವರಿಂದ ಸಹಿತರಾಗಿ ಶ್ರೀರಮಾಮಾಧವರ ವಿವಾಹಕ್ಕೆ ಆಗಮಿಸಿದರು. ಸಮಸ್ತಲೋಕಗಳಲ್ಲೂ ಅತ್ಯಂತ ಸುಂದರರಾದ, ವಿಯೋಗವಿಲ್ಲದಿರುವ ಶ್ರೀಲಕ್ಷ್ಮೀನಾರಾಯಣರೇ ಆದ ಶ್ರೀರುಕ್ಮಿಣೀ ವಾಸುದೇವರ ಕಲ್ಯಾಣ ಮಹೋತ್ಸವವನ್ನು ಅವಲೋಕಿಸಿ ಸಕಲಲೋಕದ ಸಜ್ಜನರು ಮುದಿಸಿದರು. ನಿತ್ಯಾವಿಯೋಗಿನಿಯೂ ಲಕ್ಷ್ಮೀಸ್ವರೂಪಿಣಿಯೂ ಆದ ವಿದರ್ಭರಾಜನಂದಿನಿಯೊಡನೆ ಕ್ರೀಡಿಸುತ್ತಾ ಜನಾರ್ದನನು ತನ್ನ ಪೂರ್ವಪುತ್ರನಾದ ಅಂದರೆ ಮನೋಭವನಾದ ಕಾಮದೇವ (ಮನ್ಮಥ) ನನ್ನು ಮತ್ತೆ ಪುತ್ರನನ್ನಾಗಿ ಪಡೆದನು. ಬಲಶಾಲಿಯಾದ ರುಕ್ಮಿಣೀಸುತನು ವಾಸುದೇವಾದಿ ಚತುಃಸ್ವರೂಪನಾದ, ಪ್ರಭುವಾದ ಶ್ರೀಹರಿಯ ತೃತೀಯ ರೂಪದಿಂದ ಅಂದರೆ ಪ್ರದ್ಯುಮ್ನ ರೂಪದಿಂದ ಆವಿಷ್ಟನಾದ್ದರಿಂದ ಪ್ರದ್ಯುಮ್ನನೆಂಬ ಹೆಸರು ಪಡೆದು ವಿರಾಜಿಸಿದನು.

ಶ್ರೀಬ್ರಹ್ಮದೇವರ ತೊಡೆಯಿಂದ ಜನಿಸಿದ ದೇವರ್ಷಿ ನಾರದರು ಪ್ರದ್ಯುಮ್ನನು ಅವತರಿಸುವ ಮೊದಲೇ ಶಂಬರಾಸುರನ ಬಳಿಗೆ ಬಂದು "ರಾಜನ್, ಪ್ರದ್ಯುಮ್ನನೇ ನಿನಗೆ ಮೃತ್ಯುವಾಗುವನು" ಎಂದು ಹೇಳಿ ಎಚ್ಚರಿಸಿದ್ದರು. ಪುನಃ ಅವರು ಪ್ರದ್ಯುಮ್ನನು ಜನಿಸಿದ ಮೇಲೂ ಮತ್ತೆ ಅವನನ್ನು ಕಂಡು "ನಾನು ನಿನಗೆ ಹೇಳಿದ ಪ್ರದ್ಯುಮ್ನನು ಈಗ ಶ್ರೀಕೃಷ್ಣನಿಗೆ ರುಕ್ಮಿಣಿಯಲ್ಲಿ ಪುತ್ರನಾಗಿರುವನು. ಅವನೇ ನಿನಗೆ ಮೃತ್ಯುವೆಂದು ತಿಳಿ" ಎಂದು ಹೇಳಿದರು. ಆದರಿಂದ ಭಯಗೊಂಡ ಶಂಬರಾಸುರನು ತನ್ನ ಮಗನನ್ನು ಅಪಹರಿಸಿಕೊಂಡು ಹೋಗುವುದನ್ನು ಸರ್ವಜ್ಞನೂ, ಪ್ರಭೂವೂ ಆದ ಕೃಷ್ಣನು ಅರಿತಿದ್ದರೂ ಅದರಿಂದ ಭಾವೀಕಾರ್ಯವಾಗಬೇಕಾಗಿರುವುದರಿಂದ ಉದಾಸೀನನಾಗಿದ್ದುದರಿಂದಲೇ ಶಂಬರಾಸುರನು ಪ್ರದ್ಯುಮ್ನನನ್ನು ಕದ್ದು ಕೊಂಡೈದು ಸಾಗರಕ್ಕೆಸೆದನೆಂದು ತಿಳಿಯಬೇಕು.

ಪ್ರದ್ಯುಮ್ನನನ್ನು ಅಸುರನು ಅಂಬುಧಿಗೆಸೆದ ಮೇಲೆ ಒಂದು ದೊಡ್ಡ ಮೀನು ಅವನನ್ನು ನುಂಗಿತು. ದಾಶರು (ಮೀನು ಹಿಡಿಯುವವರು) ಆ ಮೀನನ್ನು ಹಿಡಿದು ಅದು ಮೃತವಾಗುವಾಗ ಅದರ ವದನವನ್ನು ಬಿಡಿಸದಾಗ ಒಳಗೆ ಕುಮಾರನಿರುವುದನ್ನು ಕಂಡು ಅಚ್ಚರಿಗೊಂಡು ಆ ಮೀನನ್ನು ಶಂಬರಾಸುರನಿಗೆ ಸಮರ್ಪಿಸಿದರು. ಆ ಮತ್ಸ್ಯವನ್ನು ಕತ್ತರಿಸಿ ಅದರ ಉದರದಲ್ಲಿದ್ದ ಸುಂದರನಾದ ಆ ಕುಮಾರನನ್ನು ಶಂಬರನು ಕಾಮನಪತ್ನಿಯಾದ ರತೀದೇವಿಗೆ ನೀಡಿ ಅದನ್ನು ಪೋಷಿಸುವಂತೆ ಹೇಳಿದನು.

ಅದು ಸರಿ. ಮನ್ಮಥನ ಮನದನ್ನೆಯಾದ ರತೀದೇವಿಯು ಶಂಬರಾಸುರನ ಮನೆಯಲ್ಲಿರಲು ಕಾರಣವೇನೆಂಬ ಶಂಕೆಯನ್ನು ನಿರ್ಣಯಾಚಾರ್ಯರೀಗ ಪರಿಹರಿಸುವರು.

ಹಿಂದೆ ರುದ್ರದೇವರ ಮೂರನೆಯ ಕಣ್ಣಿನ ಜ್ವಾಲೆಯಿಂದ ಭಸ್ಮವಾಗಿ ಮನ್ಮಥನು ಅನಂಗನಾದ್ದರಿಂದ, ಅವನ ಸತಿಯಾದ ರತಿಯು ಸರಸ್ವತಿಯ ಪತಿಯಾದ ಪಿತಾಮಹ ಬ್ರಹ್ಮದೇವರ ಶಾಪದಿಂದ ಶಂಬರಾಸುರನ ಅಧೀನಕ್ಕೆ ಬಂದಳು. ಆದುದರಿಂದಲೇ ರತಿಯು ಶಂಬರಾಸುರನ ಮಂದಿರದಲ್ಲಿದ್ದಳು. ವಿರಂಚಿಯು ಅವಳಿಗೆ ಶಾಪವಿತ್ತ ಕಾರಣವನ್ನೀಗ ವಿವರಿಸುವರು. ಹಿಂದೆ ಪಂಚಭರ್ತೃಕಳಾದ (ಐದು ಜನರನ್ನು ಪತಿಯಾಗಿ ಪಡೆದವಳು), ದ್ರುಪದ ರಾಜಕುಮಾರಿಯಾದ ದ್ರೌಪದೀದೇವಿಯನ್ನು ಬ್ರಹ್ಮದೇವರು ಸೃಜಿಸಿದ ವಿಚಾರವರಿತು ರತಿಯು ಅಪಹಾಸಮಾಡಿ ನಕ್ಕಳು. ಆದರಿಂದ ಪದ್ಮ

ಸಂಭವರು ಕುಪಿತರಾಗಿ "ರತೀದೇವಿ! ನೀನು ಅಸುರ ದೂಷಿತಳಾಗು" ಎಂದು ಶಾಪ ನೀಡಿದ್ದರು. ಆ ಕಾರಣದಿಂದ ರತಿಯು ಮಾಯೆಯಿಂದ ತನ್ನ ದೇವತಾ ಶರೀರವನ್ನು ಮರೆಮಾಡಿಕೊಂಡು (ಅಥವಾ ತನ್ನಿಚ್ಛೆಯಿಂದಲೇ ಕಲ್ಪಿತವಾದ ರತಿಯ ಶರೀರವುಳ್ಳವಳಾಗಿ) ಶಂಬರನ ಅಧೀನಳಾದಳು. ಯದ್ಯಪಿ ರತಿಯು ಅಸುರನಾದ ಶಂಬರನ ಮನೆ ಸೇರಿದರೂ ಅವಳು ದೇವತಾ ಸ್ವರೂಪಳಾಗಿದ್ದುದರಿಂದ ಅಸುರತ್ವವನ್ನು ಹೊಂದಲಿಲ್ಲವೆಂದು ತಿಳಿಯಬೇಕು.

ಶಂಬರಾಸುರನು ತನಗೊಪ್ಪಿಸಿದ ಆ ಕುಮಾರನೇ ತನ್ನ ಪತಿಯಾದ ಮನ್ಮಥನೆಂದು ತಿಳಿದು ಹರ್ಷಿಸಿ ಆ ಕುಮಾರನಿಗೆ ಅಥವಾ ಸ್ಕಂದಸ್ವರೂಪನಾದ ಪತಿಗೆ ಕ್ಷೀರ-ಘೃತಾದಿ ರಸಾಯನಗಳಿಂದ ಉಪಚರಿಸಿ ಬೆಳೆಸಿದಳು. ಆ ಕುಮಾರನು ನಾಲ್ಕು ವರ್ಷಗಳಲ್ಲೇ ಸಂಪೂರ್ಣ ರೂಪ ಯೌವನ ಸಂಪನ್ನನಾಗಿ ಶೋಭಿಸಿದನು. ಪರಿಪೂರ್ಣ ತಾರುಣ್ಯ, ಲಾವಣ್ಯಭರಿತನಾದ ಪತಿಯನ್ನು ಕಂಡು ಕಾಮವಶದಿಂದ ನಾಚುವಂತೆ ಲಜ್ಜೆ ಪಡುತ್ತಿರುವ ರತಿಯನ್ನು ನೋಡಿ ಕೃಷ್ಣ ಕುಮಾರನಾದ ಪ್ರದ್ಯುಮ್ನನು "ಎಲೈ ತಾಯಿ, ನನ್ನಲ್ಲಿ ನೀನು ಲಜ್ಜಾದಿ ಕುತ್ಸಿತವಾದ ಆಚರಣೆಯನ್ನೇಕೆ ಮಾಡುವಿ?" ಎಂದು ಪ್ರಶ್ನಿಸಿದನು. ಆಗ ರತೀ-ದೇವಿಯು ತಾನು ಶಂಬರನ ಮನೆಗೆ ಬಂದ ಬಗೆ-ಇವೆಲ್ಲವನ್ನೂ ವಿಸ್ತಾರವಾಗಿ ನಿರೂಪಿಸಿದಳು. ಅದನ್ನು ಆಲಿಸಿದ ಪ್ರದ್ಯುಮ್ನನು ಅದುವರೆಗೆ ಅವಳಲ್ಲಿಟ್ಟಿದ್ದ ಮಾತೃಭಾವವನ್ನು ತ್ಯಜಿಸಿ ರತಿಯನ್ನು ಪತ್ನಿಯಾಗಿ ಸ್ವೀಕರಿಸಿದನು.

ಆಗ ರತಿಯು ಪ್ರದ್ಯುಮ್ನನಿಗೆ ಸಮಸ್ತ ಮಾಯೆಗಳನ್ನೂ ನಾಶಪಡಿಸಲು ಸಮರ್ಥವಾದ ಶ್ರೀಪರಶುರಾಮ-ದೇವತಾಕವಾದ ಮಂತ್ರವನ್ನು ಹೇಳಿಕೊಟ್ಟಳು.

ಕಾಮನ ಅವತಾರನಾದ ಪ್ರದ್ಯುಮ್ನನು ನಿಜಸತಿಯಾದ ರತಿಯನ್ನು ಪೀಡಿಸುವ ಶಂಬರಾಸುರನನ್ನು ಯುದ್ಧಕ್ಕೆ ಆಹ್ವಾನಿಸಿದನು. ಅತಿ ಬಲವಂತನಾದ ಶಂಬರಾಸುರನು ವರಾಸ್ತ್ರಗಳು, ವೃಕ್ಷಗಳಿಂದ, ಖಡ್ಗ-ಗುರಾಣಿಯನ್ನು ಪಿಡಿದಿರುವ ಕೃಷ್ಣ ಸುತನಾದ ಪ್ರದ್ಯುಮ್ನನೊಡನೆ ಕಾದಾಡಿದರೂ ಅವನನ್ನು ಜಯಿಸಲಾಗದಿರಲು ಖತಿಗೊಂಡು ಶಂಬರನು ಅದೃಶ್ಯನಾಗಿ ಮಾಯಾ ಯುದ್ಧವನ್ನಾರಂಭಿಸಿದನು. ಸಹಸ್ರಸಂಖ್ಯಾಕ ಐಂದ್ರಜಾಲಿಕ ವಿದ್ಯೆಗಳನ್ನು ಬಲ್ಲ, ಅಂತೆಯೇ ಕ್ರೂರಿಯಾದ ಮತ್ತು ಅದೃಶ್ಯನಾಗಿ ಯುದ್ಧ ಮಾಡುತ್ತಾ ಅನೇಕ ಪರ್ವತ-ವೃಕ್ಷಗಳನ್ನು ತನ್ನ ಮೇಲೆ ವರ್ಷಿಸುತ್ತಿರುವ ಶಂಬರಾಸುರನನ್ನು ಧರೆಗೊರಗಿಸಲು ಪ್ರದ್ಯುಮ್ನನು ರತಿಯು ತನಗೆ ಹೇಳಿಕೊಟ್ಟ ಶ್ರೀಪರಶುರಾಮ ದೇವರಿಗೆ ಸಂಬಂಧಿಸಿದ ಮಹಾಮಂತ್ರವಿದ್ಯಾ ಬಲದಿಂದ ಆ ಅಸುರನ ಎಲ್ಲಾ ಮಾಯೆಗಳನ್ನೂ ನಾಶಪಡಿಸಿ, ಕೂಡಲೇ ತನ್ನ ಶ್ರೇಷ್ಠ ಖಡ್ಗದಿಂದ ಶಂಬರಾಸುರನ ಶಿರವನ್ನು ಕತ್ತರಿಸಿ ಹಾಕಿದನು. ಅಸುರಸಂಹಾರಾನಂತರ ಪ್ರದ್ಯುಮ್ನನು ನಿಜ ಸತಿ ರತಿಯಿಂದೊಡಗೂಡಿ ಶ್ರೀಪರಶುರಾಮ ಮಂತ್ರ ವಿದ್ಯಾಬಲದಿಂದ ಗಗನ ಮಾರ್ಗವಾಗಿಯೇ ದ್ವಾರಕಾ ಪಟ್ಟಣಕ್ಕೆ ಬಂದು ಸೇರಿದನು.

ಅದೇ ಸಮಯಕ್ಕೆ ಅಲ್ಲಿಗೆ ಬಂದ ನಾರದರು, ಸರ್ವಜ್ಞನಾದರೂ ಮಾನವನಂತೆ ನಟಿಸುತ್ತಿರುವ ಶ್ರೀಕೃಷ್ಣ ಮತ್ತು ರುಕ್ಮಿಣಿಯರಿಗೆ ಹಿಂದೆ ಸೂತಿಕಾಗೃಹದಿಂದ ಶಂಬರಾಸುರನು ಕದ್ದುಕೊಂಡೊಯ್ದಿದ್ದ ನಿಮ್ಮ ಮಗನೇ ಈ ಪ್ರದ್ಯುಮ್ನನೆಂದು ಹೇಳಿದರು. ಅದರಿಂದ ಮುದಗೊಂಡ ಮಾಧವ-ರುಕ್ಮಿಣಿಯರು, ಬಲರಾಮ ಸಹಿತರಾದ ಯಾದವರು ತಾತನಾದ ವಸುದೇವ ಮುಂತಾದವರಿಂದ ಲಾಲಿತನಾಗಿ ಪ್ರದ್ಯುಮ್ನನು ಪತ್ನೀಸಹಿತನಾಗಿ ದ್ವಾರಕಾಪುರಿಯಲ್ಲಿ ಹರ್ಷದಿಂದ ವಾಸ ಮಾಡಿದನು.

ಈಗ ಶ್ರೀಮದಾಚಾರ್ಯರು ಸತ್ಯಭಾಮಾ ಪರಿಣಯ ಪ್ರಕಾರವನ್ನು ನಿರೂಪಿಸಲು ಹೀಗೆ ಉಪೋದ್ಘಾತ ರಚಿಸುತ್ತಾರೆ:-

ಪ್ರದ್ಯುಮ್ನನು ದ್ವಾರಕೆಗೆ ಬರುವ ಮೊದಲೇ ಯಾದವರಲ್ಲಿ ವಿಖ್ಯಾತನಾದ ಸತ್ರಾಜಿತ್‌ರಾಜನು ಸೂರ್ಯಮಂಡಲ ಮಂಡಿತನಾದ ಶ್ರೀಹರಿಯನ್ನು ತಪಸ್ಸಿನಿಂದ ಸಂತೋಷಪಡಿಸಿ ಅವನಿಂದ ಶ್ರೇಷ್ಠವಾದ ಸ್ಯಮಂತಕಮಣಿಯನ್ನು ಅನುಗ್ರಹ-

ಪೂರ್ವಕವಾಗಿ ಪಡೆದಿದ್ದನು. ಅವನು ಸೂರ್ಯಾಂತರ್ಗತ ನಾರಾಯಣನ ಪೂಜಕನಾದ್ದರಿಂದಲೇ ಸತ್ರಾಜಿತ್ ರಾಜನು ಶ್ರೇಷ್ಠವಾದ ಸ್ಯಮಂತಕರತ್ನವನ್ನು ಪಡೆದನು. ಅವನು ವಿಷ್ಣು ಭಕ್ತನಾದರೂ ಮಹಾಲೋಭಿಯಾಗಿದ್ದನೆಂದು ಪ್ರಕಟಿಸಲು ಈಶ್ವರನಾದ ಶ್ರೀಕೃಷ್ಣನು "ಸ್ಯಮಂತಕಮಣಿಯನ್ನು ನನಗೆ ಕೊಡು" ಎಂದವನನ್ನು ಯಾಚಿಸಿದನು. ವಾಸುದೇವನಿಗದನ್ನು ಕೊಡಲಿಚ್ಛೆಯಿಲ್ಲದ ಸತ್ರಾಜಿದ್ರಾಜನು "ಇದು ನನ್ನದು. ನಿನಗಿದನ್ನು ಕೊಡಲಾರೆ" ಎಂದು ಹೇಳಿಬಿಟ್ಟನು. ಶ್ರೀಕೃಷ್ಣನು ನಸುನಕ್ಕು ಸುಮ್ಮನಾದನು.

ಕೆಲಕಾಲ ಕಳೆದ ನಂತರ ಒಂದು ದಿನ ಸತ್ರಾಜಿತ್ ರಾಜನ ಸಹೋದರನಾದ ಪ್ರಸೇನ ಮಹಾರಾಜನು ಸ್ಯಮಂತಕಮಣಿಯಿಂದ ಶೋಭಿಸುವ ಹಾರವನ್ನು ಕಂಠದಲ್ಲಿ ಧರಿಸಿ ಕುದುರೆಯನ್ನೇರಿ ಮೃಗಯಾವಿಹಾರಕ್ಕಾಗಿ ಕಾಡಿಗೆ ಹೊರಟನು. ಬೇಟೆಯಲ್ಲಿ ಆಸಕ್ತನಾಗಿರುವಾಗ ಒಂದು ಸಿಂಹವು ಅವನ ಮೇಲೆರಗಿ ಪ್ರಸೇನನನ್ನು ಸಂಹರಿಸಿಬಿಟ್ಟಿತು. ಬಹುವೇಳೆಯಾದರೂ ಪ್ರಸೇನನು ಮರಳಿ ಬರದಿರಲು ಸ್ಯಮಂತಕದ ಮೇಲಿನ ಮೋಹದಿಂದ ಕೃಷ್ಣನೇ ತನ್ನ ತಮ್ಮನನ್ನು ಕೊಂದು ಮಣಿಯನ್ನು ಅಪಹರಿಸಿರಬಹುದೆಂದು ಸಂದೇಹಿಸಿ, ಕೃಷ್ಣನು ಪ್ರಸೇನನನ್ನು ಸಂಹರಿಸಿ ಸ್ಯಮಂತಕವನ್ನು ಅಪಹರಿಸಿದ್ದಾನೆ ಎಂದು ರಹಸ್ಯವಾಗಿ ಹೇಳುತ್ತಾ ಕೃಷ್ಣನ ಮೇಲೆ ಮಿಥ್ಯಾಪವಾದವನ್ನು ಹೊರಿಸಿದನು. ಅದು ಎಲ್ಲೆಡೆ ಹರಡಿ ಕೃಷ್ಣನ ಕಿವಿಗೂ ಬಿದ್ದಿತು. ಅನವಶ್ಯಕವಾಗಿ ತನ್ನ ಮೇಲೆ ಅಪವಾದ ಬಂದುದರಿಂದ ಅದರ ಪರಿಮಾರ್ಜನೆಗಾಗಿ ಕೃಷ್ಣನು ಪ್ರಸೇನನು ಮಣಿಯೊಡನೆ ಅದೃಶ್ಯನಾದ ರಹಸ್ಯವನ್ನರಿಯಲು ಕೆಲ ಯಾದವರೊಡನೆ ಪ್ರಸೇನನು ತೆರಳಿದ ಮಾರ್ಗವಾಗಿಯೇ ಅವನನ್ನರಸುತ್ತಾ ಅರಣ್ಯಕ್ಕೆ ಹೊರಟು ಸ್ವಲ್ಪದೂರ ನಡೆದ ಮೇಲೆ ಅರಣ್ಯಮಧ್ಯದಲ್ಲಿ ಬಿದ್ದಿರುವ ಪ್ರಸೇನನ ದೇಹವನ್ನು ಕಂಡು ಕ್ರೂರಮೃಗದಿಂದ ಅವನು ಮೃತನಾಗಿರುವನೆಂದು ತರ್ಕಿಸಿ ಆ ಸುತ್ತಮುತ್ತ ಪರೀಕ್ಷಿಸಿ ಪ್ರಸೇನನ ಕುತ್ತಿಗೆಯಲ್ಲಿ ಉಳಿದಿರುವ ಸ್ಯಮಂತಕದೊಡನಿದ್ದ ಹಾರದ ತುಣುಕನ್ನೂ ಅಲ್ಲಿ ಒಡಮೂಡಿದ್ದ ಸಿಂಹದ ಹೆಜ್ಜೆಯ ಗುರುತನ್ನೂ ಯಾದವರಿಗೆ ತೋರಿಸಿ ಸಿಂಹದ ಪಾದದ ಗುರುತನ್ನು ಅನುಸರಿಸಿ ಮುಂದೆ ಹೊರಟನು.

ಸ್ವಲ್ಪದೂರದಲ್ಲಿ ದೊಡ್ಡ ಸಿಂಹವೊಂದು ಸತ್ತುಬಿದ್ದಿರುವುದನ್ನೂ ಅದನ್ನು ಸಂಹರಿಸಿದ ಒಂದು ಮೃಗದ ಹೆಜ್ಜೆಯ ಚಿನ್ಹೆಯನ್ನೂ ಗಮನಿಸಿ ಯಾದವರೊಡನೆ ಆ ಚಿನ್ಹೆಯನ್ನು ಅನುಸರಿಸಿ ಮುಂದುವರಿದನು. ಆ ಹೆಜ್ಜೆಯ ಗುರುತು, ಅವರನ್ನು ಒಂದು ಗುಹೆಯ ಬಾಗಿಲಿಗೆ ಕರೆತಂದಿತು. ಕೃಷ್ಣನು ಆ ಮೃಗದ ಪಾದದ ಗುರುತು ಗುಹೆಯೊಳಗೆ ಹೋಗಿರುವುದನ್ನು ಎಲ್ಲಾ ಯಾದವರಿಗೂ ಪ್ರದರ್ಶಿಸಿ, ಅವರೆಲ್ಲರೂ ಅಲ್ಲೇ ಇರುವಂತೆ ಹೇಳಿ ತಾನೊಬ್ಬನೇ ಬಿಲವನ್ನು ಪ್ರವೇಶಿಸಿದನು.

ಗುಹೆಯೊಳಗೆ ಬಂದ ಮಾಧವನು ಅಲ್ಲಿರುವ ಜಾಂಬುವಂತನನ್ನು ನೋಡಿದನು. ಸರ್ವೇಶ್ವರನಾದ ಶ್ರೀಕೃಷ್ಣನಿಗೆ ಜಾಂಬುವಂತನೊಡನೆ ಯುದ್ಧದ ಪ್ರಸಂಗ ಬಂದೊದಗಿತು. ಹಿಂದಿನ ತನ್ನ ಅವತಾರದಲ್ಲಿ ತನ್ನ ಭಕ್ತನಾಗಿದ್ದ ಜಾಂಬುವಂತನೊಡನೆ ಮೊದಲು ಅವನಿಗೆ ವ್ಯಥೆಯಾಗದಂತೆ ಸಾಮಾನ್ಯವಾಗಿ ಯುದ್ಧಮಾಡಿ ಅನಂತರ ತನ್ನ ಸ್ವರೂಪವನ್ನೂ ಮಹಾಸಾಮರ್ಥ್ಯವನ್ನು ತೋರುತ್ತಾ ಹೋರಾಡಿದನು. ಶ್ರೀಕೃಷ್ಣನ ಮುಷ್ಟಿ ಪ್ರಹಾರಗಳಿಂದ ಚೂರ್ಣೀಕೃತಾಂಗನಾದ, ಜೀರ್ಣಶರೀರಿಯಾದ ಜಾಂಬುವಂತನು ತಾನಿನ್ನು ಬದುಕುವುದಿಲ್ಲವೆಂದು ಮನಗಂಡು ದುಃಖದಿಂದ ತನ್ನ ಆರಾಧ್ಯದೇವನಾದ ಶ್ರೀರಾಮಚಂದ್ರ ಪ್ರಭುವನ್ನು ಸ್ಮರಿಸುತ್ತಾ ದಾಶರಥಿಗೆ ಶರಣು ಹೋದನು. ಆಗ ಸಕಲ ಗುಣ-ಕರ್ಮಭೇದರಹಿತನಾದ ಸಾಕ್ಷಾತ್ ರಾಮಭದ್ರನ ಸ್ವರೂಪವನ್ನು ಶ್ರೀಕೃಷ್ಣನಲ್ಲಿ ಕಂಡು ಜಾಂಬುವಂತನು ಆಶ್ಚರ್ಯ ಚಕಿತನಾಗಿ ಶ್ರೀಕೃಷ್ಣನೇ ತನ್ನ ಆರಾಧ್ಯಮೂರ್ತಿಯಾದ ಶ್ರೀರಾಮಚಂದ್ರನೆಂದರಿತು ಆನಂದತುಂದಿಲನಾಗಿ ಭಕ್ತಿಪಾರವಶ್ಯದಿಂದ ಯದುನಂದನನ ಪಾದಗಳಿಗೆ ಸಾಷ್ಟಾಂಗವೆರಗಿ ಕ್ಷಮೆ ಯಾಚಿಸಿ, ಶ್ರೀಕೃಷ್ಣನಿಂದ ಅನುಗೃಹೀತನಾಗಿ ಶ್ರೀಹರಿಭಕ್ತ್ಯಾದಿ ಸದ್ಗುಣಮಂಡಿತನಾದ

ಮಂಗಳಕರಳಾದ "ರೋಹಿಣಿ"ಯೆಂಬ ತನ್ನ ಪುತ್ರಿಯನ್ನು ಪತ್ನಿಯಾಗಿ ಸ್ವೀಕರಿಸಬೇಕೆಂದು ಪ್ರಾರ್ಥಿಸಿ ರೋಹಿಣಿಯನ್ನೂ ಸ್ಯಮಂತಕಮಣಿಯನ್ನೂ ಶ್ರೀವಾಸುದೇವನಿಗೆ ಸಮರ್ಪಿಸಿ ಶ್ರೀಹರಿಯನ್ನು ಸ್ತುತಿಸಿ ಸಂತೋಷಪಡಿಸಿ ಕೃತಾರ್ಥನಾದನು.

ಅದರಿಂದ ಹೃಷ್ಟನಾದ ಶ್ರೀಕೃಷ್ಣನು ಜಾಂಬುವಂತನ ಜೀರ್ಣದೇಹವನ್ನು ಅವನಿಗೆ ವೇದನೆಯಾಗದಂತೆ ಚಕ್ರದಿಂದ ಭೇದಿಸಿ ಅವನನ್ನು ತರುಣನನ್ನಾಗಿ ಮಾಡಿದನು. ಯಾದವಕುಲಶೇಖರನು ನಿಜಭಕ್ತನ ಕೋರಿಕೆಯಂತೆ ಜಾಂಬುವಂತನ ಕುವರಿಯಾದ ಜಾಂಬವತಿಯ(ರೋಹಿಣಿಯ) ಕರ ಪಿಡಿದನು ಮತ್ತು ನೂತನ ಪತ್ನಿ ಮತ್ತು ಸ್ಯಮಂಕಮಣಿಯೊಡನೆ ಜಾಂಬುವಂತನಿಂದ ಬೀಳ್ಕೊಂಡು ಗುಹೆಯಿಂದ ಹೊರಹೊರಟನು.

ಇತ್ತ ಗುಹೆಯ ಹೊರಗಿದ್ದ ಯಾದವರು ಬಹುದಿನವಾದರೂ ಕೃಷ್ಣನು ಬರದಿದ್ದುದರಿಂದ, ನಾವು ಸುಮ್ಮನೆ ಇಲ್ಲೇಕೆ ಕಾಯಬೇಕು? ಕೃಷ್ಣನು ಹೇಗಿದ್ದರೂ ಸಫಲನಾಗಿ ಬಂದೇ ಬರುತ್ತಾನೆ ಎಂದು ಯೋಚಿಸಿ ಎಲ್ಲರೂ ದ್ವಾರಕೆಗೆ ತೆರಳಿದ್ದರು. ತಮ್ಮ ನಿರೀಕ್ಷೆಯಂತೆ ಕೃಷ್ಣನು ಬಂದಿದ್ದರಿಂದ ಅವರೆಲ್ಲರಿಗೆ ತುಂಬಾ ಸಂತೋಷವಾಯಿತು. ಯಾದವರಿಗೆಲ್ಲ ನಾಯಕನಾದ ಶ್ರೀಕೃಷ್ಣನು ಸಮಸ್ತ ಯಾದವರ ಸಭೆ ಸೇರಿಸಿ, ಎಲ್ಲರ ಸಮಕ್ಷ ಜರುಗಿದ ವಿಚಾರಗಳನ್ನು ನಿರೂಪಿಸಿ ಸತ್ರಾಜಿದ್ರಾಜನಿಗೆ ಸ್ಯಮಂತಕಮಣಿಯನ್ನು ಕೊಟ್ಟನು. ಅದರಿಂದ ಸತ್ರಾಜಿತನ ಮುಖವು ಕಾಂತಿಹೀನವಾಯಿತು. ಅನ್ಯಾಯವಾಗಿ ಶ್ರೀಕೃಷ್ಣನ ಮೇಲೆ ಮಿಥ್ಯಾಪವಾದ ಹೊರಿಸಿ ಅವನನ್ನು ಅಪಕೀರ್ತಿಗೆ ಗುರಿ ಮಾಡಿದ್ದಕ್ಕಾಗಿ ಅವನಿಗೆ ದುಃಖವಾಯಿತು. ಪಶ್ಚಾತ್ತಪ್ತನಾದ ಸತ್ರಾಜಿತನು ತಾನೆಸಗಿದ ಪಾಪಪರಿಹಾರಕ್ಕಾಗಿ ಜನಾರ್ದನನಾದ ಸಿರಿಕೃಷ್ಣನಿಗೆ ತನ್ನ ಕುಮಾರಿಯಾದ ಸತ್ಯಭಾಮಾದೇವಿಯನ್ನು ಕೊಟ್ಟು ವಿವಾಹಮಾಡಿದನು. ಮತ್ತು ಸ್ಯಮಂತಕಮಣಿಯನ್ನು ಕೃಷ್ಣನಿಗೆ ನೀಡಿದನು. ಆದರೆ ಕೃಷ್ಣನದನ್ನು ಮತ್ತೆ ಸತ್ರಾಜಿದ್ರಾಜನಿಗೇ ಕೊಟ್ಟು ತನ್ನ ನಿಸ್ಪೃಹತೆಯನ್ನು ಪ್ರದರ್ಶಿಸಿ ಸತ್ಯಭಾಮೆಯೊಡನೆ ಸಂತೋಷದಿಂದ ಕಾಲಕಳೆದನು.

ಈಗ ನಿರ್ಣಯಾಚಾರ್ಯರು ಸತ್ಯಭಾಮೆಯು ಮೊದಲು ಯಾರು? ಮುಂತಾದ ವಿಚಾರವನ್ನು ನಿರೂಪಿಸುತ್ತಾರೆ - ಸತ್ಯಭಾಮೆಯು ಸಾಕ್ಷಾದ್ರಮಾದೇವಿಯೇ ಅಹುದು. ಶ್ರೀಹರಿಯ ಪತ್ನಿಯರಾದ ಶ್ರೀ-ಭೂ-ದುರ್ಗಾದೇವಿಯರಲ್ಲಿ ಎರಡನೆಯ ಲಕ್ಷ್ಮೀಸ್ವರೂಪವಾದ ಭೂದೇವಿಯೇ ಸತ್ಯಭಾಮಾದೇವಿಯು. ಭೂಃ ಎಂಬ ಹೆಸರಿನ ರಮಾದೇವಿಯೇ ಸತ್ರಾಜಿದ್ರಾಜನಿಗೆ ಪುತ್ರಿಯಾಗಿ ಸತ್ಯಭಾಮಾ ಎಂಬ ಹೆಸರಿನಿಂದ ಅವತರಿಸಿದ್ದಳು. ರಮೆಯ ಅವತಾರಳಾದುದರಿಂದಲೇ ಸತ್ಯಭಾಮೆಯು ಸಮಸ್ತಲೋಕದಲ್ಲಿಯೂ ಅತ್ಯಂತ ರೂಪಸಿಯೂ ಉತ್ತಮಳೂ ಆಗಿದ್ದಾಳೆ. ಸತ್ಯಭಾಮಾ-ರುಕ್ಮಿಣಿಯರು ಶ್ರೀಲಕ್ಷ್ಮೀದೇವಿಯ ಎರಡು ರೂಪವಾದ್ದರಿಂದ ಶ್ರೀಕೃಷ್ಣನ ಪತ್ನಿಯರಲ್ಲಿ ರುಕ್ಮಿಣಿ-ಸತ್ಯಭಾಮೆಯರು ಉತ್ತಮರೂ ಅತ್ಯಂತ ಪ್ರಿಯರೂ, ಅನುಗ್ರಹಪಾತ್ರರೂ ಆಗಿದ್ದಾರೆ. ಏಕೆಂದರೆ ಅವರು ಶ್ರೀಹರಿಗೆ ಸದಾ ದೇಶ-ಕಾಲಗಳಿಂದ ವಿಯೋಗ ರಹಿತರಾಗಿದ್ದಾರೆ. (ಶ್ರೀರಮಾದೇವಿಯೂ ಶ್ರೀಹರಿಯಿಂದ ಅವಿಯೋಗಿನಿ ಎಂದು ಭಾವ) ಶ್ರೀರಮೆಯ ಅವತಾರರಾದುದರಿಂದಲೇ ರುಕ್ಮಿಣೀ ಸತ್ಯಭಾಮೆಯರು ಶ್ರೀವಾಸುದೇವನಿಗೆ ಅತಿಪ್ರಿಯರೆಂದು ತಿಳಿಯಬೇಕು.

ರೋಹಿಣಿದೇವಿಯು (ಜಾಂಬವತಿಯು) ಶ್ರೀಕೃಷ್ಣಪರಮಾತ್ಮನಿಂದ ಸಾಂಬ ಎಂಬ ಪುತ್ರನನ್ನು ಪಡೆದಳು. ಬ್ರಹ್ಮದೇವರ ಅಂಶದಿಂದ ಕೂಡಿದ ಷಣ್ಮುಖನೇ ಸಾಂಬನಾಗಿ ಅವತರಿಸಿದನು. ಎಣಿಸಲಸದಳವಿಲ್ಲದ ಸದ್ಗುಣಸಾಗರನೂ ಪ್ರಭುವೂ ಆದ ಶ್ರೀಹರಿಯು (ಕೃಷ್ಣನು) ಸಮಸ್ತ ಜಗತ್ತನ್ನೂ ಪಾಲಿಸುತ್ತಿರಲು ಒಂದು ದಿನ ಓರ್ವ ಜನಾರ್ದನನೆಂಬ ಹೆಸರಿನ ದ್ವಿಜನು ಶ್ರೀಕೃಷ್ಣನ ಬಳಿಗೆ ಬಂದು ನಮಸ್ಕರಿಸಿ ಕೃಷ್ಣನಿಂದ ಮಾನಿತನಾಗಿ ಇಂತು ವಿಜ್ಞಾಪಿಸಿದನು. "ದೇವ, ನಾನು ಒಬ್ಬ ಪಾಪಾತ್ಮನ ದೂತನಾಗಿ ಬಂದಿದ್ದೇನೆ. ಆ ಪಾಪಿಯ ಸಂದೇಶವೂ ಪಾಪಪೂರ್ಣವೇ ಆಗಿದೆ. ಅದನ್ನು ನಾನೀಗ ತಿಳಿಸಬೇಕಾಗಿದೆ. ಇಂತು ಅಪಚಾರ ಮಾಡುವ ನನ್ನನ್ನು ಕ್ಷಮಿಸು ತಂದೆ. ಪ್ರಭು! ನಿನಗೆ ತಿಳಿಯದ ವಿಚಾರವಾವುದೂ ಇಲ್ಲ. ಆದರೂ ಕರ್ತವ್ಯತ್ವೇನ ನೀನು ಆಜ್ಞಾಪಿಸಿದರೆ ನಿರೂಪಿಸುತ್ತೇನೆ" - ಎಂದರುಹಿ ಕೃಷ್ಣನ ಅಣತಿಯಂತೆ ಆ ಬ್ರಾಹ್ಮಣನು ಹೀಗೆ ಹೇಳಿದನು:-

ಸಾಲ್ವದೇಶದ ರಾಜನಾದ ಬ್ರಹ್ಮದತ್ತನಿಗೆ ಜ್ಯೇಷ್ಠ ಮಹಿಷಿಯಲ್ಲಿ ಜನಿಸಿದವನು ಸಾಲ್ವನು. ಕಿರಿಯರಾಣಿಯ ಮಕ್ಕಳು ರುದ್ರದೇವರನ್ನು ಆಶ್ರಯಿಸಿದ ಹಂಸ, ಮತ್ತು ಡಿಭಿಕರು. ಬ್ರಹ್ಮದತ್ತನು ರುದ್ರದೇವರನ್ನು ತಪಸ್ಸಿನಿಂದ ಸಂತೋಷಪಡಿಸಿ ಅವನ ವರದಿಂದ ಹಂಸ ಡಿಭಿಕರನ್ನು ಪುತ್ರರಾಗಿ ಪಡೆದನು. ಅವರು ಮಗಧಚಕ್ರವರ್ತಿಯಾದ ಜರಾಸಂಧನ ಶಿಷ್ಯರು. ಹಂಸಡಿಭಿಕರು ರುದ್ರದೇವರನ್ನು ಕುರಿತು ತಪಸ್ಸು ಮಾಡಿ ಅವರ ಅನುಗ್ರಹದಿಂದ ಅಜೇಯತ್ವ (ಮತ್ತೊಬ್ಬರಿಂದ ಜಯಿಸಲಾಗದ್ದು) ಮತ್ತು ಅವಧ್ಯತ್ವ (ಇನ್ನೊಬ್ಬರಿಂದ ಸಾವಿಲ್ಲದಿರುವಿಕೆ) ವರವನ್ನು ಪಡೆದರು. ಮಹಾದೇವರು ಅವರ ಭಕ್ತಿಗೆ ಮೆಚ್ಚಿ ಮೇಲಿನ ವರಗಳನ್ನೂ ಜೊತೆಗೆ ಸರ್ವದಾ ತಮ್ಮ ಸನ್ನಿಧಿಯಲ್ಲಿದ್ದು ತಮ್ಮ ಮುಂದೆ ಚರಿಸುವ ಭೂತಗಣಕ್ಕೆ ಸೇರಿದ ಮಹೋದರ ಮತ್ತು ಕುಂಡಧಾರಿ ಎಂಬ ಇಬ್ಬರು ಬಲಶಾಲಿಗಳೂ, ಅವಧ್ಯತ್ವ, ಅಜೇಯತ್ವವರ ವಿಶಿಷ್ಟರೂ ಆದ ಇಬ್ಬರನ್ನು ಅಂದರೆ ಎರಡು ಭೂತಗಳನ್ನೂ, ಹಂಸ-ಡಿಭಿಕರ ಸಹಾಯಕ್ಕಾಗಿ ದಯಪಾಲಿಸಿದರು. ಮಹೋದರ-ಕುಂಡಧರರು ಸ್ವಾಭಾವಿಕವಾಗಿ ದೇವಯೋನಿಯವರಾದ್ದರಿಂದ ಮರಣರಹಿತರಾಗಿದ್ದರೂ, ಶಿವನಿಂದ ಅವಧ್ಯತ್ವ-ಅಜೇಯತ್ವವರವನ್ನು ಪಡೆದರು. ರುದ್ರದೇವರ ವರವಿಲ್ಲವಾದಲ್ಲಿ ಅವರು ಸರ್ವಥಾ ಅಜೇಯರೇನೂ ಅಲ್ಲವೆಂದು ತಿಳಿಯಬೇಕು. ಹಂಸಡಿಭಿಕರು ಶಿವವರಬಲದಿಂದ ಅವಧ್ಯತ್ವ ಅಜೇಯತ್ವವುಳ್ಳವರಾದುದಲ್ಲದೆ, ಅಂತಹುದೇ ವರಪಡೆದ ಆ ಈರ್ವರು ಭೂತಗಳ ಬೆಂಬಲವನ್ನೂ ಪಡೆದಿರುವುದರಿಂದ ಅವರು ಮಹಾ ಉದ್ಧಟರಾಗಿದ್ದಾರೆ. ಅವರೀಗ ತಮ್ಮ ಪಿತನಾದ ಬ್ರಹ್ಮದತ್ತನಿಂದ ರಾಜಸೂಯ ಯಾಗವನ್ನು ಮಾಡಿಸಲು ಉದ್ಯುಕ್ತರಾಗಿದ್ದಾರೆ.

ಮಹಾಬಲವಂತನಾದ ಜರಾಸಂಧ ಚಕ್ರವರ್ತಿಯಿರುವಾಗ ಅವನನ್ನು ಜಯಿಸದೇ ರಾಜಸೂಯಯಾಗವನ್ನವರು ಹೇಗೆ ಮಾಡಿಸಲು ಇಚ್ಛಿಸಿದರು? ಎಂದರೆ ಜರಾಸಂಧನು, ತನ್ನ ಶಿಷ್ಯರಾದ ಹಂಸಡಿಭಿಕರು ಆ ಯಾಗವನ್ನು ಹಮ್ಮಿ-ಕೊಂಡಿರುವುದರಿಂದ ರಾಜಸೂಯಯಾಗಕ್ಕೆ ವಿರೋಧವನ್ನು ವ್ಯಕ್ತಪಡಿಸದಿರುವುದರಿಂದ ಹಂಸಡಿಭಿಕರು ದೇವತೆಗಳ ಪಕ್ಷದಲ್ಲಿರುವ ದೇವತೆಗಳ ಅವತಾರರಾದ ರಾಜರುಗಳನ್ನು ಮುಖ್ಯವಾಗಿಯೂ, ಅಸುರರನ್ನೂ, ದೇವತೆಗಳನ್ನೂ ಸಾಮಾನ್ಯತಃ ಜಯಿಸಿ ತಂದೆಯಿಂದ ರಾಜಸೂಯ ಯಜ್ಞವನ್ನು ಮಾಡಿಸಲು ಪ್ರವೃತ್ತರಾಗಿದ್ದಾರೆ.

ವೇದವಿದ್ಯಾವಿಶಾರದರು ರಾಜಸೂಯಯಾಗವು ವೈಷ್ಣವಯಜ್ಞವೆಂದು ಹೇಳುವುದರಿಂದ ವಿಷ್ಣುದೇವತಾಕವಾದ ಆ ಯಜ್ಞವನ್ನಾಚರಿಸಲು ಇಚ್ಛಿಸಲಿಲ್ಲ. ಹಾಗಾದರೆ ಅವೈಷ್ಣವರಾದ ಹಂಸಡಿಭಿಕರು ಈ ವೈಷ್ಣವಯಾಗವನ್ನು ತಂದೆಯಿಂದ ಅದೆಂತು ಆಚರಿಸಲಾಶಿಸಿದರು? ಅದಕ್ಕೆ ಕಾರಣವೇನು ಎಂದರೆ, ತಮ್ಮ ತಂದೆಗೆ ಕೀರ್ತಿ ಬರಬೇಕು, ಹಾಗೂ ನಿನ್ನನ್ನು ತಿರಸ್ಕರಿಸಬೇಕು ಎಂಬ ಮಹತ್ವಾಕಾಂಕ್ಷೆಯಿಂದ ಯಾಗ ಮಾಡಿಸಲುದ್ಯುಕ್ತರಾಗಿದ್ದಾರೆ. ಹೇ ಅಚ್ಯುತ! ಆ ದುಷ್ಟರು ನಿನಗೆ ಒಂದು ಸಂದೇಶವನ್ನು ತಲುಪಿಸಲು ನನ್ನನ್ನು ಕಳುಹಿಸಿರುತ್ತಾರೆ. ಅವರು ಹೀಗೆ ಹೇಳಿದ್ದಾರೆ "ಕೃಷ್ಣ! ನಾವು ರಾಜಸೂಯ ಯಾಗವನ್ನು ನೆರವೇರಿಸಲಿದ್ದೇವೆ. ನೀನು ಸಮುದ್ರವನ್ನು ಆಶ್ರಯಿಸಿಕೊಂಡಿದ್ದೀಯೆ. ಆದ್ದರಿಂದ ನೀನು ಲವಣ ಸಮುದ್ರ ಸಂಬಂಧಿಯಾದ ಬಹುಭಾರವುಳ್ಳ (ಅಂದರೆ 20 ತೊಲೆ) ಅನರ್ಘ್ಯರತ್ನಗಳನ್ನು ನಮಗೆ ಕಪ್ಪರೂಪವಾಗಿ ತಂದೊಪ್ಪಿಸಬೇಕು. ಇದು ನಮ್ಮ ಆಜ್ಞೆ!" ಪ್ರಭು, ಇಂತಹ ಪಾಪಕಾರ್ಯವನ್ನು ನನ್ನ ದ್ವಾರಾ ಮಾಡಿಸುತ್ತಿದ್ದಾರೆ. ನೀನು ಈ ನನ್ನ ಅಪರಾಧವನ್ನು ಕ್ಷಮಿಸಬೇಕು" ಎಂದು ಹೇಳಿ ಶ್ರೀಕೃಷ್ಣನಿಗೆ ನಮಸ್ಕರಿಸಿದನು.

ಸಮಸ್ತ ಯಾದವರೂ ಆ ಜನಾರ್ದನನಾಮಕ ಬ್ರಾಹ್ಮಣನದ್ವಾರಾ ಹಂಸಡಿಭಿಕರು ಹೇಳಿಕಳಿಸಿದ ಸಂದೇಶವನ್ನಾಲಿಸಿ ಅಪಹಾಸ್ಯ ಮಾಡಿ ನಕ್ಕರು. ಶ್ರೀಕೃಷ್ಣನು ಸಾತ್ಯಕಿಯನ್ನು ಕರೆದು "ಸಾತ್ಯಕಿ! ನೀನು ನೃಪಾಧಮರಾದ ಹಂಸಡಿಭಿಕರ ಬಳಿಗೆ ಹೋಗಿ- 'ನಿಮ್ಮ ಸಂದೇಶ ತಲುಪಿದೆ. ಶ್ರೀಕೃಷ್ಣನು ಅತಿ ಶೀಘ್ರವಾಗಿ ಶಸ್ತ್ರಾಸ್ತ್ರಗಳೊಡನೆ ಬಂದು ನಿಮಗೆ ತಕ್ಕ ಕಪ್ಪವನ್ನು ಕೊಡುತ್ತಾನೆ! ನೀವು ಪುಷ್ಕರ ಕ್ಷೇತ್ರಕ್ಕೆ ಕಪ್ಪವನ್ನು ಸ್ವೀಕರಿಸಲು ಬನ್ನಿ!' ಎಂದು ಹೇಳಿ ಬಾ" ಎಂದು ಮೇಘಗಂಭೀರಧ್ವನಿಯಿಂದ

ಆಜ್ಞಾಪಿಸಿದನು. ಸಾತ್ಯಕಿಯು ನಸುನಕ್ಕು ಕೃಷ್ಣನ ದೂತನಾಗಿ ಆ ಜನಾರ್ದನ ಬ್ರಾಹ್ಮಣನೊಡನೆ ಹಂಸಡಿಭಿಕರಲ್ಲಿಗೆ ಹೋಗಿ ಶ್ರೀಕೃಷ್ಣನ ಸಂದೇಶವನ್ನು ಅವರಿಗೆ ತಿಳಿಸಿ, ಅವರನ್ನು ತೃಣೀಕರಿಸಿ ಮತ್ತೆ ಶ್ರೀಮಾಧವನ ಬಳಿಗೆ ಬಂದು ಸೇರಿದನು.

ಹಂಸಡಿಭಿಕರು ಕೃಷ್ಣನ ಸನ್ನಿಧಿಗೆ ಜನಾರ್ದನನೆಂಬ ಬ್ರಾಹ್ಮಣನನ್ನು ದೂತನನ್ನಾಗಿ ಕಳಿಸುವುದಕ್ಕೆ ಮುಂಚಿತವಾಗಿ ಅವರೆಸಗಿದ ಬ್ರಹ್ಮದ್ರೋಹವನ್ನೀಗ ನಿರ್ಣಯಾಚಾರ್ಯರು ನಿರೂಪಿಸುತ್ತಾರೆ.

ಶ್ರೀಕೃಷ್ಣನಿಗೆ ಋಷಿಮುನಿಗಳಲ್ಲಿರುವ ಪ್ರೀತಿಯನ್ನೂ, ಆದರವನ್ನೂ ತಿಳಿದೋ ಏನೋ ಕೃಷ್ಣನಿಗೆ ದುಃಖವಾಗುವಂತೆ ಮಾಡಲು ಅತಿದುಷ್ಟರಾದ ಆ ಹಂಸಡಿಭಿಕರು ಮೂರು ಸಾವಿರ ಜನ ಶ್ರೇಷ್ಠರಾದ ಯತೀಶ್ವರಶಿಷ್ಯರಿಂದ ಸಹಿತರಾದ, ರುದ್ರದೇವರ ಅವತಾರರಾದ, ಸರ್ವಜ್ಞರಾದ ದೂರ್ವಾಸಮುನಿಗಳನ್ನು ಬಂಧಿಸಿ ಹಿಂಸಿಸಿ ಅವರೆಲ್ಲರ ಕೌಪೀನಗಳನ್ನು ಕಿತ್ತುಹಾಕಿ, ಅವರ ದಂಡಕಮಂಡಲುಗಳನ್ನು ಮುರಿದು ಹಾಕಿ ಬಹಳ ಅಪಮಾನಗೊಳಿಸಿದ್ದರು. ಮಹಾತಪಸ್ವಿಗಳಾದ ದೂರ್ವಾಸರು ಹಂಸಡಿಭಿಕರಿಗೆ ಶಾಪವಿತ್ತು ನಾಶಪಡಿಸಬಹುದಾಗಿದ್ದರೂ, ರುದ್ರಸ್ವರೂಪರಾದ ತಮ್ಮಿಂದಲೇ (ಮೂಲರೂಪದ ರುದ್ರವರದಿಂದಲೇ) ಜನಿಸಿ ಅವಧ್ಯತ್ವ-ಅಜೇಯತ್ವವರಗಳನ್ನು ಪಡೆದಿದ್ದುದರಿಂದ ಹಂಸಡಿಭಿಕರಿಗೆ ದೂರ್ವಾಸರು ಶಾಪಕೊಡಲು ಸಮರ್ಥರಾಗಲಿಲ್ಲ. ಅಂತೆಯೇ ದೂರ್ವಾಸ ಮುನಿಗಳು ಮೂರು ಸಹಸ್ರ ಸಂಖ್ಯಾಕರಾದ ಶ್ರೇಷ್ಠಯತಿಗಳಾದ ಶಿಷ್ಯರೊಡನೆ, ಸಮಸ್ತರನ್ನೂ ನಾಶಪಡಿಸಲು ಅತ್ಯಂತ ಸಮರ್ಥನಾದ ಶ್ರೀಕೇಶವನ (ಕೃಷ್ಣನ) ಬಳಿಗೆ ಬಂದು ತಮಗಾದ ಪರಾಭವ-ಅಗೌರವಗಳನ್ನು ನಿವೇದಿಸಿ ಆ ದುಷ್ಟರಿಗೆ ತಕ್ಕ ಶಿಕ್ಷೆ ಮಾಡಬೇಕೆಂದು ಪ್ರಾರ್ಥಿಸಿದರು. ಶ್ರೀಕೃಷ್ಣನು ಆ ದೂರ್ವಾಸರನ್ನು ಶಿಷ್ಯಮಂಡಲಿಯನ್ನೂ ಆದರಪೂರ್ವಕವಾಗಿ ಸನ್ಮಾನಿಸಿ, ಅತಿಥಿ ಸತ್ಕಾರ ಮಾಡಿ ಅವರೆಲ್ಲರಿಗೂ ಕೌಪೀನ, ದಂಡಕಮಂಡಲುಗಳನ್ನು ಕೊಡಿಸಿ ಗೌರವಿಸಿ ಅವರೆಲ್ಲರೊಡನೆ ದುಷ್ಟರಾದ ಸಾಲ್ವ ಪುತ್ರರನ್ನು ಸಂಹರಿಸಲು ಪುಷ್ಕರ ಕ್ಷೇತ್ರಕ್ಕೆ ಪ್ರಯಾಣ ಬೆಳೆಸಿದನು.

ಇತ್ತ ಜರಾಸಂಧನು ತನ್ನ ಶಿಷ್ಯರಾದ ಹಂಸಡಿಭಿಕರು ದೂರ್ವಾಸರಿಗೆ ಮಾಡಿದ ಅಪಚಾರ ವಿಚಾರವನ್ನರಿತು ವಿಷಾದಿಸಿ ಅತ್ರಿಪುತ್ರರಾದ ದೂರ್ವಾಸರು ಸಾಕ್ಷಾತ್ ರುದ್ರದೇವರ ಅವತಾರರೆಂದು ಬಲ್ಲವನಾದ್ದರಿಂದ ಅಂಥ ಪೂಜ್ಯರಾದ ದೂರ್ವಾಸರಿಗೆ ಅಪಚಾರ – ದ್ರೋಹವೆಸಗಿದ ಹಂಸಡಿಭಿಕರ ಬಗ್ಗೆ ಅಸಮಾಧಾನಗೊಂಡು ದೂರ್ವಾಸದ್ವೇಷಿಗಳಾದ ಅವರೊಡನೆ ಸಂಬಂಧವನ್ನು ತ್ಯಜಿಸಿಬಿಟ್ಟನು.

ಶ್ರೀಕೃಷ್ಣನು ಪುಷ್ಕರಕ್ಕೆ ಬಂದ ವಾರ್ತೆ ತಿಳಿದು ಹಂಸಡಿಭಿಕರೂ ಅಲ್ಲಿಗೆ ಬಂದರು. ಅವರನ್ನು ಅನುಸರಿಸಿ ಬ್ರಹ್ಮದತ್ತನೂ, ರುದ್ರಭೃತ್ಯರಾದ ಇಬ್ಬರು ಭೂತಗಣದವರೂ ಅವರ ಸಹಾಯಕ್ಕಾಗಿ ಬಂದೊದಗಿದರು. ಸೌಭಾಧಿಪತಿಯಾದ ಸಾಲ್ವನು ಬ್ರಹ್ಮದತ್ತನ ಹಿರಿಯರಾಣಿಯ ಪುತ್ರನು, ಹಂಸಡಿಭಿಕರು ಬ್ರಹ್ಮದತ್ತನ ಕಿರಿಯರಾಣಿಯ ಮಕ್ಕಳು.

ಪೂರ್ವದಲ್ಲಿ ವಿಚಕ್ರನೆಂಬ ಅಸುರನು ಬ್ರಹ್ಮದೇವರನ್ನು ತಪಸ್ಸಿನಿಂದ ಮೆಚ್ಚಿಸಿ ಅವರಿಂದ ಅವಧ್ಯತ್ವ-ಅಜೇಯತ್ವವರವನ್ನು ಪಡೆದಿದ್ದನು. ಅದರ ಬಲದ ಹುಮ್ಮಸ್ಸಿನಿಂದ ಉದ್ಧತನಾಗಿ ದೇವತೆಗಳನ್ನು ಹಿಂಸಿಸುತ್ತಿದ್ದನು. ರಾಕ್ಷಸನಾದ ವಿಚಕ್ರನು ಹಂಸಡಿಭಿಕರ ಸಹಾಯಕ್ಕಾಗಿ ಪುಷ್ಕರಕ್ಷೇತ್ರಕ್ಕೆ ಬಂದು ಸೇರಿದನು. ಇದರಂತೆ ಹಿಡಿಂಬನೆಂಬ ದೈತ್ಯನೂ ಸಹ ರುದ್ರದೇವರಿಂದ 'ನಿನ್ನನ್ನು ಯಾರೂ ಜಯಿಸಲಾರರು, ಸಂಹರಿಸಲಾರರು' ಎಂದು ವರವನ್ನು ಪಡೆದಿದ್ದನು. ಈಗ ಅವನೂ ಹಂಸಡಿಭಿಕರ ಮಿತ್ರನಾಗಿದ್ದರಿಂದ ಅವರ ಸಹಾಯಕ್ಕಾಗಿ ಬಂದನು. ಹಂಸಡಿಭಿಕರಿಗೆ ಹತ್ತು ಅಕ್ಷೋಹಿಣೀ ಸೈನ್ಯವಿತ್ತು. ವಿಚಕ್ರನಿಗೆ ಆರು ಅಕ್ಷೋಹಿಣೀ ಸಂಖ್ಯಾಕವಾದ ಬಲಿಷ್ಠವಾದ ಸೈನ್ಯವಿತ್ತು. ಹಿಡಿಂಬನು ಒಂದು ಅಕ್ಷೋಹಿಣೀ ಸೈನ್ಯಯುಕ್ತನಾಗಿದ್ದನು. ಹೀಗೆ ಒಟ್ಟು ಹದಿನೇಳು ಅಕ್ಷೋಹಿಣೀ ಸೈನ್ಯಬಲದಿಂದ ಕೂಡಿದ ಹಂಸಡಿಭಿಕರು ಶ್ರೀಕೃಷ್ಣನೆಡೆಗೆ ಬಂದರು.

ಆಗ ಅಲ್ಲಿ ಭೀಕರ ದ್ವಂದ್ವಯುದ್ಧವು ಪ್ರಾರಂಭವಾಯಿತು. ಕೃಷ್ಣನು ವಿಚಕ್ರನೊಡನೆ ಹೋರಾಡಿದರೆ, ಬಲರಾಮನು ಹಂಸನೊಡನೆ ಸೆಣಸಾಡಿದನು. ಸಾತ್ಯಕಿಯು ಡಿಭಿಕನೊಡನೆ ಕದನಗೈದನು. ಶ್ರೀಕೃಷ್ಣನ ತಂದೆಯಾದ ವಸುದೇವನಿಗೆ ರೋಹಿಣೀದೇವಿಯಲ್ಲಿ ಜನಿಸಿದ ಗದನು ಸೋದರನಾದ ಕೃಷ್ಣನಿಗೆ ಬೆಂಬಲವಾಗಿ ಬಂದನು. ಚಂಡ ಪ್ರಚಂಡ-ಜಯವಿಜಯಾದಿ ವಿಷ್ಣುಪಾರ್ಷದರಲ್ಲಿ ಮೊದಲಿಗರಾದ ಚಂಡ ಪ್ರಚಂಡರಲ್ಲಿ ಒಬ್ಬನಾದ ಚಂಡನಾಮಕನಾದ ಶ್ರೀಹರಿಯ ದ್ವಾರಪಾಲಕನೇ ಈಗ ಗದನಾಗಿ ಅವತರಿಸಿದ್ದಾನೆ ಎಂದು ತಿಳಿಯಬೇಕು. ಇಂತಹ ಗದನು ಬ್ರಹ್ಮದತ್ತನನ್ನು ಯುದ್ಧಕ್ಕೆ ಆಹ್ವಾನಿಸಿದನು. ಮೂರು ಅಕ್ಷೋಹಿಣೀ ಸೈನ್ಯಯುಕ್ತರಾದ ಯಾದವರು ಹಿಡಿಂಬಾಸುರ ಮತ್ತು ಭೂತಗಣದವರಾದ ಮಹೋದರ-ಕುಂಡಧರರನ್ನು ಅಡ್ಡಗಟ್ಟಿ ಯುದ್ಧಮಾಡಲಾರಂಭಿಸಿದರು.

ವಿಚಕ್ರನು ಕೃಷ್ಣನ ಮೇಲೆ ಬಲವಾದ ಶಸ್ತ್ರಾಸ್ತ್ರಗಳನ್ನೆಸೆಯ ಹತ್ತಿದನು. ಕೃಷ್ಣನು ಅನೇಕ ಬಾಣಗಳಿಂದ ವಿಚಕ್ರನ ರಥ ಮತ್ತು ಆಯುಧಗಳನ್ನು ಕ್ಷಣಮಾತ್ರದಲ್ಲಿ ನಾಶ ಪಡಿಸಿದನು. ಆಗ ಆ ದೈತ್ಯನು ಕೃಷ್ಣನ ಮೇಲೆ ವೃಕ್ಷಗಳು ಮತ್ತು ಪರ್ವತಗಳನ್ನೆಸೆಯಲಾರಂಭಿಸಿದನು. ಶ್ರೀಕೃಷ್ಣನು ಆಗ ವಿಚಕ್ರನ ಶಿರಸ್ಸನ್ನು ಸುದರ್ಶನದಿಂದ ತರಿದು ಹಾಕಿದನು. ಆಗ ಬ್ರಹ್ಮದೇವರೇ ಮೊದಲಾದ ಅಮರರು ಆನಂದದಿಂದ ಜಯಜಯಕಾರ ಮಾಡುತ್ತಾ ಪುಷ್ಪವೃಷ್ಟಿ ಮಾಡುತ್ತಿರಲು ಸರ್ವಸಮರ್ಥನಾದ ಶ್ರೀಕೃಷ್ಣನು ರುದ್ರಭೃತ್ಯರಾದ ಮಹೋದರ-ಕುಂಡಧರರು ಯಾದವರನ್ನೆಲ್ಲಾ ನುಂಗತೊಡಗಿದಾಗ ಅಲ್ಲಿಗೆ ಬಂದನು. ಆ ಭೂತಗಳು ಯಾದವರನ್ನು ಯುದ್ಧದಿಂದ ಓಡಿಸಿ ಕೃಷ್ಣನ ಭುಜ-ಶಿರಸ್ಸುಗಳ ಮೇಲೆ ಕುಳಿತು ಬಲವಾಗಿ ಕೃಷ್ಣನ ಸುಂದರವಾದ ಕಿವಿಗಳನ್ನು ಕಚ್ಚಿದರು. ಮಹಾಬಲ ಸಾಗರನಾದ ಯದುನಂದನನು ತನ್ನ ಭುಜಚಲನ ಮಾತ್ರದಿಂದ ಆ ರುದ್ರಭೃತ್ಯಭೂತಗಳನ್ನು ತಿರಸ್ಕರಿಸಿ ಮಹಾವೇಗದಿಂದ ಆ ಭೂತಗಳು ಕೈಲಾಸ ಪರ್ವತದಲ್ಲಿ ಹೋಗಿ ಬೀಳುವಂತೆ ಮಾಡಿದನು. ಅಚಿಂತ್ಯಾದ್ಭುತ ಶಕ್ತನಾದ ಶ್ರೀಕೃಷ್ಣನು ಈ ಕಾರ್ಯವೆಸಗಿದ್ದು ಆಶ್ಚರ್ಯವೇನಲ್ಲ !

ಇತ್ತ ಉಗ್ರಸೇನ ಮಹಾರಾಜನಿಂದೊಡಗೂಡಿದ ವಸುದೇವನು, ಯಾದವಸೈನ್ಯವನ್ನು ಭಕ್ಷಿಸುತ್ತಿರುವ ಹಿಡಿಂಬಾಸುರನ ಮೇಲೆ ಶರವರ್ಷಗೈಯ್ಯಲಾರಂಭಿಸಿದನು. ಹಿಡಿಂಬರಾಕ್ಷಸನು ಉಗ್ರಸೇನ-ವಸುದೇವರು ಕುಳಿತಿದ್ದ ರಥವನ್ನು ಪುಡಿಪುಡಿ ಮಾಡಿ ಅವರ ಆಯುಧಗಳನ್ನು ನಾಶಪಡಿಸಿ, ತನ್ನ ಎರಡು ಕರಗಳಿಂದ ಅವರನ್ನು ಹಿಡಿದು ನುಂಗಲೆತ್ನಿಸುತ್ತಿರಲು ಗದಾಪಾಣಿಯಾದ ಬಲಭದ್ರನು ಹಂಸನೊಡನೆ ಯುದ್ಧಮಾಡುವುದನ್ನು ನಿಲ್ಲಿಸಿ ಹಿಡಿಂಬನತ್ತ ಧಾವಿಸಿದನು. ಆಗ ಅವನು ಉಗ್ರಸೇನ-ವಸುದೇವರನ್ನು ಬಿಟ್ಟು ಬಲರಾಮನ ಮೇಲೇರಿ ಹೋಗಿ ಮುಷ್ಟಿಗಳಿಂದ ಗುದ್ದಿದನು. ಬಲರಾಮನೂ ಹಿಡಿಂಬನ ವಕ್ಷಃಸ್ಥಳಕ್ಕೆ ಕೋಪದಿಂದ ಹೊಡೆದನು. ಹೀಗೆ ಅವರಿಬ್ಬರೂ ತಮ್ಮ ಭುಜಬಲ ಪರಾಕ್ರಮದಿಂದ ವಿಜೃಂಭಿಸುತ್ತಾ ಬಹುಕಾಲ ಮುಷ್ಟಿ ಯುದ್ಧನಿರತರಾದರು. ಆಗ ಬಲರಾಮನು ಹಿಡಿಂಬನನ್ನು ಮೊಳಕಾಲುಗಳಿಂದ ಹಿಡಿದು ಅತಿದೂರಕ್ಕೆ ಎಸೆದುಬಿಟ್ಟನು. ಹಿಡಿಂಬಾಸುರನಾಗ ಪುಷ್ಕರದಿಂದ ಐದು ಕ್ರೋಶ ದೂರಕ್ಕೆ ಹೋಗಿಬಿದ್ದನು. ಹಿಡಿಂಬನು ತನ್ನ ಸೈನ್ಯ ಮತ್ತು ಹಂಸಡಿಭಿಕರನ್ನು ತ್ಯಜಿಸಿ ಕಾಡಿಗೋಡಿದನು. ಬಲರಾಮನು ಅವನ ಬೆನ್ನಟ್ಟಿ ಹೋಗಿ ದುಷ್ಟನಾದ ಅಸುರನನ್ನು ಲೀಲೆಯಿಂದಲೇ ಸಂಹರಿಸಿ ವಿಜಯಾಟ್ಟಹಾಸದಿಂದ ಜಯಧ್ವನಿಗೈದನು.

ಇತ್ತ ಗದನು ವಯೋವೃದ್ಧನಾದ ಸಾಲ್ವ ದೇಶಾಧಿಪನಾದ ಬ್ರಹ್ಮದತ್ತನೊಡನೆ ಯುದ್ಧಮಾಡಿ ಅವನನ್ನು ನಿರಾಯುಧನನ್ನಾಗಿಯೂ ವಿರಥನನ್ನಾಗಿಯೂ ಮಾಡಿದನು. ಗದನೊಡನೆ ಯುದ್ಧ ಮಾಡಲಾಗದೆ ಬ್ರಹ್ಮದತ್ತನು ಓಡಿಹೋದನು. ಉತ್ತಮರಥಿಕನಾದ ಸಾತ್ಯಕಿಯು ಬ್ರಹ್ಮದತ್ತನ ಕಿರಿಯ ಮಗನಾದ ಡಿಭಿಕನೊಡನೆ ಕಾದಾಡಿದನು. ಶ್ರೇಷ್ಠ ಅಸ್ತ್ರಶಸ್ತ್ರಗಳಿಂದ ಹೋರಾಡುತ್ತ ಅವರಿಬ್ಬರೂ ವಿಜೃಂಭಿಸಿದರು. ಸಾತ್ಯಕಿಯು ಡಿಭಿಕನೊಡನೆ ಬಹುಕಾಲ ಯುದ್ಧಮಾಡಿ ಅವನ ಐದು ಜನ ಧನ್ವಿಗಳೂ ಸೇರಿದಂತೆ ಒಂದು ನೂರಾ ಐದು ಜನರನ್ನು ಕತ್ತರಿಸಿ ಹಾಕಿದನು. ಆಗ ಡಿಭಿಕನು ಶಿನಿಯ

ಪೌತ್ರನಾದ ಸಾತ್ಯಕಿಯ ಮೇಲೆ ಧಾಳಿ ಮಾಡಿದನು. ಶ್ರೇಷ್ಠ ಖಡ್ಗ-ಚರ್ಮ(ಗುರಾಣಿ) ಮುಂತಾದವುಗಳಿಂದ ಸಹಿತನಾದ ಸಾತ್ಯಕಿಯು ಅವನತ್ತ ಹೋದನು. ಅವರೀರ್ವರೂ ಶ್ರಮವಿಲ್ಲದಂತೆಯೇ ಮೂವತ್ತೆರಡು ವಿಧವಾಗಿ ಖಡ್ಗ ಯುದ್ಧದ ಕಲೆಯನ್ನು ಪ್ರದರ್ಶಿಸುತ್ತಾ ಒಬ್ಬರಿಗೊಬ್ಬರು ಜಗ್ಗದೆ ಬಹುಕಾಲ ಯುದ್ಧಮಾಡಿದರೂ ಯಾರೂ ಸೋಲಲಿಲ್ಲ. ಅದರಿಂದ ಇನ್ನು ಯುದ್ಧ ನಿರರ್ಥಕವೆಂದು ಬಗೆದು ಯುದ್ಧದಿಂದ ವಿರಮಿಸಿದರು.

ಆನಂತರ ಹಂಸಡಿಭಿಕರು ಕೃಷ್ಣನೊಡನೆ ಕಾದಾಡಲು ಹೋದರು. ಕೃಷ್ಣ ಪರಮಾತ್ಮನು ಬಾಣಪ್ರಯೋಗದಿಂದ ಅವರ ಆಯುಧಗಳನ್ನು ಕಡಿದು ಹಾಕಿದನು. ಕೃಷ್ಣನು ಅವರ ಮುಕ್ಕಾಲು ಭಾಗ ಸೈನ್ಯವನ್ನು ನಾಶಪಡಿಸಿದನು. ಕೇವಲ ಕಾಲುಭಾಗ ಮಾತ್ರ ಉಳಿದ ಸೈನ್ಯವನ್ನು ನೋಡಿ ಹಂಸಡಿಭಿಕರು ಕೃಷ್ಣನ ಭಯದಿಂದ ಯುದ್ಧ ಭೂಮಿಯಿಂದ ಪಲಾಯನ ಮಾಡಿದರು. ಇಂತು ವಿಜಯಶೀಲನಾದ, ಕಮಲಲೋಚನನಾದ, ಕಮಲಾಮನೋಹರನಾದ ಕೃಷ್ಣನನ್ನು ದೇವತೆಗಳು ಸ್ತುತಿಸಿದರು. ಅತಿಶಯ ಕಾಂತಿ ವಿರಾಜಿತನಾದ ಯದುಕುಲ ಚೂಡಾಮಣಿಯಾದ ಸರ್ವಸಮರ್ಥನಾದ ಶ್ರೀಕೃಷ್ಣನು ಅಂದು ರಾತ್ರಿ ಪುಷ್ಕರ ಕ್ಷೇತ್ರದಲ್ಲೇ ವಾಸಮಾಡಿ ವಿಶ್ರಾಂತಿ ಪಡೆದನು.

ಮರುದಿನ ಮಾಧವನು ಯಮುನಾತಟದಲ್ಲಿ ಓಡಿಹೋದ ಹಂಸಡಿಭಿಕರನ್ನು ಬೆನ್ನಟ್ಟಿ ಹೊರಟು ಅಣ್ಣ ಬಲರಾಮ-ನೊಡಗೂಡಿ ಅಳಿದುಳಿದ ಸೈನ್ಯದೊಡನೆ ಕಾಲ್ದೆಗೆದ ಹಂಸಡಿಭಿಕರನ್ನು ತಡೆಗಟ್ಟಿದನು. ಹಂಸಡಿಭಿಕರು ಕ್ರೋಧೋನ್ಮತ್ತರಾಗಿ ಮತ್ತೆ ತಮ್ಮ ಸೈನ್ಯದೊಡನೆ ಹಿಂದಿರುಗಿ ಬಂದು ಸಕಲ ಯಾದವರ ಮೇಲೆ ಮಾರ್ಗಣಗಳಿಂದ (ಬಾಣಗಳಿಂದ) ಮಳೆಗರೆದರು. ಮಹಾಧನುರ್ಧಾರಿಯಾದ ಹಂಸನು ಹಲಾಯುಧನಾದ ಬಲರಾಮನ ಮೇಲೇರಿ ಹೋದನು. ಡಿಭಿಕನು ಸಾತ್ಯಕಿ ಗದ ಮತ್ತು ಸೈನಿಕರತ್ತ ಧಾವಿಸಿ ಬಂದು ಸಾತ್ಯಕಿ-ಗದರ ಕವಚ-ಆಯುಧ-ರಥಗಳನ್ನು ನಾಶ ಪಡಿಸಿದನು. ಅದರಿಂದ ಅವರು ರಣಭೂಮಿಯಿಂದ ಓಡಿದರು. ಡಿಭಿಕನಾಗ ಯಾದವರನ್ನೋಡಿಸಿ ಧನುವನ್ನು ಹೆದೆಯೇರಿಸಿ ಗರ್ಜಿಸುತ್ತಾ ಮಹಾಸ್ತ್ರ ಶಸ್ತ್ರಗಳ ಮಳೆಗರೆಯುತ್ತಾ ಶ್ರೀಹರಿಯತ್ತ ಬಂದನು. ಶತ್ರುಸಂಹಾರಕನಾದ ಕೃಷ್ಣನು ಕ್ಷಣಾರ್ಧದಲ್ಲಿ ಡಿಭಿಕನ ಸಕಲ ಯುದ್ಧ ಸಾಧನಗಳನ್ನೂ ನಾಶಪಡಿಸಿದನು. ಆಗ ಡಿಭಿಕನು ಕೃಷ್ಣನನ್ನು ಬಿಟ್ಟು ಬಲರಾಮನ ಸನಿಹಕ್ಕೆ ಹೋದನು. ಬಲರಾಮನು ಹಂಸನನ್ನು ನಿರಾಯುಧಗೊಳಿಸಿ ಧನುರ್ಧಾರಿಯಾಗಿ ತನ್ನ ಕಡೆ ಬರುತ್ತಿರುವ ಡಿಭಿಕನನ್ನು ಕಂಡನು. ಮತ್ತೊಂದು ಧನುವನ್ನು ಪಿಡಿದು ಹಂಸನು ಬಲರಾಮನೆಡೆಗೆ ಹೋಗುವುದನ್ನು ಕಂಡ ಕೃಷ್ಣನು ಅಲ್ಲಿಯೇ ಅವನನ್ನು ತರುಬಿದನು.

ಇತ್ತ ಸಾತ್ಯಕಿಯು ಬೇರೊಂದು ರಥದಲ್ಲಿ ಕುಳಿತು ಆಯುಧಪಾಣಿಯಾಗಿ ಬ್ರಹ್ಮದತ್ತನ ಸಮೀಪಕ್ಕೆ ಹೋದನು. ವೃದ್ಧನಾದರೂ ಪರಾಕ್ರಮಶಾಲಿಯಾದ ಬ್ರಹ್ಮದತ್ತನು ಸಾತ್ಯಕಿಯೊಡನೆ ಬಿರುಸಿನಿಂದ ಕಾದಾಡಿ ಅವನ ಕಂಠ-ವಕ್ಷಸ್ಥಳಗಳಿಗೆ ಶರ ಪ್ರಹಾರ ಮಾಡಿದನು. ಅದರಿಂದ ಮೂರ್ಛಿತನಾದ ಸಾತ್ಯಕಿಯು ಮತ್ತೆ ಎಚ್ಚೆತ್ತು ಅರ್ಧ ಚಂದ್ರಾಕೃತಿಯ ಬಾಣವೊಂದನ್ನು ಧನುವಿಗೆ ಹೂಡಿ ಬ್ರಹ್ಮದತ್ತನ ಮೇಲೆ ಬಿಟ್ಟು ವೃದ್ಧಾಪ್ಯದಿಂದ ಶ್ವೇತಕೇಶಯುಕ್ತವಾದ ಬ್ರಹ್ಮದತ್ತನ ಶಿರಸ್ಸನ್ನು ಛೇದಿಸಿದನು. ಬ್ರಹ್ಮದತ್ತನ ಶಿರವು ಧರೆಗುರುಳಿತು. ಹಿಂದೆ ಕಾಶಿರಾಜಪುತ್ರಿಯರ ಸ್ವಯಂವರ ಕಾಲದಲ್ಲಿ ಅಂಬಾ ಮುಂತಾದ ಮೂವರು ರಾಜಪುತ್ರಿಯರನ್ನು ಭೀಷ್ಮಾಚಾರ್ಯರು ತಮ್ಮ ತಮ್ಮನಿಗಾಗಿ ಅಪಹರಿಸಿದಾಗ ಅಂಬೆಯು ಸಾಲ್ವಭೂಪತಿಯನ್ನು ತಾನು ವರಿಸಿರುವುದದಾಗಿ ಹೇಳಿದ್ದಳಷ್ಟೇ? ಅಂತು ಅಂಬೆಯು ಆಶಿಸಿದ್ದ ಸಾಲ್ವಭೂಪತಿಯ (ಬ್ರಹ್ಮದತ್ತನ) ಶಿರಸ್ಸನ್ನು ಸಾತ್ಯಕಿಯು ತರಿದುಹಾಕಿದನೆಂದು ಭಾವ.

ಹೀಗೆ ಉದ್ಧತನಾದ ಸಾತ್ಯಕಿಯು ಬ್ರಹ್ಮದತ್ತನನ್ನು ಸಂಹರಿಸಿ ಸಿಂಹನಾದ ಮಾಡಿ ಶ್ರೀಕೃಷ್ಣನ ಸಮೀಪಕ್ಕೆ ಹೋದನು. ಅತ್ತ ಬಲರಾಮನು ಸೈನ್ಯ ಸಹಿತನಾದ ಡಿಭಿಕನೊಡನೆ ಯುದ್ಧ ಮಾಡಹತ್ತಿದನು. ಕೃಷ್ಣನು ಕ್ರೂರಬಾಣಗಳಿಂದ ಹಂಸನನ್ನು ಪೀಡಿಸಿದನು. ಮತ್ತು ಶರಾಘಾತಗಳಿಂದ ಹಂಸನ ಸಕಲ ಸೈನ್ಯವನ್ನೂ ಅವನ ಬಲವನ್ನೂ ನಾಶಪಡಿಸಿದನು. ಆಗ

ಹಂಸನೊಬ್ಬನೇ ಮಹಾಸ್ತ್ರಗಳನ್ನು ಪ್ರಯೋಗಿಸುತ್ತಾ ಕೇಶವನ ಬಳಿಸಾರಿದನು. ಕೃಷ್ಣನು ಹಂಸನ ಎಲ್ಲಾ ಮಹಾಸ್ತ್ರಗಳನ್ನೂ ನಿವಾರಿಸಿ, ತನ್ನ ಅಸ್ತ್ರವನ್ನು ಅಂದರೆ ವೈಷ್ಣವಾಸ್ತ್ರವನ್ನು ಕರದಲ್ಲಿ ಹಿಡಿದುನಿಂತನು. ಅದನ್ನು ಅವಲೋಕಿಸಿ ಭಯಗೊಂಡ ಹಂಸನು ರಥದಿಂದ ಕೆಳಕ್ಕೆ ಹಾರಿ ಪ್ರಾಣಭೀತಿಯಿಂದ ದ್ರುತಗತಿಯಿಂದ ಓಡಿಹೋಗಿ ಯಮುನಾನದಿಯ ಜಲದಲ್ಲಿ ಬಿದ್ದನು. ಉತ್ತಮಾಸ್ತ್ರವನ್ನು ಹಿಡಿದ ಕೃಷ್ಣನು ಹಂಸನ ಬೆನ್ನಟ್ಟಿ ಹೋಗಿ ತನ್ನ ಪಾದದಿಂದ ಅವನ ತಲೆಯನ್ನು ಒದೆದನು. ಆ ಆಘಾತದಿಂದ ಮೂರ್ಛಿತನಾದ ಹಂಸನು ಯಮುನಯ ಜಲದಲ್ಲಿದ್ದ ಮಹಾಸರ್ಪದ ಮುಖದಲ್ಲಿ ಬಿದ್ದನು. ಹಂಸನು ಅಂಧಃತಮಸ್ಸನ್ನು ಹೊಂದಿದಂತೆ ಅತ್ಯಂತ ದುಃಖಯುಕ್ತನಾಗಿ ಧಾರ್ತರಾಷ್ಟ್ರ ಎಂಬ ಹೆಸರಿನ ಆ ಮಹಾಸರ್ಪದ ಉದರದಲ್ಲಿ ವಾಸ ಮಾಡಿದನು. ಅಂದರೆ ಅವನು ಅತಿ ದುಃಖಭಾಗಿಯಾಗಿದ್ದು ವೈವಸ್ವತ ಮನುವಿನ ಅನಂತರ ಮೃತನಾಗುತ್ತಾನೆ ಎಂದು ತಾತ್ಪರ್ಯ. ಹಂಸನು ಮೃತನಾದ ಮೇಲೆ ಹರಿದ್ವೇಷಿಯಾದ ಅವನು ಮಹಾಅಂಧಃತಮಸ್ಸನ್ನು ಹೊಂದುವನು.

ಇತ್ತ ತನ್ನಣ್ಣನಾದ ಹಂಸನು ಯಮುನಾ ನದಿಯಲ್ಲಿ ಬಿದ್ದುದನ್ನು ಕಂಡು ಡಿಭಿಕನು ರೋಹಿಣೀಸುತನಾದ ಬಲರಾಮನೊಡನೆ ಸೆಣಸುವುದನ್ನು ಬಿಟ್ಟು ದುಃಖತಪ್ತನಾಗಿ ಅಣ್ಣನನ್ನು ಅರಸುತ್ತ ತಾನೂ ಯಮುನಾನದಿಗೆ ಹಾರಿ ಹಂಸನನ್ನು ಹುಡುಕಲಾರಂಭಿಸಿದನು. ಎಲ್ಲಿಯೂ ತನ್ನಣ್ಣನನ್ನು ಕಾಣದೆ ದುಃಖಾತಿಶಯದಿಂದ ತನ್ನ ನಾಲಿಗೆಯನ್ನು ಸೀಳಿಕೊಂಡು ಡಿಭಿಕನು ಮೃತನಾದನು. ಹೀಗೆ ದೇಹವನ್ನು ಬಿಟ್ಟು ಡಿಭಿಕನು ಕ್ರೂರವಾದ ಅಂಧಃತಮಸ್ಸಿಗಿಳಿದು ಅಗ್ರಜನಾದ ಹಂಸನನ್ನು ಅಲ್ಲಿ ಪ್ರತೀಕ್ಷಿಸುತ್ತಾ ಅಸಹ್ಯಕರವಾದ ತನ್ನ ಸ್ವರೂಪಭೂತವಾದ ಅತ್ಯಂತ ದುಃಖವನ್ನು ಅನುಭವಿಸುವನು. ಅಂದರೆ ಅಂಧಃತಮಸ್ಸಿನಲ್ಲಿ ಅತ್ಯಂತ ದುಃಖಕ್ಕೆ ಭಾಗಿಯಾದನು ಎಂದು ಭಾವ.

ತರುವಾಯ ಇತ್ತ, ಬ್ರಹ್ಮರುದ್ರಾದಿನಿಖಿಲವೃಂದಾರಕವೃಂದದಿಂದ ಸ್ತುತನಾದ ಶ್ರೀಕೃಷ್ಣಪರಮಾತ್ಮನು ಯಾದವ ಸೇನಾ ಸಹಿತನಾಗಿ, ಬಲರಾಮನಿಂದೊಡಗೂಡಿ ಯತೀಶ್ವರರಿಂದ ಕೂಡಿಕೊಂಡು ಕುಶಸ್ಥಲಿಗೆ (ದ್ವಾರಕಾಪುರಿಗೆ) ಆಗಮಿಸಿದನು. ಮತ್ತು ನಿತ್ಯ ನಿರ್ದುಷ್ಟಾನಂದ ಸಾಗರನಾದ, ಶ್ರೀ ಲಕ್ಷ್ಮೀಪತಿಯಾದ ಕೃಷ್ಣನು ತನ್ನವರೂ ತನ್ನ ಚರಣಪಲ್ಲವಗಳನ್ನಾಶ್ರಯಿಸಿರುವ ಸಕಲ ಭಕ್ತಜನರನ್ನೂ ಸಂತೋಷಪಡಿಸುತ್ತಾ ನಿಜಮಂದಿರದಲ್ಲಿ ಸುಖಸಂತೋಷಗಳಿಂದ ವಾಸ ಮಾಡಹತ್ತಿದನೆಂದು ಭಾವ.

*ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದ ಹದಿನೇಳನೆಯ ಅಧ್ಯಾಯದ ಕಥಾಸಂಗ್ರಹವು ಮುಗಿದುದು.*

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★

## ಅಷ್ಟಾದಶಾಧ್ಯಾಯಭಾವಸಂಗ್ರಹ

**ಅಸ್ತ್ರಜ್ಞೇಷ್ವಧಿಕೋऽರ್ಜುನೋऽಥ ಯದನುಕ್ರೋಶೇನ ಭೀಮಂ ವಿನಾ-**
**ಸದ್ಧರ್ಮೇ ನಿರತಂ ದದೌ ಸ್ವಗುರವೇ ಬದ್ಧ್ವಾ ನೃಪಂ ಪಾರ್ಷತಮ್ ।**
**ಪುತ್ರೌ ಸ ದ್ರುಪದೋऽಪಿ ವಹ್ನಿವಿಬುಧಾತ್ ಸ್ತ್ರೀರೂಪಕಾವಾಪ್ತವಾನ್**
**ದಿಷ್ಟ್ಯಾ ಧರ್ಮಜ ಆಪ ರಾಜ್ಯಪದವೀಂ ಸ ಪ್ರೀಯತಾಂ ಮೇ ಹರಿಃ ॥ 18 ॥**

**ಅನ್ವಯಾರ್ಥ:-** **ಯದನುಕ್ರೋಶೇನ** = ಯಾವ ಶ್ರೀಕೃಷ್ಣ ಪರಮಾತ್ಮನ ದಯದಿಂದ, **ಭೀಮಂ ವಿನಾ** = ಭೀಮಸೇನನನ್ನು ಬಿಟ್ಟು, **ಅಸ್ತ್ರಜ್ಞೇಷು** = ಸಮಸ್ತಧನುರ್ಧಾರಿಗಳಲ್ಲಿ, **ಅರ್ಜುನಃ** = ಅರ್ಜುನನು, **ಅಧಿಕಃ** = ಶ್ರೇಷ್ಠನಾದನೋ, (ಹೆಚ್ಚಿನವನೆನಿಸಿದನೋ), **ಅಥ** = ಅನಂತರ, **ಅಸದ್ಧರ್ಮೇ** = ಪ್ರತಿಜ್ಞಾಭಂಗರೂಪ ಅಧರ್ಮದಲ್ಲಿ, **ನಿರತಂ** = ಆಸಕ್ತನಾದ, **ಪಾರ್ಷತಂ ನೃಪಂ** = ದ್ರುಪದರಾಜನನ್ನು, **ಬದ್ಧ್ವಾ** = ಬಂಧಿಸಿ, **ಸ್ವಗುರವೇ** = ತನ್ನ ಗುರುಗಳಾದ ದ್ರೋಣಾಚಾರ್ಯರಿಗೆ, **ದದೌ** = ಒಪ್ಪಿಸಿದನೋ, **ಸಃ** = ಅಂತಹ, **ದ್ರುಪದಃ ಅಪಿ** = ದ್ರುಪದರಾಜನೂ ಸಹ, **ವಹ್ನಿವಿಬುಧಾತ್** = ಅಗ್ನಿದೇವರಿಂದ, **ಸ್ತ್ರೀರೂಪಕೌ** = ಹೆಣ್ಣುರೂಪವುಳ್ಳ, **ಪುತ್ರೌ** = ಪುತ್ರ-ಪುತ್ರಿಕೆಯರನ್ನು, **ಆಪ್ತವಾನ್** = ಪಡೆದನು. **ಧರ್ಮಜಃ** = ಧರ್ಮರಾಯನು, **ರಾಜ್ಯಪದವೀಂ** = ಯೌವರಾಜ್ಯಪದವನ್ನು, **ದಿಷ್ಟ್ಯಾ ಆಪ** = ಸಂತೋಷದಿಂದ ಹೊಂದಿದನೋ, **ಸಃ** = ಅಂತಹ, **ಹರಿಃ** = ಶ್ರೀಕೃಷ್ಣನು, **ಮೇ** = ನನ್ನಲ್ಲಿ, **ಪ್ರೀಯತಾಂ** = ಸುಪ್ರೀತನಾಗಲಿ.

**ತಾತ್ಪರ್ಯ:-** ಶ್ರೀಕೃಷ್ಣಪರಮಾತ್ಮನ ಕಾರುಣ್ಯಾತಿಶಯದಿಂದ ಅರ್ಜುನನು ಭೀಮಸೇನನನ್ನು ಬಿಟ್ಟು ಉಳಿದ ಸಮಸ್ತ ಧನುರ್ಧಾರಿಗಳಲ್ಲಿ ಅತ್ಯಂತ ಶ್ರೇಷ್ಠನೆನಿಸಿದನೋ, ಗುರುಕುಲದಲ್ಲಿರುವಾಗ ದ್ರುಪದನು ಮಿತ್ರನಾದ ದ್ರೋಣನಿಗೆ ಅರ್ಧ ರಾಜ್ಯವನ್ನು ಕೊಡುವುದಾಗಿ ಪ್ರತಿಜ್ಞಾಪೂರ್ವಕ ವಚನಬದ್ಧನಾಗಿ ನಂತರ ಪಾಂಚಾಲದೇಶಾಧಿಪತಿಯಾದ ಮೇಲೆ ಅದನ್ನು ಮರೆತು ಪ್ರತಿಜ್ಞಾಭಂಗರೂಪ ಅಧರ್ಮಾಸಕ್ತನಾಗಿ ದ್ರೋಣಾಚಾರ್ಯರನ್ನು ಅಪಮಾನಗೊಳಿಸಿದ್ದನು. ಇದರಿಂದ ದ್ರೋಣರಿಗೆ ಬಹಳ ಅಸಮಾಧಾನವಾಗಿದ್ದಿತು. ಅರ್ಜುನನು ದ್ರೋಣಾಚಾರ್ಯರ ಅಪ್ಪಣೆಯಂತೆ ಗುರುದಕ್ಷಿಣಾರೂಪವಾಗಿ ದ್ರುಪದರಾಜನನ್ನು ಯುದ್ಧದಲ್ಲಿ ಜಯಿಸಿ ಅವನನ್ನು ಬಂಧಿಸಿ ತಂದು ದ್ರೋಣಾಚಾರ್ಯರಿಗೆ ಒಪ್ಪಿಸಿ ಅವರ ಅನುಗ್ರಹಕ್ಕೆ ಪಾತ್ರನಾದನು. ತನಗಾದ ಅಪಮಾನದಿಂದ ಕಡುನೊಂದ ದ್ರುಪದರಾಜನು ದ್ರೋಣರನ್ನು ಸಂಹರಿಸಲು ಶಕ್ತನಾದ ಓರ್ವ ಪುತ್ರ ಮತ್ತು ಅರ್ಜುನನನ್ನು ವರಿಸುವ ಓರ್ವ ಪುತ್ರಿಯರಿಗಾಗಿ ಯಜ್ಞವನ್ನಾಚರಿಸಿ ಅಗ್ನಿದೇವರಿಂದ ಸ್ತ್ರೀರೂಪದ ಪುತ್ರ-ಪುತ್ರಿಕೆಯರನ್ನು ಪಡೆದನು. ಇತ್ತ ಧರ್ಮರಾಜನು ವಾರಣಾವತಿಯಲ್ಲಿ ಕುರುರಾಜ್ಯದ ಯೌವ್ವರಾಜ್ಯಪದದಲ್ಲಿ ಸಂತೋಷದಿಂದ ಅಭಿಷಿಕ್ತನಾದನು. ಇಂತು ಪಾಂಡವರನ್ನು ಅನುಗ್ರಹಿಸಿದ ಶ್ರೀಕೃಷ್ಣಪರಮಾತ್ಮನು ನನ್ನಲ್ಲಿ ಸುಪ್ರೀತನಾಗಲಿ ಎಂದು ಭಾವ.

## ಹದಿನೆಂಟನೆಯ ಅಧ್ಯಾಯದ ಕಥಾಸಂಗ್ರಹ

ಶ್ರೀ ಪರಶುರಾಮದೇವರಿಂದ ಮಹಾಶಸ್ತ್ರಾಸ್ತ್ರ ವಿದ್ಯೆಯನ್ನು ಕಲಿತು ಅತ್ಯಂತ ಸಮರ್ಥರಾದ ದ್ರೋಣಾಚಾರ್ಯರಲ್ಲಿ ಶಸ್ತ್ರಾಸ್ತ್ರ ವಿದ್ಯೆಗಳನ್ನು ಅಭ್ಯಾಸಮಾಡಿ ಪಾಂಡವರು ಮತ್ತು ಕೌರವರು ದಿವ್ಯಾಸ್ತ್ರಗಳನ್ನು ಪಡೆದು ಅದರಲ್ಲಿ ಪರಿಣಿತರಾದರು. ಅವರಲ್ಲಿ ಅರ್ಜುನನು ಅತ್ಯಂತ ಕುಶಲನಾದ್ದರಿಂದ ಅಧಿಕನೆನಿಸಿದನು. ಭೀಮಸೇನದೇವರು ಮಾತ್ರ ಅಸ್ತ್ರವಿದ್ಯೆಯನ್ನು

ಬಯಸಲಿಲ್ಲ. ಆದರೂ ಅವರು ಅವುಗಳಲ್ಲಿ ಸ್ವಪ್ರಜ್ಞೆ ಪ್ರತಿಭೆಗಳಿಂದಲೇ ಪಾರಂಗತರಾದರು. ಭೀಮಸೇನದೇವರು ಸ್ವರೂಪ ಪ್ರಜ್ಞೆಯಿಂದ ಅತಿಯಾಗಿ ಸಕಲ ಅಸ್ತ್ರಗಳಲ್ಲಿ ಪಾರೀಣರಾಗಿ ಎಲ್ಲರಿಗಿಂತ ಶ್ರೇಷ್ಠರಾದರು. ಗುರುಮುಖದಿಂದ ಅಸ್ತ್ರಗಳನ್ನು ಕಲಿತವರಲ್ಲಿ ಅರ್ಜುನನು ಅಧಿಕನೆಂದು ತಿಳಿಯಬೇಕು.

ಭೀಮಸೇನದೇವರು ಅಸ್ತ್ರಯುದ್ಧವು ಧರ್ಮವೆಂದು ಭಾವಿಸಲಿಲ್ಲ. ಅಂತೆಯೇ ಅವರದನ್ನು ಕಲಿಯಲಿಲ್ಲ. ವಿವಿಧ ದೇವತಾ ಮಂತ್ರಾತ್ಮಕವಾದ ಅಸ್ತ್ರಗಳನ್ನು ಆಯಾ ದೇವತೆಗಳ ಮಂತ್ರ ಮತ್ತು ಅನುಗ್ರಹದಿಂದಲೇ ಪಡೆಯಬೇಕು. ಜೀವೋತ್ತಮರಾದ ಭೀಮಸೇನದೇವರು ಭಾಗವತಧರ್ಮಾಚರಣರಲ್ಲಿ ಅಗ್ರಗಣ್ಯರು. ಅವರಿಗೆ ಶ್ರೀಹರಿಗೆ ಪ್ರಿಯವಾದ ಜ್ಞಾನ-ಭಕ್ತಿಗಳಿಂದ ಶ್ರೀಹರಿಪರಮಾತ್ಮನನ್ನು ಸಂತೋಷಪಡಿಸುವುದೇ ಅತಿಪ್ರಿಯಕಾರ್ಯ, ಮತ್ತು ಧ್ಯೇಯವಾಗಿತ್ತು. ಆದುದರಿಂದಲೇ ಅವರು ಶ್ರೀವಿಷ್ಣುವನ್ನು ಬಿಟ್ಟು ಅನ್ಯದೇವತೆಗಳ ಅನುಗ್ರಹದಿಂದ ದಿವ್ಯಾಸ್ತ್ರಗಳನ್ನು ಪಡೆಯಲಾಶಿಸಲಿಲ್ಲ. ಮಹಾಭಾಗವತರೂ, ಜ್ಞಾನಭಕ್ತಿಪರಿಪೂರ್ಣರೂ, ಸರ್ವದಾ ಶ್ರೀವಿಷ್ಣುವನ್ನು ಸಂತೋಷಪಡಿಸುವವರೂ ಆದ ಭೀಮಸೇನರು ಶ್ರೀವಿಷ್ಣುವಿನಿಂದಲೂ ಸಹ ಜ್ಞಾನಭಕ್ತಿಗಳ ಹೊರತು ಬೇರಾವುದನ್ನೂ ಅಪೇಕ್ಷಿಸಿ ಬೇಡುತ್ತಿರಲಿಲ್ಲವೆಂದ ಮೇಲೆ ಇತರ ದೇವತೆಗಳ ಮಾತೇನು ಹೇಳುವುದು? ಶುದ್ಧಭಾಗವತಧರ್ಮ ನಿರತರಾದ್ದರಿಂದ, ಕಾಮ್ಯಕರ್ಮರಹಿತವಾದ ವೃಕೋದರರು ಅನ್ಯದೇವತೆಗಳನ್ನಾಗಲಿ, ಮನುಷ್ಯರನ್ನಾಗಲಿ ಕಾಮ್ಯಫಲಕ್ಕಾಗಿ ಏನನ್ನೂ ಬೇಡಲಿಲ್ಲ. ಅಂತೆಯೇ ಅವರು ಶ್ರೀಹರಿಯಲ್ಲಿಯೂ ಯಾಚಿಸಲಿಲ್ಲ. ಹಾಗಾದರೆ ಭೀಮಸೇನರು ಏಕಚಕ್ರನಗರದಲ್ಲಿ ಕಾಮ್ಯಕರ್ಮವಾದ ಭಿಕ್ಷಾಟನೆಯನ್ನೇಕೆ ಮಾಡಿದರು? ಅದು ಅವರಿಗೆ ಅಧರ್ಮವಲ್ಲವೇ? ಎಂದರೆ ನಿಜ, ಅವರು ರಾಜನು ವೈಶ್ಯಾದಿಗಳಿಂದ ಕರವನ್ನು (ಕಂದಾಯವನ್ನು) ಪಡೆಯುವಂತೆ ಹೂಂಕಾರಮಾತ್ರದಿಂದಲೇ ಕರರೂಪವಾಗಿ ಭಿಕ್ಷೆಯನ್ನು ಪಡೆದರೇ ವಿನಃ ಯಾಚನೆಯಿಂದಲ್ಲವೆಂದು ತಿಳಿಯಬೇಕು.

ಶ್ರೀವಾಸುದೇವನನ್ನು ಹೊರತು ಭೀಮಸೇನದೇವರು ಇತರ ದೇವತೆಗಳನ್ನು ಪೂಜಿಸಲಿಲ್ಲ ("ನ ಪ್ರತೀಪಂ ಹರೇಃ ಕ್ವಾಪಿ ಸ ಕರೋತಿ ಕಥಂಚನ") ಎಂದಿಗೂ ಯಾವ ಸಂದರ್ಭದಲ್ಲೂ ಯಾವ ರೀತಿಯಲ್ಲೂ ಅವರು ಶ್ರೀಹರಿಗೆ ವಿರೋಧ ಮಾಡುತ್ತಿರಲಿಲ್ಲ. ಕವಚ-ಆಯುಧ ರಹಿತರಾದವರೊಡನೆ ಕವಚ-ಶಸ್ತ್ರಯುಕ್ತರಾಗಿ ಯುದ್ಧ ಮಾಡುತ್ತಿರಲಿಲ್ಲ. ಯುದ್ಧದಿಂದ ಓಮ್ಮೆಟ್ಟುತ್ತಿರಲಿಲ್ಲ ಮತ್ತು ಕಪಟಾಚರಣೆ ಅಂದರೆ ಅದೃಶ್ಯರಾಗಿದ್ದು ಮಾಯೆಯಿಂದ ಯುದ್ಧಾದಿಗಳನ್ನು ಮಾಡುತ್ತಿರಲಿಲ್ಲ. ಅವೈಷ್ಣವರಾದ ದುರ್ಯೋಧನಾದಿಗಳ ಔರ್ಧ್ವದೇಹಿಕ ಕ್ರಿಯೆ (ಸಂಸ್ಕಾರ) ಮಾಡು ಎಂದು ಆಜ್ಞಾಪಿಸಲಿಲ್ಲ. ಸ್ವತಃ ಆ ಕಾರ್ಯವನ್ನು ಮಾಡುವುದಿಲ್ಲ. (ದುರ್ಯೋಧನಾದಿಗಳು ಮೃತರಾದ ಮೇಲೆ ಅಂತ್ಯ ಸಂಸ್ಕಾರಾದಿಗಳನ್ನು ಮಾಡುವುದಿಲ್ಲ.) ವಿಷ್ಣುದ್ವೇಷಿಗಳಿಗೆ ಎಂದೂ ಪ್ರಿಯವನ್ನು ಮಾಡಲಿಲ್ಲ. ಭೀಮಸೇನರು ಶ್ರೀಹರಿದ್ವೇಷಿಗಳಾದ ದುರ್ಯೋಧನಾದಿಗಳೊಡನೆ ಸ್ನೇಹ, ವಿಷ್ಣುಭಕ್ತರೊಡನೆ ವಿರೋಧ-ಇವುಗಳನ್ನು ಪರೋಕ್ಷದಲ್ಲೂ ಮಾಡುತ್ತಿರಲಿಲ್ಲ. ಪರೋಕ್ಷದಲ್ಲಿ ಶ್ರೀಹರಿ ನಿಂದೆ ಮಾಡಿದರೂ ಅಂತಹವರ ನಾಲಿಗೆಯನ್ನು ಕತ್ತರಿಸುವರು. ವಿಷ್ಣುದ್ವೇಷಿಗಳನ್ನವರು ಸ್ವಯಂ ಸಂಹರಿಸುವರು. ಲಗ್ನವಾಗದ ನೃಪಕುಮಾರರು, ದುಷ್ಟರಾದ ಸ್ತ್ರೀಯರೇ ಮೊದಲಾದ ಅವೈಷ್ಣವರನ್ನು ಸಂಹಾರಮಾಡಿಸುವರು. ಧರ್ಮಜ್ಞಾನದಲ್ಲಿ ಭೀಮಸೇನದೇವರೆಂದೂ ಸಂದೇಹಗೊಂಡವರಲ್ಲ. ವಿದ್ಯೆಯಿಂದ ಜೀವಿಸುವುದು ಅಕಾರ್ಯವಾದುದರಿಂದ ಆಪತ್ಸಮಯದಲ್ಲೂ ಭೀಮಸೇನರು ವಿದ್ಯೆಯನ್ನು ಅವಲಂಬಿಸಲಿಲ್ಲ. ಆದುದರಿಂದಲೇ ಪಕ್ಷಿರೂಪಿಯಾದ ಯಮ-ಧರ್ಮರಾಜ, ಸರ್ಪರೂಪಿಯಾದ ನಹುಷರಾಜರಿಂದ ತಮಗೆ ಬಂಧನಾದಿ ಆಯಾಸವಾದರೂ, ಯಮ-ನಹುಷರು ಪ್ರಶ್ನೆ ಮಾಡಿದಾಗ ಬದುಕಬೇಕೆಂದು ಬಯಸಿ ಉತ್ತರ ಕೊಡಲಿಚ್ಛಿಸದೆ ಮೌನವಾಗಿದ್ದರು.

ಭೀಮಸೇನದೇವರು ಅಸ್ತ್ರಯುದ್ಧವು ಧರ್ಮವೆಂದು ತಿಳಿದಿಲ್ಲವೆಂದು ಹೇಳಿದಿರಷ್ಟೆ? ಹಾಗಿದ್ದಲ್ಲಿ ಅವರು ಅಶ್ವತ್ಥಾಮ ಮತ್ತು ಅಲಂಬುಸರೊಡನೆ ಅಸ್ತ್ರಯುದ್ಧವನ್ನು ಮಾಡಿರುವುದು ಕಂಡುಬಂದಿದೆಯಲ್ಲ, ಹಾಗೇಕೆ ಮಾಡಿದರು? ಎಂದರೆ,

ಅರ್ಜುನನನ್ನು ಬಿಟ್ಟು ಅಶ್ವತ್ಥಾಮರಿಗೆ ಸಮನಾದವರು ಅಸ್ತ್ರಯುದ್ಧದಲ್ಲಿ ಬೇರೊಬ್ಬರಿಲ್ಲ ಎಂದು ಪ್ರಸಿದ್ಧಿಯಿದೆ. ಆದ್ದರಿಂದಲೇ ಶ್ರೀಕೃಷ್ಣನು ಭೀಮಸೇನರು ಸರ್ವಜ್ಞರೆಂದೂ, ಅರ್ಜುನ-ಅಶ್ವತ್ಥಾಮರಕಿಂತ ಅಸ್ತ್ರವಿದ್ಯೆಯಲ್ಲಿ ಶ್ರೇಷ್ಠರೆಂದು ತೋರಿಕೊಡಲು ಅಶ್ವತ್ಥಾಮರೊಡನೆ ಅಸ್ತ್ರ ಯುದ್ಧ ಮಾಡುವಂತೆ ಭೀಮಸೇನರಿಗೆ ಆಜ್ಞಾಪಿಸಿದನು. ಶ್ರೀಕೃಷ್ಣನ ಆಣತಿಗೆ ತಲೆಬಾಗಿ ಭೀಮಸೇನರು ಅಶ್ವತ್ಥಾಮರ ಅಸ್ತ್ರವನ್ನು ತಮ್ಮ ಅಸ್ತ್ರದಿಂದಲೇ ಪರಿಹರಿಸಿ ತಮ್ಮ ಅಸ್ತ್ರವಿದ್ಯಾ ಪ್ರಾವೀಣ್ಯತೆಯನ್ನು ಪ್ರಕಟಿಸಿದರು. ಇದರಂತೆಯೇ ಅದೃಶ್ಯನಾಗಿ ಯುದ್ಧಮಾಡುತ್ತಿದ್ದರೂ ಅಲಂಬುಸನು ಭೀಮಸೇನದೇವರ ಅಸ್ತ್ರವಿದ್ಯಾವಿಚಕ್ಷಣತೆಯಿಂದ ಪರಾಜಿತನಾದನು. ಭೀಮಸೇನರು ಇವರಿಬ್ಬರೊಡನೆ ಅಸ್ತ್ರಯುದ್ಧ ಮಾಡಿ ಜಯಿಸಿದರೇ ವಿನಃ ಅವರನ್ನು ಸಂಹರಿಸಲಿಲ್ಲ. ಇದರ ಹೊರತು ಅವರು ಬೇರಾವ ಸಂದರ್ಭದಲ್ಲಿಯೂ, ಎಲ್ಲಿಯೂ ಅಸ್ತ್ರಗ್ರಹಣ ಮಾಡಲಿಲ್ಲ.

ಅದು ಸರಿ. 26ನೆಯ ಅಧ್ಯಾಯದಲ್ಲಿ ಅಲಂಬುಸನನ್ನು ಘಟೋತ್ಕಚನು ಸಂಹರಿಸಿನೆಂದು ನಿರೂಪಿತವಾಗಿದೆಯಲ್ಲ? ಅಂದರೆ ನಿಜ, ಭೀಮಸೇನದೇವರ ಅಪ್ಪಣೆಯಂತೆ ಘಟೋತ್ಕಚನು ಸಂಹರಿಸಿದನೆಂದು ತಿಳಿಯಬೇಕು.

ಕ್ಷರ-ಅಕ್ಷರ ಪುರುಷರಕ್ಕಿಂತ ಉತ್ತಮನಾದ ಭಗವಾನ್ ಶ್ರೀಹರಿಯು (ಶ್ರೀಕೃಷ್ಣನು) "ಮಾನುಷಂ ಮಾನುಷೋ ಧರ್ಮೋ ದೇವಾ ಅಪಿ ಹಿ ಮಾನುಷೇ । ಮನುಷ್ಯವತ್ತವರ್ತಂತೇ ನೈವಾಶ್ಚರ್ಯಪ್ರಕಾಶಿನಃ ॥" ಅಂದರೆ ದೇವತೆಗಳು ಭೂಮಿಯಲ್ಲಿ ಮಾನವರಾಗಿ ಅವತರಿಸಿದಾಗ ಮನುಷ್ಯರಂತೆಯೇ ಪ್ರವರ್ತಿಸುವರು. ತಮ್ಮ ಧೀಮಂತಿಕೆ, ಶ್ರೀಮಂತಿಕೆ ಮುಂತಾದುವನ್ನು ಪ್ರಕಟಿಸುವುದಿಲ್ಲವೆಂಬ ಪ್ರಮಾಣವಿರುವುದರಿಂದಲೂ, "ಧರ್ಮೋ ಹಿ ಸರ್ವವಿದುಷಾಮಪಿ ದೇವತಾನಾಂ । ಪ್ರಾಪ್ತೇ ನರೇಷು ಜನನೇ ನರವತ್ತವೃತ್ತಿಃ ॥" ಎಂಬ ಪ್ರಮಾಣವು ಮೇಲಿನ ಅರ್ಥವನ್ನೇ ಸಮರ್ಥಿಸು-ವುದರಿಂದಲೂ, "ಪ್ರಜಾಯತೇ ಹಿ ಯತ್ಕುಲೇ ಯಥಾಯುಗಂ ಯಥಾವಯಃ ತಥಾ ಪ್ರವರ್ತನಂ ಭವೇದ್ದಿವೌಕಸಾಂ ಸಮುದ್ಭವೇ॥" ಅಂದರೆ – ದೇವತೆಗಳು ಭೂಮಿಯಲ್ಲಿ ಅವತರಿಸಿದಾಗ, ಯಾವ ಯುಗ, ಯಾವ ರೂಪ, ಯಾವ ವಯಸ್ಸು, ಯಾವ ಕುಲದಲ್ಲಿ ಜನಿಸಿರುತ್ತಾರೋ, ಅದಕ್ಕೆ ತಕ್ಕಂತೆ ಆಯಾ ಕುಲ, ಯುಗ, ವಯಸ್ಸುಗಳಿಗೆ ಅನುರೂಪವಾಗಿ ನಡೆಯುವುದು ಅವರಿಗೆ ಸ್ವಧರ್ಮವೆಂದೂ, ಅದೇ ತನಗೆ ಪ್ರೀತಿಕರವಾದ ಧರ್ಮವೆಂದೂ ಅನುಶಾಸನ ಮಾಡಿ, ಅದಕ್ಕೆ ತಕ್ಕಂತೆ ಲೋಕಶಿಕ್ಷಾರ್ಥವಾಗಿ, ತಾನು ಯಾವ ವಿಧಿ, ನಿಯಮಗಳಿಗೆ ಬದ್ಧನಲ್ಲದೆ, ಸರ್ವಸ್ವತಂತ್ರನೂ, ಸರ್ವೋತ್ತಮನೂ ಆಗಿದ್ದರೂ, (ಜನಾರ್ದನನು) ಅಧರ್ಮ ಕರ್ಮಗಳನ್ನು ದಹಿಸುವ ಅಗ್ನಿಯಾಗಿದ್ದರೂ, ಯಾದವ ಕುಲದಲ್ಲಿ ಶ್ರೀಕೃಷ್ಣನ ರೂಪದಿಂದ ಅವತರಿಸಿದಾಗ ಅದಕ್ಕೆ ತಕ್ಕಂತೆ ನಟನೆ ಮಾಡಿ ದೇವತೆಗಳಿಗೆ ಮಾರ್ಗದರ್ಶನ ಮಾಡಿದ್ದಾನೆ. ಸರ್ವರೂ ಅದರಂತೆ ನಡೆಯಬೇಕೆಂದೂ, ಅಂದರೆ ದೇವತೆಗಳು ಪ್ರತ್ಯಕ್ಷರಾದಾಗ (ಅವತರಿಸಿದಾಗ) ಬಂಧುಗಳು, ಜ್ಯೇಷ್ಠರುಗಳನ್ನು ಲೌಕಿಕ ಮರ್ಯಾದೆಯ ದೃಷ್ಟಿಯಿಂದ ನಮಸ್ಕರಿಸಬೇಕೆಂದು ತನ್ನ ನಡವಳಿಕೆಯಿಂದ ಜಗತ್ತಿಗೆ ಉಪದೇಶಿಸಿದ್ದಾನೆ. ಆದ್ದರಿಂದಲೇ ಭೀಮಸೇನದೇವರು ಕುಂತಿ, ಧರ್ಮರಾಜ, ಮುಂತಾದ ಜ್ಯೇಷ್ಠರು, ಬಂಧುಗಳನ್ನು ಲೋಕಶಿಕ್ಷಣಕ್ಕಾಗಿ, ಮರ್ಯಾದೆಗಾಗಿ ನಮಸ್ಕರಿಸುತ್ತಿದ್ದರು. ಬೇರಾವ ದೃಷ್ಟಿಯಿಂದಲೂ ಅವರು ಮತ್ತೊಬ್ಬರಿಗೆ ನಮಿಸುವವರಲ್ಲ. ತಮ್ಮ ಆಜ್ಞೆಯಿಂದಲೇ ಅಸ್ತ್ರಾ-ಭಿಮಾನಿದೇವತೆಗಳಿಂದ ಕಾರ್ಯಮಾಡಿಸುತ್ತಿದ್ದರೇ ಹೊರತು ಪ್ರಾರ್ಥನೆಯಿಂದಲ್ಲ. ಶುದ್ಧಭಾಗವತ ಧರ್ಮರತರಾದ ಭೀಮಸೇನರು ಧೃತರಾಷ್ಟ್ರ ಅಥವಾ ಶ್ವಶುರ(ಮಾವ)ರಿಂದ ಪಡೆಯಲರ್ಹವಾದ ವರಗಳನ್ನು ಸ್ವಾರ್ಥಕ್ಕಾಗಿ ಪಡೆಯಲಿಲ್ಲ. ಭೀಮಸೇನರಂತೆಯೇ ಕೃಷ್ಣೆ (ದ್ರೌಪದಿ)ಯೊಬ್ಬಳು ಮಾತ್ರ ಕೃಷ್ಣಧರ್ಮ(ಭಾಗವತಧರ್ಮ)ದಲ್ಲಿ ರತಳಾದಳು. ದ್ರೌಪದೀ-ದೇವಿಯು ಭೀಮಸೇನರ ಧರ್ಮಕ್ಕೆ ಅನುಗುಣವಾಗಿ ವರ್ತಿಸುತ್ತಿದ್ದುದರಿಂದ ಅತ್ಯಂತ ಆಪತ್ಸಮಯದಲ್ಲೂ ತನಗೆ ಅನ್ಯಾಯ ಮಾಡಿದ ದುರ್ಯೋಧನಾದಿಗಳನ್ನು ಶಪಿಸಲಿಲ್ಲ. ಶ್ರೀಕೃಷ್ಣನಿಗೆ ಮಾತು-ಮನಸ್ಸುಗಳಿಂದಲೂ ಕೂಡ ವಿರೋಧ ಮಾಡಲಿಲ್ಲ. ಆದ್ದರಿಂದಲೇ ಭೀಮಸೇನ-ದ್ರೌಪದಿಯರು ಮಹಾಭಾಗವತೋತ್ತಮರಾಗಿದ್ದಾರೆ.

ಬಲರಾಮಾದಿಗಳು ಭಗವದ್ಭಕ್ತರಾಗಿದ್ದರೂ ಸಹ ಕೆಲ ಸಂದರ್ಭಗಳಲ್ಲಿ ಅವರಲ್ಲಿ ಭಾಗವತಧರ್ಮ ವಿರುದ್ಧವಾದ ಕಾರ್ಯಚರಣೆ, ಭಗವದ್ವಿರೋಧಗಳು ಕಂಡುಬಂದಿವೆ. ಆದರೆ ಭೀಮಸೇನರಿಂದ ಆ ಬಗೆಯ ನಡವಳಿಕೆಯು ಎಲ್ಲಿಯೂ ನಡೆದಿಲ್ಲ. ಅಂತಹ ವರ್ತನೆ ಅವರಲ್ಲಿ ಕಾಣಲು ಸಾಧ್ಯವೂ ಇಲ್ಲ.

ಭೀಮಸೇನದೇವರನ್ನು ಬಿಟ್ಟು ಇನ್ನಿತರರು ಶ್ರೀಕೃಷ್ಣನ ವಿರುದ್ಧಕಾರ್ಯವೆಸಗಿರುವುದು ಅನೇಕ ಕಡೆ ಸ್ಪಷ್ಟವಾಗಿದೆ. ಅದನ್ನು ಶ್ರೀ ನಿರ್ಣಯಾಚಾರ್ಯರು ನಿರೂಪಿಸುತ್ತಾರೆ:-

ಬಲರಾಮನು ಸ್ಯಮಂತಕಮಣಿಯ ಪ್ರಸಂಗದಲ್ಲಿ ಕೃಷ್ಣನ ವಿರುದ್ಧ ಮನಸ್ಸುಳ್ಳುವನಾದನು. ಮಣಿಯನ್ನು ಕೃಷ್ಣನೇ ಅಪಹರಿಸಿರಬೇಕೆಂದು ಸಂಶಯ ತಾಳಿದನು. ಅರ್ಜುನನು ಬ್ರಾಹ್ಮಣಕುಮಾರನನ್ನು ರಕ್ಷಿಸುವ ಸಂದರ್ಭದಲ್ಲಿ ಶ್ರೀಕೃಷ್ಣನ ವಚನವನ್ನು ತಿರಸ್ಕರಿಸಿರುವುದು ಕಂಡುಬಂದಿದೆ.[9] ಅರ್ಜುನನಿಗೆ ಸುಭದ್ರೆಯನ್ನು ಕೊಡಬೇಕೆಂದು ಕೃಷ್ಣನ ಸಂಕಲ್ಪ (ಅಭಿಪ್ರಾಯ)ವೆಂದು ತಿಳಿದಿದ್ದರೂ ಪ್ರದ್ಯುಮ್ನ, ಉದ್ಧವ, ಸಾಂಬ, ಅನಿರುದ್ಧಾದಿಗಳು ಕೃಷ್ಣಾಭಿಪ್ರಾಯ ವಿರುದ್ಧವಾಗಿ ಅರ್ಜುನನೊಡನೆ ಯುದ್ಧಮಾಡಿದರು. ಸಾತ್ಯಕಿಯು ಕೆಲವೊಮ್ಮೆ ಅರ್ಜುನನು ಶ್ರೀಕೃಷ್ಣನಿಗೆ ಸರಿಸಮಾನನೆಂದು ಶಂಕಿಸಿದ್ದಾನೆ. ಧರ್ಮರಾಜನೂ ಸಹ ಕೃಷ್ಣನು ಮಾನವನೆಂದು ಬಗೆದು ಜರಾಸಂಧವಧ ವಿಷಯದಲ್ಲಿ ಕೃಷ್ಣನ ಮಾತು ಕೇಳಿ (ಶಂಕಿಸಿ) ಹೆದರಿದನು. ವಿದುರನಾದರೋ ಕೃಷ್ಣನು ಕುರುಸಭೆಗೆ ಬಂದುದಕ್ಕೆ ಸಂತೋಷಿಸಲಿಲ್ಲ. ಕೌರವರು ಕೃಷ್ಣನನ್ನು ಬಂಧಿಸ-ಬಹುದೆಂದು ಬಗೆದು ಕೃಷ್ಣಾಗಮನದಿಂದ ಆನಂದಿಸಲಿಲ್ಲ. ನಕುಲನು ಚಾರನ ಮೂಲಕ ಕಪ್ಪವನ್ನು ಕೊಡಬೇಕೆಂದು ಕೃಷ್ಣನಿಗೆ ಹೇಳಿ ಕಳಿಸಿದನು. ಕೃಷ್ಣನು ಯುದ್ಧವು ಅನಿವಾರ್ಯವೆಂದು ಹೇಳಿದಾಗ ಅದು ಕುಲಕ್ಷಯಕ್ಕೆ ಕಾರಣವೆಂದು ಬಗೆದು ಸಹದೇವನು ಕೃಷ್ಣನನ್ನು ಅಗೌರವಿಸಿದನು. ದೇವಕೀ-ವಸುದೇವಾದಿಗಳು ಕೃಷ್ಣನು ಮಾನವನೆಂದು ಭಾವಿಸಿ ವರ್ತಿಸಿದರು. ಕುರುಕುಲ ಪಿತಾಮಹರಾದ ಭೀಷ್ಮಾಚಾರ್ಯರು ಶ್ರೀಹರಿಯ ಅವತಾರರಾದ ಭಾರ್ಗವ ರಾಮರನ್ನು (ಪರಶುರಾಮರನ್ನು) ಅವಮಾನಿಸಿದರು ಮತ್ತು ಅವರೊಡನೆ ಯುದ್ಧಮಾಡಿದರು.

ಮೂಲರೂಪದಲ್ಲಿ ದೇವತೆಗಳಾದ ದ್ರೋಣಾಚಾರ್ಯ, ಕರ್ಣ, ಅಶ್ವತ್ಥಾಮ, ಕೃಪಾಚಾರ್ಯ ಮೊದಲಾದವರು ದೇವದೇವನಾದ ದೇವಕೀನಂದನನನ್ನು ಇಲ್ಲದಂತೆ ಮಾಡಲು ಅಂದರೆ ಕೃಷ್ಣನನ್ನು ಸಂಹರಿಸಲು ಶರಾಘಾತಗಳನ್ನೆಸಗಿ ಯತ್ನಿಸಿದರು. ರುದ್ರದೇವರೇ ಮೊದಲಾದ ದೇವತೆಗಳು ಕೆಲಸಂದರ್ಭದಲ್ಲಿ ಶ್ರೀಹರಿಗೆ ವಿರೋಧ ಮಾಡಿದ್ದಾರೆ. ಇನ್ನು ಋಷಿಗಳು, ಗಂಧರ್ವರು, ಮನುಷ್ಯರುಗಳು ಜನ್ಮಜನ್ಮಾಂತರದ ಅನಾದಿಯಾದ ಅಜ್ಞಾನಯುಕ್ತರಾದ್ದರಿಂದ ಪ್ರತಿ ಜನ್ಮದಲ್ಲಿಯೂ ಶ್ರೀಹರಿಯನ್ನು ಅವಜ್ಞೆಯಿಂದ ಕಾಣುವರು. ಆದುದರಿಂದ ಋಷಿಗಳೇ ಮೊದಲಾದವರು ನಷ್ಟಭಾಗವತ ಧರ್ಮವುಳ್ಳವರೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೇ?

ಆದುದರಿಂದ ಶ್ರೀವಾಯುದೇವರೊಬ್ಬರೇ ಶುದ್ಧ ಭಾಗವತ ಧರ್ಮನಿರತರಾಗಿ, ಶ್ರೀಹರಿಭಕ್ತಿಪೂರ್ಣರಾಗಿ ಶ್ರೀಹರಿ ಸಂಕಲ್ಪಕ್ಕನುಗುಣವಾಗಿ ವರ್ತಿಸುವ ಮಹಾಭಾಗವತರೆಂದು ಘಂಟಾಘೋಷವಾಗಿ ಹೇಳಬಹುದು. ಇದರಂತೆ ಶ್ರೀಲಕ್ಷ್ಮೀ-ದೇವಿ, ಸರಸ್ವತಿಯರೂ ಭಾಗವತಧರ್ಮಾಗ್ರಣಿಗಳು. ಹೀಗೆ ಸರಸ್ವತೀ, ವಾಯು-ಲಕ್ಷ್ಮೀ ದೇವಿಯರು ಶ್ರೀಹರಿಪರಮಾತ್ಮನಲ್ಲಿ ವಿರುದ್ಧ ಭಕ್ತಿಯುಳ್ಳವರು. ಈ ಮೂವರು ಪರಶುಕ್ಲತ್ರಯರೆಂದು ಶ್ರುತಿಪ್ರಸಿದ್ಧರಾಗಿದ್ದಾರೆ. ಇಲ್ಲಿ ವಾಯುಭಾರತಿ ಎಂದು ಹೇಳದೆ ಸರಸ್ವತೀ ವಾಯು ಎಂದೇಕೆ ಹೇಳಿದರೆಂದರೆ ವಾಯುಪದದಿಂದ ಬ್ರಹ್ಮದೇವರೂ, ಸರಸ್ವತೀ ಪದದಿಂದ ಭಾರತಿಯೂ

9. "ನಾಹಂ ಸಂಕರ್ಷಣೋ ಬ್ರಹ್ಮನ್ ನ ಕೃಷ್ಣಃ ಕಾರ್ಷ್ಣಿರೇವಚ । ಅಹಂ ಧನಂಜಯೋ ನಾಮ ಗಾಂಡೀವಂ ಯಸ್ಯ ಕಾರ್ಮುಕಮ್ ॥" - ಭಾಗವತಮ್.

ಗೃಹ್ಯರಾಗಿದ್ದಾರೆ ಎಂಬುದನ್ನು ಸೂಚಿಸಲು ಹಾಗೆ ಹೇಳಿದ್ದಾರೆಂದು ತಿಳಿಯಬೇಕು. ಏತೇನ ಪರಶುಕ್ಲತ್ರಯರೆನಿಸಿದ ಶ್ರೀಮಹಾಲಕ್ಷ್ಮಿ, ಬ್ರಹ್ಮದೇವರು, ವಾಯುದೇವರು, ಸರಸ್ವತೀ, ಭಾರತಿ - ಇವರು ಭಗವದ್ಧರ್ಮ ವಿಷಯದಲ್ಲಿ ಪರಿಶುದ್ಧ ಆಚರಣೆಯುಳ್ಳವರು. ಅಂದರೆ ಪರಿಶುದ್ಧ ಭಾಗವತ ಧರ್ಮನಿರತರೆಂದು ತಿಳಿಯಬೇಕು. ಈ ಸಮಸ್ತ ವಿಚಾರಗಳೂ ಸ್ವಕಪೋಲಕಲ್ಪಿತವಲ್ಲ. ಸಾಕ್ಷಾತ್ ಶ್ರೀನಾರಾಯಣಾವತಾರಿಗಳಾದ ಶ್ರೀವೇದವ್ಯಾಸದೇವರೇ ಭಾರತ ಮತ್ತು ಪುರಾಣಾದಿಗಳಲ್ಲಿ ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಬಲರಾಮ-ಅರ್ಜುನಾದಿಗಳ ವಿಚಾರದಲ್ಲಿ ಅಲ್ಲಲ್ಲಿ ಬಲರಾಮಾರ್ಜುನಾದಿಗಳು ನಷ್ಟ ಭಾಗವತ ಧರ್ಮವುಳ್ಳವರು ಎಂಬುದು ನಿರೂಪಿತವಾಗಿದೆ.

ಈವರೆಗೆ "ಸರ್ವೇಷ್ವಪ್ಯಧಿಕೋಽರ್ಜುನಃ" ಅಂದರೆ ಅಸ್ತ್ರವಿದ್ಯೆಯಲ್ಲಿ ಅರ್ಜುನನು ಸರ್ವರಕ್ಕಿಂತ ಅಧಿಕನೆಂಬ ವಚನದಿಂದ ಉಂಟಾದ ಶಂಕೆಯನ್ನು ಪರಿಹರಿಸಲೂ, ಭೀಮಸೇನದೇವರೇ ಎಲ್ಲದರಲ್ಲೂ ಶ್ರೇಷ್ಠರೆಂಬುದನ್ನು ಸ್ಪಷ್ಟಪಡಿಸಿ ನಿರ್ಣಯಾಚಾರ್ಯರು ಈಗ ಮುಂದಿನ ಕಥಾಭಾಗವನ್ನು ವಿವರಿಸುವರು.

ರಾಜಪುತ್ರರಾದ ಕುರು-ಪಾಂಡವ ಕುಮಾರರು ಸರ್ವಅಸ್ತ್ರ-ಶಸ್ತ್ರವಿದ್ಯೆಗಳಲ್ಲಿ ಪ್ರವೀಣರಾದ ಮೇಲೆ ಒಂದು ದಿನ ದ್ರೋಣಾಚಾರ್ಯರು ಭೀಷ್ಮಾಚಾರ್ಯರಿಗೆ ಹೇಳಿ ತಮ್ಮ ಶಿಷ್ಯರ ಶಸ್ತ್ರಾಸ್ತ್ರ ವಿದ್ಯಾಪ್ರದರ್ಶನ ಸಮಾರಂಭವನ್ನೇರ್ಪಡಿಸಿದರು. ವಿಸ್ತಾರವಾದ ಬಯಲು ಪ್ರದೇಶವನ್ನು ತಳಿರು-ತೋರಣ-ಧ್ವಜ-ಪತಾಕೆಗಳಿಂದ ಅಲಂಕರಿಸಲಾಗಿತ್ತು. ರಾಜಕುಮಾರರ ಶಸ್ತ್ರಾಸ್ತ್ರ ಪಾರೀಣತೆಯನ್ನು ಅವಲೋಕಿಸಲು ಅಲ್ಲಿ ಸಹಸ್ರಾರು ಜನರು ನೆರೆದಿದ್ದರು. ಆ ದೊಡ್ಡಸಭೆಯ ಅಂಗಣಕ್ಕೆ ಆಚಾರ್ಯ ದ್ರೋಣರು ಕುರು ಪಾಂಡವರನ್ನು ಕರೆದು ತಂದರು. ರಕ್ತಚಂದನ, ಅಕ್ಷತೆ, ಪುಷ್ಪ, ವಸ್ತ್ರ, ಶಸ್ತ್ರ, ಪಾಯಸ-ಮುಂತಾದವುಗಳಿಂದ ರಾಜಕುಮಾರರು ಭೃಗುಕುಲತಿಲಕರಾದ ವಿದ್ಯಾಗುರು ದ್ರೋಣಾಚಾರ್ಯರನ್ನು ಪೂಜಿಸಿ ನಮಸ್ಕರಿಸಿದ ಮೇಲೆ ಆಚಾರ್ಯ ದ್ರೋಣರು ಶಸ್ತ್ರಾಸ್ತ್ರ ವಿದ್ಯಾಪ್ರದರ್ಶನಕ್ಕೆ ಆಣತಿ ನೀಡಿದರು.

ಆಗ ಎಲ್ಲ ರಾಜಪುತ್ರರೂ ಭೀಷ್ಮ, ದ್ರೋಣ, ವಿದುರ, ಗಾಂಧಾರಿ, ಧೃತರಾಷ್ಟ್ರ, ಕುಂತಿ ಮತ್ತು ಸಮಸ್ತ ರಾಜಮಂಡಲಿಗೆ ನಮಸ್ಕರಿಸಿ ಉತ್ಸಾಹದಿಂದ ಅಸ್ತ್ರವಿದ್ಯಾಪ್ರದರ್ಶನ ಮಾಡಿದರು. ಅವರ ವಿದ್ಯಾಪ್ರದರ್ಶನವನ್ನು ಕುಂತೀದೇವಿಯೂ ನೋಡಿದಳು. ಎಲ್ಲ ರಾಜಕುಮಾರರೂ ದ್ರೋಣಾಚಾರ್ಯರಿಂದ ಕಲಿತ ಶಸ್ತ್ರಾಸ್ತ್ರ ವಿದ್ಯೆಯನ್ನು ಪ್ರದರ್ಶಿಸಿದ ಮೇಲೆ ಅಶ್ವತ್ಥಾಮಾಚಾರ್ಯರು ಅದರಲ್ಲಿ ಹೆಚ್ಚಿನ ಪ್ರೌಢಿಮೆಯನ್ನು ತೋರಿದರು. ಆ ತರುವಾಯ ಅರ್ಜುನನ ಸರದಿ. ಅವನು ಅಶ್ವತ್ಥಾಮಾಚಾರ್ಯರಕ್ಕಿಂತಲೂ ಹೆಚ್ಚಾದ ಕೌಶಲ-ಪ್ರೌಢಿಮೆಗಳನ್ನು ತೋರಿ, ದಿವ್ಯಾಸ್ತ್ರಗಳ ಪ್ರಯೋಗದಲ್ಲಿ ತನ್ನ ಸಾಮರ್ಥ್ಯವನ್ನು ತೋರಲಾರಂಭಿಸಿದನು. ಅವನು ದೂರದಲ್ಲಿರುವ ಒಂದು ಮಷಕದ ಪಾದಕ್ಕೆ ಮತ್ತು ಪಕ್ಷಿಯ ನೇತ್ರಕ್ಕೂ ಬಾಣದಿಂದ ಹೊಡೆದು ತನ್ನ ಅತಿಶಯ ಗುರಿಗಾರಿಕೆಯ ಚತುರತೆಯನ್ನು ಪ್ರದರ್ಶಿಸಿ ಸಮಸ್ತರನ್ನೂ ವಿಸ್ಮಯಗೊಳಿಸಿದನು. ಈ ಪ್ರಕಾರವಾಗಿ ಅರ್ಜುನನು ಚಿತ್ರವಿಚಿತ್ರ ರೀತಿಯಿಂದ ಶಸ್ತ್ರಾಸ್ತ್ರ ವಿದ್ಯೆಯಲ್ಲಿನ ತನ್ನ ಪ್ರಗಲ್ಭತೆಯನ್ನು ಬಹುವಿಧವಾಗಿ ಪ್ರದರ್ಶಿಸಿ ಸಕಲ ಸಭಿಕರ ಪ್ರಶಂಸೆಗೆ ಪಾತ್ರನಾದನು.

ಅದೇ ಸಮಯಕ್ಕೆ ಕರ್ಣನು ಬಂದು ಅರ್ಜುನನನ್ನೂ ಮೀರಿಸಿ ಶ್ರೀಪರಶುರಾಮದೇವರಿಂದ ತಾನು ಕಲಿತ ಶಸ್ತ್ರಾಸ್ತ್ರ ಕಲೆಯ ಕುಶಲತೆಯನ್ನು ತೋರಿಸಿದನು. ಅವನ್ನು ನೋಡಿದ ಕುಂತಿಯು ಅವನು ತನ್ನ ಮಗನೆಂದು ಮನದಲ್ಲಿಯೇ ತಿಳಿದು ನಾಚಿ ಮೌನವಹಿಸಿದಳು. ಕರ್ಣನನ್ನು ಮಾತನಾಡಿಸಲಿಲ್ಲ. ಕರ್ಣನ ಸಾಮರ್ಥ್ಯ ಶಸ್ತ್ರಾಸ್ತ್ರ ವಿದ್ಯೆಯಲ್ಲಿ ಅವನ ಪ್ರತಿಭೆಗಳನ್ನು ಕಂಡ ಅರ್ಜುನನು ತನ್ನೊಡನೆ ಯುದ್ಧ ಮಾಡಲು ಆಹ್ವಾನಿಸಿದನು. ಆಗ ಭೀಮಸೇನನು ಅವರಿಬ್ಬರ ಮಧ್ಯೆ ಪ್ರವೇಶಿಸಿ "ಅರ್ಜುನ! ಕ್ಷತ್ರಿಯನಲ್ಲದವನನ್ನು ಯುದ್ಧಕ್ಕೆ ಆಹ್ವಾನಿಸುವುದು ಧರ್ಮವಿರುದ್ಧ. ಆದ್ದರಿಂದ ಕರ್ಣನೊಡನೆ ಯುದ್ಧ ಮಾಡಬೇಡ" ಎಂದು ತಡೆದನು. ಕರ್ಣನಿಗೆ ಒಂದು ಚಾವಟಿಯನ್ನು ಕೊಟ್ಟು, ಅವನು ಸೂತನೆಂಬುದನ್ನು ಸೂಚಿಸಿದನು.

ಕರ್ಣನು ಕ್ಷತ್ರಿಯ ಕನ್ಯೆಯಲ್ಲಿ ಜನಿಸಿದವನಷ್ಟೆ? ಅವನನ್ನು ಸೂತನೆಂಬುವುದು ಹೇಗೆ ಸಂಗತವಾಗುವುದು? ಎಂಬ ಪ್ರಶ್ನೆಗೆ ನಿರ್ಣಯಾಚಾರ್ಯರು ಹೀಗೆ ಉತ್ತರಿಸುತ್ತಿದ್ದಾರೆ - "ಬ್ರಾಹ್ಮಣ (ಜನ್ಮದಲ್ಲಿ) ಯೋನಿಯಲ್ಲಿ ಜನಿಸಿದ್ದರೂ ಉಪನಯನ ಸಂಸ್ಕಾರವಿಲ್ಲದವನು ಹೇಗೆ ದ್ವಿಜನೆನಿಸಲಾರನೋ, ಅದರಂತೆ ಕ್ಷತ್ರಿಯ ಸಂಸ್ಕಾರವಿಲ್ಲದವನು ಕ್ಷತ್ರಿಯ ಕುಲದಲ್ಲಿ ಹುಟ್ಟಿದ್ದರೂ ಅಂತಹವನು ಕ್ಷತ್ರಿಯನಾಗಲಾರ". ಭೀಮಸೇನನ ವಚನವನ್ನಾಲಿಸಿ ಕರ್ಣನು ಉತ್ತರ ನೀಡಲಾಗದೆ ಅಪಮಾನದಿಂದ ತಲೆತಗ್ಗಿಸಿ ನಿಂತನು.

ಕರ್ಣನ ಶಸ್ತ್ರಾಸ್ತ್ರ ಪ್ರಯೋಗ ಕೌಶಲದಿಂದ ಪ್ರಭಾವಿತನಾಗಿದ್ದ ದುರ್ಯೋಧನನು ಕರ್ಣನನ್ನು ತಮ್ಮ ಪಕ್ಷಕ್ಕೆ ಸೇರಿಸಿಕೊಳ್ಳಲಿಚ್ಛಿಸಿ, ಅವನ ಸ್ನೇಹವನ್ನು ಬಯಸಿ, ತಂದೆಯಾದ ಧೃತರಾಷ್ಟ್ರನೊಡನೆ ಮಾತನಾಡಿ, ತಂದೆಯ ಅನುಮತಿ ಪಡೆದು ಕರ್ಣನನ್ನು ಭದ್ರಪೀಠದಲ್ಲಿ ಮಂಡಿಸಿ ಅಂಗರಾಜ್ಯಕ್ಕೆ ರಾಜನೆಂದು ಘೋಷಿಸಿ ಅವನಿಗೆ ಪಟ್ಟಾಭಿಷೇಕ ಮಾಡಿ ಗೌರವಿಸಿದನು. ಧೃತರಾಷ್ಟ್ರನು ಮಗನ ಮೇಲಿನ ಮೋಹ ಮತ್ತು ಪಕ್ಷಪಾತದಿಂದ ದುರ್ಯೋಧನನ ಈ ಕಾರ್ಯಕ್ಕೆ ವಿರೋಧ ವ್ಯಕ್ತಪಡಿಸದೆ ಸಮ್ಮತಿಯನ್ನೇ ತೋರಿದನು.

ಅದೇ ಸಮಯಕ್ಕೆ ಸರಿಯಾಗಿ ಕರ್ಣನ ಸಾಕು ತಂದೆಯಾದ ಅಧಿರಥನು ಅಲ್ಲಿಗೆ ಆಗಮಿಸಿದನು. ಆಗ ಎಲ್ಲ ರಾಜರ ಸಭೆಯಲ್ಲಿ ವೃಷಾ[10] ಎಂದು ಖ್ಯಾತನಾದ ಕರ್ಣನು[11] ಆತನಿಗೆ ನಮಸ್ಕಾರ ಮಾಡಿದನು. "ಬ್ರಾಹ್ಮಣಃ ಸತ್ಯವಾದೀ ಚ ತಪಸ್ವೀ ನಿಯತವ್ರತಃ । ರಿಪುಷ್ವಪಿ ದಯಾವಾಂಶ್ಚ ತಸ್ಮಾತ್ ಕರ್ಣೋ ವೃಷಾ ಸ್ಮೃತಃ ।" ಎಂಬ ಪ್ರಮಾಣದಂತೆ ಕರ್ಣನು ಬ್ರಹ್ಮತತ್ತ್ವ ಚಿಂತನಶೀಲನೂ ಸತ್ಯವಾದಿಯೂ ತಪಸ್ವಿಯೂ ವ್ರತನಿರತನೂ (ನಿಯಮ ಪರಿಪಾಲಕನೂ) ಶತ್ರುಗಳಲ್ಲಿಯೂ ಕರುಣೆ-ದೋರುವವನೂ, ಬ್ರಾಹ್ಮಣರಿಗೆ ವಿಶೇಷವಾಗಿ ಸುವರ್ಣವನ್ನು ದಾನ ಮಾಡಿ ಸಂತೋಷಪಡಿಸುವವನೂ ಆದ್ದರಿಂದ ವೃಷಾ ಎಂಬ ಹೆಸರು ಅವನಿಗೆ ಅನ್ವರ್ಥಕವಾಗಿದ್ದಿತು. ಇಂತಹ ಕರ್ಣನು ತುಂಬಿದ ಸಭೆಯಲ್ಲಿ ಸೂತನಾದ ತನ್ನ ಸಾಕು ತಂದೆಗೆ ನಮಸ್ಕಾರ ಮಾಡಿದ್ದನ್ನು ಕಂಡು ಆ ಸಭೆಗೆ ಬಂದ ಸಜ್ಜನರೆಲ್ಲರೂ ಆನಂದಿಸಿದರು.

ಅನಂತರ ಭೀಮಸೇನ-ದುರ್ಯೋಧನರು ಶಸ್ತ್ರಾಸ್ತ್ರ ವಿದ್ಯೆಯಲ್ಲಿ ತಮ್ಮ ಸಾಮರ್ಥ್ಯ ಪ್ರಾವೀಣ್ಯತೆಗಳನ್ನು ತೋರಿಸುವ ವ್ಯಾಜ(ನೆಪ)ದಿಂದ ದೊಡ್ಡದಾದ ಗದೆಗಳನ್ನು ಹಿಡಿದು ಬಂದು ಕೋಪದಿಂದ ಯುದ್ಧ ಮಾಡಲಾರಂಭಿಸಿದರು. ಅವರಿಬ್ಬರಿಬ್ಬರೂ ಸ್ಪರ್ಧೆಯಿಂದ ಕಾದಾಡತೊಡಗಿದಾಗ ಅದು ಭೀಕರವಾಗಹತ್ತಿತ್ತು. ಅದನ್ನು ನೋಡುತ್ತಾ ಉತ್ತೇಜಿತರಾದ ದೇವತೆಗಳು, ದೇವತೆಗಳನ್ನು ಅನುಸರಿಸುವವರು;, ಅಸುರರು, ಅವರನ್ನನ್ನುಸರಿಸುವವರು, ದೇವಾಸುರ ಪಕ್ಷಪಾತಿಗಳಾದ ಮನುಷ್ಯರು ಹೀಗೆ ತಮ ತಮಗೆ ಬೇಕಾದವರ ಪಕ್ಷವನ್ನು ವಹಿಸಿದರು. ದೇವತೆಗಳು, ತದನುಯಾಯಿಗಳು, ಮನುಷ್ಯರಲ್ಲಿ ಸಜ್ಜನರು, ಭೀಮಸೇನದೇವರ ಪಕ್ಷವನ್ನು ವಹಿಸಿದರೆ; ಅಸುರರು, ಅವರನ್ನನುಸರಿಸುವರರು ಸ್ವಾಭಾವಿಕವಾಗಿ ತಮ್ಮ ಗುಣಕ್ಕೆ ತಕ್ಕಂತೆ ದುರ್ಯೋಧನನ ಪಕ್ಷ ವಹಿಸಿದರು. ಹೀಗೆ ಚರಾಚರ ಪ್ರಪಂಚವೇ ಎರಡು ಭಾಗವಾಯಿತು. ಭೀಮಸೇನನ ಪಕ್ಷವಹಿಸಿದ ದೇವತಾದಿಗಳು "ಭೀಮಸೇನ ಮಹಾಬಾಹೋ ಜಯಶೀಲನಾಗು"ಎಂದೂ, ಅಸುರರು "ದುರ್ಯೋಧನ ಜಯಶೀಲನಾಗು" ಎಂದು ಘೋಷಿಸುತ್ತಾ ಹೂಂಕಾರಫಟ್ಕಾರ ಮಾಡಿದರು.

ಕೋಪೋದ್ರಿಕ್ತರಾಗಿ ಭೀಮ-ದುರ್ಯೋಧನರು ಸೆಣಸುತ್ತಿರುದನ್ನು ಕಂಡು ದ್ರೋಣಾಚಾರ್ಯರು "ಇದು ಸರಿಯಲ್ಲ, ಇದು ಮುಂದುವರೆದರೆ ಜಗತ್ತೇ ನಾಶವಾದೀತು!" ಎಂದು ಆಶಂಕಿಸಿ, ತಮ್ಮ ಪುತ್ರ ಅಶ್ವತ್ಥಾಮಾಚಾರ್ಯರನ್ನು

10 ವಿಪ್ರೇಭ್ಯೋ ಹೇಮವರ್ಷಣಾದ್ವೃಷಾ ಕರ್ಣಃ

11 ವೃಷಾಕರ್ಣ ಮಹೇಂದ್ರಯೋಃ-ವಿಶ್ವಕೋಶ. (ಬ್ರಾಹ್ಮಣರಿಗೆ ವಿಶೇಷವಾಗಿ ಕನಕವರ್ಷಣ ಮಾಡುತ್ತಿದ್ದುದರಿಂದ ಕರ್ಣ ವೃಷಾ ಎನಿಸಿದ್ದಾನೆ).

ಭೀಮ-ದುರ್ಯೋಧನರ ಬಳಿಗೆ ಕಳುಹಿಸಿ ಅವರ ಯುದ್ಧವನ್ನು ತಡೆದು "ನೀವಿಬ್ಬರೂ ಅಸದೃಶಪರಾಕ್ರಮಿಗಳು, ನಿಮ್ಮ ನಿಮ್ಮ ಯೋಗ್ಯತೆಯಲ್ಲಿ ನಿಮ ನಿಮಗೆ ಸಮಾನರು ಬೇರಾರೂ ಇಲ್ಲ, ಇನ್ನು ಯುದ್ಧ ನಿಲ್ಲಿಸಿರಿ" ಎಂದು ಹೇಳಿಸಿ ಸಮಾಧಾನಪಡಿಸಿದರು. ಆಚಾರ್ಯ ದ್ರೋಣರ ಆಣತಿಯಂತೆ ಭೀಮ ದುರ್ಯೋಧನರು ಯುದ್ಧವನ್ನು ನಿಲ್ಲಿಸಿದರು. ಅಂತರಿಕ್ಷದಲ್ಲಿ ನೆರೆದಿದ್ದ ದೇವಾಸುರರನ್ನು ತಡೆದು ಬ್ರಹ್ಮದೇವರು 'ಮುಂದೆ ಭೀಮ-ದುರ್ಯೋಧನರ ಯುದ್ಧವನ್ನೂ ಯಾರು ಜಯಿಸುವರೆಂಬುದನ್ನೂ ನೀವು ನೋಡುವಿರಿ, ಈಗ ಇಲ್ಲಿಂದ ತೆರಳಿರಿ' ಎಂದು ಆಜ್ಞಾಪಿಸಿದರು. ಮತ್ತು ಬ್ರಹ್ಮದೇವರು ದೇವತೆಗಳು ಮತ್ತು ರುದ್ರದೇವರೊಡನೆ ತಮ್ಮ ನಿವಾಸಕ್ಕೆ ತೆರಳಿದರು.

ಗುರುಗಳ ಅಪ್ಪಣೆಯಂತೆ ಯುದ್ಧದಿಂದ ನಿವೃತ್ತನಾದ ದುರ್ಯೋಧನನು ಕರ್ಣನ ಕರಪಿಡಿದು, ಭೀಮಸೇನನು ಅರ್ಜುನನ ಕರಪಿಡಿದು ತಮ್ಮ ತಮ್ಮ ಗೃಹಗಳಿಗೆ ತೆರಳಿದರು. ಭೀಮನು ಅರ್ಜುನನಿಂದ ಕರ್ಣನ ಸಂಹಾರವಾಗಬೇಕೆಂದು ನಿಶ್ಚಯಿಸಿದನು. ತದ್ವಿರುದ್ಧವಾಗಿ ದುರ್ಯೋಧನನು ಕರ್ಣನಿಂದ ಅರ್ಜುನನ ವಧ ಆಗಬೇಕೆಂದು ಬಯಸಿದನು. ಹೀಗೆ ಭೀಮ-ಸುಯೋಧನರು ತಮ್ಮ ಮನೋಕಾಮನೆಯು ಸಫಲವಾಗಬೇಕೆಂದು ಅದಕ್ಕೆ ಅನುಗುಣವಾಗಿ ತಂತ್ರಹೂಡಿ ಕಾರ್ಯಾಸಕ್ತರಾದರು. ಅರ್ಜುನನ ಉತ್ಕರ್ಷ, ವಿಜಯ, ಕೀರ್ತಿಗಳಿಗೋಸುಗ ಭೀಮಸೇನನು ಯತ್ನಿಸಿದನು. ಭೀಮ-ಸೇನನಿಗಾಗಿ ಶ್ರೀಕೃಷ್ಣ ಮತ್ತು ಇತರ ದೇವತೆಗಳು ಫಲ್ಗುಣನ ಪಕ್ಷ ವಹಿಸಿದರು. ಹಿಂದೆ ವಾಯುದೇವರ ಅವತಾರರಾದ ಶ್ರೀಹನುಮಂತದೇವರು ಸುಗ್ರೀವನ ಪಕ್ಷವನ್ನು ವಹಿಸಿದ್ದರಿಂದ ಶ್ರೀಹರಿಯ ಅವತಾರನಾದ ಶ್ರೀರಾಮಚಂದ್ರನೂ ಇತರ ದೇವತೆಗಳೂ ಸುಗ್ರೀವನ ಪಕ್ಷ ವಹಿಸಿದ್ದರು. ಇಂದ್ರನು ಹಿಂದೆ ವಾಲಿಯಾಗಿದ್ದಾಗ ತನ್ನ ಸಂಹಾರದಿಂದುಂಟಾದ ದುಃಖದಿಂದ ಈ ಜನ್ಮದಲ್ಲಿ ತಾನು ವಾಯುದೇವರ ಕೃಪೆಗೆ ಪಾತ್ರನಾಗಬೇಕೆಂದು ಬಯಸಿ ಪವಮಾನಾವತಾರಿಯಾದ ಭೀಮಸೇನನಿಗೆ ಅನುಜನಾಗಿ ಅಂದರೆ ಅರ್ಜುನನಾಗಿ ಅವತರಿಸಿದನು. ಹನುಮಂತನ ಅವತಾರನಾದ ಭೀಮಸೇನನು ಅರ್ಜುನನನ್ನು ಮೆರೆಸಲು ಆಶಿಸಿ ಪ್ರಯತ್ನಶೀಲನಾದ್ದರಿಂದ ಶ್ರೀಹರಿಯೂ (ಶ್ರೀಕೃಷ್ಣ) ದೇವತೆಗಳೂ ಅರ್ಜುನನ ಪಕ್ಷವನ್ನೇ ವಹಿಸಿದರು. ಹೀಗೆ ಕರ್ಣಾರ್ಜುನರು ಭಗವಂತನ ಲೀಲಾವಿಲಾಸ ನಾಟಕದಲ್ಲಿ ಪ್ರಮುಖ ಪಾತ್ರಧಾರಿಗಳಾಗಿ ಜಗದ್ರಂಗದಲ್ಲಿ ಪಗಡೆಯಾಟದ ಪಣದಂತಾದರು.

ಕುರುಪಾಂಡವರು ಅಸ್ತ್ರ-ಶಸ್ತ್ರಾಭ್ಯಾಸವನ್ನು ಮುಗಿಸಿದ ಮೇಲೆ ಗುರುಗಳಾದ ದ್ರೋಣಾಚಾರ್ಯರಿಗೆ ನಮಸ್ಕರಿಸಿ "ಗುರುದೇವ! ತಮ್ಮ ಅನುಗ್ರಹದಿಂದ ನಾವು ಅಸ್ತ್ರವಿದ್ಯೆಯನ್ನು ಕಲಿತು ಉತ್ತೀರ್ಣರಾದೆವು. ತಾವು ನಮ್ಮಿಂದ ಏನು ಗುರುದಕ್ಷಿಣೆ ಬಯಸುವಿರಿ? ದಯಮಾಡಿ ತಿಳಿಸಿದರೆ ಗುರುದಕ್ಷಿಣೆಯನ್ನು ನೀಡಿ ಕೃತಾರ್ಥರಾಗುತ್ತೇವೆ" ಎಂದು ವಿಜ್ಞಾಪಿಸಿದರು. ಆಚಾರ್ಯರು ಅವರ ಗುರುಭಕ್ತಿಗೆ ಮೆಚ್ಚಿ ಸಂತಸದಿಂದ "ಪಾಂಚಾಲರಾಜನಾದ ದ್ರುಪದರಾಜನನ್ನು ಜಯಿಸಿ ಬಂಧಿಸಿ ಕರೆತಂದು ನನಗೆ ಒಪ್ಪಿಸಿರಿ. ಅದೇ ನೀವು ನನಗೇ ನೀಡಬೇಕಾದ ಗುರುದಕ್ಷಿಣೆ" ಎಂದರು. ಅರ್ಜುನ ಮತ್ತಿತರ ರಾಜಪುತ್ರರು ಉತ್ಸಾಹದಿಂದ "ಆಚಾರ್ಯ, ನಿಮ್ಮ ಆಜ್ಞೆಯನ್ನು ನೆರವೇರಿಸುತ್ತೇವೆ. ಪಾಂಚಾಲರಾಜನನ್ನು ಸೆರೆಹಿಡಿದು ತಂದು ನಿಮಗೊಪ್ಪಿಸುತ್ತೇವೆ" ಎಂದು ಹೇಳಿದರು. ಅನಂತರ ದುರ್ಯೋಧನಾದಿಗಳು ಕರ್ಣನೊಡಗೂಡಿ ಪಾಂಡವರಿಂದ ಯುಕ್ತರಾಗಿ ಜೊತೆಗೆ ಗುರುಗಳನ್ನೂ ಕರೆದುಕೊಂಡು ಪಾಂಚಾಲನಗರದತ್ತ ಪ್ರಯಾಣ ಬೆಳೆಸಿದರು.

ಭೀಮಸೇನನು ಗುರುಗಳಿಗೆ ಅಭಿವಂದಿಸಿ "ಪೂಜ್ಯ ಆಚಾರ್ಯರೇ! ಕೌರವ ಪಾಂಡವರಲ್ಲಿ ಯಾರು ಹೆಚ್ಚು ಬಲಶಾಲಿಗಳೆಂಬುದನ್ನು ಈ ದ್ರುಪದ ಬಂಧನವು ನಿರ್ಣಯಿಸಲಿದೆ! ಆದುದರಿಂದ ಗರ್ವಿಷ್ಠರಾದ ಕೌರವರೇ ಮೊದಲು ದ್ರುಪದರಾಜನನ್ನು ಬಂಧಿಸಿ ತರಲು ಪ್ರಯತ್ನಿಸಲಿ! ಅವರು ಖಂಡಿತ ಪಾಂಚಾಲ ನರೇಶನನ್ನು ಜಯಿಸಲಾರರು. ಅವರು ವಿಫಲರಾಗಿ ಬಂದ ಮೇಲೆ ನಾವು ಹೋಗಿ ನಿಮ್ಮ ಶತ್ರುವನ್ನು ಗೆದ್ದು ಸೆರೆಹಿಡಿದು ತಂದು ನಿಮಗೊಪ್ಪಿಸುತ್ತೇವೆ"

ಎಂದರುಹಿದನು. ದ್ರೋಣರು ಅದಕ್ಕೆ ಸಮ್ಮತಿಸಿದರು. ಆಗ ಭೀಮಸೇನನು ಸಹೋದರರೊಡಗೂಡಿ ದ್ರೋಣಾಚಾರ್ಯರ ಬಳಿ ಬಂದು ನಿಂತನು.

ತಾವೇ ಮಹಾಬಲಶಾಲಿಗಳೆಂದು ಗರ್ವಿತರಾದ ದುರ್ಯೋಧನಾದಿಗಳು ಕರ್ಣನೊಡನೆ ಶಸ್ತ್ರಾಸ್ತ್ರಸಜ್ಜಿತರಾಗಿ ದ್ರುಪದಪುರಕ್ಕೆ ಭರದಿಂದ ಪಯಣಿಸಿದರು. ದುರ್ಯೋಧನಾದಿಗಳು ತನ್ನನ್ನು ಬಂಧಿಸಲು ಬರುತ್ತಿರುವ ವಿಷಯವನ್ನು ಅರಿತು ದ್ರುಪದ ಮಹೀಪಾಲನು ಮೂರು ಅಕ್ಷೋಹಿಣೀ ಸೈನ್ಯ ಪರಿವೃತನಾಗಿ ಯುದ್ಧಕ್ಕೆ ಸಿದ್ಧನಾದನು. ಕೌರವರು ದ್ರುಪದನ ಮೇಲೆ ಶರವರ್ಷ ಮಾಡತೊಡಗಿದರು. ಆಗ ಪಾಂಚಾಲನರೇಶನು ಸೈನ್ಯ ಸಹಿತನಾಗಿ ಕೌರವರನ್ನು ಸುತ್ತಗಟ್ಟಿ ನಿಂತು, ಉದ್ಧತರಾದ ಅವರನ್ನು ಬಾಣಗಳ ಮಳೆಯಿಂದ ಪೀಡಿಸಹತ್ತಿದನು. ನಗರದ ಸ್ತ್ರೀಯರು-ಬಾಲಕ-ರಾದಿಯಾಗಿ ಎಲ್ಲರೂ ಎಲ್ಲ ಕಡೆಯಿಂದ ಧಾಳಿ ಮಾಡಿದರು. ನಗರದ ಉಪ್ಪರಿಗೆಯ ಮೇಲೆ ನಿಂತ ಸ್ತ್ರೀಯರೂ ಬಾಲಕರೂ ಸಹ ಕಲ್ಲು, ಒನಕೆಗಳಿಂದ ಕಷ್ಟವೇನೆಂದರಿಯದ ಸುಖದಲ್ಲಿಯೇ ಬೆಳೆದ ದುರ್ಯೋಧನಾದಿಗಳನ್ನು ಹೊಡೆಯ-ಲಾರಂಭಿಸಿದನು.

ಹಿಂದೆ ದ್ರುಪದರಾಜನು ಭಗವಾನ್ ಸೂರ್ಯದೇವನನ್ನು ಕುರಿತು ತಪಸ್ಸು ಮಾಡಿ ಒಲಿಸಿಕೊಂಡನು. ಆಗ ಸೂರ್ಯದೇವನು 'ರಾಜನ್! ನಿನ್ನ ರಾಜಧಾನಿಯ ಒಂದು ಯೋಜನದವರೆಗೆ ಯಾರೂ ನಿನ್ನನ್ನು ಯುದ್ಧದಲ್ಲಿ ಜಯಿಸಲಾರರು' ಎಂದು ವರಪ್ರದಾನ ಮಾಡಿದ್ದನು. ದಿನಮಣಿಯ ವರಬಲದಿಂದಲೇ ಪಾಂಚಾಲನಗರದ ಜನರು ಶತ್ರುಭಯವಿಲ್ಲದೆ ಸುಖಸಂತೋಷಗಳಿಂದ ಜೀವಿಸುತ್ತಿದ್ದರು. ಪ್ರಕೃತ ದ್ರುಪದ ಮಹೀಪತಿಯ ಸೈನ್ಯದ ಹೊಡೆತವನ್ನು ತಾಳಲಾಗದೆ ಕೌರವರು ಭಯಗೊಂಡು ಪಾಂಡವರಿರುವಲ್ಲಿಗೆ ಓಡಿಬಂದರು. ರಾಜಧಾನಿಯ ಸ್ತ್ರೀಯರು ಬಾಲಕರು ಸೈನಿಕರೂ ಅವರನ್ನು ಅಟ್ಟಿಸಿಕೊಂಡು ಬಂದರು. ಕೌರವರು "ಭೀಮ, ಅರ್ಜುನ, ಕಾಪಾಡಿ" ಎಂದು ಹಾಹಾಕಾರ ಮಾಡುತ್ತಾ ಅವರು ಇದ್ದ ಸ್ಥಳಕ್ಕೆ ಧಾವಿಸಿ ಬಂದರು.

ಕೌರವರು ದ್ರುಪದನನ್ನು ಜಯಿಸಲಾಗದೆ ಯುದ್ಧಪರಾಙ್ಮುಖರಾಗಿ, ಭಗ್ನಮನೋರಥರಾಗಿ ಬಂದುದನ್ನು ನೋಡಿದ ಭೀಮಸೇನನು ಧನುರ್ಬಾಣಗಳನ್ನು ಹಿಡಿದು ರಥವೇರಿ ಮುಂದಾಗಿ ಹೊರಟನು. ಅರ್ಜುನನು ಅವನನ್ನು ಅನುಸರಿಸಿದನು. ನಕುಲಸಹದೇವರು ಅರ್ಜುನನ ರಥರಕ್ಷಕರಾಗಿ ಹೊರಟರು. ಯುಧಿಷ್ಠಿರನು ಭೀಮಾರ್ಜುನರ ಕದನ ಕೌಶಲವನ್ನು ಕಂಡಾನಂದಿಸ ಬಯಸಿ ಆಚಾರ್ಯ ದ್ರೋಣರ ಜತೆಗೆ ಒಂದೆಡೆ ನಿಂತನು.

ಭೀಮಸೇನನು ಸಹೋದರ ಸಹಿತನಾಗಿ ಬರುತ್ತಿರುವುದನ್ನು ಕಂಡು ಪಾಂಚಾಲ ಸೈನಿಕರು ಓಡಿಹೋಗಿ ಪಟ್ಟಣವನ್ನು ಸೇರಿದರು. ಆಗ ದ್ರುಪದರಾಜನು ತನ್ನ ಪುತ್ರರು ಮತ್ತು ಸೇನೆಯೊಡನೆ ಭೀಮನೊಡನೆ ಯುದ್ಧ ಮಾಡಲು ಅವನತ್ತ ಸಾಗಿ ಬಂದನು. ಯುಧಾಮನ್ಯು ಮತ್ತು ಉತ್ತಮೌಜಸ ಎಂಬಿಬ್ಬರು ದ್ರುಪದನ ಪುತ್ರರು. ಅವರು ಹಿಂದೆ ದ್ವಾದಶಾದಿತ್ಯರ ಮಧ್ಯೆ ಧಾರ್ತ್ಯ ಮತ್ತು ಅರ್ಯಮರೆಂಬ ಆದಿತ್ಯರ ಆವೇಶಯುಕ್ತರಾಗಿದ್ದ ವಿಶ್ವಾವಸು-ಪರಾವಸು ಎಂಬ ಗಂಧರ್ವರು. ಅವರೀಗ ದ್ರುಪದ ಪುತ್ರರಾಗಿ ಜನಿಸಿದ್ದರು. ಮಹಾಬಲಶಾಲಿಗಳಾದ ಅವರು ತಂದೆಯ ರಥಸಮೂಹ ರಕ್ಷಕರಾಗಿ ಹೊರಟರು. ಅವರನ್ನು ಅನುಸರಿಸಿ ದ್ರುಪದನ ಮತ್ತೊಬ್ಬ ಮಗ ಸತ್ಯಜಿತ್ ಎಂಬುವನು ಹೊರಟನು. ಅವನು ಹಿಂದೆ ಮಿತ್ರ ಎಂಬ ಆದಿತ್ಯಾಂಶಯುಕ್ತನಾದ ಚಿತ್ರಸೇನನೆಂಬ ಗಂಧರ್ವನು. ಅವನೀಗ ದ್ರುಪದ ಪುತ್ರನಾಗಿ ಜನಿಸಿ ಸತ್ಯಜಿತ್ ಎಂಬ ಹೆಸರಿನಿಂದ ಖ್ಯಾತನಾಗಿದ್ದಾನೆ. ಉತ್ತಮರಥಿಕನೂ ಮಹಾಪರಾಕ್ರಮಿಯೂ ಆದ ಶಿಖಂಡಿಯು ಬಾಣ ಪ್ರಯೋಗ ಮಾಡುತ್ತಾ ಮುಂಭಾಗದಲ್ಲಿ ಹೊರಟನು. ಅವನನ್ನು ಅನುಸರಿಸಿ ದ್ರುಪದನ ಮತ್ತೊಬ್ಬ ಪುತ್ರನಾದ ಜನಮೇಜಯನು ಹೊರಟನು.

ಹಿಂದೆ ತ್ವಷ್ಟ್ರು ನಾಮಕ ಆದಿತ್ಯನ ಆವೇಶಯುಕ್ತನಾಗಿದ್ದ ಚಿತ್ರರಥ ಎಂಬ ಗಂಧರ್ವನೇ ಈಗ ಜನಮೇಜಯನಾಗಿ ಜನಿಸಿ ದ್ರುಪದ ಪುತ್ರನಾಗಿ ಖ್ಯಾತನಾದನು.[12]

ಭೀಮಸೇನನು ಶಿಖಂಡಿ-ಜನಮೇಜಯರ ರಥ, ಧನುರ್ಬಾಣಗಳನ್ನು ಮುರಿದು ಗಜಾಶ್ವಸಹಿತವಾದ ಅವರ ಸೈನ್ಯವನ್ನು ಚೆನ್ನಾಗಿ ಥಳಿಸಿದನು. ಆಗ ಯುಧಾಮನ್ಯು-ಉತ್ತಮೌಜರು ಭೀಮಸೇನನ ಮೇಲೆ ಬಾಣದ ಮಳೆ ಸುರಿಸುತ್ತಾ ಬಂದರು. ಭೀಮನು ಅವರ ರಥ-ಆಯುಧಗಳನ್ನು ನಾಶಪಡಿಸಿ ನೋಯಿಸಿದನು. ಆಗ ದ್ರುಪದರಾಜನು ಭೀಮಸೇನನ ಕೈಗೆ ಸಿಕ್ಕಿದ್ದರೂ ಭೀಮನವನನ್ನು ಹಿಡಿಯಲಿಲ್ಲ. "ದ್ರುಪದರಾಜನನ್ನು ಬಂಧಿಸಿ ನಿಮಗೆ ತಂದೊಪ್ಪಿಸುತ್ತೇನೆ" ಎಂದು ದ್ರೋಣರ ಮುಂದೆ ಅರ್ಜುನನು ಮಾಡಿದ್ದ ಪ್ರತಿಜ್ಞೆಯನ್ನು ಸಫಲಗೊಳಿಸಲೂ ಕರ್ಣನ ಮಾನಭಂಗವಾಗುವುದಕ್ಕಾಗಿಯೂ ಭೀಮನು ಸ್ವತಃ ಆ ಕಾರ್ಯ ಮಾಡದೆ ದ್ರುಪದನನ್ನು ಬಂಧಿಸಲು ಅರ್ಜುನನನ್ನು ನಿಯೋಜಿಸಿದನು. ದ್ರುಪದನು ಅರ್ಜುನನ ಮೇಲೆ ಶರವರ್ಷಮಾಡ ಹತ್ತಿದನು. ಆಗ ಅರ್ಜುನನು ಅವನ ರಥದ ಕುದುರೆಗಳನ್ನು ಸಂಹರಿಸಿ, ದ್ರುಪದನ ಬಾಣಗಳನ್ನು ಛೇದಿಸಿ ಕ್ಷಣಮಾತ್ರದಲ್ಲಿ ಸಿಂಹವು ಜಿಂಕೆಯನ್ನೋಪಾದಿಯಲ್ಲಿ ದ್ರುಪದರಾಜನನ್ನು ಹಿಡಿದು ತನ್ನ ರಥದಲ್ಲಿ ಕೆಡವಿದನು. ಆದರಿಂದ ಖತಿಗೊಂಡ ದ್ರುಪದನ ಸೈನ್ಯ ಮುನ್ನುಗ್ಗಿತು. ಅರ್ಜುನನು ಬಾಣಾಘಾತಗಳಿಂದ ಆ ಸೈನ್ಯವನ್ನು ಓಡಿಸಿದನು. ಭೀಮಸೇನನು ತ್ವರೆಯಿಂದ ಆ ಎಲ್ಲ ಸೈನಿಕರ ಮೇಲೆ ಶರಪ್ರಹಾರ ಮಾಡುತ್ತಾ ಬಡಿಯಹತ್ತಿದನು. ಅದನ್ನು ಗಮನಿಸಿದ ಸತ್ಯಜಿತನು ಅನೇಕ ಬಾಣಗಳನ್ನು ಬಿಡುತ್ತಾ ಅರ್ಜುನನ ಮೇಲೇರಿ ಬರಲು ಫಲ್ಗುಣನು ಅವನ ರಥವನ್ನು ಪುಡಿಪುಡಿಮಾಡಿ ಧನುಸ್ಸನ್ನು ಛೇದಿಸಿದನು. ಸೈನ್ಯದ ಮೇಲೆ ಪ್ರಚಂಡ ದಾಳಿ ಮಾಡಿ ಅವರನ್ನು ಹೊಡೆಯುತ್ತಿರುವ ಭೀಮನನ್ನು ಕಂಡು ಅರ್ಜುನನು "ಅಣ್ಣ, ದ್ರುಪದರಾಜನ ಈ ಸೈನ್ಯವೆಲ್ಲವನ್ನೂ ಪೂರ್ಣವಾಗಿ ನಾಶಪಡಿಸಬೇಡ. ನಮ್ಮ ತಂದೆಯ ಮಿತ್ರನಾದ ಈ ದ್ರುಪದರಾಜನು ಕುರುವೀರರ ಸಂಬಂಧಕ್ಕೆ ಅರ್ಹನಾಗಿದ್ದಾನೆ. ಇವನು ಉತ್ತಮ ಧಾರ್ಮಿಕನೂ ಆಗಿರುವನು. (ಇವನು ಮುಂದೆ ನಮ್ಮ ಸಂಬಂಧಕ್ಕೆ ಯೋಗ್ಯನಾಗಿರುವನೆಂದು ಮನದಲ್ಲಿಟ್ಟುಕೊಂಡು ಹೀಗೆ ಹೇಳಿದನೆಂದು ತಿಳಿಯಬೇಕು) ಆದ್ದರಿಂದ ಗುರುಗಳಿಗೆ ವಚನವಿತ್ತಂತೆ ದ್ರುಪದರಾಜನನ್ನು ಅವರ ಬಳಿಗೆ ಕರೆದೊಯ್ಯೋಣ" ಎಂದು ಹೇಳಿದನು. ಅದನ್ನು ಕೇಳಿ ದ್ರುಪದರಾಜನು ಅರ್ಜುನನ ಸದ್ಗುಣಗಳಿಂದ ಆಕರ್ಷಿತನಾಗಿ ಅವನ ಸ್ನೇಹಪಾಶಬದ್ಧನಾದನು. ಭೀಮನು ದ್ರುಪದ ಸೇನೆಯನ್ನು ಬಿಟ್ಟು ಅರ್ಜುನನನ್ನು ಹಿಂಬಾಲಿಸಿದನು. ಭೀಮನಿಂದ ಮುಕ್ತವಾದ ಸೈನ್ಯವು ಭಯದಿಂದ ಓಡಿತು.

ಅನಂತರ ಅರ್ಜುನನು ದ್ರುಪದರಾಜನನ್ನು ದ್ರೋಣಾಚಾರ್ಯರ ಮುಂದೆ ತಂದು ನಿಲ್ಲಿಸಿದನು. ದ್ರೋಣಾಚಾರ್ಯರು ಅವನನ್ನು ನೋಡಿ "ದ್ರುಪದ! ಈಗ ಹೇಳು, ನಾವಿಬ್ಬರೂ ಸ್ನೇಹಿತರಹುದೋ ಅಲ್ಲವೋ?" ಎಂದು ಪ್ರಶ್ನಿಸಿದರು. ದ್ರುಪದರಾಜನು "ಈಗ ನಮ್ಮಿಬ್ಬರಿಗೂ ಸ್ನೇಹವಿದೆ" ಎನಲು ದ್ರೋಣರು "ರಾಜನ್, ನಾನು ನಿನ್ನಲ್ಲಿ ಶಾಶ್ವತ ಮೈತ್ರಿಯನ್ನು ಬಯಸುವೆನು. ಹಿಂದೆ ನೀನು ನಾವಿಬ್ಬರೂ ಮಿತ್ರರಾಗಿದ್ದರೂ ರಾಜರಿಗೂ ಸಾಮಾನ್ಯ ಬ್ರಾಹ್ಮಣನಿಗೂ ಸಖ್ಯವೆಂದರೇನೆಂದು

12. ಮಹಾಭಾರತದಲ್ಲಿ; ದ್ರುಪದರಾಜನಿಗೆ ಕೌಸವಿ ಎಂಬ ಪತ್ನಿಯಿದ್ದಳು. ಅವಳಲ್ಲಿ 1. ಸುಮಿತ್ರ, 2. ಪ್ರಿಯದರ್ಶನ, 3. ವೀರ-ಕೇತು, 4. ಸುರಥ, 5. ಶತ್ರುಂಜಯ, 6. ಧ್ವಜಕೇತು ಎಂಬ ಆರುಜನ ಮಕ್ಕಳಿದ್ದರೆಂದು ಉಕ್ತವಾಗಿದೆ. ದ್ರೌಪದೀ ವಿವಾಹವಾದ ಮೇಲೆ ಪಾಂಡವರನ್ನು ಕೊಲ್ಲಲು ದುರ್ಯೋಧನನು ದಂಡೆತ್ತಿ ಬಂದಾಗ 1. ಸುಮಿತ್ರನು ಜಯದ್ರಥನಿಂದಲೂ, 2. ಪ್ರಿಯದರ್ಶನನು ಕರ್ಣನಿಂದಲೂ ಸಂಹೃತರಾದರು. (ಆದಿಪರ್ವ 218) 3. ವೀರಕೇತುವು ಭಾರತ ಯುದ್ಧದಲ್ಲಿ 14ನೇ ದಿನ ದ್ರೋಣಾಚಾರ್ಯರಿಂದ ಹತನಾದನು. (ದ್ರೋಣಪರ್ವ 122), 4. ಶತ್ರುಂಜಯನು ಮತ್ತು 5. ಸುರಥರು 15ನೇ ದಿವಸ ಯುದ್ಧದಲ್ಲಿ ಅಶ್ವತ್ಥಾಮಾಚಾರ್ಯರಿಂದ ಹತರಾದರೆಂದು ಮಹಾಭಾರತದಿಂದ ತಿಳಿದು ಬರುತ್ತದೆ. (ಅನುವಾದಕ.)

ಹಂಗಿಸಿದ್ದಿ. ನಿಜ, ನಿನ್ನ ಮಾತಿನಂತೆ ರಾಜಪದವಿಯಿಲ್ಲದವರೊಡನೆ ಸ್ನೇಹವೇರ್ಪಡಲಾರದು. ಆದ್ದರಿಂದಲೇ ನಾನು ಶಿಷ್ಯರಿಂದ ನಿನ್ನನ್ನು ಹಿಡಿಸಿ ತರಿಸಬೇಕಾಯಿತು. ನಾನೇ ನಿನ್ನನ್ನು ಹಿಡಿಯಬಹುದಾಗಿತ್ತು. ಆದರೆ ಬ್ರಾಹ್ಮಣರಿಗೆ ಯುದ್ಧವು ವಿಹಿತವಲ್ಲವೆಂದು ಭಾವಿಸಿ ನಿನ್ನ ಮೈತ್ರಿಯನ್ನು ಅಪೇಕ್ಷಿಸಿ ನನ್ನ ಶಿಷ್ಯರಿಂದ ಆ ಕಾರ್ಯ ಮಾಡಿಸಿದೆನು. ಈಗ ನಾನು ನಿನ್ನ ಅರ್ಧರಾಜ್ಯವನ್ನು ತೆಗೆದುಕೊಂಡಿದ್ದೇನೆ. ಗಂಗಾನದಿಯ ದಕ್ಷಿಣ ಭಾಗದಲ್ಲಿ ನೀನು ರಾಜ್ಯಭಾರ ಮಾಡು. ನಾನು ಉತ್ತರ ಭಾಗಕ್ಕೆ ರಾಜನಾಗುವೆನು. ನೀನೊಬ್ಬ ಮಾತ್ರ ರಾಜನಾಗಿದ್ದರೆ ನಮ್ಮಿಬ್ಬರಲ್ಲಿ ಮೈತ್ರಿ ಘಟಿಸಲಾರದು. ಕೇವಲ ನಿನ್ನ ಸ್ನೇಹ-ಕ್ಕಾಗಿಯೇ ಅರ್ಧರಾಜ್ಯವನ್ನು ಸ್ವೀಕರಿಸುತ್ತೇನೆ"-ಎಂದು ಹೇಳಿ ದ್ರುಪದ ರಾಜನನ್ನು ಬಂಧನದಿಂದ ಬಿಡಿಸಿದರು ಹಾಗೂ ಅರ್ಧರಾಜ್ಯವನ್ನು ಪಡೆದು ಅವನನ್ನು ಪಾಂಚಾಲರಾಜಧಾನಿಗೆ ಕಳಿಸಿ ನಾಗಪುರ (ಹಸ್ತಿನಾಪುರ)ದಲ್ಲಿ ಶಿಷ್ಯರೊಡನೆ ವಾಸ ಮಾಡಿದರು.

ದ್ರೋಣಾಚಾರ್ಯರು "ನ ವಿಪ್ರಧರ್ಮೋ ಯದ್ಯುದ್ಧಮ್" ಅಂದರೆ ಯುದ್ಧ ಮಾಡುವುದು ಬ್ರಾಹ್ಮಣ ಧರ್ಮವಲ್ಲ ಎಂದು ದ್ರುಪದರಾಜನಿಗೆ ಹೇಳಿ, ಆದ್ದರಿಂದಲೇ ತಾವು ತಮ್ಮ ಶಿಷ್ಯರಿಂದ ಆ ಕಾರ್ಯ ಮಾಡಿಸಿದ್ದಾಗಿ ಹೇಳಿದರಷ್ಟೇ? ಹಾಗಾದರೆ ಅವರು ಮುಂದೆ ಕುರುಕ್ಷೇತ್ರದಲ್ಲಿ ಏಕೆ ಯುದ್ಧ ಮಾಡಿದರು? ಎಂಬ ಶಂಕೆ ಬರುವುದು ಸಹಜವಾಗಿದೆ. ಅದಕ್ಕೆಂದೇ ನಿರ್ಣಯಕಾರರು ಅದನ್ನು ವಿವರಿಸುವರು.

ಧೃತರಾಷ್ಟ್ರನ ಪುತ್ರರಾದ ದುರ್ಯೋಧನಾದಿಗಳು ಭೀಮಸೇನದೇವರ ಭಯದಿಂದ ದ್ರೋಣಾಚಾರ್ಯರ ಪಾದ-ಗಳನ್ನು ಹಿಡಿದುಕೊಂಡು ಯುದ್ಧ ಮಾಡಿ ತಮ್ಮನ್ನು ಕಾಪಾಡಬೇಕೆಂದು ಶರಣಾಗತರಾದರು. ಈ ಕಾರಣದಿಂದಲೂ, ಮುಖ್ಯವಾಗಿ ಶ್ರೀಹರಿಯ ಇಚ್ಛೆಯೂ ಹಾಗೆಯೇ ಇದ್ದುದರಿಂದ ದ್ರೋಣಾಚಾರ್ಯರು ತಮ್ಮ ಪುತ್ರ ಅಶ್ವತ್ಥಾಮನೊಡಗೂಡಿ ಅವೈಷ್ಣವರಾದ ದುರ್ಯೋಧನಾದಿಗಳ ರಕ್ಷಣೆಗಾಗಿ ಕ್ಷಾತ್ರಧರ್ಮವನ್ನು ಅನುಸರಿಸಿ ಪಾಂಡವರೊಡನೆ ಅವರ ವಿರುದ್ಧವಾಗಿ ಯುದ್ಧ ಮಾಡಿದರು. ಶ್ರೀಹರಿ ಪರಮಾತ್ಮನ ಇಚ್ಛೆಯಿಂದಲೇ ಹೀಗೆ ಅವರು ಕ್ಷಾತ್ರ ಧರ್ಮವಹಿಸಿ ಯುದ್ಧ ಮಾಡಿದರೆಂದು ತಿಳಿಯಬೇಕು.

ಪ್ರಕೃತ ದ್ರುಪದರಾಜನು ದ್ರೋಣರಿಗೆ ಅರ್ಧರಾಜ್ಯವನ್ನು ಒಪ್ಪಿಸಿ, ತನಗಾದ ಪರಾಭವದಿಂದ ಹಗಲು-ರಾತ್ರಿ ದುಃಖಿತನಾದನು. ಭೀಮಾರ್ಜುನರ ಬಲ-ಶೌರ್ಯ-ಸಾಹಸಗಳಿಂದ ಪ್ರಭಾವಿತನಾದ ದ್ರುಪದನು ಪಾಂಡವರ ಆಶ್ರಯ ಮತ್ತು ಸ್ನೇಹ ಸಂಬಂಧವನ್ನು ಬಯಸಿದನು. ಅರ್ಜುನನು ಯುದ್ಧರಂಗದಲ್ಲಿ ತಾನು (ದ್ರುಪದ) ಸಂಬಂಧ ಬಾಂಧವ್ಯಕ್ಕೆ ಅರ್ಹನೆಂದು ಹೇಳಿದ್ದು ಸತ್ಯವಾಗುವಂತೆ ಮಾಡಲೂ ಅರ್ಜುನನ ಮೃದುಸ್ವಭಾವವನ್ನು ಕಂಡು ಅವನನ್ನು ತನ್ನ ಅಳಿಯ-ನನ್ನಾಗಿ ಮಾಡಿಕೊಳ್ಳಲಾಶಿಸಿ ಅದಕ್ಕಾಗಿ ಓರ್ವ ಪುತ್ರಿಯನ್ನೂ, ದ್ರೋಣಾಚಾರ್ಯರನ್ನು ಸಂಹರಿಸಬಲ್ಲ ಒಬ್ಬ ಪುತ್ರನನ್ನೂ ಬಯಸಿ ಅದು ಸಫಲವಾಗಲು ಒಂದು ಯಾಗವನ್ನು ನೆರವೇರಿಸಲು ನಿಶ್ಚೈಸಿ, ಯಾಜ ಮತ್ತು ಉಪಯಾಜ ಎಂಬ ಸದ್ಬ್ರಾಹ್ಮಣರಿಗೆ ಒಂದು ಅರ್ಬುದ ಗೋವುಗಳನ್ನು ದಾನ ಮಾಡುವುದಾಗಿ ವಾಗ್ದಾನ ಮಾಡಿ ಯಜ್ಞ ಮಾಡಿಸಲು ಅವರನ್ನೊಪ್ಪಿಸಿ ತನ್ನರಮನೆಗೆ ಕರೆಸಿಕೊಂಡು ಯಾಗಕ್ಕೆ ಬೇಕಾದ ಸಮಸ್ತ ಸಲಕರಣೆ, ದ್ರವ್ಯಾದಿಗಳನ್ನು ಸಿದ್ಧಪಡಿಸಿ ಯಜ್ಞದೀಕ್ಷಿತನಾಗಿ ಅವರಿಂದ ಯಾಗ ಮಾಡಿಸಿದನು. ಯಜ್ಞವು ಸಾಂಗವಾಗಿ ಪೂರ್ಣಾಹುತಿಯಾದ ಮೇಲೆ ಪುತ್ರಾರ್ಥಿಯ ಪತ್ನಿಯು ಯಾಗಶೇಷ ಚರುವನ್ನು ಸ್ವೀಕರಿಸಬೇಕಾದ್ದರಿಂದ ದ್ರುಪದ ಪತ್ನಿಯನ್ನು ಕರೆತರುವಂತೆ ಯಾಜೋಪಯಾಜರು ಹೇಳಿ ಕಳಿಸಿದರು. ಆದರೆ ದ್ರುಪದನ ರಾಣಿಯು ಸಂತಾನವಾಗಬೇಕಾದರೆ ತಾನು ಬೇಕೇ ಬೇಕು ಎಂಬ ಅಹಂಕಾರದಿಂದ ಯಾಜೋಪಯಾಜರ ಕರೆಯನ್ನು ನಿರ್ಲಕ್ಷಿಸಿ ಯಾಗಶಾಲೆಗೆ ಹೋಗಲು ಬೇಕೆಂದೇ ತಡಮಾಡಿದಳು. ಬ್ರಾಹ್ಮಣೋತ್ತಮರಾದ ಯಾಜ-ಉಪಯಾಜರು ಎಷ್ಟು ವೇಳೆಯಾದರೂ ಮಹಾರಾಣಿಯು ಬರದಿರಲು, ಅವಳು ತೋರಿದ ಅವಜ್ಞೆಯ

ಮರ್ಮವನ್ನರಿತು ಕುಪಿತರಾಗಿ, ರಾಣಿಯನ್ನು ತಿರಸ್ಕರಿಸಿ ಅವಳಿಲ್ಲದೆ ರಾಜನಿಗೆ ಸಂತಾನವಾಗುವಂತೆ ಮಾಡಲು ನಿರ್ಧರಿಸಿ, ದ್ರುಪದನಿಗೆ ಸಂತಾನವಾಗಲು ರಾಜಪತ್ನಿಯು ಭಕ್ಷಿಸಬೇಕಾದ ಹವಿಸ್ಸನ್ನು ವಿಷ್ಣುದೇವತಾಕವಾದ ಮಂತ್ರಗಳಿಂದ ಯಜ್ಞ-ಕುಂಡದಲ್ಲಿಯೇ ಹಾಕಿ ಹೋಮ ಮಾಡಿಬಿಟ್ಟರು. ಆಗ ಯಜ್ಞಶಾಲೆಯಲ್ಲಿ ಮಿಂಚು ಮಿನುಗಿದಂತಾಗಿ ಅತ್ಯಂತ ಪ್ರಕಾಶಯುಕ್ತವಾದ ಅಂಗಾರ ಸದೃಶನಾದ ತೇಜಸ್ವಿಯೋರ್ವನು ಅಗ್ನಿಕುಂಡದ ಮಧ್ಯಭಾಗದಿಂದ ಮೇಲೇರಿ ಬಂದನು. ಕಿರೀಟ-ಕರ್ಣಕುಂಡಲ-ತೇಜೋವಿಶಿಷ್ಟನೂ ಸುವರ್ಣಮಾಲಾಧಾರಿಯೂ ಶ್ರೇಷ್ಠ ಖಡ್ಗಧಾರಿಯೂ ಆದ ಆ ತೇಜಸ್ವಿಯು ದಿನಮಣಿಯಂತೆ ಝುಗಝುಗಿಸುವ ಭವ್ಯರಥದಲ್ಲಿ ಕುಳಿತು ಸಿಂಹಗರ್ಜನೆ ಮಾಡುತ್ತಾ ದ್ರುಪದ ರಾಜನ ಬಳಿಗೆ ಬಂದನು. ಅವನಿಗೆ ಅಲ್ಲಿ ನೆರೆದಿದ್ದ ಮುನಿಜನರು ಮತ್ತು ದ್ರುಪದ ಮಹಾರಾಜನು "ಧೃಷ್ಟದ್ಯುಮ್ನ" ಎಂದು ನಾಮಕರಣ ಮಾಡಿದರು.

"ಧೃಷ್ಟತ್ವಾತ್ ಧಾಷ್ಟ್ಯತ್ವಾತ್ ಧೃಷ್ಟಃ ದ್ಯೋತನತ್ವಾತ್ ಪ್ರಕಾಶಮಾನತ್ವಾತ್ ದ್ಯುಮ್ನಃ, ಧೃಷ್ಟಶ್ಚಾಸೌ ದ್ಯುಮ್ನಶ್ಚ-ಧೃಷ್ಟದ್ಯುಮ್ನಃ" ಎಂಬ ವ್ಯುತ್ಪತ್ತಿಯಂತೆ-ಕಣ್ಣಿಗೆ ಕಂಡವನೂ ಧಾಷ್ಟ್ಯ ಮತ್ತು ಪ್ರಕಾಶಮಾನನಾಗಿರುವುದರಿಂದ ಅವನು ಸರ್ವ ವೇದಾರ್ಥಗಳನ್ನೂ, ಭಗವತ್ತತ್ವಗಳನ್ನೂ ತಿಳಿದವನಾಗುವನೆಂದು ಅವನಿಗೆ ಇಟ್ಟ ಧೃಷ್ಟದ್ಯುಮ್ನನೆಂಬ ಹೆಸರು ಸಾರ್ಥಕ-ವಾಯಿತು.

ಧೃಷ್ಟದ್ಯುಮ್ನನು ಯಜ್ಞಕುಂಡದಿಂದ ಆವಿರ್ಭವಿಸಿ ಬಂದಮೇಲೆ ಅವನನ್ನು ಅನುಸರಿಸಿ ಹೋಮಕುಂಡ ಮಧ್ಯ-ಭಾಗದಿಂದ ಆವಿರ್ಭವಿಸಿ ಭಾರತೀದೇವಿಯು ಮೇಲೆದ್ದು ಬಂದಳು. ಮುಖ್ಯಪ್ರಾಣದೇವರು ಸರ್ವರನ್ನೂ ರಕ್ಷಿಸು-ವವರಾದ್ದರಿಂದ ಅವರು 'ಭರತ' ಎಂದು ವೇದಗಳಲ್ಲಿ ಪ್ರಸಿದ್ಧರಾಗಿದ್ದಾರೆ (ಸರ್ವಸ್ಯ ಭರಣಾತ್ ಭರತಃ) ಮುಖ್ಯಪ್ರಾಣ ದೇವರ ಪತ್ನಿಯು ಅಂದರೆ ಭರತನ ಅರ್ಧಾಂಗಿ ಭಾರತಿಯೆನಿಸುವಳು. ಆ ದೇವಿಯು ವೇದಾಭಿಮಾನಿನಿಯಾದ್ದರಿಂದ 'ಸರಸ್ವತೀ' ಎನಿಸುವಳು. ಸುಖಸ್ವರೂಪರಾದ ವಾಯುದೇವರನ್ನು ಆಶ್ರಯಿಸಿರುವುದರಿಂದ, ಅಥವಾ "ಶಂರೂಪೇಣ ವಾಯುನಾರಮತ ಇತಿ ಶ್ರೀಃ" ಅವಳು ಶ್ರೀಯೆಂದೇ ಕರೆಯಲ್ಪಡುವಳು.'' ಅಂದರೆ ಸುಖಸ್ವರೂಪರಾದ ವಾಯುದೇವರಿಂದ ರಮಿಸಲ್ಪಡುವುದರಿಂದ ಶ್ರೀ ಎಂದು ಕರೆಯಲ್ಪಡುತ್ತಾಳೆ.

ಈಗ ನಿರ್ಣಯಾಚಾರ್ಯರು ಪಂಚದ್ರೌಪದೀ ಸ್ವರೂಪವನ್ನು ನಿರೂಪಿಸುತ್ತಾರೆ.

ಯಜ್ಞಕುಂಡದಿಂದ ಮೇಲೆದ್ದು ಬಂದ ಆ ದೇವಿಯು ಭಾರತೀ ಮಾತ್ರವಲ್ಲ; ಅವಳು-ಶಚೀದೇವಿ, ಶ್ಯಾಮಲಾದೇವಿ, ಉಷಾದೇವಿಯರ ಆವೇಶಯುಕ್ತಳೂ ಅಹುದು. ಶಚೀ, ಶ್ಯಾಮಲಾ-ಉಷಾದೇವಿಯರು ಇಂದ್ರ, ಯಮ, ಅಶ್ವಿನೀ ದೇವತೆಗಳನ್ನು ಆಶ್ರಯಿಸಿರುವುದರಿಂದ ಅವರೂ ಶ್ರಿಯಃ ಎಂದು ಕರೆಯಲ್ಪಡುತ್ತಾರೆ.

ದ್ರೌಪದೀದೇವಿಯು ಸಮಸ್ತ ಸ್ತ್ರೀಯರ ಮಧ್ಯದಲ್ಲಿ ಅತ್ಯಂತ ಶ್ರೇಷ್ಠಳಾದ್ದರಿಂದಲೂ ಹೆಸರಿನಿಂದಲೂ ಅವಳು ಕೃಷ್ಣಾ ಎಂಬ ಹೆಸರುಳ್ಳವಳಾದಳು. ವರ್ಣ(ಬಣ್ಣ)ದಿಂದಲೂ ಅವಳು ಕೃಷ್ಣಾನಾಮಕಳೇ ಆದಳು. ದ್ರೌಪದಿಯು ಎಲ್ಲರಕಿಂತಲೂ ಉತ್ಕೃಷ್ಟಳು. ಸುಖಪಡಿಸುವವಳು. "ಣಷ್ಟ ನಿರ್ವೃತವಾಚಕಃ" ಎಂಬ ವಚನವಿರುವುದರಿಂದ "ಉತ್ಕೃಷ್ಟಂ ಣಂ ಸುಖಂ ಯಸ್ಯಾಸ್ಸಾ ಕೃಷ್ಣಾ" ಎಂಬ ಅಭಿಪ್ರಾಯದಿಂದ 'ಉತ್ಕೃಷ್ಟಾ ನಂದಿನೀ' ಎಂದು ಹೇಳಿದ್ದಾರೆ. ಹೀಗೆ ಭಾರತೀದೇವಿಯು ಮೂರು ವಿಧದಿಂದಲೂ ಕೃಷ್ಣಾ ಪದವಾಚ್ಯಳಾಗಿದ್ದಾಳೆ. ಶ್ರೀ ದ್ರೌಪದೀದೇವಿಯು ಹುಟ್ಟಿನಿಂದಲೇ ಸರ್ವಜ್ಞಳು.

---

13. ಸಂಸಾರೇऽಪಿ ವಾಯೋಃ ಸರ್ವದಾ ವ್ಯಕ್ತಿರೂಪ ಸುಖಾನುಭವಿತೃತ್ವಾತ್ ಶಂರೂಪಂ ವಾಯುಮಿತ್ಯರ್ಥಃ । - (ಶ್ರೀವಾದಿರಾಜ ಗುರುಗಳು.)

ಸರ್ವಾಭರಣಗಳಿಂದ ಅಲಂಕೃತಳು. ಸಂಪ್ರಾಪ್ತ ಯೌವನ ಸಂಪನ್ನಳು. ಜರಾರಹಿತಳು ಅಂದರೆ ಮುದಿತನವಿಲ್ಲದವಳು, ತ್ರಿಲೋಕ ಸುಂದರಿಯೂ ಆಗಿರುವಳು.

ದ್ರೌಪದೀ ದೇವಿಯು ಸರ್ವಲಕ್ಷಣಯುಕ್ತಳಾದ ಉಮಾದೇವಿಯ ಅಂಶದಿಂದ ಯುಕ್ತಳಾದವಳು. ಹಿಂದೊಮ್ಮೆ ಪಾರ್ವತೀದೇವಿಯು ಶಚೀ, ಶ್ಯಾಮಲಾ, ಉಷಾದೇವಿಯರಿಂದೊಡಗೂಡಿ ತಮ್ಮತಮ್ಮ ಪತಿಗಳೊಡನೆ ಬ್ರಹ್ಮದೇವರ ಸಮ್ಮುಖದಲ್ಲಿಯೇ ಅವರನ್ನು ನಿರ್ಲಕ್ಷಿಸಿ ವಿಶೇಷವಾಗಿ ವಿಲಾಸಮಗ್ನರಾದಾಗ, ಬ್ರಹ್ಮದೇವರು ಕುಪಿತರಾಗಿ 'ನೀವು ಮನುಷ್ಯಯೋನಿಯಲ್ಲಿ ಜನಿಸಿರಿ' ಎಂದು ಪಾರ್ವತೀ ಮೊದಲಾದ ಆ ನಾಲ್ವರನ್ನೂ ಶಪಿಸಿದರು. ಮತ್ತು 'ಮನುಷ್ಯರಾಗಿ ಜನಿಸಿದಾಗ ನೀವು ಪರಪುರುಷಸಂಪರ್ಕವನ್ನು ಹೊಂದುವಿರಿ'-ಅಂದರೆ ನಿಮಗೆ ಅನ್ಯ ಪುರುಷರ ಸ್ಪರ್ಶಮಾತ್ರವಾಗುವುದು ಎಂದೂ ಶಾಪ ನೀಡಿದರು. ಆಗ ಪಾರ್ವತೀ, ಶಚೀ, ಶ್ಯಾಮಲಾ, ಉಷಾದೇವಿಯರು 'ಈ ಬ್ರಹ್ಮದೇವರ ಶಾಪವು ಅನಿರ್ವಾಯವಾಗಿದೆ. ಆದರಿಂದಾಗಿ ನಾವು ಮನುಷ್ಯ ಜನ್ಮದಲ್ಲಿ ಅನ್ಯಪುರುಷರ ಸ್ಪರ್ಶಮಾಡಬೇಕಾಗಿಯೂ ಬಂದಿದೆ. ನಾವು ಬೇರೊಬ್ಬ ಸಾಮಾನ್ಯ ಮಾನವನ ಸ್ಪರ್ಶ ಮಾಡಬಾರದು. ಶ್ರೇಷ್ಠರಾದ ವಾಯುದೇವರ ಸ್ಪರ್ಶ ಮಾಡಿದರೂ ನಮಗೆ ದೋಷ ತಟ್ಟದು. ಆದುದರಿಂದ ನಾವು ವಾಯುದೇವರನ್ನೇ ಹೊಂದೋಣ' ಎಂದು ಆಲೋಚಿಸಿ ಅದರಂತೆ ನಿಶ್ಚಯಿಸಿ ಆ ನಾಲ್ವರೂ ಭಾರತೀದೇವಿಯ ಬಳಿಗೆ ಬಂದು ತಮಗೆ ಬಂದೊದಗಿದ ಬ್ರಹ್ಮದೇವರ ಶಾಪ ಮೊದಲಾದ ಸಮಸ್ತ ವಿಚಾರ-ಗಳನ್ನೂ ಅರುಹಿ, ಒಂದು ಸಹಸ್ರ ವರ್ಷಗಳ ಕಾಲ ಭಾರತೀದೇವಿಯ ಸೇವೆ ಮಾಡಿ 'ದೇವಿ! ಬ್ರಹ್ಮ ಶಾಪದಿಂದ ನಾವು ಮಾನವರಾಗಿ ಜನಿಸುವುದೂ, ಆಗ ಪರಪುರುಷ ಸ್ಪರ್ಶವಾಗುವುದೂ ಅನಿವಾರ್ಯವಾಗಿದೆ. ಆದ್ದರಿಂದ ನಾವು ವಾಯು-ದೇವರ ವಿನಃ ಬೇರೊಬ್ಬರ ಸ್ಪರ್ಶವನ್ನೂ ಸರ್ವಥಾ ಬಯಸುವುದಿಲ್ಲ[14]. ಆದ್ದರಿಂದ ನಾವು ನಾಲ್ವರೂ ನಿನ್ನ ದೇಹದಲ್ಲಿದ್ದು ಈ ಶಾಪವನ್ನು ಅನುಭವಿಸುತ್ತೇವೆ. ತಾಯಿ, ನೀನು ದಯಮಾಡಿ ನಮಗೆ ನಿನ್ನ ದೇಹದಲ್ಲಿರಲು ಆಶ್ರಯಕೊಡು', ಎಂದು ಪ್ರಾರ್ಥಿಸಿದರು.

ಮತ್ತೆ ಮುಂದುವರೆದು, ಪಾರ್ವತೀ ಮೊದಲಾದವರು 'ದೇವಿ! ಇನ್ನೊಂದು ಸಲ ನಾವು ನಾಲ್ವರೂ ಒಂದೇ ಶರೀರ-ವುಳ್ಳವರಾಗಿ ಬ್ರಹ್ಮದೇವರನ್ನು ವಂಚಿಸಲು, ಕ್ರೀಡಿಸಲು ಹೋದಾಗ ಬ್ರಹ್ಮದೇವರು ಅನ್ಯಗಾಮಿತ್ವ-ಅಂದರೆ ಬೇರೊಬ್ಬ-ರೊಡನೆ ಸಂಪರ್ಕ ಹೊಂದುವಂತೆ ಶಪಿಸಿದರು. ಹೀಗೆ ನಾವು ಅವರಿಂದ ಶಾಪ ಪಡೆದಿದ್ದೇವೆ. ಬ್ರಹ್ಮದೇವರು "ಎಲೈ ದರ್ಪಿತರಾದ ಸ್ತ್ರೀಯರೇ, ನೀವು ಮೂರುಬಾರಿ ನನ್ನನ್ನು ವಂಚಿಸಲು ಬಂದಿರುವಿರಿ. ಆದ್ದರಿಂದ ನೀವು ಮೂರುಸಲ ಒಂದೇ ಶರೀರವುಳ್ಳವರಾಗಿ ಮಾನುಷತ್ವವನ್ನು ಪಡೆಯುವಿರಿ" ಎಂದು ಅಪ್ಪಣೆ ಮಾಡಿದ್ದಾರೆ. ಆದುದರಿಂದ ಎಲೈ ಭಾರತೀದೇವಿ! ಹೀಗೆ ನಮಗೆ ಎರಡು ಬಾರಿ ಶಾಪ ಬಂದಿರುವುದರಿಂದ ನಾಲ್ಕು ಜನ್ಮಗಳ ಮಧ್ಯದಲ್ಲಿ ನಾವು ಮೂರು ಜನ್ಮಗಳಲ್ಲಿ ನಿನ್ನ ಶರೀರದಲ್ಲಿದ್ದು ಒಂದೇ ದೇಹವುಳ್ಳವರಾಗಿ ಶಾಪವನ್ನು ಅನುಭವಿಸಲು ಆಶಿಸುತ್ತೇವೆ'-ಎಂದು ಪ್ರಾರ್ಥಿಸಿದರು.

ಇಲ್ಲಿ ಕೆಲ ವಿಶೇಷ ವಿಚಾರಗಳು ಗಮನಾರ್ಹವಾಗಿವೆ:-

---

14. ವಿಶೇಷವಿಚಾರ:- 'ಅದೃತ್ಯಾತ್ರಸಂಸ್ಪರ್ಶೋ ಹ್ಯಸಂಭಾಷಣಮೇವ ಚ' ಎಂಬ ಪ್ರಮಾಣವಚನವಿರುವುದರಿಂದ ದೇವತೆಗಳಿಗೆ ಸ್ಪರ್ಶವೂ ಸಹ ಮಹಾದೋಷವಾಗಿದೆ. ದೇವಿ, ವಾಯುದೇವರಿಗೆ ಸೊಸೆಯಂದಿರ ಸ್ಥಾನದಲ್ಲಿರುವ ನಾವು ಸಾಕ್ಷಾತ್ ವಾಯುದೇವರ ಪತ್ನಿಯಾದ ನಿನ್ನ ದೇಹದಲ್ಲಿ ನಾವು ನಾಲ್ವರೂ ಒಟ್ಟಿಗೇ ಇರಲು ನಮಗೆ ಆಶ್ರಯಕೊಡು. ನಿನ್ನಲ್ಲಿ ವಾಸಿಸುವ ನಮಗೆ ಕೆಲವು ಸಂದರ್ಭದಲ್ಲಿ ವಾಯುದೇವರು ನಿನ್ನೊಡನೆ ಕ್ರೀಡಿಸುತ್ತಿರುವಾಗ ಅವರ ಸ್ಪರ್ಶವಾದರೂ ಸಹ ತಂದೆಯು ಮಗಳನ್ನು ಮುಟ್ಟಿದಂತೆ ದೋಷವು ಬರುವುದಿಲ್ಲ, ಎಂಬ ಅಭಿಪ್ರಾಯದಿಂದ ಪಾರ್ವತೀ, ಶಚೀ, ಶ್ಯಾಮಲಾ ಮತ್ತು ಉಷಾದೇವಿಯರು 'ಮಾರುತಾದನ್ಯಂ ನ ಸ್ಪ್ರಶೇಮ ಕಥಂಚನ' ಎಂದು ಹೇಳಿರುವರೆಂದು ತಿಳಿಯಬೇಕು. (ಶ್ರೀವಾದಿರಾಜತೀರ್ಥರ ವ್ಯಾಖ್ಯಾನದಂತೆ.)

1) ಒಂದೇ ದೇಹದಿಂದಲೇ ನೀವು ಮೂರುಸಲ ನನ್ನನ್ನು ವಂಚಿಸಲು ಬಂದಿರುವುದರಿಂದ ಮೂರುಬಾರಿ ದೇಹೈಕ್ಯದಿಂದ ನೀವು ಮನುಷ್ಯರಾಗಿ ಜನಿಸುವಿರಿ ಎಂದು ಬ್ರಹ್ಮದೇವರ ಶಾಪ. ಇಲ್ಲಿ ಪರಪುರುಷ ಸಂಬಂಧ ಪಡೆಯುವಿರಿ ಎಂದು ಶಾಪವಿಲ್ಲ.

2) ಹಾಗಾದರೆ ಪರಪುರುಷರ ಸ್ಪರ್ಶಸಂಬಂಧರೂಪ ಶಾಪವಿಲ್ಲದಿರುವುದರಿಂದ ಉಮಾದಿಗಳು ಭಾರತೀದೇವಿಯರನ್ನು ಏಕೆ ಪ್ರಾರ್ಥಿಸಿದರು? ನಾಲ್ಕನೆಯ ಜನ್ಮದಲ್ಲಿ ಅನ್ಯಗಾಮಿತ್ವ ಶಾಪವಿದ್ದರೂ ಒಂದೇ ದೇಹದಿಂದಿರುವಿಕೆಯ ಶಾಪವು ಮೂರೇ ಸಲವೆಂದು ನಿರ್ಣಯಿಸಿದ್ದರಿಂದ ದೃಷ್ಟಾಂತ ಯಾವುದರಿಂದ?

ಈ ಶಂಕೆಗಳನ್ನು ನಿರ್ಣಯಾಚಾರ್ಯರು ಹೀಗೆ ಪರಿಹರಿಸಿದ್ದಾರೆ – ಶಾಪವಿಲ್ಲದಿದ್ದರೂ ಸಹ ದೇವತಾ ಸ್ತ್ರೀಯರಾದ್ದರಿಂದ ಅತ್ಯಂತ ಸುರುಚಿರ ಚೆಲುವೆಯರಾದುದರಿಂದ ರಾವಣಾದಿಗಳಂತೆ ಕಾಮುಕರಾದ ಯಾರಾದರೂ ಮಾನವರು ನಮ್ಮನ್ನು ಬಲಾತ್ಕಾರದಿಂದ ಸ್ಪರ್ಶಿಸುವರೇನೋ ಎಂಬ ಭಯದಿಂದ ಭಾರತೀ ದೇವಿಯನ್ನು ಪ್ರಾರ್ಥಿಸಿದರೆಂದು ತಿಳಿಯಬೇಕು. ನಾಲ್ಕನೆಯ ಜನ್ಮದಲ್ಲಿ ಭಾರತೀ ವಾಯುಗಳಿಗೆ ಬಹುಮಾನುಷ ದೇಹಗಳಲ್ಲಿ ಮನುಷ್ಯತ್ವವನ್ನು ಹೊಂದಿಸಿಕೊಡುವುದು ಯುಕ್ತವಲ್ಲ ಎಂಬ ಭಯದಿಂದ ತಾವೇ ಭಾರತಿಯಿಂದ ಸಹಿತರಾಗಿ ಒಂದೊಂದು ಶರೀರವನ್ನು ಸಂಪಾದಿಸಿ ಜನಿಸುತ್ತಾರೆ ಎಂದು ತಿಳಿಯಬೇಕು.

3) ಅಥವ ಹೀಗೆ ಸಮಾಧಾನ ಹೇಳಬಹುದು:- ಒಂದೇ ಶರೀರದಲ್ಲಿದ್ದು ಪ್ರಾರ್ಥಿಸಿದ್ದರಿಂದ ರುದ್ರದೇವರು ಒಂದು ದೇಹದಿಂದಲೇ ಅವರವರ ಪತಿಪ್ರಾಪ್ತಿರೂಪವಾದ ವರವನ್ನು ಕೊಟ್ಟಿರಾದ್ದರಿಂದ ದ್ರೌಪದೀ ಜನ್ಮದಲ್ಲಿ ಐದುಜನರಿಗೂ ಒಂದೇ ಶರೀರವೆಂದು ತಿಳಿಯಬೇಕು.

4) ರುದ್ರ ದೇವರು ಬ್ರಹ್ಮದೇವರ ಶಾಪದಿಂದ ನಮ್ಮನ್ನು ಮುಕ್ತರನ್ನಾಗಿಸಿ ನಮ್ಮ ನಮ್ಮ ಪತಿ ಸಂಯೋಗರೂಪ ವರವನ್ನು ಕೊಟ್ಟಿರುವುದರಿಂದ ಅನ್ಯಗಾಮಿತ್ವ ಶಂಕೆಯಿಲ್ಲವಾದರೂ ಎಲೈ ಭಾರತೀದೇವಿ! 'ನಾವು ನಿನ್ನಿಂದ ಸಹಿತರಾಗಿ ಒಂದೇ ದೇಹದಲ್ಲಿರುವಿಕೆಯನ್ನು ಅಪೇಕ್ಷಿಸುತ್ತೇವೆ' ಎಂದು ಹಿಂದೆ ನಿರೂಪಿಸಿದ ಸತ್ವರಕ್ಷಣೆಗಾಗಿಯೂ ಮೋಹಕ ಸೌಂದರ್ಯ ಯುಕ್ತರಾಗಿರುವುದರಿಂದ ಬೇರಾವ ಕಾಮುಕನೂ ಸ್ಪರ್ಶಿಸದಂತಾಗಲೂ ಸಹ ಒಂದೇ ಶರೀರದಲ್ಲಿ ಭಾರತೀ ದೇವಿಯಿಂದ ಸಹಿತರಾಗಿಯೇ ಅವರಿಗೆ ನಾಲ್ಕು ಸಲ ಉತ್ಪತ್ತಿಯೆಂದು ಸಮಾಧಾನವನ್ನು ತಿಳಿಯಬೇಕು. ಬ್ರಹ್ಮದೇವರು ಶಾಪಕ್ಕೆ ವಿಮೋಚನವಿಲ್ಲದಿದ್ದಲ್ಲಿ ಕುಪಿತರಾದ ಬ್ರಹ್ಮದೇವರ ರುದ್ರದೇವರಿಗೆ ಏಕೆ ಶಾಪವಿತ್ತರು? ಒಂದೇ ಕಡೆ ವಿರುದ್ಧ ಫಲವೆಂತಾಗುವುದು? ಎಂಬ ಯುಕ್ತಿಯನ್ನು ಇಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು.

'ಎಲೈ ಭಾರತೀದೇವಿ! ಭೂಮಿಯಲ್ಲಿ ನಮಗೆ ನಾಲ್ಕು ಸಲ ಜನ್ಮವಾಗುವುದು. ಆದರೆ ವಾಯುದೇವರನ್ನು ಬಿಟ್ಟು ಮತ್ತಾರೂ ನಿನ್ನನ್ನು ಹೊಂದುವುದಿಲ್ಲವೆಂಬ ಶ್ರೀಹರಿಯ ಅನಾದಿನಿತ್ಯವಾದ ನಿಯಮವಿರುವುದರಿಂದ ಅನ್ಯಗಾಮಿತ್ವವು ನಮಗಿದ್ದರೂ ಶ್ರೀವಾಯುದೇವರ ಸಂಬಂಧವೇ ನಿನ್ನ ಏಕ ದೇಹತ್ವ ಪ್ರಯೋಜನವು. ನಿನ್ನೊಡನೆ ಒಂದೇ ಶರೀರ-ದಲ್ಲಿರುವುದರಿಂದ ಶ್ರೀವಾಯುದೇವರ ಹೊರತು ಮತ್ತೊಬ್ಬರು ನಮ್ಮನ್ನು ಪಡೆಯಲಾರರು, ಆದ್ದರಿಂದ ನಮಗೆ ಆಶ್ರಯ ನೀಡು' ಎಂದು ಕೋರಿದರು. ಶ್ರೀಭಾರತೀ ದೇವಿಯು ಪಾರ್ವತೀ, ಶಚೀ, ಶ್ಯಾಮಲ ಮತ್ತು ಉಷಾದೇವಿಯರ ಪ್ರಾರ್ಥನೆಯನ್ನು ಮನ್ನಿಸಿ ಹಾಗೆಯೇ ಆಗಲೆಂದು ಒಪ್ಪಿದಳು. ಮತ್ತು ಭಾರತೀದೇವಿಯು ಪಾರ್ವತೀ ಮೊದಲಾದ ಆ ನಾಲ್ಕು ಜನರಿಂದ ಕೂಡಿಕೊಂಡೇ ಭೂಮಿಯಲ್ಲಿ ವಿಪ್ರಕನ್ನಿಕೆಯಾಗಿ ಜನಿಸಿದಳು.

ವಿಪ್ರಕನ್ನಿಕೆಯಾಗಿದ್ದಾಗ ಪಾರ್ವತೀ ಮೊದಲಾದ ನಾಲ್ವರು ಒಂದೇ ಶರೀರದಲ್ಲಿದ್ದು ರುದ್ರದೇವರನ್ನು ಕುರಿತು ತಪಸ್ಸು ಮಾಡಿದರು. ಅದೇ ವಿಪ್ರಕನ್ನಿಕೆಯ ದೇಹದಲ್ಲಿರುವ, ವ್ರತದಲ್ಲಿ ಆಸಕ್ತಳಾದ ಭಾರತೀದೇವಿಯು ಪಾರ್ವತಿ ಮೊದಲಾದವರು

ನೆರವೇರಿಸಿದ ರುದ್ರಸೇವಾರೂಪ ಕರ್ಮಕ್ಕೂ ತಾನು ಮಾಡಿದ ಕರ್ಮಕ್ಕೂ ಐಕ್ಯ ಸಂಪಾದನೆಗಾಗಿ ಅಥವಾ ಒಂದೇ ಶರೀರದಲ್ಲಿದ್ದು ಮಾಡಿದ ನಮಸ್ಕಾರ, ಸಕೃದ್ಭೋಜನಾದಿಗಳಿಗೆ ಫಲೈಕ್ಯದಿಂದ ಐಕ್ಯವುಂಟಾಗುವುದಕ್ಕಾಗಿ ತಾನೂ ಸಹ ರುದ್ರದೇವರ ಅಂತರ್ಗತನಾಗಿರುವ ರುದ್ರನಾಮಕನಾದ ಶ್ರೀಹರಿಯನ್ನು ತಪಸ್ಸಿನಿಂದ ಸಂತೋಷಗೊಳಿಸಿದಳು.

ಇಲ್ಲಿ ಸ್ವಲ್ಪ ವಿಚಾರಾಂಶವಿದೆ. ಒಂದೇ ಶರೀರದಲ್ಲಿ ಮಾಡಿದ ಕರ್ಮಕ್ಕೆ ಫಲವು ಒಂದೇ ಆದುದರಿಂದ ಐಕ್ಯವು ಬರುವುದೆಂದು ಭಾವ. ಇಲ್ಲದಿದ್ದರೆ ಭಾರತೀದೇವಿಯು ಶಿವಾಂತರ್ಗತ ವಿಷ್ಣುವನ್ನು ಪೂಜಿಸಿದ್ದರಿಂದಲೂ, ಉಮಾ-ಶಚೀ-ಶ್ಯಾಮಲಾ ಮತ್ತು ಉಷಾದೇವಿಯರು ಶಿವಪೂಜಾರೂಪ ಕರ್ಮ ಮಾಡಿದ್ದರಿಂದಲೂ ಕರ್ಮೈಕ್ಯವು ಕೂಡಲಾರದು. "ಸ್ವಭರ್ತೃಸಂಯೋಗವರಂ" ಎಂಬ ವಾಕ್ಯವಿರುವುದರಿಂದ ಉಮಾದಿ ನಾಲ್ವರಿಗೂ ಪತಿಸಂಯೋಗವೇ ಫಲ. ಭೀಮಸೇನನೂ ದ್ರೌಪದಿಯೊಡನೆ ರಮಿಸುವನೇ ವಿನಃ ಶಚ್ಯಾದಿ ಪರನಾರಿಯೊಡನೆ ರಮಿಸುವುದಿಲ್ಲ. ಮೊದಲು ಬಂದ 'ಪರಸಂಪರ್ಕ' ರೂಪಶಾಪವು ರುದ್ರದೇವರು ಉಮಾದಿ ನಾಲ್ವರಿಗೆ ಕೊಟ್ಟ 'ಅವರ ಪತಿಗಳ ಸಂಯೋಗವೆಂಬ' ವರದಿಂದ ತಿರಸ್ಕೃತ-ವಾದುದರಿಂದ ಅನ್ಯ ಪುರುಷ ಸಂಬಂಧಕ್ಕೆ ಕಾರಣವಿಲ್ಲ.

"ಇತೀರಿತೇ ಪೃಥಯಾಹೂತವಾಯುಃ ಸಂಸ್ಪರ್ಶಮಾತ್ರಾದಭವದ್ಬಲದ್ವಯೀ" ಎಂಬ ಪ್ರಮಾಣದಂತೆ ಕುಂತಿಯು ಮಂತ್ರದ್ವಾರಾ ವಾಯುದೇವರನ್ನು ಆಹ್ವಾನಿಸಿದಾಗ ಪುತ್ರೋತ್ಪತ್ತಿಗಾಗಿ ಬಂದ ವಾಯುದೇವರು ಕುಂತಿಯ ಉದರವನ್ನು ಸ್ಪರ್ಶಿಸಿದರೇ ಹೊರತು ಅವಳೊಡನೆ ರಮಿಸಲಿಲ್ಲ. ಅಂದ ಮೇಲೆ ಇಂತು ದೋಷರಹಿತರಾದ ವಾಯುದೇವರ ಅವತಾರನಾದ (ವಾಯುರೂಪೀ) ಭೀಮಸೇನನು ನಿರ್ನಿಮಿತ್ತವಾಗಿ ತನ್ನ ಸೊಸೆಯಂದಿರಾದ ಶಚ್ಯಾದಿಗಳನ್ನು ಕೆಡಿಸ-ಲಾರನೆಂಬುದು ಸಿದ್ಧವಾಗಿದೆ. ಆದ್ದರಿಂದ ಪಾರ್ವತಿಗೂ ಬ್ರಹ್ಮಶಾಪದಿಂದ ಪತಿಸಂಯೋಗವೂ ಇಲ್ಲ. ಇತರರ ಪತಿ ಸಂಯೋಗವೂ ಇಲ್ಲ. ಅಂತೂ ಪಾರ್ವತಿಯ ಪಾತಿವ್ರತಕ್ಕೆ ಧಕ್ಕೆಯಿಲ್ಲ. ಭೀಮಸೇನನು ದ್ರೌಪದಿಯೊಡನೆ ತಾನೊಬ್ಬನೇ ರಮಿಸುವಾಗ ಶಚೀ ಮೊದಲಾದ ಇತರ ದೇವಿಯರನ್ನು ದ್ರೌಪದಿಯ ದೇಹದಲ್ಲಿ ನಿದ್ರಿತರನ್ನಾಗಿ ಮಾಡಿಯೇ ದ್ರೌಪದಿಯ ದೇಹದಲ್ಲಿರುವ ಭಾರತಿಯೊಡನೆ ಮಾತ್ರ ಕ್ರೀಡಿಸುವನೆಂದು ತಿಳಿಯಬೇಕು. ಅಂತೆಯೇ ಸ್ವತಃ ನಿರ್ಣಯಕಾರರಾದ ಶ್ರೀಮದಾಚಾರ್ಯರು "ಅನ್ಯಾ ದೇವೀಃ ಸ್ವಾಪಯಿತ್ವಾ ಶರೀರೇ" ಎಂದು ಹೇಳಿದ್ದಾರೆ.

ಪ್ರಕೃತ ವಿಪ್ರಕನ್ಯೆಗೆ ರುದ್ರಶರೀರದಲ್ಲಿರುವ ಸರ್ವಸಮರ್ಥನಾದ ಶ್ರೀಹರಿಯು "ಎಲ್ಲ ಜನ್ಮಗಳಲ್ಲಿಯೂ ನಿನ್ನ ಗಂಡನೊಡನೆ ನನ್ನನ್ನು (ವಿಷ್ಣುವನ್ನು) ಹೆಚ್ಚಾಗಿ ಸೇವಿಸಿ ಸಂತೋಷಪಡಿಸುತ್ತಿಯೇ" ಎಂದು ವರಪ್ರದಾನ ಮಾಡಿದನು. ವಿಪ್ರಕನ್ಯೆಯ ದೇಹದಲ್ಲಿರುವ ಉಮಾ-ಶಚೀ-ಶ್ಯಾಮಲಾ-ಉಷಾದೇವಿಯರಿಗೆ ರುದ್ರದೇವರೇ "ಮಾನವಜನ್ಮಗಳ ಮಧ್ಯದಲ್ಲಿ ಯಾವುದಾದರೊಂದು ಜನ್ಮದಲ್ಲಿ ನಿಮ್ಮ ನಿಮ್ಮ ಪತಿಗಳ ಸಂಯೋಗವಾಗಲಿ" ಎಂದು ವರವನ್ನು ಕೊಟ್ಟನು. ಶ್ರೀಹರಿಯ ಮತ್ತು ರುದ್ರದೇವರ ವರವು ದೊರಕಿದ ಮೇಲೆ ಶ್ರೀಭಾರತಿದೇವಿ ಮತ್ತು ಉಮಾದಿ ನಾಲ್ವರು ಹೀಗೆ ಆ ಎಲ್ಲಾ ದೇವಿಯರು ವಿಪ್ರಕನ್ಯೆಯ ಶರೀರವನ್ನು ತ್ಯಜಿಸಿ ದೇಹೈಕ್ಯದಿಂದ ಚೆನ್ನಾಗಿ ಏಕಕಾರ್ಯಮತಿಕರಾಗಿ ದ್ವಿತೀಯಜನ್ಮದಲ್ಲಿ ನಳನಂದಿನಿಯಾದರು. ಅನಂತರ ಅವರು ತಮ್ಮ ಇಚ್ಛೆಯಿಂದಲೇ ನಳನಂದಿನಿಯ ಶರೀರವನ್ನು ಬಿಟ್ಟು ಮೂರನೆಯ ಜನ್ಮದಲ್ಲಿ ಇಂದ್ರಸೇನೆಯಾಗಿ ಜನಿಸಿದರು.[15]

ಮುದ್ಗಲನೆಂಬುವ ಮುನಿಯು ತಪೋನಿರತನಾಗಿದ್ದನು. ಅವನು ಒಂದು ಸಲ ಬ್ರಹ್ಮದೇವರು ತಾವು ಸೃಜಿಸಿದ ಪುತ್ರಿಯನ್ನೇ ಕಾಮಿಸಿದರು ಎಂಬ ಕಥೆಯನ್ನು ಕೇಳಿ ಬ್ರಹ್ಮದೇವರನ್ನು ಅಪಹಾಸ್ಯ ಮಾಡಿದನು. ಆಗ ಬ್ರಹ್ಮದೇವರು "ನೀನು

15. ನಳನಂದಿನಿಯೇ ಇಂದ್ರಸೇನೆಯಲ್ಲ. ಹಾಗೆ ತಿಳಿಯಬಾರದು. (ಶ್ರೀವಾದಿರಾಜರ ವ್ಯಾಖ್ಯಾನದಂತೆ.)

ಕಾಮಪರವಶನಾಗದ ಮತ್ತು ಜಿತೇಂದ್ರಿಯನೆಂಬ ಅಹಂಕಾರದಿಂದ ಮೆರೆಯುತ್ತಿರುವೆ. ನೀನು "ಭಾರತ್ಯಾದ್ಯಾಃ ಪಂಚದೇವೀಃ ಗಚ್ಛಮಾನಿಮ್ನ ಭೂತಯೇ" ಭಾರತೀದೇವಿ ಮೊದಲಾದ ಐವರು ದೇವಿಯರ ಸಂಪರ್ಕ ಹೊಂದಿ ನರಕಾದ್ಯನರ್ಥಗಳಿಗೆ ಭಾಗಿಯಾಗು" ಎಂದು ಶಾಪ ನೀಡಿದರು. ಅದರಿಂದ ನೊಂದು ಭೀತನಾಗಿ ಮುದ್ಗಲಮುನಿಯು ತಪಸ್ಸಿನಿಂದ ಬ್ರಹ್ಮದೇವರನ್ನು ಮುದಗೊಳಿಸಿ ವಿಶಾಪವನ್ನು ಬೇಡಿದನು. ಆಗ ಕಮಲಸಂಭವರಾದ ಚತುರಾನನರು ಕರುಣೆಯಿಂದ ತಾವು ಕೊಟ್ಟ ಶಾಪಕ್ಕೆ ವಿಶಾಪವಿತ್ತು ಅನುಗ್ರಹ ಮಾಡಿದರು. "ನ ತ್ವಂ ಯಾಸ್ಯಸಿ ತಾ ದೇವೀಃ ಮಾರುತ ಸ್ಸಚ್ಛರೀರಗಃ । ಯಾಸ್ಯಸಿ (ತಿ)ತ್ವಂ ತದಾ(ಸದಾ) ಮೂರ್ಛಾಂ ಗತೋಽನ್ಯೈವ ವಿಬುಧ್ಯಸೇ॥" ಎಲವೋ ಮುದ್ಗಲ ಮುನಿಯೆ! ನೀನು ಆ ದೇವಿಯರನ್ನು ಸಂಪರ್ಕಿಸುವುದಿಲ್ಲ. ನಿನ್ನ ಶರೀರದಲ್ಲಿರುವ ವಾಯುದೇವರು ಅವರನ್ನು ಹೊಂದುವರು. ನೀನು ಆಗ ಮೂರ್ಛಿತನಾಗಿರುತ್ತೀಯೆ. ಮೂರ್ಛಾವಸ್ಥೆಯಲ್ಲಿರುವ ನೀನು ಅದನ್ನು ತಿಳಿಯುವುದೇ ಇಲ್ಲ. ಆದ ಕಾರಣ ನಿನಗೆ ಪಾಪವು ಅಂದರೆ ದೇವಾಂಗನೆಯರ ಸಂಬಂಧದಿಂದುಂಟಾಗುವ ದೋಷವು ಬರುವುದಿಲ್ಲ" ಎಂದು ಮೊದಲು ತಾವಿತ್ತ ಶಾಪವನ್ನು ಪರಿಹರಿಸಿ ಅನುಗ್ರಹಿಸಿದರು.

ಹೀಗೆ ಬ್ರಹ್ಮದೇವರು ಹೇಳುತ್ತಿರುವಂತೆಯೇ ವಾಯುದೇವರು ಆ ಮುದ್ಗಲ ಮುನಿಯನ್ನು ಪ್ರವೇಶಿಸಿದರು. ಅದಾದ ನಂತರ ಮುದ್ಗಲ ಋಷಿಯು ಇಂದ್ರಸೇನೆಯನ್ನು ವಿವಾಹವಾಗಿ ಗಾರ್ಹಸ್ಥ್ಯಧರ್ಮವನ್ನು ಸ್ವೀಕರಿಸಿದರು. ಸಮಸ್ತ ಜಗತ್ತಿಗೆ ಪ್ರಭುಗಳಾದ ವಾಯುದೇವರು ಮುದ್ಗಲಮುನಿಯನ್ನು ಮೂರ್ಛೆಗೊಳಿಸಿ ಆ ಇಂದ್ರಸೇನೆಯೊಡನೆ ಬಹುಕಾಲರಮಿಸುತ್ತಿದ್ದು ಅನಂತರ ಆ ಮುದ್ಗಲ ಮುನಿಯನ್ನು ಮೂರ್ಛೆಯಿಂದೆಚ್ಚರಿಸಿ ಹೊರಟುಹೋದರು. ಮುದ್ಗಲಮುನಿಗಳು ತಪೋ-ನಿರತರಾದರು. ತರುವಾಯ ಇಂದ್ರಸೇನೆಯು ಪತಿವಿಯೋಗದಿಂದ ದುಃಖಿತಳಾಗಿ ತಪಸ್ಸು ಮಾಡಿದಳು. ಆಗ ಇಂದ್ರ-ಸೇನೆಯಲ್ಲಿದ್ದ ಭಾರತೀದೇವಿಯೂ ರುದ್ರಾಂತರ್ಗತನಾದ ಶ್ರೀಹರಿಯನ್ನು ಕುರಿತು ಹಿಂದಿನಂತೆಯೇ ಕರ್ಮ್ಯಕ್ಕೆ ಪ್ರಾಪ್ತಿಗಾಗಿ ತಪಸ್ಸು ಮಾಡಿ ಶ್ರೀಹರಿಯನ್ನು ಸಂತೋಷಪಡಿಸಿದಳು. ಇಂದ್ರಸೇನೆಯ ಶರೀರದಲ್ಲಿದ್ದ ಮಿಕ್ಕ ಪಾರ್ವತೀ ಮೊದಲಾದ. ನಾಲ್ವರೂ ಅದೇ ಸಮಯದಲ್ಲಿ ಮತ್ತೆ ಶ್ರೀರುದ್ರದೇವರನ್ನು ಕುರಿತು ತಪಸ್ಸು ಮಾಡಿದರು. ಅದರಿಂದ ಸಂತುಷ್ಟರಾದ ರುದ್ರದೇವರೂ ಅವರ ಅಂತರ್ಗತನಾದ ಶ್ರೀಹರಿಯೂ ಪ್ರತ್ಯಕ್ಷರಾಗುತ್ತಿರಲು ಇಂದ್ರಸೇನೆಯ ಶರೀರದಲ್ಲಿದ್ದ ಭಾರತಿಯು ಶ್ರೀಹರಿಯನ್ನೂ ಪಾರ್ವತೀ ಮುಂತಾದವರು ರುದ್ರ ದೇವರನ್ನೂ, ಬೇರೆ ಬೇರೆಯಾಗಿ ಐದು ಜನರೂ "ಪತಿಂದೇಹಿ, ಪತಿಂದೇಹಿ" ಎಂದು ತಮ್ಮ ತಮ್ಮ ಪತಿಗಳ ಪ್ರಾಪ್ತಿಗಾಗಿ ಪ್ರಾರ್ಥಿಸಿದರು. ಹೀಗೆ ಆ ಐವರೂ ಪ್ರತ್ಯೇಕ ಪ್ರತ್ಯೇಕವಾಗಿ ಐದು ಬಾರಿ ಪ್ರಾರ್ಥಿಸಿದ್ದರಿಂದ ರುದ್ರದೇವರು ನಾಲ್ಕು ಸಲ "ತಥಾಸ್ತು" ಎಂದು ವರ ನೀಡಿದರು. ಶ್ರೀಹರಿಯು ಒಮ್ಮೆ "ನಿನ್ನ ಪತಿಯನ್ನು ಹೊಂದು" ಎಂದು ವರವಿತ್ತನು.

ರುದ್ರದೇವರು ವರಕೊಟ್ಟಕೂಡಲೇ ಪಾರ್ವತೀ ಮೊದಲಾದ ನಾಲ್ವರು ದೇವಿಯರು ಧರ್ಮ, ವಾಯು, ಅಶ್ವಿನೀ ದೇವತೆಗಳು ಮತ್ತು ಪತ್ನಿಸಂಯೋಗವಿಲ್ಲದ ಶಂಕರ ಹೀಗೆ ಐವರ ಅವತಾರಕ್ಕಾಗಿ ಒಂದೇ ದೇಹದಲ್ಲಿರುವುದರಿಂದ ಜೀವ ಚೇತನಗಳಿಗೆ ಪರಸ್ಪರ ಸಂಬಂಧವಿದ್ದ ಕಾರಣ ಹಾಲು-ನೀರಿನಂತೆ ನಾವು ಐದು ದೇವಿಯರು ಆಗಿದ್ದೇವೆಯೆಂದು ತಿಳಿಯಲಿಲ್ಲ. ಆ ದೇವಿಯರು ಭಾರತಿಗೆ 'ನಿನ್ನ ಪತಿಯನ್ನು ಹೊಂದುವಿ' ಎಂದು ಒಂದು ಸಲ ಶ್ರೀಹರಿಯು ನೀಡಿದ ವರ, ಮತ್ತೆ ರುದ್ರದೇವರಿಂದ ನಾಲ್ಕು ಸಲ "ನಿನ್ನ ಪತಿಯನ್ನು ಪಡೆಯುವೆ" ಎಂದು ಲಭ್ಯವಾದ ವರ ಹೀಗೆ ಐದು ಬಾರಿ ಪತಿಪ್ರಾಪ್ತಿರೂಪ ವರವನ್ನು ಕೇಳಿ ತಮ್ಮ ತಮ್ಮ ಪತಿಗಳಲ್ಲದೆ ಬೇರೆ ಬೇರೆಯಾಗಿ ನಾಲ್ಕು ನಾಲ್ಕು ಜನರು ತಮಗೆ ಪತಿಗಳಾಗುವರೆಂದೂ ಒಟ್ಟಿನಲ್ಲಿ ತಮತಮಗೆ ಐದು ಜನ ಪತಿಗಳನ್ನು ಹೊಂದಬೇಕಾಗಿದೆಯೆಂದು ತಿಳಿದರು.

ಇಂದ್ರಸೇನೆಯ ದೇಹದಲ್ಲಿ ನಾನೊಬ್ಬಳೇ ಇದ್ದೇನೆ ಎಂದು ಬೇರೆ ಬೇರೆಯಾಗಿ ತಿಳಿದುಕೊಂಡಿರುವ; ಆ ಒಂದೇ ಶರೀರದಲ್ಲಿರುವ ಸರ್ವಜ್ಞಳಾದ ಭಾರತಿದೇವಿಯನ್ನು ಬಿಟ್ಟು ಉಳಿದ ಪಾರ್ವತೀ, ಶಚೀ, ಶ್ಯಾಮಲಾ ಮತ್ತು ಉಷಾದೇವಿಯರು ತಮಗೆ ಐದು ಜನ ಪತಿಗಳಾಗುವರೆಂದು ರೋದಿಸಿದರು. ಅದೇ ಸಮಯಕ್ಕೆ ಅಲ್ಲಿಗೆ ಬಂದ ದೇವೇಂದ್ರನು ಆ ಸ್ತ್ರೀ (ಇಂದ್ರಸೇನೆ)ಯನ್ನು ಏಕೆ ಅಳುತ್ತಿರುವೆ? ಎಂದು ಕೇಳಿದನು. ಆಗ ಆ ಸ್ತ್ರೀಯು, ಬ್ರಹ್ಮಚಾರಿಯ ರೂಪದಲ್ಲಿ ಬಂದು ವರವಿತ್ತ ರುದ್ರದೇವರನ್ನು ತೋರಿಸಿ, ಪತಿ ಪ್ರಾಪ್ತಿಗಾಗಿ ವರ ಕೇಳಿದಾಗ 'ಇವನು ನನಗೆ ಐದು ಜನ ಪತಿಗಳಾಗುವ ವರವನ್ನು ಕೊಟ್ಟಿದ್ದಾನೆ. ಅದಕ್ಕಾಗಿ ಅಳುತ್ತಿರುವೆ' ಎಂದಳು. ಆಗ ದೇವೇಂದ್ರನು ಆ ವಟುರೂಪಿ ರುದ್ರನನ್ನು ನೋಡಿ ಅವನು ರುದ್ರನೆಂದು ತಿಳಿಯದೆ 'ಎಲವೋ ದುರ್ಮತಿಯೇ, ತ್ರಿಭುವನವನ್ನು ನಾನು ಪಾಲಿಸುತ್ತಿರುವಾಗ ನಿರಪರಾಧಿನಿಯಾದ ಈ ಸ್ತ್ರೀಯನ್ನೇಕೆ ಶಪಿಸಿದೆ?'' ಎಂದು ಗರ್ಜಿಸಿದನು. ಆಗ ರುದ್ರದೇವನು 'ಎಲವೋ ಇಂದ್ರ! ನೀನು ಸ್ವರ್ಗದಿಂದ ಕೆಳಗೆ ಬೀಳು, ಅಂದರೆ ಮಾನವನಾಗಿ ಜನಿಸು. ನೀನೇ ಇವಳಿಗೆ ಪತಿಯಾಗುವೆ. ಈಕೆಯ ಶರೀರದಲ್ಲಿರುವ (ದ್ರೌಪದಿಯ ಶರೀರದಲ್ಲಿರುವ) ಶಚೀದೇವಿಯು ನಿನ್ನನ್ನೇ ಪರಿಗ್ರಹಿಸುವಳು. ನನ್ನನ್ನು ತಿರಸ್ಕರಿಸಿದ್ದರಿಂದ ನಿನ್ನಂತಹ ದೇವತೆಗಳು ಈ ಪರ್ವತದ ಕೆಳಗೆ ಬಿದ್ದಿರುವರು ನೋಡು'' ಎಂದನು. ಇಂದ್ರನಾಗ ಆ ಪರ್ವತವನ್ನು ಕಿತ್ತಿದನು. ಅಲ್ಲಿ ಪೂರ್ವ ಮನ್ವಂತರದಲ್ಲಿ ಇಂದ್ರರಾದ ವಾಯುದೇವರು. ಯಮ, ಅಶ್ವಿನೀ ದೇವತೆಗಳಿಬ್ಬರು, ಹೀಗೆ ನಾಲ್ಕು ಜನರು ತಾವು ಮನುಷ್ಯರಾಗಿ ಅವತರಿಸಬೇಕೆಂದು ಏಕಾಂತವಾಗಿ ವಿಚಾರ ಮಾಡುತ್ತಿರುವುದನ್ನು ದೇವೇಂದ್ರನು ನೋಡಿದನು. ಆನಂತರ ದೇವೇಂದ್ರನು ಉತ್ತಮರಿಂದ ಪ್ರಾಪ್ಯನೂ, ವರಪ್ರದನೂ ಆದ ಶ್ರೀಹರಿ ಪರಮಾತ್ಮನನ್ನು ಕುರಿತು ತಪಸ್ಸು ಮಾಡಿ ಹರಿಯನ್ನು ಹರ್ಷಗೊಳಿಸಿ ಅವನ ಅನುಗ್ರಹದಿಂದ ನರ-ಹರಿ-ವಾಯು-ಶೇಷಾಂಶದಿಂದ[16] ಧರೆಯಲ್ಲಿ ಅವತರಿಸಿದನು. ವಟುರೂಪೀ ರುದ್ರನು ಇಂದ್ರನಿಗೆ ಹೇಳಿದ ಮಾತು ಕೇಳಿ ಬ್ರಹ್ಮದೇವರು ''ರುದ್ರದೇವ! ನನ್ನನ್ನು ತಿರಸ್ಕರಿಸಿದ್ದರಿಂದ ದೇವತೆಗಳು ಕೆಳಗೆ ಬಿದ್ದಿದ್ದಾರೆ ನೋಡು'' ಎಂದು ವಾಯುದೇವರೇ ಮೊದಲಾದವರ ಬಗೆಗೆ ನೀನು ಇಂದ್ರನಿಗೆ ಸುಳ್ಳು ಹೇಳಿದ್ದೀಯೆ. ಆದ್ದರಿಂದ ನೀನು ಶೀಘ್ರವಾಗಿ ಮಾನವನಾಗಿ ಜನಿಸಿ, ಮಾನವಶರೀರಿಯಾದ ಅರ್ಜುನ ಸ್ವರೂಪನಾದ ದೇವೇಂದ್ರನಿಂದಲೇ ಪರಾಜಯವನ್ನು ಹೊಂದುತ್ತೀಯೆ. ಯಾವ ದೇವೇಂದ್ರನಿಗೆ ನೀನು ಸುಳ್ಳು ಹೇಳಿದೆಯೋ ಆ ಕಾರಣದಿಂದ ಆ ದೇವೇಂದ್ರನಿಂದಲೇ ಅಂದರೆ ಅರ್ಜುನನಿಂದಲೇ ಪರಾಜಿತನಾಗುತ್ತೀಯೆ'' ಎಂದು ಶಾಪ ನೀಡಿದರು.

ಮತ್ತೆ ಬ್ರಹ್ಮದೇವರು ಮುಂದುವರೆದು ''ನೀನು ನನ್ನಿಂದ ಶಾಪ ಪಡೆದ ಪಾರ್ವತೀ, ಶಚೀ, ಶ್ಯಾಮಲಾ, ಉಷೆಯರಿಗೆ ನನ್ನ ಶಾಪವನ್ನು ತಿರಸ್ಕರಿಸಿ ಪತಿಸಂಯೋಗವಾಗುವಂತೆ ವರವನ್ನೂ ಕೊಟ್ಟಿರುತ್ತೀಯೆ. ಆದುದರಿಂದ ನಿನ್ನ ವಿಷಯದಲ್ಲಿ ಅದು ಸುಳ್ಳಾಗುವುದು. ಮನುಷ್ಯರೂಪದಿಂದ ಜನಿಸಿದ ನೀನು ನಿನ್ನ ಪತ್ನಿಯನ್ನು ಹೊಂದುವುದಿಲ್ಲ. ಪಾರ್ವತಿಗೆ ಮನುಷ್ಯತ್ವವು ನಿವೃತ್ತಿಯಾದ ಮೇಲೆ ಭಾರತೀದೇವಿಯ ಶರೀರದಿಂದ ಹೊರಬಿದ್ದ ಪಾರ್ವತಿಯನ್ನು ಕೈಲಾಸದಲ್ಲಿ ರುದ್ರನಾದ ನೀನು ಪಡೆಯುತ್ತೀಯೆ. ಆದ ಕಾರಣ ಎಲೈ ಶಂಕರನೇ, ನೀನು ಕೊಟ್ಟ ವರವು ಅಂದರೆ ''ಶೀಘ್ರವಾಗಿ ನಿನ್ನ ಪತಿಯನ್ನು ಪಡೆಯುವೆ'' ಎಂಬ ವರವು ನಿನ್ನ ವಿಷಯದಲ್ಲಿ ವ್ಯರ್ಥವಾಗುವುದು. ಐದು ದೇವಿಯರ ಸ್ವರೂಪಭೂತಳಾದ ಈ ಇಂದ್ರ-ಸೇನೆಗೆ ನೀನು ಮಿಥ್ಯಾವರವನ್ನು ನೀಡಿದ್ದೀಯೆ. ಇವಳು ದ್ರೌಪದಿಯೆಂದು ಪ್ರಸಿದ್ಧಳಾಗುವಳು. ವಾಯು, ಧರ್ಮ, ಅಶ್ವಿನೀದೇವತೆಗಳ ವಿಚಾರವಾಗಿ ಇಂದ್ರನಿಗೆ ನೀನು ಸುಳ್ಳು ಹೇಳಿದ್ದೀಯೆ. ಅವರು ಮಾನವರಾಗಿ ಜನಿಸುವರು. ಅವರು ಜನಿಸುವುದು, ನಿನ್ನ ಶಾಪದಿಂದಲ್ಲ, ಮಾತಿನಿಂದಲ್ಲ; ಅವರು ದೇವತಾ ಕಾರ್ಯಕ್ಕಾಗಿ ಅವತರಿಸುವರು ಮತ್ತು ದ್ರೌಪದಿ-

16. ನರಾಂಶೇನ-ನರಸ್ಯ ಹರಿವಾಯುಶೇಷಾಂಶೇನ'' ನರಾಂಶದಿಂದ ಅಂದರೆ ನರನ ಹರಿವಾಯು ಶೇಷಾಂಶದಿಂದ ಎಂದು 'ಜನಾರ್ದನ ಭಟ್ಟೀಯ' ವ್ಯಾಖ್ಯಾನದಲ್ಲಿ ಹೇಳಿದ್ದಾರೆ.

ಯಲ್ಲಿರುವ ಭಾರತೀ ಮುಂತಾದವರಿಗೆ ಅವರು ಪತಿಗಳಾಗುವರು. ಮನುಷ್ಯನಾಗಿ ಜನಿಸುವ ನೀನು ಮಾತ್ರ ಬಹುಕಾಲ ಜೀವಿಸಿದ್ದರೂ ಪಾರ್ವತಿಯನ್ನು ಪಡೆಯುವುದಿಲ್ಲ! ಪಾರ್ವತಿಯು ಭಾರತಿಯಿಂದ ಕೂಡಿಕೊಂಡು ಅಭ್ಯಂಜನ, ಭೋಜನಾದಿ ವ್ಯವಹಾರಗಳನ್ನು ಮಾಡುತ್ತಾಳೆಯೇ ಹೊರತು ಇತರ ದೇವಿಯರಂತೆ ರಮಿಸುವುದಿಲ್ಲ'' ಎಂದು ಹೇಳಿ ಬ್ರಹ್ಮದೇವರು ಹೊರಟುಹೋದರು. ಅನಂತರ ರುದ್ರದೇವರು ಮನುಷ್ಯ ಯೋನಿಯಲ್ಲಿ ಜನಿಸಿ ಅಶ್ವತ್ಥಾಮನೆಂಬ ಹೆಸರಿನಿಂದ ಪ್ರಖ್ಯಾತರಾದರು.

ಹೀಗೆ ಇಂದ್ರಸೇನೆಯು ಭಾರತ್ಯಾದಿ ಐದು ಜನ ದೇವಿಯರಿಂದ ಯುಕ್ತಳಾಗಿ ದ್ರುಪದರಾಜನ ಯಜ್ಞಕುಂಡದಿಂದ ಅವತರಿಸಿದಳು. ಅವಳಿಗೆ ದ್ರೌಪದಿಯೆಂದು ನಾಮಕರಣ ಮಾಡಿದರು. ಇವೆಲ್ಲ ವಿಚಾರಗಳೂ ವೇದ, ಪುರಾಣ, ಭಾರತಾದಿಗಳಲ್ಲಿ ಉಕ್ತವಾಗಿವೆ.

''ದ್ರುಪದೈಷಾ ತತೋ ಜಜ್ಞೆ ಸುತಾ ತೇ ದೇವರೂಪಿಣೀ ! ಪಂಚಾನಾಂ ಸಹಿತಾ ಕೃಷ್ಣಾರೂಪಾ ಪಾರ್ವತ್ಯನಿಂದಿತಾ'' - ಎಲೈ ದ್ರುಪದ ! ಐದು ಜನ ದೇವಿಯರಿಗೆ ಐದುಸಲ ತಮ್ಮ ತಮ್ಮ ಪತಿಪ್ರಾಪ್ತಿರೂಪ ವರದಾನದ ಕಾರಣದಿಂದ ದ್ರೌಪದಿಯಲ್ಲಿ ಐದು ಜನ ದೇವಿಯರಿರುವುದು ಯೋಗ್ಯವಾದ್ದರಿಂದ ದೇವಸ್ವರೂಪವುಳ್ಳ ನಿನ್ನ ಪುತ್ರಿಯು ಕೃಷ್ಣಾ ಸ್ವರೂಪಳಾಗಿದ್ದಾಳೆ. ಭಾರತೀ-ಪಾರ್ವತೀ ಮುಂತಾದ ನಾಲ್ವರು ದೇವಿಯರೂ ಇವಳೊಡನಿದ್ದು ಜನಿಸಿದರು. ಆದ್ದರಿಂದ ಭಾರತೀ ಮುಂತಾದ ನಾಲ್ವರು ದೇವಿಯರಿಗೂ ತಮ್ಮ ತಮ್ಮ ಪತಿಗಳಿಂದಲೇ ಸಂಬಂಧವಿರುವುದರಿಂದ ನಿನ್ನ ಪುತ್ರಿಯು ನಿಂದಿತಳಲ್ಲ. ಐದನೆಯವಳಾದ ಪಾರ್ವತಿಗೆ ಪತಿಸಂಬಂಧವೇ ಇಲ್ಲವಾದ್ದರಿಂದ ಪ್ರಾಜ್ಞಳಾದ ಪಾರ್ವತೀದೇವಿಯೂ ನಿಂದಾರ್ಹಳಾಗುವುದಿಲ್ಲ'' ಮುಂತಾಗಿ ದ್ರುಪದರಾಜನ ಶಂಕಾ ಪರಿಹಾರ ಸಮಯದಲ್ಲಿ ಮೂಲ ಭಾರತದಲ್ಲಿ ಉಕ್ತವಾಗಿರುವ ಅರ್ಥವನ್ನು ವಿವರಿಸುವುದಕ್ಕಾಗಿ ಶ್ರೀಮದಾಚಾರ್ಯರು ಹೀಗೆ ವೇದ-ಪುರಾಣ-ಭಾರತಾದಿಗಳಲ್ಲಿ ಹೇಳಿರುವುದನ್ನೇ ವಿಮರ್ಶಾತ್ಮಕವಾಗಿ ನಿರೂಪಿಸಲೂ, ದ್ರೌಪದಿದೇವಿಗೆ ದೋಷಲೇಶವೂ ಇಲ್ಲವೆಂದು ಸಮರ್ಥಿಸಲಿಕ್ಕೂ ದ್ರೌಪದಿಯ ಪಂಚದೇವೀ ವಿಶಿಷ್ಟತ್ವವನ್ನು ವಿಸ್ತಾರವಾಗಿ ನಿರೂಪಿಸಿದ್ದಾರೆಂದು ತಿಳಿಯಬೇಕು.

ಪಂಚದೇವಿಯರ ಶರೀರವುಳ್ಳ ಇಂದ್ರಸೇನೆಯು ದ್ರೌಪದಿಯಾಗಿ ಅವತರಿಸಿದಳು. ದ್ರೌಪದಿಯಲ್ಲಿರುವ ನಾಲ್ವರು ದೇವಿಯರಲ್ಲಿರುವ ಶ್ಯಾಮಲಾ ದೇವಿಗೆ ದೇವಕೀ ಎಂಬ ಈಗಿನ ಜನ್ಮವು ನಾಲ್ಕನೆಯದು. ಚಿತ್ರಾಂಗದಾ ಎಂಬುದೇ ಶಚೀದೇವಿಯ ನಾಲ್ಕನೆಯ ಜನ್ಮ. ಜರಾಸಂಧ ಕನ್ಯಾರೂಪವು ಉಷಾದೇವಿಯ ನಾಲ್ಕನೆಯ ಜನ್ಮವು. ಪಾರ್ವತೀದೇವಿಗೂ ಇದು ನಾಲ್ಕನೆಯ ಜನ್ಮ. ಅವಳಿಗೆ ಜನ್ಮವಿಲ್ಲವೆಂದರೆ-ಅಶ್ವತ್ಥಾಮನಿಗೆ ಪತ್ನಿವಿಯೋಗರೂಪ ಶಾಪವಿಲ್ಲದೆ ಹೋದಿತು! ಪತ್ನಿ (ಸ್ತ್ರೀ) ಇದ್ದೂ ದೊರಕದಿರುವುದೇ ಸ್ತ್ರೀ(ಪತ್ನಿ) ವಿಯೋಗವು. ಪತಿಯೋಗ ಪ್ರಾಪ್ತಿರೂಪ ಫಲವು ದ್ರೌಪದೀದೇಹದಲ್ಲಿಯೂ. ದೇವಕೀ ಮೊದಲಾದ ಪ್ರತ್ಯೇಕ ಅವತಾರಗಳಲ್ಲಿಯೂ ಆಗುವುದೆಂದು ತಿಳಿಯಬೇಕು.

ದ್ರುಪದಮಹಾರಾಜನಿಗೆ ಪುತ್ರ ಮತ್ತು ಪುತ್ರಿಕೆಯರು ಜನಿಸಿದ್ದರಿಂದ ಪಾಂಚಾಲದೇಶದ ಸಮಸ್ತ ಜನರು ಪರಮಾ-ನಂದತುಂದಿಲರಾದರು. ಧೃಷ್ಟದ್ಯುಮ್ನ ಮತ್ತು ದ್ರೌಪದಿಯರು ಮಾನುಷಾನ್ನವನ್ನು ಉಂಡಿದ್ದರಿಂದಲೂ, ಮನುಷ್ಯರೊಡನೆ ಇದ್ದುದರಿಂದಲೂ, ಮಾನವನಿಗೆ ಮಕ್ಕಳಾಗಿದ್ದುದರಿಂದಲೂ ಅವರಿಗೆ ಸ್ವಲ್ಪ ಮಾನವ ಸ್ವಭಾವವುಂಟಾಯಿತು. ಆದರೆ ಉತ್ಕೃಷ್ಟರಾದ ಧೃಷ್ಟದ್ಯುಮ್ನ ಮತ್ತು ದ್ರೌಪದೀದೇವಿಯರು ಅಯೋನಿಜರಾದ್ದರಿಂದ ಅವರಿಗೆ ಅತ್ಯಂತ ಮಾನುಷಭಾವವು ಉಂಟಾಗಲಿಲ್ಲ.

ದ್ರುಪದರಾಜನ ರಾಣಿಯು, ಧೃಷ್ಟದ್ಯುಮ್ನ-ದ್ರೌಪದಿಯರಿಗೆ ತಾನು ತಾಯಿ ಎಂಬ ಪ್ರೇಮವುಂಟಾಗಿ ಅವರ ನನ್ನ ಮಕ್ಕಳೇ ಆಗಿ ಬೆಳೆಯುವಂತೆ ಅನುಗ್ರಹಿಸಬೇಕೆಂದು ಯಾಜ-ಉಪಯಾಜರನ್ನು ಪ್ರಾರ್ಥಿಸಿದಳು. ಅವರು ಕನಿಕರದಿಂದ

ಅದರಂತೆ ಅನುಗ್ರಹಿಸಿದರು. ಅಂದಿನಿಂದ ಪಾಂಚಾಲರಾಜ ಮಹಿಷಿಯು ಧೃಷ್ಟದ್ಯುಮ್ನ ಮತ್ತು ದ್ರೌಪದಿಯರ ತಾಯಿ-ಯಾದಳು. ಮಕ್ಕಳು ಚೆನ್ನಾಗಿ ಅಭಿವೃದ್ಧಿಸಹತ್ತಿದರು.

ದ್ರುಪದಮಹಾರಾಜನು ತಮ್ಮ ಸಂಹಾರಾರ್ಥವಾಗಿ ಯಜ್ಞವನ್ನಾಚರಿಸಿ ಧೃಷ್ಟದ್ಯುಮ್ನನೆಂಬ ಪುತ್ರನನ್ನು ಪಡೆದಿರುವ ವಿಚಾರ ತಿಳಿದು ದ್ರೋಣಾಚಾರ್ಯರು ಮುಂದೆ ತಾವು ಪರಾಜಿತರಾದರೂ ತಮ್ಮ ಶಿಷ್ಯನಿಂದಲೇ ಪರಾಜಿತರಾದರೆಂಬ ಕೀರ್ತಿ ಪಡೆಯಲಾಶಿಸಿ ಧೃಷ್ಟದ್ಯುಮ್ನನಿಗೆ ಶ್ರೀಪರಶುರಾಮದೇವರಿಂದ ತಾವು ಪಡೆದ ಸಮಸ್ತ ಶಸ್ತ್ರಾಸ್ತ್ರ ವಿದ್ಯೆಗಳನ್ನೂ ಹೇಳಿಕೊಟ್ಟರು. ಶ್ರೀಪರಶುರಾಮದೇವರ ಅಸ್ತ್ರಗಳು ಮೂರು ಲೋಕಗಳಲ್ಲೂ ದೇವತೆಗಳಿಗೂ ದುರ್ಲಭವಾದುದರಿಂದ ಮಹಾಪರಾಕ್ರಮಶಾಲಿಯಾದ ಧೃಷ್ಟದ್ಯುಮ್ನನು ತನಗೆ ಕೀತಿಯುಂಟಾಗಬೇಕೆಂಬ ಆಕಾಂಕ್ಷೆಯಿಂದ ಅನನ್ಯ ಲಭ್ಯವಾದ ಮಹಾಸ್ತ್ರಗಳನ್ನೂ ದ್ರೋಣಾಚಾರ್ಯರಿಂದ ಪಡೆದನು.

ಇತ್ತ ದ್ವಾರಕಾಪುರದಲ್ಲಿರುವ ಶ್ರೀಕೃಷ್ಣಪರಮಾತ್ಮನು ತನ್ನ ಸೋದರತ್ತೆಯ ಪುತ್ರರಾದ ಭೀಮಾರ್ಜುನರು ಪ್ರಬಲನಾದ ಪಾಂಚಾಲಾ ನಗರದ ಮಹಾರಾಜನಾದ ದ್ರುಪದನನ್ನು ಜಯಿಸಿದ ವಿಚಾರ ತಿಳಿದು ಹರ್ಷಭರಿತನಾಗಿ ಪಾಂಡವರಲ್ಲಿ ತನಗಿರುವ ಪ್ರೇಮಾತಿಶಯವನ್ನು ಜಗತ್ತಿನಲ್ಲಿ ಖ್ಯಾತಿಗೊಳಿಸಲು ಹಸ್ತಿನಾಪುರಕ್ಕೆ ಹೋಗಿ ಪಾಂಡವರನ್ನು ಸನ್ಮಾನಿಸಿ, ಅವರ ಅಭ್ಯುದಯದಿಂದ ತನಗೂ ಸಮಸ್ತ ಯಾದವರಿಗೂ ಆಗಿರುವ ಸಂತೋಷವನ್ನು ತಿಳಿಸಿ ಬರಲು ಕೃತವರ್ಮನನ್ನು ಕಳುಹಿಸಿಕೊಟ್ಟನು. ಹಸ್ತಿನಾವತಿಗೆ ಬಂದ ಕೃತವರ್ಮನಿಂದ ಶ್ರೀಕೃಷ್ಣನ ಮತ್ತು ಸಮಸ್ತ ಯಾದವರ ಕ್ಷೇಮ ಸಮಾಚಾರವನ್ನೂ ತಮ್ಮ ವಿಜಯದಿಂದ ಶ್ರೀಕೃಷ್ಣನಿಗಾದ ಸಂತೋಷವನ್ನೂ ಕೇಳಿ ಪಾಂಡವರು ಹರ್ಷಿಸಿದರು. ಕೃತವರ್ಮನು ಪಾಂಡವರನ್ನು ಚೆನ್ನಾಗಿ ಸನ್ಮಾನಿಸಿದನು. ಶ್ರೀಕೃಷ್ಣನ ಮೇಲಿನ ಭಕ್ತಿಯಿಂದ ಪಾಂಡವರು ಕೃತವರ್ಮನನ್ನು ಆದರದಿಂದ ಸತ್ಕರಿಸಿ ಗೌರವಿಸಿದನು. ಶೂರಸೇನನ ಮಗಳು ಕುಂತೀದೇವಿ. ಅವಳ ಮಕ್ಕಳು ಪಾಂಡವರು. ಶೂರಸೇನನ ತಮ್ಮನ ಮಗಳ ಪುತ್ರನು ಕೃತವರ್ಮ. ಆದ್ದರಿಂದ ಪಾಂಡವರು-ಕೃತವರ್ಮ ಸಹೋದರರು. ಕೃತವರ್ಮನು ತನ್ನ ಸಹೋದರರಾದ ಪಾಂಡವರಿಂದ ಸತ್ಕೃತನಾಗಿ ಶ್ರೀಕೃಷ್ಣನ ಸನ್ನಿಧಿಗೆ ಬಂದು ಸೇರಿದನು.

ಆ ಲಾಗಾಯಿತು ಜಗತ್ತಿನಲ್ಲಿರುವ ದೇವತೆಗಳ ಪಕ್ಷದವರಾದ ಸಕಲ ರಾಜರೂ ಭೀಮಾರ್ಜುನರ ಅತಿಶಯಪರಾಕ್ರಮ ಮತ್ತು ಅವರಲ್ಲಿ ಶ್ರೀಕೃಷ್ಣನಿಗಿರುವ ವಿಶೇಷ ಪ್ರೇಮಾದಿಗಳನ್ನರಿತು ಜರಾಸಂಧನ ಪಕ್ಷವನ್ನು ತ್ಯಜಿಸಿ ಭೀಮಾರ್ಜುನರ ಪಕ್ಷ ವಹಿಸಿದರು. ಜರಾಸಂಧನು ಹಿಂದೆ ದೇವತಾ ಪಕ್ಷಪಾತಿಗಳಾದ ರಾಜರೆಲ್ಲರನ್ನೂ ಜಯಿಸಿ ಬಿಟ್ಟಿದ್ದನು. ಅವನಿಂದ ಪರಾ-ಜಿತರಾದ ದೇವತಾ ಪಕ್ಷಕ್ಕೆ ಸೇರಿದ ರಾಜರೆಲ್ಲರೂ ಕಾರ್ಯಸಿದ್ಧಿಗಾಗಿ ಮನಸ್ಸಿಲ್ಲದಿದ್ದರೂ ಜರಾಸಂಧನ ಪಕ್ಷವನ್ನು ಸೇರಿದ್ದರು. ಆ ತರುವಾಯ ಸಕಲರೂ ಶ್ರೀಕೃಷ್ಣನಿಂದ ಪರಾಜಿತರಾಗಿ ಸಂತೋಷದಿಂದ ಶ್ರೀಕೃಷ್ಣನ ಪಕ್ಷವನ್ನು ಸೇರಿದ್ದರು. ಪೂರ್ವದಲ್ಲಿ ಜರಾಸಂಧನ ಪ್ರತಾಪದಿಂದ ಸೋತು ದುಃಖದಿಂದ ನಿರ್ವಾಹವಿಲ್ಲದೇ ಅವನ ವಶರಾಗಿದ್ದರೇ ವಿನಃ ನಿಜವಾದ ಸ್ನೇಹದಿಂದಲ್ಲ.

ಈಗ ಭೀಮಾರ್ಜುನರ ಪ್ರಬಲಪರಾಕ್ರಮವನ್ನು ಕೇಳಿ, ಶ್ರೀಕೃಷ್ಣನ ಅನನ್ಯ ಸಾಮಾನ್ಯ ಪರಾಕ್ರಮವನ್ನು ಬಲ್ಲ ದೇವತೆಗಳ ಪಕ್ಷಪಾತಿಗಳಾದ ಆ ಎಲ್ಲ ರಾಜರೂ ಭೀಮಾರ್ಜುನರಲ್ಲಿ ಸ್ನೇಹಯುಕ್ತರಾಗಿ ತಮ್ಮ ಜನ್ಮ ಜನ್ಮಾಂತರ ಸ್ವಭಾವಕ್ಕನುಸಾರವಾಗಿ ಶ್ರೀಕೃಷ್ಣ ಮತ್ತು ಭೀಮಾರ್ಜುನರ ಪಕ್ಷವನ್ನು ಸೇರಿದರು. ದೈತ್ಯರು ತಮ್ಮ ಸ್ವಭಾವಕ್ಕನುಸಾರವಾಗಿ ಸಂಸ್ಕಾರಕ್ಕೆ ತಕ್ಕಂತೆ ಜರಾಸಂಧನ ಪಕ್ಷವನ್ನು ಬಿಡದೇ ಅವನನ್ನೇ ಅನುಸರಿಸಿಕೊಂಡಿದ್ದರು.

ಕುರುಕುಲ ಚಕ್ರವರ್ತಿಯಾದ ಧೃತರಾಷ್ಟ್ರನು ಭೀಮಾರ್ಜುನರ ಪರಾಕ್ರಮಗಳನ್ನು ಬಹುವಿಧವಾಗಿ ಕಂಡು, ಸ್ವಾಭಾವಿಕವಾಗಿ ದೇವತಾಂಶನಾಗಿದ್ದುದರಿಂದ ಧರ್ಮರಾಜನು ಜ್ಯೇಷ್ಠನಾದ್ದರಿಂದ ಅವನಲ್ಲಿ ಸುಪ್ರೀತನಾಗಿ ಧರ್ಮರಾಜನನ್ನು

ಯೌವರಾಜ್ಯದಲ್ಲಿ ಮಂಡಿಸಿ ಪಟ್ಟಾಭಿಷೇಕ ಮಾಡಿ ಆಶೀರ್ವದಿಸಿದನು. ಇದರಿಂದ ಸಮಸ್ತ ಪ್ರಜೆಗಳೂ ಆನಂದಿಸಿದರು. ಕುರು ಸಾಮ್ರಾಜ್ಯಕ್ಕೆ ಅಣ್ಣನು ಯುವರಾಜನಾದ್ದರಿಂದ ಹೃಷ್ಟರಾದ ಭೀಮಾರ್ಜುನರು ಸರ್ವ ದಿಕ್ಕುಗಳಲ್ಲಿರುವ ಸಕಲ ರಾಜರನ್ನೂ ಜಯಿಸಿ ಅವರೆಲ್ಲರನ್ನೂ ಧೃತರಾಷ್ಟ್ರನಿಗೆ ಕಪ್ಪ ಕಾಣಿಕೆಗಳನ್ನು ನೀಡುವ ಸಾಮಂತರನ್ನಾಗಿ ಮಾಡಿ, ಅವರಿಂದ ಅನರ್ಘ್ಯ ಕಾಣಿಕೆಗಳನ್ನು ಪಡೆದು ತಂದು ಅದನ್ನು ಧೃತರಾಷ್ಟ್ರನಿಗೆ ಸಮರ್ಪಿಸಿದರು.

ಹೀಗೆ ಅತಿಮಾನುಷಕರ್ಮಗಳಿಂದಲೂ, ಅನಿತರಸಾಧಾರಣ ಭುಜಬಲ ಪರಾಕ್ರಮಗಳಿಂದ ಭೂಪತಿಗಳನ್ನು ಜಯಿಸಿ ಕೀರ್ತಿ ಗಳಿಸಿದ ಭೀಮಾರ್ಜುನಾದಿ ಪಾಂಡವರಲ್ಲಿ ಧೃತರಾಷ್ಟ್ರ ಮಹಾರಾಜ, ಕುರುಕುಲಪಿತಾಮಹರಾದ ಭೀಷ್ಮಾಚಾರ್ಯರು, ಆಚಾರ್ಯ ದ್ರೋಣಾಚಾರ್ಯರೇ ಮೊದಲಾದವರು, ಸುಪ್ರೀತರಾಗಿ ಹೆಚ್ಚಾಗಿ ಪ್ರೇಮಾದರ ಮಾಡುತ್ತಿದ್ದರು.

*ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದ 'ಶ್ರೀಭೀಮಾರ್ಜುನವಿಜಯವೆಂಬ' ಹದಿನೆಂಟನೆಯ ಅಧ್ಯಾಯದ ಕಥಾಸಂಗ್ರಹವು ಮುಗಿದುದು.*

॥ ಶ್ರೀಕೃಷ್ಣಾರ್ಪಣಮಸ್ತು ॥



## ಏಕೋನವಿಂಶಾಧ್ಯಾಯಭಾವಸಂಗ್ರಹ

**ಯತ್ಕಾರುಣ್ಯಬಲೇನ ಪಾಂಡುತನಯಾ ನಿಸ್ತೀರ್ಯ ನಾನಾಪದೋ**
**ಭಿಕ್ಷಾನ್ನಾಶಿನ ಆಗಮಾಭ್ಯಸನಿನೋ ಹತ್ವಾ ಬಕಂ ದ್ರೌಪದೀಮ್ ।**
**ಉದ್ವಾಹ್ಯಾಖಿಲಭೂಪತೀನಪಿ ರಣೇ ಜಿತ್ವಾ ಗತಾಃ ಸ್ವಾಂ ಪುರೀ-**
**ಮಿಂದ್ರಪ್ರಸ್ಥಪುರೇಽವಸನ್ ಕೃತಧರಾರಕ್ಷಾಃ ಸ ನೋಽವ್ಯಾದ್ ಹರಿಃ ॥ 19 ॥**

***ಅನ್ವಯಾರ್ಥ :-*** ಪಾಂಡುತನಯಾಃ = ಪಾಂಡುರಾಜನ ಪುತ್ರರಾದ ಯುಧಿಷ್ಠಿರಾದಿಗಳು, **ಯತ್ಕಾರುಣ್ಯಬಲೇನ - ಯತ್** = ಯಾವ ಶ್ರೀಕೃಷ್ಣಪರಮಾತ್ಮನ, **ಕಾರುಣ್ಯಬಲೇನ** = ಕರುಣೆಯ ಬಲದಿಂದ, **ನಾನಾಪದಃ** = ವಿಷಪ್ರಯೋಗ, ಹಾವಿನಿಂದ ಕಚ್ಚಿಸುವುದು, ಅರಗಿನ ಅರಮನೆ ಮುಂತಾದ ವಿವಿಧ ಆಪತ್ತುಗಳನ್ನು, **ನಿಸ್ತೀರ್ಯ** = ದಾಟಿ, **ಭಿಕ್ಷಾನ್ನಾಶಿನಃ** = ಭಿಕ್ಷೆಯಿಂದ ಗಳಿಸಿದ ಅನ್ನವನ್ನುಣ್ಣುತ್ತಾ, **ಆಗಮಾಭ್ಯಸನಿನಃ** = ವೇದಾಧ್ಯಯನನಿರತರಾಗಿ, **ಬಕಂ** = ಬಕಾಸುರನನ್ನು, **ಹತ್ವಾ** = ಸಂಹರಿಸಿ, **ದ್ರೌಪದೀಂ** = ದ್ರುಪದರಾಜಕುಮಾರಿಯನ್ನು, **ಉದ್ವಾಹ್ಯ** = ಲಗ್ನವಾಗಿ, **ರಣೇ** = ಆಗಸಂಭವಿಸಿದ ಕದನದಲ್ಲಿ, **ಅಖಿಲ** = ಸಮಸ್ತರಾದ, **ಭೂಪತೀನ್** = ರಾಜರುಗಳನ್ನೂ, **ಜಿತ್ವಾ** = ಜಯಿಸಿ, **ಸ್ವಾಂ** = ತಮ್ಮದಾದ, **ಪುರೀಂ** = ಹಸ್ತಿನಾಪುರವನ್ನು, **ಗತಾಃ** = ಹೊಂದಿದವರಾಗಿ (ಸೇರಿ), **ಇಂದ್ರಪ್ರಸ್ಥಪುರೇ** = ಇಂದ್ರಪ್ರಸ್ಥವೆಂಬ ನಗರದಲ್ಲಿ, **ಕೃತಧರಾರಕ್ಷಾಃ** = ಭೂಮಿಯನ್ನು ಪಾಲಿಸುತ್ತಾ (ರಾಜ್ಯವನ್ನಾಳುತ್ತಾ), **ಅವಸನ್** = ವಾಸಮಾಡಿದರೋ, **ಸಃ** = ಅಂತು ಅನುಗ್ರಹಿಸಿದ, **ಹರಿಃ** = ಶ್ರೀಕೃಷ್ಣನು, **ನಃ** = ನಮ್ಮನ್ನು, **ಅವ್ಯಾತ್** = ಸಂರಕ್ಷಣಮಾಡಲಿ.

**ತಾತ್ಪರ್ಯ :-** ಪಾಂಡವರು ಶ್ರೀಕೃಷ್ಣಪರಮಾತ್ಮನ ಕಾರುಣ್ಯಾತಿಶಯದಿಂದ ವಿಷಾನ್ನ, ಸರ್ಪದಂಶನ, ಅರಗಿನ ಮನೆಯ ಅಪಾಯ ಹೀಗೆ ಅನೇಕ ವಿಧವಾದ ಆಪತ್ತುಗಳಿಂದ ಪಾರಾದರು ಮತ್ತು ಏಕಚಕ್ರನಗರದಲ್ಲಿ ಬ್ರಾಹ್ಮಣರ ವೇಷದಿಂದ ವಾಸಮಾಡುತ್ತಾ ಭಿಕ್ಷಾಟನೆಯಿಂದ ಜೀವಿಸುತ್ತಾ ವೇದಾಧ್ಯಯನನಿರತರಾಗಿದ್ದರು. ಮತ್ತು ಭೀಮಸೇನನು ಬಕಾಸುರನನ್ನು ಸಂಹರಿಸಿ ಪುರಜನರಿಗೊದಗಿದ್ದ ಸಂಕಟವನ್ನು ಪರಿಹರಿಸಿದನು. ಮುಂದೆ ಶ್ರೀವೇದವ್ಯಾಸದೇವರ ಆಣತಿಯಂತೆ ಪಾಂಚಾಲ- ನಗರಿಗೆ ಪ್ರಯಾಣ ಬೆಳೆಸಿ ಅಲ್ಲಿ ದ್ರುಪದರಾಜನು ಏರ್ಪಡಿಸಿದ್ದ ದ್ರೌಪದೀ-ಸ್ವಯಂವರದಲ್ಲಿ ಭಾಗವಹಿಸಿದರು. ಆಗ ಅರ್ಜುನನು ಮತ್ಸ್ಯಯಂತ್ರವನ್ನು ಭೇದಿಸಿದನು. ಆ ತರುವಾಯ ಕುಂತೀದೇವಿ ಹಾಗೂ ವೇದವ್ಯಾಸರ ಅಪ್ಪಣೆಯಂತೆ ಐದು ಜನ ಪಾಂಡವರೂ ದ್ರೌಪದಿಯನ್ನು ವಿವಾಹವಾದರು. ಆ ಕಾಲದಲ್ಲಿ ತಮ್ಮ ಮೇಲೆ ಯುದ್ಧಕ್ಕೆ ಬಂದ ಸಕಲ ರಾಜರನ್ನೂ ಜಯಿಸಿ ಹಸ್ತಿನಾಪುರಕ್ಕೆ ಬಂದರು. ದೊಡ್ಡ ತಂದೆಯಾದ ಧೃತರಾಷ್ಟ್ರನ ಆದೇಶದಂತೆ ಪಾಂಡವರು ಇಂದ್ರಪ್ರಸ್ಥಪುರಕ್ಕೆ ತೆರಳಿ ಅಲ್ಲಿ ಶ್ರೀಕೃಷ್ಣನ ಸಹಾಯದಿಂದ ಮಯನು ನಿರ್ಮಿಸಿದ ಸುಂದರ ರಾಜಧಾನಿಯಲ್ಲಿ ರಾಜ್ಯಭಾರ ಮಾಡುತ್ತಾ ಸುಖದಿಂದ ವಾಸಮಾಡಿದರು. ಇಂತು ಪಾಂಡವರನ್ನು ಅನುಗ್ರಹಿಸಿದ ಶ್ರೀಕೃಷ್ಣನು ನಮ್ಮನ್ನು ಕಾಪಾಡಲಿ ಎಂದು ಭಾವ.

## ಹತ್ತೊಂಭತ್ತನೆಯ ಅಧ್ಯಾಯದ ಕಥಾಸಂಗ್ರಹ

ನಿರ್ದುಷ್ಟೋತ್ತಮಗುಣ ವಿಶಿಷ್ಟರಾದ ಪಾಂಡವರು (ಮತ್ತು ಶ್ರೀಕೃಷ್ಣನು) ಸತ್ಕರ್ಮಾಚರಣರತರಾಗಿ ಕಾಲಯಾಪನ ಮಾಡುತ್ತಿದ್ದರು. ಶ್ರೀಹರಿಯು ಪಾಂಡವರ ಸದ್ಗುಣ-ಸತ್ಕರ್ಮಗಳು ಅಭಿವೃದ್ಧಿಸುವಂತೆ ಅನುಗ್ರಹಿಸಿದನು. ಇದಕ್ಕೆ ವಿಪರೀತವಾಗಿ ಕೌರವರು ನಾಸ್ತಿಕ್ಯ ನೀತಿಶಾಸ್ತ್ರವನ್ನೇ ಕಲಿತರು. ದೇವತೆಗಳು-ಗುರುಗಳನ್ನು ತಿರಸ್ಕರಿಸುವುದು. ದೇವರಿಲ್ಲ.

ಗುರುಗಳಿಲ್ಲವೆಂದು ಪ್ರತಿಪಾದಿಸುವುದಕ್ಕೆ ನಾಸ್ತಿಕ್ಯ ನೀತಿಶಾಸ್ತ್ರವೆಂದು ಹೆಸರು. ದುರ್ಯೋಧನಾದಿಗಳು ಅವನ್ನು ಸ್ವೀಕರಿಸಿದರು. ಕಳಿಂಗನೆಂಬ ಬ್ರಾಹ್ಮಣನು, ಅವರ ಗುರುವು. ಕುತ್ಸಿತನಾದ ಅಸುರನೊಬ್ಬನು ಆಗ ಕಳಿಂಗನೆಂಬ ಹೆಸರಿನಿಂದ ಜನಿಸಿದ್ದನು. ಅವನು ದೈತ್ಯಗುರು ಶುಕ್ರಾಚಾರ್ಯರ ಶಿಷ್ಯನು. ಅವನೀಗ ಶಕುನಿಗೆ ಗುರುವಾಗಿದ್ದನು. ಅವನು ಶಕುನಿಯ ಪ್ರೇರಣೆಯಂತೆ ಏಕಾಂತದಲ್ಲಿ ದುರ್ಯೋಧನಾದಿಗಳಿಗೆ ನಾಸ್ತಿಕ್ಯಶಾಸ್ತ್ರದ ಎಲ್ಲ ನೀತಿಗಳನ್ನೂ ಉಪದೇಶಿಸಿದನು. ಸರ್ವವಿಧದಿಂದ ಕಪಟ-ಪ್ರತಿಪಾದನೆಯೇ ಆ ಶಾಸ್ತ್ರದ ಮುಖ್ಯ ತಾತ್ಪರ್ಯ. "ದೇವತೆಗಳು ಪೂಜ್ಯರಲ್ಲ. ಅವರನ್ನು ಆರಾಧಿಸಬಾರದು. ಒಂದು ವೇಳೆ ಪೂಜಿಸುವುದಾದರೆ ಅದು ಸ್ವಾರ್ಥ ಸಾಧನೆಗೆ ಮಾತ್ರವಾಗಿರಬೇಕು. ಸ್ನಾನ, ಸಂಧ್ಯಾ, ಯಜ್ಞ, ದಾನ, ದೇವಪೂಜಾದಿ ಧರ್ಮಕಾರ್ಯಗಳನ್ನು ಜಗತ್ತನ್ನು ವಂಚಿಸಲು ಮಾತ್ರ ಮಾಡಬೇಕು. ಹೆಚ್ಚು ಕಪಟಿಗಳೇ ಶ್ರೇಷ್ಠರು. ಅಸುಭಿಃ ಪ್ರಾಣಭಿಃ ರಮಂತಿ ಭಕ್ಷಯಂತಿ ಇತ್ಯಸುರಾಃ-ಅಂದರೆ ಪ್ರಾಣಿಗಳನ್ನು ಕೊಂದು ತಿನ್ನುವುದರಲ್ಲಿ ಹೆಚ್ಚು ರಮಿಸುವವರು ರಾಕ್ಷಸರು. ಅವರೇ ಅಸುರರು. ಇಂತು ಕಾರ್ಯನಿರತರಾಗಿ ಅತ್ಯಂತ ಕಪಟಿಗಳಾದವರೇ ಅಸುರರು ಮತ್ತು ರಾಕ್ಷಸರ ಗುಂಪಿನಲ್ಲಿ ಶ್ರೇಷ್ಠರು" ಇದೇ ಮುಂತಾದವು ಆ ನೀತಿಯ ಸಾರ.

ದುರ್ಯೋಧನಾದಿಗಳು ಅಸುರಸ್ವಭಾವದವರಾದುದರಿಂದ ತಮ್ಮ ಸ್ವಭಾವಕ್ಕೆ ತಕ್ಕಂತೆ ಆ ನಾಸ್ತಿಕ್ಯನೀತಿಗಳು ಅವರಿಗೆ ಮನೋಹರವಾಗಿದ್ದುದರಿಂದ ಅದನ್ನು ಕಲಿತರು. ಕಳಿಂಗನು ತನ್ನ ಬುದ್ಧಿಬಲ, ಪ್ರತಿಭೆ ಮತ್ತು ಉಪದೇಶಗಳಿಂದ ದುರ್ಯೋಧನ ಮುಂತಾದವರಲ್ಲಿ ಅದನ್ನು ಹೆಚ್ಚು ಅಭಿವೃದ್ಧಿಗೊಳಿಸಿದನು. ಇದರ ಫಲವಾಗಿಯೇ ಅವರಿಗೆ ಪಾಂಡವರಲ್ಲಿ ಮತ್ಸರವು ಮೇರೆ ಮೀರುವಂತಾಯಿತು. ದುರ್ಬುದ್ಧಿಯ ಸುಯೋಧನನು ಪರಮಧಾರ್ಮಿಕರಾದ ಪಾಂಡವರ ಸಂಪತ್ತು, ವಿಜಯ, ಅಭ್ಯುದಯಗಳನ್ನು ಕಂಡು ಪ್ರತಿದಿನವೂ ಕರುಬುತ್ತಿದ್ದನು. ಒಂದು ದಿನ ದುಃಖತಪ್ತನಾದ ದುರ್ಯೋಧನನು ಶಕುನಿಯೊಡಗೂಡಿ ಧೃತರಾಷ್ಟ್ರನ ಬಳಿಗೆ ಬಂದು ಏಕಾಂತದಲ್ಲಿ ತನ್ನ ಸಂಕಟವನ್ನು ಹೇಳಿಕೊಂಡನು.

"ತಂದೆಯೇ, ಕುರುಕುಲದ ಹಿರಿಯನಾದ ನಿನ್ನ ಔರಸಪುತ್ರರು ನಾವು. ಈ ರಾಜ್ಯಕ್ಕೆ ನಿಜವಾದ ಅಧಿಕಾರಿಗಳು ನಾವೇ! ಹೀಗಿದ್ದರೂ ನೀನು ನಮ್ಮನ್ನು ಬಿಟ್ಟು ಕನಿಷ್ಠನಾದ ಪಾಂಡುಪತ್ನಿಯಲ್ಲಿ ಪರಪುರುಷರಿಂದ ಜನಿಸಿದ ಧರ್ಮ-ರಾಜಾದಿಗಳನ್ನೇ ಬಹುವಾಗಿ ಗೌರವಿಸುತ್ತಿರುವೆ! ಮತ್ತು ಧರ್ಮರಾಜನಿಗೆ ಯುವರಾಜ ಪದವಿಯನ್ನು ನೀಡಿದ್ದೀಯೆ. ಇದು ಯಾರೋ ಮಾಡಿದ ಕಾರ್ಯವಲ್ಲ. ಸ್ವತಃ ನೀನೇ ಹೀಗೆ ಮಾಡಿದ್ದೀಯೆ. ಆ ಧರ್ಮರಾಜನು ನಿನ್ನ ಪ್ರಸಾದದಿಂದ, ಅನುಜರ ಪರಾಕ್ರಮದಿಂದ ಒಂದು ದಿನ ಸಂಪೂರ್ಣ ಸಾಮ್ರಾಜ್ಯವನ್ನೇ ಕಬಳಿಸಬಹುದು. ಹಾಗಾದಲ್ಲಿ ನಾವು ನಮ್ಮ ಸಂತತಿಯವರೊಡನೆ ಆ ಕುಂತೀಪುತ್ರರ ದಾಸರಾಗಬೇಕಾಗುವುದು. ನಮ್ಮ ತರುವಾಯವೂ ನಮ್ಮ ಸಂತತಿಯಲ್ಲಿ ಬಂದವರೆಲ್ಲಾ ಅವರ ವಂಶೀಕರಿಗೆ ದಾಸರಾಗಿಯೇ ಜೀವಿಸಬೇಕಾಗುತ್ತದೆ. ಅಪ್ಪಾ! ಇದು ನಿನಗೆ ಸಮ್ಮತವೇ? ಈ ಸಾಮ್ರಾಜ್ಯವು ನನಗೆ ದೊರಕಲಿಲ್ಲವೆಂದು ನಾನು ದುಃಖಿಸುತ್ತಿಲ್ಲ! ಆದರೆ, ಜನಕ! ಲೋಕದಲ್ಲಿ ಪರಿಶುದ್ಧ ಕೀರ್ತಿಯುಕ್ತನಾಗಿ ಕಂಗೊಳಿಸುತ್ತಿರುವ ನಿನ್ನ ಧವಳಕೀರ್ತಿಗೆ ನಮ್ಮಿಂದಾಗಿ ಕಳಂಕ ಬರುವುದಲ್ಲಾ ಎಂದು ದುಃಖಿಸುತ್ತಿದ್ದೇನೆ. ನಿನಗೆ ಒದಗುವ ಅಪಯಶಸ್ಸನ್ನು ನಿನ್ನ ಮಕ್ಕಳಾದ ನಾವೆಂತು ಸಹಿಸಬಲ್ಲೆವು? ನಿನ್ನ ಕೀರ್ತಿಗೆ ಕಳಂಕ ತಂದು ನಾವು ಜೀವಿಸಲಿಚ್ಛಿಸುವುದಿಲ್ಲ. ಆದ್ದರಿಂದ ತಂದೆಯೇ! ಸಾಯಲು ನಮಗೆ ಅನುಮತಿ ನೀಡು".

ಮಗನ ಮಾತು ಕೇಳಿ ಮಹಾರಾಜಾ ಧೃತರಾಷ್ಟ್ರನು "ಕುಮಾರ! ನಿನ್ನ ಮನಸ್ಸು ಮತ್ತು ವರ್ತನೆಯು ಶ್ರೇಯಸ್ಕರವಲ್ಲ. ನೀನಿಂತು ಹೇಳಿದ್ದು ಆಶ್ಚರ್ಯಕರವಾಗಿದೆ. ಕೇಳು ದುರ್ಯೋಧನ, ಪಾಂಡವರು ಸ್ವಸಾಮರ್ಥ್ಯದಿಂದ ವರ್ಧಿಸುತ್ತಿದ್ದಾರೆ. ಅವರ ಪರಾಕ್ರಮವೇ ಅವರಿಗೀ ಉತ್ಕರ್ಷವನ್ನು ತಂದುಕೊಟ್ಟಿದೆ! ಇಂಥ ಪಾಂಡುನಂದನರನ್ನು ಅದಾರು ತಾನೆ ಪ್ರೀತಿಸುವುದಿಲ್ಲ? ಎಲ್ಲರೂ ಅವರ ಗುಣದಿಂದ ಆಕೃಷ್ಟರಾಗಿ ಪ್ರೀತಿಸುವರು. ಕೆಟ್ಟ ಹೃದಯದವರು ಮಾತ್ರ ಪ್ರೀತಿಸ-

ದಿರಬಹುದು! ಪಾಂಡವರು ತಮ್ಮ ಬಾಹುಬಲದಿಂದ ಸಂಪಾದಿಸಿದ ಸಮಸ್ತರಾಜರ ಸಂಪತ್ತನ್ನೂ ನನಗೇ ಅರ್ಪಿಸಿದ್ದಾರೆ. ಅವರು ನಿಮ್ಮ ವಿರೋಧಿಗಳಲ್ಲ. ವಂಶದ ಶ್ರೇಯಸ್ಸಿಗಾಗಿ ಸಮಾಧಾನ ತಂದುಕೊಂಡು ಶಾಂತನಾಗು. ದುರ್ಯೋಧನ! ಬಲವದ್ವಿರೋಧವು ನಮಗೆ ಕ್ಷೇಮಕರವಲ್ಲ'' ಎಂದು ಹೇಳಿದನು.

ತಂದೆಯ ಮಾತನ್ನಾಲಿಸಿ ಸುಯೋಧನನು ಶಕುನಿಯ ಇಂಗಿತದಂತೆ ವಂಚಿಸುವ ವಚನಗಳಿಂದ ಮತ್ತೆ ಹೇಳಹತ್ತಿದನು- ''ಅಪ್ಪಾ, ಪಾಂಡವರು ಇಲ್ಲೇ ಇರಬೇಕೆಂದು ನಿನ್ನ ಇಚ್ಛೆಯಾದರೆ ನಮ್ಮನ್ನು ಬೇರೆಲ್ಲಿಗಾದರೂ ಕಳುಹಿಸಿಬಿಡು. ಅಥವಾ ಹಸ್ತಿನಾವತಿಯನ್ನು ತ್ಯಜಿಸಿ ನಾವೆಲ್ಲರೂ ದೇಹತ್ಯಾಗ ಮಾಡಿ ಪರಲೋಕವಾಸಿಗಳಾದ ಮೇಲೆ ಆ ಪಾಂಡವರೊಡನೆ ಸಂತೋಷದಿಂದ ಜೀವಿಸು!''

ದುರ್ಯೋಧನನ ಕಪಟ ವಚನಗಳನ್ನಾಲಿಸಿ ಧೃತರಾಷ್ಟ್ರನು ಕಂಗೆಟ್ಟನು. ಮತ್ತು ಪುತ್ರಸ್ನೇಹಪಾಶಬದ್ಧನಾದನು. ಮಗನ ಮಾತಿನ ಮೋಡಿಗೆ ಮರುಳಾಗಿ ಅವರ ವಶನಾದನು. ಅಂತೆಯೇ ಸುತನ ಮಾತಿಗೆ ಸಮ್ಮತಿಸಿದರೂ ಅದನ್ನು ಕಾರ್ಯರೂಪಕ್ಕೆ ತರಲು ಇರುವ ತೊಂದರೆಯನ್ನು ಅರುಹುತ್ತಾ ''ಕುಮಾರ! ಪಾಂಡವರು ಅತಿಬಲಶಾಲಿಗಳಾಗಿದ್ದಾರೆ. ಅವರನ್ನು ಇಲ್ಲಿಂದ ಹೊರಗಟ್ಟುವ ಬಗೆಯೆಂತು? ಅದಕ್ಕೆ ನಾವು ಸಮರ್ಥರಾಗಿಲ್ಲವಾದ್ದರಿಂದ ಅದು ನನಗೆ ಅಸಾಧ್ಯವೆನಿಸಿದೆ. ಇದಕ್ಕೇನು ಮಾಡುವುದು?'' ಎಂದನು.

ಧೃತರಾಷ್ಟ್ರನು ಹೀಗೆ ಹೇಳಿದೊಡನೆಯೇ ತಂದೆಯು ತನಗೊಶನಾಗಿರುವುದರಿಂದ ಇನ್ನು ಕಾರ್ಯವು ಸುಲಭವಾಯಿತೆಂದಾನಂದಿಸಿ ಶಕುನಿಯತ್ತ ದೃಷ್ಟಿಬೀರಿ, ಅವನ ಅಭಿಪ್ರಾಯದಂತೆ ತಂದೆಗೆ ಹೀಗೆ ಹೇಳಿದನು ''ಅಪ್ಪಾ, ಪಾಂಡವರು ಇಲ್ಲಿಗೆ ಬಂದಲಾಗಾಯಿತು ಹದಿಮೂರು ವರ್ಷಗಳಿಂದಲೂ ಅವರನ್ನು ಹೊರಗಟ್ಟಲು ಒಂದು ಉಪಾಯವನ್ನು ಯೋಜಿಸಿದ್ದೇನೆ. ಕೇಳು, ದ್ರೋಣಪುತ್ರನಾದ ಅಶ್ವತ್ಥಾಮನಿಗೆ ಸಮಾನರಾದ ಬಲಶಾಲಿಗಳಾರೂ ಇಲ್ಲ. ನಾನು ಅನೇಕ ಉಪಾಯಗಳಿಂದ ಕೃಪಾಚಾರ್ಯ-ಸಹಿತನಾದ ಅಶ್ವತ್ಥಾಮನನ್ನು ವಶಪಡಿಸಿಕೊಂಡಿದ್ದೇನೆ. ದ್ರೋಣಾಚಾರ್ಯರು ಮಗನ ಮೇಲಿನ ಮಮತೆಯಿಂದ ನಮಗೆ ಅನುಕೂಲರಾಗಿಯೇ ಇದ್ದಾರೆ. ಇದರಂತೆ ಸೈನ್ಯ ಸಮೂಹವನ್ನೂ ಧನ, ಧಾನ್ಯ ವಸ್ತ್ರಾದಿ ದಾನಗಳಿಂದ ಸನ್ಮಾನಿಸುತ್ತಾ ಎಲ್ಲರನ್ನೂ ಸಂಪೂರ್ಣವಾಗಿ ನನ್ನ ವಶಪಡಿಸಿಕೊಂಡಿದ್ದೇನೆ. ಇಷ್ಟೇ ಅಲ್ಲ; ಇಂದ್ರಸಮನಾದ ಅರ್ಜುನನನ್ನೂ ಮೀರಿಸಿದ ಕರ್ಣನು ನಮ್ಮ ಪಕ್ಷದಲ್ಲಿದ್ದಾನೆ. ಅವನು ಖಂಡಿತ ಅರ್ಜುನನನ್ನೂ ಜಯಿಸುತ್ತಾನೆ. ಭೀಷ್ಮಾಚಾರ್ಯರು ನಮ್ಮನ್ನನುಸರಿಸುವುದರಲ್ಲಿ ಸಂದೇಹವಿಲ್ಲ. ನನಗಿರುವ ಒಂದೇ ಭಯವೆಂದರೆ-ಭೀಮನದು! ಅವನನ್ನು ಮಂತ್ರಬಲದಿಂದ ಗೆಲ್ಲುತ್ತೇನೆ. ಉತ್ತಮವಾದ 130 ಸಂಖ್ಯಾಕವಾದ ದೇವತೆಗಳಿಗೂ ದುರ್ಲಭವಾದ ಮಂತ್ರಗಳನ್ನು ನಾನು ದೂರ್ವಾಸ ಮುನಿಗಳಿಂದ ಉಪದೇಶ ಪಡೆದಿದ್ದೇನೆ. ಆ ಮಂತ್ರಗಳನ್ನು ಬೇರೆ ವಿಧವಾಗಿ ಉಪಯೋಗಿಸಿದರೆ ಭೀಮನನ್ನು ಜಯಿಸಲಾಗುವುದಿಲ್ಲ. ಆದ್ದರಿಂದ ವೀರ್ಯವತ್ತಾದುದರಿಂದ ಜಯಪ್ರದವಾದ ಜಲಸ್ತಂಭ, ಅಗ್ನಿಸ್ತಂಭ, ಮೃತಸಂಜೀವಿನೀ, ವೃಷ್ಟಿಪ್ರದಾದಿ ಸಕಲ ವಾಂಛಿತಪ್ರದವಾದ ಮಂತ್ರಶಕ್ತಿಯಿಂದ ಭೀಮಸೇನನನ್ನು ನಾನು ಸುಲಭವಾಗಿ ಜಯಿಸುತ್ತೇನೆ. ಆದ್ದರಿಂದ ನೀನು ಚಿಂತಿಸುವಕಾರಣವಿಲ್ಲ. ಇನ್ನು ನಿನಗೆ ತಮ್ಮನ ಮಕ್ಕಳೆಂಬ ಅತಿಪ್ರೀತಿಯಿದ್ದರೆ ಅವರಿಗೆ ವಾರಣಾವತವನ್ನು ಕೊಡು. ಅಲ್ಲಿ ಅವರು ರಾಜ್ಯಭಾರ ಮಾಡಲಿ. ನಿನ್ನ ಪ್ರೀತಿಗಾಗಿಯೇ ಹಸ್ತಿನಾಪುರವು ನನಗಿರಲಿ! ನಿನ್ನ ಪುತ್ರನಾದ ನಾನು ಇಲ್ಲಿ ರಾಜ್ಯಭಾರಮಾಡುವುದರಿಂದ ನಿನಗೆ ಕೀರ್ತಿಯುಂಟಾಗುವುದು. ಅನ್ಯರಿಗೆ ಜನಿಸಿದ ಪಾಂಡವರು ನಾಶವಾಗುತ್ತಾರೆ. ಅವರು ಬಲವಂತರಾದರೆ ನಿನಗೆ ವಿರೋಧವನ್ನೂ ಮಾಡಬಹುದು. ತಮ್ಮ ಸ್ವಾರ್ಥಕ್ಕಾಗಿಯೇ ಅವರು ನಿನಗೆ ಅನುಕೂಲರಾಗಿ ವರ್ತಿಸುವರು. ಇನ್ನುಳಿದವನು ವಿದುರನೊಬ್ಬ. ಪಾಂಡವರ ಅಭ್ಯುದಯವನ್ನೇ ಬಯಸುವ ಅವನು ನನಗೆ ಶತ್ರುವಾಗಿದ್ದಾನೆ. ಇವನ ಮಾತು ಕೇಳಿಯೇ ಪ್ರಜರು ನನ್ನನ್ನು ದ್ವೇಷಿಸುವರು. ಪಾಂಡವರಲ್ಲಿ ಅವರ ಅಚಲ ಸ್ನೇಹವುಳ್ಳವರಾಗಿದ್ದಾರೆ.

ಪಾಂಡವರು ದೂರಹೋದಲ್ಲಿ ಆಶ್ರಯರಹಿತರೂ ದುರ್ಬಲರೂ ಆದ ಪೌರಜಾನಪದರು ಸರ್ವವಿಧದಿಂದಲೂ ನನ್ನನ್ನೇ ಆಶ್ರಯಿಸುತ್ತಾರೆ. ಪಾಂಡವರಿಲ್ಲದಿದ್ದರೆ. ಭೀಷ್ಮಾದಿಗಳು ನನಗೆ ವಿರೋಧ ಮಾಡಲಾರರು. ಪಾಂಡವರು ವಾರಣಾವತಕ್ಕೆ ಹೋದರೆ ಕ್ರಮೇಣ ಭೀಷ್ಮಾದಿಗಳಿಗೆ ಅವರಲ್ಲಿನ ಪ್ರೀತಿಯು ನಾಶವಾಗುತ್ತದೆ.

ಅಪ್ಪಾ, ಪಾಂಡವರು ಇಲ್ಲಿಯೇ ಇದ್ದರೆ ನಮಗೂ ಅವರಿಗೂ ವಿರೋಧವು ಪ್ರಬಲಿಸಿ ವಂಶನಾಶಕ್ಕೆ ಕಾರಣವಾಗುತ್ತದೆ. ಆದುದರಿಂದ ಪಾಂಡವರನ್ನು ಉಪಾಯದಿಂದಲೇ ಹಸ್ತಿನಾಪುರದಿಂದ ಕಳಿಸಬೇಕು. ಇದಕ್ಕೂ ನಾನು ಒಂದು ಉಪಾಯ ಮಾಡಿದ್ದೇನೆ. ವಾರಣಾವತದಲ್ಲಿ ಜಯಂತನಾಮಕ ವಿಷ್ಣು ಮತ್ತು ಶಿವಮಂದಿರಗಳಿವೆ. ಜಯಂತನ ಉತ್ಸವವು ಅಲ್ಲಿ ಪ್ರಖ್ಯಾತವಾಗಿದ್ದು ಬಹಳ ವಿಜೃಂಭಣೆಯಿಂದ ಜರಗುತ್ತದೆ. ನೀನು ಅವರಿಗೆ ಉತ್ಸವವನ್ನು ನೋಡಲು ಹೋಗಿಬನ್ನಿ ಎಂದರೆ ವಿಷ್ಣುಭಕ್ತರಾದ ಅವರು ಅವಶ್ಯ ತೆರಳುವರು. ಈಗಾಗಲೇ ನಾನು ನನ್ನವರಾದ ಕೆಲವರನ್ನು ಬಿಟ್ಟು ಅವರಿಗೆ ವಾರಣಾವತದ ಮಹತ್ವ, ಉತ್ಸವ, ಪ್ರೇಕ್ಷಣೀಯ ಸ್ಥಳಗಳು, ಅವುಗಳ ವೈಶಿಷ್ಟ್ಯಾದಿಗಳನ್ನು ಹೇಳಿಸಿ ವಾರಣಾವತವನ್ನು ನೋಡಬೇಕೆಂಬ ಉತ್ಸಾಹವನ್ನುಂಟು ಮಾಡಿಸಿದ್ದೇನೆ. ಪಾಂಡವರು ಅಲ್ಲಿಗೆ ಹೋಗಲು ಉತ್ಸುಕರಾಗಿದ್ದಾರೆ. ತಂದೆಯೇ, ನೀನು ಅವರನ್ನು ಕರೆಸಿ ಉತ್ಸವಕ್ಕೆ ಹೋಗುವಂತೆ ಹೇಳು" ಮುಂತಾಗಿ ತಿಳಿಸಿದನು.

ಪುತ್ರನ ಮಾತಿಗೆ ಒಪ್ಪಿ, ಧೃತರಾಷ್ಟ್ರನು ಪಾಂಡವರನ್ನು ಕರೆಸಿಕೊಂಡು ವಾರಣಾವತಕ್ಕೆ ಉತ್ಸವಕ್ಕೆ ಹೋಗಿಬರುವಂತೆ ಆಜ್ಞಾಪಿಸಿದನು. ಪಾಂಡವರಿಗೆ ಧೃತರಾಷ್ಟ್ರನ ಹಾರ್ದವೇನೆಂಬುದು ಅರಿವಾಯಿತು. ಆದರೂ ದೊಡ್ಡಪ್ಪನ ಮಾತಿಗೆ ಬೆಲೆಕೊಟ್ಟು, ಅವನಲ್ಲಿ ತಮಗಿರುವ ವಿನಯಗೌರವಗಳನ್ನು ಸೂಚಿಸಲೂ ಕುಂತೀದೇವಿಯೊಡನೆ ವಾರಣಾವತಿಗೆ ತೆರಳಲು ನಿಶ್ಚಯಿಸಿದರು. ವಾರಣಾವತಕ್ಕೆ ಹೊರಡುವ ಮೊದಲು ಭೀಮಸೇನನು ಧರ್ಮರಾಜನ ಬಳಿಗೆ ಬಂದು "ಅಣ್ಣಾ, ನಾವು ಇಲ್ಲಿಂದ ವಾರಣಾವತಕ್ಕೆ ಹೋಗುವುದು ಯುಕ್ತವಲ್ಲ. ನಾವಲ್ಲಿಗೆ ಹೋದರೆ ಭಿಕ್ಷಾಟನದಿಂದ ಜೀವಿಸಬೇಕಾಗುವುದು. ಭಿಕ್ಷಾಟನೆಯು ಕ್ಷತ್ರಿಯರಿಗೆ ವಿಹಿತಧರ್ಮವಲ್ಲ. ನಮ್ಮ ಧರ್ಮವನ್ನು ಬಿಡಬಾರದು. ಆದ್ದರಿಂದ ನಾವಿಲ್ಲಿಂದ ಹೋಗುವುದು ಬೇಡ. ಅವರು ಒಂದು ವೇಳೆ ನಮ್ಮನ್ನು ಬಲಾತ್ಕಾರವಾಗಿ ಹೊರಡಿಸಿದಲ್ಲಿ ಇಲ್ಲಿಯೇ ಅವರೊಡನೆ ಹೋರಾಡೋಣ. ದುರ್ಯೋಧನಾದಿಗಳು ನಮ್ಮ ಹಕ್ಕನ್ನು ಕದಿಯಲೆತ್ನಿಸಿರುವುದರಿಂದ ಅವರು ದಸ್ಯುಗಳು. ದಸ್ಯುಗಳನ್ನು ಸಂಹರಿಸುವುದು ಅಧರ್ಮವಲ್ಲ" ಮುಂತಾಗಿ ಹೇಳಿದನು.

ಭೀಮಸೇನನ ಮಾತುಕೇಳಿ ಯುಧಿಷ್ಠಿರನು "ಸಹೋದರ! ನೀನು ಹೇಳುವುದು ಯುಕ್ತವಾಗಿದೆ. ಆದರೆ ಭೀಮ! ಪೂಜ್ಯನಾದ ಧೃತರಾಷ್ಟ್ರನಿಗೆ ವಿರೋಧವಾಗಿ ವರ್ತಿಸಿದಲ್ಲಿ ನಮ್ಮ ಕೀರ್ತಿ ನಷ್ಟವಾಗುವುದು. ಆದ್ದರಿಂದ ನಾವು ವಾರಣಾವತಕ್ಕೆ ಹೋಗೋಣ" ಎಂದು ಹೇಳಿದನು. ಭೀಮನು ಅಗ್ರಜನ ಮಾತಿಗೆ ಗೌರವ ಕೊಟ್ಟು ಅವನೊಡನೆ ವಾರಣಾವತಕ್ಕೆ ಹೊರಟನು.

ಭೀಮಸೇನನು ಅಣ್ಣನಿಗೆ ಸ್ವಧರ್ಮವನ್ನು ತಿಳಿಸಿ ಕೊನೆಗೆ ಅಣ್ಣನನ್ನು ಅನುಸರಿಸಿದ್ದು, ಹೀಗೆ ಎರಡು ಕಾರ್ಯಗಳನ್ನೇಕೆ ಮಾಡಿದನು? ಎಂದರೆ ಸ್ವಧರ್ಮತ್ಯಾಗ, ಅಗ್ರಜವಚನಭಂಗ ಇವೆರಡು ವಿಧವಾಗಿಯೂ ದೋಷ ಅನಿವಾರ್ಯ. ಆದ್ದರಿಂದಲೇ ಮೊದಲು ಸ್ವಧರ್ಮ ನಿರೂಪಣ ಮಾಡಿ, ನಂತರ ಅಣ್ಣನಾಜ್ಞೆಯನ್ನು ಪರಿಪಾಲಿಸುವುದೂ ಧರ್ಮವಾದ್ದರಿಂದ ಅವನ ಆಜ್ಞೆಯಂತೆ ಹೊರಟನೆಂದು ಹೇಳಬೇಕು. ಹಾಗಾದರೆ ಗೃಹತ್ಯಾಗದ ದೋಷವು ಬರುವುದಲ್ಲ! ಎಂದರೆ ಅಣ್ಣನ ಆಜ್ಞಾಪಾಲನವು ಕೀರ್ತಿಪ್ರದವಾದ ಕಾರಣ ಕೀರ್ತ್ಯರ್ಥವಾಗಿ ನಿಜಧರ್ಮವನ್ನು ಬಿಡಬೇಕಾಗಿ ಬಂದಲ್ಲಿ ಅಣ್ಣನ ಅಪ್ಪಣೆಯಂತೆ ಅದನ್ನು ಬಿಡುವುದೇ ಸ್ವಧರ್ಮವೆಂದು ತಿಳಿಯಬೇಕು.

ಭೀಮಸೇನನು ಸ್ವಧರ್ಮವನ್ನೇ ಎತ್ತಿ ಹಿಡಿಯುವವನಾದುದರಿಂದ ಅವನು ಅಣ್ಣನ ವಚನದಿಂದಲೇ ನಿಜಧರ್ಮವನ್ನು ಬಿಡುವಂತಾದಲ್ಲಿ ಉಭಯವಿಧದಿಂದಲೂ ಭೀಮನಿಗೆ ಸ್ವಧರ್ಮಾತಿಕ್ರಮಣದೋಷ, ಅಗ್ರಜವಚನಾತಿಕ್ರಮಣ ದೋಷಗಳು ಬರದಂತಾಗಲೆಂದೇ ಮಹಾಪ್ರಭುವೂ ಸಮರ್ಥನೂ ಆದ ಶ್ರೀಹರಿಯು ಯಮಸುತನಾದ ಧರ್ಮರಾಜನನ್ನು ಜ್ಯೇಷ್ಠನಾಗುವಂತೆ ಮಾಡಿದನೆಂದು ತಿಳಿಯಬೇಕು. ಶ್ರೀಹರಿಯು ಧರ್ಮರಾಜನನ್ನೇ ಅಗ್ರಜನನ್ನಾಗಿ ಮಾಡಲು ಮತ್ತೊಂದು ಕಾರಣವೂ ಇದೆ. ದುರ್ಯೋಧನಾದಿ ಕೌರವರು ಸಜ್ಜನರಾದ ಪಾಂಡವರನ್ನು ಹಸ್ತಿನಾಪುರದಿಂದ ಹೊರದೂಡಿದ್ದರಿಂದ ಸ್ವಧರ್ಮ ಪರಿಪಾಲನೆಗಾಗಿ ಪಾಂಡವರು ದುರ್ಯೋಧನಾದಿಗಳೊಡನೆ ಯುದ್ಧಮಾಡಿ ಅವರನ್ನು ಸಂಹರಿಸಬೇಕಾಗುತ್ತದೆ. ಹೀಗೆ ಮೊದಲೇ, ಅವರ ಪ್ರಥಮಾಪರಾಧಕ್ಕಾಗಿಯೇ ಕೌರವರನ್ನು ಸಂಹರಿಸಿಬಿಟ್ಟರೆ, ಮುಂದವರು ಮಾಡಲಿರುವ ಅನ್ಯಾಯಗಳು – ಪಾಂಡವರ ನಾಶಕ್ಕಾಗಿ ಲಾಕ್ಷಾಗೃಹ ನಿರ್ಮಾಣ, ರಾಜಸಭೆಯಲ್ಲಿ ಕಪಟದ್ಯೂತ, ದ್ರೌಪದಿಯ ಸಿರಿ-ಮುಡಿಯನ್ನು ಹಿಡಿದೆಳೆದು ತಂದು ಮಾನಭಂಗಪ್ರಯತ್ನ, "ಕೃಷ್ಣಸಂಧಾನ" ಕಾಲದಲ್ಲಿ ಸಾಕ್ಷಾತ್ ಶ್ರೀಕೃಷ್ಣನನ್ನೂ ಬಂಧಿಸುವ ಯತ್ನ ಮೊದಲಾದ ವಿಷ್ಣು-ವೈಷ್ಣವರಲ್ಲಿ ಮಾಡಿದ ಮಹಾಪರಾಧಗಳು (ದೋಷಗಳು) ಜಗತ್ತಿನಲ್ಲಿ ಪ್ರಖ್ಯಾತವಾಗುವುದಿಲ್ಲ. ಆದುದರಿಂದಲೇ ಭೀಮನು ಅಗ್ರಜನ ಆಜ್ಞಾನುವರ್ತಿಯಾಗಿರುವಂತೆ ಮಾಡಲು ಶ್ರೀಹರಿಯು ಯುಧಿಷ್ಠಿರನನ್ನು ಜ್ಯೇಷ್ಠಭ್ರಾತೃವಾಗುವಂತೆ ಮಾಡಿದನೆಂದು ತಿಳಿಯಬೇಕು.

ಪಾಂಡವರು ವಾರಣಾವತಿಗೆ ಹೊರಡುವ ಮುನ್ನ ವಿದುರನು ಧರ್ಮನಂದನನಿಗೆ ಗುಪ್ತಭಾಷೆಯಲ್ಲಿ "ವಾರಣಾವತದ ಅರಮನೆಯಲ್ಲಿ ವಿಷ-ಅಗ್ನಿದಾಹದ ಭಯಗಳುಂಟು. ನೀವು ಅದನ್ನರಿತು ಅರಮನೆಯಲ್ಲಿ ಎಚ್ಚರದಿಂದ ವಾಸಮಾಡಿರಿ" ಎಂದು ಹೇಳಿದನು. ಧರ್ಮರಾಜನು "ಹಾಗೆಯೇ ಆಗಲಿ" ಎಂದು ಹೇಳಿ ಕುಂತೀದೇವಿ ಮತ್ತು ಸಹೋದರರೊಡನೆ ಪ್ರಯಾಣ ಬೆಳೆಸಿದನು.

ದುರ್ಯೋಧನನು ಪಾಂಡವರ ನಾಶಕ್ಕಾಗಿಯೇ ಕನಕ-ರತ್ನಗಳಿಂದ ಆಚ್ಛಾದಿತವಾದ ಅರಗಿನ ಅರಮನೆಯನ್ನು ತನ್ನ ಆತ್ಮೀಯ ಮಂತ್ರಿಯಾದ ವಿರೋಚನನ ಮೂಲಕ ನಿರ್ಮಾಣ ಮಾಡಿಸಿ ಅಲ್ಲಿ ವಾಸಿಸಲು ಬೇಕಾದ ಧನ-ಕನಕ-ಧಾನ್ಯಾದಿ ಸಮಸ್ತ ಅನುಕೂಲಗಳನ್ನೂ ಕಲ್ಪಿಸಿದ್ದನು. ಮತ್ತು ಪಾಂಡವರನ್ನು ಆ ಅರಗಿನ ಅರಮನೆಯಲ್ಲಿ ಬಿಡಾರಮಾಡಿಸಿ, ಅವರ ಇಚ್ಛೆಯಂತೆ ವರ್ತಿಸುತ್ತಾ ಅವರ ವಿಶ್ವಾಸಗಳಿಸಿ ಸಮಯ ಸಾಧಿಸಿ ಅರಮನೆಗೆ ಬೆಂಕಿಯಿಟ್ಟು ಪಾಂಡವರನ್ನು ನಾಶಪಡಿಸಿ ಬರುವಂತೆ ವಿರೋಚನನಿಗೆ ಆಜ್ಞಾಪಿಸಿದ್ದನು.

ಹಿಂದೆ ಪ್ರಹಸ್ತನೆಂಬ ಹೆಸರಿನ ಪಾಪಿಯಾದ ಅಸುರನೇ ಈಗ ವಿರೋಚನನಾಗಿ ಜನಿಸಿ ದುರ್ಯೋಧನನ ಆಪ್ತಸಚಿವನಾಗಿದ್ದನು. ಪಾಂಡವರು ವಾರಣಾವತಕ್ಕೆ ಬಂದೊಡನೆಯೇ ಅವನು ಅವರನ್ನು ಸ್ವಾಗತಿಸಿ "ನೀವು ಧರ್ಮಶೀಲರು, ಧೈರ್ಯವಂತರಾದ ಬಲಶಾಲಿಗಳು, ಸತ್ಯನಿಷ್ಠರು. ದುರ್ಯೋಧನನು ಅಧರ್ಮಿ, ಕುಹಕಿ, ಪಾಪಿಯಾದ ಅವನನ್ನು ತ್ಯಜಿಸಿ ಬಂದಿದ್ದೇನೆ. ನಿಮಗಾಗಿ ಒಂದು ಶ್ರೇಷ್ಠ ಅರಮನೆಯನ್ನು ಕಟ್ಟಿಸಿದ್ದೇನೆ. ನಿಮ್ಮ ಸೇವೆ ಮಾಡಿಕೊಂಡಿರಬೇಕೆಂಬುದೇ ನನ್ನ ಆಸೆ" ಮುಂತಾಗಿ ಮೃದುಮೋಹಕ ಮಾತುಗಳಿಂದ ಪಾಂಡವರನ್ನು ಅರಗಿನ ಅರಮನೆಗೆ ಕರೆದುತಂದನು. ಆಗ ಪಾಂಡವರು "ನೀನು ನಮ್ಮ ಪಕ್ಷಕ್ಕೆ ಬಂದಿದ್ದು ಆಶ್ಚರ್ಯ" ಎಂದು ಹೇಳಿದ ಅವನನ್ನು ಸ್ವಾಗತಿಸಿ ತಮಗೆ ಮಂತ್ರಿಯಾಗಿರುವಂತೆ ಹೇಳಿದರು. ವಿರೋಚನನು ತನ್ನ ಕಾರ್ಯಸಿದ್ಧಿಯಾಯಿತೆಂದು ಮನದಲ್ಲೇ ಮುದಿಸಿ ಅಲ್ಲಿ ವಾಸಮಾಡತೊಡಗಿದನು.

ಧರ್ಮರಾಯನು ಅರಮನೆಯನ್ನು ಪರಿಶೀಲಿಸಿ ಮೀನಿನ ದೇಹದ ತುಪ್ಪ, ಅರಗುಗಳ ವಾಸನೆಯಿಂದ ಅದು ಅರಗಿನರಮನೆಯೆಂದರಿತು ಭೀಮನನ್ನು ಏಕಾಂತದಲ್ಲಿ ಕರೆದು "ಸಹೋದರ, ಪಾಪಿಯಾದ ವಿರೋಚನನು ನಮ್ಮ

ನಾಶಕ್ಕಾಗಿ ಈ ಅರಗಿನ ಅರಮನೆಯನ್ನು ನಿರ್ಮಿಸಿದ್ದಾನೆ. ಆದ್ದರಿಂದ ನೀನು ಎಚ್ಚರದಿಂದಿರಬೇಕು" ಎಂದು ಹೇಳಿದನು. ಭೀಮ-ವಿರೋಚನರು ಮೇಲೆ ಒಳ್ಳೆಯ ಮಾತುಗಳನ್ನಾಡುತ್ತ ಪರಸ್ಪರ ನಾಶಕ್ಕಾಗಿ ಸಮಯ ನಿರೀಕ್ಷಿಸಹತ್ತಿದ್ದರು.

ಇದಾದ ಸ್ವಲ್ಪ ಕಾಲದಲ್ಲಿ ಗೂಢಚಾರರಿಂದ ಅಲ್ಲಿನ ವಿದ್ಯಮಾನವರಿತು ವಿದುರನು ಖನಕನೆಂಬ ಆತ್ಮೀಯನನ್ನು ವಾರಣಾವತಕ್ಕೆ ಕಳಿಸಿ ಅರಗಿನ ಅರಮನೆಯಿಂದ ಪಾರಾಗಲು ಒಂದು ಸುರಂಗಮಾರ್ಗವನ್ನು ನಿರ್ಮಿಸಿ ಪಾಂಡವರಿಗೆ ವಿಷಯ ತಿಳಿಸಿ ಎಚ್ಚರಿಸಿ ಬರುವಂತೆ ಹೇಳಿಕಳಿಸಿದನು. ಅಲ್ಲಿಗೆ ಬಂದ ಖನಕನು ಧರ್ಮರಾಯನಿಗೆ ಎಲ್ಲ ವಿಚಾರಗಳನ್ನರುಹಿ ಊರಹೊರಗೆ ಗ್ರಾಮದ ಪ್ರಾಕಾರ ನಿರ್ಮಿಸುವ ನೆಪದಿಂದ ರಹಸ್ಯವಾಗಿ ಅಲ್ಲಿಂದ ಅರಮನೆಗೆ ಸುರಂಗಮಾರ್ಗ ನಿರ್ಮಿಸಿ, ಅರಮನೆಗೂ ಆ ಮಾರ್ಗಕ್ಕೂ ಸಂಬಂಧ ಕಲ್ಪಿಸುವ ದ್ವಾರವನ್ನು ಮುಚ್ಚಿ, ಧರ್ಮರಾಯನಿಗೆ ಅದನ್ನು ನಿವೇದಿಸಿ, ಅಪ್ಪಣೆ ಪಡೆದು ಹಸ್ತಿನಾವತಿಗೆ ಹಿಂದಿರುಗಿದನು. ಹೀಗೆ ಆರು ತಿಂಗಳುಗಳು ಕಳೆದವು.

ಇದೇ ಸಮಯದಲ್ಲಿ ವಿರೋಚನನ ಹಿರಿಯಭಗಿನಿಯು ತನ್ನೈವರು ಪುತ್ರರೊಡನೆ ಬಂದು ತಮ್ಮನೊಡನೆ ಅಲ್ಲಿಯೇ ವಾಸಿಸಹತ್ತಿದಳು. ಅವಳೂ ಪಾಂಡವರಿಗೆ ವಿಷಪ್ರಾಶನ ಮಾಡಿಸಲೆಂದೇ ಬಂದಿದ್ದಳು. ಪೂರ್ವದಲ್ಲಿ ಅವಳು ದೈತ್ಯರ ತಾಯಿಯಾದ ದಿತಿಯು. ಅವಳು ತಾನು ಅದಿತಿಯಾಗಬೇಕು, ತನ್ನ ಮಕ್ಕಳು ದೇವತೆಗಳಾಗಬೇಕೆಂದು ಬಯಸಿ ಒಂದು ವರ್ಷಕಾಲ ರುದ್ರದೇವರನ್ನು ಕುರಿತು ತಪಸ್ಸು ಮಾಡಿ ಶಿವನನ್ನು ಒಲಿಸಿಕೊಂಡು ತನ್ನ ಅಭಿಲಾಷೆಯನ್ನು ಪೂರ್ಣ ಮಾಡುವಂತೆ ಬೇಡಿದಳು. ರುದ್ರದೇವರು "ನೀನು ಒಂದು ವರ್ಷಕಾಲ ನಿನ್ನ ಮಕ್ಕಳೊಡನೆ ಜೀವಂತವಾಗಿ ಉಳಿದರೆ, ನಿನ್ನ ಮನದಾಶೆಯು ಸಫಲವಾಗುವುದೆಂದು ವರವನ್ನು ಕೊಟ್ಟಿದ್ದರು. ಆ ಹಿಂದಿನ ದಿತಿಯೇ ಈಗ ವಿರೋಚನನ ಅಕ್ಕನಾಗಿ ಜನಿಸಿದ್ದಳು. ಹೀಗೆ ಅಲ್ಲಿಗೆ ಬಂದ ಅವಳು ಸಮಯ ನಿರೀಕ್ಷಿಸುತ್ತಿದ್ದು ಪಾಂಡವರಿಗೆ ಆಹಾರದಲ್ಲಿ ವಿಷವನ್ನು ಬೆರೆಸ-ಲಾರಂಭಿಸಿದಳು. ಪದ್ಧತಿಯಂತೆ ಭೀಮನೇ ಆ ಎಲ್ಲ ಆಹಾರವನ್ನು ಭುಂಜಿಸಿಬಿಟ್ಟನು ಮತ್ತು ವಿಷವನ್ನು ಜೀರ್ಣಿಸಿ-ಕೊಂಡುಬಿಟ್ಟನು. ಅವನಿಗೆ ವಿಷಪ್ರಯೋಗ ಮಾಡಿರುವುದು ಗೊತ್ತಿದ್ದುದರಿಂದ ಅಂದಿನಿಂದ ಪ್ರತಿದಿನ ತಾನು ಭುಜಿಸಿದ ವಿನಹ ತಾಯಿ-ಸಹೋದರರು ಉಣ್ಣಲು ಬಿಡುತ್ತಿರಲಿಲ್ಲ. ಹೀಗಾಗಿ ಆ ಪಾಪಿನಿಯ ಮನೋರಥವು ಈಡೇರಲಿಲ್ಲ.

ಇವೆಲ್ಲವನ್ನೂ ಬಲ್ಲ ಪವನನಂದನನು ಒಂದು ದಿನ ರಾತ್ರಿ ವಿರೋಚನ ಅವನ ಅಕ್ಕ ಹಾಗೂ ಮಕ್ಕಳು ಮಲಗಿ ಗಾಢನಿದ್ರೆಯಲ್ಲಿರುವಾಗ ಅರಮನೆಗೆ ತಾನೇ ಬೆಂಕಿಯಿಟ್ಟು ತಾಯಿಯನ್ನು ಹೊತ್ತುಕೊಂಡು ಧರ್ಮರಾಜಾದಿಗಳೊಡನೆ ಖನಕನು ನಿರ್ಮಿಸಿದ್ದ ಸುರಂಗಮಾರ್ಗವಾಗಿ ಪಾರಾಗಿ ವಾರಣಾವತದ ಹೊರವಲಯಕ್ಕೆ ಬಂದನು. ವಿರೋಚನಾದಿಗಳೆಲ್ಲರೂ ಬೆಂಕಿಯಲ್ಲಿ ಬೆಂದು ಮೃತರಾದರು. ಕುಂತಿ ಧರ್ಮರಾಜಾದಿಗಳು ಭಯಗೊಂಡಿದ್ದರು. ಒಂದು ವೇಳೆ ವಿರೋಚನಾದಿಗಳು ಮೃತರಾದ ವಿಚಾರ ತಿಳಿದರೆ ದುರ್ಯೋಧನನು ಭೀಷ್ಮದ್ರೋಣಾದಿಗಳೊಡನೆ ಯುದ್ಧಕ್ಕೆ ಬರಬಹುದು. ಭೀಮಸೇನನು ಗುರುಹಿರಿಯರ ಮೇಲೆ ಯುದ್ಧ ಮಾಡುವವನಲ್ಲ. ಆಗ ತಮ್ಮ ಗತಿಯೇನೆಂದವರು ಭಯಗೊಂಡರು. ಭೀಮಸೇನನು ಅವರನ್ನು ಸಾಂತ್ವನಗೊಳಿಸಿ ಬಳಲಿದ ತಾಯಿ-ಸಹೋದರರನ್ನು ತನ್ನ ಭುಜದ ಮೇಲೆ ಹೊತ್ತು, ವಿದುರನು ಮೊದಲೇ ವ್ಯವಸ್ಥೆ ಮಾಡಿದ್ದ ನಾವೆಯನ್ನೇರಿ ಗಂಗಾನದಿಯನ್ನು ದಾಟಿ ಸೂರ್ಯೋದಯವಾಗುವುದರೊಳಗೆ ಬಹುದೂರ ದಾರಿಯನ್ನು ಕ್ರಮಿಸಿ ಅರಣ್ಯವನ್ನು ಪ್ರವೇಶಿಸಿದನು.

ಇತ್ತ ಮರುದಿನ ಅರಮನೆಗೆ ಬೆಂಕಿಬಿದ್ದು ಭಸ್ಮವಾಗಿರುವುದನ್ನೂ, ವಿರೋಚನ, ಅವನ ಭಗಿನಿ ಮತ್ತು ಐವರು ಮಕ್ಕಳು ಬೆಂದು ಕರಕಾಗಿರುವುದನ್ನೂ ಕಂಡು ಊರಿನ ಜನರು ಪಾಂಡವರು ಕುಂತಿಸಹಿತರಾಗಿ ಬೆಂಕಿಗೆ ಆಹುತಿಯಾಗಿ ಮೃತರಾದರೆಂದೂ, ಪಾಪಿ ದುರ್ಯೋಧನನೇ ವಿರೋಚನದಿಂದ ಈ ಕಾರ್ಯ ಮಾಡಿಸಿದ್ದಾನೆಂದೂ, ಆಕಸ್ಮಿಕವಾಗಿ

ವಿರೋಚನನೂ ಬೆಂಕಿಗೆ ಸಿಕ್ಕು ಮರಣ ಹೊಂದಿರುವನೆಂದೂ ಅಧರ್ಮ ಅನ್ಯಾಯವೆಸಗಿದವರಿಗೆ ಎಂದೂ ಸುಖ-ವಾಗುವುದಿಲ್ಲವೆನ್ನಲು ವಿರೋಚನನ ಮರಣವೇ ಸಾಕ್ಷಿ-ಮುಂತಾಗಿ ಮಾತನಾಡಿಕೊಂಡರು.

ಪಾಂಡವರು ಅರಗಿನ ಅರಮನೆಯಲ್ಲಿ ಮೃತರಾದ ವಿಚಾರವನ್ನು ವಾರಣಾವತಿಯಪುರಜನರಿಂದ ತಿಳಿದು ಭೀಷ್ಮಾಚಾರ್ಯರೇ ಮುಂತಾದವರು ದುಃಖಿಸಿದರು. ದುರ್ಯೋಧನಾದಿಗಳು ಬಹುನೊಂದವರಂತೆ ನಟಿಸುತ್ತಾ ಕಪಟ ರೋದನ ಮಾಡಿದರು. ವಿದುರನಿಗೆ ಪಾಂಡವರು ಜೀವಿಸಿರುವುದು ಗೊತ್ತಿದ್ದರೂ ಸುಯೋಧನಾದಿಗಳನ್ನು ವಂಚಿಸಿ ನಂಬಿಸಲು ತಾನೂ ಬಹುವಾಗಿ ದುಃಖಿಸಿದನು. ಪಾಂಡವರು ಮೃತರಾದರೆಂದು ಸ್ನಾನ ತಿಲತರ್ಪಣಾದಿ ಕರ್ಮಗಳನ್ನು ಕೌರವರು ನೆರವೇರಿಸಿದರು.

ಅತ್ತ ಭೀಮಸೇನನು ತಾಯಿ-ಸಹೋದರರನ್ನು ಹೊತ್ತುಕೊಂಡು ಹಿಡಿಂಬನ ವನವನ್ನು ಪ್ರವೇಶಿಸಿದನು. ತೃಷಾರ್ತ-ರಾದ ಅವರಿಗೆ ನೀರು ತರುವುದಾಗಿ ಹೇಳಿ ಕಮಲಪತ್ರಗಳಲ್ಲಿ ನೀರನ್ನು ತಂದು ಅವರಿಗೆ ಕುಡಿಸಿ ನಂತರ "ನೀವೆಲ್ಲರೂ ನಿದ್ರಿಸಿರಿ. ನಾನು ನಿಮ್ಮನ್ನು ಕಾಯುತ್ತಿರುವೆ"ನೆಂದು ಹೇಳಿದ ಅವರ ರಕ್ಷಣೆಗೆ ನಿಂತನು. ಹಿಡಿಂಬಾಸುರನಿಗೆ ಪಾಂಡವರು ಬಂದಿರುವುದು ತಿಳಿಯಿತು. ಅಂದಿನ ಆಹಾರಕ್ಕೆ ಅವರನ್ನು ಹಿಡಿದು ತರಲು ತಂಗಿಯಾದ ಹಿಡಂಬಿಯನ್ನು ಕಳಿಸಿದನು. ದೂರದಿಂದಲೇ ಪಾಂಡವರನ್ನು ಕಂಡ ಹಿಡಂಬಿಯು ಭೀಮನ ಸೌಂದರ್ಯಾದಿಗಳಿಂದ ಆಕರ್ಷಿತಳಾಗಿ ಅವನನ್ನು ಮದುವೆಯಾಗಬಯಸಿ ತಾನೂ ಸುಂದರ ರೂಪ ಧರಿಸಿ ಭೀಮನತ್ತ ಸಾಗಿದಳು.

ಹಿಡಂಬಿಯು ಹಿಂದೆ ದೇವೇಂದ್ರಪುರ ಸಂಪತ್ತಾಗಿದ್ದಳು. ಅಂದರೆ ಸಂಪದಭಿಮಾನಿನಿಯಾದ ಶ್ರೀ ಎಂಬ ಹೆಸರಿನ ಅಪ್ಸರ ಸ್ತ್ರೀಯಾಗಿದ್ದಳು. ಶ್ರೀ ಎಂದರೆ ಮಹಾಲಕ್ಷ್ಮಿಯೆಂದು ತಿಳಿಯಬಾರದು. ಅವಳು ಶಚೀದೇವಿಯಂತೆ ದೇವೇಂದ್ರನ ಮತ್ತೋರ್ವ ಪತ್ನಿಯಾಗಿದ್ದಳು. ಅವಳು ಶಚಿಯೊಡನೆ ಸ್ಪರ್ಧಿಸಿ ಅವಳ ಶಾಪದಿಂದ ರಾಕ್ಷಸ ಶರೀರವನ್ನು ಪಡೆದಳು. ಅವಳು ಭೀಮಸೇನನು ವಾಯುದೇವನವತಾರವೆಂದರಿತು ಅವನನ್ನು ಪತಿಯಾಗಿ ಪಡೆದು ಅವನ ಅಂಗಸಂಗದಿಂದ ಶಾಪಮುಕ್ತಳಾಗಿ ತನ್ನ ಪೂರ್ವ ಶರೀರವನ್ನು ಪಡೆಯಲಾಶಿಸಿ ಭೀಮನನ್ನು ಮದುವೆಯಾಗೆಂದು ಪ್ರಾರ್ಥಿಸಿದಳು. ಭೀಮನು "ಹಿರಿಯನಾದ ಧರ್ಮರಾಯನಿಗೆ ವಿವಾಹವಾಗದ ವಿನಃ ನಾನು ಲಗ್ನವಾಗುವಂತಿಲ್ಲವಾದ್ದರಿಂದ ನಿನ್ನನ್ನು ವರಿಸಲಾರೆ" ಎಂದನು. ಕಾಮಾರ್ತಳಾದ ಹಿಡಂಬಿಯು ತನ್ನನ್ನು ಲಗ್ನವಾಗುವಂತೆ ಮತ್ತೆ ಪ್ರಾರ್ಥಿಸಿದಳು. ಅವಳು ವಾಯುಪತ್ನಿಯಾದ ಭಾರತೀದೇವಿಯ ಆವೇಶವುಳ್ಳವಳಾದ್ದರಿಂದ ಭೀಮನನ್ನು ಪ್ರಾರ್ಥಿಸಿದ್ದು ಯುಕ್ತವೇ ಆಗಿದೆ. ಹಿಂದೆ ಭಾರತಿಯು ಹಿಡಂಬಿಯಲ್ಲಿ ತನ್ನ ಆವೇಶವಿಟ್ಟು ವಾಯ್ವವತಾರನಾದ ಭೀಮನ ಅಂಗಸಂಗದಿಂದ ಪೂರ್ವ ಶರೀರವನ್ನು ಪಡೆಯುವಂತೆ ವರವಿತ್ತಿದ್ದಳು. ಮೊದಲು ಕಾಮಾರ್ತಳಾಗಿ ಪ್ರಾರ್ಥಿಸಿ ನಂತರ ಶಾಪಮೋಚನೆಗಾಗಿ ಭೀಮನ ಕರಪಿಡಿಯಬಯಸಿ ಪ್ರಾರ್ಥಿಸಿದಳೆಂದು ತಿಳಿಯಬೇಕು. ಹಿಡಂಬಿಯು ಮತ್ತೆ ಭೀಮನನ್ನು ಕುರಿತು "ಪ್ರಭು, ನೀವೀಗ ನನ್ನನ್ನು ನಿರಾಕರಿಸಿದ್ದೀರಿ. ಆದರೆ ನಾಳೆ ಜಗತ್ಪ್ರಭುಗಳೂ ನಾರಾಯಣಸ್ವರೂಪರೂ ಆದ ಶ್ರೀವೇದವ್ಯಾಸರು ಬಂದು ನಿಮ್ಮೊಡನೆ ನನಗೆ ಲಗ್ನ ಮಾಡಿಸುವರು. ಆಗ ನೀವು ನನ್ನಾಸೆಯನ್ನು ಪೂರೈಸುವಿರಿ" ಎಂದು ಹೇಳಿ ತನ್ನ ಜ್ಞಾನವನ್ನು ಪ್ರದರ್ಶಿಸಿದಳು.

ಬಹಳ ಹೊತ್ತಾದರೂ ತಂಗಿಯು ಬರದಿರಲು ಕುಪಿತನಾದ ಹಿಡಿಂಬಾಸುರನು ತಾನೇ ಹೊರಟು ಬಂದು, ಭೀಮ-ಹಿಡಂಬಿಯರನ್ನು ಕಂಡು ತಂಗಿಯ ಇಂಗಿತವರಿತು ಕ್ರುದ್ಧನಾಗಿ ಭೀಮ-ಹಿಡಂಬಿಯರನ್ನು ಸಂಹರಿಸಲು ಧಾವಿಸಿದನು. ಅದನ್ನು ಕಂಡು ಹಿಡಂಬಿಯು ಭೀಮನಿಗೆ ಶರಣುಹೋದಳು. ಆಗ ಭೀಮಸೇನನು ಹಿಡಂಬನೊಡನೆ ಹೋರಾಡಲು ನಿಶ್ಚೈಸಿ ತಾಯಿಸಹೋದರರಿಗೆ ತೊಂದರೆಯಾಗಬಾರದೆಂದು ಹಿಡಿಂಬನನ್ನು ಬಹುದೂರಕ್ಕೆ ಕರೆದೊಯ್ದು ಯುದ್ಧ ಮಾಡಿದನು. ಭೀಮ-ಹಿಡಿಂಬರು ಮುಷ್ಟಿಪ್ರಹಾರ, ವೃಕ್ಷಾಘಾತ, ಪರ್ವತಗಳನ್ನು ಕಿತ್ತಿ ಹೊಡೆದಾಡುವುದು

ಮುಂತಾಗಿ ಘೋರವಾಗಿ ಯುದ್ಧ ಮಾಡಲಾರಂಭಿಸಿದರು. ಅವರು ಪರಸ್ಪರ ಗರ್ಜಿಸುತ್ತಿದ್ದುದರಿಂದ ಧರ್ಮಾದಿಗಳಿಗೆ ಎಚ್ಚರವಾಯಿತು. ಅಸುರನೊಡನೆ ತಾನು ಕಾದಾಡುವುದನ್ನು ಕಂಡು ಹೆದರಿರುವ ಕುಂತಿ-ಧರ್ಮರಾಜಾದಿಗಳನ್ನು ಗಮನಿಸಿ ಭೀಮಸೇನನು ಹಿಡಿಂಬಾಸುರನ ವಕ್ಷಃಸ್ಥಳಕ್ಕೆ ಬಲವಾಗಿ ಹೊಡೆದನು. ರುದ್ರದೇವರ ವರದಿಂದ ಅವಧ್ಯನಾಗಿದ್ದರೂ ಹಿಡಿಂಬಾಸುರನು ಭೀಮನ ಮಹಾಪರಾಕ್ರಮದ ಮುಂದೆ ನಿಲ್ಲಲಾಗದೆ ಭೀಮನ ವಜ್ರಮುಷ್ಟಿಯ ಆಘಾತದಿಂದ ರಕ್ತ ಕಾರುತ್ತಾ ಧರೆಗೊರಗಿ ಮರಣ ಹೊಂದಿದನು. ಮತ್ತು ಅಂಧತಮಸ್ಸಿಗೆ ಭಾಗಿಯಾದನು.

ಹಿಡಿಂಬ ವಧಾನಂತರ ಭೀಮನು ತಾಯಿ ಸಹೋದರರ ಬಳಿ ಸಾರಿದನು. ಹಿಡಂಬಿಯೂ ಅವನನ್ನನುಸರಿಸಿದಳು. ಮತ್ತು ಕುಂತಿ-ಧರ್ಮಜರನ್ನು "ಭೀಮಸೇನನು ನನ್ನನ್ನು ಕೈಹಿಡಿಯುವಂತೆ ಆಜ್ಞಾಪಿಸಿರಿ" ಎಂದು ಬೇಡಿದಳು. ತಾಯಿ ಅಣ್ಣಂದಿರು ಹಾಗೆ ಅಪ್ಪಣೆ ಮಾಡಿದರೂ ಭೀಮನು ಸಮ್ಮತಿಸದಿರಲು ಸಕಲ ಗುಣನಿಲಯರೂ, ಅನಂತ ಸುಖಸಾಗರರೂ, ವಿದ್ಯಾಕಿರಣವಿರಾಜಿತರೂ ನಿಖಿಲ ಪಾಪನಿವಾರಕರೂ ಆದ ಶ್ರೀವೇದವ್ಯಾಸದೇವರು ಅಲ್ಲಿ ಪ್ರತ್ಯಕ್ಷರಾದರು. ಅತಿಪ್ರೀತಿಯಿಂದ ವಿಕಸಿತ ಕಮಲನಯನರಾದ ಶ್ರೀವೇದವ್ಯಾಸರಿಂದ ಲಾಲಿತರಾದ ಪಾಂಡವರು ಕಮಲಾಸನನಿಗೂ ಗುರುಗಳಾದ ಬಾದರಾಯಣರನ್ನು ಪೂಜಿಸಿ, ಅಪ್ಪಣೆ ಪಡೆದು ಕುಳಿತರು. ಹಿಡಿಂಬಿಯೂ ಅವರಿಗೆ ನಮಿಸಿದಳು.

ಭಕ್ತಿನಮ್ರಾಂಗರಾದ ಪಾಂಡವರನ್ನು ನೋಡಿ ನಸುನಕ್ಕು, ಭೀಮನತ್ತ ತಿರುಗಿ- "ಭೀಮಸೇನ! ಸ್ವರ್ಗಲೋಕಕ್ಕೆ ಅಲಂಕಾರಳಾದ ಇವಳನ್ನು ಮದುವೆಯಾಗು. ಇವಳಿಗೆ ನಿನ್ನಿಂದ ಓರ್ವಪುತ್ರನು ಜನಿಸುವನು. ಅನಂತರ ಇವಳು ಪುತ್ರನೊಡನೆ ತೆರಳಲಿ"ಎಂದು ಆಜ್ಞಾಪಿಸಿದರು. ಶ್ರೀವೇದವ್ಯಾಸರ ಆಣತಿಯಂತೆ ಭೀಮನು ಹಿಡಿಂಬಿಯನ್ನು ವಿವಾಹವಾದನು. ಹಿಡಂಬಿಯು ಪ್ರತಿದಿನವೂ ಸೂರ್ಯೋದಯವಾದ ಕೂಡಲೇ ಭೀಮನನ್ನು ಭುಜದ ಮೇಲೆ ಹೊತ್ತು ದೇವತೆಗಳು ಕ್ರೀಡಿಸುವ ಸ್ಥಳಗಳಿಗೆ, ಇಂದ್ರನ ನಂದನವನಾದಿಗಳಿಗೂ ಹೋಗಿ ಪತಿಯಾದ ಭೀಮನೊಡನೆ ಕ್ರೀಡಿಸುತ್ತಿದ್ದು, ಸಂಜೆಯಾದ ಮೇಲೆ ಪತಿಯೊಡನೆ ಪಾಂಡವರಿದ್ದಲ್ಲಿಗೆ ಮರಳುವಳು. ಹೀಗೆ ವನವಿಹಾರ ಕ್ರೀಡೆಗಳಿಂದ ಆನಂದಿಸುತ್ತಿದ್ದ ಭೀಮ-ಹಿಡಂಬಿಯರಿಗೆ ಆರು ತಿಂಗಳು ಕಳೆದುದೇ ತಿಳಿಯದಂತಾಯಿತು. ಹಿಡಂಬಿಗೆ ಕೆಲದಿನಗಳಾದ ಮೇಲೆ ಅತ್ಯಂತ ಬಲ-ವೀರ್ಯಗಳಿಂದ ಕಂಗೊಳಿಸುವ ಓರ್ವಪುತ್ರನು ಜನಿಸಿದನು.

ಅವನು ಪೂರ್ವದಲ್ಲಿ ದೇವತೆಯಾಗಿದ್ದರೂ ರಾಕ್ಷಸಶರೀರವುಳ್ಳ ನಿಋತಿಯು. ರುದ್ರದೇವರ ಆವೇಶಯುಕ್ತನಾಗಿ ಈಗ ಘಟೋತ್ಕಚನೆಂಬ ಹೆಸರಿನಿಂದ ಭೀಮ ಹಿಡಂಬಿಯರಿಗೆ ಮಗನಾಗಿ ಜನಿಸಿದ್ದನು. ಅವನ ತಲೆಯು ಗಡಿಗೆಯಂತಿದ್ದು ಕೇಶಗಳು ಮೇಲ್ಮುಖವಾಗಿದ್ದುದರಿಂದ ಅವನಿಗೆ ಘಟೋತ್ಕಚನೆಂಬ ಹೆಸರಾಯಿತು. ಭೀಮಸೇನನು ಘಟೋತ್ಕಚನು ಜನಿಸಿದ್ದರಿಂದ ವೇದವ್ಯಾಸರು ಹೇಳಿದ ಕಾಲ ಸಮೀಪಿಸಿತೆಂದು ಹಿಡಂಬಿಗೆ ಹೇಳಿ "ನೀವಿನ್ನು ಹೊರಡಿರಿ. ನಾನು ಮತ್ತೆ ಸ್ಮರಿಸಿದಾಗ ನೀವಿಬ್ಬರೂ ಬರಬೇಕು" ಎಂದು ಅಪ್ಪಣೆ ಮಾಡಿದನು. ಅದಕ್ಕೆ ಒಪ್ಪಿ, ಅವರು ಸ್ಮರಿಸಿದಾಗ ಬರುವುದಾಗಿ ಪ್ರತಿಜ್ಞೆ ಮಾಡಿ, ಎಲ್ಲರ ಅಪ್ಪಣೆ ಪಡೆದು ಹಿಡಂಬಿಯು ಮಗನೊಡನೆ ಸ್ವರ್ಗಲೋಕಕ್ಕೆ ಪ್ರಯಾಣ ಬೆಳೆಸಿದಳು.

ಅದೇ ಸಮಯಕ್ಕೆ ಅಲ್ಲಿಗೆ ಆಗಮಿಸಿದ ಶ್ರೀವೇದವ್ಯಾಸದೇವರು ಶ್ರೀರುದ್ರದೇವರ ವರದಿಂದ ಅವಧ್ಯನೂ, ಅಜೇಯನೂ ಆದ ಬಕಾಸುರನ ಸಂಹಾರವಾಗಬೇಕಾಗಿದ್ದುದರಿಂದ ಪಾಂಡವರನ್ನು ಕರೆದುಕೊಂಡು ಏಕಚಕ್ರನಗರಕ್ಕೆ ತೆರಳಿದರು. ಅಲ್ಲಿ ವೇದವ್ಯಾಸರು ಓರ್ವ ಬ್ರಾಹ್ಮಣನ ಮನೆಗೆ ಪಾಂಡವರನ್ನು ಕರೆದು ತಂದು ಬ್ರಾಹ್ಮಣವೇಷದಲ್ಲಿದ್ದ ಅವರನ್ನು ತೋರಿಸಿ 'ಇವರು ನನ್ನ ಶಿಷ್ಯರು. ಇವರು ಕೆಲಕಾಲ ನಿನ್ನ ಮನೆಯಲ್ಲಿ ವಾಸಮಾಡುವರು' ಎಂದು ಹೇಳಿ, ಪಾಂಡವರಿಗೆ 'ಕೆಲಕಾಲಾನಂತರ ತಾವು ಮತ್ತೆ ಬರುವುದಾಗಿ' ಹೇಳಿ ದಯಮಾಡಿಸಿದರು. ಆ ಬಳಿಕ ಪಾಂಡವರು ತಾಯಿಯೊಡನೆ ಆ ವಿಪ್ರಗೃಹದಲ್ಲಿ ವೇದಾಧ್ಯಯನನಿರತರಾಗಿ ವಾಸಮಾಡಿದರು.

ಭೀಮಸೇನನು ಒಬ್ಬ ಕುಂಬಾರನು ತಯಾರಿಸಿಕೊಟ್ಟ ದೊಡ್ಡ ಮಣ್ಣಿನ ಪಾತ್ರೆಯನ್ನು ಹಿಡಿದು ಹೂಂಕಾರದಿಂದಲೇ ಭಿಕ್ಷಾಟನೆ ಮಾಡಲಾರಂಭಿಸಿದನು. ಆಗ ಯುಧಿಷ್ಠಿರನು "ಭೀಮ! ನೀನಿಂತು ಅಸದೃಶಪಾತ್ರೆಯನ್ನು ಹಿಡಿದು ಹೂಂಕಾರದಿಂದ ಭಿಕ್ಷಾಟನ ಮಾಡುವುದನ್ನು ಕಂಡು ನಿನ್ನ ಪರಾಕ್ರಮವನ್ನು ಊಹಿಸಿ ನಾವು ಪಾಂಡವರೆಂದು ದುರ್ಯೋಧನ ಕಡೆಯವರಿಗೆ ಗೊತ್ತಾಗುವುದೇನೋ ಎಂದು ನಾನು ಅಂಜಿದ್ದೇನೆ. ಆದುದರಿಂದ ನೀನು ಇನ್ನು ಮೇಲೆ ತಾಯಿಯೊಡನೆ ಮನೆಯಲ್ಲೇ ಇರು. ಅರ್ಜುನ-ನಕುಲಸಹದೇವರು ಭಿಕ್ಷೆ ಬೇಡಿ ತರುತ್ತಾರೆ. ಅದನ್ನು ನೀನು ಭುಂಜಿಸು. ಭಿಕ್ಷಾಟನೆಗೆ ಹೋಗಬೇಡ" ಎಂದು ಹೇಳಿದನು. ಅಣ್ಣನ ಆಜ್ಞೆಯಂತೆ ಭೀಮನು ಮಾತೆಯೊಡನೆ ಮನೆಯಲ್ಲೇ ಇದ್ದು ಉಳಿದ ಪಾಂಡವರು, ಭಿಕ್ಷೆ ಬೇಡುವುದು ಸ್ವಧರ್ಮ ವಿರುದ್ಧವಾದ್ದರಿಂದ ಮೌನವಾಗಿಯೇ ಭಿಕ್ಷೆಯನ್ನು ಪಡೆಯಹತ್ತಿದರು.

ಹೀಗಿರಲೊಂದು ದಿನ ತಾಯಿಯೊಡನೆ ಮನೆಯಲ್ಲಿರುವಾಗ ತಮಗೆ ಆಶ್ರಯವಿತ್ತ ಮನೆಯ ಯಜಮಾನ ಮತ್ತು ಅವನ ಪತ್ನಿ ಮುಂತಾದವರು ಅಳುತ್ತಿರುವುದನ್ನು ಕೇಳಿ ಭೀಮಸೇನನು ಅವರ ದುಃಖದ ಕಾರಣವನ್ನು ತಿಳಿದು ಬರುವಂತೆ ತಾಯಿಯನ್ನು ಅವರ ಬಳಿಗೆ ಕಳಿಸಿದನು. ಕುಂತಿಯು ಅವರ ಮನೆಗೆ ಬಂದು ಅವರು ರೋದಿಸುವ ಕಾರಣವನ್ನರಿಯಲು ಮರೆಯಾಗಿ ನಿಂತು ಆಲಿಸಹತ್ತಿದಳು. ಬ್ರಾಹ್ಮಣನು "ಪ್ರಿಯೇ, ಒಂದು ಜೊಡೆತ್ತಿನ ಗಾಡಿಯಲ್ಲಿ ಪರ್ವತದಷ್ಟು ಭಕ್ಷ್ಯ, ಭೋಜ್ಯ, ಅನ್ನಾದಿಗಳನ್ನೂ ಒಬ್ಬ ಪುರುಷನನ್ನೂ ಬಕಾಸುರನಿಗೆ ಬಲಿಯಾಗಿ ಕಳಿಸುವ ಪಾಳಿ ಇಂದು ನಮಗೆ ಬಂದೊದಗಿದೆ. ನಾನು ಎಲ್ಲವನ್ನೂ ಸಿದ್ಧಪಡಿಸಿದ್ದೇನೆ. ಆದರೆ ಅದನ್ನು ತೆಗೆದುಕೊಂಡು ಹೋಗುವ ಪುರುಷನನ್ನು ಕಳಿಸದಿದ್ದರೆ, ಆ ಅಸುರನು ನಮ್ಮೆಲ್ಲರನ್ನೂ ತಿಂದುಬಿಡುತ್ತಾನೆ. ನೀನು ಈ ಗ್ರಾಮವನ್ನೇ ತ್ಯಜಿಸಿ ಹೊರಟು ಹೋಗೋಣವೆನ್ನುತ್ತಿರುವೆ. ಆದರೆ ಅದಕ್ಕೀಗ ಸಮಯವಿಲ್ಲ. ಆದ್ದರಿಂದ ನಾನೇ ಬಕಾಸುರನಿಗೆ ಬಲಿಯಾಗಲು ಹೋಗುತ್ತೇನೆ" ಎಂದು ರೋದಿಸಿದನು. ಅವನ ಪತ್ನಿಯು 'ಛೇ, ನೀವು ಹೋಗಬಾರದು. ರಾಕ್ಷಸನಿಗೆ ನಾನು ಬಲಿಯಾಗುತ್ತೇನೆ. ನನ್ನನ್ನು ಕಳಿಸಿರಿ' ಎಂದು ಅಳಹತ್ತಿದಳು. ಆಗ ಬ್ರಾಹ್ಮಣನ ಪುತ್ರಿಯು "ನಾನು ನಿಮಗಾಗಿ ಬಕಾಸುರನಿಗೆ ಬಲಿಯಾಗಲು ಹೋಗುತ್ತೇನೆ ಆದರಿಂದ ಉತ್ತಮಸ್ತ್ರೀ ಎಂದು ಕೀರ್ತಿ ಬರುತ್ತದೆ ಅಥವಾ ಪತಿವ್ರತೆಯರು ಹೋಗುವ ಸ್ವರ್ಗವಾದರೂ ನಿಮಗಾಗಿ ನಾನು ತ್ಯಾಗ ಮಾಡದಿದ್ದರೆ ಅಧೋ-ಲೋಕ ಪ್ರಾಪ್ತಿಯಾದೀತು. ನಿಮಗೆ ಕನ್ನಿಕೆಯಾದ ನನ್ನಿಂದಾವ ಪ್ರಯೋಜನವೂ ಇಲ್ಲ" ಎಂದಳು. ಆಗ ಬ್ರಾಹ್ಮಣನು "ನಿನ್ನ ಮಾತು ಸರಿಯಲ್ಲ ಮಗಳೇ, ಮಾತಾಪಿತೃ ಕುಲವನ್ನು ನರಕದಿಂದ ಪಾರು ಮಾಡುವವಳು ಕನ್ಯೆ ಎನಿಸುವಳು"[17]. ಹೆಂಡತಿಯು ಸ್ನೇಹಿತಳು"[17], ಸ್ವತಃ ತಾನೇ ಮಗನೆಂದು"[17] ಶ್ರುತಿಯಲು ಸಾರುವುದು. ಆದ್ದರಿಂದ ಭಾರ್ಯೆ, ಪುತ್ರ, ಪುತ್ರಿಕೆಯರಾದ ನಿಮ್ಮನ್ನು ಬಕನಿಗೆ ಬಲಿ ನೀಡಲು ನಾನೊಪ್ಪಲಾರೆ! ನಾನೇ ಬಕನಿಗೆ ಆಹಾರವಾಗುತ್ತೇನೆ' ಎಂದನು. ಹೀಗೆ ಆ ಕುಟುಂಬದವರು ದುಃಖಿಪಡುತ್ತಿರುವಾಗ ಆ ಬ್ರಾಹ್ಮಣನ ಪುತ್ರನು ಕರದಲ್ಲಿ ಒಂದು ತೃಣವನ್ನು ಹಿಡಿದು "ಅಪ್ಪಾ, ಬಕಾಸುರನನ್ನು ನಾನು ಈ ತೃಣದಿಂದ ಕೊಂದುಬಿಡುತ್ತೇನೆ" ಎನ್ನುತ್ತಿರುವಾಗಲೇ, ಕುಂತಿಯು ಭೀಮಸೇನನು ಬಕನನ್ನು ತೃಣಪ್ರಾಯವಾಗಿ ಸಂಹರಿಸುವನೆನ್ನಲು ಉಪಶ್ರುತಿ ದೊರೆಯಿತೆಂದು ನಿಶ್ಚಯಿಸಿ ಬ್ರಾಹ್ಮಣನ ಮನೆಯನ್ನು ಪ್ರವೇಶಿಸಿ ದುಃಖದ ಕಾರಣವೇನೆಂದು ಆ ವಿಪ್ರನನ್ನು ಪ್ರಶ್ನಿಸಿದಳು.

ಕುಂತಿಯನ್ನು ನೋಡಿ ಬ್ರಾಹ್ಮಣನು "ಅಮ್ಮಾ, ಈ ನಗರದ ಹೊರಭಾಗದಲ್ಲಿ ರಾವಣನ ಸೋದರಮಾವನಾದ ಬಕಾಸುರನೆಂಬ ದೈತ್ಯನಿರುವನು. ಅತಿಬಲಾಢ್ಯನಾದ ಅವನು ದೇವತೆಗಳಿಗೂ ಸಹಿಸಲಾಗದ ಬಲವೀರ್ಯ ಯುಕ್ತನಾಗಿದ್ದಾನೆ. ಕಳೆದ ಹದಿಮೂರು ವರ್ಷಗಳಿಂದ ಅವನು ಈ ನಗರವಾಸಿಗಳಿಂದ ಪಾಳಿಯ ಪ್ರಕಾರವಾಗಿ ಒಂದು ಬಂಡಿ ಭಕ್ಷ್ಯ, ಭೋಜ್ಯ,

---

17 "ಸಖಾ ಹ ಜಾಯಾ ಕೃಪಣಂ ಹಿ ದುಹಿತಾ ಜ್ಯೋತಿರ್ಹಿ ಪುತ್ರಃ"
"ಆತ್ಮಾ ವೈ ಪುತ್ರನಾಮಾಸಿ ಸಜೀವ ಶರದಃ ಶತಮ್"

ಅನ್ನ, ಎರಡೆತ್ತುಗಳು, ಒಬ್ಬ ಮನುಷ್ಯನನ್ನು ಆಹಾರವಾಗಿ ಪಡೆಯುತ್ತಾ ಬಂದಿದ್ದಾನೆ. ಈ ದಿನ ನಮ್ಮ ಪಾಳಿ ಬಂದಿದೆ. ಅದಕ್ಕಾಗಿ ದುಃಖಿಸುತ್ತಿದ್ದೇವೆ" ಎಂದನು. ಆಗ ಕುಂತಿಯು ಶ್ರೀರಾಮನ ಆಜ್ಞೆಯಲ್ಲಿ ಅವನ ಭಯದಿಂದ ಅಡಗಿ ಕುಳಿತ ಬಕಾಸುರನು ಈಗ ರಾಜರನ್ನು ಭಯಗೊಳಿಸುತ್ತಾ ಹೀಗೆ ಕಪ್ಪವನ್ನು ಪಡೆಯುತ್ತಿರುವನೆಂದರಿತು ಆನಂದಿಸಿದಳು. ಅವಳು ಹೀಗೆ ಆನಂದಿಸಲು ಕಾರಣವೇನು? ಅತಿ ಪರಾಕ್ರಮಿಯಾದ ಬಕಾಸುರನನ್ನು ಭೀಮನು ಸಂಹರಿಸುವುದರಿಂದ ಭೀಮನಿಗೆ ಕೀರ್ತಿ ಬರುತ್ತದೆ. ಜೊತೆಗೆ ಸ್ವಧರ್ಮನಿರ್ವಹಣದಿಂದ ಧರ್ಮಿಷ್ಠನೆಂದೂ ಖ್ಯಾತನಾಗುವನು. ಅವನಿಂದಾಗಿ ನಮಗೂ ಕೀರ್ತಿಧರ್ಮಗಳು ಲಭಿಸುವವೆಂಬುದೇ ಕುಂತಿಯ ಆನಂದಕ್ಕೆ ಕಾರಣವೆಂದು ನಿರ್ಣಯಾಚಾರ್ಯರು ಸ್ಪಷ್ಟಪಡಿಸಿದ್ದಾರೆ.

ಕುಂತಿಯು ಸಂತಸದಿಂದ "ವಿಪ್ರವರ್ಯ! ನನಗೆ ಐದು ಜನಪುತ್ರರಿದ್ದಾರೆ. ಅವರಲ್ಲೊಬ್ಬನು ಮಾನವರಿಗೆ ಶತ್ರುವಾದ ಬಕನಿಗೆ ಬಲಿಯಾಗಲಿ" ಎನಲು, ಬ್ರಾಹ್ಮಣನು "ತಾಯಿ, ನಿನ್ನ ಮನೋಧಾರ್ಢ್ಯ ನಿಜವಾಗಿ ಆಶ್ಚರ್ಯಕರವಾಗಿದೆ. ಆದರೆ ಅಮ್ಮಾ, ನಿನ್ನ ಮಗನನ್ನು ಬಲಿಕೊಟ್ಟು ನಾನು ಪಾಪಕ್ಕೆ ಗುರಿಯಾಗಬಯಸುವುದಿಲ್ಲ" ಎಂದನು. ಕುಂತಿಯು "ದ್ವಿಜವರ್ಯ, ನನ್ನ ಪುತ್ರನಿಗೆ ಇಂದ್ರಾದ್ಯಧೃಷ್ಯ ದಿಕ್ಪಾಲಕರಿಂದಲೂ ಸಹಿಸಲಸದಳವಲ್ಲದ ವಿದ್ಯೆಯಿದೆ. ಗುರುಗಳು ಆಜ್ಞಾಪಿಸಿದರೂ ನನ್ನ ಮಗನು ಅದನ್ನು ಮಹಾಸಂಕಟಕಾಲದಲ್ಲೂ ಉಪಯೋಗಿಸುವುದಿಲ್ಲ (ಅಂದರೆ ಅವನು ವಿದ್ಯೋಪಜೀವಿಯಲ್ಲ) ಹೀಗೆ ಅವನು ತನ್ನ ವಿದ್ಯೆಯನ್ನು ಉಪಯೋಗಿಸಿಕೊಳ್ಳದಿದ್ದರೂ ದೇವತೆಗಳಾಗಲೀ, ದೈತ್ಯರಾಗಲಿ ಅವನನ್ನು ಸಂಹರಿಸಲಾರರು. ಅವನು ವಜ್ರಕಾಯನಾಗಿರುವುದರಿಂದ ಬಕನಿಗೆ ಬಲಿಯಾಗಿ ಹೋದರೂ ಅವನಿಗಾವ ಭಯವೂ ಇಲ್ಲ. ನೀವು ಯೋಚಿಸದೆ ಆಹಾರಾದಿಗಳನ್ನು ಸಿದ್ಧಪಡಿಸಿರಿ. ನನ್ನ ಪುತ್ರನನ್ನು ಕರೆತರುತ್ತೇನೆ" ಎಂದು ಹೇಳಿ ಮನೆಗೆ ಬಂದು ಎಲ್ಲ ವಿಚಾರವನ್ನೂ ಭೀಮಸೇನನಿಗೆ ಹೇಳಿದಳು. ಧರ್ಮಕಾರ್ಯ ಮಾಡಲು ಅವಕಾಶ ದೊರಕಿದ್ದಕ್ಕಾಗಿ ಭೀಮನು ಹರ್ಷಿಸಿದನು. ಅದೇ ಸಮಯಕ್ಕೆ ಧರ್ಮರಾಜಾದಿಗಳು ಮನೆಗೆ ಬಂದರು. ಭೀಮನು ಸಂತೋಷದಿಂದಿರುವುದನ್ನು ನೋಡಿ ಧರ್ಮರಾಜನು "ಅಮ್ಮಾ, ಭೀಮನಿಂದು ಆನಂದದಿಂದಿರಲು ಕಾರಣವೇನು?" ಎನಲು ಕುಂತಿಯು ಎಲ್ಲ ವಿಚಾರಗಳನ್ನು ತಿಳಿಸಿದಳು. ಆಗ ಧರ್ಮರಾಜನು ಚಿಂತಾಕ್ರಾಂತನಾಗಿ "ತಾಯಿ, ಎಂಥ ಕಾರ್ಯ ಮಾಡಿದೆ! ಯಾರ ಭುಜಬಲಪರಾಕ್ರಮವನ್ನು ನಂಬಿ ನಾವು ನಮ್ಮ ಶತ್ರು ಸಂಹಾರಪೂರ್ವಕವಾಗಿ ನಮ್ಮ ರಾಜ್ಯವನ್ನು ಪಡೆಯಲಾಶಿಸಿ ಜೀವಿಸುತ್ತಿರುವೆವೋ ಅಂತಹ ಭೀಮನನ್ನು ಬಕನಿಗೆ ಬಲಿಯಾಗಿ ನೀಡಲು ನೀನು ಅದೆಂತು ಸಮ್ಮತಿಸಿದೆಯಮ್ಮಾ!" ಎಂದನು.

ಮಗನ ಮಾತು ಕೇಳಿ ಮಾತಾ ಕುಂತಿಯು "ಧರ್ಮನಂದನ! ನಮ್ಮ ಭೀಮನನ್ನು ದೇವತೆಗಳು, ರಾಕ್ಷಸರು ಇವರ್‍ಯಾರು ಸಂಹರಿಸಲು ಸಾಧ್ಯವಿಲ್ಲ. ನಾನಿವನನ್ನು ಪ್ರಸವಿಸಿದ ಕೆಲದಿನಗಳಲ್ಲಿಯೇ ಒಂದು ದಿನ ಇವನು ನನ್ನ ಕೈಜಾರಿ ಶತಶೃಂಗ ಪರ್ವತದ ಮೇಲೆ ಬಿದ್ದನು. ಆಗ ಆ ಪರ್ವತವೇ ನುಚ್ಚು ನೂರಾಯಿತು. ಇವನ ಕೂದಲೂ ಕೊಂಕಲಿಲ್ಲ. ಇವನು ಸಾಕ್ಷಾತ್ ವಾಯುದೇವನ ಮಾನವಾವತಾರನಾಗಿದ್ದಾನೆ. ಇಂತಹ ನಮ್ಮ ಭೀಮನನ್ನು ಕೊಲ್ಲುವ ಬಲ ಮತ್ತಾರಿಗಿದೆ? ಖಂಡಿತ ಯಾರಿಗೂ ಇಲ್ಲ. ಆದುದರಿಂದ ನೀನು ಚಿಂತಿಸಬೇಡ" ಎಂದು ಸಮಾಧಾನ ಹೇಳಿದಳು. ಆಗ ಧರ್ಮರಾಜನು "ಸರಿ, ಹಾಗೆಯೇ ಆಗಲಿ" ಎಂದು ಸಮ್ಮತಿಸಿದನು. ಭೀಮನು ಭಕ್ಷ್ಯಭೋಜ್ಯಗಳಿಂದ ತುಂಬಿದ ಬಂಡಿಯಲ್ಲಿ ಕುಳಿತು ಬಕಾಸುರನ ಬಳಿಗೆ ಹೊರಟನು.

ಭೀಮಸೇನನು ಬಕಾಸುರನಿರುವ ವನದ ಸಮೀಪಕ್ಕೆ ಹೋಗುತ್ತಿರುವಾಗ ಪರ್ವತಾಕಾರವಾದ ಅನ್ನವನ್ನೂ, ಸಕಲಭಕ್ಷ್ಯಗಳು, ಪರಮಾನ್ನ, ಮೊಸರು, ಜೇನುತುಪ್ಪ, ತುಪ್ಪ ಮುಂತಾದ ಎಲ್ಲಾ ಆಹಾರವನ್ನೂ ತಾನೆ ಭುಂಜಿಸಲಾರಂಭಿಸಿದನು. ಅದನ್ನು ಕಂಡು ಬಕಾಸುರನು ಕ್ರೋಧೋನ್ಮತ್ತನಾಗಿ ಭೀಮನನ್ನು ಸಂಹರಿಸಲು ಒಂದು ವೃಕ್ಷವನ್ನು ಬುಡಸಹಿತ ಕಿತ್ತಿ ಧಾವಿಸಿಬಂದು ಭೀಮನನ್ನು ಹೊಡೆಯಹತ್ತಿದನು. ಭೀಮನು ಅಸುರನ ಹೊಡತವನ್ನು ಎಡಗೈನಿಂದ

ನಿವಾರಿಸುತ್ತಾ ಬಕನನ್ನು ನೋಡಿ ಮಂದಹಾಸ ಬೀರುತ್ತಾ ಹಾಲನ್ನು ಆಪೋಶನ ಮಾಡಿ, ಮುಖ-ಹಸ್ತಗಳನ್ನು ತೊಳೆದುಕೊಂಡು ಮೇಲೆದ್ದು, ದೊಡ್ಡದೊಡ್ಡ ವೃಕ್ಷ-ಪರ್ವತಗಳಿಂದ ಬಕಾಸುರನೊಡನೆ ಯುದ್ಧ ಮಾಡಿದನು. ಇಬ್ಬರೂ ಪರಸ್ಪರ ಭಯಂಕರವಾಗಿ ಹೋರಾಡಹತ್ತಿದರು. ಅನಂತರ ಭೀಮನು ಬಕಾಸುರನನ್ನು ತನ್ನ ಬಾಹುಬಲದಿಂದ ಹಿಡಿದು ನೆಲಕ್ಕಪ್ಪಳಿಸಿ ಮರ್ದಿಸಲಾರಂಭಿಸಿದನು. ಭೀಮನು ಪಾಪಿಯಾದ ಬಕಾಸುರನ ಒಂದು ಪಾದವನ್ನು ತನ್ನ ಅಂಗಾಲಿನಿಂದ ಒತ್ತಿ ಹಿಡಿದು ಅವನ ಮತ್ತೊಂದು ಕಾಲನ್ನು ಬಲವಾಗಿ ಎಳೆದು ಸೀಳಿಹಾಕಿದನು. ಹರಿದ್ವೇಷಿಯಾದ ಬಕಾಸುರನು ಪುನರಾವರ್ತಿ ರಹಿತವಾದ ಅಂಧತಮಸ್ಸಿನಲ್ಲಿ ಬಿದ್ದನು. ಯಾವ ಬಕಾಸುರನು ಜರಾಸಂಧ, ನರಕಾಸುರರಿಗೂ ವಶ-ನಾಗಲಿಲ್ಲವೋ ಮತ್ತು ರಾಮಾವತಾರ ಕಾಲದಲ್ಲಿ ಭರತನಿಗೂ ಬಗ್ಗಲಿಲ್ಲವೋ, ಅಂತಹ ಬಕಾಸುರನನ್ನು ಅವಿನಾಶಿಯಾದ ಮಹಾಬಲಶಾಲಿಯಾದ ಭೀಮನು ಸಂಹರಿಸಿ ಬಂಡಿಯ ಮುಂಭಾಗದಲ್ಲಿಟ್ಟು ತಂದು ಅವನ ಮೃತದೇಹವನ್ನು ಪಟ್ಟಣದ ಮಹಾದ್ವಾರದಲ್ಲಿಯೇ ಇಟ್ಟು, ಸ್ನಾನ ಮಾಡಿ ಮನೆಗೆ ತೆರಳಿದನು. ಮನೆಗೆ ಬಂದ ಭೀಮನನ್ನು ಕುಂತಿ, ಧರ್ಮರಾಜಾದಿ ಸಹೋದರರು ಸ್ವಾಗತಿಸಿ, ಭೀಮನು ಮಹತ್ಕಾರ್ಯವನ್ನು ಲೀಲೆಯಿಂದಲೇ ನೆರವೇರಿಸಿದ ವಿಚಾರವರಿತು ಮುದಿಸಿದರು.

ಇತ್ತ ಊರ ಹೊರ ದ್ವಾರದಲ್ಲಿ ಬಿದ್ದಿರುವ ಬಕಾಸುರನನ್ನು ಕಂಡು ಪುರನಿವಾಸಿಗಳು ಭಯಗೊಂಡರು. ತರುವಾಯ ಅಸುರನು ನಿಶ್ಚಲನಾಗಿ ಬಿದ್ದಿರುವುದನ್ನು ಗಮನಿಸಿ ಅವನು ಮೃತನಾಗಿರುವನೆಂದು ಆನಂದಿಸಿ ಸಂಭ್ರಮದಿಂದ ಬ್ರಾಹ್ಮಣನ ಮನೆಗೆ ಬಂದು, ಆತನಿಂದ ಭೀಮಸೇನನು ಬಕಾಸುರನನ್ನು ಸಂಹರಿಸಿದ ವಿಚಾರವರಿತು. ಭೀಮನನ್ನು ಶ್ಲಾಘಿಸಿ ಬಕನಿಗೆ ಕೊಡುತ್ತಿದ್ದ ಅನ್ನರೂಪ ಕಪ್ಪವನ್ನು ಭೀಮಸೇನನಿಗೆ ನೀಡಿದರು. ಭೀಮನು ಅದನ್ನು ಆ ಗ್ರಾಮದ ಶ್ರೀನೃಸಿಂಹರೂಪಿ ಹರಿಗೆ ಅರ್ಪಿಸಿ ಕೃತಾರ್ಥನಾದನು. ಪಾಂಡವರು ಪುರಜನರ ಗೌರವಾದರಗಳಿಗೆ ಪಾತ್ರರಾಗಿ ಏಕಚಕ್ರನಗರದಲ್ಲಿ ಸಂತೋಷದಿಂದ ಕಾಲಕಳೆಯಹತ್ತಿದರು.

ಒಂದು ದಿನ ಬ್ರಹ್ಮರುದ್ರಾದಿಗಳ ನಿಯಾಮಕರೂ ಜಗದ್ಗುರುಗಳೂ ಆದ ಶ್ರೀವೇದವ್ಯಾಸರು ಅಲ್ಲಿಗೆ ಆಗಮಿಸಿ ದ್ರೌಪದಿಯ ಸ್ವಯಂವರ ವಿಚಾರವನ್ನು ಪಾಂಡವರಿಗೆ ಅರುಹಿ ಸ್ವಯಂವರಕ್ಕೆ ಪಾಂಚಾಲನಗರಿಗೆ ಹೋಗುವಂತೆ ಆಜ್ಞಾಪಿಸಿ ತೆರಳಿದರು. ದ್ರೌಪದಿಯ ಸ್ವಯಂವರ ವಿಚಾರವರಿತು ಅನೇಕ ಬ್ರಾಹ್ಮಣರು ಸ್ವಯಂವರ ಕಾಲದಲ್ಲಿ ಬಹಳಷ್ಟು ಅನ್ನ-ದಾನದಕ್ಷಿಣೆಗಳು ದೊರಕುವುದೆಂದು ತಿಳಿದು ಪಾಂಚಾಲ ನಗರಕ್ಕೆ ಹೊರಟರು. ಬ್ರಾಹ್ಮಣವೇಷಧಾರಿಗಳಾದ ಪಾಂಡವರೂ ಅವರೊಡನೆ ಹರ್ಷಭರಿತರಾಗಿ ಪ್ರಯಾಣ ಮಾಡಿದರು.

ಈಗ ನಿರ್ಣಯಕಾರರು ದ್ರುಪದರಾಜನು ದ್ರೌಪದಿಯ ಸ್ವಯಂವರವನ್ನು ಏರ್ಪಡಿಸಿದ್ದರ ಹಿಂದಿದ್ದ ಅವನ ಮನೋಗತವನ್ನು ನಿರೂಪಿಸುತ್ತಾರೆ.

ದ್ರುಪದರಾಜನು ಪಾಂಡವರು ಲಾಕ್ಷಾಗೃಹ ದಹನದಿಂದ ಮೃತರಾದರೆಂಬ ವಾರ್ತೆಯನ್ನು ಕೇಳಿ ದುಃಖಿಸಿದ್ದನು. ದ್ರುಪದನು ಅರ್ಜುನನಿಗೆ ತನ್ನ ಮಗಳನ್ನು ವಿವಾಹ ಮಾಡಿಕೊಡಲಾಶಿಸಿ ಅದಕ್ಕೆ ಪುತ್ರಿಯನ್ನು ಪಡೆಯಬೇಕೆಂದು ಯಾಜೋಪಯಾಜರಿಂದ ಯಾಗ ಮಾಡಿಸಿದ್ದರಿಂದಲೂ, "ಪಾರ್ಥಾಯ ದಾತುಂ ಕನ್ಯಾ ಭೂಯತ್" ಎಂಬ ಮಂತ್ರದಿಂದ ಯಾಗ ಮಾಡಿಸಿದ್ದರಿಂದ ಅದೆಂದಿಗು ವ್ಯರ್ಥವಾಗದು. ಪಾಂಡವರು ಜೀವಿಸಿಯೇ ಇದ್ದಾರೆ. ವೇಷಾಂತರದಿಂದಿರಬಹುದು ಎಂದು ನಂಬಿದ್ದನು. ಅಂತೆಯೇ ಅರ್ಜುನನು ಬಂದೇ ಬರುತ್ತಾನೆ ಎಂದು ಭಾವಿಸಿ ಅರ್ಜುನನಿಗೆ ಕನ್ಯಾದಾನ ಮಾಡಬೇಕೆಂದೇ ಸ್ವಯಂವರವನ್ನು ಘೋಷಿಸಿದ್ದನು. ಈ ಸ್ವಯಂವರಕ್ಕಾಗಿ ದ್ರುಪದನು ಅರ್ಜುನನ ಹೊರತು ಬೇರಾರಿಂದಲೂ ಹೆದೆಯೇರಿಸಲು ಸಾಧ್ಯವಾಗದ ಶ್ರೇಷ್ಠವಾದ ಧನುಸ್ಸನ್ನು ಶ್ರೀರುದ್ರದೇವರ ವರದಿಂದ ಪಡೆದಿದ್ದನು.

ಇದೇ ಕಾಲಕ್ಕೆ ಪರಿಪೂರ್ಣ ಸ್ವಾಭಾವಿಕಜ್ಞಾನವುಳ್ಳ, ಸರ್ವಜ್ಞನಾದ ಶ್ರೀಕೃಷ್ಣನು ಪಾಂಡವರು ಜೀವಂತರಾಗಿರುವರೆಂದು ತಿಳಿದಿದ್ದರೂ, ಅವರು ಮೃತರಾದರೆಂಬ ವಾರ್ತೆಯನ್ನಾಲಿಸಿ ಬಾಂಧವರು ಮೃತರಾದಾಗ ಬಂಧುಗಳನ್ನು ಮಾತನಾಡಿಸಿ ಬರಲು ಹೋಗುವಂತೆ ಬಲರಾಮ ಸಹಿತನಾಗಿ ಹಸ್ತಿನಾಪುರಿಗೆ ಬಂದು ಭೀಷ್ಮರ ಹಾಗೂ ಕೌರವರನ್ನು ಮಾತನಾಡಿಸಿ, ದೈವಹೀನರಾದ ಪಾಂಡವರು ಮೃತರಾದರೆಂದು ದುಃಖವನ್ನು ನಟಿಸಿ, ಅವರನ್ನು ಮೋಸಗೊಳಿಸಿ, ಅವರನ್ನು ಸಾಂತ್ವನಗೊಳಿಸಿ ದ್ವಾರಕೆಗೆ ಹಿಂದಿರುಗಿದ್ದನು.

ಕೃಷ್ಣ ಬಲರಾಮರು ಹಸ್ತಿನಾವತಿಗೆ ಹೋದಾಗ ಇತ್ತ ದ್ವಾರಕೆಯಲ್ಲಿ ಕೃತಕರ್ಮನು ಶತಧನ್ವನನ್ನು ಏಕಾಂತದಲ್ಲಿ ಕರೆದು "ಶತಧನ್ವ, ಸತ್ರಾಜಿತ್ ರಾಜನು ಮೊದಲು ಶ್ಯಮಂತಕಮಣಿಯೊಡನೆ ಸತ್ಯಭಾಮೆಯನ್ನು ನಮಗೆ ವಿವಾಹ ಮಾಡಿ-ಕೊಡುವುದಾಗಿ ಹೇಳಿದ್ದನು. ನಂತರ ಅಕ್ರೂರನ ಸಲಹೆ ಮತ್ತು ಪ್ರೇರಣೆಯಂತೆ ನಮ್ಮನ್ನು ತಿರಸ್ಕರಿಸಿ ಕೃಷ್ಣನಿಗೆ ಸತ್ಯಭಾಮೆಯನ್ನಿತ್ತು ಲಗ್ನ ಮಾಡಿದನು. ಹೀಗೆ ನಮಗೆ ಅನ್ಯಾಯ ಮಾಡಿದ ಸತ್ರಾಜಿದ್ರಾಜನನ್ನು ನೀನು ಸಂಹರಿಸಿ ಶ್ಯಮಂತಕ ಮಣಿಯನ್ನು ಅಪಹರಿಸಿಕೊಂಡು ಬಂದುಬಿಡು. ಇದರಿಂದ ನಮಗೆ ಅವನು ಮಾಡಿದ ಅಪಮಾನಕ್ಕೆ ಪ್ರತೀಕಾರ ಮಾಡಿದಂತಾಗುವುದು" ಎಂದು ಹೇಳಿದನು. ಅದರಂತೆ ಶತಧನ್ವನು ಸತ್ರಾಜಿತ್ ರಾಜನನ್ನು ಸಂಹರಿಸಿ ಶ್ಯಮಂತಕಮಣಿಯನ್ನು ಅಪಹರಿಸಿಬಿಟ್ಟನು. ಶತಧನ್ವನಿಗೆ ಇಂತಹ ದುರ್ಬುದ್ಧಿಯು ಹೇಗೆ ಬಂದಿತು ಎಂದರೆ, ಪೂರ್ವದಲ್ಲಿ ಅವನು ದೈತ್ಯನಾಗಿದ್ದನು. ಈಗ ಶತಧನ್ವನಾಗಿ ಜನಿಸಿದ್ದಾನೆ. ಆದರಿಂದಲೇ ಅವನಿಗೆ ಸ್ವಾಭಾವಿಕವಾದ ದೈತ್ಯರ ಬುದ್ಧಿಯೇ ಉಂಟಾಯಿತೆಂದು ತಿಳಿಯಬೇಕು.

ತಂದೆಯಾದ ಸತ್ರಾಜಿತನು ಮೃತನಾದ್ದರಿಂದ ಆನಂದಸುಖಪೂರ್ಣಳಾಗಿದ್ದರೂ ಸತ್ಯಭಾಮೆಯು ಲೋಕ ವಿಡಂಬನೆ-ಗಾಗಿ ಬಹುದುಃಖಿಸಿದವಳಂತೆ ನಟಿಸಿದಳು. ಮತ್ತು ತಂದೆಯ ಶರೀರವನ್ನು ತೈಲಪಾತ್ರೆಯಲ್ಲಿಡಿಸಿ ಹಸ್ತಿನಾಪುರಿಗೆ ಶ್ರೀಕೃಷ್ಣನಿಗೆ ಸಕಲ ವಿಚಾರವನ್ನೂ ಹೇಳಿಕಳಿಸಿ ಕೃಷ್ಣನನ್ನು ಕರೆಸಿಕೊಂಡಳು. ಕೃಷ್ಣ ಬಲರಾಮರು ದ್ವಾರಕೆಗೆ ಬಂದು ಸತ್ಯಭಾಮೆಗೆ ಸಮಾಧಾನ ಹೇಳಿ ಸತ್ರಾಜಿತನ ಅಂತ್ಯಕ್ರಿಯಾದಿಗಳನ್ನು ನೆರವೇರಿಸಿದರು. ಕೆಲಕಾಲಾನಂತರ ದ್ರೌಪದಿಯ ಸ್ವಯಂವರ ವಾರ್ತೆಯನ್ನು ಕೇಳಿ ಕೃಷ್ಣನು ಬಲರಾಮನೊಡನೆ ಪಾಂಚಾಲ ನಗರಕ್ಕೆ ದಯಮಾಡಿಸಿದನು.

ಇತ್ತ ಅನೇಕ ಬ್ರಾಹ್ಮಣರ ಜೊತೆಗೆ ಪಾಂಚಾಲಪುರಿಗೆ ಪಾಂಡವರೂ ಹೊರಟರು. ಹೀಗೆ ಪ್ರಯಾಣ ಮಾಡುತ್ತಿರುವಾಗ ಪಂಚಪಾಂಡವರು, ಕುಂತಿದೇವಿ ಹೀಗೆ ಆರು ಜನರ ಮಧ್ಯದಲ್ಲಿ ವಿಸ್ತಾರವಾದ ಭುಜಗಳು, ವಿಶಾಲವಕ್ಷಸ್ಥಳ ಅತ್ಯಂತ ತೇಜಃಪುಂಜನಾಗಿ ಸಕಲ ಪುರುಷಲಕ್ಷಣಗಳಿಂದ ಶೋಭಿಸುತ್ತಿದ್ದ ಪವನನಂದನನಾದ ಭೀಮಸೇನನನ್ನು ನೋಡಿ ಬ್ರಾಹ್ಮಣರು "ಇವನು ದ್ರೌಪದಿಯನ್ನು ಪಡೆಯುವನು" ಎಂದು ಮಾತನಾಡಿಕೊಂಡರು. ಹಗಲು ರಾತ್ರಿ ಎನ್ನದೆ ಏಕ ಪ್ರಕಾರವಾಗಿ ಪ್ರಯಾಣಿಸುತ್ತಾ ಪಾಂಡವರು ಒಂದು ದಿನ ಗಂಗಾತೀರಕ್ಕೆ ಆಗಮಿಸಿದರು. ಗಂಗಾನದಿಯನ್ನು ದಾಟುವಾಗ ಬ್ರಾಹ್ಮಣರನ್ನು ರಕ್ಷಿಸಲು ಹಿಂದೆ ಭೀಮಸೇನನೂ, ಮುಂಭಾಗದಲ್ಲಿ ಅರ್ಜುನನೂ ಇರಲು ಮಧ್ಯದಲ್ಲಿ ಧರ್ಮರಾಜ-ಬ್ರಾಹ್ಮಣರು ಧೈರ್ಯವಾಗಿ ಗಂಗಾನದಿಗಿಳಿದು ಪ್ರಯಾಣಮಾಡ ಹತ್ತಿದರು. ಆಗ ಅರ್ಧರಾತ್ರಿಯಾಗಿತ್ತಾದ್ದರಿಂದ ಅರ್ಜುನನು ಕೈಯಲ್ಲಿ ಜ್ವಲಿಸುವ ಕೊಳ್ಳಿಯನ್ನು ಹಿಡಿದು ಮಾರ್ಗದರ್ಶನ ಮಾಡುತ್ತಿರಲು ನದಿಯನ್ನು ದಾಟಹತ್ತಿದರು.

ಆಗ ನೀರಿನಲ್ಲಿದ್ದ ಗಂಧರ್ವರಾಜನಾದ ಚಿತ್ರರಥನು, ಪಾಂಡವರು ಅನೇಕ ಬ್ರಾಹ್ಮಣರೊಡನೆ ಬರುತ್ತಿರುವಾಗ ಕತ್ತಲಾಗಿದ್ದುದರಿಂದ, ಬ್ರಾಹ್ಮಣರು ಸ್ವಲ್ಪ ದೂರದಲ್ಲಿದ್ದುದರಿಂದಲೂ, ಸ್ವಲ್ಪ ನಿದ್ರೆಯಿಂದಾಗಿಯೂ ಅರ್ಜುನಾದಿಗಳನ್ನು ಕಂಡು ಇವರು ಬ್ರಾಹ್ಮಣರಲ್ಲ, ಕ್ಷತ್ರಿಯರೆಂದರಿತು ಅವರನ್ನು ಹೆದರಿಸಲು ಬಂದನು. ಬ್ರಾಹ್ಮಣರನ್ನು ಗಂಧರ್ವ, ಯಕ್ಷ ಮೊದಲಾದವರಿಗೆ ಬಾಧಿಸಲು ಸಾಧ್ಯವಿಲ್ಲವೆಂದು ಇದರಿಂದ ವ್ಯಕ್ತವಾಗುವುದು. ಅರ್ಜುನನನ್ನು ಚಿತ್ರರಥನು "ಯಾರು

ನೀನು? ಮನುಷ್ಯ ಸಂಚಾರಕ್ಕೆ ನಿಷಿದ್ಧವಾದ ಕಾಲದಲ್ಲಿ ಗಂಗಾನದಿಗೆ ಬಂದಿರುವ ನಿಮ್ಮನ್ನು ಸಂಹರಿಸುತ್ತೇನೆ" ಎಂದು ಹೇಳಲು, ಅರ್ಜುನನು "ಎಲವೋ ಗಂಧರ್ವರಾಜ! ಅಸ್ತ್ರವಿದ್ಯೆಯಲ್ಲಿ ನಿಪುಣರಾದ ನಮಗೆ ನಿನ್ನಿಂದಾವ ಭಯವೂ ಇಲ್ಲ. ನಿನ್ನ ಸಕಲ ಸೈನ್ಯವನ್ನೂ ಅಸ್ತ್ರ ವಿದ್ಯಾವಿಶಾರದನಾದ ನನ್ನ ಮೇಲೆ ಪ್ರಯೋಗಿಸುವುದರಿಂದ ಅದು ಸಮುದ್ರದ ನೊರೆಯಂತೆ ಅಪ್ರಯೋಜಕವಾಗುವುದೆಂದು ತಿಳಿ" ಎಂದನು. ಆಗ ಶ್ರೇಷ್ಠ ರಥದಲ್ಲಿ ಕುಳಿತಿರುವ ದೇವೇಂದ್ರನ ಸೇವಕನಾದ ಚಿತ್ರರಥನು ಅರ್ಜುನನ ಮೇಲೆ ಶರವರ್ಷ ಮಾಡುತ್ತಾ ಅವನಿಗಭಿಮುಖವಾಗಿ ಧಾವಿಸಿ ಬಂದನು. ಇಂದ್ರನಂದನನಾದ ಧನಂಜಯನು ಆಗ ಕರದಲ್ಲಿದ್ದ ಬೆಂಕಿಯ ಕೊಳ್ಳಿಯಲ್ಲಿ ಆಗ್ನೇಯಾಸ್ತ್ರವನ್ನು ಅಭಿಮಂತ್ರಿಸಿ ಬಿಟ್ಟನು. ಅದರಿಂದ ಚಿತ್ರರಥನ ರಥವು ಸುಟ್ಟು ಬೂದಿಯಾಯಿತು. ಅರ್ಜುನನು ಬೆಂಕಿಯಿಂದ ಆವೃತನಾಗಿದ್ದ ಚಿತ್ರರಥನ ಕೇಶಗಳನ್ನು ಹಿಡಿದೆಳೆದನು. ಅದರಿಂದ ಭಯಗೊಂಡ ಗಂಧರ್ವರಾಜನು ಧರ್ಮರಾಜ ಮತ್ತು ಅರ್ಜುನರಿಗೆ ಶರಣಾಗಿ ರಕ್ಷಿಸುವಂತೆ ಪ್ರಾರ್ಥಿಸಿದನು. ಆಗ ಪಾರ್ಥನು ಆಗ್ನೇಯಾಸ್ತ್ರವನ್ನು ಹಿಂತೆಗೆದುಕೊಂಡನು. ಬೆಂಕಿಯಿಂದ ಕಪ್ಪಾಗಿ ಹೋಗಿದ್ದ ಚಿತ್ರರಥನು ಅಂದಿನಿಂದ "ಅಂಗಾರ ವರ್ಣ"ನೆಂದು ಹೆಸರು ಪಡೆದನು. ಆಗ ಗೌರವರ್ಣನಾಗಿದ್ದ ಆ ಗಂಧರ್ವನು ಅಂಗಾರವರ್ಣನೆಂಬ ಹೆಸರಿನಿಂದ ಅರ್ಜುನನ ಮಿತ್ರನಾಗಿ ಆಗ್ನೇಯಾಸ್ತ್ರವನ್ನು ಬಲ್ಲವನಾಗಿದ್ದರೂ, ಅರ್ಜುನನಿಂದ, ಮತ್ತೊಬ್ಬರಿಂದ ಹೊಂದಲಸದಳವಾದ ಮಹಾಸ್ತ್ರವನ್ನು ಪಡೆದನಾದರೂ ಅದರಲ್ಲವನು ಪಾರ್ಥನಷ್ಟು ಪ್ರಜ್ಞಾವಂತನಾಗಲಿಲ್ಲ. ಅರ್ಜುನನು ಆಗ್ನೇಯಾಸ್ತ್ರವನ್ನು ಅತಿಶಯವಾಗಿ ಅಭ್ಯಾಸ ಮಾಡಿದ್ದನು. ಆದ್ದರಿಂದಲೇ ಅವನು ಗಂಧರ್ವರಾಜನಿಂದ ಪ್ರಾರ್ಥಿತನಾಗಿ ಆ ಅಸ್ತ್ರವನ್ನು ಉಪ-ದೇಶಿಸಿದನು. ಇದರಂತೆ ತಾನೂ ಆ ಗಂಧರ್ವನಿಂದ ಇತರರ ಕಣ್ಣಿಗೆ ಕಾಣದಾಗುವ ಅದೃಶ್ಯವಿದ್ಯೆಯನ್ನು ಕಾಲಾಂತರದಲ್ಲಿ ಪಡೆಯುವುದಾಗಿ ಹೇಳಿ, ಮುಂದೆ ಚಿತ್ರರಥ (ಅಂಗಾರವರ್ಣ)ನಿಂದ ಅದನ್ನು ಪಡೆದನು. ಅರ್ಜುನನಲ್ಲಿರುವ ಅಸ್ತ್ರಶಸ್ತ್ರ-ವಿದ್ಯೆಯು ಅತ್ಯಂತ ಶ್ರೇಷ್ಠವಾದುದು. ಆ ಗಂಧರ್ವನಲ್ಲಿನ ವಿದ್ಯೆಯು ಎಲ್ಲ ರೀತಿಯಿಂದ ಕನಿಷ್ಠವು. ಇಬ್ಬರ ವಿದ್ಯೆಯೂ ಸರಿಸಮಾನವಾಗಿದ್ದಲ್ಲಿ ಅದನ್ನು ಪರಸ್ಪರ ಪಡೆಯಬಹುದು. ಶ್ರೇಷ್ಠವಿದ್ಯೆಯನ್ನು ಉಪದೇಶಿಸಿ ಸಾಮಾನ್ಯ ವಿದ್ಯೆಯನ್ನು ಬೇರೊಬ್ಬನಿಂದ ಉಪದೇಶ ಪಡೆದರೆ ಅದು ವ್ಯಾಪಾರಿಗಳಂತೆ ಪರಸ್ಪರ ವಿನಿಮಯ ಮಾಡಿಕೊಂಡಂತಾಗುವುದರಿಂದ ಪುಣ್ಯಪ್ರದವಾಗುವುದಿಲ್ಲ. ಅಂತೆಯೇ ಅರ್ಜುನನು ಧರ್ಮದೃಷ್ಟಿಯಿಂದಲೇ ಅಂಗಾರವರ್ಣನಿಗೆ ಶ್ರೇಷ್ಠವಾದ ಅಸ್ತ್ರವನ್ನು ಉಪದೇಶಿಸುವ ಮೂಲಕ ದಾನ ಮಾಡಿದನು. ಕಾಲಾಂತರದಲ್ಲಿ ಸಾಮಾನ್ಯವಾದ ಗಂಧರ್ವವಿದ್ಯೆಯನ್ನು ಉಪದೇಶಿಸುವುದಾಗಿ ಚಿತ್ರರಥನಿಂದ ವಚನ ಪಡೆದನು ಎಂದು ತಿಳಿಯಬೇಕು.

ಚಿತ್ರರಥನು ಅರ್ಜುನನಿಂದ ಅವರ ವಿಚಾರಗಳೆಲ್ಲವನ್ನು ತಿಳಿದು ಅವರಿಗೆ ಶ್ರೇಯಸ್ಸನ್ನು ಬಯಸಿ ಅರ್ಜುನಾದಿ ಪಾಂಡವರಿಗೆ ಹೀಗೆ ಹೇಳಿದನು. "ಧರ್ಮರಾಜ! ಧೌಮ್ಯಋಷಿಗಳನ್ನು ನೀವು ನಿಮ್ಮ ಪುರೋಹಿತರನ್ನಾಗಿ ಮಾಡಿಕೊಳ್ಳಿರಿ. ಅದರಿಂದ ನಿಮಗೆ ಬಹಳ ಶ್ರೇಯಸ್ಸಾಗುವುದು. ನಿಮಗೆ ನಾನು ದಿವ್ಯಾಶ್ವಗಳನ್ನು ತಂದುಕೊಡುತ್ತೇನೆ. ಅದೂ ನಿಮಗೆ ಅತ್ಯಂತ ಉಪಕಾರಕವಾಗುವುದು" ಎಂದು ಹೇಳಿ ಚಿತ್ರರಥನು ಸ್ವರ್ಗಕ್ಕೆ ತೆರಳಿದನು. ಅನಂತರ ವಿಪ್ರವೇಷದಲ್ಲಿದ್ದ ಪಾಂಡವರು ತಾಯಿ ಕುಂತಿದೇವಿಯೊಡನೆ, ಬ್ರಾಹ್ಮಣರಿಂದ ಸಹಿತರಾಗಿ ಪಾಂಚಾಲ ನಗರಕ್ಕೆ ಬಂದು ಸೇರಿದರು. ಮತ್ತು ಓರ್ವ ಕುಂಬಾರನ ಮನೆಯಲ್ಲಿ ತಂಗಿದರು. ಆ ನಂತರ ಪಾಂಚಾಲ ನಗರದಲ್ಲಿ ಅತ್ಯಂತ ಸುಂದರವಾಗಿ ಅಲಂಕೃತವಾದ, ಅನೇಕ ರಾಜಾಧಿರಾಜರಿಂದ ಶೋಭಾಯಮಾನವಾದ ರಾಜಸಭೆಯನ್ನು ನೋಡಿ ಆನಂದಿಸಿ ಬ್ರಾಹ್ಮಣರಿಗಾಗಿ ವ್ಯವಸ್ಥೆ ಮಾಡಲ್ಪಟ್ಟ ಸ್ಥಳದಲ್ಲಿ ಆಸನಾಸೀನರಾದರು.

ಆಗ ಶ್ರೀರುದ್ರದೇವರು ಅನುಗ್ರಹಿಸಿದ ಎಂದಿಗೂ ಬಾಡದ ವಿನೂತನ ಕಮಲಮಾಲೆಯಿಂದ ಕೂಡಿದ ದ್ರೌಪದಿಯ ಕರವನ್ನು ಹಿಡಿದು ಅವಳ ಸೋದರನಾದ ಧೃಷ್ಟದ್ಯುಮ್ನನು ರಾಜಸಭೆಗೆ ಬಂದನು. ತರುವಾಯ ಅಲ್ಲಿದ್ದ ಒಬ್ಬೊಬ್ಬ ರಾಜರ ಕುಲ, ಪೌರುಷ, ಸಿರಿ, ಸಂಪತ್ತು, ಐಶ್ವರ್ಯಾದಿಗಳನ್ನು ವಿವರಿಸುತ್ತಾ ಆ ರಾಜರನ್ನು ದ್ರೌಪದಿಗೆ ಪರಿಚಯಮಾಡಿಕೊಟ್ಟನು.

ಅಗ್ನಿಯಂತೆ ದೇದೀಪ್ಯಮಾನ ಶರೀರವುಳ್ಳವನೂ, ಮೇಘಗಂಭೀರ ಧ್ವನಿಯುಳ್ಳವನೂ, ಅಗ್ನಿಯ ಅವತಾರನೂ ಆದ ಧೃಷ್ಟದ್ಯುಮ್ನನು ದ್ರೌಪದೀ ದೇವಿಯ ಸ್ವಯಂವರಕ್ಕೆ ಪಣವಾಗಿರಿಸಿದ್ದ ಐದು ಬಾಣಗಳಿಂದ ಸಹಿತವಾದ ಮಹಾಧನುಸ್ಸನ್ನು ಸಭಾಮಧ್ಯದಲ್ಲಿ ಸ್ಥಾಪನೆ ಮಾಡಿಸಿ, ಸಮಸ್ತರಾದ ಮಹಾರಾಜರುಗಳನ್ನು ಕುರಿತು ಹೀಗೆ ಹೇಳಿದನು.

"ವೀರರಾದ ರಾಜಶ್ರೇಷ್ಠರೇ, ಉತ್ತಮವಾದ ಈ ಧನುಸ್ಸನ್ನು ಹೆದೆಯೇರಿಸಿ ಮೇಲೆ ಮರದಯಂತ್ರ(ಚಕ್ರ)ದ ಮೇಲಿರುವ ಮೀನನ್ನು ಕೆಳಗಿರುವ ನೀರಿನಲ್ಲಿ ನೋಡಿ ಮರದಯಂತ್ರದ ಛಿದ್ರದ ಮೂಲಕ ಈ ಬಾಣವನ್ನು ಬಿಟ್ಟು ಭೇದಿಸಿದವರನ್ನು ನನ್ನ ಸಹೋದರಿಯಾದ ಈ ದ್ರೌಪದಿದೇವಿಯು ವರಿಸುವಳು. ಮತ್ಸ್ಯಯಂತ್ರವನ್ನು ಭೇದಿಸಿದವರಿಗೆ ನನ್ನ ತಂಗಿಯನ್ನು ಲಗ್ನಮಾಡಿಕೊಡುತ್ತೇವೆ" ಎಂದು ಘೋಷಿಸಿದನು.

ಆಗ ಮಧೋದ್ಧತರಾದ ಶಸ್ತ್ರಾಸ್ತ್ರಕುಶಲರಾದ ಅನೇಕ ನೃಪತಿಗಳು 'ನಾ ಮುಂದೆ, ತಾ ಮುಂದೆ' ಎಂದು ಮೇಲೆದ್ದು ಬರತೊಡಗಿದರು. ಕೆಲವರು ಧನುಸ್ಸನ್ನು ನೋಡಿ ಅದನ್ನು ಹೆದೆಯೇರಿಸುವುದು ಸುಲಭವಲ್ಲವೆಂದರಿತು ಹಿಂದಿರುಗಿದರು. ಆಗೊಬ್ಬ ರಾಜನು ಧನುವನ್ನು ಅಲ್ಲಾಡಿಸಿ ಎತ್ತಲಾಗದೆ ತಲೆ ತಗ್ಗಿಸಿ ಹೊರಟು ಹೋದನು. ಅಷ್ಟರಲ್ಲಿ ಬಲಶಾಲಿಯಾದ ಶಿಶುಪಾಲನು ಮುಂದೆ ಬಂದು ಧನುವನ್ನೆತ್ತಿ ಹೆದೆಯೇರಿಸಲು ಪ್ರಯತ್ನಿಸಿ ಬಿಲ್ಲಿನ ಅಗ್ರಭಾಗವನ್ನೆತ್ತಿ ಉದ್ದಿನಷ್ಟು ಅಂತರವರಗೆ ಜ್ಯಾವನ್ನು ಸೆಳೆದಾಗ ಧನುವು ಅವನ ಕೈಗೆ ಅಟೋಪಿಸದೆ ಜಾರಿ ಅವನನ್ನೇ ಬಡಿದಾಗ "ಈ ಧನುವು ಅರ್ಜುನನ ಹೊರತು ಬೇರಾರಿಂದಲೂ ಎತ್ತಲಾಗದಂತಹ ರುದ್ರದೇವರ ವರವಿರುವುದರಿಂದ ಈ ಕಾರ್ಯವು ತನ್ನಿಂದಾಗದೆಂದು" ಮನಗಂಡು ಹೊರಟು ಹೋದನು. ಅನಂತರ ವೃದ್ಧನಾಗಿದ್ದರೂ ಅತಿ ಬಲಾಢ್ಯನಾಗಿದ್ದ ಮದ್ರದೇಶಾಧಿಪತಿಯಾದ ಶಲ್ಯರಾಜನು ಮುಂದೆ ಬಂದು ಶಿಶುಪಾಲನಕ್ಕಿಂತ ಹೆಚ್ಚಾಗಿ ಸಾಮರ್ಥ್ಯ ಬೀರಿ ಬಿಲ್ಲನ್ನು ಮೇಲೆತ್ತಿ ಬಗ್ಗಿಸಿ ಮುದ್ಗ ಪರಿಮಾಣದಷ್ಟು ಅಂತರವಿರುವಾಗ ಜ್ಯಾಬಂಧನ ಮಾಡಲಾಗದೆ ಅದರಿಂದ ತಾಡಿತನಾಗಿ ಈ ಧನುರಾರೋಪಣವು ತನ್ನಿಂದಾಗದೆಂದರಿತು ಸ್ಪರ್ಧೆಯಿಂದ ಹಿಂದೆಗೆದನು. ಆಗ ಸಭೆಯಲ್ಲಿದ್ದ ರಾಜರೆಲ್ಲರೂ ಕಡುನೊಂದರು. ಇಂತು ರಾಜರೆಲ್ಲರೂ ಪ್ರಯತ್ನಿಸಿ ಭಗ್ನಮನೋರಥರಾಗಿ ಶಾಂತರಾಗುತ್ತಿರುವಾಗ ಬಲವೀರ್ಯಗಳಿಂದ ಮದಿಸಿದ ಜರಾಸಂಧನು ಮುಂದೆ ಬಂದು ಕಾಲಿನಿಂದ ಧನುವನ್ನು ಒತ್ತಿಹಿಡಿದು ಬಲವಾಗಿ ಎಳೆದನು. ಆಗ ಧನುರಾರೋಪಣಕ್ಕೆ ಸಾಸುವೆಕಾಳಿನಷ್ಟು ಅಂತರವಿರುವಾಗ ಕಾಲಿನ ಬಿಗಿ ಜಾರಿ ಮುಗ್ಗರಿಸಿ ಮೊಳಕಾಲು ಬಗ್ಗಿ ಕೆಳಗುರುಳಿದನು. ಆಗಲೇ ಕೈಜಾರಿದ ಧನುವಿನಿಂದ ತಾಡಿತನಾಗಿ ಲಜ್ಜೆಯಿಂದ ಯಾರಿಗೂ ಮುಖ ತೋರಿಸಲಾಗದೆ ತನ್ನ ರಾಜ್ಯಕ್ಕೆ ಹೊರಟುಹೋದನು.

ಹೀಗೆ ಜರಾಸಂಧನು ಭಗ್ನಮನೋರಥನಾಗಿ ಹೊರಟುಹೋದುದನ್ನು ಕಂಡು ಅನೇಕ ಅರಸರು ತಾವೂ ಅವಮಾನಿತರಾಗ ಬಯಸದೆ ಅವನಂತೆಯೇ ಸಭೆಯಿಂದ ಹೊರಟು ಹೋದರು. ಆ ನಂತರ ಕರ್ಣನು ದುರ್ಯೋಧನನಿಗಾಗಿ ಪಾಂಚಾಲಿಯನ್ನು ಜಯಿಸಲಿಚ್ಛಿಸಿ ಸಾಕ್ಷಾತ್ ಪರಶುರಾಮದೇವರಿಂದಲೇ ಶಸ್ತ್ರಾಸ್ತ್ರ ವಿದ್ಯೆಯನ್ನು ಚೆನ್ನಾಗಿ ಅರಿತಿದ್ದರಿಂದ ಆ ಅಭ್ಯಾಸದ ಬಲದಿಂದ ಧನುಸ್ಸನ್ನೆತ್ತಿ ಹೆದೆಯೇರಿಸಿ ಜ್ಯಾಬಂಧನ ಮಾಡಲುದ್ಯುಕ್ತನಾಗಿ ಇನ್ನೇನು ಕೂದಲೆಳೆಯಷ್ಟು ಅಂತರವಿರುವಾಗ ಕೈಜಾರಿ ಬಿಲ್ಲಿನಿಂದ ತಾಡಿತನಾಗಿ ಹಿಂದಿರುಗಿದನು. ಆಗ ಬ್ರಾಹ್ಮಣರ ಮಧ್ಯೆ ಕುಳಿತಿದ್ದ ಚಂದ್ರಸೂರ್ಯರಂತೆ ರೂಪಕಾಂತಿಸಂಪನ್ನರಾದ ಭೀಮಾರ್ಜುನರು ಮೇಲೆದ್ದು ನಿಂತರು. ಆಗ ಬ್ರಾಹ್ಮಣರನೇಕರು ಅವರನ್ನು ತಡೆದರು. ಕೆಲವರು ಈ ಯುವಕರು ಮಹಾಪರಾಕ್ರಮಿಗಳು ಇವರು ದೇವತೆಗಳಿಗೆ ಸಮಾನರಾಗಿದ್ದಾರೆ ಆದುದರಿಂದ ಇವರು ಮತ್ಸ್ಯಯಂತ್ರವನ್ನು ಭೇದಿಸಲು ಉದ್ಯುಕ್ತರಾಗಿರುವುದು ಯುಕ್ತವೇ ಆಗಿದೆಯೆಂದು ಪ್ರೋತ್ಸಾಹಿಸಿದರು. ಆಗ ಉತ್ಕೃಷ್ಟ ಬಲಸಾಮರ್ಥ್ಯ ಯುಕ್ತರಾದ ಭೀಮಾರ್ಜುನರು ಮುಗುಳುನಗೆಯನ್ನು ಹೊರಸೂಸುತ್ತಾ ಶ್ರೀಕೃಷ್ಣನ ಮುಖಕಮಲವನ್ನು ನೋಡಿ ಅವನ ಸಂಜ್ಞಾರೂಪ ಆಜ್ಞೆಯನ್ನು ಪಡೆದು ಕೂಡಲೇ ಧನುವಿರುವಲ್ಲಿಗೆ ಬಂದರು.

ಅನಂತರ ಅರ್ಜುನನು ಮತ್ಸ್ಯಯಂತ್ರವನ್ನು ಭೇದಿಸಲು ಪ್ರಿಯ ಅಗ್ರಜನಾದ ಭೀಮಸೇನನ ಅಪ್ಪಣೆ ಪಡೆದು ವಿಭುವಾದ ಶ್ರೀಕೃಷ್ಣನಿಗೆ ಮನದಲ್ಲಿಯೇ ನಮಿಸಿ, ಲೀಲೆಯಿಂದಲೋ ಎಂಬಂತೆ ಆಯಾಸಲೇಶವೂ ಇಲ್ಲದಂತೆ ಆ ಮಹಾಧನುವನ್ನು ಮೇಲೆತ್ತಿ ಹಿಡಿದು ಹೆದೆಯೇರಿಸಿ ಜ್ಯಾಬಂಧನ ಮಾಡಿ ಕೆಳಗಿರುವ ನೀರಲ್ಲಿ ಪ್ರತಿಬಿಂಬಿಸಿರುವ ಮೇಲಿರುವ ಮತ್ಸ್ಯವನ್ನು, ಅದರ ಕೆಳಗಿರುವ, ತಿರುಗುತ್ತಿರುವ ಮರದಯಂತ್ರದ(ಚಕ್ರದ) ಛಿದ್ರ(ರಂಧ್ರ)ದ ಮೂಲಕ ಬಾಣಪ್ರಯೋಗ ಮಾಡಿ ಮತ್ಸ್ಯವನ್ನು ಭೇದಿಸಿದನು. ಆಗ ಕಂಜನಯನೆಯಾದ ಪಾಂಚಾಲ ರಾಜಕುವರಿಯಾದ ದ್ರೌಪದಿಯು ನವಕಮಲ-ಮಾಲಿಕೆಯನ್ನು ಸಡಗರದಿಂದ ಅರ್ಜುನನ ಕೊರಳಿಗೆ ಹಾಕಿದಳು. ರಾಜಶ್ರೇಷ್ಠನಾದ ಪಾಂಡುರಾಜನ ಪುತ್ರರಾದ ಭೀಮ-ಧನಂಜಯರು ದ್ರೌಪದಿಯೊಡನೆ ಶ್ರೀಕೃಷ್ಣನಿಗೆ ನಮಸ್ಕರಿಸಿ ಹೊರಟರು. ಆಗ ರಾಜಸಭೆಯಲ್ಲಿ ಅತ್ಯಂತ ಕ್ಷೋಭೆ-ಯುಂಟಾಯಿತು. ಸಮುದ್ರದಂತಿರುವ ನೃಪಶ್ರೇಷ್ಠರು ಕೋಪದಿಂದ ಭೀಮಾರ್ಜುನರನ್ನು ಎದುರಿಸಲು ಓಡಿಬಂದರು.

ಸ್ವಯಂವರಕ್ಕೆ ಬಂದಿದ್ದ ಯಾದವರು ಬ್ರಾಹ್ಮಣ ವೇಷದಲ್ಲಿದ್ದವರು ಪಾಂಡವರೆಂದು ತಿಳಿಯದೆ ಅವರನ್ನು ಎದುರಿಸಲು ಸಿದ್ಧರಾದಾಗ ಶ್ರೀಕೃಷ್ಣನು "ಎಲೈ ಯಾದವರೇ, ನಾವು ಸ್ವಯಂವರ ನಿರೀಕ್ಷಣೆಗೆ ಬಂದಿದ್ದೇವೆಯೇ ಹೊರತು ಕನ್ಯೆಯನ್ನು ಪಡೆಯಲಲ್ಲ. ಆದ್ದರಿಂದ ಧನುವನ್ನು ಮುಟ್ಟಬೇಡಿರಿ" ಎಂದು ಮೊದಲೇ ಹೇಳಿದ್ದರಿಂದ ಯಾರೂ ಸ್ಪರ್ಧೆಯಲ್ಲಿ ಭಾಗವಹಿಸಿರಲಿಲ್ಲ. ಈಗಲೂ ಕೃಷ್ಣನ ಇಂಗಿತವನ್ನರಿತು ಸುಮ್ಮನಾದರು. ಇತ್ತ ಭೀಮನು ತಮ್ಮ ಮೇಲೇರಿ ಬಂದ ರಾಜರನ್ನು ಕಂಡು ಅತ್ಯಂತ ಎತ್ತರವಾದ ಬಂದು ವೃಕ್ಷವನ್ನು ಕಿತ್ತಿ ರಾಜರಿಗದುರಾಗಿ ಬಂದನು. ಅದನ್ನು ನೋಡಿ ಆ ನೃಪತಿಗಳೆಲ್ಲರೂ ಪಲಾಯನ ಮಗ್ನರಾದರು. ಆಗ ಶ್ರೀಕೃಷ್ಣಪರಮಾತ್ಮನು ಮತ್ಸ್ಯಯಂತ್ರವನ್ನು ಭೇದಿಸಿದ ಬ್ರಾಹ್ಮಣ ವೇಷಧಾರಿಗಳನ್ನು ಬಲರಾಮನಿಗೆ ತೋರಿ "ಅಕೋ, ವೃಕ್ಷ ಹಿಡಿದವನೇ ನಮ್ಮ ಭೀಮಸೇನನು. ಅವನ ಜೊತೆಗಿರುವವನು ಅರ್ಜುನನು. ಅಲ್ಲಿ ಬ್ರಾಹ್ಮಣರ ಮಧ್ಯದಲ್ಲಿರುವವರೇ ಪಾಂಡುಪುತ್ರರಾದ ಯುಧಿಷ್ಠಿರ, ನಕುಲ ಮತ್ತು ಸಹದೇವರು – ಎಂದು ಪರಿಚಯ ಮಾಡಿಕೊಟ್ಟನು. ಪಾಂಡವರನ್ನು ಕಂಡು ಬಲಭದ್ರನು ಮುದಿಸಿದನು. ಸಾತ್ಯಕಿಯು ಆನಂದನಿರ್ಭರನಾಗಿ ಕತ್ತಿಯನ್ನು ಒರಿದು ಶ್ರೀಕೃಷ್ಣನ ಮುಂದೆ ಕುಣಿದಾಡಿದನು.

ಇಂತು ಎಲ್ಲ ಯಾದವರೂ ಸಂತೋಷಿಸುತ್ತಿರಲು ಭೀಮನ ದಾಳಿಯಿಂದ ಕೌರವರು ಮತ್ತಿತರ ಅರಸರು ಓಡಿ ಹೋಗುತ್ತಿರಲು ಕರ್ಣನು ಇಂದ್ರಸುತನಾದ ಅರ್ಜುನನಿಗೆ ಅಭಿಮುಖವಾಗಿ ಬಂದನು. ಶಲ್ಯರಾಜನು ಭೀಮಸೇನನ ಕಡೆಗೆ ಧಾವಿಸಿದನು.

ಬ್ರಾಹ್ಮಣ ವೇಷದಲ್ಲಿದ್ದ ಅರ್ಜುನನು ಪಣವನ್ನು ಗೆದ್ದುದರಿಂದ ಆನಂದಿಸಿದ ಬ್ರಾಹ್ಮಣರು ಭೀಮಾರ್ಜುನರೊಡನೆ ರಾಜರು ಯುದ್ಧಪ್ರವೃತ್ತರಾದುದನ್ನು ಗಮನಿಸಿ ಕೋಪದಿಂದ ದಂಡ, ವಸನ, ದರ್ಭೆ, ಕೃಷ್ಣಾಜಿನಗಳನ್ನು ಎಸೆಯ-ಲಾರಂಭಿಸಿದಾಗ ಬ್ರಾಹ್ಮಣರ ಶಾಪದಿಂದ ಕ್ಷತ್ರಿಯರಿಗೆ ಕೇಡಾಗಬಾರದೆಂದು ದ್ರುಪದರಾಜನು ಶ್ರೀಕೃಷ್ಣ ಮತ್ತು ಬ್ರಾಹ್ಮಣ-ರನ್ನು ಬೇಡುತ್ತಿರುವಾಗ ಭೀಮನು ಶಲ್ಯನ ಬಳಿಗೆ ಬಂದನು ಮತ್ತು ಕರದಲ್ಲಿದ್ದ ವೃಕ್ಷವನ್ನು ಕೆಳಗಿಟ್ಟು ತಮ್ಮ ಸೋದರ ಮಾವನೂ ಮದ್ರದೇಶಾಧಿಪತಿಯೂ ಆದ ಶಲ್ಯನನ್ನು ತನ್ನೆರಡು ಕರಗಳಿಂದ ಮೇಲೆತ್ತಿ ನಂತರ ಸೋದರಮಾವನೆಂಬ ಪ್ರೇಮದಿಂದ ಮತ್ತೆ ಕೆಳಗಿಳಿಸಿದನು. ಶಲ್ಯನು ಭೀಮನ ಪರಾಕ್ರಮವನ್ನರಿತು ಮುದಗೊಂಡು ತನ್ನ ರಾಜಧಾನಿಗೆ ನಿರ್ಗಮಿಸಿದನು.

ಇತ್ತ ಕರ್ಣನು ಅರ್ಜುನನಿದ್ದಲ್ಲಿಗೆ ಬಂದು ಯುದ್ಧ ಮಾಡಲಾರಂಭಿಸಿದನು. ಇಬ್ಬರೂ ಶ್ರೇಷ್ಠಧನ್ವಿಗಳು. ಅವರು ಪರಸ್ಪರ ತಮ್ಮ ಪ್ರಾವೀಣ್ಯವನ್ನು ತೋರುತ್ತಾ ಬಹುಕಾಲ ಶರಪ್ರಹಾರ ಮಾಡುತ್ತಾ ಕಾದಾಡಿದರು. ಕೊನೆಗೆ ಸೂರ್ಯಪುತ್ರನಾದ ಕರ್ಣನು ಅರ್ಜುನನ ಕೂರಂಬುಗಳ ಘಾತದಿಂದ ಕಡುನೊಂದು "ಎಲೈ ವೀರವರ! ನೀನಾರು? ಅರ್ಜುನನೋ

ಇಂದ್ರನೋ ಅಥವಾ ಬ್ರಾಹ್ಮಣ ಶ್ರೇಷ್ಠನೋ? ನೀನು ನಿಜವಾಗಿ ಆ ಮೂವರಲ್ಲೊಬ್ಬನಾಗಿರುವೆ. ಇಲ್ಲದೊಡೆ ನನ್ನೆದುರು ನಿಂತು ಹೋರಾಡಲು ಸಮರ್ಥವಾಗುತ್ತಿರಲಿಲ್ಲ" ಎಂದಾಗ ಅರ್ಜುನನು ನಕ್ಕು "ಕರ್ಣ! ನೀನು ಹೇಳಿದಂತೆ ಆ ಮೂವರಲ್ಲಿ ನಾನು ಒಬ್ಬನಾಗಿದ್ದೇನೆ. ನಿನಗೆ ಕಾದಾಡಲು ಶಕ್ತಿಯಿದ್ದರೆ ಬಾಣವನ್ನು ಬಿಡು. ಇಲ್ಲದೊಡೆ ಯುದ್ಧದಿಂದ ನಿವೃತ್ತನಾಗು" ಎಂದನು. ಆಗ ಕರ್ಣನು "ನಿನ್ನಂಥ ಬ್ರಾಹ್ಮಣನೊಡನೆ ಯುದ್ಧ ಮಾಡುವುದರಿಂದ ನನಗೇನೂ ಪ್ರಯೋಜನವಿಲ್ಲ" ಎಂದು ಹೇಳಿ ಸುಯೋಧನಾದಿಗಳೊಡನೆ ಹಸ್ತಿನಾಪುರಿಗೆ ತೆರಳಿದನು.

ಆ ತರುವಾಯ ಅರ್ಜುನ ಸಹಿತನಾದ ಭೀಮನು ದ್ರೌಪದಿಯನ್ನು ಕರೆದುಕೊಂಡು ಮನೆಗೆ ತೆರಳಿದನು. ಆಗ ಧರ್ಮರಾಜನೂ ನಕುಲ ಸಹದೇವರೊಡನೆ ಕುಂಬಾರನ ಮನೆಯತ್ತ ಹೊರಟು ಭೀಮಾದಿಗಳೊಡನೆ ಮನೆಗೆ ಬಂದನು. ತದನಂತರ ಪಾಂಡವರು "ಅಮ್ಮಾ ಭಿಕ್ಷೆ ತಂದಿರುವವು" ಎನಲು ಒಳಗಿದ್ದ ಕುಂತಿಯು "ಸಂತೋಷ, ನೀವು ಐದು ಜನರೂ ಭುಜಿಸಿರಿ" ಎಂದು ಹೊರಬಂದು, ದ್ರೌಪದಿಯನ್ನು ಕಂಡು ಆನಂದ ಮಾತಿಗೆ ಕಳವಳಗೊಂಡಳು. ಕುಂತಿದೇವಿಯು ಪ್ರಾಮಾದಿಕವಾಗಿ ಮಕ್ಕಳು ತಂದಿರುವ ವಸ್ತುವು ಭಿಕ್ಷೆಯೆಂದೇ ಭಾವಿಸಿ ಐವರೂ ಭುಜಿಸಿರಿ ಎಂದು ಹೇಳಿದ್ದರೂ ಕುಂತಿಯ ಮಾತೆಂದಿಗೂ ಅಸತ್ಯವಾಗುವುದಿಲ್ಲವಾದ್ದರಿಂದ ಮಾತೃವಚನದಂತೆ ನಾವೈವರೂ ದ್ರೌಪದಿಯನ್ನೆಂತು ವರಿಸುವುದೆಂದು ಪಾಂಡವರು ಚಿಂತಿಸಹತ್ತಿದರು. ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಶ್ರೀವಾಸುದೇವ ಕೃಷ್ಣನು ಸ್ನೇಹದಿಂದ ಆಗಮಿಸಿದನು. ಇಂತಿಷ್ಟೆಂದು ವರ್ಣಿಸಲಸದಳವಲ್ಲದ ಸ್ವರೂಪಭೂತ ಸಾಮರ್ಥ್ಯಶಾಲಿಯಾದ ಶ್ರೀಕೃಷ್ಣನು ಕುಂತೀದೇವಿಗೆ ನಮಿಸಿ ಪಾಂಡವರ ಕುಶಲಪ್ರಶ್ನೆ ಮಾಡಿ ದ್ವಾರಕಾಪುರಿಗೆ ಯಾದವರೊಡನೆ ಪ್ರಯಾಣ ಬೆಳೆಸಿದನು. ಅದೇ ವೇಳೆಗೆ ಯಾಜೋ-ಪಯಾಜರಿಂದ ಮತ್ಸ್ಯಯಂತ್ರವನ್ನು ಭೇದಿಸಿದವರು ಕ್ಷತ್ರಿಯರೆಂದು ಗೊತ್ತಾದರೂ ಅದನ್ನು ಸ್ಪಷ್ಟವಾಗಿ ತಿಳಿಯಲೋಸುಗ ಧೃಷ್ಟದ್ಯುಮ್ನನನ್ನು ಅಂದು ರಾತ್ರಿ ಕುಂಬಾರನ ಮನೆಗೆ ಕಳಿಸಿದನು. ಅವನು ರಹಸ್ಯವಾಗಿ ಅಡಗಿದ್ದು ಪಾಂಡವರನ್ನು ಕಂಡನು. ಭಿಕ್ಷಾನ್ನವನ್ನು ಭುಂಜಿಸುತ್ತಿರುವ ಪಾಂಡವರು ಮತ್ತು ಅವರೊಡನೆ ಸಂತೃಪ್ತ ಹೃದಯಳಾಗಿರುವ ತನ್ನ ಭಗಿನಿ-ಯಾದ ದ್ರೌಪದಿಯನ್ನು ನೋಡಿದನು. ನಂತರ ಪಾಂಡವರು ಕುಂತೀದೇವಿಗೆ ರಾಜಾಧಿರಾಜರೊಡನೆ ನಡೆಸಿದ ಯುದ್ಧ-ವಾರ್ತೆಯನ್ನು ವಿವರಿಸಿ ನಲಿಯುತ್ತಾ ಸಂತಸದಿಂದಿರುವುದನ್ನು ಗಮನಿಸಿ ಅವರು ಕ್ಷತ್ರಿಯರೆಂದು ತಿಳಿದು ಅರಮನೆಗೆ ಹಿಂದಿರುಗಿ ತಂದೆಗೆ ಸಕಲ ವಿಚಾರಗಳನ್ನೂ ಅರುಹಿದನು.

ಮರುದಿನ ಪ್ರಾತಃಕಾಲ ದ್ರುಪದರಾಜನ ಅಪ್ಪಣೆಯಂತೆ ರಾಜಪುರೋಹಿತನು ಪಾಂಡವರ ಬಳಿಗೆ ಹೋಗಿ ಜ್ಞಾನಿಯಾದ ಪವನ ಪುತ್ರನಾದ ಭೀಮಸೇನನಿಂದ ಪೂಜಿತನಾಗಿ ಅವರೆಲ್ಲರನ್ನೂ ರಾಜಮಂದಿರಕ್ಕೆ ಕರೆತಂದನು. ದ್ರುಪದರಾಜನು ಅವರನ್ನು ಆದರದಿಂದ ಸ್ವಾಗತಿಸಿ ಅವರು ಯಾರು ಎಂಬುದನ್ನು ಅರಿಯಲು ಬ್ರಾಹ್ಮಣಾದಿ ಸ್ವಭಾವಗಳಿಗೆ ಅನುಗುಣವಾಗಿ ವಿವಿಧ ಭಕ್ಷ್ಯಭೋಜ್ಯ ಪರಮಾನ್ನಾದಿಗಳು, ವಿವಿಧ ಶಸ್ತ್ರಾಸ್ತ್ರಗಳು, ಬಗೆಬಗೆಯ ವಸ್ತ್ರ-ಫಲಾದಿಗಳು, ವ್ಯವಸಾಯ ಯೋಗ್ಯವಾದ ನೇಗಿಲು ಮುಂತಾದವುಗಳಿದ್ದ ಪ್ರತ್ಯೇಕ ಪ್ರತ್ಯೇಕವಾದ ಮನೆಗಳಿಗೆ ಅವರನ್ನು ಕರೆತಂದು ನಿಮಗೆ ಬೇಕಾದುದನ್ನು ಸ್ವೀಕರಿಸಿರಿ ಎಂದನು. ಆಗ ಪಾಂಡವರು ಶಸ್ತ್ರಾಸ್ತ್ರಗಳಿದ್ದ ಮನೆಗೆ ಹೋಗಿ ಅವನ್ನು ಪರೀಕ್ಷಿಸಹತ್ತಿದರು. ಪಾಂಡವರ ಚೇಷ್ಟೆ, ಮಾತು, ಸ್ವರ, ಆಕಾರ, ವೀರ್ಯ, ಶೌರ್ಯ, ಪ್ರೌಢಿಮೆಗಳಿಂದ ಕಂಗೊಳಿಸುತ್ತಿರುವುದೇ ಮುಂತಾದವನ್ನು ಕಂಡು ಅವರು ಕ್ಷತ್ರಿಯರೆಂದು ತಿಳಿದು ದ್ರುಪದ ಮಹಾರಾಜನು ಧರ್ಮನಂದನನ ಬಳಿಗೆ ತಂದು "ಎಲೈ ಮಾನವೋತ್ತಮನೆ! ನೀವು ಯಾರು, ನಿಮ್ಮ ವರ್ಣವಾವುದು? ಸತ್ಯವಾಗಿ ಹೇಳಿರಿ" ಎಂದನು. ಧರ್ಮರಾಜನು ಮಂದಹಾಸ ಬೀರಿ "ರಾಜನ್, ಈಗ ನಿನ್ನ ಪ್ರಶ್ನೆಯಿಂದ ಪ್ರಯೋಜನವೇನು? ಸ್ವಯಂವರವನ್ನು ಉದ್ಘೋಷಿಸುವಾಗ ನಿನ್ನ ಪುತ್ರನು ಈ ಪಣಬಂಧದ ಸ್ವಯಂವರದಲ್ಲಿ ಬ್ರಹ್ಮ-ಕ್ಷತ್ರಿಯಾದಿ ಇಂತಹ ವರ್ಣದವರೇ ಭಾಗವಹಿಸಬೇಕೆಂದೇನೂ ಹೇಳಲಿಲ್ಲ. ಆದ್ದರಿಂದ ಈಗೇಕೆ

ಜಾತಿಯ ಬಗೆಗೆ ಪ್ರಶ್ನಿಸುತ್ತಿರುವೆ? ಮತ್ಸ್ಯಯಂತ್ರವನ್ನು ಭೇದಿಸಿದವರನ್ನು ನಿನ್ನ ಕುಮಾರಿಯು ಕರಪಿಡಿಯುವಳೆಂದು ರಾಜಕುಮಾರನು ಸಭೆಯಲ್ಲಿ ಸಾರಿದನು. ನನ್ನ ಸಹೋದರನು ಮತ್ಸ್ಯಯಂತ್ರವನ್ನು ಭೇದಿಸಿದ್ದಾನೆ" ಎಂದನು. ಕುಂತೀ-ದೇವಿಯೂ ಧರ್ಮರಾಜನ ಮಾತನ್ನೇ ಸಮರ್ಥಿಸಿ ಹೇಳಿದಳು. ಆದರೂ ದ್ರುಪದನು ಮತ್ತೆ 'ನೀವು ಯಾರು ಹೇಳಿ' ಎಂದು ಪ್ರಾರ್ಥಿಸಿದಾಗ ಯುಧಿಷ್ಠಿರನು "ನಾವು ಪಾಂಡವರು" ಎಂದು ಹೇಳಿ, ತಮ್ಮ ಸಮಸ್ತ ವೃತ್ತಾಂತವನ್ನೂ ನಿವೇದಿಸಿದನು. ಅದನ್ನು ಕೇಳಿ ದ್ರುಪದರಾಜನಿಗಾದ ಆನಂದ ಅವರ್ಣನೀಯ! ಸಂಭ್ರಮಾನಂದ-ತುಂದಿಲನಾದ ದ್ರುಪದರಾಜನು 'ನಾನು ಏರ್ಪಡಿಸಿದ ಸ್ವಯಂವರವು ಯಶಸ್ವಿಯಾಯಿತು. ನಾನು ಕೃತಾರ್ಥನಾದೆ. ಅರ್ಜುನನ ಹೊರತು ಬೇರಾರಿಗೂ ಅಸಾಧ್ಯವಾಗಿರಬೇಕೆಂದೇ ನಾನು ಈ ಮತ್ಸ್ಯಯಂತ್ರ ಭೇದನವೆಂಬ ಸ್ವಯಂವರ ಪಣವನ್ನು ಏರ್ಪಡಿಸಿದ್ದೆ. ಅರ್ಜುನನಿಗಾಗಿಯೇ ಈ ಸ್ವಯಂವರವನ್ನು ವ್ಯವಸ್ಥೆ ಮಾಡಿದ್ದೆ. ಧರ್ಮನಂದನ! ಅದೀಗ ಸಾರ್ಥಕವಾಯಿತು. ಸಂತೋಷ. ಧರ್ಮರಾಜ! ನೀನು, ಭೀಮ ಅಥವಾ ಅರ್ಜುನ ಇವರಲ್ಲಿ ನೀವು ಯಾರಾದರೊಬ್ಬರು ನನ್ನ ಕುಮಾರಿಯನ್ನು ವಿವಾಹವಾಗಿರಿ" ಎಂದನು. ಆಗ ಧರ್ಮರಾಜನು "ನಾವು ಐದು ಜನರೂ ದ್ರೌಪದಿಯನ್ನು ವಿವಾಹಮಾಡಿಕೊಳ್ಳಲು ನಿಶ್ಚಯಿಸಿದ್ದೇವೆ. ಐದು ಜನರು ಒಬ್ಬಳನ್ನು ಮದುವೆಯಾಗಲು ಪ್ರಮಾಣವಿಲ್ಲದಿದ್ದರೂ ನಾವೆಲ್ಲರೂ ಲಗ್ನವಾಗಬೇಕೆಂದು ನನ್ನ ಮನಸ್ಸಿಗೆ ತೋರಿದ್ದು ಅಧರ್ಮವಾಗಿರಬಾರದೇಕೆ? ಎಂದು ನೀನು ಪ್ರಶ್ನಿಸಬಹುದು. ನನ್ನ ಮನಸ್ಸು ಸರ್ವದಾ ಧರ್ಮದಲ್ಲಿಯೇ ಅಚಲವಾದುದು. ಅದು ಎಂದಿಗೂ ಅಧರ್ಮದಲ್ಲಿ ತೊಡಗುವುದಿಲ್ಲವಾದ್ದರಿಂದ ನನ್ನ ಮನಸ್ಸಿಗೆ ತೋರಿದ್ದು ಧರ್ಮ ಸಮ್ಮತವೆಂದೇ ನಾನು ನಂಬಿದ್ದೇನೆ ಮತ್ತು ಅದೇ ಪ್ರಮಾಣವೆಂದೂ ಭಾವಿಸುತ್ತೇನೆ. ನನ್ನ ಮನಸ್ಸಿನಲ್ಲಿ ಐವರೂ ವಿವಾಹವಾಗಬೇಕೆಂದು ತೋರಿದ್ದು ಪ್ರಮಾಣಯುಕ್ತವೂ ಧರ್ಮಸಮ್ಮತವೂ ಆಗಿದೆ" ಎಂದು ಹೇಳಿದನು. ಅವನ ಮಾತು ದ್ರುಪದ ಮತ್ತು ಧೃಷ್ಟದ್ಯುಮ್ನರ ಮನಸ್ಸಿಗೆ ಸರಿದೋರಲಿಲ್ಲ. ಐವರನ್ನೂ ತನ್ನ ಕುಮಾರಿಯು ವರಿಸುವುದು ಅವನಿಗಿಷ್ಟವಾಗದೆ ಮುಂದೇನು ಮಾಡುವುದೆಂದು ಚಿಂತಿಸುತ್ತಿರುವಾಗ ಪರಮಪೂಜ್ಯರಾದ ಶ್ರೀವೇದವ್ಯಾಸದೇವರು ಅಲ್ಲಿಗೆ ದಯಮಾಡಿಸಿದರು.

ಅಪರಿಮಿತವೂ, ಪರಿಪೂರ್ಣವೂ, ನಿತ್ಯವೂ ಆದ, ಹ್ರಾಸರಹಿತವಾದ ಸ್ವರೂಪಭೂತಗುಣಗುಣಮಂಡಿತರಾದ ಸಕಲಜಗನ್ಮಾನ್ಯರಾದ ಶ್ರೀವೇದವ್ಯಾಸರಿಗೆ ನಮಸ್ಕರಿಸಿ ಮಹಾರಾಜನು ಅವರನ್ನು ಉತ್ತಮಾಸನದಲ್ಲಿ ಕೂಡಿಸಿ ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಿ, ಅವರ ಅಪ್ಪಣೆ ಪಡೆದು ಎಲ್ಲರೂ ಅವರ ಬಳಿಯಲ್ಲಿ ಕುಳಿತರು.

ಆಗ ವೇದವ್ಯಾಸರು ದ್ರೌಪದಿಯು ಪಂಚದೇವಿಯರ ಸ್ವರೂಪಳಾದ್ದರಿಂದ ಅವಳನ್ನು ಪಾಂಡವರೈವರಿಗೂ ವಿವಾಹ ಮಾಡಿಕೊಡುವುದು ಅಧರ್ಮವಲ್ಲವೆಂದು ತಿಳಿಸುವುದಕ್ಕಾಗಿ, ಧರ್ಮರಾಜಾದಿಗಳ ಸ್ವರೂಪ ನಿರೂಪಣ ಪೂರ್ವಕವಾಗಿ ದ್ರುಪದ ರಾಜನನ್ನು ಕುರಿತು ಹೀಗೆ ಹೇಳಿದರು. – "ರಾಜನ್! ಪಾಂಡವರಿಗೆ ನಿನ್ನ ಪುತ್ರಿಯನ್ನು ವಿವಾಹಮಾಡಿಕೊಡು. ಕೇಳು, ಯಜ್ಞನಾಮಕಹರಿಯಾದ ಮೊದಲಿನ ಇಂದ್ರನ ದಶೆಯಿಂದ, ಆ ನಂತರ ನಾಸತ್ಯ-ದಸ್ರ ಸಹಿತರಾದ ಯಮವಾಯು, ಪುರಂದರಾದಿ ಮೊದಲಿನ ಇಂದ್ರರೇ, 'ಸಂಪ್ರತಿತನ!' ಅಂದರೆ ಈಗಿರುವ ಇಂದ್ರರು-ಇವರೇ ಪಂಚಪಾಂಡವರು. ಮೂಲರೂಪದ ಈ ಪಂಚಪಾಂಡವರ ಎಲ್ಲ ಸ್ತ್ರೀಯರೂ (ಪತ್ನಿಯರೂ) ಸಹ ಈಗ ಒಂದೇ ಶರೀರವುಳ್ಳವರಾಗಿ ನಿನ್ನ ಪುತ್ರಿ ದ್ರೌಪದಿಯಾಗಿ ಅವತರಿಸಿದ್ದಾರೆ. ಆದುದರಿಂದ ಪಂಚಪಾಂಡವರನ್ನು ಮದುವೆಯಾಗುವುದು ಧರ್ಮವಿರುದ್ಧವಲ್ಲ" ಎಂದು ಹೇಳಿದರು.

ವಿಶೇಷ ವಿಚಾರ:- 1) ಪುರಂದರ ಎಂಬ ಪದದಿಂದ ಹಿಂದಿನ ಇಂದ್ರ ಎಂದಿಟ್ಟುಕೊಳ್ಳಬೇಕು. ಅವನೇ ಈ ವೈವಸ್ವತ ಮನ್ವಂತರದಲ್ಲೂ ಇಂದ್ರ ಪದಾಧಿರೂಢನಾಗಿರುವುದರಿಂದ "ಸಂಪ್ರತಿತನಸ್ತ" ಎಂದು ಆಚಾರ್ಯರು ಹೇಳಿದ್ದಾರೆ. ಒಟ್ಟಿನಲ್ಲಿ

ಅದೇ ಇಂದ್ರನೂ 7ನೇ ಇಂದ್ರನೂ ಪುರಂದರನೇ. 2) ಹೀಗೆ ಸಂಖ್ಯೆಯಿಂದ ಆರು ಜನ ಇಂದ್ರರಾದಾಗ್ಯೂ 6-7ನೇ ಇಂದ್ರರಿಗೆ ಏಕತ್ವವಿರುವುದರಿಂದ "ಪಂಚೇಂದ್ರಾಃ" ಎಂದು ನಿರ್ಣಯಕಾರರು ಹೇಳಿರುವರೆಂದು ತಿಳಿಯಬೇಕು.

ಆದರೂ ದ್ರುಪದರಾಜನು ಅದಕ್ಕೆ ಸಮ್ಮತಿಸದಿರಲು ವೇದವ್ಯಾಸರು "ದ್ರುಪದರಾಜ! ನಾವು ಈಗ ನಿನಗೆ ದಿವ್ಯಜ್ಞಾನವನ್ನು ಅಂದರೆ ಜ್ಞಾನದೃಷ್ಟಿಯನ್ನು ಅನುಗ್ರಹಿಸಿದ್ದೇವೆ. ಸ್ವರ್ಗದಲ್ಲಿ ಮೂಲರೂಪದಿಂದಿರುವ ಪಾಂಡುಪುತ್ರರನ್ನು ನೋಡು, ನಿನ್ನ ಮಗಳನ್ನೂ, ಆ ಭಾರತಿ, ಶ್ಯಾಮಲಾ, ಶಚಿ ಮತ್ತು ಉಷಾದೇವಿಯರ ಲಕ್ಷಣಯುಕ್ತಳಾಗಿ ಬೇರೆ ಬೇರೆಯಾಗಿ ಆ ವಾಯು, ಇಂದ್ರಾದಿರೂಪಗಳಿಂದೊಡಗೂಡಿ, ಅಂದರೆ ಯಮ-ಶ್ಯಾಮಲಾ, ವಾಯು-ಭಾರತೀ ಮೊದಲಾದ ಪಂಚರೂಪ ವಿಶಿಷ್ಟಳಾಗಿರುವ ನಿನ್ನ ಮಗಳನ್ನು ನೋಡು, ಅನಂತರ ನಿನಗೆ ತೋಚಿದಂತೆ ಮಾಡು" ಎಂದು ಹೇಳಿದರು.

ಶ್ರೀವೇದವ್ಯಾಸರ ಮಾತಿನಂತೆ ಅವರ ಅನುಗ್ರಹಬಲದಿಂದ ಸ್ವರ್ಗದಲ್ಲಿರುವ ಯಮ-ವಾಯು-ಇಂದ್ರ-ಅಶ್ವಿನೀ ದೇವತೆಗಳ ಲಕ್ಷಣಗಳಿಂದೊಪ್ಪುವ ಪಾಂಡವರನ್ನೂ, ಶ್ಯಾಮಲಾ-ಭಾರತೀ-ಶಚೀ-ಉಷಾದೇವಿಯರ ಲಕ್ಷಣಗಳಿಂದ ಶೋಭಿಸುವ ಮಗಳನ್ನೂ ದ್ರುಪದನು ನೋಡಿ ಆಶ್ಚರ್ಯಗೊಂಡನು. ತರುವಾಯ ಶ್ರೀವ್ಯಾಸರ ಮಾತನ್ನು ಸಂದೇಹಿಸಿದ್ದಕ್ಕಾಗಿ ಭಯಗೊಂಡು ಲೋಕದ ಪ್ರಭುಗಳಾದ ಶ್ರೀವ್ಯಾಸರ ಚರಣಗಳಿಗೆರಗಿ 'ಕ್ಷಮಿಸಿ ರಕ್ಷಿಸಿರಿ' ಎಂದು ಪ್ರಾರ್ಥಿಸಿದರು.

ಪೂಜ್ಯ ವೇದವ್ಯಾಸರು ದ್ರುಪದನಿಗೆ ಅಭಯ ಪ್ರದಾನ ಮಾಡಿದರು. ಆ ನಂತರ ಪಾಂಚಾಲರಾಜನು ಶ್ರೀವ್ಯಾಸರ ಅಪ್ಪಣೆಯಂತೆ ವರ್ತಿಸುವುದಾಗಿ ಹೇಳಿದನು. ಆಗ ಶ್ರೀ ವೇದವ್ಯಾಸರು ಸ್ವತಃ ತಾವೇ ನಿಂತು ಆಚಾರ್ಯ ಧೌಮ್ಯರಿಂದ ಸಹಿತರಾಗಿ ಸಮಸ್ತ ವೈವಾಹಿಕ ಸಂಬಂಧಿ ಕಾರ್ಯಗಳನ್ನು ನೆರವೇರಿಸಿದರು. ಆಗ ಯುಧಿಷ್ಠಿರಾದಿ ಕ್ರಮದಿಂದ ಅಂದರೆ ಯಮಾಂಶನಾದ ಧರ್ಮರಾಜನು ದ್ರೌಪದಿಯನ್ನು ಅಂದರೆ ಅವಳಲ್ಲಿರುವ ಶ್ಯಾಮಲಾದೇವಿಯನ್ನೂ, ಪವನನಂದನನಾದ ಭೀಮಸೇನನು ಭಾರತೀದೇವಿಯನ್ನೂ, ಇಂದ್ರಾಂಶನಾದ ಅರ್ಜುನನು ಶಚೀದೇವಿಯನ್ನೂ, ನಾಸತ್ಯ-ದಸ್ರ (ಅಶ್ವಿನೀ-ದೇವತೆಗಳ)ರ ಅಂಶರಾದ ನಕುಲ ಮತ್ತು ಸಹದೇವರು ಉಷಾದೇವಿಯನ್ನೂ ಕ್ರಮವಾಗಿ ಪಾಣಿಗ್ರಹಣ ಮಾಡಿದರು. (ಧರ್ಮರಾಜನೊಡನೆ ಲಗ್ನವಾದಾಗ ದ್ರೌಪದಿಯಲ್ಲಿ ಶರೀರದಲ್ಲಿ, ಶ್ಯಾಮಲಾ ದೇವಿಯಿದ್ದು) ವಿವಾಹವಾದಳು. ಇದರಂತೆ ಆಯಾದೇವತೆಗಳ ಅಂಶರಾದ ಭೀಮಾದಿಗಳನ್ನು ಕರಪಿಡಿಯುವಾಗ ದ್ರೌಪದಿಯಲ್ಲಿ ಆಯಾ ದೇವತೆಗಳ ಪತ್ನಿಯರೇ ಸನ್ನಿಹಿತರಾಗಿದ್ದು ವಿವಾಹವಾದರೆಂದು ತಿಳಿಯಬೇಕು).

ಆಗ ಪಾಂಚಾಲದೇಶದಲ್ಲಿ ಮಹೋತ್ಸವವು ಬಹು ಸಂಭ್ರಮದಿಂದ ನೆರವೇರಿತು. ಮಹಾರಾಜಾ ದ್ರುಪದನು ತನ್ನ ಸಕಲ ಪುತ್ರರು, ಬಂಧು ಬಾಂಧವರು, ಪೌರಜಾನಪದರು, ದೇಶದ ಪ್ರಜಾಜನರಿಂದ ಸಹಿತನಾಗಿ ಆಮಂದಾನಂದ ಭರಿತನಾದನು. ಜನಕ ಮಹಾರಾಜನು ಶ್ರೀರಾಮಚಂದ್ರನಿಗೆ ಪುತ್ರಿಯಾದ ಸೀತಾದೇವಿಯನ್ನು ನೀಡಿ ವಿವಾಹ ಮಾಡಿ ಎಂತಹ ಹರ್ಷವನ್ನು ಪಡೆದನೋ ಅದೇ ವಿಧವಾಗಿ ದ್ರುಪದನು ಪಾಂಡವರಿಗೆ ದ್ರೌಪದಿಯನ್ನು ಧಾರೆಯೆರೆದು ಕೊಟ್ಟು ಪರಮಾನಂದವನ್ನು ಹೊಂದಿದನು.

ವಿವಾಹ ಮಂಗಳೋತ್ಸವವು ಜರುಗಿದ ತರುವಾಯ ಪಾಂಡವರು ಆ ಪಟ್ಟಣದಲ್ಲಿ ಸಂತೋಷದಿಂದ ವಾಸ ಮಾಡಿದರು. ವಿವಾಹ ವಿಚಾರವನ್ನರಿತು ಶ್ರೀಕೃಷ್ಣಬಲರಾಮರು ನಿಖಿಲ ಯಾದವರೊಡನೆ ಬಂದು ಉತ್ಸವದಲ್ಲಿ ಪಾಲ್ಗೊಂಡು ಅತ್ಯುತ್ತಮವೂ ಯೋಗ್ಯವೂ ಆದ ವಸ್ತುಗಳನ್ನು ಪಾಂಡವರಿಗೆ ಉಡುಗೊರೆಯಾಗಿತ್ತು, ಕುಂತಿ ಮತ್ತು ಪಾಂಡವರನ್ನು ಹರ್ಷಪಡಿಸಿದರು. ಕುರುಶ್ರೇಷ್ಠರಾದ ಪಾಂಡವರು ಶ್ರೀಕೃಷ್ಣದರ್ಶನದಿಂದ ಮುದಗೊಂಡು ಅವನನ್ನು ಆಲಂಗಿಸಿ, ನಮಿಸಿದರು. ಶ್ರೀಕೃಷ್ಣನು ದ್ರೌಪದಿಗೆ ಸುವರ್ಣಮಯ ಮಂದಿರಕ್ಕೆ ಯೋಗ್ಯವಾದ ಸಕಲವಿಧ ಭಾಜನಗಳನ್ನೂ ಉಡುಗೊ

ರೆಯಾಗಿತ್ತನು-ದ್ರೌಪದಿ-ಪಾಂಡವರಿಗೆ ಬಹಳ ಅಮೂಲ್ಯಗಳಾದ ಆಭರಣಗಳನ್ನು ನೀಡಿದನು. ತರುವಾಯ ವಾಸುದೇವನು ದ್ರೌಪದಿ ಮತ್ತು ಅವಳಲ್ಲಿರುವ ಆರು ಜನ ದೇವತಾ ಸ್ತ್ರೀಯರಿಗೆ[18] ಬೇರೆ ಬೇರೆಯಾಗಿ ಅವರವರಿಗೆ ಯೋಗ್ಯವಾದ ಅಂದರೆ ದೇವತಾ ಸ್ತ್ರೀಯರ ಶರೀರಗಳಿಗೆ ಸರಿಹೊಂದುವ ಮಂಗಳಕರಗಳಾದ ಕರ್ಣಕುಂಡಲಗಳು, ಮುತ್ತಿನ ಹಾರಗಳು, ಕಿರೀಟಗಳು, ರತ್ನಕಂಕಣಾದಿ ಹಸ್ತಾಭರಣಗಳು, ರೇಶ್ಮೆಯ ಪೀತಾಂಬರಾದಿ ವಸ್ತ್ರಗಳಿಂದ ಸಹಿತವಾಗಿ ಉಡುಗೊರೆಯಾಗಿತ್ತು, ತರುವಾಯ ತನ್ನ ಸೋದರತ್ತೆಯಾದ ಕುಂತೀದೇವಿಗೆ ಯೋಗ್ಯವಾದ ಆಭರಣಗಳನ್ನು ಪ್ರತ್ಯೇಕವಾಗಿ ಕೊಟ್ಟನು. ಇದೂ ಅಲ್ಲದೆ ಶ್ರೀಕೃಷ್ಣನು ವಿವಿಧ ಅನರ್ಘ್ಯರತ್ನಗಳು, ಗೋವುಗಳು, ಗಜ, ತುರಗ, ರಥಗಳನ್ನೂ, ಬಹುಸಂಖ್ಯಾಕ ಸುವರ್ಣಭಾರನ್ನೂ[19] ನೀಡಿ ಸರ್ವರನ್ನೂ ಆನಂದಗೊಳಿಸಿದನು. ಶ್ರೀವೇದವ್ಯಾಸದೇವರು ಐಹಿಕಾಮುಷ್ಮಿಕಶ್ರೇಯಸ್ಕರಗಳಾದ ಆಶೀರ್ವಚನಗಳಿಂದ ಪಾಂಡುನಂದನರನ್ನು ಪ್ರಮೋದಗೊಳಿಸಿದರು. ದ್ರುಪದಮಹಾರಾಜನೂ ಅಳಿಯಂದಿರು-ಪುತ್ರಿಗೆ ವಿವಿಧಾಭರಣಗಳು, ಆನೆ, ಕುದುರೆ, ರಥಗಳು, ಅಸಂಖ್ಯಾತ, ರತ್ನಗಳು ಮಂಗಳಕರಗಳಾದ ಕಾಂಚನಾದಿಗಳನ್ನೂ ನೀಡಿದನು. ಆ ಮಂಗಳ ಮಹೋತ್ಸವಕಾಲದಲ್ಲಿ ಶ್ರೀಕೃಷ್ಣ ಮತ್ತು ದ್ರುಪದರಾಜರೂ ಸಹ ಶುಭಕರ ಸೌಂದರ್ಯ ವೇಷಭೂಷಣಯುಕ್ತರಾದ ಸಹಸ್ರಾರು ಜನ ದಾಸ-ದಾಸಿಯರನ್ನು ಪಾಂಡವರಿಗೆ ಬಳುವಳಿಯಾಗಿತ್ತರು. ಜೊತೆಗೆ ಶ್ರೇಷ್ಠ ಆಭರಣಗಳಿಂದ ಕಂಗೊಳಿಸುವ ಆ ದಾಸಿಯರಿಗೂ ಪ್ರತ್ಯೇಕ ಪ್ರತ್ಯೇಕವಾಗಿ ಬೆಲೆಬಾಳುವ ವಸ್ತ್ರಗಳು, ಉತ್ತಮ ರತ್ನ-ಮಾಲಿಕೆಗಳನ್ನೂ ಉಡುಗೊರೆಯಾಗಿ ನೀಡಿದರು.

ಶ್ರೀಕೃಷ್ಣನು ಅಲ್ಲಿ ಪಾಂಡವರೊಡನೆ ಕೆಲತಿಂಗಳುಗಳವರೆಗೆ ಸುಖ-ಸಂತೋಷಗಳಿಂದ ವಾಸಮಾಡಿ ನಂತರ ಅಣ್ಣ ಬಲರಾಮನೊಡನೆ ದ್ವಾರಕಾಪುರಿಗೆ ದಯಮಾಡಿಸಿದನು. ಇಂತು ಶ್ರೀಯಾದವಕೃಷ್ಣ - ಪರಾಶರಕೃಷ್ಣ (ವೇದವ್ಯಾಸ)ರು ಅಂತರ್ಧಾನ ಹೊಂದಿದ ಮೇಲೆ ಪಾಂಡವರು ಪಾಂಚಾಲಪುರಿಯಲ್ಲಿ ಒಂದು ವರ್ಷಕಾಲ ಸುಖದಿಂದ ಆನಂದಭರಿತರಾಗಿ ವಾಸಮಾಡಿದರು.

ಶ್ರೀಕೃಷ್ಣನು ಪಾಂಚಾಲನಗರಕ್ಕೆ ಬರುವುದಕ್ಕಿಂತ ಮೊದಲು ಜರುಗಿದ ಯುದ್ಧ ವಿಚಾರವನ್ನೀಗ ನಿರ್ಣಯಾಚಾರ್ಯರು ನಿರೂಪಿಸುತ್ತಾರೆ:-

ದ್ರೌಪದೀ ಸ್ವಯಂವರಕಾಲದಲ್ಲಿ ಪರಾಭವವನ್ನು ಅನುಭವಿಸಿದ ಕೌರವರು ಶಕುನಿ, ಕರ್ಣ, ಸೈಂಧವ, ಭೂರಿಶ್ರವಾದಿಗಳೊಡನೆ ಹಸ್ತಿನಾಪುರಕ್ಕೆ ಬಂದು ಕೆಲದಿನಗಳಾದ ಮೇಲೆ ತಮಗಾದ ಅಪಮಾನದ ಸೇಡು ತೀರಿಸಿಕೊಳ್ಳಲು ದ್ರುಪದರಾಜನನ್ನು ಸಂಹರಿಸಲು ಮತ್ತೆ ಸೈನ್ಯ ಸಮೇತರಾಗಿ ಪಾಂಚಾಲನಗರಕ್ಕೆ ಆಗಮಿಸಿದರು. ದುರ್ಯೋಧನಾದಿ ಕೌರವರು ಭರದಿಂದ ಪಟ್ಟಣವನ್ನು ಮುತ್ತಿ ಪೀಡಿಸುತ್ತಿರಲು ಸೋಮಕದೇಶಾಧಿಪತಿಯಾದ ದ್ರುಪದರಾಜನು ಪುತ್ರರೊಡನೆ ಸೈನ್ಯಸಹಿತನಾಗಿ ಬಂದನು. ಆಗ ದುರ್ಯೋಧನ-ದ್ರುಪದರಿಗೆ ಘೋರ ಯುದ್ಧವಾಯಿತು. ಆ ಯುದ್ಧದಲ್ಲಿ ಚಿತ್ರ ಮತ್ತು ವಿಚಿತ್ರಕೇತು ಎಂಬ ದ್ರುಪದನ ಇಬ್ಬರು ಮಕ್ಕಳು ಮೃತರಾದರು. ಸೈನಿಕರು ಪಲಾಯನ ಮಾಡಿದರು. ಅದನ್ನು ಕಂಡು ಪಾಂಡವರು ಧನುರ್ಬಾಣಧಾರಿಗಳಾಗಿ ರಥಗಳಲ್ಲಿ ಕುಳಿತು ಕರ್ಣ ದುರ್ಯೋಧನಾದಿಗಳಿಗೆ ಎದುರಾಗಿ ಬಂದರು. ಕರ್ಣನು ಭೂರಿಶ್ರವನೊಡನೆ ಅರ್ಜುನನ ಮೇಲೆ ಬಾಣ ವರ್ಷಣಗೈದು ಅವನ ರಥವನ್ನು ನಾಶಪಡಿಸಿದನು. ತನ್ನೆರಡು ಕರಗಳಿಂದ ಪರ್ವತ ಸದೃಶ ವೃಕ್ಷವನ್ನು ಹಿಡಿದು ತಮಗೆದುರಾದ ಭೀಮನನ್ನು ನೋಡಿ ಕರ್ಣ, ಭೂರಿಶ್ರವ, ಶಕುನಿ, ಜಯದ್ರಥ ಮತ್ತು

18. ದ್ರೌಪದಿಯಲ್ಲಿರುವ ಆರು ಜನರಿಗೆ ಎನ್ನುವಲ್ಲಿ ರುದ್ರಪತ್ನಿಯಾದ ಪಾರ್ವತಿಯನ್ನೂ ಸೇರಿಸಿಕೊಳ್ಳಬೇಕು.

19. (ಒಂದು ಭಾರವೆಂದರೆ 30 ತೊಲೆಗಳ)

ದುರ್ಯೋಧನನೂ ಸಹ ಭಯಗೊಂಡು ಯುದ್ಧಭೂಮಿಯಿಂದ ಕಾಲ್ತೆಗೆದು ಓಡುತ್ತಾ ತಮ್ಮ ಪಟ್ಟಣವನ್ನು ಸೇರಿಕೊಂಡರು.

ದುರ್ಯೋಧನಾದಿಗಳು ದ್ರೌಪದೀ ಸ್ವಯಂವರದಿಂದ ಹಸ್ತಿನಾಪುರಕ್ಕೆ ಬರುವುದಕ್ಕಿಂತ ಮೊದಲು ಅಲ್ಲಿ ಜರುಗಿದ ಪ್ರಕರಣವನ್ನು ಈಗ ವಿವರಿಸುತ್ತಾರೆ.

ಪಾಂಡವರ ಅಭ್ಯುದಯ ವಿಚಾರವರಿತ ವಿದುರನು ಅಣ್ಣನಾದ ಧೃತರಾಷ್ಟ್ರನಿಗೆ, ಅರ್ಜುನನು ಲಕ್ಷವೇದಿಸಿ ಜಯಗಳಿಸಿದ ವಿಚಾರ ದುರ್ಯೋಧನಾದಿಗಳ ಪರಾಜಯ, ಮುಂತಾದ ವಿಚಾರವನ್ನು ತಿಳಿಸಲು ಉದ್ಯುಕ್ತನಾಗಿ "ಅಣ್ಣ, ನಿನ್ನ ಮಕ್ಕಳು ಪಾಂಚಾಲದಲ್ಲಿ ಅಭಿವೃದ್ಧಿ ಪಡೆದಿದ್ದಾರೆ" ಎಂದು ಹೇಳಿದನು. ಆಗ ಧೃತರಾಷ್ಟ್ರನು ತನ್ನ ಮಗ ದುರ್ಯೋಧನನೇ ದ್ರೌಪದಿಯನ್ನು ಪಡೆದಿದ್ದಾನೆ (ನಿನ್ನ ಮಕ್ಕಳು ಎಂಬುದನ್ನು ಪಾಂಡವರೆಂದು ತಿಳಿಯದೆ ದುರ್ಯೋಧನನೆಂದೇ ಭ್ರಮಿಸಿ) ಎಂದು ಆನಂದತುಂದಿಲನಾಗಿ ದ್ರೌಪದಿಗೆ ವಸ್ತ್ರಾಭರಣಗಳನ್ನೂ ಕೊಡುವಂತೆ[20] ವಿದುರನಿಗೆ ಹೇಳಿದನು. ಆಗ ವಿದುರನು ಅಣ್ಣನು ಭ್ರಮಿಸಿದ್ದಾನೆ ಎಂದರಿತು "ಅಣ್ಣಾ, ನಿನ್ನ ಮಕ್ಕಳಾದ ಪಾಂಡವರು ಜಯಗಳಿಸಿದ್ದಾರೆ" ಎಂದು ಮತ್ತೆ ಹೇಳಿದನು. ಆಗ ಧೃತರಾಷ್ಟ್ರನು "ನಿನ್ನ ಮಕ್ಕಳು" ಎಂಬುದನ್ನು ತಾನು ಸ್ವಪುತ್ರ ದುರ್ಯೋಧನನೆಂದು ತಿಳಿದುಕೊಂಡಿದ್ದೇನೆಂಬುದನ್ನು ಮರೆಮಾಚಲು 'ವಿದುರ! ಸದ್ಯ ಕುಂತೀಪುತ್ರರಾದ ಪಾಂಡವರು ಮೃತರಾಗಲಿಲ್ಲವಲ್ಲ! ಇದಕ್ಕಿಂತ ಮಂಗಳಕರ ವಿಚಾರ-ವೇನಿದೆ? ಹೂಂ, ವಿದುರ, ಪಾಂಡವರ ಸಮಸ್ತ ಸಮಾಚಾರಗಳನ್ನು ತಿಳಿಸು' ಎಂದನು.

ಆಗ ವಿದುರನು ಅರಗಿನ ಅರಮನೆಯಿಂದ ಪಾರಾದ ಪಾಂಡವರು ವನಪ್ರವೇಶ ಮಾಡಿದ್ದು, ಹಿಡಿಂಬಾಸುರ ಮತ್ತು ಬಕಾಸುರರನ್ನು ಭೀಮನು ಸಂಹಾರ ಮಾಡಿದ್ದು, ಪಾಂಚಾಲನಗರದಲ್ಲಿ ಸ್ವಯಂವರಕಾಲದಲ್ಲಿ ಯಾರಿಂದಲೂ ಭೇದಿಸಲಾಗದಿದ್ದ ಮತ್ಸ್ಯಯಂತ್ರವನ್ನು ಅರ್ಜುನನು ಭೇದಿಸಿದ್ದು, ಪಾಂಡವರೊಡನೆ ದ್ರೌಪದಿಯ ವಿವಾಹ, ಮುಂತಾದ ಸಕಲ ವಿಷಯಗಳನ್ನೂ ನಿರೂಪಿಸಿದನು. ಅದನ್ನು ಕೇಳಿ ಭೀಷ್ಮ-ದ್ರೋಣ-ಕೃಪಾಚಾರ್ಯ ಮುಂತಾದ ಸಕಲರೂ ಪರಮಾನಂದಭರಿತರಾದರು. ಪಾಂಡವರು ಜೀವಿಸಿರುವುದು, ಎಲ್ಲೆಡೆ ವಿಜಯಗಳಿಸುತ್ತಿರುವುದನ್ನು ತಿಳಿದ ಬಳಿಕವೂ ಧೃತರಾಷ್ಟ್ರನು ಪಾಂಡವರನ್ನು ಕರೆಸಿಕೊಳ್ಳಲಾಗಲಿ, ಅವರ ಕ್ಷೇಮವಾರ್ತೆ ತಿಳಿಯಲಾಗಲೀ ಪ್ರಯತ್ನಿಸದೆ ಸುಮ್ಮನೆ ಕುಳಿತನು. ಹೀಗೆ ಒಂದು ಸಂವತ್ಸರವು ಉರುಳಿತು.

ಮೃತರಾದರೆಂದು ಭಾವಿಸಿದ್ದ ಪಾಂಡವರು ದ್ರೌಪದೀ ಸ್ವಯಂವರ ಕಾಲದಲ್ಲಿ ಪ್ರತ್ಯಕ್ಷರಾಗಿದ್ದು, ಅರ್ಜುನನು ಮತ್ಸ್ಯಯಂತ್ರವನ್ನು ಭೇದಿಸಿದ್ದು, ದ್ರೌಪದಿಯೊಡನೆ ಪಾಂಡವರ ವಿವಾಹ, ಶ್ರೀಕೃಷ್ಣಬಲರಾಮರು ಪಾಂಚಾಲಕ್ಕೆ ಬಂದು ಪಾಂಡವರಿಗೆ ಅನರ್ಘ್ಯ ರತ್ನಾದಿಗಳನ್ನು ಉಡುಗೊರೆ ಕೊಟ್ಟು ಸಂಭಾವಿಸಿದ ವಿಚಾರಗಳನ್ನು ಅರಿತು ಕೌರವರು ಅತಿ ಸಂತಪ್ತರಾದರು. ದುರ್ಯೋಧನ, ಶಕುನಿ, ಕರ್ಣಾದಿಗಳು ಏಕಾಂತದಲ್ಲಿ ಮಂತ್ರಾಲೋಚನೆ ಮಾಡಿ ಹೇಗಾದರೂ ಮಾಡಿ ಪಾಂಡವರನ್ನು ನಿಗ್ರಹಿಸಬೇಕೆಂದು ಸಂಕಲ್ಪಿಸಿ ಯುದ್ಧಕ್ಕೆ ಹೊರಟರು. ಇದನ್ನು ಗಮನಿಸಿದ ವಿದುರನು ಧೃತರಾಷ್ಟ್ರ-ಭೀಷ್ಮಾಚಾರ್ಯಾದಿಗಳ ಬಳಿಗೆ ಬಂದು "ದುರ್ಬುದ್ಧಿಯ ದುರ್ಯೋಧನನು ಸೈನ್ಯಸಹಿತನಾಗಿ ಪಾಂಡವರ ಮೇಲೆ ಯುದ್ಧಕ್ಕೆ ಹೊರಟಂತಿದೆ. ಮಹಾಪರಾಕ್ರಮಿಗಳಾದ ಭೀಮ-ಧನಂಜಯರನ್ನು ದೇವತೆಗಳೂ ಸಹ ತಡೆಯಲಾರರು! ಅಂಥ ಸಜ್ಜನರೊಡನೆ ಯುದ್ಧಕ್ಕೆ ಹೊರಟಿರುವುದು ಯುಕ್ತವೇ? ಅದಂತಿರಲಿ. ಪಾಂಡವರು ಬದುಕಿರುವ ವಿಚಾರ ಗೊತ್ತಾಗಿ ಒಂದು ವರ್ಷವಾದರೂ ಅವರನ್ನು ಕರೆಸದೆ ಅಣ್ಣ! ನೀನು ಉದಾಸೀನನಾಗಿ ಕುಳಿತಿರುವಿ. ಇದು ಅಧರ್ಮ. ಈಗಲಾದರೂ

20. ಈ ವಿಚಾರವು ಮಹಾಭಾರತ ಆದಿಪರ್ವದಲ್ಲಿ "ಅಥ ಜ್ಞಾಪಯಾಮಾಸ ದ್ರೌಪದ್ಯಾಭೂಷಣಂಹಿತು" ಎಂದು ಉಕ್ತವಾಗಿದೆ.

ಪಾಂಡವರನ್ನು ಕರೆತರಲು ದೂತರನ್ನು ಕಳಿಸು. ಮತ್ತು ಅವರಿಗೆ ನ್ಯಾಯವಾಗಿ ಕೊಡಬೇಕಾದ ಅರ್ಧರಾಜ್ಯವನ್ನು ಕೊಟ್ಟು ಸಂತೋಷಪಡಿಸು. ಇದರಿಂದ ನಿನ್ನ ವಂಶವು ಅಭಿವೃದ್ಧಿಸುವುದು. ಅದು ಧರ್ಮವೂ ಆಗುವುದು. ಈಗಲೂ ಸುಮ್ಮನೆ ಉದಾಸೀನದಿಂದ ಕುಳಿತರೆ ನಿನ್ನ ವಂಶಕ್ಕೆ, ಧರ್ಮಕ್ಕೆ ನೀನೇ ನಾಶವನ್ನು ತಂದುಕೊಂಡಂತಾಗುವುದು" ಎಂದು ಹೇಳಿದನು. ಭೀಷ್ಮಾಚಾರ್ಯ, ದ್ರೋಣಾಚಾರ್ಯ, ಕೃಪಾಚಾರ್ಯಾದಿಗಳು ವಿದುರನ ಮಾತಿಗೆ ಸಮ್ಮತಿಸಿ ಸಮರ್ಥಿಸಿದರು. ಆಗ ಧೃತರಾಷ್ಟ್ರನು "ಸಹೋದರ, ವಿದುರ! ನೀನೇ ಪಾಂಚಾಲಕ್ಕೆ ತೆರಳಿ ಪಾಂಡವರನ್ನು ಕರೆದುಕೊಂಡು ಬಾ" ಎಂದು ಹೇಳಿ ವೇಗವಾಗಿ ಚಲಿಸುವ ರಥದಲ್ಲಿ ವಿದುರನನ್ನು ಕಳುಹಿಸಿದನು.

ವಿದುರನು ಪಾಂಚಾಲವನ್ನು ತಲುಪಿ ಪಾಂಡವರ ಬಳಿಗೆ ಬಂದನು. ಪಾಂಡವರು ವಿದುರನನ್ನು ಚೆನ್ನಾಗಿ ಪೂಜಿಸಿ ಗೌರವಿಸಿದರು. ಅದೇ ಸಮಯಕ್ಕೆ ಶ್ರೀಕೃಷ್ಣ ಮತ್ತು ಶ್ರೀವೇದವ್ಯಾಸರು ಅಲ್ಲಿಗೆ ಬಂದು ಎಲ್ಲ ವಿಚಾರವರಿತು ಕುಂತೀದೇವಿ, ದ್ರೌಪದಿ, ಪಾಂಡವರು ಮತ್ತು ವಿದುರರಿಂದೊಡಗೂಡಿ ಹಸ್ತಿನಾಪುರಕ್ಕೆ ಪ್ರಯಾಣ ಮಾಡಿದರು. ಕೃಷ್ಣದ್ವಯರು, ಕೃಷ್ಣಾ ಸಹಕೃತ ಪಾಂಡವರು, ಮಾತಾ ಕುಂತಿಯೊಡನೆ ವಿದುರಸಹಿತರಾಗಿ ಬರುತ್ತಿರುವುದನ್ನು ಕೇಳಿ ರಾಜಧಾನಿ ಹಾಗೂ ದೇಶದಲ್ಲಿರುವ ಸಮಸ್ತರೂ ಆಮಂದಾನಂದ ಭರಿತರಾದರು. ಭೀಷ್ಮಾದಿಗಳೂ ಅತಿಸಂತುಷ್ಟರಾಗಿ ಧೃತರಾಷ್ಟ್ರ ಸಹಿತರಾಗಿ ಪಾಂಡವರನ್ನು ಸ್ವಾಗತಿಸಿ ಅರಮನೆಗೆ ಕರೆತಂದು ಮಹೋತ್ಸವವನ್ನಾಚರಿಸಿದರು. ಮನೆಗೆ ಬಂದ ದ್ರೌಪದಿಯನ್ನು ಗಾಂಧಾರಿಯು ದುರ್ಯೋಧನನ ಪತ್ನಿಯರಿಂದ ಸಹಿತಳಾಗಿ ಸ್ವಾಗತಿಸಿ ಗೌರವಿಸಿದಳು. ಆ ನಂತರ ಅವರೆಲ್ಲರೂ ಆ ಅರಮನೆಯಲ್ಲಿಯೇ ತಂಗಿದರು.

ಗಾಂಧಾರಿಯು ನಾಲ್ಕಾರು ದಿನಗಳಾದ ಮೇಲೆ ತ್ರಿಲೋಕ ಸುಂದರಿಯಾದ ದ್ರೌಪದಿಯ ಬಗೆಗೆ ತನ್ನ ಪುತ್ರ ಸುಯೋಧನನೇನಾದರೂ ಕುಕೃತ್ಯವನ್ನಾಚರಿಸಿದರೆ ಭೀಮಸೇನನು ತನ್ನ ಮಗನನ್ನು ಸಂಹರಿಸಬಹುದೆಂಬ ಭಯದಿಂದ ಕುಂತಿದೇವಿಯನ್ನು ಕರೆದು ಏಕಾಂತವಾಗಿ "ಅಮ್ಮಾ ಕುಂತಿ, ನೀನು ನಿನ್ನ ಪುತ್ರರು ಮತ್ತು ಸೊಸೆಯೊಡನೆ ನಿಮ್ಮದಾದ ಪಾಂಡುರಾಜನ ಅರಮನೆಯಲ್ಲಿ ಸುಖವಾಗಿ ವಾಸಮಾಡಿರಿ. ದ್ರೌಪದಿಯು ಮೂರುಲೋಕದ ಸ್ತ್ರೀಯರಿಗಿಂತ ಅತ್ಯಂತ ರೂಪಸಿಯಾಗಿದ್ದಾಳೆ. ಒಂದು ವೇಳೆ ದುರ್ಯೋಧನನೇನಾದರೂ ಅವಳ ವಿಷಯದಲ್ಲಿ ದುರ್ಬುದ್ಧಿಯಿಂದ ಕೆಟ್ಟದಾಗಿ ನಡೆದುಕೊಂಡರೆ ಭೀಮನಿಂದ ನನ್ನ ಮಗನಿಗೆ ಅಪಾಯವಾಗಬಹುದೆಂದು ನನ್ನ ಹೃದಯ ಭೀತಿಗೊಂಡಿದೆ. ಆದ್ದರಿಂದ ನೀನು ದಯಮಾಡಿ ಪಾಂಡುರಾಜನ ಅರಮನೆಯಲ್ಲಿ ವಾಸಮಾಡು ಎಂದು ಕೇಳಿಕೊಳ್ಳುತ್ತೇನೆ" ಎಂದು ವ್ಯಾಕುಲಚಿತ್ತಳಾಗಿ ಕೇಳಿಕೊಂಡಳು. ಅವಳ ಮಾತಿಗೆ ಸಮ್ಮತಿಸಿ ಕುಂತಿದೇವಿಯು ಪುತ್ರರು-ಸೊಸೆಯೊಡನೆ ಪಾಂಡುವಿನ ಅರಮನೆಗೆ ತೆರಳಿದಳು. ಅಲ್ಲಿ ಪಾಂಡವರು ಸಮಸ್ತ ಸೌಖ್ಯಗಳನ್ನು ಅನುಭವಿಸುತ್ತಾ ಐದು ಪರಿವತ್ಸರ[21]ಗಳವರೆಗೆ ವಾಸ ಮಾಡಿದರು.

ದ್ರೌಪದೀದೇವಿಯು ಯದ್ಯಪಿ ಒಂದೇ ಶರೀರವುಳ್ಳವಳಾದರೂ ಅವಳಲ್ಲಿರುವ ನಾಲ್ಕು ಸ್ವರೂಪವುಳ್ಳವಳಾಗಿ ಧರ್ಮರಾಜಾದಿ ಪಾಂಡವರೊಡನೆ ಪ್ರತ್ಯೇಕ ಪ್ರತ್ಯೇಕವಾಗಿ ಅಂದರೆ ದಿನಕ್ಕೊಬ್ಬ ಪತಿಯೊಡನೆ ವಿಹರಿಸುತ್ತಿದ್ದಳು.

ಅದು ಸರಿ, ಅಭಿಮಾನಿಗಳಾದ ಶ್ಯಾಮಲಾದೇವಿ ಮೊದಲಾದ ನಾಲ್ಕು ಜನರ ಭೇದವಿದ್ದರೂ ಅಭಿಮನ್ಯಮಾನವಾದ ಶರೀರವು ಒಂದೇ ಇರುವುದರಿಂದ ವ್ಯಭಿಚಾರದೋಷ ಬರುವುದಿಲ್ಲವೇ? ಎಂಬ ಶಂಕೆ ಬರುವುದು ಸಹಜವಾಗಿದೆ. ಆದ್ದರಿಂದಲೇ ಶ್ರೀಮದಾಚಾರ್ಯರು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಈ ಎಲ್ಲ ಸಂದೇಹ, ಸಂಶಯಗಳನ್ನೂ

21. ಒಂದೊಂದು ರಾಶಿಯಲ್ಲಿ ಬೃಹಸ್ಪತಿಯು ಸಂಚರಿಸುವ ಒಂದು ವರ್ಷಕ್ಕೆ ಒಂದು ಪರಿವತ್ಸರವೆಂದು ಹೆಸರು. ಹೀಗೆ 5 (ಐದು) ಪರಿವತ್ಸರ ಕಾಲ ವಾಸಿಸಿದರೆಂದು ತಿಳಿಯಬೇಕು.

ದುರ್ಯೋಧನನೂ ಸಹ ಭಯಗೊಂಡು ಯುದ್ಧಭೂಮಿಯಿಂದ ಕಾಲ್ತೆಗೆದು ಓಡುತ್ತಾ ತಮ್ಮ ಪಟ್ಟಣವನ್ನು ಸೇರಿಕೊಂಡರು.

ದುರ್ಯೋಧನಾದಿಗಳು ದ್ರೌಪದೀ ಸ್ವಯಂವರದಿಂದ ಹಸ್ತಿನಾಪುರಕ್ಕೆ ಬರುವುದಕ್ಕಿಂತ ಮೊದಲು ಅಲ್ಲಿ ಜರುಗಿದ ಪ್ರಕರಣವನ್ನು ಈಗ ವಿವರಿಸುತ್ತಾರೆ.

ಪಾಂಡವರ ಅಭ್ಯುದಯ ವಿಚಾರವರಿತ ವಿದುರನು ಅಣ್ಣನಾದ ಧೃತರಾಷ್ಟ್ರನಿಗೆ, ಅರ್ಜುನನು ಲಕ್ಷ್ಯವೇದಿಸಿ ಜಯಗಳಿಸಿದ ವಿಚಾರ ದುರ್ಯೋಧನಾದಿಗಳ ಪರಾಜಯ, ಮುಂತಾದ ವಿಚಾರವನ್ನು ತಿಳಿಸಲು ಉದ್ಯುಕ್ತನಾಗಿ "ಅಣ್ಣ, ನಿನ್ನ ಮಕ್ಕಳು ಪಾಂಚಾಲದಲ್ಲಿ ಅಭಿವೃದ್ಧಿ ಪಡೆದಿದ್ದಾರೆ" ಎಂದು ಹೇಳಿದನು. ಆಗ ಧೃತರಾಷ್ಟ್ರನು ತನ್ನ ಮಗ ದುರ್ಯೋಧನನೇ ದ್ರೌಪದಿಯನ್ನು ಪಡೆದಿದ್ದಾನೆ (ನಿನ್ನ ಮಕ್ಕಳು ಎಂಬುದನ್ನು ಪಾಂಡವರೆಂದು ತಿಳಿಯದೆ ದುರ್ಯೋಧನನೆಂದೇ ಭ್ರಮಿಸಿ) ಎಂದು ಆನಂದತುಂದಿಲನಾಗಿ ದ್ರೌಪದಿಗೆ ವಸ್ತ್ರಾಭರಣಗಳನ್ನೂ ಕೊಡುವಂತೆ[20] ವಿದುರನಿಗೆ ಹೇಳಿದನು, ಆಗ ವಿದುರನು ಅಣ್ಣನು ಭ್ರಮಿಸಿದ್ದಾನೆ ಎಂದರಿತು "ಅಣ್ಣಾ, ನಿನ್ನ ಮಕ್ಕಳಾದ ಪಾಂಡವರು ಜಯಗಳಿಸಿದ್ದಾರೆ" ಎಂದು ಮತ್ತೆ ಹೇಳಿದನು. ಆಗ ಧೃತರಾಷ್ಟ್ರನು "ನಿನ್ನ ಮಕ್ಕಳು" ಎಂಬುದನ್ನು ತಾನು ಸ್ವಪುತ್ರ ದುರ್ಯೋಧನನೆಂದು ತಿಳಿದುಕೊಂಡಿದ್ದೇನೆಂಬುದನ್ನು ಮರೆಮಾಚಲು 'ವಿದುರ! ಸದ್ಯ, ಕುಂತೀಪುತ್ರರಾದ ಪಾಂಡವರು ಮೃತರಾಗಲಿಲ್ಲವಲ್ಲ! ಇದಕ್ಕಿಂತ ಮಂಗಳಕರ ವಿಚಾರ-ವೇನಿದೆ? ಹೂಂ, ವಿದುರ, ಪಾಂಡವರ ಸಮಸ್ತ ಸಮಾಚಾರಗಳನ್ನು ತಿಳಿಸು' ಎಂದನು.

ಆಗ ವಿದುರನು ಅರಗಿನ ಅರಮನೆಯಿಂದ ಪಾರಾದ ಪಾಂಡವರು ವನಪ್ರವೇಶ ಮಾಡಿದ್ದು, ಹಿಡಿಂಬಾಸುರ ಮತ್ತು ಬಕಾಸುರರನ್ನು ಭೀಮನು ಸಂಹಾರ ಮಾಡಿದ್ದು, ಪಾಂಚಾಲನಗರದಲ್ಲಿ ಸ್ವಯಂವರಕಾಲದಲ್ಲಿ ಯಾರಿಂದಲೂ ಭೇದಿಸಲಾಗದಿದ್ದ ಮತ್ಸ್ಯಯಂತ್ರವನ್ನು ಅರ್ಜುನನು ಭೇದಿಸಿದ್ದು, ಪಾಂಡವರೊಡನೆ ದ್ರೌಪದಿಯ ವಿವಾಹ, ಮುಂತಾದ ಸಕಲ ವಿಷಯಗಳನ್ನೂ ನಿರೂಪಿಸಿದನು. ಅದನ್ನು ಕೇಳಿ ಭೀಷ್ಮ-ದ್ರೋಣ-ಕೃಪಾಚಾರ್ಯ ಮುಂತಾದ ಸಕಲರೂ ಪರಮಾನಂದಭರಿತರಾದರು. ಪಾಂಡವರು ಜೀವಿಸಿರುವುದು, ಎಲ್ಲೆಡೆ ವಿಜಯಗಳಿಸುತ್ತಿರುವುದನ್ನು ತಿಳಿದ ಬಳಿಕವೂ ಧೃತರಾಷ್ಟ್ರನು ಪಾಂಡವರನ್ನು ಕರೆಸಿಕೊಳ್ಳಲಾಗಲಿ, ಅವರ ಕ್ಷೇಮವಾರ್ತೆ ತಿಳಿಯಲಾಗಲೀ ಪ್ರಯತ್ನಿಸದೆ ಸುಮ್ಮನೆ ಕುಳಿತನು. ಹೀಗೆ ಒಂದು ಸಂವತ್ಸರವು ಉರುಳಿತು.

ಮೃತರಾದರೆಂದು ಭಾವಿಸಿದ್ದ ಪಾಂಡವರು ದ್ರೌಪದೀ ಸ್ವಯಂವರ ಕಾಲದಲ್ಲಿ ಪ್ರತ್ಯಕ್ಷರಾಗಿದ್ದು, ಅರ್ಜುನನು ಮತ್ಸ್ಯಯಂತ್ರವನ್ನು ಭೇದಿಸಿದ್ದು, ದ್ರೌಪದಿಯೊಡನೆ ಪಾಂಡವರ ವಿವಾಹ, ಶ್ರೀಕೃಷ್ಣಬಲರಾಮರು ಪಾಂಚಾಲಕ್ಕೆ ಬಂದು ಪಾಂಡವರಿಗೆ ಅನರ್ಘ್ಯ ರತ್ನಾದಿಗಳನ್ನು ಉಡುಗೊರೆ ಕೊಟ್ಟು ಸಂಭಾವಿಸಿದ ವಿಚಾರಗಳನ್ನು ಅರಿತು ಕೌರವರು ಅತಿ ಸಂತಪ್ತರಾದರು. ದುರ್ಯೋಧನ, ಶಕುನಿ, ಕರ್ಣಾದಿಗಳು ಏಕಾಂತದಲ್ಲಿ ಮಂತ್ರಾಲೋಚನೆ ಮಾಡಿ ಹೇಗಾದರೂ ಮಾಡಿ ಪಾಂಡವರನ್ನು ನಿಗ್ರಹಿಸಬೇಕೆಂದು ಸಂಕಲ್ಪಿಸಿ ಯುದ್ಧಕ್ಕೆ ಹೊರಟರು. ಇದನ್ನು ಗಮನಿಸಿದ ವಿದುರನು ಧೃತರಾಷ್ಟ್ರ-ಭೀಷ್ಮಾಚಾರ್ಯಾದಿಗಳ ಬಳಿಗೆ ಬಂದು "ದುರ್ಬುದ್ಧಿಯ ದುರ್ಯೋಧನನು ಸೈನ್ಯಸಹಿತನಾಗಿ ಪಾಂಡವರ ಮೇಲೆ ಯುದ್ಧಕ್ಕೆ ಹೊರಟಿಂತಿದೆ. ಮಹಾಪರಾಕ್ರಮಿಗಳಾದ ಭೀಮ-ಧನಂಜಯರನ್ನು ದೇವತೆಗಳೂ ಸಹ ತಡೆಯಲಾರರು! ಅಂಥ ಸಜ್ಜನರೊಡನೆ ಯುದ್ಧಕ್ಕೆ ಹೊರಟಿರುವುದು ಯುಕ್ತವೇ? ಅದಂತಿರಲಿ. ಪಾಂಡವರು ಬದುಕಿರುವ ವಿಚಾರ ಗೊತ್ತಾಗಿ ಒಂದು ವರ್ಷವಾದರೂ ಅವರನ್ನು ಕರೆಸದೆ ಅಣ್ಣ! ನೀನು ಉದಾಸೀನನಾಗಿ ಕುಳಿತಿರುವಿ. ಇದು ಅಧರ್ಮ. ಈಗಲಾದರೂ

20. ಈ ವಿಚಾರವು ಮಹಾಭಾರತ ಆದಿಪರ್ವದಲ್ಲಿ "ಅಥ ಜ್ಞಾಪಯಾಮಾಸ ದ್ರೌಪದ್ಯಾಭೂಷಣಂಹಿತು" ಎಂದು ಉಕ್ತವಾಗಿದೆ.

ಪಾಂಡವರನ್ನು ಕರೆತರಲು ದೂತರನ್ನು ಕಳಿಸು. ಮತ್ತು ಅವರಿಗೆ ನ್ಯಾಯವಾಗಿ ಕೊಡಬೇಕಾದ ಅರ್ಧರಾಜ್ಯವನ್ನು ಕೊಟ್ಟು ಸಂತೋಷಪಡಿಸು. ಇದರಿಂದ ನಿನ್ನ ವಂಶವು ಅಭಿವೃದ್ಧಿಸುವುದು. ಅದು ಧರ್ಮವೂ ಆಗುವುದು. ಈಗಲೂ ಸುಮ್ಮನೆ ಉದಾಸೀನದಿಂದ ಕುಳಿತರೆ ನಿನ್ನ ವಂಶಕ್ಕೆ, ಧರ್ಮಕ್ಕೆ ನೀನೇ ನಾಶವನ್ನು ತಂದುಕೊಂಡಂತಾಗುವುದು'' ಎಂದು ಹೇಳಿದನು. ಭೀಷ್ಮಾಚಾರ್ಯ, ದ್ರೋಣಾಚಾರ್ಯ, ಕೃಪಾಚಾರ್ಯಾದಿಗಳು ವಿದುರನ ಮಾತಿಗೆ ಸಮ್ಮತಿಸಿ ಸಮರ್ಥಿಸಿದರು. ಆಗ ಧೃತರಾಷ್ಟ್ರನು ''ಸಹೋದರ, ವಿದುರ! ನೀನೇ ಪಾಂಚಾಲಕ್ಕೆ ತೆರಳಿ ಪಾಂಡವರನ್ನು ಕರೆದುಕೊಂಡು ಬಾ'' ಎಂದು ಹೇಳಿ ವೇಗವಾಗಿ ಚಲಿಸುವ ರಥದಲ್ಲಿ ವಿದುರನನ್ನು ಕಳುಹಿಸಿದನು.

ವಿದುರನು ಪಾಂಚಾಲವನ್ನು ತಲುಪಿ ಪಾಂಡವರ ಬಳಿಗೆ ಬಂದನು. ಪಾಂಡವರು ವಿದುರನನ್ನು ಚೆನ್ನಾಗಿ ಪೂಜಿಸಿ ಗೌರವಿಸಿದರು. ಅದೇ ಸಮಯಕ್ಕೆ ಶ್ರೀಕೃಷ್ಣ ಮತ್ತು ಶ್ರೀವೇದವ್ಯಾಸರು ಅಲ್ಲಿಗೆ ಬಂದು ಎಲ್ಲ ವಿಚಾರವರಿತು ಕುಂತೀದೇವಿ, ದ್ರೌಪದಿ, ಪಾಂಡವರು ಮತ್ತು ವಿದುರರಿಂದೊಡಗೂಡಿ ಹಸ್ತಿನಾಪುರಕ್ಕೆ ಪ್ರಯಾಣ ಮಾಡಿದರು. ಕೃಷ್ಣದ್ವಯರು, ಕೃಷ್ಣಾ ಸಹಕೃತ ಪಾಂಡವರು, ಮಾತಾ ಕುಂತಿಯೊಡನೆ ವಿದುರಸಹಿತರಾಗಿ ಬರುತ್ತಿರುವುದನ್ನು ಕೇಳಿ ರಾಜಧಾನಿ ಹಾಗೂ ದೇಶದಲ್ಲಿರುವ ಸಮಸ್ತರೂ ಆನಂದಾನಂದ ಭರಿತರಾದರು. ಭೀಷ್ಮಾದಿಗಳೂ ಅತಿಸಂತುಷ್ಟರಾಗಿ ಧೃತರಾಷ್ಟ್ರ ಸಹಿತರಾಗಿ ಪಾಂಡವರನ್ನು ಸ್ವಾಗತಿಸಿ ಅರಮನೆಗೆ ಕರೆತಂದು ಮಹೋತ್ಸವವನ್ನಾಚರಿಸಿದರು. ಮನೆಗೆ ಬಂದ ದ್ರೌಪದಿಯನ್ನು ಗಾಂಧಾರಿಯು ದುರ್‍ಯೋಧನನ ಪತ್ನಿಯರಿಂದ ಸಹಿತಳಾಗಿ ಸ್ವಾಗತಿಸಿ ಗೌರವಿಸಿದಳು. ಆ ನಂತರ ಅವರೆಲ್ಲರೂ ಆ ಅರಮನೆಯಲ್ಲಿಯೇ ತಂಗಿದರು.

ಗಾಂಧಾರಿಯು ನಾಲ್ಕಾರು ದಿನಗಳಾದ ಮೇಲೆ ತ್ರಿಲೋಕ ಸುಂದರಿಯಾದ ದ್ರೌಪದಿಯ ಬಗೆಗೆ ತನ್ನ ಪುತ್ರ ಸುಯೋಧನನೇನಾದರೂ ಕುಕೃತ್ಯವನ್ನಾಚರಿಸಿದರೆ ಭೀಮಸೇನನು ತನ್ನ ಮಗನನ್ನು ಸಂಹರಿಸಬಹುದೆಂಬ ಭಯದಿಂದ ಕುಂತಿದೇವಿಯನ್ನು ಕರೆದು ಏಕಾಂತವಾಗಿ ''ಅಮ್ಮಾ ಕುಂತಿ, ನೀನು ನಿನ್ನ ಪುತ್ರರು ಮತ್ತು ಸೊಸೆಯೊಡನೆ ನಿಮ್ಮದಾದ ಪಾಂಡುರಾಜನ ಅರಮನೆಯಲ್ಲಿ ಸುಖವಾಗಿ ವಾಸಮಾಡಿರಿ. ದ್ರೌಪದಿಯು ಮೂರುಲೋಕದ ಸ್ತ್ರೀಯರಿಗಿಂತ ಅತ್ಯಂತ ರೂಪಸಿಯಾಗಿದ್ದಾಳೆ. ಒಂದು ವೇಳೆ ದುರ್ಯೋಧನನೇನಾದರೂ ಅವಳ ವಿಷಯದಲ್ಲಿ ದುರ್ಬುದ್ಧಿಯಿಂದ ಕೆಟ್ಟದಾಗಿ ನಡೆದುಕೊಂಡರೆ ಭೀಮನಿಂದ ನನ್ನ ಮಗನಿಗೆ ಅಪಾಯವಾಗಬಹುದೆಂದು ನನ್ನ ಹೃದಯ ಭೀತಿಗೊಂಡಿದೆ. ಆದ್ದರಿಂದ ನೀನು ದಯಮಾಡಿ ಪಾಂಡುರಾಜನ ಅರಮನೆಯಲ್ಲಿ ವಾಸಮಾಡು ಎಂದು ಕೇಳಿಕೊಳ್ಳುತ್ತೇನೆ'' ಎಂದು ವ್ಯಾಕುಲಚಿತ್ತಳಾಗಿ ಕೇಳಿಕೊಂಡಳು. ಆವಳ ಮಾತಿಗೆ ಸಮ್ಮತಿಸಿ ಕುಂತಿದೇವಿಯು ಪುತ್ರರು-ಸೊಸೆಯೊಡನೆ ಪಾಂಡುವಿನ ಅರಮನೆಗೆ ತೆರಳಿದಳು. ಅಲ್ಲಿ ಪಾಂಡವರು ಸಮಸ್ತ ಸೌಖ್ಯಗಳನ್ನು ಅನುಭವಿಸುತ್ತಾ ಐದು ಪರಿವತ್ಸರ[21]ಗಳವರೆಗೆ ವಾಸ ಮಾಡಿದರು.

ದ್ರೌಪದೀದೇವಿಯು ಯದ್ಯಪಿ ಒಂದೇ ಶರೀರವುಳ್ಳವಳಾದರೂ ಅವಳಲ್ಲಿರುವ ನಾಲ್ಕು ಸ್ವರೂಪವುಳ್ಳವಳಾಗಿ ಧರ್ಮರಾಜಾದಿ ಪಾಂಡವರೊಡನೆ ಪ್ರತ್ಯೇಕ ಪ್ರತ್ಯೇಕವಾಗಿ ಅಂದರೆ ದಿನಕ್ಕೊಬ್ಬ ಪತಿಯೊಡನೆ ವಿಹರಿಸುತ್ತಿದ್ದಳು.

ಅದು ಸರಿ, ಅಭಿಮಾನಿಗಳಾದ ಶ್ಯಾಮಲಾದೇವಿ ಮೊದಲಾದ ನಾಲ್ಕು ಜನರ ಭೇದವಿದ್ದರೂ ಅಭಿಮನ್ಯಮಾನವಾದ ಶರೀರವು ಒಂದೇ ಇರುವುದರಿಂದ ವ್ಯಭಿಚಾರದೋಷ ಬರುವುದಿಲ್ಲವೇ? ಎಂಬ ಶಂಕೆ ಬರುವುದು ಸಹಜವಾಗಿದೆ. ಆದ್ದರಿಂದಲೇ ಶ್ರೀಮದಾಚಾರ್ಯರು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಈ ಎಲ್ಲ ಸಂದೇಹ, ಸಂಶಯಗಳನ್ನೂ

---

21. ಒಂದೊಂದು ರಾಶಿಯಲ್ಲಿ ಬೃಹಸ್ಪತಿಯು ಸಂಚರಿಸುವ ಒಂದು ವರ್ಷಕ್ಕೆ ಒಂದು ಪರಿವತ್ಸರವೆಂದು ಹೆಸರು. ಹೀಗೆ 5 (ಐದು) ಪರಿವತ್ಸರ ಕಾಲ ವಾಸಿಸಿದರೆಂದು ತಿಳಿಯಬೇಕು.

ವಿಮರ್ಶಾತ್ಮಕವಾಗಿ ಅತಿ ಕೌಶಲ್ಯ ಪೂರ್ಣವಾಗಿ ವಿವೇಚಿಸಿ ನಿರ್ಣಯವನ್ನು ನೀಡಿದ್ದಾರೆ. ಆಚಾರ್ಯರ ನಿರ್ಣಯವನ್ನು ಪೂಜ್ಯರಾದ ಶ್ರೀವಾದಿರಾಜಗುರುಚರಣರು ತಮ್ಮ "ಭಾವಪ್ರಕಾಶಿಕಾ" ವ್ಯಾಖ್ಯಾನದಲ್ಲಿ ವಿಸ್ತಾರವಾಗಿ ಪ್ರಮಾಣವಾಗಿ ಸಮರ್ಥಿಸಿ ಸ್ಪಷ್ಟ ರೀತಿಯಲ್ಲಿ ತಿಳಿಸಿರುತ್ತಾರೆ. ಅದನ್ನು ಸಜ್ಜನರಿಗೆ ಉಪಯೋಗವಾಗಲೆಂದು ನಾವು ಇಲ್ಲಿ ನಿರೂಪಿಸಲು ಉದ್ಯುಕ್ತರಾಗಿದ್ದೇವೆ.

ದ್ರೌಪದಿಯು ಧರ್ಮರಾಜ-ಭೀಮಾದಿ ಬೇರೆ ಬೇರೆಯವರೊಡನೆ ವಿಹರಿಸುವಾಗ ಹಿಂದಿನ ದೇಹಾಭಿಮಾನವು ನಾಶವಾಗಿ ಅಂದರೆ ಯಾವ ಸ್ವರೂಪದಿಂದ ಯಾವ ಸ್ವರೂಪದ ಪತಿಯೊಡನೆ ರಮಿಸಬೇಕೋ ಅಂದು ಆ ಹಿಂದಿನ ಸ್ವರೂಪ ದೇಹವು ನಾಶವಾಗಿ ಅಂದಿನ ದೇಹವು ಉತ್ಪತ್ತಿಯಾಗುವುದು. ಉತ್ಪತ್ತಿಯೆಂದರೆ ಹಿಂದಿನ ದೇಹಾಭಿಮಾನನಾಶದಿಂದ ಆ ದೇಹ ನಾಶವಾಗಿ ಮರುದಿನ ಮತ್ತೊಂದು ದೇಹದ ಅಭಿಮಾನದಿಂದ ಮತ್ತೆ ಆ ದೇಹ ಉತ್ಪತ್ತಿಯಾಗುವುದು. ಲೋಕದಲ್ಲಿ ದೇಹಾಭಿಮಾನ ನಾಶವೇ ನಾಶವೆಂದೂ ಅಭಿಮಾನೋತ್ಪತ್ತಿಯೇ ಉತ್ಪತ್ತಿ ಎಂದೂ ಪ್ರಸಿದ್ಧವಾಗಿದೆ. ಆದ ಕಾರಣ ಆ ದ್ರೌಪದಿಯು ಪ್ರತಿದಿನವೂ ಕನ್ಯೆಯೇ. ಅಂದರೆ ರಮಿಸಲಿರುವ ಪತಿಯೊಡನೆ ಮಾನಸವಿವಾಹ (ಗಾಂಧರ್ವ ವಿವಾಹ) ಯೋಗ್ಯಳಾಗುತ್ತಿದ್ದುದರಿಂದ ಕನ್ಯೆಯೂ ಆಗುತ್ತಿದ್ದಳು. ಏವಂ ಚ, ಸಕಲ ಪಾಂಡವರಿಗೆ ಅವರವರ ಪತ್ನಿಯೊಡನೆ ವಿಹರಿಸುವ ದಿನ ತಮ್ಮ ತಮ್ಮ ಅಂದರೆ ಧರ್ಮರಾಜನಿಗೆ ಶ್ಯಾಮಲಾದೇವಿಯೊಡನೆ, ವಾಯ್ವಂಶನಾದ ಭೀಮನಿಗೆ ಭಾರತಿ-ಯೊಡನೆ, ಇಂದ್ರಾಂಶನಾದ ಅರ್ಜುನನಿಗೆ ಶಚೀದೇವಿಯೊಡನೆ, ಅಶ್ವಿನಿದೇವತೆಗಳಾದ ನಕುಲ-ಸಹದೇವರು ಉಷಾ-ದೇವಿಯೊಡನೆ - ಹೀಗೆ ಅವರವರ ಪತ್ನಿಯರೊಡನೆಯೇ ಸಂಗಮವಾಗುತ್ತಿತ್ತು. ಆಯಾ ಪತ್ನಿಯರಿಗೂ ತಮ್ಮ ಪತಿಯಲ್ಲದವರೊಡನೆ ಅಭಿಮಾನ ನಾಶವಾಗುತ್ತಿದ್ದುದರಿಂದ ಪರಪುರುಷ ಸಂಗದೋಷವು ಸಂಘಟಿಸುವುದಿಲ್ಲ. ತಮ್ಮ ಪತಿಯೊಡನೆ ರಮಿಸುವಾಗಲೂ ಹಿಂದಿನ ದೇಹನಾಶವಾಗಿ ನೂತನ ಉತ್ಪತ್ತಿ ಮೂಲಕ ಕನ್ಯತ್ವವನ್ನು ಪಡೆದು ಗಾಂಧರ್ವ ವಿಧಿಯಿಂದ ಮತ್ತೆ ವಿವಾಹವಾಗಿ ತನ್ನ ನಿಯತಪತಿಯೊಡನೆಯೇ ವಿಹರಿಸುತ್ತಿದ್ದುದರಿಂದ ಆ ಪತಿಗೂ ಕನ್ಯಾಗಮನ ದೋಷವಿಲ್ಲ. ಪತ್ನಿಗೂ (ಕನ್ಯೆಗೂ) ಗಾಂಧರ್ವ ವಿವಾಹ ವಿಧಿಯಿಂದಾಗಿ ಸ್ವಪತಿಯೊಡನೆಯೇ ರಮಿಸುವುದರಿಂದ ಅಸಂಸ್ಕೃತಪುರುಷಗಮನ ದೋಷವಿಲ್ಲವೆಂದು ತಿಳಿಯಬೇಕು.

ಇನ್ನು ದ್ರೌಪದಿಯ ದೇಹದಲ್ಲಿರುವ ಶ್ಯಾಮಲಾ, ಶಚಿ, ಉಷಾದೇವಿಯರಿಗೆ ಆಶ್ರಯ ದಾತಳಾದ ಭಾರತೀ-ದೇವಿಯಾದರೂ[22] ಭೀಮಸೇನರು ವಿಹರಿಸುವ ದಿನದಂದು ಸಂಪೂರ್ಣ ದೇಹಾಭಿಮಾನವನ್ನು ಹೊಂದಿರುತ್ತಾಳೆ. "ತತ್ರಾನ್ಯಗಾಸ್ತ್ವಭವತ" ಅಂದರೆ 'ನಿಮಗೆ ಪರಪುರುಷರ ಸಹವಾಸವಾಗಲಿ' ಎಂದು ಶ್ಯಾಮಲಾ, ಶಚಿ, ಉಷಾದೇವಿಯರಿಗೆ ಬ್ರಹ್ಮದೇವರು ಕೊಟ್ಟ ಶಾಪವು "ನಿಮ್ಮ ಪತಿಗಳನ್ನು ಪಡೆಯಿರಿ" ಎಂಬ ರುದ್ರದೇವರ ವರದಿಂದ ಪರಿಹೃತವಾದ್ದರಿಂದ' "ರಮತೇ ಸತತಂ ತಯಾ ಯತ್" ಎಂದು ಗ್ರಂಥಕಾರರು ಮುಂದಿನ ಶ್ಲೋಕದಲ್ಲಿ ಹೇಳಿರುವುದರಿಂದಲೂ ವಾಯುದೇವರ ಅಂಶರಾದ ಶ್ರೀಭೀಮಸೇನದೇವರೇ ಯಾವಾಗಲೂ ಭಾರತಿಯೊಡನೆಯೇ ರಮಿಸುವರು.[22ಅ] ದ್ರೌಪದಿಯಲ್ಲಿ ಶ್ರೀಭಾರತಿ-ದೇವಿಯು ಇರುವುದರಿಂದ ಶ್ಯಾಮಲಾ ಮೊದಲಾದವರಿಗೆ ಆಗ ಅಲ್ಲಿ ದೇಹಾಭಿಮಾನವೇ ಇಲ್ಲ. ಹಾಗಲ್ಲದಿದ್ದಲ್ಲಿ "ರಮತೇಸತತಂ ತಯಾಯತ್" ಎಂದು ಹೇಳದೆ "ರಮತೇ ಸತತಂ ತಾಭಿಃ" ಎಂದೇ ಹೇಳುತ್ತಿದ್ದರು. ಇನ್ನೊಬ್ಬರ ದಿನದಲ್ಲಿಯೂ ದ್ರೌಪದಿಯು "ಕೃಷ್ಣಾತ್ರಿಲೋಕವನಿತಾಽಧಿಕರೂಪಸಾರಾ" ಎಂಬ ವಚನವಿರುವುದರಿಂದ ಭಾರತಿಯಂತೆ

22 (ಈ ಗ್ರಂಥದ 18ನೆಯ ಅಧ್ಯಾಯ ಕಥಾಸಾರದಲ್ಲಿ ನಿರೂಪಿತವಾಗಿರುವ ದ್ರೌಪದಿಯ ಸ್ವರೂಪ, ಶ್ಯಾಮಲಾದಿಗಳು ಭಾರತಿಯನ್ನು ಆಶ್ರಯಕ್ಕಾಗಿ ಯಾಚಿಸುವುದು - ಇತ್ಯಾದಿ ಕಥಾಭಾಗವನ್ನು ಓದಿ ವಿವರವನ್ನರಿಯಿರಿ)

22ಅ. (18ನೇ ಅಧ್ಯಾಯ ಕಥಾಸಾರದಲ್ಲಿರುವ "ದ್ರೌಪದಿಯ ಪಂಚಕನ್ಯಾಸ್ವರೂಪ" ಭಾಗದ ವಿವರ ನೋಡಿರಿ)

ತ್ರಿಲೋಕಸ್ತ್ರೀಯೋಗ್ಯ ದಿವ್ಯಸೌಂದರ್ಯಾದಿ ಲಕ್ಷಣ ಯುಕ್ತಳಾಗಿರುವ ಯೋಗ್ಯತೆಯು ಸ್ವತಂತ್ರವಾಗಿರುವುದರಿಂದಲೂ, ಆದರೆ ಅದು ಇತರರಲ್ಲಿ ಸ್ವತಂತ್ರವಾಗಿ ಇಲ್ಲವಾದ್ದರಿಂದ ವಿವಾಹ ಸಂಭ್ರಮಕ್ಕಾಗಿ (ವೈಭವ) ಆನೆಯನ್ನು ಕೊಟ್ಟರೂ ಅದನ್ನು ನಿಯಮಿಸುವ (ನಿಯಮನ ಮಾಡುವ) ಮಾವಟಿಗನು ಜೊತೆಗೇ ಹೋಗುವಂತೆ ಪ್ರಾಯಃ ದ್ರೌಪದಿಯ ಅಭಿಮಾನ ನಾಶ ಹೊಂದಲಿಲ್ಲ, ಸ್ವಲ್ಪ ಅಭಿಮಾನವಿಟ್ಟೇ ಇರುವಳು. ಆದುದರಿಂದ ಅವಳಲ್ಲಿ ಕ್ರೀಡಿಸುವುದಕ್ಕಾಗಿ ವಾಯುದೇವರು (ಭೀಮನು) ಧರ್ಮರಾಜಾದಿ ನಾಲ್ವರಲ್ಲಿಯೂ ತನ್ನ ಸನ್ನಿಧಾನವಿಟ್ಟದ್ದಾನೆ. ಒಂದೊಂದು ಕಲೆಯಿಂದ ವಾಯುದೇವರು ಧರ್ಮಾದಿಗಳಲ್ಲಿ ಪ್ರವಿಷ್ಟರಾಗಿದ್ದರು. ಈ ಕಾರಣದಿಂದಾಗಿ ಭೀಮಸೇನನಿಗೂ ಪರಸ್ತ್ರೀಗಮನ ದೋಷವಿಲ್ಲವೆಂದು ಸ್ಪಷ್ಟವಾಗುವುದು.

ಈ ವಿಚಾರವು ಭಾರತದಲ್ಲಿ ಇಂತು ಉಕ್ತವಾಗಿದೆ - "ಇದಂ ಚ ತತ್ರಾದ್ಭುತಮುತ್ತಮಂ ತದಾ । ದದಾತಿ ಕೃಷ್ಣಾ-ವಪುಷಾತಿಮಾನುಷಂ ॥ ಮಹಾನುಭಾವಾ ಕಿಲಸಾಧುಮಧ್ಯಮಾ । ಬಭೂವಕನ್ಯೈವಗತೇಗತೇಽಹನಿ ॥ ಈ ಲೋಕದಲ್ಲಿ ಮಹಾನುಭಾವಳಾದ ದ್ರೌಪದಿಯು ಅತಿಮಾನುಷವಾದ ಅಂದರೆ ಬೇರಾರಿಂದಲೂ ಮಾಡಲು ಸಾಧ್ಯವಾಗದ ಉತ್ಕೃಷ್ಟವಾದ, ಅದ್ಭುತಕರ್ಮ (ಕ್ರಿಯೆ)ಗಳನ್ನು ಒಂದೇ ಶರೀರದಿಂದ ಸಾಗಲು ಸಮರ್ಥಳಾಗುತ್ತಾಳೆ. ಹಾಗೆಂದರೇನು? ಒಬ್ಬೊಬ್ಬ ಪತಿ-ಗಳೊಡನೆ ವಿಹರಿಸುವ ದಿನವು ಕಳೆಯುತ್ತಿರಲು ಆಯಾ ಮಧ್ಯದಲ್ಲಿ ಆಯಾ ದೇಹದಲ್ಲಿರುವ ಆಯಾ ಸ್ತ್ರೀಯರ ಪಾತಿವ್ರತ್ಯ ಸಂರಕ್ಷಣೆಗಾಗಿ ಆಯಾ ಪತ್ನಿಯರಿಗೆ ದೇಹಾಭಿಮಾನವೆಂಬ ಉತ್ಪತ್ತಿಯನ್ನೂ ಅವರವರಿಗೆ ಕರುಣಿಸಿ ಕನ್ಯೆಯೇ ಆಗಿದ್ದಳೆಂದು ಭಾವ. ಇಂತು ದ್ರೌಪದಿಗೆ ಮಹಾಸಾಮರ್ಥ್ಯವಿರುವುದರಿಂದ ಅತಿಮಾನುಷವೂ ಆಶ್ಚರ್ಯಕರವೂ, ಉತ್ತಮವೂ ಆದ ಕಾರ್ಯವನ್ನು ಅಂದರೆ ಒಬ್ಬಳಿಗೆ ಐದುಜನ ಪುರುಷಸಂಗ ದೋಷಪರಿಹಾರಕ ಸ್ವರೂಪವಿರುವುದರಿಂದ, ಅಂದರೆ ಒಂದೇ ಶರೀರಕ್ಕೆ ಪಂಚರೂಪತ್ವವಿರುವುದರಿಂದ ಅದ್ಭುತವೂ ಉತ್ತಮವೂ ಆದ ಪಂಚಸ್ತ್ರೀರೂಪವಿರುವಿಕೆಯೂ ಅದರಲ್ಲಿಯೂ ಸ್ವಸ್ವಪತಿ ಸಂಬಂಧದಲ್ಲಿ ಹಿಂದಿನ ಅಭಿಮಾನನಾಶ ನೂತನ ಉತ್ಪತ್ತಿಯಿಂದ ದಿನದಿನವೂ ಹೊಸ ಕನ್ಯತ್ವವೂ ಇರುವುದೆಂದು ಶ್ರೀವೇದವ್ಯಾಸರೇ ಅಪ್ಪಣೆ ಕೊಡಿಸಿದ್ದಾರೆ. ಕನ್ಯತ್ವವಿರುವುದರಿಂದಲೇ ಮತ್ತೆ ಗಾಂಧರ್ವವಿಧಿಯಿಂದ ವಿವಾಹ ಮತ್ತು ಸ್ವಪತಿಯೊಡನೆ ಕ್ರೀಡಿಸುವುದು, ಮತ್ತೊಬ್ಬ ಸ್ತ್ರೀ ದಿನದಲ್ಲಿ ದೇಹಾಭಿಮಾನ ನಾಶದಿಂದ ಆಕೆಯ ರಮಣನೊಡನೆ ರಮಿಸದೇ ಇರುವಿಕೆ - ಇವೇ ಮುಂತಾದ ಅದ್ಭುತ ಅತಿಮಾನುಷ ಕ್ರಿಯೆಗಳನ್ನು ಒಂದೇ ದೇಹದಿಂದ ನೆರವೇರಿಸಲು ದ್ರೌಪದಿಯು ಸಮರ್ಥಳಾದುದರಿಂದ ಯಾವ ದೋಷಪ್ರಸಕ್ತಿಗೂ ಅವಕಾಶವಿಲ್ಲ.

ಹೀಗೆ ಸಕಲ ಶಂಕೆಗಳೂ ಪರಿಹೃತವಾಗಿರುವುದರಿಂದ ಶ್ರೀಮದಾಚಾರ್ಯರು ನಿರೂಪಿಸಿದ "ಪಂಚದ್ರೌಪದೀ"[23] ಎಂಬ ವ್ಯಾಖ್ಯಾನದಲ್ಲಿ ಯಾವ ಕ್ಷುದ್ರೋಪದ್ರವವೂ ಇಲ್ಲ. ಹೆಚ್ಚೇನು?- "ಬಭೂವ ಕನ್ಯೈವ ಗತೇಗತೇಽಹನಿ" ಎಂದು, "ಕನ್ಯೈವಸಾಽಭವದತಃ ಪ್ರತಿವಾಸರಂ ಚ" ಎಂದು ಪದವಿನ್ಯಾಸಗಳಿಂದಲೂ ಸಹ ಒಂದೇ ವಿಧವಾಗಿರುವುದರಿಂದ "ಮಹಾ ಭಾರತತಾತ್ಪರ್ಯನಿರ್ಣಯಕಾರ"ರಾದ ಶ್ರೀ ಮನ್ಮಧ್ವಾಚಾರ್ಯರು ಅತ್ಯಂತ ಪ್ರಾಮಾಣಿಕರೆಂದು ತಿಳಿಯಬೇಕೆಂದು ಪೂಜ್ಯ ಶ್ರೀವಾದಿರಾಜಸ್ವಾಮಿಗಳವರು ತಮ್ಮ "ಭಾವಪ್ರಕಾಶಿಕಾಟೀಕೆ"ಯಲ್ಲಿ ಸ್ಪಷ್ಟಪಡಿಸಿರುತ್ತಾರೆ.

ಮೇಲಿನ ವಿಚಾರವನ್ನೇ ನಿರ್ಣಯಾಚಾರ್ಯರು ಸ್ಪಷ್ಟಪಡಿಸುತ್ತಾರೆ - ವಾಯುದೇವರು ಧರ್ಮಾದಿಗಳಲ್ಲಿ ಆವಿಷ್ಟರಾಗಿ ಅವರನ್ನು ಮೂರ್ಛಾವಸ್ಥೆಗೆ ತಂದು ದ್ರೌಪದಿಯಲ್ಲಿರುವ ಭಾರತಿಯೊಡನೆ ಸತತವೂ ರಮಿಸುವರು. ಪ್ರತಿದಿನವೂ ಇತರರು ದೇಹಾಭಿಮಾನ ಶೂನ್ಯರಾಗಿದ್ದು ಅದು ಮರಣಸಮಾನವಾದ್ದರಿಂದ ಯಾರೊಬ್ಬರ ಸಂಬಂಧವೂ ಇಲ್ಲದೆ ದ್ರೌಪದಿಯು ಶುದ್ಧ ಕನ್ಯೆಯೇ ಆಗಿರುವಳು. ವಾಯುದೇವರು ಯುಧಿಷ್ಠಿರಾದಿಗಳಲ್ಲಿ ಪ್ರವಿಷ್ಟರಾಗಿ ಅವರು ಬುದ್ಧಿಯನ್ನು ಭಾರತಿಯ ವಿಷಯದಲ್ಲಿ ಮೋಹಗೊಳಿಸಿ ದ್ರೌಪದಿಯಲ್ಲಿರುವ ಭಾರತಿಯೊಡನೆ ಯಾವಾಗಲೂ (ಧರ್ಮರಾಜಾದಿಗಳೊಡನಿರುವಾಗಲೂ

23 ಹದಿನೆಂಟನೆಯ ಅಧ್ಯಾಯದಲ್ಲಿ ಬರುವ ಪಂಚದ್ರೌಪದಿಯರ ವಿಚಾರವನ್ನು ಗಮನಿಸಿರಿ.

ಸಹ, ಅವರೊಳಗೆ ಪ್ರವಿಷ್ಟರಾದ) ವಾಯುದೇವರೇ ವಿಹರಿಸುವುದರಿಂದ ವಾಯುದೇವರ ಸಂಗ ಬಿಟ್ಟು ಬೇರೊಬ್ಬರ ಸಂಬಂಧವಿಲ್ಲದ ದ್ರೌಪದಿಯು ಮರಣಕಾಲದ ಮೋಹದಂತೆ ಅರ್ಥಾತ್ ದೇಹಾಭಿಮಾನವಿಲ್ಲದ ಕಾರಣ ಆ ದೇಹದಲ್ಲಿ ಅವಳು ಕನ್ಯೆಯೇ ಆಗಿರುವಳು. ದೇಹಕ್ಕೆ ಅನ್ಯರ ಅಧೀನವಿಲ್ಲದಿರುವುದರಿಂದಲೂ, ಇಲ್ಲಿ ಅನ್ಯರ ಅಧೀನವಿಲ್ಲ-ದಿರುವುದರಿಂದಲೂ ಅದು ಸುಷುಪ್ತಿಯಂತಲ್ಲ, ಪರಮಾತ್ಮನ ಸ್ಮರಣವಿರುವುದರಿಂದ ಮೋಹವಲ್ಲ. ಮೋಹವೆಂದರೆ ಮೂರ್ಛಾವಸ್ಥೆ. ಆಗ ಪರಮಾತ್ಮನ ಸ್ಮರಣವಿರುವುದಿಲ್ಲ. ಆದರೆ ಇಲ್ಲಿ ಹರಿಸ್ಮರಣೆಯುಂಟು. ಅತಃ ಅದು ಮೂರ್ಛಾವಸ್ಥೆಯಲ್ಲ (ಮೋಹವಲ್ಲ), ಪರಮಾತ್ಮನ ಸ್ಮರಣೆಯಿರುವುದರಿಂದ ಅದು ಭೂತಾವೇಶದಂತೆಯೂ ಅಲ್ಲ. ಇಂತು ಸುಪ್ತ್ಯಾದಿ ಮೂರುವಿಧ ವೈಲಕ್ಷಣ್ಯವಿರುವುದರಿಂದ ದೇಹಾಭಿಮಾನವನ್ನು ಬಿಡುವಿಕೆಯು ಮರಣಸಮಾನವಾದದ್ದು. ಹಿಂದಿನ ಅಭಿಮಾನವಿಲ್ಲದ ಅವಸ್ಥೆಯು ಮರಣಸದೃಶವಾದ್ದರಿಂದ ಮತ್ತು ಪ್ರತಿದಿನವೂ ಉತ್ಪತ್ತಿಯಿರುವ ಕಾರಣ (ಅಂದರೆ ದೇಹಾಭಿಮಾನ ಹುಟ್ಟು-ವುದರಿಂದ) ದ್ರೌಪದಿಯು ಕನ್ಯೆಯೇ ಆಗಿದ್ದಳೆಂದು ತಿಳಿಯಬೇಕು.

ಪ್ರತಿದಿವಸವೂ ಒಬ್ಬೊಬ್ಬ ಪತಿಯೊಡನೆ ಕ್ರೀಡಿಸುವಾಗ ಮತ್ತೊಬ್ಬಳಿಗೆ ಉಂಟಾಗುವ ವ್ಯಾಪಾರವು ಅಂದರೆ ದೇಹವನ್ನು ಮತ್ತೊಬ್ಬರ ಅಧೀನವಾಗಿಸಿ ಸ್ವಾಭಿಮಾನ ಬಿಟ್ಟಿರುವುದರಿಂದ ಸರ್ವದಾ ಹರಿಸ್ಮರಣವಿರುವುದರಿಂದ ಆ ಅವಸ್ಥೆಯು ಸುಷುಪ್ತಿಯಂತಲ್ಲ, ಮೂರ್ಛೆಯಂತೆಯೂ ಅಲ್ಲ, ಭೂತಾವೇಶದಂತಲೂ ಅಲ್ಲ - ಸುಪ್ತ್ಯಾದಿ ಮೂರು ಅವಸ್ಥೆಗಳಲ್ಲಿ ಸ್ಮರಣವೇ ಇರುವುದಿಲ್ಲ. ಇಲ್ಲಾದರೋ ದ್ರೌಪದಿಯಲ್ಲಿರುವ ಶ್ಯಾಮಲಾ, ಶಚೀ ಮೊದಲಾದವರಿಗೆ ತದಿತರರು ರಮಿಸುವಾಗ ದೇಹವಿಸ್ಮರಣವಿದ್ದರೂ ಹರಿಸ್ಮರಣವು ಇದ್ದೇ ಇರುತ್ತದಾದ್ದರಿಂದ ಮರಣ ಸ್ವರೂಪವೇ ಆಗಿದೆ. ಮುಕ್ತಿಕಾಲದಲ್ಲಿ ದೇಹಾಭಿಮಾನವಿಲ್ಲದಿದ್ದರೂ ಹರಿಸ್ಮರಣವಿದ್ದು ಅದು ಮರಣವೇ ಅನಿಸುವಂತೆ ಇಲ್ಲಿ ಹಿಂದಿನ ದೇಹಾಭಿಮಾನನಾಶದಿಂದ ಮರಣವಾಗಿ ಮರುದಿನ ದೇಹಾಭಿಮಾನದಿಂದ ಮತ್ತೆ ಉತ್ಪತ್ತಿಯಾಗುವುದರಿಂದ ದ್ರೌಪದಿಯು ಕನ್ನಿಕೆಯೇ ಆಗಿದ್ದಳು ಎಂಬುದನ್ನು "ಇದಂ ಚ ತತ್ರಾದ್ಭುತಂ" ಎಂದು 'ಮಹಾಭಾರತ'ದಲ್ಲಿ ಹೇಳಿರುವುದು ಪ್ರಸಿದ್ಧವಾಗಿದೆ.

ಧರ್ಮರಾಜಾದಿಗಳಲ್ಲಿ ಆವಿಷ್ಟರಾದ ವಾಯುದೇವರ ಅಂಶ ಮತ್ತು ಭೀಮಸೇನರೂಪ ಹೀಗೆ ಎರಡು ಬಗೆಯಾಗಿಯೂ ಆ ದ್ರೌಪದಿಯಲ್ಲಿ ಮತ್ತು ಅವಳಲ್ಲಿರುವ ಭಾರತಿಯಲ್ಲಿ ವಾಯುದೇವರೊಬ್ಬರೇ ಕ್ರೀಡಿಸುತ್ತಾರೆ. ಧರ್ಮರಾಜನಲ್ಲಿರುವ ಯುಧಿಷ್ಠಿರ ಮತ್ತು ಅವನಲ್ಲಿ ಪ್ರವಿಷ್ಟರಾದ ವಾಯುದೇವರು ಹೀಗೆ ಇಬ್ಬರಿದ್ದಾರೆ. ಅದರಂತೆ ಅರ್ಜುನಾದಿಗಳಲ್ಲಿಯೂ ಇಬ್ಬರಿದ್ದಾರೆ. ಇದೇ ಪ್ರಕಾರವಾಗಿ ದ್ರೌಪದಿಯ ದೇಹದಲ್ಲಿಯೂ ಸಹ ತಮ್ಮ ತಮ್ಮ ದಿನಗಳಲ್ಲಿನ ಶ್ಯಾಮಲಾದಿಗಳಲ್ಲಿ ಒಬ್ಬರು ಹಾಗೂ ಭಾರತೀದೇವಿ ಹೀಗೆ ಇಬ್ಬರಿದ್ದಾರೆ. ಹೀಗೆ ಹೇಳಿದಲ್ಲಿ ಧರ್ಮರಾಜನು ಭಾರತಿಯನ್ನು ಬಿಟ್ಟು ಸ್ವಸ್ತ್ರೀ ಶ್ಯಾಮಲಾ-ದೇವಿಯೊಡನೆಯೂ ಅವನಲ್ಲಿ ಆವಿಷ್ಟನಾದ ವಾಯುವು ಭಾರತಿಯೊಡನೆಯೂ ರಮಿಸುತ್ತಾರೆ ಎಂಬುದು ಹೇಗೆ ಕೂಡುವುದು? ಎಂದರೆ, ದೇವತೆಗಳ ಭೋಗವು ಮಾನವರ ಭೋಗಕ್ಕಿಂತ ವಿಲಕ್ಷಣವಾದ್ದರಿಂದ ಇಲ್ಲಿ ವಿಚಾರಾಂಶವೇನೂ ಇರುವುದಿಲ್ಲ.

ಶ್ರೀಕೃಷ್ಣ-ವೇದವ್ಯಾಸರು ಪಾಂಡವರಲ್ಲಿನ ಬಂಧುಪ್ರೇಮದಿಂದ ಅವರ ಮನೆಯಲ್ಲಿ ಕೆಲಕಾಲ ವಾಸ ಮಾಡಿದರು. ಪಾಂಡವರು ಆ ಮಹನೀಯರ ದರ್ಶನ, ಸಂಭಾಷಣೆ ಹಾಗೂ ಅವರಿಂದ ವೇದ-ಪುರಾಣಾದಿ ಕಥಾಶ್ರವಣಾದಿಗಳನ್ನು ಮಾಡಿ ಆನಂದಿಸಿದರು.

ಈಗ ದುರ್ಯೋಧನಾದಿ ಕೌರವರ ವಿವಾಹವಿಚಾರಗಳನ್ನು ನಿರೂಪಿಸುತ್ತಾರೆ. ಹಿಂದೆ ಪಾಂಡವರು ಹಿಡಿಂಬವನದಲ್ಲಿ ವಾಸಮಾಡುತ್ತಿದ್ದ ಸಮಯದಲ್ಲಿ ಕಾಶೀರಾಜನ ಪುತ್ರಿಯ ಸ್ವಯಂವರವು ನೆರವೇರಿತು. ತನ್ನ ವಂಶಕ್ಕೆ ಸರಿಯಾದ ರಾಜ-ಸಂಬಂಧವನ್ನು ಮಾಡಬಯಸಿ ದುರ್ಯೋಧನನು ಸ್ವಯಂವರ ಕಾಲದಲ್ಲಿ ಬಾಹುಬಲದ ಗರ್ವದಿಂದ ಕಾಶೀರಾಜನ

ಪುತ್ರಿಯನ್ನು ಅಪಹರಿಸಿದನು. ಇದರಿಂದ ಕುಪಿತರಾದ ಜರಾಸಂಧ ಮತ್ತಿತರ ರಾಜರು ಯುದ್ಧಕ್ಕೆ ಬಂದರು. ಕರ್ಣಾದಿಗಳಿಂದ ಸಹಿತನಾದ ದುರ್ಯೋಧನನು ಅವರನ್ನು ಜಯಿಸಿದನು. ಅವರು ಮತ್ತೆ ಯುದ್ಧಸನ್ನದ್ಧರಾಗಿ ಬರುವಷ್ಟರಲ್ಲಿ ಕರ್ಣನು "ಮಿತ್ರ ದುರ್ಯೋಧನ! ನೀನು ತಮ್ಮಂದಿರೊಡನೆ ಹಸ್ತಿನಾವತಿಗೆ ಹೊರಟುಹೋಗು, ಇವರು ಭೀಷ್ಮಾದಿಗಳಿಂದ ಕೂಡಿದ ನಿನ್ನ ಪಟ್ಟಣಕ್ಕೆ ಬಂದು ಯುದ್ಧಮಾಡಲಾರರು. ಜರಾಸಂಧನು ಯುದ್ಧದಲ್ಲಿ ಜಯ ನಿಶ್ಚಯವೆಂದರಿಯದೆ ಕದನಕ್ಕೆ ಬರಲಾರ. ನಿಮ್ಮ ನಗರವು ಕೋಟೆಕೊತ್ತಲಗಳಿಂದ ಸುಭದ್ರವಾಗಿದೆ. ರುದ್ರಭಕ್ತನಾದ ಅವನು ಅಶ್ವತ್ಥಾಮನು ರುದ್ರಾಂಶ-ನೆಂದರಿತಿರುವುದರಿಂದ ಅವನೊಡನೆ ಯುದ್ಧ ಮಾಡುವುದಿಲ್ಲ. ಕಾರಣ ನೀನು ಹಸ್ತಿನಾವತಿಗೆ ಸಹೋದರರೊಡನೆ ತೆರಳು. ನಾನೊಬ್ಬನೇ ಇವರೊಡನೆ ಹೋರಾಡುತ್ತೇನೆ. ನಾನು ಸೋತರೂ ನಿನಗೆ ಅಪಕೀರ್ತಿಬಾರದು. ಅಕಸ್ಮಾತ್ ನಿನ್ನ ತಮ್ಮಂದಿರಲ್ಲೊಬ್ಬನನ್ನು ಜರಾಸಂಧನು ಹಿಡಿದುಬಿಟ್ಟರೆ ನಿಮ್ಮ ಕೀರ್ತಿಗೆ ಕಳಂಕ. ನಿನ್ನ ತಮ್ಮಂದಿರನ್ನು ಹಿಡಿಯಲವನು ಸಮರ್ಥನಲ್ಲವೆಂದು ನೀನು ಭಾವಿಸಬೇಡ. ಭೀಷ್ಮಾದಿಗಳೂ ಇವನೊಡನೆ ಹೋರಾಡಲು ಅಸಮರ್ಥರೆಂದ ಮೇಲೆ ನಿನ್ನ ತಮ್ಮಂದಿರ ವಿಚಾರ ಹೇಳುವುದೇನು?" ಇತ್ಯಾದಿಯಾಗಿ ಹೇಳಿ ಅವರನ್ನು ಹಸ್ತಿನಾವತಿಗೆ ಕಳಿಸಿದನು. ಕರ್ಣನೊಬ್ಬನೇ ಅವರೆಲ್ಲರನ್ನೂ ಜಯಿಸಿದನು. ಆಗ ಜರಾಸಂಧನೂ ಕರ್ಣನೊಡನೆ ಹೋರಾಡಿ ಜಯಿಸಿದನು. ಮತ್ತೆ ಮುಷ್ಟಿಯುದ್ಧ ಮಾಡುವಾಗ ಜರೆಯಿಂದ ಕೂಡಿಸಲ್ಪಟ್ಟ ಜರಾಸಂಧನ ಸಂಧಿಯಲ್ಲಿ ಕರ್ಣನು ಹೊಡೆದಾಗ ಜರಾಸಂಧನು "ಭಲೇ ಕರ್ಣ, ಬಲರಾಮನೂ ತಿಳಿಯಲಾಗದ ಈ ಮರ್ಮಸ್ಥಾನವನ್ನು ನೀನರಿತಿರುವೆ. ನೀನು ಪರಾಕ್ರಮಿ, ನನ್ನ ಸಾಮಂತನಾಗು. ನಿನ್ನನ್ನು ನಾನು ಸಂಹರಿಸುವುದಿಲ್ಲ. ನಿನ್ನ ತಂದೆ ಅಧಿರಥನಿಂದ ನಾನು ಗೆದ್ದಿದ್ದ ಅಂಗರಾಜ್ಯವನ್ನು ನಿನಗೇ ಕೊಟ್ಟಿದ್ದೇನೆ. ನೀನು ಯುದ್ಧಕಾಲದಲ್ಲಿ ನನ್ನ ಸಹಾಯಕನಾಗಿರು" ಎಂದನು. ಕರ್ಣನು ಅದಕ್ಕೆ ಸಮ್ಮತಿಸಿ ಅವನು ನೀಡಿದ ಅಂಗರಾಜ್ಯವನ್ನು ಸ್ವೀಕರಿಸಿದನು.

ಅಂಗರಾಜ್ಯವನ್ನು ದುರ್ಯೋಧನನು ಕರ್ಣನಿಗೆ ಕೊಟ್ಟನೆಂದು ಹಿಂದೆ ಹೇಳಲಾಗಿದೆ. ಈಗ ಜರಾಸಂಧನು ಕೊಟ್ಟನೆಂದು ಹೇಳಲಾಗಿದೆ. ಇವೆರಡೂ ಪರಸ್ಪರ ವಿರುದ್ಧವಲ್ಲವೇ ಎಂಬ ಶಂಕೆ ಬರುವುದು ಸಹಜ. ಹಿಂದೆ ಅಧಿರಥನು ಅಂಗರಾಜ್ಯವನ್ನು ಪಾಲಿಸುತ್ತಿರುವಾಗ ಜರಾಸಂಧನು ಅವನನ್ನು ಜಯಿಸಿ ಅಂಗರಾಜ್ಯವನ್ನು ವಶಪಡಿಸಿಕೊಂಡಿದ್ದನು. ಮುಂದೆ ಧರ್ಮರಾಜನಿಗೆ ಯುವರಾಜ್ಯಾಭಿಷೇಕವಾದ ಕಾಲದಲ್ಲಿ ಭೀಮಸೇನನು ಮಗಧಚಕ್ರವರ್ತಿ ಜರಾಸಂಧನನ್ನು ಸೋಲಿಸಿ ಅಂಗರಾಜ್ಯದ ಬಹುಭಾಗವನ್ನು ಮತ್ತೆ ಸಂಪಾದಿಸಿ ಧೃತರಾಷ್ಟ್ರನಿಗೆ ಅರ್ಪಿಸಿದ್ದನು. ಆ ಅಂಗದೇಶದ ಒಂದು ಭಾಗವನ್ನೇ ದುರ್ಯೋಧನನು ಕರ್ಣನಿಗೆ ಕೊಟ್ಟಿದ್ದನು. ಈಗ ಉಳಿದ ಎಲ್ಲ ಅಂಗದೇಶಭಾಗವನ್ನು ಜರಾಸಂಧನು ಕರ್ಣನಿಗೆ ಕೊಟ್ಟನಾದ್ದರಿಂದ ವಿರೋಧವಿಲ್ಲವೆಂದು ತಿಳಿಯಬೇಕು.

ಈಗ ಕರ್ಣನು ದುರ್ಯೋಧನ ನೀಡಿದ ಭಾಗ, ಜರಾಸಂಧನಿತ್ತ ಭಾಗ ಸೇರಿ ಸಂಪೂರ್ಣ ಅಂಗದೇಶಾಧಿಪತಿಯೆನಿಸಿ ಹಸ್ತಿನಾವತಿಗೆ ಬಂದನು. ದುರ್ಯೋಧನಾದಿಗಳಿಗೆ ಅದರಿಂದ ಹರ್ಷವಾಯಿತು. ಜರಾಸಂಧನನ್ನು ಜಯಿಸಿದ ಕರ್ಣನು ಶ್ರೀಕೃಷ್ಣನಿಗಿಂತ ಅಧಿಕನೆಂದು ಅವರು ತಿಳಿದರು.

ದುರ್ಯೋಧನನು ಕಾಶೀರಾಜಪುತ್ರಿಯನ್ನು ವಿವಾಹವಾದನು. ಅವಳು ಪೂರ್ವದಲ್ಲಿ ಅಲಕ್ಷ್ಮೀಸ್ವರೂಪಳು, ಜ್ಯೇಷ್ಠಾ ಎನಿಸಿಕೊಂಡವಳು. ಅವಳೀಗ ಪಾರ್ವತಿಯಿಂದ ಆವಿಷ್ಟಳಾಗಿ ಕಾಶಿರಾಜನ ಪುತ್ರಿಯಾಗಿ ಜನಿಸಿದ್ದಳು. ಅವಳನ್ನೇ ದುರ್ಯೋಧನನು ಲಗ್ನವಾದನು. ಹಿಂದೆ ಅಕ್ಷಕುಮಾರನಾಗಿ ರಾವಣನ ಮಗನಾಗಿದ್ದ ಅಸುರನನ್ನೇ ದುರ್ಯೋಧನನು ಪುತ್ರನಾಗಿ ಪಡೆದನು. ಹಿಂದೆ ಷಣ್ಮುಖನ ಪ್ರಿಯಪತ್ನಿಯಾಗಿದ್ದವಳನ್ನೇ ಈಗ ಸುಯೋಧನನು ಪುತ್ರಿಯಾಗಿ ಪಡೆದನು. ಪುತ್ರನಿಗೆ ಲಕ್ಷಣನೆಂದೂ, ರೂಪ, ಗುಣಸಂಪನ್ನಳಾದ ಮಗಳಿಗೆ ಲಕ್ಷಣಾ ಎಂದು ಹೆಸರಿಟ್ಟನು. ದುರ್ಯೋಧನನ

ಸಹೋದರರೂ ತಮತಮಗೆ ಯೋಗ್ಯರಾದ ಸ್ತ್ರೀಯರನ್ನು ಪತ್ನಿಯರನ್ನಾಗಿ ಪಡೆದರು. ಪೂರ್ವದಲ್ಲಿ ದೇವಾಂತಕನೆಂದು ಖ್ಯಾತನಾಗಿದ್ದವನೇ ಈಗ ದುಶ್ಯಾಸನನಿಗೆ ಪುತ್ರನಾಗಿ ಜನಿಸಿದನು. ಹೀಗೆ ಕೆಲಕಾಲ ಕಳೆಯಿತು. ಪಾಂಡವರ ಬಲ, ವೀರ್ಯ ಮತ್ತು ಸದ್ಗುಣಗಳನ್ನೂ ತ್ರಿಲೋಕಸುಂದರಿಯಾದ ದ್ರೌಪದಿಯನ್ನೂ ಕಂಡು ಅಸೂಯಾಪರರಾಗಿ ದುರ್ಯೋಧನಾದಿಗಳು ಸಂತಾಪದಿಂದ ಕಳಿಂಗ ದೇಶಕ್ಕೆ ಹೋದರು.

ಕಳಿಂಗರಾಜನಾದ ಸುವಜ್ರನು ತನ್ನ ಮಗಳ ಸ್ವಯಂವರ ಘೋಷಿಸಿದ್ದನು. ರುದ್ರದೇವರ ವರಬಲದಿಂದ ಅಜೇಯನಾಗಿದ್ದ ಸುವಜ್ರನ ಮಗಳನ್ನು ಮದೋನ್ಮತ್ತನಾದ ದುರ್ಯೋಧನನು ಬಲಾತ್ಕಾರವಾಗಿ ಅಪಹರಿಸಿದನು. ಇದರಿಂದ ಕುಪಿತನಾದ ಸುವಜ್ರನು ಜರಾಸಂಧ ಸಹಿತನಾಗಿ ಯುದ್ಧಮಾಡಿ ಜಯಗಳಿಸಿ ದುರ್ಯೋಧನ ಮತ್ತು ಅವನ ತಮ್ಮಂದಿರನ್ನೂ ಹಿಡಿದು ಕಟ್ಟಿಹಾಕಿದನು. ಆಗ ತಾನೇ ದುರ್ಯೋಧನನನ್ನು ಬಿಡಿಸಬೇಕೆಂದು ಕರ್ಣನು ಪಾಂಡವರ ಮೇಲಿನ ಸ್ಪರ್ಧೆಯಿಂದ ಯುದ್ಧರಂಗಕ್ಕೆ ಬಂದು ಹೋರಾಡಿದನು. ಸ್ಪರ್ಧೆಯಿಂದ ಯುದ್ಧ ಮಾಡಿದ್ದರಿಂದ ಅವನು ಪರಾಜಿತನಾದನು.

ಕಳಿಂಗದ ಸುವಜ್ರಮಹಾರಾಜನು ದುರ್ಯೋಧನ ಮತ್ತವನ ತಮ್ಮಂದಿರನ್ನು ಬಂಧಿಸಿಟ್ಟಿರುವ ವಿಚಾರ ತಿಳಿದು ಭೀಷ್ಮ, ಧೃತರಾಷ್ಟ್ರ, ವಿದುರ, ಧರ್ಮರಾಜರಿಂದ ಪ್ರೇರಿತನಾದ ಭೀಮಸೇನನು ಕಳಿಂಗಕ್ಕೆ ಬಂದು ಜರಾಸಂಧ ಸಹಿತರಾದ ಎಲ್ಲ ರಾಜರನ್ನು ಜಯಿಸಿ, ಸುವಜ್ರನನ್ನು ಸಂಹರಿಸಿ ದುರ್ಯೋಧನಾದಿಗಳನ್ನು ಬಂಧನದಿಂದ ಬಿಡಿಸಿದನು. ಆಗ ದುರ್ಯೋಧನಾದಿಗಳು ಕರ್ಣನೊಡನೆ ಅಪಜಯ ಅಪಕೀರ್ತಿಗಳಿಂದ ತಲೆತಗ್ಗಿಸಿ ಮೃತಪ್ರಾಯರಾಗಿ ಹಸ್ತಿನಾವತಿಗೆ ಬಂದು ಸೇರಿದರು. ಪಾಂಡವರ ವಿಜಯ-ಅಭ್ಯುದಯ ತನ್ನ ಪುತ್ರರ ಪರಾಜಯ ಮತ್ತು ಅವರ ಪಾಂಡವರಲ್ಲಿನ ವಿರೋಧ-ಗಳನ್ನು ಕಂಡು ಧೃತರಾಷ್ಟ್ರನು ಧರ್ಮನಂದನನನ್ನು ಕರೆದು "ಯುಧಿಷ್ಠಿರ, ನೀನು ಇಂದ್ರಪ್ರಸ್ಥಕ್ಕೆ ಹೋಗಿ ಅಲ್ಲಿ ನಿನ್ನ ಸಹೋದರರೊಡನೆ ಅರ್ಧರಾಜ್ಯವನ್ನೂ, ಅರ್ಧಕೋಶಾಗಾರವನ್ನು ಸ್ವೀಕರಿಸಿ ಅಲ್ಲಿ ರಾಜ್ಯಭಾರಮಾಡು. ಪೂರ್ವದಲ್ಲಿ ಅಲ್ಲಿ ಬ್ರಹ್ಮಾದಿದೇವತೆಗಳಿಂದ ಅಭಿಷಿಕ್ತನಾದ ಇಂದ್ರನು ಬಹುಕಾಲ ರಾಜ್ಯವಾಳಿದನು. ವತ್ಸ! ನೀನು ಇಂದ್ರನಿಗೆ ಸಮನಾಗಿರುವೆ, ಆದ್ದರಿಂದ ಇಂದ್ರಪ್ರಸ್ಥವೇ ನಿನಗೆ ಯೋಗ್ಯವಾದ ರಾಜಧಾನಿಯಾಗಿದೆ. ಶೀಘ್ರವಾಗಿ ನಿನಗೆ ಆ ರಾಜ್ಯಕ್ಕೆ ದೊರೆಯೆಂದು ಪಟ್ಟಾಭಿಷೇಕ ಮಾಡುತ್ತೇನೆ" ಎಂದು ಹೇಳಿದನು. ಧರ್ಮರಾಜನು ದೊಡ್ಡಪ್ಪನಲ್ಲಿದ್ದ ಗೌರವದಿಂದ ಒಪ್ಪಿದನು. ಧೃತರಾಷ್ಟ್ರನು ಯುಧಿಷ್ಠಿರನಿಗೆ ಪಟ್ಟಾಭಿಷೇಕ ಮಾಡಿಸಿದನು. ಶ್ರೀವೇದವ್ಯಾಸರು ಮೊದಲು ಧರ್ಮರಾಜನಿಗೆ ಪಟ್ಟಾಭಿಷೇಕ ಮಾಡಿ "ನೀನು ಶ್ರೇಷ್ಠ ಚಕ್ರವರ್ತಿಯಾಗು. ಸದಾ ಧರ್ಮನಿರತನಾಗಿ ಅಶ್ವಮೇಧ-ರಾಜಸೂಯಾದಿಯಾಗಗಳಿಂದ ದೇವತೆಗಳನ್ನು ಪೂಜಿಸು" ಎಂದು ಆಶೀರ್ವದಿಸುತ್ತಾ ದ್ರೌಪದೀ ಸಹಿತನಾದ ಯುಧಿಷ್ಠಿರನಿಗೆ ಪಟ್ಟಾಭಿಷೇಕ ಮಾಡಿದರು ನಂತರ ಪತ್ನೀ-ಸಹಿತನಾದ ಭೀಮಸೇನನನ್ನೂ ಆಶೀರ್ವದಿಸುತ್ತಾ ಯೌವರಾಜ್ಯದಲ್ಲಿ ಶ್ರೀಕೃಷ್ಣನೊಡಗೂಡಿ ಪಟ್ಟಾಭಿಷೇಕ ಮಾಡಿದರು. ಅನಂತರ ಅನೇಕ ಶ್ರೇಷ್ಠ ಬ್ರಾಹ್ಮಣರೂ ಅವರಿಗೆ ಅಭಿಷೇಕ ಮಾಡಿದರು. ಅದನ್ನು ಕಂಡು ಸಜ್ಜನರೆಲ್ಲರೂ ಅತ್ಯಂತ ಸಂತೋಷಭರಿತರಾದರು.

ಇಂತು ಏಳುದಿನಪರ್ಯಂತ ಮಹೋತ್ಸವವು ಜರುಗಿ ಪ್ರಜರು-ಧಾರ್ಮಿಕರು ಪರಮಾನಂದಮಗ್ನರಾದರು. ಅನಂತರ ಶ್ರೀವೇದವ್ಯಾಸರು-ಶ್ರೀಕೃಷ್ಣರೊಡನೆ, ಕುಂತೀದೇವಿ, ದ್ರೌಪದೀಸಹಿತರಾಗಿ ಪಾಂಡವರು ಇಂದ್ರಪ್ರಸ್ಥಕ್ಕೆ ಪ್ರಯಾಣ ಬೆಳೆಸಿದರು. ಆಗ ಹಸ್ತಿನಾವತಿಯ ಸಮಸ್ತಪ್ರಜರೂ "ದುಷ್ಟರಾದ ದುರ್ಯೋಧನನ ರಾಜ್ಯದಲ್ಲಿ ನಾವು ಇರುವುದಿಲ್ಲ. ಧಾರ್ಮಿಕರೂ ಮಹಾಪರಾಕ್ರಮಿಗಳು ಎಲ್ಲಿರುವರೋ ಅಲ್ಲಿಯೇ ನಾವು ವಾಸಿಸುತ್ತೇವೆ" ಅದರಿಂದ ನಮಗೆ ಐಹಿಕಾಮುಷ್ಮಿಕ ಮಂಗಳವಾಗುವುದು ಎಂದು ಹೇಳುತ್ತಾ ಎಲ್ಲರೂ ಪಾಂಡವರನ್ನು ಅನುಸರಿಸಿ ಬರಲಾರಂಭಿಸಿದರು. ಆಗ ದುರ್ಯೋಧನನು

"ಯಾರು ಹಸ್ತಿನಾಪುರ ಬಿಟ್ಟು ಪಾಂಡವರೊಡನೆ ಹೋಗುವರೋ ಅವರ ಎಲ್ಲ ಆಸ್ತಿಪಾಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು" ಎಂದು ಡಂಗುರ ಸಾರಿಸಿದನು. ಆದರೂ ಅದನ್ನು ಲಕ್ಷಿಸದೇ ಪ್ರಜಾಜನರು ಪಾಂಡವರನ್ನು ಅನುಸರಿಸಿದರು. ಆಗ ಧರ್ಮರಾಜನು "ನನ್ನ ಪ್ರೀತಿಪಾತ್ರ ಪ್ರಜರೇ, ನಿಮಗೆ ನನ್ನಲ್ಲಿ ಗೌರವಿದ್ದಲ್ಲಿ ನನ್ನನ್ನು ಅನುಸರಿಸಿ ಬರಬೇಡಿರಿ. ಇದರಿಂದ ನಮಗೆ ಅಪಕೀರ್ತಿಯುಂಟಾಗುತ್ತದೆ. ನನ್ನ ದೊಡ್ಡಪ್ಪನ ರಾಜ್ಯದಲ್ಲಿರುವುದೇ ನಿಮಗೆ ಶ್ರೇಯಸ್ಕರ" ಎಂದು ಎಲ್ಲರನ್ನು ಕೋರಿದನು. ಆಗ ಧರ್ಮಜನ ಮಾತಿಗೆ ಗೌರವವಿತ್ತು ಪ್ರಜರು ಮನಸ್ಸಿನಿಂದ ಪಾಂಡವರನ್ನು ಅನುಸರಿಸಿದರೂ ನಿರ್ವಾಹವಿಲ್ಲದೆ ಹಸ್ತಿನಾವತಿಗೆ ಮರಳಿದರು. ಆ ತರುವಾಯ ಪಾಂಡವರು ಇಂದ್ರಪ್ರಸ್ಥಕ್ಕೆ ಬಂದು ಸೇರಿದರು.

ಶ್ರೀಕೃಷ್ಣನು ದೇವಬಡಗಿಯಾದ ವಿಶ್ವಕರ್ಮನನ್ನು ಸ್ಮರಿಸಿದನು. ಅಗಲೇ ಅಲ್ಲಿ ಅವನು ಪ್ರತ್ಯಕ್ಷನಾಗಿ "ನಾನೇನು ಮಾಡಬೇಕು, ಆಜ್ಞಾಪಿಸು ದೇವ" ಎಂದು ಪ್ರಾರ್ಥಿಸಿದನು. ಆಗ ಕೃಷ್ಣ-ವೇದವ್ಯಾಸರು "ಇಲ್ಲಿ ಧರ್ಮರಾಜನು ರಾಜ್ಯಭಾರ ಮಾಡುವನು. ಆದ್ದರಿಂದ ಇಲ್ಲಿ ನೀನು ಇಂದ್ರನ ಅಮರಾವತಿಗೆ ಸಮಾನವಾದ ಶ್ರೇಷ್ಠರತ್ನಮಯ ಪಟ್ಟಣವನ್ನು ನಿರ್ಮಿಸು" ಎಂದಾಜ್ಞಾಪಿಸಿದರು. ವಿಶ್ವಕರ್ಮಾದಿಗಳು ಪರಮಾತ್ಮನ ಅಪ್ಪಣೆಯಂತೆ ಅತ್ಯಂತ ಸುಂದರವಾದ ಶ್ರೇಷ್ಠನಗರವನ್ನು ನಿರ್ಮಾಣ ಮಾಡಿದರು. ಪಾಂಡವರು ಶ್ರೀಹರಿಪ್ರಿಯರು ಗುಣಾಢ್ಯರೆಂದು ಹೆಚ್ಚು ಜನರಿಲ್ಲದ ಆ ಪಟ್ಟಣದಲ್ಲಿ ವಾಸಮಾಡಬಯಸಿ ನಾನಾದೇಶಗಳಿಂದ ಲಕ್ಷಾಂತರ ಜನರು ಬಂದು ಅಲ್ಲಿ ಧರ್ಮರಾಜನ ಪ್ರಜೆಗಳಾಗಿ ಬಾಳಲಾರಂಭಿಸಿದರು.

ಪಾಂಡವರನ್ನು ದೂರದಲ್ಲಿಟ್ಟು ಧೃತರಾಷ್ಟ್ರನು ತನ್ನ ಮಕ್ಕಳಾದ ದುರ್ಯೋಧನ-ದುಶ್ಶಾಸನರಿಗೆ ರಾಜ-ಯುವರಾಜ ಪದದಲ್ಲಿ ಪಟ್ಟಾಭಿಷೇಕ ಮಾಡಿ ಕೃತಾರ್ಥನಾದೆನೆಂದು ಭಾವಿಸಿದನು.

ಮಹಾನುಭಾವರಾದ ಪಾಂಡವರು ಶ್ರೀವೇದವ್ಯಾಸದೇವರು, ಶ್ರೀಕೃಷ್ಣಪರಮಾತ್ಮರಿಂದ ಸಮಸ್ತ ವೇದ-ವೇದಾಂತ ತತ್ವವಿಚಾರಗಳನ್ನು ಶ್ರವಣ ಮಾಡುತ್ತಾ ಶ್ರೀಹರಿಯ ಪಾದಾಶ್ರಯವುಳ್ಳವರಾಗಿ ಧರ್ಮದಿಂದ ಸಮಸ್ತರಿಗೂ ಸಂತೋಷವಾಗುವಂತೆ ಆನಂದದಿಂದ ರಾಜ್ಯವನ್ನು ಪರಿಪಾಲಿಸುತ್ತಾ ಬಾಳತೊಡಗಿದರು.

***ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದ ಹತ್ತೊಂಭತ್ತನೆಯ ಅಧ್ಯಾಯದ ಕಥಾಸಂಗ್ರಹವು ಮುಗಿದುದು.***

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★

## ವಿಂಶಾಧ್ಯಾಯಭಾವಸಂಗ್ರಹ

**ಯಃ ಪಾರ್ಥಾನ್ ಪರಿಪಾಲಯನ್ ಹರಿಪುರೇ ಸ್ತ್ರೀಪುತ್ರಸಂಪದ್ಯುತಾನ್**
**ಸಂಹರ್ತಾ ಶತಧನ್ವನೋಽಷ್ಟಮಹಿಷೀಭರ್ತಾ ಸುರರ್ಷಿಸ್ತುತಃ ।**
**ಹತ್ವಾ ಭೌಮಮಪಾಹರತ್ ಸುರತರುಂ ಬಹ್ವೀರುವಾಹಾಂಗನಾಃ**
**ಪ್ರಾಯಚ್ಛದ್ ಹರಿಸೂನವೇ ಸ್ವಸಹಜಾಂ ಪಾಯಾತ್ಸ ನಃ ಕೇಶವಃ ॥ 20 ॥**

**ಅನ್ವಯಾರ್ಥ:-** **ಯಃ** = ಯಾವ ಶ್ರೀಕೃಷ್ಣನು, **ಹರಿಪುರೇ** = ಇಂದ್ರಪಸ್ಥ ನಗರದಲ್ಲಿ **ಸ್ತ್ರೀಪುತ್ರಸಂಪದ್ಯುತಾನ್** = ಪತ್ನೀ-ಪುತ್ರರು, ಸಿರಿ-ಸಂಪತ್ತುಗಳಿಂದ ಸಹಿತರಾದ, **ಪಾರ್ಥಾನ್** = ಪೃಥಾ(ಕುಂತೀ)ಪುತ್ರರಾದ ಪಾಂಡವರನ್ನು, **ಪರಿಪಾಲಯನ್** = ಕಾಪಾಡುತ್ತಾ, **ಶತಧನ್ವನಃ** = ಶತಧನ್ವನನ್ನು, **ಸಂಹರ್ತಾ** = ಕೊಲ್ಲುವವನೂ (ಸಂಹಾರಕನೂ), **ಅಷ್ಟಮಹಿಷೀಭರ್ತಾ** = ಎಂಟು ಜನ ಪಟ್ಟದ ರಾಣಿಯರಿಗೆ ಪತಿಯಾಗಿ, **ಸುರರ್ಷಿಸ್ತುತಃ** = ದೇವರ್ಷಿಗಳಾದ ನಾರದರಿಂದ ಸ್ತುತ್ಯನಾದನೋ, **ಭೌಮಂ** = ಭೂದೇವಿಯ ಮಗನಾದ ನರಕಾಸುರನನ್ನು, **ಹತ್ವಾ** = ಸಂಹಾರಮಾಡಿ, **ಸುರತರುಂ** = ದೇವೇಂದ್ರನ ನಂದನವನದಲ್ಲಿ ವಿರಾಜಿಸಿದ್ದ ಪಾರಿಜಾತವೃಕ್ಷವನ್ನು, **ಅಪಾಹರತ್** = ಅಪಹರಿಸಿದನೋ, **ಬಹ್ವೀಃ** = ಬಹುಸಂಖ್ಯಾಕರಾದ, **ಅಂಗನಾಃ** = ಹೆಂಗಸರನ್ನು, **ಉವಾಹ** = ವಿವಾಹ ಮಾಡಿಕೊಂಡನೋ, **ಹರಿಸೂನವೇ** = ಇಂದ್ರಸುತನಾದ ಅರ್ಜುನನಿಗೆ, **ಸ್ವಸಹಜಾಂ** = ತನ್ನ ಸಹೋದರಿಯಾದ ಸುಭದ್ರೆಯನ್ನು, **ಪ್ರಾಯಚ್ಛತ್** = ಮದುವೆಮಾಡಿಕೊಟ್ಟನೋ, **ಸಃ** = ಅಂತಹ, **ಕೇಶವಃ** = ಬ್ರಹ್ಮರುದ್ರಾದಿನಿಯಾಮಕನಾದ ಶ್ರೀಕೃಷ್ಣಪರಮಾತ್ಮನು, **ನಃ** = ನಮ್ಮನ್ನು, **ಪಾಯತ್** = ಸಂರಕ್ಷಣಮಾಡಲಿ.

**ತಾತ್ಪರ್ಯ:-** ಶ್ರೀಕೃಷ್ಣನು, ಇಂದ್ರಪ್ರಸ್ಥಪುರದಲ್ಲಿ ರಾಜ್ಯಭಾರ ಮಾಡುತ್ತಿರುವ ಪತ್ನೀಪುತ್ರರುಗಳಿಂದ ಸಹಿತರಾದ ಪಾಂಡವರಿಗೆ ಸಕಲವಿಧವಾದ ಸಹಾಯ ಮಾಡುತ್ತಾ ಸಂರಕ್ಷಿಸಿದನು. ಸತ್ರಾಜಿದ್ರಾಜನನ್ನು ಸಂಹರಿಸಿ ಅವನಲ್ಲಿದ್ದ ಶ್ಯಮಂತಕಮಣಿಯನ್ನು ಅಪಹಾರ ಮಾಡಿದ, ಶತಧನ್ವನನ್ನು ಸಂಹಾರ ಮಾಡಿದನು. ಸುರಸುಂದರಿಯರಾದ ಎಂಟುಜನ ಪಟ್ಟದರಾಣಿಯರಿಗೆ ಪ್ರಿಯಕರನಾದ ಆ ಪ್ರಭುವು ಪ್ರೀತಿಯ ರಾಣಿಯಾದ ಸತ್ಯಭಾಮಾದೇವಿಯ ಅಭಿಲಾಷೆಯನ್ನು ಪೂರ್ಣಮಾಡಲು ಇಂದ್ರನ ನಂದನವನದಲ್ಲಿ ಶೋಭಿಸುತ್ತಿದ್ದ ಪಾರಿಜಾತ ವೃಕ್ಷವನ್ನು ಅಪಹರಿಸಿ ಭೂಮಿಗೆ ತಂದು ಪ್ರಿಯಪತ್ನಿಗೆ ನೀಡಿದನು. ದೇವರ್ಷಿಗಳಾದ ನಾರದರಿಗೆ ತನ್ನ ಮಹಿಮಾತಿಶಯಗಳನ್ನು ತೋರಿಸಿ ಅವರಿಂದ ಸ್ತುತ್ಯನಾದನು. ಅನಂತರ ಭೂದೇವಿಯ ಕುಮಾರನಾದ ನರಕಾಸುರನನ್ನು ಸಂಹಾರ ಮಾಡಿ ಅವನು ಬಂಧಿಸಿಟ್ಟಿದ್ದ ಹದಿನಾರು ಸಾವಿರದ ನೂರುಜನ ರಾಜಕುಮಾರಿಯರನ್ನು ವಿವಾಹವಾದನು. ಪ್ರಿಯಸಖನೂ ಇಂದ್ರಕುಮಾರನೂ ಆದ ಅರ್ಜುನನಿಗೆ ತನ್ನ ಸಹೋದರಿಯಾದ ಸುಭದ್ರಾದೇವಿಯನ್ನು ಕೊಟ್ಟು ವಿವಾಹ ಮಾಡಿಸಿದನು. ಇಂತು ಬ್ರಹ್ಮ-ರುದ್ರ-ಇಂದ್ರಾದಿ ದೇವತೆಗಳಿಗೆ ನಿಯಾಮಕನೂ, ಮಹಾಮಹಿಮನೂ ಆದ ಶ್ರೀಕೃಷ್ಣಪರಮಾತ್ಮನು ನಮ್ಮನ್ನು ಸಂರಕ್ಷಿಸಲಿ ಎಂದು ಭಾವ.

## ಇಪ್ಪತ್ತನೆಯ ಅಧ್ಯಾಯದ ಕಥಾಸಂಗ್ರಹ

ಯುಧಿಷ್ಠಿರನು ಇಂದ್ರಪ್ರಸ್ಥದಲ್ಲಿ ರಾಜ್ಯಭಾರ ಮಾಡುತ್ತಿರುವಾಗ ಎಲ್ಲೆಡೆಯೂ ದೇಶವು ಸುಭಿಕ್ಷವಾಗಿತ್ತು. ಜನರು ಸುಖ-ಸಂತೋಷದಿಂದ ಬಾಳುತ್ತಿದ್ದರು. ಧರ್ಮರಾಜನು ಯಜ್ಞ-ಯಾಗ, ದಾನ-ಧರ್ಮ, ಋಷಿಮುನಿಗಳ ಸೇವೆ

ಮಾಡುತ್ತಾ ಶ್ರೀಹರಿತತ್ವ ವಿಚಾರರತನಾಗಿ, ಧರ್ಮಪ್ರಸಾರಕನೆಂದು ಕೀರ್ತಿಗಳಿಸಿದನು. ಆದರ್ಶ ರಾಜನೆಂದು ಪ್ರಜರು ಅವನನ್ನು ಹೊಗಳುತ್ತಿದ್ದರು. ಅರ್ಜುನನು ಶತ್ರುರಾಜರನ್ನು ಮರ್ದಿಸುತ್ತಿದ್ದರೆ, ಭೀಮಸೇನನು ಜರಾಸಂಧಾದಿಗಳನ್ನು ಜಯಿಸಿ ಸರ್ವರಿಗೂ ಸಿಂಹಸ್ವಪ್ನನಾಗಿದ್ದನು. ಭೀಮನಿಂದಾಗಿ ಜಗತ್ತಿನ ಜನರು ಭಾಗವತಧರ್ಮ ಪರಾಯಣರಾಗಿ ಪರಮಾತ್ಮನನ್ನು ಆರಾಧಿಸುತ್ತಿದ್ದರು. ದ್ರೌಪದಿಯು ಅರಮನೆ-ಅಂತಃಪುರಗಳ ಸ್ತ್ರೀಯರ, ಕೋಶಗಳ ರಕ್ಷಣೆ ದಾಸ, ದಾಸ-ದಾಸೀ ಮೊದಲಾದ ಸೇವಕರ ಮೇಲ್ವಿಚಾರಣೆಗಳನ್ನು ನೆರವೇರಿಸುತ್ತ ಸ್ತ್ರೀಧರ್ಮೋಪದೇಶ, ಹರಿತತ್ವೋಪದೇಶಕಳಾಗಿ ಸರ್ವರ ಗೌರವಕ್ಕೆ ಪಾತ್ರಳಾಗಿದ್ದಳು. ನಕುಲನು ಆಶ್ರಿತ-ಸೇವೋಪಜೀವಕರ ಸಂಬಳ ನೀಡುವುದೇ ಮುಂತಾಗಿ ಅವರ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದನು. ಸಹದೇವನು ಮಿತ್ರರಾಜರುಗಳಲ್ಲಿ ಭೇದವುಂಟಾದರೆ, ಅವರೀರ್ವರಿಗೂ ಸಂಧಿ-ಸ್ನೇಹ ಮಾಡಿಸುವುದು, ಶತ್ರುರಾಜರಲ್ಲಿ ಮಿತ್ರಭೇದ-ದ್ವೇಷಾಸೂಯೆಗಳು ವರ್ಧಿಸುವಂತೆ ಮಾಡುವುದು, ಅಣ್ಣನಾದ ಧರ್ಮರಾಜನ ಹಿಂದೆ ಖಡ್ಗಧಾರಿಯಾಗಿದ್ದು ಅವನನ್ನು ರಕ್ಷಿಸುವ ಕಾರ್ಯದಲ್ಲಿ ಆಸಕ್ತನಾಗಿದ್ದನು.

ಭೀಮಸೇನನಲ್ಲಿದ್ದ ವಿಶೇಷ ಮೈತ್ರಿಯಿಂದಾಗಿ ಪಾಂಡವ ಬಂಧುವಾದ ಧೃಷ್ಟದ್ಯುಮ್ನನು ಪಾಂಡವರ ರಾಜ್ಯದ ಸೇನಾಧಿಪತಿಯಾಗಿದ್ದು ಕೀರ್ತಿಗಳಿಸಿದನು. ರಾಜ್ಯವು ಸುಭಿಕ್ಷವಾಗಿ, ಅಲ್ಲಿ ಸುಖ-ಶಾಂತಿಗಳು ನೆಲೆಸಿದ್ದವು. ಯಜ್ಞ-ಯಾಗಾದಿ ಧರ್ಮಕಾರ್ಯಗಳಿಗಾಗಿ ರಾಜನ ಸಹಾಯ ಬಯಸಿ ಬಂದ ಋಷಿ-ಮುನಿಗಳಿಗೆ, ಧಾರ್ಮಿಕರಿಗೆ ಭೀಮಸೇನನೇ ವಿಶಿಷ್ಟ ಸಹಾಯ ಮಾಡುತ್ತಿದ್ದುದರಿಂದ, ಅದಕ್ಕಾಗಿ ಯಾರೂ ಧರ್ಮರಾಜನನ್ನು ಕಾಣಬೇಕಾದ ಪ್ರಸಂಗ ಬರುತ್ತಿರಲಿಲ್ಲ. ಸುರೇಂದ್ರಾದಿ ದೇವತೆಗಳು, ಮುನಿಗಳು ಶ್ರೀಕೃಷ್ಣದರ್ಶನ ಲಾಲಸರಾಗಿ ಬಂದು ಅವನನ್ನು ಸೇವಿಸಿ, ಪೂಜಿಸಿ ಹೋಗುತ್ತಿದ್ದಂತೆ, ಗಂಧರ್ವರು, ವಿದ್ಯಾಧರರು, ಚಾರಣರೇ ಮೊದಲಾದವರೆಲ್ಲರೂ ಬಂದು ಯುಧಿಷ್ಠಿರನನ್ನು ಸೇವಿಸುತ್ತಿದ್ದರು. ಪಾಂಡವರ ರಾಜ್ಯದಲ್ಲಿ ಧರ್ಮವು ಕೃತಯುಗದ ಧರ್ಮಕ್ಕಿಂತಲೂ ಅಧಿಕವಾಗಿ ಕಂಗೊಳಿಸಿದ್ದುದರಿಂದ ಆ ರಾಷ್ಟ್ರವು ಸುವರ್ಣ-ರತ್ನ-ವಿವಿಧ ವಸ್ತ್ರಗಳು, ಸಸ್ಯಸಂಪತ್ತುಗಳಿಂದ ರಾರಾಜಿಸುತ್ತಾ ಅದೊಂದು ಅತ್ಯಂತ ಆದರ್ಶರಾಜ್ಯವೆನಿಸಿ, ಎಲ್ಲೆಡೆ ಪ್ರಖ್ಯಾತಿ ಗಳಿಸಿತು.

ಧರ್ಮರಾಜನು ಪೂರ್ವಜನ್ಮದಲ್ಲಿ ಪತ್ನಿಯಾಗಿದ್ದ ದೇವಕಿಯೆಂದು ಪ್ರಸಿದ್ಧಳಾಗಿದ್ದ ಶಿಶುಪಾಲನ ಮಗಳನ್ನು ಲಗ್ನವಾದನು. ದೇವಕಿಯ ಸಹೋದರನು ಧೃಷ್ಟಕೇತು. ಹಿಂದೆ ಪ್ರಹ್ಲಾದನ ತಮ್ಮನಾಗಿದ್ದ ಸವಿತೃವಿನ ಅಂಶನಾದ ಅನುಹ್ಲಾದನೇ ಈಗ ಧೃಷ್ಟಕೇತುವಾಗಿ ಜನಿಸಿದ್ದನು. ಯಮಧರ್ಮನ ಕರಣಿಕನಾದ ಚಿತ್ರಗುಪ್ತನೇ ದೇವಕಿಗೆ ಸುಹೋತ್ರನೆಂಬ ಹೆಸರಿನಿಂದ ಪುತ್ರನಾಗಿ ಜನಿಸಿದನು. ದ್ರೌಪದಿಯು ಮತ್ತೊಂದು ರೂಪದಿಂದ ಕಾಳಿಯೆಂಬ ಹೆಸರಿನಿಂದ ಕಾಶೀರಾಜನ ಮಗಳಾಗಿ ಜನಿಸಿದಳು. ಈ ಭಾರತಿಯಲ್ಲಿ (ಕಾಳಿಯಲ್ಲಿ) ಶಚೀ ಮೊದಲಾದ ದೇವಿಯರು ಆವಿಷ್ಟರಾಗಿರಲಿಲ್ಲವೆಂದು ತಿಳಿಯಬೇಕು.

ಕಾಶೀರಾಜನು ತನ್ನ ಮಗಳಾದ ಕಾಳಿಯ ಸ್ವಯಂವರವೇರ್ಪಡಿಸಿ, ಎಲ್ಲ ರಾಜರನ್ನೂ ಆಹ್ವಾನಿಸಿದನು. ಅಲ್ಲಿ ನೆರೆದಿದ್ದ ಸಮಸ್ತರಾಜರ ಮಧ್ಯೆ ತೇಜಸ್ವಿಯಾಗಿ ಕಂಗೊಳಿಸುತ್ತಿದ್ದ ಭೀಮಸೇನನ ಕೊರಳಿಗೆ ಕಾಳಿಯು ಮಾಲೆ ಹಾಕಿದಳು. ಕಾಳಿಯು ವೈಷ್ಣವನ ಮಡದಿಯಾದಳಲ್ಲ ಎಂಬ ದ್ವೇಷದಿಂದ ಜರಾಸಂಧಾದಿಗಳು ವಿಷ್ಣು ಮತ್ತು ವಿಷ್ಣುಭಕ್ತರನ್ನು ನಿಂದಿಸಿ; ರುದ್ರ ಮತ್ತು ಅವನ ಭಕ್ತರನ್ನು ಸ್ತುತಿಸುತ್ತ ಬಂದರು. ಆಗ ಭೀಮಸೇನನು ಅವರೊಡನೆ ವಾದಕ್ಕಿಳಿದು, ಮೊದಲು ಭೀಮಸೇನನು ವೇದವು ಅಪೌರುಷೇಯವಾದ್ದರಿಂದ ನಿರ್ದೋಷವೆಂದು ಯುಕ್ತಿಯಿಂದ ಸಾಧಿಸಿ, ವೇದಾನುಸಾರಿಯಾದ ದೋಷರಹಿತ ಅನುಮಾನಗಳಿಂದಲೂ ನಿರ್ದುಷ್ಟ ಪಾಂಚರಾತ್ರಾದ್ಯಾಗಮ-ಇತಿಹಾಸಾದಿಗಳ ವಾಕ್ಯೋದಾಹರಣಪೂರ್ವಕವಾಗಿ, ಜರಾ-ಸಂಧಾದಿಗಳನ್ನು ಯುದ್ಧವಾಗುವುದಕ್ಕೂ ಮೊದಲು ವಾಗ್ಯುದ್ಧದಲ್ಲಿ ಜಯಿಸಿದನು.

ಶೈವಾದಿ ಪುರಾಣಗಳು ವೇದಗಳಿಗೆ ಪ್ರಾಮಾಣ್ಯಲಕ್ಷಣರೂಪ ಶ್ರೇಷ್ಠತೆಯನ್ನು ಹೇಳುವವು. ವೇದಪ್ರಾಮಾಣ್ಯವನ್ನು ಒಪ್ಪದವರನ್ನು ಶೈವಶಾಸ್ತ್ರಗಳು ನಿಂದಿಸುವುವು. ಹಾಗೆಯೇ ಶಾಕ್ತೇಯ, ಸ್ಕಾಂದ-ಸೌರಾದಿ ಶಾಸ್ತ್ರಗಳನ್ನೂ ನಿಂದಿಸುವುವು. ಪರಮಪ್ರಮಾಣವೆಂದು ಒಪ್ಪಿರುವ ವೇದಗಳಲ್ಲಿಯೇ ವೇದ-ಹಾಗೂ ವಿಷ್ಣುವಿನ ಉತ್ಕರ್ಷವು ಉಕ್ತವಾಗಿದೆ. ಆ ಶಾಸ್ತ್ರಗಳು ರುದ್ರಾದಿಗಳಿಗಿಂತಲೂ ಶ್ರೀಹರಿಯು ಅಧಿಕನೆಂದು ಸಾರುವುವು. ವೇದದಲ್ಲಿ ಎಲ್ಲಿಯೂ ವಿಷ್ಣುವಿಗಿಂತ ಉತ್ತಮನಾದ ಬೇರೊಬ್ಬ ದೇವತೆಯು ಉಕ್ತವಾಗಿಲ್ಲ. ಇಂದ್ರಾದಿ ಶಬ್ದಗಳೂ ವಿಷ್ಣುಪರಗಳಾಗಿವೆ. ವೈದಿಕರು ಮಾತ್ರ ವಿಷ್ಣುವಿನ ಸರ್ವೋತ್ತಮತ್ವವನ್ನು ಹೇಳುತ್ತಾರೆಂದಲ್ಲ; ಅವೈದಿಕರಾದ ಬೌದ್ಧಾದಿಗಳೂ ಪರಮಾತ್ಮನು ಸರ್ವರಿಗಿಂತ ಉತ್ತಮನೆಂದು ಹೇಳುವರು. ಚಾರ್ವಾಕರೂ ಸಹ ಹಲಕೆಲವೆಡೆಯಲ್ಲಿ ವಿಷ್ಣುವು ಸರ್ವೋತ್ತಮನೆಂದೂ, ಶ್ರೇಷ್ಠನೆಂದು ಬೃಹಸ್ಪತಿಗೆ ಗುರುವೆಂದೂ ಹೇಳುವರು. ಅಂತೆಯೇ, ಶಿವಾದಿಗಳಿಗಿಂತ ಶ್ರೇಷ್ಠನೆಂದು ಒಪ್ಪಿರುವುದರಿಂದಲೇ ಮೋಕ್ಷಪ್ರದನಾದ ಶ್ರೀಹರಿಯು ಸರ್ವೋತ್ತಮನೆಂದು ಸಕಲಾಗಮಗಳಲ್ಲಿಯೂ ಪ್ರಸಿದ್ಧವಾಗಿದೆ.

ಈ ಪ್ರಕರಣವನ್ನು ವಿವೇಚಿಸಿ ಶ್ರೀವಾದಿರಾಜ ಗುರುಚರಣರು ಹೀಗೆ ಅಪ್ಪಣೆಕೊಡಿಸಿದ್ದಾರೆ-ಶ್ರೀಹರಿಯು ಬೃಹಸ್ಪತ್ಯಾಚಾರ್ಯರಿಗೂ ಗುರುವಾಗಿದ್ದಾನೆ. ಅಂತೆಯೇ ಅವನು ಸರ್ವೋತ್ತಮನೆಂದು ಹೇಳುವರು. ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ರಾಮ, ಕೃಷ್ಣಾದಿ ಅವತಾರಗಳಲ್ಲಿ ಮತ್ತೊಬ್ಬರಿಂದ ಮಾಡಲಾಗದ-ವೇದವನ್ನು ತಂದುದು, ಸಮುದ್ರ ಮಂಥನ, ಮಂದರೋದ್ಧರಣ ಮೊದಲಾದ ಅಸದೃಶಕಾರ್ಯಗಳನ್ನೂ; ಹಿರಣ್ಯಾಕ್ಷ, ಹಿರಣ್ಯಕಶಿಪು, ರಾವಣ, ಕಂಸ, ಜರಾಸಂಧಾದಿ ಪ್ರಬಲ ದೈತ್ಯಸಂಹಾರ, ಬಲಿಯನ್ನು ಪಾತಾಳಕ್ಕೆ ಮೆಟ್ಟಿದ್ದು, ತ್ರಿವಿಕ್ರಮನಾಗಿ ತ್ರಿಲೋಕಗಳನ್ನು ಮೂರು-ಪಾದಗಳಿಂದ ಅಳೆದುದು, ಬ್ರಹ್ಮಾಂಡಖಂಡನಾದಿ ಅಪ್ರತಿಮವಾದ ಶ್ರೀಹರಿಯ ಚರಿತ್ರೆ, ಶ್ರೀಹರಿಯ ಸರ್ವೋತ್ತಮತ್ವವನ್ನು, ಅವನೆಸಗಿದ ಲೋಕಹಿತ ಕಾರ್ಯಗಳನ್ನು ಸಕಲವಾದಿಗಳಲ್ಲಿಯೂ ಅದಾರು ತಾನೇ ಉಪೇಕ್ಷಿಸಬಲ್ಲರು? ಅಂತೆಯೇ "ಸರ್ವಾಗಮೇಷು ಕಥಿತಃ" ಎಂದು ಶ್ರೀಮದಾಚಾರ್ಯರು ನಿರೂಪಿಸಿದ್ದಾರೆ ಎಂದು ಮುಂತಾಗಿ ಹೇಳಿದ್ದಾರೆ.

ಭೀಮಸೇನದೇವರು ವಿಷ್ಣು ಸರ್ವೋತ್ತಮತ್ವವನ್ನು ಹೀಗೆ ಸಾಧಿಸಿ ಮತ್ತೆ ಶತ್ರುರಾಜರನ್ನು ಕುರಿತು ಹೀಗೆ ಹೇಳಿದರು- "ಎಲೈ ರಾಜರೇ, ನೀವು ಹೇಳುವ ಶಿವಸರ್ವೋತ್ತಮತ್ವವು ಕೂಡುವುದಿಲ್ಲ! ಶಿವನ ಆಧಿಕ್ಯವನ್ನು ಹೇಳುವ ಸಿದ್ಧಾಂತ-ಆಗಮಗಳು ಪರಸ್ಪರ ವಿರುದ್ಧವಾಗಿವೆ. ಕೇಳಿ, ಶಿವನು ಸರ್ವೋತ್ತಮನಲ್ಲವೆಂಬುದನ್ನು ಭಸ್ಮಾಸುರನ ಪ್ರಕರಣವು ಸ್ಪಷ್ಟಪಡಿಸುವುದು. ಶಿವನು ಭಸ್ಮಾಸುರನ ಭಯದಿಂದ ಓಡಿಹೋದನು. ಸಮುದ್ರಮಥನ ಕಾಲದಲ್ಲಿ ವಿಷಪಾನಮಾಡಿ ಅದನ್ನು ಪೂರ್ತಿಯಾಗಿ ಅರಗಿಸಿಕೊಳ್ಳಲಾಗದೇ ಕಂಠದಲ್ಲಿ ಕಪ್ಪಾಗಿದು ನೀಲಕಂಠನಾದುದು, ಮತ್ತು ಅದರ ತಾಪಪರಿಹಾರಕ್ಕಾಗಿ ಸದಾ ತನ್ನ ಶಿರದಲ್ಲಿ ಶ್ರೀವಿಷ್ಣುಪಾದೋದಕವನ್ನು ಧರಿಸಿರುವುದು, ಶಿವನು ಸರ್ವೋತ್ತಮನಲ್ಲವೆಂದು ಸ್ಪಷ್ಟಪಡಿಸುವುದು. ಇನ್ನು ವೇದಕ್ಕೆ ಅಪ್ರಾಮಾಣ್ಯ ಹೇಳುವುದೂ ಯುಕ್ತವಲ್ಲ. ವೇದದಲ್ಲಿ ಬರುವ "ಬ್ರಾಹ್ಮಣೋ ನ ಹಂತವ್ಯಃ, ಅಹಿಂಸಾ ಪರಮೋ ಧರ್ಮಃ" ಮುಂತಾದವನ್ನು ಪ್ರಮಾಣವಾಗಿ ಸ್ವೀಕರಿಸಿರುವುದೂ ಪರಸ್ಪರ ವಿರುದ್ಧವಾಗಿವೆ. ನಾನು ಈವರೆವಿಗೆ ಆಗಮಗಳಿಂದ ವಿಷ್ಣು ಸರ್ವೋತ್ತಮತ್ವವನ್ನು ಸಾಧಿಸಿದ್ದೇನೆ. ಇನ್ನು ಈಗ ಪ್ರತ್ಯಕ್ಷವಾಗಿ ಶ್ರೀಹರಿಯ ಪಾದಪದ್ಮಗಳನ್ನು ಆಶ್ರಯಿಸಿರುವ ನಾನು, ನನ್ನ ಭುಜಬಲವನ್ನು ಈಗಲೇ ತೋರಿಸಿ ತನ್ಮೂಲಕವೂ ಶ್ರೀಹರಿಸರ್ವೋತ್ತಮತ್ವವನ್ನು ಸಾಧಿಸುತ್ತೇನೆ".

ಮುಂದುವರೆದು ಭೀಮಸೇನನು ಇಂತೆಂದನು- "ರಾಜರೇ, ಇನ್ನೂ ಕೇಳಿರಿ. ಒಮ್ಮೆ ಹಸ್ತಿನಾವತಿಯಲ್ಲಿ ನಾನು ವಿಷ್ಣುಪೂಜಾರತನಾಗಿದ್ದಾಗ ನನ್ನ ಪೂಜೆಗೆ ವಿಘ್ನ ತರಲು ಭಾಗೀರಥಿಯು ಬಂದಾಗ, ನನ್ನ ಎಡಕರದಿಂದ ಪ್ರೇರಿತಳಾಗಿ ಅನೇಕ ಯೋಜನ ಪರ್ಯಂತ ಹಿಂದಕ್ಕೆ ಹೋದಳು! ಆಗ ರುದ್ರನು ಹುಲಿಯ ರೂಪಧರಿಸಿ ಧೇನುರೂಪಿಣಿಯಾದ ಪಾರ್ವತಿಯನ್ನು ಸಂಹರಿಸಲೋ ಎಂಬಂತೆ ನನ್ನ ಬಲಪರೀಕ್ಷೆಗಾಗಿ ಬಂದು ಆ ಧೇನುವನ್ನು ಅಟ್ಟಿಸಿಕೊಂಡು ಹೋದನು.

ಆಗ ನಾನು ಅವನೊಡನೆ ಹೋರಾಡಿ ಗದಾಪ್ರಹಾರ ಮಾಡಿದಾಗ ಪರಾಜಿತನಾಗಿ, ಮೂರ್ಛಿತನಾಗಿ ಒಂದು ಕಲ್ಲಿನ ಲಿಂಗದ ಮಧ್ಯ ಸೇರಿದನು. ಆದ್ದರಿಂದ ಆ ಲಿಂಗಕ್ಕೆ ವ್ಯಾಘ್ರೇಶ್ವರ ಎಂದು ಹೆಸರಾಯಿತು. ಇದರಂತೆ ಗೋಮತೀನದಿತೀರದಲ್ಲಿ ಜರುಗಿದ ಯುದ್ಧದಲ್ಲಿ ಸೋತ ಶಿವನು ಲಿಂಗಮಧ್ಯದಲ್ಲಿ ಅಡಗಿದನು. ಅಂದಿನಿಂದ ಆ ಲಿಂಗವು ಶಾರ್ದೂಲ ಲಿಂಗವೆಂದು ಪ್ರಸಿದ್ಧವಾಯಿತು. ಹೀಗೆ ಶ್ರೀಹರಿಯನ್ನು ಆಶ್ರಯಿಸಿರುವವರೇ ಅತಿ ಬಲಶಾಲಿಗಳಾಗಿರುವುದು ಕಂಡುಬರುವಾಗ, ಶ್ರೀವಿಷ್ಣುವಿನ ಬಲಾಧಿಕ್ಯದ ಬಗ್ಗೆ ಹೇಳುವುದೇನಿದೆ? ಬಲಾಧಿಕ್ಯ ಸಿದ್ಧವಾದರೂ ಅದರಿಂದ ಸ್ವರೂಪಾಧಿಕ್ಯದಲ್ಲೇನು ಪ್ರಯೋಜನವೆಂದರೆ, ಕ್ಷತ್ರಿಯರಿಗೆ ಬಲವೂ, ಬ್ರಾಹ್ಮಣರಿಗೆ ಜ್ಞಾನವೇ ಪ್ರಮಾಣವೆಂದು ಹೇಳುವುದಲ್ಲವೆ? ಕೇದಾರದಲ್ಲಿ ಬ್ರಾಹ್ಮಣವೇಷಧಾರಿಯಾದ ರುದ್ರನು ನನ್ನೊಡನೆ ವಾಕ್ಯಾರ್ಥ ಮಾಡಿ ಸೋತು, ಭಯದಿಂದ ಲಿಂಗವನ್ನು ಪ್ರವೇಶಿಸಿದನು. ಮತ್ತು ವೇದವಿದ್ಯಾರತರಾದವರು ಕೇದಾರಕ್ಕೆ ಹೋಗಲಾಗದಂತೆ ಶಾಪವಿತ್ತನು. ಹೀಗೆ ಶ್ರೀಹರಿಯಬಲವು ಎಲ್ಲರಕ್ಕಿಂತ ಅಧಿಕವೆಂದು ಪ್ರತ್ಯಕ್ಷಸಿದ್ಧವಾಗಿದೆ. ಇದನ್ನು ಅಲ್ಲಗೆಳೆಯುವ ಹಮ್ಮುಳ್ಳವರಾರಾದರೂ ಇದ್ದರೆ, ನನ್ನೊಡನೆ ಯುದ್ಧಕ್ಕೆ ಬನ್ನಿರಿ" ಎಂದು ಘೋಷಿಸಲು ಜರಾಸಂಧಾದಿಗಳು ಶಸ್ತ್ರಸನ್ನದ್ಧರಾಗಿ ಯುದ್ಧಕ್ಕೆ ಬಂದರು.

ಅನಂತರ ಭೀಮಸೇನನು ಯುದ್ಧಕ್ಕೆ ಬಂದವರೆಲ್ಲರನ್ನೂ ಶರಾಘಾತಗಳಿಂದ ಓಡಿಸಿ ಜರಾಸುತನನ್ನು ಗದೆಯಿಂದ ಹೊಡೆದು ಬೀಳಿಸಿ ಕೂಡಲೇ ಅವನ ಬಾಹುಗಳನ್ನು ಹಿಡಿದು ಅವನನ್ನು ಗಂಗೆಗೆ ಬಿಸಾಡಿದನು. ಆಗ ಜರಾಸಂಧನು ಲಜ್ಜೆಯಿಂದ ತಲೆತಗ್ಗಿಸಿ ಉಳಿದ ತನ್ನ ಪಕ್ಷದ ರಾಜರೊಡನೆ ಮಗಧದೇಶಕ್ಕೆ ಹೊರಟುಹೋದನು. ಆ ತರುವಾಯ ಭೀಮಸೇನನು ರಥಾರೂಢನಾಗಿ ಕಾಶೀರಾಜನಿಂದ ಪೂಜಿತನಾಗಿ ಕಾಳಿಯೊಡನೆ ಇಂದ್ರಪ್ರಸ್ಥಕ್ಕೆ ಪಯಣ ಬೆಳೆಸಿದನು. ಭೀಮಸೇನನು ತನಗೆ ಅನುರೂಪಳೂ ತ್ರಿಲೋಕಸುಂದರಿಯೂ ಆದ ಕಾಳಿಯೊಡನೆ ರಮಿಸುತ್ತ ಪೂರ್ವದಲ್ಲಿ 'ಸಮಾನ-ವಾಯು'ವಾಗಿದ್ದ ದೇವನನ್ನೇ "ಸರ್ವತ್ರಾತ" ಎಂಬ ಹೆಸರಿನಿಂದ ಪುತ್ರನನ್ನಾಗಿ ಪಡೆದನು.

ಶ್ರೀಕೃಷ್ಣನು ಬಲರಾಮನೊಡನೆ ಇಂದ್ರಪ್ರಸ್ಥದಿಂದ ಹೊರಟು ದ್ವಾರಕಾಪುರಿಗೆ ಹೋದನು. ಮತ್ತು ಸತ್ರಾಜಿದ್ರಾಜನನ್ನು ಸಂಹರಿಸಿದ ಶತಧನ್ವನನ್ನು ಕೊಲ್ಲಲು ನಿಶ್ಚಯಿಸಿದನು. ಆಗ ಶತಧನ್ವನು ಕೃತವರ್ಮ-ಅಕ್ರೂರರ ಬಳಿಸಾರಿ ತನ್ನನ್ನು ರಕ್ಷಿಸುವಂತೆ ಕೋರಿದನು. ಆದರೆ ಅವರು ತಮಗೆ ಪ್ರಭುವಾದ ಶ್ರೀಕೃಷ್ಣನಿಗೆ ಮನಸ್ಸಿನಿಂದಲೂ ವಿರೋಧವೆಸಗುವುದಿಲ್ಲವೆಂದು ಹೇಳಿ-ಬಿಟ್ಟರು. ಆಗ ಶತಧನ್ವನು ಒಂದು ಹೆಣ್ಣು ಕುದುರೆಯನ್ನೇರಿ ಕೃಷ್ಣನ ಭಯದಿಂದ ಅಲ್ಲಿಂದ ಹೊರಟುಬಿಟ್ಟನು. ಇದನ್ನರಿತು ಕೃಷ್ಣಬಲರಾಮರು ರಥವೇರಿ ಶತಧನ್ವನನ್ನು ಬೆನ್ನಟ್ಟಿದರು. ನೂರು ಯೋಜನ ದೂರ ಹೋದಾಗ ಶತಧನ್ವನ ಕುದುರೆಯು ಮೃತವಾದ್ದರಿಂದ ಅವನು ಕಾಲುನಡಿಗೆಯಿಂದಲೇ ಓಡಲಾರಂಭಿಸಿದನು. ಬಲರಾಮನನ್ನು ಅಲ್ಲಿಯೇ ನಿಲ್ಲಿಸಿ ಕೃಷ್ಣನು ಶತಧನ್ವನನ್ನು ಬೆನ್ನಟ್ಟಿ ಹೋಗಿ ಅವನ ಶಿರವನ್ನು ಚಕ್ರದಿಂದ ತರಿದು ಹಾಕಿದನು. ಅನಂತರ ಸ್ಯಮಂತಕಮಣಿಯು ಅವನಲ್ಲಿದೆಯೇ ಎಂದು ಹುಡುಕಿ ಅದನ್ನು ಕಾಣದೆ, ಬಲರಾಮನ ಬಳಿಗೆ ಬಂದು ಶತಧನ್ವನಲ್ಲಿ ಮಣಿಯಿಲ್ಲವೆಂದು ಹೇಳಿದನು. ಬಲರಾಮನು ಕೃಷ್ಣನ ಮಾತನ್ನು ನಂಬದೆ ಕೃಷ್ಣನಲ್ಲಿ ಅವಿಶ್ವಾಸ ತಾಳಿ, ಕುಪಿತನಾಗಿ ಅವನನ್ನು ಬಿಟ್ಟು ವಿದೇಹನಗರಿಗೆ ತೆರಳಿದನು, ಮತ್ತು ಅಲ್ಲಿ ಐದು ವರ್ಷ ಕಾಲ ವಾಸಮಾಡಿದನು.

ಇತ್ತ ದುರ್ಯೋಧನನು ಪಾಂಡವರ ವಿರುದ್ಧವಾಗಿ ಶ್ರೀಕೃಷ್ಣನನ್ನು ತನ್ನ ಪಕ್ಷಕ್ಕೆಳೆಯಲು ಸಾಧ್ಯವಿಲ್ಲವೆಂದರಿತು, ಬಲರಾಮನನ್ನು ತನ್ನ ಪಕ್ಷಕ್ಕೆ ಸೇರಿಸಿಕೊಳ್ಳಲಾಶಿಸಿ ವಿದೇಹನಗರಿಗೆ ತೆರಳಿದನು. ಅಲ್ಲಿ ಬಲರಾಮನೊಡನೆ ಕೃಷ್ಣನಿಲ್ಲದಿರುವುದನ್ನು ಗಮನಿಸಿ ದುರ್ಯೋಧನನು ಬಲರಾಮನ ಶಿಷ್ಯತ್ವ ವಹಿಸಿ ಅವನಲ್ಲಿ ಗದಾಯುದ್ಧವನ್ನು ಕಲಿಯುತ್ತಾ, ಅವನ ಸಹೋದರಿ ಸುಭದ್ರೆಯನ್ನು ತನಗೆ ವಿವಾಹ ಮಾಡಿಕೊಡಬೇಕೆಂದು ಕೋರಿದನು. ಬಲರಾಮನು ಅದಕ್ಕೆ ಸಮ್ಮತಿಸಿದನು. ಕೃಷ್ಣನು ಅಣ್ಣನ ಮಾತು ಮೀರುವುದಿಲ್ಲವೆಂದರಿತು ಸುಭದ್ರೆಯನ್ನು ತನಗೆ ಕೊಡುವುದಾಗಿ ಮಾತುಕೊಡೆಂದು ತನ್ನ ಬಲಗೈ ಚಾಚಿದನು.

ಕ್ಷತ್ರಿಯರು ಆಯುಧ ಹಿಡಿಯುವ ಕರದಿಂದಲೇ ಪ್ರತಿಜ್ಞೆ ಮಾಡುವವರಾದ್ದರಿಂದ ಬಲಭದ್ರನು ನೇಗಿಲನ್ನು ಹಿಡಿದ ಕರವನ್ನೇ ದುರ್ಯೋಧನನ ಕರದ ಮೇಲಿಟ್ಟು ಭಾಷೆ ಕೊಟ್ಟನು. ಸುಭದ್ರೆಯ ಸೌಂದರ್ಯದಿಂದ ಮೋಹಿತನಾದ ದುರ್ಯೋಧನನು ಇನ್ನೇನು, ಕೃಷ್ಣಬಲರಾಮರು ತನ್ನ ವಶರಾದರೆಂದು ಹಿಗ್ಗಿ ಬಲರಾಮನ ಕರವನ್ನು ಪಿಡಿದನು. ಪಾರ್ವತಿಯ ಆವೇಶ, ಗುಣ ಮತ್ತು ಸೌಂದರ್ಯಯುಕ್ತಳಾಗಿ, ಕಮಲನಯನೆಯಾಗಿ ಚಂಪಕಮಾಲೆಯಂತೆ ಪೀತವರ್ಣದಿಂದ ಶೋಭಿಸುತ್ತಿದ್ದ ಸುಭದ್ರೆಯು ತನ್ನವಳಾದರೆ ಯಾದವರೆಲ್ಲ ತನ್ನವರಾಗುವರೆಂದು ದುರ್ಯೋಧನನು ಹರ್ಷಿಸಿದನು. ಹಿಂದೆ ತ್ರಿಜಟೆಯಾಗಿದ್ದವಳೇ ಈಗ ವಸುದೇವ-ದೇವಕಿಯ ಪುತ್ರಿಯಾಗಿ ಮಂಗಳಸ್ವರೂಪದ ಸುಭದ್ರೆಯಾಗಿ ಜನಿಸಿದ್ದಳು. ಅವಳನ್ನು ರೋಹಿಣಿಯು ತನ್ನ ಪುತ್ರಿಯಾಗಿ ಮಾಡಿಕೊಂಡು ಕಾಪಾಡಿದ್ದಳು. ಹಿಂದೆ ಸೀತಾಮಾತೆಯನ್ನು ಸೇವಿಸಿದ್ದರಿಂದ ಅವಳೀಗ ಶ್ರೀಹರಿಯ ಸಹೋದರಿಯಾಗಿ ಜನಿಸಿ ಅವನ ಪ್ರೀತಿಯ ತಂಗಿಯಾಗಿದ್ದಳು. ಅವಳನ್ನು ಮದುವೆ ಮಾಡಿಕೊಡುವುದಾಗಿ ಬಲರಾಮನಿಂದ ವಚನ ಪಡೆದ ದುರ್ಯೋಧನನು ತೃಪ್ತನಾಗಿ ಕುರುದೇಶಕ್ಕೆ ಪ್ರಯಾಣಬೆಳೆಸಿದನು.

ಕೃಷ್ಣನು, ತನ್ನ ಭಯದಿಂದ ದ್ವಾರಕೆಯನ್ನು ತ್ಯಜಿಸಿ ಬೇರೊಂದೆಡೆಯಲ್ಲಿ ವಾಸಿಸುತ್ತಿದ್ದ ಕೃತವರ್ಮ-ಅಕ್ರೂರರನ್ನು ಕರೆಸಿಕೊಂಡು ಬಲರಾಮನ ಸಮಕ್ಷ-"ಅಕ್ರೂರ! ಶ್ಯಮಂತಕವು ನಿನ್ನ ಬಳಿಯಿದೆ. ಅದನ್ನು ತೋರಿಸು" ಎನಲು ಭೀತನಾದ ಅಕ್ರೂರನು ತನ್ನಲ್ಲಿದ್ದ ಮಣಿಯನ್ನು ತೋರಿದನು. ಕೃಷ್ಣನು ಕಪಟಿಯಲ್ಲವೆಂದಾಗ ಬಲರಾಮನು ತಿಳಿದನು. ಆಗ ಉಗ್ರಸೇನ, ಬಲರಾಮ, ಸಾಂಬನತಾಯಿಯಾದ ಜಾಂಬುವತಿ-ಇವರೆಲ್ಲರಿಗೂ ಶ್ಯಮಂತಕಮಣಿಯಲ್ಲಿ ಆಸಕ್ತಿಯಿರುವುದನ್ನು ಗ್ರಹಿಸಿದ ಕೃಷ್ಣನು, ತನಗಿಷ್ಟವಿಲ್ಲದ್ದನ್ನು ಸತ್ಯಭಾಮೆಯು ಬಯಸುವುದಿಲ್ಲವೆಂದಾದರೂ ನಿಜವಾಗಿ ಮಣಿಯು ಅವಳಲ್ಲಿರುವುದೇ ಯೋಗ್ಯ. ಆದರೂ ಸರ್ವದಾಯಜ್ಞ-ಯಾಗ, ದಾನತತ್ಪರನಾಗಿರುವುದರಿಂದ ಮಣಿಯನ್ನು ಅಕ್ರೂರನಿಗೇ ಕೊಟ್ಟನು. ಅದನ್ನು ಪಡೆದ ಅಕ್ರೂರನು ಸದಾ ಯಜ್ಞ-ಯಾಗಾದಿಗಳಲ್ಲಿ ದೀಕ್ಷಿತನಾಗಿ ಸತ್ಕಾರ್ಯಾಸಕ್ತನಾಗಿರಹತ್ತಿದನು. ಇಂತು ಬಲರಾಮನ ಸಂದೇಹವನ್ನು ಪರಿಹರಿಸಿ, ಸಮಾಧಾನಪಡಿಸಿದ ಕೃಷ್ಣನು ಪಾಂಡವರಲ್ಲಿ ತನಗಿರುವ ಪ್ರೇಮಾತಿಶಯದಿಂದ ಇಂದ್ರಪ್ರಸ್ಥಕ್ಕೆ ತೆರಳಿದನು.

ಉತ್ಪತ್ತಿರಹಿತರಾದ ಶ್ರೀಕೃಷ್ಣನು ಇಂದ್ರಪ್ರಸ್ಥದಲ್ಲಿ ಪಾಂಡವರೊಡನೆ ಕೆಲವು ಮಾಸಗಳವರೆಗೆ ವಾಸ ಮಾಡಿದನು. ಒಂದು ದಿನ ಅರ್ಜುನನೊಡನೆ ಮೃಗಯಾವಿಹಾರಕ್ಕೆ ಹೊರಟು ಅನೇಕ ಮೃಗಗಳನ್ನು ಸಂಹರಿಸಿ ಯಮುನಾ ನದಿಯ ಬಳಿ ವಿಹರಿಸುತ್ತಿರುವಾಗ ಯಮುನೆಯ ತಂಗಿಯಾದ ಕಾಲಿಂದಿಯನ್ನು ಕಂಡನು (ಕಾಲಿಂದೀ ನದಿಯನ್ನಲ್ಲ). ಸೂರ್ಯ ಪುತ್ರಿಯಾದ ಯಮುನೆಯ ಸಹೋದರಿಯಾಗಿ ಜನಿಸಿರುವ, ಕೃಷ್ಣನನ್ನು ವರಿಸಲೆಂದು ತಪೋನಿರತಳಾದ ಕಾಲಿಂದಿಯನ್ನು ಅರ್ಜುನನು "ದೇವಿ, ನೀನು ಯಾರು, ಏತಕ್ಕೆ ತಪಸ್ಸು ಮಾಡುತ್ತಿರುವೆ?" ಎಂದು ಪ್ರಶ್ನಿಸಲು ಕಾಲಿಂದಿಯು ತನ್ನ ತಪಸ್ಸಿನ ಕಾರಣವನ್ನರುಹಿದಳು. ಆಗ ಕೃಷ್ಣನು ಕಾಲಿಂದಿಯನ್ನು ಪತ್ನಿಯಾಗಿ ಸ್ವೀಕರಿಸಿದನು. ಅಲ್ಲಿಂದ ಕೃಷ್ಣನು ನಗ್ನಜಿದ್ರಾಜನ ಮನೆಗೆ ಹೋದನು. ಅಲ್ಲಿ ಯಾರಿಗೂ ಆಟೋಪಿಸದೆ, ಅನೇಕ ರಾಜರನ್ನು ತಮ್ಮ ಅಮಿತಬಲದಿಂದ ಪರಾಜಯಗೊಳಿಸಿದ್ದ, ಹಿಂದೆ ರುದ್ರನ ವರದಿಂದ ಹಿಡಿಯಲಾಗದ ಸಾಮರ್ಥ್ಯವನ್ನು ಪಡೆದು ಅಸುರ ಸ್ವರೂಪವುಳ್ಳ ಏಳೂ ವೃಷಭಗಳನ್ನು ಹಿಡಿದು ಕಟ್ಟಿಹಾಕಿದನು. ಯಶೋದೆಯ ಸಹೋದರನಾದ ಕುಂಭಕನ ಪುತ್ರಿಯಾದ ನೀಲಾದೇವಿಯು ಕೃಷ್ಣನ ಪತ್ನಿಯಾದವಳು. ಅವಳು ಒಬ್ಬಳಾದರೂ ಎರಡು ರೂಪದಿಂದ ಹುಟ್ಟಿ, ನಗ್ನಜಿದ್ರಾಜನ ಪುತ್ರಿಯಾದ ನೀಲಾದೇವಿಯ ಶರೀರದಲ್ಲಿ ಪ್ರವೇಶಿಸಿದ್ದಳು. ಇಂತಹ ನೀಲಾದೇವಿಯನ್ನು ಕೃಷ್ಣನು ಕರಪಿಡಿದನು.

ಇದಾದ ನಂತರ ಶ್ರೀಕೃಷ್ಣನು ತನ್ನ ಸೋದರತ್ತೆಯ ಮಗಳಾದ ಮಿತ್ರವೃಂದೆಯ ಸ್ವಯಂವರಕ್ಕೆ ಹೋದನು. ಅಲ್ಲಿ ನೂರಾರು ರಾಜರೆಮರು ಮಿತ್ರವೃಂದೆಯು ಕೃಷ್ಣನಿಗೆ ಮಾಲೆ ಹಾಕಿದಳು. ಅವಳ ಸಹೋದರರಾದ, ಪರಾಕ್ರಮಶಾಲಿಗಳಾದ ವಿಂದ-ಅನುವಿಂದರು ಅವಳನ್ನು ದುರ್ಯೋಧನನಿಗೆ ಕೊಡಬಯಸಿದ್ದರಿಂದ ಮಿತ್ರವೃಂದೆಯು ಕೃಷ್ಣನನ್ನು ವರಿಸಬಾರದೆಂದು

ಎರೋಧಿಸಿದರು. ಆಗ ಕೃಷ್ಣನು ಅವರನ್ನೂ ಅಲ್ಲಿದ್ದ ಸಕಲ ಅರಸರನ್ನೂ ಜಯಿಸಿ ಮಿತ್ರವೃಂದೆಯನ್ನು ಕರೆದುಕೊಂಡು ಹೊರಟನು. ಅನಂತರ ಸೋದರಮಾವನಾದ ಶ್ರುತಕೀರ್ತಿಯ ದ್ವಿತೀಯ ಪುತ್ರಿಯಾದ ಭದ್ರಾ ಎಂಬ ಕನ್ಯೆಯನ್ನು ಅವಳ ಐವರು ಸಹೋದರರು ಶ್ರೀಕೃಷ್ಣನಿಗೆ ವಿವಾಹ ಮಾಡಿಕೊಟ್ಟರು. ಕೇಕೆಯದೇಶೋತ್ಪನ್ನರಾದ, ಆ ಭದ್ರೆಯ ಆ ಐದು ಜನ ಅನುಜರೂ ಪೂರ್ವದಲ್ಲಿ ವಿಶ್ವ ದೇವತೆಗಳ ಅವತಾರರಾಗಿದ್ದು ಶ್ರೀಹರಿಯ ಭಕ್ತರೂ, ಮತ್ತು ಪಾಂಡವರ ಭಕ್ತರೂ ಆಗಿದ್ದರು. ಅವರ ತಂದೆ ಋಭು ಎಂಬ ದೇವತೆಯಾಗಿದ್ದು ಈಗ ಶೈಬ್ಯರಾಜನಾಗಿ ಜನಿಸಿದ್ದನು.

ಮದ್ರದೇಶಾಧಿಪತಿಯಾದ ಬೃಹತ್ಸೇನನು ತನ್ನ ಮಗಳಾದ ಲಕ್ಷಣಳ ಸ್ವಯಂವರವನ್ನೇರ್ಪಡಿಸಿದ್ದನು. ಅವನ ಸ್ವಯಂವರ ಪಣವಾಗಿ ರುದ್ರದೇವರನ್ನು ಒಲಿಸಿಕೊಂಡು ಅವರಿಂದ ಪಿನಾಕ ಎಂಬ ಧನುಸ್ಸನ್ನು ಪಡೆದಿದ್ದನು. ಆ ಧನುವನ್ನು ಪಣವಾಗಿಟ್ಟು ದ್ರೌಪದಿಯ ಸ್ವಯಂವರದಂತೆಯೇ ಪಿನಾಕಧನುವನ್ನು ಹೆದೆಯೇರಿಸಿ ಮತ್ಸ್ಯಯಂತ್ರವನ್ನು ಭೇದಿಸುವವರಿಗೆ ಪುತ್ರಿಯನ್ನು ನೀಡುವುದಾಗಿ ಘೋಷಿಸಿದ್ದನು. ದ್ರೌಪದಿಯ ಸ್ವಯಂವರದ ಲಕ್ಷ್ಯಕ್ಕಿಂತ ಲಕ್ಷಣಗಳ ಸ್ವಯಂವರ ಲಕ್ಷ್ಯವು ಬಹುದುಷ್ಕರವಾಗಿದ್ದಿತು. ಲಕ್ಷ್ಯದ ಸುತ್ತ ಆಚ್ಛಾದನೆಯಿದ್ದು ಅದು ಕಣ್ಣಿಗೆ ಕಾಣುತ್ತಿರಲಿಲ್ಲ. ತುಂಡಾದ ಬಾಣದಿಂದ ಲಕ್ಷ್ಯವನ್ನು ಬೀಳಿಸಬೇಕು. ಆದ್ದರಿಂದ ಅದು ಅತಿ ಕಠಿಣಕರವಾಗಿತ್ತು. ಈ ಸ್ವಯಂವರಕ್ಕೆ ಬಂದಿದ್ದ ಜರಾಸಂಧ, ಕರ್ಣ, ದುರ್ಯೋಧನಾದಿಗಳು ಧನುವನ್ನು ಹೆದೆಯೇರಿಸಿ ಜ್ಯಾಬಂಧನ ಮಾಡಲು ಯತ್ನಿಸಿ ವಿಫಲರಾದರು. ಶ್ರೀಕೃಷ್ಣನು ಲಕ್ಷಣೆಯನ್ನು ವಿವಾಹವಾಗುವುದನ್ನು ಕಂಡಾನಂದಿಸಲು ಪಾಂಡವರೂ ಬಂದಿದ್ದರು. ಜರಾಸಂಧ-ಕರ್ಣಾದಿಗಳು ಲಕ್ಷ್ಯವನ್ನು ಭೇದಿಸ-ಲಾಗದೆ ಧನುವಿನಿಂದ ತಾಡಿತರಾದ ಮೇಲೆ ಅರ್ಜುನನು ಸ್ವಸಾಮರ್ಥ್ಯ ಪ್ರದರ್ಶನಕ್ಕಾಗಿ ಧನುಸ್ಸಿಗೆ ಜ್ಯಾಬಂಧನ ಮಾಡಿ, ಗುರಿ ನೋಡಿ ನಂತರ ಧನಸ್ಸನ್ನು ಕೆಳಗಿಟ್ಟುಬಿಟ್ಟನು. ಕೃಷ್ಣನೇ ಲಕ್ಷ್ಯಭೇದಮಾಡಿ ಲಕ್ಷಣೆಯನ್ನು ವರಿಸಲು ಅರ್ಹನೆಂದವನು ಭಾವಿಸಿದನು. ಶ್ರೀಕೃಷ್ಣನಿಗೆ ಯೋಗ್ಯವಾದ ಕಾರ್ಯವನ್ನು ಮಾಡಲು ತಾನು ಪ್ರವರ್ತಿಸುವುದೂ ಅಪರಾಧವೆಂದು ತಿಳಿದ ಮಹಾನುಭಾವನಾದ ಭೀಮಸೇನನು ಸ್ವಯಂವರದಲ್ಲಿ ಧನುವನ್ನು, ಲಕ್ಷ್ಯವನ್ನು ನೋಡಲೂ ಇಚ್ಛಿಸಲಿಲ್ಲ! ಅನಂತರ ಕೃಷ್ಣನು ಮಂದಹಾಸ ಬೀರುತ್ತಾ ಧನುವಿಗೆ ಜ್ಯಾಬಂಧನ ಮಾಡಿ ತುಂಡಾದ ಬಾಣದಿಂದ ಲಕ್ಷ್ಯವನ್ನು ಭೇದಿಸಿ ಕೆಳಗೆ ಬೀಳಿಸಿದನು. ಆಗ ದೇವದುಂದುಭಿಗಳು ಮೊಳಗಿದವು. ದೇವತೆಗಳು ಪುಷ್ಪವೃಷ್ಟಿ ಮಾಡಿದರು, ಬ್ರಹ್ಮಾದಿ ದೇವತೆಗಳು ಶ್ರೀಕೃಷ್ಣನನ್ನು ಸ್ತುತಿಸುತ್ತಿರಲು ಲಕ್ಷಣೆಯು ಕೃಷ್ಣನ ಕೊರಳಿಗೆ ಮಾಲೆ ಹಾಕಿ ಅವನ ಮಗ್ಗುಲಿನಲ್ಲಿ ನಿಂತಳು.

ಆಗ ಅರಸರು ಕುಪಿತರಾಗಿ ಯುದ್ಧಕ್ಕೆ ಬಂದರು. ಕೃಷ್ಣನು ಭೀಮಾರ್ಜುನರಿಂದೊಡಗೂಡಿ ಜರಾಸಂಧಾದಿಗಳನ್ನು ಓಡಿಸಿ ದ್ವಾರಕಾಪುರಿಗೆ ಹೊರಟನು. ಈ ಅಲೌಕಿಕರಾದ, ತ್ರಿಭುವನ ಸುಂದರಿಯರಾದ ಅಷ್ಟಮಹಿಷಿಯರು ಶ್ರೀಕೃಷ್ಣನಿಗೆ ಪ್ರೀತ್ಯಾಸ್ಪದರೆಂದು ಖ್ಯಾತರಾಗಿದ್ದಾರೆ. ಸಮಸ್ತಲೋಕಗಳಿಗೂ ತಾಯಿಯಾದ ಶ್ರೀಲಕ್ಷ್ಮೀದೇವಿಯು ಒಂದೇ ಶರೀರದಿಂದಿದ್ದರೂ ಭೂಮಿಯಲ್ಲಿ ರುಕ್ಮಿಣೀ-ಸತ್ಯಭಾಮೆಯರೆಂಬ ಎರಡು ರೂಪದಿಂದ ಜನಿಸಿದಳು. ಜಾಂಬುವತೀ ಮೊದಲಾದವರು ಸದಾ ಲಕ್ಷ್ಮಿಯ ಆವೇಶಯುಕ್ತರು. ಅವರಲ್ಲಿ ಜಾಂಬುವತಿಯು ಮುಖ್ಯಳಾಗಿದ್ದಾಳೆ.

ಇಂತು ನಿರ್ಣಯಾಚಾರ್ಯರು ಅಷ್ಟಮಹಿಷಿಯರ ಸ್ವರೂಪವನ್ನು ತಿಳಿಸಿ ಅವರಲ್ಲಿ ಲಕ್ಷ್ಮಿಯ ಆವೇಶದ ಕಾರಣದಿಂದಾಗಿ ತಾರತಮ್ಯ ವಿಶೇಷವನ್ನೀಗ ನಿರೂಪಿಸುತ್ತಾರೆ. ಶ್ರೀಕೃಷ್ಣನಿಗೆ ಪ್ರೀತಿಯ ವಿಷಯದಲ್ಲಿ ಸದಾ ರಮೆಯ ಆವೇಶವಿದ್ದರೂ ಜಾಂಬವತಿಯು ಬಲರಾಮನಿಗೆ ಸಮಾನಳು. ಕಾಲಿಂದಿ ಮೊದಲಾದ ಐವರು ಜಾಂಬವತಿಗಿಂತ ಸ್ವಲ್ಪ ಕಡಿಮೆ. ಲಕ್ಷ್ಮಿಯ ಆವೇಶ ಹೆಚ್ಚಾಗಿರುವಾಗ ಕಾಳಿಂದಿ ಮೊದಲಾದ ಐದು ಜನರಲ್ಲಿ ಶ್ರೀಕೃಷ್ಣನು ಅಧಿಕವಾಗಿ ಮುದಿಸುತ್ತಾನೆ. ಸದಾ ಲಕ್ಷ್ಮಿಯ ಆವೇಶವಿರುವುದರಿಂದ ಜಾಂಬವತಿಯು ಪ್ರೀತಿಯ ವಿಷಯದಲ್ಲಿ ಬಲರಾಮನಿಗೆ ಸಮಳು. ಉಳಿದ ಐವರಲ್ಲಿ ಲಕ್ಷ್ಮಿಯ ಆವೇಶವಿದ್ದರೂ ಜಾಂಬವತಿಗಿಂತ ಕಡಿಮೆ. ಈ ಆರುಜನರಿಗೂ ಪ್ರದ್ಯುಮ್ನನಿಗಿಂತ ಇಪ್ಪತ್ತು ಇಪ್ಪತ್ತು

ಗುಣಗಳು ಅಧಿಕವಾದ ಪ್ರಯುಕ್ತ ಸಾಮ್ಯವೇ. ಲಕ್ಷ್ಮಿಯ ಆವೇಶ ಕಡಿಮೆಯಾದಾಗ ಇತರರು ಪ್ರದ್ಯುಮ್ನಗಿಂತಲೂ ಇಪ್ಪತ್ತು ಗುಣ ಅಧಿಕರಾಗುವರು. ಅನಾದಿಕಾಲದಿಂದಲೂ ಜಾಂಬವತಿ ಮೊದಲಾದವರು ಶ್ರೀಕೃಷ್ಣನನ್ನು (ಶ್ರೀಹರಿಯನ್ನು) ಬಿಟ್ಟು ಮತ್ತೊಬ್ಬರಲ್ಲಿ ಕ್ರೀಡಿಸಲಿಲ್ಲ. ಇಂತು ಶ್ರೀಕೃಷ್ಣ ಪರಮಾತ್ಮನು ದ್ವಾರಕಾಪಟ್ಟಣದಲ್ಲಿ ಆ ಅಷ್ಟಮಹಿಷಿಯರೊಡನೆ ಕ್ರೀಡಿಸುತ್ತಾ ಸಂತೋಷದಿಂದಿದ್ದನು.

ರೈವತಕ ಪರ್ವತಕ್ಕೆ ಬಂದ ನಾರದರು ತಮಗಾದ ಅನುಭವವನ್ನು ಹೇಳಿ ಶ್ರೀಕೃಷ್ಣನ ಸರ್ವೋತ್ತಮತ್ವವನ್ನು ಎತ್ತಿಹಿಡಿದು ಜಡ ಮತ್ತು ದೇವತಾ ತಾರತಮ್ಯವನ್ನು ನಿರೂಪಿಸಿದ ಬಗೆಯನ್ನು ಈಗ ಶ್ರೀನಿರ್ಣಯಾಚಾರ್ಯರು ವಿವರಿಸುತ್ತಾರೆ.

ರುಕ್ಮಿಣೀವಲ್ಲಭನಾದ ಶ್ರೀಕೃಷ್ಣನು ದ್ವಾರಕೆಯಲ್ಲಿರುವಾಗ ದುರ್ಯೋಧನಾದಿ ಕೌರವರು, ಪಾಂಡವರು ಮತ್ತು ಇತರ ಅನೇಕ ರಾಜರುಗಳು ಶ್ರೀಕೃಷ್ಣ ದರ್ಶನಕ್ಕಾಗಿ ರೈವತಪರ್ವತಕ್ಕಾಗಮಿಸಿದರು. ಅವರೆಲ್ಲರನ್ನೂ ಕೃಷ್ಣನು ಅಲ್ಲಿ ಕಂಡು ಆನಂದಿಸಿದನು. ಉಚ್ಚಾಸನದಲ್ಲಿ ರುಕ್ಮಿಣಿಯೊಡನೆ ಮಂಡಿಸಿದ್ದ ಕೃಷ್ಣನಿಗೆ ಎಲ್ಲರೂ ನಮಸ್ಕರಿಸಿದರು. ಆಗ ಗಗನ ಮಾರ್ಗ-ದಿಂದಾಗಮಿಸಿದ ದೇವರ್ಷಿ ನಾರದರು ಶ್ರೀಗೋವಿಂದನಿಗೊಂದಿಸಿ "ಕೃಷ್ಣ! ನೀನು ಸರ್ವೋತ್ತಮನು. ನಿನಗೆ ಸಮರಿಲ್ಲ. ನೀನು ಆಶ್ಚರ್ಯನು, ಧನ್ಯನು" ಎಂದು ವಿಜ್ಞಾಪಿಸಿದರು.[24]

ಹೀಗೆ ನಾರದರು ನೀನು ಆಶ್ಚರ್ಯನು ಧನ್ಯನು ಎಂಬೆರಡು ಶಬ್ದದಿಂದ ಶ್ರೀವಾಸುದೇವನು ಸರ್ವೋತ್ತಮನೆಂದು ಹೇಳಿರುವುದನ್ನು ಶ್ರೀವಾದಿರಾಜಪೂಜ್ಯಚರಣರು ತಮ್ಮ ವ್ಯಾಖ್ಯಾನದಲ್ಲಿ ಹೀಗೆ ಸ್ವಾರಸ್ಯವಾಗಿ ವಿವರಿಸಿದ್ದಾರೆ:-

ಆಶ್ಚರ್ಯ:- ಆ = ಸಮಂತಾತ್, ಶ್ಚರ್ಯಾಃ = ಸುಖಿಚರಣಯೋಗ್ಯಾಃ ಯಸ್ಮಾತ್ಪ್ರವರ್ತಂತೇ ಸಃ- ಆಶ್ಚರ್ಯಃ. ಧನ್ಯಃ-ಧಂ = ಸ್ಥಾವರಜಗದ್ಧಾರಕತ್ವೇನ ಕುತ್ಸಿತವಾದಿಭಿಃ ಕಥ್ಯಮಾನಂ, ನಿ = ನಿತರಾಂ, ಅಯತಿ = ದೂರೇ ಯಾಪಯತಿ ಅಪ್ರಮರಸೀ ಕರೋತೀತಿ ಧನ್ಯಃ । ಅಂದರೆ - ಚೆನ್ನಾಗಿ (ಸರ್ವತ್ರ) ಸುಖದಿಂದಿರಲು ಯೋಗ್ಯರಾದ ಜೀವರನ್ನು ಪ್ರವರ್ತಿಸುವವನು ಆಶ್ಚರ್ಯನು. ಸ್ವಾಧೀನ ಜಗತ್ತನ್ನು ಧರಿಸಿರುವವನಾಗಿರುವುದರಿಂದ, ಕುತ್ಸಿತವಾದಿಗಳು ಹೇಳಿದ ಎಲ್ಲ ದುರ್ವಾದಗಳನ್ನು ಅತ್ಯಂತವಾಗಿ ದೂರಕ್ಕೆ ತಳ್ಳುವವನು - ಧನ್ಯನು. ಮೇಲಿನ ವ್ಯುತ್ಪತ್ತಿಯಿಂದ 'ದೇವ! ನೀನು ಸರ್ವೋ-ತ್ತಮನು. ನಿನಗೆ ಸಮರು ಯಾರೂ ಇಲ್ಲವೆಂದು' ನಾರದ ಮಹರ್ಷಿಗಳು ಹೇಳಿದರು. ಆಗ ಕೃಷ್ಣನು ನಸುನಕ್ಕು "ದಕ್ಷಿಣಾ-ಭಿಸ್ಸಾಕಮ್" ನಿಜ, ನಾರದ, ನಾನು ದಕ್ಷಿಣಾದಿಗಳೊಡನೆ ಆಶ್ಚರ್ಯನೂ, ಧನ್ಯನೂ ಆಗಿದ್ದೇನೆ. ನಾನೊಬ್ಬನೇ ಆಶ್ಚರ್ಯಾದಿ ಶಬ್ದಾರ್ಥ ಭೂತ ಸರ್ವೋತ್ತಮತ್ವಾದಿಗುಣವುಳ್ಳವನೆಂದಲ್ಲ; ದಕ್ಷಿಣಾಭಿಮಾನಿಯಾದ್ದರಿಂದ ಅರ್ಧನಾರೀಶ್ವರನಾಗಿರುವ ಭಗವಂತನ (ನನ್ನ) ದೇಹದ ವಾಮಪಾರ್ಶ್ವದಲ್ಲಿರುವ ದಕ್ಷಿಣಭಾಗದಲ್ಲಿ ನಾರಾಯಣನು ಸರ್ವದಾ ಇರುತ್ತಾನೆ ಎಂಬ ಕಾರಣದಿಂದ ದಕ್ಷಿಣಾಪದವಾಚ್ಯಳಾದ ರುಕ್ಮಿಣೀರೂಪಳಾದ ಈ ಲಕ್ಷ್ಮಿದೇವಿಯೂ ಸರ್ವೋತ್ತಮಳೂ, ಅಸದೃಶಳೂ ಆಗಿರುವುದರಿಂದ ಅವಳೂ ಸಹ ಆಶ್ಚರ್ಯಳೂ, ಧನ್ಯಳೂ ಆಗಿದ್ದಾಳೆ" ಎಂದು ಹೇಳಿದನು.[25]

ಇಲ್ಲಿ "ದಕ್ಷಿಣಾಭಿಃ" ಎಂಬ ಬಹುವಚನ ಪ್ರಯೋಗವಿದೆ. ನಾನಾವಿಧವಾದ ಯಜ್ಞಗಳು, ಅದಕ್ಕೆ ನೀಡುವ ದಕ್ಷಿಣೆಗಳು ಅನೇಕ ಪ್ರಕಾರವಾಗಿರುವುದರಿಂದ ಬಹುವಾಗಿರುವುದರಿಂದಲೂ, ತದಭಿಮಾನಿಗಳಾಗಿ ಅಲ್ಲಿರುವ ದಕ್ಷಿಣಾಪದ ವಾಚ್ಯರಾದ 'ದಕ್ಷಿಣಾ' ಎಂಬ ಮೂಲರೂಪ ರಮಾಂಶಗಳೂ ಬಹುವಾಗಿರುವವೆಂಬ ಅಭಿಪ್ರಾಯದಿಂದ ಶ್ರೀಕೃಷ್ಣನು

24. ಏತ್ಯಾಕಾಶಾನ್ನಾರದೋ ಕೃಷ್ಣಮಾಹ । ಸರ್ವೋತ್ತಮಸ್ತ್ವಂ ತ್ವಾದೃಶೋ ನಾಸ್ತಿಕಶ್ಚಿತ್ । ಇತ್ಯಾಶ್ಚರ್ಯೋ ಧನ್ಯ ಇತ್ಯೇವ ಶಬ್ದ । ದ್ವಯೇತೋಕ್ತೇ ವಾಸುದೇವಸ್ತಮಾಹ ॥ - ಮ.ಭಾ.ತಾ.ನಿ. 20.65

25. "ದಕ್ಷಿಣಾಭಿಸ್ಸಾಕಮಿತ್ಯೇವ ಕೃಷ್ಣಂ ಪಪ್ರಚ್ಛುರೇತತ್ಕಿಮಿತಿ ಸ್ಮ ಭೂಪಾಃ । ನಾರಾಯಣೋ ಮುನಿಮೂಚೇ ವದೇತಿ ಶೃಣು-ಧ್ವಮಿತ್ಯಾಹ ಸ ನಾರದೋಽಪಿ ।" - ತಾ.ನಿ. 20-66

"ದಕ್ಷಿಣಾಭಿಸ್ನಾತಂ" ಎಂದು ಹೇಳಿದನೆಂದು ತಿಳಿಯಬೇಕು. ಸರ್ವಪದದಿಂದ ಪ್ರಸ್ತುತರಾಗಿರುವ ಕೂರ್ಮನಿಂದ ಆರಂಭಿಸಿ ಬ್ರಹ್ಮಪರ್ಯಂತರಾದ ಪ್ರಧಾನಜೀವರು, ವೇದಾಭಿಮಾನಿನೀ-ಯಜ್ಞಾಭಿಮಾನಿನೀ ಎಂಬ ದ್ವಿರೂಪಳಾದ ಲಕ್ಷ್ಮಿಯು ಗೃಹ್ಯಳಾಗಿದ್ದಾಳೆ. ಇಲ್ಲಿ ಬ್ರಹ್ಮಪರ್ಯಂತ ಜೀವರಕ್ಕಿಂತ ಉತ್ತಮತ್ವವು ಶ್ರೀನಾರಾಯಣ(ಕೃಷ್ಣ)ನಿಗೂ, ರುಕ್ಮಿಣಿ(ಲಕ್ಷ್ಮಿ)ಗೂ ಸಮವಾಗಿದೆ. ಸಮವೆಂದರೆ ಕೃಷ್ಣ-ರುಕ್ಮಿಣಿಯರಿಬ್ಬರೂ ಸಮಾನರಾದ ಉತ್ತಮರೆಂದರ್ಥವಲ್ಲ. ವಿಶೇಷವೆಂದರೆ ನಿರವಧಿಕ ಉತ್ತಮತ್ವವು ತನಗೂ (ಕೃಷ್ಣನಿಗೂ), ಲಕ್ಷ್ಮೀದೇವಿಗೆ (ರುಕ್ಮಿಣಿಗೆ) ಸಾವಧಿಕ ಉತ್ತಮತ್ವವೆಂದೂ ತಿಳಿಯಬೇಕು. ವೇದ, ಯಜ್ಞವೆಂಬ ಲಕ್ಷ್ಮಿಯ ಎರಡುರೂಪಗಳಿಗಿಂತ ಕೃಷ್ಣನಿಗೆ ನಿರವಧಿಕ ಉತ್ತಮತ್ವವು. ಲಕ್ಷ್ಮೀದೇವಿಗೆ ಸ್ವರೂಪಗಳಲ್ಲಿ ಉತ್ತಮ-ಅಧಮ ವಿಭಾಗಗಳಿಲ್ಲದಿದ್ದರೂ ರಮಾದೇವಿಯ ರೂಪತ್ರಯಾಭಿಮನ್ಯಮಾನವಾದ ವೇದ-ಯಜ್ಞ-ದಕ್ಷಿಣಾಗಳಿಗೆ ಕ್ರಮವಾಗಿ ಉತ್ತಮತ್ವವಿರುವುದರಿಂದ, ಅವುಗಳ ಅಭಿಮಾನಿನಿಯರಾದ ಲಕ್ಷ್ಮಿಯ ರೂಪಗಳಿಗೂ ಸಹ ಕ್ರಮವಾಗಿ ಉತ್ತಮತ್ವವೆಂದು ತಿಳಿಯಬೇಕು. ಏಕೆಂದರೆ ಶುಷ್ಕವಾದ ವೇದಗಳಿಗಿಂತ ತದರ್ಥಭೂತವಿಷ್ಣು ಪೂಜಾರೂಪ ಯಜ್ಞ ಜ್ಯೇಷ್ಠವಾದುದು. ಋತ್ವಿಜರು ಮಾಡಿದ ಶ್ರೇಯಸ್ಸಂಪತ್ತಿಯಿಂದ ಯಜಮಾನನು ನೆರವೇರಿಸಿದ ಯಜ್ಞಪೂರಕವಾದ್ದರಿಂದ ಯಜ್ಞಕಾಲೀನ ಋಕ್ ಶ್ರಮನಿವಾರಕವಾದ್ದರಿಂದ ದಕ್ಷಿಣೆಗೆ ಕೇವಲ ಯಜ್ಞಕ್ಕಿಂತಲೂ ಜ್ಯೇಷ್ಠತ್ವವುಂಟು. ಯಜಮಾನನ ಇಚ್ಛೆಯಂತೆ ಋತ್ವಿಜರು ಯಜ್ಞ ಮಾಡುತ್ತಾರೆ. ಬಹುಶ್ರಮವಹಿಸಿ ಯಜ್ಞ ಮಾಡಿಸಿದ ಋತ್ವಿಜರಿಗೆ ಯಜಮಾನನು ದಕ್ಷಿಣಾ ಪ್ರದಾನ ಮಾಡುತ್ತಾನೆ. ಆದರಿಂದ ಋತ್ವಿಜರಿಗೆ ಯಜ್ಞಕಾಲದಲ್ಲಾದ ಶ್ರಮಪರಿಹಾರವಾಗಿ ಸಂತೋಷವಾಗುತ್ತದೆ. ಆದ್ದರಿಂದ ಯಜ್ಞಕ್ಕಿಂತಲೂ ದಕ್ಷಿಣೆಯು ಉತ್ತಮವಾಗಿದೆ.

ಉದಾಹರಣೆಗೆ ಹೇಳುವುದಾದರೆ - ಒಬ್ಬನೇ ರಾಜಕುಮಾರ, ಅವನು ಮೇಷ, ತುರಗ, ಗಜಗಳಲ್ಲಿ ಕುಳಿತು ಹೋಗುತ್ತಾನೆ. ಅವನು ಅಧಿಕ ಸ್ಥಾನದಲ್ಲಿರುವಾಗ ನೋಡುವವರಿಗೆ ಆಯಾ ಸ್ಥಾನದಲ್ಲಿರುವಾಗ ನೀಚ-ಉಚ್ಚ ಉಪಾಧಿ ನಿಮಿತ್ತವಾಗಿ ನೀಚ-ಉಚ್ಚತೆಗಳು ಕಣ್ಣಿಗೆ ಕಾಣುತ್ತವೆ. ಒಬ್ಬನೇ ರಾಜಕುಮಾರನು ಮೇಷ-ತುರಗಾರೂಢನಾಗಿರುವುದಕ್ಕಿಂತ ಗಜರಾಜನ ಮೇಲೆ ಕುಳಿತಿರುವಾಗ ಅವನನ್ನು ಮಹಾರಾಜ ಎಂದು ಸುತ್ತಲೂ ಎಲ್ಲರೂ ನಮಿಸುತ್ತಾರೆ. ಅದರಂತೆಯೇ ಬಹಿರ್ನಿಷ್ಠವೇದಾಭಿಮಾನಿನಿಯಾಗಿರುವುದರಿಂದ, ಬಹಿಸ್ಥಿತರಮಾ ರೂಪದಕ್ಕಿಂತ ಭಗವಂತನ ತೊಡೆಯಲ್ಲಿ ಕುಳಿತಿರುವ ಯಜ್ಞಾಭಿಮಾನಿಯಾದ ಲಕ್ಷ್ಮಿಯು ಸ್ಥಾನಾಧಿಕ್ಯದಿಂದ ಅಧಿಕಳೆಂದು ಹೇಳಲ್ಪಟ್ಟದೆ. ಅವಳಕಿಂತ ಪರಮಾತ್ಮನ ದೇಹಾರ್ಧ-ಗತಳಾದ ಲಕ್ಷ್ಮಿಯು ಸ್ಥಾನವಿಶೇಷದಿಂದ ವಿಶಿಷ್ಟಳೆಂದು ಭಾವ.

ನಾರದರು ಕೃಷ್ಣ ಪರಮಾತ್ಮರು ಹೀಗೆ ಹೇಳಿದ್ದರಿಂದ ಅಲ್ಲಿ ಸೇರಿದ್ದ ರಾಜರೆಲ್ಲರೂ "ಕೃಷ್ಣ ಇವೆಲ್ಲ ಏನು?" ಎಂದು ಪ್ರಶ್ನಿಸಿದಾಗ ನಾರಾಯಣನು (ಕೃಷ್ಣನು) ಅದನ್ನು ವಿಶದಪಡಿಸುವಂತೆ ನಾರದರಿಗೆ ತಿಳಿಸಿದನು.[26]

ನಾರದರು ಹೇಳಲಾರಂಭಿಸಿದರು:- ನಾನು ಒಮ್ಮೆ ಗಂಗಾನದಿಗೆ ಹೋದೆ. ಅಲ್ಲಿ ಒಂದು ಕೂರ್ಮವು ಸ್ವತಂತ್ರವಾಗಿ ವಿಹರಿಸುತ್ತಿರುವುದನ್ನು ಕಂಡು-ಎಲೈ ಕೂರ್ಮ, ನೀನು ಉತ್ತಮ, ನಿನಗೆ ಸಮರಿಲ್ಲವೆಂಬ ಭಾವದಿಂದ ನೀನು ಆಶ್ಚರ್ಯನೂ, ಧನ್ಯನೂ ಆಗಿದ್ದೀಯೆ ಎಂದು ಹೇಳಿದೆನು.[27] ನನ್ನ ಮಾತನ್ನಾಲಿಸಿ ಕೂರ್ಮವು ತನಗೆ ಆಧಾರವಾಗಿರುವ ಗಂಗೆಯೇ

---

26. "ಕೂರ್ಮೋ ದೃಷ್ಟೋ ವಿಷ್ಣುಪದ್ಯಾಂ ಮಯೋಕ್ತಸ್ತ್ವಮುತ್ತಮೋ ನಾಸ್ತಿಸಮಸ್ತವೇತಿ । ಊಚೇ ಗಂಗಾಮುತ್ತಮಾಂ ಸಾ ಜಲೇಶಮುಮಾಮೂಚೇ ಪೃಥಿವೀನಾಮಿಕಾಂ ಸಃ ॥" - ಇತ್ಯಾದಿ.

27. ಹೀಗೆ ಹೇಳಿದ ನಾರದರ ಅಭಿಪ್ರಾಯವೇನೆಂದರೆ ಅವರರಾದವರಕ್ಕಿಂತ ಉತ್ತಮ ಎಂದೇ ಭಾವ. ತಾರತಮ್ಯವನ್ನು ಅರಿತ ನಾರದರಿಗೆ ಭ್ರಮೆಗೆ ಕಾರಣವಿಲ್ಲ. ಇಲ್ಲಿ ಅವರ ಭಾವ ಅವರರಾದವರಕಿಂತ ಉತ್ತಮ ಎಂದು ಅರ್ಥ. ಕೂರ್ಮವು ಗಂಗೆಗಿಂತ ಅವರವು. ಕೂರ್ಮವೆಂದರೆ ಪುಷ್ಕರವೆಂದೇ ಅಭಿಪ್ರಾಯ.

ನನಗಿಂತ ಉತ್ತಮಳು, ಆಶ್ಚರ್ಯಳು ಮತ್ತು ಧನ್ಯಳು ಎಂದೆ. ಆಗ ಗಂಗೆಯು ತನಗೆ ಪತಿಯಾದ್ದರಿಂದ ನನಗಿಂತ ವರುಣನೇ (ಸಮುದ್ರರಾಜ) ಆಶ್ಚರ್ಯ ಮತ್ತು ಧನ್ಯನೆಂದಳು. ನಾನು ವರುಣನನ್ನು ಕಂಡು ನೀನು ಆಶ್ಚರ್ಯ ಮತ್ತು ಧನ್ಯನು ಎಂದೆ. ಅದನ್ನು ಕೇಳಿ ವರುಣನು ನನಗೂ ಮಾತೃಸ್ಥಾನೀಯಳಾದ್ದರಿಂದ ಪೃಥಿವಿಯೇ ಉತ್ತಮಳು, ಆಶ್ಚರ್ಯಳು ಮತ್ತು ಧನ್ಯಳು ಎಂಬ ಭಾವದಿಂದ ಪೃಥಿವೀನಾಮಕಳಾದ ಉಮೆಯು ಉತ್ತಮಳೆಂದು ಹೇಳಿದನು. ಇದರ ತಾತ್ಪರ್ಯವೇನೆಂದರೆ – ನನ್ನಂತೆಯೇ ಅನೇಕ ದೇವತೆಗಳಿದ್ದಾರೆ. ಅಂಥ ಎಲ್ಲ ದೇವತೆಗಳನ್ನೂ ಪೃಥ್ವೀನಾಮಕಳಾದ ಉಮೆಯು ಧರಿಸಿರುವುದರಿಂದ ಉಮೆಯೇ ಉತ್ತಮಳೆಂದು ವರುಣನ ಅಭಿಪ್ರಾಯವೆಂದು ತಿಳಿಯಬೇಕು.

ನಾರದರು ಮುಂದುವರೆದು ಹೀಗೆ ಹೇಳಿದರು-ಆಗ ನಾನು ಉಮೆಯ ಬಳಿಗೆ ಹೋಗಿ "ದೇವಿ! ನೀನು ಉತ್ತಮಳು, ಆಶ್ಚರ್ಯಳೂ ಧನ್ಯಳೂ ಆಗಿದ್ದೀಯೇ" ಎಂದೆನು. ಅದಕ್ಕೆ ಉಮೆಯು ರುದ್ರನು ನನ್ನ ಪತಿಯಾಗಿರು-ವುದರಿಂದಲೂ ಅವನಿಗೆ ಸಮರಾಗಿರುವುದರಿಂದಲೂ ಶಿವ, ಶೇಷ, ಗರುಡರು ನನಗಿಂತ ಉತ್ತಮರು, ಆಶ್ಚರ್ಯರು ಮತ್ತು ಧನ್ಯರೆಂಬ ಭಾವದಿಂದ ಪರಾವಸರಾದ್ದರಿಂದ ಅಂದರೆ ತಮಗಿಂತ ಅಮರರಾದ ಇಂದ್ರಾದಿಗಳನ್ನು ರಕ್ಷಿಸುವ ಕಾರಣದಿಂದ ಪರ್ವತನಾಮಧೇಯರಾದ ಶಿವ-ಶೇಷ-ಗರುಡ ದೇವರುಗಳು ಉತ್ತಮರೆಂದು ಹೇಳಿದಳು.

ಆಗ ನಾನು ಶಿವ-ಶೇಷ-ಗರುಡರಲ್ಲಿಗೆ ಹೋಗಿ 'ನೀವು ಆಶ್ಚರ್ಯರೂ, ಧನ್ಯರೂ ಆಗಿರುವಿರಿ, ನೀವು ಉತ್ತಮರು' ಎಂದು ಹೇಳಿದಾಗ ಅವರು ನಮ್ಮ ತಂದೆಯಾದ್ದರಿಂದ ನಮಗಿಂತಲೂ ಬ್ರಹ್ಮದೇವರು ಆಶ್ಚರ್ಯರು, ಧನ್ಯರು ಎಂಬ ಭಾವದಿಂದ ಬ್ರಾಹ್ಮಣಜಾತಿಗೆ ಪ್ರವರ್ತಕನಾದ್ದರಿಂದ ಬ್ರಾಹ್ಮಣ ಶಬ್ದವಾಚ್ಯನಾದ ಬ್ರಹ್ಮದೇವರೇ ಉತ್ತಮರು ಎಂದು ತಿಳಿಸಿದರು. ನಾನಾಗ ಸತ್ಯಲೋಕಕ್ಕೆ ಹೋಗಿ ಬ್ರಹ್ಮದೇವರನ್ನು ಕಂಡು 'ನೀನು ಆಶ್ಚರ್ಯನೂ ಧನ್ಯನೂ ಆಗಿದ್ದೇಯ' ಎಂದು ಹೇಳಲು ಬ್ರಹ್ಮದೇವರು ತಮಗೆ ತಾಯಿಯಾದ್ದರಿಂದಲೂ, ವೇದಾಭಿಮಾನಿನಿಯಾದ್ದರಿಂದಲೂ, ಲಕ್ಷ್ಮೀದೇವಿಯೇ ತಮಗಿಂತ ಆಶ್ಚರ್ಯಳು ಮತ್ತು ಧನ್ಯಳೆಂಬ ಭಾವದಿಂದ ವೇದಾತ್ಮಕಳಾದ ಪ್ರಕೃತಿಯು ಅಂದರೆ ಪ್ರಕೃತಿನಾಮಕಳಾದ ವಿಷ್ಣುಪತ್ನಿಯು ಉತ್ತಮಳೆಂದು ಹೇಳಿದರು.

ಬ್ರಹ್ಮದೇವರ ಮಾತನ್ನು ಕೇಳಿ ನಾನು ಶ್ರೀಲಕ್ಷ್ಮಿ ದೇವಿಯ ಬಳಿಗೆ ಹೋಗಿ, "ದೇವಿ! ನೀನು ಉತ್ತಮಳು, ಆಶ್ಚರ್ಯಳು ಮತ್ತು ಧನ್ಯಳೂ ಆಗಿದ್ದೀಯೆ" ಎಂದು ಹೇಳಿದೆನು. ಆಗ ಬಹುರೂಪಳಾದ ಒಬ್ಬಳೇ ಆದ ಆ ದೇವಿಯು ತನ್ನಿಂದ ಅಭಿಮನ್ಯಮಾನವಾದ ವೇದಕ್ಕಿಂತಲೂ, ವೇದಫಲೀಭೂತವಾದ ಯಜ್ಞಾಭಿಮಾನಿನಿಯು ಅಭಿಮನ್ಯಮಾನ ತಾರತಮ್ಯದಿಂದ ಆಶ್ಚರ್ಯಳೂ ಮತ್ತು ಧನ್ಯಳೆಂಬ ಅಭಿಪ್ರಾಯದಿಂದ ಯಜ್ಞಾಭಿಮಾನಿನಿಯೇ (ಲಕ್ಷ್ಮಿಯ ಮತ್ತೊಂದು ರೂಪ) ಉತ್ತಮ-ಳೆಂದು ನಿರೂಪಿಸಿದಳು.

(ಇಲ್ಲಿ "ಏಕಾದೇವೀ" ಎಂಬಲ್ಲಿ ಸ್ವಾರಸ್ಯಾರ್ಥವಿದೆ. ಏಕಾ = ರೂಪತ್ರಯದಲ್ಲಿಯೂ ಭೇದರಹಿತಳಾದ ನಾನು, ಜ್ಞೇನ = ಅಂದರೆ ಸರ್ವಜ್ಞನಾದ ನಾರಾಯಣನಿಂದ ಯುಕ್ತಳಾಗಿ ಯಜ್ಞಾಭಿಮಾನಿನಿಯಾಗಿ ಅಲ್ಲಿ ಪ್ರವೇಶಿಸುವುದರಿಂದ ಯಜ್ಞಕ್ರಿಯಾಂತರದಲ್ಲಿಯೂ ಸನ್ನಿಧಾನವಿರುವುದರಿಂದ ಆ ಹೆಸರಿನ ಯಜ್ಞನಾಮಕಳೇ ಶ್ರೇಷ್ಠಳು. ಆಗ ಅವಳು ಅಧಿಷ್ಠಾನ ಜ್ಯೇಷ್ಠಳಾದ್ದರಿಂದ ಉತ್ತಮಳು ಎಂದು ಹೇಳಿದಳೆಂದು ತಿಳಿಯಬೇಕು. ಇಲ್ಲಿ ಸರ್ವೋತ್ತಮತ್ವವು ತಮಗಿಂತ ಅವರಗಿಂತಲೇ ಹೊರತು ಎಲ್ಲರಿಗಿಂತಲೂ ಎಂದಲ್ಲ. ಅಂತೆಯೇ ವಿಷ್ಣುವಿನ ಸರ್ವೋತ್ತಮತ್ವವನ್ನು ತಿಳಿಸಲು ಅಲಂ ಶಬ್ದ ಪ್ರಯೋಗವಿದೆ. ಈ ಶಬ್ದದಿಂದ ಶ್ರೀಹರಿಯ ನಿರವಧಿಕ ಸರ್ವೋತ್ತಮತ್ವವು "ಏಷ ಸರ್ವೇಶ್ವರಃ" ಮುಂತಾದ ಶ್ರುತಿ-ಸ್ಮೃತಿಗಳಲ್ಲಿ ಪ್ರಸಿದ್ಧವಾಗಿದೆ ಎಂಬುದನ್ನು ಸೂಚಿಸುತ್ತದೆ.)

ನಾರದರು ಮತ್ತೆ ಹೇಳಹತ್ತಿದರು - ಆ ತರುವಾಯ ನಾನು ಯಜ್ಞನಾಮಕಳಾದ ಸಿರಿಯ ಬಳಿಗೆ ಹೋಗಿ 'ದೇವಿ! ನೀನು ಆಶ್ಚರ್ಯಳೂ, ಧನ್ಯಳೂ ಆಗಿದ್ದೀಯೇ' ಎಂದು ಹೇಳಿದೆನು. ನನ್ನ ವಚನವನ್ನಾಲಿಸಿ, ವಿಷ್ಣುವಿನಿಂದ ಆವಿಷ್ಟಳಾದ, ವಿಷ್ಣುವಿನ ತೊಡೆಯಲ್ಲಿ ಮಂಡಿಸಿರುವ ಯಜ್ಞನಾಮಕಳಾದ ಲಕ್ಷ್ಮಿಯು "ನನಗೂ ಪತಿಯಾದ್ದರಿಂದ ನನ್ನ ಯಜನಕ್ರಿಯೆಯಲ್ಲಿ ಪೂಜ್ಯನಾದ್ದರಿಂದ ನಿರವಧಿಕ ಗುಣಪೂರ್ಣನಾಗಿರುವುದರಿಂದ ಕೇಶವನೇ (ಅಂದರೆ ಬ್ರಹ್ಮರುದ್ರಾದಿಗಳಿಗೆ ನಿಯಾಮಕ-ನಾದವನು) ನನಗಿಂತಲೂ ಅತ್ಯಂತ ಅಧಿಕವಾಗಿ ಆಶ್ಚರ್ಯನೂ, ಧನ್ಯನೂ ಆಗಿದ್ದಾನೆ. ಆದುದರಿಂದ ಕೇಶವನೇ ಸರ್ವೋತ್ತಮನು" ಎಂದು ಹೇಳಿದಳು.

ಈ ವಿವರಣೆಯಿಂದ ಜಡ ಮತ್ತು ದೇವತಾ ತಾರತಮ್ಯಗಳು ಸಿದ್ಧಿಸಿದಂತಾಯಿತು. ಏವಂಚ ಕೂರ್ಮ ಶರೀರಕ್ಕಿಂತ (ಪುಷ್ಕರಕ್ಕಿಂತ) ಗಂಗಾಜಲವೂ, ಅದರಕ್ಕಿಂತ ಅದಕ್ಕೆ ಆಧಾರವಾದ ಸಮುದ್ರಜಲವೂ, ಅದರಕ್ಕಿಂತ ಅದಕ್ಕೆ ಆಧಾರಭೂತ ಪೃಥಿವಿಯೂ, ಪೃಥಿವಿಗಿಂತ ತದಾಧಾರಭೂತ ಪರ್ವತಗಳೂ, ಅದರಕ್ಕಿಂತಲೂ ಸಹ ಬ್ರಹ್ಮಾಭಿಮನ್ಯವಾದ ಮಹತ್ತತ್ತ್ವವೂ, ಅದಕ್ಕಿಂತ ಬ್ರಾಹ್ಮಣ್ಯಕ್ಕೆ ಕಾರಣವಾದ ವೇದವೂ, ವೇದಕಿಂತಲೂ ಯಜ್ಞವೂ, ಅದಕ್ಕಿಂತ ದಕ್ಷಿಣೆಯೂ ಕ್ರಮವಾಗಿ ಜ್ಯೇಷ್ಠವೆಂಬ ಜಡತಾರತಮ್ಯವೂ ಪ್ರದರ್ಶಿತವಾಯಿತು.

ಇನ್ನು ಪುಷ್ಕರಗಳಿಗಿಂತ ಗಂಗೆ, ಅವಳಿಗಿಂತ ವರುಣ, ಅವನಿಗಿಂತಲೂ ಉಮಾ, ಉಮೆಗಿಂತ ರುದ್ರ, ಶೇಷ, ಗರುಡರು, ಅವರಿಗಿಂತ ಬ್ರಹ್ಮದೇವರು, ಅವರಿಗಿಂತಲೂ ಬಹುರೂಪಿಣಿಯಾದ ಲಕ್ಷ್ಮೀದೇವಿ, ಲಕ್ಷ್ಮೀದೇವಿಗಿಂತಲೂ ಶ್ರೀನಾರಾಯಣನು ಸರ್ವೋತ್ತಮನೆಂದು ದೇವತಾ ತಾರತಮ್ಯವೂ ಇದರಿಂದ ದರ್ಶಿತವಾಗಿ ಸಿದ್ಧವಾಯಿತೆಂದು ತಿಳಿಯಬೇಕು.

ನಾರದರ ವಿವರಣೆಯನ್ನಾಲಿಸಿ ಶ್ರೀಕೃಷ್ಣನು-"ನಿಜ, ನಾರದರೇ, ನಾನು ನಿರವಧಿಕ ಸರ್ವೋತ್ತಮನಾಗಿರುವುದರಿಂದ ಆಶ್ಚರ್ಯನೂ, ಧನ್ಯನೂ ಆಗಿದ್ದೇನೆ. ಇಷ್ಟೇ ಅಲ್ಲ, ನಾನು ದಕ್ಷಿಣಾದಿಗಳಿಂದ ಸಹಿತನಾಗಿ, ಅಂದರೆ ಬಹುರೂಪ ಲಕ್ಷ್ಮೀ-ಯೊಡನೆ ಆಶ್ಚರ್ಯನೂ, ಧನ್ಯನೂ ಆಗಿದ್ದೇನೆ. ಅಂದರೆ ನನ್ನಂತೆ ಬಹುರೂಪದ ಲಕ್ಷ್ಮಿಯೂ ಸಹ ಆಶ್ಚರ್ಯಳೂ ಧನ್ಯಳೂ ಆಗಿದ್ದಾಳೆ" ಎಂದು ನಿರೂಪಿಸಿದನು.

ಇಲ್ಲಿ "ದಕ್ಷಿಣಾಭಿಸ್ಸಾಕಂ" ಎಂಬಲ್ಲಿ ಎರಡು ವಿಧವಾಗಿಯೂ ಅರ್ಥವನ್ನು ತಿಳಿಯಬೇಕು. ಅಸಂಕುಚಿತಸ್ವೇತರಸಕಲ ಸರ್ವೋತ್ತಮತ್ವವು ಶ್ರೀಕೃಷ್ಣನಿಗೇನೇ (ನಾರಾಯಣನಿಗೆ). ಲಕ್ಷ್ಮಿಗೆ (ರುಕ್ಮಿಣಿಗೆ) ನಾರಾಯಣನಂತೆ (ಕೃಷ್ಣನಂತೆ) ಅಸಂಕುಚಿತವೃತ್ತಿಯಿಂದ ಸ್ವೇತರ ಸರ್ವೋತ್ತಮತ್ವವಿಲ್ಲ. ಪತಿಯಾದ ಪುರುಷೋತ್ತಮನಿಗಿಂತ ಉತ್ತಮತ್ವವು ಅವಳಲ್ಲಿರುವುದು ಅಸಂಭವವಾದ್ದರಿಂದ ಲಕ್ಷ್ಮಿದೇವಿಯು ಬ್ರಹ್ಮಾದಿ ಸರ್ವಜಗತ್ತಿಗಿಂತ ಶ್ರೇಷ್ಠಳು. ಶ್ರೀಹರಿಗಾದರೋ ಅವಳು ಪತ್ನಿಯಾದ ಭಕ್ತಳೇ ಆಗಿದ್ದಾಳೆ. ಅಂತೂ ನಿರವಧಿಕ ಸರ್ವೋತ್ತಮನು ಶ್ರೀಕೃಷ್ಣನೇ ಎಂದು ಭಾವ.

ಅನಂತರ ನಾರದರು "ಶ್ರೀಕೃಷ್ಣನೇ ಸರ್ವೋತ್ತಮನು. ಇದನ್ನು ನೀವು ಪ್ರತ್ಯಕ್ಷವಾಗಿ ಅವನ ಮೇಲೆ ಯುದ್ಧಮಾಡಿ ನಿಶ್ಚಯಿಸಿಕೊಳ್ಳಬಹುದು" ಎಂದರು. ಆಗ ಕುಂತಿದೇವಿಯು "ಕೃಷ್ಣ! ನೀನು ಸರ್ವೋತ್ತಮನೆಂಬುದನ್ನು ಯುದ್ಧದಿಂದ ತೋರಿಸು" ಎಂದು ಕೋರಿದಳು. ಆಗ ಶ್ರೀಕೃಷ್ಣನು ಯುದ್ಧದಲ್ಲಿ ತನ್ನ ವೀರ್ಯವನ್ನು ಪ್ರದರ್ಶಿಸಿದನು. ಶ್ರೀಕೃಷ್ಣನು ತನ್ನ ಮೇಲೆ ಯುದ್ಧಕ್ಕೆ ಬಂದ ಪಾಂಡವರು, ಕೌರವರು, ದೇವತೆಗಳಿಂದಲೂ ಜಯಿಸಲಾಗದ ಭೀಷ್ಮ, ದ್ರೋಣ, ಅಶ್ವತ್ಥಾಮ, ಕರ್ಣ ಮುಂತಾದವರನ್ನು ಒಂದೇ ಕ್ಷಣದಲ್ಲಿ ನಿರಾಯುಧರನ್ನಾಗಿ ಮಾಡಿ ತನ್ನ ಪರಾಕ್ರಮವನ್ನು ತೋರಿದನು. ಆದರೆ ಭೀಮಸೇನನು ಶ್ರೀಕೃಷ್ಣನಿಗೆ ವಿರುದ್ಧವಾಗಿ ಯುದ್ಧ ಮಾಡುವುದಿಲ್ಲವೆಂಬ 'ವ್ರತ'ವುಳ್ಳವನಾದ್ದರಿಂದ ಕೃಷ್ಣನು ಆಜ್ಞೆ

ಮಾಡಿದರೂ, ಅವನ ಮೇಲೆ ಯುದ್ಧ ಮಾಡದೇ ಕೃಷ್ಣನಿಗೆ ನಮಿಸಿ, ಅವನಾಜ್ಞೆಯನ್ನು ಪಾಲಿಸಲೋಸುಗ ಕೃಷ್ಣನ ರಥದ ಚಕ್ರವನ್ನು ಮಾತ್ರ ಬಲವಾಗಿ ಹಿಡಿದನು. ಆಗ ಕೃಷ್ಣನು ಬಾಹುಬಲದಿಂದ ಭೀಮಸೇನನನ್ನು ಎಳೆದೆತ್ತಿ ಬಿಸಾಡಿ ತನ್ನ ವೀರ್ಯವನ್ನೂ ಸರ್ವೋತ್ತಮತ್ವವನ್ನೂ ಪ್ರದರ್ಶಿಸಿದನು. ಕುಂತಿ ಮತ್ತಿತರರು ಎಲ್ಲರೂ ಆಶ್ಚರ್ಯಭರಿತರಾಗಿ ಶ್ರೀವಾಸುದೇವನಿಗೆ ನಮಸ್ಕರಿಸಿ ಸ್ತುತಿಸಿದರು. ರೈವತಪರ್ವತದಲ್ಲಿ ಸೇರಿದ್ದ ಸಮಸ್ತರಾಜರುಗಳ ಸಮೂಹದಲ್ಲಿ ಶ್ರೀಕೃಷ್ಣನ ಮಹಿಮೆಯನ್ನು ಪ್ರಕಟಿಸಬೇಕೆಂದು ವಿಷ್ಣುವಿನಿಂದ ಕಳುಹಿಸಲ್ಪಟ್ಟ ಮೂಲರೂಪದ ಶ್ರೀವಾಯುದೇವರ ಅಪ್ಪಣೆಯಂತೆ ವಾಯುದೇವರ ಶಿಷ್ಯರಾದ ನಾರದರು, ಕೃಷ್ಣ ಮತ್ತು ದಕ್ಷಿಣಾದೇವಿಯಾದ ರುಕ್ಮಿಣಿಯರ ಮಹಿಮೆಯನ್ನು ಸಾರಿ, ರುಕ್ಮಿಣಿಯನ್ನು ಸ್ತುತಿಸಿ ಅವಳಿಗೆ ದೇವಲೋಕದ ಪಾರಿಜಾತವನ್ನು ಅರ್ಪಿಸಿ ಸತ್ಯಲೋಕಕ್ಕೆ ತೆರಳಿದರು.

ಒಂದೇ ಪ್ರಕಾರ ಜ್ಞಾನವುಳ್ಳ ಸಾಕ್ಷಾತ್ ಶ್ರೀಲಕ್ಷ್ಮಿಯು ರುಕ್ಮಿಣೀ-ಸತ್ಯಭಾಮೆಯರೆಂಬ ಎರಡು ರೂಪದಿಂದ ಅವತರಿಸಿದ್ದಳು. ಅವರಿಬ್ಬರಲ್ಲಿ ಯಾವ ಭೇದವೂ ಇಲ್ಲ. ಆದರೂ ಲೋಕಶಿಕ್ಷಾರ್ಥವಾಗಿ ಸ್ತ್ರೀಸ್ವಭಾವವನ್ನು ಪ್ರಕಟಿಸಲೋಸುಗ ಸತ್ಯಭಾಮೆಯು ಕುಪಿತಳಂತೆ ನಟಿಸಿದಳು. ಶ್ರೀಕೃಷ್ಣನು ರುಕ್ಮಿಣಿಯೊಡನೆ ಉಚ್ಚಾಸನದಲ್ಲಿ ಮಂಡಿಸಿ ಸಭೆಯಲ್ಲಿ ಸರ್ವವಂದ್ಯನಾದ್ದರಿಂದಲೂ, ನಾರದರು ರುಕ್ಮಿಣಿಯನ್ನು ಸ್ತುತಿಸಿ ಅವಳಿಗೇ ಪಾರಿಜಾತವನ್ನು ಕೊಟ್ಟಿದ್ದರಿಂದ ಸತ್ಯಭಾಮೆಯು ಹಾಗೆ ನಟಿಸಿದಳು. ಅದನ್ನರಿತ ಕೃಷ್ಣನು, ಲೋಕದಲ್ಲಿ ಪುರುಷರು ಪ್ರಿಯೆಯ ಕೋಪಶಮನಗೊಳಿಸಿ ರಮಿಸುವ ಪರಿಯನ್ನು ತೋರುತ್ತಾ ಸತ್ಯಭಾಮೆಯ ಕರಪಿಡಿದು "ಪ್ರಿಯೆ, ಸತ್ಯಾ! ನಾರದರು ಪಾರಿಜಾತವನ್ನು ರುಕ್ಮಿಣಿಗೆ ನೀಡಿದರೆಂದು ಕೋಪಗೊಂಡೆಯಾ? ದೇವಿ, ಕುಪಿತಳಾಗದಿರು. ನನ್ನ ಪ್ರೀತ್ಯಾಸ್ಪದಳಾದ ನಿನಗೆ ಪಾರಿಜಾತವೃಕ್ಷವನ್ನೇ ತಂದು ಕೊಡುತ್ತೇನೆ" ಎಂದು ಒಲುಮೆಯಿಂದ ರಮಿಸಿದನು.

ಅದೇ ಸಮಯದಲ್ಲಿ ನರಕಾಸುರನಿಂದ ಪರಾಜಿತನಾದ ಇಂದ್ರನು ಕೃಷ್ಣನ ಬಳಿಗೆ ಬಂದು ತಾನು ಪರಾಜಿತನಾದುದು, ನರಕಾಸುರನು ಅದಿತಿದೇವಿಯ ಕರ್ಣಕುಂಡಲಗಳನ್ನು ಅಪಹರಿಸಿಕೊಂಡುಹೋದುದು ಇವೆಲ್ಲ ವಿಚಾರವನ್ನೂ ವಿಜ್ಞಾಪಿಸಿದನು. ಅದೇ ಕಾಲಕ್ಕೆ ಬದರಿಯಿಂದ ಬಂದ ಋಷಿಮುನಿಗಳು ನರಕನಿಂದ ತಮಗಾಗುತ್ತಿರುವ ತೊಂದರೆಗಳನ್ನು ಕೃಷ್ಣನಿಗೆ ತಿಳಿಸಿ ನರಕಾಸುರನನ್ನು ಸಂಹರಿಸಿ ಲೋಕಕಲ್ಯಾಣ ಮಾಡಬೇಕೆಂದು ಪ್ರಾರ್ಥಿಸಿದರು. ಇಂದ್ರ ಮತ್ತು ಬ್ರಾಹ್ಮಣರ ಪ್ರಾರ್ಥನೆಯನ್ನಾಲಿಸಿದ ಕೃಷ್ಣನು ನರಕಾಸುರನನ್ನು ಸಂಹರಿಸಲು ನಿಶ್ಚಯಿಸಿ ಗರುಡನನ್ನು ಸ್ಮರಿಸಿದನು. ಕೂಡಲೇ ಅಲ್ಲಿಗೆ ಬಂದ ಗರುಡನು ಕೃಷ್ಣನಿಗೊಂದಿಸಿ ನಿಂತನು. ಕೃಷ್ಣನು ಸತ್ಯಭಾಮಾ ಸಹಿತನಾಗಿ ಗರುಡನ ಭುಜವೇರಿ ಇಂದ್ರನಿಗೆ ಅಭಯವಿತ್ತು ಕಳುಹಿಸಿ ಹೊರಟನು.

ನಾಶರಹಿತಳಾದ ಪ್ರಕೃತಿದೇವಿಯೇ ಸತ್ಯಭಾಮೆಯು. ಅವಳು ಲೋಕಶಿಕ್ಷಣಕ್ಕಾಗಿ ಸ್ವೇಚ್ಛೆಯಿಂದಲೇ 'ಭೀಮಾ' ಎಂಬ ಹೆಸರಿನ ಮಾಘಶುದ್ಧ ದ್ವಾದಶೀವ್ರತವನ್ನು ನೆರವೇರಿಸಲು ಶ್ರೀಹರಿ ಪ್ರೀತ್ಯರ್ಥವಾಗಿ ಉಪವಾಸ ಮಾಡಿ ಕೋಟಿಜಲಗಳ ಧಾರೆಯಲ್ಲಿ ಸ್ನಾನ ಮಾಡಿದ್ದಳು. ಇಂತಹ ಸತ್ಯಾಸಮೇತನಾಗಿ ಕೃಷ್ಣನು ವಾಯುವ್ಯದಿಕ್ಕಿಗೆ ಕಡೆಗೆ ಪ್ರಯಾಣ ಬೆಳೆಸಿದನು.

ನರಕಾಸುರನು ತಪಸ್ಸಿನಿಂದ ಬ್ರಹ್ಮದೇವರನ್ನು ಒಲಿಸಿಕೊಂಡು ಅವರಿಂದ ಅವಧ್ಯತ್ವವರವನ್ನು ಪಡೆದಿದ್ದನು. ಅದರಂತೆ ಶಸ್ತ್ರಧಾರಿಯಾದ ತನ್ನನ್ನು ಬೇರೊಬ್ಬರಾರೂ ಜಯಿಸಲಾಗದಂತಹ ವರವನ್ನೂ ಗಳಿಸಿದ್ದನು. ಇದರಂತೆ ಅವನ ಮಂತ್ರಿಗಳಿಗೂ ಅವಧ್ಯತ್ವ-ಅಜೇಯತ್ವ (ನರಕಾಸುರನನ್ನು ಬಿಟ್ಟು ಇತರರಿಂದ) ವರವನ್ನೂ ಬ್ರಹ್ಮನು ದಯಪಾಲಿಸಿದ್ದನು. ಕ್ರೋಢರೂಪೀ ಪರಮಾತ್ಮನಿಂದ ಭೂದೇವಿಯಲ್ಲಿ ಜನಿಸಿದ್ದ ಭೌಮನಿಗೆ (ನರಕಾಸುರನಿಗೆ) ಯಾರಿಂದಲೂ ಪ್ರವೇಶಿಸಲಾಗದ ಅತ್ಯಂತ ಸುಭದ್ರ ಕೋಟೆಗಳಿಂದ ಯುಕ್ತವಾದ ಸಮಸ್ತ ಭಾಗ್ಯದಿಂದ ಪೂರ್ಣವಾದ ಪ್ರಾಗ್ಜ್ಯೋತಿಷವೆಂಬ ಪಟ್ಟಣವನ್ನೂ ಕರುಣಿಸಿದ್ದನು. ಆ ಪುರದ ಹೊರಭಾಗದಲ್ಲಿ ಗಿರಿದುರ್ಗವಿತ್ತು. ಅದರ ಒಳಗೆ ಜಲದುರ್ಗವೂ, ಅದರೊಳಗೆ ಮುರನೆಂಬ ದೈತ್ಯನು

ನಿರ್ಮಿಸಿದ್ದ ಪಾಶದುರ್ಗವಿತ್ತು. ಜಲದುರ್ಗದಲ್ಲಿ ಆರುಸಾವಿರ ಸಂಖ್ಯೆಯ ಕ್ರೂರವಾದ ಪಾಶಗಳಿದ್ದವು. ನರಕನಿಂದ ಸೇವಿತನಾದ ಬ್ರಹ್ಮನು (ಶತ್ರುಗಳಿಂದ ಪ್ರವೇಶಿಸಲಾಗದ) ಆ ಗಿರಿದುರ್ಗ-ಜಲದುರ್ಗಗಳಿಗೆ ಅಭೇದ್ಯತ್ವ ಹಾಗೂ ದಾಟ-ಲಾಗದಂಥ ವರವನ್ನೂ ಕರುಣಿಸಿದ್ದನು. ನರಕಾಸುರನಿಗೆ ಪೀಠ, ಮುರ, ನಿಸುಂಭ, ಹಯಗ್ರೀವ ಮತ್ತು ಪಂಚಜನ ಎಂಬ ಐದುಜನ ಶೂರರಾದ ಮಂತ್ರಿಗಳಿದ್ದರು. ನರಕನು ಅವರನ್ನು ಲೋಕಪಾಲಕರೆಂದೂ, ತಾನು ಬ್ರಹ್ಮನೆಂದೂ ದರ್ಪದಿಂದ ಹೇಳಿಕೊಳ್ಳುತ್ತಿದ್ದನು.

ಶ್ರೀಕೃಷ್ಣನು ನರಕಾಸುರನನ್ನು ವಧಿಸಲು ಪ್ರಾಗ್ಜ್ಯೋತಿಷಪುರಕ್ಕೆ ಹೋಗಿ ಅಲ್ಲಿ ಗಿರಿದುರ್ಗವನ್ನು ಗದೆಯಿಂದ ಭೇದಿಸಿ ಜಲದುರ್ಗವನ್ನು ವಾಯವ್ಯಾಸ್ತ್ರದಿಂದ ಶೋಷಿಸಿದನು. ಮುರಾಸುರನು ನಿರ್ಮಿಸಿದ್ದ ಪಾಶಗಳನ್ನು ಖಡ್ಗದಿಂದ ಕತ್ತರಿಸಿ ಹಾಕಿದನು. ಆಗ ಮುರ, ಪೀಠ, ನಿಸುಂಭ, ಹಯಗ್ರೀವ ಮತ್ತು ಪಂಚಜನರೆಂಬ ಶೂರರಾದ ದೈತ್ಯರು ಪರ್ವತ-ಅಸ್ತ್ರ-ಶಿಲೆಗಳನ್ನು ಕೃಷ್ಣನ ಮೇಲೆ ವರ್ಷಿಸುತ್ತ ಕೃಷ್ಣನನ್ನು ಎದುರಿಸಿದರು. ಶ್ರೀವಾಸುದೇವನು ಆ ಐದುಜನರ ತಲೆಗಳನ್ನು ಚಕ್ರದಿಂದ ಕತ್ತರಿಸಿ ಅವರನ್ನು ಸಂಹರಿಸಿದನು. ರುದ್ರದೇವರ ವರದಿಂದ ಅವಧ್ಯರಾದ, ಆ ಮಂತ್ರಿಗಳೊಬ್ಬೊಬ್ಬರ ಏಳೇಳು ಜನ ಪುತ್ರರು ಶಸ್ತ್ರಾಸ್ತ್ರಗಳನ್ನು ಕೃಷ್ಣನ ಮೇಲೆ ಪ್ರಯೋಗಿಸುತ್ತ ಬರಲು ಭಗವಂತನು ಶ್ರೇಷ್ಠಬಾಣಗಳಿಂದ ಅವರನ್ನು ಕೊಂದು ಮೃತ್ಯುವಿಗೆ ಸಮರ್ಪಿಸಿದನು. ಇಂತು ಆ ಮೂವತ್ತೈದು ಜನ ಮಂತ್ರಿ ಕುಮಾರರನ್ನು ಸಂಹರಿಸಿದ ಕೃಷ್ಣನು ನರಕಾಸುರನ ಬಳಿಗೆ ತೆರಳಿದನು. ವಾಸುದೇವನು ಬರುವ ವಾರ್ತೆಯನ್ನು ತಿಳಿದು ನರಕನು ಮೂವತ್ತು ಅಕ್ಷೋಹಿಣೀ ಸೈನ್ಯಸಮೇತನಾಗಿ ಬಂದು ಕೃಷ್ಣನನ್ನು ತರುಬಿದನು. ಆಗ ಗರುಡದೇವನು ತನ್ನ ರೆಕ್ಕೆಗಳ ಹೊಡೆತಗಳಿಂದ ಆ ಒಟ್ಟು ಸೈನ್ಯದ ಕಾಲುಭಾಗವನ್ನು ನಾಶ-ಪಡಿಸಿದನು. ಉಳಿದ ಸಮಸ್ತ ಸೈನ್ಯವೂ ಶ್ರೀಕೃಷ್ಣನ ಶರಾಘಾತಕ್ಕೆ ತುತ್ತಾಯಿತು. ಇದರಿಂದ ಖತಿಗೊಂಡ ಭೌಮನು ಅನೇಕ ಅಸ್ತ್ರಗಳನ್ನು ಅಭಿಮಂತ್ರಿಸಿ ಕೃಷ್ಣನ ಮೇಲೆಸೆದನು. ಕೃಷ್ಣನು ಬಾಣಗಳ ಸಮೂಹದಿಂದ ನರಕಾಸುರನನ್ನು ನೋಯಿಸಿದನು. ಅದರಿಂದ ಕ್ರುದ್ಧನಾದ ನರಕನು ಬ್ರಹ್ಮದೇವರು ತನಗೆ ನೀಡಿದ್ದ ಶತಘ್ನೀ ಅಥವಾ ಶತಧನ್ವೀ ಎಂಬ ಗದೆಯನ್ನು ಕೃಷ್ಣನ ಮೇಲೆ ಪ್ರಯೋಗಿಸಿದನು. ಅಚ್ಛೇದ್ಯನೂ, ಅಭೇದ್ಯನೂ, ಸರ್ವದಾ ಜ್ಞಾನಸುಖಸ್ವರೂಪನೂ, ನಾಶರಹಿತನೂ, ಪರಿಪೂರ್ಣ ಸಮರ್ಥನೂ ದೇವೋತ್ತಮನೂ ಆದ ಕೃಷ್ಣ ಪರಮಾತ್ಮನು ಆ ಶತಘ್ನೀ ಎಂಬ ಗದೆಯನ್ನು ನುಂಗಿ ಯಾವಾಗಲೂ ಶ್ರಾಂತನಲ್ಲದಿದ್ದರೂ ಶ್ರಾಂತನಾದವನಂತೆ ನಟಿಸಿದನು.

ಶ್ರೀಕೃಷ್ಣನು ಬ್ರಹ್ಮದೇವನ ಅನೇಕ ವರಗಳನ್ನು ವ್ಯರ್ಥ ಮಾಡಿದ್ದನು. ಈಗ ಬ್ರಹ್ಮದೇವರ ಪೂರ್ಣಾನುಗ್ರಹಕ್ಕೆ ತಾನು ಪಾತ್ರನೆಂದು ನರಕಾಸುರನು ತಿಳಿಯುವಂತೆಯೂ, ಬ್ರಹ್ಮನಲ್ಲಿ ಗೌರವವುಂಟಾಗುವಂತೆ ಮಾಡಬೇಕೆಂದು ಬಯಸಿದ ಕೃಷ್ಣನು ಬಳಲಿದವನಂತೆ ನಟಿಸಿದನು. "ನಿರನಿಷ್ಟೋ ನಿರವದ್ಯಃ", "ಅಚ್ಛೇದ್ಯೋಽಯಮದಾಹ್ಯೋಽಯಂ", "ನಿತ್ಯೋ-ನಿತ್ಯಾನಾಂ", "ನಿತ್ಯಾನಂದೋ ನಿತ್ಯಜ್ಞಾನಃ", "ನಿತ್ಯಬಲಃ ಪರಮಾತ್ಮಾ ಪರಾಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾಚ" ಇವೇ ಮೊದಲಾದ ಬಹುಪ್ರಮಾಣಗಳು ಶ್ರೀಹರಿಗೆ ಶ್ರಮಾದಿಗಳಿಲ್ಲವೆಂದು ಸಾರುತ್ತಿವೆ. ಆದುದರಿಂದ ಕೃಷ್ಣನು ಶ್ರಾಂತನಲ್ಲದಿದ್ದರೂ ಅಸುರಜನ ಮೋಹನಾರ್ಥವಾಗಿಯೇ ಹಾಗೆ ನಟಿಸಿದನೆಂದು ತಿಳಿಯಬೇಕು. ಹೀಗೆ ಮಾಡಿದ್ದರಿಂದ ನರಕಾಸುರನಿಗೆ ವರವನ್ನಿತ್ತು ತಾನು ಅಪರಾಧ ಮಾಡಲಿಲ್ಲವೆಂದು ಬ್ರಹ್ಮನು ಅರಿಯಲಿ ಎಂದೂ ಹೀಗೆ ಮಾಡಿದನು.

ಕೃಷ್ಣನು ಶಾಂತನಾದವನಂತೆ ನಟನೆ ಮಾಡಿದ್ದರಿಂದ ಗರ್ವಿತನಾದ ನರಕಾಸುರನನ್ನು ಶಿಕ್ಷಿಸಲು ಸತ್ಯಭಾಮೆಯು ಕೃಷ್ಣನ ಕರದಿಂದ ಶಾರ್ಙ್ಗಧನುವನ್ನು ತಾನೇ ತೆಗೆದುಕೊಂಡು ಅಪಾರ ಶರಾಘಾತಗಳಿಂದ ನರಕಾಸುರನನ್ನು ವಿರಥನನ್ನಾಗಿಯೂ ನಿರಾಯುಧನನ್ನಾಗಿಯೂ ಮಾಡಿದಳು. ಆಗ ಕೃಷ್ಣನು ಅವಳನ್ನು ಆಲಂಗಿಸಿ, ಬೇರೊಂದು ರಥವೇರಿ ಕ್ರೂರವಾದ ಅಸ್ತ್ರಗಳನ್ನು

ಬಿಡುತ್ತಾ ಬಂದ ನರಕಾಸುರನ ಶಿರವನ್ನು ಚಕ್ರಾಯುಧದಿಂದ ತರಿದು ಅವನನ್ನು ಮೃತ್ಯುವಿಗೆ ಸಮರ್ಪಿಸಿದನು. ಹೀಗೆ ಮಂತ್ರಿಗಳು, ಅವರ ಪುತ್ರರಿಂದ ಸಹಿತನಾದ ನರಕಾಸುರನು ಶ್ರೀಕೃಷ್ಣನನ್ನು ನಿಂದಿಸಿದ್ದರಿಂದ ಅಂಧಃತಮಸ್ಸಿಗೆ ಹೋದನು. ನರಕಾಸುರನಲ್ಲಿ ಆವಿಷ್ಟರಾಗಿದ್ದ ವಾಯುದೇವರು ಕೃಷ್ಣನನ್ನು ಹೊಂದಿದರು. ಆ ತರುವಾಯ ವಾಸುದೇವನು ಸತ್ಯಭಾಮೆಯೊಡನೆ ಭೌಮನ ಅಂತಃಪುರವನ್ನು ಪ್ರವೇಶಿಸಿದನು.

ಪಂಚಭೂತಗಳಲ್ಲಿ ಅವರಳಾದ ಮೂಲಪ್ರಕೃತಿದೇವಿಯಿಂದ ಆವಿಷ್ಟಳಾದ ಭೂದೇವಿಯು ಶ್ರೀ ವರಾಹರೂಪಿ ಶ್ರೀಹರಿಯಿಂದ ನರಕಾಸುರನನ್ನು ಪುತ್ರನನ್ನಾಗಿ ಪಡದಿದ್ದಳು. ಅಂತಹ ಭೂದೇವಿಯು ಶ್ರೀಕೃಷ್ಣನೆಡೆಗೆ ಬಂದು ಅವನ ಪಾದಗಳಿಗೆ ಅಭಿವಂದಿಸಿ ಅದಿತಿ ದೇವಿಯ ಎರಡು ಕರ್ಣಕುಂಡಗಳನ್ನು ಸಮರ್ಪಿಸಿದಳು. ನಂತರ ನರಕನ ಮಗನೂ ತನ್ನ ಪೌತ್ರನೂ ಆದ ಭಗದತ್ತನನ್ನು ಶ್ರೀಕೃಷ್ಣನಿಗೆ ಒಪ್ಪಿಸಿದಳು. ಆಗ ವಾಸುದೇವನು ಭಗದತ್ತನಿಗೆ ಸಕಲ ಕಿರಾತ ರಾಜ್ಯಾಧಿಪತಿಯೆಂದು ಪ್ರಾಗ್ಜ್ಯೋತಿಷಪುರದಲ್ಲಿ ಪಟ್ಟಾಭಿಷೇಕ ಮಾಡಿದನು. ಹಿಂದೆ ರುದ್ರದೇವರು ಕುಬೇರನಿಗೆ ಅನುಗ್ರಹಿಸಿದ್ದ ಸುಪ್ರತೀಕವೆಂಬ ಮಹಾಸತ್ವಯುಕ್ತವಾದ ಗಜವನ್ನು ಭೌಮನು ಬಲಾತ್ಕಾರವಾಗಿ ಅಪಹರಿಸಿದ್ದನು. ಅದನ್ನು ಈಗ ಕೃಷ್ಣನು ಭಗದತ್ತನಿಗೆ ಕರುಣಿಸಿ, ಭೂದೇವಿಯನ್ನು ಅನುಗ್ರಹಿಸಿ ಸಂತೋಷಪಡಿಸಿ, ನಾಲ್ಕು ದಂತಗಳಿಂದ ಯುಕ್ತವಾದ ಕ್ಷೀರಸಮುದ್ರದಿಂದ ಉದ್ಭವಿಸಿದ ಆರುಸಾವಿರ ಗಜಗಳನ್ನು ದ್ವಾರಕಾಪಟ್ಟಣಕ್ಕೆ ಕಳುಹಿಸಿದನು.

ಹಿಂದೆ ಭೌಮನು ಅನೇಕ ರಾಜರು, ದೇವ ಗಂಧರ್ವರು ಮತ್ತು ಮಹಾವೀರರಾದ ನಿಯತಿಗಳನ್ನು ಯುದ್ಧದಲ್ಲಿ ಜಯಿಸಿಗಳಿಸಿದ್ದ ಎರಡು ಯೋಜನ ವಿಸ್ತೀರ್ಣವಾಗಿ ಸಮೃದ್ಧವಾಗಿದ್ದ ಸುವರ್ಣ-ರತ್ನರಾಶಿಯನ್ನೂ ಕೃಷ್ಣನು ತನ್ನ ರಾಜಧಾನಿ ದ್ವಾರಕೆಗೆ ಕಳಿಸಿದನು. ಅನಂತರ ಕೃಷ್ಣನು ಅಂತಃಪುರದಲ್ಲಿ ಹದಿನಾರು ಸಾವಿರದನೂರು ಜನ (16,100) ರಾಜಕನ್ಯೆಯರನ್ನು ಕಂಡನು. ಅವರೆಲ್ಲರೂ ರೂಪ-ಶೀಲ-ಉದಾರಗುಣಪೂರ್ಣರು, ಅಕ್ಷತಯೋನಿಗಳೂ ಶ್ರೀಕೃಷ್ಣನೇ ತಮಗೆ ಪತಿಯಾಗ-ಬೇಕೆಂಬ ವ್ರತದಲ್ಲಿದ್ದ ದೇವ-ಗಂಧರ್ವ-ರಾಜಕನ್ಯೆಯರನ್ನು ನರಕಾಸುರನು ಅಪಹರಿಸಿ ತಂದು ಬಂಧಿಸಿಟ್ಟಿದ್ದನು. ಅವರಲ್ಲಿ ಕೆಲವರು ದೇವತೆಗಳ ಗಂಧರ್ವರ ಕನ್ನಿಕೆಯರಾಗಿದ್ದರು. ಅವರ ಪೈಕಿ ತ್ವಷ್ಟೃವಿನ ಪುತ್ರಿಯಾದ ಕಶೇರವು ಗುಣಾಧಿಕಳಾಗಿದ್ದಳು. ಅವರೆಲ್ಲ ಪೂರ್ವದಲ್ಲಿ ಅಗ್ನಿಪುತ್ರರಾಗಿದ್ದು ಸ್ತ್ರೀಯರಾಗಲು ವಾಯುದೇವನನ್ನು ಕುರಿತು ತಪಸ್ಸನ್ನಾಚರಿಸಿದರು. ಶ್ರೀಕೃಷ್ಣನ ಮಡದಿಯರಾಗಬಯಸಿ ಸ್ತ್ರೀತ್ವವನ್ನು ಅಪೇಕ್ಷಿಸಿದ ಅವರಿಗೆ ವಾಯುದೇವರು ಆದರಂತೆ ವರವಿತ್ತರು. ಸ್ತ್ರೀದೇಹ ಪಡೆದ ಅವರು ನಂತರ ಬದರಿಗೆ ಹೋಗಿ ಅಲ್ಲಿ ಶ್ರೀವ್ಯಾಸರೂಪಿ ಹರಿಯನ್ನು ಸೇವಿಸುತ್ತಿದ್ದು ವೇಶ್ಯಾವೃತ್ತಿಯನ್ನು ಪಡೆದು ಕೆಲವರು ಭೂಮಿಯಲ್ಲಿ ರಾಜವಂಶದಲ್ಲಿ ಜನಿಸಿದರು. ಕೆಲವರು ಸ್ವರ್ಗದಲ್ಲಿ ದೇವ-ಗಂಧರ್ವರಲ್ಲಿ ಜನಿಸಿದರು. ಅವರು ಶ್ರೀಕೃಷ್ಣನು ಸರ್ವಾಭಿರಾಮನೆಂದು ಕೇಳಿ ಅವನನ್ನೇ ಪತಿಯಾಗಿ ವರಿಸಿದ್ದರು. ಆ ಕನ್ನಿಕೆಯರು ಸ್ವಭಾವದಿಂದ ಸರ್ವಗುಣಮಂಡಿತ-ರಾಗಿದ್ದು ಜಯಂತ ಮೊದಲಾದ ಆಜಾನ ದೇವತೆಗಳಿಗೆ ಸಮಾನರು. ಅವರಲ್ಲಿ ಲಕ್ಷ್ಮಿಯ ಆವೇಶವಿದ್ದುದರಿಂದ ಗುಣಾಧಿಕರಾಗಿದ್ದರು. ಅವರನ್ನು ಕೃಷ್ಣನು ದ್ವಾರಕಾಪುರಿಗೆ ಕಳುಹಿಸಿಕೊಟ್ಟನು.

ಅನಂತರ ಶ್ರೀಕೃಷ್ಣನು ಎರಡುನೂರು ಯೋಜನ ವಿಸ್ತಾರವಾಗಿ ಸಮೃದ್ಧವಾಗಿದ್ದ ಪರ್ವತವನ್ನೂ, ಸದಾ ಅಮೃತವನ್ನು ವರ್ಷಿಸುವ ವರುಣನ ಛತ್ರವನ್ನೂ ತನ್ನೆರಡು ಕೈಗಳಿಂದ ಗರುಡನ ಮೇಲಿಟ್ಟು ಸತ್ಯಾಸಮೇತನಾಗಿ ಪಕ್ಷಿರಾಜನ ಹೆಗಲಮೇಲೇರಿ ಸ್ವರ್ಗಕ್ಕೆ ತೆರಳಿದನು. ದುಷ್ಟಶಿಕ್ಷಕನಾದ ಆ ಸತ್ಯಾವಲ್ಲಭನು ಸಕಲ ಲೋಕಪಾಲಕರು ಹಿಂಬಾಲಿಸಿ ಬರುತ್ತಿರಲು ದೇವೇಂದ್ರನ ಅರಮನೆಯನ್ನು ಪ್ರವೇಶಿಸಿದನು. ಆಗ ಇಂದ್ರಾಣಿಯೊಡಗೂಡಿ ಇಂದ್ರನು ಆ ದೇವದೇವನನ್ನು ಆದರದಿಂದ ಸ್ವಾಗತಿಸಿ ಪೂಜಿಸಿದನು. ನಿಖಿಲಸುರಾನೀಕದಿಂದ ನಮಸ್ಕೃತನಾದ ಶ್ರೀಕೃಷ್ಣನು ಅದಿತಿದೇವಿಗೆ ದಿವ್ಯವಾದ ಕರ್ಣಕುಂಡಲಗಳನ್ನು ಕೊಟ್ಟನು. ಸೃಷ್ಟಿಕರ್ತನೂ ಜಗದೊಡೆಯನೂ ವಿಶುದ್ಧ ಸುಖಶರೀರನೂ ಆದ ಶ್ರೀಕೃಷ್ಣ ಮತ್ತು ಸತ್ಯಭಾಮೆಯರನ್ನು

ದೈತ್ಯಾವೇಶಾಯುಕ್ತಳಾದ ಆ ಅದಿತಿಯು ತನ್ನ ಮಕ್ಕಳಂತೆಯೇ ತಿಳಿದು ಆಶೀರ್ವದಿಸಿದಳು. ಸದಾನಂದಚಿದಾತ್ಮಕನೂ, ಉತ್ಪತ್ತಿರಹಿತನೂ, ಅನಂತಶಕ್ತಿಯುಳ್ಳವನೂ, ಚರಾಚರಪ್ರಪಂಚಕ್ಕೆ ಪ್ರಭುವೂ ಆದ ಶ್ರೀಕೃಷ್ಣನು ಸತ್ಯಭಾಮಾದೇವಿಯೊಡನೆ ವಿಹರಿಸಲು ನಂದನವನಕ್ಕೆ ಬಿಜಯಂಗೈದನು. ಮತ್ತು ಅಲ್ಲಿ ಪ್ರಿಯಪತ್ನಿಯೊಡನೆ ಕ್ರೀಡಿಸಿದನು.

ಸಂತತ ಸಂತಸವನೀವ ವಸಂತ ಋತುವಿನಿಂದ ಹಗಲಿರುಳೂ ಸರ್ವದಾ ಪೂರ್ಣಚಂದ್ರನ ಬಂಧುರ ಚಂದ್ರಿಕೆಯಿಂದ ಕಂಗೊಳಿಸುವ, ಮಂದಮಾರುತನ ತಂಪಾದ ಗಾಳಿಯಿಂದ ಸೇವಿತನಾಗಿ ತಲೆದೂಗುತ್ತಿರುವ ಶುಭಕರ ರತ್ನ-ಸುವರ್ಣ ವೃಕ್ಷರಾಜಿಗಳಿಂದ ಬೆಡಗುಗೊಂಡಿರುವ ಅಮರರ ಆ ನಂದನವನದಲ್ಲಿ ಸತಿಯೊಡನೆ ಆ ನಂದನಂದನನು ಆನಂದದಿಂದ ಸಂಚರಿಸಿದನು. ಅಮೃತಮಥನ ಕಾಲದಲ್ಲುದಯಿಸಿದ ಮಣಿಮಯ ಮೇಣ್ ಕನಕಮಯವಾದ ಅರ್ಥಿಜನರ ನಿಖಿಲ-ವಾಂಛಿತಗಳನ್ನೀಡಾಡುವ ದುಃಖ-ನಾಶರಹಿತನಾದ ಶ್ರೇಷ್ಠ ಪಾರಿಜಾತ ತರುವನ್ನು (ಕಲ್ಪವೃಕ್ಷ) ಅಲ್ಲಿ ಕಂಡ ಸತ್ಯಭಾಮೆಯು ಪ್ರಾಣಪ್ರಿಯನಾದ ಶ್ರೀಕೃಷ್ಣನನ್ನು ಕುರಿತು "ಎಲೈ ಅಪರಿಮಿತ ಸಾಮರ್ಥ್ಯಶಾಲಿಯೇ, ಜಗತ್ತಿನ ಜನರಿಗೆ ಪ್ರಾಣಧಾರಕನೇ, ನನ್ನ ಪ್ರಾಣಕಾಂತನೇ! ಈ ಸುರತರುವು ನನಗೆ ಬೇಕು. ಈ ಪಾರಿಜಾತ ವೃಕ್ಷವು ನನ್ನ ಮನೆಯ ಅಂಗಳದಲ್ಲಿ ರಾಜಿಸಬೇಕು" ಎಂದು ಬಿನ್ನವಿಸಲು ಗೋವಿಂದನು ಮಂದಹಾಸ ಬೀರುತ್ತಾ ಆ ಮಂದಗಮನೆಯಾದ ಅರವಿಂದಾಕ್ಷಿಯನ್ನು ಆನಂದ-ದಿಂದಾಲಿಂಗಿಸಿ ಅವಳಿಗೆ ಸಂತೋಷವನ್ನುಂಟು ಮಾಡಲು ಅವಳಿಗಾಗಿ ಪಾರಿಜಾತವೃಕ್ಷವನ್ನು ಕಿತ್ತು ಗರುಡನ ಮೇಲಿರಿಸಿದನು. ಮತ್ತೆ ಸತಿಯೊಡನೆ ವೈನತೇಯನ ಹೆಗಲೇರಿ ಕುಳಿತನು.

ಪಾರಿಜಾತವನ್ನು ಕೃಷ್ಣನು ಕೊಂಡ್ಯೊಯುವ ವಿಚಾರವರಿತು ಅದನ್ನು ಸಹಿಸದ ಶಚೀದೇವಿಯಿಂದ ಪ್ರೇರಿತನಾದ ಇಂದ್ರನು ಸುರರೊಡನೆ ಕೃಷ್ಣನನ್ನು ತಡೆಯಬಂದನು, ದೈತ್ಯಾವೇಶಯುಕ್ತರಾದ ಅವರಿಗೆ ತನ್ನ ಪರಾಕ್ರಮವನ್ನು ತೋರಲು ಶಾರ್ಙ್ಗಧನುವನ್ನು ಹಿಡಿದು ಶರವರ್ಷಣದಿಂದ ಅವರೆಲ್ಲರನ್ನೂ ಸತ್ಯಭಾಮೆಯು ನಿವಾರಿಸಿದಳು. ಅವಳು ಕುಬೇರನನ್ನು ನಿರಾಯುಧನನ್ನಾಗಿ ಮಾಡಿದಳು. ಗರುಡನು ವರುಣನನ್ನು ಸಮುದ್ರಕ್ಕೆಸೆದನು. ಆಗ ಕೃಷ್ಣನು ಪ್ರಧಾನವಾಯುವಿನ ಪುತ್ರನಾದ, ಕೋಣಾಧಿಪತಿಯಾದ ವಾಯುವನ್ನೂ, ವಹ್ನಿ, ಯಮಾದಿ ದಿಕ್ಪಾಲಕರನ್ನೂ ದೈತ್ಯಾವೇಶಯುಕ್ತರಾದ ಇನ್ನಿತರ ದೇವತೆಗಳನ್ನು ಒಮ್ಮೆ ಶಾರ್ಙ್ಗಧನುವಿನ ಠೇಂಕಾರದಿಂದ ತಾನಾರೆಂಬುದನ್ನು ತೋರಿಸಿಕೊಟ್ಟನು. ಅಸುರಾವೇಶದಿಂದ ಮುಕ್ತರಾದ ಅಮರರು ಯುದ್ಧವನ್ನು ನಿಲ್ಲಿಸಿ ಕೃಷ್ಣನು ಪುರಾಣ ಪುರುಷೋತ್ತಮನೆಂದರಿತು ಹೊರಟು ಹೋದರು. ದೇವತೆಗಳು ತನ್ನ ಭಕ್ತರಾದ್ದರಿಂದ ಕೃಷ್ಣನು ಅವರಿಗೆ ಹಾನಿಯಾಗದಂತೆ ಮೆಲ್ಲನೆ ಶರವರ್ಷ ಮಾಡಿದನು. ಆದರೂ ಕೃಷ್ಣನಾರೆಂದು ಅವರು ತಿಳಿಯಲಿಲ್ಲ. ಆದ್ದರಿಂದ ಶ್ರೀಕೃಷ್ಣನು ತಾನು ಜಗತ್ಪ್ರಭುವೆಂದು ಮನವರಿಕೆ ಮಾಡಿಕೊಡಲು ಎಂದು ಸೂಚಿಸಲು ನಿರ್ಣಯಾಚಾರ್ಯರು "ಶಾರ್ಙ್ಗೋತ್ಥರವೈರ್ವಿಬೋಧ್ಯ" ಎಂದು ನಿರೂಪಿಸಿರುವರೆಂದು ಅರಿಯಬೇಕು.

ಆಗ ಶಿವನು ದೇವೇಂದ್ರನ ಸಹಾಯಕ್ಕಾಗಿ ಬರಲು ಕೃಷ್ಣನು ಶಾರ್ಙ್ಗಧನುವಿನಿಂದ ಬಾಣಗಳನ್ನು ಬಿಟ್ಟು ಅವನನ್ನು ಓಡಿಸಿದನು. ನಂದಿವಾಹನನಾಗಿ ಬಂದಿದ್ದ ಶಿವನನ್ನು ನಂದಿಸಹಿತವಾಗಿ ಗರುಡನು ಬಹುದೂರಕ್ಕೆ ಎತ್ತಿ ಹಾಕಿದನು. ಶರಾಘಾತದಿಂದ ರುದ್ರನು ಹೊರಟು ಹೋದನು. ಆಗ ಇಂದ್ರನು ಕೃಷ್ಣನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿದನು. ಕೃಷ್ಣನು ಪರಿಹಾಸ ಮಾಡುತ್ತಾ ಆ ವಜ್ರಾಯುಧವನ್ನು ಎಡಗೈನಿಂದ ಹಿಡಿದನು. ಅದರಿಂದ ಇಂದ್ರನು ಅಲ್ಲಿಂದ ನಿಷ್ಕ್ರಮಿಸಿದನು. ಆಗ ಸತ್ಯಭಾಮೆಯು ದೇವೇಂದ್ರನನ್ನು ಅಪಹಾಸ ಮಾಡಿದಳು. ಆಗ ಇಂದ್ರನು ಕರಮುಗಿದು "ತಾಯಿ, ಜಗಜ್ಜನಕನಾದ ಕೃಷ್ಣನ ಮುಂದೆ ನಾವು ಕೇವಲ ಬಾಲಕರು" ಎಂದು ಜಗನ್ಮಾತೃಸ್ವರೂಪಳಾದ ಸತ್ಯಭಾಮೆಯಲ್ಲಿ ವಿಜ್ಞಾಪಿಸಿ ದೇವತೆಗಳೊಡನೆ ಕೃಷ್ಣನ ಕ್ಷಮೆ ಬೇಡಿ, ಆ ಜಗನ್ಮಾತಾಪಿತರಿಗೆ ಪ್ರಣಾಮ ಮಾಡಿ ಮಣಿಮಯ ಪರ್ವತ ಶಿಖರವನ್ನು ಶ್ರೀಕೃಷ್ಣನಿಗೆ ಸಮರ್ಪಿಸಿದನು. ಮತ್ತು ತನ್ನ ಮಗನಾದ ಅರ್ಜುನನನ್ನು ರಕ್ಷಿಸುತ್ತಿರಬೇಕೆಂದು ಇಂದ್ರನು ಪ್ರಾರ್ಥಿಸಿದನು.

ಶ್ರೀಕೃಷ್ಣನು ಮಂದಹಾಸಬೀರಿ "ಇಂದ್ರ! ನಾನು ಭೂಮಿಯಲ್ಲಿರುವಾಗ ಯಾರೊಬ್ಬರೂ ಅರ್ಜುನನನ್ನು ಜಯಿಸಲಾರರು. ಇದು ಸತ್ಯ" ಎಂದು ಅಭಯ ನೀಡಿದನು. ಭಗವದ್ಭಕ್ತರಲ್ಲಿ ಮೊದಲಿಗನಾದ ಇಂದ್ರನು ಪರಮಾನಂದಭರಿತನಾಗಿ ಚಕ್ರ-ಧರನಾದ ಕೃಷ್ಣನಿಗೆ ನಮಿಸಿ, ಅವನ ಕೃಪಾದೃಷ್ಟಿಗೆ ಪಾತ್ರನಾಗಿ ತನ್ನರಮನೆಗೆ ತೆರಳಿದನು.

ಕಿರೀಟಕರ್ಣಕುಂಡಲಗಳಿಂದ ಮಂಡಿತವಾದ ಶೋಭಾಯಮಾನ ಮುಖಪುಂಡರೀಕನೂ, ಪೀತಾಂಬರ – ಕೌಸ್ತುಭಾ-ಭರಣರಂಜಿತನೂ ಆದ ಯದುನಂದನನಾದ ಗೋವಿಂದನು ಇಂದ್ರನಿಂದ ಬೀಳ್ಕೊಂಡು ದ್ವಾರಕಾನಗರಿಗೆ ಪ್ರಯಾಣ ಬೆಳೆಸಿ ಅಲ್ಲಿ ಅತ್ಯಂತ ಪ್ರಕಾಶಮಾನನಾಗಿ ವಿರಾಜಿಸಿದನು. ಸರ್ವದಾ ಪ್ರಕಾಶಮಾನನಾದ, ಜಗತ್ಸ್ವಾಮಿಯಾದ, ಕೃಷ್ಣನಿಗೆ ವಿಶೇಷವೆಂಬುದೆಲ್ಲಿಯೂ ಇಲ್ಲ. ಆದರೂ ಮಂದಮತಿಗಳ ಬುದ್ಧ್ಯನುಸಾರವಾಗಿ ಪುರಾಣವಚನಗಳನ್ನು ಸ್ಮರಣೆಗೆ ತರಲು ಹಲಕೆಲವು ವೇಳೆ ವಿಶೇಷ ದರ್ಶನವಾಗುವುದು.

ದ್ವಾರಕಾಪುರಿಗೆ ಬಂದು ಯಾದವರಿಂದ ಪೂಜಿತನಾದ ಶ್ರೀಕೃಷ್ಣನು ಸತ್ಯಭಾಮೆಯ ಅಂತಃಪುರದ ಅಂಗಳದಲ್ಲಿ ಪಾರಿಜಾತ ವೃಕ್ಷವನ್ನು ಸ್ಥಾಪಿಸಿದನು. ನಂತರ ಎಲ್ಲ ಯಾದವರಿಗೂ ಉದಾರವಾಗಿ ರತ್ನಗಳನ್ನು ಕೊಟ್ಟು ಪ್ರಾಗ್ಜ್ಯೋತಿಷಪುರದಿಂದ ಕರತಂದ 16,100 ಜನ ಕನ್ನಿಕೆಯರನ್ನು ವಿವಾಹವಾಗಿ ಪ್ರತ್ಯೇಕವಾಗಿ ಒಬ್ಬೊಬ್ಬರ ರತ್ನಮಯ ಪ್ರಾಸಾದಗಳಲ್ಲಿ ಅವರವರೊಡನೆ ಕ್ರೀಡಿಸಿದನು. ಸರ್ವಸಮರ್ಥನಾದ ವಾಸುದೇವನು ಬೇರೆ ಬೇರೆ ಪತ್ನಿಯರಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಒಬ್ಬೊಬ್ಬರಲ್ಲೂ ಹತ್ತು ಹತ್ತು ಜನ ಪುತ್ರರು, ಒಬ್ಬೊಬ್ಬ ಪುತ್ರಿಯರನ್ನು ಪಡೆದು. ಅವರ ಮಧ್ಯದಲ್ಲಿ ಪ್ರದ್ಯುಮ್ನ-ಸಾಂಬ ಎಂಬ ಪುತ್ರರು, ಭಾನು ಮತ್ತು ಚಾರುದೇಷ್ಣರೆಂಬ ಸುತರು ಅತಿಗುಣಾಧಿಕರು.

ಸೂರ್ಯನ ಅನುಜನಾದ ಅದಿತಿಪುತ್ರನಾದ ಸವಿತೃವು ಕೃಷ್ಣನಿಂದ ಸತ್ಯಭಾಮೆಯಲ್ಲಿ ಭಾನು ಎಂಬ ಹೆಸರಿನಿಂದ ಜನಿಸಿದನು. ರುಕ್ಮಿಣಿಯಲ್ಲಿ ಚಾರುದೇಷ್ಣನೆಂಬುವನು ಜನಿಸಿದನು. ಹಿಂದೆ ಗಣಪತಿಯಾಗಿದ್ದವನೇ ಚಾರುದೇಷ್ಣನು. ದೇವತೆಗಳಾಗಿದ್ದವರೇ ಕೃಷ್ಣನ ಸಕಲ ಪುತ್ರರು. ದ್ವಾರಕೆಯಲ್ಲಿ ವಾಸಿಸುವವರೆಲ್ಲರೂ ದೇವಗಣಕ್ಕೆ ಸೇರಿದವರೇ ಆಗಿದ್ದರು.

ಕೃಷ್ಣನು ಸರ್ವದೇವತಾವಂದ್ಯನಾಗಿ ದ್ವಾರಕಾಪುರದಲ್ಲಿರುವಾಗ ಒಂದು ದಿನ ರುಕ್ಮಿಣೀ ಕುಮಾರನಾದ ಪ್ರದ್ಯುಮ್ನನು ಸಾಂಬನೊಡನೆ ಪಾತಾಳಕ್ಕೆ ಹೊರಟನು. ಆಗ ಅವರು ಕೃಷ್ಣ ಪುತ್ರರೆಂದರಿಯದೆ ಸರ್ಪರೂಪಿಗಳು ಮತ್ತು ವಾಸುಕಿಯೂ ಸಹ ಅವರ ಮೇಲೆ ಯುದ್ಧಕ್ಕೆ ಬಂದರು. ಪ್ರದ್ಯುಮ್ನನು ಅವರೆಲ್ಲರನ್ನೂ ಜಯಿಸಿ ಬಾಣಗಳಿಂದ ಸರ್ಪಗಳನ್ನು ಓಡಿಸಿ ರತ್ನಗಳನ್ನು ಪಡೆದನು. ನಂತರ ಪರಾಜಿತ ಸರ್ಪಗಳು ಪ್ರದ್ಯುಮ್ನನಿಗೊಂದಿಸಿದವು. ತರುವಾಯ ಪ್ರದ್ಯುಮ್ನನು ಸಾಂಬನೊಡನೆ ತಮ್ಮನ್ನು ಪ್ರತಿರೋಧಿಸಿದ ಮಾಯಾವಿಯಾದ ರುಂಧ ಮತ್ತು ಮಯನನ್ನು ಅಸ್ತ್ರವೃಷ್ಟಿಯಿಂದ ಜಯಿಸಿ ಮಯನಿಂದ ಪೂಜಿತನಾಗಿ ಆಕಾಶದಲ್ಲಿ ಚಲಿಸುವ ರಥದಲ್ಲಿ ಕುಳಿತು ಸ್ವರ್ಗಲೋಕಕ್ಕೆ ಹೋದನು. ಕೃಷ್ಣನು ಪಾರಿಜಾತವನ್ನು ಅಪಹರಿಸಿದನೆಂಬ ಜಿದ್ದಿನಿಂದ ಪ್ರದ್ಯುಮ್ನನ ಮೇಲೆ ಯುದ್ಧಕ್ಕೆ ಬಂದ ಜಯಂತನನ್ನು ಪ್ರದ್ಯುಮ್ನನು ಜಯಿಸಿದನು. ಸಾಂಬನು ಜಯಂತನ ಅನುಜನಾದ ಋಷಭನನ್ನು ಜಯಿಸಿದನು. ಪ್ರದ್ಯುಮ್ನ-ಸಾಂಬರು ಜಯಂತ-ಋಷಭರನ್ನು ತಡೆದಾಗ ಅವರು ಇವರ ರಥವನ್ನು ಭಸ್ಮಗೊಳಿಸಿದರು. ಅವರನ್ನು ಬಾಣಾಹತಿಗಳಿಂದ ಓಡಿಸಿ ದೇವೇಂದ್ರನಿಂದ ಪೂಜಿತರಾಗಿ ಗಗನ ಸಂಚಾರರೂಪ ವಿದ್ಯಾಬಲದಿಂದ ಪ್ರದ್ಯುಮ್ನ-ಸಾಂಬರು ಆಕಾಶಮಾರ್ಗವಾಗಿ ಹೊರಟರು.

ಇಲ್ಲಿ ಒಂದು ಸಂದೇಹ ಬರುತ್ತದೆ. ಸಾಂಬನಿಗೆ ಆಕಾಶಯಾನವಿದ್ಯೆಯು ಬರುತ್ತಿರಲಿಲ್ಲ. ಅಂದಮೇಲೆ ಅವನೆಂತು ಆಕಾಶಮಾರ್ಗವಾಗಿ ಹೋದನು? ವಸ್ತುತಃ ಪ್ರದ್ಯುಮ್ನನು ರತೀದೇವಿಯಿಂದ ಆ ವಿದ್ಯೆಯನ್ನು ಕಲಿತಿದ್ದನು. ಅಂತೆಯೇ ಅವನು ಸಾಂಬನನ್ನು ಹೆಗಲಮೇಲೆ ಕೂಡಿಸಿಕೊಂಡು ಆ ವಿದ್ಯೆಯ ಬಲದಿಂದ ಆಕಾಶಮಾರ್ಗವಾಗಿ ದ್ವಾರಕೆಗೆ ಹೋದನೆಂದು ತಿಳಿಯಬೇಕು.

ಇದಾದ ಕೆಲ ಸಮಯದ ನಂತರ ನಾರದರು ಶ್ರೀಕೃಷ್ಣನು ಬಹುಜನ ಪತ್ನಿಯರಲ್ಲಿ ಹೇಗೆ ಸಂಸಾರ ಮಾಡುತ್ತಾನೆಂದು ಅರಿಯಲು ದ್ವಾರಕಾಪುರಿಗೆ ಆಗಮಿಸಿದರು. ಅಚಿಂತ್ಯಾದ್ಭುತಶಕ್ತನಾದ ಒಬ್ಬನೇ ಶ್ರೀಕೃಷ್ಣನು ಹದಿನಾರು ಸಾವಿರದ ನೂರೆಂಟು ಜನ ಪತ್ನಿಯರ ಮನೆಗಳಲ್ಲಿ ಅಷ್ಟೇರೂಪಗಳನ್ನು ಧರಿಸಿ ಕ್ರೀಡಿಸುತ್ತಿದ್ದನು. ಅದನ್ನು ಕಂಡು ಪರಮಾಶ್ಚರ್ಯಭರಿತರಾದ ನಾರದರು ಶ್ರೀವಾಸುದೇವನಿಗೆ ಅಭಿವಂದಿಸಿ ಅವನ ಮಹಿಮೆಯನ್ನು ಕೊಂಡಾಡಿ ಇಂದ್ರಪ್ರಸ್ಥಕ್ಕೆ ದಯಮಾಡಿಸಿ ಅಲ್ಲಿ ಪಾಂಡವರಿಂದ ಪೂಜಿತರಾದರು.

ಇಂದ್ರಪ್ರಸ್ಥದಲ್ಲಿ ನಾರದರು ದ್ರೌಪದಿಯನ್ನು ಕಂಡು "ಮಗಳೇ, ನಾನು ಬ್ರಹ್ಮದೇವನ ಆಣತಿಯಂತೆ ನಿನಗೆ ಕೆಲ ವಿಚಾರವನ್ನು ತಿಳಿಸಲು ಬಂದಿದ್ದೇನೆ. ದೇವಿ! ನಿನ್ನಲ್ಲಿರುವ ಶ್ಯಾಮಲಾ-ಶಚೀ ಮೊದಲಾದ ಇತರ ದೇವಿಯರನ್ನು ಸುಪ್ತಗೊಳಿಸಿ ಅಂದರೆ ಮಲಗಿಸಿ (ಮೂರ್ಛೆಗೊಳಿಸಿ) ಮುಖ್ಯವಾಗಿ ನೀನೇ ಹೆಚ್ಚಾಗಿ ಭೀಮಸೇನನಲ್ಲಿಯೇ ಆಸಕ್ತಳಾಗಿ ಕ್ರೀಡಿಸು" ಎಂದು ಹೇಳಿ, ಮುಂದುವರೆದು "ಹಿಂದೆ ಬ್ರಹ್ಮನ ವರದಿಂದ ಅಜೇಯರಾಗಿದ್ದ ಸುಂದೋಪಸುಂದರೆಂಬ ಸಹೋದರರು ಪರಸ್ಪರ ಬಹುಪ್ರೀತಿಯಿಂದಿದ್ದರು. ಅವರ ಸಂಹಾರಕ್ಕಾಗಿ ನಾಲ್ಮೊಗನು ಸೃಜಿಸಿದ ತಿಲೋತ್ತಮೆಯನ್ನು ಕಂಡು ಮೋಹಿತರಾಗಿ, ಅವಳು ಕೇವಲ ತನ್ನೊಬ್ಬನ ಪ್ರೇಯಸಿಯಾಗಬೇಕೆಂಬ ಹಠದಿಂದ ಅತಿ ಪ್ರೀತಿಯಿಂದಿದ್ದ ಆ ಸಹೋದರರು ಅವಳಿಗಾಗಿ ಪರಸ್ಪರ ಕಾದಾಡಿ ಮೃತರಾದರು. ಅಂತಹ ಸಂದರ್ಭ ನಿಮಗೊದಗಬಾರದು. ಆದ್ದರಿಂದ ಇನ್ನು ಮುಂದೆ ನೀನು ಒಬ್ಬೊಬ್ಬ ಪತಿಯೊಡನೆ ಒಂದೊಂದು ವರ್ಷ ಅವರವರ ಪತ್ನಿಯಾಗಿದ್ದು ಸಂಸಾರವನ್ನು ಸಂತೋಷದಿಂದ ನಡೆಸು. ಇದರಿಂದ ಅಸೂಯಾದಿಗಳಿಗೆ ಅವಕಾಶವಿರುವುದಿಲ್ಲ. ನೀನು ಒಂದು ವರ್ಷ ಒಬ್ಬ ಪತಿಯೊಡನೆ ಸಂಸಾರ ಮಾಡುತ್ತಿರುವಾಗ ಆ ವರ್ಷಾವಧಿಯಲ್ಲಿ ಪಾಂಡವರಲ್ಲಿ ಯಾರಾದರೊಬ್ಬರು ನೀನು ಪತಿಯೊಡನೆ ಏಕಾಂತದಲ್ಲಿರುವಾಗ ನೋಡಿದ ಪಕ್ಷದಲ್ಲಿ ಅಂಥವರು ಒಂದು ವರ್ಷಕಾಲ ತೀರ್ಥಯಾತ್ರೆ ಮಾಡಬೇಕು. ಈ ನಿಯಮವನ್ನು ನೀವು ನಡೆಸುವುದರಿಂದ ನಿಮಗೆ ಮಂಗಳವಾಗುತ್ತದೆ. ಇದು ಶ್ರೀಕಮಲಾಸನರ ಅಪ್ಪಣೆ" ಎಂದು ಉಪದೇಶಿಸಿದರು. ಪಾಂಡವರು ನಾರದರ ಸಲಹೆಯನ್ನು ಒಪ್ಪಿ ಅದರಂತೆ ನಡೆಯುವುದಾಗಿ ಹೇಳಲು ಸಂತುಷ್ಟರಾದ ನಾರದರು ಅವರಿಂದ ಬೀಳ್ಕೊಂಡು ತೆರಳಿದರು.

ಪಾಂಡವರು ನಾರದರು ಹೇಳಿದಂತೆ ನಿಯಮ ಬದ್ಧರಾಗಿ ಇರಹತ್ತಿದರು. ಒಂದು ದಿನ ಬ್ರಾಹ್ಮಣನೊಬ್ಬನು ಬಂದು ಅರ್ಜುನನಲ್ಲಿ "ಕಳ್ಳರು ನನ್ನ ಗೋವುಗಳನ್ನು ಕದ್ದೊಯ್ದಿದ್ದಾರೆ. ಅದನ್ನು ಪುನಃ ನನಗೆ ತಂದು ಕೊಡಬೇಕು" ಎಂದು ಕೇಳಿಕೊಂಡನು. ಆಗ ಅರ್ಜುನನು ತನ್ನ ಶಸ್ತ್ರಾಸ್ತ್ರಗಳನ್ನು ತರಲು ಶಸ್ತ್ರಾಗಾರಕ್ಕೆ ತೆರಳಿದನು. ಅಲ್ಲಿ ಧರ್ಮಜನು ದ್ರೌಪದಿಯೊಡನೆ ಏಕಾಂತದಲ್ಲಿರುವುದನ್ನು ಕಂಡನು. ತಲೆ ತಗ್ಗಿಸಿ ಶಸ್ತ್ರಾಸ್ತ್ರಗಳನ್ನು ಪಡೆದು ಹೊರಟು ಕಳ್ಳರಿಂದ ಬ್ರಾಹ್ಮಣನ ಗೋವುಗಳನ್ನು ಬಿಡಿಸಿ ತಂದು ಬ್ರಾಹ್ಮಣನಿಗೆ ಒಪ್ಪಿಸಿದನು. ಆನಂತರ ತಾನು ಏಕಾಂತದಲ್ಲಿದ್ದ ಧರ್ಮರಾಜ-ಪಾಂಚಾಲಿಯರನ್ನು ಕಂಡು ನಿಯಮಭಂಗ ಮಾಡಿದ ಪಾಪಪರಿಹಾರಕ್ಕಾಗಿ ಒಂದು ವರ್ಷಕಾಲ ತೀರ್ಥಯಾತ್ರೆ ಮಾಡಲು ಸಂಕಲ್ಪಿಸಿದನು. ಧರ್ಮರಾಜನು ಸೋದರಪ್ರೇಮದಿಂದ ಅರ್ಜುನನನ್ನು ತಡೆಯಲೆತ್ನಿಸಿದನು. ಆದರೆ ಅರ್ಜುನನು ಸತ್ಯಪರಿಪಾಲನೆಗಾಗಿ ಸೋದರರಿಂದ ಬೀಳ್ಕೊಂಡು ತೀರ್ಥಯಾತ್ರೆಗೆ ಹೊರಟುಬಿಟ್ಟನು.

ಮಾರ್ಗಮಧ್ಯದಲ್ಲಿ ಭಾಗೀರಥಿಯಲ್ಲಿ ಅರ್ಜುನನು ಸ್ನಾನ ಮಾಡುತ್ತಿರುವಾಗ ಅವನನ್ನು ಮೋಹಿಸಿ ನಾಗಕನ್ಯೆಯೊಬ್ಬಳು ಕಪಟದಿಂದ ಅವನನ್ನು ಅಪಹರಿಸಿ ನಾಗಲೋಕಕ್ಕೆ ಕರೆದೊಯ್ದಳು. ಆ ನಾಗಕನ್ನಿಕೆಯ ಪತಿಯನ್ನು ಗರುಡನು ಭಕ್ಷಿಸಿದ್ದನು. ಆದ್ದರಿಂದ ಅವಳು ಅಪುತ್ರವತಿಯಾಗಿದ್ದಳು. ಅವಳ ಪಿತನು ಒಂದು ವರ್ಷ ಕಟ್ಟುನಿಟ್ಟು ಬ್ರಹ್ಮಚರ್ಯದಿಂದಿದ್ದ ಅರ್ಜುನನನ್ನು, ತನ್ನ ಕುವರಿಯನ್ನು ವಿವಾಹವಾಗಿ ಅವಳಲ್ಲಿ ಓರ್ವ ಪುತ್ರನನ್ನು ಪಡೆದು ತನಗೆ ನೀಡಬೇಕೆಂದು ಪ್ರಾರ್ಥಿಸಿದನು. ತಂದೆ ಮಗಳಿಂದ ಮತ್ತೆ ಪ್ರಾರ್ಥಿತನಾದ ಪಾರ್ಥನು ನಾಗಕನ್ಯೆಯನ್ನು ವಿವಾಹವಾಗಿ ಅವಳಲ್ಲಿ ಕುಜಾಂಶನಾದ, ಮತ್ತು

ವರುಣನ ಆವೇಶವುಳ್ಳ ಇರಾವಂತನೆಂಬ ಪುತ್ರನನ್ನು ಪಡೆದನು. ಸಜ್ಜನರಿಗೆ ಜನಿಸುವ ಮಕ್ಕಳು ತಂದೆಗುಣ, ತಾಯಿಯ ಜಾತಿಯಿಂದ ರಾಜಿಸುವುದು ಸ್ವಾಭಾವಿಕವಾಗಿದೆ. ಅಂತೆಯೇ ಇರಾವಂತನು ನಾಗಜಾತಿಯವನೂ, ಅರ್ಜುನನಿಂದ ಮೊದಲು ಜನಿಸಿದವನಾದ್ದರಿಂದ ಶಕ್ತಿಶಾಲಿಯೂ, ಮಾಯಾವಿದ್ಯೆಯಲ್ಲಿ ಕುಶಲನೂ, ಅಸ್ತ್ರಜ್ಞನೂ ಆಗಿ ಧಾರ್ಮಿಕನಾಗಿದ್ದನು. ಅನಂತರ ಪಾರ್ಥನು ಪತ್ನಿ ಮತ್ತು ಇರಾವಂತರನ್ನು ಅಲ್ಲಿಯೇ ಬಿಟ್ಟು ಪಾಂಡ್ಯದೇಶಕ್ಕೆ ತೆರಳಿದನು. ಇರಾವಂತನು ಸ್ವರ್ಗಲೋಕದಲ್ಲಿ ದೇವತೆಗಳಿಂದ ಪೂಜ್ಯನಾಗಿ ಅಲ್ಲಿ ವಾಸ ಮಾಡಿದನು. ಜ್ಞಾನಿಯಾದ ಪಾರ್ಥನಿಗೆ ಸತಿಯನ್ನು ತ್ಯಜಿಸಿದ್ದರಿಂದ ದೋಷವಿಲ್ಲ. ಜ್ಞಾನಿಗಳಿಗೆ ದೊಡ್ಡ ಅಪರಾಧದಿಂದ ಅನ್ಯದೋಷವು ಹತ್ತುವುದಿಲ್ಲವೆಂದು ಶಾಸ್ತ್ರಪ್ರಸಿದ್ಧವಾಗಿದೆ. ಬ್ರಹ್ಮಚರ್ಯಲಕ್ಷಣವಾದ ಸಮಯದ ಅತಿಕ್ರಮಣಮಾಡಿದ್ದರೂ, ಅಗ್ರಜರಾದ ಯುಧಿಷ್ಠಿರ-ಭೀಮಸೇನರು ಭ್ರಾತೃ-ಸ್ನೇಹದಿಂದ ಅವನನ್ನು ಕ್ಷಮಿಸಿದ್ದರು. ಒಂದು ವರ್ಷ ಬ್ರಹ್ಮಚರ್ಯದಿಂದಿರಬೇಕೆಂಬ ನಿಯಮಾತಿಕ್ರಮಣವು ಅರ್ಜುನನಿಗೆ ಅನರ್ಥಕಾರಿಯಾಗಲಿಲ್ಲ.

ಪಾಂಡ್ಯದೇಶದ ದೊರೆಯಾದ ವೀರಸೇನನು ಒಂದು ವರ್ಷದ ಕೊನೆಯಲ್ಲಿ ಅರ್ಜುನನಿಗೆ ಅನುರೂಪಳಾದ ಚಿತ್ರಾಂಗದಾ ಎಂಬ ತನ್ನ ಪುತ್ರಿಯನ್ನು ಸಂತೋಷದಿಂದ ವಿವಾಹ ಮಾಡಿಕೊಟ್ಟನು. ಆ ವೀರಸೇನನು ತ್ವಷ್ಟನಾಮಕಸೂರ್ಯಾಂಶ ಸಂಭೂತನು ಮತ್ತು ಯಮಾವೇಶಯುಕ್ತನು. ಅವನ ಮಗಳು ಶಚೀದೇವಿಯ ಅಂಶಳು. ಅವಳು ಪೂರ್ವದಲ್ಲಿ ವಾಲಿಯ ಪತ್ನಿಯಾದ ತಾರಾದೇವಿಯಾಗಿದ್ದು, ಸುಗ್ರೀವನ ಅಂಗಸಂಗದೋಷದಿಂದ ಸ್ವರ್ಗಕ್ಕೆ ಹೋಗಿರಲಿಲ್ಲ. ಈಗ ಅವಳು ಭೂಮಿಯಲ್ಲಿ ಪಾಂಡ್ಯರಾಜನ ಮಗಳಾಗಿ ಜನಿಸಿದ್ದಳು. ಸುಗ್ರೀವನ ಅಂಗಸಂಗ ನಿಮಿತ್ತವಾಗಿಯೇ ಚಿತ್ರಾಂಗದೆಗೆ ಅರ್ಜುನನೊಡನೆ ಸತತ ಸಹವಾಸವು ಲಭಿಸಲಿಲ್ಲ. ಹಿಂದೆ ಇಂದ್ರಸುತನಾಗಿದ್ದ ಜಯಂತನು ಮನ್ಮಥನ ಆವೇಶಯುಕ್ತನಾಗಿ ಈಗ ಪುತ್ರಿಕಾಪುತ್ರ ಧರ್ಮದಿಂದ ಅರ್ಜುನನಿಂದ ಚಿತ್ರಾಂಗದೆಯಲ್ಲಿ ಬಭ್ರುವಾಹನನೆಂಬ ಹೆಸರಿನಿಂದ ಜನಿಸಿದನು. ಹೀಗೆ ವೀರಪುತ್ರನನ್ನು ಪಡೆದ ಅರ್ಜುನನು ಚಿತ್ರಾಂಗದಾ-ಬಭ್ರುವಾಹನರನ್ನು ಮಾವ ವೀರಸೇನನಲ್ಲೇ ಬಿಟ್ಟು ಪಾಂಡ್ಯದೇಶದಿಂದ ಹೊರಟು ಪ್ರಭಾಸದ ಬಳಿಯಿರುವ ಕನ್ಯಾತೀರ್ಥಕ್ಕೆ ಆಗಮಿಸಿ ಅಲ್ಲಿ ಸ್ನಾನಕ್ಕಿಳಿದಾಗ ವಿಪ್ರಶಾಪದಿಂದ ಮೊಸಳೆಗಳಾಗಿದ್ದ ಐದುಜನ ಅಪ್ಸರಸ್ತ್ರೀಯರು ಸ್ನಾನಕಾಲದಲ್ಲಿ ಪಾರ್ಥನ ಕಾಲುಗಳನ್ನು ಹಿಡಿದಾಗ ಅರ್ಜುನನು ಅವರ ಶರೀರಗಳನ್ನು ನದಿಯ ದಡಕ್ಕೆಳೆದು ಹಾಕಿದನು. ಅದರಿಂದ ಅವರಿಗೆ ಶಾಪವಿಮೋಚನೆಯಾಯಿತು. ತಮಗೆ ಶಾಪನೀಡಿದ ಬ್ರಾಹ್ಮಣನನ್ನು ಹಿಂದೆ ಆ ಅಪ್ಸರ ಸ್ತ್ರೀಯರು, ಅಪರಾಧವನ್ನು ಕ್ಷಮಿಸಿ ವಿಶಾಪಕೊಡುವಂತೆ ಪ್ರಾರ್ಥಿಸಿದಾಗ ಆ ವಿಪ್ರನು 'ಯಾರು ನಿಮ್ಮೆಲ್ಲರನ್ನೂ ಒಂದೇ ಕಾಲದಲ್ಲಿ ಎಳೆದು ಹಾಕುವನೋ ಆಗ ನಿಮ್ಮ ಶಾಪಮೋಚನೆಯಾಗುವುದು' ಎಂದು ಅನುಗ್ರಹಿಸಿದ್ದನು. ಈಗ ಅದರಂತೆ ಮೊಸಳೆಯ ರೂಪದಿಂದಿದ್ದ ಆ ಐವರನ್ನೂ ಏಕಕಾಲದಲ್ಲಿ ಅರ್ಜುನನು ಹೊರಗೆಳೆದು ಹಾಕಿದ್ದರಿಂದ ಅವರ ಶಾಪಮೋಚನೆಯಾಗಿ ತಮ್ಮ ನಿಜವಾದ ಅಪ್ಸರೆಯರ ರೂಪತಾಳಿ ಅರ್ಜುನನಿಗೊಂದಿಸಿ ತೆರಳಿದರು. ಕನ್ಯಾತೀರ್ಥದಿಂದ ವಿಜಯನು ಪ್ರಭಾಸಕ್ಷೇತ್ರಕ್ಕೆ ಬಂದನು. ಅಲ್ಲಿ ಅವನಿಗೆ ಶ್ರೀಕೃಷ್ಣನ ತಂಗಿಯಾದ ಸುಭದ್ರೆಯನ್ನು ಬಲರಾಮನು ದುರ್ಯೋಧನನಿಗೆ ಕೊಡಲು ವ್ಯವಸ್ಥೆ ಮಾಡುತ್ತಿರುವ ವಿಚಾರ ತಿಳಿಯಿತು.

ಅರ್ಜುನನು ಸುಭದ್ರೆಯನ್ನು ತಾನು ವಿವಾಹವಾಗಲು ಬಯಸಿ ಯತಿವೇಷ ಧರಿಸಿ ದ್ವಾರಕೆಗೆ ತೆರಳಿದನು. ಏಕಾಂತದಲ್ಲಿ ಸತ್ಯಭಾಮೆಯ ಜೊತೆಯಲ್ಲಿದ್ದ ಕೃಷ್ಣನು ಅರ್ಜುನನು ಯತಿವೇಷ ಧರಿಸಿ ಬಂದಿರುವುದನ್ನರಿತು ಇದ್ದಕ್ಕಿದಂತೆ ನಗಲಾರಂಭಿಸಿದನು. ಸರ್ವಜ್ಞಳಾದರೂ ಸತ್ಯಭಾಮೆಯು "ಸ್ವಾಮಿ, ಏಕೆ ನಗುತ್ತಿರುವಿರಿ?" ಎಂದು ಪ್ರಶ್ನಿಸಿದಳು. ಕೃಷ್ಣನು ಅರ್ಜುನನು ಬಂದಿರುವ ವಿಚಾರವನ್ನು ತಿಳಿಸಿ ಅವಳೊಡನೆ ರೈವತಪರ್ವತಕ್ಕೆ ಪಾರ್ಥನನ್ನು ಕಾಣಲು ಬಂದನು. ಆ ರೈವತವು ಭೋಜ-ಯಾದವರು ಹಾಗೂ ಅಂಧಕರಿಗೂ ಕ್ರೀಡಾಸ್ಥಾನವಾಗಿದ್ದಿತು. ಅಲ್ಲಿಗೆ ಬಂದ ಕೃಷ್ಣ-ಸತ್ಯಭಾಮೆಯರು ಅರ್ಜುನನನ್ನು

ಕಂಡರು. ಪಾರ್ಥನು ಅವರಿಗೆ ನಮಿಸಿ ಸುಭದ್ರೆಯನ್ನು ತನಗೇ ವಿವಾಹ ಮಾಡಿಕೊಡಬೇಕೆಂದು ಪ್ರಾರ್ಥಿಸಿದನು. ಕೃಷ್ಣನು "ಪಾರ್ಥ! ನಿನಗೇ ನನ್ನ ತಂಗಿಯನ್ನು ಲಗ್ನಮಾಡಿಕೊಡುತ್ತೇನೆ" ಎಂದು ಪ್ರತಿಜ್ಞೆ ಮಾಡಿ ಅನಂತರ ಏನೂ ತಿಳಿಯದವನಂತೆ ಪತ್ನಿಯೊಡನೆ ಇತರ ಯಾದವರಿರುವಲ್ಲಿಗೆ ತೆರಳಿದನು.

ಬಲರಾಮನು ರೈವತ ಪರ್ವತಕ್ಕೆ ಓರ್ವ ಯತಿಗಳು ಬಂದಿರುವ ವಿಚಾರವನ್ನು ಚಾರರ ಮುಖದಿಂದರಿತು ಅವರ ದರ್ಶನಕ್ಕಾಗಿ ಸಕಲ ಯಾದವರೊಡನೆ ಹೋಗಿ ತೇಜಸ್ವಿಗಳಾದ ಯತಿಗಳನ್ನು ಕಂಡು ಪ್ರಭಾವಿತನಾಗಿ ಅವರಿಗೆ ಪೂಜೆ ಸಲ್ಲಿಸಿ ನಮಸ್ಕರಿಸಿದನು. ಯತಿವೇಷಧಾರಿಯಾದ ಅರ್ಜುನನು "ಬಲರಾಮದೇವ! ನೀನು ಜ್ಞಾನಭಕ್ತ್ಯಾದಿ ಗುಣಗಳಿಂದ ಶ್ರೇಷ್ಠನಾಗಿದ್ದೀಯೇ" ಎಂದು ಹೇಳಿ ಅವನಿಗೆ ನಮಸ್ಕರಿಸಿದನು. ಆದರಿಂದ ಉಬ್ಬಿದ ಬಲರಾಮನು "ಸರ್ವಜ್ಞರಾಗಿ, ಚತುರವಾಗ್ಮಿಗಳೂ ಆಗಿರುವ ಈ ಯತಿಗಳು ವರ್ಷಾಕಾಲದಲ್ಲಿ ತಮ್ಮ ಕನ್ಯಾಂತಃಪುರದಲ್ಲಿದ್ದು ಚಾತುರ್ಮಾಸ್ಯವ್ರತವನ್ನು ನೆರವೇರಿಸಲಿ. ಕೃಷ್ಣ! ಪೂಜ್ಯಯತಿಗಳಿಗೆ ಎಲ್ಲ ಅನುಕೂಲಗಳನ್ನೂ ಏರ್ಪಡಿಸಿಕೊಡು" ಎಂದನು. ಆಗ ಕೃಷ್ಣನು "ಅಣ್ಣ, ತರುಣನೂ, ಸುಂದರನು, ವಾಕ್ಚತುರನೂ ಆದ ಈ ಯತಿಯು ಕನ್ಯಾಂತಃಪುರದಲ್ಲಿರುವುದು ಯುಕ್ತವಲ್ಲ" ಎಂದು ಹೇಳಲು ಬಲರಾಮನು "ಕೃಷ್ಣ, ತತ್ತ್ವಜ್ಞಾನಿಗಳೂ, ತಪಸ್ವಿಗಳೂ ಆದ ಯತಿಗಳಲ್ಲಿ ಸಂದೇಹ ತಾಳಬಾರದು" ಎಂದನು. ಆಗ ವಾಸುದೇವನು – "ಅಣ್ಣ, ನನಗೇನೋ ಈತನಲ್ಲಿ ನಂಬಿಕೆ ಬರುತ್ತಿಲ್ಲ. ಈತನು ಕನ್ಯಾಂತಃಪುರದಲ್ಲಿರುವುದು ಸರಿಯಲ್ಲ. ಆದರೆ ಪೂಜ್ಯನಾದ ನೀನು ಅಪ್ಪಣೆ ಮಾಡುತ್ತಿದ್ದೀಯೆ. ನಿನ್ನ ಮಾತು ನಮಗೆ ಮಾನ್ಯವಾಗಿದೆ. ಆಗಲಿ, ನಿನ್ನ ಇಚ್ಛೆಯಂತೆ ಈ ಯತಿಗಳನ್ನು ಕನ್ಯಾಂತಃಪುರದಲ್ಲಿ ಇದ್ದು ಚಾತುರ್ಮಾಸ್ಯ ವ್ರತವನ್ನು ನಿರ್ವಹಿಸಲು ವ್ಯವಸ್ಥೆ ಮಾಡುತ್ತೇನೆ" ಎಂದು ಹೇಳಿ ಯತಿಗಳನ್ನು ಕನ್ಯಾಂತಃಪುರಕ್ಕೆ ಕರೆದೊಯ್ದು ಸಕಲವ್ಯವಸ್ಥೆಗಳನ್ನೂ ಮಾಡಿ ಸುಭದ್ರೆಯನ್ನು ಕರೆದು "ತಂಗಿ, ಈ ಯತಿವರರನ್ನು ಎಚ್ಚರದಿಂದಿದ್ದು ಪೂಜಿಸಿ ಸಂತೋಷಪಡಿಸು" ಎಂದು ಅಪ್ಪಣೆ ಮಾಡಿದನು. ಈ ರಹಸ್ಯ ವಿಚಾರಗಳನ್ನು ವಾಸುದೇವನು ತಾಯಿತಂದೆಗಳು, ಸಾತ್ಯಕಿ-ವಿಪೃಥುಗಳಿಗೆ ತಿಳಿಸಿ. ಈ ವಿಷಯ ಗುಟ್ಟಾಗಿರಲಿ ಎಂದು ಹೇಳಿದನು. ಸುಭದ್ರೆಯು ಭಕ್ತಿ-ಶ್ರದ್ಧೆಗಳಿಂದ ವರ್ತಿಸುತ್ತ ಆ ಯತಿಗಳನ್ನು ಸೇವಿಸಲಾರಂಭಿಸಿದಳು. ಇದರಿಂದ ಹರ್ಷಗೊಂಡ ಯತಿರೂಪಿ ಅರ್ಜುನನು ಶ್ರೀಕೃಷ್ಣನು ಖಂಡಿತವಾಗಿ ಸುಭದ್ರೆಯನ್ನು ನನಗೆ ಮದುವೆ ಮಾಡಿಕೊಡುವನು ಎಂದು ನಂಬಿ ಶ್ರಾವಣಾದಿ ನಾಲ್ಕು ಮಾಸಗಳನ್ನು ಉತ್ತಮ ಪ್ರವಚನ, ಭಗವತ್ಕಥಾನುವಾದಾದಿಗಳನ್ನೆಸಗುತ್ತಾ ಅಲ್ಲಿ ವಾಸ ಮಾಡಿದನು.

ಕೃಷ್ಣನು ಸುಭದ್ರೆಯನ್ನು ಅರ್ಜುನನಿಗೆ ಕೊಡಲು ಇಚ್ಛಿಸಿರುವುದು, ಯತಿವೇಷದಲ್ಲಿ ಅರ್ಜುನನು ಬಂದಿರುವ ವಿಚಾರಗಳನ್ನು ತಂದೆತಾಯಿಯರಾದ ವಸುದೇವ-ದೇವಕಿಯರಿಗೆ ರಹಸ್ಯವಾಗಿ ತಿಳಿಸಿದ್ದೇನೋ ಸರಿ. ಆದರೆ ಆ ರಹಸ್ಯವನ್ನು ಸಾತ್ಯಕಿ-ವಿಪೃಥುಗಳಿಗೆ ತಿಳಿಸಿದ್ದು ಯುಕ್ತವೇ? ಎಂದರೆ, ಅಸ್ತ್ರ-ಶಸ್ತ್ರ ಹಾಗೂ ತತ್ತ್ವಶಾಸ್ತ್ರಗಳಲ್ಲಿ ಸಹ ಸಾತ್ಯಕಿಯು ಕೃಷ್ಣ ಮತ್ತು ಅರ್ಜುನರ ಶಿಷ್ಯನು. ವಿಪೃಥುವೂ ಸಹ ಶ್ರೀಕೃಷ್ಣನ ಶಿಷ್ಯನೇ. ಅಂತೆಯೇ ಅವರಿಗೂ ಈ ರಹಸ್ಯವನ್ನು ಹೇಳಿದನು. ಉದ್ಧವ-ಆಹುಕಾದಿಗಳು, ಪಾಂಡವರು ಕೃಷ್ಣನಿಗೆ ಪ್ರಿಯರೆಂದರಿತಿದ್ದರೂ ಬಲರಾಮನು ತಂಗಿಯನ್ನು ದುರ್ಯೋಧನನಿಗೆ ಕೊಡಬೇಕೆಂದು ಸಂಕಲ್ಪಿಸಿದ್ದುದರಿಂದ ಅವನ ಇಚ್ಛೆಗೆ ವಿರುದ್ಧವಾಗಿ ನಡೆಯಲು ಇಚ್ಛಿಸಲಿಲ್ಲವಾದ್ದರಿಂದ ಅವರಿಗೂ ಮತ್ತಿತರರಿಗೂ ಕೃಷ್ಣ ಈ ವಿಚಾರ ಹೇಳದೇ ವಂಚಿಸಿದನು. ಅಷ್ಟೇ ಅಲ್ಲ, ಪ್ರದ್ಯುಮ್ನ-ಸಾಂಬಾದಿಗಳಿಗೂ ತಿಳಿಸಲಿಲ್ಲ. ಅಂತೆಯೇ ಅವರು ಬಲರಾಮನೊಡನೆ ತೀರ್ಥಯಾತ್ರೆಗೆ ಪಿಂಡೋದ್ಧಾರಕ್ಕೆ ಹೊರಟುಹೋದರು.

ಅವರೆಲ್ಲರೂ ಹೊರಟು ಹೋದಮೇಲೆ ಒಂದುದಿನ ಸುಭದ್ರೆಯು ಯತಿವೇಷಧಾರಿ ಅರ್ಜುನನನ್ನು ಕುರಿತು "ಸ್ವಾಮಿ, ತೀರ್ಥಯಾತ್ರೆಯ ಕಾಲದಲ್ಲಿ ನೀವು ನಮ್ಮ ಬಾಂಧವರಾದ ಪಾಂಡವರನ್ನು ಕುಂತೀದೇವಿ-ದ್ರೌಪದಿಯರನ್ನು ಕಂಡಿದ್ದೀರಾ?" ಎಂದು ಪ್ರಶ್ನಿಸಿದಳು. ಆದಕ್ಕೆ ಕಪಟಯತಿಯಾದ ಅರ್ಜುನನು "ನಿಜ, ಅವರನ್ನು ಕಂಡಿದ್ದೆ. ಅವರೆಲ್ಲರೂ

ಕ್ಷೇಮದಿಂದಿದ್ದಾರೆ'' ಎನಲು ಸುಭದ್ರೆಯು ''ಅರ್ಜುನನು ತೀರ್ಥಯಾತ್ರೆ ಮಾಡುತ್ತಿದ್ದಾನೆಂದು ಬ್ರಾಹ್ಮಣರ ಮುಖದಿಂದ ಕೇಳಿದ್ದೇನೆ. ನೀವು ಎಲ್ಲಿಯಾದರೂ ಅವನನ್ನು ಭೇಟಿಯಾಗಿದ್ದೀರಾ?'' ಎಂದು ಕೇಳಲು ''ನಿಜ ಅರ್ಜುನನನ್ನು ಕಂಡಿದ್ದೆ'' ಎಂದು ನಸುನಕ್ಕು ನುಡಿದನು. ಸುಭದ್ರೆಯು ''ಅವನನ್ನು ಎಲ್ಲಿ ನೋಡಿದ್ದೀರಿ?'' ಎನಲು ''ಇಲ್ಲೇ ನೋಡಿದ್ದೆ'' ಎಂದು ವೇಷಧಾರಿ ಅರ್ಜುನನು ಹೇಳಿದನು. ಸುಭದ್ರೆಯು ಮತ್ತೆ ಮತ್ತೆ ಅದನ್ನೇ ಕೇಳಲು ''ಎಲೈ ಉನ್ನತ್ತಳೇ, ನಾನೇ ಅರ್ಜುನನು'' ಎಂದು ಮಂದಹಾಸ ಬೀರಿದನು.

ಅದನ್ನು ಕೇಳಿ ಆ ಕಮಲಾಕ್ಷಿಯು ಹರ್ಷಾತಿರೇಕದಿಂದ ಅವನನ್ನು ಪರೀಕ್ಷಾ ದೃಷ್ಟಿಯಿಂದ ಚೆನ್ನಾಗಿ ಗಮನಿಸಿ ಲಜ್ಜೆಯಿಂದ ತಲೆತಗ್ಗಿಸಿ ನಿಂತಳು. ಆಗ ಅರ್ಜುನನು ''ಸುಭದ್ರೆ! ನಿನ್ನನ್ನು ಮದುವೆಯಾಗಲು ಇದೇ ಸರಿಯಾದ ಸಮಯ'' ವೆಂದು ಅವಳ ಕರಪಿಡಿಯಲು ಯತ್ನಿಸಿದನು. ಸುಭದ್ರೆಯು ನಾಚಿಕೆಯಿಂದ ಓರನೋಟಬೀರಿ ''ಪಾರ್ಥ! ಅವಸರ ಬೇಡ. ಶ್ರೀಕೃಷ್ಣನನ್ನು ಅತಿಕ್ರಮಿಸಿ ಹೋಗಬಾರದು. ಆದ್ದರಿಂದ ಅವನು ಮತ್ತು ನನ್ನ ತಂದೆ ತಾಯಿಗಳು, ಬಂಧು ಬಾಂಧವರಿಂದ ಕೂಡಿ ನಿನಗೆ ನನ್ನನ್ನು ಕೊಟ್ಟು ವಿವಾಹ ಮಾಡಿದ ಮೇಲೆ ನಾನು ನಿನ್ನವಳಾಗುವೆನು'' ಎಂದುಸುರಿದಳು. ಅವಳ ಮಾತಿನಿಂದ ಸಂತುಷ್ಟನಾದ ಅರ್ಜುನನು ಕೃಷ್ಣನನ್ನು ಪ್ರೀತಿಯಿಂದ ಸ್ಮರಿಸಿದನು. ಆಗ ಕೃಷ್ಣನು ದೇವೇಂದ್ರ, ಶಚೀದೇವಿ, ತಾಯಿ-ತಂದೆಗಳಿಂದೊಡಗೂಡಿ ಆ ರಾತ್ರಿ ಅಲ್ಲಿಗೆ ಬಂದನು. ನಂತರ ಪುರೋಹಿತರಿಂದ ಸುಭದ್ರಾರ್ಜುನರ ವಿವಾಹವನ್ನು ಚೆನ್ನಾಗಿ ವೈಭವದಿಂದ ಬೇರಾರಿಗೂ ತಿಳಿಯದಂತೆ ವಸುದೇವ-ದೇವಕೀ-ಸಾತ್ಯಕಿಗಳಿಂದೊಡಗೂಡಿ ಮುನಿಗಳಿಂದ ನೆರವೇರಿಸಿದನು. ಅನಂತರ ವಾಸುದೇವನು ಅರ್ಜುನ ಸುಭದ್ರೆಯರಿಗಾಗಿ ತನ್ನ ರಥವನ್ನು ಅಲ್ಲಿ ಸಿದ್ಧಪಡಿಸಿಟ್ಟು ಸರ್ವರೊಡನೆ ತೆರಳಿದನು.

ಇಂದ್ರಾದಿಗಳೆಲ್ಲರೂ ಹೊರಟುಹೋದಮೇಲೆ ಮರುದಿನ ಬೆಳಿಗ್ಗೆ ಪಾರ್ಥನು ಸುಭದ್ರೆಯೊಡನೆ ರಥವೇರಿ ಸರ್ವಾಯುಧಯುಕ್ತನಾಗಿ ಕರದಲ್ಲಿ ಧನುರ್ಬಾಣಗಳನ್ನು ಹಿಡಿದು ದ್ವಾರಕಾಪುರದ ಬೀದಿಯಲ್ಲಿ ಹೊರಟನು. ಯತಿ-ವೇಷಧಾರಿಯು ಸುಭದ್ರೆಯೊಡನೆ ರಥದಲ್ಲಿ ಹೋಗುತ್ತಿರುವುದನ್ನು ಗಮನಿಸಿ ರಕ್ಷಕಭಟರು ಅರ್ಜುನನು ಸುಭದ್ರೆಯನ್ನು ಅಪಹರಿಸಿಕೊಂಡು ಹೋಗುತ್ತಿರುವನೆಂದು ಕೂಗಿಕೊಂಡರು. ಅದರಿಂದ ಗೊಂದಲವಾಯಿತು. ಮಹೇಂದ್ರನು ನೀಡಿದ ದಿವ್ಯಕುಂಡಲಗಳು, ಪೀತಾಂಬರಾದಿ ವಸ್ತ್ರಗಳು ದಿವ್ಯವಾದ ರತ್ನಮಯ ಭೂಷಣಗಳಿಂದ ಅಲಂಕೃತನಾದ ಅರ್ಜುನನನ್ನು ನೋಡಿ ಪುರದ ರಕ್ಷಕಭಟರು ಅವನನ್ನು ತರುಬಿದರು. ಅಭ್ಯಾಸ ಮತ್ತು ಧನುರ್ವಿದ್ಯೆಯ ಬಲದಿಂದ ಅರ್ಜುನನು ಧನುವಿಗೆ ಬಾಣಗಳನ್ನು ಹೂಡಿ ಅಂತರಿಕ್ಷಾದಿ ದಶದಿಕ್ಕುಗಳಲ್ಲಿ ಶರವರ್ಷಣ ಮಾಡಿದನು. ಶ್ರೀಕೃಷ್ಣನಿಂದ ರಥಸಾರಥ್ಯವನ್ನು ಚೆನ್ನಾಗಿ ಕಲಿತಿದ್ದ ಸುಭದ್ರೆಯು ಚತುರತನದಿಂದ ರಥವನ್ನು ನಡೆಸಿದಳು. ಸುಭದ್ರೆಯ ಕೋರಿಕೆಯಂತೆ ಯುದ್ಧಕ್ಕೆ ಬಂದ ರಕ್ಷಕ-ಭಟರಿಗೆ ಹಾನಿಯಾಗದಂತೆ ಎಲ್ಲೆಡೆ ಬಾಣವರ್ಷಣ ಮಾಡಿ ಎಲ್ಲರನ್ನೂ ಹೆದರಿಸಿ, ವಿದ್ರಾವಗೊಳಿಸಿ ದ್ವಾರಕೆಯಿಂದ ಹೊರಟನು. ಆಗ ಬಲರಾಮನಿಂದ ದ್ವಾರಕಾಪುರದ ರಕ್ಷಣೆಗಾಗಿ ನಿಯುಕ್ತನಾಗಿದ್ದ ವಿಪೃಥುವು ಅಂತರಂಗದಲ್ಲಿ ಕೃಷ್ಣನು ಅರ್ಜುನನಿಗಾವ ತೊಂದರೆಯನ್ನೂ ಮಾಡಬಾರದೆಂದು ಹೇಳಿದ್ದಂತೆ, ಅರ್ಜುನನನ್ನು ಎದುರಿಸುವವನಂತೆ ಸೈನ್ಯ ಸಹಿತವಾಗಿ ಅವನನ್ನು ಸುತ್ತುಗಟ್ಟಿ ಯುದ್ಧ ಮಾಡುವವನಂತೆ ನಟಿಸಿದನು.

ಈ ವಿಪೃಥುವು ಪೂರ್ವದಲ್ಲಿ ಮರುತ್ತುಗಳ ಮಧ್ಯೆ ಸೌಮ್ಯನೆಂಬ ಹೆಸರಿನವನಾಗಿದ್ದು ಅವನು ವಾಸುದೇವನ ಸೇವೆಗಾಗಿ ಈಗ ವಿಪೃಥು ಎಂಬ ಹೆಸರಿನಿಂದ ಜನಿಸಿದ್ದನು. ಅರ್ಜುನನು ತನ್ನನ್ನು ಅಡ್ಡಗಟ್ಟಿದ ಆ ಯಾದವನಿಗಾವ ಅಪಾಯವನ್ನೂ ಮಾಡದೆ, ಅವರ ರಥ ಆಯುಧಗಳನ್ನು ಮಾತ್ರ ನಾಶಪಡಿಸಿದನು. ಅವನ ಸೇನೆಯನ್ನು ಸಂಹರಿಸದೆ ಬಿಟ್ಟನು. ಅರ್ಜುನನ ಈ ಬಗೆಯ ನಿರಪಾಯಕಾರಿ ಕದನದಿಂದ ವಿಪೃಥುವು ಸಂತುಷ್ಟನಾದನು. ಅನಂತರ ಮುಷ್ಟಿ ಯುದ್ಧ

ಮಾಡುವವನಂತೆ ದ್ವಂದ್ವಯುದ್ಧಕ್ಕಾಗಿ ಅರ್ಜುನನ ಬಳಿಸಾರಿ ಮೆಲ್ಲಗೆ ಅವನ ಕಿವಿಯಲ್ಲಿ "ಶ್ರೀಕೃಷ್ಣನು ನಿನ್ನೊಡನೆ ಯುದ್ಧ ಮಾಡಬಾರದೆಂದು ಆಜ್ಞಾಪಿಸಿದ್ದಾನೆ. ನೀನು ರಥದಲ್ಲಿ ಇಲ್ಲಿಂದ ಬೇಗ ಹೊರಟುಬಿಡು" ಎಂದುಸುರಿದನು. ಮತ್ತು ದ್ವಂದ್ವಯುದ್ಧ ಮಾಡಿ ಪರಾಜಿತನಾದವನಂತೆ ವಿಪೃಥುವು ದ್ವಾರಕೆಯಿಂದ ಬೇಗ ಹೊರಟು ಪಿಂಡೋದ್ಧಾರಕ್ಕೆ ಹೋಗಿ ಬಲರಾಮನಿಗೆ ಎಲ್ಲ ವಿಚಾರಗಳನ್ನೂ ಅರುಹಿದನು.

ಬಲರಾಮನು ಅತ್ಯಂತ ಕುಪಿತನಾಗಿ ಅರ್ಜುನನನ್ನು ಸಂಹರಿಸಲು ಪ್ರದ್ಯುಮ್ನ-ಸಾಂಬಾದಿಗಳೊಡನೆ ದ್ವಾರಕಾಪುರಿಗೆ ಧಾವಿಸಿದನು. ಯಾದವರೆಲ್ಲರೂ ಸಭೆ ಸೇರಿರುವ ವಿಚಾರ ತಿಳಿದು, ವಿಪೃಥುವಿನಿಂದ ಎಲ್ಲ ವಿಚಾರ ಕೇಳಿ ಕೃಷ್ಣನು ಸುಧರ್ಮಾ ಎಂಬ ಸಭೆಗೆ ಬಂದು ಬಹು ಕಳವಳ, ಮತ್ತು ನೊಂದವನಂತೆ ತಲೆತಗ್ಗಿಸಿ ಕುಳಿತನು. ಸಭೆಯಲ್ಲಿ ಪ್ರದ್ಯುಮ್ನಾದಿ ಯದುವೀರರು "ಅರ್ಜುನನನ್ನು ಸಂಹರಿಸಿ, ಸುಭದ್ರೆಯನ್ನು ಕರೆತರುತ್ತೇವೆ" ಎಂದು ಕೂಗಾಡಿದರು. ಮೌನವಾಗಿ ಕುಳಿತಿರುವ ಕೃಷ್ಣನನ್ನು ನೋಡಿದ ಬಲರಾಮನು "ಯದುವೀರರೇ, ಮನಬಂದಂತೆ, ಯೋಚಿಸದೇ ಹೋಗುವುದು ಬೇಡ. ಕೃಷ್ಣನನ್ನು ಕೇಳಿ ಅವನ ಸಮ್ಮತಿಪಡೆದು ಹೋಗಿರಿ. ನಾವು ಮೊದಲು ಕೃಷ್ಣನ ಅಭಿಪ್ರಾಯವರಿಯಬೇಕು. ಅವನಿಗೆ ವಿರೋಧವಾಗಿ ಹೋದರೆ ನಿಮಗೆ ಜಯವಾಗುವುದಿಲ್ಲ" ಎಂದು ಹೇಳಲು ಯಾದವವೀರರು ಶ್ರೀಕೃಷ್ಣನಿಗೆ ನಮಸ್ಕರಿಸಿ ಅವನ ಅಪ್ಪಣೆ ಬೇಡಿದರು.

ಆಗ ಶ್ರೀಕೃಷ್ಣನು "ಯದುವೀರರೇ, ನನ್ನ ಮಾತನ್ನು ಸಾವಧಾನವಾಗಿ ಕೇಳಿರಿ. ನಾನು ಮೊದಲೇ ಆ ಸನ್ಯಾಸಿಯು ಕಪಟ ವೇಷಧಾರಿಯಂತಿರುವನು, ಅವನನ್ನು ಕನ್ಯಾಂತಃಪುರದಲ್ಲಿ ಇರಗೊಡುವುದು ಯುಕ್ತವಲ್ಲ-ಎಂದು ಬಹುಪರಿಯಾಗಿ ಅಣ್ಣನವರಲ್ಲಿ ವಿಜ್ಞಾಪಿಸಿದೆನು. ನಾನೆಷ್ಟು ಹೇಳಿದರೂ ಅಣ್ಣನವರು ನನ್ನ ಮಾತನ್ನು ಕೇಳಲಿಲ್ಲ. ನನ್ನ ಸಲಹೆಗೆ ವಿರುದ್ಧವಾಗಿ ಅಣ್ಣನವರು ಆ ಸನ್ಯಾಸಿಯನ್ನು ಕನ್ಯಾಂತಃಪುರದಲ್ಲಿ ವಾಸಿಸಲು ವ್ಯವಸ್ಥೆ ಮಾಡಿದರು. ನಿರ್ವಾಹವಿಲ್ಲದೆ ಅದಕ್ಕೆ ನಾನು ಸಮ್ಮತಿಸಬೇಕಾಯಿತು. ಆ ದುಡುಕಿನ ಫಲದಿಂದ ಈ ಪರಿಸ್ಥಿತಿ ಬಂದೊದಗಿತು. ಈಗ ಕಾಲ ಮಿಂಚಿಹೋಗಿದೆ. ಆ ಸನ್ಯಾಸಿಯು ಅರ್ಜುನನೆಂದೂ, ಅವನು ಸುಭದ್ರೆಯನ್ನು ಅಪಹರಿಸಿರುವನೆಮದೂ ವಿಪೃಥುವಿನಿಂದ ತಿಳಿದುಬಂದಿದೆ. ಅವನು ನಾವಾರೂ ಇಲ್ಲದ ಸಮಯಸಾಧಿಸಿ ಸುಭದ್ರೆಯನ್ನು ಅಪಹರಿಸಿರುವನು. ನಮಗೇನೂ ಮಾನಭಂಗವಾಗಿಲ್ಲ. ಮಹಾವೀರನೆಂಬ ಅಹಂಕಾರವುಳ್ಳ ಅರ್ಜುನನಿಗೇ ಇದು ಮಾನಹಾನಿ. ಇನ್ನು ಮುಂದಿನ ವಿಚಾರ. ಕನ್ಯೆಯನ್ನು ಯಾರಿಗಾದರೂ ವಿವಾಹ ಮಾಡಿಕೊಡಲೇಬೇಕಲ್ಲವೇ? ಬೇರೊಬ್ಬರಿಗೆ ಕೊಡುವುದಕ್ಕಿಂತ ಪಾರ್ಥನಿಗೆ ನೀಡುವುದೇ ಒಳಿತು. ನಮಗೆ ಅರ್ಜುನನಿಗಿಂತ ಉತ್ತಮನಾದ ಬೇರೊಬ್ಬ ವರನು ಸಿಗಲಾರ. ಅವನು ಕುರುಕುಲೋತ್ಪನ್ನನಾದ್ದರಿಂದ ಕುಲೀನನಾಗಿದ್ದಾನೆ. ಜಗನ್ಮಾನ್ಯರಾದ ಶ್ರೀವ್ಯಾಸ ಮಹರ್ಷಿಗಳಿಗೆ ಪೌತ್ರನು. ಮೇಲಾಗಿ ನಮ್ಮ ಸೋದರತ್ತೆಯ ಮಗನು. ಅವನು ಮಹಾವೀರನೂ, ಗುಣವಂತನೂ ಆಗಿದ್ದಾನೆ. ಇಂಥ ಶ್ರೇಷ್ಠ ವರನನ್ನು ನಾವಾಗಿ ನಮ್ಮ ತಂಗಿಯನ್ನು ಪರಿಗ್ರಹಿಸು ಎಂದು ಕೇಳಬೇಕಾಗಿತ್ತು. ಈಗ ಅರ್ಜುನನು ತಾನಾಗಿ ಸುಭದ್ರೆಯನ್ನು ಅಪಹರಿಸಿದ್ದಾನೆ. ಇದು ನಮಗೆ ಅಗೌರವವೇನಲ್ಲ. ಒಂದು ವೇಳೆ ನಾವು ಅವನನ್ನು ಹಿಂಬಾಲಿಸಿ ಹೋಗಿ ಯುದ್ಧಮಾಡಿ ಪರಾಜಿತರಾದರೆ, ಆಗ ಮಾತ್ರ ನಮ್ಮ ಕೀರ್ತಿಗೆ ಕುಂದುಂಟಾಗುವುದು. ಆಕಸ್ಮಾತ್ ನೀವು ಅವನನ್ನು ಕಷ್ಟಪಟ್ಟು ಜಯಿಸಿ ಕನ್ಯೆಯನ್ನು ಕರೆದುತಂದರೂ ಪರಪುರುಷನಿಂದ ಸ್ಪೃಷ್ಟಳಾದ ಅವಳನ್ನು ಯಾರು ತಾನೆ ಲಗ್ನವಾಗ ಬಯಸುತ್ತಾರೆ? ಆದ್ದರಿಂದ ನೀವು ಅವನನ್ನು ಅನುಸರಿಸಿ ಹೋಗಿ ಯುದ್ಧ ಮಾಡುವುದು ನನಗಿಷ್ಟವಿಲ್ಲ. ಇದರ ಮೇಲೆ ಅಣ್ಣನವರ ಇಷ್ಟ" ಎಂದು ಹೇಳಿ ಸುಮ್ಮನಾದನು.

ಕೃಷ್ಣನ ಅಭಿಪ್ರಾಯವರಿತ ಬಲರಾಮನು "ಕೃಷ್ಣನ ಮಾತು ನಿಜ. ನೀವಾರೂ ಯುದ್ಧಕ್ಕೆ ಹೋಗುವುದು ಬೇಡ. ಕೃಷ್ಣನ ಮಾತಿನಂತೆ ನಡೆಯುವುದರಿಂದ ವಿಜಯ-ಶುಭ-ಶಾಂತಿಗಳು ಲಭಿಸಿ ಪರದಲ್ಲಿ ಶಾಶ್ವತಾನಂದವು ಲಭಿಸುವುದು" ಎಂದನು.

ನಿಜ, ಶ್ರೀವೇದವ್ಯಾಸದೇವರ (ಕೃಷ್ಣನ) ಆಜ್ಞೆಯಿರುವುದರಿಂದ ಅರ್ಜುನನಿರುವಲ್ಲಿ ವಿಜಯವು ಕಟ್ಟಿಟ್ಟದ್ದು. "ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ । ತತ್ರ ಶ್ರೀವಿಜಯೋಭೂತಿಃ" ಎಂಬ ಶ್ರೀವೇದವ್ಯಾಸಕೃಷ್ಣರ ವಚನವನ್ನು ನಿರ್ಣಯಕಾರರು ಇಲ್ಲಿ ಸ್ಮರಿಸಿದ್ದಾರೆ-ಎಂದು ತಿಳಿಯಬೇಕು. ಅರ್ಜುನನು ಯಾವ ತೊಂದರೆಯೂ ಇಲ್ಲದೆ ಶ್ರೀಕೃಷ್ಣನ ರಥದಲ್ಲಿಯೇ ಪತ್ನಿಯಾದ ಸುಭದ್ರೆಯಿಂದೊಡಗೂಡಿ ಇಂದ್ರಪ್ರಸ್ಥಕ್ಕೆ ಸುಖವಾಗಿ ಬಂದು ಸೇರಿದನು. ಅವನ ಆಗಮನದಿಂದ ಧರ್ಮರಾಜಾದಿಗಳು ಸಂತೋಷಗೊಂಡರು. ಅರ್ಜುನನು ತೀರ್ಥಯಾತ್ರೆ ಹಾಗೂ ದ್ವಾರಕೆಯಲ್ಲಿ ಜರುಗಿದ ಸಮಸ್ತ ವೃತ್ತಾಂತವನ್ನೂ ತಿಳಿಸಿ ಅವರಿಂದ ಶ್ಲಾಘಿತನಾದನು.

ಇತ್ತ ದ್ವಾರಕಾಪಟ್ಟಣದಲ್ಲಿ ಕುಪಿತರಾಗಿದ್ದ ಯಾದವರೆಲ್ಲರೂ ಕೃಷ್ಣನ ಮಾತಿನಿಂದ ಶಾಂತರಾದರು. ಆ ಬಳಿಕ ವಾಸುದೇವನು ಅಣ್ಣ ಬಲಭದ್ರನೊಡನೆ ಅನೇಕರತ್ನಗಳಿಂದ ತುಂಬಿದ ಬಂಡಿಗಳಿಂದ ಸಹಿತನಾಗಿ ಪಾಂಡವರ ದರ್ಶನಕ್ಕಾಗಿ ಇಂದ್ರಪ್ರಸ್ಥಕ್ಕೆ ಬಂದನು. ಪಾಂಡವರು ಪರಮಾನಂದದಿಂದ ಅವರನ್ನು ಸ್ವಾಗತಿಸಿ ಆದರಿಸಿದರು. ನಂತರ ಬಲರಾಮ-ಕೃಷ್ಣರು ಪಾಂಡವರಿಗೆ ತಾವು ತಂದ ರತ್ನಗಳನ್ನು ಉಡುಗೊರೆಯಾಗಿ ಕೊಟ್ಟರು. ಮತ್ತು ದ್ರೌಪದಿ, ಸುಭದ್ರೆಯರಿಗೆ ಅನೇಕ ಆಭರಣಗಳನ್ನು ಉಪಹಾರವಾಗಿತ್ತರು. ಕೆಲ ತಿಂಗಳುಗಳ ಕಾಲ ಅಲ್ಲಿ ತಂಗಿದ ಬಲರಾಮನು ಪಾಂಡವರಿಂದ ಬೀಳ್ಕೊಂಡು ದ್ವಾರಾವತಿಗೆ ಮರಳಿದನು. ಶ್ರೀಕೃಷ್ಣ ಪರಮಾತ್ಮನು ಮಾತ್ರ ವರುಷಗಳ ಪರ್ಯಂತ ಅಲ್ಲಿ ಪಾಂಡವರ ಒಡನಾಟದಲ್ಲಿ ಆನಂದದಿಂದ ಇದ್ದು ಅವರಿಂದ ಆದೃತನಾಗಿ ಅವರಲ್ಲಿ ವಿಶೇಷ ಪ್ರೀತಿ ಮಾಡುತ್ತಾ ಅವರ ಹಿತೈಷಿಯಾಗಿದ್ದು ವಾಸಿಸಿದನು.

ಪಾಂಡವ ವಧುವಾದ ದ್ರೌಪದಿಗೆ ಐದುಜನ ಪುತ್ರರು ಜನಿಸಿದರು. ಹಿಂದೆ ವಿಶ್ವೇದೇವತೆಗಳಾಗಿದ್ದವರೇ ಶ್ರೇಷ್ಠ ಗಂಧರ್ವರಾದ ಚಿತ್ರರಥ, ಅಭಿತಾಮ್ರ, ಕಿಶೋರ, ಗೋಪಾಲ, ಬಲ ಇವರುಗಳ ಆವೇಶಯುಕ್ತರಾಗಿ ಈಗ ದ್ರೌಪದಿಗೆ ಪಾಂಡವರಿಂದ ಪುತ್ರರಾಗಿ ಹುಟ್ಟಿದ್ದರು. ಯುಧಿಷ್ಠಿರ-ಭೀಮ-ಅರ್ಜುನ-ನಕುಲ-ಸಹದೇವಾದಿಗಳಿಗೆ ಹುಟ್ಟಿದ ಅವರಿಗೆ ಕ್ರಮವಾಗಿ ಪ್ರತಿವಿಂಧ್ಯ, ಶ್ರುತಸೋಮ, ಶ್ರುತಾಖ್ಯಕೀರ್ತಿ, ಶ್ರುತಾನೀಕ ಮತ್ತು ಶ್ರುತಕ್ರಿಯ ಎಂದು ನಾಮವಿರಿಸಿದರು. ಇವರಲ್ಲಿ ಧರ್ಮರಾಜ, ಭೀಮಸೇನರಪುತ್ರರಾದ ಪ್ರತಿವಿಂಧ್ಯ, ಶ್ರುತಸೋಮರು ಜನಿಸಿದ ಮೇಲೆ ಸುಭದ್ರೆಯಲ್ಲಿ ಅರ್ಜುನನಿಂದ ಅಭಿಮನ್ಯುವು ಹುಟ್ಟಿದನು. ಆನಂತರ ದ್ರೌಪದಿಯಲ್ಲಿ ಅರ್ಜುನನಿಂದ ಶ್ರುತಾಖ್ಯಕೀರ್ತಿಯು ಜನಿಸಿದನು. ದೇವತೆಯಾದ ಬುಧನೇ ಚಂದ್ರನ ಆವೇಶಯುಕ್ತನಾಗಿ ಸುಭದ್ರೆಯಲ್ಲಿ ಅಭಿಮನ್ಯು ಎಂಬ ನಾಮದಿಂದ ಅವತರಿಸಿದನು. ಅವನು ಯಮ, ವಾಯು ಮತ್ತು ಇಂದ್ರರ ಅಂಶದಿಂದಲೂ, ಅಶ್ವಿನೀದೇವತೆಗಳ ಆವೇಶದಿಂದಲೂ ಕೂಡಿದ್ದು, ಶ್ರೀಕೃಷ್ಣನ ಸನ್ನಿಧಾನಯುಕ್ತನಾಗಿ ರಾಜಿಸಿದನು. ಪಾಂಡವರ ಎಲ್ಲ ಪುತ್ರರೂ ಮಹಾಪರಾಕ್ರಮಿಗಳಾಗಿ, ರೂಪಸೌಂದರ್ಯ ರಂಜಿತರಾಗಿ, ಭಗವದ್ಭಕ್ತರಾಗಿ ಸಕಲಶಾಸ್ತ್ರ ಪಾರಂಗತರಾಗಿದ್ದರು. ಅವರೆಲ್ಲರಿಂದ ಮುಖ್ಯವಾಗಿ ಅಭಿಮನ್ಯುವಿನಿಂದ ಪಾಂಡವರು ಪರಮಾನಂದವನ್ನು ಪಡೆದರು.

ಒಂದು ದಿನ ಕೃಷ್ಣಾರ್ಜುನರು ಸತ್ಯಭಾಮಾ-ಸುಭದ್ರೆಯರೊಡನೆ ಪರಿಚಾರಕರಿಂದೊಡಗೂಡಿ ರಥದಲ್ಲಿ ಖಾಂಡವ-ವನದಲ್ಲಿ ಕ್ರೀಡಿಸಲು ಹೊರಟರು. ಅವರನ್ನು ಗಂಧರ್ವರು ಗಾನಮಾಡಿ ಸ್ತುತಿಸಿದರು.

ಮಂದಮಾರುತನ ಮೃದುಮಧುರ ಸ್ಪರ್ಶದಿಂದ ಓಲೈಸಿಕೊಳ್ಳುತ್ತಿರುವ ಕುಸುಮಗುಚ್ಛಗಳಿಂದ ಕಂಗೊಳಿಸುತ್ತಿರುವ ವಿಖ್ಯಾತವಾದ ಆ ಖಾಂಡವವನದಲ್ಲಿ ಮತ್ತು ಯಮುನಾನದಿಯಲ್ಲಿ ತೃಪ್ತಿಯಾಗುವಷ್ಟು ಕಾಲ ಕೃಷ್ಣಾರ್ಜುನರು, ಸತ್ಯಭಾಮಾ-ಸುಭದ್ರೆಯರೊಡನೆ ವಿಹರಿಸುತ್ತಿರುವಾಗ ಅಗ್ನಿಯು ಬ್ರಾಹ್ಮಣ ರೂಪದಿಂದ ಬಂದು ಕೃಷ್ಣಾರ್ಜುನರನ್ನು ತನಗೆ ಭೋಜನ (ಅನ್ನ) ನೀಡಬೇಕೆಂದು ಯಾಚಿಸಿದನು. ಕೃಷ್ಣನ ಅನುಮತಿಯಂತೆ ಪಾರ್ಥನು "ನಿಮಗೆ ಯಾವ ಬಗೆಯ ಅನ್ನ

ಬೇಕು" ಎಂದು ಕೇಳಿದಾಗ ಬ್ರಾಹ್ಮಣರೂಪದ ಅಗ್ನಿಯು "ಈ ಖಾಂಡವವನವನ್ನೇ ನಾನು ಆಹಾರವಾಗಿ ಬಯಸುವೆನು" ಎಂದನು. ಮುಂದುವರೆದು ಆ ಬ್ರಾಹ್ಮಣನು "ನಾನು ಅಗ್ನಿಯು. ನಾನು ನನ್ನಲ್ಲಿ ಹೋಮಿಸಲ್ಪಟ್ಟ ಹವಿಸ್ಸನ್ನು ದೇವತೆಗಳಿಗೆ ತಲುಪಿಸುವವನು. ಆದ್ದರಿಂದ ನಾನು ಈ ಕಾರ್ಯ ಮಾಡುವ ನನಗೆ ಪ್ರಯಾಜ-ಅನುಯಾಜ ಎಂಬ ಆಹುತಿ (ವಿಶೇಷ) ಗಳನ್ನು ವೇತನರೂಪವಾಗಿ ಕೊಡಿರಿ ಎಂದು ದೇವತೆಗಳನ್ನು ಕೋರಿದೆನು. ಆದರೆ ನಾನು ಅವರಿಗೆ ಹವಿಸ್ಸನ್ನು ತಂದುಕೊಡಲು ಸಂಬಳವನ್ನು ಅಪೇಕ್ಷಿಸಿದೆನಲ್ಲಾ ಎಂಬ ಕೋಪದಿಂದ ಅವರು ನಿನ್ನ ಸಾಮರ್ಥ್ಯವು (ಬಲವು) ಕಡಿಮೆಯಾಗಲಿ (ಕ್ಷೀಣಿಸಲಿ) ಎಂದು ಶಾಪಕೊಟ್ಟು ನಂತರ ನಾನು ಬೇಡಿದ ಆಹುತಿಗಳನ್ನು ನೀಡಿದರು. ಅವರ ಶಾಪದಿಂದ ನಾನು ಕ್ಷೀಣನಾದೆ, ಬಲಹೀನನಾದೆ. ತರುವಾಯ ನಾನು ಬ್ರಹ್ಮದೇವನನ್ನು ಕಂಡು ಎಲ್ಲ ವಿಚಾರಗಳನ್ನರುಹಿ ನಾನು ಮೊದಲಿನಂತೆ ಪೂರ್ಣ ಬಲಶಾಲಿಯಾಗಲು ಏನು ಮಾಡಬೇಕೆಂದು ಪ್ರಾರ್ಥಿಸಿದೆನು. ಅದಕ್ಕೆ ಕಮಲಸಂಭವನು "ನೀನು ಖಾಂಡವವನವನ್ನು ಭಕ್ಷಿಸಿದರೆ ನಿನಗೆ ಮೊದಲಿನಂತೆ ಸಂಪೂರ್ಣ ಬಲವು ಬರುವುದು" ಎಂದನು. ಈ ಖಾಂಡವವನವು ದೇವೇಂದ್ರನಿಗೆ ಸೇರಿದ್ದಾಗಿದೆ. ಇದನ್ನು ನಾನು ಭಕ್ಷಿಸಲು ಇಂದ್ರನು ವಿಘ್ನ ಮಾಡುವನು. ಆದ್ದರಿಂದಲೇ ಇದನ್ನು ಭಕ್ಷಿಸಲು ನಿಮ್ಮ ಸಹಾಯವನ್ನು ಬೇಡುತ್ತಿದ್ದೇನೆ. ಇದನ್ನು ಭಕ್ಷಿಸಲು ನೀವು ಅವಕಾಶ ಮಾಡಿಕೊಡಿ" ಎಂದು ಪ್ರಾರ್ಥಿಸಿದನು.

ಅಗ್ನಿಯ ಮನವಿಯನ್ನಾಲಿಸಿ ಅರ್ಜುನನು "ಅಗ್ನಿದೇವ! ಈಗ ನನ್ನ ಬಳಿ ಸರಿಯಾದ ರಥ ಮತ್ತು ಧನುರ್ಬಾಣಗಳಿಲ್ಲ. ಅದು ದೊರೆತಲ್ಲಿ ಇಂದ್ರನು ನಿನಗೆ ವಿಘ್ನ ಮಾಡದಂತೆ ತಡೆಯುವೆನು" ಎಂದುತ್ತರಿಸಿದನು. ಅರ್ಜುನನು ಶ್ರೀಹರಿಯ ನರರೂಪ ಆವೇಶವುಳ್ಳವನು. 'ಅನ್ನದಾನ ಮಾಡು' ಎಂದು ಕೃಷ್ಣನ ಪ್ರೇರಣೆಯೂ ಆಯಿತು. ಆದುದರಿಂದ ಪಾರ್ಥನು ಅಗ್ನಿಗೆ ಅನ್ನದಾನ ಮಾಡುವುದಾಗಿ ಪ್ರತಿಜ್ಞೆ ಮಾಡಿದನು. ಅವನು ಇಂದ್ರನಿಂದ ಅಭಿನ್ನನಾಗಿದ್ದರೂ ದೇವೇಂದ್ರನ ವಿರುದ್ಧ ವರ್ತಿಸಲು ಇಚ್ಛಿಸಿದನು. ಅಗ್ನಿಯಾದರೋ ತನಗೆ ಇಂದ್ರನಿಂದ ವಿರೋಧವಾಗದಂತೆ ಮಾಡೆಂದು ಪ್ರಾರ್ಥಿಸಿದನು. ಇಂದ್ರನೇ ಅರ್ಜುನನಾದ್ದರಿಂದ ತಾನು ನೀಡುವುದನ್ನು ಕಂಡು ಸುರಪತಿಯು ದ್ವೇಷ ಮಾಡಲಾರ. ಶ್ರೀಹರಿಯಿಂದ ಪ್ರೇರಿತನಾಗದಿದ್ದರೆ ಅರ್ಜುನನು ಇಂದ್ರನಿಗೆ ಅಡ್ಡಿ ಮಾಡಲಾರನೆಂದು ಭಾವಿಸಿ ಅಗ್ನಿಯು ಶ್ರೀಕೃಷ್ಣನನ್ನೂ ಪ್ರಾರ್ಥಿಸಿದನು. ತಾತ್ಕಾಲಿಕವಾಗಿ ಇಂದ್ರನು ವಿರೋಧವೆಸಗಿದರೂ ಅರ್ಜುನನು ಕೊಟ್ಟಿದ್ದು ತಾನು ನೀಡಿದಂತೆಯೇ ಎಂದು ವಿಚಾರ ಮಾಡಿ ಮುಂದೆ ದ್ವೇಷ ಮಾಡುವುದಿಲ್ಲ – ಎಂಬ ಭಾವದಿಂದ ಇಲ್ಲಿ 'ಪುನಃ ಕೃಷ್ಣನನ್ನು ಬೇಡಿದನು' ಎಂದು ಹೇಳಿರುವರೆಂದು ತಿಳಿಯಬೇಕು.

ಕೃಷ್ಣನ ಬಲವಿಲ್ಲದೆ ಅರ್ಜುನನು ಈ ಕಾರ್ಯ ಮಾಡಲು ಅಸಮರ್ಥನೆಂದು ಭಾವಿಸಿ ಅಗ್ನಿಯು ಕೃಷ್ಣನನ್ನು ಪ್ರಾರ್ಥಿಸಿ ಅವನ ಅನುಜ್ಞೆಯನ್ನು ಪಡೆದನು. ಇಷ್ಟಾದ ಮೇಲೆ ಅಗ್ನಿಯು ಬದರಿಗೆ ಹೋಗಿ ಅಲ್ಲಿರುವ ಪರಮಾತ್ಮನಿಂದ ಚಕ್ರವನ್ನು ಪಡೆದು ತಂದು ಶ್ರೀಕೃಷ್ಣನಿಗೆ ಅರ್ಪಿಸಿದನು. ಸಮಸ್ತ ಜಗತ್ತನ್ನೂ ನಾಶಪಡಿಸಲು ಸಮರ್ಥವಾದ ಬ್ರಹ್ಮದೇವರ ಗಾಂಡೀವ ಧನುವನ್ನು ಅರ್ಜುನನಿಗಾಗಿ ಅವರಿಂದ ಪಡೆದು ತಂದುಕೊಟ್ಟನು. ಬೇರೊಂದು ಗ್ರಂಥದಲ್ಲಿ ಒಂದು ಕಡೆ ಗಾಂಡೀವವನ್ನು ವರುಣನಿಂದ ಪಡೆದು ತಂದುಕೊಟ್ಟನೆಂದು ವಚನವಿದೆ. ಅಂದಮೇಲೆ ಗಾಂಡೀವವು ಹೇಗೆ ಬ್ರಹ್ಮನದಾಗುವುದು? ಈ ಸಂದೇಹವನ್ನು ನಿರ್ಣಯಾಚಾರ್ಯರು ಹೀಗೆ ಪರಿಹರಿಸಿದ್ದಾರೆ. ಬ್ರಹ್ಮದೇವರು ತಮ್ಮ ಗಾಂಡೀವವನ್ನು ಒಂದಂಶದಿಂದ ರುದ್ರನಿಗೂ, ಇಂದ್ರನಿಗೂ, ವರುಣನಿಗೂ ಕೊಟ್ಟದ್ದರು. ಆ ಧನುವನ್ನು ಪಡೆದ ರುದ್ರಾದಿಗಳೆಲ್ಲರೂ ಕ್ರಮವಾಗಿ ಬ್ರಹ್ಮದೇವರ ಅನುಗ್ರಹದಿಂದ ಮೂರುಲೋಕಗಳನ್ನು ಜಯಿಸಿದ್ದರು. ಆದ್ದರಿಂದ ಇಲ್ಲಿ ವಿರೋಧ ಸಂದೇಹಗಳಿಗೆ ಅವಕಾಶವಿಲ್ಲ. ಆ ಗಾಂಡೀವವು ಸಾಮಾನ್ಯವಲ್ಲ. ಅದು ಒಂದುಲಕ್ಷಭಾರ ಯುಕ್ತವಾದುದು. (ಭಾರ ಎಂದರೆ ಇಪ್ಪತ್ತು ತೊಲ ತೂಕವುಳ್ಳದ್ದು) ಅಂದರೆ 20 ಲಕ್ಷ ತೊಲ ತೂಕವುಳ್ಳದ್ದು ಆ ಧನುಸ್ಸು) ಅದು ಬೇರಾರಿಂದಲೂ ಧರಿಸಲು ಅಸಾಧ್ಯವಾದುದು. ಅದು

ಜಯಪ್ರದವೂ ಶುಭಪ್ರದವೂ ಆಗಿದೆ. ಅಗ್ನಿಯು ಮಂಗಳಕರ ಶ್ವೇತಾಶ್ವಗಳಿಂದ ಯುಕ್ತವಾದ ರಥವನ್ನೂ ಶುಭಕರವಾದ ಅಕ್ಷಯ ಬಾಣಗಳುಳ್ಳ ಎರಡು ಬತ್ತಳಿಕೆಗಳನ್ನೂ ಹನುಮಂತನ ಚಿಹ್ನೆಯುಳ್ಳ ಶ್ರೀರಾಮಚಂದ್ರನ ಧ್ವಜವನ್ನೂ, ಅಂದರೆ, ಶ್ರೀಹನುಮದ್‌ಧ್ವಜವನ್ನೂ, ಗಾಂಡೀವ ಧನುಸ್ಸು ಮೊದಲಾದವುಗಳನ್ನು ವರುಣನಿಂದ ಪಡೆದು ತಂದು ಅರ್ಜುನನಿಗೆ ನೀಡಿದನು.

ಶ್ರೀಹನುಮಂತನು ಜಯರೂಪನು. ಆದ್ದರಿಂದ ಆ ಹನುಮದ್ ಧ್ವಜವು ರಥದ ಮೇಲೆ ಹಾರಾಡುತ್ತಿರಲು ಆ ರಥಕ್ಕೆ ಮತ್ತು ಅದರಲ್ಲಿ ಕುಳಿತವನಿಗೆ ಜಯಪ್ರದತ್ವವೂ, ಗಾಂಡೀವಾದಿಗಳಿರುವುದರಿಂದ ಮತ್ತೊಬ್ಬರಿಂದ ಜಯಿಸಲಸದಳವಲ್ಲದ ಅಜೇಯತ್ವವೂ ಲಭಿಸುವುದು. ಆ ಗಾಂಡೀವ ಮುಂತಾದುದೆಲ್ಲವೂ ಅಲೌಕಿಕವೂ ಅಭೇದ್ಯವೂ ಆಗಿದ್ದು ಧನುಸ್ಸಿನ ಜ್ಯಾ(ಹಗ್ಗ) ಮಿಂಚಿನಂತೆ ಕಂಗೊಳಿಸುವುದು. ಗಾಂಡೀವದ ಜ್ಯಾವನ್ನು ಅಶ್ವತ್ಥಾಮಾಚಾರ್ಯರು ಛೇದಿಸಿದರೆಂದು ಮುಂದೆ ಉಕ್ತವಾಗುವುದರಿಂದ ಆ ಹಗ್ಗವನ್ನು ಬಿಟ್ಟು ಮಿಕ್ಕೆಲ್ಲವೂ ಅಭೇದ್ಯವೆಂದು ಇಲ್ಲಿ ಇಟ್ಟುಕೊಳ್ಳಬೇಕು. ಇತರರಿಂದ ಹಿಡಿಯಲು ಸಾಧ್ಯವಾಗಿದ್ದ ಪಕ್ಷದಲ್ಲಿ ಆ ಧನುವನ್ನು ಪಾರ್ಥನೆಂತು ಧರಿಸಿದನು? ಎಂದರೆ ಬ್ರಹ್ಮನ ಹೊರತು ಬೇರೆಯವರಿಂದ ಅದನ್ನು ಧರಿಸಲು ಅಸಾಧ್ಯವಾಗಿದ್ದರೂ ಶ್ರೀಕೃಷ್ಣನ ಅನುಗ್ರಹದಿಂದಲೇ ಅರ್ಜುನನು ಅದನ್ನೆತ್ತಿ ಹಿಡಿಯಲು ಸಮರ್ಥನಾದನು. ಬ್ರಹ್ಮದೇವರ ವರಬಲದಿಂದಲೇ ಶಿವಾದಿಗಳು ಅದನ್ನು ಧರಿಸಲು ಶಕ್ತರಾದರು. ಆದ್ದರಿಂದ ಆ ಧನುವನ್ನು ಧರಿಸಲು ಬ್ರಹ್ಮದೇವನೊಬ್ಬನೇ ಸ್ವಯಂ ಸಮರ್ಥನೆಂದು ತಿಳಿಯಬೇಕು.

ಅರ್ಜುನನು ಆ ಗಾಂಡೀವವನ್ನು ಹಿಡಿದೆತ್ತಲು ಶಕ್ತನಾದುದಕ್ಕೆ ಬೇರೊಂದು ಕಾರಣವನ್ನೂ ಹೇಳುತ್ತಾರೆ. ಗಾಂಡೀವವನ್ನು ಧರಿಸಲು ಬ್ರಹ್ಮದೇವರು ಇಂದ್ರನಿಗೆ ವರ ನೀಡಿದ್ದಾರೆ. ಆ ಇಂದ್ರನೇ ಅರ್ಜುನನಾದ್ದರಿಂದ ಅದನ್ನು ಧರಿಸಲು ಅವನು ಸಮರ್ಥನಾದನು. ಹೀಗೆ ಗಾಂಡೀವ-ಅಕ್ಷಯ ಬತ್ತಳಿಕೆ ಬಾಣಗಳನ್ನು ಪಡೆದ ಅರ್ಜುನನು ಅಸ್ತ್ರ ಮತ್ತು ಬಾಣಗಳಿಂದ ಜಾಲವನ್ನು ನಿರ್ಮಿಸಿದನು. ಅಂದರೆ ಪಾರ್ಥನು ಖಾಂಡವವನದ ಸುತ್ತಮುತ್ತ ಹನ್ನೆರಡು ಯೋಜನ ವಿಸ್ತೀರ್ಣವಾಗಿ ಬಾಣ ನಗರಿಯನ್ನೇ ನಿರ್ಮಿಸಿಬಿಟ್ಟನು.[28] ಆಗ ಅಗ್ನಿಯು ಬಹು ಜ್ವಾಲೆಗಳಿಂದ ಅಭಿವೃದ್ಧಿಸಿ ಖಾಂಡವವನವನ್ನೆಲ್ಲಾ ಭಕ್ಷಿಸಿದನು. ಆಗ ಸಹಸ್ರಾಕ್ಷನಾದ ದೇವೇಂದ್ರನು ತನ್ನ ವನವನ್ನು ಅಗ್ನಿಯು ದಹಿಸಿ ನಾಶಪಡಿಸುತ್ತಿರುವುದನ್ನು ಕಂಡು ಖಿನ್ನ ಮನಸ್ಕನಾಗಿ ಅಕ್ಷದಿಂದ (ಅಂದರೆ ರಥದ ಚಕ್ರಗಳ ರಂಧ್ರಕ್ಕೆ ಭದ್ರವಾಗಿ ಹಿಡಿದಿರಲು ಜೋಡಿಸುವ ಮರದದೂರಿಯನ್ನು ಶಿಥಿಲಗೊಳಿಸಿ) ಜಲಗಳ ಧಾರೆಯಿಂದ ಅಗ್ನಿಜ್ವಾಲೆಯನ್ನು ನಂದಿಸಲು ಮೇಘಗಳನ್ನು ಪ್ರಚೋದಿಸಿ ತೊಂದರೆಕೊಡಲಾರಂಭಿಸಿದನು. ಆಗ ಕೃಷ್ಣಾರ್ಜುನರು ಮಳೆಯನ್ನು ನಿವಾರಿಸಲು ವಾಯವ್ಯಾಸ್ತ್ರ ಮೊದಲಾದವುಗಳನ್ನು ಪ್ರಯೋಗಿಸಿ ಮಳೆಯನ್ನು ತಡೆದು ದೇವತೆಗಳಿಂದ ಸಹಿತನಾದ ಇಂದ್ರನೊಡನೆ ಯುದ್ಧ ಮಾಡಿದರು. ಯುದ್ಧದಲ್ಲಿ ಪರಾಜಿತನಾದ ಇಂದ್ರನು ತನ್ನ ಪುತ್ರನ ಅಸದೃಶ ಸಾಮರ್ಥ್ಯವನ್ನು ಕಂಡಾನಂದಿಸಿದನು. ಆಗ ಇಂದ್ರನು ತನ್ನ ಮಗನಾದ ಅರ್ಜುನನಲ್ಲಿ ಶ್ರೀಕೃಷ್ಣನು ಇಟ್ಟಿರುವ ಸ್ನೇಹವನ್ನೂ ಅರ್ಜುನನ ಅಸಾಧಾರಣ ಸಾಮರ್ಥ್ಯವನ್ನೂ ಪರಿಕಿಸಿ ಮೇಘಗಳನ್ನೂ ಹಿಂತೆಗೆದುಕೊಂಡು ಅತೀವ ಸಂತೋಷಭರಿತನಾಗಿ ಕೃಷ್ಣನಿಗೆ ವಂದಿಸಿ ಪಾರ್ಥನನ್ನು ಆಲಿಂಗಿಸಿ ಬಹುಮಾನಿಸಿದನು.

ಆನಂದಾದಿಗುಣಗಳಿಂದಯುಕ್ತನೂ, ದೇಶಕಾಲಾದಿಗಳಿಂದ ಅಪರಿಚ್ಛಿನ್ನನೂ ಕೃಷ್ಣಾಭಿನ್ನನೂ ಆದ ಸ್ವರ್ಗದಲ್ಲಿರುವ ಇಂದ್ರನ ಅನುಜನಾದ ವಾಮನರೂಪಿ (ಉಪೇಂದ್ರ) ಶ್ರೀವಿಷ್ಣುವು ದೇವೇಂದ್ರನೊಡನೆ ಬಂದು ವಾಸುದೇವನನ್ನು ಆಲಂಗಿಸಿದನು. ದೇವೇಂದ್ರನೊಡನೆ ಬಂದಿದ್ದ ಉಪೇಂದ್ರನು ಇಂದ್ರಾರ್ಜುನರ ಯುದ್ಧವನ್ನು ನಿರೀಕ್ಷಿಸುತ್ತಾ ಕ್ರೀಡಿಸುತ್ತಿದ್ದನೇ

28. ಖಾಂಡವವನದ ಸುತ್ತಮುತ್ತ ಆಕಾಶದಲ್ಲಿಯೂ ಹನ್ನೆರಡು ಯೋಜನ ವಿಸ್ತೀರ್ಣವಾದ ಅಸ್ತ್ರಬಾಣಗಳ ಕೋಟೆಯ ಆವರಕವನ್ನು ನಿರ್ಮಿಸಿದನೆಂದು ಭಾವ.

ವಿನಃ ತಾನು ಯುದ್ಧ ಮಾಡಲಿಲ್ಲ. ನಂತರ ಬ್ರಹ್ಮ ಮತ್ತು ರುದ್ರರು ಅಲ್ಲಿಗೆ ಬಂದು ಶ್ರೀಕೃಷ್ಣನಿಗೆ ಪ್ರಣಾಮ ಮಾಡಿ ಅರ್ಜುನನಿಗೆ ಅಭ್ಯಾಸಾತಿಶಯದಿಂದ ಕೃಷ್ಣ ಎಂದು ಹೆಸರಿಟ್ಟರು ಮತ್ತು ಬ್ರಹ್ಮಾದಿ ದೇವತೆಗಳೆಲ್ಲರೂ ಅರ್ಜುನನಿಗೆ ತಮ್ಮ ತಮ್ಮ ಅಸ್ತ್ರಗಳನ್ನು ಕೊಡುವುದಾಗಿ ಪ್ರತಿಜ್ಞೆ ಮಾಡಿದರು. ನಂತರ ಬ್ರಹ್ಮರುದ್ರೇಂದ್ರಾದಿ ದೇವತೆಗಳು ಶ್ರೀಕೃಷ್ಣನ ಅಪ್ಪಣೆ ಪಡೆದು ಹೊರಟುಹೋದರು. ಮೊದಲು ಇಂದ್ರನು ವಿರೋಧ ಮಾಡಲಾರನೆಂದು ಹೇಳಲಾಗಿತ್ತು. ಅಂದ ಮೇಲೆ ಈಗ ಕೃಷ್ಣಾರ್ಜುನರ ಮೇಲೆ ಹೇಗೆ ಯುದ್ಧ ಮಾಡಿದನು? ಎಂದರೆ ಇಂದ್ರನು ಖಾಂಡವವನ ದಹನಕಾಲದಲ್ಲಿ ಲೀಲೆಗಾಗಿಯೇ ಕೃಷ್ಣನೊಡನೆ ಯುದ್ಧ ಮಾಡಿದನೇ ಹೊರತು ಅಸುರಾವೇಶದಿಂದಲ್ಲ. ಅರ್ಜುನನಿಗೂ ಕೀರ್ತಿ ಬರುವಂತೆ ಮಾಡಲು ಪ್ರೇಮದಿಂದ ಪಾರ್ಥನೊಡನೆ ಯುದ್ಧ ಮಾಡಿದನೆಂದು ತಿಳಿಯಬೇಕು. ಇಂದ್ರನು ಯುದ್ಧದಲ್ಲಿ ಪರಾಜಿತನಾದಮೇಲೆ ಅಮರರೊಡನೆ ಸಂತೋಷದಿಂದಲೇ ಸ್ವರ್ಗಕ್ಕೆ ತೆರಳಿದನು.

ಆ ಖಾಂಡವವನ ದಹನಕಾಲದಲ್ಲಿ ಅಲ್ಲಿದ್ದ ಸಮಸ್ತ ದೈತ್ಯರು, ಸರ್ಪಗಳು, ಪಿಶಾಚಿ, ಯಕ್ಷರೇ ಮೊದಲಾಗಿ ಎಲ್ಲರೂ ನಾಶವಾದರು. ಆದರೆ ನಾಲ್ಕು ಪಕ್ಷಿಗಳು, ಅಶ್ವಸೇನ ಮತ್ತು ಮಯ – ಹೀಗೆ ಆರು ಜನರು ಮಾತ್ರ ಉಳಿದುಕೊಂಡರು. ಇವರನ್ನು ಬಿಟ್ಟು ಆ ವನದಲ್ಲಿ ಮತ್ತೇನೂ ಉಳಿಯದಂತೆ ಎಲ್ಲವೂ ನಾಶವಾಯಿತು. ಖಾಂಡವವನವು ಅಗ್ನಿಜ್ವಾಲೆಯಿಂದ ಧಗಧಗನೆ ಉರಿಯುತ್ತಿರುವಾಗ ನಾಲ್ಕು ಪಕ್ಷಿಗಳು ಪ್ರಾಣಭಯದಿಂದ "ಅಯಮಗ್ನೇಜರಿತಾ" ಮುಂತಾದ ಮಂತ್ರಗಳಿಂದ ಅಗ್ನಿಯನ್ನು ಸ್ತೋತ್ರ ಮಾಡಿದ್ದರಿಂದ ಅವು ನಾಶವಾಗದೇ ಉಳಿದವು. ತಕ್ಷಕನ ಮಗನಾದ ಅಶ್ವಸೇನನು ಪ್ರಾತಿಲೋಮ್ಯದಿಂದ ಅಂದರೆ ಅವನ ಬಾಲವನ್ನು ಅವನ ತಾಯಿಯೂ ತಾಯಿಯ ಪುಚ್ಛವನ್ನು ಅಶ್ವಸೇನನೂ ಪರಸ್ಪರ ತಮ್ಮ ಕಂಠದಲ್ಲಿ (ಮುಖದಲ್ಲಿ) ನುಂಗಿ ಆಕಾಶಕ್ಕೆ ಹಾರಿದರು. ಆಗ ಅರ್ಜುನನು ಅಶ್ವಸೇನನ ತಾಯಿಯ (ತಕ್ಷಕನ ಪತ್ನಿಯ) ಕಂಠವನ್ನು ಬಾಣದಿಂದ ಛೇದಿಸಿದನು. ಅದರಿಂದ ತಾಯಿಯು ಮೃತಳಾದಳು. ಅಶ್ವಸೇನನ ಬಾಲವು ಅವಳ ಕಂಠದಲ್ಲಿದ್ದುದರಿಂದ ಕತ್ತರಿಸಲ್ಪಟ್ಟಿತು. ಪುಚ್ಛಹೀನನಾದ ಅಶ್ವಸೇನನನ್ನು ಇಂದ್ರನು ರಕ್ಷಿಸಿದನು. ತಕ್ಷಕನ ಮಗನಾದ ಅಶ್ವಸೇನನು, ತನ್ನ ತಾಯಿಯನ್ನು ಸಂಹರಿಸಿ, ತನ್ನ ಬಾಲವನ್ನು ಕತ್ತರಿಸಿದ್ದರಿಂದ ಅತ್ಯಂತ ಕುಪಿತನಾಗಿ ಅರ್ಜುನನ ಮೇಲೆ ಸೇಡು ತೀರಿಸಿಕೊಳ್ಳಲೂ ಅರ್ಜುನನ ಸಂಹಾರಕ್ಕಾಗಿಯೂ ಕರ್ಣನ ಬತ್ತಳಿಕೆಯಲ್ಲಿ ಬಾಣರೂಪನಾಗಿ ಸೇರಿದನು. ಅಂದರೆ ಕರ್ಣನ ಬತ್ತಳಿಕೆಯಲ್ಲಿರುವ ಬಾಣಗಳ ಮಧ್ಯೆ ತಾನೊಂದು ಬಾಣದಲ್ಲಿ ಸೇರಿದನು.

ಮಯಾಸುರನು ಕೃಷ್ಣನು ಚಕ್ರವನ್ನು ಹಿಡಿದು ತನ್ನ ಮೇಲೆ ಪ್ರಯೋಗ ಮಾಡಲುದ್ಯುಕ್ತನಾದಾಗ ಜೀವಿಸ ಬಯಸಿ ರಕ್ಷಿಸುವಂತೆ ಅರ್ಜುನನಿಗೆ ಶರಣಾದನು. ಲಕ್ಷ್ಮೀಪತಿಯಾದ ಶ್ರೀಕೃಷ್ಣನು ಅರ್ಜುನನಿಗಾಗಿ ಮಯಾಸುರನನ್ನು ಸಂಹರಿಸದೇ ಬಿಟ್ಟನು. ಮಯನು ತನ್ನ ಭಕ್ತನಾಗಿದ್ದುದರಿಂದಲೂ ಅವನನ್ನು ಕೊಲ್ಲಲಿಲ್ಲ. ಮಯಾಸುರನು ಅರ್ಜುನನಿಗೆ ಶರಣಾದ ಕಾರಣವನ್ನು ನಿರ್ಣಯಾಚಾರ್ಯರೀಗ ನಿರೂಪಿಸುತ್ತಾರೆ – ಮಯನು ಹೀಗೆ ಯೋಚಿಸಿದನು – 'ನಾನು ದೇವತೆಗಳಿಗೆ ಶತ್ರುವೆಂದೇ ಕೃಷ್ಣನಿಗೆ ನನ್ನಲ್ಲಿ ಕೋಪವಿದೆಯೇ ವಿನಃ ಅವನ ಭಕ್ತನಲ್ಲ ಎಂದಲ್ಲ. ಆದ್ದರಿಂದ ನಾನೀಗ ಅರ್ಜುನರೂಪಿ ಇಂದ್ರನಿಗೆ ಶರಣಾಗತನಾದಲ್ಲಿ ನಾನು ಕೃಷ್ಣನ ಪ್ರೀತಿಗೆ ಪಾತ್ರನಾಗುತ್ತೇನೆ' ಹೀಗೆ ಯೋಚಿಸಿ ಮಯಾಸುರನು ಅರ್ಜುನನಿಗೆ ಮೊರೆಹೊಕ್ಕನೆಂದು ತಿಳಿಯಬೇಕು.

ಅನಂತರ ಮಯಾಸುರನು "ಅರ್ಜುನ! ನೀನು ನನ್ನನ್ನು ರಕ್ಷಿಸಿದ್ದೀಯೆ. ಇದಕ್ಕೆ ನಾನೇನು ಪ್ರತ್ಯುಪಕಾರ ಮಾಡಲಿ? ಹೇಳು" ಎನಲು, ಪಾರ್ಥನು "ನೀನು ಕೃಷ್ಣನ ಅನುಗ್ರಹದಿಂದ ಉಳಿದಿರುವೆ. ಆದ್ದರಿಂದ ಶ್ರೀಕೃಷ್ಣನಿಗೇ ನೀನು ಪ್ರತ್ಯುಪಕಾರ ಮಾಡು" ಎಂದು ಹೇಳಿದನು. ಆಗ ಶ್ರೀವಾಸುದೇವನು "ಮಯಾಸುರ, ನೀನು ಪ್ರತ್ಯುಪಕಾರಮಾಡಲಪೇಕ್ಷಿಸಿದಲ್ಲಿ ಧರ್ಮರಾಜನಿಗೆ ಒಂದು ದಿವ್ಯ ಸಭಾಮಂದಿರವನ್ನು ನಿರ್ಮಿಸಿಕೊಡು" ಎಂದಾಜ್ಞಾಪಿಸಿದನು. ಕೂಡಲೇ ಮಯಾಸುರನು

ಶ್ರೀಕೃಷ್ಣನ ಅಪ್ಪಣೆಯಂತೆ ಅಸಾಧಾರಣವೂ ಅತ್ಯಂತ ಮನೋಹರವೂ, ಚಿತ್ರವಿಚಿತ್ರವೂ ಆದ ಒಂದು ದೊಡ್ಡ ಸಭಾಭವನವನ್ನು ನಿರ್ಮಾಣ ಮಾಡಿಕೊಟ್ಟು, ಶ್ರೀಕೃಷ್ಣಾರ್ಜುನರ ಅಪ್ಪಣೆ ಪಡೆದು ತೆರಳಿದನು.

ಅದು ಸರಿ. ಪಕ್ಷಿಗಳು, ತಕ್ಷಕನ ಪುತ್ರ ಅಶ್ವಸೇನ ಮತ್ತು ಮಯಾಸುರರೇನೋ ಉಳಿದರು. ಆದರೆ ಮಿಕ್ಕುಳಿದವರೆಲ್ಲಾ ಏತಕ್ಕಾಗಿ ಸಂಹೃತರಾದರು? ಎಂದರೆ – "ನಾನು ಖಾಂಡವವನವನ್ನು ಭಕ್ಷಿಸುವಾಗ ಯಾವ ಪ್ರಾಣಿಗಳೂ ಹೊರಗೆ ಹೋಗದಂತೆ ತಡೆಯಬೇಕು" ಎಂದು ವೈಶ್ವಾನರನು ಶ್ರೀಕೃಷ್ಣಾರ್ಜುನರನ್ನು ಪ್ರಾರ್ಥಿಸಿದ್ದನು. ಅಂತೆಯೇ ಅವರು ಯಾವ ಪ್ರಾಣಿಗಳೂ ತಪ್ಪಿಸಿಕೊಂಡು ಪಾರಾಗದಂತೆ ಮಾಡಿದ್ದರಿಂದ ಅವೆಲ್ಲವೂ ಹತವಾದವು ಎಂದು ತಿಳಿಯಬೇಕು.

ಶ್ರೀಕೃಷ್ಣಾರ್ಜುನರು ಅಗ್ನಿದೇವನ ಪ್ರಾರ್ಥನೆಯಂತೆ ಅವನಿಗಾಗಿ ಖಾಂಡವವನದ ದಹನಕ್ಕೆ ಸಹಾಯಕರಾಗಿ, ಇಂದ್ರಾದಿ ದೇವತೆಗಳನ್ನು ಯುದ್ಧದಲ್ಲಿ ಜಯಿಸಿದ್ದು ಮೊದಲಾದ ಸಕಲ ವಾರ್ತೆಗಳನ್ನೂ ಕೇಳಿ ಪಾಂಡವರು ಮತ್ತಿತರರು ಬಹಳ ಹರ್ಷ ನಿರ್ಭರರಾದರು. ಅಪರಿಮಿತ ಸಾಮರ್ಥ್ಯಶಾಲಿಯೂ, ಸುಖ ಮತ್ತು ಜ್ಞಾನಸ್ವರೂಪನೂ ಪ್ರಭುತ್ವ-ದಾನಶೌಂಡತ್ವಾದಿಗಳಿಂದ ರಾಜಸುವವನೂ, ಹಾಗೂ ಅನಂತವೀರ್ಯನೂ ಆದ ಭಗವಾನ್ ಶ್ರೀಕೃಷ್ಣನು ಇಂದ್ರಪ್ರಸ್ಥದಲ್ಲಿ ಪಾಂಡವರೊಡನೆ ವಾಸಮಾಡಿ ಆನಂದಭರಿತನಾದನು.

*ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ 'ಸುಭದ್ರಾಹರಣ ಮತ್ತು ಖಾಂಡವವನದ ದಹನ'ವೆಂಬ ಇಪ್ಪತ್ತನೆಯ ಅಧ್ಯಾಯದ ಕಥಾಸಾರವು ಮುಗಿದುದು.*

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★

## ಏಕವಿಂಶಾಧ್ಯಾಯಭಾವಸಂಗ್ರಹ

**ಪಾರ್ಥಾನ್ ಲಬ್ಧಸಭಾನ್ ವಿಧಾಯ ಮಯತಃ ಪ್ರಾಪ್ತಃ ಪುರಂ ಸ್ವಂ ಗತಃ**
**ಕ್ಷೇತ್ರಂ ಕೌರವಮರ್ಕಪರ್ವಣಿ ಪುರೀಂ ಸಂಪ್ರಾಪ್ಯ ಕರ್ತಾ ಕ್ರತೋಃ ।**
**ಪಾಂಡೂನ್ ಪ್ರಾಪ್ಯ ಜರಾಸುತೇ ವಿನಿಹತೆ ತೈಃ ಕಾರಯಿತ್ವಾಽಧ್ವರಮ್**
**ಪ್ರಾಪ್ತಃ ಸ್ವಂ ಪುರಮಚ್ಯುತೋ ವಿಜಯತೇ ದ್ಯೂತೇ ಜಿತೈಶ್ಚ ಸ್ಮೃತಃ ॥ 21 ॥**

**ಅನ್ವಯಾರ್ಥ:-** **ಪಾಂಡೂನ್** = ಪಾಂಡವರನ್ನು, **ಮಯತಃ** = ಬಡಗಿಯಾದ ಮಯನಿಂದ, **ಲಬ್ಧಸಭಾನ್** = ಹೊಂದಲ್ಪಟ್ಟ ಸಭೆಯುಳ್ಳವರನ್ನಾಗಿ ಅಂದರೆ ಶ್ರೇಷ್ಠಸಭಾಮಂದಿರವನ್ನು ಪಡೆದವರನ್ನಾಗಿ, **ವಿಧಾಯ** = ಮಾಡಿ, **ಸ್ವಂ** = ತನ್ನದಾದ, **ಪುರಂ** = ದ್ವಾರಕಾಪಟ್ಟಣಕ್ಕೆ, **ಪ್ರಾಪ್ತಃ** = ಬಂದವನಾಗಿ, **ಅರ್ಕಪರ್ವಣಿ** = ಸೂರ್ಯಗ್ರಹಣ ಕಾಲದಲ್ಲಿ, **ಕೌರವಂ ಕ್ಷೇತ್ರಂ** = ಕುರುಕ್ಷೇತ್ರವನ್ನು ಕುರಿತು, **ಗತಃ** = ಹೋದವನಾಗಿ, **ಪುನಃ ಪುರೀಂ** = ಮತ್ತೆ ದ್ವಾರಾವತಿಗೆ, **ಪ್ರಾಪ್ತಃ (ಸನ್)** = ಬಂದವನಾಗಿ, **ಕ್ರತೋಃ** = ಯಜ್ಞವನ್ನು, **ಕರ್ತಾ** = ಮಾಡಿದವನಾಗಿ **ಪಾಂಡೂನ್ ಪ್ರಾಪ್ಯ** = ಪಾಂಡವರನ್ನು ಸೇರಿ (ಪಾಂಡವರಿದ್ದಲ್ಲಿಗೆ ಬಂದು), **ಜರಾಸುತೇ** = ಜರಾಸಂಧನು, **ವಿನಿಹಿತೇ ಸತಿ** = ಸಂಹೃತನಾಗಲು (ಸಂಹೃತನಾದ ಮೇಲೆ), **ಪಾಂಡವೈಃ** = ಪಾಂಡವರಿಂದ, **ಅಧ್ವರಂ** = ರಾಜಸೂಯ ಯಾಗವನ್ನು, **ಕಾರಯಿತ್ವಾ** = ಮಾಡಿಸಿ, **ಸ್ವಂ ಪುರಂ ಪ್ರಾಪ್ತಃ** = ತನ್ನ ದ್ವಾರಕಾನಗರಕ್ಕೆ ಬಂದು, **ದ್ಯೂತೇ** = ಕಪಟದ್ಯೂತದಲ್ಲಿ (ಪಗಡೆಯಾಟದಲ್ಲಿ), **ಜಿತೈಃ** = ಪರಾಜಿತರಾದ, **ತೈಃ** = ಪಾಂಡವರಿಂದ, **ಸ್ಮೃತಃ** = ಸ್ಮರಿಸಲ್ಪಟ್ಟ, **ಅಚ್ಯುತಃ** = ಅಚ್ಯುತನಾದ ಆ ಶ್ರೀಕೃಷ್ಣಪರಮಾತ್ಮನು, **ವಿಜಯತೇ** = ಉತ್ಕೃಷ್ಟನಾಗಿದ್ದಾನೆ.

**ತಾತ್ಪರ್ಯ:-** ಇಂದಿರಾಹೃದಯವಲ್ಲಭನಾದ ಶ್ರೀಕೃಷ್ಣ ಪರಮಾತ್ಮನು ಮಯಾಸುರನಿಂದ ಪಾಂಡವರಿಗಾಗಿ ಒಂದು ಅತಿಮನೋಹರವೂ ಕಲಾಪ್ರಪೂರ್ಣವೂ ಆದ ಸಭೆಯನ್ನು ನಿರ್ಮಾಣ ಮಾಡಿಸಿ ಅವರಿಗೆ ಒಪ್ಪಿಸಿ ಕೊಟ್ಟು, ದ್ವಾರಕಾಪುರಿಗೆ ಹಿಂದಿರುಗಿ ಬಂದನು. ಪುನಃ ಆ ಸ್ವಾಮಿಯು ಸೂರ್ಯಗ್ರಹಣಕಾಲದಲ್ಲಿ ಕುರುಕ್ಷೇತ್ರಕ್ಕೆ ದಯಮಾಡಿಸಿ, ಗ್ರಹಣಕಾಲದಲ್ಲಿ ನೆರವೇರಿಸಬೇಕಾದ ವಿಧಿಗಳನ್ನು ಮಾಡಿ ಮತ್ತೆ ದ್ವಾರಕಾಪುರಿಗೆ ಬಂದನು. ಅಲ್ಲಿ ಶ್ರೀಕೃಷ್ಣನು ಅತ್ಯಂತ ಶ್ರೇಷ್ಠವಾದ ಯಾಗವನ್ನು ನೆರವೇರಿಸಿ ಪಾಂಡವರನ್ನು ನೋಡಲು ಇಂದ್ರಪ್ರಸ್ಥಕ್ಕೆ ಆಗಮಿಸಿ, ರಾಜಸೂಯ ಯಾಗವು ಸುಗಮವಾಗಿ ಜರುಗಿ ಪಾಂಡವರಿಗೆ ಕೀರ್ತಿ ಬರುವಂತೆ ಮಾಡಲು ಅದಕ್ಕೆ ಅಡ್ಡಿಯಾಗಿದ್ದ ಜರಾಸಂಧನ ನಿಧನಕ್ಕಾಗಿ ಭೀಮಾರ್ಜುನರೊಡನೆ ಮಗಧರಾಜ್ಯಕ್ಕೆ ಬಂದು, ಅಲ್ಲಿ ಭೀಮಸೇನನಿಂದ ಜರಾಸಂಧನ ಸಂಹಾರ ಮಾಡಿಸಿ, ಮತ್ತೆ ಇಂದ್ರಪ್ರಸ್ಥಕ್ಕೆ ಬಂದು, ಪಾಂಡವರಿಂದ ವೈಭವಪೂರ್ಣವಾಗಿ ರಾಜಸೂಯಯಾಗವನ್ನು ಯಶಸ್ವಿಯಾಗಿ ಮಾಡಿಸಿ, ಅವರಿಗೆ ಅಪಾರ ಕೀರ್ತಿ ಬರುವಂತೆ ಮಾಡಿ, ಪುನಃ ದ್ವಾರಕೆಗೆ ಹಿಂದಿರುಗಿದನು. ಇತ್ತ ದುರ್ಯೋಧನನು ಪಾಂಡವರ ವೈಭವ, ಸಂಪತ್ತು, ಕೀರ್ತಿಗಳನ್ನು ಕಂಡು ಮಾತ್ಸರ್ಯದಿಂದ ಕರುಬಿ, ಅವರ ರಾಜ್ಯ-ಸಂಪತ್ತುಗಳನ್ನು ಕಬಳಿಸಲು ಶಕುನಿಯಿಂದ ಪ್ರೇರಿತನಾಗಿ, ಪಾಂಡವರನ್ನು ಹಸ್ತಿನಾವತಿಗೆ ಕರೆಸಿಕೊಂಡು ಶಕುನಿಯ ದ್ವಾರಾ ಕಪಟದ್ಯೂತದಲ್ಲಿ ಪರಾಜಿತರಾದ ಪಾಂಡವರ ಸರ್ವಸ್ವವನ್ನೂ ಅಪಹರಿಸಿ, ಪಾಂಡವರನ್ನು ಹನ್ನೆರಡು ವರ್ಷ ವನವಾಸ, ಒಂದು ವರ್ಷ ಅಜ್ಞಾತವಾಸ ಮಾಡಲು ಅರಣ್ಯಕ್ಕೆ ಅಟ್ಟಿದನು. ಧರ್ಮವಂತರಾದ ಪಾಂಡವರು ಪಣಬಂಧದಂತೆ ವನವಾಸಕ್ಕಾಗಿ ಅರಣ್ಯಕ್ಕೆ ತೆರಳಿ ಅಲ್ಲಿ ತಮ್ಮ ಹಿತಚಿಂತಕನೂ ಬಂಧುವೂ ಸ್ವಾಮಿಯೂ ಆದ ಶ್ರೀಕೃಷ್ಣನನ್ನು ಸ್ಮರಿಸಿದರು. ಇಂತು ಪಾಂಡವರಿಂದ ಸ್ಮರಿಸಲ್ಪಟ್ಟ ಚ್ಯುತಿರಹಿತನಾದ ಶ್ರೀಕೃಷ್ಣನು ಸದಾ ಉತ್ಕೃಷ್ಟನಾಗಿದ್ದಾನೆ ಎಂದು ಭಾವ.

# ಇಪ್ಪತ್ತೊಂದನೆಯ ಅಧ್ಯಾಯದ ಕಥಾಸಂಗ್ರಹ

ಶ್ರೀರಮಾರಮಣನಾದ ಭಗವಾನ್ ಶ್ರೀಕೃಷ್ಣನ ಆದೇಶದಂತೆ ಬಡಗಿಯಾದ ಮಯಾಸುರನು ಸಕಲಾಶ್ಚರ್ಯಜನಕವೂ ಅದ್ಭುತ ಕುಶಲಕಲಾತ್ಮಕವೂ ಅತ್ಯಂತ ಮನೋಹರವೂ ಆದ ಒಂದು ಶ್ರೇಷ್ಠ ಸಭಾಮಂದಿರವನ್ನು ನಿರ್ಮಿಸಿ ಪಾಂಡವರಿಗೆ ಸಮರ್ಪಿಸಿದನು. ಅದರಂತೆ ಒಂದು ಉತ್ತಮವಾದ ಗದೆಯನ್ನು ಶ್ರೀಭೀಮಸೇನನಿಗೆ ನೀಡಿದನು. ಅದು ಸಾಮಾನ್ಯವಾದ ಗದೆಯಲ್ಲ; ಸಾಕ್ಷಾತ್ ಶ್ರೀವಾಯುದೇವರು ಧರಿಸಿದ್ದ ಗದೆಯು. ಹಿಂದೆ ಯೌವನಾಶ್ವದೇಶಾಧಿಪತಿಯಾದ ಮುಚುಕುಂದ ರಾಜನು ಪವಮಾನನನ್ನು ಒಲಿಸಿಕೊಂಡು ಅವನಿಂದ ಪಡೆದಿದ್ದನು. ಆ ಗದೆಯನ್ನೇ ಈಗ ಭೀಮಸೇನನು ಮಯಾಸುರ-ನಿಂದ ಪಡೆದು ಪರಮಾನಂದಭರಿತನಾದನು. ಯಾದವಕುಲಭೂಷಣನಾದ ಶ್ರೀ ಮಾಧವನು ಎರಡು ವರ್ಷಗಳ ಕಾಲ ಇಂದ್ರಪ್ರಸ್ಥದಲ್ಲಿ ವಾಸಮಾಡಿ ಪಾಂಡವರಿಂದ ಪ್ರೇಮಾದರಪೂರ್ವಕವಾಗಿ ಪೂಜಿತನಾಗಿ ತನ್ನ ವಿಯೋಗ ದುಃಖವನ್ನು ಸಹಿಸಲಾಗದ ಪಾಂಡವರನ್ನು ಸಮಾಧಾನಪಡಿಸಿ ಅವರಿಂದ ಬೀಳ್ಕೊಂಡು ತನ್ನ ರಾಜಧಾನಿಗೆ ಚಿತ್ತೈಸಿದನು.

ಉತ್ತತ್ತಿಶೂನ್ಯನಾದ ಮಾಧವನು ದ್ವಾರಕೆಯಲ್ಲಿ ಸುಖವಾಗಿ ವಾಸ ಮಾಡಿದನು. ಒಂದು ದಿನ ಯದುಕುಲತಿಲಕನು ಪತ್ನಿಯರು, ಪುತ್ರರು ಮತ್ತು ಬಾಂಧವರಿಂದ ಸಹಿತನಾಗಿ ಸೂರ್ಯಗ್ರಹಣ ನಿಮಿತ್ತವಾಗಿ ಕುರುಕ್ಷೇತ್ರಕ್ಕೆ ಬಿಜಯಂಗೈದನು. ಶ್ರೀಕೃಷ್ಣನ ಭಕ್ತರು, ಶತ್ರುಗಳು ಮತ್ತು ಪ್ರಿಯರು ಅಪ್ರಿಯರು ಹೀಗೆ ಸಕಲರೂ ಅಲ್ಲಿಗೆ ಬಂದರು. ಕುಂತೀ ಕುಮಾರರಾದ ಪಾಂಡವರು, ಇನ್ನಿತರ ನೃಪತಿಗಳು, ತಮ್ಮ ತಮ್ಮ ಪತ್ನೀಪುತ್ರಮಾತ್ಯ ಸಹಿತರಾಗಿ ಸರ್ವರೂ ಕುರುಕ್ಷೇತ್ರಕ್ಕೆ ಹೊರಟರು. ಇದರಂತೆ ಯಶೋದೆ, ಗೋಪ-ಗೋಪಿಯರುಗಳೊಡನೆ ನಂದಗೋಪನೂ, ಮತ್ತು ಅನೇಕ ಋಷಿ-ಮುನಿಪುಂಗವರೂ ಪ್ರಜೆಗಳೂ ಕೂಡ ಅಲ್ಲಿಗೆ ಆಗಮಿಸಿದರು. ವಸಿಷ್ಠ-ಯಾದವ ಮತ್ತು ಭೃಗುಕುಲತಿಲಕರಾದ ಶ್ರೀವೇದವ್ಯಾಸ-ಶ್ರೀಕೃಷ್ಣ ಹಾಗೂ ಶ್ರೀಪರಶುರಾಮ ಇಂತು ಮೂರುರೂಪದ ಶ್ರೀಹರಿ ಪರಮಾತ್ಮನನ್ನು ಅಲ್ಲಿ ದರ್ಶನ ಮಾಡಿ ನಿಖಿಲಭಕ್ತರು ಆನಂದಭರಿತರಾಗಿ ಅವರನ್ನು ಪೂಜಿಸಿದರು. ಭೃಗುಕುಲತಿಲಕರಾದ ಶ್ರೀಪರಶುರಾಮದೇವರಿಂದ ಉತ್ಪನ್ನವಾದ ಭಾಗೀರಥಿ-ಯಲ್ಲಿ ಸೂರ್ಯೋಪರಾಗ ಕಾಲದಲ್ಲಿ ಸ್ನಾನಮಾಡಿ ಅಲ್ಲಿಗಾಗಮಿಸಿದ್ದ ಸಮಸ್ತ ರಾಜರುಗಳೂ ಶ್ರೀಲಕ್ಷ್ಮೀಪತಿ ಶ್ರೀಕೃಷ್ಣ-ವೇದವ್ಯಾಸ -ಪರಶುರಾಮದೇವರ ಚರಣಸಂದರ್ಶನದಿಂದ ಕೃತಾರ್ಥರಾದರು. ಶ್ರೀವ್ಯಾಸಾದಿ ರೂಪತ್ರಯಶೋಭಿತ-ನಾದ ವಾಸುದೇವನು ಆತ್ಮೀಯರಾದ ದೇವಕೀ ಮೊದಲಾದವರಲ್ಲಿ ಅನುಗ್ರಹಮಾಡಿ ಶೂರಸುತನಾದ ವಸುದೇವನಿಂದ ಅಲ್ಲಿ ಅನೇಕ ಯಜ್ಞಗಳನ್ನು ಮಾಡಿಸಿ ಬ್ರಾಹ್ಮಣಾದಿಗಳು, ಋತ್ವಿಜರುಗಳಿಗೆ ವಿಶೇಷಾಕಾರವಾಗಿ ದಕ್ಷಿಣಾಪ್ರದಾನ ಮಾಡಿಸಿದನು. ಇಂತು ಸಮಸ್ತ ಪ್ರಪಂಚದಲ್ಲಿರುವ ನಿಜಭಕ್ತರಿಗೆ ಸೂರ್ಯೋಪರಾಗರೂಪ ಪುಣ್ಯಕಾಲದಲ್ಲಿ ತನ್ನ ದಿವ್ಯಸಂದರ್ಶನವೀಯುವ ಮೂಲಕ ಸುಜೀವಿಗಳಾದ ಅವರೆಲ್ಲರಿಗೂ ಮೋಕ್ಷರೂಪ ಅನುಗ್ರಹವನ್ನು ಮಾಡಿದನು.

ಅನಂತರ ಶ್ರೀಹರಿಯು ಪಾಂಡವರೊಡನೆ ದ್ವಾರಕಾಪುರಿಗೆ ಬಂದನು. ಅಲ್ಲಿ ಒಂದೇ ದಿನದಲ್ಲಿ ಮಾಡಿ ಮುಗಿಸಲು ಯೋಗ್ಯವಾದ ಅಶ್ವಮೇಧಯಾಗವನ್ನು ನೆರವೇರಿಸಿದನು. ಒಂದೇ ದಿನದಲ್ಲಿ ಮುಗಿಸಬೇಕಾದ ಅಶ್ವಮೇಧಯಾಗದ ಸಿದ್ಧಿಗಾಗಿ ಶ್ರೀಕೃಷ್ಣನು ಒಂದೇ ದಿನದಲ್ಲಿ ಲಕ್ಷ ಯೋಜನ ಪರ್ಯಂತ ಹೋಗಲು ಸಮರ್ಥವಾದ ಒಂದು ಯಾಗಾಶ್ವವನ್ನು ನಿರ್ಮಿಸಿ ಭೀಮಾರ್ಜುನ ಸಹಿತರಾದ ತನ್ನ ಪುತ್ರರೊಡನೆ ಕಳುಹಿಸಿದನು. ಶ್ರೀಕೃಷ್ಣಪುತ್ರರು ಭೀಮಾರ್ಜುನರಿಂದದೊಡಗೂಡಿ ಯಾಗಾಶ್ವದೊಡನೆ ಒಂದು ಯಾಮ ಕಾಲದಲ್ಲೇ ಎಲ್ಲೆಡೆ ಸಂಚರಿಸಿದರು. ಭೀಮಾರ್ಜುನರ ಸಹಾಯದಿಂದ ಶ್ರೀಕೃಷ್ಣಪುತ್ರರು ಜರಾಸಂಧಾದಿ ಸಮಸ್ತರಾಜರನ್ನು ಕ್ಷಣಮಾತ್ರದಲ್ಲಿ ಸೋಲಿಸಿ ವಿಜಯಶೀಲರಾಗಿ ಬಂದರು. ಅಲೌಕಿಕವೂ ಲೋಕವಿಲಕ್ಷಣವೂ ಆದ ಆ ಅಪೂರ್ವ ಯಾಗಾಶ್ವವು ಒಂದೇ ಯಾಮದಲ್ಲಿ ತಿರುಗಿಬಂದಿತು.

ಶ್ರೀವೇದವ್ಯಾಸರು ಶ್ರೀಕೃಷ್ಣನಿಗೆ ಯಾಗದೀಕ್ಷೆಯನ್ನು ನೀಡಿದರು. ಶ್ರೀಕೃಷ್ಣನು ದೀಕ್ಷಾಬದ್ಧನಾಗಿ ಯಾಗಕ್ಕೆ ಸಿದ್ಧನಾಗಿ ಕುಳಿತನು. ಅದೇ ಕಾಲದಲ್ಲಿ ತೃಣವನ್ನು ಕರದಲ್ಲಿ ಹಿಡಿದಿದ್ದ ಬ್ರಾಹ್ಮಣನೋರ್ವನು ಅಲ್ಲಿಗೆ ಬಂದು ಶ್ರೀಕೃಷ್ಣನ ಮುಂದೆ ಅಳುತ್ತಾ "ದೇವ, ನನಗೆ ಜನಿಸಿದ ಪುತ್ರರೆಲ್ಲರೂ ಹುಟ್ಟಿದ ಕೂಡಲೇ ಅದೃಶ್ಯರಾಗುತ್ತಿದ್ದಾರೆ. ಇದರ ಕಾರಣವೇನೋ ನಾನರಿಯೆ. ಜನಿಸಿದ ಮಕ್ಕಳೆಲ್ಲ ಕಣ್ಮರೆಯಾಗುತ್ತಿರುವುದರಿಂದ ನಾನು ದುಃಖಿತನಾಗಿದ್ದೇನೆ. ನನಗೀಗ ನೀನೇ ಗತಿ" ಎಂದು ವಿಲಪಿಸಿದನು. ಆಗ ಅರ್ಜುನನು ಮುಂದೆ ಬಂದು "ಅಯ್ಯಾ ವಿಪ್ರೋತ್ತಮ! ಶ್ರೀಕೃಷ್ಣನು ಯಾಗದೀಕ್ಷೆಯಲ್ಲಿದ್ದಾನೆ. ಇದಾವ ದೊಡ್ಡಕಾರ್ಯ? ನೀನು ಚಿಂತಿಸಬೇಡ. ನಿನ್ನ ಪುತ್ರರನ್ನು ರಕ್ಷಿಸುತ್ತೇನೆ. ನಿನ್ನ ಮಕ್ಕಳನ್ನು ತಂದು ನಿನಗೊಪ್ಪಿಸುವೆನು" ಎಂದು ಹೇಳಿದನು. ಆಗ ಆ ಬ್ರಾಹ್ಮಣನು "ಶ್ರೀಕೃಷ್ಣ-ಬಲರಾಮ ಸಹಿತರಾದ ಪ್ರದ್ಯುಮ್ನಾದಿ ಯಾದವವೀರರೂ ಸಹ ಕಣ್ಮರೆಯಾಗುತ್ತಿರುವ ನನ್ನ ಸುತರನ್ನು ಕಾಪಾಡಲಾಗಲಿಲ್ಲವೆಂದಮೇಲೆ ಕಾಣದಿರುವ ನನ್ನ ಮಕ್ಕಳನ್ನು ಪೊರೆಯಲು ನೀನೆಂತು ಶಕ್ತನಾಗುವೆ?" ಎನಲು ಆಗ ಅಸುರದೂಷಿತಾಂತಃಕರಣನಾದ ಪಾರ್ಥನು "ಎಲೈ ಭೂಸುರನೇ! ನಾನು ಶ್ರೀಕೃಷ್ಣಾದಿಗಳಂತಲ್ಲ! ಖಾಂಡವವನದ ದಹನಕಾಲದಲ್ಲಿ ದೇವತೆಗಳನ್ನು ಗೆದ್ದ ವೀರ ನಾನು! ನಾನು ಮುಂದೆ ನಿವಾತಕವಚರೆಂಬ ಹೆಸರಿನ ದೈತ್ಯರನ್ನೂ ಜಯಿಸುವೆನು. ಬ್ರಾಹ್ಮಣ! ನಿನ್ನ ಪುತ್ರರನ್ನು ರಕ್ಷಿಸಲಾಗದಿದ್ದರೆ, ನಾನು ಅಗ್ನಿಪ್ರವೇಶ ಮಾಡುವೆನು" ಎಂದು ಪ್ರತಿಜ್ಞಾಬದ್ಧನಾದನು. ಆಗ ಶ್ರೀಕೃಷ್ಣನು "ಅರ್ಜುನ! ನಿನಗೆ ಈ ವಿಪ್ರನ ಮಕ್ಕಳನ್ನು ಕಾಪಾಡುವ ಶಕ್ತಿ ಇರಬಹುದೋ ಏನೋ" ಎಂದಾಗ ಪಾರ್ಥನು ತನ್ನ ಪ್ರತಿಜ್ಞೆಯು ಫಲಿಸುವುದೋ ಇಲ್ಲವೋ ಎಂದು ನಾಚಿ ನಿಂತನು. ಶತ್ರುನಿಗ್ರಹ ಸಮರ್ಥನಾದ ಶ್ರೀ ಮಾಧವನು ನಸುನಕ್ಕು "ಅರ್ಜುನಾ, ಹೋಗಿ ಬಾ" ಎಂದೆನಲು ಮತ್ತೆ ಅರ್ಜುನನು ವಿಪ್ರಸುತರನ್ನು ರಕ್ಷಿಸುವುದಾಗಿ ಪ್ರತಿಜ್ಞೆ ಮಾಡಿ ಸಕಲ ಯಾದವ ವೀರರಿಂದೊಡಗೂಡಿ ಆ ಬ್ರಾಹ್ಮಣನ ಮನೆಗೆ ಹೊರಟನು. ಶ್ರೀಕೃಷ್ಣನು ಬಲರಾಮ, ಪ್ರದ್ಯುಮ್ನ, ಅನಿರುದ್ಧರ ಕೀರ್ತಿ ರಕ್ಷಣೆಗಾಗಿ ಅವರನ್ನು ಅರ್ಜುನನ ಸಹಾಯಕ್ಕೆ ಕಳುಹಲಿಲ್ಲ. ಈ ಮೂವರೂ ಕೃಷ್ಣನಿಗೆ ಪರಮಪ್ರಿಯರಾದವರು. ಬಲರಾಮನು ಮಾಧವನಿಗೆ ಅತ್ಯಧಿಕ ಪ್ರಿಯನು. ಅವನ ತರುವಾಯ ಪ್ರದ್ಯುಮ್ನನು ಬಹುಪ್ರಿಯನು. ಆನಂತರ ಅನಿರುದ್ಧನು ಪ್ರಿಯನಾಗಿದ್ದಾನೆ.

ಹಿಂದೆ ರುಗ್ಮಿಯ ಮಗಳಾದ ರುಗ್ಮವತಿಯ ಸ್ವಯಂವರ ಕಾಲದಲಿ ಪ್ರದ್ಯುಮ್ನನು ಅವಳನ್ನು ಅಪಹರಿಸಿ ವಿವಾಹವಾದನು. ಪ್ರದ್ಯುಮ್ನ-ರುಗ್ಮವತಿಯರಿಗೆ ಜನಿಸಿದ ಮಗನೇ ಅನಿರುದ್ಧನು. ಅಂತೆಯೇ ಅನಿರುದ್ಧನು ಪ್ರದ್ಯುಮ್ನನಿಗಿಂತ ಕೃಷ್ಣನಿಗೆ ಸ್ವಲ್ಪ ಕಡಿಮೆ ಪ್ರಿಯನು. ಪೂರ್ವದಲ್ಲಿ ರತೀದೇವಿಯಾಗಿದ್ದವಳೇ ಈಗ ರುಗ್ಮವತಿಯಾಗಿ ಜನಿಸಿರುವಳು. ಅವಳಲ್ಲಿ ಪ್ರದ್ಯುಮ್ನನಿಗೆ ಪುತ್ರನಾಗಿ ಅನಿರುದ್ಧನು ಜನಿಸಿದನು. ಇವನಿಗೆ ಮೊದಲೂ "ಅನಿರುದ್ಧ"ನೆಂದೇ ಹೆಸರಿತ್ತು. ಮನ್ಮಥನ ಮಗನಿಗೆ ಅನಿರುದ್ಧ-ನೆಂದು ಹೆಸರು. ಅವನು ಪರಮಾತ್ಮನ ಆವೇಶವುಳ್ಳವನು. ಆದ್ದರಿಂದ ಅವನು ಮಹಾ ಬಲಶಾಲಿಯೂ, ಸುರಸುಂದರನೂ ಮತ್ತು ಸಕಲಶಾಸ್ತ್ರವಿಶಾರದನೂ ಆದನು. ಕೃಷ್ಣನು ತನಗೆ ಅತಿ ಪ್ರೀತಿಪಾತ್ರರಾದುದರಿಂದಲೇ ಬಲರಾಮ-ಪ್ರದ್ಯುಮ್ನ-ಅನಿರುದ್ಧರನ್ನು ಬಿಟ್ಟು ಉಳಿದ ಯಾದವರನ್ನು ಅರ್ಜುನನ ಸಹಾಯಕ್ಕಾಗಿ ಕಳುಹಿಸಿದನು.

ಇತ್ತ ಬ್ರಾಹ್ಮಣನ ಗೃಹಕ್ಕೆ ಬಂದು ಅರ್ಜುನನು ವಿಪ್ರನ ಮನೆಯನ್ನು ಬಾಣಗಳಿಂದ ದಿಗ್ಬಂಧನ ಮಾಡಿ ಯದು-ವೀರರೊಡನೆ ಎಚ್ಚರದಿಂದ ಕಾಯುತ್ತಿದ್ದನು. ಆದರೂ ವಿಪ್ರಪತ್ನಿಯು ಪ್ರಸವಿಸಿದ ಕೂಡಲೇ ಶಿಶುವು ಅದೃಶ್ಯವಾಯಿತು. ಆದರಿಂದ ಅರ್ಜುನನು ಯಾದವರಿಂದ ಸಹಿತನಾಗಿ ದುಃಖಿಸಿದನು. ಜನಿಸಿದ ಮಗನು ಮತ್ತೆ ಕಣ್ಣಿಗೆ ಕಾಣದಂತಾಗಲು ದುಃಖಸಂತಪ್ತನಾದ ಬ್ರಾಹ್ಮಣನು "ಅರ್ಜುನ! ನನ್ನ ಮಗನನ್ನು ಕಾಪಾಡುವುದಾಗಿ ಪ್ರತಿಜ್ಞೆ ಮಾಡಿದೆಯಲ್ಲವೇ? ಈಗೆಲ್ಲಿ ಹೋಯಿತು ನಿನ್ನ ಪೌರುಷ" ಮುಂತಾಗಿ ಪಾರ್ಥನನ್ನು ಜರಿದು ಕಟುನುಡಿಗಳನ್ನಾಡಿದನು. ಭೂಸುರನ ವಚನವಾಲಿಸಿ ಲಜ್ಜೆಯಿಂದ ತಲೆತಗ್ಗಿಸಿ ಶ್ರೀಪತಿಯಾದ ಕೃಷ್ಣನಿರುವಲ್ಲಿಗೆ ಬಂದು ಭಗ್ನಪ್ರತಿಜ್ಞನಾದ್ದರಿಂದ ಮಾತಿನಂತೆ ಅಗ್ನಿಪ್ರವೇಶ ಮಾಡಲು

ಸಿದ್ಧನಾದನು. ಆಗ ಶ್ರೀಕೃಷ್ಣನು ಅವನನ್ನು ತಡೆದು, ಆ ಬ್ರಾಹ್ಮಣ ಮತ್ತು ಅರ್ಜುನರೊಡನೆ ರಥದಲ್ಲಿ ಕುಳಿತು ಕ್ಷಣ ಮಾತ್ರದಲ್ಲಿ ಸಪ್ತ ಸಮುದ್ರಗಳನ್ನು ದಾಟಿ ಉತ್ತರ ದಿಕ್ಕಿನ ಕಡೆಗೆ ಹೊರಟನು.[29]

ಶ್ರೀಕೃಷ್ಣನು ಇಂತು ರಥದಲ್ಲಿ ಪಯಣಿಸುತ್ತಿರುವಾಗ ಪರ್ವತಗಳೂ ಸಮುದ್ರಗಳೂ ಅವನಿಗೆ ದಾರಿಕೊಟ್ಟವು. ಇದರಂತೆ ಮಧುಸೂದನನು ತನ್ನ ಸುದರ್ಶನ ಚಕ್ರದಿಂದ ಅಂಧಃತಮಸ್ಸನ್ನು ಛೇದಿಸಿ ಘನೋದಕವನ್ನು ದಾಟಿ, ಅಪರಿಮಿತ ಸಾಮರ್ಥ್ಯಶಾಲಿಯಾದ ಕೃಷ್ಣನು ಅಲ್ಲಿ ತನ್ನದಾದ ಮಂದಿರವನ್ನು ಅಂದರೆ ಅನಂತಾಸನವನ್ನು ಕಂಡನು. ಕೃಷ್ಣನು ಅರ್ಜುನನನ್ನು ದೂರದಲ್ಲಿ ನಿಲ್ಲಿಸಿ ಬ್ರಾಹ್ಮಣ ಸಹಿತನಾಗಿ ಹೊರಟನು. ಅಷ್ಟಭುಜಗಳಿಂದ ಯುಕ್ತನಾಗಿ ಸಮಸ್ತರತ್ನಗಳಿಂದ ಹೊಳೆಯುವ ಅಲೌಕಿಕಾಭರಣಗಳಿಂದಲಂಕೃತನಾಗಿ ಉತ್ತಮ ಗುಣಸಾಗರನಾದ ಶ್ರೀಕೃಷ್ಣಪರಮಾತ್ಮನು ಮೂಲರೂಪದಿಂದ ಅಂದರೆ ಸಾಕ್ಷಾತ್ ಶ್ರೀನಾರಾಯಣರೂಪದಿಂದ ಅನಂತಾಸನ ಮಂದಿರವನ್ನು ಪ್ರವೇಶಿಸಿದನು. ಸಹಸ್ರಶಿರಗಳಿಂದ ಶ್ರೇಷ್ಠನಾದ ಆದಿಶೇಷನ ಮೇಲೆ ಮಂಡಿಸಿರುವ, ಅಮಿತ ಸೂರ್ಯಕಾಂತಿಯಂತೆ ಕಾಂತಿಯುಕ್ತನಾದ, ಶ್ರೀಲಕ್ಷ್ಮೀಮನೋಹರನಾದ, ಮಿಂಚಿನ ಗೊಂಚಲಿನಂತೆ ತಳತಳನೆ ಬೆಳಗುವ ಪೀತಾಂಬರಧಾರಿಯಾದ ಸರ್ವದಾ ಮುಕ್ತಬ್ರಹ್ಮಾದಿಗಳಿಂದ ಪೂಜಿತನಾದ ಶ್ರೀನಾರಾಯಣನು ಅಲ್ಲಿ ಮಲಗಿರಲು, ಶ್ರೀಕೃಷ್ಣನು ಅಲ್ಲಿಗೆ ಮೂಲರೂಪದಿಂದ ಪ್ರವೇಶಿಸಿದನು. ತರುವಾಯ ಆ ಮಹನೀಯನು ತಾನು ಮತ್ತು ಮೂಲರೂಪದ ಶ್ರೀನಾರಾಯಣ ಇಬ್ಬರೂ ಒಂದೇ ಎಂದು ಸ್ವರೂಪೈಕ್ಯದಿಂದ ಅಂದರೆ ಕೃಷ್ಣನಾದ ತಾನು ನಾರಾಯಣನಾಗಿಯೂ ನಾರಾಯಣನಾದವನೇ ಕೃಷ್ಣನಾಗಿಯೂ ತಾವಿಬ್ಬರೂ ಒಬ್ಬರೇ ಎಂದು ತೋರಿಕೊಟ್ಟು, ಆ ಭೂಸುರನ ಪುತ್ರರನ್ನೆತ್ತಿಕೊಂಡು ಬಂದನು. ಆ ಮಕ್ಕಳು ಬೇರಾರೂ ಅಲ್ಲ; ಹಿಂದೆ ಸುನಂದ-ನಂದ ಮುಂತಾದ ಹೆಸರಿನ ಶ್ರೀಹರಿಪರಮಾತ್ಮನ ಪಾರ್ಷದರಾಗಿದ್ದವರು. ಅಂದರೆ ದ್ವಾರಪಾಲಕರಾಗಿದ್ದವರು. ಜಯ-ವಿಜಯಾದಿ ಮುಕ್ತರಿಂದ ಹೋಗಲಾಗದ ಮುಕ್ತಸ್ಥಾನದ ದ್ವಾರಪಾಲಕರಾಗಿರುವ ಅವರು ಈಗ ಭೂಮಿಯಲ್ಲಿ ಆ ಬ್ರಾಹ್ಮಣನ ಪುತ್ರರಾಗಿ ಜನಿಸಿದ್ದರು. ತಾನೇ ಮಹಾವೀರನೆಂಬ ಅರ್ಜುನನ ಅಹಂಕಾರವನ್ನು ಹೋಗಲಾಡಿಸಲೂ, ಸರ್ವೋತ್ತಮನಾದ ಕೃಷ್ಣನು ಅರ್ಜುನನಲ್ಲಿ ತನಗಿರುವ ಅತಿಶಯ ಪ್ರೀತಿಯನ್ನು ಅವನಿಗೆ ತೋರಿಸಿ, ಬೋಧಿಸಲೂ ಈ ಲೀಲೆಯನ್ನು ತೋರಿದನು. ಲಕ್ಷಾಧಿಕ ಭಾನುದೀಪ್ತಿಸಮ ಕಾಂತಿರಾಜಿತನೂ, ಅಪ್ರಾಕೃತವೂ ಚೇತನಪ್ರಕೃತಿ ಸ್ವರೂಪವೂ ಆದ ಆ ಶ್ರೇಷ್ಠ ಅನಂತಾಸನದಿಂದ ಹೊರಟು, ಅರ್ಜುನ ಮತ್ತು ಭೂಸುರ ಸಹಿತನಾಗಿ ರಥಾರೂಢನಾಗಿ ದ್ವಾರಕಾಪುರಿಗೆ ಮರಳಿದನು. ಮತ್ತು ಅನಂತಾಸನದಿಂದ ತಾನು ಕರೆತಂದಿದ್ದ ಆ ಬ್ರಾಹ್ಮಣನ ನಾಲ್ವರು ಪುತ್ರರನ್ನೂ ಆ ಭೂಸುರನಿಗೆ ಕರುಣಿಸಿ ಕಳುಹಿಸಿಕೊಟ್ಟನು.

ಈ ವಿಚಾರವಾಗಿ ಶ್ರೀಹರಿವಂಶದಲ್ಲಿ ಹೀಗೆ ನಿರೂಪಿತವಾಗಿದೆ. "ಚತುರೋ ಬಾಲಕಾನ್ ಗೃಹ್ಯ ಬ್ರಾಹ್ಮಣಸ್ಯಾತ್ಮಜಾಂ ಸ್ತಥಾ । ಪ್ರದದೌ ಬ್ರಾಹ್ಮಣಾಯಾಶು ಪುತ್ರಾನ್ಸರ್ವಾನ್ ಜನಾರ್ದನಃ । ತ್ರಯಃಪೂರ್ವಂ ಹೃತಾ ಯೇ ಚ ಸದ್ಯೋಜಾತಶ್ಚ

29. ನಿರ್ಣಯಾಚಾರ್ಯರು "ಆಶಾಮುದೀಚೀಂ" ಅಂದರೆ ಉತ್ತರ ದಿಕ್ಕಿಗೆ ಹೊರಟನೆಂದು ಹೇಳಿದ್ದಾರೆ. ಭಾಗವತದಲ್ಲಿ "ಸಹೈವ ರಥಮಾದಾಯ ಪ್ರತೀಚೀಂ ದಿಶಮಾವಿಶತ್" ಅಂದರೆ ಪಶ್ಚಿಮ ದಿಕ್ಕಿಗೆ ಹೊರಟನೆಂದು ಉಕ್ತವಾಗಿದೆ. ಇವೆರಡಕ್ಕೂ ಮೇಲೆ ನೋಡಲು ವಿರೋಧವಿದ್ದಂತೆ ತೋರುತ್ತದೆ. ಉತ್ತರೋತ್ತರಗಮನವೂ ಊರ್ಧ್ವಗತಿಯೂ ಮುಕ್ತಿಯೆನಿಸಿದೆ. ಹೀಗೆ ಮುಕ್ತಿ ಎನಿಸಿದ ಅನಂತಾಸನ ಲೋಕವು ಉತ್ತರದಿಕ್ಕಿನಲ್ಲಿದೆ. ಆದ್ದರಿಂದ ನಿರ್ಣಯಾಚಾರ್ಯರು ಹೇಳಿದ್ದು ಯುಕ್ತವಾಗಿದೆ. ಭಾಗವತದ ಉಕ್ತಿಯೂ "ವ್ಯತ್ಯಾಸಃ ಪ್ರಾತಿಲೋಮ್ಯಂಚ" ಎಂಬ ವಚನವಿರುವುದರಿಂದ ದಿಕ್ಕಿನ ವ್ಯತ್ಯಾಸದಿಂದ ಉತ್ತರ ದಿಕ್ಕನ್ನೇ ಪಶ್ಚಿಮವೆಂದು ಹೇಳಿದೆ. ಪ್ರತ್ಯಕ್ ಪುರುಷನೆಂದರೆ ಸ್ವಮೂಲರೂಪಿ ಅನಂತಾಸನನೆಂಬ ನಾರಾಯಣನು ಪ್ರತ್ಯಕ್ ಎನಿಸುವನು. ಅವನ ಸಂಬಂಧಿ ದಿಕ್ಕು ಪ್ರತೀಚೀ ಎನಿಸುವುದು. ಈ ವ್ಯುತ್ಪತ್ತಿಯಿಂದ ಉದೀಚೀ (ಉತ್ತರ) ದಿಕ್ಕೇ ಪ್ರತೀಚೀ (ಪಶ್ಚಿಮ) ಎನಿಸಿಕೊಳ್ಳುವುದು. ಆದ್ದರಿಂದ ಪ್ರತೀಚೀ ಉದೀಚೀ ಎಂದೆರಡು ವಿಧವಾಗಿಯೂ ಪ್ರಯೋಗವಿರುವುದರಿಂದ ವಿರೋಧವಿಲ್ಲವೆಂದು ತಿಳಿಯಬೇಕು.

ಬಾಲಕಃ ।'' ಅಂದರೆ ಹಿಂದೆ ಅಪಹೃತರಾದವರು ಮೂರುಜನ, ಈಗ ಹುಟ್ಟಿದ ಕೂಡಲೇ ಅದೃಶ್ಯನಾದವನು ಒಬ್ಬ, ಹೀಗೆ ಅದೃಶ್ಯರಾಗಿದ್ದ ಬ್ರಾಹ್ಮಣನ ನಾಲ್ವರು ಕುಮಾರರನ್ನು ಕರತಂದು ಜನಾರ್ದನನು ಆ ಭೂಸುರನಿಗೆ ನೀಡಿದನು ಎಂದು ಹರಿವಂಶದಲ್ಲಿ ಉಕ್ತವಾಗಿದೆ.

ಯಾಗದೀಕ್ಷೆಯನ್ನು ಸ್ವೀಕರಿಸಿದ್ದ ಕೃಷ್ಣನು ಬ್ರಾಹ್ಮಣಪುತ್ರರನ್ನು ಕರತರಲು ಒಂದೂವರೆ ಮುಹೂರ್ತ ಕಾಲ ಅಂದರೆ ಮೂರುಘಳಿಗೆವರೆಗೆ ಯಾಗವನ್ನು ಬಿಟ್ಟು ಹೋಗಿ ಮತ್ತೆ ಬಂದು ಭಗವಂತನಾದ ತನಗೆ ಪ್ರತ್ಯವಾಯವಿಲ್ಲದಿದ್ದರೂ ಲೋಕ ಶಿಕ್ಷಣಕ್ಕಾಗಿ ಯಾಗ ಬಿಟ್ಟು ಹೋದ ದೋಷ ಪರಿಹಾರಾರ್ಥವಾಗಿ ಪ್ರಾಯಶ್ಚಿತ್ತವನ್ನು ಆಚರಿಸಿದವನಂತೆ ನಟಿಸಿ, ತರುವಾಯ ಯಾಗವನ್ನು ಪೂರೈಸಿದನು. ಅನಂತರ ಶ್ರೀಹರಿಯು ಯಾಗಕ್ಕಾಗಿ ಆಗಮಿಸಿದ್ದ ತನ್ನ ಕಿಂಕರರಾದ ಬ್ರಹ್ಮರುದ್ರಾದಿ ದೇವತೆಗಳನ್ನು ಪೂಜಿಸಿ ಅವರಿಗೆ ಹೊರಡಲನುಮತಿಯಿತ್ತು ತರುವಾಯ ಬ್ರಾಹ್ಮಣರನ್ನು ಪೂಜಿಸಿದನು.

ಅನಂತರ ಕೃಷ್ಣನು ಪುತ್ರ-ಮಿತ್ರ-ಕಳತ್ರ-ಬಾಂಧವಾದಿಗಳೊಂದೊಡಗೂಡಿ ಯಜ್ಞ ಮುಗಿದಿದ್ದರಿಂದ ಆಚರಣೀಯವಾದ ಅವಭೃತಸ್ನಾನವನ್ನು ಯಮುನಾ ನದಿಯಲ್ಲಿ ಆಚರಿಸಿ ದ್ವಾರಕೆಗೆ ಹಿಂದಿರುಗಿದಾಗ ದಂತವಕ್ರನು ಬಂದು ಶ್ರೀವಾಸುದೇವನನ್ನು ಅಡ್ಡಗಟ್ಟಿದನು. ವಿಧೂರಥನೆಂಬ ಸಹೋದರಸಹಿತನಾದ ದಂತವಕ್ರನನ್ನು ಕೃಷ್ಣನು ತಕ್ಷಣವೇ ಗದಾಪ್ರಹಾರದಿಂದ ಸಂಹರಿಸಿದನು. ವಿಧೂರಥನು ತಮಸ್ಸಿಗೆ ಹೋದನು. ದಂತವಕ್ರನಲ್ಲಿದ್ದ ಅಸುರನೂ ತಮಸ್ಸಿಗೆ ಹೋದನು. ಭಗವಂತನ ಪಾರ್ಷದನಾದ ವಿಜಯನು ಆ ಕೂಡಲೇ ಶ್ರೀಕೃಷ್ಣನ ಪಾದದಲ್ಲಿ ಆಶ್ರಯ ಪಡೆದನು. ಮುಂದೆ ಶ್ರೀಕೃಷ್ಣನು ವೈಕುಂಠಕ್ಕೆ ದಯಮಾಡಿಸಿದಾಗ ಶ್ರೀಕೃಷ್ಣನ ಪಾದಾಶ್ರಯದಲ್ಲಿ ಅಡಗಿದ್ದ ಅವನು ವಿಜಯರೂಪದಿಂದ ಹೊರಬಂದು ಸ್ವಸ್ವರೂಪವುಳ್ಳ ವಿಷ್ಣು ಪಾರ್ಷದನಾದ ವಿಜಯನಲ್ಲಿ ಐಕ್ಯನಾಗುವನು. ಅಂದರೆ ತನ್ನ ಮೂಲರೂಪವನ್ನು ಸೇರುವನು. ದಂತವಕ್ರನನ್ನು ಸಂಹರಿಸಿ ದ್ವಾರಕೆಗೆ ಬಂದಮೇಲೆ ಅರ್ಜುನನು ತಾವು ರಥದಲ್ಲಿ ಬ್ರಾಹ್ಮಣ ಸಹಿತರಾಗಿ ಹೋದಾಗ ಅಲ್ಲಿ ತಾನು ಕಂಡ ಅದ್ಭುತಗಳು ಏನೆಂದು ಶ್ರೀಕೃಷ್ಣನನ್ನು ಪ್ರಶ್ನಿಸಿದನು. ಆಗ ಕೃಷ್ಣನು ಇಂತೆಂದನು "ಅರ್ಜುನ! ನಾವಿರುವ ಈ ಸ್ಥಳವು ಜಂಬೂದ್ವೀಪವು. ಈ ಜಂಬೂದ್ವೀಪ ಮತ್ತು ಲವಣ ಸಮುದ್ರವೂ ಸಹ ಒಂದು ಲಕ್ಷಯೋಜನ ವಿಸ್ತೀರ್ಣವಾದುದು. ಪ್ಲಕ್ಷ ಮುಂತಾದ ಇತರ ಆರು ದ್ವೀಪಗಳು, ಇಕ್ಷು ಸುರಾದಿ ಆರು ಸಮುದ್ರಗಳೂ ಕೂಡ ಒಂದಕ್ಕಿಂತ ಒಂದು ಕ್ರಮವಾಗಿ ಎರಡುಪಟ್ಟು ಮೇಲೆ ಮೇಲೆ ವಿಸ್ತೀರ್ಣವಾಗಿವೆ. 64 ಲಕ್ಷ ಯೋಜನ ವಿಸ್ತೀರ್ಣವಾದ ಶುದ್ಧೋದಕ ಸಮುದ್ರವು ಸಮುದ್ರದ ಅರ್ಧದಕ್ಕಿಂತ ಹೆಚ್ಚಾದ ಅಂದರೆ ಮೂವತ್ತೆರಡು ಲಕ್ಷ ಯೋಜನದ ಆಳತೆಗಿಂತ ಅಧಿಕವಾಗಿದೆ. ಅಂದರೆ 64 ಲಕ್ಷ ಯೋಜನ ವಿಸ್ತಾರವಾದದ್ದು ಕನಕಮಯ ಸ್ಥಳವು. ಅಂದರೆ ಅದು (32+64=96) ಲಕ್ಷಯೋಜನ ವಿಸ್ತೀರ್ಣವಾದದ್ದು ಹೇಮಸ್ಥಲವು. ಅದು ಹೊರಭಾಗದಲ್ಲಿ ರತ್ನಮಯವಾದುದ್ದು. ಅರ್ಥಾತ್ ಹೇಮಸ್ಥಲವು ರತ್ನಖಚಿತವಾದುದು. ಇವೆಲ್ಲವೂ 'ಲೋಕ'ವೆಂದು ಖ್ಯಾತವಾಗಿವೆ. ಈ 'ಲೋಕ'ಕ್ಕಿಂತ ಅಂಧಃತಮಸ್ಸು ಎರಡು ಪಟ್ಟು ಅಧಿಕವಾಗಿದೆ.

ಗುಂಡಾಗಿರುವ ಅಂತ್ಯಸಮುದ್ರದ ಎರಡು ಭಾಗಗಳನ್ನು ಸೇರಿಸಿದರೆ 128 ಲಕ್ಷಯೋಜನ ಪರಿಮಾಣವುಳ್ಳದ್ದಾಗುತ್ತದೆ. ಅಂತ್ಯಸಮುದ್ರದ ಆಳತೆಯ ಅರ್ಧಭಾಗ 64 ಲಕ್ಷಯೋಜನ ಮತ್ತು 128 ಲಕ್ಷವೂ ಮತ್ತು ಅದಕ್ಕೆ ಸ್ವಲ್ಪ ಹೆಚ್ಚು ಸಂಖ್ಯೆ ಸೇರಿಸಿದರೆ 42,28,000 ವಿಸ್ತೀರ್ಣವಾದದ್ದು "ಅರ್ಧಸ್ಥಲ"ವು. ಇದು 42 ಲಕ್ಷ 28 ಸಾವಿರ ಯೋಜನ ಪರಿಮಿತ-ವಾಗಿರುವುದರಿಂದ ಹೆಚ್ಚಾದುದು, "ಅರ್ಧಸ್ಥಲ"ವು. ಇದರ ಹೊರಮೈ ವಜ್ರಖಚಿತವಾದ ಸ್ಥಲದಿಂದ ಯುಕ್ತವಾಗಿರುವುದು. ಸುವರ್ಣಮಯವಾದದ್ದು. ಅದು ಅಂದರೆ "ಹೇಮಸ್ಥಲ"ವು 64 ಲಕ್ಷ ಯೋಜನದ ಆಳತೆಯುಳ್ಳದ್ದು. 42 ಲಕ್ಷ 28 ಸಾವಿರ ಯೋಜನ ಪರಿಮಿತವಾದದ್ದು "ವಜ್ರಖಚಿತಸ್ಥಳ"ವಾಗಿದೆ. ಈ ಎಲ್ಲಾ ದ್ವೀಪಗಳು, ಸಮುದ್ರಗಳೂ ಸೇರಿ ಒಟ್ಟು ಎರಡುಕೋಟಿ ಐವತ್ನಾಲ್ಕು ಲಕ್ಷಯೋಜನ ವಿಸ್ತೀರ್ಣವಾದದ್ದು. ಮತ್ತು ಸುವರ್ಣಮಯಸ್ಥಲವು 96 ಲಕ್ಷಯೋಜನ

ವಿಸ್ತೀರ್ಣವಾದದ್ದು. ಮತ್ತು ಸುವರ್ಣಮಯಸ್ಥಲವು 96 ಲಕ್ಷಯೋಜನ ವಿಸ್ತೀರ್ಣವಾದದ್ದು. ಹೀಗೆ ಇವೆಲ್ಲವೂ ಮೂರು ಕೋಟಿ ಐವತ್ತು ಲಕ್ಷ ಯೋಜನ ವಿಸ್ತಾರವಾದ ಪ್ರದೇಶಕ್ಕೆ ಲೋಕ ಎಂದು ಹೆಸರು. ಇದು ತಮಸ್ಸಿನಿಂದ ಒಳಗಿದೆ. ಈ ಲೋಕಕ್ಕಿಂತಲೂ ಅಂಧತಮಸ್ಸು ಎರಡುಪಟ್ಟು ದೊಡ್ಡದು. ಅಂದರೆ ಏಳು ಕೋಟಿ ಯೋಜನ ವಿಸ್ತೀರ್ಣವಾಗಿದೆ. ಕ್ರೂರ ಸ್ವಭಾವದವರೂ ಮಿಥ್ಯಾಜ್ಞಾನಾಸಕ್ತರೂ ಈ ಅಂಧಃತಮಸ್ಸಿನಲ್ಲಿ ಬೀಳುವರು. ಮೂರೂವರೆ ಕೋಟಿ ಯೋಜನ ವಿಸ್ತಾರವಾದ ಲೋಕಕ್ಕಿಂತ ಎರಡರಷ್ಟು ಹೆಚ್ಚಾದದ್ದು, ಅಂದರೆ ಲೋಕಕ್ಕಿಂತ ಅಂಧಃತಮಸ್ಸು ಏಳುಕೋಟಿ ಯೋಜನ ವಿಸ್ತಾರವಾಗಿರುವುದು. ಈ ಅಂಧತಮಸ್ಸಿಗಿಂತ ಎರಡು ಪಟ್ಟು ಹೆಚ್ಚಾದುದು. ಘನೋದಕವು. ಇದು ಹದಿಮೂರುಕೋಟಿತೊಂಭತ್ತೆಂಟು ಲಕ್ಷ ಯೋಜನ ವಿಸ್ತಾರವಾಗಿರುತ್ತದೆ. ಅರ್ಜುನ! ನೀನು ಕಂಡಿದ್ದು ಈ ಘನೋದಕದ ಕೊನೆಯ ಭಾಗದಲ್ಲಿರುವ ನನ್ನದಾದ 'ಅನಂತಾಸನ'ವೆಂಬ ಸ್ಥಾನವು. ಆ ಅನಂತಾಸನದಲ್ಲಿ ಸರ್ವದಾ ಮುಕ್ತಬ್ರಹ್ಮಾದಿ ದೇವತೆಗಳಿಂದ ಸೇವಿತನಾಗಿರುವ ಸರ್ವೋ-ತ್ತಮನಾದ ಪರಮಾತ್ಮನೇ ನಾನೆಂದು ತಿಳಿ!" ಎಂದು ಶ್ರೀಕೃಷ್ಣನು ಪಾರ್ಥನಿಗೆ ತಿಳಿಸಿದನು.

ಈಗ ಶ್ರೀನಿರ್ಣಯಾಚಾರ್ಯರು ಸುವರ್ಣಸ್ಥಲ ಮತ್ತು ಅಂಧತಮಸ್ಸಿನ ಮಧ್ಯದಲ್ಲಿರುವ ಸ್ಥಲದ ವಿಸ್ತಾರವನ್ನು ನಿರೂಪಿಸುವರು. ಲೋಕಾಲೋಕ ಪ್ರದೇಶವು ಐವತ್ತು ಲಕ್ಷ ಐವತ್ತು ಸಾವಿರ (50,50,000) ಯೋಜನ ವಿಸ್ತೀರ್ಣವಾದುದು. ಭಾಗವತದಲ್ಲಿ ಲೋಕಾಲೋಕಪ್ರದೇಶವು 50 ಲಕ್ಷ ಯೋಜನ ವಿಸ್ತೀರ್ಣವೆಂದು ಹೇಳಿರುವುದರಿಂದ ಇಲ್ಲಿ ಹೇಳಿರುವುದಕ್ಕೂ ಭಾಗವತೋಕ್ತಿಗೂ ವಿರೋಧ ಬರುವುದೆಂದು ಶಂಕಿಸಬಾರದು. ಸಾಮಾನ್ಯವಾಗಿ ಹೇಳುವ ದೃಷ್ಟಿಯಿಂದ ಭಾಗವತದಲ್ಲಿ ಹಾಗೆ ಉಕ್ತವಾಗಿದೆ. ದೃಷ್ಟಾಂತವಾಗಿ ಹೇಳುವುದಾದರೆ 10 ಯೋಜನಕ್ಕಿಂತ ವಿಸ್ತಾರವಾಗಿದ್ದರೂ ಒಂದು ಗ್ರಾಮವನ್ನು ಹತ್ತು ಯೋಜನ ವಿಸ್ತೀರ್ಣವಾಗಿದೆ ಎಂದೇ ಹೇಳುವ ಲೋಕ ವ್ಯವಹಾರ ಕಂಡುಬಂದಿದೆಯಷ್ಟೇ? ಆದ್ದರಿಂದ ಭಾಗವತದಲ್ಲಿ "ಲೋಕಾಲೋಕ ಪರ್ವತವು" 50 ಲಕ್ಷಯೋಜನ ವಿಸ್ತೀರ್ಣವೆಂದು ಹೇಳಿರುವುದು ತಪ್ಪಾಗಲಾರದು. ನಿರ್ಣಯ-ಕಾರರಾದರೋ ಇದ್ದುದನ್ನು ಇದ್ದಂತೆಯೇ ಅಂದರೆ ಸರಿಯಾದ ರೀತಿಯಲ್ಲೇ ಹೇಳಿರುವುದರಿಂದ ವಿರೋಧ ಬರು-ವುದಿಲ್ಲವೆಂದು ತಿಳಿಯಬೇಕು.

ವಜ್ರಖಚಿತ ಸ್ಥಲ ಮತ್ತು ಅಂಧಃತಮಸ್ಸು ಇವುಗಳ ಮಧ್ಯದಲ್ಲಿರುವ "ಲೋಕಾಲೋಕ ಪರ್ವತ"ದ ಅರ್ಧ-ಭಾಗದಲ್ಲಿ ಸೂರ್ಯನ ಸಂಚಾರವಿದೆ. ಉಳಿದ ಅರ್ಧಭಾಗದಲ್ಲಿ ಅಂಧಃತಮಸ್ಸು ಹತ್ತಿರದಲ್ಲಿರುವುದರಿಂದ ಅಲ್ಲಿ ತಮಸ್ಸೇ ಇರುತ್ತದೆ. ಆದ್ದರಿಂದಲೇ ಆ ಭಾಗಕ್ಕೆ "ಲೋಕಾಲೋಕ"ವೆಂದು ಹೆಸರು.

ಮೇರುಪರ್ವತದಿಂದ ನಾಲ್ಕು ದಿಕ್ಕುಗಳು, ಮೇಲೆ-ಕೆಳಗೆ ಬ್ರಹ್ಮಾಂಡದವರೆಗಿನ ವಿಸ್ತಾರವು ಇಪ್ಪತ್ತೈದು ಕೋಟಿ ಯೋಜನವೆಂದು ಉಕ್ತವಾಗಿದೆ.

ಜಂಬೂದ್ವೀಪದ ಮಧ್ಯದಲ್ಲಿಯೇ ಮೇರುಪರ್ವತವಿದೆ. ಮೇರು ಪರ್ವತದ ಸುತ್ತ ನಾಲ್ಕು ದಿಕ್ಕುಗಳಲ್ಲಿಯೂ ಜಂಬೂದ್ವೀಪವು 50 ಸಾವಿರ ಯೋಜನ ವಿಸ್ತೀರ್ಣವುಳ್ಳದ್ದಾಗಿದೆ. ಆದುದರಿಂದಲೇ ಪರ್ವತದಿಂದ ಅಂಧಃತಮಸ್ಸಿನವರೆಗೆ ಲೋಕಾಲೋಕ ಪರ್ವತದ ಪರಿಮಾಣವನ್ನು ಕೂಡಿಕೊಂಡು ನಾಲ್ಕುಕೋಟಿ ಯೋಜನ ವಿಸ್ತೀರ್ಣವಾಗುವುದು. ಅಂಧತಮಸ್ಸು ಆರುಕೋಟಿ ತೊಂಭತ್ತೊಂಭತ್ತು ಲಕ್ಷಯೋಜನ ವಿಸ್ತೀರ್ಣವಾದುದು. ಘನೋದಕವು ಹದಿಮೂರು ಕೋಟಿ ತೊಂಭತ್ತೆಂಟು ಲಕ್ಷ ಯೋಜನದಷ್ಟು ವಿಸ್ತಾರವಾಗಿದೆ. ಅನಂತಾಸನವು 3 ಲಕ್ಷ ಯೋಜನ ವಿಸ್ತಾರವಾಗಿದೆ. ಹೀಗೆ ಮೇರು-ಪರ್ವತವನ್ನು ಹಿಡಿದು ಬ್ರಹ್ಮಾಂಡ ಪರ್ಯಂತ ಇರುವ ಸ್ಥಳವು ಇಪ್ಪತ್ತೈದು ಕೋಟಿ ಯೋಜನ ವಿಸ್ತಾರವೆಂದು ತಿಳಿಯಬೇಕು.

ಈ ಬ್ರಹ್ಮಾಂಡವು ಜಲ, ಅಗ್ನಿ, ವಾಯು, ಆಕಾಶ, ಅಹಂಕಾರತತ್ತ್ವ, ಮಹತತ್ತ್ವ, ತಮೋಗುಣ, ರಜೋಗುಣ, ಸತ್ವಗುಣ – ಹೀಗೆ ಒಂಭತ್ತು ಆವರಣಗಳಿಂದ ಕ್ರಮವಾಗಿ ಹತ್ತುಗುಣ (ಪಾಲು) ಹೆಚ್ಚು ಪರಿಣಾಮಾಧಿಕ್ಯ ಯುಕ್ತವಾದವುಗಳಿಂದ ಆವೃತವಾಗಿವೆ. ಬ್ರಹ್ಮಾಂಡಾಂತರ್ಗತ ಪರಿಮಾಣಕ್ಕಿಂತ ಎರಡು ಪಟ್ಟು ಅಧಿಕವಾದುದು ಅಂಡ ಖರ್ಪರವು. ಇದೇ ಆವರಣ ಭೂಮಿಯು. ಭೂಮಿಗಿಂತ ಹತ್ತು ಪಾಲು ಜಲವೂ, ಜಲಕ್ಕಿಂತ ಹತ್ತುಪಟ್ಟು ತೇಜಸ್ಸು – ಈ ಮುಂತಾದ ಕ್ರಮದಿಂದ ತಿಳಿಯಬೇಕು. ಅರ್ಜುನ ಎಲ್ಲೆಡೆಗಳಲ್ಲಿಯೂ ವ್ಯಾಪ್ತನಾಗಿರುವ (ಅಂತರ್ಯಾಮಿಯಾಗಿರುವ) ನಾನು-ಕಾಲ, ಗುಣಗಳಿಂದಲೂ ನಾಶರಹಿತನಾಗಿದ್ದೇನೆ. ಎಣಿಸಲಸದಳವಲ್ಲದ ಅಂದರೆ ಅನಂತರೂಪಗಳುಳ್ಳವನಾಗಿದ್ದೇನೆ. ಅನಂತಾನಂತರೂಪಗಳಿದ್ದರೂ ಪರಸ್ಪರ ರೂಪಭೇದವಿಲ್ಲದವನಾಗಿದ್ದೇನೆ (ಅಂದರೆ ನನ್ನ ಅನಂತಾನಂತರೂಪಗಳಲ್ಲಿ ಒಂದು ರೂಪದಿಂದ ಮತ್ತೊಂದು ರೂಪಕ್ಕೆ ಭೇದವಿಲ್ಲವೆಂದು ಭಾವ). ನಾನು ಅನಂತ ಶಿರಸ್ಸು, ನೇತ್ರ, ಪಾದಕಮಲ, ಕರಾಬ್ಜಗಳಿಂದ ಯುಕ್ತನಾಗಿದ್ದೇನೆ.[30] ಅಂದರೆ ನಾನು ದ್ವಿಪಾದಗಳುಳ್ಳ ಚೇತನಾಚೇತನಾತ್ಮಕವಾದ ಸಮಸ್ತವನ್ನೂ ವ್ಯಾಪಿಸಿಕೊಂಡಿದ್ದೇನೆ. ಹೇ ಪಾರ್ಥ! ನೀನು ಮತ್ತು ಇತರರೆಲ್ಲರೂ ನನ್ನ ಅಧೀನರಾಗಿರುವಿರಿ. ನನ್ನ ಪ್ರಸಾದದಿಂದಲೇ ಬಲ, ಜಯ ಮತ್ತು ಸಮಸ್ತ ಗುಣಗಳೂ ನಿಮಗುಂಟಾಗುವುವು. ಸಕಲರೂ ನನ್ನ ಅಧೀನರಾದುದರಿಂದ ಅರ್ಜುನ ! ನೀನು ಆಶ್ಚರ್ಯಪಡಬೇಡ. 'ನಾನು ಜಯಿಸುತ್ತೇನೆ, ಜಯಗಳಿಸಿದ್ದೇನೆ' ಎಂದು ಅಹಂಕಾರಪಡಬೇಡ. ನನ್ನಲ್ಲಿಯೇ ಸದಾ ಮನವಿರಿಸಿ, ನನ್ನ ಭಕ್ತನೂ ನನ್ನ ಪರವಾಗಿ ಯಾಜಿಯಾಗು. ನನಗೇ ನಮಸ್ಕರಿಸು. ನೀನೆನಗೆ ಪ್ರಿಯನಾದುದರಿಂದ ನಿನಗೆ ಸತ್ಯವನ್ನು ಹೇಳುವೆನು ಕೇಳು, ನೀನು ನನ್ನನ್ನು ಹೊಂದುತ್ತೀಯೆ"[31] ಎಂದು ಕೃಷ್ಣನು ಹೇಳಲು ಅರ್ಜುನನು ಸರ್ವೋತ್ತಮನಾದ ಶ್ರೀಹರಿಗೆ ನಮಸ್ಕರಿಸಿ – "ಹೇ ದೇವ! ನನ್ನನ್ನು ಕ್ಷಮಿಸು" ಎಂದು ಪ್ರಾರ್ಥಿಸಿದನು.

ಪಾಂಡವರು ಅಚ್ಯುತನಾದ ಕೃಷ್ಣನಲ್ಲಿರುವ ಭಕ್ತ್ಯತಿಶಯದಿಂದ ನಮ್ರ ಬುದ್ಧಿಯುಳ್ಳವರಾಗಿ ಬ್ರಹ್ಮರುದ್ರಾದಿಗಳಿಗೆ ನಿಯಾಮಕನಾದ ಶ್ರೀರುಕ್ಮಿಣೀ ಜಾನಿಯ ಅಪ್ಪಣೆಯಂತೆ ಅವನಿಂದ ಬಹುಮಾನಿತರಾಗಿ ಕೆಲತಿಂಗಳುಗಳ ಕಾಲ ದ್ವಾರಾವತಿಯಲ್ಲಿ ವಾಸ ಮಾಡಿ ನಂತರ ಇಂದ್ರಪ್ರಸ್ಥಕ್ಕೆ ಪ್ರಯಾಣ ಬೆಳೆಸಿದರು.

ಒಂದು ದಿನ ಇಂದ್ರಪ್ರಸ್ಥದಲ್ಲಿ ಧರ್ಮರಾಜನು ಅನುಜರಿಂದೊಡಗೂಡಿ ಸಭೆಯಲ್ಲಿ ಕುಳಿತಿರುವಾಗ ಅಲ್ಲಿಗೆ ಬಂದ ದೇವರ್ಷಿ ನಾರದರು ಇಂದ್ರಸಭೆಯ ವಿಚಾರವನ್ನು ಹೇಳಿದಾಗ ಧರ್ಮರಾಜನು "ಸುರಮುನಿಗಳೇ! ಹರಿಶ್ಚಂದ್ರನು ಇಂದ್ರಸಭೆಯಲ್ಲಿರುವುದಾಗಿ ಹೇಳಿದಿರಿ. ಅವನು ಇಂದ್ರಸಭೆಯನ್ನು ಹೇಗೆ ಪಡೆದನು? ನನ್ನ ಜನಕನಾದ ಪಾಂಡು ಮಹಾರಾಜನಿಗೇಕೆ ದೇವಸಭೆಯು ಲಭಿಸಲಿಲ್ಲ? ತಿಳಿಸಿರಿ. ಸ್ವಾಮಿ, ನೀವು ಅನೇಕ ವಿಚಾರಗಳನ್ನು ಹೇಳಿದಿರಿ. ನಾನು ನಿಮ್ಮಿಂದ ಅರಿತುದನ್ನು ವಿಜ್ಞಾಪಿಸುತ್ತೇನೆ. ಕೇಳಿರಿ. ನೀವು ಭೂಮಿಯಿಂದ ಅಂತರಿಕ್ಷವು ಒಂದು ಲಕ್ಷ ಯೋಜನ ಉನ್ನತವಾದುದೆಂದು ಹೇಳಿದಿರಿ. ವಿಮಾನ ಪಂಕ್ತಿಗಳಿಂದ ಸಹಿತವಾದ ಸ್ವರ್ಗವು ಭೂಮಿಯಿಂದ 50 ಲಕ್ಷ ಯೋಜನ ಎತ್ತರವುಳ್ಳದ್ದೆಂದು ತಿಳಿಸಿದಿರಿ. ಅಂತರಿಕ್ಷ-ಸ್ವರ್ಗಲೋಕವೂ ಸಹ ಕೋಟಿ ಯೋಜನ ವಿಸ್ತೀರ್ಣವಾದುದು. ಹೀಗೆ ಕ್ರಮವಾಗಿ ಮಹರ್ಲೋಕ, ಜನಲೋಕ, ತಪೋಲೋಕಗಳು ಹೆಚ್ಚಾದ ಅರ್ಧಪಟ್ಟು ವಿಸ್ತಾರವಾದವು. ಅಂದರೆ ಸ್ವರ್ಗಲೋಕಕ್ಕಿಂತ 25 ಲಕ್ಷಯೋಜನ ಪರಿಮಾಣಾಧಿಕವಾದುದು. ಮಹರ್ಲೋಕದ ಆಳತೆಗಿಂತ ಅರ್ಧ ಅಧಿಕವಾದದ್ದು ಜನಲೋಕ. ಇದರಂತೆ ತಪೋಲೋಕವೂ ಜನಲೋಕದಕ್ಕಿಂತ ಅರ್ಧ ಅಧಿಕವಾಗದುದು. ಅಂದರೆ ಸ್ವರ್ಗಲೋಕದಿಂದ ಮಹರ್ಲೋಕವು 75 ಲಕ್ಷ

30. ಇಲ್ಲಿ ಶ್ರೀಕೃಷ್ಣನು ತಾನು ಪುರುಷಸೂಕ್ತ ಪ್ರತಿಪಾದ್ಯನೆಂದು ತಿಳಿಸುತ್ತಿದ್ದಾನೆ ಎಂದು ತಿಳಿಯಬೇಕು.

31. ಗೀತೋಪದೇಶಕಾಲದಲ್ಲಿಯೂ ಭಗವಾನ್ ಶ್ರೀಕೃಷ್ಣನು ಅರ್ಜುನನಿಗೆ ಇದನ್ನೇ ಉಪದೇಶಿಸಿದ್ದಾನೆ. "ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು" ಎಂಬುದನ್ನು ಸ್ಮರಿಸಿರಿ.

ಯೋಜನ ಎತ್ತರವಾಗಿದೆ. ಮಹರ್ಲೋಕದಿಂದ ಮೇಲೆ ಜನಲೋಕವು ಒಂದು ಕೋಟಿ ಹನ್ನೆರಡೂವರೆ ಲಕ್ಷಯೋಜನ ಎತ್ತರವಾದದ್ದು. ಜನಲೋಕದಿಂದ ತಪೋಲೋಕವು ಒಂದು ಕೋಟಿ ಅರವತ್ತೆಂಟು ಲಕ್ಷ ಇಪ್ಪತ್ತೈದು ಸಾವಿರ ಯೋಜನ ಎತ್ತರವಾಗಿದೆ. ಮಹರ್ಲೋಕ, ಜನಲೋಕ, ತಪೋಲೋಕ (ಸಮೂಹ)ಗಳು ಐವತ್ತು ಕೋಟಿ ವಿಸ್ತೀರ್ಣವಾಗಿದೆ. ಅಂತರಿಕ್ಷಾದಿ ಐದು ಲೋಕಗಳನ್ನೂ ಸೇರಿಸಿದರೆ ಎಷ್ಟು ಪರಿಮಾಣವಾಗುವುದೋ ಅಂತಹ ಅಂತರಿಕ್ಷಾದಿ ಐದುಲೋಕಗಳಷ್ಟು ಆಳತೆಯಲ್ಲಿ ಎತ್ತರವಾದದ್ದು ಸತ್ಯಲೋಕವು. ಈ ಸತ್ಯಲೋಕದಲ್ಲಿ ಚತುರಾನನ ಬ್ರಹ್ಮದೇವರು ಕಂಗೊಳಿಸುವರು. ಆದ್ದರಿಂದ ಅದಕ್ಕೆ ಬ್ರಹ್ಮಲೋಕವೆಂದೂ ಹೆಸರಿದೆ. ಶಶ್ವದೇಕ ಪ್ರಕಾರವಾದ (ಯಾವಾಗಲೂ ಒಂದೇ ರೀತಿಯಲ್ಲಿರುವ) ಶ್ರೀ ವೈಕುಂಠ ಲೋಕವು ಸತ್ಯಲೋಕಕ್ಕಿಂತ ಎರಡು ಪಾಲಿನಷ್ಟು ಎತ್ತರವಾಗಿರುವುದು. ಮೂರುಲೋಕಗಳೂ ಸೇರಿ ಐವತ್ತು ಕೋಟಿ ಯೋಜನ ವಿಸ್ತಾರವಾಗಿದೆ. ಬೇರೆ ಬೇರೆಯಾಗಿ ಗಣನೆಮಾಡಿದರೆ, ಒಂದೊಂದು ಲೋಕವೂ ಹದಿನಾರುಕೋಟಿ ಎಪ್ಪತ್ಮೂರು ಲಕ್ಷ ಯೋಜನ ವಿಸ್ತಾರವಾಗಿದೆ. ಮಹರ್ಲೋಕಾದಿಗಳಂತೆಯೇ ಸತ್ಯಲೋಕಾದಿಗಳ ವಿಸ್ತಾರವೆಂದು ತಿಳಿಯತಕ್ಕದ್ದು.

ಭುವರ್ಲೋಕ ಮುಂತಾದ ಆರು ಲೋಕಗಳು ಸುಖವಿಷಯದಲ್ಲಿ ಶತಗುಣಾಧಿಕಗಳಾಗಿವೆ. ಅಸಂಖ್ಯಾತರಾದ ಜನರಿಂದ ನಿಬಿಡವಾಗಿದ್ದರೂ ಆ ಲೋಕಗಳು ಭಗವದಿಚ್ಛೆಯಿಂದ ಇನ್ನೂ ಅವಕಾಶವುಳ್ಳದ್ದಾಗಿದ್ದು, ಅಲೌಕಿಕಗಳಾದುದರಿಂದ ಎಂದಿಗೂ ಅವು ಪೂರ್ಣವಾಗಿ ತುಂಬುವುದಿಲ್ಲ. ಆ ಲೋಕಗಳು ಅಪೇಕ್ಷಿಸುವ ಎಲ್ಲ ಸುಖಗಳಿಂದ ಪೂರ್ಣವಾಗಿದ್ದು, ಅಲೌಕಿಕರಾದ ಸ್ತ್ರೀಪುರುಷರಿಂದ ಶೋಭಿಸುವುವು. ಇದರಂತೆ ಅಂದರೆ ಅಂತರಿಕ್ಷಾದಿ ಲೋಕಗಳಂತೆಯೇ ಅಲೌಕಿಕರತ್ನಗಳಿಂದ ಸಮಾಕೀರ್ಣವಾದ ಏಳು ಪಾತಾಳಲೋಕಗಳಿವೆ. ಆ ಪಾತಾಳ ಲೋಕಗಳ ಕೆಳಗಡೆ ಮಹಾಬಲಶಾಲಿಗಳಾದ ಶೇಷದೇವರಿದ್ದಾರೆ. ಅವರು ಎಲ್ಲವನ್ನು ಧರಿಸಿದ್ದಾರೆ. ಈ ಕೆಳಭಾಗದ ಸಪ್ತಲೋಕಗಳಲ್ಲಿರುವ ಜನರು ತಾವು ಅಪೇಕ್ಷಿಸಿದ ಭೋಗಗಳನ್ನು ಪಡೆಯುತ್ತಾ ಅಸಂಖ್ಯ ಸಹಸ್ರಾರು ವರ್ಷ ಆಯುಸ್ಸುಳ್ಳವರಾಗಿದ್ದಾರೆ ಮತ್ತು ಅಲ್ಲಿರುವ ಸ್ತ್ರೀಪುರುಷರೆಲ್ಲರೂ ರೂಪಸೌಂದರ್ಯ ಶೋಭಿತರಾಗಿದ್ದಾರೆ.

ಸರ್ವೋತ್ತಮನಾದ ಶ್ರೀಮನ್ನಾರಾಯಣನೇ ಸಮಸ್ತ ಲೋಕಗಳಿಗೂ ರಕ್ಷಕನಾಗಿದ್ದಾನೆ. ವಿಷ್ಣುಲೋಕವಿರಾಜಿತನಾದ ಶ್ರೀಹರಿಪರಮಾತ್ಮನನ್ನು ಸಕಲ ಮುಕ್ತಜೀವರೂ ಸರ್ವದಾ ಸೇವಿಸುವರು. ವೇದಾಭಿಮಾನಿಗಳಾದ ದೇವತೆಗಳೂ ಇನ್ನಿತರ ಸಮಸ್ತ ದೇವತೆಗಳೂ ಶ್ರೀಹರಿಯ ಕಿಂಕರರು. ಮುನಿಗಳು ಮತ್ತು ಹರಿಶ್ಚಂದ್ರರಾಜನೂ ಸಹ ಇಂದ್ರನ ಸೇವಕರು. ಹೇ ನಾರದಮುನಿಗಳೇ, ನಿಖಿಲ ರಾಜರುಗಳೂ ನನ್ನ ಪಿತನಾದ ಪಾಂಡುರಾಜನೂ ಕೂಡ ಯಮಧರ್ಮರಾಜನನ್ನು ಅನುಸರಿಸಿಕೊಂಡಿರುವ ಸೇವಕರು. ಈ ಎಲ್ಲ ರಾಜರು ಮತ್ತು ಯಮಧರ್ಮರಾಜನಿಂದಲೂ ಪೂಜಿತನಾದ ಶ್ರೀರಾಮ- ಚಂದ್ರನು ಯಮಸಭೆಯಲ್ಲಿ ಸೇವಿತನಾಗಿ ವಿರಾಜಿಸುವನು. ದುಷ್ಟಶಿಕ್ಷಕನಾದ ವಾಮನರೂಪಿ ಶ್ರೀಹರಿಯು ಇಂದ್ರನಿಂದ ಸೇವೆ ಕೈಗೊಳ್ಳುವನು. ಇದರಂತೆ ಭಗವಂತನ ಎಲ್ಲ ಅವತಾರ ಸ್ವರೂಪಗಳೂ ಸರ್ವದಾ ಕಮಲಸಂಭವನಾದ ಬ್ರಹ್ಮದೇವನಿಂದ ಸೇವಿತವಾಗಿವೆ. ಸರ್ಪಗಳೆಲ್ಲವೂ ವರುಣನನ್ನು ಅನುಸರಿಸಿ ಅವನ ಕಿಂಕರರಾಗಿವೆ. ವರುಣ ಸಭೆಯಲ್ಲಿ ಮತ್ಸ್ಯರೂಪಿ ಪರಮಾತ್ಮನು ವರುಣನಿಂದಾರಾಧ್ಯನಾಗಿದ್ದಾನೆ.

ಕುಬೇರನನ್ನು ಆಶ್ರಯಿಸಿಕೊಂಡಿರುವ ಗಂಧರ್ವರು ಕುಬೇರನ ಭೃತ್ಯರು. ಕಲ್ಕಿರೂಪಿಯಾದ ಭಗವಂತನು ಕುಬೇರನ ಸಭೆಯಲ್ಲಿ ಅವನಿಂದ ಪೂಜಿತನಾಗಿರುವನು. ಕ್ರೂರಭೂತಗಣಗಳು ರುದ್ರದೇವನ ಭೃತ್ಯರಾದವರೆಂದು ತಿಳಿಯಬೇಕು. ಅಂತಹ ರುದ್ರದೇವನು ಸಿಂಹರೂಪಿಯಾದ ಶ್ರೀಹರಿಯನ್ನು ಸೇವಿಸುವನು. ಎಲೈ ಪಾಪರಹಿತರಾದ ನಾರದಮುನಿಗಳೇ! ಪರಮಾತ್ಮನು ಸರ್ವದಾ ಉಪಾಸ್ಯನೆಂದು ನೀವು ಹೇಳಿದ್ದೀರಿ. ದೇವತೆಗಳ ಲೋಕ, ಅಲೌಕಿಕವಾದ ಸಮಸ್ತ ರತ್ನಮಯ ಸ್ಥಳಗಳ ವಿಚಾರವಾಗಿಯೂ ತಿಳಿಸಿದ್ದೀರಿ. ಆದರೆ ಹರಿಶ್ಚಂದ್ರ ರಾಜನಿಗೆ ಇಂದ್ರಲೋಕವು ದೊರಕದಂತೆ ನನ್ನ ತಂದೆಗೇಕೆ ಅದು

ಲಭಿಸಲಿಲ್ಲ? ಎಂದು ನನಗೆ ಸಂಶಯವು ಉಂಟಾಗಿದೆ. ದಯಮಾಡಿ ಇದಕ್ಕೆ ಕಾರಣವೇನು? ತಿಳಿಸಿರಿ ಎಂದು ಧರ್ಮ-ರಾಜನು ನಾರದರನ್ನು ಪ್ರಶ್ನಿಸಿದನು. ಆಗ ನಾರದರು ಧರ್ಮರಾಜನಿಗೆ ಹೀಗೆ ಹೇಳಿದರು.

ಧರ್ಮರಾಜ, ನಾನು ಹೇಳುವುದನ್ನು ಕೇಳು ಹರಿಶ್ಚಂದ್ರ ಮಹಾರಾಜನು ಅಶ್ವಮೇಧಯಜ್ಞವನ್ನಾಚರಿಸಿ ಅದರ ಪ್ರಭಾವದಿಂದ ಇಂದ್ರಲೋಕವನ್ನು ಪಡೆದು ಅಲ್ಲಿ ಸುಖಿಸುತ್ತಿದ್ದಾನೆ. ಇದನ್ನು ಅರಿತ ನಿನ್ನ ತಂದೆಯು "ನಾರದ ಮುನೀಂದ್ರ! ನೀವು ಸಹೋದರರಾದ ಭೀಮಾದಿಗಳಿಂದ ಪೂಜಿತನೂ, ಶ್ರೀಕೃಷ್ಣನಿಂದ ಪಾಲಿತನೂ ಆಗಿರುವ ನನ್ನ ಜ್ಯೇಷ್ಠಕುಮಾರನಾದ ಯುಧಿಷ್ಠಿರನು ನನಗಾಗಿ ಅಶ್ವಮೇಧಯಾಗವನ್ನು ಆಚರಿಸುವಂತೆ ಹೇಳಿರಿ. ಅದು ಅವನಿಗೆ ಅಸಾಧ್ಯಕಾರ್ಯವಾಗಲಾರದು ಎಂದು ನಿನಗೆ ತಿಳಿಸುವಂತೆ ಹೇಳಿದ್ದಾನೆ. ಆದುದರಿಂದ ನೀವು ಅಶ್ವಮೇಧಯಾಗವನ್ನು ನೆರವೇರಿಸಿ ನಿಮ್ಮ ಪಿತನಿಗೆ ಸ್ವರ್ಗಲೋಕ ಪ್ರಾಪ್ತಿಯಾಗುವಂತೆ ಮಾಡಿರಿ" ಎಂದು ಹೇಳಿದರು.

ಜಿತೇಂದ್ರಿಯನೂ, ಯಮಸುತನೂ, ಧರ್ಮಜ್ಞನೂ ಆದ ಯುಧಿಷ್ಠಿರನು ನಾರದರ ವಚನವನ್ನಾಲಿಸಿ ರಾಜಸೂಯ ಯಾಗವನ್ನು ಮಾಡಲು ಯೋಚಿಸಿದನು. ಧರ್ಮರಾಜನ ಸಹೋದರರೆಲ್ಲವೂ ರಾಜಸೂಯ ಯಾಗವನ್ನು ಮಾಡುವುದು ಉತ್ತಮಕಾರ್ಯವೆಂದು ಅಣ್ಣನನ್ನು ಪ್ರೋತ್ಸಾಹಿಸಿದರು. ಭೀಮಾದಿ ಅನುಜರಿಂದ ಪ್ರೇರಿತನಾದ ಧರ್ಮನಂದನನು ಶ್ರೀಕೃಷ್ಣನೊಡನೆ ಆಲೋಚಿಸಿ ತೀರ್ಮಾನಿಸಬೇಕೆಂದು ಬಯಸಿ ಶ್ರೀಕೃಷ್ಣನನ್ನು ಕರೆತರಲು ರಥವನ್ನೂ ಸಾರಥಿಯನ್ನೂ ಕಳುಹಿಸಿದನು.

ಅದೇ ಸಮಯದಲ್ಲಿ ಜರಾಸಂಧನಿಂದ ಬಂಧಿತರಾದ ಅನೇಕ ರಾಜಕುಲೋತ್ಪನ್ನರಾದ ರಾಜಕುವರಿಯರ ತಂದೆ ಮತ್ತು ಸಹೋದರರು ಒಬ್ಬ ದೂತನನ್ನು ಶ್ರೀಮಾಧವನ ಬಳಿಗೆ ಕಳುಹಿಸಿದರು. ಆ ದೂತನು ದ್ವಾರಕೆಗೆ ಬಂದು ಶ್ರೀಕೃಷ್ಣನಿಗೆ ಅಭಿವಂದಿಸಿ "ಪ್ರಭು, ನಿಮಗೆ ತಮ್ಮ ಕುವರಿಯರನ್ನು ಲಗ್ನ ಮಾಡಿಕೊಡಬೇಕೆಂದಿರುವುದರಿಂದ ನಿಮಗೆ ಭಾವಿ ಮಾವ ಹಾಗೂ ಮೈದುನರೇ ಆಗಿರುವ ರಾಜರನ್ನೂ ಅವರ ಪುತ್ರರನ್ನೂ ಮಗಧಾಧಿಪನಾದ ಜರಾಸಂಧನು ಪರ್ವತಲಿಂಗದಲ್ಲಿ ಬಂಧಿಸಿಟ್ಟಿದ್ದಾನೆ. ಜರಾಸಂಧನು ಯುದ್ಧದಲ್ಲಿ ಅವರನ್ನು ಜಯಿಸಿ ಬಂಧಿಸಿಟ್ಟಿದ್ದಾನೆ. ದೇವ! ಸರ್ವಸಮರ್ಥನಾದ ನೀನಿರುವಾಗ ಆ ಜರಾಸಂಧನು ರಾಜ-ರಾಜಕುವರರಾದ ಆ 22800 ಜನರನ್ನು ತ್ರಿನೇತ್ರನಾದ ರುದ್ರದೇವನ ಯಾಗ ನಿಮಿತ್ತವಾಗಿ ಬಲಿಕೊಡಲು ನಿಶ್ಚಯಿಸಿದ್ದಾನೆ. ಸ್ವಾಮಿ, ನೀನು ಜರಾಸಂಧನನ್ನು ಸಂಹರಿಸಿ ಅವರನ್ನು ಬಿಡಿಸು. ವೈದಿಕ ಕರ್ಮವಲ್ಲದ ವೇದೋಕ್ತಕ್ರಮ ವಿರುದ್ಧವಾದ ಆ ಯಜ್ಞವನ್ನು ಧರ್ಮರಕ್ಷಣೆಗಾಗಿ ನಾಶಮಾಡು" ಎಂದು ಪ್ರಾರ್ಥಿಸಿದನು. ಅದೇ ಸಮಯಕ್ಕೆ ಸರಿಯಾಗಿ ಧರ್ಮಜನು ಕಳಿಸಿದ ಸಾರಥಿಯು ರಥದೊಡನೆ ಬಂದು ತಾನು ಬಂದ ಕಾರಣವನ್ನು ಕೃಷ್ಣನಿಗೆ ಅರುಹಿದನು. ಶ್ರೀ ಯಾದವಕುಲಭೂಷಣನು ರಾಜರದೂತನಿಗೆ ತಾನು ಅವರನ್ನು ರಕ್ಷಿಸುವುದಾಗಿ ಭರವಸೆಯಿತ್ತು ಕಳುಹಿಸಿ ಸಾರಥಿಯೊಡನೆ ರಥದಲ್ಲಿ ಕುಳಿತು ಪಾಂಡವರ ಬಳಿಗೆ ಬಂದನು.

ಆಗಮಿಸಿದ ಕೃಷ್ಣನನ್ನು ಪಾಂಡವರು ಸ್ವಾಗತಿಸಿ ಪೂಜಿಸಿದರು. ನಂತರ ಧರ್ಮರಾಜನು ರಾಜಸೂಯ ಯಾಗದ ಬಗ್ಗೆ ಪ್ರಸ್ತಾಪಿಸಿ ಸಲಹೆ ನೀಡುವಂತೆ ಕೋರಿದನು. ಆಗ ರುಕ್ಮಿಣೀ ರಮಣನು ಜಗತ್ತಿಗೆ ಸುಖಪ್ರದವಾದ ಮಾತನ್ನು ಹೇಳಿದನು. ಶಾಸ್ತ್ರಗಳಲ್ಲಿ ಹೇಳಿರುವ ವಿಧಾನದಿಂದ ಸಕ್ರಮವಾಗಿ ರಾಜಸೂಯ ಯಾಗವನ್ನಾಚರಿಸಿದಲ್ಲಿ ಬ್ರಹ್ಮಪದಕ್ಕೆ ಯೋಗ್ಯನಾದ ಋಜುಗಣಸ್ಥ ಜೀವನು ಬ್ರಹ್ಮಪದವನ್ನು ಪಡೆಯುವನು. ಬ್ರಹ್ಮಪದಕ್ಕೆ ಅನರ್ಹರಾದವರಿಗೆ ಅದು ಲಭಿಸಲಾರದು.

ನಿರ್ಣಯಾಚಾರ್ಯರು ಈಗ ಬ್ರಹ್ಮಪದವಿಗೆ ಅರ್ಹರಲ್ಲದ ಅಯೋಗ್ಯರು ಆಚರಿಸಿದ ಯಜ್ಞಫಲವನ್ನು ನಿರೂಪಿಸುತ್ತಾರೆ.

ಬ್ರಹ್ಮದೇವರ ಮಹಾಪದವಿಯಲ್ಲಿ ಅಯೋಗ್ಯವಾದ, ಅಂದರೆ ದೇವ-ಚಕ್ರವರ್ತಿ ಮುಂತಾದ ಗಣದವರನ್ನು ಯಜ್ಞದ ಯಜಮಾನನನ್ನಾಗಿ ಮಾಡಿ ಆಚರಿಸಲ್ಪಟ್ಟ ರಾಜಸೂಯ ಯಾಗವು ಯಜ್ಞ ಮಾಡುವವನನ್ನು ಅವನಿಗೆ ಆ ಯಜ್ಞಾಚರಣೆ ಮಾಡುವ ಶಕ್ತಿಯಿಲ್ಲದಿರುವ ಕಾರಣ ಆ ಯಜ್ಞವನ್ನಾಚರಿಸದಿದ್ದಲ್ಲಿ ಮುಕ್ತರನ್ನಾಗಿಯೂ, ಸಮಾನಜ್ಞಾನ ಭಕ್ತ್ಯಾದಿ ಗುಣ-ವುಳ್ಳವನನ್ನಾಗಿಯೂ, ಅಂದರೆ ಪ್ರತಿಕಲ್ಪದಲ್ಲಿರುವ ಮುಕ್ತರ ಗಣಕ್ಕಿಂತಲೂ ಶ್ರೇಷ್ಠನನ್ನಾಗಿ, ಸತ್ಕಾರಯೋಗ್ಯನನ್ನಾಗಿ ಮಾಡುತ್ತದೆ. ಮುಕ್ತಿಯನ್ನು ಪಡೆಯುವುದಕ್ಕಿಂತ ಅಥವಾ ಮರಣಕ್ಕಿಂತ ಮೊದಲು ತನ್ನ ಸಮಾನಯೋಗ್ಯತೆಯುಳ್ಳ ಗಣದಿಂದ ಉತ್ತಮಲೋಕವನ್ನು ಹೊಂದುವಂತೆ ಮಾಡುತ್ತದೆ. ಮತ್ತು ಸಮಾನಿಕಾದಿ ಪದದಲ್ಲಿರುವವರಿಗಿಂತ ಉತ್ತಮವಾದ ಇಂದ್ರಾದಿಪದದಲ್ಲಿರುವಂತೆ ಮಾಡುವುದು. ಆದುದರಿಂದಲೇ ತ್ರಿಶಂಕು ಪುತ್ರನಾದ ಹರಿಶ್ಚಂದ್ರನು ತನ್ನ ಯೋಗ್ಯತೆಗೆ ಸರಿ-ಸಮಾನರಾದ ರಾಜರುಗಳನ್ನು ಮೀರಿದ್ದಾನೆ. ಅಂದರೆ ಯಮಧರ್ಮನ ಲೋಕದಲ್ಲಿರುವ ರಾಜರನ್ನೂ ಅತಿಕ್ರಮಿಸಿ ಸ್ವರ್ಗಲೋಕದಲ್ಲಿ ವಿರಾಜಿಸಿದ್ದಾನೆ.

ಧರ್ಮನಂದನನಿಗೆ ಶ್ರೀಕೃಷ್ಣ ಮುಂದುವರೆದು ಹೇಳಹತ್ತಿದನು- "ಧರ್ಮರಾಜ! ನಿನ್ನ ತಂದೆಯಾದ ಪಾಂಡುರಾಜನು ದೇವಾಂಶಸಂಭೂತನಾಗಿದ್ದರೂ ರಾಜಸೂಯ ಯಾಗವನ್ನು ಮಾಡದ ವಿನಃ ಹರಿಶ್ಚಂದ್ರನಿಗಿಂತ ಉತ್ತಮ ಸ್ಥಾನವನ್ನು ಪಡೆಯಲು ಸಮರ್ಥನಾಗಲಾರ, ನಿನ್ನ ಪಿತನು ಏಕೆ ಸಮರ್ಥನಾಗಬಾರದು? ಎಂದರೆ ಅದಕ್ಕೆ ಕಾರಣವಿದೆ. ಅದನ್ನು ಹೇಳುವೆನು ಕೇಳು. ಹಿಂದೊಮ್ಮೆ ಶಚೀಪತಿಯಾದ ಇಂದ್ರನು ಬಂದಾಗ, ತಪೋನಿರತನಾಗಿದ್ದ, ಮರುತ್ತುಗಳಲ್ಲಿ ಶ್ರೇಷ್ಠನಾದ ನಿನ್ನ ತಂದೆಯಾದ ಪಾಂಡುರಾಜನು ಎದ್ದುನಿಂತು ಗೌರವಿಸಲಿಲ್ಲ. ಅದರಿಂದ ಕುಪಿತನಾದ ದೇವೇಂದ್ರನು "ನೀನು ಮಾನವದೇಹವನ್ನು ಹೊಂದು. ನೀನು ಮಾನವನಾಗಿ ಹುಟ್ಟಿ ನಂತರ ಮೃತನಾದ ಮೇಲೆ ನೀನು ಮತ್ತೆ ಸ್ವರ್ಗಲೋಕವನ್ನು ಪಡೆಯಲಾರೆ. ಒಂದು ವೇಳೆ ಪುತ್ರಾದಿಗಳ ಗುಣ ಮೊದಲಾದ ಕಾರಣದಿಂದ ಸ್ವರ್ಗವನ್ನು ಪಡೆದರೂ ಅಲ್ಲಿ ನಿನ್ನ ಮೂಲ ಮರುತ್ಸ್ವರೂಪವನ್ನು ಪ್ರವೇಶಿಸಲು ಶಕ್ತನಾಗಲಾರೆ. ಆಗ ಅಂದರೆ ನೀನು ಮರುತ್ಸ್ವರೂಪವನ್ನು ಪ್ರವೇಶಿಸದಿರುವ ಕಾಲದಲ್ಲಿ ನಿನಗಿಂತಲೂ ಹರಿಶ್ಚಂದ್ರನು ಉತ್ತಮನಾಗುವನು" ಎಂದು ಶಪಿಸಿದನು.

ಇಂತು ಇಂದ್ರನು ಶಾಪಕೊಟ್ಟ ಮೇಲೆ ಮೂಲರೂಪದ ನಿನ್ನ ತಂದೆಯು ಇಂದ್ರನಲ್ಲಿ ಕ್ಷಮೆ ಬೇಡಿದನು. ಆಗ ಇಂದ್ರನು "ನೀನು ರಾಜಸೂಯ ಯಜ್ಞಾಚರಣೆಯಿಂದ ಹರಿಶ್ಚಂದ್ರನಿಗಿಂತ ಅಧಿಕನಾಗಿ ನಿನ್ನ ಮೂಲರೂಪವನ್ನು ಪಡೆಯುವೆ" ಎಂದು ಹೇಳಿದನು. ಆದ್ದರಿಂದ "ಯುಧಿಷ್ಠಿರ! ಯಜ್ಞಗಳಲ್ಲಿ ಉತ್ತಮವಾದ ರಾಜಸೂಯ ಯಾಗವನ್ನು ನೀನು ವಿಧಿಪೂರ್ವಕವಾಗಿ ನೆರವೇರಿಸು. ಈ ಯಾಗದಿಂದ ನಿಮಗೂ ನಿಮ್ಮ ನಿಮ್ಮ ಪದವಿಯ ಯೋಗ್ಯತೆಯು ಲಭಿಸುವುದು" - ಎಂದು ಹೇಳಿದನು.

ಈ ರಾಜಸೂಯ ಯಾಗವನ್ನು ಮಾಡಲು ಭೀಮಸೇನನು ಮುಖ್ಯಾಧಿಕಾರಿಯಾಗಿದ್ದಾನೆ. ಮುಂದೆ ಅವನು ಬ್ರಹ್ಮ ಪದವಿಯನ್ನು ಪಡೆಯಲು ಅತ್ಯಂತ ಅರ್ಹನಾಗಿರುವುದರಿಂದ ಪವನಸುತನಾದ ಅವನಿಗೆ ಬ್ರಹ್ಮಪದಾಧಿಕಾರರೂಪವಾದ ಸಂಪೂರ್ಣಫಲವನ್ನು ಕೊಡಿಸಬೇಕೆಂದು ವಾಯುವಾಹನನಾದ[32] ಭಗವಾನ್‌ಶ್ರೀಕೃಷ್ಣನು ಯುಧಿಷ್ಠಿರನಿಗೆ ಹೀಗೆ ಹೇಳಿದನು:-

---

32. ನಿರ್ಣಯಾಚಾರ್ಯರು ಶ್ರೀಹರಿಗೆ ಭೀಮಸೇನನಲ್ಲಿ ವಿಶೇಷ ಪ್ರೀತಿಯಿರುವುದನ್ನು ಸೂಚಿಸಲು "ತಾತ್ಪರ್ಯನಿರ್ಣಯ"ದಲ್ಲಿ "ವಾಯುವಾಹನಃ" ಎಂದು ಹೇಳಿದ್ದಾರೆ. "ಪ್ರಜ್ಞೇನಾತ್ಮಾಽನ್ವಾರೂಢ ಉತ್ಸರ್ಜದ್ಯಾತಿ" ಎಂಬ ಶ್ರುತಿಯು ಬಲಭುಜದಲ್ಲಿ (ಶಿರಸ್ಸಿನಲ್ಲಿ) ಶ್ರೀಹರಿಯನ್ನು ಎಡಭುಜ (ಶಿರಸ್ಸಿ)ದಲ್ಲಿ ಜೀವನನ್ನು ಹೊತ್ತು ದೇಹದಿಂದ ದೇಹಾಂತರಕ್ಕೆ ವಾಯುದೇವನು ಹೋಗುತ್ತಾನೆ - ಎಂದು ತಿಳಿಸುವುದು. ಜೀವರಿಗೆ ಶರೀರೋತ್ಕ್ರಮಣ ಕಾಲದಲ್ಲಿ "ವಾಯುಃ ವಾಹನಂ ಯಸ್ಯ" ಎಂಬ ವ್ಯುತ್ಪತ್ತಿಯಿಂದ ವಾಯುದೇವರೇ ವಾಹನವಾಗುಳ್ಳವನು ಶ್ರೀಹರಿ ಪರಮಾತ್ಮನು. 'ವರದೋವಾಯುವಾಹನಃ' ಎಂದು ಸಹಸ್ರನಾಮದಲ್ಲೂ ಉಕ್ತವಾಗಿದೆ.

"ಧರ್ಮರಾಜ! ಜರಾಸಂಧನು ಜೀವಿಸಿರುವವರೆಗೆ ನೀನು ರಾಜಸೂಯ ಯಾಗವನ್ನು ಮಾಡಲು ಸಾಧ್ಯವಾಗಲಾರದು. ಅವನನ್ನು ಯುದ್ಧದಲ್ಲಿ ಯಾರು ಜಯಿಸಲು ಸಾಧ್ಯವಿಲ್ಲ. ಅಂತೆಯೇ ಬಲರಾಮನೂ ಅವನನ್ನು ಸಂಹರಿಸಲು ಸಮರ್ಥನಾಗಿಲ್ಲ. ಬ್ರಹ್ಮ-ರುದ್ರರ ವರಬಲದಿಂದ ಇನ್ನೊಬ್ಬರಿಂದ ಅಜೇಯನೂ ಸಕಲ ಜಗತ್ತನ್ನು ಸ್ವತಃ ಜಯಿಸಲು ಅವನು ಸಮರ್ಥನಾಗಿದ್ದಾನೆ. ಇಂತು ಅವನು ಬದುಕಿರುವಾಗ ರಾಜಸೂಯ ಯಾಗವನ್ನು ನೆರವೇರಿಸಲು ಸಾಧ್ಯವಾಗದು" ಚಕ್ರಧಾರಿಯ ಮಾತು ಕೇಳಿದ ಧರ್ಮರಾಯನು "ಪ್ರಭು, ರಾಜಸೂಯ ಯಜ್ಞವನ್ನು ಮಾಡಬೇಕೆಂಬ ಅಭಿಪ್ರಾಯವನ್ನು ಬಿಟ್ಟಿದ್ದೇನೆ. ಪೂರ್ವದಲ್ಲಿ ಬಹುಜನ ರಾಜರಿದ್ದರು. ಅವರೀ ಯಜ್ಞವನ್ನು ಮಾಡಿ ಚಕ್ರವರ್ತಿಗಳಾಗಲಿಲ್ಲ. ಚಕ್ರವರ್ತಿಗಳಾದ ಹರಿಶ್ಚಂದ್ರಾದಿಗಳು ಅಧಿರಾಜ್ಯಪದವನ್ನು ಪಡೆದ ಸಮಯದಲ್ಲಿ ಜರಾಸಂಧನಿಗೆ ಸಮಾನರಾದ ಶತ್ರುಗಳಿರಲಿಲ್ಲ"- ಎಂದನು.

ಅಣ್ಣನ ಮಾತು ಕೇಳಿ ಮುಖ್ಯಪ್ರಾಣದೇವರ (ಪ್ರಧಾನವಾಯುದೇವರ) ಪುತ್ರನಾದ ಭೀಮಸೇನನು "ನಮ್ಮಣ್ಣನಾದ ಯುಧಿಷ್ಠಿರನು ನಾಲ್ಮೊಗನ ಪದವಿಯನ್ನು ಬೇಕಾದರೂ ಸಾಧಿಸಬಹುದು. ಸ್ವಾಭಾವಿಕ ಸಾಮರ್ಥ್ಯವಿಲ್ಲದ, ಭಗವದನುಗ್ರಹ ರಹಿತರಾದ ಮತ್ತು ಶ್ರೇಷ್ಠಪ್ರಯತ್ನವನ್ನು ಮಾಡದಿರುವವರು ಉತ್ಕರ್ಷವನ್ನು ಪಡೆಯಲಿಲ್ಲ. ನನಗೆ ಅಚಂಚಲ (ಸ್ಥಿರ) ಸಾಮರ್ಥ್ಯವಿದೆ. ಮುಖ್ಯವಾಗಿ ಶ್ರೀಹರಿ ಪರಮಾತ್ಮನ ಅನುಗ್ರಹವೂ ಇದೆ. ಆದ್ದರಿಂದ ಪ್ರಯತ್ನವನ್ನು ಮುಂದಿಟ್ಟುಕೊಂಡು ಮುಂದುವರೆದಲ್ಲಿ ಐಶ್ವರ್ಯವನ್ನು ಪಡೆಯುವೆವು" ಎಂದು ಹೇಳಿದನು. ಆಗ ಕೃಷ್ಣನು "ರಾಜಸೂಯ ಯಾಗಕ್ಕೆ ಕಾರಣೀ-ಭೂತನಾಗಿರುವ ಭೀಮಸೇನನಿರುವಾಗ ಅವನ ಮುಖ್ಯಪ್ರಯತ್ನದಿಂದ ಯಜ್ಞವನ್ನು ಮಾಡಬಹುದು. ಈಗ ಜರಾ-ಸಂಧನೊಬ್ಬನೇ ಇದ್ದಾನೆ. ಸಕಲ ಸುಜನರ ವಿರೋಧಿಗಳಾದವರಿಗೆ ಅಂದರೆ ಅಸುರರಿಗೆ ಅವನು ಆಶ್ರಯನಾಗಿದ್ದಾನೆ. ಅಂಧಃತಮಸ್ಸಿನಲ್ಲಿ ದುಃಖವನ್ನು ಅನುಭವಿಸುವುದರಲ್ಲಿ ಕಲಿಯನ್ನು ಬಿಟ್ಟರೆ ಅವನು ಎರಡನೆಯವನಾಗಿದ್ದಾನೆ. ಅಸಜ್ಜನರಿಗೆ (ಅಸುರರಿಗೆ) ಜರಾಸಂಧನು ಆಶ್ರಯನಾಗಿರುವಂತೆ; ಸಕಲ ಸಜ್ಜನಾಶ್ರಯನೂ, ಜ್ಞಾನಭಕ್ತ್ಯಾದಿಗುಣಪೂರ್ಣನೂ ಆದ ಭೀಮಸೇನನೇ ಈ ಕಾರ್ಯವನ್ನು ನಿರ್ವಹಿಸಲು ಶಕ್ತನೆಂದು ತಿಳಿದು ಅವನನ್ನು ಕಳುಹಿಸಿಕೊಡು. ಧರ್ಮನಂದನ, ಭೀಮನು ಜರಾಸಂಧನನ್ನು ಸಂಹರಿಸಿದಾಗ ಸಜ್ಜನರಿಗೆ ಜಯವಾಗುವುದು. ಜರಾಸಂಧನು ಗೆದ್ದರೆ ದುಷ್ಟಜನರಿಗೇ ಜಯವೆಂದು ತಿಳಿ. ಬೇರೆ ರೀತಿ ಭಾವಿಸಬೇಡ. ಯುದ್ಧದಲ್ಲಿ ಆ ಜರಾಸುತನನ್ನು ವಧಿಸಿದವನೇ ನಿಜವಾಗಿ ಕಮಲಸಂಭವನ ಪದವಿಯನ್ನು ಪಡೆಯುವನು. ಅಂಥವನೇ ವೇದ ಮತ್ತು ಧರ್ಮಗಳನ್ನು ಕಾಪಾಡುವ ಮಹನೀಯನು. ಜರಾಸಂಧನು ಶಿವಭಕ್ತನಾದ್ದರಿಂದ ಜಗತ್ತಿನ ಜನರನ್ನು ಶಿವಭಕ್ತರನ್ನಾಗಿ ಮಾಡುವನು. ಜರಾಸಂಧನನ್ನು ಕೊಲ್ಲುವವನೇ ಲೋಕದ ಜನರನ್ನು ವಿಷ್ಣುಭಕ್ತರನ್ನಾಗಿಸುವನು. ಅಂಥವನೇ ಧರ್ಮರಕ್ಷಕನು. ಶಿವಭಕ್ತಾಗ್ರಣಿಯಾದ ಜರಾಸಂಧಸಂಹಾರಕನೇ ಶ್ರೀವಿಷ್ಣುವಿನ ಭಕ್ತರಲ್ಲಿ ಅಗ್ರೇಸರನು. ಆದುದರಿಂದ ಭೀಮಸೇನನನ್ನೇ ಜರಾಸಂಧನ ವಧೆಗಾಗಿ ಕಳುಹಿಸು" ಎಂದು ಸೂಚಿಸುತ್ತಾ ಶ್ರೀಗೋಪಿವಲ್ಲಭನು ಹೇಳಲು ಧರ್ಮರಾಯನು ಅಜನಾದ ಕೃಷ್ಣನಿಗೆ ನಾನು ರಾಜಸೂಯ ಯಾಗವನ್ನು ಮಾಡು-ವುದಿಲ್ಲವೆಂದು ಹೇಳುತ್ತಿರುವಾಗ, ವಾಯುನಂದನನಾದ ವೃಕೋದರನು "ಅಗ್ರಜ! ರಣರಂಗದಲ್ಲಿ ನಾನು ಮಾಗಧನನ್ನು ಸಂಹರಿಸುವೆನು" ಎಂದು ಅಣ್ಣನಲ್ಲಿ ವಿಜ್ಞಾಪಿಸಿದನು. ಆಗ ಶ್ರೀಹರಿಯು "ಕುಂತೀಕುಮಾರ! ಭೀಮನ ವಚನ-ವನ್ನಾಲಿಸಿದೆಯಷ್ಟೆ? ಇನ್ನೇತಕೆ ಚಿಂತೆ? ನಾನು, ಭೀಮ ಮತ್ತು ಅರ್ಜುನ ಹೀಗೆ ಮೂವರು ಜರಾಸುತನ ಹನನಕ್ಕಾಗಿ ತೆರಳುವೆವು. ಭೀಮನವನನ್ನು ಕೊಲ್ಲುವನು. ಆಗ ರಾಜಸೂಯವು ಪೂರ್ಣವಾಗುವುದು. ಆದರಿಂದ ನೀನು ಈ ಸಮಸ್ತ ಜಗತ್ತಿಗೂ ಪ್ರಭುವಾಗುತ್ತೀಯೆ"-ಎಂದು ನಿರೂಪಿಸಿದನು. ಕೃಷ್ಣನ ನುಡಿ ಕೇಳಿ ಕೃಷ್ಣನಿಗಿಂತ ಜರಾಸಂಧನು ಬಲಶಾಲಿಯೆಂದು ತಿಳಿದು ಭಯಗೊಂಡ ಯುಧಿಷ್ಠಿರನು "ಕೃಷ್ಣ, ಜರಾಸಂಧನ ಭಯದಿಂದ ನೀವೂ ಸಹ ಮಧುರೆಯನ್ನು ತೊರೆದು

ಜಲಧಿಯಲ್ಲಿ ಮನೆ ಮಾಡಿಕೊಂಡಿರಿ. ಆದ್ದರಿಂದ ಆ ಶತ್ರುವಾದ ಮಗಧರಾಜನಿಂದ ನಾನು ಭೀತನಾಗಿದ್ದೇನೆ. ಪ್ರಭು, ಈ ಭೀಮಾರ್ಜುನರು ನನ್ನೆರಡು ಕಣ್ಣುಗಳಂತಿರುವರು. ನೀನು ಜೀವ ಸದೃಶನಾಗಿರುವೆ. ನೀವಿಲ್ಲದೆ ನಾನು ಪುರುಷ-ನಾಗಲಾರೆ. ಸ್ವಾಮಿ, ಜೀವಕ್ಕಿಂತಲೂ ಪ್ರಿಯರಾದ ನಿಮ್ಮನ್ನು ನನ್ನ ಕಾರ್ಯಸಾಧನೆಗಾಗಿ ಬಲವಂತನಾದ ಶತ್ರುವಿನ ಬಳಿಗೆ ಕಳುಹಲಾರೆ'' ಎಂದನು.

ಅಣ್ಣನ ಮಾತುಕೇಳಿ ರಿಪುವನಭಕ್ಷಕನಾದ ಅಗ್ನಿಯಂತಿರುವ ಭೀಮನು ''ಅಣ್ಣ, ಲಕ್ಷ್ಮೀದೇವಿ, ಬ್ರಹ್ಮದೇವರು ಮತ್ತು ರುದ್ರದೇವರೇ ಮೊದಲಾದವರು ಶ್ರೀಹರಿಪರಮಾತ್ಮನ ಇಚ್ಛೆಯಿಂದಲೇ ಜಗತ್ತಿನ ನಾಯಕರಾಗಿದ್ದಾರೆ. ದೇವತೆಗಳು, ರಾಕ್ಷಸರು, ಉರಗಾದಿ ಸಮಸ್ತ ಪ್ರಪಂಚಕ್ಕೆ ಪ್ರಧಾನವಾದ ಬಲವು ಯಾರ ಅಧೀನವಾಗಿದೆಯೋ ಆ ಪ್ರಭುವೇ ಶ್ರೀವಾಸುದೇವ ಕೃಷ್ಣನು! ಸುರಾಸುರರ ಬಲವೂ ಶ್ರೀಕೃಷ್ಣನ ಅಧೀನದಲ್ಲಿರುವುದರಿಂದ ಶ್ರೀವಾಸುದೇವನ ಬಲದ ಮುಂದೆ ಜರಾಸಂಧನು ಖಂಡಿತ ಸರಿಸಾಟಿಯಾಗಲಾರನು. ಶ್ರೀಕೃಷ್ಣನೇ (ಶ್ರೀಹರಿಯೇ) ನನಗೆ ಪ್ರೇರಕನು. ಅಪ್ರತಿಹತಪರಾಕ್ರಮಿ ನಾನು. ನನ್ನ ಬಲ ಸಹಿಸಲಸದಳವಾದುದು. ಸಕಲ ಜಗತ್ತೇರಕನಾದ ಪ್ರಭು ಶ್ರೀಕೃಷ್ಣ ಪರಮಾತ್ಮನಲ್ಲಿ ಸರ್ವಶಕ್ತಿತ್ವವೂ ವಿರಾಜಿಸುತ್ತಿದೆ. ಇದು ಸುಪ್ರಸಿದ್ಧವು. ನಾನಿರುವಾಗ ಯಾರೂ ನಿನ್ನನ್ನು ಜಯಿಸಲಾರರೆಂದು ಅರ್ಜುನನಿಗೆ ಶ್ರೀಹರಿಯ ಅಭಯವಿದೆ. ಆದ ಕಾರಣ ಅಣ್ಣ, ನಾವು ಮೂವರೂ ಗರ್ವಿತನಾದ ಜರಾಸಂಧನ ಬಳಿಗೆ ಹೋಗುತ್ತೇವೆ. ನಾನು ಶ್ರೀಕೃಷ್ಣನ ಎದುರಿಗೆ ಜರಾಸಂಧನನ್ನು ವಧಿಸುತ್ತೇನೆ. ಇದರಲ್ಲಿ ಸಂಶಯಪಡಬೇಡ'' ಎಂದು ಹೇಳಿದನು.

ಶ್ರೀವಾಸುದೇವನು ''ಪಾಂಡುನಂದನ, ನಾವು ಮೂವರೂ ಸೇರಿ ಜರಾಸಂಧನನ್ನು ಮೃತ್ಯುವಿನ ಬಳಿಗೆ ಕಳಿಸುತ್ತೇವೆ. ಭೀಮನು ಅವನನ್ನು ಕೊಲ್ಲುವುದು ಖಂಡಿತ. ನಾನು ಜರಾಸಂಧನನ್ನು ಸಂಹರಿಸಲಿಲ್ಲೆಂದು ಹೆದರಬೇಡ. ಲೋಕನೀತಿಯನ್ನು ಪ್ರದರ್ಶಿಸಲು ನಾನಾಗಿ ಶತ್ರುವನ್ನು ಸಂಹರಿಸುವುದಿಲ್ಲ. ರುದ್ರನೇ ಆಶ್ರಯವಾಗುಳ್ಳ ಅವನ ಭಕ್ತನಾದ ಜರಾಸಂಧನನ್ನು ನನ್ನ ಭಕ್ತರಲ್ಲಿ ಶ್ರೇಷ್ಠನಾದ ಭೀಮಸೇನನು ಸಂಹರಿಸಿದಾಗ ನನ್ನ ಬಲವು ಪ್ರಕಾಶಿಸಲ್ಪಡುವುದು. ನಾನು ಭೀಮ ಮತ್ತು ಅರ್ಜುನರು ಶತ್ರುವನ್ನು ಕೊಲ್ಲುವೆವೋ ಇಲ್ಲವೋ ಎಂದು ಎಂದಿಗೂ ಮನದಲ್ಲಿ ಸಂಶಯ ತಾಳಬೇಡ. ಆ ಮಾಗಧನನ್ನು ಸಂಹಾರ ಮಾಡಿ ನಿನ್ನ ತಮ್ಮಂದಿರನ್ನು ನಿನ್ನಲ್ಲಿಗೆ ಸುಖವಾಗಿ ಕರತಂದು ಒಪ್ಪಿಸುತ್ತೇನೆ'' ಇಂತು ಹೇಳಿದ ಮೇಲೆ ಧರ್ಮರಾಜನು ಶ್ರೇಷ್ಠರಾದ ಆ ಮೂರುಜನರ ಗುಣಗಳನ್ನು ಮನದಲ್ಲಿ ಯೋಚಿಸಿ ''ಸರಿ, ವಾಸುದೇವ! ನೀನು ಹೇಳಿದಂತೆಯೇ ಆಗಲಿ'' ಎಂದು ಜರಾಸಂಧನ ಬಳಿಗೆ ಅವರನ್ನು ಕಳುಹಿಸಲು ಸಮ್ಮತಿಸಿದನು.

ತರುವಾಯ ಕೃಷ್ಣ ಭೀಮಾರ್ಜುನರು ಮಗಧದೇಶಕ್ಕೆ ತೆರಳಿದರು. ಅಲ್ಲಿ ಮಂಗಳಕರ ಪುಷ್ಪಮಾಲಿಕೆ, ಮತ್ತು ವಸ್ತ್ರಾಭರಣಗಳಿಂದ ಅರ್ಚಿತವಾದ ಶ್ರೇಷ್ಠಲಿಂಗಾಕಾರದ ಪರ್ವತಕ್ಕೆ ಹೋದರು. ಅವರು ಜರಾಸಂಧನಿಂದ ಶಿರೋಮಾನ್ಯವಾದ ಲಿಂಗಾಕಾರದ ಆ ಪರ್ವತವನ್ನು ಜರಾಸುತನ ಉತ್ತಮಾಂಗವಾದ ಶಿರಸ್ಸನ್ನೋ ಎಂಬಂತೆ ತಮ್ಮ ಬಾಹುಗಳಿಂದ ಕೆಡವಿದರು. ಆ ಬಳಿಕ ಆ ಮೂವರು ನಗರದ ಮುಖ್ಯದ್ವಾರವನ್ನು ಬಿಟ್ಟು ಜರಾಸಂಧನ ರಾಜಧಾನಿಯ ಹಿಂಭಾಗದ ಕೋಟೆಯ ಗೋಡೆಯನ್ನೊಡೆದು ಆ ಮೂಲಕ ನಗರವನ್ನು ಪ್ರವೇಶಿಸಿ, ಜರಾಸಂಧನನ್ನು ತಿರಸ್ಕರಿಸಿ ಅವನ ಕೀರ್ತಿ ಪ್ರತಿಪಾದಕ ಶೈವ-ಶಾಸ್ತ್ರಶಾಸನ ಸದೃಶವಾದ ಮಾಷನೆಂಬ ಅಸುರನ ಕಂಠನಾಳದಿಂದ ಆಕಸ್ಮಾತ್ತಾಗಿ ನಿರ್ಮಿತವಾದ ಅಂದರೆ ಎಲ್ಲಿಯವರೆಗೆ ಅದರ ಧ್ವನಿಕೇಳುವುದೋ ಅಷ್ಟು ದೇಶದ ಪ್ರಜರಿಗೆ ಪುಷ್ಟಿಯನ್ನು ಕೊಡುವ ಮೂರು ಭೇರಿಗಳನ್ನು ಭೇದಿಸಿದರು. ಇದರಂತೆ ಅಂಗಡಿಗಳಲ್ಲಿದ್ದ ಕುಸುಮಮಾಲಿಕೆ, ಗಂಧಾದಿಗಳನ್ನು ಬಲಾತ್ಕಾರವಾಗಿ ಕಸಿದುಕೊಂಡು ಧರಿಸಿ ತಾವು ಬಂದ ಮಾರ್ಗ-ವಾಗಿಯೇ ಜರಾಸಂಧನ ಅರಮನೆಗೆ ಹೋಗಿ ''ಜರಾಸಂಧ'' ಎಂದು ಕೂಗುತ್ತಾ ಅವನ ಬಳಸಾರಿದರು.

ಆಗ ಜರಾಸಂಧನು ಬ್ರಾಹ್ಮಣವೇಷಧಾರಿಗಳಾದ ಕೃಷ್ಣ-ಭೀಮಾರ್ಜುನರನ್ನು ನಿರುಕಿಸಿ ಮೌರ್ವಿಯಿಂದ ಕಾಠಿಣ್ಯ-ಪೂರ್ಣವಾದ ಬಾಹುಗಳನ್ನೂ ನೋಡಿ, ಆಜಾನುಬಾಹುಗಳಾಗಿ, ತೀರ್ಥಯಾತ್ರಾವ್ರತವನ್ನು ಕೈಗೊಂಡವರಂತೆ ವೇಷ ಧರಿಸಿರುವ ಅವರು ನಿಜವಾಗಿ ಕ್ಷತ್ರಿಯರೆಂದರಿತು ಅವರನ್ನು ಕುರಿತು "ನೀವು ಯಾರು? ಯಾವ ವರ್ಣದವರು? ಯಾವ ಕಾರಣದಿಂದ ಇಲ್ಲಿಗೆ ಬಂದಿದ್ದೀರಿ? ನನಗೆ ಸೇರಿದ ಪರ್ವತಾಕಾರವಾದ ಲಿಂಗವನ್ನೇಕೆ ಭೇದಿಸಿದಿರಿ? ಬ್ರಾಹ್ಮಣವೇಷಧಾರಿಗಳಾದ ನಿಮಗೆ ನನ್ನಿಂದೇನು ಅನ್ಯಾಯವಾಗಿದೆ?" ಎಂದು ಕೇಳಿದನು. ಆಗ ಕೃಷ್ಣನು "ಶತ್ರುವಿಗೆ ಎಲ್ಲ ವಿಧದಿಂದ ಪ್ರತೀಕಾರ ಮಾಡುವುದು ವಿಹಿತವಾದ್ದರಿಂದ ನಾವು ಹೀಗೆ ಮಾಡಿದೆವು" ಎಂದನು. ಜರಾಸಂಧನು "ಸ್ವಾಮಿ, ನಾನು ಬ್ರಾಹ್ಮಣರ ವಿರೋಧಿಯಲ್ಲ. ಅಂದಮೇಲೆ ನಾನೆಂತು ನಿಮಗೆ ಶತ್ರುವಾದೇನು?" ಎಂದುಸುರಲು ಯದುಕುಲಾವತಂಸನು "ನಾವು ಬ್ರಾಹ್ಮಣರಲ್ಲ! ನಾನು ನಿನ್ನ ಶತ್ರುವಾದ ವಾಸುದೇವಕೃಷ್ಣನು, ಇವರಿಬ್ಬರೂ ಭೀಮಾರ್ಜುನರು. "ದೈತ್ಯಾರಿಃ ಪುಂಡರೀಕಾಕ್ಷಃ" ಎಂಬ ಪ್ರಮಾಣದಂತೆ ನನ್ನಲ್ಲಿ ದೈತ್ಯಾರಿತ್ವವು ಪ್ರಸಿದ್ಧವಾಗಿದೆ. ಆದ್ದರಿಂದ ದೈತ್ಯನಾದ ನಿನಗೆ ನಾನು ಶತ್ರುವೇ ಆಗಿದ್ದೇನೆ" ಎಂದನು. ಆಗ ಜರಾಸಂಧನು "ನೀವು ಏತಕ್ಕಾಗಿ ಇಲ್ಲಿಗೆ ಬಂದಿರುವಿರಿ?" ಎಂದು ಕೇಳಿದ ಪ್ರಶ್ನೆಗೆ ಉತ್ತರ ನೀಡಲು ಪ್ರಸಕ್ತಿಯನ್ನೀಗ ನಿರೂಪಿಸುತ್ತಾರೆ.

"ಜರಾಸಂಧ! ರುದ್ರದೇವತಾಕವಾದ ಯಜ್ಞದಲ್ಲಿ ಅವೈದಿಕ ಮಾರ್ಗಾವಲಂಬಿಯಾಗಿ ನೀನು ನಮ್ಮ ಭಾವಿ ಮಾವ ಮೊದಲಾದ ಬಂಧುಗಳನ್ನು ಪಶುಗಳನ್ನಾಗಿ ಮಾಡಿ, ಯಜ್ಞದಲ್ಲಿ ಬಲಿಕೊಡಲು ಆಶಿಸಿರುವುದರಿಂದ ನಮ್ಮ ಶತ್ರುವೂ ವೇದವಿರುದ್ಧಾಚರಣರತನೂ ಆದ ನಿನ್ನನ್ನು ಶಿಕ್ಷಿಸಲು ನಾವಿಲ್ಲಿಗೆ ಬಂದಿದ್ದೇವೆ. ನಿನ್ನ ಬಂಧನದಲ್ಲಿರುವ ಕ್ಷತ್ರಿಯ ರಾಜರನ್ನು ಮುಕ್ತಗೊಳಿಸು. ಒಂದು ವೇಳೆ ನೀನವರನ್ನು ಬಿಡದಿದ್ದಲ್ಲಿ ನಿನ್ನನ್ನು ಬಂಧಿಸಿ ಅವರನ್ನು ಬಿಡಿಸುತ್ತೇವೆ. ಅಥವಾ ಧೈರ್ಯವಿದ್ದರೆ ಸಾಯಲು ಸಿದ್ಧನಾಗಿ ಯುದ್ಧಕ್ಕೆ ಬಾ" ಎಂದನು.

ಮಾಧವನ ಮಾತುಕೇಳಿ ಕೋಪಗೊಂಡ ಜರಾಸಂಧನು "ರುದ್ರಯಾಗದಲ್ಲಿ ಪಶುಗಳೆಂದು ಬಲಿನೀಡಲು ಬಂಧಿಸಿ-ಟ್ಟಿರುವವರನ್ನು ಬಿಡಲಾರೆ. ಕೇಳು, ಕೃಷ್ಣ! ನೀವು ಮೂರುಜನರೊಡನೆಯೂ ಏಕಕಾಲದಲ್ಲಿ, ಅಥವಾ ಒಬ್ಬರಾದ ಮೇಲೊಬ್ಬರಂತೆ ಬೇರೆ ಬೇರೆಯಾಗಿಯೂ ನಿಮ್ಮೊಡನೆ ಹೋರಾಡಲು ಸಿದ್ಧನಾಗಿದ್ದೇನೆ. ಸೈನ್ಯಸಹಿತ, ಸೈನ್ಯವಿಲ್ಲದೆಯೇ, ಆಯುಧರಹಿತನಾಗಿ, ಅಥವಾ ಆಯುಧಯುಕ್ತನಾಗಿ, ನಿಮಗೆ ಇಷ್ಟವಾದ ಆಯುಧದೊಡನೆ ಒಬ್ಬೊಂಟಿಗನಾಗಿ ಇಲ್ಲವೇ ಸೈನ್ಯಸಹಿತರಾದ ನಿಮ್ಮೊಡನೆ ಯುದ್ಧಮಾಡಲೂ ಸಿದ್ಧನಾಗಿದ್ದೇನೆ" ಎಂದು ಹೇಳಲು, ಕೃಷ್ಣನು "ಜರಾಸಂಧ! ನಾವು ಮೂವರಲ್ಲಿ ಒಬ್ಬರೊಡನೆ ನೀನೊಬ್ಬನೇ ಆಗಲಿ, ಸೈನ್ಯಸಮೇತನಾಗಿಯಾಗಲಿ, ಯುದ್ಧ ಮಾಡಲು ಬಾ, ನಮ್ಮಲ್ಲಿ ಯಾರೊಬ್ಬರೊಡನೆ ಕಾದಾಡಲಿಚ್ಛಿಸುವೆಯೋ ಅಂಥವರೊಡನೆ ಆಯುಧಸಹಿತನಾಗಿ ಅಥವಾ ಆಯುಧರಹಿತನಾಗಿ, ಇಲ್ಲವೇ ನಿನಗಿಷ್ಟವಾದ ಆಯುಧದೊಡನೆ ಒಬ್ಬರೊಡನೆ ಯುದ್ಧಕ್ಕೆ ಬಾ" ಎಂದನು.

ಭಗವಾನ್ ಶ್ರೀಕೃಷ್ಣನು ನಿಜರಿಪುವಾದ ಜರಾಸಂಧನನ್ನು ಭೀಮಸೇನನಿಂದ ಹತಮಾಡಿಸಿ, ಭೀಮನ ಕೀರ್ತಿಯನ್ನು ಅಭಿವೃದ್ಧಿಗೊಳಿಸಿ, ಪರಮಾನುಗ್ರಹ ಮಾಡಲೂ, ಸ್ವಾನುಗ್ರಹದಿಂದ ಭೀಮನಲ್ಲಿ ಭಕ್ತಿ-ಜ್ಞಾನಾಭಿವೃದ್ಧಿಗೊಳಿಸಲೂ ಇಚ್ಛಿಸಿ 'ಯಾರಾದರೊಲ್ಲಬ್ಬರೊಡನೆ ಕಾದಾಡು' ಎಂದು ಹೇಳಿ, ಅವನು ತನಗೆ ತೃಣ ಸಮಾನನೆಂದು ತೋರಿಕೊಡಲು ನಿರಾಯುಧನಾಗಿ ಬಂದನು. ನಿರಾಯುಧರಾಗಿ ಕ್ಷತ್ರಿಯ ವೇಷಧರಿಸುವುದು ಸರ್ವಥಾ ಯುಕ್ತವಲ್ಲ. ಆದರೂ ಶತ್ರುವನ್ನು ಹುಲ್ಲಿಗೆ ಸಮಾನನನ್ನಾಗಿ ಮಾಡಲು ಕೃಷ್ಣಾದಿಗಳು ಬ್ರಾಹ್ಮಣವೇಷ ಧರಿಸಿ ಬಂದರು. ಸೇನಾಪರಿವೃತನಾಗಿ ಸ್ವಗೃಹದಲ್ಲಿದ್ದ ಜರಾಸಂಧನನ್ನು, ನಿರಾಯುಧನಾಗಿ ಭೀಮಸೇನನು ಯುದ್ಧಕ್ಕೆ ಆಹ್ವಾನಿಸುತ್ತಿರಲು ಕೃಷ್ಣನು ಭೀಮನಲ್ಲಿ ಅತ್ಯಂತ ಧರ್ಮ-ಕೀರ್ತಿಗಳನ್ನಭಿವೃದ್ಧಿಸಿದನು.

ಅರ್ಜುನನನ್ನು ಜೊತೆಗೆ ಕರೆದುಕೊಂಡು ಬಂದ ಕೃಷ್ಣನ ಮನದಿಂಗಿತವನ್ನೀಗ ತಿಳಿಸುವರು. ನಮ್ಮಲ್ಲೊಬ್ಬರೊಡನೆ ಹೋರಾಡು ಎಂದು ವಾಸುದೇವನು ಅರ್ಜುನನಿಗಿಂತ ಭೀಮನ ಮಹಾಪರಾಕ್ರಮ ಸಾಮರ್ಥ್ಯಗಳನ್ನು ಜರಾಸಂಧನ ಮುಖದಿಂದಲೇ ಪ್ರಕಾಶಪಡಿಸಲು ಮೂರನೆಯವನಾದ ಧನಂಜಯನನ್ನು ಕರೆದುಕೊಂಡು ಬಂದನು. ಜರಾಸಂಧನು "ಕೃಷ್ಣ, ಬಲಶಾಲಿಯಲ್ಲದ ಪಾರ್ಥನೊಡನೆ ನಾನು ಯುದ್ಧ ಮಾಡುವುದಿಲ್ಲ. ಅವನಿಗೀಗ ಐವತ್ತೈದು ವರ್ಷವಿದ್ದೀತು. ಆದರೂ ಅವನು ಯುವಕನಾಗಿದ್ದರೂ ಬಾಲಕಸಮಾನನೇ ಆಗಿದ್ದಾನೆಂದು ನನ್ನ ಅಭಿಪ್ರಾಯ"-ಇಂತು ಜರಾಸುತನು ತನ್ನನ್ನು ಧಿಕ್ಕರಿಸಿ, ನಿಂದಿಸಿ ಮಾತನಾಡಿದರೂ 'ಧನುರ್ಯುದ್ಧ-ಬಾಹುಯುದ್ಧಗಳಲ್ಲಿ ನಾನು ಬಲವಂತನಹುದೋ ಅಲ್ಲವೋ ಎಂಬುದನ್ನು ಪರೀಕ್ಷಿಸಿ ನೋಡು' ಎಂದು ಅರ್ಜುನ ಹೇಳಲಿಲ್ಲ. ತನ್ನನ್ನು ಕೀಳಾಗಿ ಕಂಡು ನಿಂದಿಸಿ ಮಾತನಾಡಿದರೂ ಪಾರ್ಥನು ಸುಮ್ಮನಿದ್ದುದರಿಂದ ಭೀಮನ ಅತ್ಯಂತ ಬಲಶಾಲಿತ್ವವು ಪ್ರಸಿದ್ಧವಾಯಿತು. ಇದನ್ನು ಪ್ರಕಟಗೊಳಿಸಲೆಂದೇ ಕೃಷ್ಣನು ಅವನನ್ನು ಕರತಂದನೆಂದು ತಿಳಿಯಬೇಕು.

ಅದು ಸರಿ, ಜರಾಸಂಧನು ಕೃಷ್ಣನನ್ನೇಕೆ ಯುದ್ಧಕ್ಕೆ ಕರೆಯಲಿಲ್ಲ? ಎಂದರೆ ಅದನ್ನೀಗ ನಿರೂಪಿಸುತ್ತಾರೆ:-

ಶ್ರೀಕೃಷ್ಣನು ಭಯಂಕರವೂ, ಸಹಿಸಲಸದಳವೂ ಆದ ಬಲಸಂಪನ್ನನೆಂದು ಮಗಧರಾಜನು ಅರಿತಿದ್ದನು. ಅಂತೆಯೇ ಅವನೊಡನೆ ಕಾದಾಡಲಿಚ್ಛಿಸದೆ "ನೀನು ಗೋಪ, ಗೊಲ್ಲರೊಡನೆ ಕ್ಷತ್ರಿಯನಾದ ನಾನು ಯುದ್ಧಮಾಡೆ"ನೆಂದು ಹಂಗಿಸಿದನು. ಗೋವಿಂದನೊಡನೆ ಗುದ್ದಾಡಲು ಭಯಗೊಂಡಿದ್ದನಾದುದರಿಂದಲೇ ಅವನೊಡನೆ ಸೆಣಸಲಾಶಿಸದೆ ನಿಂದಿಸಿದನು. ಭೀಮನೊಡನೆ ಕಾದಾಡಿದರೆ ನಾವಿಬ್ಬರೂ ಸಮಬಲರಾದ್ದರಿಂದ ಒಂದು ವೇಳೆ ನಾನು ಬದುಕಿದರೂ ಬದುಕಬಹುದೆಂಬ ಆಶೆಯಿಂದ ಭೀಮಸೇನನನ್ನೇ ಯುದ್ಧಕ್ಕೆ ಕರೆದನು. ಹಿಂದೆ ಹದಿನೆಂಟು ಬಾರಿ ಕೃಷ್ಣನೊಡನೆ ಯುದ್ಧಮಾಡಿದ್ದ ಅವನಿಗೆ ಈ ಸಲ ಕೃಷ್ಣನು ತನ್ನನ್ನು ನಿಜವಾಗಿ ಸಂಹರಿಸಬಹುದೆಂಬ ಭೀತಿಯೂ ಇತ್ತು. ಆದ ಕಾರಣ ಅವನನ್ನು ಯುದ್ಧಕ್ಕೆ ಆಹ್ವಾನಿಸಲಿಲ್ಲ. ಒಂದು ವೇಳೆ ಪಾರ್ಥನೊಡನೆ ಕಾದಾಡಿ ನಾನು ಜಯಗಳಿಸಿದರೂ ಕೃಷ್ಣ-ಭೀಮರು ನನ್ನನ್ನು ಕೊಲ್ಲುವರು. ಬಲಹೀನನಾದ ಅರ್ಜುನನೊಡನೆ ಯುದ್ಧಮಾಡಿದರೆ ನನ್ನ ಕೀರ್ತಿನಾಶವಾಗುವುದೆಂದು ತಿಳಿದು ಅವನನ್ನು ಕರೆಯದೆ ಭೀಮನನ್ನು ಯುದ್ಧಕ್ಕೆ ಆಹ್ವಾನಿಸಿದನು. ಭೀಮನೊಡನೆ ಕಾದಾಡಿದಲ್ಲಿ ನನ್ನ ಕೀರ್ತಿಗೂ ಧಕ್ಕೆಬಾರದು. ನಾನು ಜೀವಿಸಿದರೂ ಜೀವಿಸಬಹುದೆಂದು ಅವನಿಗೆ ಯುದ್ಧಾಹ್ವಾನವಿತ್ತು ಪೂರ್ವದಲ್ಲಿ ಪತ್ರತಾಪನೆಂಬ ಹೆಸರಿನ ರುದ್ರನಾಗಿದ್ದು ಈಗ ತನ್ನ ಮಗನಾಗಿರುವ ಸಹದೇವನಿಗೆ ಮಗಧರಾಜ್ಯದಲ್ಲಿ ಪಟ್ಟಾಭಿಷೇಕಮಾಡಿ, ಬಲವಂತನಾದ ಜರಾಸಂಧನು ಭೀಮನ ಬಲಾಧಿಕ್ಯವನ್ನೂ, ಗದಾಯುದ್ಧದಲ್ಲಿ ತನಗಿರುವ ಚಾತುರ್ಯವನ್ನೂ ಅರಿತು, ಭೀಮನೊಡನೆ ಮುಷ್ಟಿಯುದ್ಧ ಮಾಡಲು ಅಳುಕಿ, ತಮ್ಮಿಬ್ಬರಿಗೂ ಗದಾಯುದ್ಧವೇ ಸೂಕ್ತವೆಂದಾಲೋಚಿಸಿ ಭೀಮನಿಗೆ ಒಂದು ಗದೆಯನ್ನಿತ್ತು ತಾನೂ ಒಂದು ಗದೆಯನ್ನು ಹಿಡಿದು ಯುದ್ಧಕ್ಕೆ ಸಿದ್ಧನಾದನು.

ಭೀಮಸೇನನು ಜರಾಸಂಧನ ಆಶೆಯನ್ನು ಪೂರೈಸಲೂ, ತನ್ನ ಗದಾಕದನಕೌಶಲವನ್ನು ತೋರಲೂ ಗದಾಪಾಣಿಯಾಗಿ ಕೃಷ್ಣಾರ್ಜುನರೊಡನೆ ನಗರದ ಹೊರವಲಯಕ್ಕೆ ಬಂದು ಸೇರಿದನು.

ಅಲ್ಲಿ ಭೀಮಸೇನನು ಕೃಷ್ಣಾರ್ಜುನರ ಎದುರು ಜರಾಸಂಧನೊಡನೆ ಯುದ್ಧ ಪ್ರಾರಂಭಿಸಿ ಮೊದಲು ರುದ್ರದೇವರ ಭಕ್ತನಾದ ಜರಾಸಂಧನನ್ನು ಭಗವಂತನ ಅನಂತ ಗುಣಪ್ರಕಾಶಕವೇದವಚನಗಳಿಂದ ಸೋಲಿಸಿ ಜಯಗಳಿಸಿದನು. ತರುವಾಯ ಭೀಮ-ಜರಾಸಂಧರು ಗದಾಯುದ್ಧ ಮಾಡುತ್ತಾ ಅದರಲ್ಲಿ ವಿವಿಧ ರೀತಿಯಾಗಿ ತಮ್ಮ ಕೌಶಲವನ್ನು ಪ್ರದರ್ಶಿಸಿದರು. ಕಲ್ಲುಬಂಡೆಯಮೇಲೆ ಮಣ್ಣಿನ ಹೆಂಟೆಯನ್ನು ಬಲವಾಗಿ ಎಸೆದರೆ ಅದೆಂತು ಪುಡಿಪುಡಿಯಾಗುವುದೋ ಅದರಂತೆ ಕ್ರೋಧಯುಕ್ತರಾಗಿ ಹೋರಾಡುವಾಗ ಪರಸ್ಪರ ವಕ್ಷಃಸ್ಥಳಗಳಿಗೆ ತಾಡಿತವಾಗಿ, ಉಭಯರ ದೇಹಗಳೂ

ಕಾಠಿಣ್ಯಪೂರ್ಣವಾದ್ದರಿಂದ ಅವರ ಗದೆಗಳೇ ಪುಡಿಪುಡಿಯಾದವು. ಗದೆಗಳು ಚೂರ್ಣೀಕೃತವಾದ್ದರಿಂದ ಪರಾಕ್ರಮ-ಶಾಲಿಗಳಾದ ಅವರು ಶ್ರೀಕೇಶವ ಮತ್ತು ಕೈಟಭರಂತೆ ಪರಸ್ಪರ ಬ್ರಹ್ಮಾಂಡವನ್ನೇ ಭೇದಿಸುವಂತೆ ಶಬ್ದಾಯಮಾನವಾದ ಮುಷ್ಟಿಪ್ರಹಾರ ಮಾಡುತ್ತಾ ಕಾದಾಡಿದರು. ಅವರ ಭಯಂಕರ ಮುಷ್ಟಿಪ್ರಹಾರಗಳಿಂದ ಭೂಮಿಯು ನಡುಗಿತು ಗಿರಿಗಳು ಪುಡಿಯಾದವು. ಪರ್ವತಶ್ರೇಣಿಯು ಅಲುಗಾಡಿತು. ಸಮುದ್ರಗಳೆಲ್ಲ ಕದಡಿದವು. ದೇವತೆಗಳು, ಬ್ರಹ್ಮರುದ್ರಾದಿಗಳು ಅಂಬರದಲ್ಲಿ ನಿಂತು ಭೀಮ-ಜರಾಸಂಧರ ಯುದ್ಧವನ್ನು ನೋಡಹತ್ತಿದರು. ಅಮರರು ಭೀಮನು ಜಯಿಸಬೇಕೆಂದಾಶಿಸಿದರೆ, ಅಸುರರು ಜರಾಸಂಧನು ಗೆಲ್ಲಬೇಕೆಂದಾಶಿಸಿ ಅವರ ಭಯಂಕರ ಮುಷ್ಟಿಯುದ್ಧವನ್ನು ನೋಡುತ್ತಿದ್ದರು. ಪವನನಂದನನಾದ ಭೀಮಸೇನನು ಕ್ರಮವಾಗಿ ತನ್ನ ಮೂಲರೂಪದ ಬಲವನ್ನು ಸ್ವೀಕರಿಸಿದನು. ಬ್ರಹ್ಮದೇವರು ಜರಾಸಂಧನಿಗೆ ಅಜೇಯತ್ವ ವರವಿತ್ತಿದ್ದರಾದ್ದರಿಂದ ಬ್ರಹ್ಮದೇವರ ವರಕ್ಕೆ ಗೌರವ ತೋರಲು ಶ್ರೀವಾಸುದೇವನ ಆಣತಿಯಂತೆ ಹದಿನೈದು ದಿನ ಪರ್ಯಂತವಾಗಿ ಶತ್ರುವಾದ ಜರಾಸಂಧನೊಡನೆ ಕಾದಾಡಿ ಕೊನೆಗೆ ಅವನನ್ನು ಸಂಹರಿಸಲು ಮನಸ್ಸು ಮಾಡಿದನು. ಆಗ ಭೀಮನು ಕೃಷ್ಣನಿಗೆ ನಮಸ್ಕರಿಸಿ, ಅರ್ಜುನನನ್ನು ಪ್ರೇಮದಿಂದಾಲಿಂಗಿಸಿ ವನರಾಜನಾದ ಸಿಂಹವು ಮದಿಸಿದ ಆನೆಯ ಮಸ್ತಕವನ್ನು ಒಡಿದು ಭೇದಿಸುವಂತೆ ಜರಾಸುತನ ಮುಕುಟಭಾಗವನ್ನು ಬಲವಾಗಿ ಒಡಿದನು. ಅನಂತರ ಭೀಮನು ಜರಾಸಂಧನ ಬೆನ್ನಿನಲ್ಲಿ ತನ್ನ ಮೊಣಕಾಲೂರಿ ಒಡಿದು ಜರಾಸಂಧನು ಜನಿಸಿದಾಗ್ಗೆ ಎರಡು ಸೀಳಾಗಿದ್ದಂತೆ ಅವನ ಪೃಷ್ಠಮೂಲವನ್ನು ಸೀಳಿ ದೇಹವನ್ನು ಎರಡು ಭಾಗಮಾಡಿ ಎಸೆದನು. ಮರ್ಮಸ್ಥಾನ ಛೇದನದಿಂದ ಸಂಹರಿಸಬಾರದೆಂದು ಕೂರ್ಮಸ್ಥಾನದಲ್ಲಿ ಸೀಳಿಹಾಕಿದನು. ಭೀಮನು ಜರಾಸಂಧನನ್ನು ಸೀಳಿಹಾಕುವಾಗ ಬ್ರಹ್ಮಾಂಡವೇ ಮುರಿದು, ಮೂರು ಲೋಕಗಳೂ ಭಯಗ್ರಸ್ತವಾಗುವಂತಹ ಭೀಕರಧ್ವನಿಯು ಉಂಟಾಯಿತು.

ಭೀಮಸೇನನು ಕೃಷ್ಣಶತ್ರುವಾದ ಜರಾಸಂಧನ ಸಂಹಾರರೂಪ ಸೇವೆಯಿಂದ ಭಗವಾನ್ ಶ್ರೀಕೃಷ್ಣನನ್ನು ಪೂಜಿಸಿದನು. ಶತ್ರುಸಂಹಾರ ರೂಪವಾದ ಆ ಸೇವೆಯನ್ನು ಸ್ವೀಕರಿಸಲಿಕ್ಕಾಗಿಯೇ ಮಾಧವನು ಮಗಧರಾಜ್ಯಕ್ಕೆ ಬಂದಿದ್ದನು. ಭೀಮನ ಸೇವೆಯಿಂದ ಹೃಷ್ಟಾಂತಃಕರಣನಾಗಿ ಅವನನ್ನು ಗೋವಿಂದನು ಗಾಢವಾಗಿ ಆಲಿಂಗಿಸಿದನು. ಅತಿಶಯ ಮುದದಿಂದ ಅರ್ಜುನನು ಅಣ್ಣನಿಗೆ ನಮಸ್ಕರಿಸಿದಾಗ ವೃಕೋದರನು ಅವನನ್ನು ಬಿಗಿದಪ್ಪಿ, ಆನಂದನಿರ್ಭರನಾಗಿ ನಿಂತಿದ್ದ ಕೃಷ್ಣ ಪರಮಾತ್ಮನಿಗೆ ಪುನಃ ಸಾಷ್ಟಾಂಗವೆರಗಿದನು. ಶ್ರೀಕೃಷ್ಣನ ಆಶ್ರಯವುಳ್ಳ ಭೀಮನು ತನ್ನ ಸ್ವಾಭಾವಿಕಬಲದಿಂದ ಶ್ರೀರುದ್ರದೇವರು ಹಾಗೂ ದೂರ್ವಾಸರು ಕೊಟ್ಟಿದ್ದ ವರಗಳನ್ನು ಮುರಿದು ಹಾಕಿದ ಮೇಲೆ ಕಮಲಾಸನ ಬ್ರಹ್ಮಾದಿ ಅಮರನಿಕರರು ಆನಂದತುಂದಿಲರಾಗಿ ಮರಳಿ ಸ್ವಲೋಕಗಳಿಗೆ ಹೋದರು. ದೈತ್ಯರು ಅತಿಶಯ ದುಃಖಾರ್ತರಾಗಿ ನಿರ್ಗಮಿಸಿದರು.

ತಂದೆಯು ಮೃತನಾದ ಮೇಲೆ ಬುದ್ಧಿವಂತನಾದ ಸಹದೇವನು ಶ್ರೀಕೃಷ್ಣ-ಭೀಮಾರ್ಜುನರಿಗೆ ಶರಣಾಗಿ ಅವರಿಂದ ಪಾಲಿತನಾದನು. ಸಹದೇವನು ಭೀಮಸೇನನಿಗೆ ಒಂದು ದಿವ್ಯರಥವನ್ನೂ, ತನ್ನ ಸಹೋದರಿಯನ್ನೂ ಕಾಣಿಕೆಯಾಗಿ ನೀಡಿ, ಭಕ್ತಿಪರವಶನಾಗಿ ಮಾಧವನಿಗೆ ನಮಸ್ಕರಿಸಿದನು.

ಸಹದೇವನು ಭೀಮಸೇನನಿಗೆ ಅರ್ಪಿಸಿದ ರಥವು ಶ್ರೀಮನ್ನಾರಾಯಣನದು. ಇಂದ್ರದೇವನಿಂದ ವಸು ಎಂಬ ರಾಜನು ಅದನ್ನು ಪಡೆದಿದ್ದನು. ಜರಾಸಂಧನು ವಸುವಂಶಸಂಜಾತನಾದ್ದರಿಂದ ಆ ರಥವು ಅವನ ಬಳಿ ಇದ್ದಿತು. ಸಹದೇವ-ನಿಂದ ಪಡೆದ ಭೀಮಸೇನನು ಅದನ್ನು ಶ್ರೀನಾರಾಯಣಾವತಾರಿಯಾದ ಶ್ರೀಕೃಷ್ಣನಿಗೆ ಸಮರ್ಪಿಸಿದನು. ಆಗ ಕೃಷ್ಣನು ಗರುಡದೇವನನ್ನು ಸ್ಮರಿಸಿದನು. ತತ್‌ಕ್ಷಣವೇ ಅಲ್ಲಿಗೆ ಬಂದ ಗರುಡನು ಶ್ರೀಹರಿಗೆ ನಮಿಸಿ ಆ ರಥದ ಮೇಲೆ ಧ್ವಜರೂಪತಾಳಿ ಶೋಭಿಸಿದನು. ಕೃಷ್ಣನು ಭೀಮಾರ್ಜುನರೊಡನೆ ಆ ರಥವೇರಿ ಕುಳಿತನು. ಸಹದೇವನು ಅರ್ಪಿಸಿದ ಜರಾಸಂಧನ ಮಗಳನ್ನು ಭೀಮಸೇನನು ತನ್ನ ಅನುಜನಾದ ಸಹದೇವನಿಗಾಗಿ ಸ್ವೀಕರಿಸಿ ಅವಳನ್ನೂ ತನ್ನೊಡನೆ ಕರೆದೊಯ್ದನು.

ಅರ್ಜುನನನ್ನು ಜೊತೆಗೆ ಕರೆದುಕೊಂಡು ಬಂದ ಕೃಷ್ಣನ ಮನದಿಂಗಿತವನ್ನೀಗ ತಿಳಿಸುವರು. ನಮ್ಮಲ್ಲೊಬ್ಬರೊಡನೆ ಹೋರಾಡು ಎಂದು ವಾಸುದೇವನು ಅರ್ಜುನನಿಗಿಂತ ಭೀಮನ ಮಹಾಪರಾಕ್ರಮ ಸಾಮರ್ಥ್ಯಗಳನ್ನು ಜರಾಸಂಧನ ಮುಖದಿಂದಲೇ ಪ್ರಕಾಶಪಡಿಸಲು ಮೂರನೆಯವನಾದ ಧನಂಜಯನನ್ನು ಕರೆದುಕೊಂಡು ಬಂದನು. ಜರಾಸಂಧನು "ಕೃಷ್ಣ, ಬಲಶಾಲಿಯಲ್ಲದ ಪಾರ್ಥನೊಡನೆ ನಾನು ಯುದ್ಧ ಮಾಡುವುದಿಲ್ಲ. ಅವನಿಗೀಗ ಐವತ್ತೈದು ವರ್ಷವಿದ್ದೀತು. ಆದರೂ ಅವನು ಯುವಕನಾಗಿದ್ದರೂ ಬಾಲಕಸಮಾನನೇ ಆಗಿದ್ದಾನೆಂದು ನನ್ನ ಅಭಿಪ್ರಾಯ"-ಇಂತು ಜರಾಸುತನು ತನ್ನನ್ನು ಧಿಕ್ಕರಿಸಿ, ನಿಂದಿಸಿ ಮಾತನಾಡಿದರೂ 'ಧನುರ್ಯುದ್ಧ-ಬಾಹುಯುದ್ಧಗಳಲ್ಲಿ ನಾನು ಬಲವಂತನಹುದೋ ಅಲ್ಲವೋ ಎಂಬುದನ್ನು ಪರೀಕ್ಷಿಸಿ ನೋಡು' ಎಂದು ಅರ್ಜುನ ಹೇಳಲಿಲ್ಲ. ತನ್ನನ್ನು ಕೀಳಾಗಿ ಕಂಡು ನಿಂದಿಸಿ ಮಾತನಾಡಿದರೂ ಪಾರ್ಥನು ಸುಮ್ಮನಿದ್ದುದರಿಂದ ಭೀಮನ ಅತ್ಯಂತ ಬಲಶಾಲಿತ್ವವು ಪ್ರಸಿದ್ಧವಾಯಿತು. ಇದನ್ನು ಪ್ರಕಟಗೊಳಿಸಲೆಂದೇ ಕೃಷ್ಣನು ಅವನನ್ನು ಕರತಂದನೆಂದು ತಿಳಿಯಬೇಕು.

ಅದು ಸರಿ, ಜರಾಸಂಧನು ಕೃಷ್ಣನನ್ನೇಕೆ ಯುದ್ಧಕ್ಕೆ ಕರೆಯಲಿಲ್ಲ? ಎಂದರೆ ಅದನ್ನೀಗ ನಿರೂಪಿಸುತ್ತಾರೆ:-

ಶ್ರೀಕೃಷ್ಣನು ಭಯಂಕರವೂ, ಸಹಿಸಲಸದಳವೂ ಆದ ಬಲಸಂಪನ್ನನೆಂದು ಮಗಧರಾಜನು ಅರಿತಿದ್ದನು. ಅಂತೆಯೇ ಅವನೊಡನೆ ಕಾದಾಡಲಿಚ್ಛಿಸದೆ "ನೀನು ಗೋಪ, ಗೊಲ್ಲರೊಡನೆ ಕ್ಷತ್ರಿಯನಾದ ನಾನು ಯುದ್ಧಮಾಡೆ"ನೆಂದು ಹಂಗಿಸಿದನು. ಗೋವಿಂದನೊಡನೆ ಗುದ್ದಾಡಲು ಭಯಗೊಂಡಿದ್ದನಾದುದರಿಂದಲೇ ಅವನೊಡನೆ ಸೆಣಸಲಾಶಿಸದೆ ನಿಂದಿಸಿದನು. ಭೀಮನೊಡನೆ ಕಾದಾಡಿದರೆ ನಾವಿಬ್ಬರೂ ಸಮಬಲರಾದ್ದರಿಂದ ಒಂದು ವೇಳೆ ನಾನು ಬದುಕಿದರೂ ಬದುಕಬಹುದೆಂಬ ಆಶೆಯಿಂದ ಭೀಮಸೇನನನ್ನೇ ಯುದ್ಧಕ್ಕೆ ಕರೆದನು. ಹಿಂದೆ ಹದಿನೆಂಟು ಬಾರಿ ಕೃಷ್ಣನೊಡನೆ ಯುದ್ಧಮಾಡಿದ್ದ ಅವನಿಗೆ ಈ ಸಲ ಕೃಷ್ಣನು ತನ್ನನ್ನು ನಿಜವಾಗಿ ಸಂಹರಿಸಬಹುದೆಂಬ ಭೀತಿಯೂ ಇತ್ತು. ಆದ ಕಾರಣ ಅವನನ್ನು ಯುದ್ಧಕ್ಕೆ ಆಹ್ವಾನಿಸಲಿಲ್ಲ. ಒಂದು ವೇಳೆ ಪಾರ್ಥನೊಡನೆ ಕಾದಾಡಿ ನಾನು ಜಯಗಳಿಸಿದರೂ ಕೃಷ್ಣ-ಭೀಮರು ನನ್ನನ್ನು ಕೊಲ್ಲುವರು. ಬಲಹೀನನಾದ ಅರ್ಜುನನೊಡನೆ ಯುದ್ಧಮಾಡಿದರೆ ನನ್ನ ಕೀರ್ತಿನಾಶವಾಗುವುದೆಂದು ತಿಳಿದು ಅವನನ್ನು ಕರೆಯದೆ ಭೀಮನನ್ನು ಯುದ್ಧಕ್ಕೆ ಆಹ್ವಾನಿಸಿದನು. ಭೀಮನೊಡನೆ ಕಾದಾಡಿದಲ್ಲಿ ನನ್ನ ಕೀರ್ತಿಗೂ ಧಕ್ಕೆಬಾರದು. ನಾನು ಜೀವಿಸಿದರೂ ಜೀವಿಸಬಹುದೆಂದು ಅವನಿಗೆ ಯುದ್ಧಾಹ್ವಾನವಿತ್ತು ಪೂರ್ವದಲ್ಲಿ ಪತ್ರತಾಪನೆಂಬ ಹೆಸರಿನ ರುದ್ರನಾಗಿದ್ದು ಈಗ ತನ್ನ ಮಗನಾಗಿರುವ ಸಹದೇವನಿಗೆ ಮಗಧರಾಜ್ಯದಲ್ಲಿ ಪಟ್ಟಾಭಿಷೇಕಮಾಡಿ, ಬಲವಂತನಾದ ಜರಾಸಂಧನು ಭೀಮನ ಬಲಾಧಿಕ್ಯವನ್ನೂ, ಗದಾಯುದ್ಧದಲ್ಲಿ ತನಗಿರುವ ಚಾತುರ್ಯವನ್ನೂ ಅರಿತು, ಭೀಮನೊಡನೆ ಮುಷ್ಟಿಯುದ್ಧ ಮಾಡಲು ಅಳುಕಿ, ತಮ್ಮಿಬ್ಬರಿಗೂ ಗದಾಯುದ್ಧವೇ ಸೂಕ್ತವೆಂದಾಲೋಚಿಸಿ ಭೀಮನಿಗೆ ಒಂದು ಗದೆಯನ್ನಿತ್ತು ತಾನೂ ಒಂದು ಗದೆಯನ್ನು ಹಿಡಿದು ಯುದ್ಧಕ್ಕೆ ಸಿದ್ಧನಾದನು.

ಭೀಮಸೇನನು ಜರಾಸಂಧನ ಆಶೆಯನ್ನು ಪೂರೈಸಲೂ, ತನ್ನ ಗದಾಕದನಕೌಶಲವನ್ನು ತೋರಲೂ ಗದಾಪಾಣಿಯಾಗಿ ಕೃಷ್ಣಾರ್ಜುನರೊಡನೆ ನಗರದ ಹೊರವಲಯಕ್ಕೆ ಬಂದು ಸೇರಿದನು.

ಅಲ್ಲಿ ಭೀಮಸೇನನು ಕೃಷ್ಣಾರ್ಜುನರ ಎದುರು ಜರಾಸಂಧನೊಡನೆ ಯುದ್ಧ ಪ್ರಾರಂಭಿಸಿ ಮೊದಲು ರುದ್ರದೇವರ ಭಕ್ತನಾದ ಜರಾಸಂಧನನ್ನು ಭಗವಂತನ ಅನಂತ ಗುಣಪ್ರಕಾಶಕವೇದವಚನಗಳಿಂದ ಸೋಲಿಸಿ ಜಯಗಳಿಸಿದನು. ತರುವಾಯ ಭೀಮ-ಜರಾಸಂಧರು ಗದಾಯುದ್ಧ ಮಾಡುತ್ತಾ ಅದರಲ್ಲಿ ವಿವಿಧ ರೀತಿಯಾಗಿ ತಮ್ಮ ಕೌಶಲವನ್ನು ಪ್ರದರ್ಶಿಸಿದರು. ಕಲ್ಲುಬಂಡೆಯಮೇಲೆ ಮಣ್ಣಿನ ಹೆಂಟೆಯನ್ನು ಬಲವಾಗಿ ಎಸೆದರೆ ಅದೆಂತು ಪುಡಿಪುಡಿಯಾಗುವುದೋ ಅದರಂತೆ ಕ್ರೋಧಯುಕ್ತರಾಗಿ ಹೋರಾಡುವಾಗ ಪರಸ್ಪರ ವಕ್ಷಃಸ್ಥಳಗಳಿಗೆ ತಾಡಿತವಾಗಿ, ಉಭಯರ ದೇಹಗಳೂ

ಕಾಠಿಣ್ಯಪೂರ್ಣವಾದ್ದರಿಂದ ಅವರ ಗದೆಗಳೇ ಪುಡಿಪುಡಿಯಾದವು. ಗದೆಗಳು ಚೂರ್ಣೀಕೃತವಾದ್ದರಿಂದ ಪರಾಕ್ರಮಶಾಲಿಗಳಾದ ಅವರು ಶ್ರೀಕೇಶವ ಮತ್ತು ಕೈಟಭರಂತೆ ಪರಸ್ಪರ ಬ್ರಹ್ಮಾಂಡವನ್ನೇ ಭೇದಿಸುವಂತೆ ಶಬ್ದಾಯಮಾನವಾದ ಮುಷ್ಟಿಪ್ರಹಾರ ಮಾಡುತ್ತಾ ಕಾದಾಡಿದರು. ಅವರ ಭಯಂಕರ ಮುಷ್ಟಿಪ್ರಹಾರಗಳಿಂದ ಭೂಮಿಯು ನಡುಗಿತು ಗಿರಿಗಳು ಪುಡಿಯಾದವು. ಪರ್ವತಶ್ರೇಣಿಯು ಅಲುಗಾಡಿತು. ಸಮುದ್ರಗಳೆಲ್ಲ ಕದಡಿದವು. ದೇವತೆಗಳು, ಬ್ರಹ್ಮರುದ್ರಾದಿಗಳು ಅಂಬರದಲ್ಲಿ ನಿಂತು ಭೀಮ-ಜರಾಸಂಧರ ಯುದ್ಧವನ್ನು ನೋಡಹತ್ತಿದರು. ಅಮರರು ಭೀಮನು ಜಯಿಸಬೇಕೆಂದಾಶಿಸಿದರೆ, ಅಸುರರು ಜರಾಸಂಧನು ಗೆಲ್ಲಬೇಕೆಂದಾಶಿಸಿ ಅವರ ಭಯಂಕರ ಮುಷ್ಟಿಯುದ್ಧವನ್ನು ನೋಡುತ್ತಿದ್ದರು. ಪವನನಂದನನಾದ ಭೀಮಸೇನನು ಕ್ರಮವಾಗಿ ತನ್ನ ಮೂಲರೂಪದ ಬಲವನ್ನು ಸ್ವೀಕರಿಸಿದನು. ಬ್ರಹ್ಮದೇವರು ಜರಾಸಂಧನಿಗೆ ಅಜೇಯತ್ವ ವರವಿತ್ತಿದ್ದರಾದ್ದರಿಂದ ಬ್ರಹ್ಮದೇವರ ವರಕ್ಕೆ ಗೌರವ ತೋರಲು ಶ್ರೀವಾಸುದೇವನ ಆಣತಿಯಂತೆ ಹದಿನೈದು ದಿನ ಪರ್ಯಂತವಾಗಿ ಶತ್ರುವಾದ ಜರಾಸಂಧನೊಡನೆ ಕಾದಾಡಿ ಕೊನೆಗೆ ಅವನನ್ನು ಸಂಹರಿಸಲು ಮನಸ್ಸು ಮಾಡಿದನು. ಆಗ ಭೀಮನು ಕೃಷ್ಣನಿಗೆ ನಮಸ್ಕರಿಸಿ, ಅರ್ಜುನನನ್ನು ಪ್ರೇಮದಿಂದಾಲಿಂಗಿಸಿ ವನರಾಜನಾದ ಸಿಂಹವು ಮದಿಸಿದ ಆನೆಯ ಮಸ್ತಕವನ್ನು ಹಿಡಿದು ಭೇದಿಸುವಂತೆ ಜರಾಸುತನ ಮುಕುಟಭಾಗವನ್ನು ಬಲವಾಗಿ ಹಿಡಿದನು. ಅನಂತರ ಭೀಮನು ಜರಾಸಂಧನ ಬೆನ್ನಿನಲ್ಲಿ ತನ್ನ ಮೊಣಕಾಲೂರಿ ಹಿಡಿದು ಜರಾಸಂಧನು ಜನಿಸಿದಾಗ್ಗೆ ಎರಡು ಸೀಳಾಗಿದ್ದಂತೆ ಅವನ ಪೃಷ್ಠಮೂಲವನ್ನು ಸೀಳಿ ದೇಹವನ್ನು ಎರಡು ಭಾಗಮಾಡಿ ಎಸೆದನು. ಮರ್ಮಸ್ಥಾನ ಭೇದನದಿಂದ ಸಂಹರಿಸಬಾರದೆಂದು ಕೂರ್ಮಸ್ಥಾನದಲ್ಲಿ ಸೀಳಿಹಾಕಿದನು. ಭೀಮನು ಜರಾಸಂಧನನ್ನು ಸೀಳಿಹಾಕುವಾಗ ಬ್ರಹ್ಮಾಂಡವೇ ಮುರಿದು, ಮೂರು ಲೋಕಗಳೂ ಭಯಗ್ರಸ್ತವಾಗುವಂತಹ ಭೀಕರಧ್ವನಿಯು ಉಂಟಾಯಿತು.

ಭೀಮಸೇನನು ಕೃಷ್ಣಶತ್ರುವಾದ ಜರಾಸಂಧನ ಸಂಹಾರರೂಪ ಸೇವೆಯಿಂದ ಭಗವಾನ್ ಶ್ರೀಕೃಷ್ಣನನ್ನು ಪೂಜಿಸಿದನು. ಶತ್ರುಸಂಹಾರ ರೂಪವಾದ ಆ ಸೇವೆಯನ್ನು ಸ್ವೀಕರಿಸಲಿಕ್ಕಾಗಿಯೇ ಮಾಧವನು ಮಗಧರಾಜ್ಯಕ್ಕೆ ಬಂದಿದ್ದನು. ಭೀಮನ ಸೇವೆಯಿಂದ ಹೃಷ್ಟಾಂತಃಕರಣನಾಗಿ ಅವನನ್ನು ಗೋವಿಂದನು ಗಾಢವಾಗಿ ಆಲಿಂಗಿಸಿದನು. ಅತಿಶಯ ಮುದದಿಂದ ಅರ್ಜುನನು ಅಣ್ಣನಿಗೆ ನಮಸ್ಕರಿಸಿದಾಗ ವೃಕೋದರನು ಅವನನ್ನು ಬಿಗಿದಪ್ಪಿ, ಆನಂದನಿರ್ಭರನಾಗಿ ನಿಂತಿದ್ದ ಕೃಷ್ಣ ಪರಮಾತ್ಮನಿಗೆ ಪುನಃ ಸಾಷ್ಟಾಂಗವೆರಗಿದನು. ಶ್ರೀಕೃಷ್ಣನ ಆಶ್ರಯವುಳ್ಳ ಭೀಮನು ತನ್ನ ಸ್ವಾಭಾವಿಕಬಲದಿಂದ ಶ್ರೀರುದ್ರದೇವರು ಹಾಗೂ ದೂರ್ವಾಸರು ಕೊಟ್ಟಿದ್ದ ವರಗಳನ್ನು ಮುರಿದು ಹಾಕಿದ ಮೇಲೆ ಕಮಲಾಸನ ಬ್ರಹ್ಮಾದಿ ಅಮರನಿಕರರು ಆನಂದತುಂದಿಲರಾಗಿ ಮರಳಿ ಸ್ವಲೋಕಗಳಿಗೆ ಹೋದರು. ದೈತ್ಯರು ಅತಿಶಯ ದುಃಖಾರ್ತರಾಗಿ ನಿರ್ಗಮಿಸಿದರು.

ತಂದೆಯು ಮೃತನಾದ ಮೇಲೆ ಬುದ್ಧಿವಂತನಾದ ಸಹದೇವನು ಶ್ರೀಕೃಷ್ಣ-ಭೀಮಾರ್ಜುನರಿಗೆ ಶರಣಾಗಿ ಅವರಿಂದ ಪಾಲಿತನಾದನು. ಸಹದೇವನು ಭೀಮಸೇನನಿಗೆ ಒಂದು ದಿವ್ಯರಥವನ್ನೂ, ತನ್ನ ಸಹೋದರಿಯನ್ನೂ ಕಾಣಿಕೆಯಾಗಿ ನೀಡಿ, ಭಕ್ತಿಪರವಶನಾಗಿ ಮಾಧವನಿಗೆ ನಮಸ್ಕರಿಸಿದನು.

ಸಹದೇವನು ಭೀಮಸೇನನಿಗೆ ಅರ್ಪಿಸಿದ ರಥವು ಶ್ರೀಮನ್ನಾರಾಯಣನದು. ಇಂದ್ರದೇವನಿಂದ ವಸು ಎಂಬ ರಾಜನು ಅದನ್ನು ಪಡೆದಿದ್ದನು. ಜರಾಸಂಧನು ವಸುವಂಶಸಂಜಾತನಾದ್ದರಿಂದ ಆ ರಥವು ಅವನ ಬಳಿ ಇದ್ದಿತು. ಸಹದೇವನಿಂದ ಪಡೆದ ಭೀಮಸೇನನು ಅದನ್ನು ಶ್ರೀನಾರಾಯಣಾವತಾರಿಯಾದ ಶ್ರೀಕೃಷ್ಣನಿಗೆ ಸಮರ್ಪಿಸಿದನು. ಆಗ ಕೃಷ್ಣನು ಗರುಡದೇವನನ್ನು ಸ್ಮರಿಸಿದನು. ತತ್‌ಕ್ಷಣವೇ ಅಲ್ಲಿಗೆ ಬಂದ ಗರುಡನು ಶ್ರೀಹರಿಗೆ ನಮಿಸಿ ಆ ರಥದ ಮೇಲೆ ಧ್ವಜರೂಪತಾಳಿ ಶೋಭಿಸಿದನು. ಕೃಷ್ಣನು ಭೀಮಾರ್ಜುನರೊಡನೆ ಆ ರಥವೇರಿ ಕುಳಿತನು. ಸಹದೇವನು ಅರ್ಪಿಸಿದ ಜರಾಸಂಧನ ಮಗಳನ್ನು ಭೀಮಸೇನನು ತನ್ನ ಅನುಜನಾದ ಸಹದೇವನಿಗಾಗಿ ಸ್ವೀಕರಿಸಿ ಅವಳನ್ನೂ ತನ್ನೊಡನೆ ಕರೆದೊಯ್ದನು.

ಸಹದೇವನ ದ್ವಿತೀಯ ವಿವಾಹ ಪ್ರಸ್ತಾಪವು ಬಂದಿರುವುದರಿಂದ ನಕುಲನಿಗೂ ದ್ವಿತೀಯ ವಿವಾಹವಾದುದನ್ನೀಗ ನಿರೂಪಿಸುವರು.

ಸಹದೇವನಿಗೆ ಲಗ್ನವಾಗುವ ಮೊದಲೇ ಮದ್ರರಾಜನು ತನ್ನ ಪುತ್ರಿಯನ್ನು ನಕುಲನಿಗಿತ್ತು ಮದುವೆ ಮಾಡಿದ್ದನು. ಆ ಮದ್ರೇಶನ ಮಗಳು ಮತ್ತು ಜರಾಸಂಧನಪುತ್ರಿ ಹೀಗೆ ಅವರಿಬ್ಬರೂ ಮೂಲರೂಪದಲ್ಲಿ ಅಶ್ವಿನೀದೇವತೆಗಳ ಪತ್ನಿಯರಾದ ಒಬ್ಬಳೇ ಆಗಿರುವಳು. ಅವಳ ಹೆಸರು ಉಷಾ ಎಂದು. ನಕುಲ-ಸಹದೇವರಿಬ್ಬರೂ ಅವರೊಡನೆ ಕ್ರೀಡಿಸಿಕೊಂಡಿದ್ದರು. ಉಷಾ ಎಂಬುವವಳು ಅನಿರುದ್ಧನ ಪತ್ನಿಯು. ಉಷೆಯನ್ನು ಅಶ್ವಿನೀದೇವತೆಗಳ ಹೆಂಡತಿಯೆಂದು ಹೇಳಿದ್ದು ಸರಿಯೋ ಎಂಬ ಪ್ರಶ್ನೆ ಬಂದರೆ ವಿವರಿಸುತ್ತಾರೆ. ಅಶ್ವಿನೀದೇವತೆಗಳ ಪತ್ನಿಯಾದ ಉಷಾದೇವಿಯು ಉಷಃಕಾಲಾಭಿಮಾನಿಯಾದ್ದರಿಂದ ಅವಳು ಸಕಾರಾಂತ ಉಷಃಪದದಿಂದ ವಾಚ್ಯಳಾಗಿದ್ದಾಳೆ. ಅನಿರುದ್ಧನ ಪತ್ನಿಯಾದರೋ ಆಕಾರಾಂತವಾದ ಉಷಾಪದದಿಂದ ವಾಚ್ಯಳು. ಇಂತು ಅವರಿಬ್ಬರ ವಿಭಾಗ ತಿಳಿಯಬೇಕು. ಆದ್ದರಿಂದಲೇ "ಅನಿರುದ್ಧಪತ್ನೀ ತತ್ಸೂನೂ ಉಷಾರಮಣ ಉಚ್ಯತೇ" ಎಂದು ಉಕ್ತವಾಗಿದೆ. ಅಶ್ವಿನೀದೇವತೆಗಳ ಪತ್ನಿಯಾದ ಉಷಾಃ ಎಂಬುವವಳೊಬ್ಬಳೇ ನಕುಲ ಸಹದೇವರೊಡನೆ ವಿಹರಿಸಲು ಎರಡುರೂಪದಿಂದ ಅವರ ಪತ್ನಿಯಾಗಿ ಜನಿಸಿದ್ದಾಳೆ. ಈ ಎರಡನೆಯ ಮದುವೆಯಾದ ಮೇಲೆ ನಕುಲ ಸಹದೇವರು ದ್ರೌಪದಿಯನ್ನು ಅಣ್ಣನ ಭಾರ್ಯೆಯಾದ ಅತ್ತಿಗೆ ಎಂಬುದಾಗಿ ಭಾವಿಸಿದರು. ಅಂದರೆ ತಮಗೆ ನಿಶ್ಚಿತವಾದ ವರ್ಷದಲ್ಲಿ ದ್ರೌಪದಿಯ ದೇಹದಲ್ಲಿರುವ ತನ್ನ ಪತ್ನಿಯ ಸಂಗವನ್ನು ಮಾಡಲಿಲ್ಲ.

ಜರಾಸಂಧನ ಮಗನಾದ ಸಹದೇವನು ಶ್ರೀವಾಸುದೇವ ಮತ್ತು ಭೀಮಾರ್ಜುನರನ್ನು ಅನರ್ಘ್ಯನವರತ್ನಾದಿಗಳಿಂದ ಅರ್ಚಿಸಿ ಅವರ ಅಜ್ಞೆ ಪಡೆದು ರಣರಂಗದಿಂದ ತನ್ನ ಅರಮನೆಗೆ ಹೊರಟನು. ಶ್ರೀಕೃಷ್ಣಾದಿಗಳ ಅಣತಿಯಂತೆ ಸಹದೇವನು ತಂದೆಯಾದ ಜರಾಸಂಧನಿಗೆ ತಿಲಾಂಜಲಿ, ಮತ್ತು ಔರ್ಧ್ವದೇಹಿಕವಾದ ಕರ್ಮಗಳನ್ನು ಆಚರಿಸಿ ಶ್ರೀಕೃಷ್ಣನ ಅಪ್ಪಣೆಯಂತೆ ಯಜ್ಞದಲ್ಲಿ ಬಲಿಕೊಡಲು ಜರಾಸಂಧನು ಬಂಧಿಸಿಟ್ಟಿದ್ದ ಸಮಸ್ತರಾಜರನ್ನೂ ಬಿಡುಗಡೆ ಮಾಡಿದನು. ಭೀಮಾರ್ಜುನ-ರಿಂದೊಡಗೂಡಿದ ಶ್ರೀರಮಾಧವನು ಮಹಾತ್ಮ್ಯಜ್ಞಾನಪೂರ್ವಕವಾಗಿ ಆ ಎಲ್ಲ ನೃಪತಿಗಳಿಂದ ತತ್ತದ್ಯೋಗ್ಯ ತಾನುಸಾರವಾಗಿ ಚೆನ್ನಾಗಿ ಸುತ್ತಿಕೊಂಡನು. ಸಹದೇವನಿಂದ ಮಾನಿತರಾದ ಸಕಲರಾಜರೂ ಕೃಷ್ಣಾದಿಗಳನ್ನು ಕೊಂಡಾಡಿ ತಮ್ಮ ತಮ್ಮ ಊರುಗಳಿಗೆ ಪ್ರಯಾಣ ಬೆಳೆಸಿದರು. ಶ್ರೀಕೃಷ್ಣನ ಶತ್ರುವಾದ ಜರಾಸಂಧನು 'ಅಸಿಪತ್ರ' ಮೊದಲಾದ ಅನೇಕ ನರಕಗಳನ್ನು ಅನುಭವಿಸಿ ಅಂಧಂತಮಸ್ಸಿನಲ್ಲಿ ಬಿದ್ದನು.

ಶ್ರೀಕೃಷ್ಣ-ಭೀಮಾರ್ಜುನರು ಒಂದೇ ರಥದಲ್ಲಿ ಕುಳಿತು ಇಂದ್ರಪ್ರಸ್ಥಕ್ಕೆ ತೆರಳಿದರು. ಅವರು ಮಾಡಿದ ಶಂಖಧ್ವನಿಯಿಂದ ಅವರು ಜಯಶೀಲರಾಗಿ ಬರುತ್ತಿದ್ದಾರೆಂದು ನಿಶ್ಚಯಿಸಿ ಯುಧಿಷ್ಠಿರನು ಪರಮಾನಂದಭರಿತನಾದನು.

ಕೃಷ್ಣ-ಭೀಮಾರ್ಜುನರು ಆಗಮಿಸಿದ ಮೇಲೆ ಭಗವಾನ್ ಶ್ರೀಬಾದರಾಯಣರು ಅಲ್ಲಿಗೆ ಬಂದು ಯಜ್ಞಾಂಗಭೂತವಾದ ಸಕಲ ಸಾಧನಗಳನ್ನು ಶೇಖರಿಸುವಂತೆ ಪಾಂಡವರಿಗೆ ಅಪ್ಪಣೆ ಮಾಡಿದರು. ಬ್ರಹ್ಮದೇವರನ್ನು ಹೊರತು ಬೇರಾರೂ ಆಚರಿಸ-ದಿರುವ ರಾಜಸೂಯಯಾಗದೊಡನೆ, ಬ್ರಹ್ಮಪಟ್ಟಕ್ಕೆಯೋಗ್ಯವಾದ ಅಶ್ವಮೇಧಯಜ್ಞವನ್ನೂ ಮಾಡುವಂತೆ ಆಜ್ಞಾಪಿಸಿದರು.''

ಬ್ರಹ್ಮಪದವಿಯೊಂದನ್ನು ಬಿಟ್ಟು ಮಿಕ್ಕುಳಿದ ಜ್ಞಾನ-ಭಕ್ತ್ಯಾದಿ ಸದ್ಗುಣಗಳಿಂದ ಬ್ರಹ್ಮಸಮಾನನಾದವನು ರಾಜ-ಸೂಯಯಾಗವನ್ನು ಆಚರಿಸಿದಲ್ಲಿ ಅಂಥವನು ಬ್ರಹ್ಮಪದವಿಯನ್ನು ಪಡೆಯುವನು. ಇದು ಪ್ರಸಿದ್ಧವು. ಆದ್ದರಿಂದಲೇ

33. ರಾಜಸೂಯ ಸಹಿತವಾದ ಯಜ್ಞವೆಂದರೆ "ರಾಜ್ಞಾಂಸೂಯಂ= ಸೂದನಂ, ಜಯ ಇತಿ ಯಾವತ್, ತೇನ ಸಹಿತಂ ವರಾಶ್ವಮೇಧಂ" ಅಂದರೆ ಎಲ್ಲ ರಾಜರನ್ನು ಜಯಿಸುವುದರೊಡನೆ ಮಾಡುವ ಶ್ರೇಷ್ಠವಾದ ಯಜ್ಞ ಅಶ್ವಮೇಧವು. ಸಗರಾದಿಗಳು ಮಾಡಿದ್ದಕ್ಕಿಂತ ಶ್ರೇಷ್ಠವಾದದ್ದೆಂತು ತಿಳಿಸಲು ವರ ಎಂಬ ವಿಶೇಷಣ ಎಂದು ತಿಳಿಯಬೇಕೆಂದು ಶ್ರೀಪಾದರಾಜಪೂಜ್ಯಚರಣರ ವ್ಯಾಖ್ಯಾನದಲ್ಲಿ ಉಕ್ತವಾಗಿದೆ.

ಜ್ಞಾನ-ಭಕ್ತ್ಯಾದಿ ಸದ್ಗುಣಗಳಿಂದ ಬ್ರಹ್ಮನಿಗೆ ಸಮಾನನಾದ ಭೀಮಸೇನನಿಗೆ ಯಜ್ಞದ ಪೂರ್ಣಫಲವನ್ನು ಅಂದರೆ ಬ್ರಹ್ಮಪದ ಪ್ರಾಪ್ತಿರೂಪಫಲವನ್ನು ಕೊಡಿಸಬೇಕೆಂದು ಚತುರ್ಮುಖ ಬ್ರಹ್ಮದೇವನಿಗೆ ಉಪದೇಶಕ(ಗುರು)ರಾದ ಶ್ರೀವೇದವ್ಯಾಸ ದೇವರು ರಾಜಸೂಯಯಾಗವನ್ನು ಮಾಡುವಂತೆ ಅಪ್ಪಣೆ ಮಾಡಿದರು. ಒಂದು ಕರ್ಮಕ್ಕೆ ಮುಖ್ಯಕಾರಣನಾದ ಜೀವನು ಆ ಕರ್ಮದಿಂದ ಲಭಿಸುವ ಮುಖ್ಯಫಲವನ್ನು ಹೊಂದುವನು. ಸಾಧಾರಣ ಕಾರಣನಾದವನು ಸಾಧಾರಣ ಫಲವನ್ನು ಭೋಗಿಸುವನು. ಇದು ಶಾಸ್ತ್ರ ನಿರ್ಣಯವು.

ಮೇಲೆ ನಿರೂಪಿಸಿದಂತೆ ಎಲ್ಲ ಕಡೆಗಳಲ್ಲೂ ನಿರ್ಣಯ ಮಾಡುವುದಾದರೆ ಸಕಲಕರ್ಮಗಳಿಗೂ ಶ್ರೀಹರಿಯೇ ಮುಖ್ಯ ಕಾರಣನಾದ್ದರಿಂದ ಶ್ರೀವಿಷ್ಣುವಿಗೇ ಸರ್ವಕರ್ಮಗಳ ಮುಖ್ಯಫಲಬರಬೇಕಲ್ಲವೆ? ಎಂದು ಅಲ್ಲಿ ಸಂದೇಹಬರುವುದು ಸ್ವಾಭಾವಿಕವಾಗಿದೆ. ಇದನ್ನು ಹೀಗೆ ಪರಿಹರಿಸಿಕೊಳ್ಳಬೇಕು. ಶ್ರೀಹರಿಯನ್ನು ಹೊರತುಪಡಿಸಿ ಈ ನಿರ್ಣಯವೆಂದರಿಯಬೇಕು ಆದ್ದರಿಂದ ಈ ನಿರ್ಣಯವು ಸರಿಯಾಗಿದೆ.

ಶ್ರೀಹರಿಯು ಸರ್ವಪ್ರೇರಕನಾಗಿ ಮುಖ್ಯಕರ್ತನೆನಿಸಿದರೂ ಅವನು ಪಾಪಪುಣ್ಯಕರ್ಮಗಳ ಫಲದಿಂದ ರಹಿತನಾಗಿದ್ದಾನೆ. ಅವನು ಸ್ವರ್ಗನರಕಾದಿ ಭೋಗವಿಲ್ಲದವನು. ದೇವತೆಗಳು ಪಾಪಪ್ರೇರಕರಾಗಿ ಕಾರಣರಾಗಿದ್ದರೂ ಸಹ ಅವರು ಆ ಫಲವನ್ನು ಅನುಭವಿಸುವುದಿಲ್ಲ. ದೈತ್ಯರು ತಾವು ಅತಿಯಾಗಿ ಮಾಡಿದ ಪುಣ್ಯಫಲವನ್ನು ಅನುಭವಿಸುವುದಿಲ್ಲ. ಉದಾಹರಣೆಗೆ ಹೇಳುವುದಾದರೆ ದುರ್ಯೋಧನಾದಿ ದೈತ್ಯರು ಪುಂಡರೀಕಯಜ್ಞ ಮುಂತಾದ ಪುಣ್ಯವನ್ನು ಮಾಡುವರು. ಅದರ ಪೂರ್ಣಫಲವನ್ನು ದುರ್ಯೋಧನಾದಿಗಳಲ್ಲಿ ಆವಿಷ್ಟರಾದ ಶ್ರೀಮುಖ್ಯಪ್ರಾಣದೇವರೇ ಸ್ವೀಕರಿಸುತ್ತಾರೆ. ದುರ್ಯೋಧನಾದಿಗಳು ದಂಭ-ಮಾತ್ಸರ್ಯಾದಿಗಳಿಂದ ಯಾಗವನ್ನಾಚರಿಸುವುದರಿಂದ ಅವರು ಅಲ್ಪಫಲವನ್ನು ಮಾತ್ರ ಅನುಭವಿಸುವರು. ಮಾನವರಾದರೋ ದೇವತೆಗಳು ಮತ್ತು ದೈತ್ಯರಿಂದ ಅಪಹೃತವಾದ ಪುಣ್ಯಪಾಪಗಳ ಒಂದೊಂದು ಭಾಗ ಫಲವುಳ್ಳವರಾಗಿದ್ದಾರೆ.

ಈ ಯಜ್ಞಕ್ಕೆ ಭೀಮಸೇನನು ಅಸಾಧಾರಣಕಾರಣನಾಗಿದ್ದಾನೆ. ಏಕೆಂದರೆ ಬೇರಾರಿಂದಲೂ ಜಯಿಸಲಾಗದ ಜರಾ-ಸಂಧನವಧೆ, ಕರ್ಣವಿಜಯ, ಕೀಚಕಾದಿಗಳನ್ನು ಗೆಲ್ಲುವುದು-ಇವು ಮುಂತಾದವು ಭೀಮನ ಅಸಾಧಾರಣ ಕಾರಣತ್ವ-ದ್ಯೋತಕವಾಗಿವೆ. ಭೀಮನ ತರುವಾಯ ಎರಡನೆಯವನು ಅರ್ಜುನ. ಧರ್ಮರಾಜನು ಮೂರನೆಯವನು. ಆದ್ದರಿಂದ ವೇದವ್ಯಾಸರು ಭೀಮನಿಗೇ ಅಸಾಧಾರಣ ಮುಖ್ಯಕಾರಣತ್ವವನ್ನು ನಿರ್ಣಯಿಸಿದರು. ಈವರೆಗೆ ಮತ್ತಾರೂ ಮಾಡಿರದ ದಶದಿಕ್ಕುಗಳ ವಿಜಯಕ್ಕೆ ಭೀಮಸೇನನು ಹೊರಡಬೇಕೆಂದಾಜ್ಞಾಪಿಸಿದರು.

ಆಗ ಅರ್ಜುನನು ವೇದವ್ಯಾಸರನ್ನು ಕುರಿತು "ನನಗೆ ಶ್ರೇಷ್ಠವಾದ ರಥಧ್ವಜಗಳಿವೆ. ನಾನು ಹತ್ತು ದಿಕ್ಕುಗಳನ್ನೂ ಜಯಿಸಬಲ್ಲೆನಾದ್ದರಿಂದ ಆ ದಿಕ್ಕಿಗೆ ಹೋಗಿ ನಾನು ವಿಜಯವನ್ನು ಸಾಧಿಸಲಾಶಿಸುತ್ತೇನೆ" ಎಂದು ವಿಜ್ಞಾಪಿಸಿದನು. ಅವನ ಮಾತು ಕೇಳಿ ಸರ್ವರಿಗೂ ಪ್ರಭುಗಳಾದ ಶ್ರೀವೇದವ್ಯಾಸರು "ನಿಜ, ಅರ್ಜುನ ನಿನಗೆ ಎಲ್ಲವೂ ಇದೆ. ವಿಜಯಗಳಿಸಲು ಎಲ್ಲ ಸಾಧನಗಳೂ ನಿನಗಿದ್ದು, ನೀನು ಉನ್ನತ ಪರಾಕ್ರಮಕೀರ್ತಿಶಾಲಿಯಾಗಿರುವೆ. ಆದರೂ ಭೀಮಸೇನನ ಹೊರತು ಕೀಚಕ ಮೊದಲಾದವರು ನಿನಗೆ ವಶವಾಗಲಾರರು. ನೀನು ಕರ್ಣನಿಗಿಂತ ಬಲಶಾಲಿ. ಆದರೂ ಕರ್ಣನು ಸಹ ನಿನಗೆ ಅಧೀನ-ನಾಗಲಾರ ಮತ್ತು ಅವನು ಬದುಕಿರುವವರೆಗೂ ನಿನಗೆ ಕಷ್ಟವನ್ನು ಕೊಡುವುದಿಲ್ಲ. ಸ್ಪರ್ಧೆಯಿಂದ ಯುದ್ಧಮಾಡುವ ಅವನನ್ನು ಸದ್ಯ ವಧಿಸಲೂ ನಿನ್ನಿಂದಾಗದು. ಅವನಿಗೆ ಅಸಾಧಾರಣಗಳಾದ ಕರ್ಣಕುಂಡಲ-ಕವಚಗಳಿವೆ. ಆದುದರಿಂದ ವೃಕೋದರನೇ ನಿನ್ನ ತಂದೆಗೆ ಪ್ರಿಯವಾದ ಪೂರ್ವದಿಕ್ಕಿನ ಕಡೆಗೆ ದಿಗ್ವಿಜಯ ಯಾತ್ರೆಯನ್ನು ಕೈಗೊಳ್ಳಲಿ. ಹಿಂದೆ ಕರ್ಣನು ಭೀಮನಿಂದ ಯುದ್ಧದಲ್ಲಿ ಸೋತಿದ್ದಾನೆ. ಭೀಮನು ತನ್ನನ್ನು ಜೀವಂತವಾಗಿ ಬಂಧಿಸುವನೆಂಬ ಭಯದಿಂದ ಅವನಿಗೆ

ಕಪ್ಪವನ್ನು ಕೊಡುತ್ತಾನೆ. ಇದರಲ್ಲಿ ಸಂದೇಹವಿಲ್ಲ. ರುದ್ರ ದೇವರ ವರದಿಂದ ಅಜೇಯರಾದ ಕೀಚಕ ಮತ್ತು ಪೌಂಡ್ರಕನೂ ಭೀಮನಿಗೆ ಯುದ್ಧದಲ್ಲಿ ವಶರಾಗುವರು. ಇದರಂತೆ ಅವಧ್ಯನಾದ ಶಿಶುಪಾಲನೂ ಕದನದಲ್ಲಿ ಸೋತು ಭೀಮನಿಗೆ ವಶನಾಗಿ ಕಪ್ಪವನ್ನು ಕೊಡುವನು. ಜರಾಸಂಧನನ್ನು ಭೀಮಸೇನನು ಸಂಹರಿಸಿರುವುದರಿಂದ ಕೀಚಕಾದಿಗಳಿಗೆ ಭೀಮನು ತಮ್ಮನ್ನು ಬಂಧಿಸುವನೆಂಬ ಭಯ ಮತ್ತು ನಿಶ್ಚಯವಿರುವುದರಿಂದ ಅವರು ಪರಾಜಿತರಾಗಿ ಅಥವಾ ಅದಕ್ಕೆ ಮೊದಲೇ ಕಪ್ಪಕಾಣಿಕೆಗಳನ್ನು ನೀಡುವರು. ಅರ್ಜುನ, ನೀನು ಕುಬೇರನಿಂದ ಪಾಲಿತವಾದ ಉತ್ತರ ದಿಕ್ಕಿನ ಕಡೆಗೂ, ಸಪ್ತದ್ವೀಪವಾಸಿಗಳ ಕಡೆಗೆ ಹೋಗಿ ಮತ್ತು ಅಧೋಭಾಗದಲ್ಲಿರುವ ಪಾತಾಳಾದಿ ಸಪ್ತಲೋಕಗಳಲ್ಲಿರುವ ನಾಗರು ದೈತ್ಯರುಗಳನ್ನು ಜಯಿಸಿ ಇಲ್ಲಿಗೆ ಹಿಂದಿರುಗಿ ಬಾ" ಎಂದು ಹೇಳಿದರು.

ಶ್ರೀವೇದವ್ಯಾಸದೇವರು ಮುಂದುವರೆದು ಬಹುಲಕ್ಷಯೋಜನಗಳ ಅಂತರವಿರುವ ಸಪ್ತಸಮುದ್ರಗಳನ್ನು ಅರ್ಜುನ-ನೇತು ದಾಟಲು ಸಾಧ್ಯ? ಎಂಬ ಸಂಶಯವನ್ನು ಪರಿಹರಿಸುತ್ತ "ಪಾರ್ಥ! ನಿನಗೆ ದಿವ್ಯವಾದ ಅಲೌಕಿಕವಾದ ಅಂಬರದಲ್ಲಿ ಸಂಚರಿಸಲು ಸಮರ್ಥವಾದ ರಥವಿದೆ. ದಿವ್ಯಾಸ್ತ್ರಗಳಿವೆ, ಶ್ರೇಷ್ಠ ಧನುಸ್ಸಿದೆ. ಆದ್ದರಿಂದ ಈ ಕಾರ್ಯವನ್ನು ಖಂಡಿತ ನೀನು ಸಾಧಿಸಬಲ್ಲೆ! ಆದ್ದರಿಂದ ಅರ್ಜುನ, ರುದ್ರದೇವರ ಆಶ್ರಯ ಬಲದಿಂದ ಮದಿಸಿರುವ ಬಾಣಾಸುರ ಮುಂತಾದವರನ್ನು ಜಯಿಸಲು ವಾಯುಪುತ್ರನಾದ ಭೀಮಸೇನನು ಹೋಗಲಿ. ಅವನಿಗೆ ಕೀಚಕ-ಬಾಣ ಮೊದಲಾದ ಅಸುರರೆಲ್ಲರೂ ಕಪ್ಪವನ್ನು ಕೊಡುವರು. ರುದ್ರನವರದಿಂದ ಅಜೇಯರಾದ ತ್ರೈಗರ್ತಾದಿ ಅಸುರರು ನನ್ನ ಆಜ್ಞೆಯಿಂದಲೇ ಕಪ್ಪ ನೀಡುವರು. ಇದರಂತೆ ನನ್ನ ಅಪ್ಪಣೆಯಿರುವುದರಿಂದ ಸಕಲದೇವತೆಗಳೂ ಭೀಮನಿಗೆ ಕಪ್ಪ ನೀಡುವರು. ಇನ್ನು ನಕುಲ-ಸಹದೇವರು ಈ ಯಾಗದ ಯಶಸ್ಸಿಗಾಗಿ ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳಿಗೆ ಹೋಗಿ ವಿಜಯಶಾಲಿಗಳಾಗಿ ಬರಲಿ. ಇವರಿಗೂ ಅಂದರೆ ನಕುಲ-ಸಹದೇವರಿಗೂ ಯಶಸ್ಸು ಮತ್ತು ಧರ್ಮವೂ ಲಭಿಸುವುದು" ಇಂತು ಸತ್ಯವತೀಹೃದಯ ನಂದನರಾದ ಶ್ರೀವೇದವ್ಯಾಸ-ದೇವರು ಅಪ್ಪಣೆ ಮಾಡಲು ಸರ್ವೋತ್ತಮರೂ, ಶ್ರೇಷ್ಠ, ನಿರ್ದುಷ್ಟ ಗುಣಗಣವಿಭೂಷಿತರಾದ ಶ್ರೀವ್ಯಾಸರಿಗೆ ಭೀಮಾ-ರ್ಜುನಾದಿಗಳು ವಂದಿಸಿ ಅವರ ಆಣತಿಯಂತೆ ಆಯಾ ದಿಕ್ಕುಗಳ ಕಡೆಗೆ ವಿಜಯಯಾತ್ರೆ ಕೈಗೊಂಡು ಹೊರಟರು.

ಭೀಮಸೇನನು ರಾಜರನ್ನು ಜಯಿಸುತ್ತಾ ವಿರಾಟನಗರಕ್ಕೆ ಬಂದು ಅಲ್ಲಿ ಯುದ್ಧದಲ್ಲಿ ಕೀಚಕನನ್ನು ಗೆದ್ದು ವಿರಾಟ-ರಾಜನಿಂದ ಕಪ್ಪವನ್ನು ಪಡೆದನು. ನಂತರ ಅವನು ಎಲ್ಲ ರಾಜರನ್ನು ಜಯಿಸುತ್ತಾ ಕ್ರಮವಾಗಿ ಕಪ್ಪ ಪಡೆಯುತ್ತಾ ಚೇದಿ ದೇಶಕ್ಕೆ ಬಂದನು. ಅಲ್ಲಿ ತನ್ನ ತಾಯಿಯ ಅಪ್ಪಣೆಯಂತೆ ಶಿಶುಪಾಲನು ಭೀಮನನ್ನು ಪೂಜಿಸಿದನು. ಭೀಮನು ತನ್ನ ಚಿಕ್ಕಮ್ಮನ (ಕುಂತಿಯ ತಂಗಿ) ಮನೆಯಲ್ಲಿ ಕೆಲದಿನಗಳ ಕಾಲ ಸುಖವಾಗಿ ತಂಗಿದ್ದು ಶಿಶುಪಾಲನಿಂದ ಹೆಚ್ಚಾದ ಕಪ್ಪಕಾಣಿಕೆಗಳನ್ನು ಸ್ವೀಕರಿಸಿ, ಅಲ್ಲಿಂದ ಪೂರ್ವದಿಕ್ಕಿಗೆ ಪ್ರಯಾಣ ಬೆಳೆಸಿದನು. ಅವನು ಕ್ರಮವಾಗಿ ಪೂರ್ವದಿಕ್ಕಿನಲ್ಲಿರುವ ಸಮಸ್ತ ರಾಜರನ್ನೂ, ಮಹಾಪರಾಕ್ರಮಿಯಾದ ಪೌಂಡ್ರಕ ವಾಸುದೇವನನ್ನೂ ಜಯಿಸಿ, ಕರ್ಣನನ್ನು ರಥದಿಂದ ಕೆಳಗೆ ಬೀಳಿಸಿ ಅವರೆಲ್ಲರಿಂದ ಕಪ್ಪವನ್ನು ಪಡೆದು ಹಿಮವತ್ಪರ್ವತದ ಶಿಖರದಲ್ಲಿ ಲೀಲೆಗೋಸ್ಕರವಾಗಿ ಯುದ್ಧಮಾಡಲು ಬಂದ ದೇವೇಂದ್ರಾದಿ ಸಕಲ ದೇವತೆಗಳನ್ನೂ ಜಯಿಸಿ, ಭೀಮನ ಪರಮಸಾಮರ್ಥ್ಯದಿಂದ ಮುದಿತರಾದ ಇಂದ್ರಾದಿದೇವತೆಗಳಿಂದ ಅಗಣಿತ ನವರತ್ನರಾಶಿಯನ್ನು ಸ್ವೀಕರಿಸಿ, ಬಾಹುಯುದ್ಧ ವಿಶಾರದರಾದ ಪರಾಕ್ರಮಶಾಲಿಗಳಾದ ಶೇಷ ಹಾಗೂ ಗರುಡ-ದೇವರನ್ನು ಪರಾಜಯಗೊಳಿಸಿ ಸ್ನೇಹಪರವರನಾಗಿ ಅವರನ್ನು ಆಲಂಗಿಸಿ, ಅವರು ಹರುಷನಿರ್ಭರರಾಗಿ ಕೊಡ ಮಾಡಿದ ರತ್ನಾಭರಣಾದಿಗಳನ್ನು ಪಡೆದನು.

ಆ ನಂತರ ಮಹಾಬಲಶಾಲಿಯಾದ ಭೀಮನು ಸಮುದ್ರದಲ್ಲಿ ಈಜಾಡಿ ಬಾಣಾಸುರನ ಪಟ್ಟಣಕ್ಕೆ ಬಂದನು. ಅಲ್ಲಿ ಗಜರೂಪದಿಂದ ಕ್ರೀಡೆಗಾಗಿ ಯುದ್ಧಮಾಡಲು ಬಂದ ರುದ್ರದೇವರನ್ನು ಕದನದಲ್ಲಿ ಜಯಿಸಿದನು. ರುದ್ರದೇವನು ಭೀಮನ

ಕದನ ಚಾತುರ್ಯವನ್ನು ಕಂಡು ಆನಂದಿಸಿ "ಭೀಮದೇವ! ನೀನು ಯಾವ ಯಾವ ದಿಕ್ಕುಗಳಲ್ಲಿ ಜಯಗಳಿಸಿದಿ?" ಎಂದು ಪ್ರಶ್ನಿಸಲು ಭೀಮನು ಸಿಂಹ, ವ್ಯಾಘ್ರಾದಿ ರೂಪದಿಂದ ಕದನಕ್ಕಾಗಿ ಬಂದ ಗರುಡ, ಶೇಷ, ಇಂದ್ರಾದಿಗಳನ್ನು ತಾನು ಜಯಿಸಿದ ಪ್ರಕಾರವನ್ನು ವಿಸ್ತಾರವಾಗಿ ನಿರೂಪಿಸಿದನು. ರುದ್ರದೇವರು ಭೀಮಾದಿ ಪಾಂಡವರು ಆಚರಿಸಲಿರುವ ಯಜ್ಞದ ವಿಚಾರ, ಅದನ್ನು ಯಶಸ್ಕರವಾಗಿ ನೆರವೇರಿಸುವ ಹೊಣೆ ಹೊತ್ತಿರುವ ಮುಖ್ಯ ಕಾರಣರೂ ಆಗಿರುವ ಶ್ರೀಕೃಷ್ಣ-ವೇದವ್ಯಾಸ ಆಣತಿಯಂತೆಯೇ ತಾವೀಕಾರ್ಯವನ್ನು ಹಮ್ಮಿಕೊಂಡಿರುವ ವಿಚಾರವನ್ನು ಭೀಮನಿಂದ ತಿಳಿದು ಮುದಗೊಂಡು ಬಲಿಚಕ್ರವರ್ತಿಯ ಸುತನಾದ ಬಾಣಾಸುರನಿಂದ ಅಲೌಕಿಕ-ಅತ್ಯಮೌಲ್ಯಗಳಾದ ಶ್ರೇಷ್ಠ ರತ್ನಸಮೂಹವನ್ನು ತರಿಸಿಕೊಂಡು ಭೀಮಸೇನನಿಗೆ ನೀಡಿದರು. ಅದನ್ನು ಸ್ವೀಕರಿಸಿದ ಭೀಮನು ಮಹಾವಿಜಯಿಯೆನಿಸಿ ಇಂದ್ರಪ್ರಸ್ಥಕ್ಕೆ ಬಂದು ಆ ದಿಗ್ವಿಜಯ ಕಾಲದಲ್ಲಿ ಸಂಪಾದಿಸಿದ ನವರತ್ನಾದಿ ಸಂಪತ್ತನ್ನು ವ್ಯಾಸ-ಕೃಷ್ಣ ಎಂಬ ಎರಡು ರೂಪದ ಶ್ರೀಹರಿಯ ಪದತಲಗಳಲ್ಲಿಟ್ಟು ಸಾಷ್ಟಾಂಗ ನಮಸ್ಕಾರ ಮಾಡಿದನು. ತರುವಾಯ ಅಗ್ರಜನಾದ ಧರ್ಮರಾಜನಿಗೆ ನಮಸ್ಕರಿಸಿ ಶ್ರೀವ್ಯಾಸ-ಕೃಷ್ಣರ ಸಮಕ್ಷ ತನ್ನ ದಿಗ್ವಿಜಯ ವಾರ್ತೆಯನ್ನು ವಿವರಿಸಿದನು. ಕೀಚಕಾದಿಗಳು, ಏಕಲವ್ಯನ ಸಹಾಯಯುಕ್ತನಾದ ಪೌಂಡ್ರಕ, ಕರ್ಣಾದಿಗಳು ಪರಾಜಿತರಾದುದನ್ನೂ ಮತ್ತು ಸಿಂಹಾದಿರೂಪವುಳ್ಳ ಶೇಷ-ಗರುಡ-ಇಂದ್ರಾದಿ ದೇವತೆಗಳು, ಹಾಗೂ ಗಜರೂಪದ ರುದ್ರದೇವರು, ಇವರೆಲ್ಲರೂ ತನ್ನಿಂದ ಪರಾಜಿತರಾದ ಬಗೆಯನ್ನು ಅರುಹಿದನು. ಶ್ರೀವೇದವ್ಯಾಸ-ಕೃಷ್ಣ ಮತ್ತು ಯುಧಿಷ್ಠಿರಾದಿಗಳು ಸಂತಸಗೊಂಡು ಭೀಮನನ್ನು ಚೆನ್ನಾಗಿ ಗೌರವಿಸಿದರು. ಅನಂತರ ಭೀಮನು ಶ್ರೀವ್ಯಾಸರ ಅಪ್ಪಣೆಯಂತೆ ಯಜ್ಞಸಾಧನ ಸಾಮಗ್ರಿಯನ್ನು ಸಂಗ್ರಹಿಸಿದನು.

ತರುವಾಯ ತಮ್ಮಾಣತಿಯಂತೆ ದಿಗ್ವಿಜಯ ಸಾಧಿಸಿ ಬಂದಿರುವ ಭೀಮಸೇನನನ್ನು ಶ್ರೀವೇದವ್ಯಾಸರು ಶ್ಲಾಘಿಸಿ "ಶತ್ರುಸಂಹಾರಕನಾದ ಭೀಮಸೇನ! ಸಮಸ್ತ ರಾಜರನ್ನು ಜಯಿಸಿದರೆ ಮಾತ್ರ ಈ ಯಾಗವು ಪೂರ್ಣವಾಗುವುದು. ಇಲ್ಲದಿದ್ದರೆ ಸಾಧ್ಯವಿಲ್ಲ. ನೀನೀಗ ನಿಖಿಲರಾಜಾಧಿರಾಜರನ್ನು ಜಯಿಸಿರುತ್ತೀಯೆ. ಈ ಮೊದಲು ಶ್ರೀಬ್ರಹ್ಮದೇವರು ಸಕಲರನ್ನೂ ಗೆದ್ದಿದ್ದರು. ಬ್ರಹ್ಮದೇವರ ನಂತರ ನೀನು ಈಗ ಎಲ್ಲರನ್ನೂ ಜಯಿಸಿ ಎರಡನೆಯವನಾಗಿದ್ದೀಯೆ" ಎಂದು ಅವನನ್ನು ಮುಕ್ತಕಂಠದಿಂದ ಹೊಗಳಿದರು. ನಂತರ ಭೀಮನು ಶ್ರೀವ್ಯಾಸರಾಣತಿಯಂತೆ ಯಜ್ಞ ನೆರವೇರಿಸಲು ಬೇಕಾದ ಪಾತ್ರಾದಿ ಸಾಧನಗಳನ್ನು ಸಂಪಾದಿಸಿದನು.

ಅದೇ ಸಮಯದಲ್ಲಿ ಅರ್ಜುನಾದಿ ಮೂರುಜನ ಸಹೋದರರು ಉಳಿದ ಮೂರು ದಿಕ್ಕುಗಳಲ್ಲಿ ರಾಜರುಗಳನ್ನು ಜಯಿಸಿ ರಾಜಧಾನಿಗೆ ಹಿಂದಿರುಗಿ ಬಂದರು. ಸಹದೇವನು ದಕ್ಷಿಣದಿಕ್ಕಿನಲ್ಲಿ ದಿಗ್ವಿಜಯ ಮಾಡಿಕೊಂಡು ಅಸಂಖ್ಯ ರತ್ನಾದಿ ಕಪ್ಪಗಳನ್ನು ತಂದನು. ದಕ್ಷಿಣ ದಿಕ್ಕಿನಲ್ಲಿರುವ ಕುಂಡನೀಪುರಾಧೀಶನಾದ ರುಗ್ಮಿಯು ಸಹದೇವನೊಡನೆ ಯುದ್ಧ ಮಾಡಲಿಲ್ಲ.

ಇದಕ್ಕೆ ಕಾರಣವೇನೆಂದರೆ, ಹಿಂದೆ ರುಕ್ಮಿಣಿಯ ಹರಣಕಾಲದಲ್ಲಿ ಶ್ರೀಕೃಷ್ಣನಿಂದ ಪರಾಜಿತನಾದ ರುಗ್ಮಿಯು ತಪಸ್ಸಿನಿಂದ ರುದ್ರದೇವರನ್ನು ಸಂತೋಷಪಡಿಸಿ ಅವರಿಂದ ಶ್ರೇಷ್ಠವಾದ ಧನುಸ್ಸು ಮತ್ತು ವರವನ್ನು ಪಡೆದನು. ವರಪ್ರದಾನಕಾಲದಲ್ಲಿ ಪಾರ್ವತೀಶರು "ಎಲೈ ರುಗ್ಮಿಯೇ, ನೀನು ಕೃಷ್ಣನನ್ನು ಹೊರತುಪಡಿಸಿ ಮಿಕ್ಕೆಲ್ಲರನ್ನೂ ಜಯಿಸುತ್ತೀಯೆ. ನೀನು ಕೃಷ್ಣನಿಗೆ ವಿರೋಧವಾಗಿ ವರ್ತಿಸಿದಾಗ ಈ ಧನುಸ್ಸು ಮತ್ತೆ ನನ್ನ ಬಳಿಗೆ ಬಂದುಬಿಡುವುದು. ಆದ್ದರಿಂದ ಜಾಗ್ರತನಾಗಿರು" ಎಂದು ಹೇಳಿದರು. ಆದ್ದರಿಂದ ಕೃಷ್ಣಪ್ರಿಯರಾದ ಸಹದೇವಾದಿ ಪಾಂಡವರಿಗೆ ವಿರೋಧವೆಸಗಿದರೆ ಅದರಿಂದ ಕೃಷ್ಣನ ವಿರೋಧವೇ ಪ್ರಾಪ್ತವಾಗುವುದು ಎಂಬ ಭಯದಿಂದ ಅವನು ಸಹದೇವನ ಜತೆಗೆ ಯುದ್ಧ ಮಾಡಲಿಲ್ಲ. ಮತ್ತು ತನ್ನ ತಂಗಿ ರುಕ್ಮಿಣಿ-ಯಲ್ಲಿರುವ ಪ್ರೀತಿ, ಸ್ವತಃ ಕೃಷ್ಣನೇ ನಿಂತು ಯಜ್ಞ ಮಾಡಿಸುತ್ತಿರುವುದು, ಭೀಮಾರ್ಜುನರ ಪ್ರಖರ ಪರಾಕ್ರಮ- ಇವೆಲ್ಲವನ್ನೂ

ವಿವೇಚಿಸಿ ರುಗ್ಮಿಯು ಸಹದೇವನೊಡನೆ ಕಾದಾಡದೆ, ಅವನನ್ನು ಗೌರವಿಸಿ ಕಪ್ಪಕಾಣಿಕೆಗಳನ್ನು ಕೊಟ್ಟು ಕಳುಹಿಸಿದನು. ತರುವಾಯ ಮಹಾಶೌರ್ಯಶಾಲಿಯಾದ ಸಹದೇವನು ತನ್ನ ಸ್ವಾಭಾವಿಕ ಬಲದಿಂದ ಬೇರೆ ಬೇರೆ ರಾಜರುಗಳನ್ನು ಜಯಿಸಿದನು. ಹಿಂದೆ ನೀವು ಸ್ಮರಿಸಿದೊಡನೆಯೇ ಘಟೋತ್ಕಚನು ಬರುತ್ತಾನೆ ಎಂದು ಹಿಡಿಂಬಿಯು ಪಾಂಡವರಿಗೆ ಹೇಳಿದ್ದನ್ನು ನೆನೆದು ಸಹದೇವನು ಘಟೋತ್ಕಚನನ್ನು ಸ್ಮರಿಸಿಕೊಂಡನು. ಕೂಡಲೇ ಅವನು ಸಹದೇವನ ಬಳಿಗೆ ಬಂದನು. ಆಗ ಸಹದೇವನು ಅವನನ್ನು, ವಿಭೀಷಣನನ್ನು ಜಯಿಸಿ ಬರುವಂತೆ ಹೇಳಿ ಕಳಿಸಿದನು. ಘಟೋತ್ಕಚನು ವಿಭೀಷಣನ ಬಳಿಗೆ ಬಂದನು. ವಿಭೀಷಣನು ಅವನಿಗೆ ಕಪ್ಪವನ್ನು ಕೊಟ್ಟು ಕಳಿಸಿದನು.

ಇದಕ್ಕೆ ಕಾರಣವೇನೆಂದರೆ ಹಿಂದೆ ಶ್ರೀರಾಮಚಂದ್ರನು ವಿಭೀಷಣನಿಗೆ "ಮುಂದೆ ಪಾಂಡವರ ಪರವಾಗಿ ಘಟೋತ್ಕಚನು ಕಪ್ಪ ಕೇಳಲು ಬರುತ್ತಾನೆ. ನೀನೇ ಅವನಿಗೆ ಕಪ್ಪವನ್ನು ಕೊಡು"- ಎಂದು ಹೇಳಿದ್ದನು. ಘಟೋತ್ಕಚನು ಬಂದಾಗ ಅದನ್ನು ಜ್ಞಾಪಿಸಿಕೊಂಡ ವಿಭೀಷಣನು ಶ್ರೀರಾಮನೇ ಈಗ ಶ್ರೀಕೃಷ್ಣನಾಗಿ ಅವತರಿಸಿರುವುದು, ಭೀಮಾರ್ಜುನರ ಪರಾಕ್ರಮ, ಪಾಂಡವರು ದೇವತೆಗಳು ಮುಂತಾದ ವಿಚಾರಗಳನ್ನು ಅರಿತಿದ್ದುದರಿಂದ ಶ್ರೀರಾಮನ ಆಜ್ಞೆಯನ್ನು ಪೂರ್ಣ ಮಾಡಲೂ, ಕಪ್ಪವನ್ನು ಕೊಡದಿದ್ದರೆ ಐಹಿಕ ಪಾರತ್ರಿಕದೋಷ ಬರುವುದೆಂದು ಅರಿತು ಸಂತೋಷದಿಂದ ಘಟೋತ್ಕಚನಿಗೆ ಅನರ್ಘ್ಯ ರತ್ನಗಳನ್ನು ನೀಡಿದನು. ಭೀಮಕುಮಾರನಾದ ಘಟೋತ್ಕಚನು ವಿಭೀಷಣನಿತ್ತ ರತ್ನರಾಶಿಯನ್ನು ತಂದು ಸಹದೇವನಿಗೆ ಒಪ್ಪಿಸಿದನು. ಇಂತು ಅಸದೃಶ ನವರತ್ನಾದಿಗಳನ್ನು ಕರರೂಪವಾಗಿ ಸಂಪಾದಿಸಿಕೊಂಡು ಬಂದ ಸಹದೇವನನ್ನು ಸರ್ವರೂ ಶ್ಲಾಘಿಸಿದರು.

ನಕುಲನು ಪಶ್ಚಿಮ ದಿಗ್ಭಾಗದಲ್ಲಿರುವ ಸಮಸ್ತ ರಾಜರನ್ನೂ ಜಯಿಸಿದನು. ಸ್ವತಃ ಮಹಾಪರಾಕ್ರಮಿಯಾದರೂ ನಕುಲನು ಸೌಹಾರ್ದದಿಂದಲೇ ಸೋದರಮಾವನಾದ ಶಲ್ಯರಾಜನಿಂದ ಕಪ್ಪವನ್ನು ಪಡೆದನು. ಹೀಗೆ ರಾಜಮಹಾರಾಜರುಗಳು ನೀಡಿದ ಉತ್ತಮರತ್ನ ಸಮೂಹಗಳನ್ನು ತೆಗೆದುಕೊಂಡು ನಕುಲನು ತಮ್ಮ ರಾಜಧಾನಿಗೆ ಬಂದು ಸೇರಿದನು. ಈಗ ಅರ್ಜುನನ ದಿಗ್ವಿಜಯ ಯಾತ್ರೆಯನ್ನು ನಿರೂಪಿಸುವರು.

ಗಾಂಡೀವಧಾರಿಯಾದ ಅರ್ಜುನನು ಕಪಿವೀರ ಶ್ರೀಹನುಮದ್ಧ್ವಜ ಶೋಭಿತನಾದ ದಿವ್ಯರಥದಲ್ಲಿ ಕುಳಿತು ದಿಗ್ವಿಜಯಕ್ಕೆ ಹೊರಟಕೂಡಲೇ ಆಭೀರ, ನಿಷಾದ ಮೊದಲಾದ (ಕ್ಷತ್ರಿಯರಲ್ಲದ) ರಾಜರು ಯುದ್ಧಕ್ಕೆ ಬಂದರು. ಪರ್ವತವಾಸಿಗಳಾದ ರಾಜರಮಧ್ಯದಲ್ಲಿ ತ್ರಿಗರ್ತಾಧಿಪತಿಯಾದ ಅರಸನು ತನ್ನ ಬಂಧುಗಳಾದ ಇತರ ರಾಜರಿಂದೊಡಗೂಡಿ ಅರ್ಜುನನನ್ನು ಎದುರಿಸಿ ಯುದ್ಧ ಮಾಡಿದನು. ಧನಂಜಯನು ಏಕಕಾಲದಲ್ಲಿ ಅವರೆಲ್ಲರನ್ನೂ ಸೋಲಿಸಿ ಕ್ರಮವಾಗಿ ಉತ್ತರ ದಿಗ್ವಿಜಯವನ್ನು ಸಾಧಿಸಿ, ಮಹಾಬಲಶಾಲಿಯಾದ ಭಗದತ್ತನ ರಾಜ್ಯಕ್ಕೆ ಬಂದನು. ಅಲ್ಲಿ ಅರ್ಜುನ-ಭಗದತ್ತರಿಗೆ ಘೋರ ಯುದ್ಧವಾಯಿತು. ಸುಪ್ರತೀಕವೆಂಬ ಗಜವನ್ನೇರಿ ಭಗದತ್ತನು ಎಂಟುದಿನ ಕಾಲ ಯುದ್ಧಮಾಡಿ ಬಳಲಿ ದೇವೇಂದ್ರನಂದನನಾದ ಅರ್ಜುನನನ್ನು ಕುರಿತು "ಅರ್ಜುನ! ನೀನು ಏಕೆ ಯುದ್ಧಕ್ಕೆ ಬಂದಿರುವೆ?" ಎಂದು ಕೇಳಿದಾಗ ಪಾರ್ಥನು ತಾವು ಕೈಗೊಂಡಿರುವ ಯಾಗಾದಿ ವಿಚಾರಗಳನ್ನು ತಿಳಿಸಿ "ನೀನು ವಿಶೇಷವಾಗಿ ಕಪ್ಪವನ್ನು ಕೊಡು" ಎಂದನು. ಆಗ ಭಗದತ್ತನು "ನಿನ್ನ ತಂದೆಯಾದ ದೇವೇಂದ್ರನು ನನಗೆ ಗುರುವು. ಗುರುಪುತ್ರನಾದ ನೀನೂ ನನಗೆ ಗುರುವಿದ್ದಂತೆಯೇ ಎಂದು ನಾನು ಭಾವಿಸಿದ್ದೇನೆ. ಆದ್ದರಿಂದ ನಾನು ಪ್ರೀತಿಯಿಂದಲೇ ಕಪ್ಪವನ್ನು ಕೊಡುತ್ತೇನೆ" ಎಂದು ಹೇಳಿ ಕಪ್ಪವನ್ನು ಕೊಟ್ಟನು. ಮತ್ತು ಅರ್ಜುನನಿಗೆ ಹೀಗೆ ಹೇಳಿದನು "ಅರ್ಜುನ! ನನ್ನ ಬಳಿ ಶ್ರೀನಾರಾಯಣಾವತಾರಿಯಾದ ಶ್ರೀವರಾಹದೇವರು ನರಕಾಸುರನಿಗೆ ಅನುಗ್ರಹಿಸಿದ್ದ ವೈಷ್ಣವಾಸ್ತ್ರವಿರುವುದರಿಂದ ನೀನು ಯುದ್ಧದಲ್ಲಿ ನನ್ನನ್ನು ಜಯಿಸಲು ಸಮರ್ಥನಾಗಲಾರೆ" ಅನವಶ್ಯಕ ಜಗಳ ಮಾಡಬಾರದೆಂದು ಭಾವಿಸಿದ ಅರ್ಜುನನು, ಭಗದತ್ತನು ಕಪ್ಪವನ್ನು ಕೊಟ್ಟಿರುವುದರಿಂದ ಯುದ್ಧವೇಕೆ? ಎಂದು ಯೋಚಿಸಿ

ಭಗದತ್ತನು 'ನೀನು ಜಯಿಸಲಾರೆ' ಎಂದು ಹೇಳಿದರೂ ಅದಕ್ಕೆ ಬದಲು ಹೇಳದೆ ಭಗದತ್ತನ ಮಾತನ್ನು ಕೇಳಿಯೂ ಕೇಳದವನಂತೆ ಸುಮ್ಮನಾದನು. ಸ್ನೇಹಪರನಾದ ಪಾರ್ಥನು ಭಗದತ್ತನು ಸ್ನೇಹದಿಂದಿತ್ತ ಕಪ್ಪವನ್ನು ಸ್ವೀಕರಿಸಿ ಅಲ್ಲಿಂದ ಹೊರಟನು.

ವಿಜಯಶೀಲನಾದ ವಿಜಯನು ವಿಖ್ಯಾತವಾದ ಒಂಭತ್ತು ವರ್ಷಗಳಲ್ಲಿ ಭಾರತ ವರ್ಷವನ್ನು ಬಿಟ್ಟು ಉಳಿದ ಎಂಟು ವರ್ಷಗಳನ್ನು ಅಂದರೆ - ಕಿಂಪುರುಷ, ಹರಿವರ್ಷ, ಇಲಾವೃತ, ಭದ್ರಾಶ್ವ, ಕೇತುಮೂಲ, ಹಿರಣ್ಮಯ, ರಮ್ಯಕ, ಕುರುವರ್ಷ ಎಂಬ ಹೆಸರಿನ ಎಂಟು ವರ್ಷಗಳನ್ನು ಜಯಿಸಿದನು. ಇದರಂತೆ ಸಪ್ತದ್ವೀಪಗಳಲ್ಲಿ ಇತರರಿಂದ ಹೋಗಲಾಗದ ಜಂಬೂದ್ವೀಪವನ್ನು ಬಿಟ್ಟು, ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ ಮತ್ತು ಪುಷ್ಕರ ಎಂಬ ಆರು ದ್ವೀಪಗಳನ್ನು ಹೀಗೆ (8+6=14) ಹದಿನಾಲ್ಕು ದ್ವೀಪಗಳನ್ನು ಶಸ್ತ್ರಾಸ್ತ್ರ ಮತ್ತು ತೇಜಸ್ಸಿನ ಬಲದಿಂದ ಜಯಿಸಿ ಅರ್ಜುನನು ಕಪ್ಪ ಕಾಣಿಕೆಗಳನ್ನು ಗಳಿಸಿದನು.

ಆನಂತರ ಪಾರ್ಥನು ಏಳು ಪಾತಾಳ ಲೋಕಗಳನ್ನು ಅಂದರೆ ಅತಲ, ವಿತಲ, ಸುತಲ, ತಳಾತಳ, ರಸಾತಳ, ಮಹಾತಳ ಮತ್ತು ಪಾತಾಳಲೋಕಗಳಿಗೆ ಹೋಗಿ ದೈತ್ಯ-ದಾನವರನ್ನು ಜಯಿಸಿದನು. ಬಲಿಚಕ್ರವರ್ತಿಯ ದ್ವಾರದಲ್ಲಿ ರಕ್ಷಕನಾಗಿರುವ ಕಪಿಲರೂಪಿಯಾದ ಶ್ರೀಹರಿಯ ಆಜ್ಞೆಯಂತೆ ಸಾಮಮಾರ್ಗದಿಂದಲೇ ಬಲಿಚಕ್ರವರ್ತಿಯಿಂದ ಕಪ್ಪವನ್ನು ಸ್ವೀಕರಿಸಿದನು. ಕೊನೆಗೆ ವಾಸುಕಿಯನ್ನು ಗದ್ದು ಅವನಿಂದ ಅತ್ಯಧಿಕ ರತ್ನಾದಿಗಳನ್ನು ಪಡೆದು ಶೀಘ್ರವಾಗಿ ಒಂದು ವರುಷದಲ್ಲಿಯೇ ಇಂದ್ರಪ್ರಸ್ಥಕ್ಕೆ ಬಂದು ಸೇರಿದನು.

ಪಶ್ಚಿಮ, ದಕ್ಷಿಣ, ಪೂರ್ವ ಮತ್ತು ಉತ್ತರಗಳೆಂಬ ನಾಲ್ಕು ದಿಕ್ಕುಗಳಲ್ಲಿ ನಕುಲ, ಸಹದೇವ, ಭೀಮಸೇನ ಮತ್ತು ಅರ್ಜುನರು ವಿಜಯಶಾಲಿಗಳಾಗಿ ನಾಲ್ಕು ಸುವರ್ಣಪರ್ವತಾಕಾರ ರತ್ನಗಳನ್ನು ಸಂಪಾದಿಸಿ ತಂದರು. ಅವರು ಗಳಿಸಿದ ಸುವರ್ಣರತ್ನ ಪರ್ವತದ ಆಳತೆ ಎಷ್ಟೆಂದರೆ - ಹತ್ತು ಯೋಜನ (ನಕುಲನು), ಮೂವತ್ತು ಯೋಜನ (ಸಹದೇವ), ನೂರುಯೋಜನ (ಭೀಮಸೇನ), ನಾಲ್ಕುನೂರು ಯೋಜನ ವಿಸ್ತೀರ್ಣ (ಅರ್ಜುನ) ಹೀಗೆ ಐದುನೂರನಲವತ್ತು ಯೋಜನಗಳಷ್ಟು ವಿಸ್ತಾರವಾದ ಸುವರ್ಣರತ್ನ ಪರ್ವತಗಳ ಧನರಾಶಿಯನ್ನವರು ಸಂಪಾದಿಸಿಗೊಂಡು ಬಂದರು. ಅರ್ಜುನನು ಇಂದ್ರಾವತಾರಿಯಾದ್ದರಿಂದ ಏಳು ದ್ವೀಪಗಳಲ್ಲಿದ್ದ ಸಮಸ್ತದ್ರವ್ಯಗಳನ್ನು ದೇವದೂತರು ತಂದು ಅರ್ಜುನನಿಗೆ ಸಮರ್ಪಿಸಿದ್ದರಿಂದ ಅವನ ಸಂಪಾದನೆಯು ನಾಲ್ಕು ಯೋಜನ ವಿಸ್ತೀರ್ಣದಷ್ಟು ಎಂದು ತಿಳಿಯಬೇಕು. ಇಷ್ಟು ವಿಸ್ತಾರವಾದ ದ್ರವ್ಯರಾಶಿಯನ್ನು ಇಂದ್ರಪ್ರಸ್ಥದಲ್ಲಿ ಇಟ್ಟುಕೊಳ್ಳಲು ಅದೆಂತು ಸಾಧ್ಯವಾಯಿತು? ಎಂದರೆ-ಇಂದ್ರಪ್ರಸ್ಥವನ್ನು ದೇವಬಡಗಿ ವಿಶ್ವಕರ್ಮನು ನಿರ್ಮಿಸಿರುವುದರಿಂದ ಸ್ವಲ್ಪ ಸ್ಥಳದಲ್ಲಿಯೇ ಅಂದರೆ ರಾಜಧಾನಿಯ ಮಧ್ಯಭಾಗದಲ್ಲಿಯೇ ಪರ್ವತಾಕಾರದ ಅವಿಷ್ಟೂ ರತ್ನರಾಶಿಯನ್ನು ಇಡಲು ಸಾಧ್ಯವಾಯಿತೆಂದು ತಿಳಿಯಬೇಕು. ಆ ಅದ್ಭುತ ರತ್ನರಾಶಿಯನ್ನು ಕಣ್ಣಾರೆ ಕಂಡು ಸಮಸ್ತರೂ ಆಶ್ಚರ್ಯಾಂಬುಧಿಯಲ್ಲಿ ಮುಳುಗಿದರು.

ಆನಂತರ ವೇದವ್ಯಾಸರು ಹೇಳಿದಂತೆ ಯಾಗವು ಪ್ರಾರಂಭವಾಯಿತು. ಈ ಯಾಗಕ್ಕೆ ಯಜ್ಞವಿಧಾನ, ತತ್ವವಿದ್ಯೆ ಮತ್ತು ಸಕಲ ವಿದ್ಯೆಗಳಲ್ಲಿ ಬಹುಪರಿಣತರಾದ ಮುನಿಗಳು ಋತ್ವಿಜರಾದರು. ಶ್ರೀಕೃಷ್ಣದ್ವೈಪಾಯನರು ಹೇಳಿದ ವಿಧಿಯಂತೆ ಋತ್ವಿಜರು ಧರ್ಮರಾಜನಿಗೆ ಯಜ್ಞದೀಕ್ಷೆಯನ್ನು ನೀಡಿ ಅವನನ್ನು ಯಾಗದ ಯಜಮಾನನನ್ನಾಗಿ ಮಾಡಿದರು. ಭೀಮಾರ್ಜುನರಿಗೆ ದೊಡ್ಡಣ್ಣನಾದ್ದರಿಂದ ಯುಧಿಷ್ಠಿರನನ್ನೇ ಯಜಮಾನನ್ನಾಗಿ ಮಾಡಿಸಿ, ಸಹೋದರರಾದ ಭೀಮಾದಿಗಳು ಧರ್ಮಜನೊಡನೆ ತಾವೂ ಕುಳಿತರು. ಸರಸ್ವತೀ ಪದವಿಗೆ ಅರ್ಹಳಾದ ಶ್ರೀದ್ರೌಪದಾದೇವಿಯೊಬ್ಬಳೇ ಯಜಮಾನಪತ್ನಿ ಅಂದರೆ ಯಜ್ಞಪತ್ನಿಯಾಗಿ ಕುಳಿತಳು. ಪಾಂಡವರ ಉಳಿದ ಪತ್ನಿಯರು ಸರಸ್ವತೀಪದವಿಗೆ ಅನರ್ಹರಾದ್ದರಿಂದ ಜಗತ್ತಿನ ಧಾರಣ ಪೋಷಣಾದಿ

ಅಪರಿಮಿತ ಸಾಮರ್ಥ್ಯಶಾಲಿಗಳಾದ ಶ್ರೀವೇದವ್ಯಾಸರ ಅಪ್ಪಣೆಯಂತೆ ಉಳಿದ ಪತ್ನಿಯರು ಪಾಂಡವರೊಡನೆ ಒಟ್ಟಿಗೆ ಕುಳಿತುಕೊಳ್ಳಲಿಲ್ಲ.

ಈ ಮಹಾಯಾಗದಲ್ಲಿ ಸಕಲ ಸ್ಥಳಗಳೂ ರತ್ನಮಯ ಹಾಗೂ ಸುವರ್ಣಮಯವಾಗಿದ್ದಿತು. ಪಾತ್ರಾದಿ ಆಸನ ಗೃಹೋಪಸ್ಕರಗಳು, ಶಿಬಿರಗಳು ಅಂದರೆ ಯಾಗನಿರೀಕ್ಷಣೆಗಾಗಿ ಬಂದ ರಾಜರುಗಳಿಗಾಗಿ ಹೊಸದಾಗಿ ಏರ್ಪಡಿಸಲಾಗಿದ್ದ ಸಮಸ್ತ ಸ್ಥಾನಗಳೆಲ್ಲವೂ ಮತ್ತು ಯಜ್ಞಶಾಲೆ, ಅಶ್ವಶಾಲೆಗಳೂ ಕನಕ-ರತ್ನಮಯವಾಗಿದ್ದವೆಂದು ಪ್ರತ್ಯೇಕವಾಗಿ ಹೇಳ-ಬೇಕಾಗಿಲ್ಲವಷ್ಟೆ?

ದಿಗ್ವಿಜಯಕಾಲದಲ್ಲಿ ಭೀಮಾರ್ಜುನಾದಿ ನಾಲ್ವರು ಪಾಂಡುಪುತ್ರರಿಂದ ಗೌರವಪೂರ್ವಕವಾಗಿ ಆಹ್ವಾನಿತರಾದ ದೇವತಾಶ್ರೇಷ್ಠರುಗಳಾದ ಪೂಜ್ಯ ಬ್ರಹ್ಮ-ರುದ್ರ-ಇಂದ್ರಾದಿದೇವತೆಗಳು, ಪಾತಾಳಾದಿಸಪ್ತಲೋಕಗಳು, ಪೃಥಿವ್ಯಾದಿ ಏಳು ಲೋಕಗಳು ಹೀಗೆ ಹದಿನಾಲ್ಕು ಲೋಕವಾಸಿಗಳು ಮತ್ತು ಬ್ರಹ್ಮಾದಿ ದೇವತೆಗಳೂ ಸಹ ಯಾಗಸ್ಥಳಕ್ಕೆ ಖುದ್ದಾಗಿ ಆಗಮಿಸಿದರು. ಇವರಂತೆ ಹಸ್ತಿನಾಪುರದಿಂದ ಭೀಷ್ಮಾಚಾರ್ಯರು, ದ್ರೋಣಾಚಾರ್ಯರು, ವಿದುರ ಮುಂತಾದವರು, ಮತ್ತು ದುರ್ಯೋಧನಾದಿ ಪುತ್ರರಿಂದ ಸಹಿತನಾದ ಧೃತರಾಷ್ಟ್ರನು ರಾಜಸ್ತ್ರೀಯರಿಂದೊಡಗೂಡಿ ಅಲ್ಲಿಗೆ ಆಗಮಿಸಿದನು. ಬಾಹ್ಲೀಕರಾಜರೂ ಸಹ ತಮ್ಮ ಪುತ್ರರಿಂದ ಯುಕ್ತರಾಗಿ ಬಂದಿದ್ದರು. ಇದೇ ಪ್ರಕಾರವಾಗಿ ಬಲರಾಮಾದಿ ಸಕಲಯಾದವರೂ, ಶ್ರೀಕೃಷ್ಣನ ಪತ್ನಿಯರಾದ ರುಕ್ಮಿಣೀ, ಸತ್ಯಭಾಮಾ, ಜಾಂಬುವತಿ ಮುಂತಾದ ಆರುಜನರು ಮತ್ತು 16100 ಜನ ಸ್ತ್ರೀಯರೂ ಸಹ ಯಜ್ಞಕ್ಕೆ ಬಂದಿದ್ದರು.

ಸಮಸ್ತ ಪ್ರಪಂಚವೂ ಒಂದೆಡೆ ಮಿಲಿತವಾದಂತಿರುವ ಪವಿತ್ರವಾದ ಆ ಯಜ್ಞಶಾಲೆಯಲ್ಲಿ ಪರತತ್ವ ನಿಶ್ಚಯಕ್ಕಾಗಿ ವಾದ-ವಿವಾದರೂಪ ಅನೇಕ ಕಥೆಗಳಾದವು. ಈ ವಿವಾದ ಕಥೆಗಳ ಸಭೆಗೆ ಪರಿಪೂರ್ಣಚಿದಾನಂದಸ್ವರೂಪರೂ, ಪರಮ ಪೂಜ್ಯರೂ ಆದ ಶ್ರೀವೇದವ್ಯಾಸದೇವರೇ ಪ್ರಾಶ್ನಿಕರಾದರು. ಪ್ರಾಶ್ನಿಕರೆಂದರೆ –

"ಅಶೇಷ ಸಂಶಯಚ್ಛೇತ್ತಾ ನಿಃಸಂಶಯ ಉದಾರಧೀಃ ।
ಏಕಶ್ಚೇತ್ಪ್ರಾಶ್ನಿಕೋ ಜ್ಞೇಯೋ ಸರ್ವದೋಷವಿವರ್ಜಿತಃ ॥"

ಸಮಸ್ತಜನರ ಸಕಲವಿಧ ಸಂಶಯಗಳನ್ನು ಪರಿಹರಿಸಲು ಸಮರ್ಥರೂ, ಸ್ವಯಂ ಸಂಶಯರಹಿತರೂ, ಉದಾರ ಬುದ್ಧಿಯುಳ್ಳವರೂ, ಸಮಸ್ತದೋಷವಿಲ್ಲದವರಾದ ಒಬ್ಬರನ್ನು ಪ್ರಾಶ್ನಿಕರೆಂದು ತಿಳಿಯಬೇಕು. ಇಂಥ ಗುಣವಿಶಿಷ್ಟರಾದ್ದರಿಂದ ಶ್ರೀವೇದವ್ಯಾಸದೇವರು ಪ್ರಾಶ್ನಿಕರಾದರು. ದೇವಾನುದೇವತೆಗಳು, ಜ್ಞಾನಿಗಳಾದ ಋಷಿಮುನಿಗಳಿಂದ, ವೇದಾದಿ ಸಕಲ ವಿದ್ಯಾಕೋವಿದರಿಂದ ಕಂಗೊಳಿಸುತ್ತಿದ್ದ ಆ ಮಹಾಸಭೆಯಲ್ಲಿ ಜರುಗಿದ ತತ್ತ್ವನಿರ್ಣಯ ಕಥೆಗಳಲ್ಲಿ – ಶ್ರೀಹರಿ ಪರಮಾತ್ಮನಿಗೆ ಸಮಾನರು ಬೇರಾರೂ ಇಲ್ಲವೇ ಇಲ್ಲ. ಅಂದಮೇಲೆ ಶ್ರೀಹರಿಗಿಂತ ಉತ್ತಮರಾದವರಂತೂ ಇಲ್ಲವೇ ಇಲ್ಲ! ಶ್ರೀಹರಿಯು ಪ್ರಕೃತಿಯನ್ನು ದಾಟಿದವನು. ಉತ್ತಮತ್ವಕ್ಕೆ ಎಲ್ಲೆಯಂತಿರುವವನು – ಶ್ರೀಹರಿಯು ಅನಂತ ಕಲ್ಯಾಣಗುಣಸಾಗರನು, ಸಮಸ್ತ ದೋಷದೂರನು, ಸೃಷ್ಟ್ಯಾದಷ್ಟಕಕ್ಕೆ ಪರಮಮುಖ್ಯಕಾರಣನು, ಅಪ್ರತಿಹತ ಮಹಿಮಾಪೂರ್ಣನು, ಅಚಿಂತ್ಯಾದ್ಭುತಶಕ್ತಿ ಸಂಪನ್ನನು. ಸಕಲವೇದ ಪ್ರತಿಪಾದ್ಯನಾದ ಅವನೇ ಮೋಕ್ಷವನ್ನು ಕರುಣಿಸುವ ಮಹಾಪ್ರಭುವು. ಸರ್ವೋತ್ತಮನಾದ ಶ್ರೀಹರಿಯು ರಮಾಬ್ರಹ್ಮ-ರುದ್ರೇಂದ್ರಾದ್ಯಖಿಲವೃಂದಾರಕವೃಂದವಂದನೀಯ ಪಾದಾರವಿಂದನು. ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನಾದ ಅವನೇ ಪರಬ್ರಹ್ಮಸ್ವರೂಪನು. ಆ ಪರಮಾತ್ಮನೇ ಶ್ರೀಕೃಷ್ಣನು – ಎಂದು ಮುಂತಾಗಿ ಆ ಸಭೆಯಲ್ಲಿ ಶ್ರೀಕೃಷ್ಣ ಪರಮಾತ್ಮನ ಪರತತ್ವ ನಿರ್ಣಯವಾಯಿತು. ಅಂದರೆ ಶ್ರೀವಾಸುದೇವ ಕೃಷ್ಣನೇ ಸರ್ವೋತ್ತಮನು. ಅವನಿಗಿಂತ ಬೇರೊಬ್ಬ ಸರ್ವೋತ್ತಮ ವಸ್ತುವಿಲ್ಲವೆಂದು ನಿರ್ಣಯವಾಯಿತೆಂದು ಭಾವ.

ಇಂತು ಶ್ರೀವೇದವ್ಯಾಸರು, ಭೃಗುಕುಲಲಲಾಮರಾದ ಶ್ರೀಪರಶುರಾಮದೇವರು ಕೇಳುತ್ತಿರಲು, ಪರತತ್ತ್ವ ನಿರ್ಣಯವಾದ ಮೇಲೆ ಸಮಸ್ತಜನರೂ ಪರಮಸಂತೋಷಭರಿತರಾಗುತ್ತಿರಲು ಆ ಮಹಾಸಭೆಯಲ್ಲಿ ಧರ್ಮರಾಜನು ಎದ್ದುನಿಂತು ವಿನೀತನಾಗಿ ಶ್ರೀಭೀಷ್ಮಾಚಾರ್ಯರನ್ನು "ಪಿತಾಮಹ! ಈ ಮಂಗಳಕರಯಜ್ಞದಲ್ಲಿ ಅಗ್ರಪೂಜೆ ಸ್ವೀಕರಿಸಲು ಅರ್ಹರಾರು? ನಾನು ಯಾರಿಗೆ ಅಗ್ರಪೂಜೆ ಸಲ್ಲಿಸಬೇಕು? ಅಪ್ಪಣೆ ಮಾಡಿರಿ" ಎಂದು ಪ್ರಾರ್ಥಿಸಿದನು. ಯದ್ಯಪಿ ಧರ್ಮರಾಜನು ಶ್ರೀಕೃಷ್ಣನೇ ಎಲ್ಲರಿಗಿಂತ ಅತ್ಯಂತ ಪೂಜ್ಯನೆಂದು ತಿಳಿದಿದ್ದನು. ಆದರೂ ಶ್ರೀಕೃಷ್ಣನು ನಾರಾಯಣನಹುದೋ ಅಲ್ಲವೋ ಎಂದು ಶಂಕಿಸುವ ರಾಜರುಗಳ ಸಂದೇಹ ಪರಿಹಾರಕ್ಕಾಗಿ ಭೀಷ್ಮಾಚಾರ್ಯರನ್ನು ಪ್ರಶ್ನಿಸಿದನು.

"ನಾಸ್ತಿನಾರಾಯಣಸಮಮಿತಿ ವಾದೇನ ನಿರ್ಣಯೇ ।
ಕೃತೇ ಬ್ರಹ್ಮಾದಿಭಿರಪಿ ಕೃಷ್ಣಂ ಮರ್ತ್ಯಂ ಹಿ ಮೇನಿರೇ ॥
ನೃಪಾಸ್ತಸ್ಮಾದಯಂ ಕೃಷ್ಣೋ ನಾರಾಯಣ ಇತಿ ಸ್ಮಹ ।
ಸಮ್ಯಕ್ ಜ್ಞಾಪಯಿತುಂ ಧರ್ಮಸೂನುರ್ಭೀಷ್ಮಮಪೃಚ್ಛತ ॥"

ಬ್ರಹ್ಮಾದಿದೇವತೆಗಳಿಗಿಂತಲೂ ಶ್ರೀಮನ್ನಾರಾಯಣನು ಸರ್ವೋತ್ತಮನು. ಅವನಿಗೆ ಸಮಾನವಾದ ವಸ್ತುವು ಬೇರೊಂದಿಲ್ಲ ಎಂದು ವಾದದಿಂದ ನಿರ್ಣಯವಾಗಿದ್ದರೂ ಕೃಷ್ಣನೇ ನಾರಾಯಣನೆಂದು ತಿಳಿಯದ ರಾಜರು ಶ್ರೀಕೃಷ್ಣನು ಮನುಷ್ಯನೆಂದೇ ಭಾವಿಸಿದ್ದರು. ಅಂತೆಯೇ ಶ್ರೀಕೃಷ್ಣನು ನಾರಾಯಣನೆಂದು ಸ್ಪಷ್ಟವಾಗಿ ಮನವರಿಕೆ ಮಾಡಲು ಧರ್ಮನಂದನನು ಭೀಷ್ಮಾಚಾರ್ಯರನ್ನು ಅಗ್ರಪೂಜೆಯನ್ನು ಯಾರಿಗೆ ಸಲ್ಲಿಸಬೇಕೆಂದು ಪ್ರಶ್ನಿಸಿದನು. ಬ್ರಹ್ಮಾದಿದೇವತೆಗಳು ಯಜ್ಞಶಾಲೆಯಲ್ಲಿ ಉಪಸ್ಥಿತರಾಗಿರುವಾಗ ಅಗ್ರಪೂಜೆಯ ಬಗೆಗೆ ಅವರನ್ನೇಕೆ ಕೇಳಲಿಲ್ಲವೆಂದರೆ, ಮಾನವರು ಬ್ರಹ್ಮಾದಿ ದೇವತೆಗಳನ್ನು ಮನುಷ್ಯರೆಂದೇ ಭಾವಿಸಿದ್ದಾರೆ. ದೇವತೆಗಳ ಮಾತಿನಲ್ಲಿ ಮಾನವರಿಗೆ ವಿಶ್ವಾಸವಿರುವುದಿಲ್ಲ. ಆದ್ದರಿಂದ ಕೇಳಲಿಲ್ಲ. ಅದು ಹೋಗಲಿ, ಅಲ್ಲಿ ಅನೇಕ ಋಷಿಮುನಿಗಳಿದ್ದರಲ್ಲ, ಅವರನ್ನಾದರೂ ಕೇಳಬಹುದಾಗಿತ್ತಲ್ಲವೇ? ಎಂದರೆ ರಾಜರಿಗೆ – ಮನುಷ್ಯರಿಗೆ ಹೆಚ್ಚಾಗಿ ಮುನಿಗಳಲ್ಲಿಯೂ ನಂಬಿಕೆಯಿರಲಿಲ್ಲವಾದ್ದರಿಂದ ಕೇಳಲಿಲ್ಲ. ಹಾಗಾದರೆ ಭೀಷ್ಮಾ-ಚಾರ್ಯರಲ್ಲಿ ಜನರಿಗೆ ಹೇಗೆ ವಿಶ್ವಾಸವುಂಟಾಯಿತು? ಎಂದರೆ – ಸಕಲರಾಜರೂ ಭೀಷ್ಮಾಚಾರ್ಯರು ಸರ್ವಶಾಸ್ತ್ರ ಪಾರಂಗತರೆಂದು ತಿಳಿಯುವರು. ಮೇಲಾಗಿ ಭೀಷ್ಮಪಿತಾಮಹರು ಕುಲವೃದ್ಧರೂ ಆಗಿದ್ದಾರೆ. ಆದ ಕಾರಣ ಜನರಿಗೆ ಅವರಲ್ಲಿ ವಿಶ್ವಾಸವಿದೆ ಎಂದು ತಿಳಿದ ಧರ್ಮರಾಜನು ಪಿತಾಮಹರಾದ ಭೀಷ್ಮರನ್ನೇ "ಪೂಜ್ಯ ಪಿತಾಮಹ! ಈ ಮಹಾಸಭೆಯಲ್ಲಿ ಬ್ರಹ್ಮರುದ್ರಾದಿದೇವತೆಗಳೂ ಅನೇಕ ರಾಜರೂ ನೆರೆದಿದ್ದಾರೆ. ಇವರಲ್ಲಿ ಪೂಜಾರ್ಹರಾರು?" ಎಂದು ಪ್ರಶ್ನಿಸಿದರು.

ಆಗ ಭೀಷ್ಮರು – "ಇಲ್ಲಿ ಸೇರಿರುವ ಸಕಲರಲ್ಲೂ ಶ್ರೀಕೃಷ್ಣನೇ ಎಲ್ಲರಿಗಿಂತ ಪೂಜ್ಯನಾಗಿದ್ದಾನೆ. ಯದ್ಯಪಿ ವಾಸಿಷ್ಠ-ಭೃಗು ಯಾದವ ಕುಲಗಳಲ್ಲಿ ಶ್ರೀಹರಿಯು ವೇದವ್ಯಾಸ-ಪರಶುರಾಮ-ಶ್ರೀಕೃಷ್ಣ ಎಂಬ ಮೂರು ರೂಪದಿಂದ ಅವತರಿಸಿದ್ದಾನೆ. ಆದರೂ ಈ ಎಲ್ಲ ರಾಜರುಗಳು, ವ್ಯಾಸ-ಪರಶುರಾಮರುಗಳು ವಿಪ್ರಕುಲದಲ್ಲಿ ಅವತರಿಸಿರುವುದರಿಂದ ಅವರಿಗೆ ಅಗ್ರಪೂಜೆ ಮಾಡಿದರೆ ವಿಪ್ರರಾದ್ದರಿಂದ ಅವರನ್ನು ಪೂಜಿಸುವುದು ಯುಕ್ತವಾದುದರಿಂದ ಅದನ್ನು ಯಾರೂ ವಿರೋಧಿಸುವುದಿಲ್ಲ". ವಿವಾದವಿಲ್ಲದಿದ್ದರೆ ಶ್ರೀಕೃಷ್ಣನ ಉತ್ತಮತ್ವವು ಪ್ರಸಿದ್ಧಿಯಾಗುವುದಿಲ್ಲ. ಈಗ ಅವನು ಸರ್ವೋತ್ತಮನೆಂದು ಪ್ರಸಿದ್ಧವಾಗ ಬೇಕಾಗಿರುವುದರಿಂದ ಶ್ರೀಕೃಷ್ಣನಿಗೇ ಅಗ್ರಪೂಜೆ ಮಾಡಬೇಕು – ಎಂದು ಯೋಚಿಸಿ ಭೀಷ್ಮರು ಶ್ರೀಕೃಷ್ಣ ಪರಮಾತ್ಮನಿಗೇ ಅಗ್ರಪೂಜೆ ಮಾಡುವಂತೆ ಆದೇಶವಿತ್ತರು. ಶ್ರೀವಾಸುದೇವಕೃಷ್ಣನಿಗೆ ಅಗ್ರಪೂಜೆ ಸಲ್ಲಿಸಿದರೆ ಎಲ್ಲ ರಾಜರೂ ಚೆನ್ನಾಗಿ ವಾದ ವಿವಾದ ಮಾಡುತ್ತಾರೆ. ಅದರಿಂದ ಶ್ರೀವಾಸುದೇವನ ಕೀರ್ತಿ ಬೆಳೆಯುವುದು ಎಂದು ಪೃಥಾಪುತ್ರರಾದ ಪಾಂಡವರು ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನು ಸಲ್ಲಿಸಿದರು.

ಶ್ರೀವೇದವ್ಯಾಸರು ಮತ್ತು ಭಾರ್ಗವರಾಮರಿಗೂ ಅಭೇದವಿರುವುದರಿಂದ (ಆ ಮೂವರೂ ಒಬ್ಬರೇ ಆದ್ದರಿಂದ) ಶ್ರೀಕೃಷ್ಣನ ತರುವಾಯ ಅವರಿಗೆ ಅಗ್ರಪೂಜೆ ಸಲ್ಲಿಸಿದರು. ಅನಂತರ ತಾರತಮ್ಯಾನುಸಾರವಾಗಿ ಪೂಜಾರ್ಹರಾದ ಬ್ರಹ್ಮಾದಿ ದೇವತೆಗಳನ್ನೂ ಪೂಜಿಸಿದರು.

ಶ್ರೀಕೃಷ್ಣನಿಗೆ ಅಗ್ರಪೂಜೆ ಮಾಡುತ್ತಿರುವಾಗ ಅತ್ಯಂತಕುಪಿತನಾದ ಶಿಶುಪಾಲನು ಕೃಷ್ಣನನ್ನು ಮನಬಂದಂತೆ ನಿಂದಿಸಿದನು. ಜಗದ್ಗುರುವಾದ ಶ್ರೀಕೃಷ್ಣನ ನಿಂದೆಯನ್ನಾಲಿಸಿ ಅತಿಕೋಪಗೊಂಡ ಭೀಮಸೇನನು ಶಿಶುಪಾಲನನ್ನು ವಧಿಸಲು ಅವನತ್ತ ಧಾವಿಸಿದನು. ಪರೋಕ್ಷದಲ್ಲಿಯೂ ಶ್ರೀಕೃಷ್ಣನನ್ನು ನಿಂದಿಸುವವರ ನಾಲಿಗೆಯನ್ನು ಸೀಳುವುದಾಗಿ ಮೊದಲಿನಿಂದಲೂ ಅವನು ಪ್ರತಿಜ್ಞಾಬದ್ಧನಾಗಿದ್ದಾನೆ. ಆದ್ದರಿಂದಲೇ ಶಿಶುಪಾಲನನ್ನು ವಧಿಸಲು ಭೀಮಸೇನನು ಅವನತ್ತ ಹೊರಟನು. ಆಗ ಭೀಷ್ಮಾಚಾರ್ಯರು ಅವನನ್ನು ತಡೆದು ತನ್ನ ಪಾರ್ಷದರಾದ ಜಯ-ವಿಜಯರನ್ನು ತಾನೇ ಸಂಹರಿಸುವುದಾಗಿ ಶ್ರೀಹರಿಯು ಹೇಳಿರುವುದನ್ನು ಭೀಮನಿಗೆ ತಿಳಿಸಿ ಅವನ ಕೈಹಿಡಿದು ನಿಲ್ಲಿಸಿದರು.

ಹಿಂದೆ ಸನಕಾದಿಗಳು ಜಯ-ವಿಜಯರಿಗೆ ಶಾಪಪ್ರದಾನ ಮಾಡಿದ ಸಂದರ್ಭದಲ್ಲಿ ಶ್ರೀಹರಿಯು ಜಯ-ವಿಜಯರಿಗೆ 'ನಿಮ್ಮನ್ನು ನಾನೇ ಸಂಹರಿಸುವೆ'ನೆಂದು ಹೇಳಿದ್ದ ವಿಚಾರವನ್ನು ಭೀಷ್ಮಾಚಾರ್ಯರಿಂದರಿತು ಶತ್ರು ಭಯಂಕರನಾಗಿದ್ದರೂ ಭೀಮನು ಸುಮ್ಮನಾದನು. ಸರ್ವಜ್ಞನಾದ ಶ್ರೀವಾಯುದೇವನ ಅವತಾರನಾದ ಭೀಮಸೇನನು ಶಿಶುಪಾಲನನ್ನು ತಾನು ಸಂಹರಿಸಬಾರದೆಂಬುದು ಶ್ರೀಹರಿಯ ಇಚ್ಛೆ ಎಂದು ತಿಳಿದಿದ್ದರೂ ಪ್ರತಿಜ್ಞಾಬದ್ಧನಾಗಿದ್ದರಿಂದ ಅದರ ಪಾಲನೆಗಾಗಿ ಎದ್ದು ನಿಂತನು. ಪಿತಾಮಹರು ತಡೆದರೆಂಬ ನೆಪದಿಂದ ಮತ್ತೆ ಯತ್ನಿಸದೆ ಸುಮ್ಮನಾದನು.

ಶ್ರೀವಾಸುದೇವನಿಗೆ ನೆರವೇರಿದ ಅಗ್ರಪೂಜೆಯನ್ನು ಕಂಡು ದೇವತಾ ಸಮೂಹದಂತಿರುವ ಉತ್ತಮಜೀವಿಗಳು ಭಕ್ತಿಪೂರ್ಣರಾಗಿ ಪ್ರಮೋದಾಂತಃಕರಣವುಳ್ಳವರಾದರು. ಮಧ್ಯಮವರ್ಗದ ಮನುಷ್ಯರು ಅಂದರೆ ನಿತ್ಯ ಸಂಸಾರಿಗಳು ಸುಖದುಃಖಸ್ವರೂಪರಾದ್ದರಿಂದ ಮಧ್ಯಮಾವಸ್ಥೆಯನ್ನು ತಾಳಿದರು. ಅಲ್ಲಿದ್ದ ದುರ್ಯೋಧನಾದಿ ಅಸುರರು ಕೃಷ್ಣನಿಗಾದ ಅಗ್ರಪೂಜೆಯನ್ನು ಮನಸ್ಸಿನಲ್ಲಿಯೇ ವಿರೋಧಿಸಿದರು. ಅದರಂತೆ ಅನಂತಾನವದ್ಯಕಲ್ಯಾಣಗುಣಸಮುದ್ರನಂತಿರುವ ಶ್ರೀಕೃಷ್ಣನನ್ನು ತುಚ್ಛೀಕರಿಸಿ ನಿಂದಿಸುತ್ತಾ ಶಿಶುಪಾಲನು ಶ್ರೀಕೃಷ್ಣನ ಸಮೀಪಕ್ಕೆ ಬಂದನು. ಗುಣಪೂರ್ಣನಾದ ಕೃಷ್ಣನಲ್ಲಿ ಅನೇಕ ದೋಷಾರೋಪಣೆ ಮಾಡಿದನು. ಅಷ್ಟರಿಂದಲೇ ತೃಪ್ತನಾಗದೆ ಶಿಶುಪಾಲನು ಶ್ರೀಕೃಷ್ಣನನ್ನು ಯುದ್ಧಕ್ಕೆ ಆಹ್ವಾನಿಸಿದನು. ಮತ್ತು ಅವನ ಮೇಲೆ ಶರವರ್ಷ ಮಾಡಿದನು. ಸರ್ವ ಸಮರ್ಥನಾದ ಶ್ರೀವಾಸುದೇವನು ಅವನ ಬಾಣಗಳನ್ನೆಲ್ಲಾ ಚಕ್ರದಿಂದ ನಾಶಪಡಿಸಿ ಶಿಶುಪಾಲನ ಶಿರವನ್ನು ಕತ್ತರಿಸಿ ಹಾಕಿದನು. ಆಗ ಮೂಲರೂಪದ ಜಯನು ಶ್ರೀಹರಿಭಕ್ತಿಭರಿತನಾದನು. ಅವನಲ್ಲಿ ಆಶ್ರಯಪಡೆದಿದ್ದ ದೈತ್ಯನು ಅಂಧಃತಮಸ್ಸಿಗೆ ಹೋದನು. ಜಯನು ಶ್ರೀಕೃಷ್ಣನ ಪಾದವನ್ನು ಸೇರಿದನು. ಮುಂದೆ ಅವನು ಶ್ರೀಹರಿಯು ವೈಕುಂಠಕ್ಕೆ ತೆರಳಿದಾಗ ದ್ವಾರಪಾಲಕನಾಗಿ ಶ್ರೀಹರಿಯ ಅನುಗ್ರಹಕ್ಕೆ ಪಾತ್ರನಾಗುವನು.

ಅನಂತರ ಯಾಗವು ಶಾಸ್ತ್ರೋಕ್ತಪ್ರಕಾರವಾಗಿ ಆಚರಿಸಲ್ಪಟ್ಟು ಸಾಂಗವಾಯಿತು. ಆ ಮಂಗಳಕರ ಸಂದರ್ಭದಲ್ಲಿ ಅನೇಕ ರಾಜ-ಮಹಾರಾಜರುಗಳು ಪರಮಾದರ-ಸಂತೋಷಗಳಿಂದ ಧರ್ಮರಾಜನಿಗೆ ಧನಕನಕವಸ್ತ್ರರತ್ನಾಭರಣಗಳನ್ನು ಉಡುಗೊರೆಯಾಗಿ ನೀಡಿದರು. ಆ ಎಲ್ಲ ಉಡುಗೊರೆಗಳನ್ನು ಸ್ವೀಕರಿಸುವ ಕಾರ್ಯಕ್ಕೆ ಧರ್ಮರಾಜನು ದುರ್ಯೋಧನನನ್ನು ನೇಮಿಸಿದನು. ಎಲ್ಲವೂ ಸಂಭ್ರಮದಿಂದ ಜರುಗಿದ ಮೇಲೆ ಸಮಸ್ತಜನರಿಗೂ ಭಕ್ಷ್ಯ-ಭೋಜ್ಯಯುಕ್ತವಾದ ಮೃಷ್ಟಾನ್ನ ಭೋಜನ ಮಾಡಿಸಿ ಧರ್ಮನಂದನನು ಒಬ್ಬೊಬ್ಬರಿಗೂ ರತ್ನಾದಿಗಳನ್ನೂ, ಒಂದೊಂದು ಭಾರ (1 ಭಾರವೆಂದರೆ ಇಪ್ಪತ್ತು ತೊಲ) ಬಂಗಾರವನ್ನೂ ದಕ್ಷಿಣಾರೂಪವಾಗಿ ಪ್ರದಾನ ಮಾಡಿದನು. ಆ ಯಜ್ಞಕಾಲದಲ್ಲಿ ಅತಿಥಿಗಳಿಗೆ ಇಷ್ಟವಾದುದೆಲ್ಲವನ್ನೂ ಪಾಂಡವರು ನೀಡಿ ಆನಂದಪಡಿಸಿದರು.

ಇಂತು ಯಜ್ಞವು ಯಶಸ್ವಿಯಾಗಿ ಪೂರ್ಣವಾದ ಮೇಲೆ ಪಾಂಡವರು ಭಾಗೀರಥಿಯಲ್ಲಿ ಬಂಧುಬಾಂಧವರಿಂದ ಸಹಿತರಾಗಿ ಆನಂದದಿಂದ ಅವಭೃತ ಸ್ನಾನ ಮಾಡಿದರು. ಆಗ ದೇವದುಂದುಭಿಗಳು ಮೊಳಗಿದವು. ಗಂಧರ್ವರು ದಿವ್ಯಗಾನ ಮಾಡಿದರು. ಸ್ವರ್ಗದ ಅಪ್ಸರ ಸ್ತ್ರೀಯರು ದಿವ್ಯನರ್ತನ ಮಾಡಿದರು. ಹೀಗೆ ಎಲ್ಲರೂ ವಿಶೇಷವಿಧಿಪೂರ್ವಕವಾಗಿ ಅಘಮರ್ಷಣ ಸ್ನಾನಮಾಡಿದರು. ಪಾಂಡವರು ನಿಖಿಲ ರಾಜಾಧಿರಾಜರಿಂದೊಡಗೂಡಿ ಪವಿತ್ರವೂ ಮಂಗಳಕರವೂ ಆದ ಭಾಗೀರಥೀಜಲದಲ್ಲಿ ಅವಭೃತ ಸ್ನಾನ ಮಾಡಿ ಅರಮನೆಗೆ ತೆರಳಿದರು. ಯಜ್ಞಕ್ಕಾಗಿ ಆಗಮಿಸಿದ್ದ ದೇವತೆಗಳು ತಮ್ಮ ಲೋಕಕ್ಕೆ ಮರಳಿದರು.

ಹೀಗೆ ಸಕಲರಾಜರು ಆತ್ಮೀಯರಾದ ಭೀಷ್ಮಾಚಾರ್ಯ, ಧೃತರಾಷ್ಟ್ರಾದಿಗಳು ತಮ್ಮ ತಮ್ಮ ನಗರಗಳಿಗೆ ತೆರಳಿದ ಮೇಲೆ, ಮಯನು ನಿರ್ಮಿಸಿದ ಚಿತ್ರವಿಚಿತ್ರ ರತ್ನಗಳಿಂದ ಸೂರ್ಯನಂತೆ ಪ್ರಕಾಶಮಾನವಾದ ಭವ್ಯಸಭೆಗೆ ಬಂದು ಅಲ್ಲಿ ಶ್ರೀವಾಸುದೇವನಿಂದೊಡಗೂಡಿ ಯುಧಿಷ್ಠಿರನು ರತ್ನಮಯವಾದ ದಿವ್ಯ ಸಿಂಹಾಸನವನ್ನು ಅಲಂಕರಿಸಿದನು. ತರುವಾಯ ಕಮಲಾಜಾನಿಯ ಮಹಿಷಿಯರಾದ ರುಕ್ಮಿಣೀ ಮುಂತಾದವರು, ಭೀಮಾರ್ಜುನರೂ ಸಹ ಯದುನಾಥನ ಸನಿಹದಲ್ಲಿ ಕುಳಿತರು. ಪವಮಾನಸುತನಾದ ಭೀಮಸೇನನೊಡನೆ ದ್ರೌಪದಿಯೂ, ನಿರ್ದೋಷಳಾದ ರುಕ್ಮಿಣಿ ಮತ್ತು ಸತ್ಯಭಾಮೆಯರ ಪಕ್ಕದಲ್ಲಿ ಆಸನವನ್ನಲಂಕರಿಸಿದಳು. ನಕುಲ-ಸಹದೇವ-ಧೃಷ್ಟದ್ಯುಮ್ನ-ಬಲರಾಮ-ಸಾತ್ಯಕಿ ಮೊದಲಾದ ಬಾಂಧವರು ಅರ್ಜುನನ ಸಮೀಪದಲ್ಲಿ ಮಂಡಿಸಿದರು. ಶ್ರೀಹರಿಯನ್ನು ಆಶ್ರಯಿಸಿಕೊಂಡಿರುವ ನಾಲ್ಮೊಗನಾದ ಶ್ರೀಬ್ರಹ್ಮದೇವನ ದಿವ್ಯಸಭೆಯಂತೆ ಈ ಸಭೆಯೂ ಅತ್ಯಧಿಕ ವೈಭವದಿಂದ ವಿಶೋಭಿಸಿತು. ಆಶ್ಚರ್ಯಜನಕವಾದ ಸುವರ್ಣಹಾರಗಳು, ಶುಭ್ರ ವಸನಗಳು, ಬೆಳಗುವ ಕಿರೀಟ-ಕುಂಡಲಗಳಿಂದ ಮಂಡಿತರಾದ, ಕುಲ-ಪರಾಕ್ರಮ, ಜ್ಞಾನ-ಭಕ್ತ್ಯಾದಿ ಸದ್ಗುಣಗಳಿಂದ ಖ್ಯಾತರಾದ ಅನೇಕ ನೃಪತಿಗಳು ಸಭಾಲಂಕಾರರಾಗಿ ಕುಳಿತು ಅಲ್ಲಿ ಶೋಭಿಸುತ್ತಿದ್ದರು. ಅನಂತಕಲ್ಯಾಣಗುಣಾರ್ಣವನೂ, ಜಗತ್ಪ್ರಭುವೂ ಆದ ಶ್ರೀಮನ್ನಾರಾಯಣನಂತೆ ಪತ್ನೀಸಮೇತನಾದ ಶ್ರೀಕೃಷ್ಣನು ಆ ಸಭೆಯಲ್ಲಿ ಅತಿಶಯ ಕಾಂತಿಯಿಂದ ಕಂಗೊಳಿಸಿದನು. ಸಮಸ್ತ ರಾಜನ್ಯರೂ, ಮಿತ್ರ ವೃಂದದವರೂ ಸಹ ಭಗವಾನ್ ಶ್ರೀವಾಸುದೇವನನ್ನು ಉಪಾಸನೆ ಮಾಡಿದರು.

ಆಗ ಖಡ್ಗಧಾರಿಯಾದ ದುರ್ಯೋಧನನು ಸಹೋದರರಿಂದ ಸಹಿತನಾಗಿ ಆ ಸಭೆಗೆ ಆಗಮಿಸಿದನು. ದುರ್ಯೋಧನನು ಇಂದ್ರನೀಲಮಣಿ ದ್ಯುತಿಯಿಂದ ವ್ಯಾಪ್ತವಾದ ಸಭೆಯ ದ್ವಾರವನ್ನು ಅದು ದ್ವಾರವೆಂದು ತಿಳಿಯದೆ ಸ್ಫಟಿಕಮಣಿ ನಿರ್ಮಿತವಾದ, ಒಳಗಿನ ದೃಶ್ಯವು ಸ್ಪಷ್ಟವಾಗಿ ಕಾಣುವಂತಿರುವ ಗೋಡೆಯನ್ನು ಬಾಗಿಲೆಂದು ಭ್ರಮಿಸಿ ಮುನ್ನುಗ್ಗಿ ಗೋಡೆಗೆ ಮುಖವನ್ನು ಬಡಿಸಿಕೊಂಡನು. ಆಗ ಧರ್ಮರಾಜನ ಆಣತಿಯಂತೆ ನಕುಲ-ಸಹದೇವರು ದುರ್ಯೋಧನನ ಭುಜವನ್ನು ಹಿಡಿದು ಸಭೆಯೊಳಗೆ ಕರತಂದರು. ಸ್ವಲ್ಪಕಾಲ ಸಭೆಯಲ್ಲಿ ಕುಳಿತಿದ್ದ ದುರ್ಯೋಧನನು ಪಾಂಡವರ ದೈವಿಕವಾದ ಈ ಅಪೂರ್ವಸಂಪತ್ತು, ಅಗಾಧ ವೈಭವಗಳನ್ನು ಕಂಡು ಸಹಿಸಲಾರದವನಾಗಿ ಸಭೆಯಿಂದ ಹೊರಹೊರಟನು. ಹಾಗೆ ಹೋಗುತ್ತಿರುವಾಗ ದುರ್ಯೋಧನನು ಇಂದ್ರನೀಲಮಣಿಗಳ ಪೂರ್ಣವಾದ ನೆಲದಲ್ಲಿ ನಿರ್ಮಿತವಾಗಿರುವ ರತ್ನಖಚಿತ ಕಮಲಗಳನ್ನು ಕಂಡು ಆ ನೆಲವನ್ನು ಜಲಪೂರ್ಣವಾದ ತಟಾಕವೆಂದು ಭ್ರಮಿಸಿ ತಾನುಟ್ಟಿರುವ ವಸ್ತ್ರವು ತೋಯದಿರಲೆಂದು ಕೈಗಳಿಂದ ಮೇಲೆತ್ತಿ ಹಿಡಿದು ನಡೆದನು. ಅದರಂತೆಯೇ ರತ್ನಗಳ ಉತ್ತಮಕಾಂತಿಗಳಿಂದ ಆಚ್ಛಾದಿತವಾದ ನೀರನ್ನು ಅದು ನೆಲವೆಂದು ಭಾವಿಸಿ ತಮ್ಮಂದಿರೊಡನೆ ಹೋಗಿ ನೀರಿನಲ್ಲಿ ಬಿದ್ದನು. ಆಗ ಭೂಭಾರ ಭೂತರಾದ ದುರ್ಯೋಧನಾದಿ ಕೌರವರ ನಾಶವಾಗಲೆಂದು ಬಯಸಿದ ಭಗವಾನ್ ಶ್ರೀಕೃಷ್ಣನು ಅದು ಭೂಮಿಕೆಯೋ ಎಂಬಂತೆ ದುರ್ಯೋಧನನ ಅವಸ್ಥೆಯನ್ನು ನೋಡಿ ನಸುನಕ್ಕು ನೇತ್ರಚಾಲನ ದ್ವಾರಾ ಭೀಮನಿಗೆ ಸೂಚಿಸಿದನು. ಆಗ ಭೀಮಸೇನ, ದ್ರೌಪದಿ,

ಬಾಂಧವರಾದ ಸಾತ್ಯಕಿ-ಧೃಷ್ಟದ್ಯುಮ್ನ ಮುಂತಾದವರು ದುರ್ಯೋಧನನ ಅವಸ್ಥೆಯನ್ನು ಕಂಡು ಹಾಸ್ಯಮಾಡಿ ಗಟ್ಟಿಯಾಗಿ ನಕ್ಕರು. ಶ್ರೀಕೃಷ್ಣನ ಪತ್ನಿಯರೂ ನಸುನಕ್ಕರು. ಮಂದಸ್ಮಿತವದನಾರವಿಂದ ಬಂಧುರನಾದ ಇಂದಿರಾಪತಿ ಗೋವಿಂದನು ಪವನಸುತನ ವದನವನೀಕ್ಷಿಸಿ ಏನೂ ಹೇಳದೆ ಮೌನವಹಿಸಿದನು. ತದನಂತರ ನಗುವಿನ ಅಟ್ಟಹಾಸವನ್ನು ತಡೆಗಟ್ಟಿ ಧರ್ಮರಾಜನು ನೀರಿನಲ್ಲಿ ಬಿದ್ದ ದುರ್ಯೋಧನಾದಿಗಳಿಗೆ ಉಡಲು-ಹೊದಿಯಲು ನೂತನವಸ್ತ್ರಗಳು ಮತ್ತು ಧರಿಸಲು ಕುಸುಮ-ಗಂಧಾದಿಗಳನ್ನು ತರಿಸಿಕೊಟ್ಟನು. ದ್ರೌಪದೀ-ಭೀಮಸೇನರು ಮಾಡಿದ ಅಪಹಾಸ್ಯದಿಂದ ಕ್ರುದ್ಧನಾದ ಕುರುರಾಜ ದುರ್ಯೋಧನನು ಅತಿಲಜ್ಜಿತನಾಗಿ ಧರ್ಮನಂದನನು ಕೊಡಿಸಿದ ವಸ್ತ್ರಾದಿಗಳನ್ನು ತಿರಸ್ಕರಿಸಿ ತನ್ನ ಮಾವನಾದ ಶಕುನಿ-ಯೊಡನೆ ಹಸ್ತಿನಾಪುರಕ್ಕೆ ಹೊರಟನು. ಮಾರ್ಗಮಧ್ಯದಲ್ಲಿ ಒಂದೆಡೆಯಲ್ಲಿ ಕುಳಿತು ಪಾಂಡವರ ಸಭೆಯಲ್ಲಿ ತನಗಾದ ಅಪಮಾನದಿಂದ ಕಡುದುಃಖಿತನಾಗಿ ಸೋದರಮಾವನಾದ ಶಕುನಿಯನ್ನು ಕುರಿತು "ಮಾವ! ದ್ರೌಪದೀ-ಭೀಮಸೇನರಿಗೆ ಪ್ರತೀಕಾರ ಮಾಡಿ ಅವರಿಗೆ ದುಃಖವನ್ನುಂಟುಮಾಡದೆ ನಾನು ಜೀವಿಸಿರಲಾರೆ. ಅವರಂತು ಅಪಹಾಸ ಮಾಡುತ್ತಿದ್ದಾಗ ನನಗೆ ಸಾಮರ್ಥ್ಯವಿದ್ದಿದ್ದರೆ ನನ್ನ ಕಡುವೈರಿಯಾದ ಭೀಮನನ್ನು ಕೊಂದುಬಿಡುತ್ತಿದ್ದೆ! ಕೃಷ್ಣನ ಅಗ್ರಪೂಜೆಯನ್ನು ತಪ್ಪಿಸುತ್ತಿದ್ದೆ. ಜಗತ್ತಿನ ಸಕಲ ರಾಜ-ಮಹಾರಾಜರುಗಳು ಚಕ್ರವರ್ತಿಯೆಂದು ಮನ್ನಿಸಿ ಧರ್ಮರಾಜನಿಗೆ ವೈಶ್ಯರಂತೆ ಕಪ್ಪ-ಕಾಣಿಕೆಗಳಲ್ಲಿ ಕೊಡುತ್ತಿದ್ದಾರೆ. ಪಾಂಡವರ ಆ ಅಗಾಧ ಸಿರಿಸಂಪತ್ತು ವೈಭವಗಳನ್ನು ಕಣ್ಣಾರೆ ನೋಡುತ್ತಾ ಯಾರು ತಾನೆ ಬದುಕ-ಲಿಚ್ಛಿಸುವರು?" ಮುಂತಾಗಿ ತನ್ನ ಮನದ ದುಗುಡವನ್ನು ಹೇಳಿಕೊಂಡು ಸಂಕಟಪಡಹತ್ತಿದನು.

ಆಗ ಶಕುನಿಯು ಪಾಂಡವರಲ್ಲಿ ದುರ್ಯೋಧನನಿಗಿರುವ ದ್ವೇಷವನ್ನು ಹೆಚ್ಚಿಸಲು "ರಾಜಶ್ರೇಷ್ಠ, ದುರ್ಯೋಧನ! ಬಲಿಷ್ಠರೂ, ಸಹೋದರರೂ ಆದ ಆ ಪಾಂಡವರೊಡನೆ ನಿನಗೇಕೆ ದ್ವೇಷ? ಗುಣಾಧಿಕರೂ, ಪ್ರಾರಂಭಿಸಿದ್ದನ್ನು ಕೊನೆ ಮುಟ್ಟಿಸಲು ಶಕ್ತರೂ, ಅತ್ಯಂತ ಬಲಶಾಲಿಗಳೂ ಆದ ಆ ಪಾಂಡವರನ್ನು ಅನುಸರಿಸಿಕೊಂಡಿದ್ದು ಜೀವಿಸು!" ಎಂದನು. ಆಗ ಸುಯೋಧನನು "ಮಾವ, ಪಾಂಡವರ ಸಮಸ್ತ ಸಿರಿಸಂಪತ್ತೂ ನನ್ನದಾಗಬೇಕು. ಹಾಗಾಗದಿದ್ದಲ್ಲಿ ಖಂಡಿತ ನಾನು ಬದುಕಿರಲಾರೆ. ಇದು ಸತ್ಯ" ಎಂದು ಕ್ರೋಧೋನ್ಮತ್ತನಾಗಿ ನುಡಿದು, ಮುಂದುವರೆದು - "ಬಾಹುಬಲದಿಂದ ಅವರ ಐಶ್ವರ್ಯವನ್ನು ಪಡೆಯಲಾಗದು. ಉಪಾಯಾಂತರದಿಂದ ಪಾಂಡವರನ್ನು ಜಯಿಸೋಣವೆಂದರೆ ದೇವತೆಗಳಿಗೆ ಪ್ರಭುವಾದ ದೇವೇಂದ್ರನೂ ಕೂಡ ಯುದ್ಧದಲ್ಲಿ ಪಾಂಡವರನ್ನು ಜಯಿಸಲಾರನೆಂದ ಮೇಲೆ ಮಾನವರ ವಿಷಯ ಹೇಳುವುದೇನಿದೆ?" ಹೀಗೆ ದುರ್ಯೋಧನನು ನುಡಿಯಲು ಪಾಪಿಗಳಲ್ಲಿ ಮೊದಲಿಗನಾದ ಗಾಂಧಾರ ದೇಶಾಧಿಪತಿಯಾದ ಶಕುನಿಯು ಪಾಪಿಗಳೆಂಬ ಚಕ್ರವರ್ತಿಗಳಲ್ಲಿ ಅಗ್ರಗಣ್ಯನಾದ ದುರ್ಯೋಧನನನ್ನು ಕುರಿತು ಇಂತೆಂದನು- "ದುರ್ಯೋಧನ! ಚಕ್ರವರ್ತಿಗಳಲ್ಲಿರಬೇಕಾದ ಅಗಾಧ ಸಂಪತ್ತು ಆ ಪಾಂಡವರಲ್ಲಿದೆ. ಆ ಎಲ್ಲ ಸಂಪತ್ತನ್ನು ನಾನು ನಿನಗಾಗಿ ಕಷ್ಟವಿಲ್ಲದೆ, ಅವರೊಡನೆ ದ್ಯೂತವಾಡಿ ಅಪಹರಿಸಿಕೊಡುತ್ತೇನೆ" ಎಂದನು.

ಮಾವನ ಮಾತುಕೇಳಿ ಹರ್ಷಗೊಂಡ ದುರ್ಯೋಧನನು ಮಾವ ಶಕುನಿಯೊಡನೆ ತಂದೆಯಾದ ಧೃತರಾಷ್ಟ್ರನ ಬಳಿಗೆ ಬಂದನು. ದ್ವಾಪರನೆಂಬ ಅಸುರನ ಅಂಶವುಳ್ಳವನೂ, ನಾಸ್ತಿಕ್ಯಾಭಿಮಾನಿಯೂ, ಅತಿಪಾಪಿಯೂ ಆದ ಶಕುನಿಯು ಧೃತರಾಷ್ಟ್ರನಿಗೆ ಇಂದ್ರಪ್ರಸ್ಥದಲ್ಲಿ ಜರುಗಿದ ಸಮಾಚಾರವನ್ನೂ, ಊರಿಗೆ ಬರುವಾಗ ತಾವು ಮಾತನಾಡಿಕೊಂಡ ವಿಷಯವನ್ನೂ ತಿಳಿಸಿದನು. ಪಗಡೆಯಾಟದಿಂದ ಪಾಂಡುನಂದನರ ಸಂಪತ್ತನ್ನು ಅಪಹರಿಸುವನೆಂಬ ಶಕುನಿಯ ವಚನವನ್ನಾಲಿಸಿ, ಧೃತರಾಷ್ಟ್ರನು "ಪಗಡೆಯಾಟವು ಧರ್ಮವಿರುದ್ಧವಾದುದು. ಅದು ನಿಮ್ಮ ವಿನಾಶಕ್ಕೇ ಕಾರಣವಾಗುವುದು. ಖಂಡಿತ ಆ ಕಾರ್ಯವನ್ನು ಮಾಡಬೇಡಿರಿ. ಪಾಂಡವರು ತಮ್ಮ ಭುಜಬಲ ಪರಾಕ್ರಮದಿಮದ ಸಂಪದ್ಭರಾಜಿತರಾಗಿದ್ದಾರೆ"- ಎಂದು ಹೇಳಿ ಮುಂದುವರೆದು "ಕುಮಾರ, ದುರ್ಯೋಧನ! ನೀನು ಪಾಂಡವರಂತೆ ಸಕಲ ದಿಕ್ಕುಗಳನ್ನೂ ಜಯಿಸಿ ಉತ್ತಮವಾದ

ಯಾಗವನ್ನು ಮಾಡಿ ಕೀರ್ತಿ ಸಂಪಾದಿಸು. ಆದರೆ ಸದ್ಗುಣಿಗಳೂ, ಪರಾಕ್ರಮಶಾಲಿಗಳೂ ಆದ ಪಾಂಡವರ ಮೇಲೆ ಸ್ಪರ್ಧೆ ಮಾಡಬೇಡ" ಎನಲು, ದುರ್ಯೋಧನನು "ಅಪ್ಪಾ, ನೀನು ಪಾಂಡವರ ಸಂಪತ್ತನ್ನು ದ್ಯೂತದಿಂದ ಅಪಹರಿಸಲು ಒಪ್ಪದೇ ಹೋದಲ್ಲಿ ನಾನು ಖಂಡಿತವಾಗಿ ಮರಣವನ್ನಪ್ಪುವೆನು. ನಾನು ಮೃತನಾದ ಮೇಲೆ ನೀನು ಪಾಂಡವರೊಡನೆ ಸುಖವಾಗಿ ಬಾಳು. ನಾನು ಬದುಕಿರಬೇಕೆಂದು ನೀನು ಬಯಸುವೆಯಾದರೆ, ಪತ್ನಿ ಸಮೇತರಾದ ಪಾಂಡವರನ್ನು ಪಗಡೆಯಾಟಕ್ಕೆ ಇಲ್ಲಿಗೆ ಕರೆಯಿಸು. ದ್ಯೂತವು ಅಧರ್ಮವೇನಲ್ಲ. ಬ್ರಾಹ್ಮಣರು ವೇದಗಳಿಂದಲೂ, ಕ್ಷತ್ರಿಯರು ಶಸ್ತ್ರಗಳಿಂದಲೂ ಜೀವಿಸುವರು. ಶತ್ರುವನ್ನು ಭೇದಿಸುವುದೇ ಶಸ್ತ್ರ, ಉಳಿದವು ಅಲ್ಲ. ಆದ್ದರಿಂದ ದ್ಯೂತವು ಕ್ಷತ್ರಿಯರಿಗೆ ಸ್ವಧರ್ಮವೇ ಆಗಿದೆ. ಈ ಅವಕಾಶ ನಮಗೆ ನೀಡಿದರೆ ನಿನಗೆ ಪುತ್ರರನ್ನು ಕಾಪಾಡಿದ ಮಹಾಫಲವು ಲಭಿಸುವುದು" - ಎಂದೆನಲು ಧೃತರಾಷ್ಟ್ರನು "ವತ್ಸ, ನನಗೆ ಫಲ ಬೇಡ, ಅದು ನಿನಗೇ ಇರಲಿ" ಎಂದು ಹೇಳಿದರೂ ಧೃತರಾಷ್ಟ್ರನು ಕಲಿಪ್ರವೇಶದಿಂದ ಕಲುಷಿತ ಮನವುಳ್ಳವನಾಗಿ ಮಗನ ಮೇಲಿನ ಅತಿಯಾದ ಮಮತೆ ಮೋಹಗಳಿಂದ ಯುಕ್ತನಾಗಿ ಪಾಂಡವರನ್ನು ಕರೆದು ತರುವಂತೆ ವಿದುರನಿಗೆ ಹೇಳಿದನು. ಪುತ್ರತ್ವಸಿದ್ಧಿಗಾಗಿ[34] ಅಂಶದಿಂದ ಕಲಿಯು ಧೃತರಾಷ್ಟ್ರನಲ್ಲಿ ಪ್ರವೇಶ ಮಾಡಿದ ದಿನದಿಂದಲೂ ಅವನ ಮನಸ್ಸನ್ನು ವ್ಯತ್ಯಾಸಗೊಳಿಸಲು ಕಲಿಯು ಧೃತರಾಷ್ಟ್ರನ ಹೃದಯದಲ್ಲಿ ಸ್ಥಿರವಾಗಿ ನೆಲೆಸಿಬಿಟ್ಟನು. ಪುತ್ರೋತ್ಪತ್ತಿ (ದುರ್ಯೋಧನನ ಜನನ) ಕಾಲದಿಂದ ಆರಂಭಿಸಿ ಧೃತರಾಷ್ಟ್ರನು ವೃದ್ಧನಾಗಿ ವಾನಪ್ರಸ್ಥಾಶ್ರಮ ಕೈಗೊಂಡು ವನಕ್ಕೆ ಹೋಗುವವರೆಗಿನ ಮಧ್ಯದಲ್ಲಿ ಸಂಪೂರ್ಣವಾಗಿ ಕಲಿಯ ಆವೇಶದಿಂದಾಗಿ ಧೃತರಾಷ್ಟ್ರನ ಬುದ್ಧಿಯು ಪಾಪಯುಕ್ತವಾಗಿತ್ತು ಎಂದು ತಿಳಿಯಬೇಕು.

ಧೃತರಾಷ್ಟ್ರನ ಮಾತು ಕೇಳಿ ವಿದುರನು "ಅಣ್ಣ, ಈ ಕಾರ್ಯಕ್ಕೆ ನೀನು ಅವಕಾಶ ಕೊಡಬೇಡ. ಇದು ನಿನಗೆ ಪಾಪ ಸಾಧನವಾಗುತ್ತದೆ. ಈ ಕಾರ್ಯವು ನಿನ್ನ ವಂಶಕ್ಕೂ ನಾಶಕಾರಕವಾದುದು. ನಿನ್ನಿಂದಾಗಿ ಕುಲನಾಶವಾಯಿತೆಂಬ ಅಪಕೀರ್ತಿಯುಂಟಾಗುವುದು. ಇದರಲ್ಲಿ ವಿಚಾರ ಮಾಡುವ ಅಂಶವೇನೂ ಇಲ್ಲ. ಈ ದುಷ್ಟಕಾರ್ಯಕ್ಕೆ ಮನಕೊಡಬೇಡ" ಎಂದು ಹೇಳಿದನು. ಆಗ ಧೃತರಾಷ್ಟ್ರನು "ವಿದುರ, ನನ್ನ ಮಕ್ಕಳು ಮತ್ತು ಪಾಂಡವರಲ್ಲಿ ಕಲಹವನ್ನು ನಿವಾರಿಸಬೇಕೆಂದೇ ನಾನು ಈ ನಿಶ್ಚಯಕ್ಕೆ ಬಂದಿದ್ದೇನೆ. ಪಾಂಡವರೂ ದುರ್ಯೋಧನಾದಿಗಳೂ ಒಂದೆಡೆಯಲ್ಲಿ ಕುಳಿತು ಸಂತೋಷದಿಂದ ಪಗಡೆಯಾಟವಾಡುವುದನ್ನೂ ಕಂಡಾನಂದಿಸಬಯಸಿದ್ದೇನೆ. ಇದು ಖಂಡಿತ ಕಲಹಕಾರಣವಾಗಲಾರದು. ಆದುದರಿಂದ ಪಾಂಡವರನ್ನು ಬೇಗ ಕರೆದುಕೊಂಡು ಬಾ" ಎಂದು ಬಲಾತ್ಕಾರವಾಗಿ ಆಜ್ಞಾಪಿಸಿದನು. ಅಲ್ಲಿಂದ ಹೊರಟ ವಿದುರನು ಶ್ರೀಕೃಷ್ಣನು ದ್ವಾರಕೆಗೆ ತೆರಳಿದ ಸ್ವಲ್ಪಕಾಲವಾದಮೇಲೆ ಇಂದ್ರಪ್ರಸ್ಥಕ್ಕೆ ಪಾಂಡವರ ಬಳಿಗೆ ಬಂದು ಸೇರಿದನು.

ನಿರ್ಣಯಾಚಾರ್ಯರು ಶ್ರೀಕೃಷ್ಣನು ದ್ವಾರಕಾಪುರಿಗೆ ಇದ್ದಕ್ಕಿದ್ದಂತೆ ಹೊರಟ ಕಾರಣವನ್ನು ಈಗ ನಿರೂಪಿಸುತ್ತಾರೆ.

ದುರ್ಯೋಧನನು ಪಾಂಡವರ ಮೇಲೆ ಸಿಟ್ಟಾಗಿ ಹಸ್ತಿನಾಪುರಕ್ಕೆ ಹೊರಟುಹೋದ ಮೇಲೆ, ಅಲ್ಲಿಗೆ ಆಗಮಿಸಿದ ದೇವರ್ಷಿನಾರದರು ಕೃಷ್ಣರಿಪುವಾದ ಸಾಲ್ವನು ದ್ವಾರಕಾಪುರಿಗೆ ದಂಡೆತ್ತಿ ಹೊರಟಿರುವ ವಿಚಾರವನ್ನು ಹೇಳುತ್ತಾ "ಸೌಭದೇಶಾಧಿಪತಿಯಾದ ಸಾಲ್ವನು ಒಂದೆಯೇ ರುದ್ರದೇವರಿಂದ ವರವನ್ನು ಪಡೆದಿದ್ದಾನೆ. ರುಕ್ಮಿಣಿಯ ಹರಣಕಾಲದಲ್ಲಿ ಕೃಷ್ಣನಿಂದ ಪರಾಜಿತನಾದ ಸಾಲ್ವನು ಈ ಭೂಮಿಯು ಯಾದವ ರಹಿತವಾಗುವಂತೆ ಮಾಡುತ್ತೇನೆ - ಅಂದರೆ ಎಲ್ಲ ಯಾದವರನ್ನೂ ನಾಶಪಡಿಸುತ್ತೇನೆ - ಎಂದ ಪ್ರತಿಜ್ಞೆ ಮಾಡಿ ಭೂಮಿಯ ಒಂದು ಹಿಡಿ ಮಣ್ಣನ್ನು ತಿಂದಿದ್ದಾನೆ. ಅವನು

34. ಪುತ್ರನಾಗಬೇಕಾದರೆ ಮೊದಲು ತಂದೆಯನ್ನು ಪ್ರವೇಶಿಸಿ ನಂತರ ಮಾತೃಗರ್ಭವನ್ನು ಸೇರುವುದು ನಿಯಮ. ಕಲಿಯೇ ದುರ್ಯೋಧನನಾದ್ದರಿಂದ ಅಂಶದಿಂದ ಪುತ್ರನಾಗಿ ಜನಿಸಲು ಮೊದಲು ಧೃತರಾಷ್ಟ್ರನನ್ನು ಪ್ರವೇಶಿಸಿ ಮಗನಾಗಿ ಜನಿಸಿದನು. ನಂತರ ಇನ್ನೊಂದು ಅಂಶದಿಂದ ಧೃತರಾಷ್ಟ್ರನ ಮನಸ್ಸನ್ನು ಕೆಡಿಸಲು ಪ್ರವೇಶ ಮಾಡಿ ಸ್ಥಿರವಾಗಿ ನೆಲೆಸಿದನು ಎಂದು ತಿಳಿಯಬೇಕು (ಶ್ರೀವಾದಿರಾಜಸ್ವಾಮಿಗಳ ವ್ಯಾಖ್ಯಾನದಂತೆ)

ವಾಸುದೇವನನ್ನು ಜಯಿಸಲೆಂದು ಅನೇಕ ವರ್ಷಗಳ ಕಾಲ ತಪಸ್ಸು ಮಾಡಿ ರುದ್ರದೇವರಿಂದ ವರಪಡೆದು ತನ್ನ ರಾಜ್ಯಕ್ಕೆ ಹಿಂದಿರುಗಿದನು. ಸಾಲ್ವನು ತನ್ನೂರಿಗೆ ಬಂದ ಮೇಲೆ ಜರಾಸಂಧನ ವಧೆಯ ವಿಚಾರ, ಪಾಂಡವರು ಸರ್ವದಿಕ್ಕುಗಳನ್ನು ಜಯಿಸಿ ನೆರವೇರಿಸಿದ ರಾಜಸೂಯಯಾಗ ವಿಚಾರ ಮತ್ತು ಶಿಶುಪಾಲನ ಸಂಹಾರ ವಿಚಾರಗಳನ್ನು ಕೇಳಿ ಅತಿಕುಪಿತನಾಗಿ ಯಾದವರ ಮೇಲೆ ಸೇಡು ತೀರಿಸಿಕೊಳ್ಳಲು ಉದ್ಯುಕ್ತನಾಗಿದ್ದಾನೆ" ಮುಂತಾಗಿ ಹೇಳಿದರು.

ನಾರದರ ಮಾತುಕೇಳಿ ಧರ್ಮರಾಜನು ಶ್ರೀಕೃಷ್ಣನ ಮುಖವೆಂಬ ಚಂದ್ರಮಂಡಲವನ್ನು ನಿರೀಕ್ಷಿಸಿದನು. ನಾರದರ ಮಾತು ಕೋಪವನ್ನು ಕೆರಳಿಸುವಂತಹುದಾದರೂ ಲೀಲಾಮಾತ್ರದಿಂದ ಸಮಸ್ತಪ್ರಪಂಚವನ್ನು ಸಂಹರಿಸಲು ಶಕ್ತನಾದ ಮಾಧವನಿಗೆ ಇನಿತೂ ಕೋಪವುಂಟಾಗಲಿಲ್ಲವೆಂದು ಸೂಚಿಸಲು ಇಲ್ಲಿ ನಿರ್ಣಯಾಚಾರ್ಯರು "ಕೃಷ್ಣಮುಖಶೀತಾಂಶು-ಮಂಡಲಂ" ಎಂದು ವರ್ಣಿಸಿದ್ದಾರೆ. ನಾರದರ ವಚನವಾಲಿಸಿದ ಕೃಷ್ಣ "ಸಂತೋಷ. ಸಾಲ್ವನು ಹಾಗೆಯೇ ಮಾಡಲಿ. ಅಂದರೆ ಯುದ್ಧಕ್ಕೆ ಬರಲಿ. ಅವನೇನು ಮಾಡುವನೋ ನೋಡೋಣ!" ಎಂದು ಹೇಳಿ ಪ್ರದ್ಯುಮ್ನ ಮೊದಲಾದ ಯದುವೀರರನ್ನು ದ್ವಾರಕೆಗೆ ಕಳುಹಿ, ಸ್ವಲ್ಪ ಕಾಲಾನಂತರ ತಾನೂ ಬಲರಾಮನೊಡನೆ ದ್ವಾರಕಾಪುರಿಗೆ ಹೊರಟನು.

ಶ್ರೀಮುರಾರಿಯು ಪಯಣ ಬೆಳೆಸಿದ ಮೇಲೆ ಅಲ್ಲಿಗೆ ಬಂದ ವಿದುರನು ಧೃತರಾಷ್ಟ್ರನ ಆಣತಿಯನ್ನು ಧರ್ಮಜನಿಗರುಹಿ ಪಗಡೆಯಾಟವಾಡಲು ಬರುವಂತೆ ಆಹ್ವಾನಿಸಿದನು. ಮಾತಾ ಕುಂತಿ ಮತ್ತು ಸಹೋದರರು ಹೋಗುವುದು ಬೇಡವೆಂದು ಹೇಳಿದರೂ ಧರ್ಮರಾಯನು ತಾಯಿ, ಸಹೋದರರು ಮತ್ತು ಪಾಂಚಾಲಿಯರಿಂದೊಡಗೂಡಿ ದ್ಯೂತಕ್ಕಾಗಿ ಹಸ್ತಿನಾಪುರಕ್ಕೆ ಹೊರಟನು. ಆಗ ವಿದುರನು ಅಣ್ಣನ ಅಪ್ಪಣೆಯಂತೆ ಪಾಂಡವರನ್ನು ದ್ಯೂತಕ್ರೀಡೆಗೆ ಆಹ್ವಾನಿಸಿದ್ದರೂ ಧರ್ಮನಂದನನಿಗೆ ಪಗಡೆಯಾಟದಿಂದುಂಟಾಗುವ ದೋಷ-ಅನರ್ಥಗಳನ್ನು ತಿಳಿಸಿಹೇಳಿ 'ನೀನು ಖಂಡಿತ ಬರಬೇಡವೆಂದು ಸ್ಪಷ್ಟವಾಗಿ ಹೇಳಿ ಅಕ್ಷಕ್ರೀಡೆಯು ದೋಷಕಾರಕವು. ನಿನ್ನ ದೊಡ್ಡಪ್ಪ ನಿನ್ನನ್ನು ಬರಹೇಳಿದ್ದಾನೆ. ಈ ಎರಡನ್ನೂ ನೀನು ಸರಿಯಾಗಿ ವಿಚಾರ ಮಾಡಿ ಯೋಗ್ಯವಾದುದನ್ನು ಮಾಡು' ಎಂದನು. ಹೀಗೆ ವಿದುರನು ಹೇಳಿದರೂ ಕಲಿಪ್ರವೇಶದ ಪ್ರಭಾವದಿಂದಾಗಿ ಯುಧಿಷ್ಠಿರನು ಸೈನ್ಯ ಸಮೇತನಾಗಿ ದೊಡ್ಡಪ್ಪನಲ್ಲಿಗೆ ಬಂದನು.

ಧರ್ಮಾತ್ಮನಾದ ಧರ್ಮಜನು ಹಿಂದೆಯೇ ಕಲಿಯ ಆವೇಶಮತ್ತನಾಗಿ ಶಸ್ತ್ರ ಸಂಗ್ರಹಕಾಲದಲ್ಲಿಯೇ 'ದ್ಯೂತಕ್ಕೆ ಆಹ್ವಾನಿತನಾದ ನಾನು ಯಾರು ತಡೆದರೂ ದ್ಯೂತವಾಡಲು ಹಿಂಜರಿಯುವುದಿಲ್ಲ' ಎಂದು ಪ್ರತಿಜ್ಞೆ ಮಾಡಿರುವನು. ಅಂತೆಯೇ ಹಸ್ತಿನಾವತಿಗೆ ಬಂದನು. ಧೃತರಾಷ್ಟ್ರ ಮತ್ತು ಅವನ ಮಕ್ಕಳು ಅವನನ್ನು ಸ್ವಾಗತಿಸಿದರು. ಅಂದು ರಾತ್ರಿ ಪಾಂಡವರು ದೊಡ್ಡಪ್ಪನ ಮನೆಯಲ್ಲಿಯೇ ವಿಶ್ರಾಂತಿ ಪಡೆದರು. ಮರುದಿನ ಬೆಳಿಗ್ಗೆ ಭೀಷ್ಮಾಚಾರ್ಯರೇ ಮೊದಲಾದ ಎಲ್ಲ ರಾಜರೂ ಪಾಂಡವರೊಡನೆ ದ್ಯೂತಕ್ರೀಡೆಗಾಗಿ ಸಭಾಭವನಕ್ಕೆ ಬಂದರು. ವಿದುರ, ಧೃತರಾಷ್ಟ್ರ ಅವನ ಸುತರಾದ ದುರ್ಯೋಧನಾದಿಗಳು, ಶಕುನಿ, ಕರ್ಣ ಇವರಿಂದ ಯುಕ್ತರಾಗಿ ಪಾಂಡವರು ಸಭೆಗೆ ಬಂದರು.

ಆನಂತರ ಸುಬಲರಾಜಕುಮಾರನಾದ ಶಕುನಿಯು ಪಗಡೆಯಾಟಕ್ಕೆ ಯುಧಿಷ್ಠಿರನನ್ನು ಆಹ್ವಾನಿಸಿದನು. ಭೀಮಾರ್ಜುನಾದಿ ನಾಲ್ವರು, ಕುಂತಿದೇವಿ, ದ್ರೌಪದಿ ಮತ್ತು ವಿದುರ - ಹೀಗೆ ಈ ಏಳು ಜನರನ್ನು ಬಿಟ್ಟು, ಆ ಸಭೆಯಲ್ಲಿದ್ದ ಸಕಲರಲ್ಲೂ ಕಲಿಯು ಪ್ರವೇಶಿಸಿದನು. ಕಲಿಯ ಆವೇಶದಿಂದಾಗಿ, ಕುರುಕುಲನಾಶಕ್ಕೆ ಕಾರಣವಾದ ದ್ಯೂತಕ್ರೀಡಾಸಕ್ತರಾದ ದುರ್ಯೋಧನಾದಿಗಳನ್ನು ಭೀಷ್ಮಾಚಾರ್ಯಾದಿ ಪ್ರಾಜ್ಞರು ತಡೆಯಲಿಲ್ಲ. ಭೀಮ-ವಿದುರಾದಿ ಆಪ್ತರು ಬೇಡವೆಂದು ತಡೆದರೂ ಧರ್ಮರಾಯನು ಕೇಳದೆ ದ್ಯೂತವನ್ನಾರಂಭಿಸಿದನು. ಅವನು ಮೊದಲು ತನ್ನೆಲ್ಲ ಸಂಪತ್ತನ್ನೂ ಪಣವಾಗಿ ಒಡ್ಡಿ, ದ್ಯೂತಕ್ರೀಡೆಯಲ್ಲಿ ಚತುರನಾದ ಶಕುನಿಯಿಂದ ಪರಾಜಿತನಾದನು. ಆನಂತರ ಕ್ರಮವಾಗಿ ನಕುಲ, ಸಹದೇವ, ಅರ್ಜುನ, ಭೀಮಸೇನರನ್ನೂ, ಆ ತರುವಾಯ ದ್ರುಪದನಂದಿನಿಯಾದ ದ್ರೌಪದಿಯನ್ನೂ ಪಣವಾಗಿಟ್ಟು ಸೋತನು.

ಧರ್ಮರಾಜನು ಹೀಗೆ ಎಲ್ಲವನ್ನೂ, ಸೋತಮೇಲೆ ಮದಾಂಧನಾದ ದುರ್ಯೋಧನನು ಸಭೆಗೆ ದ್ರೌಪದಿಯನ್ನು ಕರೆತರಲು ಸೂತನನ್ನು ಕಳಿಸಿದನು. ಸೂತನು ಬಂದು "ನೀನು ದ್ಯೂತಕ್ರೀಡೆಯಲ್ಲಿ ಪಣವಾಗಿಡಲ್ಪಟ್ಟು ಪರಾಜಿತಳಾಗಿರುವೆ. ಆದ್ದರಿಂದ ದುರ್ಯೋಧನನು ನಿನ್ನನ್ನು ಸಭೆಗೆ ಬರುವಂತೆ ಆಜ್ಞೆ ಮಾಡಿದ್ದಾನೆ" ಎಂದರುಹಿದನು. ಅದಕ್ಕೆ ದ್ರೌಪದಿಯು "ನನ್ನ ಮಾವ, ಭೀಷ್ಮ ಮುಂತಾದ ಗುರುಜನರಿರುವ ಸಭೆಗೆ ನಾನು ಬರುವುದಿಲ್ಲ" ಎನಲು ಸೂತನು ಹಿಂದಿರುಗಿ ಹೋಗಿ ಆ ವಿಚಾರವನ್ನು ಸುಯೋಧನನಿಗೆ ತಿಳಿಸಿದನು. ಭೀಮನ ಭಯದಿಂದ ದ್ರೌಪದಿಯನ್ನು ಕರೆತರುವಂತೆ ಸೂತನನ್ನು ಕಳಿಸದೆ ತನ್ನ ತಮ್ಮನಾದ ದುಶ್ಶಾಸನನನ್ನು ಕಳಿಸಿದನು. ಪಾಪಿಗಳಲ್ಲಿ ಮೊದಲಿಗನಾದ ಆ ದುಶ್ಶಾಸನನು ರಜಸ್ವಲೆಯಾಗಿದ್ದ ಮತ್ತು ಮೇಲು ಹೊದ್ದಿಕೆಯ ವಸನವಿಲ್ಲದಿರುವ ಪತಿವ್ರತಾಶಿರೋಮಣಿಯಾದ ದ್ರೌಪದಿದೇವಿಯನ್ನು ತನ್ನ ತಾಯಿಯಾದ ಗಾಂಧಾರಿಯ ಮುಂದೆಯೇ ದ್ರೌಪದಿಯ ಸಿರಿಮುಡಿಯನ್ನು ಹಿಡಿದು ಸಭೆಗೆ ಎಳೆದು ತಂದನು. ಆಗ ಪಾಂಚಾಲಿಯು ಸಭೆಯಲ್ಲಿರುವ ಭೀಷ್ಮದ್ರೋಣಾದಿಗಳನ್ನು ನೋಡಿ "ಇಂಥ ಅಧರ್ಮ ಕಾರ್ಯವಾಗುತ್ತಿದ್ದರೂ ತಡೆಯದೆ ಏಕೆ ಸುಮ್ಮನಿರುವಿರಿ?" ಎಂದಳು.

ಮತ್ತೆ ಮುಂದುವರೆದು- "ದ್ಯೂತಕ್ರೀಡೆಯು ಅಧರ್ಮವು. ಕಪಟದ್ಯೂತದಿಂದ ಖಂಡಿತವಾಗಿಯೂ ಧರ್ಮದ ಜಯವಾಗಲಾರದು. ಅಧರ್ಮವಾದುದರಿಂದ ಇದನ್ನು ತಡೆಯಬೇಕು. ವಿದ್ವಾಂಸರು ದ್ಯೂತವು ಅಧರ್ಮವೆಂದು ಹೇಳುವುದಿಲ್ಲವೋ? ಧರ್ಮಜ್ಞರಾಗಿಯೂ ಧರ್ಮವನ್ನು ಹೇಳದಿದ್ದರೆ ಅಂಥವರು ಜ್ಞಾನವೃದ್ಧರೆನಿಸಲಾರರು. ಜ್ಞಾನ-ವೃದ್ಧರಿಲ್ಲದ ಈ ಸಭೆಯು ಸಭೆಯೇ ಅಲ್ಲ. ನನ್ನ ಪತಿಯು ಪರಾಜಿತನಾಗದೆ, ಪತ್ನಿಯು ಸಹಧರ್ಮಿಣಿಯಾದ್ದರಿಂದ ನಾನೆಂತು ದ್ಯೂತದಲ್ಲಿ ಪರಾಜಿತಳಾದೆನು? ಧರ್ಮದಿಂದ ಸಾಧಿಸಿದ್ದೇ ಜಯವು. ಅಧರ್ಮದಿಂದ ಗಳಿಸಿದ ಜಯವು ಜಯವಲ್ಲ. ಶಕುನಿಯು ಅಧರ್ಮ-ಕಪಟದಿಂದ ದ್ಯೂತವಾಡಿರುವುದರಿಂದ ನಿದ್ರಾಸಕ್ತನ ಶಿರಸ್ಸನ್ನು ಕಡಿದುಕೊಲ್ಲುವುದೆಂತು ಜಯವಾಗಲಾರದೋ ಅದರಂತೆ ಇದೂ ಸಹ ಜಯವೆನಿಸಲಾರದು. ಗಂಡನು ದಾಸನಾದರೆ ಅವನು ಪತ್ನಿಸಹಿತನಾಗಿಯೇ ದಾಸ್ಯವೃತ್ತಿ ಮಾಡಬೇಕು. ಗಂಡನು ದಾಸನಾಗಿ ಮಾಡುವ ಕಾರ್ಯವನ್ನೇ ಪತಿಸಹಿತಳಾಗಿ ಪತ್ನಿಯೂ ಮಾಡಬೇಕು. ಪತಿವ್ರತಾಸ್ತ್ರೀಯರು ಕೇವಲ ಮತ್ತೊಬ್ಬರ ದಾಸಿಯಾಗಲಾರಳು. ಆದುದರಿಂದ ನನ್ನ ಪತಿಯು ಸೋತರೂ ನನಗೆ ಪ್ರತ್ಯೇಕವಾಗಿ ದಾಸಿತ್ವವಿಲ್ಲ" ಎಂದು ದ್ರೌಪದಿಯು ಹೇಳಿದಳು.

ಹೀಗೆ ಅವಳು ಹೇಳಿದರೂ ಕಲಿಯ ಆವೇಶದಿಂದ ಮೋಹಿತರಾದ ಭೀಷ್ಮಾದಿಗಳು "ಈ ಧರ್ಮವಿಚಾರವನ್ನು ನಿನ್ನ ಪತಿ ಧರ್ಮರಾಜನನ್ನೇ ಕೇಳು" ಎಂದು ಮೌನವಹಿಸಿದರು. ದುರ್ಯೋಧನನಿಗೆ ಯಾರೂ ಇದು ಅಧರ್ಮವೆಂದು ಹೇಳದಿರಲು ವಿದುರನು "ಈ ಕಾರ್ಯವು ಧರ್ಮವಿರುದ್ಧ"ವೆಂದು ಸ್ಪಷ್ಟಪಡಿಸಿ ವಿವೇಕ ಹೇಳಿದನು. ಯದ್ಯಪಿ ವಿದುರನು ಕಲ್ಯಾವೇಶಕ್ಕೆ ಒಳಗಾಗಬಹುದಾಗಿದ್ದರೂ, ಕಲಿಯ ಗರ್ವನಿಗ್ರಹ ಸಮರ್ಥನಾದ ಭೀಮನ ಪಕ್ಷಪಾತಿಯಾದ್ದರಿಂದ ಕಲ್ಯಾವೇಶ ರಹಿತನಾಗಿದ್ದರಿಂದ ಅಧರ್ಮವೆಂದು ಸ್ಪಷ್ಟವಾಗಿ ತಿಳಿಸಿದನೆಂದು ತಿಳಿಯಬೇಕು.

ಧೃತರಾಷ್ಟ್ರ-ಅವನ ಮಕ್ಕಳು ವಿದುರನ ಮಾತನ್ನು ಮಾನಿಸದಿದ್ದುದರಿಂದ ಈ ವಿಷಯದಲ್ಲಿ ನಾನು ಅಶಕ್ತನೆಂದು ದೇವತೆಗಳಿಗೆ ನಿವೇದಿಸಲೋ ಎಂಬಂತೆ ತನ್ನ ಎರಡೂ ಬಾಹುಗಳನ್ನು ಮೇಲೆತ್ತಿ ವಿದುರನು "ದ್ರೌಪದಿಯು, ಧರ್ಮದ ದೃಷ್ಟಿಯಿಂದ ದಾಸಿಯಲ್ಲ, ಪಣದಲ್ಲಿ ಕೌರವರು, ದೇವಿ! ನಿನ್ನನ್ನು ಗೆದ್ದೇವೆನ್ನುವುದು ಅಧರ್ಮ. ಈ ಸಭೆಯನ್ನು ಅಧರ್ಮವು ಆಕ್ರಮಿಸಿದೆ"- ಎಂದು ಕೂಗಿ ಹೇಳಿದನು. ವಿದುರನ ಮಾತುಕೇಳಿ ಸ್ವಯಂ ಪಾಪಿಷ್ಠನಾಗಿದ್ದರೂ ದುರ್ಯೋಧನನ ತಮ್ಮ ವಿಕರ್ಣನು ತಾನೊಬ್ಬ ಧರ್ಮಜ್ಞನೆಂದು ಪ್ರಕಟಿಸಲು "ಇಲ್ಲಿ ನಡೆದುದು ಅಧರ್ಮವೆಂದು" ಜಂಭವನ್ನು ತೋರುತ್ತಾ ನಿವೇದಿಸಿದನು. ಆಗ ಅಂಗರಾಜ ಕರ್ಣನವನನ್ನು ನಿಂದಿಸಿ ಕೈಹಿಡಿದು ಕೂಡಿಸಿದನು. ದುಃಖಾರ್ತಳಾದ ದ್ರೌಪದಿಯನ್ನು

ನೋಡಿ ಭೀಮನು "ಪಾಂಚಾಲ ರಾಜಕುಮಾರಿಯನ್ನು ದ್ಯೂತದಲ್ಲಿ ಪಣವಾಗಿಟ್ಟ ಧರ್ಮರಾಜನು ಧರ್ಮವನ್ನು ಅತಿಕ್ರಮಿಸಿ ವರ್ತಿಸಿರುವುದರಿಂದ ಶಿಕ್ಷಾರ್ಹನಾಗಿದ್ದಾನೆ. ಆದ್ದರಿಂದ ನಾನಿವನ ಭುಜಗಳನ್ನು ಸುಡುತ್ತೇನೆ" ಎಂದು ಕೋಪದಿಂದ ಹೇಳಲು ಅರ್ಜುನನು "ಅಣ್ಣ, ಹಾಗೆ ಹೇಳಬಾರದು" ಎಂದು ಹೇಳಿದನು. ಆಗ ಭೀಮಸೇನನು "ಅಣ್ಣನೆಸಗಿದ ಕಾರ್ಯವು ಅಧರ್ಮವೆಂದು ಹೇಳಿ ಅವನ ಕರಗಳನ್ನು ಸುಡುತ್ತೇನೆ ಎಂಬುದು ನ್ಯಾಯವೇ ಆಗಿದೆ. ಉತ್ತಮರಾದವರು ಮಾಡಿದ ಅಧರ್ಮಕ್ಕಾಗಿ ಅವರಿಗೆ ನಿಂದಾರೂಪ ಶಿಕ್ಷೆ ನೀಡಬೇಕು, ಮಧ್ಯಮರಿಗೆ ಅವರ ದ್ರವ್ಯಾಪಹಾರರೂಪ ಶಿಕ್ಷೆ ಕೊಡಬೇಕು. ಅಧರ್ಮ ಗೈದವರನ್ನು ದೇಹದಂಡನೆಯಿಂದ ಶಿಕ್ಷಿಸಬೇಕೆಂದು ಪ್ರಾಜ್ಞರು ಹೇಳುವರು. ಆದ್ದರಿಂದ ಅರ್ಜುನ, ಅಣ್ಣನಾದ ಧರ್ಮರಾಜನು ಉತ್ತಮನಾದುದರಿಂದ ಅವನನ್ನು ಶಿಕ್ಷಿಸದೆ ಬಿಟ್ಟಿರುವೆನು" ಎಂದನು.

ಆ ಬಳಿಕ ಕರ್ಣನು "ದ್ರೌಪದಿ! ನೀನೀಗ ಪತಿಗಳಿಲ್ಲದವಳಾಗಿರುವೆ (ಅನಾಥಳಾಗಿರುವೆ), ಆದ್ದರಿಂದ ನಾಥನಾದ ದುರ್ಯೋಧನನ ಮನೆಗೆ ತೆರಳು" ಎಂದನು. ಆಗ ದುರ್ಯೋಧನನು ಪಾಂಡವರಲ್ಲಿ ವಿರೋಧ ಹುಟ್ಟಿಸಲು "ದ್ರೌಪದಿ, ಇಂದು ನಿನ್ನ ಈ ದುಃಖಕ್ಕೆ ಧರ್ಮರಾಜನೊಬ್ಬನೇ ಕಾರಣನು. ಅವನು ನಮಗೆ ಪೂಜ್ಯನಲ್ಲ. ಇದರಂತೆ ಭೀಮಾದಿ ನಾಲ್ವರೂ ಧರ್ಮರಾಜನು ಪೂಜ್ಯನಲ್ಲವೆಂದು ಹೇಳಿದಲ್ಲಿ, ಅಥವಾ ಭೀಮಾರ್ಜುನರು ಮಾತ್ರವಾಗಲಿ, ಅಥವಾ ಭೀಮನೊಬ್ಬನೇ ಆಗಲಿ, ಯುಧಿಷ್ಠಿರನು ಪೂಜ್ಯನಲ್ಲ ಎಂದು ಹೇಳಿಬಿಡಲಿ. ಆಗ ನಾನು ನಿನ್ನನ್ನು ಬಂಧವಿಮುಕ್ತಿಗೊಳಿಸುತ್ತೇನೆ" ಎನಲು ಅವನ ಮಾತು ಕೇಳಿ ಪವನನಂದನನಾದ ಭೀಮಸೇನನು "ಎಲವೋ, ಧರ್ಮರಾಜನು ನಮ್ಮೆಲ್ಲರಿಗೂ ಪೂಜ್ಯನೇ ಆಗಿದ್ದಾನೆ. ಇದರಲ್ಲಿ ಸಂಶಯಬೇಡ. ನಾನೇ ನಿಮ್ಮೆಲ್ಲರಿಗೂ ಪೂಜ್ಯನಾಗಿದ್ದೇನೆ. ಏಕೆಂದರೆ, ಬಲದಲ್ಲಿ ಶ್ರೇಷ್ಠನಾದ ಕ್ಷತ್ರಿಯನೇ ಎಲ್ಲ ಕ್ಷತ್ರಿಯರಿಗೂ ಗುರುವು ಎಂದು ದೊಡ್ಡವರು ಹೇಳುವರು. ನಿನಗೆ ನಾನು ಬಲಶಾಲಿಗಳಲ್ಲಿ ಉತ್ತಮನೆಂಬುದರಲ್ಲಿ ಸಂಶಯವಿದ್ದಲ್ಲಿ, ಮಹಾವೀರರೆಂದು ಗರ್ವಿಸುವ ನೀವೆಲ್ಲರೂ ನನ್ನೊಡನೆ ಯುದ್ಧಕ್ಕೆ ಸಿದ್ಧರಾಗಿರಿ. ನಿಮ್ಮೆಲ್ಲರನ್ನೂ ನನ್ನ ಪಾದತಲಾಘಾತದಿಂದಲೇ ಮರ್ದಿಸಿಬಿಡುವೆನು. ನನ್ನೊಡನೆ ಯುದ್ಧ ಮಾಡಲಿಚ್ಛಿಸುವವನನ್ನು ಸಂಹರಿಸುವೆನು" ಎಂದು ಗರ್ಜಿಸಲು ಭಯಾಕ್ರಾಂತವಾದ ಆ ಸಭೆಯಲ್ಲಿರುವವರಾರೂ ಉತ್ತರಕೊಡದೆ ಮೌನತಾಳಿದರು.

ಆಗ ಭೀಷ್ಮ-ದ್ರೋಣ-ವಿದುರಾದಿಗಳು "ಭೀಮಸೇನ! ನೀನು ಹೇಳಿದ್ದು ನಿಜ. ಈಗ ಸಮಾಧಾನ ವಹಿಸು" ಎಂದವರ ಕರಪಿಡಿದು ಕೂಡಿಸಿದರು. ಭೀಮನಾಗ ಸುಮ್ಮನೆ ಕುಳಿತನು. ಆಗ ದುರ್ಯೋಧನ ಮೊದಲಾದವರು ಸಮಾಧಾನದ ಉಸಿರುಬಿಟ್ಟರು. ಸಭೆಯಲ್ಲಿರುವ ಭೀಷ್ಮಾದಿ ಗುರುಜನರು ಮತ್ತು ಧರ್ಮನಂದನನೂ ಅಡ್ಡಬಂದುದರಿಂದ ಪೂಜ್ಯರಾದ ಅವರನ್ನು ಗೌರವಿಸಲು ಭೀಮನು ದುರ್ಯೋಧನಾದಿಗಳನ್ನು ಕೊಲ್ಲದೆಬಿಟ್ಟನು. ಭೀಮನಿಗೆ ಯುಧಿಷ್ಠಿರನು ಜ್ಯೇಷ್ಠನು. ಆದ್ದರಿಂದ ಅವನು ಅಣ್ಣನನ್ನೇ ಅನುಸರಿಸಿ ದುರ್ಯೋಧನಾದಿಗಳ ಪಾಪಗಳನ್ನು ವೃದ್ಧಿಸಲು ಅಥವಾ ಹದಿಮೂರು ವರ್ಷಗಳವರೆಗೆ ವಿಷ್ಣು-ವೈಷ್ಣವರಿಗೆ ದ್ರೋಹಮಾಡಿ ಅವರು ಹೆಚ್ಚು ಪಾಪಿಗಳಾಗಿ ಮೆರೆಯುವಂತೆ ಮಾಡಲು ಭೀಮನು ಅವರನ್ನು ಸಂಹರಿಸದೆ ಧರ್ಮಸ್ವರೂಪಿಯಾದ ಅಣ್ಣನ ಮಾತಿಗೆ ಬೆಲೆಕೊಟ್ಟು ಗೌರವಬುದ್ಧಿಯಿಂದ ಸುಮ್ಮ-ನಾದನೆಂದು ತಿಳಿಯಬೇಕು.

ಆ ಬಳಿಕ ಪಾಪಿಯಾದ ದುರ್ಯೋಧನನು ಭೀಮಸೇನನು ನೋಡುತ್ತಿರುವಂತೆಯೇ "ಪಾಂಚಾಲಿ! ನೀನು ನನ್ನ ತೊಡೆಯನ್ನೇರು" ಎಂದು ತನ್ನ ಎಡತೊಡೆಯನ್ನು ಚಪ್ಪರಿಸಿ ತೋರಿದನು. ಭೀಮನು ಆಗ "ಕುರುಕುಲಾಧಮ! ಕೇಳು ನಿನ್ನೀ ತೊಡೆಯನ್ನು ನನ್ನ ಪ್ರಚಂಡಗದೆಯಿಂದ ಸೀಳುವೆನು" ಎನಲು, ದುರ್ಯೋಧನನು ವ್ಯಂಗ್ಯವಾಗಿ ನಗುತ್ತಾ "ಹೂಂ ಪಾಪ, ನಿಮಗೀಗ ಯಾವ ಸಂಪತ್ತೂ ಉಳಿದಿಲ್ಲ! ಈಗ ದ್ಯೂತಕ್ಕೆ ನಿಮ್ಮ ಆ ಕೃಷ್ಣನನ್ನೇ ಪಣವಾಗಿಟ್ಟು ಆಡಿಬಿಡಿರಿ!" ಎಂದನು. ಆಗ ಬಲಭೀಮನು ಕೋಪಾತಿಶಯದಿಂದ "ಎಲವೋ, ಜಗತ್ಪ್ರಭುವಾದ ಶ್ರೀಹರಿಗೆ ಅಪಮಾನಮಾಡಿದ ನಿನ್ನನ್ನು ನೆಲಕ್ಕೆ

ಕೆಡವಿ ನಿನ್ನ ತಲೆಯನ್ನು ಮೆಟ್ಟಿ ಮರ್ದಿಸುವೆನು" ಎಂದು ಗರ್ಜಿಸಿದನು. "ಪ್ರತ್ಯಕ್ಷವಾಗಲಿ, ಪರೋಕ್ಷದಲ್ಲಾಗಲಿ ಶ್ರೀಹರಿಯನ್ನು ನಿಂದಿಸುವವರು ಶಿಕ್ಷಾರ್ಹರು. ಅಂಥ ಅಧಮರನ್ನು ನಾನು ಸಂಹರಿಸುತ್ತೇನೆ" ಎಂದು ಭೀಮನು ಪ್ರತಿಜ್ಞಾ-ಬದ್ಧನಾಗಿದ್ದಾನೆ. ಹಾಗಿದ್ದಲ್ಲಿ ದುರ್ಯೋಧನನನ್ನು ಏಕೆ ಸಂಹರಿಸಲಿಲ್ಲವೆಂದರೆ "ಇನ್ನೂ ಅವನ ಪಾಪದ ಕೊಡತುಂಬಲಿ" ಎಂಬ ಕಾರಣದಿಂದಲೇ ಸುಮ್ಮನಾದನು.

ಆ ನಂತರ ಕರ್ಣನು "ದ್ರೌಪದಿ! ನಿನ್ನ ಗಂಡಂದಿರೆಲ್ಲ ದಾಸರಾಗಿದ್ದಾರೆ. ಆದುದರಿಂದ ನೀನು ರಾಜನಾದ ಸುಯೋಧನನ ಮನೆಗೆ ಹೋಗಿ ಬಾಳು" ಎಂದಾಗ ಭೀಮಾರ್ಜುನರು ಸಿಟ್ಟಿನಿಂದ ಸಟೆದೆದ್ದು ನಿಂತರು. ಧರ್ಮನಂದನನು ಅವರನ್ನು ತಡೆದನು. ಭೀಷ್ಮಾದಿಗಳೂ ತಡೆದರು. ಆಗವರು ವಿಷಣ್ಣರಾಗಿ ಕುಳಿತರು. ಆಗ ಧೃತರಾಷ್ಟ್ರನು "ದುಶ್ಶಾಸನ, ನಮ್ಮ ದಾಸರಾದೀ ಪಾಂಡವರ ವಸ್ತ್ರಗಳನ್ನು ಕಸಿದುಕೋ" ಎನಲು ಅವರ ಬಳಿ ಬಂದ ದುಶ್ಶಾಸನನಿಗೆ ತಮ್ಮ ವಸ್ತ್ರಗಳನ್ನು ಕೊಟ್ಟು, ಚರ್ಮವಸನಗಳನ್ನುಟ್ಟು ಸಭೆಯಲ್ಲಿ ನೆಲದಮೇಲೆ ಕುಳಿತರು. ಆ ನಂತರ ದುರ್ಯೋಧನನು ದ್ರೌಪದಿಯ ಸೀರೆಯನ್ನು ಕಿತ್ತುಕೊಳ್ಳುವಂತೆ ನುಡಿದಾಗ ಕಡುಪಾಪಿಯಾದ ದುಃಶ್ಶಾಸನನು ಪಾಂಡವರು ನೋಡುತ್ತಿರುವಂತೆಯೇ ಆ ಸಾಧ್ವಿಯುಟ್ಟ ಸೀರೆಗೆ ಕೈಹಾಕಿದನು. ಆಗ ಭೀಮನು "ಎಲವೋ, ಪಾಪಾಗ್ರಣಿ, ಧರ್ಮಸ್ವಭಾವವುಳ್ಳ ಕುರುವಂಶದಲ್ಲಿ ನೀನು ಅಧಮಾಧಮನಾಗಿರುವೆ. ನೀಚನಾದ ನಿನ್ನ ಎದೆಯನ್ನು ಸೀಳಿ ಸರ್ವಜನರೆದುರಿಗೆ ರಕ್ತವನ್ನು ಕುಡಿಯುವೆನು" ಎಂದು ಪ್ರತಿಜ್ಞೆಗೈದನು.

ದುಃಶ್ಶಾಸನನು ಪರಮ ಪಾವನೆಯಾದ ಆ ಮಾನಿನಿಯ ಸೀರೆಯೆಳೆಯುತ್ತಿರಲು ಭಾಗವತಧರ್ಮರತಳಾದ ದ್ರೌಪದಿಯು ಭಕ್ತಿಭರದಿಂದ ವಿಶೇಷಾಕಾರವಾಗಿ ಶ್ರೀಕೃಷ್ಣ ಪರಮಾತ್ಮನನ್ನು ಸ್ಮರಿಸಿದಳು. ಅದೇನಾಶ್ಚರ್ಯ! ಪಾಪಿಯಾದ ಆ ದುಃಶ್ಶಾಸನನು ಸಾಧ್ವಿಯ ಸೀರೆಯನ್ನೆಳೆದಂತೆಲ್ಲ ಒಂದಾದ ಮೇಲೊಂದರಂತೆ ಅವಳುಟ್ಟ ಸೀರೆಗಿಂತ ಮಿಗಿಲಾದ, ನಯವಾದ ಬಂಗಾರದಂತೆ ಜಗಜಗಿಸುವ ಸೀರೆಗಳು ಅಕ್ಷಯವಾಗಿ ಬರಹತ್ತಿ ದ್ರೌಪದೀದೇವಿಯ ಮಾನಸಂರಕ್ಷಣವಾಗ-ಹತ್ತಿತು! ಭಗವದನುಗ್ರಹವಾದ ಮೇಲೆ ಕೇಳುವುದೇನು? ದುಃಶ್ಶಾಸನನು ದ್ರೌಪದಿಯ ಸೀರೆಯನ್ನೆಳೆದಳೆಂತೆಲ್ಲಾ ಒಂದಾದ ಮೇಲೆ ಮತ್ತೊಂದರಂತೆ ದಿವ್ಯಾಂಬರಗಳು ಅಕ್ಷಯವಾಗಿ ಬರಲಾರಂಭಿಸಿದವು. ದುಃಶ್ಶಾಸನನು ಸಂಪೂರ್ಣವಾಗಿ ಆ ಮಾನಿನಿಯ ಸೀರೆಯನ್ನು ಸೆಳೆದುಹಾಕಲಾಗದೆ ಎಳೆದೆಳೆದು ಬಳಲಿ ಬಸವಳಿದು ಬೆವತು ಕುಳಿತುಬಿಟ್ಟನು. ಜನರೆಲ್ಲ ಆ ಅದ್ಭುತವನ್ನು ಕೌತುಕದಿಂದ ನೋಡುತ್ತಿರಲು ದ್ರೌಪದಿಯ ಮುಂಭಾಗದಲ್ಲಿ ದಿವ್ಯಪೀತಾಂಬರಗಳ ದೊಡ್ಡ ರಾಶಿಯೇ ಪರ್ವತಾಕಾರವಾಗಿ ಬಿದ್ದಿತು.

ನಡೆದ ಆಚ್ಚರಿಯನ್ನು ಕಂಡು ಮನದಲ್ಲಿ ಸಂಕಟಪಡುತ್ತಾ ಕೋಪದಿಂದ ದುರ್ಯೋಧನನು "ಹೂಂ, ಏಕೆ ತಡ ಮಾಡುವಿರಿ, ದ್ರೌಪದಿಯನ್ನು ನನ್ನರಮನೆಗೆ ಎಳೆದು ತನ್ನಿರಿ" ಎಂದಾರ್ಭಟಿಸಿದನು. ಆಗ ದ್ರೌಪದಿಯು ಇಂತು ಪ್ರತಿಜ್ಞೆ ಮಾಡಿದಳು – "ಎಲ್ಲರೂ ಕೇಳಿರಿ, ಗಂಡುಗಲಿಯಾದ ಭೀಮಸೇನನು ಆ ದುರ್ಯೋಧನನನ್ನು ಸಂಹರಿಸುವನು. ಗಾಂಡೀವಧಾರಿಯಾದ ಅರ್ಜುನನು ಕರ್ಣನನ್ನು ಕೊಲ್ಲುವನು. ಕಪಟದ್ಯೂತಕ್ಕೆ ಮುಖ್ಯಕಾರಣನಾದ ಈ ಶಕುನಿಯನ್ನು ಸಹದೇವನು ಕೊಂದುಹಾಕುವನು" ದ್ರೌಪದಿಯ ವಚನವಾಲಿಸಿದ ಭೀಮನು "ದೇವಿ! ನಿನ್ನ ಪ್ರತಿಜ್ಞೆಯು ಖಂಡಿತವಾಗಿ ಯಶಸ್ವಿಯಾಗುವುದು. ನೀನಂದಂತೆ ನಾವು ಇವರನ್ನು ಸಂಹರಿಸುತ್ತೇವೆ" ಎಂದು ಸಭೆಯಲ್ಲಿ ಘೋಷಿಸಿದನು.

ಆಗ ಅರ್ಜುನ-ಸಹದೇವರೂ ಮಡದಿಯ ಮನೋಗತವನ್ನು ಪೂರ್ಣ ಮಾಡುವುದಾಗಿ ಪ್ರತಿಜ್ಞೆ ಮಾಡಿದರು. ನಕುಲನು ಶಕುನಿಯ ಮಗನನ್ನು ಕೊಲ್ಲುವುದಾಗಿ ಪ್ರತಿಜ್ಞಾಬದ್ಧನಾದನು. ಅನಂತರ ದುಃಶ್ಶಾಸನನು ದ್ರೌಪದಿಯನ್ನು ದುರ್ಯೋಧನನ ಅರಮನೆಗೆ ಸೆಳೆದೊಯ್ಯಲೆತ್ನಿಸಿದಾಗ ಭೀಮನು – "ಪ್ರಿಯ ಪಾರ್ಥ! ಇನ್ನಿವರನ್ನು ಕ್ಷಮಿಸುವುದು

ತರವಲ್ಲ. ದಾರರಕ್ಷಣೆ ಮಾಡದೆ ಮೃತಪ್ರಾಯವಾಗಿರುವ, ಸುಟ್ಟರೆ ಕಾಷ್ಠಸಮವಾದ, ಸುಡದಿದ್ದರೆ, ಅಮೇಧ್ಯಸದೃಶವಾದ ಈ ಶರೀರಕ್ಕೆ ವಿದ್ಯಾ, ಕರ್ಮ, ಸುತರೆಂದು ಫಲತ್ರಯವು ಉಕ್ತವಾಗಿದೆ. ಆದ್ದರಿಂದ ನಾನೀಗ ಈ ಧೃತರಾಷ್ಟ್ರನ ಮಕ್ಕಳನ್ನು ಸಂಹರಿಸುತ್ತೇನೆ" ಎಂದು ಗರ್ಜಿಸಿ ದುರ್ಯೋಧನಾದಿಗಳನ್ನು ಕೆಂಗಣ್ಣಿನಿಂದ ನೋಡಿದನು. ತರುವಾಯ ಮಹಾ ಪ್ರಚಂಡನಾದ ಗದೆಯನ್ನು ನೋಡಿ, ತನ್ನ ತೇಜಸ್ಸಿನಿಂದ ಶತ್ರುಗಳನ್ನು ನಾಶಪಡಿಸಲುದ್ಯುಕ್ತನಾದನು.

ಆಗ ದುರ್ಯೋಧನನ ಯಾಗಮಂದಿರದಲ್ಲಿ ಅಥವಾ ಅರಮನೆಯಲ್ಲಿ ನರಿಗಳು ಕೆಟ್ಟಧ್ವನಿಯಿಂದ ಅರಚಿದವು. ಧೃತರಾಷ್ಟ್ರನ ಅರಮನೆಯಲ್ಲೂ ಭಯಂಕರ ನಿಮಿತ್ತಗಳಾದವು (ಅಪಶಕುನಗಳಾದವು). ವಾಯುಪುತ್ರನಾದ ಭೀಮಸೇನನು ಕುಪಿತನಾಗುತ್ತಿರುವಾಗ ಇಂತು ನಿಮಿತ್ತಗಳುಂಟಾದುದನ್ನು ಕಂಡು ಧೃತರಾಷ್ಟ್ರನು ಅದರ ಫಲವೇನೆಂದು ವಿದುರನನ್ನು ಕೇಳಿದನು. ಆಗ ವಿದುರನು "ಮಹಾರಾಜ! ವೃಕೋದರನ ಬಲದಿಂದ ಆಹತರಾಗಿ ಬಂಧುಸಹಿತರಾಗಿ ನಿನ್ನ ಪುತ್ರರು ಈ ಕ್ಷಣವೇ ನಾಶವಾಗುವರು. ನೀನಾದರೋ ವಿವೇಕರಹಿತನಾದ ಬಾಲಕನಂತೆ ದ್ಯೂತದಲ್ಲಿ ಏನಾಯಿತು ನಮ್ಮವರು ಗೆದ್ದರೇ ಏನಾಯಿತು ಹೇಳು ಎಂದು ಕೇಳುತ್ತಿರುವೆಯಲ್ಲ! ಅಧರ್ಮಜಿತರಾದ ಪಾಂಡವರನ್ನು ಸೋತವರೆಂದೇ ಕಾಣುತ್ತಿದ್ದೀಯೆ. ಹೆಂಗಸರಿಗೆ ಕೊಟ್ಟುದು, ದ್ಯೂತದಲ್ಲಿ ಮತ್ತನಾದವನು ಕೊಟ್ಟುದನ್ನು ಕೊಟ್ಟದ್ದೆಂದು ಪಂಡಿತರು ಹೇಳುವುದಿಲ್ಲ. ಬಂಧು-ಬಾಂಧವರಿಂದ ಅಪಹರಿಸಿದ್ದನ್ನು ಹಿಂತೆಗೆದುಕೊಳ್ಳಲು ಯೋಗ್ಯವೆಂದೇ ಪರಿಗಣಿಸುವರು. ಆದರೂ ಸತ್ಯವಂತರಾದ ಪಾಂಡವರು ನಿನ್ನ ಮಕ್ಕಳ ದುಷ್ಟತನವನ್ನು ಜಗತ್ತು ಅರಿಯುವಂತೆ ಮಾಡಲೆಂದೇ ಅಧರ್ಮದಿಂದ ಅಪಹರಿಸಿದ್ದನ್ನು ಹಿಂತೆಗೆದುಕೊಳ್ಳಲು ಯತ್ನಿಸಲಿಲ್ಲ" ಎಂದನು.

ವಿದುರನ ಮಾತಾಲಿಸಿ ಧೃತರಾಷ್ಟ್ರನು ಈ ಅಪಶಕುನಗಳ ಫಲವು ಘಟಿಸದಂತಾಗಲು ಏನು ಮಾಡಬೇಕು?" ಎಂದು ಪ್ರಶ್ನಿಸಲು, ವಿದುರನು - ಮೊದಲು ನೀನು ಬೇಗ ಪಾಂಚಾಲಿಯನ್ನು ದಾಸೀತ್ವದಿಂದ ಬಿಡುಗಡೆ ಮಾಡು ಮತ್ತು ಅವಳಿಗೆ ಸಂತೋಷವಾಗುವಂತೆ ವರಗಳನ್ನು ಕೊಡು. ಇಲ್ಲದಿದ್ದರೆ ನಿನ್ನ ಪುತ್ರರೆಲ್ಲರೂ ಭೀಮನಿಂದ ಹತರಾಗುವರೆಂದು ತಿಳಿ. ದ್ರೌಪದಿ-ಪಾಂಡವರು ತಮ್ಮ ತಪೋಭಿವೃದ್ಧಿಯನ್ನು ಬಯಸುವರು. ಇಲ್ಲದಿದ್ದೊಡೆ ನಿನ್ನ ಮಕ್ಕಳು ಅವರ ತಪಸ್ಸಿನಿಂದಲೇ ದಗ್ಧವಾಗಿ ಹೋಗುತ್ತಿದ್ದರು. ಅಂತೆಯೇ ಅವರಿನ್ನೂ ಬದುಕುಳಿದಿರುವರು. ಅದಂತಿರಲಿ. ನೀನೀಗ ಮೊದಲು ದ್ರೌಪದಿಯನ್ನು ದಾಸೀತ್ವದಿಂದ ಮುಕ್ತಗೊಳಿಸದಿದ್ದರೆ, ಭೀಮನು ಸ್ವಬಲದಿಂದಲೇ ನಿನ್ನೆಲ್ಲ ಮಕ್ಕಳನ್ನೂ ನಾಶಗೊಳಿಸುತ್ತಾನೆ" ಎಂದು ತಿಳಿಸಿದನು.

ಆಗ ಅಂಬಿಕೇಯನು ದುಃಶ್ಶಾಸನನ್ನು ತೆಗಳಿ ದ್ರೌಪದಿಯನ್ನು ಬಿಡುಗಡೆ ಮಾಡಿ, ದ್ರೌಪದಿಗೆ ವರವನ್ನು ಕೇಳುವಂತೆ ಹೇಳಿದನು. ಪಾಂಚಾಲಿಯು ಪರಮಭಾಗವತಳಾದುದರಿಂದ ತನಗಾಗಿ ಏನನ್ನೂ ಬೇಡದೆ ಪಾಂಡವರನ್ನು ದಾಸ್ಯದಿಂದ ಮುಕ್ತಗೊಳಿಸುವಂತೆ ವರಬೇಡಿದಳು. ಅವಳು, ಪತಿಗಳು ಮತ್ತು ಶ್ರೀಹರಿ ಇವರನ್ನು ಬಿಟ್ಟು ಬೇರೆಯವರಿಂದ ವರವು ಸ್ವೀಕಾರ್ಯವಲ್ಲವೆಂದು ಅರಿತಿದ್ದಳು. ಅಂತೆಯೇ ಭಾಗವತ ಧರ್ಮವ್ರತಸ್ಥಳಾದ ಆ ಅಗ್ನಿಕುಮಾರಿಯು ತನ್ನ ಪತಿಗಳ ದಾಸ್ಯವಿಮೋಚನೆಯನ್ನು ಮಾತ್ರ ಅರ್ಥಿಸಿದಳು. ಕ್ಷತ್ರಿಯ ಸ್ತ್ರೀಯರಿಗೆ ಮಾವನಿಂದ ಮೂರು ವರಗಳು. ಬ್ರಾಹ್ಮಣಿಗೆ ಮಾವನಿಂದ ನೂರು ವರಗಳು ಸ್ವೀಕಾರಾರ್ಹವೆಂದು ಭಾಗವತ ಧರ್ಮದಲ್ಲಿ ಉಕ್ತವಾಗಿರುವುದರಿಂದ ಮಾವನಾದ ಧೃತರಾಷ್ಟ್ರನು ತನಗಿತ್ತ ವರವನ್ನು ಬಿಟ್ಟು ಬೇರಾವ ವರವನ್ನೂ ದ್ರೌಪದಿಯು ಕೇಳಲಿಲ್ಲ. ಅಧರ್ಮದಿಂದ ಅಪಹರಿಸಿದ ಸಂಪತ್ತನ್ನು ತಿರುಗಿ ಪಡೆಯುವುದು ವರವೆನಿಸುವುದಿಲ್ಲವೆಂದು ಭಾವಿಸಿದ ಅವಳು ಪತಿಗಳ ವಿಮೋಚನೆಯನ್ನು ಮಾತ್ರ ಕೇಳಿದಳೆಂದು ತಿಳಿಯಬೇಕು. ಆಗ ಧೃತರಾಷ್ಟ್ರನು ಭೀಮಾರ್ಜುನಾದಿ ಸಹೋದರರು ಹಾಗೂ ರಾಜ್ಯಸಹಿತನಾಗಿ ಧರ್ಮರಾಜನನ್ನು ವಿಮೋಚನೆಗೊಳಿಸಿದನು. ದೊಡ್ಡಪ್ಪನಿಂದ ಬಿಡುಗಡೆ ಪಡೆದ ಪಾಂಡುನಂದನರು ಪೂಜ್ಯರಾದ ಭೀಷ್ಮಾಚಾರ್ಯರೇ ಮೊದಲಾದ ಹಿರಿಯರಿಗೆ ನಮಸ್ಕರಿಸಿ ಇಂದ್ರಪ್ರಸ್ಥಕ್ಕೆ ಪ್ರಯಾಣ ಬೆಳೆಸಿದರು.

ಪಾಂಡವರು ತೆರಳಿದ ಮೇಲೆ ಪಾಪಿಗಳಲ್ಲಿ ಅಗ್ರಣಿಯಾದ ದುಃಶ್ಶಾಸನನು "ಅಪ್ಪಾ, ಎಂತಹ ಕಾರ್ಯ ಮಾಡಿದಿ. ನಾವು ಸಂಪಾದಿಸಿದ್ದ ಸಮಸ್ತ ಸಂಪತ್ತನ್ನೂ ಪಾಂಡವರಿಗೆ ತಿರುಗಿತ್ತು ಅವರನ್ನು ಬಿಟ್ಟು ಬಿಟ್ಟೆಯಲ್ಲ. ನೀ ಮಾಡಿದ ಈ ಕಾರ್ಯದಿಂದಾಗಿ ನಾವು ಭೀಮಸೇನನಿಂದ ಹತರಾಗುತ್ತೇವೆ. ಅಪ್ಪಾ, ಈಗಲಾದರೂ ಅವರನ್ನು ಪುನಃ ಕರೆಸು. ಮತ್ತೆ ಅವರು ದ್ಯೂತವಾಡಲಿ ಗೆದ್ದರೆ ಸರಿ. ಇಲ್ಲದಿದ್ದರೆ ವನಕ್ಕೆ ಹೋಗಲಿ" ಎಂದನು.

ಧೃತರಾಷ್ಟ್ರನು ಮಗನ ಮಾತಿನ ಮೋಡಿಗೊಳಗಾಗಿ ಪುನಃ ಪಾಂಡವರನ್ನೂ ಬರುವಂತೆ ಹೇಳಿಕಳಿಸಿದನು. ದೊಡ್ಡಪ್ಪನ ಮಾತಿಗೆ ಬೆಲೆಕೊಟ್ಟು, ಬಂದ ಯುಧಿಷ್ಠಿರನನ್ನು ಪಗಡೆಯಾಟವಾಡಬೇಡವೆಂದು ಅನುಜರು ಅಡ್ಡಿಪಡಿಸಿದರೂ, ಸಹೋದರರು, ದ್ರೌಪದೀ ಸಹಿತನಾಗಿ ಧರ್ಮಜನು ಸಭೆಗಾಗಮಿಸಿದನು.

ಆಗ ದುರ್ಯೋಧನನು "ಯುಧಿಷ್ಠಿರ! ಈಗ ನೀವಾಡುವ ದ್ಯೂತ ಕ್ರೀಡೆಯಲ್ಲಿ ನೀವು ಸೋತರೆ ಹನ್ನೆರಡು ವರ್ಷ ವನವಾಸ ಮತ್ತು ಒಂದು ವರ್ಷ ಅಜ್ಞಾತವಾಸ ಮಾಡಬೇಕು. ಒಂದು ವೇಳೆ ಅಜ್ಞಾತವಾಸಕಾಲದಲ್ಲಿ ಅದು ಮುಗಿ-ಯುವುದರೊಳಗೆ ನಿಮ್ಮಲ್ಲಿ ಯಾರೊಬ್ಬರನ್ನು ಕಂಡುಹಿಡಿದರೂ ಮತ್ತೆ ನೀವು ಹನ್ನೆರಡು ವರ್ಷ ವನವಾಸ, ಒಂದು ವರ್ಷ ಅಜ್ಞಾತವಾಸ ಮಾಡಬೇಕು" ಎಂದು ದುಃಶ್ಶಾಸನನ ಸಲಹೆಯಂತೆ ಪಣಒಡ್ಡಿದನು. ಅದಕ್ಕೆ ಸಮ್ಮತಿಸಿ ಧರ್ಮರಾಜನು ಕಪಟ ದ್ಯೂತದಲ್ಲಿ ಶಕುನಿಯಿಂದ ಪರಾಜಿತನಾಗಿ ಮಾತಿನಂತೆ ವನವಾಸಕ್ಕೆ ತೆರಳಲುನವಾದನು. ಆಗ ದುಃಶ್ಶಾಸನನು ಮತ್ತೆ ಮತ್ತೆ ಕುಣಿದು ಕುಪ್ಪಳಿಸುತ್ತಾ ಸಂತೋಷದಿಂದ ಭೀಮನನ್ನು ಹಂಗಿಸುತ್ತಾ "ಗೋವು-ಗೋವು" ಎಂದು ಹಾಸ್ಯ ಮಾಡಿದನು. ಪುನಃ ಅವನು ಸಭೆಯಲ್ಲಿ ನರ್ತಿಸುತ್ತಾ "ದ್ರೌಪದಿ! ನಿನಗೀಗ ಪತಿಗಳಿಲ್ಲ. ಆದ್ದರಿಂದ ನಮ್ಮಣ್ಣ ದುರ್ಯೋಧನನ ಮನೆಗೆ ಹೋಗು" ಎಂದನು. ಗಂಡಂದಿರಿದ್ದರೂ ದ್ರೌಪದಿಯು ಪತಿಗಳಿಲ್ಲದವಳಾದಳೆಂದು ಅವನು ಭಾವಿಸಿದ್ದುದಕ್ಕೆ ತಾತ್ಪರ್ಯ-ವೇನೆಂದರೆ, ಈಗ ಪಾಂಡವರು ಪೌರುಷವಿಲ್ಲದೆ ಷಂಡರಂತಾಗಿದ್ದಾರೆ. ಅವರು ಅಂಧಃತಮಸ್ಸಿಗೆ ಹೋಗುವರು. ಅವರಿಗೆ ಪುನಃ ಉತ್ಥಾನವೇ ಇಲ್ಲ. ಅಂದರೆ ಅಂಧಃತಮಸ್ಸಿಗೆ ಬಿದ್ದವರಿಗೆ ಹೇಗೆ ಉತ್ಥಾನವಿಲ್ಲವೋ ಅದರಂತೆ ಪಾಂಡವರಿಗೆ ಈ ಆಪತ್ತಿನಿಂದ ಬಿಡುಗಡೆಯಾಗದು" ಎಂದು ಭೀಮನನ್ನು ಅನುಕರಿಸಿ ಹಿಂಬಾಲಿಸಿದನು. ಅದನ್ನು ಕಂಡು ಕೌರವರು ಗಹಗಹಿಸಿ ನಕ್ಕರು.

ಆಗ ಭೀಮಸೇನನು ಮತ್ತೆ "ಯುದ್ಧದಲ್ಲಿ ನಿಮ್ಮೆಲ್ಲರನ್ನೂ ಹತಮಾಡುವೆ" ನೆಂದು ಪ್ರತಿಜ್ಞೆ ಮಾಡಿದನು. ಅದರಿಂದ ಭಯಗೊಂಡ ಕೌರವರು ಆಚಾರ್ಯ ದ್ರೋಣರಿಗೆ ಶರಣಾಗಿ "ನೀವೇ ನಮ್ಮ ರಕ್ಷಕರು. ನೀವು ನಮ್ಮನ್ನು ಕಾಪಾಡಿರಿ" ಎಂದು ಪ್ರಾರ್ಥಿಸಿದರು. ದ್ರೋಣರಿರುವಲ್ಲಿ ಅವರ ಕುಮಾರ ಅಶ್ವತ್ಥಾಮನಿರುವನು. ಮತ್ತು ಭೀಷ್ಮಾಚಾರ್ಯರು-ಕೃಪಾಚಾರ್ಯರೂ ಇರುತ್ತಾರೆ. ಆಗ ಭೀಮನು ಗುರುಗಳಿಗೆ ವಿರುದ್ಧವಾಗಿ ಬರಲಾರ ಎಂದು ತಿಳಿದೇ ದುರ್ಯೋಧನಾದಿಗಳು ದ್ರೋಣರಿಗೆ ಶರಣಾದರು. ಆಗ ದ್ರೋಣಾಚಾರ್ಯರು "ದುರ್ಯೋಧನ! ನಾನು ಬ್ರಾಹ್ಮಣನಾದರೂ ನನ್ನ ಪುತ್ರ ಅಶ್ವತ್ಥಾಮ, ಕೃಪಾಚಾರ್ಯ ಸಹಿತವಾಗಿ ನಿಮಗಾಗಿ ಶಸ್ತ್ರವನ್ನು ಧರಿಸಿ ನಿಮ್ಮನ್ನು ರಕ್ಷಿಸುತ್ತೇನೆ. ಆದರೆ ಭೀಮಸೇನನಿಂದ ರಕ್ಷಿಸಲು ಮಾತ್ರ ನನ್ನಿಂದಾಗಲಾರದು" ಎಂದು ಮಾತು ಕೊಟ್ಟರು.

ಆ ಬಳಿಕ ಶೂರರಾದ ಪಾಂಡವರೆಲ್ಲರೂ ಸಭೆಯನ್ನೂ ತ್ಯಜಿಸಿ ಪಾಂಚಾಲಿಯೊಡನೆ ವನಕ್ಕೆ ತೆರಳಲು ಮುಂದಾದರು. ಅವರು ಹೋಗುತ್ತಿರುವಾಗ ದುರ್ಯೋಧನನು ಅವರ ಹಿಂದೆ ಹೋಗಿ ಭೀಮನನ್ನು ಅಪಹಾಸ್ಯ ಮಾಡಲು ಭೀಮಸೇನನು ಪುನಃ ಸಭೆಗೆ ಬಂದು ಕೋಪದಿಂದ ರಕ್ತದಂತೆ ಕೆಂಪಾದ ಕಣ್ಣುಗಳಿಂದ ನೋಡುತ್ತಾ "ಎಲವೋ, ದುರ್ಯೋಧನ! ಯುದ್ಧದಲ್ಲಿ ನಿನ್ನ ತೊಡೆ ಮುರಿದು ಕೊಲ್ಲುತ್ತೇನೆ" ಎಂದು ಹೇಳಿ ಆ ಸಜ್ಜನ ಭೂಯಿಷ್ಠವಾದ ಆ ಸಭೆಯಿಂದ ನಿಷ್ಕ್ರಮಿಸಿದನು. ಆಗ ಕುಂತೀದೇವಿಯೂ ಮಕ್ಕಳೊಡನೆ ವನಕ್ಕೆ ಬರುವುದಾಗಿ ಅಳಹತ್ತಿದಳು. ವಿದುರನು ಅವಳನ್ನು ಸಾಂತ್ವನಗೊಳಿಸಿ

ಮನೆಯಲ್ಲಿಯೇ ಉಳಿಸಿಕೊಂಡನು. ಪಾಂಡವರೆಲ್ಲರೂ ದ್ರೌಪದಿಯೊಂದಿಗೆ ಮಾತಾಕುಂತಿಗೆ ನಮಿಸಿದರು. ಯುಧಿಷ್ಠಿರನು ಮೌನವಹಿಸಿ ಹೊರಟನು. ಭೀಮನು ಕ್ರೋಧಯುಕ್ತ ಕಣ್ಣುಳ್ಳವನಾಗಿ 'ಹಾಯ್, ಕೌರವರೆಲ್ಲರನ್ನೂ ದಹಿಸಲಾರದವನಾದೆನಲ್ಲಾ' ಎಂದು ತಲೆ ತಗ್ಗಿಸಿ ಹೊರಟನು. ಆ ಭೀಮಸೇನನು "ನನ್ನೀ ಬಾಹುಗಳಿಂದಲೇ ಶತ್ರುಗಳನ್ನು ನಾನೊಬ್ಬನೇ ಸಂಹರಿಸಲು ಸಮರ್ಥನೆಂಬ ಅಭಿಪ್ರಾಯ ಸೂಚಿಸಲೋ ಎಂಬಂತೆ ಭುಜವತ್ತಿ ಹೊರಟನು. ದ್ರೌಪದಿಯು ದುರ್ಯೋಧನಾದಿಗಳ ಪತ್ನಿಯರು ಶೀಘ್ರವಾಗಿ ಮುಕ್ತಕೇಶರಾಗುವರೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಬಿಚ್ಚಿದಕೇಶವನ್ನು ಕಟ್ಟದೇ, ಆ ದೇವಿಯು ಸಭೆಯಿಂದ ನಿರ್ಗಮಿಸಿದಳು.

ಉತ್ತಮಾಸ್ತ್ರಗಳನ್ನು ಅರಿತವರಲ್ಲಿ ಅತ್ಯಂತ ಶ್ರೇಷ್ಠನಾದ ಅರ್ಜುನನು ನೆಲದ ಧೂಳನ್ನು ಕಾಲುಗಳಿಂದ ಮೇಲಕ್ಕೆ ಹಾರಿಸುತ್ತಾ ಇದರಂತೆ ಶತ್ರುಗಳ ಮೇಲೆ ಬಾಣಗಳನ್ನು ಸುರಿಸುವೆನೆಂದು ಸೂಚಿಸುತ್ತಾ ನಡೆದನು. ದುಃಖಾರ್ತರಾದ ನಮ್ಮ ಮುಖವನ್ನು ಶತ್ರುಗಳು ನೋಡದಿರಲೆಂದು ನಕುಲ-ಸಹದೇವರು ತಲೆತಗ್ಗಿಸಿ ಹೊರಟರು. ಪಾಂಡವರು ಪುರೋಹಿತರಾದ ಧೌಮ್ಯರು, ಮುಂದೆ ಮರಣಿಸಲಿರುವ ಕೌರವರ ಪ್ರೇತಸಂಸ್ಕಾರ ಕಾರ್ಯಗಳನ್ನು ಮಾಡಿಸಬೇಕೆಂಬ ಅಭಿಪ್ರಾಯ ಸೂಚಿಸಲೋ ಎಂಬಂತೆ ಆಗ ಪಠಿಸಬೇಕಾದ ಪ್ರೇತಸಂಸ್ಕಾರ ಸೂಕ್ತಗಳನ್ನು ಈಗಲೇ ಪಠಿಸುತ್ತಾ ಪಾಂಡವರ ಮುಂಭಾಗದಲ್ಲಿ ನಡೆದರು.

ಅನಂತರ ಸಾರಥಿಗಳು ರಾಜರಥದ ಸುತ್ತಲೂ ಹದಿನಾಲ್ಕು ಉಪರಥಗಳುಳ್ಳ ಪಾಂಡವರ ರಥಗಳನ್ನು ಅನುಸರಿಸಿ ಹೊರಟರು. ಅಡುಗೆಯವರು, ಅಡುಗೆಯ ಮೇಲ್ವಿಚಾರಕರಾದ ಮಹಾನಸಾಧ್ಯಕ್ಷರು, ಅಡುಗೆಯವರಿಗೆ ಸಹಾಯ ಮಾಡುವವರು, ಸೇವೆ ಮಾಡುವವರು, ಆಪ್ತರು, ಭೃತ್ಯರೇ ಮೊದಲಾದವರು ಪಾಂಡವರನ್ನು ಅನುಸರಿಸಿ ಹೊರಟರು.

ಕುರುಸಭೆಯಿಂದ ಹೊರಟ ಮೇಲೆ ತಮ್ಮನ್ನನುಸರಿಸಿ ಬರುತ್ತಿದ್ದ ಹಸ್ತಿನಾವತಿಯ ನಾಗರಿಕರೆಲ್ಲರನ್ನೂ ಹಿಂದಿರುಗುವಂತೆ ಹೇಳಿ, ಭಾಗೀರಥೀ ತೀರದ ವನದಲ್ಲಿರುವ ವಟವೃಕ್ಷವನ್ನಾಶ್ರಯಿಸಿ ಪಾಂಡವರು ವಿಶ್ರಾಂತಿಗಾಗಿ ಕುಳಿತರು. ತರುವಾಯ ಆ ಪಾಂಡುನಂದನರು, ಸಕಲ ಜಗದ್ವ್ಯಾಪ್ತನಾಗಿರುವ, ನಿರವದ್ಯಗುಣಪೂರ್ಣನಾದ, ಬ್ರಹ್ಮ-ರುದ್ರಾದಿ ದೇವತೆಗಳಿಂದ ಸಂಸಾರಾವಸ್ಥೆ ಹಾಗೂ ಮೋಕ್ಷದಲ್ಲಿಯೂ ಪೂಜಿತನಾದ, ಭಕ್ತಜನರ ಸಂಸಾರಬಂಧಮೋಚಕನಾದ, ಸರ್ವಸಮರ್ಥನಾದ ಶ್ರೀಮನ್ನಾರಾಯಣ (ಶ್ರೀಕೃಷ್ಣ)ನನ್ನು ಭಕ್ತಿಯಿಂದ ಸ್ಮರಿಸಿದರು.

*ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ 'ಪಾಂಡವರ ವನಪ್ರವೇಶವೆಂಬ' ಇಪ್ಪತ್ತೊಂದನೆಯ ಅಧ್ಯಾಯದ ಕಥಾಸಾರವು ಮುಗಿದುದು.*

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★

## ದ್ವಾವಿಂಶಾಧ್ಯಾಯಭಾವಸಂಗ್ರಹ

**ಪಾರ್ಥಾ ಯಾತಾ ಅರಣ್ಯಂ ನಿಹಿತನಿಶಿಚರಾಃ ಪ್ರೀಣಯಂತೋ ದ್ವಿಜೌಘಾನ್**
**ವಾರ್ತಾಂ ಶ್ರುತ್ವಾ ಸ್ವಕೀಯಾಮುಪಗತಹರಿಣಾ ಮಾನಿತಾಃ ಸಿಂಧುರಾಜಮ್ ।**
**ಜಿತ್ವಾ ದುರ್ಯೋಧನಾದೀನ್ ಹರಿಹಯಪುರುಷವ್ರಾತಬದ್ಧಾನ್ ವಿಮೋಚ್ಯ**
**ಪ್ರಾಪ್ತಾ ಧರ್ಮಪ್ರಸಾದಂ ಯಮಥ ಮುರರಿಪುಂ ತುಷ್ಟುವುಸ್ತಂ ಪ್ರಪದ್ಯೇ ॥ 22 ॥**

***ಅನ್ವಯಾರ್ಥ:-*** **ಪಾರ್ಥಾಃ** = ಪೃಥಾಪುತ್ರರಾದ ಪಾಂಡವರು, **ಅರಣ್ಯಂ** = ಕಾಡಿಗೆ, **ಯಾತಾಃ (ಸಂತಃ)** = ಹೋದವರಾಗಿ, **ನಿಹಿತನಿಶಿಚರಾಃ - ನಿಹಿತ** = ಸಂಹರಿಸಲ್ಪಟ್ಟ, **ನಿಶಿಚರಾಃ** = ಕಿರ್ಮೀರಾದಿ ರಾಕ್ಷಸರುಳ್ಳವರಾಗಿ, ಅಂದರೆ ಕಿರ್ಮೀರಾದಿ ರಾಕ್ಷಸರನ್ನು ಸಂಹರಿಸಿದವರಾಗಿ, **ದ್ವಿಜೌಘಾನ್** = ಋಷಿಮುನಿಗಳೇ ಮೊದಲಾದ ಭೂಸುರ ಸಮೂಹವನ್ನು, **ಪ್ರೀಣಯಂತಃ** = ಸಂತೋಷಪಡಿಸುವವರಾಗಿ, **ಸ್ವಕೀಯಾಂ** = ತಮ್ಮ, **ವಾರ್ತಾಂ** = ಕಪಟದ್ಯೂತದಲ್ಲಿ ಪರಾಜಿತರಾಗಿ ಪಣಬಂಧದಂತೆ ಹನ್ನೆರಡು ವರ್ಷ ವನವಾಸ ಮಾಡಲು ಅರಣ್ಯಕ್ಕೆ ಬಂದಿರುವ ವಿಚಾರವನ್ನು, **ಶ್ರುತ್ವಾ** = ಕೇಳಿ, **ಉಪಗತಹರಿಣಾ - ಉಪಗತ** = ತಮ್ಮನ್ನು ಕಾಣಲು ತಾವಿದ್ದಲ್ಲಿಗೆ ಬಂದ, **ಹರಿಣಾ** = ಶ್ರೀಕೃಷ್ಣಪರಮಾತ್ಮನಿಂದ, **ಮಾನಿತಾಃ** = ಸಮಾಧಾನಪೂರ್ವಕ ಸಮ್ಮಾನಿತರಾಗಿ, **ಸಿಂಧುರಾಜಂ** = ಜಯದ್ರಥನನ್ನು, **ಜಿತ್ವಾ** = ಜಯಿಸಿ, **ಹರಿಹಯಪುರುಷ-ವ್ರಾತಬದ್ಧಾನ್ - ಹರಿಹಯಪುರುಷವ್ರಾತ** = ಗಂಧರ್ವರಾಜಸಮೂಹದಿಂದ, **ಬದ್ಧಾನ್** = ಯುದ್ಧದಲ್ಲಿ ಸೋಲಿಸಿಕಟ್ಟಲ್ಪಟ್ಟ (ಬಂಧಿಸಲ್ಪಟ್ಟ), **ದುರ್ಯೋಧನಾದೀನ್** = ದುರ್ಯೋಧನ ಮೊದಲಾದ ಕೌರವರನ್ನು, **ವಿಮೋಚ್ಯ** = ಗಂಧರ್ವರಿಂದ ಬಿಡಿಸಿ, **ಧರ್ಮಪ್ರಸಾದಂ** = ಯಮಧರ್ಮರಾಜನ ಅನುಗ್ರಹವನ್ನು, **ಪ್ರಾಪ್ತಾಃ** = ಪಡೆದವರಾಗಿ, **ಅಥ** = ಅನಂತರ, **ಯಂ** = ಯಾವ, **ಮುರರಿಪುಂ** = ಮುರವೈರಿಯಾದ ಶ್ರೀಕೃಷ್ಣನನ್ನು, **ತುಷ್ಟುವುಃ** = ಸ್ತೋತ್ರ ಮಾಡಿದರೋ, **ತಂ** = ಇಂತು ಪಾಂಡವರಿಂದ ಸ್ತುತನಾದ ಶ್ರೀಕೃಷ್ಣನನ್ನು, **ಪ್ರಪದ್ಯೇ** = ಶರಣು ಹೋಗುತ್ತೇನೆ (ಮೊರೆ ಹೋಗುತ್ತೇನೆ).

***ತಾತ್ಪರ್ಯ:-*** ಕುಂತೀಕುಮಾರರಾದ ಪಾಂಡವರು ದುರ್ಯೋಧನನು ಏರ್ಪಡಿಸಿದ ಕಪಟದ್ಯೂತದಲ್ಲಿ ವಂಚಕನಾದ ಶಕುನಿಯಿಂದ ಪರಾಜಿತರಾಗಿ, ಪಣಬಂಧದಂತೆ ಹನ್ನೆರಡು ವರ್ಷ ವನವಾಸ, ಒಂದು ವರ್ಷ ಅಜ್ಞಾತವಾಸ ಮಾಡಲೊಪ್ಪಿ ಅರಣ್ಯವಾಸಿಗಳಾದರು. ಮತ್ತು ಅಲ್ಲಿ ಲೋಕಕಂಟಕರಾಗಿದ್ದ ಕಿರ್ಮೀರ ಮೊದಲಾದ ರಾಕ್ಷಸರನ್ನು ಸಂಹಾರ ಮಾಡಿ, ಅರಣ್ಯದಲ್ಲಿ ಆಶ್ರಮಗಳಲ್ಲಿ ವಾಸಮಾಡುತ್ತಿದ್ದ ಋಷಿ-ಮುನಿಗಳೇ ಮುಂತಾದ ಭೂಸುರರನ್ನು ಸಂತೋಷಪಡಿಸಿದರು. ತರುವಾಯ ತಾವು ಪಗಡೆಯಾಟದಲ್ಲಿ ಸೋತು ವನಕ್ಕೆ ಬಂದಿರುವ ವಿಚಾರವರಿತು ತಮ್ಮನ್ನು ಕಾಣಲು ಬಂದ ಶ್ರೀಕೃಷ್ಣ ಪರಮಾತ್ಮನಲ್ಲಿ ಎಲ್ಲ ವಿಚಾರಗಳನ್ನೂ ವಿಜ್ಞಾಪಿಸಿದರು. ಶ್ರೀಹರಿಯು ಅವರನ್ನು ಸಮಾಧಾನಪಡಿಸಿ ಮುಂದೆ ಜಯವು ನಿಮಗೆ ನಿಶ್ಚಯವೆಂದು ಸಂತೋಷವಚನಗಳಿಂದ ಸನ್ಮಾನಿಸಿದನು. ಅನಂತರ ದುರ್ಯೋಧನನ ತಂಗಿಯ ಪತಿಯಾದ ಜಯದ್ರಥನು ಅರಣ್ಯಕ್ಕೆ ಬಂದು, ಯಾರೂ ಇಲ್ಲದಿರುವ ಸಮಯ ನೋಡಿ ಸಾಧ್ವಿಯಾದ ದ್ರೌಪದಿಯನ್ನು ಕೆಣಕಿ ಅಪಹರಿಸಲೆತ್ನಿಸಿದಾಗ ಭೀಮಾದಿಗಳು ಅವನನ್ನು ಯುದ್ಧದಲ್ಲಿ ಸೋಲಿಸಿ, ಕ್ಷಮಿಸಿ ಕಳಿಸಿದರು. ಇದಾದಮೇಲೆ ತಮ್ಮ ಸಿರಿ-ಸಂಪತ್ತು-ವೈಭವಗಳನ್ನು ಪ್ರದರ್ಶಿಸಿ ಪಾಂಡವರಿಗೆ ನೋವುಂಟುಮಾಡಲು, ಘೋಷಯಾತ್ರೆಯ ನೆಪದಿಂದ ಪಾಂಡವರಿದ್ದ ವನಕ್ಕೆ ಬಂದ ದುರ್ಯೋಧನಾದಿಗಳು ಉನ್ಮತ್ತರಾಗಿ ಗಂಧರ್ವರನ್ನು ಕೆಣಕಿದಾಗ, ಪಾಂಡವರ ಶತ್ರುಗಳಾದ ಕೌರವರಿಗೆ ಬುದ್ಧಿ ಕಲಿಸುವಂತೆ ದೇವೇಂದ್ರನಿಂದ ಪ್ರೇರಿತರಾದ ಚಿತ್ರರಥಾದಿ ಗಂಧರ್ವರು ಸಮಸ್ತ ಕೌರವರನ್ನೂ ಯುದ್ಧದಲ್ಲಿ ಜಯಿಸಿ

ದುರ್ಯೋಧನಾದಿಗಳನ್ನು ಹೆಡಮುರುಗೆಕಟ್ಟಿ ರಥದಲ್ಲಿ ಹಾಕಿಕೊಂಡು ಹೋಗುತ್ತಿರುವಾಗ, ಧರ್ಮರಾಜನ ಅಣತಿಯಂತೆ ಭೀಮಾರ್ಜುನಾದಿಗಳು ಗಂಧರ್ವರನ್ನು ತಡೆದು, ಜಯಿಸಿ ದುರ್ಯೋಧನಾದಿಗಳನ್ನು ಬಂಧನದಿಂದ ಬಿಡಿಸಿದರು. ಅನಂತರ ಯಮಧರ್ಮನ ಅನುಗ್ರಹವನ್ನು ಸಂಪಾದಿಸಿ ಶ್ರೀಕೃಷ್ಣನನ್ನು ಸ್ತುತಿಸಿದರು. ಇಂತು ಪಾಂಡವರಿಂದ ಸ್ತುತನಾದ ಶ್ರೀಕೃಷ್ಣಪರಮಾತ್ಮನಿಗೆ ಶರಣು (ಮೊರೆ) ಹೋಗುತ್ತೇನೆ ಎಂದು ತಾತ್ಪರ್ಯ.

## ಇಪ್ಪತ್ತೆರಡನೆಯ ಅಧ್ಯಾಯದ ಕಥಾಸಂಗ್ರಹ

ಕುರುಶ್ರೇಷ್ಠರೂ, ಧರ್ಮಶೀಲರೂ ಆದ ಪಾಂಡವರು ವನವಾಸಕ್ಕೆ ಹೊರಟಾಗ 'ನಿಮ್ಮೊಡನೆ ನಾವೂ ಬರುತ್ತೇವೆ' ಎಂದು ಹಿಂಬಾಲಿಸಿ ಬಂದ ಹಸ್ತಿನಾವತಿಯ ನಾಗರಿಕರನ್ನು ಸಮಾಧಾನಪಡಿಸಿ, ಅವರಿಂದ ಬೀಳ್ಕೊಂಡು ರಾತ್ರಿಕಾಲದಲ್ಲಿ ಪ್ರಯಾಣಿಸಲು ಕಷ್ಟಕರವಾದ ಅರಣ್ಯವನ್ನು ಪ್ರವೇಶಿಸಿದರು. ಅನಂತರ ಅಲ್ಲಿ ಮನುಷ್ಯರನ್ನು ಭಕ್ಷಿಸುತ್ತಿದ್ದ ಕಿರ್ಮೀರನೆಂಬ ರಾಕ್ಷಸನನ್ನು ಸಂಹರಿಸಿದರು.

ಆ ಕಿರ್ಮೀರನಾಮಕ ರಾಕ್ಷಸನು ಬಕಾಸುರನ ಸಹೋದರನು. ಅವನನ್ನು ಯಾರಿಂದಲೂ ಜಯಿಸಲಾಗದಂಥ ವರವನ್ನು ಅವನು ಶ್ರೀರುದ್ರದೇವರಿಂದ ಪಡೆದು ಅಜೇಯನಾಗಿದ್ದನು. ಅವನು ತನ್ನ ಸಹೋದರರು, ಪತ್ನಿ-ಇವರಿಂದ ಯುಕ್ತನಾದ ಭೀಮಸೇನನ್ನು ಕೊಲ್ಲಲಾಶಿಸಿ ದೊಡ್ಡ ವೃಕ್ಷ-ಪರ್ವತಗಳನ್ನು ತಂದು ಭೀಮನ ಮೇಲೆಸೆದನು. ಭೀಮನು ಆ ರಾಕ್ಷಸನೊಡನೆ ಯುದ್ಧಮಾಡಿ ಅವನನ್ನು ಬೇಗ ನೆಲಕ್ಕೆ ಕೆಡುಹಿ ಶ್ರೀಹರಿಗೆ ಪ್ರಿಯವಾದ ದೈತ್ಯಸಂಹಾರರೂಪ ಯಜ್ಞದ ಬಲಿಪಶುವಾಗಿ ಆಹುತಿಕೊಟ್ಟನು. ಪಾಂಡವರು ಕಿರ್ಮೀರನನ್ನು ವಧಿಸಿದ ಮೇಲೆ ಆ ಅರಣ್ಯದಲ್ಲಿಯೇ ವಾಸಮಾಡಿದರು. ಹತ್ತುಸಾವಿರ ಯತಿಗಳು, ಎಂಟುಸಾವಿರ ಮುನಿಗಳು ಮತ್ತು ಎಂಟುಸಾವಿರ ಗೃಹಸ್ಥ ಮುನಿಗಳು ಪಾಂಡವರೊಡನಿದ್ದರು. ಅವರೆಲ್ಲರನ್ನೂ ಪೋಷಿಸುವ ಹೊಣೆಹೊತ್ತ ಅವರು ಅದಕ್ಕೆ ಉಪಾಯವನ್ನು ಚಿಂತಿಸಿದರು.

ಧರ್ಮರಾಜನು ತನ್ನೊಡನಿದ್ದ ಅವರ ಪೋಷಣೆಗಾಗಿ ಸೂರ್ಯಾಂತರ್ಗತ ಶ್ರೀಮನ್ನಾರಾಯಣನಿಗೆ ಶರಣು ಹೋಗಿ ಆ ದೇವನನ್ನು ಪೂಜಿಸಿ ಅವನ ಅನುಗ್ರಹದಿಂದ ಪ್ರತಿದಿನವೂ ಅಕ್ಷಯಾನ್ನವನ್ನು ನೀಡುವ, ಇಚ್ಛಿಸಿದ್ದನ್ನು, ತುಪ್ಪ, ಪರಮಾನ, ಭಕ್ಷ್ಯ ಭೋಜ್ಯಾದಿಗಳನ್ನೂ ಸುವರ್ಣ, ರತ್ನ, ವಸ್ತ್ರಾದಿಗಳನ್ನೂ ಕೊಡುವ 'ಅಕ್ಷಯಪಾತ್ರೆ'ಯನ್ನು ಪಡೆದನು. ಯಾವ ಧರ್ಮರಾಜನು ಕೋಟಿಸಂಖ್ಯಾತ ಸೇವಕರಿಂದ ಯುಕ್ತನಾಗಿ, ಇಂದ್ರಪ್ರಸ್ಥದಲ್ಲಿ ಭೋಜನಮಾಡಿ, ಮಾಡಿಸುತ್ತಿದ್ದನೋ, ಅಂಥ ಆ ಪ್ರಭುವು ಒಬ್ಬೊಬ್ಬ ಯತಿಗೆ ಮೂವತ್ತು ಜನ ದಾಸ-ದಾಸಿಯರಿಂದ ಸಹಿತರಾದ ಯತಿ-ಮುನಿ ಮುಂತಾದವರನ್ನು ಅಕ್ಷಯಪಾತ್ರೆಯ ಪ್ರಭಾವದಿಂದ ಪೋಷಿಸುತ್ತಿದ್ದನು. ಕೇವಲ ಸತ್ಸಂಗ ಮಾಡುವ ಬಯಕೆಯಿಂದ ಅವನ ಪರಿವಾರ ಮತ್ತು ಋಷಿಮುನಿಗಳು ಪಾಂಡವರ ಜೊತೆಯಲ್ಲಿ ವಾಸಮಾಡುತ್ತಾ ಪರಸ್ಪರ ಶ್ರೀಹರಿಸರ್ವೋತ್ತಮತ್ವ ಪ್ರತಿಪಾದಕವಾದ ಕಥಾಕಾಲಕ್ಷೇಪಮಗ್ನರಾಗಿ, ಹಾಗೆಯೇ ಪ್ರಾಚೀನ ಕಥೆಗಳನ್ನು ತಾವೂ ಇತರರಿಗೆ ನಿರೂಪಿಸುತ್ತಿದ್ದರು. ಪಾಂಡವರಲ್ಲಿ ಅನೇಕ ಕೋಟಿ 'ವೃಂದ'ಗಳಿದ್ದವು. ಹತ್ತು ಕೋಟಿಗೆ ಒಂದು 'ಅರ್ಬುದ'ವೆಂದು ಹೆಸರು. ಇಂಥ ಹತ್ತು ಅರ್ಬುದ ಸೇರಿದರೆ ಒಂದು ವೃಂದವು. ಇಂಥ ಅನೇಕ ಗೋವು, ಗಜ, ರಥ, ಅಶ್ವಗಳ ವೃಂದಗಳಿಂದಲೂ, ರತ್ನವೃಂದಗಳು ಹಾಗೂ ಮನುಷ್ಯ ವೃಂದ-ಗಳನ್ನು ಪಾಂಡವರು ಹೊಂದಿದ್ದರು. ಆ ಪಂಚಪಾಂಡವರು ಋಷಿ-ಮುನಿಗಳಿಂದಾವೃತರಾಗಿ ಕ್ಷಣಕ್ಷಣದಲ್ಲಿಯೂ ಭಗವಾನ್ ಶ್ರೀನಾರಾಯಣನ ಕಥಾಶ್ರವಣ-ಬೋಧನ ಪರಾಯಣರಾಗಿ, ಸ್ವರ್ಗಲೋಕದ ದೇವತೆಗಳಂತೆ ಸುಖವಾಗಿ ವಿಹರಿಸುತ್ತಿದ್ದರು. ಧರ್ಮನಂದನನು ಪ್ರತಿದಿನ ಲಕ್ಷಗೋವುಗಳನ್ನೂ, ನೂರು ಸುವರ್ಣಭಾರಗಳನ್ನೂ (ಒಂದು ಭಾರಕ್ಕೆ ಇಪ್ಪತ್ತು ತೊಲಗಳು) ದಾನ ಮಾಡುತ್ತಾ ದ್ವಿಜರು-ಅನುಜರಿಂದೊಡಗೂಡಿ ಸುಖವಾಗಿ ದೇವೇಂದ್ರನಂತೆ ಮೋದ ಪಡೆದನು.

ಇತ್ತ ಹಸ್ತಿನಾಪುರದಲ್ಲಿ ಧೃತರಾಷ್ಟ್ರನೊಂದು ದಿನ "ವಿದುರ, ಪಾಂಡವರು ವನಕ್ಕೆ ತೆರಳಿದರು. ಈಗ ನಮ್ಮ ಕರ್ತವ್ಯ-ವೇನು?" ಎಂದು ಪ್ರಶ್ನಿಸಿದನು. ವಿದುರನು "ಅಣ್ಣ, ಪಾಂಡುನಂದನರನ್ನು ಇಲ್ಲಿಗೆ ಕರೆಸಿಕೊಂಡು ಅವರ ರಾಜ್ಯವನ್ನವರಿಗೆ ಒಪ್ಪಿಸು" ಎನಲು, ಕೋಪಗೊಂಡ ಧೃತರಾಷ್ಟ್ರನು "ಎಲವೋ ವಿದುರ! ನೀನು ನನ್ನ ಮಕ್ಕಳನ್ನು ದ್ವೇಷಿಸುವಿಯೆಂಬುದನ್ನೀಗ ನಾನು ಅರಿತೆನು. ನಿನ್ನಿಂದ ನನಗೇನೂ ಪ್ರಯೋಜನವಿಲ್ಲ. ಆದ್ದರಿಂದ ನಿನ್ನ ಮನ ಬಂದಂತೆ ವರ್ತಿಸು. ಮನೆಯಲ್ಲಿರು, ಅಥವಾ ಹಸ್ತಿನಾವತಿಯನ್ನು ಬಿಟ್ಟು ಹೋಗು" ಎಂದಾಕ್ಷೇಪಿಸಿ ನುಡಿಯಲು, ವಿದುರನು ನಗರವನ್ನು ಬಿಟ್ಟು ಪಾಂಡವರಿದ್ದಲ್ಲಿಗೆ ಹೋದನು.

ವಿದುರನು ಹೊರಟು ಹೋದ ಮೇಲೆ ತಮ್ಮನ ವಿಯೋಗದಿಂದ ಕೃಶನಾಗಿ ಮೂರ್ಛೆ ಹೋದನು. ಮರಳಿ ಪ್ರಜ್ಞೆ ಬಂದ ಮೇಲೆ "ವಿದುರನಿಲ್ಲದೆ ನಾನು ಜೀವಿಸಲಾರೆ. ಅವನು ಬಂದರೆ ನಾನು ಬದುಕುತ್ತೇನೆ" ಎಂದು ಹೇಳಿ ವಿದುರನನ್ನು ಕರೆತರಲು ಸಂಜಯನನ್ನು ಕಳುಹಿದನು. ಪಾಂಡವರೆಡೆಗೆ ಬಂದ ಆ ಸಂಜಯನು ಮಹಾರಾಜನ ಅಪ್ಪಣೆಯನ್ನು ತಿಳಿಸಿ, ವಿದುರನನ್ನು ಕರೆದುಕೊಂಡು ಬಂದನು. ಕೋಪವನ್ನು ಬಿಟ್ಟು ಶಾಂತನಾದ ವಿದುರನು ಅರಮನೆಗೆ ಬಂದು ಅಣ್ಣ-ನಿಗೊಂದಿಸಿದನು. ಧೃತರಾಷ್ಟ್ರನು ಅವನನ್ನಾಲಿಂಗಿಸಿ, ಅವನ ಶಿರವನ್ನಾಘ್ರಾಣಿಸಿ ಅತಿಮುದಗೊಂಡನು.

ಪಾಂಡವರ ಬಳಿಗೆ ಹೊರಟುಹೋಗಿದ್ದ ವಿದುರನನ್ನು ಮತ್ತೆ ಕರೆಯಿಸಿಕೊಂಡು ಧೃತರಾಷ್ಟ್ರನು ಸನ್ಮಾನಿಸಿದನ್ನು ಸಹಿಸದೆ ಕುಪಿತರಾದ ಶಕುನಿ ಮತ್ತು ದುರ್ಯೋಧನಾದಿ ಕೌರವರು ರಹಸ್ಯವಾಗಿ ಮಂತ್ರಾಲೋಚನೆ ಮಾಡಿ, ಪಾಂಡವರಲ್ಲಿ ಒಬ್ಬನನ್ನಾದರೂ ಕೊಲ್ಲಬೇಕೆಂಬ ಛಲದಿಂದ ವನನಿರೀಕ್ಷಣ ವ್ಯಾಜದಿಂದ ಅಂದರೆ ಘೋಷಯಾತ್ರಾನೆಪದಿಂದ ಪಾಂಡವರು ವಾಸಿಸುತ್ತಿದ್ದ ಅರಣ್ಯಕ್ಕೆ ಹೊರಟರು. ಕೌರವರಿಗೆ ರಾಜ್ಯದ ಎಲ್ಲ ಭಾಗಗಳಲ್ಲಿ ಸಹಸ್ರ ಲಕ್ಷಗಟ್ಟಳೆ ಗೋವುಗಳಿದ್ದ ಅನೇಕ ಗೋಷ್ಠಗಳಿದ್ದವು. ಅದರಂತೆ ಪಾಂಡವರು ವಾಸಿಸುತ್ತಿದ್ದ ಅರಣ್ಯದಲ್ಲೂ ಅನೇಕ ಗೋಷ್ಠಗಳಿದ್ದವು. ಅದರ ಪರಿಶೀಲನೆಯ ನೆಪದಿಂದ ಅಲ್ಲಿಗೆ ಹೋದರು. ಸಕಲಲೋಕಗಳಿಗೂ ಅಂತರ್ನಿಯಾಮಕರಾದ, ಇನ್ನುಳಿದ ನಿಯಾಮಕರುಗಳಿಗೆ ಮುಖ್ಯ ನಿಯಾಮಕರೂ ಆದ ಶ್ರೀವೇದವ್ಯಾಸರು ದುರ್ಯೋಧನಾದಿಗಳ ಕಪಟಬುದ್ಧಿಯನ್ನರಿತು ಹಸ್ತಿನಾವತಿಗೆ ಬಂದು "ಧೃತರಾಷ್ಟ್ರ, ನಿನ್ನ ಪುತ್ರರ ಕುಬುದ್ಧಿಯಿಂದ ಪಾಂಡವರಿಗೆ ಕೆಡಕು ಮಾಡಲು ಅರಣ್ಯಕ್ಕೆ ಹೊರಟಿದ್ದಾರೆ. ಅವರು ಹೋಗದಂತೆ ತಡೆ. ಅವರ ಬಳಿಗೆ ಹೋದರೆ ನಿನ್ನ ಮಕ್ಕಳು ಖಂಡಿತ ಬಂಧು-ಬಾಂಧವಸಹಿತರಾಗಿ ಮೃತ್ಯುವಿಗೆ ತುತ್ತಾಗುವರು. ಆದ್ದರಿಂದ ಅವರು ಹೋಗದಂತೆ ಮಾಡು" ಎಂದು ಹೇಳಿದರು. ಧೃತರಾಷ್ಟ್ರನು "ಪೂಜ್ಯರೇ, ನೀವೇ ದುರ್ಯೋಧನನಿಗೆ ಬುದ್ಧಿ ಹೇಳಿ ತಡೆಯಿರಿ" ಎಂದನು. ದುಷ್ಟರ ಹೆಸರು ಹೇಳಿದರೆ ದೋಷಪ್ರಾಪ್ತಿಯಾಗುವುದು. ಯದ್ಯಪಿ ಭಗವಾನ್ ವೇದವ್ಯಾಸರು ದೋಷದೂರರಾಗಿದ್ದರೂ ದುಷ್ಟರೊಡನೆ ಸಂವಾದ ಮಾಡಬಾರದೆಂದು ಸಜ್ಜನರಿಗೆ ತಿಳಿಸಿಕೊಡುವ ಭಾವದಿಂದ "ನಾನವನೊಡನೆ ಮಾತನಾಡಿ ಬುದ್ಧಿ ಹೇಳುವುದಿಲ್ಲ" ಎಂದರೇ ಹೊರತು ಬುದ್ಧಿ ಹೇಳಲು ಅಸಮರ್ಥರೆಂದಲ್ಲ ಎಂದು ತಿಳಿಯಬೇಕು.

ವೇದವ್ಯಾಸರು ಮುಂದುವರೆದು "ಧೃತರಾಷ್ಟ್ರ, ಇಲ್ಲಿಗೆ ಮೈತ್ರೇಯ ಋಷಿಗಳು ಬರುವರು. ಅವರು ಲೋಕ-ಶಿಕ್ಷಾರ್ಥವಾಗಿ ದುರ್ಯೋಧನನಿಗೆ ಬುದ್ಧಿ ಹೇಳುವರು. ಅವರ ಮಾತು ಕೇಳಿ ಅದರಂತೆ ನಡೆದರೆ ನಿನ್ನ ಮಗನಿಗೆ ಮಂಗಳ-ವಾಗುವುದು. ಅವರ ಹಿತವಚನವನ್ನಾಲಿಸದಿದ್ದರೆ, ಮೈತ್ರೇಯರು ನಿನ್ನ ಪುತ್ರನಿಗೆ ಶಾಪಕೊಡುವರು" ಎಂದು ತಿಳಿಸಿದರು.

ಅನಂತಶಕ್ತಿಸಂಪನ್ನರಾದ ಶ್ರೀಬಾದರಾಯಣರು 'ನಿನ್ನ ಮಗನನ್ನು ತಡೆ' ಎಂದೇಕೆ ಹೇಳಿದರು? ಎಂದರೆ - ದುರ್ಯೋಧನ ಮುಂತಾದವರು ಈಗ ವನಕ್ಕೆ ಹೋದರೆ ಪಾಂಡವರಿಂದವರು ಹತರಾಗುವರು. ಅಷ್ಟು ಮಾತ್ರದಿಂದ

ಸಂಪೂರ್ಣಭೂಭಾರರಾದ ದೈತ್ಯರ ನಾಶವಾಗದೇ ಹೋದೀತು! ಹಾಗಾಗಬಾರದು. ಅನೇಕ ಅಕ್ಷೋಹಿಣೀ ಸೈನ್ಯಯುಕ್ತರಾದ ಕೌರವರು ಮತ್ತು ಎಲ್ಲ ದೈತ್ಯರೂ ಕುರುಕ್ಷೇತ್ರದಲ್ಲಿ ನಾಶವಾಗಬೇಕಾಗಿದೆ! ಈ ಕಾರ್ಯಕ್ಕೆ ದುರ್ಯೋಧನನೇ ಮುಖ್ಯ-ನಾದ್ದರಿಂದ ಈಗ ಅವನು ಹೋದರೆ ಅವನೊಡನೆ ಕೆಲ ದೈತ್ಯರ ಸಂಹಾರ ಮಾತ್ರವಾಗಿ ಸಕಲ ಭೂಭಾರಭೂತರಾದ ದೈತ್ಯರ ನಾಶವಾಗದಂತಾದೀತೆಂಬ ಭಾವದಿಂದ ಹಾಗೆ ಹೇಳಿದರೆಂದು ತಿಳಿಯಬೇಕು.

ಭಗವಂತನು ಅಂತರ್ಯಾಮಿಯೂ, ಪ್ರೇರಕನೂ ಆಗಿರುವುದರಿಂದ ಅವನೇಕೆ ದುರ್ಯೋಧನನನ್ನು ತಡೆಯ-ಲಿಲ್ಲ? ಎಂದರೆ, ಸರ್ವಕಾಲದೇಶಗಳಲ್ಲಿಯೂ ಶ್ರೀಹರಿಯಿಂದ ಪ್ರೇರಿತರಾಗಿಯೇ ಚೇತನರ ಮತ್ತು ಅಚೇತನಗಳಾದ ಪಾಷಾಣಾದಿಗಳ ಕ್ರಿಯೆ ಜರುಗುವುದು. ಶ್ರೀಹರಿಪರಮಾತ್ಮನು ಸಕಲ ಚೇತನಾಚೇತನಗಳ ಚೇಷ್ಟಾಪ್ರವರ್ತಕನಾಗಿದ್ದರೂ, ಅಂತಃಪ್ರೇರಣೆಯ ಮಾತ್ರದಿಂದಲೇ ನಿವೃತ್ತಿಗೊಳಿಸಲೂ, ಪ್ರವೃತ್ತಿಗೊಳಿಸಲೂ ಶಕ್ತನಾಗಿದ್ದರೂ ಭಗವಂತನು ಜನರನ್ನು ವಿಡಂಬನೆಗೊಳಿಸುತ್ತಾ ಕೆಲವು ಕಾರ್ಯಗಳು ಬಂದೊದಗಿದಾಗ, ಮಾತಿನಿಂದಲೇ ಅವನು ನಿವೃತ್ತಿಗೊಳಿಸುತ್ತಲೂ, ಮಾಡಬೇಕಾದುದನ್ನು ಹೀಗೆ ಮಾಡೆಂದು ಮಾತಿನಿಂದಲೇ ವಿಧಾನ ಮಾಡುವನು.

ಶ್ರೀವೇದವ್ಯಾಸರು ತೆರಳಿದ ಮೇಲೆ ಮೈತ್ರೇಯ ಋಷಿಗಳು ಅಲ್ಲಿಗೆ ದಯಮಾಡಿಸಿದರು. ಧೃತರಾಷ್ಟ್ರನು ಅವರ ಮನ ಒಲಿಸಿಕೊಳ್ಳಲು ಅವರನ್ನು ಚೆನ್ನಾಗಿ ಪೂಜಿಸಿ ಸತ್ಕರಿಸಿದನು. ಧೃತರಾಷ್ಟ್ರನು ಮತ್ತು ಮೈತ್ರೇಯರು ಕರ್ಣ-ಶಕುನಿಗಳನ್ನೂ ದುರ್ಯೋಧನಾದಿಗಳನ್ನೂ ಕರೆದು ಪಾಂಡವರನ್ನು ಶ್ಲಾಘಿಸಿ, ಅವರಿಗೆ ರಾಜ್ಯವನ್ನು ಕೊಡುವಂತೆ ಹೇಳಿದರು. ಮೈತ್ರೇಯರು ಕಿರ್ಮೀರ ರಾಕ್ಷಸನನ್ನು ಸಂಹರಿಸಿದ ಭೀಮಸೇನನ ಪರಾಕ್ರಮವನ್ನು ಬಣ್ಣಿಸಿ ಹೆಚ್ಚಾಗಿ ಭೀಮನ ಬಲವನ್ನು ಕೊಂಡಾಡಿದರು. ಮೈತ್ರೇಯರ ಮಾತು ಕೇಳಿ, ಭೀಮನ ಪ್ರಶಂಸೆಯನ್ನು ಸಹಿಸದೆ ಅಪಹಾಸ್ಯ ಮಾಡಿ ನಗುತ್ತಾ ತನ್ನ ತೊಡೆಯನ್ನು ತಟ್ಟಿಕೊಂಡನು. ಉಗ್ರತೇಜರಾದ ಮೈತ್ರೇಯರು ಅವನ ಆ ಬಗೆಯ ವರ್ತನೆಯಿಂದ ಕುಪಿತರಾಗಿ - "ಎಲವೋ ದುರ್ಯೋಧನ! ಗರ್ವದಿಂದ ನೀನೀಗ ತಟ್ಟಿಕೊಂಡ ನಿನ್ನೀ ತೊಡೆಯನ್ನು ಮುರಿದುಹಾಕಲು ಯುದ್ಧವು ಜರುಗುವುದು" ಎಂದು ಶಪಿಸಿದರು. ಆಗ ಧೃತರಾಷ್ಟ್ರನು ಭಯಗೊಂಡು ಮುನಿಗಳಿಗೆ ನಮಸ್ಕರಿಸಿ ಬೇಡಿಕೊಂಡರೂ ಅದನ್ನು ಗಮನಿಸದೆ, ಮೈತ್ರೇಯರು "ನೀನು ಪಾಂಡವರಿಗೆ ರಾಜ್ಯವನ್ನು ಕೊಡದಿದ್ದರೆ, ನಾನು ಹೇಳಿದಂತೆ ಖಂಡಿತವಾಗಿ ನೀನು ಭೀಮನಿಂದ ತೊಡೆ ಮುರಿಸಿಕೊಂಡು ನಾಶವಾಗುತ್ತೀಯೇ. ನನ್ನ ಮಾತು ನಡೆದೇ ತೀರುವುದು" ಎಂದು ದುರ್ಯೋಧನಿಗೆ ಹೇಳಿ ಹೊರಟುಹೋದರು. ತಂದೆಗೆ ಅವರು ಹೇಳಿದ ಭೀಮಸೇನನೆಸಗಿದ ಕಿರ್ಮೀರವಧ ವಿಚಾರವರಿತು ದುರ್ಯೋಧನನು ಬಹುಭೀತನಾದನು.

ಇತ್ತ ಪಾಂಡವರು ತಮಗೊದಗಿಬಂದ ಕಷ್ಟವನ್ನು ಶ್ರೀಕೃಷ್ಣನಿಗೆ ಹೇಳಿಕಳಿಸಿದರು. ಪಾಂಡವಬಂಧುವಾದ ಆ ಪರಮಾತ್ಮನು ಸತ್ಯಭಾಮಾ ಸಮೇತನಾಗಿ ಅಲ್ಲಿಗೆ ಬಂದನು. ಪಾಂಡವರ ಬಂಧುಗಳಾದ ದ್ರುಪದರಾಜ ಮೊದಲಾದವರೂ ಅಲ್ಲಿಗೆ ಆಗಮಿಸಿದರು. ಪಾಂಡವರಿಂದ ವಿಷಯವರಿತ ಮಾಧವನು ದುರ್ಯೋಧನನು ಮಾಡಿದ ಅನ್ಯಾಯದಿಂದ ರೋಷತಪ್ತನಾಗಲು ಧರ್ಮಜನು ಅವರನ್ನು ಕ್ಷಮಿಸುವಂತೆ ಬೇಡಿದನು. ದ್ರೌಪದಿಯು ಬಹುದುಃಖಾರ್ತಳಾಗಿ ಕೃಷ್ಣನ ಪಾದಗಳ ಮೇಲೆ ಬಿದ್ದು ಸ್ತುತಿಸಿ, ತನ್ನ ಕಷ್ಟಗಳನ್ನು ಸರ್ವಪ್ರಭುವೂ, ಸ್ವತಂತ್ರನೂ ಆದ ವಾಸುದೇವನಲ್ಲಿ ಹೇಳಿಕೊಂಡಳು.

"ದೇವದೇವ, ವಾಸುದೇವ! ರಮಾದೇವಿಯಿಂದಲೂ ಸರಿಯಾಗಿ ಧ್ಯಾನಿಸಲಸದಳವಲ್ಲದ, ನಾಶ-ಹ್ರಾಸವಿಲ್ಲದ, ಪರಿಪೂರ್ಣ-ನಿರವದ್ಯ ಗುಣಸಾಗರೈಕ ಶರೀರಿಯಾದ, ಪಾರತಂತ್ರ್ಯಾದಿ ಸಕಲದೋಷದೂರನಾದ, ಲಕ್ಷ್ಮೀ-ಬ್ರಹ್ಮ-ವಾಯು-ರುದ್ರ-ಇಂದ್ರಾದ್ಯಮರವೃಂದಗಳಿಂದ ಯಾವಾಗಲೂ ಮುಕ್ತ-ಅಮುಕ್ತಾವಸ್ಥೆಗಳಲ್ಲಿಯೂ ವಂದಿತನಾದ, ಸಕಲಜಗ-ಚ್ಚೇಷ್ಟಾಪ್ರದನಾದ, ಸಮಸ್ತರಾದ ಜೀವರ ಪ್ರಾಣಧಾರಕನಾದ, ಸರ್ವಸ್ವಾಮಿಯಾದ, ಮುಕ್ತಾಶ್ರಯನಾದ ಹೇ ಶ್ರೀಹರಿಯೇ,

ನೀನು ಶ್ರೀಲಕ್ಷ್ಮೀದೇವಿಗಿಂತ ಅತ್ಯಂತ ಶ್ರೇಷ್ಠನು" ಮುಂತಾಗಿ ಸ್ತೋತ್ರಮಾಡಿದ ಪಾಂಚಾಲಿಯು ದುಷ್ಟನಾದ ದುಃಶ್ಶಾಸನನು ತನ್ನ ಸಿರಿಮುಡಿಯನ್ನು ಹಿಡಿದೆಳೆದಿದ್ದು; ವಸ್ತ್ರಾಪಹರಣಮಾಡಲೆತ್ನಿಸಿದ್ದು, ಮೊದಲಾಗಿ, ತನಗೊದಗಿದ ಕಷ್ಟಗಳನ್ನು ಪ್ರಭುವಾದ ಶ್ರೀಯದುಪತಿಯಲ್ಲಿ ವಿಜ್ಞಾಪಿಸಿದಳು. ಅದು ಸರಿ. ತಂದೆಯಾದ ದ್ರುಪದರಾಜ ಮತ್ತಿತರರಿರಲು ಆ ಮಾನಿನಿಯು ಮಾಧವನಲ್ಲೇ ಏಕೆ ಮೊರೆಯಿಟ್ಟಳೆಂದರೆ ದ್ರೌಪದಿಯು ಶೇಷ-ರುದ್ರ-ಗರುಡಾದಿಗಳಿಗಿಂತ ಶ್ರೀಕೃಷ್ಣ ಪರಮಾತ್ಮನ ಮುಖ್ಯಾನುಗ್ರಹಕ್ಕೆ ಪಾತ್ರಳಾಗಿರುವುದರಿಂದ ಅವನಲ್ಲಿ ವಿಜ್ಞಾಪಿಸಿದಳು. ಆಗ ಶ್ರೀಕೃಷ್ಣನು - "ಕೇಳು, ತಂಗಿ, ನಿನಗಾದ ಪರಾಭವಕ್ಕೆ ಪ್ರತೀಕಾರವಾಗುವುದು. ಭೀಮನಿಂದ ಸಂಹತ್ರರಾದ ಆ ಕೌರವರ ಪತ್ನಿಯರು ತಮ್ಮ ಪತಿಗಳ ದೇಹವನ್ನಪ್ಪಿಕೊಂಡು ಬಿಚ್ಚಿದ ಕೇಶವುಳ್ಳವರಾಗಿ ಅಳುವಂತೆ ಮಾಡುವೆನು. ಮರುಗದಿರು ಮಂಗಳಾಂಗಿ" ಎಂದು ಭರವಸೆ ನೀಡಿದನು. ಮತ್ತೆ ಕೇಶವನು ಮೃದುಮಧುರ ವಚನಗಳಿಂದ ಪಾಂಚಾಲಿಯನ್ನು ಸಂತೈಸಿ - "ತಂಗಿ! ದ್ರುಪದನಂದಿನಿ! ನಾನೊಂದು ವೇಳೆ ನಿಮ್ಮೊಡನಿದ್ದಿದ್ದರೆ ಹೀಗಾಗುತ್ತಿರಲಿಲ್ಲ! ನಾನು ದುಷ್ಟ ಸಾಲ್ವರಾಜನ ಜೊತೆಯಲ್ಲಿ ಯುದ್ಧಾಸಕ್ತನಾಗಿದ್ದೆನು. ಅವನು ಈಗ ನನ್ನಿಂದ ಸಂಹೃತನಾಗಿದ್ದಾನೆ" ಎಂದನು.

ಶ್ರೀಕೃಷ್ಣನು, ನಾನು ಇಲ್ಲಿದ್ದ ಪಕ್ಷದಲ್ಲಿ ಹೀಗಾಗುತ್ತಿರಲಿಲ್ಲವೆಂದು ಹೇಳಿರುವುದರಿಂದ ಶ್ರೀಹರಿಗೆ ಕಾಲ - ದೇಶಗಳಿಂದ ವ್ಯಾಪ್ತಿಯಿಲ್ಲವೆಂದಾಗುವುದಿಲ್ಲವೇ? ಎಂದರೆ, ಯದ್ಯಪಿ ಶ್ರೀಹರಿಯು ಸರ್ವದೇಶ-ಕಾಲಗಳಲ್ಲಿದ್ದು ಸರ್ವರನ್ನೂ, ಸರ್ವವನ್ನೂ ಅಪರೋಕ್ಷೀಕರಿಸಿ ಕೊಂಡಿರುವುದರಿಂದಲೂ, ನಿತ್ಯಮುಕ್ತರ ಬಗೆಗೂ ಅವನಿಗೆ ತಡೆಯು ಯಾವಾಗಲೂ ಇಲ್ಲದಿರುವುದರಿಂದ ಅಥವಾ ಸರ್ವದಾ ಸರ್ವಗತತ್ವವಿರುವುದರಿಂದ ಆ ಮಹಾಪ್ರಭುವು ಯಾವಾಗಲೂ ಸಕಲಜ್ಞಾನ-ಶಕ್ತಿ ಸಂಪನ್ನನಾಗಿದ್ದಾನೆ. ಆದರೂ ಪ್ರಭುವಾದ ಆ ಕಂಸಧ್ವಂಸಿಯು "ಲೋಕವತ್ತು ಲೀಲಾಕೈವಲ್ಯಮ್" ಎಂಬ ಪ್ರಮಾಣದಂತೆ ಮಾನವರಂತೆ, ಅವರನ್ನು ಅನುಕರಣಮಾಡುವಂತೆ ನಟಿಸುವನೆಂದು ತಿಳಿಯಬೇಕು.

ಶ್ರೀಹರಿಯು ಹೀಗೇಕೆ ಮಾಡಿದನೆಂದರೆ-ನಿರೂಪಿಸುತ್ತಾರೆ. ದುರ್ಯೋಧನಾದಿಗಳು ಕೃಷ್ಣನು ಇಲ್ಲಿಲ್ಲ, ಭೀಮ ಮುಂತಾದವರು ನಮ್ಮನ್ನು ಜಯಿಸಲು ಅಸಮರ್ಥರು ಎಂಬ ಮಿಥ್ಯಾಜ್ಞಾನವು ಅವರಲ್ಲುಂಟಾಗಿ, ಅವರಿಗೆ ಹೆಚ್ಚಿನ ಪಾಪ-ವೃದ್ಧಿಯಾಗುವಂತೆ ಮಾಡಲೂ; ನಡೆಯುತ್ತಿರುವುದೆಲ್ಲವೂ ಶ್ರೀಹರಿಯ ಸಂಕಲ್ಪದಂತೆ ಎಂದು ತಿಳಿದಿರುವ ಭೀಮಾದಿಗಳಲ್ಲಿ ಕ್ಷಮಾದಿಗುಣಗಳನ್ನು ಅಭಿವೃದ್ಧಿಪಡಿಸಲೂ, ಧರ್ಮರಾಜನಿಗೆ, ರಾಜರಿಗೆ ಉಚಿತವಲ್ಲದ ದ್ಯೂತಕ್ರೀಡಾಸಕ್ತಿಯ ದೋಷ-ದಿಂದಲೂ, ಭೀಮ-ದ್ರೌಪದಿಯು ಸಹ ಅಣ್ಣನಾದ ಧರ್ಮರಾಜನನ್ನು ಅನುಸರಿಸುವ ಗುಣದಿಂದಲೂ, ಅಣ್ಣನು ತಮ್ಮನ್ನು ಪಣವಾಗಿಟ್ಟರೂ ಸಹಿಸುವ ಗುಣದಿಂದಲೂ ಕೂಡ ಶ್ರೀಹರಿಯು ಧರ್ಮನಂದನನಲ್ಲಿರುವ, ಅಂದರೆ ರಾಜಸೂಯಯಾಗ, ಜ್ಞಾನಾದಿಗಳಿಂದ ಅವನ ಯೋಗ್ಯತೆಗೆ ಮೀರಿ ಅಭಿವೃದ್ಧಿಯಾಗಿರುವ, ಪುಣ್ಯವನ್ನು ಆಕರ್ಷಿಸಿ, ಭೀಮನಲ್ಲಿ ಹೆಚ್ಚಾಗಿ, ನಂತರ ದ್ರೌಪದಿ, ತರುವಾಯ ಅರ್ಜುನ, ಅನಂತರ ನಕುಲಸಹದೇವರಲ್ಲಿ ಯೋಗ್ಯತಾನುಸಾರವಾಗಿ ಪುಣ್ಯವನ್ನು ಅಭಿವೃದ್ಧಿಪಡಿಸಲು ಶ್ರೀಕೃಷ್ಣ ಪರಮಾತ್ಮನು ತನ್ನ ಇಚ್ಛೆಯಿಂದಲೇ ಈ ವಿಧವಾದ ಪಾಂಡವರ ಪರಾಭವಾದಿಗಳನ್ನುಂಟು ಮಾಡಿದನು.

ಪರಮಾತ್ಮನು ಯೋಗ್ಯತೆ ಮೀರಿ ಮಾಡಿದ ಧರ್ಮ(ಪುಣ್ಯ)ವನ್ನು ಏಕೆ ಕಸಿದುಕೊಳ್ಳುವನು? ಎಂದರೆ ಅವನು ಯೋಗ್ಯತೆಮೀರಿ ಜೀವರು ಆತ್ಮಭಿವೃದ್ಧಿ ಪಡೆಯುವುದನ್ನು ಸಹಿಸುವುದಿಲ್ಲ. ಅಂತೆಯೇ ಆ ಮಹಾನುಭಾವನಿಗೆ "ಏಧ-ಮಾನದ್ವಿಟ್" ಎಂಬ ವೈದಿಕನಾಮವಿದೆ. ಧರ್ಮರಾಜಮಾತ್ರವಲ್ಲ; ಭೀಷ್ಮ-ದ್ರೋಣಾದಿಗಳಲ್ಲಿರುವ ಹೆಚ್ಚಿನ ಪುಣ್ಯವನ್ನೂ ಪಾಂಡವರಿಗೆ ತಂದುಕೊಡಲು ಅವನು ಹೀಗೆ ಮಾಡಿದನು. ದ್ರೌಪದಿಯು ಕಪಟದ್ಯೂತ ಮತ್ತು ತನಗಾದ ಅಪಮಾನದಿಂದ ದುಃಖಿತಳಾಗಿ ಸಭೆಯಲ್ಲಿದ್ದ ಭೀಷ್ಮಾದಿಗಳನ್ನು 'ಪೂಜ್ಯರೇ! ನೀವು ಈ ಅಧರ್ಮವನ್ನೇಕೆ ತಡೆಯುವುದಿಲ್ಲ?' ಕೇಳಿದಾಗ

ಭೀಷ್ಮಾದಿಗಳು ಸುಮ್ಮನೆ ಕುಳಿತಿದ್ದರಿಂದ ಯೋಗ್ಯತೆ ಮೀರಿದ ಅವರ ಧರ್ಮ(ಪುಣ್ಯ)ವನ್ನೂ ಪಾಂಡವರಿಗೆ ಕೊಡಲು ಶ್ರೀಹರಿಯು ಹೀಗೆ ಮಾಡಿದನು.

ಪಾಂಡವರು ವನಕ್ಕೆ ತೆರಳಿದ ವೇಳೆ ಅಲ್ಲಿಗೆ ಬಂದಮೇಲೆ ಜರುಗಿದ ವಿಷಯವರಿತು ದುರ್ಯೋಧನಾದಿಗಳು ಭಗವಂತನ ಆಜ್ಞೋಲ್ಲಂಘನ ಮಾಡಿದ್ದರಿಂದ ಅವರ ಪಾಪವೃದ್ಧಿಯಾಗಲು ಅಂದರೆ ಕೇವಲ ದುರ್ಯೋಧನಾದಿಗಳ ಪಾಪವೃದ್ಧಿ ಮಾತ್ರಕ್ಕಾಗಿ ಮಾತ್ರವಲ್ಲ. ಕಿಂತು ಪಾಂಡವರಿಗೆ ಪುಣ್ಯಾಭಿವೃದ್ಧಿಗಾಗಿಯೂ ವೇದವ್ಯಾಸದೇವರು "ವ್ಯಾಸೋ-ಽಂಬಿಕಾಸುತಂ ಪ್ರಾಹಪಾರ್ಥಾ ಮೇ ಪೃಥಿಕಂ ಪ್ರಿಯಾಃ । ತೇಷಾಂ ಪ್ರವಾಸನಂ ಚೈವ ಪ್ರಿಯಂ ನ ಮಮ ಸರ್ವಥಾ ॥" - ವೇದವ್ಯಾಸರು ಅಂಬಿಕೆಯ ಸುತನಾದ ಧೃತರಾಷ್ಟ್ರನನ್ನು ಕುರಿತು "ರಾಜನ್, ಪಾಂಡವರು ನನಗೆ ಅತ್ಯಂತಪ್ರಿಯರು. ನೀವು ಅವರಿಗೆ ಅನ್ಯಾಯ ಮಾಡಿ ವನವಾಸಕ್ಕೆ ಕಳಿಸಿದ್ದೀರಿ. ಈ ಕಾರ್ಯವು ನನಗೆ ಖಂಡಿತ ಪ್ರಿಯವಾದುದಲ್ಲ" ಎಂದು ಹೇಳಿದರು. ಪಾಂಡವರು ನನಗತ್ಯಂತ ಪ್ರಿಯರು ಎಂದಿದ್ದರಿಂದ ದುರ್ಯೋಧನಾದಿಗಳು ಅಪ್ರಿಯರೆಂದೂ ಸೂಚಿಸಿ-ದಂತಾಯಿತು. ಪಾಂಡವರಿಗೆ ಪುಣ್ಯಾಭಿವೃದ್ಧಿ ಮತ್ತು ಕೌರವರಿಗೆ ಪಾಪದ ಅಭಿವೃದ್ಧಿಗಾಗಿಯೇ ಶ್ರೀವ್ಯಾಸರು ಹೀಗೆ ಹೇಳಿದರೆಂದು ತಿಳಿಯಬೇಕು.

ಹಿಂದೆ ದ್ಯೂತಕ್ರೀಡೆಗೆ ನಿಮ್ಮನ್ನು ಕರೆದುಕೊಂಡು ಹೋದಾಗ ನಾನು ನಿಮ್ಮೊಡನಿರಲಿಲ್ಲವಾದ್ದರಿಂದ ನಿಮಗಿಂಥ ಕಷ್ಟ ಪ್ರಾಪ್ತವಾಯಿತು. ಇಲ್ಲದಿದ್ದರೆ ಹೀಗಾಗುತ್ತಿರಲಿಲ್ಲವೆಂದು ಶ್ರೀಕೃಷ್ಣನು ಹೇಳಿದನಷ್ಟೇ? ತಾನಿಲ್ಲದಿರಲು ಕಾರಣವಾದ ಸಾಲ್ವನೊಡನೆ ಪ್ರಾಪ್ತವಾದ ಯುದ್ಧವಿಚಾರವನ್ನು ಮಾಧವನು ಈಗ ವಿವರವಾಗಿ ಹೇಳುತ್ತಾನೆ:-

ಸಾಲ್ವನು ಯುದ್ಧಕ್ಕೆ ಬಂದ ವಿಷಯವನ್ನು ನಾರದರಿಂದ ತಿಳಿದು ನಾನು ಪ್ರದ್ಯುಮ್ನಾದಿಗಳನ್ನು ಕಳುಹಿಸಿದ ವಿಚಾರ ನಿಮಗೆ ತಿಳಿದಿದೆ. ನಿಮ್ಮಲ್ಲಿಂದ ಹೊರಟ ಅವರು ದ್ವಾರಕೆಗೆ ತೆರಳಿದರು. ಅದೇ ಸಮಯಕ್ಕೆ ಸಾಲ್ವನು "ಸೌಭ" ವಿಮಾನದಲ್ಲಿ ಕುಳಿತು ಬಂದು ದ್ವಾರಕೆಯ ಮೇಲೆ ಬಹುವಾಗಿ ದಾಳಿ ಮಾಡಿದನು. ಆಗ ಪ್ರದ್ಯುಮ್ನನು ತನ್ನ ಸಹೋದರರು, ಇತರ ಯಾದವರು ಹಾಗೂ ಸೈನ್ಯದೊಡನೆ ಸಾಲ್ವನನ್ನೆದುರಿಸಲು ಹೊರಟನು. ಆಗ ಸಾಲ್ವನು ಪ್ರದ್ಯುಮ್ನನು ತನ್ನ ಪುತ್ರನೆಂದರಿತು ವಿಮಾನದಿಂದಿಳಿದು ರಥದಲ್ಲಿ ಕುಳಿತು ಯುದ್ಧಕ್ಕೆ ಬಂದನು. ಪ್ರದ್ಯುಮ್ನನು ಬಹುಚೆನ್ನಾಗಿ ಯುದ್ಧಮಾಡುತ್ತ ಸಾಲ್ವನ ಎಲ್ಲ ಅಸ್ತ್ರಗಳನ್ನೂ, ಮಹಾಸ್ತ್ರಸಮೂಹಗಳಿಂದ ನಿವಾರಿಸಿ, ನಾನು ಅವನಿಗೆ ಕೊಟ್ಟಿದ್ದ ಶ್ರೇಷ್ಠವಾದ ಬಾಣವನ್ನು ಹಿಡಿದು ಸಾಲ್ವನನ್ನು ಸಂಹರಿಸಲುದ್ಯುಕ್ತನಾದಾಗ ಆಕಾಶವಾಣಿಯಾಯಿತು - "ಪ್ರದ್ಯುಮ್ನ, ಸಾವಧಾನ, ಹಿಂದೆ ಶ್ರೀನಾರಾಯಣನು ಶ್ರೀಕೃಷ್ಣಾ-ವತಾರದಲ್ಲಿ ಸಾಲ್ವನನ್ನು ಸಂಹರಿಸುವುದಾಗಿ ಸಂಕಲ್ಪಿಸಿರುವನು. ಶ್ರೀಹರಿಯು ಹೀಗೆ ಸಂಕಲ್ಪಿಸಿರುವುದರಿಂದಲೇ ಭಾರ್ಗವರಾಮನು ಸ್ವತಃ ಹರಿಯೇ ಆಗಿದ್ದರೂ, ಸ್ವಸಂಕಲ್ಪವು ನೆರವೇರಬೇಕೆಂದು ಸಾಲ್ವನನ್ನು ಹೊಡೆದೋಡಿಸಿದನೇ ವಿನಃ ಕೊಲ್ಲಲಿಲ್ಲ. ಚಕ್ರಧಾರಿಯಾದ ಶ್ರೀವಾಸುದೇವನು ನಿನಗೆ ಕೊಟ್ಟಿರುವ ಬಾಣವು ಅಮೋಘವಾದುದು, ಸಫಲವಾದದ್ದು. ಆದ್ದರಿಂದ ಅದನ್ನು ಸಾಲ್ವನನ್ನು ಕೊಲ್ಲಲು ಪ್ರಯೋಗಿಸಬೇಡ. ನಾನು ನನ್ನ ಪ್ರೇರಣೆಯಿಂದಲೇ ಅವನನ್ನು ಹಿಂದಕ್ಕೆ ಕಳಿಸುವೆನು" ಎಂದು ಶ್ರೀವಾಯುದೇವನು ಅಶರೀರವಾಣಿಯಿಂದ ನಿರೂಪಿದನು. ಹೀಗೆ ಅಶರೀರವಾಣಿಯನ್ನಾಲಿಸಿ ಪ್ರದ್ಯುಮ್ನನು ಅಮೋಘವಾದ ಬಾಣವನ್ನು ಬಿಡದೆ ತಡೆದನು. ಜಗತ್ಪ್ರಾಣನ ಪ್ರೇರಣೆಗೆ ಬದ್ಧನಾದ ಸಾಲ್ವನು 'ಇವನಿನ್ನೂ ಹುಡುಗ. ಇವನೊಡನೆ ನನಗೇಕೆ ಕಲಹ' ಎಂದ ಸೌಭವನ್ನೇರಿ ಕೃಷ್ಣನೊಡನೆ ಯುದ್ಧಮಾಡುವುದಾಗಿ ನಿಶ್ಚಯಿಸಿ ತನ್ನ ರಾಜ್ಯಕ್ಕೆ ಹಿಂದಿರುಗಿದನು. ಆಗ ಪ್ರದ್ಯುಮ್ನ-ಸಾಂಬ-ಗದ-ಸಾರಣ-ಚಾರುದೇಷ್ಣ ಮುಂತಾದವರು ಸಾಲ್ವನ ಸೈನ್ಯವನ್ನೂ, ಅವನ ಮಂತ್ರಿವರ್ಗವನ್ನೂ ನಾಶಪಡಿಸಿ ಆನಂದದಿಂದ ದ್ವಾರಕಾಪುರಿಗೆ ಬಂದರು. ಆ ಸಮಯಕ್ಕೆ ನಾನೂ ಅಲ್ಲಿಗೆ ಬಂದು ಸೇರಿದೆನು. ಪ್ರದ್ಯುಮ್ನಾದಿಗಳಿಂದ ನಡೆದ ವೃತ್ತಾಂತವನ್ನೆಲ್ಲಾ ಅರಿತೆನು. ಯಾರ ಕೈಯಲ್ಲಿ ನಾನು ನನ್ನ ಮಗನಿಗಿತ್ತ ಬಾಣವು

ಇರುವುದೋ ಅವರಿಗೆ ನನ್ನ ತೇಜಸ್ಸಿನಿಂದ ಜಯವು ನಿಶ್ಚಿತವು. ಆಗ ನಾನು ಸಾಲ್ವನು ನಮ್ಮ ದ್ವಾರಕೆಯನ್ನು ದಹಿಸಿರುವುದನ್ನು ಕಂಡು ಅವನನ್ನು ಶಿಕ್ಷಿಸಲು ಬೆನ್ನಟ್ಟಿ ಹೊರಟೆನು.

ಸಾಲ್ವನನ್ನು ಬೆನ್ನಟ್ಟಿ ಹೊರಟ ನಾನು ಸಾಗರದ ಮೇಲೆ ಆಕಾಶದಲ್ಲಿ ಸೌಭ ವಿಮಾನದಲ್ಲಿರುವ ಸಾಲ್ವನನ್ನು ಕಂಡೆನು. ನನ್ನನ್ನು ನೋಡಿದ ಅವನು ನನ್ನ ಮೇಲೆ ಶಸ್ತ್ರ-ಮಹಾಸ್ತ್ರಗಳ ಮಳೆಗರದನು. ಅದನ್ನು ನಾನು ನಿವಾರಿಸಿಕೊಂಡಾಗ ಪಾಪಿಯಾದ ಅವನು ನನ್ನ ಮೇಲೆ ಐಂದ್ರಜಾಲಿಕ ಮಾಯೆಯನ್ನು ಪ್ರಯೋಗಿಸಿದನು. ನಾನು ಸ್ವಲ್ಪಕಾಲ ವಿನೋದವಾಗಿ ಕ್ರೀಡಿಸಿ, ತರುವಾಯ ವಿಜ್ಞಾನಾಸ್ತ್ರದಿಂದ ಮಾಯಾವಿದ್ಯೆಯನ್ನು ನಿರಾಕರಿಸಿ ಅನೇಕ ದೈತ್ಯರನ್ನು ಸಂಹರಿಸಿದೆನು. ಅನಂತರ ನನ್ನ ಮೇಲೆ ಬೆಟ್ಟಗಳನ್ನೆಸೆಯುತ್ತಿದ್ದ ಅವನ ಸೌಭ ವಿಮಾನವನ್ನು ಚಕ್ರಾಯುಧದಿಂದ ಭಗ್ನಗೊಳಿಸಿ ಸಮುದ್ರಕ್ಕೆ ಬೀಳಿಸಿದೆನು. ಆಗ ರಥವೇರಿ ಬಂದ ಅವನ ಭುಜಗಳನ್ನು ಬಾಣದಿಂದ ಕತ್ತರಿಸಿ, ಶ್ರೇಷ್ಠವಾದ ಅವನ ರಥವನ್ನು ಗದೆಯಿಂದ ಮುರಿದುಹಾಕಿ, ಚಕ್ರದಿಂದ ಸಾಲ್ವನ ಶಿರವನ್ನು ಕತ್ತರಿಸಿ ಸಂಹರಿಸಿದೆನು. ಆಗ ಬ್ರಹ್ಮಾದಿ ದೇವತೆಗಳು ಸ್ತೋತ್ರ ಮಾಡಿದರು. ನಂತರ ನಾನು ದ್ವಾರಕಾಪಟ್ಟಣಕ್ಕೆ ಹೋದೆನು. ಈ ಕಾರಣದಿಂದ ನಾನಿಲ್ಲಿರಲಿಲ್ಲವಾದ್ದರಿಂದ ನಿಮಗೀವ್ಯಸನವುಂಟಾಯಿತು"- ಎಂದು ಹೇಳಿ ಶ್ರೀಕೃಷ್ಣನು ಪಾಂಡವರನ್ನೂ, ದ್ರೌಪದಿಯನ್ನೂ ಸಾಂತ್ವನಗೊಳಿಸಿ, ದ್ರೌಪದಿಯನ್ನು ವಿಧವಿಧವಾಗಿ ಸಮಾಧಾನಪಡಿಸುತ್ತಿದ್ದ ಸತ್ಯಭಾಮೆಯೊಡನೆ ಅಲ್ಲಿ ವಾಸ ಮಾಡಿದನು. ಪಾಂಡವರ ಉಳಿದ ಭಾರ್ಯೆಯರು, ಪುತ್ರರೂ ಸಹ ವನಕ್ಕೆ ಬಂದು ಪಾಂಡವರೊಡನೆ ವಾಸಮಾಡಿದರು.

ಆ ತರುವಾಯ ಧೃಷ್ಟದ್ಯುಮ್ನನು ಪಾಂಚಾಲಿಗೆ ಸಮಾಧಾನ ಹೇಳಿ, ಶ್ರೀಕೃಷ್ಣನಿಗೆ ಅಭಿನಮಿಸಿ, ಪಾರ್ಥ ಮೊದಲಾದವರಿಂದ ಅಪ್ಪಣೆ ಪಡೆದು ದ್ರೌಪದಿಯ ಮಕ್ಕಳೊಡನೆ ತನ್ನ ರಾಜ್ಯಕ್ಕೆ ಮರಳಿದನು. ಧರ್ಮಜನ ಮಡದಿಯೂ ತನ್ನ ತಂಗಿಯೂ ಆದ ದೇವಕಿಯೊಡನೆ ಧೃಷ್ಟಕೇತುವು ತನ್ನೂರಿಗೆ ಹೊರಟನು. ಕಾಶೀರಾಜನು ತನ್ನ ಕುವರಿಯೂ ಭೀಮಸೇನನ ಪತ್ನಿಯೂ ಆದ ಕಾಳಿಯೊಡನೆ ತನ್ನ ಪಟ್ಟಣಕ್ಕೆ ಪ್ರಯಾಣಬೆಳೆಸಿದನು. ಪಾಂಡವರ ಇತರ ಮಡದಿಯರು ಮಾತಾಕುಂತಿಯೊಡನೆ ವಿದುರನ ಮನೆಯಲ್ಲಿ ವಾಸಮಾಡಿದರು. ಹಿಂದೆ ತಿಲೋತ್ತಮಾ ಎಂಬ ಹೆಸರಿನ ಅಪ್ಸರೆಯಾಗಿದ್ದವಳು ಈಗ ಪಾರ್ವತೀಯೆಂಬ ಹೆಸರಿನಿಂದ ನಕುಲನ ಪತ್ನಿಯಾಗಿದ್ದಳು. ಶಲ್ಯರಾಜ ಮಗಧರಾಜರುಗಳ ಇಬ್ಬರು ಪುತ್ರಿಯರು ನಕುಲ ಸಹದೇವರ ಪತ್ನಿಯರಾದ ವಿಚಾರ ಈ ಹಿಂದೆಯೇ ತಿಳಿಸಲಾಗಿದೆ. ಇವರು ಮತ್ತು ಪಾರ್ವತೀ ಹೀಗೆ ಮೂರುಜನರೂ ಪತಿಗಳೊಡನೆ ಅರಣ್ಯದಲ್ಲಿರಲು ಆಶಿಸಿ ಹೊರಟು ನಿಂತಾಗ ಕುಂತೀದೇವಿಯು ಅವರನ್ನು ವನಕ್ಕೆ ಹೋಗಬೇಡಿ ಎಂದು ತಡೆದು ತನ್ನ ಜತೆಯಲ್ಲಿಯೇ ಇಟ್ಟುಕೊಂಡು ವಿದುರನ ಮನೆಯಲ್ಲಿ ವಾಸಮಾಡಿದಳು.

ಇತ್ತ ಕೇಶವನು ಸುಭದ್ರೆ ಮತ್ತು ಅಭಿಮನ್ಯುಗಳನ್ನು ರಥದಲ್ಲಿ ಕೂಡಿಸಿಕೊಂಡು ಪೃಥಾಪುತ್ರರಿಂದ ಬೀಳ್ಕೊಂಡು ಸತ್ಯಭಾಮೆಯೊಡನೆ ದ್ವಾರಕೆಗೆ ಹೊರಟನು. ದ್ರೌಪದಿಯ ಐವರು ಪುತ್ರರು ಕೆಲಕಾಲ ಪಾಂಚಾಲನಗರದಲ್ಲಿ ತಾತನ ಮನೆಯಲ್ಲಿದ್ದು, ನಂತರ ದ್ವಾರಕಾಪುರಿಗೆ ತೆರಳಿ ಅಲ್ಲಿ ಶ್ರೀಕೃಷ್ಣನ ಪೋಷಣೆಯಲ್ಲಿ ವಾಸ ಮಾಡಿದರು.

ಧರ್ಮರಾಜನು ತಾನು ದ್ಯೂತಕ್ರೀಡೆಯನ್ನಾಡಿ ತಪ್ಪು ಮಾಡಿದ್ದರಿಂದ ಖಿನ್ನನಾಗಿ ದ್ರೌಪದಿಯ ಸಂಗವನ್ನು ಬಿಟ್ಟು ಕೊಟ್ಟು, ಭೀಮಸೇನನೊಡನೆ ಇರುವಂತೆ ಪಾಂಚಾಲಿಗೆ ಆಜ್ಞಾಪಿಸಿದನು. ದ್ರೌಪದಿಯು ಧರ್ಮಜನ ಆಣತಿಯಂತೆ ಭೀಮನ ಜೊತೆಗಿದ್ದು ಅವನ ರಕ್ಷಣೆಯಲ್ಲಿ ಕಾಲಕಳೆಯಹತ್ತಿದಳು. ಪ್ರತಿದಿನ ಧರ್ಮರಾಜನು ಋಷಿಮುನಿಗಳೆಲ್ಲರೂ ಭೋಜನ ಮಾಡಿದ ಮೇಲೆ, ಭೀಮಾರ್ಜುನಾದಿ ಸಹೋದರರ ಊಟವಾದ ಮೇಲೆ ತಾನು ಭೋಜನ ಮಾಡುತ್ತಿದ್ದನು. ಭೀಮಾದಿಗಳು ಅಣ್ಣನ ಅಪ್ಪಣೆ ಮೀರಬಾರದೆಂದು ಅವನಿಗಿಂತ ಮೊದಲು ಭುಜಿಸುತ್ತಿದ್ದರು. ಸಕಲರ ಊಟವಾದ ಮೇಲೆ ದ್ರೌಪದಿಯು ತಾನೊಬ್ಬಳೇ ಕೊನೆಗೆ ಭೋಜನ ಮಾಡುತ್ತಿದ್ದಳು. ಹೀಗೆ ಸದಾ ಶ್ರೀವಿಷ್ಣುಪರಾಯಣರಾಗಿ ಪಾಂಡವರು ಶ್ರೀಹರಿಯ ಅನುಗ್ರಹದಿಂದ ಲಬ್ಧವಾದ ಭೋಜನವನ್ನು ಮಾಡುತ್ತಾ ಕಾಲಕಳೆಯುತ್ತಿರಲು ಒಂದು ವರ್ಷವು ಉರುಳಿತು.

ಧರ್ಮರಾಜನು ಅತಿ ಮೃದುಸ್ವಭಾವದವನಾದ್ದರಿಂದ ಅವನು ಹದಿಮೂರು ವರ್ಷಗಳು ಕಳೆದು ಹದಿನಾಲ್ಕನೆಯ ವರ್ಷ ಬಂದರೂ ಭೀಷ್ಮಾದಿ ಗುರುಜನರ ಭಯದಿಂದ ಅಥವಾ ವಾಯುನಂದನನಾದ ತಾನು ಕೌರವರನ್ನು ಸಂಹರಿಸ-ಬಹುದೆಂಬ ಭಯದಿಂದ ಅಣ್ಣನು ರಾಜ್ಯವನ್ನು ಅಪೇಕ್ಷಿಸದಿರಬಹುದು ಎಂದು ಭಾವಿಸಿದ ಭೀಮನು ಸ್ವತಃ ಅಂತರ್ಯಾಮಿಯಾಗಿದ್ದು ಅಣ್ಣನಿಗೆ ಪ್ರೇರಣೆ ಮಾಡಲು ಸಮರ್ಥನಾಗಿದ್ದರೂ ಸಹ ಆ ವಿಷಯವನ್ನು ಪ್ರಸ್ತಾಪಿಸಲು ದ್ರುಪದನಂದಿನಿಯನ್ನು ಯುಧಿಷ್ಠಿರನ ಬಳಿಗೆ ಕಳುಹಿಸಿದನು.

ಪಾಂಚಾಲಿಯು ಧರ್ಮನಂದನನ ಬಳಿಗೆ ಬಂದು ಭೀಮನ ಸಂದೇಶವನ್ನು ನಿರೂಪಿಸಲುದ್ಯುಕ್ತಳಾಗಿ ಹೀಗೆ ಹೇಳಿದಳು. "ಮಹಾರಾಜ, ರಾಜನಾದವನು ಖಂಡಿತವಾಗಿ ಕುಜನರಲ್ಲಿ ಕ್ಷಮೆಯನ್ನು ತೋರಬಾರದು – ಅದು ಧರ್ಮವಲ್ಲ. ನೀನಾದರೋ ವ್ಯರ್ಥವಾಗಿ ಸರ್ವದಾ ದುರ್ಜನರು – ಸಜ್ಜನರಲ್ಲಿ ಕ್ಷಮಾಗುಣವನ್ನೇ ಅವಲಂಬಿಸಿದ್ದೀಯೆ. ಇದು ಯುಕ್ತವಲ್ಲ". ದ್ರೌಪದಿಯ ಮಾತುಕೇಳಿ ಧರ್ಮಜನು "ಪಾಂಚಾಲಿ! ಕೇಳು, ಎಲ್ಲರಲ್ಲಿಯೂ ಕ್ಷಮೆಯೇ ಅತಿ ಶ್ರೇಷ್ಠವಾದುದು. ಸಮಸ್ತ ಜಗತ್ತೂ ಕ್ಷಮೆಯಿಂದ ಧರಿಸಲ್ಪಟ್ಟಿದೆ. ಈ ಸಮಸ್ತ ಜಗತ್ತಿಗೂ ಸುಖ-ದುಃಖ-ಜನ್ಮ ಮುಂತಾದವುಗಳನ್ನು ಶ್ರೀಹರಿನಾರಾಯಣನು ಯೋಗ್ಯತಾನುಸಾರವಾಗಿ ನೀಡಿದ್ದಾನೆ. ಈ ಸುಖ-ದುಃಖಾದಿಗಳೆಲ್ಲವೂ ಅವರವರ ಯೋಗ್ಯತಾನುಸಾರವಾಗಿ ಅವನಿಂದಲೇ ದತ್ತವಾದುದು. ನಾರಾಯಣನೆ ಕೃರ್ತವಾಗಿರುವುದರಿಂದ ಪುರುಷರ ಕೋಪತಾಪಗಳಿಗೂ ಅವಕಾಶವಿಲ್ಲ. ಆದ್ದರಿಂದ ಸಕಲಪ್ರಾಣಿಗಳಲ್ಲಿಯೂ ಕ್ಷಮೆಯೇ ಶ್ರೇಷ್ಠವಾದ ಧರ್ಮವು" ಎಂದು ಹೇಳಿದನು.

ಆಗ ದ್ರೌಪದಿಯು "ಸ್ವಾಮಿ, ನೀವಂದಂತೆ ಒಂದು ವೇಳೆ, ಸರ್ವಮಾನವರಿಗೂ(ರಲ್ಲೂ) ಕ್ಷಮೆಯೇ ಅತ್ಯಂತ ಮುಖ್ಯ ಧರ್ಮವಾಗಿದ್ದಲ್ಲಿ, ಆಗ ರಾಜರ ಅವಶ್ಯಕತೆಯೇ ಇರುವುದಿಲ್ಲವಷ್ಟೆ! ರಾಜರೇ ಇಲ್ಲದಂತಾದಲ್ಲಿ ಗಮನಾಗಮನ, ಕೃಷಿ, ವಾಣಿಜ್ಯ ಮುಂತಾದ ವ್ಯವಹಾರವೇ ಇಲ್ಲದಂತಾಗಿ ಲೋಕಯಾತ್ರೆಯೇ ಸ್ಥಗಿತವಾಗುವುದು. ನಿಜ, ಶ್ರೀಹರಿಯೇ ಸಕಲಪ್ರವರ್ತಕನು. ಅಂದರೆ ಸಕಲಕರ್ಮಗಳಿಗೂ – ಜನರಿಗೂ ಪ್ರವರ್ತಕನು. ಲಕ್ಷ್ಮೀ-ಬ್ರಹ್ಮ-ರುದ್ರಾದಿ ದೇವತೆಗಳೆಲ್ಲರೂ ವಸ್ತ್ರ-ಕಾಷ್ಠಾದಿಗಳಂತೆ ಶ್ರೀಹರಿಯ ಅಧೀನವಾಗಿರುವರೆಂಬುದೂ ಸತ್ಯ. ಆದರೂ ಶ್ರೀವಿಷ್ಣುವೇ ಸರ್ವ ಪ್ರವರ್ತಕನಾಗಿದ್ದರೂ, ಪುರುಷ ಪ್ರಯತ್ನವು ವ್ಯರ್ಥವೇನಲ್ಲ! ಶ್ರೀಹರಿ ಪರಮಾತ್ಮನ ಆಜ್ಞೆಯಂತೆಯೇ ಮನುಷ್ಯನು ಕರ್ಮವನ್ನಾಚರಿಸಿ ಅದಕ್ಕೆ ತಕ್ಕಂತೆ ಶುಭಾಶುಭ (ಪುಣ್ಯ-ಪಾಪ)ಗಳನ್ನು ಅನುಭವಿಸುವನು. ಹಾಗಲ್ಲದಿದ್ದಲ್ಲಿ, ಪುಣ್ಯಪಾಪಫಲಯೋಗ್ಯ ಜೀವನು ಮಾಡಿದ ಕರ್ಮಗಳು ಅಜಾಗಲಸ್ತನದಂತೆ ನಿಷ್ಪ್ರಯೋಜನವಾದೀತು! ಆದ್ದರಿಂದ ಕರ್ತೃವಾದ ಜೀವನೂ ಸಹ ಶ್ರೀಹರಿಯ ಅಧೀನನಾಗಿದ್ದೇ ಪುಣ್ಯಪಾಪಾದಿ ಕರ್ಮಗಳನ್ನಾಚರಿಸುವನು. ಜೀವರೆಲ್ಲರೂ ಶ್ರೀಹರ್ಯಧೀನ ಕರ್ತೃತ್ವವುಳ್ಳವರಾಗಿರದಿದ್ದಲ್ಲಿ ಪುಣ್ಯ-ಪಾಪಫಲಯೋಗ್ಯ ಜೀವಿಯ ಕರ್ಮಾದಿಗಳು ನೆರವೇರಲಾರದು. ಜೀವನು ಅಸ್ವತಂತ್ರಕರ್ತೃವಾಗಿದ್ದಾನೆ. ಅಂತೆಯೇ ಮಾಡಿದ ಪುಣ್ಯಪಾಪಗಳ ಫಲವನ್ನು ಭೋಗಿಸುತ್ತಾನೆ. ಅವನು (ಜೀವ) ಕರ್ತೃವಲ್ಲದಿದ್ದರೆ ಭೋಕ್ತೃವೂ ಆಗುವುದಿಲ್ಲ. ಕರ್ತೃವಾದರೂ ಜೀವನು ಶ್ರೀಹರ್ಯಧೀನಕರ್ತೃನು. ಪುರುಷನು ಕರ್ತೃವೇ ಆಗದಿದ್ದರೆ ಸಮಸ್ತ ವೇದಾದಿಗಳಲ್ಲಿ ಉಕ್ತವಾಗಿರುವ ವಿಧಿ-ನಿಷೇಧಗಳು, ಅಂದರೆ "ಅಹರಹಃ ಸಂಧ್ಯಾಮುಪಾಸೀತ", "ನ ಸುರಾಂ ಪಿಬೇತ್", "ನ ಪಲಾಂಡುಂ ಭಕ್ಷ್ಯೇತ್" ಬೆಳಿಗ್ಗೆ, ಮಧ್ಯಾಹ್ನ, ಸಂಜೆ ಕಾಲಗಳಲ್ಲಿ ಸಂಧ್ಯಾವಂದನೆಯನ್ನಾಚರಿಸಬೇಕು, ಸುರಾಪಾನ ಮಾಡಬಾರದು, ಈರುಳ್ಳಿಯನ್ನು ತಿನ್ನಬಾರದು ಎಂಬ ವಿಧಿ-ನಿಷೇಧಗಳೇಕೆ ಬೇಕು? ಜೀವನು ವಿಧಿನಿಷೇಧಗಳಿಗೆ ಪಾತ್ರನಾ-ಗಿರುವುದರಿಂದಲೇ ಅಸ್ವತಂತ್ರಕರ್ತೃನೆಂಬುದು ಸ್ಪಷ್ಟವಾಗುವುದು. ಹಾಗಲ್ಲದಿದ್ದರೆ, ಅದು ಶ್ರೀಹರಿ ಪರಮಾತ್ಮನಿಗೆ ಅನ್ವಯ-ವಾದೀತು! ಅವನವನು ಮಾಡಿದ ಪುಣ್ಯಪಾಪಗಳು ಆಯಾಜೀವರಿಗೇ ವಿನಃ ಪರಮಸ್ವತಂತ್ರಕರ್ತೃನಾದುದರಿಂದ ಶ್ರೀಹರಿಗೆ

ಅವುಗಳ ಲೇಪವಿಲ್ಲ. ಪುಣ್ಯಪಾಪಗಳನ್ನಾಚರಿಸುವವನೂ ಶ್ರೀವಿಷ್ಣುವಿಗೆ ವಶನಾಗಿರುವುದರಿಂದ ಪುರುಷಪ್ರಯತ್ನ ಮಾಡಲೇಬೇಕು'' ಎಂದು ದ್ರೌಪದಿಯು ತಿಳಿಸಿದಳು.

ಧರ್ಮರಾಜನು ದ್ರೌಪದಿಗೆ ಏನೂ ಹೇಳಲಾಗದೆ ನಿರುತ್ತರನಾಗಿ ''ದ್ರೌಪದಿ! ನೀನು ಕುತರ್ಕ (ಬಾಧಿತಾನುಮಾನಾದಿ) ಗಳನ್ನಾಶ್ರಯಿಸಿ ಶ್ರೀಹರಿಗೂ ಅಸ್ವಾತಂತ್ರ್ಯವನ್ನು ಸಾಧಿಸುತ್ತಿದ್ದೀಯೆ'' ಎಂದು ತೆಗಳಿ ಭರ್ತ್ಸನ ಮಾಡಿದನು. ಧರ್ಮರಾಜನು ಛಲದಿಂದ ಮಾತಾಡಿ ಭರ್ತ್ಸನ ಮಾಡಿದರೂ, ಸ್ತ್ರೀಯರು ಅತಿವಾಚಾಲತನ ತೋರಬಾರದು (ಹೆಚ್ಚು ಮಾತಾಡಬಾರದು). ಅದು ಶೋಭಾರ್ಹವಲ್ಲವಾದ್ದರಿಂದ ತಾನು ಸ್ತ್ರೀಯಾದುದರಿಂದ ಪ್ರತ್ಯುತ್ತರ ನೀಯದೆ ಅವನನ್ನು ಕ್ಷಮಿಸಿದಳು.

ಆಗ ಭೀಮಸೇನನು ಅಣ್ಣನ ಬಳಿ ಸಾರಿ ಹೀಗೆ ಹೇಳಹತ್ತಿದನು. ''ರಾಜನ್! ಶ್ರೀಹರಿಯೇ ಸರ್ವಕರ್ತನು. ಜೀವನು ಸರ್ವಕರ್ತನಲ್ಲ. ಹರಿಯು ಸ್ವತಂತ್ರನು. ಬೇರೊಬ್ಬರಲ್ಲ, ಹೀಗಿದ್ದರೂ ಜೀವನು ತನ್ನ ಕರ್ಮ, ವರ್ಣ, ಆಶ್ರಮಗಳಿಗೆ ಯೋಗ್ಯವಾದ, ತನಗೆ ವಿಹಿತವಾದ ಕರ್ಮಗಳನ್ನು ಮಾಡಬೇಕು. ತನಗೆ ವಿಹಿತವಲ್ಲದ ಕರ್ಮಗಳನ್ನು ಮಾಡಬಾರದು. ಸ್ವೈರಿಣಿಯಾದ ನಾರಿಯು ನನ್ನ ಸಂಗ ಮಾಡೆಂದು ಬಲಾತ್ಕಾರದಿಂದ ಪುರುಷನ ಕೈಹಿಡಿದರೆ ಅದು ಅಕಾರ್ಯವಾದ್ದರಿಂದ ಅಂಥ ಸ್ತ್ರೀಯನ್ನು ಕತ್ತು ಹಿಡಿದು ಹೊರದಬ್ಬಬೇಕು ಅಥವಾ ಬೆತ್ತದಿಂದ ಹೊಡೆದಟ್ಟಬೇಕು. (ಇದನ್ನು ಸ್ಪಷ್ಟಪಡಿಸಲೆಂದೇ 'ನಿರ್ಣಯಕಾರರು' ಅತ್ಯಂತ ಯತ್ನದಿಂದ ಎಂದು ಹೇಳಿ, ದುಷ್ಕರ್ಮ ಮಾಡಬಾರದೆಂದು ಹೇಳಿದ್ದಾರೆ ಎಂದು ತಿಳಿಯಬೇಕು).

ಈಗ ಜೀವಕರ್ತೃತ್ವ ವಿಷಯದಲ್ಲಿ ಪ್ರತ್ಯಕ್ಷ ಪ್ರಮಾಣವನ್ನು ನಿರೂಪಿಸುತ್ತಾರೆ.

ಜೀವರು ಪ್ರತಿದಿನ ಸಂಧ್ಯಾವಂದನೆ, ಹೋಮಾದಿ ಕರ್ಮಗಳನ್ನು ಮಾಡುತ್ತಿರುವುದರಿಂದ ಜೀವಕರ್ತೃತ್ವವು ಪ್ರತ್ಯಕ್ಷ ಸಿದ್ಧವಾಗಿದೆ. 'ನಾನು ಮಾಡುತ್ತೇನೆ' ಎಂದು 'ಸಾಕ್ಷಿ' ಸಿದ್ಧಕರ್ತೃತ್ವವು ಸ್ಪಷ್ಟವಾಗಿದೆ. ಹೀಗೆ ಜೀವರು ಕರ್ಮ ಮಾಡುವುದಕ್ಕೆ ಶ್ರೀಹರಿಯ ಪ್ರೇರಣೆ ಕಾರಣವೆಂಬುದು ಅನುಮೇಯವಾಗಿದೆ. ಆಸ್ತಿಕರು, ನಾಸ್ತಿಕರು, ಯೋಗ್ಯರು, ಅಯೋಗ್ಯರು, ಜಿತೇಂದ್ರಿಯರು, ಕಾಮುಕರು – ಇವರಲ್ಲಿ 'ಜೀವತ್ವ' ವಿಷಯದಲ್ಲಿ ಭೇದವಿಲ್ಲ. ಕಾಮುಕರು ಮಾಡದಿರುವ ಸಂಧ್ಯಾದಿ ಕರ್ಮಗಳನ್ನು ಆಸ್ತಿಕರೇಕೆ ಮಾಡುತ್ತಾರೆ? ಹರಿಯು ಕಾಮುಕರಲ್ಲಿ ಕಾಮವನ್ನೇ ಉದ್ದೀಪಿಸುವನು, ಪರಮಾತ್ಮನು ಆಸ್ತಿಕರಲ್ಲಿ ಶ್ರದ್ಧೆಯನ್ನೇ ಉದ್ದೀಪಿಸುವನೆಂದು ಎಲ್ಲರೂ ಹೇಳಲೇಬೇಕು. ಹರಿಯ ಪ್ರೇರಣೆಯೇ ಇದಕ್ಕೆ ನಿಯಾಮಕವೆಂದು ಅನುಮೇಯಿಸಬೇಕು. ಆಯಾಜೀವರ ಯೋಗ್ಯತೆಯಿಂದಲೇ ಆಯಾಘಟನೆಗಳು (ಶ್ರದ್ಧಾದಿಗಳು) ಅಭಿವ್ಯಕ್ತ-ವಾಗುವುದೆಂದು ಹೇಳಬಾರದು. ಯೋಗ್ಯರಾದವರಲ್ಲಿಯೇ ಕೆಲಸಂದರ್ಭದಲ್ಲಿ – ಇಂದ್ರಾದಿಗಳಲ್ಲಿ ಪರನಾರೀಕಾಮನೆಯು ಕಂಡುಬಂದಿದೆ. ಹೆಚ್ಚೇನು? ''ವಾಚಂ ದುಹಿತರಂ ತನ್ವೀಂ'' ಮುಂತಾದ ಪ್ರಮಾಣದಂತೆ ಬ್ರಹ್ಮದೇವರಲ್ಲೂ ತಾತ್ಕಾಲಿಕವಾಗಿ ಕಾಮವು ಕಂಡುಬಂದಿದೆ. (ಬ್ರಹ್ಮದೇವರೂ ಸಹ ತನ್ನ ಪುತ್ರಿಯನ್ನೇ ತಾತ್ಕಾಲಿಕವಾಗಿ ಕಾಮಿಸಿದ್ದು ಕಂಡುಬಂದಿದೆ). ಆದ್ದರಿಂದ ಶ್ರೀಹರಿಯೇ ಪ್ರೇರಕನೆಂದು ಅನುಮೇಯಿಸಲೇಬೇಕು. ತನಗೆ ಅನಿಷ್ಟಕ್ಕೆ (ನರಕಕ್ಕೆ) ಕಾರಣವಾದ ಪಾಪಕರ್ಮದಲ್ಲಿ ಪ್ರವರ್ತಕ ಕರ್ಮವೂ ಕೂಡ ತನಗೆ ಅನಿಷ್ಟವಾದ್ದರಿಂದಲೂ, ಸ್ವಕರ್ತೃತ್ವ ವಿಲ್ಲದಿರುವುದರಿಂದಲೂ ಸ್ವಕರ್ಮಾಚರಣರತನೂ ಸಹ ಮತ್ತೊಬ್ಬರ ಪ್ರೇರಣೆಯಿಂದ ಮಾಡುವ ನಿಯಮವಿದೆ. ಕೆಲಕಡೆ ಕೇಶವನ ಪ್ರೇರಣೆಯಿಂದ ಎಂದು ಅನುಮೇಯಿಸಲು ಯೋಗ್ಯವಾಗಿದೆ. ಹೆಚ್ಚು ಹೇಳುವುದೇನಿದೆ? ಅನಿಷ್ಟಕ್ಕೆ ಕಾರಣವಾದ ಕರ್ಮಪರಂಪರೆಯಿಂದಲೂ ಸಹ ತನಗಿಷ್ಟವಾಗುವ ನಿಯಮವಿರುವುದರಿಂದ ಸ್ವತಂತ್ರಪ್ರೇರಕನಾದ ಬೇರೊಬ್ಬನಿಂದಲ್ಲದೆ ತನಗೆ ಕರ್ತೃತ್ವವು ಸಂಭವಿಸುದಿಲ್ಲವಾದ್ದರಿಂದ ಇದನ್ನು ಅನುಮೇಯಿಸಿ ಒಪ್ಪಲೇಬೇಕು. ಜಡದ ಕರ್ಮಕ್ಕೂ ಚೇತನವೇ ಪ್ರೇರಕವಾಗಿದೆ. ಮರವನ್ನು ಅಥವಾ ಲತೆಯನ್ನು ಕೊಡಲಿಯೇ ಕತ್ತರಿಸುತ್ತದೆ. ಕೊಡಲಿಯು ತಾನಾಗಿ ದೇವದತ್ತನನ್ನು ಬಿಟ್ಟು ಹೋಗುವುದಿಲ್ಲ. ದೇವದತ್ತನ ಕರದಲ್ಲಿರುವ

ಕೊಡಲಿಯು ದೇವದತ್ತನ ಇಚ್ಛೆಯಿಂದಲೇ ಮರವನ್ನು ಕತ್ತರಿಸುತ್ತದೆ. ಅವನ ಇಚ್ಛೆ ಇಲ್ಲದಿದ್ದರೆ ಕುಠಾರವು ತಾನಾಗಿ ಕಡಿಯುವುದಿಲ್ಲ. ಆದುದರಿಂದ "ತೇನಾನುಮೇಯಾ ಕೇಶವಸ್ಯ" ಎಂದು ಹೇಳಿದ್ದು ಸರಿಯಾಗಿದೆ. ಕೇಶವನ ಪ್ರೇರಣೆ-ಯಿಲ್ಲದಿದ್ದಲ್ಲಿ ಊಟಮಾಡುವಾಗ ಮನುಷ್ಯನು ತನ್ನ ನಾಲಿಗೆಯನ್ನು ತಾನಾಗಿ, ಎಂತು ಕಚ್ಚುವನು? ಆದ್ದರಿಂದ ಭಗವಂತನೇ ಶರಣನೆಂದು ತಿಳಿಯಬೇಕೆಂದು ಭಾವ.

ಜೀವನ ಕರ್ತೃತ್ವಕ್ಕೆ ಕೇಶವನ ಪ್ರೇರಣೆಯಿದೆ ಎಂಬುದು ಜ್ಞಾನಿ ಪ್ರತ್ಯಕ್ಷದಿಂದ ಸಿದ್ಧವಾಗಿದೆ. 'ಶ್ರುತಿಸ್ಮೃತೀ ಮಮೈವಾಜ್ಞೆ' ಎಂಬ ಹರಿಯ ಆಜ್ಞಾರೂಪ ಶ್ರುತಿ-ಸ್ಮೃತಿಗಳಿಂದ ವಿಹಿತವಾಗಿರುವ ತಮ್ಮ ಕರ್ಮವನ್ನು ಮಾಡಿ ಶ್ರೀಹರಿಯ ಪ್ರೇರಣೆಯೇ ಕರ್ಮ ಮಾಡಲು ಅನುಕೂಲವಾದುದೆಂದು ಜ್ಞಾನಿಯು ತಿಳಿಯುತ್ತಾನೆ.

ಜ್ಞಾನಿಯು ತಿಳಿಯುತ್ತಾನೆ ಎಂದು ಹೇಳುವಾಗ "ನಿಷುಸೀದ ಗಣಪತೇ ಗಣೇಷು" ಮುಂತಾದ ಶ್ರುತಿಯೂ, "ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ ಸಂಜೀವಯತ್ಯಖಿಲಶಕ್ತಿಧರಃ ಸ್ವಧಾಮ್ನಾ । ಅನ್ಯಾಂಶ್ಚ ಹಸ್ತಚರಣ ಶ್ರವಣತ್ವಗಾದೀನ್ ಪ್ರಾಣಾನ್ನಮೋ ಭಗವತೇ ಪುರುಷಾಯ ತುಭ್ಯಮ್ ॥" ಎಂಬ ಸ್ಮೃತಿಯೂ ಸಹ ಸ್ಮರಣೆಗೆ ಬರುವುದು.

ಯೋಗ್ಯನಾದ ಜೀವನು ನನಗೆ ಕರ್ತೃತ್ವವಿಲ್ಲ. ಪರಮಾತ್ಮನೇ ಕರ್ತೃವೆಂದು ತಿಳಿದು ಸತ್ಕರ್ಮಮಾಡಿ ಶ್ರೀಹರಿಯು ಸರ್ವಗತನಾಗಿರುವುದರಿಂದ ಸರ್ವತ್ರವ್ಯಾಪ್ತನಾಗಿರುವುದರಿಂದ ಸರ್ವವೂ ಅವನ ಸ್ಥಾನವಾದ್ದರಿಂದ ವಿಶೇಷವಾಗಿ ಶ್ರೀಹರಿ-ಸಾನಿಧ್ಯಯುಕ್ತವಾದ ವೈಕುಂಠವನ್ನು ಅಂದರೆ ಅನುಗ್ರಹದಿಂದ ಮೋಕ್ಷವನ್ನು ಪಡೆಯುತ್ತಾನೆ. ಸದ್ಬುದ್ಧಿಯಿಲ್ಲದ ಅಯೋಗ್ಯನು ದೇವರಲ್ಲಿ ಶ್ರದ್ಧೆಯಿಲ್ಲದವನಾದ್ದರಿಂದ ದೇವರೇ ಕರ್ತೃ, ನಾನು ಕರ್ತೃವಲ್ಲ ಎಂದು ತಿಳಿದು ತನಗೆ ವಿಹಿತವಾದ ಕರ್ಮವನ್ನು ಮಾಡದೇ ಬಿಟ್ಟು, ಅಂಧಃತಮಸ್ಸನ್ನು ಪಡೆಯುವನು. ಜೀವನಿಗೆ ಪರಮಾತ್ಮಾಧೀನ ಕರ್ತೃತ್ವವಿರುವುದರಿಂದ ವಿಹಿತಕ-ರ್ಮತ್ಯಾಗದಿಂದ ದುರ್ಗತಿಯಾಗುವುದರಿಂದ ಸರ್ವರೂ ಸ್ವಕರ್ಮವನ್ನು ಮಾಡಲೇಬೇಕು.

"ನಾನು ಇದನ್ನು ಮಾಡುತ್ತೇನೆ" ಎಂಬ ಸಾಕ್ಷಿಯು ಎಲ್ಲರ ಅನುಭವಕ್ಕೆ ಬಂದಿರುವುದರಿಂದ ಜೀವನಿಷ್ಠ ಕರ್ತೃತ್ವವು ಪ್ರತ್ಯಕ್ಷ ಪ್ರಮಾಣದಿಂದ ಸಿದ್ಧವಾಗಿದೆ. "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ" ಮುಂತಾದ ಆಗಮ ಪ್ರಮಾಣದಿಂದಲೂ ಸಿದ್ಧವಾಗಿದೆ. "ಜೀವಃ ಯಜನಾದಿಕರ್ತಾಭವಿತುಮರ್ಹತಿ, ತಜ್ಜನ್ಯ ಫಲಭೋಕ್ತೃತ್ವಾತ್, ವ್ಯತಿರೇಕೇಣ ಘಟವತ್" ಎಂಬ ಅನುಮಾನದಿಂದಲೂ ಸಿದ್ಧವಾಗಿದೆ. "ಜ್ಯೋತಿಷ್ಟೋಮೇನ ಸ್ವರ್ಗಕಾಮೋಯಜೇತ" ಸ್ವರ್ಗವನ್ನು ಬಯಸುವವನು ಜ್ಯೋತಿಷ್ಟೋಮಯಜ್ಞ ಮಾಡಬೇಕು - ಎಂಬ ಶ್ರುತಿಯಿಂದ ಯಾಗ ಮಾಡುವವನಿಗೆ ಸ್ವರ್ಗಫಲವನ್ನು ಭೋಗಿಸುವುದು ನಿರ್ಣಯಿಸಲ್ಪಟ್ಟಿರುವುದರಿಂದ ಹೇತುವು ಸಿದ್ಧಿಸಲಿಲ್ಲವೆಂದು ಹೇಳಬಾರದು. ಅದನ್ನು ಸೂತ್ರಕಾರರು "ಕರ್ತಾ ಶಾಸ್ತ್ರಾರ್ಥವತ್ವಾತ್" ಎಂದು ಹೇಳಿದ್ದಾರೆ. ಜೀವನಿಷ್ಠಕರ್ತೃತ್ವ ಭೋಕ್ತೃತ್ವಾದಿಗಳು - ಎಲ್ಲವೂ ಶ್ರೀಹರಿಯ ವಶ-ದಲ್ಲಿವೆ. ಇದು ಜ್ಞಾನಿ ಪ್ರತ್ಯಕ್ಷದಿಂದ ಸಿದ್ಧವಾಗಿದೆ. "ನ ಋತೇ ತ್ವತ್ಕ್ರಿಯತೇ ಕಿಂಚನಾರೇ" ಎಂಬ ಆಗಮದಿಂದ ಕರ್ತೃತ್ವಾದಿಗಳು ಭಗವಂತನ ವಶದಲ್ಲಿವೆ. "ಕರ್ತೃತ್ವಾದಿಕಂ, ಈಶ್ವರಾಧೀನಂ ಕಾರ್ಯತ್ವಾತ್, ಅಂಕುರವತ್" ಎಂಬ ಅನುಮಾನದಿಂದಲೂ ಸಿದ್ಧವಾಗಿದೆ. ಆದುದರಿಂದ ಜೀವಗತ ಕರ್ತೃತ್ವ ಮತ್ತು ಈಶ್ವರಗತ ಕರ್ತೃತ್ವಗಳು ಪ್ರತ್ಯಕ್ಷ, ಅನುಮಾನ ಮತ್ತು ಆಗಮಗಳೆಂಬ ಮೂರು ಪ್ರಮಾಣಗಳಿಂದಲೂ ಸಿದ್ಧವಾಗಿರುವುದರಿಂದ ಜೀವಕರ್ತೃತ್ವ, ಈಶ್ವರಕರ್ತೃತ್ವವೆಂಬ ಎರಡೂ ಹೇಯವಲ್ಲವೆಂದು ತಿಳಿದ ಮತ್ತು ತನ್ನ ಕರ್ತೃತ್ವವು ಈಶ್ವರಾಧೀನವಾಗಿಯೇ ಇದೆಯೆಂದರಿತ ಜ್ಞಾನಿಯು ತನಗೆ ವಿಹಿತವಾದ ಕರ್ಮವನ್ನು ಮಾಡುತ್ತಾನೆ. ಜೀವಗತ ಕರ್ತೃತ್ವವು ಮಾತ್ರ ಪರಮಾತ್ಮಾಧೀನವೆಂದಲ್ಲ; ಆ ಜೀವನಿಗೂ ಕೂಡ ಶ್ರೀಹರಿಯೇ ಪ್ರೇರಕನೆಂದು ತಿಳಿದವನೇ ಪ್ರಮಾಣತ್ರಯವನ್ನು ಸ್ಮರಿಸಿದವನಾಗುತ್ತಾನೆ. ಆದ್ದರಿಂದ ಮಾಡಬೇಕಾದ ಕರ್ಮಗಳನ್ನು ಮಾಡಲೇಬೇಕು.

ಅದು ಈಶ್ವರಾಧೀನವೆಂದೂ ತಿಳಿಯಬೇಕು. ಇಲ್ಲದಿದ್ದರೆ, ಪ್ರಾಮಾಣಿಕಾರ್ಥವನ್ನು ಬಿಟ್ಟರೆ, ಸ್ವಯಂ ಅಪ್ರಾಮಾಣಿಕನಾಗಬೇಕಾದೀತು ಎಂಬ ಭಾವ.

ಮೂರು ವಿಧಪ್ರಮಾಣಾನುಸರಣವು ಹೇಗೆಂದು ವಿವರಿಸುತ್ತಾರೆ:- ಜೀವಕರ್ತೃತ್ವ-ಈಶ್ವರಕರ್ತೃತ್ವ ವಿಷಯದಲ್ಲಿ ಹಿಂದೆ ನಿರೂಪಿಸಿದ ಮೂರು ಪ್ರಮಾಣಗಳಂತೆ ಪ್ರತ್ಯಕ್ಷಾದಿ ಪ್ರಮಾಣತ್ರಯವು ಅವಿರೋಧವಾಗಿ ಏಕಾರ್ಥಪ್ರತಿಪಾದಕವಾದಲ್ಲಿ ಅದು ಪೂರ್ಣಪ್ರಮಾಣವೆನಿಸುವುದು ಆ ಮೂರು ಪ್ರಮಾಣಗಳು ಬೇರೆ ಅರ್ಥದಲ್ಲಿ ಅವಿರೋಧವಾಗಿದ್ದರೆ ಅಂದರೆ ಪರಸ್ಪರ ಭಿನ್ನಾರ್ಥನಿರೂಪಣ ಮೂಲಕ ವಿರೋಧರಹಿತವಾಗಿದ್ದಲ್ಲಿ, ಅಂದರೆ ಪರಮಾತ್ಮನ ಜಗತ್ಕರ್ತೃವು ಆಗಮಸಿದ್ಧವು. ಜೀವನ ಭೋಜನಾದಿ ಕರ್ತೃತ್ವವು ಪ್ರತ್ಯಕ್ಷಸಿದ್ಧವು - ಹೀಗೆ ಭಿನ್ನಾರ್ಥಗಳಲ್ಲಿ ಪರಸ್ಪರ ವಿರೋಧವಿಲ್ಲದಿದ್ದಲ್ಲಿ ಆಗ ಅದು ಮಧ್ಯಮ ಪ್ರಮಾಣವೆನಿಸುವುದು. ಉದಾಹರಣೆಗೆ ಹೇಳುವುದಾದರೆ - ಘಟವಿಷಯಕವಾದುದು ಪ್ರತ್ಯಕ್ಷ, ಪರ್ವತದ ಕೆಳಭಾಗದಲ್ಲಿರುವ ಬೆಂಕಿಯ ಜ್ಞಾನವನ್ನು ಹುಟ್ಟಿಸುವುದು ಅನುಮಾನ, 'ನದೀತೀರೇ ಪಂಚಫಲಾನಿ ಸಂತಿ' ಎಂಬ ವಾಕ್ಯವು, ನದೀತೀರದಲ್ಲಿ ಫಲಸಂಸರ್ಗಜ್ಞಾನವನ್ನು ಹುಟ್ಟಿಸುವುದು - ಹೀಗೆ ಮೂರು ಪ್ರಮಾಣಗಳು ಭಿನ್ನಾರ್ಥಗಳನ್ನು ವಿಷಯೀಕರಿಸುತ್ತಾ ಪರಸ್ಪರ ವಿರೋಧವಿಲ್ಲದ್ದೂ ಆಗಿದ್ದು ಬೇರೆ ಬೇರೆ ಅರ್ಥಗಳನ್ನು ಪ್ರತಿಪಾದಿಸಿದಲ್ಲಿ ಅದು ಮಧ್ಯಪ್ರಮಾಣವು. ಅಂದರೆ ಹಿಂದೆ ಹೇಳಿದಂತೆ ಒಂದೊಂದೇ ಅರ್ಥದಲ್ಲಿ (ಅದು ಪ್ರಮಾಣತ್ರಯವಲ್ಲವಾದ್ದರಿಂದ - ಪೂರ್ಣತ್ವವಿಲ್ಲದಿರುವುದರಿಂದ) ಅದು ಒಂದೊಂದು ಅರ್ಥದಲ್ಲಿ ಒಂದೊಂದೇ ಯಥಾರ್ಥ ಜ್ಞಾನವನ್ನು ಹುಟ್ಟಿಸುವುದರಿಂದ ಅದು ಮಧ್ಯಮ ಪ್ರಮಾಣವು. ಇದರಂತೆ ಪ್ರತ್ಯಕ್ಷ ಅನುಮಾನ ಮತ್ತು ಆಗಮವೆಂಬ ಮೂರು ಪ್ರಮಾಣಗಳಿಗೆ ವಿರುದ್ಧವಾಗಿರುವುದು. ಅಥವಾ ಒಂದೊಂದು ಪ್ರಮಾಣದಿಂದ ವಿರುದ್ಧವಾಗಿದ್ದಲ್ಲಿ ಅದು ಅಪ್ರಮಾಣವು.

"ವಿಮತಾಃ, ಆತ್ಮಾನಃ ಪರಮಾತ್ಮನಸ್ತತ್ವತೋ ನ ಭಿದ್ಯಂತೇ, ಆತ್ಮತ್ವಾತ್, ಪರಮಾತ್ಮವತ್" ಇದು ಪರಮತೀಯರು ಜೀವೇಶ್ವರರ ಐಕ್ಯಸಾಧನೆಗಾಗಿ ಹೇಳುವ ಅನುಮಾನವು. ವಿವಾದಕ್ಕೆ ವಿಷಯರಾದ ಆತ್ಮರು ಪರಮಾತ್ಮನಿಂದ ತತ್ವತಃ (ಯಥಾರ್ಥವಾಗಿ) ಭಿನ್ನರಲ್ಲ, ಅವರಲ್ಲಿ ಆತ್ಮತ್ವವಿರುವುದರಿಂದ, ಪರಮಾತ್ಮನಂತೆ - (ಪರಮಾತ್ಮನೂ ಆತ್ಮ, ಜೀವನೂ ಆತ್ಮನಾದ್ದರಿಂದ ಆತ್ಮತ್ವದಿಂದ ಇಬ್ಬರೂ ಸಮಾನರಾದ್ದರಿಂದ ಅವರಿಬ್ಬರಲ್ಲಿ ಭೇದವಿಲ್ಲ - ಎಂದು ಅವರು ಹೇಳುವರು) ಎಂದು ಈ ಅನುಮಾನವನ್ನು ಜೀವೇಶ್ವರರ ಅಭೇದಸಾಧನೆಗಾಗಿ ಹೇಳುತ್ತಾರೆ. "ಅಹಂ ಸರ್ವಜ್ಞಃ" ಎಂಬ ವಾಕ್ಯವು ಸಾಕ್ಷಿಪ್ರತ್ಯಕ್ಷವಿರುದ್ಧವೂ ಸರ್ವಜ್ಞತ್ವಾ ಸರ್ವಜ್ಞರೂಪ ವಿರುದ್ಧ ಧರ್ಮಯುಕ್ತವಾಗಿರುವಿಕೆ ಎಂಬ ಅನುಮಾನ ವಿರುದ್ಧವೂ 'ದ್ವಾಸುಪರ್ಣಾ' ಎಂಬ ಶ್ರುತಿವಿರುದ್ಧವೂ ಆಗಿರುವುದರಿಂದ ಅಪ್ರಮಾಣವು. ಮಾಯಾವಾದಿಗಳು ಹೇಳುವ ಇನ್ನೊಂದು ಅನುಮಾನವೆಂದರೆ "ವಿಶ್ವಂ ಮಿಥ್ಯಾ, ದೃಶ್ಯತ್ವಾತ್, ಶುಕ್ತಿರಜತವತ್" ಇದನ್ನು ಅವರು ಪ್ರಪಂಚ ಮಿಥ್ಯಾತ್ವ ಸಾಧಕವಾಗಿ ಹೇಳುವ ಅನುಮಾನವು. ಇದು "ಸನ್ ಘಟಃ" ಮುಂತಾದ ಪ್ರತ್ಯಕ್ಷವಿರುದ್ಧವೂ, ಅರ್ಥಕ್ರಿಯಾಕಾರಿತ್ವವೆಂಬ ಅನುಮಾನ ವಿರುದ್ಧವೂ, "ವಿಶ್ವಂ ಸತ್ಯಂ" ಎಂಬ ಆಗಮವಿರುದ್ಧವೂ ಆಗಿರುವುದರಿಂದ ಈ ಎರಡೂ ಅನುಮಾನಗಳು ಪ್ರಮಾಣತ್ರಯವಿರುದ್ಧವಾಗಿರುವ ಕಾರಣ ಅತ್ಯಂತ ಅಪ್ರಮಾಣವು.

ಕೆಲವು ಒಂದೊಂದು ಪ್ರಮಾಣ ವಿರುದ್ಧವಾಗಿವೆ. ಇದರಂತೆ ಕಪ್ಪೇಚಿಪ್ಪನ್ನು ಕಂಡು ಇದು ಬೆಳ್ಳಿ ಎಂಬುದು "ನೇದಂ ರಜತಂ" ಇದು ಬೆಳ್ಳಿಯಲ್ಲ ಎಂಬ ಪ್ರತ್ಯಕ್ಷಬಾಧಿತವಾಗಿದೆ. ಗಂತೃಪುರುಷನ ರಥತ್ವಾನುಮಾನವೂ ಅಸ್ಖಲನತ್ವಾನುಮಾನದಿಂದ ಬಾಧಿತವಾಗಿದೆ. ಗೋವನ್ನು ಕೊಲ್ಲಬೇಕು ಎಂಬ ಮ್ಲೇಂಛರ ವಾಕ್ಯವು "ಗೌರ್ನಹಂತವ್ಯಾ" ಗೋವನ್ನು ಕೊಲ್ಲಬಾರದು ಎಂಬ ಶ್ರುತಿವಿರುದ್ಧವಾಗಿದೆ. ಇದು ಏಕೈಕ ಪ್ರಮಾಣ ವಿರುದ್ಧವಾದ್ದರಿಂದ ಅಪ್ರಮಾಣವು. ಆದ್ದರಿಂದ ಇದು ಜ್ಞಾನಿಗಳಿಂದ ತಿರಸ್ಕರಣೀಯವಾಗಿದೆ. ಆದಕಾರಣ ಪೂರ್ಣಪ್ರಮಾಣ ಬಲದಿಂದ ಪ್ರಮಾಣ ತ್ರಯವನ್ನು ಒಂದೇ ಅರ್ಥದಲ್ಲಿ ಹೊಂದಿಸ-

ಬೇಕೆಂದು ಸಿದ್ಧಿಸಿತು. ಅಜ್ಞಾನಿಯು ಪ್ರತ್ಯಕ್ಷಸಿದ್ಧ ಜೀವಕರ್ತೃತ್ವವನ್ನು ತ್ಯಜಿಸಿ, ಪರಮಾತ್ಮನೇ ಕರ್ತೃವೆಂದು ತಿಳಿದು ತನಗೆ ವಿಹಿತವಾದ ಕರ್ಮವನ್ನು ಮಾಡದೆ ಬಿಡುತ್ತಾನೆ. ನಿಜವಾದ ಜ್ಞಾನಿಯು ಜೀವನು ಹರ್ಯಧೀನನು ಮತ್ತು ಜೀವಕರ್ತೃತ್ವವೂ ಶ್ರೀವಿಷ್ಣುವಿನ ಅಧೀನವೆಂದು ತಿಳಿದು ಸರ್ವದಾ ತನಗೆ ವಿಹಿತವಾದ ಕರ್ಮವನ್ನು ಆಚರಿಸುತ್ತಾನೆ. ಅಜ್ಞನು ಅಧಮ-ಪ್ರಮಾಣವನ್ನೂ ಜ್ಞಾನಿಯು ಪೂರ್ಣಪ್ರಮಾಣವನ್ನೂ ಅಂಗೀಕರಿಸುವರೆಂದು ಭಾವ.

ಜೀವಕರ್ತೃತ್ವ ವಿಚಾರದಲ್ಲಿ - ಸಕಲ ಜೀವರ ಕರ್ತೃತ್ವವು ಪರಮಾತ್ಮಾಧೀನವೆಂಬುದಕ್ಕೆ ಪ್ರತ್ಯಕ್ಷ, ಅನುಮಾನ ಮತ್ತು ಆಗಮಗಳೆಂಬ ಪ್ರಮಾಣತ್ರಯವನ್ನು ನಿರೂಪಿಸಿ, ಮೂರು ಪ್ರಮಾಣಗಳಲ್ಲಿಯೂ ಒಂದರ್ಥದಲ್ಲಿ ವಿರೋಧವಿಲ್ಲದಿರು-ವಾಗ ಅದು ಪೂರ್ಣಪ್ರಮಾಣವೆಂದೂ, ಭಿನ್ನಭಿನ್ನಾರ್ಥಗಳಲ್ಲಿ ಅವಿರುದ್ಧವಾಗಿದ್ದರೆ ಅದು ಮಧ್ಯಮಪ್ರಮಾಣವೆಂದೂ, ಪ್ರಮಾಣ ವಿರೋಧವಿದ್ದಾಗ ಅದು ಅಪ್ರಮಾಣವೆಂದು ತಿಳಿಸಿ, ಈಗ ಜೀವನು ಮಾಡಬೇಕಾದ ಕರ್ಮಗಳಿಗೆ ಮೂರು ಕಾರಣಗಳನ್ನು ತಿಳಿಸುವರು.

ಸ್ವಭಾವ-ಹಠವೆಂಬ ಹೆಸರುಳ್ಳ ಯೋಗ್ಯತೆಯು ಜೀವರಿಗಿರುವುದರಿಂದ, ಅದು ಅಂದರೆ ಯೋಗ್ಯತೆಯು ಜೀವನಂತೆ ಅನಾದಿನಿತ್ಯವಾಗಿರುವುದರಿಂದ ಆ ಯೋಗ್ಯತೆಯು ಜೀವರ ಕರ್ಮ ಪ್ರವೃತ್ತಿಗೆ ಮುಖ್ಯಕಾರಣವು. ಅನಾದಿಕರ್ಮ (ಅದೃಷ್ಟ) ವು ಎರಡನೆಯ ಕಾರಣ, ಅಂದರೆ ಯೋಗ್ಯತೆಗಿಂತ ಮೇಲಿನ ಕಾರಣವು. ಇದರಂತೆ ಚೇತನ ಸಂಬಂಧಿಯಾದ್ದರಿಂದ ಜೀವನ ಪ್ರಯತ್ನವು ಯೋಗ್ಯತೆಗಿಂತ ಮೂರನೆಯ ಕಾರಣವು. ಅದು ಸರಿ, ಯೋಗ್ಯತೆ ಮೊದಲಾದವುಗಳೇ ಜೀವರ ಪ್ರವೃತ್ತಿಗೆ ಕಾರಣವೆಂದು ಹೇಳಿದರೆ, ಶ್ರೀಹರಿಗೆ ಅಸ್ವಾತಂತ್ರ್ಯ ಬರುವುದಿಲ್ಲವೇ ಎಂದರ - ಆ ಯೋಗ್ಯತೆ, ಅನಾದಿಕರ್ಮ, ಪುರುಷ-ಪ್ರಯತ್ನ, ಈ ಮೂರೂ ಸಂಸಾರವಸ್ಥೆಯಲ್ಲಿಯೂ, ಮುಕ್ತಿಯ ಅವಸ್ಥೆಯಲ್ಲಿಯೂ ಸಹ ಶ್ರೀಹರಿಯ ಅಧೀನವಾಗಿವೆ. ಹಾಗಾದರೆ - ಜೀವಕರ್ತೃತ್ವ ಮುಂತಾದವುಗಳು ಪರಮಾತ್ಮಾಧೀನವಾಗಿರುವಂತೆ ಶ್ರೀಹರಿಯು ಅನ್ಯರಿಗೆ ಅಧೀನ-ನಾಗಿರುವನೋ? ಎಂದು ಆಶಂಕಿಸಿ ಅದನ್ನು ಸಯುಕ್ತಿಕವಾಗಿ ಪರಿಹರಿಸುತ್ತಾರೆ.

ಶ್ರೀಹರಿ ಪರಮಾತ್ಮನು ಯಾರ ಅಧೀನನೂ ಅಲ್ಲ; ಏಕೆಂದರೆ ಅವನು ಸರ್ವೋತ್ತಮನು ಮತ್ತು ಮುಖ್ಯಸ್ವತಂತ್ರನೂ ಆಗಿದ್ದಾನೆ. ಅತಃ ಅವನು ಯಾರಿಗೂ ಅಧೀನನಲ್ಲ.

ಬ್ರಹ್ಮದೇವರಿಂದ ಆರಂಭಿಸಿ ಕಲಿಯವರೆಗೆ ಇರುವ ಸಮಸ್ತ ಜೀವರಾಶಿಯಲ್ಲಿ ಬ್ರಹ್ಮದೇವರು ಎಲ್ಲರಿಗಿಂತ ಹೆಚ್ಚಿನ ಯೋಗ್ಯತೆಯುಳ್ಳವರು. ಅವರ ತರುವಾಯ ರುದ್ರದೇವರೇ ಮೊದಲಾದ ದೇವತೆಗಳಿಂದ ಪ್ರಾರಂಭಿಸಿ ಮನುಷ್ಯೋ-ತ್ತಮರವರೆಗೆ ಅವರವರು ಸ್ವಲ್ಪ ಸ್ವಲ್ಪ ಯೋಗ್ಯತೆಗಳುಳ್ಳವರು. ಈ ಯೋಗ್ಯತೆಯು ಜ್ಞಾನ-ಭಕ್ತ್ಯಾದಿಗಳಿಗೆ ಕಾರಣ. ಕೊನೆಗೆ ಮೋಕ್ಷಕ್ಕೆ ಕಾರಣವಾಗಿದೆ. ಈ ಯೋಗ್ಯತೆಯು ಶ್ರೀನಾರಾಯಣನಲ್ಲಿ ಮಾಡುವ ಜ್ಞಾನಭಕ್ತ್ಯಾದಿಗುಣಗಳ ತಾರತಮ್ಯಾನುಸಾರ ತಾರತಮ್ಯೋಪೇತವಾದುದು. ಪರದಲ್ಲಿ ಅಂದರೆ ಮುಕ್ತಿಯಲ್ಲಿ ಅನುಭವಿಸುವ ಸುಖದ ತಾರತಮ್ಯವನ್ನುಸರಿಸಿ ತಾರ ತಮ್ಯೋಪೇತವಾದುದು. ಆದ್ದರಿಂದ ಈ ಜೀವರು ಗುಣಭರಿತರಾಗಿರುವುದರಿಂದ ಅವರನ್ನು ಉತ್ತಮಜೀವರೆಂದು ಹೇಳುತ್ತಾರೆ. ಮಿಶ್ರಜೀವರದು ಮಧ್ಯಮಯೋಗ್ಯತೆಯು. ಅದು (ಯೋಗ್ಯತೆಯು) ಇಲ್ಲಿ ವಿಷ್ಣು ಭಕ್ತ್ಯಾದಿ ಗುಣಗಳು, ಹರಿದ್ವೇಷಾದಿದೋಷಗಳು - ಇವುಗಳಂತೆ ತಾರತಮ್ಯದಿಂದ ನೀಚೋಚ್ಚಭಾವಯುಕ್ತವಾಗಿಯೇ ಇರುತ್ತದೆ. ಕೊನೆಯಲ್ಲಿ ಅನುಭವಿಸುವ ಸುಖ-ದುಃಖಗಳ ತಾರತಮ್ಯವನ್ನು ಅನುಸರಿಸಿ ತಾರತಮ್ಯವುಳ್ಳದ್ದಾಗಿದೆ. ಗುಣ-ದೋಷಮಿಶ್ರಿತವಾಗಿರು ವುದರಿಂದ ಅದನ್ನು ಮಧ್ಯಮಯೋಗ್ಯತೆ ಎನ್ನುವರು. ಈ ಯೋಗ್ಯತೆಯು ಮಧ್ಯಮಬುದ್ಧಿಗೆ ಕಾರಣವು. ಮುಕ್ತಿಯನ್ನು ಕುರಿತಾಗಲಿ, ಅಂಧಃತಮಸ್ಸನ್ನು ಕುರಿತಾಗಲಿ ಅದು ಕಾರಣವಲ್ಲ. ಜೀವರು ಗುಣ-ದೋಷ ಮಿಶ್ರಿತರಾಗಿರುವುದರಿಂದ ಮಧ್ಯಮರೆಂದು ಉಕ್ತರಾಗಿದ್ದಾರೆ.

ಶ್ರೀಹರಿದ್ವೇಷ, ಮಿಥ್ಯಾಜ್ಞಾನ ಮುಂತಾದ ಕೇವಲ ದೋಷಭೂಯಿಷ್ಠರಾಗಿರುವುದರಿಂದ ಮನುಷ್ಯಾಧಮರಿಂ-ದಾರಂಭಿಸಿ ಕಲಿಯವರೆಗೆ ಜೀವರು ಅಧಮಯೋಗ್ಯತೆಯುಳ್ಳವರಾಗಿರುವುದರಿಂದ ಅವರು ಅಧಮರು. ಆ ದೋಷವು ಯಾರಲ್ಲಿ ಸ್ವಲ್ಪ ಕಡಿಮೆಯಾಗಿರುವುದೋ ಅಂಥವರು ಅಧಮರಲ್ಲಿ ಉತ್ತಮರು. ಯಾರಲ್ಲಿ ಮಧ್ಯಮ ದೋಷಗಳುಂಟೋ, ಅವರು ಅಧಮರಲ್ಲಿ ಮಧ್ಯಮರು. ಇವರಿಗಿಂತ ಹೆಚ್ಚಿನ ದೋಷವಿದ್ದರು ಅಧಮರಲ್ಲಿ ನೀಚರು. ಇವರೆಲ್ಲರಿಗಿಂತ ಅತ್ಯಂತ ದೋಷಭರಿತನಾಗಿರುವುದರಿಂದ ಕಲಿಯು ಅಧಮಾಧಮನಾಗಿದ್ದಾನೆ! ಆದುದರಿಂದ ಯೋಗ್ಯತೆಯೂ ಸಹ ಪ್ರಧಾನಾಧಮ -ಮಧ್ಯಮಾಧಮ ಮತ್ತು ಅಧಮಾಧಮವೆಂದು ತಾರತಮ್ಯವುಳ್ಳದ್ದಾಗಿದೆ. ಈ ಯೋಗ್ಯತೆಯು ಇಲ್ಲಿ ದೋಷಗಳಿಗೆ ಕಾರಣವಾಗಿದೆ. ಅದು ಕೊನೆಯಲ್ಲಿ ತಮಸ್ಸಿನಲ್ಲಿ ಅನುಭವಿಸುವ ದುಃಖಕ್ಕೆ ಕಾರಣವಾಗಿದೆ. ಆದ್ದರಿಂದಲೇ ಈ ಜೀವರು ದೋಷೈಕ ಪಾತ್ರರಾಗಿರುವುದರಿಂದ ಅಧಮರೆಂದು ಕರೆಸಿಕೊಳ್ಳುವರು. ಇಂತಹ ಅಧಮರಲ್ಲಿಯೂ ಕಲಿಯು ಅಧಮನು. ಈ ಎಲ್ಲ ಅಭಿಪ್ರಾಯಗಳನ್ನು ಮನದಲ್ಲಿಟ್ಟುಕೊಂಡು ನಿರ್ಣಯಕಾರರು ಬ್ರಹ್ಮನಿಂದಾರಂಭಿಸಿ ಕಲಿಯ ಪರ್ಯಂತ ಜೀವರು ಎಂದು ಹೇಳಿರುವರೆಂದು ತಿಳಿಯಬೇಕು.

ಸ್ವಭಾವ(ಹಠ) ಕರ್ಮಗಳು ಫಲಪ್ರದವಲ್ಲ. ಪ್ರಯತ್ನಾದಿಗಳಿಂದಲೇ ಯೋಗ್ಯತಾದಿಗಳ ಫಲವು ದೊರಕುವುದರಿಂದ ಪರಮಾತ್ಮನಿಂದ ಪ್ರಯೋಜನವೇನು? ಎಂದರೆ – ಶ್ರೀಹರಿಯು ಮೇಲೆ ನಿರೂಪಿಸಿದ ಜೀವಸಂಘದ ಕರ್ಮಸಮುದಾಯಕ್ಕೆ ಆಯಾ ಜೀವರ ಸ್ವಭಾವ-ಕರ್ಮ-ಪ್ರಯತ್ನಗಳನ್ನನುಸರಿಸಿ ಅವರವರಿಗೆ ಯೋಗ್ಯಫಲವನ್ನು ಕೊಡುತ್ತಾನೆ. ಹಾಗಾದರೆ ಯತ್ನಾದಿಗಳಿಂದ ಫಲವಿಲ್ಲದಿದ್ದರೆ ಫಲವಿಲ್ಲದ್ದರಿಂದ ಹರಿಯು ಯಾವುದರಿಂದ ಫಲವನ್ನು ನೀಡುವನು? ಎಂದರೆ, ಯತ್ನಾದಿಗಳಲ್ಲಿರುವ ಫಲವನ್ನು ಹುಟ್ಟಿಸುವ ಶಕ್ತಿಗೆ ಶ್ರೀವಿಷ್ಣುವೇ ಸ್ವತಂತ್ರನಾದ್ದರಿಂದ ಆ ಭಗವಂತನೇ ಫಲಪ್ರದ-ನಾಗಿದ್ದಾನೆ.

ಭಗವಂತನಿಗಿರುವ ಸರ್ವಸ್ವಾತಂತ್ರ್ಯಕ್ಕೆ ಈಗ ಕಾರಣವನ್ನು ತಿಳಿಸುವರು. ಶ್ರೀಹರಿಯೇ ಸ್ವಭಾವ-ಯತ್ನಾದಿಗಳಿಗೆ ಪ್ರೇರಕನಾಗಿರುವುದರಿಂದ ಅವನು ಸ್ವತಂತ್ರನು. ಯತ್ನಾದಿಗಳಲ್ಲಿರುವ ಶಕ್ತಿಯೂ ಪರಮಾತ್ಮಾಧೀನವಾದ ಮೇಲೆ ಅವನೇ ಸ್ವಾತಂತ್ರ್ಯಶಕ್ತಿಯಿಂದ ಫಲಪ್ರದನಾದರೆ ಯತ್ನಾದಿಗಳಿಗೆ ಪ್ರಯೋಜನವೇನು ಎಂದರೇ – ಸ್ವಾತಂತ್ರ್ಯಶಕ್ತಿಯಿಂದ ಫಲವನ್ನು ಕೊಡುತ್ತಿದ್ದರೂ, ಸರ್ವರಿಗೂ ನಿಯಾಮಕನಾಗಿದ್ದರೂ, ಶ್ರೀಹರಿಯು ಈ ಸ್ವಭಾವ-ಯತ್ನಾದಿಗಳನ್ನು ಅನುಸರಿಸಿಯೇ ಫಲವನ್ನು ನೀಡುತ್ತೇನೆ ಎಂದು ಸಂಕಲ್ಪಿಸಿರುವುದೇ ಶ್ರೀಹರಿಯ ಸ್ವತಂತ್ರತೆಯಾಗಿದೆ. ಆದ್ದರಿಂದ ಶ್ರೀಹರಿಯು ಏರ್ಪಡಿಸಿರುವ ವರ್ಣಾಶ್ರಮ ಧರ್ಮಗಳಿಗೆ ತಕ್ಕಂತೆ ತಮತಮಗೆ ವಿಹಿತವಾದ ಕರ್ಮಗಳನ್ನು ಭಗವಂತನ ಪೂಜೆಯೆಂದು ತಿಳಿದು ಮಾಡುತ್ತೇನೆ ಎಂದು ಸಂಕಲ್ಪಿಸಿ ನೆರವೇರಿಸಬೇಕು. ಅದರಿಂದ ಮೋಕ್ಷವು ದೊರಕುವುದು. ವಿಹಿತಕರ್ಮಾಚರಣರತನಾಗದೆ, ವಿಹಿತವಲ್ಲದ್ದನ್ನು ಮಾಡಿದರೆ ನರಕಾದಿಗಳುಂಟಾಗುವುವು. ಆದ್ದರಿಂದ ಪ್ರಯತ್ನಪೂರ್ವಕವಾಗಿ ಕರ್ಮ ಮಾಡಬೇಕು.

ಯಾರು ಯಾರಿಗೆ ಯಾವ ಯಾವ ಕರ್ಮಗಳು ವಿಹಿತ ಎಂಬುದನ್ನು ತಿಳಿಸಲು ಬ್ರಾಹ್ಮಣಾದಿ ವರ್ಣವಿಭಾಗ ಪೂರ್ವಕವಾಗಿ ತಿಳಿಸುತ್ತಾರೆ.

ಶ್ರೀಹರಿಯ ಮುಖದಿಂದ ಬ್ರಾಹ್ಮಣರು ಜನಿಸಿರುವುದರಿಂದ ಮುಖ ಸಂಬಂಧಿಯಾದ ಅಧ್ಯಯನ-ಅಧ್ಯಾಪನಾದಿ ಕರ್ಮಗಳನ್ನು ಅವರಿಗೆ ವಿಧಿಸಿದ್ದಾನೆ. ಭುಜದಿಂದ ಹುಟ್ಟಿದ್ದ ಕ್ಷತ್ರಿಯರಿಗೆ ಬಾಹುಬಲದಿಂದ ಮಾಡಬೇಕಾದ ದುಷ್ಟಶಿಕ್ಷಣ, ಪ್ರಜಾಪರಿಪಾಲನ ರೂಪಕರ್ಮವನ್ನು ಕಲ್ಪಿಸಿದ್ದಾನೆ. ಮುಖಕ್ಕೆ ಸನಿಹದಲ್ಲಿರುವ ಭುಜದಿಂದ ಜನಿಸಿರುವುದರಿಂದ ಕ್ಷತ್ರಿಯರಿಗೆ ಅಧ್ಯಯನ-ಯಜನ-ಜಪ-ಉಪದೇಶಾದಿಗಳೂ ಧರ್ಮವಾಗಿವೆ. ವೈಶ್ಯನು ಭಗವಂತನ ತೊಡೆಯಿಂದ ಹುಟ್ಟಿರುವುದರಿಂದ,

ಭುಜ-ಊರುಗಳ ಸಾಮೀಪ್ಯವಿರುವುದರಿಂದ ವೈಶ್ಯನಿಗೆ ಕೃಷಿ, ಗೋರಕ್ಷಣೆ, ವಾಣಿಜ್ಯ, ಬಡ್ಡಿ ವ್ಯಾಪಾರಗಳು ಧರ್ಮವಾಗಿದೆ. ಭಗವಂತನ ಪಾದದಿಂದ ಜನಿಸಿದ ಶೂದ್ರನಿಗೆ, ತನ್ನ ಮೇಲಿನ ತ್ರಿವರ್ಣದವರ ಸೇವೆ, ಮತ್ತು ಕೃಷಿ-ವಾಣಿಜ್ಯಾದಿಗಳೂ ಪ್ರಜಾಭಿವೃದ್ಧಿ ಹೀಗೆ ನಾಲ್ಕುವಿಧ ಕರ್ಮಗಳನ್ನು ವಿಧಿಸಿದ್ದಾನೆ. ಬ್ರಾಹ್ಮಣನಿಗೆ ಮುಖ್ಯ ಧರ್ಮವನ್ನು ಹೇಳಿ, ಅಮುಖ್ಯವಾಗಿ ಹಿಂದೆ ಹೇಳಿದ ಎಲ್ಲ ಧರ್ಮಗಳೂ ಉಕ್ತವಾಗಿದೆ. ಇದರಂತೆ ಆಪತ್ಕಾಲದಲ್ಲಿ ಬ್ರಾಹ್ಮಣನು ಕ್ಷತ್ರಿಯ ಧರ್ಮವನ್ನೂ, ಕ್ಷತ್ರಿಯನು ವೈಶ್ಯಧರ್ಮ, ವೈಶ್ಯನು ಶೂದ್ರಧರ್ಮಗಳನ್ನೂ, ಶೂದ್ರನು ಬ್ರಾಹ್ಮಣ ಧರ್ಮವೊಂದನ್ನು ಬಿಟ್ಟು ಮಿಕ್ಕ ಎರಡು ವರ್ಣದವರ ಧರ್ಮಗಳನ್ನು ಸ್ವೀಕರಿಸಬಹುದು. ಇದು ನಾಲ್ಕು ವರ್ಣದವರಿಗೂ ಧರ್ಮವೇ ಆಗುವುದು.

ಶ್ರೀಹರಿಯು ವಿಧಿಸಿರುವ ಮೇಲ್ಕಂಡ ಧರ್ಮಗಳ ಮೂಲಕ ಬ್ರಾಹ್ಮಣಾದಿ ಚಾತುರ್ವರ್ಣ್ಯದವರಿಂದ ಶ್ರೀವಿಷ್ಣುವು ಪೂಜಿತನಾಗುವನು. ಬ್ರಾಹ್ಮಣನನ್ನು ಹಿಡಿದು ಶ್ವಪಚನ (ಚಂಡಾಲನ)ವರೆಗೆ ಎಲ್ಲರಿಗೂ ಶ್ರೀಹರಿಪೂಜೆಯೇ ಧರ್ಮವು. ಯೋಗ್ಯರೀತಿಯಲ್ಲಿ ಶ್ರೀಹರಿತತ್ವಜ್ಞಾನ ಮತ್ತು ಪೂಜೆಗಳೂ ಧರ್ಮವೇ ಆಗಿರುವುದು.

ಶ್ರೀಹರಿಪರಮಾತ್ಮನೇ ಏಕೆ ಪೂಜ್ಯನೆಂದರೆ ನಿರೂಪಿಸುತ್ತಾರೆ:-

ಶ್ರೀಹರಿಯೇ ನಮ್ಮೆಲ್ಲರಿಗೂ ತಂದೆ, ಗುರು, ಸರ್ವೋತ್ತಮನಾದ ದೇವನಾಗಿದ್ದಾನೆ. ಅಂತೆಯೇ ಪೂಜಾರ್ಹನಾಗಿದ್ದಾನೆ. ಹರಿಯನ್ನು ಪೂಜಿಸುವಂತೆ ತಾರತಮ್ಯಾನುಸಾರ ಶ್ರೀಲಕ್ಷ್ಮೀದೇವಿ ಮೊದಲಾದವರನ್ನೂ ಪೂಜಿಸುವುದು ಧರ್ಮವಾಗಿದೆ. ಅವರು ಶ್ರೀಹರಿಯ ಭಕ್ತರಾದ್ದರಿಂದ ಪೂಜಾರ್ಹರು. ಶ್ರೀರಮಾದಿದೇವತೆಗಳಲ್ಲಿ ಹೆಚ್ಚಿನ ಹರಿಭಕ್ತರು ಅಧಿಕ ಪೂಜಾರ್ಹರು ಮಹಾತ್ಮ್ಯಜ್ಞಾನ ಪೂರ್ವಕವಾಗಿ ಅರ್ಚಿತನಾದ ಶ್ರೀವಾಸುದೇವನು ಖಂಡಿತ ಮೋಕ್ಷವನ್ನು ಕರುಣಿಸುವನು. ಹಾಗೆ ಪೂಜಿಸದಿದ್ದವರಿಗೆ ದುಃಖವನ್ನು ನೀಡುವನು. ಶ್ರೀಹರಿಯು ಸರ್ವಸ್ವತಂತ್ರನಾಗಿರುವುದರಿಂದ ಭಕ್ತರಾದ ಸಜ್ಜನರಿಗೆ ಸುಖವನ್ನೂ, ದುರ್ಜನರಿಗೆ ದುಃಖವನ್ನೂ ಕೊಡುವನು. ಚತುರಾನನಬ್ರಹ್ಮಾದಿ ಸಕಲಜೀವರೂ ಸ್ವತಂತ್ರರಲ್ಲವಾದ್ದರಿಂದಲೂ, ಜೀವಸಮುದಾಯವೆಲ್ಲವೂ ಹರಿಯ ಅಧೀನವಾದ್ದರಿಂದಲೂ ಆ ಶ್ರೀವಿಷ್ಣುವೇ ಸುಖ-ದುಃಖಪ್ರದನಾಗಿರುವನು.

ನಾರಾಯಣನು ಸುಖ-ನಿರ್ದುಷ್ಟಜ್ಞಾನ-ಶಕ್ತ್ಯಾದಿ ಸೃಷ್ಟಿ-ಸ್ಥಿತಿ-ಸಂಹಾರಾದಿ ಸಕಲಗುಣಪರಿಪೂರ್ಣನು. ಸರ್ವ ಸ್ವತಂತ್ರನಾಗಿರುವುದರಿಂದ ದೋಷರಹಿತನು. ಅನಂತಶಕ್ತಿಯುಳ್ಳವನಾಗಿರುವುದರಿಂದ ಸರ್ವಸ್ವತಂತ್ರನು. ದೋಷಾಸ್ಪೃಷ್ಟಗುಣ ಪೂರ್ಣನಾಗಿರುವುದರಿಂದಲೂ, ನಿರವಧಿಕ ಶಕ್ತಿಶಾಲಿಯಾಗಿರುವ ಕಾರಣವೂ, ಸಕಲಗುಣಪರಿಪೂರ್ಣನಾದ ಶ್ರೀಹರಿ ಪರಮಾತ್ಮನು, ವರ್ಣಾಶ್ರಮಗಳಿಗೆ ಉಚಿತವಾದ ಧರ್ಮಗಳಿಂದ ಸಕಲ ಸುಜನರಿಂದ ಪೂಜ್ಯನಾಗಿದ್ದಾನೆ. ಆದುದರಿಂದ ದುರ್ಜನರಲ್ಲಿ ಹೆಚ್ಚಾದ ಕ್ಷಮೆಯು ನಮಗೆ ಧರ್ಮವಲ್ಲ. ದುಷ್ಟರನ್ನು ಸಂಹರಿಸಲೇಬೇಕು. ಕ್ಷತ್ರಿಯರು ಶ್ರೀಹರಿಗೆ ವಿಮುಖರಾದ, ಪಾಪಿಗಳಾದ ದುಷ್ಟಕ್ಷತ್ರಿಯರನ್ನು ಯುದ್ಧರೂಪ ಯಜ್ಞದಿಂದ ವಿಷ್ಣುವನ್ನು ಸಂತೋಷಪಡಿಸುವೆನೆಂದು ತಿಳಿದು ಸಂಹರಿಸುವುದರಿಂದ ಅವನು (ಹರಿ) ಪ್ರೀತನಾಗುವನು. ಅವರಿಗೆ ಮೋಕ್ಷದಲ್ಲಿ ಹರ್ಯನುಗ್ರಹದಿಂದ ಆನಂದಾ-ಭಿವೃದ್ಧಿಯಾಗುವುದು.

ಪಾಪಿಗಳೂ, ದುಷ್ಟರೂ ಆದ ಕ್ಷತ್ರಿಯರ ಸಂಹಾರವು ಹರಿಪ್ರಿಯಕರ. ಅತಃ ಅಂಥವರು ವಧಾರ್ಹರು. ದ್ಯೂತ-ಕ್ರೀಡೆಯಲ್ಲಿ ಕಪಟಿಗಳಾದವರನ್ನು, ಯುದ್ಧದಲ್ಲಿ ಸೆರೆಹಿಡಿದವರನ್ನು ರಾಜನು ಸ್ವತಃ ಕೊಲ್ಲದೆ, ಸೇವಕರಿಂದ ಕೊಲ್ಲಿಸಬೇಕು. ಇದು ಧರ್ಮ. ಯುದ್ಧದಲ್ಲಿ ರಾಜರು ಮತ್ತು ಅವರ ಪುತ್ರರನ್ನು ಸ್ವತಃ ಸಂಹರಿಸಬೇಕು. ಮದುವೆಯಾಗದಿರುವ ರಾಜ-ಪುತ್ರರನ್ನು ಸೇವಕರಿಂದ ಕೊಲ್ಲಿಸಬೇಕು. ಕಳ್ಳರ ಕಿವಿ-ಮೂಗು ಛೇದನ, ಶಿರಚ್ಛೇದನ, ದುಷ್ಟಸ್ತ್ರೀವಧ ಇಂಥ ಕಾರ್ಯವನ್ನು ಸ್ವತಃ ಮಾಡದೆ, ರಾಜನು ಸೇವಕರಿಂದ ಮಾಡಿಸಬೇಕು. ಈ ಎಲ್ಲ ಧರ್ಮಗಳೂ ವೇದವಿಹಿತವಾಗಿವೆ. ಮೇಲೆ ಹೇಳಿದ

ವಿಚಾರಗಳ ವಿಧಾನ ವಾಕ್ಯಗಳು ಪಂಚರಾತ್ರದಲ್ಲಿಯೂ ಇವೆ. ದ್ಯೂತಕ್ರೀಡೆಯು ಕಪಟರೂಪವು. ಅದು ಪಾಪಸಾಧನ. ಅತಿನಿಂದಿತವಾದುದು. ಇಂತು ನಿಂದಿತವಾದ ದ್ಯೂತಕ್ರೀಡೆಯನ್ನು, ಅಣ್ಣ! ನೀನು ಶಕುನಿಯೊಡನೆ ಆಡಿದ್ದೀಯೆ. ದ್ಯೂತ-ವಾಡಬೇಕೆಂದು ವೇದಶಾಸ್ತ್ರಗಳಲ್ಲಿ ಹೇಳಿಲ್ಲ. ಆದ್ದರಿಂದ ದ್ಯೂತದಲ್ಲಿ ಅಪಹರಿಸಿದ್ದು ಕೊಟ್ಟಿದ್ದು ಎಂದು ವೇದವಿಶಾರದರು ಹೇಳುವುದಿಲ್ಲ. ಭಯಪೀಡಿತನು ಕೊಟ್ಟಿದ್ದು, ದ್ಯೂತದಲ್ಲಿ ಕೊಟ್ಟಿದ್ದು. ಕಾಮಿನಿಗೆ ಕೊಟ್ಟಿದ್ದು. ಇವುಗಳು ಪುನಃ ಪಡೆಯಲು ಯೋಗ್ಯವಾಗಿವೆ. ಆದ್ದರಿಂದ ನೀನು ಪಣವಾಗಿ ನೀಡಿದ ರಾಜ್ಯವನ್ನು ನಾವು ಬಲತ್ಕಾರದಿಂದ ಮತ್ತೆ ಅವರಿಂದ ಕಸಿದು-ಕೊಳ್ಳುವುದು ಯೋಗ್ಯವೇ ಆಗಿದೆ. ನೀನು ಕೇಳಬಹುದು, ಹಾಗಾದರೆ ನೀನೇಕೆ ಅಪಹರಿಸಲಿಲ್ಲ-ಎಂದು. ರಾಜನ್, ನೀನು ಧರ್ಮಿಷ್ಠನಾಗಿರುವೆ, ನಮಗೆ ಅಣ್ಣನಾಗಿರುವೆ. ನಿನ್ನ ಅಪ್ಪಣೆಯಿಲ್ಲದೆ ಮುಂದುವರಿಯಬಾರದೆಂದೂ, ನೀನು ಅಪ್ಪಣೆ ನೀಡಲಿಲ್ಲವಾದ್ದರಿಂದಲೂ ನಾನು ಅದನ್ನು ಕಿತ್ತುಕೊಳ್ಳಲಿಲ್ಲ. ಈಗ ನೀನು ಅಪ್ಪಣೆ ಕೊಟ್ಟಲ್ಲಿ ದುರ್ಯೋಧನಾದಿಗಳನ್ನು ಸಂಹರಿಸಿ ಈಗಲೇ ನಿನಗೆ ರಾಜ್ಯವನ್ನು ಪಡೆದು ಒಪ್ಪಿಸುತ್ತೇನೆ. ಅಣ್ಣ, ನೀನು ಈಗಲೂ ಪಾಪಿಗಳಾದ ದುರ್ಯೋಧನಾದಿಗಳಿಗೆ, ಹನ್ನೆರಡು ವರ್ಷ ವನವಾಸ, ಒಂದು ವರ್ಷ ಅಜ್ಞಾತವಾಸ ಮಾಡುವುದಾಗಿ ಹೇಳಿದ ಗಡುವನ್ನು ಸತ್ಯಮಾಡಲು ಇಚ್ಛಿಸುತ್ತಿದ್ದೀಯೆ. ಈಗಾಗಲೇ ಹನ್ನೆರಡು ತಿಂಗಳುಗಳು ಗತಿಸಿ ಹೋಗಿವೆ. ಸಾವಿರ ವರ್ಷ ಆಚರಿಸಬೇಕಾದ ಸತ್ರಯಾಗವನ್ನು ಮನುಷ್ಯರು ಅಷ್ಟು ದೀರ್ಘಕಾಲ ಜೀವಿಸಲಶಕ್ಯವಾದ್ದರಿಂದ ಹನ್ನೆರಡು ತಿಂಗಳಲ್ಲಿ ಮಾಡಬಹುದೆಂದು ವೇದದಲ್ಲಿ ವಿಹಿತವಾಗಿರುವಂತೆ ಈಗ ಮುಗಿದಿರುವ ಹನ್ನೆರಡು ಮಾಸಗಳೇ ಹನ್ನೆರಡು ವರ್ಷಗಳಾಗಿರುವುದರಿಂದ, ಒಂದು ವರ್ಷ ಅಜ್ಞಾತವಾಸವನ್ನು ಒಂದು ತಿಂಗಳಿನಲ್ಲಿ ಮುಗಿಸಿ ತರುವಾಯ ಶತ್ರುಗಳನ್ನು ಸಂಹರಿಸಿ, ನಿನಗೆ ರಾಜ್ಯವನ್ನು ಸಂಪಾದಿಸಿ ಕೊಡುತ್ತೇನೆ. ಆದ್ದರಿಂದ ಅಣ್ಣ, ನೀನು ಮಿತ್ರರಿಗೆ ದುಃಖಕರನಾಗದೇ, ಶತ್ರುಗಳಿಗೆ ಸಂತೋಷಕರನಾಗದೇ ಶತ್ರುಗಳ ಶಿರದಲ್ಲಿ ಅಗ್ನಿಯಂತೆ ಜ್ವಲಿಸು. ನಿತ್ಯವೂ ಸಂತೋಷಪಡಿಸುತ್ತಾ ಶ್ರೀಕೃಷ್ಣನನ್ನು ಭಜಿಸು.

ಅಗ್ರಜ! ಶ್ರೀವಾಸುದೇವಕೃಷ್ಣನು ರುದ್ರಾದಿಗಳನ್ನು ಜಯಿಸಿದ್ದಾನೆ. ರೈವತ ಪರ್ವತದಲ್ಲಿ ನಮ್ಮ ತಾಯಿಯ ಪ್ರಾರ್ಥನೆಯಂತೆ ಬ್ರಹ್ಮಾದಿಗಳ ವರಬಲದಿಂದ ಅಜೇಯರಾದ ಜರಾಸಂಧಾದಿಗಳನ್ನು ಜಯಿಸಿರುವನು. ಇದು ಶ್ರೀಕೃಷ್ಣನ ಸ್ವಾತಂತ್ರ್ಯದ್ಯೋತಕವಾಗಿದೆ. ಬ್ರಹ್ಮ-ರುದ್ರಾದಿ ದೇವತೆಗಳು ಶ್ರೀಲಕ್ಷ್ಮೀದೇವಿಗೆ ಅಧೀನರು. ಅವಳು ಶ್ರೀಹರಿಗೆ ಅಧೀನ-ಳಾಗಿದ್ದಾಳೆ. ಇದನ್ನು ಅನೇಕ ಬಾರಿ ನಾವು ಶ್ರೀವೇದವ್ಯಾಸರ ಸ್ವರೂಪದಲ್ಲಿ ಕಂಡಿದ್ದೇವೆ. ಭಗವಾನ್ ವೇದವ್ಯಾಸರು ನಮಗೆ ಅಲೌಕಿಕಜ್ಞಾನವನ್ನು ಕರುಣಿಸಿ ತಮ್ಮ ಸರ್ವ ಸ್ವಾತಂತ್ರ್ಯವನ್ನು ತೋರಿಸಿದ್ದಾರೆ. ಆದ್ದರಿಂದ ಶ್ರೀಕೃಷ್ಣನ ಸ್ವಾತಂತ್ರ್ಯ ಪ್ರತ್ಯಕ್ಷವಾಗಿ ಸ್ಪಷ್ಟವಾಗಿದೆ. ಅಣ್ಣ, ಶತ್ರುಗಳನ್ನು ಸಂಹರಿಸಿ ಸಾಮ್ರಾಜ್ಯವನ್ನು ಭೋಗಿಸಲು ಸಿದ್ಧನಾಗಿ ಹೊರಡು. ನಾನು ಹೇಳಿದಂತೆ ಮಾಡಿದರೆ ಪರಮಾತ್ಮನ ಅನುಗ್ರಹದಿಂದ ನಿನಗೆ ಹೆಚ್ಚಿನ ಕೀರ್ತಿ, ಧರ್ಮಗಳು ಲಭಿಸುವುವು".

ಇಂತು ಭೀಮಸೇನನು ಹೇಳಲು ಯುಧಿಷ್ಠಿರನು "ಭೀಮ! ಹದಿಮೂರು ವರ್ಷ ಮುಗಿದ ಮೇಲೆ ನೀನು ಹೇಳಿದಂತೆ ದುಷ್ಟರಾದ ಕೌರವರನ್ನು ದಂಡಿಸುತ್ತೇನೆ. ಇದರಲ್ಲಿ ಸಂದೇಹಬೇಡ. ನನ್ನೀ ಮಾತು ಸತ್ಯ! ನನ್ನ ಆಣೆಗೂ ಸತ್ಯ! ಪ್ರಜಾಜನರು, ಧಾರ್ಮಿಕರು 'ಧರ್ಮರಾಜನು ಹನ್ನೆರಡು ವರ್ಷ ವನವಾಸ, ಒಂದು ವರ್ಷ ಅಜ್ಞಾತವಾಸ ಮಾಡುವುದಾಗಿ ಹೇಳಿ ಈಗ ಅದಕ್ಕೆ ವಿರುದ್ಧರಾಗಿ ನಡೆದನು' ಎಂದು ನಿಂದಿಸಬಹುದು. ಆ ಅಪಕೀರ್ತಿಗೆ ನಾನು ಹೆದರಿದ್ದೇನೆ. ಆದ್ದರಿಂದ ಈಗಲೇ ಆ ಕಾರ್ಯಮಾಡೆಂದು ನೀನು ಹೇಳುವುದು ಉಚಿತವಲ್ಲ. ನಾನು ಶಪಥ ಮಾಡಿ ಹೇಳಿದರೂ ನೀನು ದುರ್ಯೋಧನಾದಿಗಳನ್ನೀಗಲೇ ದಂಡಿಸಲು ಯುದ್ಧಕ್ಕೆ ಹೊರಡು ಮುಂತಾಗಿ ಮಾತಿನಿಂದ ನನ್ನನ್ನು ನೋಯಿಸುತ್ತಿದ್ದೀಯೆ. ಹದಿಮೂರು ವರ್ಷ ಪೂರ್ಣವಾಗುವವರೆಗೆ ನೀನು ಹೇಳಿದಂತೆ ಮಾಡುವುದಿಲ್ಲ. ಪ್ರತಿಜ್ಞೆಯಂತೆ ಹದಿಮೂರು ವರ್ಷ ಕಳೆದ ಮೇಲೂ ನಾನು ನುಡಿದಂತೆ ನಡೆಯದಿದ್ದಲ್ಲಿ ಆಗ ನೀನು ನನ್ನ ಮಾತನ್ನು ಮೀರಿ ಹೋಗಿ ಶತ್ರುಗಳನ್ನು ನಾಶಪಡಿಸು!

ಆದರೆ ಈಗಲೇ ಯುದ್ಧ ಮಾಡೆಂದು ಮಾತ್ರ ಹೇಳಬೇಡ. ನನಗೆ ದುಃಖವನ್ನುಂಟು ಮಾಡಬೇಡ. ದ್ಯೂತಕ್ರೀಡೆಯ ಸಮಯದಲ್ಲಿಯೇ ನೀನು ನನ್ನನ್ನು ಅತಿಕ್ರಮಿಸಿ ಮುಂದುವರೆಯಬಹುದಾಗಿತ್ತು. ಆದರೆ ನೀನು ಹಾಗೆ ಮಾಡಲಿಲ್ಲ. ನಾನು ಪ್ರತಿಜ್ಞಾಬದ್ಧನಾದ ಮೇಲೆ ನೀನಿಂತು ಪೀಡಿಸುವುದು ತರವಲ್ಲ. ತಮ್ಮ, ನಾವೀಗ ಪೂರ್ಣಬಲಶಾಲಿಗಳಾಗಿಲ್ಲ. ಭೀಷ್ಮಾದಿಗಳು ಶಸ್ತ್ರಾರ್ಥವಿಶಾರದರು. ಯುದ್ಧದಲ್ಲಿ ಅವರನ್ನು ನಿವಾರಿಸಲು ಸಾಧ್ಯವಿಲ್ಲ. ಏಕೆಂದರೆ ಅವರು ಪೂಜ್ಯರು. ಆದುದರಿಂದಲೇ ಅವರೊಡನೆ ಬಾಹುಯುದ್ಧವೂ ಉಚಿತವಲ್ಲ. ಯದ್ಯಪಿ ನೀನು ಶಸ್ತ್ರಾರ್ಥಗಳನ್ನು ಚೆನ್ನಾಗಿ ಅರಿತಿದ್ದೀಯೆ. ಆದರೆ ನೀನು ಅಸ್ತ್ರಗಳನ್ನು ಎಲ್ಲಿಯೂ ಪ್ರಯೋಗಿಸುವುದಿಲ್ಲ. ಆದ್ದರಿಂದ ಅರ್ಜುನನು ಶಸ್ತ್ರಾರ್ಥ ವಿದ್ಯೆಯಲ್ಲಿ ಚೆನ್ನಾಗಿ ಪರಿಣಿತನಾಗಿ ಸಿದ್ಧನಾಗಲಿ. ಅಷ್ಟರಲ್ಲಿ ಹದಿಮೂರು ವರ್ಷದ ಗಡವೂ ಮುಗಿಯುವುದು. ಅನಂತರ ನಾವು ಯುದ್ಧ ಮಾಡೋಣ" ಎಂದನು.

ಅಣ್ಣನು ಮೃದುಮನದವನಾದ್ದರಿಂದ ಹದಿಮೂರು ವರ್ಷಗಳ ನಂತರವೂ ಪ್ರತಿಜ್ಞಾಭಂಗ ಭಯದಿಂದ ಯುದ್ಧ ಮಾಡಲು ಒಪ್ಪುವನೋ ಇಲ್ಲವೋ ಎಂಬ ಸಂಶಯ ಭೀಮನಿಗಿತ್ತು. ಅಂತೆಯೇ ಅವನು ಅಣ್ಣನಿಗೆ ಎದುರು ಹೇಳಲಿಲ್ಲ. 'ಹದಿಮೂರು ವರ್ಷ ಕಳೆದ ಮೇಲೆ ರಾಜ್ಯಸಂಪಾದನೆಗಾಗಿ ಯುದ್ಧಮಾಡುತ್ತೇನೆ' ಎಂದು ಧರ್ಮಜನಿಂದ ಪ್ರತಿಜ್ಞೆ ಮಾಡಿಸುವುದೇ ಭೀಮನ ಅಭಿಪ್ರಾಯವಾಗಿತ್ತು. ತನ್ನ ಕಾರ್ಯ ಸಫಲವಾದ್ದರಿಂದ ಭೀಮನು ಅಣ್ಣನ ಮಾತಿಗೆ ಪ್ರತಿಹೇಳದೆ ಮೌನವಹಿಸಿದನು.

ಆಗ ಧರ್ಮರಾಜನು "ಭೀಷ್ಮ-ದ್ರೋಣಾದಿಗಳನ್ನು ಜಯಿಸುವುದೆಂತು? ಭೀಮನು ಪ್ರಚಂಡಪರಾಕ್ರಮಿ ಮತ್ತು ಜಯಶೀಲನಾಗಿದ್ದರೂ ಅವನು ಪೂಜ್ಯರಾದ ಪಿತಾಮಹ-ದ್ರೋಣಾಚಾರ್ಯರುಗಳನ್ನು ನಿವಾರಿಸಲು ಇಚ್ಛಿಸುವುದಿಲ್ಲ. ಆದ್ದರಿಂದ ಅರ್ಜುನನ ಮೂಲಕವೇ ಈ ಕಾರ್ಯ ಸಾಧಿಸಬೇಕು. ಆಪತ್ಕಾಲದಲ್ಲಿ ಮಾತ್ರ ಭೀಮನು ಭೀಷ್ಮಾದಿಗಳನ್ನು ತಡೆಯುವನು. ಸರ್ವದಾ ಹಾಗೆ ಮಾಡುವುದಿಲ್ಲ. ಆದ್ದರಿಂದ ಅರ್ಜುನನಿಂದಲೇ ಈ ಕಾರ್ಯವಾಗಬೇಕು" ಎಂದು ಚಿಂತಿಸುತ್ತಾ ದುಃಖಿಸುತ್ತಿರಲು ಸರ್ವಜ್ಞರೂ, ಸರ್ವಶಕ್ತರೂ ಆದ ಶ್ರೀವೇದವ್ಯಾಸದೇವರು ಯುಧಿಷ್ಠಿರನ ಬಳಿಗೆ ಬಂದು ಸಮಾಧಾನಪಡಿಸಿ ಇಂತೆಂದರು - "ಧರ್ಮನಂದನ! ಭೀಷ್ಮ-ದ್ರೋಣಾದಿಗಳನ್ನು ಜಯಿಸಲು ಶಕ್ತನಾಗಲು ನಿನಗೆ ನಾನೊಂದು ಮಂತ್ರವನ್ನು ಉಪದೇಶಿಸುವನು. ನೀನು ಅರ್ಜುನನಿಗೆ ಉಪದೇಶಮಾಡು" ಎಂದು ಸಕಲದೇವತೆಗಳನ್ನು ಪ್ರತ್ಯಕ್ಷೀಕರಿಸಿಕೊಳ್ಳಲು ಸಾಧನವಾದ ಮಂತ್ರವನ್ನು ಉಪದೇಶ ಮಾಡಿದರು. ಅರ್ಜುನನಿಗೇ ತಾವು ಸ್ವತಃ ಉಪದೇಶಿಸಿದರೆ ಅವನಿಗೆ ಫಲಾಧಿಕ್ಯವಾಗುವುದೆಂಬ ಭಾವದಿಂದ ಸ್ವತಃ ಉಪದೇಶ ಮಾಡದೇ ಧರ್ಮರಾಜನ ಮೂಲಕ ಮಾಡಿಸಿದರು.

ವೇದವ್ಯಾಸರು ನಿರ್ಗಮಿಸಿದ ಮೇಲೆ ಧರ್ಮರಾಜನು ಧನಂಜಯನಿಗೆ ರಹಸ್ಯದಲ್ಲಿ ವ್ಯಾಸರು ತನಗೆ ಅನುಗ್ರಹಿಸಿದ ಮಂತ್ರವನ್ನು ಉಪದೇಶ ಮಾಡಿದನು. ಅರ್ಜುನನು ಅಗ್ರಜರಾದ ಯುಧಿಷ್ಠಿರ ಮತ್ತು ಭೀಮಸೇನನಿಗೆ ಅಭಿನಮಿಸಿ ನಕುಲ-ಸಹದೇವರನ್ನು ಆಲಂಗಿಸಿ ಅವರಿಂದ ಬೀಳ್ಕೊಂಡು, ಇಂದ್ರಕೀಲ ಪರ್ವತಕ್ಕೆ ಬಂದು ಅಲ್ಲಿರುವ ಶ್ರೀಶಂಕರನಲ್ಲಿ ಅಂತರ್ಗತನಾದ ಶ್ರೀಹರಿಯನ್ನು ಸ್ಮರಿಸುತ್ತ ತಪಸ್ಸು ಮಾಡಹತ್ತಿದನು. ಹೀಗೆ ಆರುಮಾಸಗಳು ಉರುಳಿದವು. ಆಗೊಂದು ದಿನ ಮೂಕನೆಂಬ ಅಸುರನು ಅರ್ಜುನನನ್ನು ಸಂಹರಿಸಬೇಕೆಂದು ಬಯಸಿ ವರಾಹರೂಪವನ್ನು ಧರಿಸಿ ಧಾವಿಸಿ ಬಂದನು. ಅರ್ಜುನನು ಆ ವರಾಹವು ಅಸುರನೆಂದರಿತು ಗಾಂಡೀವವನ್ನು ಸಜ್ಜುಗೊಳಿಸಿ ವಜ್ರಸದೃಶವಾದ ಬಾಣಗಳನ್ನು ಹಂದಿಯ ರೂಪದ ಮೂಕಾಸುರನ ಮೇಲೆ ಪ್ರಯೋಗಿಸಿದನು. ಅದೇ ಕಾಲಕ್ಕೆ ಶಿವನು ಕಿರಾತರೂಪಧರಿಸಿ ಪಾರ್ವತಿಯೊಡನೆ ಅಲ್ಲಿಗೆ ಬಂದು ಮೂಕಾಸುರನ ಮೇಲೆ ತಾನೂ ಬಾಣಬಿಟ್ಟನು. ಅವರಿಬ್ಬರ ಶರಾಹತಿಯಿಂದ ವರಾಹರೂಪದ ಮೂಕಾಸುರನು ಮೃತನಾದನು. ಆಗ ಹಂದಿಯನ್ನು ನಾನು ಕೊಂದೆ, ತಾನು ಕೊಂದೆ ಎಂದು ಅರ್ಜುನ ಕಿರಾತರೂಪದ ಶಂಕರರು

ವ್ಯಾಜ್ಯಮಾಡಹತ್ತಿದರು. ಶಂಕರನು "ನೀನು ಹಂದಿಯನ್ನು ಕೊಂದಿದ್ದಲ್ಲಿ ಅದನ್ನು ನನ್ನೊಡನೆ ಯುದ್ಧ ಮಾಡಿ ಸ್ಥಾಪಿಸು" ಎನಲು ಅವರೀರ್ವರಲ್ಲಿ ಯುದ್ಧ ಪ್ರಾರಂಭವಾಯಿತು. ಫಲ್ಗುಣನು ಪ್ರಯೋಗಿಸಿದ ಎಲ್ಲ ಶಸ್ತ್ರ-ಅಸ್ತ್ರಗಳನ್ನು ಶಂಕರನು ನುಂಗಿಬಿಟ್ಟನು. ಕುಪಿತನಾದ ಅರ್ಜುನನು ಗಾಂಡೀವದಿಂದ ಗಿರಿಜಾಪತಿಯನ್ನು ಹೊಡೆದನು. ಶಂಕರನು ಆ ಗಾಂಡೀವವನ್ನೂ ನುಂಗಿಬಿಟ್ಟು ನಗಲಾರಂಭಿಸಿದನು. ಅನಂತರ ಅವರೀರ್ವರಲ್ಲಿ ಬಾಹುಯುದ್ಧವು ಪ್ರಾರಂಭವಾಯಿತು. ರುದ್ರದೇವನು ಅರ್ಜುನನನ್ನು ಮರ್ದಿಸಿ ಗುಂಡಗೆ ಉಂಡೆಯಂತೆ ಮಾಡಿ ಎತ್ತೆಸೆದನು. ಶಿವನಿಂದ ಪೀಡಿತನಾದ ಫಲ್ಗುಣನು ಮೂರ್ಛೆ ತಾಳಿದನು.

ಶ್ರೀಕೃಷ್ಣನು ಪೂರ್ವದಲ್ಲಿ 'ನಾನು ಭೂಮಿಯಲ್ಲಿ ಇರುವವರೆಗೆ ಯಾರೂ ಅರ್ಜುನನನ್ನು ಜಯಿಸಲಾರರು' ಎಂದು ಅವನಿಗೆ ವರ ಕೊಟ್ಟಿದ್ದನಷ್ಟೇ? ಆದರೂ ಫಲ್ಗುಣನು ಶಿವನಿಂದ ಹೇಗೆ ಸೋತನು? ಎಂದರೆ ಹಿಂದೆ ರುದ್ರದೇವರು ಗರುಡಧ್ವಜನಾದ ಶ್ರೀಹರಿಯನ್ನು "ದೇವ! ನನಗಿಂತ ಅಮರರಾದ ಇಂದ್ರಾದಿಗಳಿಗೆ ಅಜೇಯತ್ವವರವನ್ನು ಕೊಟ್ಟಿದ್ದೀಯೆ. ನಿನ್ನ ಅನುಗ್ರಹದಿಂದ ಅವರು ಅಜೇಯರೂ, ವಿಜಯಶೀಲರೂ ಆಗುವರು. ಆದ್ದರಿಂದ ಪ್ರಭು! ನನಗೂ ಸಹ ಇಂದ್ರಾದಿಗಳನ್ನು ಜಯಿಸುವಂತೆ ವರವನ್ನು ಕರುಣಿಸು" ಎಂದು ಪ್ರಾರ್ಥಿಸಿದ್ದನು. ಶ್ರೀಹರಿಯೂ ಶಿವನಿಗೆ ಅದರಂತೆ ವರಪ್ರದಾನ ಮಾಡಿದ್ದನು. ಈಗ ಆ ವರದ ಪ್ರಭಾವದಿಂದ ಶಂಕರನು ಪಾರ್ಥನನ್ನು ಜಯಿಸಿದನು ಎಂದು ತಿಳಿಯಬೇಕು.

ಶ್ರೀವೇದವ್ಯಾಸರು ಅರ್ಜುನನಿಗೆ ಶ್ರೇಷ್ಠವಾದ ವೈಷ್ಣವ ಮಂತ್ರಗಳನ್ನು ಉಪದೇಶಿಸಲಿಲ್ಲ. ಭೀಷ್ಮಾದಿಗಳನ್ನು ಎದುರಿಸಿ ಗೆಲ್ಲಲು ಇಷ್ಟೇ ಸಾಕು. ನಾನೇ ಸ್ವತಃ ಪಾರ್ಥನಿಗೆ ಜಯಪ್ರದಗಳಾದ ಮಹತ್ವಪೂರ್ಣ ವೈಷ್ಣವ ಮಂತ್ರಗಳನ್ನು ಉಪದೇಶಿಸಿದರೆ ಅತ್ಯಂತ ಅಭಿವೃದ್ಧನಾಗಿ ಇವನು ಗರ್ವಿಷ್ಠನಾಗುವನು. ಹಾಗೆ ಆಗಬಾರದೆಂದು ವೈಷ್ಣವ ಮಂತ್ರವನ್ನು ಉಪದೇಶಿಸದೇ, ಶ್ರೀವಿಷ್ಣುದೇವತಾಕವಾದ, ರುದ್ರನು ಋಷಿಯಾಗಿರುವ ದೇವತಾಪ್ರತ್ಯಕ್ಷೀಕರಣಮಂತ್ರವನ್ನು ಧರ್ಮರಾಜನಿಗಿತ್ತು ಅವನಿಂದ ಅರ್ಜುನನಿಗೆ ಉಪದೇಶ ಮಾಡಿಸಿದ್ದರು.

ಇತ್ತ ಅರ್ಜುನನು ಮೂರ್ಛೆಯಿಂದೆಚ್ಚೆತ್ತು ತನಗೆ ಜಯವಾಗಬೇಕೆಂದು ವೇದವ್ಯಾಸರು ಧರ್ಮಜನಿಂದ ತನಗೆ ಉಪದೇಶ ಮಾಡಿಸಿದ್ದ ಮಂತ್ರದಿಂದ ಶಂಕರನನ್ನು ಆರಾಧಿಸಿದನು. ಅವನು ಶಿವಲಿಂಗವನ್ನು ಪೂಜಿಸುತ್ತಾ ಹೂವುಗಳಿಂದ ಅರ್ಚಿಸುತ್ತಿರಲು ಆ ಹೂವುಗಳೆಲ್ಲವೂ ಕಿರಾತರೂಪಿ ಶಂಕರನ ಶಿರದಲ್ಲಿ ಶೋಭಿಸಹತ್ತಿತ್ತು. ಆಗ ಪಾರ್ಥನು ಕಿರಾತರೂಪಿಯೇ ಶಂಕರನೆಂದು ಮನಗಂಡು ಅವನಿಗೆ ಸಾಷ್ಟಾಂಗವೆರಗಿದನು. ಶ್ರೀರುದ್ರದೇವರು ನಿಜರೂಪದಿಂದ ಸತೀಸಹಿತವಾಗಿ ಅರ್ಜುನನಿಗೆ ದರ್ಶನವಿತ್ತು ಆಶೀರ್ವದಿಸಿ, ಆತ್ಮಪೂರ್ವವಾದ ಪಾಶುಪತಾಸ್ತ್ರವನ್ನು ಕರುಣಿಸಿದರು. ವಿಷ್ಣುವು ದೇವತೆ-ಯಾಗಿಯೂ, ರುದ್ರದೇವನೇ ಋಷಿಯಾಗಿಯೂ ಇರುವ ಆ ಅಸ್ತ್ರವನ್ನು ರುದ್ರದೇವರು ಸಾಧಿಸಿದ್ದರು. ಆದ್ದರಿಂದ ಆ ಅಸ್ತ್ರಕ್ಕೆ ಪಾಶುಪತಾಸ್ತ್ರವೆಂದು ಹೆಸರು ಬಂದಿತ್ತು. ಅದನ್ನೇ ರುದ್ರದೇವರೀಗ ಫಲ್ಗುಣನಿಗೆ ಕರುಣಿಸಿದರು. ಅನಂತರ ಅಲ್ಲಿಗೆ ಬಂದ ಉಳಿದ ಸಮಸ್ತದೇವತೆಗಳೂ ಸ್ವ-ಸ್ವದೇವತಾಕಗಳಾದ ಅಂದರೆ ತಾವು ತಾವು ದೇವತೆಯಾಗಿರುವ ತಮ್ಮ ತಮ್ಮ ಅಸ್ತ್ರಗಳನ್ನು ಅರ್ಜುನನಿಗೆ ಉಪದೇಶ ಮಾಡಿ ಅನುಗ್ರಹಿಸಿದರು.

ಆ ತರುವಾಯ ಇಂದ್ರನು ಅರ್ಜುನನ ಬಳಿಗೆ ಬಂದು "ವತ್ಸ! ನೀನು ರುದ್ರನಲ್ಲಿರುವ ಪರಬ್ರಹ್ಮಸ್ವರೂಪನಾದ ವಿಷ್ಣುವನ್ನು ಆರಾಧಿಸಿ ಸಂತೋಷಪಡಿಸಿದ್ದೀಯೆ. ಇದರಿಂದ ನಾನು ಪ್ರೀತನಾಗಿದ್ದೇನೆ. ನೀನು ನನ್ನ ಲೋಕಕ್ಕೆ ಬಾ, ನಿನಗೆ ರಥವನ್ನು ಕಳುಹುವೆ"ನೆಂದು ಹೇಳಿ ಸ್ವರ್ಗಕ್ಕೆ ತೆರಳಿ, ಮಾತಲಿಯೊಡನೆ ರಥವನ್ನು ಕಳಿಸಿದನು. ಮಾತಲಿಯು ಫಲ್ಗುಣನನ್ನು ರಥದಲ್ಲಿ ಕೂಡಿಸಿಕೊಂಡು ಸ್ವರ್ಗಕ್ಕೆ ಕರೆದೊಯ್ದನು. ಅಲ್ಲಿ ಎಲ್ಲ ದೇವತೆಗಳಿಂದ ಸನ್ಮಾನಿತನಾದ ಅರ್ಜುನನನ್ನು ದೇವೇಂದ್ರನು

ತನ್ನ ಸಿಂಹಾಸನದಲ್ಲಿ ಮಂಡಿಸಿದನು. ಅರ್ಜುನನು ಇಂದ್ರನೊಡನೆ ಸಿಂಹಾಸನದಲ್ಲಿ ಕುಳಿತುಕೊಂಡನು. ತನ್ನ ಎರಡನೆಯ ಶರೀರನೇ (ಅಂಶನೇ) ಆದ ಕುರುಕುಲಾವತಂಸನಾದ ಅರ್ಜುನನನ್ನು ಸುರಪತಿಯು ಆಲಂಗಿಸಿ ಅವನ ವದನಾರವಿಂದ ನಿರೀಕ್ಷಣರತನಾದನು. ಅರ್ಜುನನಾದರೂ ಇಂದ್ರನ ಮುಖವನ್ನು ನೋಡುತ್ತಾ ಪರಮಾನಂದತುಂದಿಲನಾದನು. ಇಂತು ಫಲ್ಗುಣನು ಅಮರ ಲೋಕದಲ್ಲಿ ಐದು ವರ್ಷಗಳ ಕಾಲ ವಾಸಮಾಡಿದನು. ದೇವೇಂದ್ರನು ಧನಂಜಯನಿಗೆ ದಿವ್ಯವಾದ ಅನೇಕ ಮಹತ್ವಪೂರ್ಣ ಅಸ್ತ್ರಗಳನ್ನು ಉಪದೇಶ ಮಾಡಿದನು. ಸ್ವರ್ಗದ ಊರ್ವಶಿಯು ಅರ್ಜುನನ ರೂಪ-ಲಾವಣ್ಯ-ಸೌಂದರ್ಯ-ಗಾಂಭೀರ್ಯಾದಿಗಳನ್ನು ಕಂಡು ಮೋಹಿತಳಾಗಿ ತನ್ನನ್ನು ಕಾಮಿಸಿ ಸಂತೋಷಪಡಿಸುವಂತೆ ಅರ್ಜುನನನ್ನು ಕೋರಿದಾಗ ಅವನು ತಾನು ಮಾನವನೆಂದು ಭಾವಿಸಿ ಅವಳನ್ನು ನಿರಾಕರಿಸಿದನು. ಅವಳು ತನಗೆ ತಾಯಿಯ ಸಮಾನಳೆಂದು ಭಾವಿಸಿ, ಹಿಂದೆ ಅವಳು ಪುರೂರವನ ಪ್ರಿಯಕರಳಾಗಿದ್ದುದರಿಂದ" ಪುರೂರವನ ವಂಶಾಕರಿಗೆ ಅವಳು ತಾಯಿ ಸಮಾನ-ಳೆಂದು ತಿಳಿದು, ಊರ್ವಶಿಯ ಬೇಡಿಕೆಯನ್ನು ನಿರಾಕರಿಸಿದನು. ಅದರಿಂದ ಕುಪಿತಳಾದ ಊರ್ವಶಿಯು "ಅರ್ಜುನ, ನೀನು ಷಂಡ(ನಪುಂಸಕ)ನಾಗು" ಎಂದು ಶಪಿಸಿದಳು. ಈ ವಿಚಾರವರಿತ ಧೃಷ್ಟುವಾದ್ದರಿಂದ ಅಂದರೆ ಶಾಪವನ್ನು ತಡೆಯುವ ಸಾಮರ್ಥ್ಯಶಾಲಿಯಾದ್ದರಿಂದ ಇಂದ್ರದೇವನು ಅವನಲ್ಲಿ ಅನುಗ್ರಹಮಾಡಿ "ವತ್ಸ, ನೀನು ಒಂದು ವರ್ಷಕಾಲ ನಪುಂಸಕನಾಗಿರು. ಅದೂ ನೀನು ಬಯಸಿದಾಗ. ಒಂದು ವರ್ಷ ಕಳೆದ ಮೇಲೆ ನಿನ್ನ ಷಂಡತ್ವವು ಹೋಗಿ ಮೊದಲಿನಂತೆಯೇ ಆಗುತ್ತೀಯೇ" ಎಂದು ಶಾಪರೂಪ ವರವಿತ್ತನು. ತರುವಾಯ ಅರ್ಜುನನು ಮುಂದೆ ತನಗೆ ಸಹಾಯಕವಾಗಲೆಂದು ಚಿತ್ರಸೇನನೆಂಬ ಗಂಧರ್ವನಿಂದ 'ಗಂಧರ್ವವಿದ್ಯೆ' (ಸಂಗೀತ-ನೃತ್ಯಾದಿ ಕಲೆಗಳು)ಯನ್ನು ಅಭ್ಯಾಸ ಮಾಡಿದನು ಮತ್ತು ಸುರಾಧಿಪನಾದ ಇಂದ್ರನಿಂದ ಅನೇಕ ದಿವ್ಯಾಸ್ತ್ರಗಳನ್ನು ಕಲಿಯುತ್ತಾ ಆನಂದದಿಂದ ಸ್ವರ್ಗದಲ್ಲಿ ವಾಸಮಾಡಿದನು.

ಇತ್ತ ವಾಸುದೇವನು ಸುಭದ್ರಾ-ಅಭಿಮನ್ಯುಗಳೊಡನೆ ದ್ವಾರಕಾನಗರಕ್ಕೆ ಬಂದಮೇಲೆ ಕೆಲದಿನಗಳ ತರುವಾಯ ಒಂದು ದಿನ ಹೀಗೆ ಚಿಂತಿಸಿದನು "ಹಿಂದೆ ನಾನು ಶಂಕರನಿಗೆ ಅಸುರಜನರನ್ನು ಮೋಹಗೊಳಿಸಲು 'ನಾನು ನಿನ್ನಿಂದ ವರವನ್ನು ಪಡೆಯುವೆ'ನೆಂದು ಅವನಿಗೆ ವರವನ್ನು ಕೊಟ್ಟಿದ್ದೆನು. ಮತ್ತು ರುದ್ರದೇವ! ದ್ವಾಪರಾದಿಯಲ್ಲಿ ಮಾನವನಾಗಿ ಜನಿಸಿ ನಿನ್ನನ್ನು ಆರಾಧಿಸಿ ನಿನ್ನಿಂದ ವರವನ್ನು ಪಡೆಯುತ್ತೇನೆ. ನೀನೇ ಶ್ರೇಷ್ಠನೆಂದು ಶೈವಾಗಮವನ್ನು ರಚಿಸಿ ಪ್ರಚುರಪಡಿಸು. ದುಷ್ಟಜನರು ನನ್ನಿಂದ ವಿಮುಖರಾಗುವಂತೆ ಮಾಡು. ನನ್ನಿಂದ ವಿಮುಖರಾಗಿ ಅಧೋಲೋಕಕ್ಕೆ ತೆರಳುವರು. ಅದರಿಂದ ನನ್ನ ಅಸುರ ಸೃಷ್ಟಿಯು ಊರ್ಧ್ವಲೋಕಕ್ಕೆ ಹೋಗಬೇಕಾದವರು ಅಧೋಲೋಕಕ್ಕೆ ಹೋಗುವುದರಿಂದ ಸಾರ್ಥಕವಾಗುವುದು. ನನ್ನ ಶ್ರೇಷ್ಠತ್ವವನ್ನು ಮರೆಮಾಚಿ ನಿನ್ನ ಸರ್ವೋತ್ತಮತ್ವವನ್ನು ಪ್ರಚಾರಮಾಡು. ನನ್ನಿಂದ ವಿಮುಖರಾದವರು ಅಧೋಲೋಕಕ್ಕೆ ತೆರಳಲಿ!" ಎಂದು ಹೇಳಿದ್ದನ್ನು ಸ್ಮರಿಸಿಕೊಂಡನು. ಶ್ರೀಹರಿಯ ಅಭಿಪ್ರಾಯವನ್ನು ಚೆನ್ನಾಗಿಬಲ್ಲ ರುಕ್ಮಿಣಿಯು (ತನಗಾಗಲೇ ಪುತ್ರನು ಜನಿಸಿದ್ದರೂ) ವಾಸುದೇವನ ಪ್ರೀತ್ಯರ್ಥವಾಗಿ ಪುತ್ರನನ್ನು ಪಡೆಯುವ ಆಶಯವನ್ನರಿತು. "ಸ್ವಾಮಿ, ನನಗೆ ಅತ್ಯಂತ ಬಲಶಾಲಿಯೂ ಸಕಲ ಅಸ್ತ್ರವಿದ್ಯೆಗಳಲ್ಲಿ ಶ್ರೇಷ್ಠನೂ ಆದ ಮಗನಾಗಬೇಕು" ಎಂದಳು. ಪ್ರಿಯಸತಿಯ ಮನೋಗತವನ್ನು ಪೂರ್ಣ ಮಾಡಲೋ ಎಂಬಂತೆ ಶ್ರೀಕೃಷ್ಣನು ಗರುಡಸ್ಕಂಧಾರೂಢನಾಗಿ ತನಗೆ ಪ್ರಿಯವಾದ (ತನ್ನದಾದ) ಬದರಿಕಾಶ್ರಮಕ್ಕೆ ದಯಮಾಡಿಸಿದನು. (ಇದರಿಂದ ತನಗೂ ವೇದವ್ಯಾಸರಿಗೂ ಐಕ್ಯ ಹೇಳಿದಂತಾಯಿತು ಎಂದು ತಿಳಿಯಬೇಕು).

ಇದು ಅಸುರಜನರನ್ನು ಮೋಹಗೊಳಿಸಲು ಶ್ರೀವಾಸುದೇವನಾಡಿದ ಆಟವೆಂಬುದನ್ನು ಸ್ಪಷ್ಟಪಡಿಸಲು ನಿರ್ಣಯಾಚಾರ್ಯರು ವರಾಹಪುರಾಣ ವಚನವನ್ನು ನಿರೂಪಿಸುತ್ತಾರೆ.

---

35. "ಹಯೇ ಜಾಯೇ ಮನಸಾ ತಿಷ್ಠ ಘೋರೇ" ಇತ್ಯಾದಿ ಶ್ರುತಿಗಳಿಂದ ಊರ್ವಶಿಯು ಪುರೂರವನ ಪತ್ನಿ ಎಂದು ಪ್ರಸಿದ್ಧವಾಗಿದೆ.

"ಏಷ ಮೋಹಂ ಸೃಜಾಮ್ಯಾಶು । ಯೋ ಜನಾನ್ ಮೋಹಯಿಷ್ಯತಿ ॥ ತ್ವಂ ಚ ರುದ್ರ ಮಹಾಬಾಹೋ । ಮೋಹ-ಶಾಸ್ತ್ರಾಣಿ ಕಾರಯ ॥ ಅತಥ್ಯಾನಿ ವಿತಥ್ಯಾನಿ । ದರ್ಶಯಸ್ವ ಮಹಾಭುಜ ॥ ಪ್ರಕಾಶಂ ಕುರು ಚಾಽತ್ಮಾನಂ । ಅಪ್ರಕಾಶಂ ಚ ಮಾಂ ಕುರು ॥ ಅಹಂ ತ್ವಾಂ ಪೂಜಯಿಷ್ಯಾಮಿ । ಲೋಕಸಮ್ಮೋಹನೋತ್ಸುಕಃ ॥ ತಮೋಽಸುರಾ ನಾನ್ಯಥಾಹಿ । ಯಾಂತೀತ್ಯೇತನ್ಮತಂ ಮಮ ॥" – ಮಹಾಬಾಹುಶಾಲಿಯಾದ ಎಲೈ ರುದ್ರದೇವ! ನಾನೀಗ ಬೇಗ ಮೋಹವನ್ನು ಸೃಜಿಸುವೆನು. ಅದು ದುರ್ಜನರನ್ನು ಮೋಹಗೊಳಿಸುವುದು. ಅದಕ್ಕೆ ತಕ್ಕಂತೆ ನೀನು ಮೋಹಕವಾದ ಪಾಶುಪತಾದಿ ಶಾಸ್ತ್ರಗಳನ್ನು ರಚಿಸು. ಅಂದರೆ ದಧೀಚಿ ಮುಂತಾದ ಋಷಿಮುನಿಗಳಿಂದ ರಚನೆ ಮಾಡಿಸು. ಫಲಪ್ರದವಲ್ಲದ ಸುಳ್ಳು ವಿಚಾರಗಳನ್ನು ಪ್ರಕಾಶಪಡಿಸು. ವಿಪರೀತಾರ್ಥಗಳಾದ ಅಂದರೆ ಸರ್ವೋತ್ತಮನಾದ ಸರ್ವತಂತ್ರನಾದ ನಾರಾಯಣನ (ನನ್ನ) ಸರ್ವೋಪಾಸ್ಯತ್ವ-ಸರ್ವಸ್ವತಂತ್ರತ್ವಾದಿ ಸತ್ತತ್ವಗಳನ್ನು ಮರೆಮಾಚಿ (ಅಪ್ರಸಿದ್ಧಗೊಳಿಸಿ) ನೀನೇ ಶ್ರೇಷ್ಠದೇವತೆಯೆಂದು ಪ್ರಕಾಶಗೊಳಿಸು. ನನ್ನ ಸರ್ವೋತ್ತಮತ್ವವನ್ನು ಮರೆಮಾಚು, ನಾನು ಲೋಕವನ್ನು (ಅಸುರಜನರನ್ನು) ಮೋಹಗೊಳಿಸಲಿಚ್ಛಿಸಿ ನಿನ್ನನ್ನು ಪೂಜಿಸುತ್ತೇನೆ. ಆದರಿಂದ ಅಸುರರು ತಮಸ್ಸಿಗೆ ಹೋಗಿಯೇ ತೀರುವರು ಎಂದು ನನ್ನ ಆಶಯವು" ಹೀಗೆ ಹಿಂದೆ ರುದ್ರನಿಗೆ ವರ ಕೊಟ್ಟಿರುವುದನ್ನು ಸತ್ಯವನ್ನಾಗಿ ಮಾಡಲು ಶ್ರೀಕೃಷ್ಣನು ಬದರಿಕಾಶ್ರಮಕ್ಕೆ ಬಂದನು. ಶ್ರೀಹರಿಯನ್ನು ಕಂಡು ಎಲ್ಲವನ್ನೂ ತಿಳಿದಿರುವ ಸಕಲಮುನಿಗಳು ಆ ಪ್ರಭುವನ್ನು ಪೂಜಿಸಿದರು. ಅಂದು ರಾತ್ರಿ ಕೃಷ್ಣನು ಋಷಿಮುನಿಗಳ ಮಧ್ಯೆ ಕುಳಿತಿರುವಾಗ ಗೌರೀವಲ್ಲಭನಿಂದ ಕಳುಹಿಸಲ್ಪಟ್ಟ ಘಂಟಾಕರ್ಣ ಮತ್ತು ಕರ್ಣ ಎಂಬ ಎರಡು ಪಿಶಾಚಿಗಳು ಅಲ್ಲಿಗೆ ಬಂದವು. ರುದ್ರದೇವನು ಶ್ರೀಕೃಷ್ಣದರ್ಶನದಿಂದ ನಿಮ್ಮ ಪಿಶಾಚಜನ್ಮವು ನಿವೃತ್ತಿಯಾಗುವುದೆಂದು ಹೇಳಿಕಳಿಸಿದ್ದನು. ಆ ಘಂಟಾಕರ್ಣ-ಕರ್ಣರೆಂಬ ಆ ಪಿಶಾಚಿಗಳು ಕೃಷ್ಣದರ್ಶನಕ್ಕಾಗಿ ದ್ವಾರಕೆಗೆ ಹೊರಟು ಮಾರ್ಗ ಮಧ್ಯದಲ್ಲಿ ಬದರಿಯಲ್ಲಿ ಮುನಿಗಳ ಮಧ್ಯೆ ವಿರಾಜಿಸಿರುವ ಕೃಷ್ಣನನ್ನು ಕಂಡು ಅವನೇ ಕೃಷ್ಣನೆಂದು ಅರಿಯದೆ ಸ್ವಜಾತಿ ಚೈಷ್ಟೆಗಳನ್ನು ಮಾಡಿ, ನಂತರ ಧ್ಯಾನದಿಂದ ತಮ್ಮ ಹೃದಯದಲ್ಲಿ "ಅರಿಶಂಖವರಾಭಯಾನಿ ದೋರ್ಭಿರ್ದಧಾನಂ" ಎಂಬ ಕೃಷ್ಣಧ್ಯಾನದಿಂದ ಶ್ರೀಕೃಷ್ಣನನ್ನು ಕಂಡು ಮುನಿಗಳ ಮಧ್ಯೆ ಕುಳಿತಿರುವವನೂ ಹೃದಯದಲ್ಲಿರುವವನೂ ಶ್ರೀಕೃಷ್ಣ ಎಂದು ತಿಳಿದು ಕುತೂಹಲದಿಂದ ಶ್ರೀ ವಾಸುದೇವ ಕೃಷ್ಣನಿಗೆ ಬಹುಪ್ರಕಾರವಾಗಿ ನಮಸ್ಕರಿಸಿ, ಮಾಹಾತ್ಮ್ಯಜ್ಞಾನಪೂರ್ವಕವಾಗಿ ಸ್ತೋತ್ರ ಮಾಡಿದವು. ಅವರಲ್ಲಿ ಪ್ರಸನ್ನನಾದ ಭಗವಾನ್ ಶ್ರೀಕೃಷ್ಣನು ಅವರಿಬ್ಬರನ್ನೂ ಸ್ಪರ್ಶಿಸಿ ಕ್ಷಣಮಾತ್ರದಲ್ಲಿ ಅವರನ್ನು ದಿವ್ಯರೂಪ, ಸುಸ್ವರ ಸಂಪನ್ನರಾದ ಗಂಧರ್ವರನ್ನಾಗಿ ಮಾಡಿ ಪೊರೆದನು. ತಮ್ಮನ್ನು ಉದ್ಧರಿಸಿದ ಶ್ರೀಕೃಷ್ಣನನ್ನು ಆನಂದಗೊಳಿಸಲು ಅವರು ನೃತ್ಯಸಂಗೀತ, ಸ್ತೋತ್ರಾದಿಗಳಿಂದ ಮಾಧವನನ್ನು ಪೂಜಿಸಿ ಮುದಗೊಳಿಸಿದರು.

ಆ ಬಳಿಕ ಪ್ರಭುವಾದ ಕೃಷ್ಣನು ಕೈಲಾಸಪರ್ವತಕ್ಕೆ ಬಂದು ಅಲ್ಲಿ ತಪಸ್ಸನ್ನಾಚರಿಸುವವನಂತೆ ನಟಿಸಿದನು. ಕೃಷ್ಣನು ತನ್ನ ನಿತ್ಯವಾದ ಜ್ಞಾನಸ್ವರೂಪಾನಂದಾದಿ ಗುಣಗಳನ್ನು ಅನುಭವಿಸುತ್ತಾ ಅಂದರೆ ತನ್ನನ್ನು ತಾನೇ ಧ್ಯಾನಿಸುತ್ತಾ ತಪಸ್ಸು ಮಾಡುತ್ತಾ ತೋರಿಕೆಗೆ ಶಂಕರನನ್ನು ಕುರಿತು ತಪವನ್ನೆಸಗುವವನಂತೆ ದುರ್ಜನರನ್ನು ಮೋಹಗೊಳಿಸಹತ್ತಿದನು. ಪೂರ್ವದಲ್ಲಿ "ಲೋಕ ಮೋಹನಾರ್ಥವಾಗಿ, ದೇವತೆಗಳು ಜ್ವರರಹಿತರಾಗುವಂತೆ ಮಾಡಲೂ, ನಾನು ನಿನ್ನನ್ನು ಕುರಿತು ಹನ್ನೆರಡು ವರ್ಷಗಳ ಕಾಲ ತಪಸ್ಸನ್ನಾಚರಿಸುವೆನು. ದೇವತೆಗಳು ಕಿಲ್ಬಿಷರಹಿತರಾಗಲಿ" ಎಂದು ಶಂಕರನಿಗೆ ಹೇಳಿದ್ದಂತೆ ಈಗ ಒಂದೇ ದಿನದಲ್ಲಿ ಅದನ್ನು ನೆರವೇರಿಸಿದನು. ಒಂದೇ ದಿನ ಹನ್ನೆರಡು ವರ್ಷ ಹೇಗಾಯಿತು? ಎಂದರೆ – ಒಂದೇ ದಿನವು ಹನ್ನೆರಡು ದಿನವಾಗುವುದಕ್ಕಾಗಿ ಹನ್ನೆರಡು ರಾಶಿಗಳಲ್ಲಿ ಶೀಘ್ರವಾಗಿ ಚಲಿಸುವಂತೆ ಬೃಹಸ್ಪತಿಗೆ ಆ ದೇವನು ಆಜ್ಞಾಪಿಸಿದನು. ಹರಿಯ ಆಜ್ಞೆ ಹಾಗೂ ಇಚ್ಛೆಯಂತೆ ಬೃಹಸ್ಪತಿಯು ಮೇಷಾದಿ ಹನ್ನೆರಡು ರಾಶಿಗಳಲ್ಲಿ ಶೀಘ್ರವಾಗಿ ಸಂಚರಿಸಿದನು. ಆದರಿಂದ ಒಂದು ದಿನವೇ ಹನ್ನೆರಡು ವರ್ಷಗಳಾದವು. ಒಂದೇ ದಿನದಲ್ಲಿ ಭಗವಾನ್ ಕೃಷ್ಣನು ಒಂದೊಂದು ರಾಶಿಯು ಒಂದೊಂದು ಸಂವತ್ಸರ-ವಾಗುವಂತೆ ಮಾಡಿ ವ್ರತನಿಯಮ-ಉಪವಾಸಾದಿಗಳನ್ನು ಕಲ್ಪಿಸಿಕೊಂಡು ಭಕ್ತರಿಗೆ ಹನ್ನೆರಡು ವರ್ಷದ ವ್ರತದ ಫಲಪ್ರಾಪ್ತಿಗಾಗಿ

ತನ್ನ ಮನದ ಅನುಸಾರವಾಗಿಯೇ 150 ಶ್ವಾಸಕಾಲಗಳಿಂದ ಮಾಸವೆಂಬ ವ್ರತವನ್ನು ಕಲ್ಪಿಸಿಕೊಂಡು ನೆರವೇರಿಸಿದನು. ಗರುಡನೇ ಮೊದಲಾದ ಹರಿಯ ಕಿಂಕರರು ಅಲ್ಲಿಗೆ ಬಂದು ಅವನ ಪರಿಚರ್ಯೆ ಮಾಡಿದರು. ಶ್ರೀ ಜನಾರ್ದನನು ಪಾಪಿಗಳಾದ ಅಸುರರು ತಾನು ಶಿವನಿಗಾಗಿ ತಪವನ್ನೆಸಗಿದನೆಂದು ತಿಳಿಯುವಂತೆ ಮಾಡಿ ಹೋಮಾದಿ ಸತ್ಕರ್ಮಗಳನ್ನು ತನಗಾಗಿಯೇ ನೆರವೇರಿಸಿದನು.

ಅಲ್ಲಿ ತಪೋನಿರತನಾದ ತಾವರೆಗಣ್ಣಿನ ಶ್ರೀಕೃಷ್ಣನ ದರ್ಶನಾರ್ಥವಾಗಿ ಬ್ರಹ್ಮ-ಇಂದ್ರಾದಿ ಅಮರರು, ಸನಕ-ಸನಂದನಾದಿ ಯೋಗಿ ಶ್ರೇಷ್ಠರು, ದಕ್ಷ ಪ್ರಜಾಪತಿ ಮೊದಲಾದ ಪ್ರಜೇಶ್ವರರು, ಅಗ್ನಿಕವ್ಯವಾಹನಾದಿ ಪಿತೃಗಳು, ಮುನೀಂದ್ರ ಸಮುದಾಯ, ಬ್ರಹ್ಮನವಾಹನವಾದ ಹಂಸಾದಿಗಳು, ಗಂಧರ್ವ-ಯಕ್ಷ-ಸಿದ್ಧರೂ ಸಹ ಬಂದರು. ಸಕಲ ದೇವತಾತ್ಮನೂ, ತನಗೂ ಪ್ರಭುವಾದ ಶ್ರೀವಾಸುದೇವಕೃಷ್ಣನು ಅಲ್ಲಿಗೆ ಬಂದಿರುವುದನ್ನರಿತ ಶೂಲಪಾಣಿ ರುದ್ರನು ಪ್ರಮಥಗಣ-ಗಳಿಂದಲೂ, ಭಾರ್ಯೆಯಿಂದಲೂ ಕೂಡಿಕೊಂಡು, ಭಕ್ತಿಸಂಭ್ರಮಗಳಿಂದ ಶ್ರೇಷ್ಠ ಪೂಜಾಸಾಮಗ್ರಿಗಳೊಡನೆ ಬಂದನು. ಶಂಕರನು ಜಗದೇಕ ಒಡೆಯನಾದ ಪರಿಪೂರ್ಣಷಡ್ಗುಣ ಶೋಭಿತನಾದ, ದೋಷದೂರನೂ, ಮಹಾವಿಭೂತಿಯೂ ಆದ ವಾಸುದೇವನಿಗೆ ನಮಸ್ಕರಿಸಿ ಸ್ತುತಿಸಿದನು.

ಶ್ರೀಕೃಷ್ಣನು ಅಯೋಗ್ಯ ಜನರನ್ನು ಮೋಹಗೊಳಿಸಲಿಚ್ಛಿಸಿ ರುದ್ರದೇವರ ಹೃದಯದಲ್ಲಿ ಅಂತರ್ಯಾಮಿ-ಯಾಗಿರುವ ತನ್ನ ರೂಪವನ್ನೇ ಸ್ತುತಿಸಿ ಸಂತೋಷಪಡಿಸಿದನು. ರುದ್ರದೇವನು ಕೃಷ್ಣನು ತನ್ನನ್ನು ಸ್ತುತಿಸಿದ್ದನ್ನು ಕೇಳಿ, ಅಲ್ಲಿ ನೆರೆದ ಸಮಸ್ತ ದೇವತೆಗಳನ್ನು ಕುರಿತು ಹೀಗೆ ಹೇಳಿದನು:- "ದೇವತೆಗಳೇ, ನಾನು ಹೇಳುವ ಸತ್ಯವಿಚಾರವನ್ನು ಶ್ರದ್ಧೆಯಿಂದಾಲಿಸಿರಿ. ಶ್ರೀವಿಷ್ಣುವು ಸಕಲ ಸುಜನರಿಂದ ಹೊಂದಲರ್ಹನಾದ ಸರ್ವೋತ್ತಮದೇವನಾಗಿದ್ದಾನೆ. ಶ್ರೀಹರಿಯೇ ನನಗಿಂತ, ಬ್ರಹ್ಮನಿಗಿಂತ, ಲಕ್ಷ್ಮೀದೇವಿಗಿಂತ ಮತ್ತು ಸಮಸ್ತಜೀವ ಸಮುದಾಯಕ್ಕಿಂತಲೂ, ಸಂಸಾರಾವಸ್ಥೆ ಮತ್ತು ಮುಕ್ತಿಯಲ್ಲಿಯೂ ಸಹ ಉತ್ತಮನಾಗಿರುವುದರಿಂದ ಅವನೇ ಸರ್ವೋತ್ತಮನೆಂದು ತಿಳಿಯಬೇಕು. ವಿಷ್ಣುವಿನ ತರುವಾಯ ಲಕ್ಷ್ಮೀದೇವಿ, ಬ್ರಹ್ಮ-ವಾಯು ಮುಂತಾದವರು ಭಗವದಪರೋಕ್ಷಜ್ಞಾನ ಸಂಪಾದಕರಾದುದರಿಂದ, ಸರ್ವರೂ ಅವರ ದ್ವಾರವೇ ಹೋಗಬೇಕಾಗಿರುವುದರಿಂದ ಶ್ರೇಷ್ಠರಾಗಿದ್ದಾರೆ. ಮಾನವರು ದೇವತೆಗಳನ್ನೂ, ಅವರು ಇಂದ್ರನನ್ನೂ, ಅವನು ರುದ್ರನನ್ನೂ (ನನ್ನನ್ನೂ), ರುದ್ರನು (ನಾನು) ಬ್ರಹ್ಮನನ್ನೂ ಹೀಗೆ ಸಕಲರೂ ಶ್ರೀಹರಿಯನ್ನೇ ಕುರಿತು ಹೋಗುವರೆಂದು ತಿಳಿಯಬೇಕು.[36] ಆದ್ದರಿಂದ ವಿಷ್ಣುಸರ್ವೋತ್ತಮತ್ವವನ್ನೇ ಯಾವಾಗಲೂ ಸ್ಮರಿಸಿರಿ" ರುದ್ರದೇವರ ಮಾತನಾಲಿಸಿ ಸಕಲ ಸುರಗಣವು ವೃದ್ಧಿಸಿದ ಭಕ್ತ್ಯತಿಶಯದಿಂದ ಕೃಷ್ಣನು ಲಕ್ಷ್ಮೀಶನಾದ ನಾರಾಯಣನೆಂದು ಅವನಿಗೆ ನಮಸ್ಕರಿಸಿದರು. ಈ ಬಗೆಯ ತತ್ವನಿರ್ಣಯಗಳಿಂದ, ಕೃಷ್ಣನ ಗುಣವರ್ಣನೆಯಿಂದ, ರುದ್ರನ ವಚನಗಳಿಂದ ಇಂದ್ರಾದಿ ದೇವತೆಗಳು ಜ್ಞಾನಿಗಳಾಗಿದ್ದರೂ ಶ್ರೀಕೃಷ್ಣನ ಸರ್ವೋತ್ತಮ ತ್ವವನ್ನರಿತು ಅಧಿಕವಾಗಿ ಜ್ಞಾನಾಭಿವೃದ್ಧಿಯನ್ನು ಪಡೆದರು ಮತ್ತು ವಿಷ್ಣುಸರ್ವೋತ್ತಮತ್ವ ಪ್ರಮಾಣಗಳು ಹೇರಳವಾಗಿದ್ದು ಅದರಲ್ಲಿ. ಆಪಾತತಃ ವಿರುದ್ಧವಾಗಿರುವಂತೆ ಕಾಣುವ, ಅಣುತ್ವ - ಮಹತ್ವಾದಿ ಬಹುಗುಣ ಪ್ರತಿಪಾದಕವಾಗಿರುವುದರಿಂದ ಸಂಶಯ ಬರುವುದು ಸಹಜವಾಗಿದೆ. ಈಗ ರುದ್ರದೇವರು ಸಂಶಯಗಳನ್ನೆಲ್ಲಾ ಪರಿಹರಿಸಿ ತತ್ವಶಾಸ್ತ್ರನಿರ್ಣಯರೂಪವಾಗಿ ಸ್ಪಷ್ಟವಾಗಿ ಶ್ರೀಹರಿಯೇ ಸರ್ವೋತ್ತಮನೆಂದು ಹೇಳಿದ್ದರಿಂದ ದೇವತೆಗಳೆಲ್ಲರೂ ಎಲ್ಲ ಸಂಶಯಗಳಿಂದ ದೂರರಾಗಿ ಜ್ಞಾನಾಭಿವೃದ್ಧಿಯನ್ನು ಹೊಂದಿದರು.

---

36. "ಮುಕ್ತಾಸ್ತು ಮಾನುಷಾನ್ ದೇವಾನ್ । ದೇವಾ ಇಂದ್ರಂ ಸ ಶಂಕರಮ್ ॥
ಸ ಬ್ರಹ್ಮಾಣಂ ಕ್ರಮೇಣೈವ । ತೇನ ಯಾಂತ್ಯಖಿಲಾ ಹರಿಮ್ ॥"

ಆಗ ವಾಸುದೇವನು ರುದ್ರನಿಗೆ 'ನಿನ್ನಿಂದ ಪುತ್ರವರವನ್ನು ಪಡೆಯುವೆ'ನೆಂದು ಹೇಳಿದ್ದ ವಚನವನ್ನು ಸತ್ಯಮಾಡಲು "ರುದ್ರದೇವ! ನನಗೆ ಪುತ್ರನಾಗುವಂತೆ ವರವನ್ನು ಕೊಡು" ಎಂದು ಕೇಳಿದನು. ಈ ಶಿವನು "ಪ್ರಭು! ನಿನಗೆ ಈ ಮೊದಲೇ ಪ್ರದ್ಯುಮ್ನನೆಂಬ ಹೆಸರಿನಿಂದ ಪುತ್ರನು ಜನಿಸಿರುವನು. ಹಿಂದೆ ಮನ್ಮಥನನ್ನು ನಾನು ದಹಿಸಿದ್ದರಿಂದ ದುಃಖಿತಳಾದ ರತಿಯು 'ನನಗೆ ಪತಿಯನ್ನು ಕೊಡು' ಎಂದು ಕೋರಿದ್ದಳು. ಆಗ ನಾನು "ಮುಂದೆ ಶ್ರೀವಾಸುದೇವಕೃಷ್ಣನಿಗೆ ನಿನ್ನ ಪತಿಯು ಮಗನಾಗಿ ಜನಿಸುತ್ತಾನೆ. ಆಗ ನೀನು ನಿನ್ನ ಪತಿಯನ್ನು ಹೊಂದುತ್ತೀಯೆ" ಎಂದು ಹೇಳಿದ್ದೆನು. ಆ ಮನ್ಮಥನೇ ಪ್ರದ್ಯುಮ್ನನಾಗಿ ಹುಟ್ಟಿದ್ದಾನೆ. ನಿನ್ನ ಆಜ್ಞೆಯಂತೆ ಅವನೇ ನಿನಗೆ ನಾನು ಕೊಟ್ಟ ಪುತ್ರನೆಂದು ಪ್ರಚಾರವಾಗಲಿ. ನಿಜವಾಗಿಯೂ ಅವನನ್ನು ನಾನು ವರರೂಪವಾಗಿ ಕೊಟ್ಟಿಲ್ಲ. ಆದರೂ ಹಾಗೆ ಪ್ರಚುರವಾಗಲಿ. ಸ್ವಾಮಿ, ನಾನು ನಿನ್ನ ದಾಸನು. ನಿನಗೆ ಶರಣಾಗಿದ್ದೇನೆ. ಹೇ ದೇವೇಶ! ನನ್ನನ್ನು ಕಾಪಾಡು", ಎಂದು ಪ್ರಾರ್ಥಿಸಿ ನಮಸ್ಕರಿಸಿದನು.

ಆ ತರುವಾಯ ರುದ್ರದೇವನು ಅಮರನಿಕರರನ್ನು ಕುರಿತು ಹೀಗೆ ಹೇಳಿದನು:- "ಶ್ರೀಕೃಷ್ಣನು ಇಲ್ಲಿಗೆ ಏಕೆ ಬಂದನೆಂಬುದನ್ನು ಹೇಳುವೆನು, ಕೇಳಿರಿ. ಹಿಂದೆ ಬ್ರಹ್ಮದೇವರವರದಿಂದ ವಕ್ರನೆಂಬ ಅಸುರನು ಅವಧ್ಯತ್ವ ಅಂದರೆ ಯಾರಿಂದಲೂ ತನ್ನನ್ನು ಸಂಹರಿಸಲಾಗದಂತಹ ವರವನ್ನು ಪಡೆದು ಪ್ರಬಲಿಸಿದ್ದನು. ಆ ವಕ್ರಾಸುರನನ್ನು ಕೊಲ್ಲುವ ಹಿಂದಿನ ಕ್ಷಣದಲ್ಲಿ ಜನಿಸಿದ ಕೃಷ್ಣನ ಮಗನಾದ, ಮನ್ಮಥನ ಅವತಾರನಾದ ಪ್ರದ್ಯುಮ್ನನನ್ನು ಬಿಟ್ಟು ಬೇರೊಬ್ಬರಿಂದ ಆ ಅಸುರನನ್ನು ಸಂಹಾರ ಮಾಡಲು ಸಾಧ್ಯವಿಲ್ಲ. ಅಂತೆಯೇ ವಾಸುದೇವನು ಆ ಅಸುರನನ್ನು ಸಂಹರಿಸಲೆಂದೇ ತನ್ನ ಪುತ್ರನಾದ ಪ್ರದ್ಯುಮ್ನನನ್ನು ಹೃದಯದಲ್ಲಿ ಸ್ಥಾಪಿಸಿ, ನನ್ನ ಆಶ್ರಯಕ್ಕಾಗಿ ಬಂದು, ತನ್ನ ಹೃದಯದಿಂದ ಪುತ್ರನಾದ ಪ್ರದ್ಯುಮ್ನನನ್ನು ಹೊರತಂದು ತತ್ಕಾಲದಲ್ಲಿಯೇ ಅವನು ಪ್ರವೃದ್ಧನಾಗುವಂತೆ ಮಾಡಿ, ಆ ಪ್ರದ್ಯುಮ್ನನಿಂದ ಈ ವನವನ್ನೂ ವಕ್ರಾಸುರನನ್ನೂ ದಗ್ಧಗೊಳಿಸಿ ಸಂಹಾರ ಮಾಡಿಸಿದ್ದಾನೆ. ಹೇ ಅಮರರೇ, ದಗ್ಧವಾಗಿರುವ ಈ ವನವನ್ನು ನೋಡಿರಿ. ಅದು ಅಸುರನು ಸಂಹೃತನಾಗಿರುವುದಕ್ಕೆ ಸಾಕ್ಷಿಯಾಗಿದೆ. ಇದೆಲ್ಲವನ್ನೂ ನಾರದಾದಿಮುನಿಗಳು ನೋಡಿದ್ದಾರೆ. ಶ್ರೀಕೃಷ್ಣನು ಪ್ರದ್ಯುಮ್ನನಲ್ಲಿರುವ ಸ್ವಾಭಾವಿಕ ತೇಜೋವಿಶೇಷವನ್ನು, ತನ್ನ ದೈತ್ಯಹನನ ಸಮರ್ಥವಾದ ಸ್ವಾಭಾವಿಕ ಕ್ರೂರತೇಜೋವಿಶೇಷದಿಂದ ಪೂರ್ಣ-ಗೊಳಿಸಿ, ಪ್ರದ್ಯುಮ್ನನಿಂದಲೇ ಅರಣ್ಯ ಸಹಿತವಾಗಿ ವಕ್ರಾಸುರನನ್ನು ದಗ್ಧಗೊಳಿಸುವ ಮೂಲಕ ಸಂಹಾರಮಾಡಿಸಿ, ಪ್ರದ್ಯುಮ್ನನನ್ನು ಪುನಃ ತನ್ನ ಉದರದಲ್ಲಿ ಸ್ಥಾಪಿಸಿಕೊಂಡನು. ಮತ್ತೆ ಆ ಕ್ಷಣದಲ್ಲಿ ರುಕ್ಮಿಣೀದೇವಿಯ ಗರ್ಭದಲ್ಲಿರುವಂತೆ ಮಾಡಿ ಪುನಃ ಹುಟ್ಟಿಸುವನು. ಪ್ರದ್ಯುಮ್ನನು ವಕ್ರಾಸುರನ ವಧೆಗಾಗಿ ಜನಿಸಿದೊಡನೆ ತರುಣನಾದಂತೆ ರುಕ್ಮಿಣಿಯ ಉದರ-ದಿಂದ ಜನಿಸಿದ ಕೂಡಲೇ ತತ್‌ಕ್ಷಣವೇ ತರುಣನಾಗುವನು. ಇಲ್ಲಿ ತತ್‌ಕ್ಷಣ ಎಂಬುದರಿಂದ ಹಿಂದೆ ಶಂಬರಾಸುರನ ಮನೆಯಲ್ಲಿ ಪ್ರವೃದ್ಧನಾದಂತೆ ಎಂದು ತಿಳಿಯಬಾರದು. ಆಗ ಅವನು ನಾಲ್ಕು ವರ್ಷಗಳಲ್ಲೇ ತರುಣನಾದನೆಂದು ಉಕ್ತ-ವಾಗಿರುವುದು. ಇಲ್ಲಾದರೋ ತಕ್ಷಣ ಎಂಬುದು ಹುಟ್ಟಿದ ಕೂಡಲೇ ಎಂದು ಸ್ಪಷ್ಟಪಡಿಸಲು ಹೇಳಲ್ಪಟ್ಟಿದೆ ಎಂದು ತಿಳಿಯ-ಬೇಕು. ಇಂತು ಶ್ರೀಕೃಷ್ಣನು ತನ್ನ ಪರಿಪೂರ್ಣಚಿದಾನಂದಾದ್ಯೈಶ್ವರ್ಯದಿಂದ ಕ್ರೀಡಿಸುತ್ತಿದ್ದಾನೆ" ಎಂದ ಶೂಲಪಾಣಿಯು ದೇವತೆಗಳಿಗೆ ತಿಳಿಸಿದನು. ಅದನ್ನು ಕೇಳಿ ಇಂದ್ರಾದಿವೃಂದಾರಕವೃಂದವು ನಂದನಂದನನಾದ ಶ್ರೀಗೋವಿಂದನಿಗೆ ವಂದಿಸಿತು.

ಆ ತರುವಾಯ ಬ್ರಹ್ಮದೇವರು, ಹಾಗೂ ದೇವೇಂದ್ರಾದಿ ಅಮರವೃಂದದಿಂದ ಸ್ತುತನಾಗಿ ಗರುಡನ ಭುಜವೇರಿ, ಮತ್ತೆ ರುದ್ರದೇವನಿಂದ ಸ್ತೋತ್ರ ಮಾಡಿಸಿಕೊಂಡು ಕೃಷ್ಣಪರಮಾತ್ಮನು ದ್ವಾರಕೆಯಿಂದ ತಾನು ಹೊರಟ ಮೂರನೆಯ ದಿನ ದ್ವಾರಕಾಪುರಿಗೆ ದಯಮಾಡಿಸಿದನು.

ಇತ್ತ, ಶ್ರೀಕೃಷ್ಣನು ಬದರಿಕಾಶ್ರಮಕ್ಕೆ ಹೊರಟ ಎರಡನೆಯ ದಿನ ಪೌಂಡ್ರಕ ವಾಸುದೇವನು, ಏಕಲವ್ಯ, ಮಾತಾಮಹನಾದ ಕಾಶೀರಾಜರೊಡನೆ, ಮೂರು ಅಕ್ಷೋಹಿಣಿ ಸೈನ್ಯದಿಂದ ಕೂಡಿಕೊಂಡು ದ್ವಾರಕಾನಗರವನ್ನೂ, ಯಾದವರನ್ನೂ ನಾಶ-

ಮಾಡಲಾಶಿಸಿ ದ್ವಾರಕೆಗೆ ಬಂದನು. ಅವನು ಬಂದ ವಿಚಾರವರಿತು ಬಲರಾಮ, ಸಾತ್ಯಕಿಗಳೊಡನೆ ಯಾದವರು ಯುದ್ಧಕ್ಕೆ ಬಂದರು. ಆಗ ಕಿರಾತಾಧಿಪತಿಯಾದ ಏಕಲವ್ಯನು ಅವರ ಮೇಲೆ ಬಾಣದ ಮಳೆಗರೆದನು. ಆದರಿಂದ ಶ್ರಾಂತರಾದ ಯಾದವರು ರಾತ್ರಿ ದೀಪಗಳನ್ನು ನಂದಿಸಿ, ಬಲರಾಮ-ಶಿನಿಯ ಪುತ್ರ ಸಾತ್ಯಕಿಸಹಿತರಾಗಿ ದ್ವಾರಕಾಪುರಿಗೆ ಮರಳಿದರು. ಆನಂತರ ಬಲರಾಮನನ್ನು ಮುಂದೆ ಮಾಡಿಕೊಂಡು ದೀಪಗಳನ್ನು ಹಿಡಿದು ಶಸ್ತ್ರಸಜ್ಜಿತರಾಗಿ, ಗುಹೆಯಿಂದ ಹೊರಬಂದ ಸಿಂಹಗಳಂತೆ ದ್ವಾರಕೆಯಿಂದ ಹೊರಟರು. ರಥಾರೂಢನಾಗಿ ಬಂದ ಬಲರಾಮನು ಏಕಲವ್ಯನೊಡನೆಯೂ, ಸಾತ್ಯಕಿಯು ಪೌಂಡ್ರಕ ವಾಸುದೇವನೊಡನೆಯೂ ಹೋರಾಡಿ ಪರಸ್ಪರ ರಥವಿಹೀನರಾದರು. ಸಾತ್ಯಕಿಯು ಪೌಂಡ್ರಕನೊಡನೆ ಗದಾಯುದ್ಧ ಮಾಡಿದನು. ತಾವು ತಾವು ಬಲಿಷ್ಠರೆಂಬ ಗರ್ವದಿಂದ ಪರಾಕ್ರಮಿಗಳಾದ ಬಲರಾಮ-ಏಕಲವ್ಯರು ಹೋರಾಡುತ್ತಾ ಪರಸ್ಪರ ರಥಗಳನ್ನು ನಾಶಪಡಿಸಿದರು. ಆನಂತರ ಗದಾಯುದ್ಧನಿರತರಾದರು. ಅದೇ ಸಮಯಕ್ಕೆ ದ್ವಾರಕಾ ಪಟ್ಟಣಕ್ಕಾಗಮಿಸಿದ ಭಗವಾನ್ ವಾಸುದೇವನು ಯುದ್ಧ ವಿಚಾರವರಿತು ರಣರಂಗಕ್ಕೆ ಬಂದನು. ಶ್ರೀಕೃಷ್ಣನು ಬಂದುದನ್ನು ಕಂಡು ಪರಮಹರ್ಷಿತನಾದ ಬಲಭದ್ರನು ಏಕಲವ್ಯನನ್ನು ವಧಿಸಬಯಸಿ ಗದಾಧಾರಿಯಾಗಿ ಅತಿವೇಗವಾಗಿ ಏಕಲವ್ಯನೆಡೆಗೆ ಹಾರಿ ಬಂದು ಅವನ ಮುಂದೆ ನಿಂತನು. ಬಲರಾಮನ ಬಲ-ಕೋಪಗಳನ್ನು ಕಂಡು ಭೀತನಾದ ಏಕಲವ್ಯನು ಜೀವಿಸ-ಬೇಕೆಂಬ ಆಸೆಯಿಂದ ಕೂಡಲೇ ರಣರಂಗದಿಂದ ಬಹುದೂರ ಓಡಿಹೋದನು. ಆಗ ಬಲರಾಮನು ಏಕಲವ್ಯನನ್ನು ಸಮುದ್ರದ ತೀರದವರೆಗೂ ಬೆನ್ನಟ್ಟಿ ಹೋದನು. ಅರ್ಜುನಾದಿಗಳಿಗಿಂತ ಉತ್ಕೃಷ್ಟಜ್ಞಾನ-ಬಲಗಳ ಸಾಮರ್ಥ್ಯವುಳ್ಳ; ಅಂತೆಯೇ ಧನಂಜಯಾದಿಗಳಿಗಿಂತ ಪರಾಕ್ರಮಿಯಾದ ಬಲರಾಮನು ತನ್ನನ್ನು ಅಟ್ಟಿಸಿಕೊಂಡು ಬರುತ್ತಿರುವುದನ್ನು ಕಂಡು ಏಕಲವ್ಯನು ಸಮುದ್ರಕ್ಕೆ ಹಾರಿ ಎಂಭತ್ತು ಯೋಜನಗಳವರೆಗೆ ಈಜುತ್ತಾ ಹೋಗಿ ಸಾಗರಮಧ್ಯದಲ್ಲಿರುವ ಒಂದು ದ್ವೀಪದ ಉನ್ನತಸ್ಥಳದಲ್ಲಿ ಕುಳಿತು ಬಲರಾಮನು ಬರುತ್ತಿರುವನೇನೋ ಎಂದು ಹಿಂದಿರುಗಿ ನೋಡಿದನು. ಬಲಭದ್ರನು ರಣದಲ್ಲಿ ಶತ್ರುವನ್ನು ಜಯಿಸಿ, ಜೀವಗಳ್ಳನಾಗಿ ಓಡಿಹೋಗುವಂತೆ ಮಾಡಿ, ವಿಜಯಶಾಲಿಯಾಗಿ ದಾಮೋದರನ ಬಳಿಗೆ ಬಂದನು. ಪೌಂಡ್ರಕನು ಈ ನಿರ್ಬಲನಾದ ಸಾತ್ಯಕಿಯೊಡನೇಕೆ ನನಗೆ ಸೆಣಸಾಟ ಎಂದು ಅವನನ್ನು ಬಿಟ್ಟು ಜನಾರ್ದನನ ಬಳಿಗೆ ಯುದ್ಧ-ಮಾಡಲು ಬಂದನು. ಆಗ ಕೇಶವನು ಒಂದೇ ಕ್ಷಣದಲ್ಲಿ ಅವನ ರಥ ಆಯುಧಗಳನ್ನು ನಾಶಪಡಿಸಿ ದ್ವಾರಕೆಗೆ ತೆರಳಿದನು.

ಆಗ ಪೌಂಡ್ರಕ ವಾಸುದೇವನು ಶ್ರೀಕೃಷ್ಣನಿಗೆ ದೂತನ ಮುಖದಿಂದ ಹೀಗೆ ಹೇಳಿಕಳಿಸಿದನು:- "ಎಲವೋ ಕೃಷ್ಣ! ಈ ಜಗತ್ತಿನಲ್ಲಿ ವಾಸುದೇವನು ಒಬ್ಬನೇ! ಆ ವಾಸುದೇವನೇ ನಾನು!! ನೀನು ನನ್ನದಾದ ಶ್ರೀಸುದರ್ಶನ-ಶ್ರೀವತ್ಸ ಮುಂತಾದ ಚಿಹ್ನೆಗಳನ್ನು ವಿಸರ್ಜಿಸಿ, ನಾಶರಹಿತನಾದ ನನ್ನ ಬಳಿಗೆ ಬಾ. ಬೇಗ ಶರಣಾಗತನಾಗಿ ಭಕ್ತಿಪೂರ್ವಕವಾಗಿ ಬಾ"ಇಂತು ದೂತನು ಪೌಂಡ್ರಕನ ಸಂದೇಶವನ್ನು ಕೃಷ್ಣನಿಗೆ ಅರುಹಲು ಸಮಸ್ತ ಯಾದವರೂ ಗಟ್ಟಿಯಾಗಿ ನಕ್ಕರು. ಶ್ರೀಕೃಷ್ಣನೂ ನಗುತ್ತಾ "ಎಲವೋ ದೂತ, ನಾನು ಶೀಘ್ರವಾಗಿ ಪೌಂಡ್ರಕನ ಬಳಿಗೆ ಬಂದು ಯುದ್ಧದಲ್ಲಿ ಅವನಿಗೆ ಆಯುಧಗಳನ್ನೂ ಸುದರ್ಶನ-ಶ್ರೀವತ್ಸಾದಿ ಚಿಹ್ನೆಗಳನ್ನು ಕೊಡುವುದಾಗಿ ತಿಳಿಸು" ಎಂದುತ್ತರವಿತ್ತು ಕಳಿಸಿದನು. ಆ ಮಾತನ್ನು ದೂತನು ಪೌಂಡ್ರಕನಿಗೆ ತಿಳಿಸಿದ ಮೇಲೆ ಪೌಂಡ್ರಕ ಹಾಗೂ ಶ್ರೀಹರಿಯೂ ಯುದ್ಧಕ್ಕಾಗಿ ಬಂದರು. ರಥದ ಮೇಲಿಟ್ಟಿರುವ ಸುವರ್ಣ ನಿರ್ಮಿತ ಗರುಡನ ಮೇಲೆ ಕುಳಿತು ಬಂಗಾರದಿಂದ ಮಂಡಿಸಿದ ಕೃತ್ರಿಮ ಚಕ್ರ-ಶಂಖಾದಿಗಳನ್ನು ಹಿಡಿದಿರುವ, ಶ್ರೀವತ್ಸಕ್ಕೆ ಬದಲಾಗಿ ತನ್ನ ಎದೆಯನ್ನು ಸುಟ್ಟುಕೊಂಡು ಅದನ್ನೇ ಶ್ರೀವತ್ಸವೆಂದು ತಿಳಿದಿರುವ ಪಾಪಬುದ್ಧಿಯ ಪೌಂಡ್ರಕನನ್ನು ನೋಡಿ ಶ್ರೀಕೃಷ್ಣನು ಮಂದಹಾಸ ಬೀರಿದನು. ಆನಂತರ ತನ್ನ ಮೇಲೆ ಅಸ್ತ್ರಶಸ್ತ್ರಗಳನ್ನು ವರ್ಷಿಸುತ್ತಿರುವ ಪೌಂಡ್ರಕನನ್ನು ಜಯಿಸಿ, ಶ್ರೀವಾಸುದೇವನು ತನ್ನ ಚಕ್ರದಿಂದ ಪೌಂಡ್ರಕನ ಶಿರವನ್ನು ಕತ್ತರಿಸಿ ಹಾಕಿದನು. ಆ ಬಳಿಕ ಪೌಂಡ್ರಕನ ಮಾತಾಮಹ (ತಾಯಿಯ ತಂದೆ)ನಾದ ಕಾಶೀರಾಜನ ಶಿರಸ್ಸನ್ನೂ ಬಾಣದಿಂದ ತರಿದು ಈಶ್ವರನಾದ ವಾಸುದೇವನು ಬಾಣದಿಂದ ಆ ತಲೆಯು ಕಾಶಿಯಲ್ಲಿ ಬೀಳುವಂತೆ ಮಾಡಿದನು. ಪ್ರಾಣೋತ್ಕ್ರಮಣಕಾಲದಲ್ಲಿ ಪೌಂಡ್ರಕನು "ನಾನೇ ಬ್ರಹ್ಮನು-

ವಾಸುದೇವನಾಗಿದ್ದೇನೆ" ಎಂಬ ಜ್ಞಾನದಿಂದ ಅಂಧಃತಮಸ್ಸಿಗೆ ಹೋದನು. ಕಿರ್ಮೀರಾದಿಗಳು, ಜರಾಸಂಧ ಪ್ರಭೃತಿಗಳು ಹೇಗೆ ತಮಸ್ಸಿಗೆ ಹೋದರೋ, ಅದರಂತೆ ಪೌಂಡ್ರಕನಿಗೆ ಸಹಾಯಕನಾದ ಪಾಪಬುದ್ಧಿಯ ಕಾಶೀರಾಜನೂ ಸಹ ಅಂಧಃ ತಮಸ್ಸಿಗೆ ಬಿದ್ದನು.

ಇಲ್ಲಿ 'ಪಾಪಬುದ್ಧಿ' ಎಂದು ಹೇಳಿರುವುದರಿಂದ ಜರಾಸಂಧನಿಗೆ ಸಹಾಯ ಮಾಡಿದ ಶಲ್ಯ, ಬಾಹ್ಲೀಕರಾಜಾದಿಗಳು ಕೃಷ್ಣಭಕ್ತರಾದ್ದರಿಂದ ಅವರಿಗೆ ತಮಃ ಪ್ರಾಪ್ತಿಯಿಲ್ಲವೆಂದು ಸೂಚಿತವಾಗಿದೆ.

ಪೌಂಡ್ರಕ-ಕಾಶೀರಾಜರನ್ನು ಸಂಹಾರ ಮಾಡಿದ ಬ್ರಹ್ಮರುದ್ರಾದಿ ನಿಯಾಮಕನಾದ ಶ್ರೀಕೃಷ್ಣನು ಆ ಕೂಡಲೇ ರುಕ್ಮಿಣಿಯಲ್ಲಿ ಪ್ರದ್ಯುಮ್ನನನ್ನು ಪಡೆದನು. ಅಂದರೆ ರುಕ್ಮಿಣಿಯು ಪ್ರದ್ಯುಮ್ನನನ್ನು ಪ್ರಸವಿಸಿದಳೆಂದು ಭಾವ.

ಇತ್ತ ಏಕಲವ್ಯನು ಬಲರಾಮನಿಂದ ಪರಾಜಿತನಾದ ಮೇಲೆ ಶಿವನನ್ನು ಕುರಿತು ತಪವನೆಸಗಿ ರುದ್ರದೇವರಿಂದ ಅಜೇಯತ್ವವರವನ್ನು ಪಡೆದನು. ಶಿವನ ವರದಿಂದ ಗರ್ವಿತನಾದ ಆ ಏಕಲವ್ಯನು ಯುದ್ಧಮಾಡಲು ಮತ್ತೆ ಶ್ರೀಕೃಷ್ಣನ ಬಳಿಗೆ ಬಂದನು. ಯುದ್ಧದಲ್ಲಿ ಮಾಧವನು ಏಕಲವ್ಯನು ಪ್ರಯೋಗಿಸಿದ ಶಸ್ತ್ರಾಸ್ತ್ರಗಳನ್ನು ತುಂಡರಿಸಿ ಹಾಕಿ ಅವನ ತಲೆಯನ್ನು ಸುದರ್ಶನದಿಂದ ಛೇದಿಸಿದನು. ಆ ಪಾಪಿಯೂ ಕೂಡ ಕೃಷ್ಣದ್ವೇಷದಿಂದ ಅತಿದುಃಖಕರವಾದ ಘೋರ ಅಂಧಃತಮಸ್ಸನ್ನು ಸೇರಿದನು.

ಹೀಗೆ ಯಾದವಕುಲಾವತಂಸನಾದ ಕೃಷ್ಣನಿಂದ ಪೌಂಡ್ರಕ ಮತ್ತು ಕಾಶೀರಾಜರು ಹತರಾದ ಮೇಲೆ ಕಾಶೀರಾಜನ ಮಗನಾದ ಸುದಕ್ಷಿಣನು ಶಂಕರನನ್ನು ಕುರಿತು ಅತಿ ಭಕ್ತಿಯಿಂದ ತಪಸ್ಸನ್ನಾಚರಿಸಿದನು. ಶಿವನು ಪ್ರತ್ಯಕ್ಷನಾದಾಗ ಆ ಪಾಪಬುದ್ಧಿಯ ಸುದಕ್ಷಿಣನು 'ಕೃಷ್ಣನಿಲ್ಲದಂತಾಗಬೇಕು' ಎಂಬ ವರವನ್ನು ಬೇಡಿದನು. ಆಗ ದೈತ್ಯಾವೇಶದಿಂದ ಆಚ್ಛಾದಿತ ಮನಸ್ಸುಳ್ಳ ಶಂಕರನು ದಕ್ಷಿಣಾಗ್ನಿಯಲ್ಲಿ ದಕ್ಷಿಣಾಗ್ನಿಸ್ವರೂಪಭೂತ ಕೃತ್ತಿಯನ್ನು ಅಂದರೆ ಅಗ್ನಿರೂಪದ ಭೂತವಿಶೇಷವನ್ನು ಸೃಜಿಸಿ ಸುದಕ್ಷಿಣನಿಗಿತ್ತನು. ಕೃತ್ತಿರೂಪದ ಆ ದಕ್ಷಿಣಾಗ್ನಿಯೂ ಅಸುರಾವೇಶಯುಕ್ತವಾಗಿದ್ದು, ಕಾಶೀರಾಜಕುಮಾರನಿಂದ ಪೂಜಿತವಾಗಿ ಉಮೇಶನ ವರದಿಂದ ಅಧಿಕಶಕ್ತಿಯುಳ್ಳದ್ದಾಗಿ ಅನಂತಶಕ್ತಿಯಾದ ಶ್ರೀಕೃಷ್ಣನಿರುವಲ್ಲಿಗೆ ಹೋಯಿತು. ಅನಂತವೀರ್ಯನಾದ ಯದುಪತಿಯು ಆ ಕೃತ್ತಿಯನ್ನು ನಿವಾರಿಸಲು ಸುದರ್ಶನ ಚಕ್ರಕ್ಕೆ ಆಜ್ಞಾಪಿಸಿದನು. ಜಾಜ್ವಲ್ಯಮಾನವಾದ ಅಮೋಘವೀರ್ಯವುಳ್ಳ ಚಕ್ರವು ದಕ್ಷಿಣಾಗ್ನಿ ಕೃತ್ತಿಯನ್ನು ಬಹುದೂರ ಓಡಿಸಿತು. ಕೃತ್ಯಾತ್ಮಕವಾದ ಈ ಅಗ್ನಿಯು ಪ್ರಧಾನಾಗ್ನಿಯ ಪುತ್ರನು. ಕೃತ್ಯಾತ್ಮಕ (ಭೂತಸ್ವರೂಪದ) ದಕ್ಷಿಣಾಗ್ನಿಯು ತನ್ನನ್ನು ಪ್ರಯೋಗಿಸಿದ ಬಂಧುಬಾಂಧವರಿಂದ ಸಹಿತನಾದ ಆ ಸುದಕ್ಷಿಣನನ್ನೇ ಸುಟ್ಟು ಭಸ್ಮ ಮಾಡಿತು.[37]

---

37, (ಸುದಕ್ಷಿಣನನ್ನು ಸುದರ್ಶನವೇ ಭಸ್ಮ ಮಾಡಿತೆಂದು ಕೆಲವರು ಹೇಳುವರು. ಹಾಗೇ ಹೇಳಿದಲ್ಲಿ ಭಾಗವತ ಪುರಾಣ-ಬ್ರಹ್ಮಪುರಾಣಗಳ ವಿರೋಧವು ಬರುತ್ತದೆ).

ಕೃತ್ಯಾನಲಃ ಪ್ರತಿಹತಃ ಸ ರಥಾಂಗಪಾಣೇಃ । ಅಸ್ತ್ರೌಜಸಾ ನೃಪವಿಭಗ್ನಮುಖೋ ನಿವೃತ್ತಃ ॥

ವಾರಾಣಸೀಂ ಪ್ರತಿ ಸಮೇತ್ಯ ಸುದಕ್ಷಿಣಂ ತಂ । ತನ್ನಿರ್ಜತಂ ಸಮದಹತ್ ಸ್ವಕೃತೋಭಿಚಾರಃ ॥ 1 ॥

ಚಕ್ರಂ ಚ ವಿಷ್ಣೋಸ್ತದನುಪ್ರವಿಷ್ಟಂ । ವಾರಾಣಸೀಂ ಸಾಟ್ಟಸಭಾಲಯಾಪಣಮ್ ।

ಸಗೋಪುರಾಟ್ಟಾಲಕ ಗೋಷ್ಠಸಂಕುಲಾಂ । ಸಕೋಶಹಸ್ತ್ಯಶ್ವರಥಾಮಂದಿರಾಮ್ ॥ 2 ॥

ದಗ್ಧ್ವಾ ವಾರಾಣಸೀಂ ಸರ್ವಾಂ ವಿಷ್ಣುಚಕ್ರಂ ಸುದರ್ಶನಮ್ । ಭೂಯಃ ಪಾರ್ಶ್ವಮುಪಾತಿಷ್ಠತ್ ಕೃಷ್ಣಸ್ಯಾಕ್ಲಿಷ್ಟಕರ್ಮಣಃ ॥3॥

- ಭಾಗವತ.

ರಥಾಂಗಪಾಣಿ (ಚಕ್ರಪಾಣಿ)ಯಾದ ಶ್ರೀಕೃಷ್ಣನ ಚಕ್ರದ ಓಜಸ್ಸಿನಿಂದ ಓಡಿಸಲ್ಪಟ್ಟ ಕೃತ್ತಿರೂಪ ದಕ್ಷಿಣಾಗ್ನಿಯು ವಾರಾಣಾಸಿಗೆ ಧಾವಿಸಿ ಬಂದು (ಆ ಅಭಿಚಾರಿಕ ಕೃತ್ತಿಯನ್ನು ಪ್ರಯೋಗಿಸಿದ) ತನ್ನನ್ನು ಪ್ರಯೋಗಿಸಿದ ಆ ಸುದಕ್ಷಿಣನನ್ನು ಭಸ್ಮಮಾಡಿತು. ಇದಾದನಂತರ ಕಾಶೀಪುರಿಯನ್ನು ಪ್ರವೇಶಿಸಿದ ಸುದರ್ಶನಚಕ್ರವು ಎಲ್ಲ ಸಭಾಮಂದಿರಗಳು, ಅಂಗಡಿಗಳು, ಗೋಪುರಗಳು, ಅಟ್ಟಾಲಕಗಳು, ಗೋಷ್ಠ (ಗೋಶಾಲೆ)ಗಳ ಸಮೂಹ, ರಾಜಭಂಡಾರ, ಆನೆ-ಕುದುರೆ ಸಹಿತ, ಎಲ್ಲ ಕಟ್ಟಡಗಳ ಸಹಿತವಾಗಿ ಸಂಪೂರ್ಣ ವಾರಾಣಾಸಿಯನ್ನು ಸುಟ್ಟುಹಾಕಿ ಶ್ರೀಕೃಷ್ಣಪರಮಾತ್ಮನ ಬಳಿಗೆ ಮತ್ತೆ ಬಂದು ಸೇರಿತು" - ಎಂದು ಭಾಗವತದಲ್ಲಿ ನಿರೂಪಿತವಾಗಿದೆ.

"ಅಭಿಚಾರಃ ಕೃತ್ಯಾಗ್ನಿಃ ತದನು ಸುದಕ್ಷಿಣಹನನಾನಂತರಂ" ಎಂದು ವಿಜಯಧ್ವಜತೀರ್ಥರ ವ್ಯಾಖ್ಯಾನದಲ್ಲಿ ಉಕ್ತ-ವಾಗಿದೆ. ಅಸ್ತು. ಶ್ರೀವಿಷ್ಣುಚಕ್ರವು ವಾರಾಣಾಸಿಯನ್ನು ಭಸ್ಮಗೊಳಿಸಿ ಪುನಃ ಶ್ರೀವಾಸುದೇವನ ಮಹಾಸನ್ನಿಧಿಗೆ ಬಂದಿತು.

ಸಂಪೂರ್ಣನಿತ್ಯಾನಂದನಾದ ಭಗವಾನ್ ಶ್ರೀಕೃಷ್ಣನು, ಪತಿಯ ಅವಜ್ಞಾದಿದೋಷದೂರಳಾದ, ರುಕ್ಮಿಣಿಯೊಡನೆ ನಿತ್ಯವೂ ವಿರೋಧವಿಲ್ಲದವಳಾಗಿದ್ದರೂ, ಗೃಹಸ್ಥಾಶ್ರಮದಲ್ಲಿರುವವರು ಪತ್ನಿಯೊಡನೆ ಪ್ರೇಮಕಲಹರತರಾಗುವಂತೆ, ತಾನೂ ಮಡದಿಯೊಡನೆ ಪರಿಹಾಸಾದಿಗಳನ್ನು ಮಾಡುವವನಂತೆ ನಟಿಸುತ್ತಾ ಒಂದು ಸಲ ರುಕ್ಮಿಣಿಯನ್ನು ಛೇಡಿಸುತ್ತಾ ಹೀಗೆ ಹೇಳಿದನು - (ಶ್ರೀಕೃಷ್ಣನ ಪ್ರೇಮಕಲಹದ ಪರಿಯ ಪ್ರಕಾರವು ಹೀಗಿತ್ತೆಂದು ನಿರೂಪಿಸುತ್ತಾರೆ) - "ರುಕ್ಮಿಣಿ! ಯದ್ಯಪಿ ನಿನ್ನಿಂದ ನನಗೇನೂ ಆಗಬೇಕಾಗಿರಲಿಲ್ಲ! ಆದರೂ ಎಲೈ ಕಲ್ಯಾಣಿ! ಅರಿಗಳ ಮಾನಭಂಗಕ್ಕಾಗಿಯೇ ಅಂದರೆ ನಿನ್ನನ್ನು ಶಿಶುಪಾಲನಿಗೆ ವಿವಾಹಮಾಡಿಕೊಡುವ ವಿಷಯದಲ್ಲಿ ನಿಮ್ಮವರಿಗಿದ್ದ ಅಹಂಕಾರವನ್ನು ಮುರಿಯಲೆಂದೇ ನಾನು ನಿನ್ನನ್ನು ಅಪಹರಿಸಿ ಕರೆದುಕೊಂಡು ಬಂದೆನೇ ಹೊರತು ನಿನ್ನಿಂದ ನನಗೇನೂ ಆಗಬೇಕಾಗಿಲ್ಲ!" ಎಂದು ಕುಟುಕಿದನು.

ರುಕ್ಮಿಣಿಯು ನಿತ್ಯಾವಿಯೋಗಿನಿಯಾದ ಸಾಕ್ಷಾತ್ ಶ್ರೀಲಕ್ಷ್ಮಿಯು. ಅವಳಿಗೆ ದುಃಖಾದಿಗಳಿಲ್ಲದಿದ್ದರೂ, ಅವಳಿಗೂ ಶ್ರೀಕೃಷ್ಣನಿಗೂ ಯಾವಾಗಲೂ ವಿಯೋಗವಿಲ್ಲದಿದ್ದರೂ, ಹಾಗೆ ನಟಿಸುತ್ತಾ ರುಕ್ಮಿಣಿಯು "ಸ್ವಾಮಿ, ಸತಿಯಾದವಳು ಗಂಡನು ತನ್ನನ್ನು ಬಿಟ್ಟು ಬಿಡುವನೇನೋ ಎಂದು ಹೆಂಗಸಿಗೆ ಪತಿಯ ಭಯವಿರಬೇಕು. ಪತಿಯು ಜಗಳವಾಡಿದರೂ ಪತ್ನಿಯು ಮೌನದಿಂದಿರಬೇಕೆಂಬುದು ಸತೀಧರ್ಮವಾಗಿದೆ" ಎಂದು ವಿಜ್ಞಾಪಿಸಿ ಲಜ್ಜಾದಿಗುಣ ವಿಶಿಷ್ಟಳಾದ ರುಕ್ಮಿಣಿಯು ಪತಿಯ ಬಿರುನುಡಿಗಳಿಂದ ದುಃಖಿತಳಾದವಳಂತೆ ವರ್ತಿಸಿದಳು. ಅನಂತರ ದೇವದೇವನಾದ ವಾಸುದೇವನು ದುಃಖಸಂಬಂಧವಿಲ್ಲದ ರುಕ್ಮಿಣೀದೇವಿಗೆ ಗೃಹಸ್ಥಧರ್ಮಗಳನ್ನು ನಲುನುಡಿಗಳಿಂದ ತಿಳಿಸಿ ಸಾಂತ್ವನಗೊಳಿಸಿದನು.

ಇಂತು ಕಮಲಸಂಭವಳಾದ ರಮೆಯ ಅವತಾರಳಾದ ರುಕ್ಮಿಣಿಯೊಡನೆ ಕ್ರೀಡಿಸುತ್ತಿರುವ ಶ್ರೀಕೃಷ್ಣನಿಂದ ಆದಿಷ್ಟನಾದ ಬಲರಾಮನು ಗೋಕುಲಕ್ಕೆ ಹೋಗಿ ಅಲ್ಲಿ ನಂದಗೋಪ ಯಶೋದಾದೇವಿ ಮೊದಲಾದವರನ್ನು ಕಂಡು ಅವರಿಂದ ಪೂಜಿತನಾಗಿ, ಅವರಿಗೆ ಶ್ರೀಕೃಷ್ಣನ ಲೀಲಾವಿಲಾಸಾದಿ ಸಮಾಚಾರಗಳನ್ನು ತಿಳಿಸಿ ಅಲ್ಲಿ ಎರಡು ಮಾಸಗಳವರೆಗೆ ಗೋಪಿ-ಯರೊಡನೆ ವಿಹರಿಸಿ, ಯಮುನೆಯನ್ನೂ ತಾನಿರುವಲ್ಲಿಗೆ ಕ್ರೀಡಿಸಲು ಬರುವಂತೆ ಆಹ್ವಾನಿಸಿದನು. ಯಮುನೆಯು ಬಲರಾಮನು ಮಧುಪಾನದಿಂದ ಮತ್ತನಾಗಿರುವನೆಂದು ಭಾವಿಸಿ ಅವನ ಕರೆಗೆ ಓಗೊಡದಿರಲು ಕುಪಿತನಾದ ಆ ಉಗ್ರವೀರನು ತನ್ನ ಲಾಂಗಲ(ನೇಗಿಲು)ದಿಂದ ಯಮುನಾ ನದಿಯನ್ನು ಸೆಳೆದನು. ಆಗ ಯಮುನೆಯು ನಿಜರೂಪದಿಂದ ಬಂದು ಬಲರಾಮನಿಗೆ ನಮಿಸಿ ಸ್ತುತಿಸಲು ತುಷ್ಟನಾದ ಬಲಭದ್ರನು ಅವಳನ್ನು ಕ್ಷಮಿಸಿ ಬಿಟ್ಟುಬಿಟ್ಟನು. ಆ ತರುವಾಯ ನಂದಗೋಪನ ಅಪ್ಪಣೆ ಪಡೆದು ದ್ವಾರಕಾಪುರಿಗಾಗಮಿಸಿ ನಂದಗೋಪಾದಿಗಳ ಕುಶಲವಾರ್ತೆಯನ್ನೂ ಅವರಿಗೆ ಕೃಷ್ಣನಲ್ಲಿರುವ ಪರಮಭಕ್ತಿಯನ್ನೂ ವಾಸುದೇವನಿಗೆ ನಿವೇದಿಸಿದನು.

ಅದೇ ಕಾಲಕ್ಕೆ ನರಕಾಸುರನು ಸಂಹೃತನಾದ ವಿಚಾರತಿಳಿದು ಅಸುರಾವೇಶಯುಕ್ತರಾದ ಮೈಂದ ಮತ್ತು ವಿವಿದ-ರೆಂಬುವರು ವಾಸುದೇವ ಕೃಷ್ಣನಿಗೆ ಪ್ರೀತ್ಯಾಸ್ಪದವಾದ ಆನರ್ತದೇಶವನ್ನು ನಾಶಪಡಿಸಿದರು. ಈ ವಿಚಾರವರಿತು ಶ್ರೀಕೃಷ್ಣನು ಬಲರಾಮನನ್ನು ಕುರಿತು "ಅಣ್ಣ! ಮೈಂದ-ವಿವಿದರು ನಮಗೆ ಪ್ರಿಯವಾದ ಆನರ್ತದೇಶವನ್ನು ನಾಶಪಡಿಸಿದ್ದಾರೆ. ಅವರು ಬ್ರಹ್ಮನ ವರದಿಂದ ಅವಧ್ಯರಾಗಿದ್ದಾರೆ. ಆದರೂ ನೀನವರನ್ನು ಸದೆಬಡಿಯಬೇಕು. ಅಂದರೆ ವಿರಂಚಿಯ ವರ, ಅಮೃತ-ಪ್ರಾಶನಗಳಿಂದ ಅವಧ್ಯರಾಗಿರುವ ಆ ಮೈಂದ-ವಿವಿದರನ್ನು ನೀನು ಸಂಹಾರಮಾಡು" ಎಂದನು.

ಕೃಷ್ಣನ ಆದೇಶದಂತೆ ಹೊರಟ ನೀಲಾಂಬರನು (ಬಲರಾಮ) ರೈವತಪರ್ವತದ ಶೃಂಗಾಗ್ರದಲ್ಲಿ ರೋಷದಿಂದ ಯುದ್ಧಕ್ಕೆ ಬಂದ ಮೈಂದನನ್ನು ಸಂಹರಿಸಿ, ಮರುದಿನ ತನ್ನ ಮೇಲೆ ಶಿಲಾವರ್ಷ ಮಾಡುತ್ತಿರುವ ವಿವಿದನನ್ನು ಮುಸುಲಾಯುಧದಿಂದ ಸಂಹಾರ ಮಾಡಿದನು. ಮೈಂದ-ವಿವಿದರಲ್ಲಿ ಆವಿಷ್ಟರಾಗಿದ್ದ ದೈತ್ಯರು ಅಂಧಃತಮಸ್ಸಿಗೆ ಹೋದರು. ಮೂಲರೂಪದ ಅಶ್ವಿನೀದೇವತೆಗಳು ತಮ್ಮ ಲೋಕವನ್ನು ಸೇರಿದರು.

ಇತ್ತ ಕೃಷ್ಣಕುಮಾರನಾದ ಸಾಂಬನು ಲಕ್ಷಣಾಳನ್ನು ಅಪಹರಿಸಿದನು. ಈ ಲಕ್ಷಣಾ ಹಿಂದೆ ರತಿಯಾಗಿದ್ದಳು. ಅವಳೇ ಈಗ ದುರ್ಯೋಧನನ ಮಗಳಾಗಿ ಜನಿಸಿದ್ದಳು. ಇಂಥ ಲಕ್ಷಣಾಳನ್ನು ಅವಳ ಸ್ವಯಂವರಕಾಲದಲ್ಲಿ ಸಾಂಬನು ಬಲಾತ್ಕಾರವಾಗಿ ಅಪಹರಿಸಿದನು. ಅವಳೂ ಸಹ ಸಾಂಬನಲ್ಲಿ ಅನುರಕ್ತಳಾಗಿ ಅವನೊಡನೆ ಹೊರಟಳು. ಇದರಿಂದ ದುರ್ಯೋಧನಾದಿಗಳೂ, ಕರ್ಣ ಮುಂತಾದ ಪ್ರಮುಖರು ಸಿಟ್ಟಿನಿಂದ ಸಾಂಬನೊಡನೆ ಯುದ್ಧಮಾಡಿ ಅಸಹಾಯಕನಾಗಿದ್ದ ಅವನನ್ನು ಎಲ್ಲರೂ ಸೇರಿ ಅವನ ರಥವನ್ನು ಮುರಿದು ಬಂಧಿಸಿದರು. ಕರ್ಣ, ಭೂರಿಶ್ರವ, ದುರ್ಯೋಧನನೂ ತಮ್ಮ ಬಾಹುಬಲದಿಂದ ಸಾಂಬನನ್ನು ಬಂಧಿಸಿರುವ ವಿಚಾರವರಿತು ಯಾದವರೆಲ್ಲರೂ ಕೌರವರೊಡನೆ ಯುದ್ಧಕ್ಕೆ ಸನ್ನದ್ಧರಾದರು. ಬಲರಾಮನು ಅವರನ್ನು ತಡೆದು ಸ್ವಯಂ ಉದ್ಧವನೊಡನೆ ಸಂಧಾನಾಪೇಕ್ಷಿಯಾಗಿ ಹಸ್ತಿನಾವತಿಗೆ ಹೋಗಿ ನಗರದ ಹೊರವಲಯದಲ್ಲಿರುವ ಉಪವನದಲ್ಲಿ ನಿಂತು ತಾನು ಬಂದಿರುವ ವಿಚಾರವನ್ನು ಕೌರವರಿಗೆ ತಿಳಿಸಲು ಉದ್ಧವನನ್ನು ಕಳುಹಿದನು. ಬಲರಾಮ-ನಾಗಮನವನ್ನರಿತ ಕೌರವರು ಅವನಿದ್ದಲ್ಲಿಗೆ ಬಂದು ಸಕಲ ಕೌರವರೂ ಅವನನ್ನು ಪೂಜಿಸಿದರು. ಆಗ ಮುಸುಲಿಯು "ನೀವು ನಮ್ಮ ಸಾಂಬನನ್ನು ಬಂಧಿಸಿರುವಿರಿ. ಈ ಕೂಡಲೇ ಅವನನ್ನು ಬಿಡಬೇಕೆಂದು ನಮ್ಮ ಉಗ್ರಸೇನ ಮಹಾರಾಜರು ಆಜ್ಞಾಪಿಸಿದ್ದಾರೆ" ಎಂದು ಹೇಳಿದನು. 'ಉಗ್ರಸೇನ ಮಹಾರಾಜರು ಆಜ್ಞಾಪಿಸಿದ್ದಾರೆ' ಎಂಬ ವಚನವನ್ನಾಲಿಸಿ ಕೋಪಗೊಂಡ ಕೌರವರು ಬಲರಾಮನನ್ನು ದುಷ್ಟವಚನಗಳಿಂದ ನಿಂದಿಸಿ ರಾಜಧಾನಿಗೆ ಹೊರಟುಹೋದರು. ಅವರ ಉದ್ಧಟತನವನ್ನು ಕಂಡು ಬಲರಾಮನಿಗೆ ಅಸಾಧ್ಯ ಕೋಪವುಂಟಾಯಿತು. ಮಹಾಪರಾಕ್ರಮಿಯಾದ ಬಲಭದ್ರನು ತನ್ನ ನೇಗಿಲಿನಿಂದ ಹಸ್ತಿನಾಪುರವನ್ನೇ ಕಿತ್ತೆಳೆದು ಜಾಹ್ನವೀ ನದಿಗೆಸೆಯಲು ಉದ್ಯುಕ್ತನಾದನು. ಆಗ ಭಯಗೊಂಡ ಧಾರ್ತರಾಷ್ಟ್ರರು ಎಲ್ಲರೂ ಬಂದು ಅವನನ್ನು ತಡೆದು ಕ್ಷಮೆ ಬೇಡಿದರು ಮತ್ತು ಸಾಂಬನೊಡನೆ ಲಕ್ಷಣಾಳನ್ನೂ ಕರೆತಂದು ಸಾಂಬನನ್ನು ಪೂಜಿಸಿ ಸಾಂಬ ಮತ್ತು ಲಕ್ಷಣಾರಿಗೆ ಅನೇಕ ಉಡುಗೊರೆಗಳನ್ನೂ ಕಾಣಿಕೆಗಳನ್ನೂ ಅರ್ಪಿಸಿ ಆ ವಧೂವರರಿಂದ ಸಹಿತರಾದ ಬಲರಾಮ-ಉದ್ಧವರನ್ನು ಬೀಳ್ಕೊಟ್ಟರು. ಬಲರಾಮನು ಎಲ್ಲರೊಡನೆ ದ್ವಾರಕಾಪುರಿಗೆ ಆಗಮಿಸಿದನು.

ಹೀಗೆ ಬಲರಾಮನು ಅನೇಕ ಅದ್ಭುತ-ಮಹತ್ವಪೂರ್ಣ ಕಾರ್ಯಗಳನ್ನು ಮಾಡಿ ಖ್ಯಾತಿಗಳಿಸಿದನು. ಇದಕ್ಕೆ ಮುಖ್ಯವಾಗಿ ಶೇಷನ ಅವತಾರನಾದ ಬಲರಾಮನಲ್ಲಿ ಅಚ್ಯುತನ ಶುಕ್ಲಕೇಶ ಆವೇಶವಿರುವುದರಿಂದ ಅಸಾಧ್ಯವಾದ ಇಂತಹ ಕಾರ್ಯಗಳು ಜರುಗಿದವೆಂದು ತಿಳಿಯಬೇಕು. ಬಲರಾಮನಲ್ಲಿ ಶ್ರೀಹರಿಯ ಶುಕ್ಲಕೇಶಾವೇಶವಿರುವ ಸಂದರ್ಭಗಳನ್ನರಿತು ಭೀಮಸೇನನೂ ಸಹ ಅವನೊಡನೆ ಯುದ್ಧ ಮಾಡುವುದಿಲ್ಲ. ಭೀಮನು ಅನೇಕ ಸಂದರ್ಭಗಳಲ್ಲಿ ಕೇವಲ ಕ್ರೀಡೆಗಾಗಿ ಯುದ್ಧ ಮಾಡುವ ಸಮಯದಲ್ಲಿ ತಾತ್ಕಾಲಿಕವಾಗಿ ಬಲರಾಮನು ಶುಕ್ಲಕೇಶಾವೇಶ ಯುಕ್ತನಾಗಿರುವುದನ್ನು ತಿಳಿದು

ಬಲಭದ್ರನು ತನ್ನನ್ನು ಪೀಡಿಸುತ್ತಿದ್ದರೂ ವಿಷ್ಣುಭಕ್ತಿಯಿಂದ ಅದನ್ನು ಸಹಿಸಿ ಸುಮ್ಮನಿರುತ್ತಿದ್ದನೇ ವಿನಃ ಯುದ್ಧ ಮಾಡುತ್ತಿರಲಿಲ್ಲ. ಅಂತಹ ಸಮಯದಲ್ಲಿ ಬಲರಾಮನು ಜಯಗಳಿಸುತ್ತಿದ್ದನು. ಬಲರಾಮನಲ್ಲಿ ಜನಾರ್ದನನ ಶುಕ್ಲಕೇಶಾವೇಶವಿಲ್ಲ-ದಿರುವಾಗ ಭೀಮಸೇನನೇ ಸರ್ವದಾ ಜಯಶಾಲಿಯಾಗುತ್ತಿದ್ದನು. ಇಂತು ಬಲರಾಮನು ಶ್ರೀವಿಷ್ಣುವಿನ ಶುಕ್ಲಕೇಶಾವೇಶ-ಯುಕ್ತನಾಗಿದ್ದು ಯಶಸ್ವಿಯಾಗಿದ್ದನು.

ಇಂತಹ ಬಲರಾಮ ಸಹಿತನಾಗಿ ಕಮಲನಾಭನಾದ ಕೃಷ್ಣನು ದ್ವಾರಕೆಯಲ್ಲಿ ಸಂತೋಷದಿಂದಿರುವಾಗ ಅತ್ತ ಬಾಣಾಸುರನ ಮಗಳಾದ ಉಷೆಯು ಒಂದುದಿನ ಶ್ರೀಕೃಷ್ಣನ ಪೌತ್ರನಾದ ಅನಿರುದ್ಧನೊಡನೆ ರಮಿಸಿದಂತೆ ಕನಸುಕಂಡಳು. ಕನಸಿನಲ್ಲಿ ಕಂಡ ಮಾಧವನ ಮೊಮ್ಮಗನ ಮನಮೋಹಕ ರೂಪ-ಲಾವಣ್ಯಾದಿಗಳಿಂದ ಪರವಶಳಾಗಿ ಉಷೆಯು ತನ್ನ ಸಖಿಯಾದ ಚಿತ್ರಲೇಖೆಯ ಮುಂದೆ ತನಗಾದ ಸ್ವಪ್ನಾರ್ಥವನ್ನು ವಿವರಿಸಿ ಕನಸಿನಲ್ಲಿ ತನ್ನೊಡನೆ ವಿಹರಿಸಿದ ಆ ಚಿತ್ತಚೋರನನ್ನು ಕರೆದು ತರುವಂತೆ ಹೇಳಿದಳು. ಆಗ ಚಿತ್ರಲೇಖೆಯು ವಸ್ತ್ರದ ಮೇಲೆ ಬಣ್ಣಗಳಿಂದ ಜಗತ್ತಿನಲ್ಲಿರುವ ಸುಂದರಪುರುಷರ ಚಿತ್ರಗಳನ್ನು ಬರೆದು ತೋರಿಸಿದಳು. ಆ ಚಿತ್ರಗಳಲ್ಲಿ ಅನಿರುದ್ಧನನ್ನು ಗುರುತಿಸಿ ಆನಂದಭರಿತಳಾಗಿ "ಸಖಿ, ಇವನೇ ನನ್ನೊಡನೆ ರಮಿಸಿದ ಮನೋಹರನಾದ ಪ್ರಿಯನೆಂದು" ಹೇಳಿದಳು. ಉಷೆಯ ಮಾತಿನಿಂದಲೂ ಸ್ವತಃ ಆ ಸುಂದರಾಂಗನು ಶ್ರೀಕೃಷ್ಣನ ಮೊಮ್ಮಗನಾದ ಅನಿರುದ್ಧನೆಂದರಿತು ಚಿತ್ರಲೇಖೆಯು ತನ್ನ ಮಾಯಾವಿದ್ಯೆಯಿಂದ ಅಂದು ರಾತ್ರಿಯೇ ದ್ವಾರಕೆಯಿಂದ ಅನಿರುದ್ಧನನ್ನು (ಉಷೆಯ) ಕನ್ಯಾಂತಃಪುರಕ್ಕೆ ರಹಸ್ಯವಾಗಿ ಕರೆದುತಂದಳು. ಅತ್ಯುದಾರ ಗುಣವಂತನಾದ ಅನಿರುದ್ಧನನ್ನು ಚಿತ್ರಲೇಖೆಯು ಕರೆತಂದಮೇಲೆ ಬಾಣನ ಕುವರಿಯಾದ ಉಷೆಯ ಬಹುದಿನಗಳ ಕಾಲ ಅನಿರುದ್ಧನೊಡನೆ ಕ್ರೀಡಿಸಿದಳು.

ಕನ್ಯಾಂತಃಪುರದಲ್ಲಿ ಅವರಿಂತು ವಿಹರಿಸುತ್ತಿರಲು ಅದನ್ನು ಕನ್ಯಾಂತಃಪುರದ ರಕ್ಷಕ ಭಟರು ಕಂಡು ಆ ವಿಚಾರವನ್ನು ಬಾಣಾಸುರನಲ್ಲಿ ವಿಜ್ಞಾಪಿಸಿದರು. ಬಾಣನು ಅನಿರುದ್ಧನನ್ನು ಹಿಡಿದುತರುವಂತೆ ಆಜ್ಞಾಪಿಸಿ ಭಟರನ್ನು ಕಳುಹಿಸಿದನು. ಅಲ್ಲಿಗೆ ಬಂದ ಭಟರನ್ನು ಅನಿರುದ್ಧನು ಪರಿಘಾಯುಧರಿಂದ ಹೊಡೆದಟ್ಟಿದನು. ಆಗ ಬಾಣಾಸುರನೇ ಸ್ವಯಂ ಬಂದು ಅನಿರುದ್ಧನನ್ನು ನಾಗಾಸ್ತ್ರದಿಂದ ಬಂಧಿಸಿದನು.

ಇತ್ತ ದ್ವಾರಕೆಯಲ್ಲಿರುವ ಶ್ರೀಕೃಷ್ಣನಿಗೆ ಈ ವಿಚಾರವು ತಿಳಿಯಿತು. ವಾಸುದೇವನು ಬಲರಾಮ-ಪ್ರದ್ಯುಮ್ನರೊಡನೆ ಗರುಡನ ಭುಜವೇರಿ ಬಾಣಾಸುರನ ಬಳಿಗೆ ಬಂದನು. ಬಾಣಾಸುರನಿಗೆ ಸಹಾಯಕರಾದವರು ಕೃಷ್ಣನೊಡನೆ ಕಾಳಗಕ್ಕೆ ಬರಲು ಮೊದಲು ಕೃಷ್ಣನು ಅಗ್ನಿರೂಪದ ಭೂತಗಳೊಡನೆ, ನಂತರ ಅಂಗಿರಸಾಗ್ನಿಯೊಡನೆ ಯುದ್ಧಮಾಡಿ ಅವುಗಳನ್ನು ಹೊಡೆದಟ್ಟಿದನು. ತರುವಾಯ ವೇತಾಲಾದಿ ರುದ್ರದೇವರ ಪ್ರಥಮಗಣಗಳನ್ನು ಅಟ್ಟಿಸಿದನು. ಆಗ ಜ್ವರಾಭಿಮಾನಿಯಾದ ರುದ್ರದೇವರ ಪ್ರಥಮನು ಬಂದನು. ಅವನು ಭಸ್ಮಾಯುಧ ಪ್ರಹಾರದಿಂದ ಬಲರಾಮನನ್ನು ಜ್ವರಪೀಡಿತನನ್ನಾಗಿ ಮಾಡಿ ಹಿಂಸಿಸಿದನು. ಆಗ ಜಗತ್ಪ್ರಭುವಾದ ವಾಸುದೇವನು ಬಲರಾಮನನ್ನು ಆಲಂಗಿಸಿ ಜ್ವರಪರಿಹಾರಮಾಡಿ ನಂತರ ಕೆಲಕಾಲ ಆ ರುದ್ರಜ್ವರದೊಡನೆ ಮುಷ್ಟಿಗಳಿಂದ ಸೆಣಸಾಡಿ ಅದನ್ನು ಚೂರ್ಣಮಾಡಿ, ಅದರ ನಾಶಕ್ಕಾಗಿ ವೈಷ್ಣವಜ್ವರವನ್ನು ಸೃಜಿಸಿದನು.

ಅದು ಸರಿ, ಕೃಷ್ಣನು ತಾನೇ ಏಕೆ ಅದನ್ನು ಜಯಿಸಲಿಲ್ಲ? ಎಂದರೆ ತಾನು ರುದ್ರಜ್ವರವನ್ನು ಸ್ವಯಂ ಗೆದ್ದರೆ ಸಾಲದು, ತನ್ನ ಭೃತ್ಯನ ಮೂಲಕವೂ ಅದನ್ನು ಗೆಲ್ಲಬೇಕೆಂದು ಶ್ರೀಹರಿ ಪರಮಾತ್ಮನು ವೈಷ್ಣವ ಜ್ವರವನ್ನು ಸೃಷ್ಟಿಸಿದನು. ಆಗ ಬಾಣಾಸುರನು ಪ್ರಯೋಗಿಸಿದ್ದ ಆ ರುದ್ರಜ್ವರವು ವೈಷ್ಣವಜ್ವರದಿಂದ ಅತ್ಯಂತ ಪೀಡಿತವಾಯಿತು. ರುದ್ರಜ್ವರವನ್ನು ಆಹಾರವಾಗಿ ನುಂಗಲು ಮುಂದಾಯಿತು. ಆಗ ರುದ್ರಜ್ವರವು ಕೃಷ್ಣನಿಗೆ ಶರಣು ಬಂದಿತು. ಷಡ್ಗುಣೈಶ್ವರ್ಯಸಂಪನ್ನನಾದ ಕೃಷ್ಣನು ಶೈವ-

ಜ್ವರವನ್ನು ಕ್ಷಮಿಸಿ ವೈಷ್ಣವಜ್ವರದಿಂದ ಮುಕ್ತಗೊಳಿಸಿದನು. ಭಗವಾನ್ ವಾಸುದೇವನು ವೈಷ್ಣವಜ್ವರವನ್ನು ಸೃಜಿಸದಿದ್ದರೆ ಶೈವಜ್ವರದಿಂದ ಪೀಡಿತನಾಗುತ್ತಿದ್ದನಾದ್ದರಿಂದ ವೈಷ್ಣವಜ್ವರವನ್ನು ಸೃಷ್ಟಿಸಿ ಶೈವಜ್ವರವನ್ನು ಗೆದ್ದನು ಎಂಬರ್ಥ ಬರುವ ವಾಕ್ಯ-ಗಳಿರುವುದರಿಂದ ಅದನ್ನು ಪರಿಹರಿಸಲೆಂದೇ ನಿರ್ಣಯಾಚಾರ್ಯರು "ತಾನೇ ಶೈವಜ್ವರವನ್ನು ಗೆದ್ದರೂ ಸಾಲದು, ತನ್ನ ಭೃತ್ಯರ ಮೂಲಕವೂ ಜಯಿಸಬೇಕು" ಮುಂತಾಗಿ ಹೇಳಿರುವರು. ಅಂತೆಯೇ "ರುದ್ರಜ್ವರದೊಡನೆ ಕೆಲಕಾಲ ಕ್ರೀಡಿಸಿ" ಎಂದು ಹೇಳಿದ್ದಾರೆ.

ಉತ್ಪತ್ತಿವಿನಾಶರಹಿತನೂ, ಪ್ರಭುವೂ ಸ್ವಸಾಮರ್ಥ್ಯಪೂರ್ಣನಾಗಿದ್ದರೂ ಆ ಸ್ವಾಮಿಯು ಅಲ್ಪಜನರಲ್ಲಿ ಅಂದರೆ ಅಗ್ನಿ-ಜ್ವರಾದಿ ಅಲ್ಪಪುರುಷರಲ್ಲೂ ಯುದ್ಧ ಪ್ರವೃತ್ತನಾದನೆಂದು ತಿಳಿಯಬೇಕು. ಹೇಗೋ ಶ್ರೀಕೃಷ್ಣನು ವೈಷ್ಣವ ಜ್ವರವನ್ನು ಸೃಜಿಸಿ, ಬಹುಪ್ರಯತ್ನದಿಂದಲೇ ವ್ಯಥೆ ಇಲ್ಲದವನಾಗಿ ಶೈವಜ್ವರವನ್ನು ಜಯಿಸಿದನು ಮುಂತಾದ ವಾಕ್ಯಗಳು ದುರ್ಜನರ ಮೋಹಕ್ಕಾಗಿ ಎಂದು ತೋರುವುವು. ಕೃಷ್ಣನು ಶೈವಜ್ವರ ಬಾಧೆಯನ್ನು ಪಡೆಯದಿರಲೆಂದೇ ವೈಷ್ಣವಜ್ವರವನ್ನು ಸೃಷ್ಟಿಸುವ ಪ್ರಯತ್ನ ಮಾಡಿದನೆಂದು ಏಕೆ ಹೇಳಬಾರದು? ಎಂದರೆ - ನಿತ್ಯಸ್ವತಂತ್ರನಾದ ಆ ಮಹಾನುಭಾವನಿಗೆ ವ್ಯಥಾದಿಗಳಿಲ್ಲ-ವಾದುದರಿಂದ ಅದು ಅಸುರಜನ ಮೋಹನಾರ್ಥವೆಂದು ತಿಳಿಯಬೇಕು.

ಅಗ್ನ್ಯಾದಿರುದ್ರಭೂತಗಳು, ಪ್ರಮಥಗಣಗಳು, ಶೈವಜ್ವರ ಮುಂತಾದವು ಓಡಿಹೋದಮೇಲೆ ಗಿರೀಶನಾದ ಶಿವನು ತಾನೇ ಯುದ್ಧಕ್ಕೆ ಆಗಮಿಸಿದನು. ಆಗ ಶಿವ-ಕೃಷ್ಣರಲ್ಲಿ ಯುದ್ಧ ಜರುಗಿತು. ಕೃಷ್ಣನು ವಿಜೃಂಭಣಾಸ್ತ್ರದಿಂದ ಅಂದರೆ ಸ್ತಂಭನಕರ ಅಸ್ತ್ರದಿಂದ ವಿಜೃಂಭಿಸಿ ರುದ್ರನನ್ನು ಸ್ತಂಭನಗೊಳಿಸಿದನು. ವಿಜೃಂಭಣಾಸ್ತ್ರದಿಂದ ಶಿವನ ಅತ್ತಿತ್ತ ಚಲಿಸಲೂ ಅಸಮರ್ಥನಾಗಿ ಸ್ಥಾಣುವಿನಂತೆ ಅಂದರೆ ಜಡದಂತಾದನು. ಆಗ ಲೋಕಕ್ಕೆ ಸುಖಕರನಾದ ಶಂಕರನು ಅಂತು ಸ್ತಬ್ಧನಾಗಿ ನಿಂತುಬಿಡಲು ದೈತ್ಯಾವೇಶದಿಂದ ವಾಸುದೇವನೆಂದು ತಿಳಿಯದ ರುದ್ರದೇವನಿಗೆ (ಅಲ್ಲಿಗೆ ಬಂದ) ಕಮಲಸಂಭವನಾದ ಬ್ರಹ್ಮನು ಅನೇಕ ವಿಷ್ಣೂತ್ಕರ್ಷಸಾಧನ ಸಮರ್ಥವಾದ ವಾಕ್ಯಗಳಿಂದ ತಿಳಿಸಿ ಹೇಳಿದನು. ಸ್ಥಾಣುವಿನಂತೆ ಚಲಿಸದೆ ಸ್ತಬ್ಧನಾಗಿ ನಿಂತ ರುದ್ರನನ್ನು ಹೇಗೆ ಸಂಬೋಧಿಸಿದನೆಂದರೆ - ಪ್ರಭುವಾದ ಬ್ರಹ್ಮನು ರುದ್ರದೇವನೊಡನೆ ಶ್ರೀಹರಿಯ ಉದರವನ್ನು ಸೇರಿ, ಅಲ್ಲಿ ಅಂದರೆ ವಿಷ್ಣುವಿನ ಉದರದಲ್ಲಿ ಸ್ತಂಭನಾಸ್ತ್ರದಿಂದ ಸ್ತಂಭಿತನಾದ ಶಿವನರೂಪವನ್ನೂ, ಅದರಂತೆ ವಿಷ್ಣುವಿನ ಉದರದಲ್ಲಿರುವ ಶಿವನ ಮತ್ತೊಂದು ರೂಪವನ್ನೂ ತೋರಿಸಿದನು. ಅನಂತರ ಬ್ರಹ್ಮನು "ರುದ್ರ! ಹಿಂದೆ ನೀನು ಅಚ್ಯುತನಿಂದ ಶಿವಪದವನ್ನು ಪಡೆಯಲು ಬಿಲ್ವವನದಲ್ಲಿ ವಿಷ್ಣುವನ್ನು ಕುರಿತು ತಪಸ್ಸು ಮಾಡಿದ್ದೀಯೆ. ನೆನಪಿದೆಯೆ?" ಎಂದು ಶಂಕರನು ನೆರವೇರಿಸಿದ ತಪಸ್ಸಿನ ವಿಚಾರವನ್ನು ಅವನಿಗೆ ಜ್ಞಾಪಿಸಿದನು. ಮತ್ತು ಮುಂದುವರೆದು "ಶಂಕರ! ಶಿವಪದಕ್ಕಾಗಿ ತಪಸ್ಸು ಮಾಡಿದ ನೀನು ಶ್ರೀಹರಿಯ ಅನುಗ್ರಹದಿಂದ ಒಂದುರೂಪದಿಂದ ಶಿವಪದವನ್ನು ಪಡೆದು ಇನ್ನೊಂದು ರೂಪದಿಂದ ನಿನ್ನ ಶಿವಪದಕ್ಕೆ ಅಂತರಾಯ ಬರಬಾರದೆಂದು ತಪಸ್ಸು ಮಾಡುತ್ತಿರುವೆ. ಆ ರೂಪವೇ ಈಗ ಸ್ತಂಭಿತವಾಗಿದೆ. ಆದುದರಿಂದ ನೀನು ಶ್ರೀಹರಿಯನ್ನು ಸ್ತುತಿಸಿ ಅವನ ಅನುಗ್ರಹವನ್ನು ಸಂಪಾದಿಸು. ಇಲ್ಲದಿದ್ದರೆ ಈ ಸ್ತಂಭನವು ಹೋಗದೆ, ತಪಸ್ಸು ಮಾಡಲಾಗದೆ ನಿನ್ನ ಶಿವಪದಕ್ಕೂ ವ್ಯತ್ಯಯ ಬರುವುದು" ಎಂದು ಹೇಳಿದನು. ಆಗ ರುದ್ರದೇವನು ಬ್ರಹ್ಮನ ಮಾತು ಕೇಳಿದ ಮೇಲೆ ಮೋಹವನ್ನು ಬಿಟ್ಟು ಅಂದರೆ ಶ್ರೀಹರಿ ವಿಷಯಕ ಮಿಥ್ಯಾಜ್ಞಾನದಿಂದ ದೂರಾಗಿ ಶ್ರೀವಾಸುದೇವನನ್ನು ಸ್ತುತಿಸಿ ಅವನ ಪ್ರಸಾದದಿಂದ ಸ್ತಂಭನದಿಂದ ಮುಕ್ತನಾಗಿ ಹೊರಟುಹೋದನು.

ಆ ತರುವಾಯ ಬಾಣಾಸುರನು ಹರಿಯೊಡನೆ ಹೋರಾಡಲು ಬಂದನು. ಕೃಷ್ಣನು ಅವನ ಸಹಸ್ರಬಾಹುಗಳನ್ನೂ ಶಿರಸ್ಸನ್ನೂ ಛೇದಿಸಲು ಸುದರ್ಶನಧಾರಿಯಾಗಿ ನಿಂತು ಅಸುರಭಾವದಿಂದ ದೂರಾದ ಅವನನ್ನು ತನ್ನ ಭಕ್ತನನ್ನಾಗಿ ಮಾಡಿದನು. ಬಾಣಾಸುರನ ಸಹಸ್ರ ಬಾಹುಗಳನ್ನು ಕತ್ತರಿಸಿ, ಅವನ ಶಿರಚ್ಛೇದನಕ್ಕಾಗಿ ಚಕ್ರಧರಿಸಿ ನಿಂತಾಗ ರುದ್ರದೇವನು

ಬಂದು ಬಾಣನ ಪ್ರಾಣ ಉಳಿಸುವಂತೆ ಬೇಡಿ ನಮಸ್ಕರಿಸಿದನು. ಅದರಿಂದ ಪ್ರೀತನಾದ ಶ್ರೀಕೃಷ್ಣನು ಬಾಣಾಸುರನ ಎರಡು ಭುಜಗಳನ್ನೂ, ಶಿರಸ್ಸನ್ನೂ ಉಳಿಸಿ ಅಸುರಾವೇಶದಿಂದ ದೂರಾದ ಬಾಣಾಸುರನಿಂದ ಸ್ತುತನಾಗಿ ತನ್ನ ಭಕ್ತನಾದ ಬಾಣನನ್ನು ಆ ಪ್ರಭುವು ರಕ್ಷಿಸಿದನು. ರುದ್ರನನ್ನು ಜಯಿಸಿದ ಮೇಲೆ ಯುದ್ಧಕ್ಕೆ ಬಂದ ಷಣ್ಮುಖನನ್ನೂ ಜಯಿಸಿದನು. ಬಾಣಾಸುರನು ಅನಿರುದ್ಧನನ್ನು ಬಂಧನದಿಂದ ಮುಕ್ತಗೊಳಿಸಿ ಉಷೆಯನ್ನೂ ಸಮರ್ಪಿಸಿದನು. ಶ್ರೀಕೃಷ್ಣನು ಬಾಣನಿಂದ ಪೂಜಿತನಾಗಿ ದ್ವಾರಕೆಗೆ ದಯಮಾಡಿಸಿದನು.

ಹೀಗೆ ಶ್ರೀಕೃಷ್ಣನು, ರುದ್ರಸಂಬಂಧಿ ಅಗ್ನಿರೂಪಭೂತಗಳು ಅಂಗಿರಸಾಗ್ನಿ, ಪ್ರಮಥಗಣಗಳು, ಶೈವಜ್ವರ, ಷಣ್ಮುಖ ಮತ್ತು ಉಮಾಪತಿಯನ್ನೂ, ಬಾಣನನ್ನೂ ಪ್ರಯತ್ನವಿಲ್ಲದಲೆ ಜಯಿಸಿ ದ್ವಾರಕಾಪುರಿಗೆ ತೆರಳಿದನು. ಸರ್ವಲೋಕಹರನಾದ ಶಂಕರನನ್ನೂ ಸುಲಭವಾಗಿ ಜಯಿಸಿದ ಶ್ರೀವಿಷ್ಣುವಿಗೆ ಜ್ವರಾದಿಗಳನ್ನು ಗೆಲಿಯುವುದೊಂದು ಅಸಾಧ್ಯಕಾರ್ಯವಾದೀತೇ? ಈ ಬ್ರಹ್ಮಕಲ್ಪದಲ್ಲಿರುವ ಬ್ರಹ್ಮರುದ್ರ ಸದೃಶರಾದ ಭೂತಭವಿಷ್ಯತ್ಕಲ್ಪದ ಅನಂತಸಂಖ್ಯಾಕರಾದ ಬ್ರಹ್ಮರುದ್ರಾದಿಗಳು ಯಾವ ಶ್ರೀಹರಿಯ ಕೃಪಾವಲೋಕನವಿಲ್ಲದೆ ಕೈಬೆರಳು ಮುಂತಾದ ಅವಯವಗಳನ್ನು ಚಲಿಸಲೂ ಸಾಧ್ಯವಿಲ್ಲವೋ, ಜ್ಞಾನ-ಇಚ್ಛಾ-ಧರ್ಮ-ಸ್ವರೂಪ ಸತ್ತಾದಿಗಳು ಯಾವ ರುದ್ರಾದಿಗಳಿಗೆ ಸ್ವತಂತ್ರವಾಗಿ ಇಲ್ಲವೋ, ಅಂತಹ ಅನಂತಶಕ್ತಿ ಸಂಶೋಭಿತನಾದ ಶ್ರೀವಾಸುದೇವ ಕೃಷ್ಣನಿಗೆ ಈ ರುದ್ರಜಯವು ಆಶ್ಚರ್ಯಕರವಾದುದೇನಲ್ಲ!

ಅನಂತರ ಶ್ರೀಕೃಷ್ಣನು ಅಣ್ಣ ಬಲರಾಮ, ಪುತ್ರ ಪ್ರದ್ಯುಮ್ನ, ಮೊಮ್ಮಗನಾದ ಅನಿರುದ್ಧ, ಉಷಾ ಮತ್ತು ಚಿತ್ರಲೇಖೆಯರೊಡನೆ ಗರುತ್ಮಂತನ ಹೆಗಲೇರಿ ದ್ವಾರಕಾನಗರಕ್ಕೆ ಆಗಮಿಸಿದನು. ಅಲ್ಲಿ ಚಿರಕಾಲ ನಿತ್ಯಾನಂದನಾದ ಶ್ರೀಕೃಷ್ಣನು ತನ್ನ ಇಚ್ಛೆಯಿಂದಲೇ ರಮಿಸಿದನು. ಹೀಗೆ ಅಗಣಿತಮಹಿಮಾಶಾಲಿಯಾದ ಮಹೋತ್ಸವವುಳ್ಳ, ಯದುಕುಲಶ್ರೇಷ್ಠನಾದ ಕೃಷ್ಣನ ನಿತ್ಯಾನಂದವು ಸುರಾಸುರರಿಗೆ ಜ್ಞಾನ-ಮೋಹಗಳನ್ನುಂಟು ಮಾಡುವ ಕಾರ್ಯಗಳನ್ನು, ಶ್ರೀರಮಾ, ಬ್ರಹ್ಮ-ರುದ್ರ-ಇಂದ್ರ-ಸೂರ್ಯಾದಿಗಳು ಸ್ತೋತ್ರ ಮಾಡಿದ್ದಾರೆ. ಯೋಗ್ಯರಿಗೆ ಬಂಧಪರಿಹಾರಕವಾಗಿದೆ (ಮೋಕ್ಷಪ್ರದವಾಗಿದೆ) ನಿತ್ಯ ಎಂದರೆ ಪ್ರತಿಕಲ್ಪದಲ್ಲೂ ಅಥವಾ ನಿತ್ಯವೂ ಈ ವಿಧವಾದ ವ್ಯಾಪಾರಗಳು ಸ್ತುತವಾಗಿದೆಯೆಂದು ಭಾವ. ಇಂತು ಅಪರಿಮಿತ ಪೌರುಷವೀರ್ಯಸಾರನೂ, ಪುರುಷೋತ್ತಮನೂ ಆದ ಶ್ರೀಕೃಷ್ಣಪರಮಾತ್ಮನು ಲೀಲೆಗಳನ್ನು ತೋರುತ್ತಾ ದ್ವಾರಕೆಯಲ್ಲಿ ಸುಖವಾಗಿ ವಾಸಿಸಿದನು.

ಇತ್ತ ಸ್ವರ್ಗಲೋಕದಲ್ಲಿದ್ದ ಇಂದ್ರ ಮತ್ತು ಧನಂಜಯರು ಪಾಂಡವರಿಗೆ ಸಹಾಯಕರಾಗಿರುವಂತೆ ಹೇಳಿಕಳಿಸಿಕೊಟ್ಟು ಲೋಮಶ ಮುನಿಗಳು ಪಾರ್ಥರಿದ್ದಲ್ಲಿಗೆ, ಅವರು ಕೈಗೊಂಡ ತೀರ್ಥಯಾತ್ರೆ ಸಹಾಯಕರಾಗಿ ಬಂದು ಸೇರಿದರು. ಪೃಥಿವಿಯ ಅಂದರೆ ಭರತವರ್ಷದ ಪ್ರದಕ್ಷಿಣಾಕಾರವಾಗಿ ಹೊರಟ ಪಾಂಡವರು ಸಕಲತೀರ್ಥಕ್ಷೇತ್ರದರ್ಶನ, ಸ್ನಾನ-ಸೇವನಾದಿಗಳನ್ನು ಶ್ರದ್ಧಾಪೂರ್ವಕವಾಗಿ ಸಕ್ರಮವಾಗಿ ನೆರವೇರಿಸುತ್ತಾ ಆಯಾ ತೀರ್ಥಕ್ಷೇತ್ರಗಳನ್ನು ಶ್ರೀಹರಿಯನ್ನು ಭಕ್ತಿ ಪುರಸ್ಸರವಾಗಿ ಪೂಜಿಸಿ, ಆ ಫಲವನ್ನು ಶ್ರೀಕೃಷ್ಣನಿಗೆ ಸಮರ್ಪಿಸಲು ಪ್ರಭಾಸಕ್ಷೇತ್ರಕ್ಕೆ ಬಂದರು. ಅವರನ್ನು ಸಂಭಾವಿಸಲು ಬಲರಾಮ ಮತ್ತು ಸಕಲಯಾದವರೊಡನೆ ಶ್ರೀಹರಿಯು ಅಲ್ಲಿಗೆ ಬಂದನು. ಪಾಂಡವರು ವಾಸುದೇವನನ್ನು ಪೂಜಿಸಿದರು. ಕೃಷ್ಣನ ಆಣತಿಯಂತೆ ಯಾದವರು ಪಾಂಡವರನ್ನು ಪೂಜಿಸಿದರು. ಪಾಂಡವರಲ್ಲಿ ಜಟಾವಲ್ಕಲಧಾರಿಯಾಗಿ ತಪಸ್ವಿಗಳ ವೇಷದಲ್ಲಿದ್ದ ಭೀಮಸೇನನನ್ನು ಕಂಡು, ಅವನಲ್ಲಿರುವ ಅತಿಶಯ ಸ್ನೇಹದಿಂದ ಬಲರಾಮನು ಅವರಿಗೀ ಅವಸ್ಥೆಯನ್ನು ತಂದೊಡ್ಡಿದ ದುರ್ಯೋಧನನನ್ನು ನಿಂದಿಸಿದನು. ಆಗ ಸಾತ್ಯಕಿಯು "ಬಲದೇವ! ನಾವೀಗಲೇ ಕರ್ಣಸಹಿತನಾದ ದುರ್ಯೋಧನ ಮೊದಲಾದ ಧೃತರಾಷ್ಟ್ರನ ಮಕ್ಕಳನ್ನು ಸಂಹರಿಸಿ, ಹದಿಮೂರು ವರ್ಷಗಳಾಗುವವರಗೆ ಹಸ್ತಿನಾಪುರ ರಾಜ್ಯ ಸಿಂಹಾಸನದಲ್ಲಿ ನಮ್ಮ ಅಭಿಮನ್ಯುವನ್ನು ಕೂಡಿಸೋಣ. ಹದಿಮೂರು ವರ್ಷಗಳಾದ ಮೇಲೆ ಧರ್ಮರಾಜನು

ರಾಜ್ಯವಾಳಲಿ!" ಎಂದು ಹೇಳಿದನು. ಸಾತ್ಯಕಿಯ ಮಾತುಕೇಳಿ ಕೃಷ್ಣನು ಪಾಂಡವರ ಮುಖವನ್ನು ನೋಡುತ್ತಾ "ಸಾತ್ಯಕೀ! ನಮ್ಮ ಪಾಂಡವರು ಮತ್ತೊಬ್ಬರು ಸಂಪಾದಿಸಿಕೊಟ್ಟ ರಾಜ್ಯವನ್ನು ಬಯಸುವವರಲ್ಲ! ಸ್ವತಃ ಅವರು ಸ್ವಸಾಮರ್ಥ್ಯದಿಂದ ಶತ್ರುಗಳನ್ನು ನಿಗ್ರಹಿಸಿ ವಿಜಯಶಾಲಿಗಳಾಗಿ ರಾಜ್ಯವಾಳುತ್ತಾರೆ" ಎಂದನು. ಜನಾರ್ದನನ ಮಾತನಾಲಿಸಿ ಪಾಂಡವರು "ನಿಜ, ಶ್ರೀಕೃಷ್ಣನು ಹೇಳಿದ್ದು ಸರಿಯಾಗಿದೆ" ಎಂದರು. ಅನಂತರ ಯಾದವರು ಪಾಂಡವರಿಂದ ಬೀಳ್ಕೊಂಡು ತಮ್ಮ ನಗರಕ್ಕೆ ಹೊರಟುಹೋದರು.

ಯಾದವರು ತೆರಳಿದ ಮೇಲೆ ಪಾಂಡವರು ಹಿಮವತ್ಪರ್ವತಕ್ಕೆ ಬಂದರು. ಆ ಪ್ರದೇಶವು ಹೋಗಲು ಅತ್ಯಂತ ಕಷ್ಟಕರವಾಗಿದ್ದುದರಿಂದ ಮಾರ್ಗತಪ್ಪಿ ಸುತ್ತಿಸುತ್ತಿ ಬಳಲಿ ಶ್ರಾಂತರಾದರು. ಸತೀಮಣಿಯಾದ ದ್ರೌಪದಿಗುಂಟಾದ ಕಷ್ಟವನ್ನು ಕಂಡು ಘಟೋತ್ಕಚನನ್ನು ಸ್ಮರಿಸಿದರು. ನಿಶಾಚರರಿಂದ ಯುಕ್ತನಾದ ಘಟೋತ್ಕಚನು ಕೂಡಲೇ ಅಲ್ಲಿಗೆ ಬಂದೊದಗಿದನು. ಅವನು ತಾಯಿಸ್ವರೂಪಳಾದ ದ್ರೌಪದೀದೇವಿಯನ್ನು ತನ್ನ ಭುಜದ ಮೇಲೆ ಕೂಡಿಸಿಕೊಂಡನು. ಅವನ ಸೇವಕರು ಪಾಂಡವರನ್ನು ಭುಜಗಳ ಮೇಲೆ ಕೂಡಿಸಿಕೊಂಡರು. ಅಲ್ಲಿಂದ ಹೊರಟ ಪಾಂಡವರು ಬದರಿಕಾಶ್ರಮಕ್ಕೆ ಬಂದು ಅಲ್ಲಿ ಶ್ರೀನಾರಾಯಣನ ಪೂಜಾಪೂರ್ವಕವಾಗಿ ತಮಗೆ ವಿಹಿತವಾದ ಪಿತೃಶ್ರಾದ್ಧಾದಿಕರ್ಮಗಳನ್ನು ನೆರವೇರಿಸಿ ಹಿಮವತ್ಪರ್ವತವನ್ನು ಬಿಟ್ಟು ಉತ್ತರದಿಕ್ಕಿಗೆ ಪ್ರಯಾಣ ಬೆಳೆಸಿದರು. ಅವರು ಹೇಮಕೂಟಗಿರಿ, ನಿಷಾಧಗಿರಿಗಳನ್ನು ದಾಟಿ, ಮೇರುಪರ್ವತದ ಉತ್ತರ ದಿಕ್ಕಾಗಿರುವ ಗಂಧಮಾದನ ಪರ್ವತದಲ್ಲಿರುವ ಭೂಮಿಯಲ್ಲಿ ಶ್ರೇಷ್ಠವಾದ ಬದರಿಕಾಶ್ರಮವನ್ನು ಸೇರಿದರು. ಗಂಧಮಾದನದಲ್ಲಿರುವುದು ಮೂರನೆಯ ಬದರಿಕಾಶ್ರಮವು. ಅಂದರೆ ನಾರಾಯಣಾಶ್ರಮವು. ಪಾಂಡವರು ಅಲ್ಲಿಗೆ ಬಂದರೆಂದು ಭಾವ.

ಹೀಗೆ ಪಾಂಡವರು ಅಲ್ಲಿ ವಾಸ ಮಾಡುತ್ತಿರುವಾಗ ಒಂದು ದಿನ ಭೀಮಸೇನ-ದ್ರೌಪದಿಯರು ಅಲ್ಲಿನ ವನಪ್ರಾಂತ್ಯದಲ್ಲಿ ಏಕಾಂತವಾಗಿ ವಿಹಾರ ಮಾಡುತ್ತಿರುವಾಗ ವಾಸುದೇವನ ಉತ್ತಮಾಸನನಾದ ಗರುತ್ಮಂತನು ಅಲ್ಲಿನ ಸನಿಹದ ಗಂಭೀರಸರಸ್ಸಿನಲ್ಲಿದ್ದ ಉರುಗವೊಂದನ್ನು (ಹಾವನ್ನು) ಅಪಹರಿಸಿ ಹಾರಿದನು. ಗರುಡನ ಬಿರುಸಾದ ರೆಕ್ಕೆಗಳ ಚಾಲನದಿಂದ ಗಂಧಮಾದನ ಪರ್ವತವು ಅಲುಗಾಡಿತು. ಆಗ ಬಂಗಾರದ ಕಾಂತಿಪುಂಜರಂಜಿತವಾದ ಸುವರ್ಣಕಮಲವೊಂದು ಹಾರಿಬಂದು ಭೀಮ-ಪಾಂಚಾಲಿಯರ ಮುಂಭಾಗದಲ್ಲಿ ಬಿದ್ದಿತು. ಅತಿಸುಗಂಧಯುಕ್ತವಾದ ಆ ಕಮಲವನ್ನು ನೋಡಿ ದೇವತೆಗಳು, ದೈತ್ಯರಿಂದಲೂ ಸಹಿಸಲಸದಳವಲ್ಲದ ಭೀಮಸೇನನ ಸಾಮರ್ಥ್ಯವನ್ನು ತಿಳಿದಿರುವ ದ್ರೌಪದಿಯು ತಾವೀಗ ನೋಡಿದಂತಹ ಅನೇಕ ಕಮಲಗಳನ್ನು ತನಗೆ ತಂದುಕೊಡುವಂತೆ ಭೀಮನನ್ನು ಪ್ರಾರ್ಥಿಸಿದಳು. ಅವಳ ಪ್ರಾರ್ಥನೆಗೆ ಓಗೊಟ್ಟು ವಾಯುನಂದನನಾದ ಭೀಮನು ಗದಾಪಾಣಿಯಾಗಿ ಎತ್ತರವಾದ ಆ ಪರ್ವತ ಶಿಖರವನ್ನು ವೇಗವಾಗಿ ಏರಿದನು. ಅಲ್ಲಿ ಸುರ-ಸಿದ್ಧಸಮೂಹದಿಂದ ಸ್ತುತಿಸಿಕೊಳ್ಳುತ್ತಾ ಸಿಂಹ, ಶಾರ್ದೂಲರೂಪವಾದ ದೈತ್ಯರನ್ನು ಮರ್ದಿಸುತ್ತಾ, ಆ ಗಿರಿಯಲ್ಲಿ ಮೇಲೆದ್ದು ಬರುವ ಸೂರ್ಯನಂತೆ ಕಾಂತಿಯಿಂದ ಕಂಗೊಳಿಸುವ ಶ್ರೀಹನುಮಂತನೆಂಬ ಹೆಸರಿನ ತನ್ನ ಮತ್ತೊಂದು ರೂಪವನ್ನು ಕಂಡು ಭೀಮಸೇನನು ಆ ಹನುಮಂತನ ಬಳಿಗೆ ಬಂದನು.

ಶ್ರೀಪವಮಾನನಂದನನಾದ ಭೀಮನು ಹನೂಮಂತನು ತನ್ನ ಮತ್ತೊಂದು ರೂಪವೆಂದು ತಿಳಿದಿದ್ದರೂ ಸಹ, ಬೇರೆಯವರೊಡನೆ ವ್ಯವಹರಿಸುವ ಮನುಷ್ಯನಂತೆ ಹನುಮಂತನೊಡನೆ ಕ್ರೀಡಿಸಿದನು. ದೇವತೆಗಳು ಮಾನವರಾಗಿ ಅವತರಿಸಿದಾಗ ತಮ್ಮ ಅವತಾರದ ಮತ್ತೊಂದು ರೂಪದೊಡನೆ ವ್ಯವಹರಿಸುವಾಗ ಆ ರೂಪವು ತಮ್ಮದೆಂದು ತಿಳಿದಿದ್ದರೂ ಇತರ ಮಾನವರಂತೆಯೇ ಬೇರೊಬ್ಬರಂತೆ ವರ್ತಿಸುವುದು ದೇವತೆಗಳಿಗೆ ಪರಮ ಧರ್ಮವು. ಅದರಲ್ಲೂ ಮನುಷ್ಯರಾಗಿ ಜನಿಸಿರುವಾಗ ಮೂಲರೂಪದಲ್ಲಿರುವ ಶಕ್ತಿ-ಜ್ಞಾನಗಳನ್ನು ಸ್ವೀಕರಿಸದಿರುವುದು, ಸರ್ವದಾ ಆಪತ್ತು, ಆಪತ್ತಿಲ್ಲದ ವೇಳೆ-

ಯಲ್ಲಿಯೂ ಕೂಡ ಸ್ವೀಕರಿಸದಿರುವುದು ಪರಮಧರ್ಮವಾದ್ದರಿಂದ ಭೀಮ-ಹನುಮಂತರು ಒಂದೇ ಮೂಲರೂಪದ ಎರಡು ಅವತಾರಗಳಾಗಿದ್ದರೂ ಬೇರೆಯವರೇನೋ ಎಂಬಂತೆ ವರ್ತಿಸುವುದು, ಮೂಲರೂಪದ ಬಲ-ಜ್ಞಾನಗಳನ್ನು ಪ್ರಕಟಿಸದಿರುವುದು ಧರ್ಮವಾಗಿದೆ. ಇಲ್ಲಿ ಹನುಮಂತನು ಅವತಾರರೂಪದಲ್ಲಿ ಜ್ಯೇಷ್ಠನು. ಭೀಮನು ಕನಿಷ್ಠನು. ಅಂತೆಯೇ ಭೀಮನು ಕನಿಷ್ಠನಂತೆ ವ್ಯವಹರಿಸಿದನೆಂದು ತಿಳಿಯಬೇಕು.

ಈಗ ವಾಯುದೇವರ ಅತಿಶಯ ಮಹತ್ವವನ್ನು ತಿಳಿಸಲು, ಎಲ್ಲ ದೇವತೆಗಳಿಗೆ ಸಾಧಾರಣವಾದ, ಸಾಮಾನ್ಯನ್ಯಾಯವನ್ನು ಹೇಳುತ್ತಾರೆ - ದೇವತೆಗಳು ಮಾನವರಾಗಿ ಜನ್ಮತಾಳಿದಾಗ ಕೃತಯುಗದಲ್ಲಿ ಅವರ ಮೂಲರೂಪದ ಬಲ-ಜ್ಞಾನಾದಿಗಳು ಸ್ವಲ್ಪ ಮರೆಯಾಗಿರುತ್ತವೆ. ತ್ರೇತೆಯಲ್ಲಿ ಹೆಚ್ಚಿನ ಬಲ-ಜ್ಞಾನಾದಿಗಳು ಮರೆಯಾಗುವುವು. ಈ ಕ್ರಮದಿಂದ ಮೂಲ-ರೂಪಾಪೇಕ್ಷಯಾ ಮೂಲರೂಪವನ್ನನುಸರಿಸಿ, ಮೂಲರೂಪಕ್ಕಿಂತಲೂ ಸಕಲಗುಣಗಳೂ ಉತ್ತಮಾಧಮ ಕ್ರಮದಿಂದ ಮೂಲರೂಪಾಪೇಕ್ಷಯಾ ಮರೆಯಾಗುತ್ತವೆ. ಅಂದರೆ ಅಭಿವ್ಯಕ್ತವಾಗುವುದಿಲ್ಲ. ಹಾಗಾದರೆ ಸಂಪೂರ್ಣವಾಗಿ ಪ್ರಕಟ-ವಾಗುವುದಿಲ್ಲವೆ? ಎಂದರೆ ಭಾಗಶಃ (ಏಕದೇಶವ್ಯಕ್ತಿಯಿಂದ) ಮರೆಯಾಗಿರುತ್ತವೆ. ಮೂಲರೂಪಾಪೇಕ್ಷೆಯಿಂದ ಅವತಾರ ರೂಪಗಳಲ್ಲಿ ಕೆಲಗುಣಗಳು ವ್ಯಕ್ತವಾಗಿಯೂ, ಕೆಲಗುಣಗಳು ಅವ್ಯಕ್ತವಾಗಿಯೂ ಇರುತ್ತವೆ. ಕಲಿಯುಗದಲ್ಲಿ ಜ್ಞಾನ-ಬಲಾದಿಗಳು ವ್ಯಕ್ತವಾಗದಿರುವುದಕ್ಕಿಂತ ದ್ವಾಪರದಲ್ಲಿ ಹೆಚ್ಚು ಅಭಿವ್ಯಕ್ತಿಯು, ದ್ವಾಪರಕ್ಕಿಂತ ತ್ರೇತೆಯಲ್ಲಿ ಅದಕ್ಕಿಂತ ಅಧಿಕ ಅಭಿವ್ಯಕ್ತಿಯು, ತ್ರೇತೆಗಿಂತ ಕೃತಯುಗದಲ್ಲಿ ಜ್ಞಾನ-ಬಲಗಳ ಅನಭಿವ್ಯಕ್ತಿಯಿಲ್ಲ. ಅಂದರೆ ಕೃತಯುಗದಲ್ಲಿ ಜ್ಞಾನ-ಬಲಗಳು ವ್ಯಕ್ತವಾದಷ್ಟು ತ್ರೇತೆಯಲ್ಲಿಲ್ಲ. ಅದಕ್ಕಿಂತ ದ್ವಾಪರದಲ್ಲಿ ಇನ್ನೂ ಕಡಿಮೆ, ಅದರಂತೆ ಕಲಿಯುಗದಲ್ಲಿ ಮತ್ತಷ್ಟು ಕಡಿಮೆ - ಹೀಗೆ ಯುಗಾನುಸಾರವಾಗಿ ಬಲ-ಜ್ಞಾನಗಳ ಅಭಿವ್ಯಕ್ತಿಯೆಂದು ತಿಳಿಯಬೇಕು. ಮೂಲರೂಪವು ಉತ್ತಮವಾಗಿದ್ದಲ್ಲಿ ಆವರಣವು (ಅನಭಿವ್ಯಕ್ತಿಯು) ಸ್ವಲ್ಪ ಮಾತ್ರ. ಅಮರರಾದವರಿಗೆ ಆವರಣವು ಹೆಚ್ಚು. ಇದು ಮೂಲರೂಪವನ್ನು ಅನುಸರಿಸಿ ಎಂದು ತಿಳಿಯಬೇಕು.

ಈಗ ಉತ್ತಮ ದೇವತೆಗಳ ವಿಶೇಷವನ್ನು ನಿರೂಪಿಸುವರು :-

ಶ್ರೀಹರಿಗೂ ಇದೇ ನಿರ್ಣಯವೇ? ಎಂದು ಆಶಂಕಿಸಿ ಉತ್ತರಿಸುತ್ತಾರೆ. ಶ್ರೀಹರಿಯು ಮತ್ಸ್ಯಾದಿರೂಪಗಳ ಅವತಾರ ತಾಳಿದಾಗ ಇಲ್ಲಿ ಬಲ-ಜ್ಞಾನಾದಿ ವಿಷಯಗಳಲ್ಲಿ ಸ್ವಲ್ಪ ಅಭಿವ್ಯಕ್ತಿ, ಇನ್ನು ಸ್ವಲ್ಪ ಅನಭಿವ್ಯಕ್ತಿ ಎಂಬುದಿಲ್ಲವೇ ಇಲ್ಲ. ಏಕೆಂದರೆ ಅವನು ಅತ್ಯಂತ ಸುವ್ಯಕ್ತಶಕ್ತನಾಗಿದ್ದಾನೆ. ಆದ್ದರಿಂದ ಶ್ರೀವಿಷ್ಣುವಿಗೆ ಇದು ಅನ್ವಯಿಸುವುದಿಲ್ಲ. ವಾಯುದೇವರಿಗೆ ತಮ್ಮ ಇಚ್ಛಾನುಸಾರವಾಗಿ ಜ್ಞಾನ-ಬಲಾದಿಗಳು ಅಭಿವ್ಯಕ್ತವಾಗುವುವು.

"ಪಯೋಬ್ಧಮಧ್ಯಗಂ ಚ ಯೇ ಸುಸದ್ಮ ಚಾನ್ಯದೇವತಾ ।
ಯಥೇಷ್ಟತೋ ಗಮಿಷ್ಯಸಿ ಸ್ವದೇಹಸಂಯುತೋಽಪಿ ಸನ್ ॥"

ಎಂದು ಶ್ರೀರಾಮದೇವರು ಸ್ವರ್ಗಾರೋಹಣ ಸಮಯದಲ್ಲಿ ಶ್ರೀಹನುಮಂತದೇವರಿಗೆ ಹೇಳಿದ್ದಾರೆ. ಅಂದರೆ - "ವಾಯುನಂದನ! ಕ್ಷೀರಸಮುದ್ರಮಧ್ಯದಲ್ಲಿ ನನ್ನ ಮಂದಿರವಿದೆ. ಇನ್ನಾವ ದೇವತೆಗಳೂ ಅಲ್ಲಿಗೆ ಬರಲು ಶಕ್ತರಲ್ಲ. ಆದರೆ ನೀನು ನಿನಗಿಷ್ಟ ಬಂದಾಗ ಸ್ವಶರೀರಯುಕ್ತನಾಗಿಯೇ ಅಲ್ಲಿಗೆ ಬರಲು (ಹೋಗಲು) ಶಕ್ತನಾಗಿದ್ದೀಯೆ!" ಎಂದು ಭಾವ. ಹನುಮಂತದೇವರ ನಿರುಪಾಧಿಕ ಭಕ್ತ್ಯಾದಿಗಳಿಂದ ನಿತ್ಯತುಷ್ಟನಾದ ವಿಷ್ಣುವಿನ ವರದಿಂದಲೂ ಕೂಡ ಕೆಲವು ಸಲ ಬಲಾದಿಗಳ ಅಭಿವ್ಯಕ್ತಿಯುಂಟೆಂದು ಇಲ್ಲಿ ಪ್ರಾಯಶಃ ಎಂಬುದರಿಂದ ಸೂಚಿಸಿದ್ದಾರೆ. ಪವಮಾನನನ್ನು ಬಿಟ್ಟು ಶೇಷಾದಿಗಳಿಗೆ (ಒಂದು) ನಿಮಿತ್ತ (ಕಾರಣ)ದಿಂದ ಬಲಾದಿಗಳು ಪ್ರಕಟವಾಗುವುವು. "ಸಂಪ್ರಾಪ್ಯ ಸಂಜ್ಞಾಂ ಸ ಸುವಿಹ್ವಲೋಽಪಿ ಸಂಸ್ಕಾರ ರೂಪಂ ನಿಜಮೇವ ಲಕ್ಷ್ಮಣಃ । ಶೇಷಂ ಹರೇರಂಶಯುತಮ್ ॥" ಅಂದರೆ - ಮೂರ್ಛೆ ತಿಳಿದದ್ದು ಅತ್ಯಂತ ವಿಹ್ವಲನಾಗಿದ್ದರೂ,

ಲಕ್ಷ್ಮಣನು ತನ್ನ ಮೂಲರೂಪವನ್ನೇ ಅರ್ಥಾತ್ ಶ್ರೀಹರಿಯ ಅಂಶಯುಕ್ತನಾದ ಶೇಷನ ರೂಪವನ್ನು ಸ್ಮರಿಸಿದನು ಎಂಬುದರಿಂದ ಲಕ್ಷ್ಮಣನಿಗೆ ಶಕ್ತಿಯ ಆವಿರ್ಭಾವಕ್ಕೆ ಶೇಷನ ಸ್ಮರಣೆಯೇ ಕಾರಣವು. "ವಿನತಸ್ಯ ಸುಪರ್ಣಸ್ಯ ತಥಾ ಶತ-ಬಲೇರಪಿ । ತಥಾ ತತ್ಪರಿವಾರಾಣಾಂ ಕಪೀನಾಂ ರಾಮಸೇವಿನಾಂ ॥ ಅತ್ಯಾಯಾಮ ಸಮುದ್ರಾಣಾಂ ತರಣೇ ಶಕ್ತಿರೂರ್ಜಿತಾ । ಇಚ್ಛಯಾ ರಾಮದೇವಸ್ಯ ತದಾಸೀತ್ ಕರುಣಾತ್ಮನಃ ॥" - ಸ್ಕಾಂದ. ಇದರಂತೆ ಶೇಷನಿಗಿಂತ ಶತಬಲ ಅಧಿಕನಾಗಿರುವ ವಿನತ ಮತ್ತು ಗರುಡನ ವಿಷಯವನ್ನು ತಿಳಿಯಬೇಕು. ಇದೇ ಪ್ರಕಾರವಾಗಿ ಶ್ರೀರಾಮನನ್ನು ಸೇವಿಸುವ ಅವನ ಪರಿವಾರದವರಾದ ಕಪಿಗಳಿಗೂ ಕೂಡ ಸಮುದ್ರವನ್ನು ದಾಟುವುದು, ಹಾರುವುದರಲ್ಲಿ (ಹೋಗಿಬರುವುದರಲ್ಲಿ) ಕರುಣಾ-ಮಯನಾದ ಶ್ರೀರಾಮನ ಇಚ್ಛೆಯಿಂದ ಆ ಶಕ್ತಿಯು ಊರ್ಜಿತವಾಯಿತೆಂದು ಸ್ಕಾಂದಪುರಾಣದಲ್ಲಿ ಉಕ್ತವಾಗಿದೆ. ವಿನತಾದಿ ಕಪಿಗಳು ಸಪ್ತದ್ವೀಪಗಳಿಗೆ ಹೋಗಿಬರುವ ಶಕ್ತಿಯುಂಟಾಗಲು ಶ್ರೀರಾಮನ ಇಚ್ಛೆಯೇ ಕಾರಣವೆಂದು ಇಲ್ಲಿ ಏಕದೇಶ-ಕಾರಣವನ್ನು ಉದಾಹರಣಪೂರ್ವಕವಾಗಿ ನಿರೂಪಿಸಲಾಗಿದೆ. ಆದ್ದರಿಂದ ದಿವ್ಯಶಕ್ತಿಯ ವ್ಯಕ್ತಿ-ಅನಭಿವ್ಯಕ್ತಿಯನ್ನು ಪ್ರದರ್ಶಿಸುವುದು ಭೀಮನ ಧರ್ಮವಾಗಿದೆ. ಹನುಮಂತನು ತ್ರೇತಾಯುಗದಲ್ಲಿ ಅವತರಿಸಿದನು. ಭೀಮನು ದ್ವಾಪರದಲ್ಲಿ ಅವತರಿಸಿದನು. ಆದ್ದರಿಂದ ಅವನ ದಿವ್ಯಶಕ್ತಿಯನ್ನು ಸ್ವೀಕರಿಸದಿರುವುದು ಧರ್ಮವಾಗಿರುವುದರಿಂದ ಭೀಮನು ಧರ್ಮವೃದ್ಧ್ಯರ್ಥವಾಗಿಯೇ ತನ್ನ ಈ ರೂಪ ಅಂದರೆ ಭೀಮಾವತಾರ ಮಾಡಿದಾಗ ಇತರ ದೇವತೆಗಳಂತೆಯೇ ಕಾರ್ಯ ಮಾಡುವುದನ್ನು ತೋರಿಸಿದನು. ಮತ್ತು ಅಸುರರನ್ನು ಮೋಹಗೊಳಿಸಲೆಂದೇ ಭೀಮನು ಸಂಪೂರ್ಣಶಕ್ತನಾಗಿದ್ದರೂ ಹನುಮಂತನ ಬಾಲವನ್ನು ಎತ್ತಲು ಅಶಕ್ತನಾಗಿರುವಂತೆ ಪ್ರದರ್ಶನ ಮಾಡಿದನು.

ಭೀಮನು ಹನುಮಂತನನ್ನು ರಾಮಾವತಾರಕಾಲದ ನಿಮ್ಮ ರೂಪವನ್ನು ತೋರಿಸಬೇಕೆಂದು ಕೋರಿದಾಗ ಹನುಮಂತನು ಅತ್ಯಂತ ಅಭಿವೃದ್ಧನಾಗಿ ತನ್ನ ಅದ್ಭುತರೂಪವನ್ನು ತೋರಿಸಿದನು. ಆಗ ಭೀಮಸೇನನು ಮಾರುತಿಯ ಮುಖದಿಂದ ವೇದಾದಿಗಳಲ್ಲಿ ಪ್ರಸಿದ್ಧವಾದ, ಲೋಕವಿಲಕ್ಷಣವಾದ ಚತುಃಸ್ವರೂಪವುಳ್ಳ ಶ್ರೀರಾಮಚಂದ್ರದೇವರ ಕಥೆಯನ್ನು ಕೇಳಿ, ಅಂದರೆ-ಶ್ರೀರಾಮನು ವೇದಗಳಿಂದ ಪ್ರತಿಪಾದ್ಯನಾದ ಶ್ರೀವಾಸುದೇವನು, ಅವನು ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ ಎಂಬ ಚತುಃಸ್ವರೂಪನಾದ ಮಹಾಪ್ರಭುವು. ಶ್ರೀರಾಮನೇ ವಾಸುದೇವನು. ಲಕ್ಷ್ಮಣನು ಸಂಕರ್ಷಣಾವಿಷ್ಟನು. ಭರತನು ಪ್ರದ್ಯುಮ್ನಾವಿಷ್ಟನು, ಶತ್ರುಘ್ನನು ಅನಿರುದ್ಧಾವಿಷ್ಟನು- ಇತ್ಯಾದಿ ಶ್ರೀರಾಮನ ಕಥೆಯನ್ನೂ, ಯಾವಯಾವ ಯುಗಗಳಲ್ಲಿ ಯಾವಯಾವುದು ಧರ್ಮ? ಅಂದರೆ ಚತುರ್ಯುಗದ ಧರ್ಮಗಳನ್ನು ಕೇಳಿ ಪರಮಾನಂದ-ಭರಿತನಾದನು. ಭೀಮನ ಕೋರಿಕೆಯಂತೆ, ರಾಮನಾಗಿ ತ್ರೇತಾಯುಗದಲ್ಲಿ ಇಂದ್ರಾವತಾರನಾದ ವಾಲಿಯನ್ನು ಸಂಹರಿಸಿ-ದ್ದರೂ, ಈಗ ಕೃಷ್ಣಾವತಾರದಲ್ಲಿ ಹಿಂದಿನ ಅವತಾರದ ಶತ್ರುವಾಗಿದ್ದ ಇಂದ್ರನು ಅರ್ಜುನನಾಗಿ ಜನಿಸಿರುವಾಗ ಕೃಷ್ಣರೂಪದಿಂದ ಅವನ ರಥಸಾರಥ್ಯಾದಿಗಳನ್ನು ಮಾಡಿ ಅನುಗ್ರಹಿಸಲಿರುವಂತೆ ನಾನು ಸಹ ಅನುಗ್ರಹಿಸುತ್ತೇನೆ ಎಂದು ಹೇಳಿ ಹನುಮಂತನು ಅರ್ಜುನನ ರಥದಲ್ಲಿ ಧ್ವಜರೂಪನಾಗಿದ್ದು (ಆದ್ದರಿಂದಲೇ ಅರ್ಜುನನಿಗೆ 'ಕಪಿಧ್ವಜ-ಹನುಮದ್ಧ್ವಜ' ಎಂಬ ಕೀರ್ತಿ ಬಂದಿದೆ) ಯುದ್ಧಕಾಲದಲ್ಲಿ ನನ್ನ ಗರ್ಜನೆ ಮಾತ್ರದಿಂದಲೇ ಶತ್ರುಗಳು ಓಡಿಹೋಗುವಂತೆ, ಪರಾಜಿತರಾಗುವಂತೆ ಮಾಡುವುದಾಗಿ ಅರ್ಜುನನಿಗಾಗಿ ಭೀಮಸೇನನಿಗೆ ವರದಾನ ಮಾಡಿ ಕರುಣಿಸಿದನು. ಅನಂತರ ಭೀಮನು ದೇವತಾಶ್ರೇಷ್ಠನಾದ (ದೇವತೆ-ಗಳಲ್ಲಿ ಮುಖ್ಯನಾದ) ವಾಯುದೇವನ ಅವತಾರನೇ ಹನುಮಂತನೆಂದು ತಿಳಿದು ಹಿರಿಯನಾದ ಅವನಿಗೆ ನಮಸ್ಕರಿಸಿ ಅವನ ಅನುಜ್ಞೆ ಪಡೆದು ಸೌಗಂಧಿಕವನಕ್ಕೆ ತೆರಳಿದನು.

ಭೀಮಸೇನನು ಮನುಷ್ಯರಿಂದ ಹೋಗಲು ಸಾಧ್ಯವಿಲ್ಲದ ಆ ಸರೋವರಕ್ಕೆ ಹೋಗಿ ಅಲ್ಲಿರುವ ಅದ್ಭುತಾಕಾರವೂ, ಅತ್ಯಂತ ಸುಗಂಧಪೂರ್ಣವೂ, ದಿವ್ಯವೂ ಆದ ಸುವರ್ಣಕಮಲಗಳನ್ನು ಕಂಡು ನರಭಕ್ಷಕರಾದ ರಾಕ್ಷಸರು ತಡೆಯುತ್ತಿದ್ದರೂ,

ಲೆಕ್ಕಿಸದೆ ಆ ಪದ್ಮಗಳ ಸಮೀಪಕ್ಕೆ ಹೋದನು. ಆಗ ಅಲ್ಲಿದ್ದ ನೂರುಕೋಟಿ ಸಂಖ್ಯಾಕರಾದ ಕ್ರೋಧವಶರೆಂಬ ಗಣದಿಂದ ಜನಿಸಿದ, ಕೋಪಯುಕ್ತರಾದ ರಾಕ್ಷಸರುಗಳು ಒಟ್ಟಾಗಿ ಸೇರಿ ಯುದ್ಧದಲ್ಲಿ ಭೀಮನನ್ನು ಸುತ್ತವರೆದರು. ಅವರು ಶಿವನವರದಿಂದ ಅವಧ್ಯರಾಗಿದ್ದರು. (ಶಿವನವರದಿಂದ ಬೇರಾರೂ ಅವರನ್ನು ಸಂಹರಿಸಲು ಸಾಧ್ಯವಿಲ್ಲದವರೆಂದು ಭಾವ) ಆ ರಾಕ್ಷಸರು ಶಿವಸರ್ವೋತ್ತಮತ್ವವನ್ನು ಸಾಧಿಸಲು ವಾದ ಮಾಡುತ್ತಾ ತಪಸ್ಸಿಗೆ ಆಶ್ರಯನಾದ ಭೀಮನ ಮೇಲೆ ಭಯಂಕರ ಶಸ್ತ್ರಾಸ್ತ್ರಗಳಿಂದ ದಾಳಿ ಮಾಡಿದರು. ವೃಕೋದರನು ಆಗ ಅವರೊಡನೆ ಮೊದಲು ವೈಷ್ಣವ ಶಾಸ್ತ್ರೋದಾಹರಣ ಪೂರ್ವಕವಾಗಿ ತನ್ನ ವಾಕ್ ಪ್ರಾಚುರ್ಯರಿಂದ ವಾಗ್ಯುದ್ಧದಲ್ಲಿ ಅವರನ್ನು ಜಯಿಸಿ ಅನಂತರ ಭೀಕರ ಸಂಗ್ರಾಮದಲ್ಲಿ ಅವರು ಪ್ರಯೋಗಿಸಿದ ಸಮಸ್ತ ಶಸ್ತ್ರಾಸ್ತ್ರಗಳನ್ನು ನಿರೋಧಿಸಿ ತನ್ನ ಪ್ರಚಂಡಗದೆಯಿಂದ ಆ ಎಲ್ಲ ರಾಕ್ಷಸರನ್ನೂ ಸಂಹಾರ ಮಾಡಿದನು.

ಅವಧ್ಯರಾದ ರಾಕ್ಷಸರನ್ನು ಸಂಹರಿಸುವ ಭೀಮಸೇನದೇವರ ಸಾಮರ್ಥ್ಯಾತಿಶಯವನ್ನೀಗ ನಿರೂಪಿಸುವರು –

[38]ಭೀಮಸೇನದೇವರು ವಾಯುದೇವರಿಂದ ಕುಂತಿದೇವಿಯಲ್ಲಿ ಅವತರಿಸಿದರು. ಅತ್ಯಂತ ಬಲಶಾಲಿಗಳು, ಪವನ-ನಂದನರಾದುದರಿಂದ ಶೂರರು. ಅವರನ್ನೆದುರಿಸಲು ಶತ್ರುಗಳಿಗೆ ಅಸಾಧ್ಯವು. ಶತ್ರುನಾಶಕರೂ, ತಪಸ್ವಿಗಳೂ ಆದ ಅವರು ಸತ್ಯ-ಧರ್ಮಗಳಲ್ಲಿ ಆಸಕ್ತರಾದ ಮಹಾನುಭಾವರು. ಸರ್ವದಾ ಅವರನ್ನು ಎದುರಿಸಲು ಶತ್ರುಗಳಿಗೆ ಸಾಧ್ಯವಿಲ್ಲದ ಸಾಮರ್ಥ್ಯಶಾಲಿಗಳವರು. ಆ ಸೌಗಂಧಿಕವನದಲ್ಲಿ ಅಸತ್ಯವಾದ ಅಂದರೆ ಮಿಥ್ಯಾಭೂತವಾದ 'ಜಗತ್ತು ಈಶ್ವರ ನಿರ್ಮಿತವಲ್ಲ, ಪರಮಾತ್ಮನಿಂದ ಪಾಲಿತವಾದುದಲ್ಲ'ವೆಂದು ಹೇಳುವ 'ನಾನು ಸಿದ್ಧ, ನಾನು ಈಶ' ಎಂದು ಹೇಳುವ, ಅಳಿದುಳಿದ ಬಹುಜನ ರಾಕ್ಷಸರನ್ನು ವಿಷ್ಣುವಿನ ಗುಣಗಳನ್ನು ಸ್ಥಾಪಿಸುತ್ತ, "ಶ್ರೀಹರಿಯು ಆನಂದಗುಣ ಪೂರ್ಣನು, ಸರ್ವರಿಂದ ಅಂದರೆ ಕ್ಷರ-ಅಕ್ಷರಗಳಿಂದ ಭಿನ್ನನು, ಸರ್ವೋತ್ತಮನು, ಸತ್ಯಭೂತವಾದ ಸಮಸ್ತಜಗತ್ತನ್ನೂ ನಿರ್ಮಿಸಿ, ಪಾಲಿಸಿ, ಸಂಹರಿಸುವುದೇ ಮುಂತಾದ ಅಷ್ಟಕಾರ್ಯಗಳನ್ನೆಸಗುವ ಮಹಾನುಭಾವನು" ಎಂದು ವಾದಿಸಿ ವಾದರಣದಲ್ಲಿ ಅವರೆಲ್ಲರನ್ನೂ ಗೆದ್ದರು. ಅದರಂತೆ ಕ್ರೋಧಾವಿಷ್ಟರ ಮಧ್ಯೆ ಲಕ್ಷ ಲಕ್ಷ ಸಂಖ್ಯೆಯ ಅತಿಬಲಿಷ್ಠರಾದ ರಿಪುಗಳನ್ನು ಗದಾಘಾತದಿಂದ ಸಂಹಾರ ಮಾಡಿದರು. ಭೀಮಸೇನನಲ್ಲಿರುವ ವಿದ್ಯಾ-ಬಾಹುಬಲಗಳನ್ನು ಕಂಡು ಅನೇಕರು ಯುದ್ಧಮಾಡಿ ಹತರಾದರು. ಇನ್ನುಳಿದ ರಾಕ್ಷಸವೀರರು ವಾಯುನಂದನನೊಡನೆ ಹೋರಾಡಲಶಕ್ತರಾಗಿ ತಕ್ಷಣ ಅಲ್ಲಿಂದ ಪಲಾಯನ ಮಾಡಿದರು. ಕುರುಪ್ರವೀರನಾದ ಭೀಮಸೇನನು ಗದೆಯಿಂದ ರಾಕ್ಷಸರೆಲ್ಲರನ್ನೂ ಹೊಡೆದೋಡಿಸಿ, ಆ ದಿವ್ಯ ಸರೋವರವನ್ನು ಪ್ರವೇಶಿಸಿ, ಅಮೃತಸದೃಶವಾದ ಜಲವನ್ನು ಪಾನ ಮಾಡಿ, ನಂತರ ಆ ಸರಸ್ಸಿನಲ್ಲಿದ್ದ ದಿವ್ಯ ಸುವರ್ಣ ಕಮಲಗಳನ್ನು ಕಿತ್ತುಕೊಂಡನು.

ಇತ್ತ ಧರ್ಮರಾಜನು ಕಲಹಸೂಚಕ ನಿಮಿತ್ತಗಳನ್ನೂ, ಭೀಮನ ಗರ್ಜನೆಯನ್ನೂ ಕೇಳಿ, ಭ್ರಾತೃಸ್ನೇಹದಿಂದ ಭೀಮನಿಗೇನಾಯಿತೋ ಎಂದು ದುಃಖಿತನಾಗಿ ದ್ರೌಪದಿಯನ್ನು ಭೀಮನೆಲ್ಲಿ ಎಂದು ಕೇಳಿದನು. ದ್ರೌಪದಿಯು ಸೌಗಂಧಿಕಪುಷ್ಪವನ್ನು ತರಲು ಹೋಗಿರುವನೆಂದು ಹೇಳಿದಳು, ಆಗ ಸಹೋದರ ಸದೃಶರಾದ ಯತಿಮುನಿಗಳು, ದ್ರೌಪದಿ, ನಕುಲ ಸಹದೇವರೊಡನೆ ಯುಧಿಷ್ಠಿರನು ರಾಕ್ಷಸರ ಭುಜವೇರಿ ಕುಳಿತು ಭೀಮನಿದ್ದ ಸ್ಥಳಕ್ಕೆ ಬಂದು ಕಮಲಗಳನ್ನು ಕಿತ್ತುತ್ತಿರುವ ಭೀಮನನ್ನು ಕಂಡು ಶಿವನಿಗೆ ಕೋಪಬರುವುದೆಂದು ಹೆದರಿ "ಭೀಮಸೇನ, ಕಮಲಗಳನ್ನು ಕಿತ್ತಬೇಡ. ರಾಕ್ಷಸರನ್ನು ಕೊಲ್ಲಬೇಡ" ಎಂದು ಹೇಳಿದನು. ರುದ್ರದೇವರಿಗೆ ಕೋಪ ಬರುವುದೆಂದು ಧರ್ಮರಾಜನು ಏಕೆ ಚಿಂತಿಸಿದ? ಎಂದರೆ ಅದಕ್ಕೆ ಕಾರಣವನ್ನು ಹೇಳುತ್ತಾರೆ. ರಾಕ್ಷಸರು ದೇವತೆಗಳಿಂದ ತಮಗೆ ಮರಣ ಸಂಭವಿಸಬಹುದೆಂದು ಹೆದರಿ

---

38. ವಾತೇನ ಕುಂತ್ಯಾ ಬಲವಾನ್ ಪ್ರಜಾತಃ ಶೂರಸ್ತಪಸ್ವೀ ದ್ವಿಷತಾಂ ನಿಹಂತಾ ।
ಸತ್ಯೇ ಚ ಧರ್ಮೇ ಚ ರತಸ್ತಥೈವ ಪರಾಕ್ರಮೇ ಶತ್ರುಭಿರಪ್ರಧೃಷ್ಯಃ ॥

ಕುಬೇರನಿಗೆ ಶರಣಾಗಿ ಅವನ ಸೇವಾವೃತ್ತಿಯನ್ನು ಸ್ವೀಕರಿಸಿದ್ದಾರೆ. ಅವರು ಕುಬೇರನ ಅಪ್ಪಣೆಯಂತೆ ಆ ಸೌಗಂಧಿಕವನದಲ್ಲಿರುವ ದಿವ್ಯಕಮಲಗಳಿಂದ ಶೋಭಿಸುವ ಸರೋವರವನ್ನು ರಕ್ಷಿಸುತ್ತಿದ್ದಾರೆ. ಆ ರಾಕ್ಷಸರಿಗೆ ರುದ್ರದೇವರು ಆಶ್ರಯರಾಗಿದ್ದಾರೆ. ರುದ್ರದೇವರ ಆಶ್ರಯದಲ್ಲಿರುವ ಆ ರಾಕ್ಷಸರನ್ನು ಸಂಹರಿಸುವುದರಿಂದ ರುದ್ರದೇವರಿಗೆ ಕೋಪ ಬರುವುದೆಂಬ ಭಯದಿಂದ ಧರ್ಮರಾಜನು 'ಭೀಮ, ಹೀಗೆ ಮಾಡಬೇಡ' ಎಂದು ಹೇಳಿದನೆಂದು ತಿಳಿಯಬೇಕು. ಆದರೆ ಕುಬೇರನು ಭೀಮಸೇನನ ಮಹತ್ವಮಹಿಮೆಗಳನ್ನು ಬಲ್ಲವನಾದ್ದರಿಂದ ಭೀಮನೆಸಗಿದ ಕೃತ್ಯದಿಂದ ಕೋಪಗೊಳ್ಳಲಿಲ್ಲ.

ಪಾಂಡವರು ಗಂಧಮಾದನ ಪರ್ವತದಲ್ಲಿ ಕೆಲಕಾಲ ವಾಸ ಮಾಡಿದರು. ಕುಬೇರಾಧಿಷ್ಠಿತ ಮೇರುಪರ್ವತದ ಉತ್ತರಭಾಗದ ಗಿರಿಪ್ರದೇಶದಲ್ಲಿರುವ ಸರೋವರದಲ್ಲಿರುವುದು ಒಂದೇ ವರ್ಣದ ಸುವರ್ಣಕಮಲವು. ಅದೇ ಭೀಮ-ದ್ರೌಪದಿಯರು ವಿಹರಿಸುವಾಗ ಗರುಡನ ರೆಕ್ಕೆಯ ಗಾಳಿಯಿಂದ ಹಾರಿಬಂದು ಅವರ ಮುಂದೆಬಿದ್ದ ಸುವರ್ಣಕಮಲವು. ಅದು ಒಂದೇ ವರ್ಣವುಳ್ಳದ್ದು. ಮೇರುಪರ್ವತದ ಶಿರೋಭಾಗದ ಸರೋವರದಲ್ಲಿ ಬಿಳಿ ಇತ್ಯಾದಿ ಐದು ವರ್ಣಗಳ ಕಮಲಗಳಿವೆ. ಆ ಕೆಲ ಕಮಲಗಳನ್ನೇ ಭೀಮನು ತಂದು ದ್ರೌಪದಿಗೆ ಪ್ರೀತಿಯಿಂದ ಕೊಟ್ಟನು. ಕುಬೇರನ ಸೌಗಂಧಿಕವನದಲ್ಲಿದ್ದ ಸರೋವರದಿಂದ ಭೀಮಸೇನನು ತಂದ ಶ್ವೇತಾದಿ ಪಂಚವರ್ಣದ ಕಮಲಗಳನ್ನು ಕಂಡು ದ್ರೌಪದಿಯು ಪಂಚವರ್ಣ ಕಮಲ ವ್ಯಾಜದಿಂದ ಪದ್ಮತ್ರಯ ಸಂಖ್ಯಾಕರಾದ ರಾಕ್ಷಸರ ಸಂಹಾರ ಮಾಡಿಸುವ ಮೂಲಕ ಭೀಮನ ಕೀರ್ತಿ ಮತ್ತು ಧರ್ಮಗಳು ಅಭಿವೃದ್ಧಿಸುವಂತೆ ಮಾಡಲು ಹೀಗೆ ಹೇಳಿದಳು – "ಈ ಗಂಧಮಾದನ ಪರ್ವತವು ಪುರುಷರಿಂದ ಹೋಗ-ಲಾಗದಂತಹುದು. ಏಕೆಂದರೆ ಬಲಿಷ್ಠನಾದ ಕುಬೇರನಿಂದ ಅದು ಪಾಲಿತವಾಗಿದೆ. ಆದುದರಿಂದ ನೀನೇ ಎಲ್ಲ ರಾಕ್ಷಸರನ್ನು ಸಂಹರಿಸಿ ಅಲ್ಲಿಗೆ ಹೋಗಬೇಕು" ದ್ರೌಪದಿಯು ಮಣಿಮಂತನೇ ನಾಯಕನಾಗಿರುವ ಮೂರುಪದ್ಮ ಸಂಖ್ಯಾತರಾದ ರಾಕ್ಷಸರ ಹನನವಾಗಬೇಕೆಂದು ಬಯಸಿದಳು. ಭಾರತೀದೇವಿಯ ಭಾವವನ್ನು ಭಾರತೀಪತಿಗಳೇ ಬಲ್ಲವರಾದ್ದರಿಂದ ದ್ರೌಪದಿಯ ಮಾತಿಗೆ ಸಮ್ಮತಿಸಿದರೆಂದು ತಿಳಿಯಬೇಕು.

ಇಲ್ಲಿ 'ಕುಬೇರಪಾಲಿತ' ಎನ್ನುವುದರಿಂದ ಭೀಮನ ಯಶೋಭಿವೃದ್ಧಿಯೂ, 'ರಾಕ್ಷಸರನ್ನು ಸಂಹರಿಸಿ' ಎನ್ನುವುದರಿಂದ ರಾಕ್ಷಸಹನನದಿಂದ ಧರ್ಮಾಭಿವೃದ್ಧಿಯೂ ಸೂಚಿತವಾಗಿದೆ. ಆಗ ಗದಾ, ಧನುರ್ಬಾಣಗಳಿಂದ ಸಿದ್ಧನಾಗಿ ಅಜೇಯವಾದ ಅಧಿಕಬಲಸಂಪನ್ನನಾದ ಭೀಮಸೇನನು ಅತಿ ಶೀಘ್ರವಾಗಿ ಗಂಧಮಾದನ ಪರ್ವತವನ್ನು ಏರಿದನು. ವಾಯುಸೂನುವಾದ ಭೀಮನಲ್ಲಿಗೆ ಆಗಮಿಸಿದ ವಿಷಯವರಿತು ಉದ್ಧತರಾದ ಪದ್ಮತ್ರಯ ಸಂಖ್ಯಾತರಾದ ರಾಕ್ಷಸರು ಮಣಿಮಂತನನ್ನು ಮುಂದೆ ಮಾಡಿಕೊಂಡು ವಿವಿಧ ಶಸ್ತ್ರಾಸ್ತ್ರ ವೃಷ್ಟಿ ಮಾಡುತ್ತಾ ಭೀಮನನ್ನು ತರುಬಿದರು. ಭೀಮಸೇನನು ಆಗ ಬಾಣಗಳ ಮಳೆಗರೆದು ಮಣಿಮಂತ ಸಹಿತರಾದ ಸಮಸ್ತ ರಾಕ್ಷಸರನ್ನೂ ಸಂಹರಿಸಿದನು. ಭೀಮನು ಸೌಗಂಧಿಕಪುಷ್ಪವನ್ನು ತರುವಾಗ ಜರುಗಿದ ಸಂಹಾರಕಾಲದಲ್ಲಿ ಓಡಿಹೋಗಿದ್ದ ಅಳಿದುಳಿದ ಕ್ರೋಧಯುಕ್ತರಾದ ರಾಕ್ಷಸರನ್ನು ಕ್ಷಣಮಾತ್ರದಲ್ಲಿ ಕೊಂದುಹಾಕಿ ಪರ್ವತದ ಶೃಂಗಾಗ್ರಭಾಗದಲ್ಲಿ ನಿಂತನು. ಭೀಮನಿಂದ ಹತರಾದ ಆ ಎಲ್ಲ ರಾಕ್ಷಸರೂ ಅಂಧಂತಮಸ್ಸಿಗೆ ಹೋದರು. ಸೌಗಂಧಿಕವನದಲ್ಲಿ ಹತನಾದ ಮಣಿಮಂತನು ಕಲಿಯುಗದಲ್ಲಿ ಪುನಃ ಜನಿಸಿ ಮಿಥ್ಯಾಜ್ಞಾನವನ್ನು ಪ್ರಸಾರಮಾಡಿ ತನ್ನ ಯೋಗ್ಯತೆಗೆ ತಕ್ಕಂತೆ ಅಧಿಕ ದುಃಖಾಭಿವೃದ್ಧಿಗಾಗಿ ತಮಸ್ಸನ್ನು ಪಡೆದನು.

ಆ ತರುವಾಯ ಮೂರು ಪದ್ಮ ಸಂಖ್ಯಾತರಾದ ಅವಧ್ಯರಾದ ರಾಕ್ಷಸರನ್ನೂ ಮತ್ತು ತನ್ನ ಮಿತ್ರನಾದ ಮಣಿಮಂತನನ್ನೂ ಭೀಮನು ಸಂಹರಿಸಿದ ಮೇಲೆ ಅಸುರಾವೇಶ ವಶನಾದ ವಿತ್ತೇಶನು (ಕುಬೇರನು) ಭೀಮನ ಮೇಲೆ ಬಹುಕೋಪಗೊಂಡು ರಥಾರೂಢನಾಗಿ ಭೀಮನೊಡನೆ ಯುದ್ಧಮಾಡಲು ಸ್ವತಃ ತಾನೇ ಬಂದನು. ಅದೇ ಸಮಯದಲ್ಲಿ ಭೀಮನ ಗರ್ಜನೆ-ಯನ್ನಾಲಿಸಿ ಯುಧಿಷ್ಠಿರನು ಭೀಮನೆಲ್ಲಿ ಎಂದು ದ್ರೌಪದಿಯನ್ನು ಪ್ರಶ್ನಿಸಿ, ಅವಳು ಸೌಗಂಧಿಕಪುಷ್ಪ ತರಲು ಹೋದನೆಂದು

ಹೇಳಲು ಸೋದರ ಪ್ರೇಮದಿಂದ ದುಃಖಿತನಾಗಿ ಋಷಿಮುನಿಗಳು, ನಕುಲಸಹದೇವರು ಹಾಗೂ ದ್ರೌಪದಿಯೊಡನೆ ಘಟೋತ್ಕಚನ ಭೃತ್ಯರಾದ ರಾಕ್ಷಸರ ಹೆಗಲೇರಿ ಭೀಮನಿರುವಲ್ಲಿಗೆ ಬಂದನು.

ಇತ್ತ ರಣಭೂಮಿಯಲ್ಲಿ ಕುಬೇರನು ವೃಕೋದರ ಹಾಗೂ ಧರ್ಮನಂದನರನ್ನು ನೋಡಿ ಅಸುರಾವೇಶದಿಂದ ಭೀಮನ ಬಗೆಗೆ ಸ್ವಲ್ಪ ರೋಷ, ಧರ್ಮರಾಜನ ಬಗೆಗೆ ಸ್ವಲ್ಪ ಸ್ನೇಹಯುಕ್ತನೂ ಆದನು. ಆದರೂ ಅವನು ಭೀಮನು ಅತಿಬಲವಂತನೆಂದು ತಿಳಿಯಲಿಲ್ಲ. ಅಸುರಾವೇಶವಿದ್ದರೂ ಯುಧಿಷ್ಠಿರನನ್ನು ಕಂಡು ಅವನಲ್ಲಿ ಸ್ವಲ್ಪ ಸ್ನೇಹಯುಕ್ತನಾದನು. ತನಗೆ ಪ್ರಿಯನಾದ ಮಣಿಮಂತನು ಮೃತನಾಗಲು ಅಗಸ್ತ್ಯರ ಶಾಪವೇ ಕಾರಣವೆಂದು ಹೇಳಿದನು. ಅಂದರೆ ಮಣಿಮಂತನ ಮರಣಕ್ಕೆ ಮುನಿಗಳಾದ ಅಗಸ್ತ್ಯರ ಶಾಪವು ಕಾರಣವೇ ಹೊರತು ಭೀಮನ ಪರಾಕ್ರಮವಲ್ಲವೆಂದು ಹೇಳಿದನು. ಆನಂತರ ದೈತ್ಯಾವೇಶರಹಿತನಾಗಿ, ಶುದ್ಧಸ್ವಭಾವದವನಾಗಿ, ಭೀಮನ ಸಾಮರ್ಥ್ಯವನ್ನು ಕೊಂಡಾಡಿ ಸಂತೋಷದಿಂದ ಪಾಂಡವರು ವಾಸ ಮಾಡಲು ತನ್ನ ಸ್ಥಾನವನ್ನು ಕೊಟ್ಟನು. ಆ ಪಾಂಡವರು ಕುಬೇರನ ಮನೆಯಲ್ಲಿ (ಅಥವಾ ಸರೋವರಪ್ರದೇಶದಲ್ಲಿ) ಋಷಿಮುನಿಗಳೊಡನೆ ವಾಸಮಾಡಹತ್ತಿದರು.

ಇಂತು ಮಹಾತ್ಮರಾದ ಪಾಂಡುನಂದನರು ಆನಂದದಿಂದ ಕುಬೇರನ ಮನೆಯಲ್ಲಿ ನಾಲ್ಕುವರ್ಷಗಳ ಕಾಲ ವಾಸ ಮಾಡಿದರು. ಐದನೆಯ ವರ್ಷ ಮಧ್ಯಕಾಲದಲ್ಲಿ ಸ್ವರ್ಗಲೋಕದಲ್ಲಿ ದೇವೇಂದ್ರನು ಅರ್ಜುನನಿಗೆ ಅನೇಕ ದಿವ್ಯಾಸ್ತ್ರಗಳನ್ನು ಹೇಳಿಕೊಟ್ಟನು. ಆಗ ಅರ್ಜುನನು "ದೇವ, ನಿಮಗೆ ನಾನೇನು ಗುರುದಕ್ಷಿಣೆ ಕೊಡಬೇಕು, ಹೇಳಿರಿ" ಎಂದು ದೇವೇಂದ್ರನನ್ನು ಪ್ರಾರ್ಥಿಸಿದನು.

ಅರ್ಜುನನ ಮಾತು ಕೇಳಿ ಇಂದ್ರನು "ಕುಮಾರ! ನೀನು ನನ್ನ ಶತ್ರುಗಳಾದ 'ನಿವಾತಕವಚ'ರೆಂಬ ದಾನವರನ್ನು ಸಂಹರಿಸು. ಅದೇ ನೀನು ನನಗೆ ಕೊಡುವ ಗುರುದಕ್ಷಿಣೆ" ಎಂದು ಹೇಳಿದನು. ಇಂದ್ರನು ಸ್ವತಃ ತಾನೇ ಅವರನ್ನು ವಧಿಸದೆ ಅರ್ಜುನನು ವಧಿಸುವಂತೇಕೆ ಹೇಳಿದನೆಂದರೆ – ಪೂರ್ವದಲ್ಲಿ ನಿವಾತಕವಚರೆಂಬ ದಾನವರು ಬ್ರಹ್ಮದೇವನನ್ನು ತಪಸ್ಸಿನಿಂದ ಮೆಚ್ಚಿಸಿ–ದೇವತೆಗಳು, ದೈತ್ಯರು, ಗಂಧರ್ವರು, ಯಕ್ಷರು, ರಾಕ್ಷಸರುಗಳಿಂದ ತಮಗೆ ಮರಣವಾಗಬಾರದೆಂದು ಬೇಡಿಕೊಂಡು ಕಮಲಸಂಭವನಿಂದ ಅವಧ್ಯತ್ವವರವನ್ನು ಪಡೆದಿದ್ದರು. ಅದನ್ನರಿತು ಇಂದ್ರನು ಬ್ರಹ್ಮದೇವರಲ್ಲಿ "ನಿವಾತ-ಕವಚರನ್ನು ನಾನು ಸಂಹರಿಸುವಂತೆ ವರವನ್ನು ದಯಪಾಲಿಸಬೇಕು" ಎಂದು ಬೇಡಿದನು. ಆಗ ಬ್ರಹ್ಮದೇವರು – "ದೇವೇಂದ್ರ! ನಿವಾತಕವಚರು ಮಾನವರಿಂದ ಅವಧ್ಯತ್ವ ವರವನ್ನು ಬೇಡಲಿಲ್ಲ. ಆದ್ದರಿಂದ ನೀನು ಮಾನವನಾಗಿ ಅವರನ್ನು ಸಂಹರಿಸು" ಎಂದು ವರವನ್ನು ಕರುಣಿಸಿದ್ದರು. ಆದುದರಿಂದಲೇ ಇಂದ್ರನು ತನ್ನ ಅವತಾರನಾದ, ನರದೇಹಿಯಾದ ಅರ್ಜುನನಿಂದ ಅವರನ್ನು ಸಂಹಾರ ಮಾಡಿಸಲಿಚ್ಛಿಸಿ, ಗುರುದಕ್ಷಿಣಾರೂಪವಾಗಿ ನಿವಾತಕವಚರನ್ನು ಸಂಹರಿಸುವಂತೆ ಹೇಳಿ ತನ್ನ ಕಿರೀಟವನ್ನು ಅರ್ಜುನನ ಶಿರದಲ್ಲಿಟ್ಟು 'ವಿಜಯೀಭವ' ಎಂದು ಹರಸಿದನು.

ಪಾರ್ಥನು ಇಂದ್ರನ ರಥದಲ್ಲಿ ಕುಳಿತು ಮಾತಲಿಯು ಸಾರಥ್ಯ ಮಾಡುತ್ತಿರಲು ಗಾಂಡೀವ ಧನುರ್ಧಾರಿಯಾಗಿ ನಿವಾತಕವಚ ಮಹಾಸುರನನ್ನು ಸಂಹರಿಸಲು ಹೊರಟನು. ದೇವತೆಗಳು "ದೇವದತ್ತ" ಎಂಬ ದಿವ್ಯ ಶಂಖವನ್ನು ಅವನಿಗೆ ವಿಜಯವನ್ನು ಬಯಸಿ ನೀಡಿದರು. ಅರ್ಜುನನು ಅದನ್ನು ಧ್ವನಿಗೊಳಿಸುತ್ತಾ, ಗಾಂಡೀವವನ್ನು ಠೇಂಕರಿಸುತ್ತಾ ಹೊರಟನು. ಇಂದ್ರನಂದನನಾದ ವಿಜಯನು ದಿವ್ಯವಾದ, ಇಂದ್ರನು ಕರುಣಿಸಿದ ಬೆಳಗುವ ಕುಂಡಲಗಳನ್ನು ಧರಿಸಿ, ನಿವಾತಕವಚರ ನಗರಕ್ಕೆ ಬಂದನು.

ಅರ್ಜುನನ ಶಂಖಧ್ವನಿ, ಗಾಂಡೀವದ ಠೇಂಕಾರಗಳನ್ನಾಲಿಸಿ, ಮಹಾವೀರರಾದ ನಿವಾತಕವಚರೆಲ್ಲರೂ ಒಟ್ಟಾಗಿ ಸೇರಿ ಫಲ್ಗುಣನನ್ನು ಎದುರಿಸಲು ಹೊರಟರು. ಸ್ವಯಂಭುವಿನ ವರದಿಂದ ಗರ್ವಿತರಾದ ಆ ಮೂರುಕೋಟಿ ದಾನವರು

ಯುದ್ಧದಲ್ಲಿ ಪಾರ್ಥನ ಮೇಲೆ ನಾನಾಬಗೆಯ ಆಯುಧಗಳಿಂದ ಮಳೆಗರೆದರು. ಮಹಾಸ್ತ್ರ ಪ್ರಯೋಗ ಚತುರನಾದ ಕಿರೀಟಧಾರಿಯಾದ ಕಿರೀಟಿಯು ಅವರ ಎಲ್ಲ ಆಯುಧಗಳನ್ನು ತಡೆದು ಗಾಂಡೀವದಿಂದ ಶರಪರಂಪರೆಯನ್ನು ಪ್ರಯೋಗಿಸಿ ಎಲ್ಲ ನಿವಾತಕವಚರ ಶಿರಗಳನ್ನು ಕತ್ತರಿಸಿ ಹಾಕಿದನು. ಅರ್ಜುನನಿಂದ ಅವರೆಲ್ಲರೂ ಹತರಾದರು. ಇದರಂತೆ ಧನಂಜಯನು ಪೌಲೋಮಗಣ, ಕಾಲೇಯಗಣರೆಂಬ ಮಹಾರಥಿಗಳಾದ ಅರವತ್ತು ಸಾವಿರ ಅಸುರರೊಡನೆ ಹೋರಾಡಿ ತನ್ನ ಮೇಲೆ ಅಸ್ತ್ರಶಸ್ತ್ರಗಳನ್ನು ವರ್ಷಿಸುತ್ತಿರುವ ಅವರನ್ನು ಪಾಶುಪತಾಸ್ತ್ರದಿಂದ ಕೂಡಲೇ ಭಸ್ಮ ಮಾಡಿದನು. ಎಲ್ಲ ಅಸುರರ ಸಂಹಾರಾನಂತರ ಅರ್ಜುನನು ಪುನಃ ಅಮರಾವತಿಗೆ ಹಿಂದಿರುಗಿದನು. ಇಂದ್ರನು ವಿಜಯಗಳಿಸಿ ಬಂದು ಅರ್ಜುನನನ್ನು ಆಲಂಗಿಸಿದನು. ಸುರದ್ವೇಷಿಗಳಾದ ಆ ಎಲ್ಲ ದಾನವರೂ ಅಂಧಃತಮಸ್ಸಿಗೆ ಹೋದರು. ಆ ತರುವಾಯ ವಜ್ರಧರನ ಕುವರನಾದ ಅರ್ಜುನನು ಜನಕನಾದ ದೇವೇಂದ್ರನಿಗೆ ನಮಿಸಿ ಅವನ ಅಪ್ಪಣೆ ಪಡೆದು ಕಂಗೊಳಿಸುವ ಇಂದ್ರರಥದಲ್ಲಿ ಕುಳಿತು ತನ್ನ ಅಣ್ಣ-ತಮ್ಮಂದಿರಾದ ಧರ್ಮರಾಜಾದಿಗಳಿರುವ ಸ್ಥಳಕ್ಕೆ ಆಗಮಿಸಿದನು.

ಧನಂಜಯನು ಬಂದುದನ್ನು ಕಂಡು ಅವನ ಸಹೋದರರಾದ ಪಾಂಡವರು ಅತ್ಯಂತ ಮೋದಭರಿತರಾಗಿ ಅವನನ್ನು ಸ್ವಾಗತಿಸಿದರು. ಪಾಂಡವರು ಆ ಮೇರುಪರ್ವತದ ತಪ್ಪಲಿನಲ್ಲಿ ನಾಲ್ಕು ವರ್ಷಗಳ ಕಾಲ ಸಂತೋಷದಿಂದ ವಾಸ ಮಾಡಿದರು. ಅವರು ಅಲ್ಲಿ ಶ್ರೀಹರಿಯ ಲೀಲಾವಿಲಾಸ - ಮಹಿಮಾದಿಗಳ ಕಥಾಶ್ರವಣ-ನಿರೂಪಣಾದಿಗಳಿಂದ, ಶ್ರೀಹರಿ ಧ್ಯಾನ - ಅರ್ಚನಾದಿಗಳಿಂದ ಶ್ರೀವಿಷ್ಣುಪ್ರೀತಿರತಾತ್ಮರಾಗಿ ಸುಖವಾಗಿ ಕಾಲಕಳೆದರು.

ಸುಖದಿಂದ ಕಾಲಕಳೆಯುತ್ತಿರುವ ಧರ್ಮರಾಜನಿಗೆ "ಹದಿನಾಲ್ಕನೇ ವರ್ಷದಲ್ಲಿ ಶತ್ರುಗಳಾದ ಕೌರವರನ್ನು ನಾಶ ಮಾಡುವುದಾಗಿ" ಅವನು ಮಾಡಿದ್ದ ಪ್ರತಿಜ್ಞೆಯನ್ನು ಜ್ಞಾಪಿಸಲು ಭೀಮಸೇನನು ಹೀಗೆ ಹೇಳಿದನು -

"ಅಗ್ರಜ! ಕ್ಷತ್ರಿಯರಾಜರು ಹರಿದ್ವೇಷಿಗಳಾದ ಶತ್ರುಗಳನ್ನು (ಅಥವಾ ಕಾಮಕ್ರೋಧಾದಿಗಳನ್ನು) ನಾಶಮಾಡದಿದ್ದರೆ ಅವರಿಗೆ ಶ್ರೇಷ್ಠಗತಿಯು ಅಂದರೆ ವಿಷ್ಣುಲೋಕಪ್ರಾಪ್ತಿಯು ಆಗುವುದಿಲ್ಲ. ವಿಷ್ಣುವಿನ ಪ್ರೀತ್ಯರ್ಥವಾಗಿ ಹರಿದ್ವೇಷಿಗಳನ್ನು ಸಂಹರಿಸಲೇಬೇಕು". ಅಜೇಯರಾದ ಶತ್ರುಗಳನ್ನು ಜಯಿಸದಿದ್ದರೆ ಕೀರ್ತಿ ಮತ್ತು ಮೋಕ್ಷವು ದೊರಕುವುದಿಲ್ಲ "ಶ್ರುತಿ-ಸ್ಮೃತೀಮಮೈವಾಜ್ಞೇ" ಎಂಬ ಭಗವದ್ವಚನದಂತೆ, ಶ್ರುತಿಸ್ಮೃತಿ ವಿಹಿತ ಅನುಷ್ಠಾನ ಮಾಡದಲೇ ವಿಷ್ಣುಲೋಕಪ್ರಾಪ್ತಿರೂಪ ಮುಖ್ಯಗತಿ ಲಭಿಸದು. ಕ್ಷತ್ರಿಯವರ್ಣದವನನ್ನು ಹೊರತುಪಡಿಸಿ, ಇತರ ಬ್ರಾಹ್ಮಣ-ವೈಶ್ಯಾದಿ ವರ್ಣದವರಿಗೆ ಬಾಹ್ಯ-ಶತ್ರುಗಳಲ್ಲಿ ಕ್ಷಮಾ ಮಾಡುವುದು ಧರ್ಮವೆಂದು ಉಕ್ತವಾಗಿದೆ. ಆದರೆ ಅಂತರ್ಗತ ಶತ್ರುಗಳಾದ ಕಾಮಕ್ರೋಧಾದಿಗಳಲ್ಲಿ ಕ್ಷಮೆಯು ಧರ್ಮವಲ್ಲ. ಕೆಲಸ್ಥಳದಲ್ಲಿ ವೈದಿಕ ಕರ್ಮನಿಷೇಧಕರಾದ ವೇನ ಮುಂತಾದ ಬಾಹ್ಯ ಶತ್ರುಗಳನ್ನು ಬ್ರಾಹ್ಮಣರು ಕೊಲ್ಲಿಸುವುದು ಧರ್ಮವೇ ಆಗುವುದು.[39] ಚಾತುರ್ವರ್ಣ್ಯದ ಸಕಲ ಆಶ್ರಮಿಗಳಿಗೂ ಶ್ರೀಹರಿಯ ಆಜ್ಞೆಯು ಧರ್ಮವು".

ಭೀಮನ ವಚನವನ್ನಾಲಿಸಿ ಧರ್ಮರಾಜನು ಅದಕ್ಕೆ ಸಮ್ಮತಿಸಿ, ಸಹೋದರರು ದ್ರೌಪದಿ-ಋಷಿಮುನಿಗಳಿಂದ ಸಹಿತನಾಗಿ ರಾಕ್ಷಸರ ಭುಜವೇರಿ ಅಲ್ಲಿಂದ ಪ್ರಯಾಣ ಬೆಳೆಸಿ ಹಿಮಾಲಯದ ದಕ್ಷಿಣದಿಕ್ಕಿನಲ್ಲಿರುವ ಉಪಪರ್ವತಗಳಿಗೆ ಬಂದನು. ಅಲ್ಲಿ ವಾಸ ಮಾಡುತ್ತಿರುವಾಗ ಒಂದು ದಿನ ಮೃಗಯಾವಿಹಾರಾರ್ಥವಾಗಿ, ಧನುರ್ಧಾರಿಯಾಗಿ ಹೊರಟು ಭೀಮಸೇನನು ದೈವೇಚ್ಛೆಯಿಂದ ಆಯು ಎಂಬ ರಾಜನ ಮಗನಾದ, ಅಜಗರರೂಪ ತಾಳಿದ್ದ ನಹುಷನ ಬಳಿಗೆ ಬಂದನು.

39. "ಭಗವನ್ನಿಂದಯಾ ವೇನೋ ದ್ವಿಜೈಸ್ತಮಸಿ ಪಾತಿತಃ ।"

ಈಗ ನಹುಷನು ಅಜಗರರೂಪತಾಳಲು ಕಾರಣವನ್ನು ನಿರೂಪಿಸುತ್ತಾರೆ - ಪೂರ್ವದಲ್ಲಿ ವೃತ್ರಾಸುರ ಸಂಹಾರ-ದಿಂದ ಪಾಪ ಬಂದಿದ್ದರಿಂದ ಒಂದು ಸಾವಿರ ವರ್ಷಗಳ ಕಾಲ ದೇವೇಂದ್ರನು ಆ ಪಾಪಪರಿಹಾರಕ್ಕಾಗಿ ಏಕಾಂತವಾಗಿ ಕಮಲನಾಳದಲ್ಲಿ ಅಡಗಿದ್ದು ಶ್ರೀಹರಿಯ ಧ್ಯಾನರತನಾದನು. ಆಗ ಸ್ವರ್ಗಾಧಿಪತಿಯಿಲ್ಲದಂತಾಗಿ ಎಲ್ಲ ದೇವತೆಗಳೂ ಸೇರಿ ತಾತ್ಕಾಲಿಕವಾಗಿ ಯಾರನ್ನು ಇಂದ್ರಪದವಿಗೆ ತರೋಣ ಎಂದು ವಿಚಾರ ವಿನಿಮಯ ಮಾಡಿ ಭೂಲೋಕದಲ್ಲಿ ಮಹಾ-ಪರಾಕ್ರಮಿಯೆಂದು ಹೆಸರು ಗಳಿಸಿದ್ದ ಆಯುವಿನ ಮಗನಾದ ನಹುಷನನ್ನು ಕರತಂದು "ನಹುಷರಾಜ! ನಿನ್ನ ದೃಷ್ಟಿ-ಗೋಚರರಾದ ದೇವತೆಗಳಾಗಲಿ, ಋಷಿಮುನಿಗಳಾಗಲೀ ಯಾರೇ ಆಗಿರಲಿ, ಅವರ ತಪಸ್ಸು ಮತ್ತು ಬಲಗಳು ನಿನಗೆ ಪ್ರಾಪ್ತವಾಗಲಿ, ಅಂದರೆ ನೀನು ದೃಷ್ಟಿಸಿದವರೆಲ್ಲರ ತಪಸ್ಸು ಬಲಗಳು ನಿನಗೆ ಪ್ರಾಪ್ತವಾಗಲಿ" ಎಂದು ವರವಿತ್ತು ನಹುಷನನ್ನು ಸ್ವರ್ಗಲೋಕಕ್ಕೆ ಅಧಿಪತಿಯನ್ನಾಗಿ ಮಾಡಿದರು.

ನಹುಷನು ಪ್ರತಿನಿತ್ಯವೂ ದೇವತೆಗಳು ಮತ್ತು ಬ್ರಾಹ್ಮಣರನ್ನು ನೋಡುತ್ತಾ ಅವರೆಲ್ಲರ ತಪಸ್ಸು, ಬಲಗಳನ್ನು ಸಂಪಾದಿಸಿ ಮಹಾಬಲಶಾಲಿಯಾದನು. ಹೀಗೆ ತಪಸ್ಸು-ಬಲಗಳಿಂದ ಅಭಿವೃದ್ಧನಾದ, ನಹುಷನು ತಾನು ಇಂದ್ರನೆಂಬ ಅಹಂಕಾರದಿಂದ ಇಂದ್ರಪತ್ನಿಯಾದ ಶಚೀದೇವಿಯನ್ನೂ ಬಯಸಿದನು. ಆಗ ಭಯಗೊಂಡ ಶಚಿಗೆ ಇಂದ್ರನು ಅದರ ಪರಿಹಾರಕ್ಕೆ ಉಪಾಯವನ್ನು ಸೂಚಿಸಿ ಹೋದನು. ಅದರಂತೆ ಶಚೀದೇವಿಯು "ನೀವು ಮಹರ್ಷಿಗಳು ಹೊತ್ತ ಪಲ್ಲಕ್ಕಿಯಲ್ಲಿ ಕುಳಿತು ನನ್ನ ಬಳಿಗೆ ಬಂದರೆ ನಾನು ನಿಮಗೆ ಒಲಿಯುವೆನು" ಎಂದು ನಹುಷನಿಗೆ ಹೇಳಿಕಳಿಸಿದಳು ಮತ್ತು ಅಗಸ್ತ್ಯ ಋಷಿಗಳನ್ನು ಕರೆಸಿಕೊಂಡು ಅವರಿಗೆ ಶರಣಾಗಿ ತನಗೊದಗಿರುವ ವಿಪತ್ತನ್ನೂ, ನಹುಷನಿಗೆ ತಾನು ಹೇಳಿಕಳಿಸಿರುವ ವಿಚಾರವನ್ನು ವಿಜ್ಞಾಪಿಸಿ ನಹುಷನು ತನ್ನರಮನೆಗೆ ಬಾರದಂತೆ ಮಾಡಿ ತನ್ನನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿದಳು. ಕರುಣಾಳುಗಳಾದ ಅವರು 'ನಹುಷನನ್ನು ನಿನ್ನ ಬಳಿ ಬಾರದಂತೆ ಮಾಡುತ್ತೇವೆ' ಎಂದು ಅಭಯ ನೀಡಿ ಹೋದರು.

ಇತ್ತ ಕಾಮುಕನೂ ಗರ್ವಾಂಧನೂ ಆದ ನಹುಷನು ಅಗಸ್ತ್ಯರೇ ಮೊದಲಾದ ಮಹರ್ಷಿಗಳು ತನ್ನ ಪಲ್ಲಕ್ಕಿಯನ್ನು ಹೊತ್ತು ಇಂದ್ರಾಣಿಯ ಮನೆಗೆ ಹೋಗುವಂತೆ ಆಜ್ಞಾಪಿಸಿದನು. ಅದರಂತೆ ಅಗಸ್ತ್ಯರೇ ಮೊದಲಾದ ಮಹರ್ಷಿಗಳು ಅವನು ಕುಳಿತ ಪಲ್ಲಕ್ಕಿಯನ್ನು ಹೊತ್ತು ಹೊರಟರು. ಶೀಘ್ರವಾಗಿ ಇಂದ್ರಾಣಿಯನ್ನು ಸೇರಬೇಕೆಂಬ ಆತುರದಿಂದ ನಹುಷನವರನ್ನು "ಸರ್ಪ! ಸರ್ಪ ಬೇಗ, ಬೇಗ ಹೋಗಿರಿ" ಎಂದು ಆಜ್ಞೆ ಮಾಡಿದನು. ಶಿಬಿಕವನ್ನು ಹೊತ್ತಿದ್ದ ಅಗಸ್ತ್ಯ ಮುನಿಗಳು "ನಾನೀಗ ಈ ನಹುಷನನ್ನು ವೇದಪ್ರಾಮಾಣ್ಯದ ಬಗ್ಗೆ ಪ್ರಶ್ನಿಸುವೆನು. ಅವನು ವೇದಗಳು ಪ್ರಮಾಣವೆಂದು ಒಪ್ಪಿ ಹೇಳಿದರೆ ಆಗ 'ನ ಪರಸ್ತ್ರೀಂ ಗಚ್ಛೇತ್' ಪರಸ್ತ್ರೀಗಮನ ಮಾಡಬಾರದು ಮುಂತಾದ ವೇದ ವಚನಗಳನ್ನು ಎತ್ತಿ ಹೇಳಿ ನಹುಷನು ಶಚಿಯ ಬಳಿಗೆ ಹೋಗದಂತೆ ತಡೆಯುತ್ತೇನೆ. ಅವನೊಂದು ವೇಳೆ ವೇದವು ಪ್ರಮಾಣವಲ್ಲ ಎಂದರೆ - ವೇದಗಳು ಪ್ರಮಾಣವೆಂದು ವಾದಿಸುವೆನು. ಆಗ ನಹುಷನು ನನಗೆ ಅಪಮಾನ ಮಾಡಿದರೆ ಅವನಿಗೆ ಶಾಪಕೊಡಿಸಿ ತಕ್ಕಶಾಸ್ತಿ ಮಾಡಿಸುತ್ತೇನೆ" ಮುಂತಾಗಿ ಚಿಂತಿಸಿ ನಹುಷನನ್ನು ವೇದಗಳ ಪ್ರಾಮಾಣ್ಯದ ಬಗ್ಗೆ ಪ್ರಶ್ನೆ ಮಾಡಿದರು. ಮೂಢಮತಿಯಾದ ನಹುಷನು ವೇದಗಳು ಅಪ್ರಮಾಣವೆಂದು ಹೇಳಿದನು. ಆಗ ಅಗಸ್ತ್ಯರು ವೇದಗಳು ಪ್ರಮಾಣಗಳೆಂದು ವಾದಿಸಿದರು. ಅದರಿಂದ ಕೋಪಗೊಂಡ ನಹುಷನು ಅಗಸ್ತ್ಯರ ತಲೆಯನ್ನು ಕಾಲಿನಿಂದ ತಾಡನ ಮಾಡಿದನು. ಆಗ ಅಗಸ್ತ್ಯರ ಜಟೆಯಲ್ಲಿ ಯಾರ ದೃಷ್ಟಿಗೂ ಗೋಚರಿಸದಂತೆ ಅಡಗಿದ್ದ ಭೃಗುಋಷಿಗಳಲ್ಲಿ ಆವಿಷ್ಟರಾಗಿದ್ದ ಬ್ರಹ್ಮದೇವರು "ಎಲೈ, ಪಾಪಿಯಾದ ನಹುಷ, ನೀನು ಪರಸತಿಯನ್ನು ಕಾಮಿಸಿ, ಮತ್ತ ಜ್ಞಾನಿಗಳಾದ ಅಗಸ್ತ್ಯರನ್ನೂ ಅವರ ಜಟೆಯಲ್ಲಿರುವ ಭೃಗು ಋಷಿಗಳನ್ನೂ ಅವರಲ್ಲಿ, ಆವಿಷ್ಟನಾಗಿರುವ ನನ್ನನ್ನು ಪಾದದಿಂದೊದ್ದು ಮಹಾಪರಾಧ ಮಾಡಿದ್ದೀಯೆ! ಆದ್ದರಿಂದ "ಸರ್ಪ, ಸರ್ಪ" (ಬೇಗ ಹೋಗು) ಎಂದು ಮಹರ್ಷಿಗಳನ್ನು ಬಲಾತ್ಕರಿಸಿದ ನೀನು ದೊಡ್ಡ ಸರ್ಪವೇ ಅಂದರೆ ಮಹೋರಗ (ಅಜಗರ)ನಾಗಿ ಭೂಮಿಗೆ ಬೀಳು" ಎಂದು ಶಾಪ ಪ್ರದಾನ ಮಾಡಿದರು.

ಆಗ ಪಶ್ಚಾತ್ತಪ್ತನಾದ ನಹುಷನು ಪರಿಪರಿಯಿಂದ ಬ್ರಹ್ಮದೇವರನ್ನು ಶಾಪ ಪರಿಹಾರಕ್ಕಾಗಿ ಪ್ರಾರ್ಥಿಸಲು ಕಮಲ-ಸಂಭವರು "ನನ್ನ ಶಾಪ ವ್ಯರ್ಥವಾಗುವುದಿಲ್ಲ. ಆದರೆ ನೀನಿಷ್ಟು ಪ್ರಾರ್ಥಿಸಿರುವುದರಿಂದ ಶಾಪಪರಿಹಾರ ಕಾಲವನ್ನು ಸೂಚಿಸುತ್ತೇನೆ. - ಸಂಧ್ಯಾಕಾಲದಲ್ಲಿ ನಿನ್ನ ಬಳಿಗೆ ಬಂದವರನ್ನು ನೀನು ಹಿಡಿದಾಗ, ನಿನ್ನಿಂದ ಹಿಡಿಯಲ್ಪಟ್ಟವನು ಮಹಾಶಕ್ತ-ನಾಗಿದ್ದರೂ ನಿನ್ನಿಂದ ಬಿಡಿಸಿಕೊಳ್ಳದಿದ್ದರೆ, ಅಂಥವನಿಗೆ ನೀನು ಈವರೆಗೆ ಗಳಿಸಿರುವ ಸಮಸ್ತ ತಪಸ್ಸು ಬಲಗಳು, ಮತ್ತು ಸರ್ವದೇವತೆಗಳು - ಮುನೀಂದ್ರರುಗಳಿಂದ ಸಂಪಾದಿಸಲ್ಪಟ್ಟು ನಿನ್ನನ್ನಾಶ್ರಯಿಸಿಕೊಂಡಿರುವ ಸಮಸ್ತ ತಪಸ್ಸು, ಬಲಗಳೆಲ್ಲವೂ ಸೇರುವುದು. ಯಾವನಾದರೊಬ್ಬ ಪುರುಷನು ನಿನ್ನ ಪ್ರಶ್ನೆಗಳಿಗೆ ಸರಿಯಾದ ಉತ್ತರ ನೀಡಿದಾಗ ನಿನ್ನ ಈ ಅಜಗರರೂಪವು ಹೋಗಿ ನೀನು ನಿಜರೂಪದಿಂದ ಸ್ವರ್ಗಕ್ಕೆ ಹೋಗುತ್ತೀಯೆ" ಎಂದು ಶಾಪಪರಿಹಾರ ಕಾಲವನ್ನು ಸೂಚಿಸಿ "ನನ್ನ ಅನು-ಗ್ರಹದಿಂದ ಈ ಎಲ್ಲ ಕಾಲದಲ್ಲಿಯೂ ನಿನಗೆ ಹಿಂದಿನ ಸ್ಮರಣೆಯು ಇದ್ದೇ ಇರುವುದು" ಎಂದು ಭೃಗು ಋಷಿಗಳಲ್ಲಿ ಆವಿಷ್ಟರಾದ ಬ್ರಹ್ಮದೇವರು ತಿಳಿಸಿದರು.

ನಹುಷನು ಸಕಲ ದೇವತೆಗಳ, ಋಷಿಮುನಿಗಳ ತಪಸ್ಸು ಮತ್ತು ಬಲಗಳನ್ನು ಪಡೆದು ಅತ್ಯಂತ ಶಕ್ತಿಶಾಲಿಯಾಗಿದ್ದನು. ಅಂಥವನಿಗೆ ಭೃಗುಋಷಿಗಳ ಶಾಪವು ಪರಿಣಾಮಕಾರಿಯಾಗಲಾರದು. ಅಂತೆಯೇ ಭೃಗುಋಷಿಗಳಿಗೆ ನಹುಷನು ಪಾದತಾಡನ ಮಾಡಿದ್ದರಿಂದ ಭೃಗು ಋಷಿಗಳಲ್ಲಿದ್ದ ಬ್ರಹ್ಮದೇವರಿಗೆ ಅಪರಾಧ ಮಾಡಿದಂತಾಯಿತು. ಅಂತೆಯೇ ಬ್ರಹ್ಮದೇವರು ಶಾಪಕೊಟ್ಟರೆಂದು ತಿಳಿಯಬೇಕು. ಬ್ರಹ್ಮದೇವರು ಶಾಪಕೊಟ್ಟ ಕ್ಷಣಮಾತ್ರದಲ್ಲಿ ನಹುಷನು ಅಜಗರರೂಪತಾಳಿ ಭೂಮಿಗೆ ಬಿದ್ದನು. ಅದೇ ಸಮಯದಲ್ಲಿ ಸಹಸ್ರವರ್ಷಗಳ ಕಾಲ ಕಮಲನಾಳದಲ್ಲಿದ್ದ ಇಂದ್ರನು ಹೊರಬಂದು ವಿಷ್ಣು ಪ್ರೀತಿಕರವಾದ ಹೋಮಗಳನ್ನು ನೆರವೇರಿಸಿ ಪಾಪರಹಿತವಾಗಿ ಸ್ವರ್ಗಕ್ಕೆ ಬಂದು ಇಂದ್ರಪದದಲ್ಲಿ ರಾಜಿಸಿದನು. ಇಂದ್ರನ ಧರ್ಮವೃದ್ಧಿಗಾಗಿಯೇ ಪಾಪ ಬಂದಿತ್ತು. ಪಾಪವಿಲ್ಲದ ಇಂದ್ರನು ಯಜ್ಞವನ್ನು ಮಾಡದೆಯೇ ವೃತ್ರಾಸುರನ ಸಂಹಾರರೂಪ ಬ್ರಹ್ಮಹನನ ದೋಷದೂರನಾಗಿದ್ದರೂ ಸಹ ವಿಷ್ಣುವನ್ನು ಕುರಿತು ಯಜ್ಞವನ್ನು ಮಾಡಿಯೇ ಸ್ವರ್ಗಾಧಿಪತ್ಯವನ್ನು ಪುನಃ ಪಡೆದನು. ವೃತ್ರಾಸುರನ ವಧವು ಬ್ರಾಹ್ಮಣವಧರೂಪವಾದ್ದರಿಂದ ವೃತ್ರಾಸುರನ ವಧ ಮುಂತಾದವು ವೇದನಿಷಿದ್ಧ-ವಾದವುಗಳು. ಅದು ಬೇರೆಯವರಿಗೆ ಪಾಪಕರವಾಗಿದ್ದರೂ ಅದು ಇಂದ್ರನಿಗೆ ಧರ್ಮವೃದ್ಧಿಗಾಗಿಯೇ ಏರ್ಪಟ್ಟಿತು. ಇದಕ್ಕೆ ಕಾರಣವೇನೆಂದರೆ ದುಷ್ಟ ದಮನಪೂರ್ವಕ ತ್ರಿಲೋಕಪಾಲನೆಗಾಗಿ ಭಗವಂತನಿಂದ ನಿಯುಕ್ತನಾದ ವಜ್ರಧಾರಿಯಾದ ಇಂದ್ರನಿಗೆ ಪರಮಾತ್ಮನ ಆಜ್ಞಾಪಾಲನವು ಧರ್ಮಾಭಿವೃದ್ಧಿಗೇ ಎಂದು ತಿಳಿಯಬೇಕು. "ಇಂದ್ರೋ ವೈ ವೃತ್ರಂ ಹತ್ವಾ ಮಹಾನಭವತ್" ಎಂಬ ವೇದವಚನವಿರುವುದರಿಂದ ವೃತ್ರಸಂಹಾರವು ಇಂದ್ರನಿಗೆ ಧರ್ಮಾಭಿವೃದ್ಧಿಯನ್ನೇ ಉಂಟು ಮಾಡಿತು. ಮೇಲೆ ನಿರೂಪಿಸಿದ ವಿಚಾರವನ್ನು ಈಗ ಸ್ಮೃತಿಯಿಂದ ಸ್ಪಷ್ಟಪಡಿಸುವರು.

ವೃತ್ರಾಸುರನ ಹತ್ಯೆಯು ಇಂದ್ರನಿಗೆ ಧರ್ಮಾಭಿವೃದ್ಧಿಗೆ ಕಾರಣವಾದಂತೆ ಕೆಲವು ಪ್ರಕರಣಗಳಲ್ಲಿ ಪಾಪವು ಪುಣ್ಯವೃದ್ಧಿಗೇ ಕಾರಣವಾಗುವುದು. ದೇವತೆಗಳು ಮತ್ತು ಮುನಿಗಳ ವಿಷಯದಲ್ಲಿ ಹೀಗಾಗುವುದು. ಮಾನವರಿಗೆ ಪಾಪವು ಪುಣ್ಯಕ್ಕೆ ಕಾರಣವಾಗುವುದಿಲ್ಲ. ಮನುಷ್ಯರಿಗೆ ಪಾಪವು ಪಾಪವೇ, ಪುಣ್ಯವು ಪುಣ್ಯವೇ ಆಗುವುದು. ಅಸುರರಿಗೆ ವಿಪರೀತಕ್ರಮದಿಂದ ಪುಣ್ಯವೂ ಪಾಪವೇ ಆಗುವುದು-ಎಂದು ಸ್ಕಾಂದಪುರಾಣದಲ್ಲಿ ನಿರೂಪಿತವಾಗಿದೆ. ಆದುದರಿಂದ ಇಂದ್ರನಿಗೆ ವೃತ್ರಹನನವು ಪಾಪವಾಗದೇ ಧರ್ಮಾಭಿವೃದ್ಧಿಗೇ ಕಾರಣವಾಯಿತು. ಅನ್ಯ ದೇವತೆಯ ಸ್ಥಾನ(ಪದವಿ)ವನ್ನು ಪಡೆಯದಿರುವುದು ದೇವತೆಗಳ ವ್ರತವಾಗಿದೆ. ಆದ್ದರಿಂದಲೇ ಇಂದ್ರನಿಲ್ಲದಿರುವಾಗ ತಾರತಮ್ಯದಲ್ಲಿ ಅವನ ಸಮಾನಕಕ್ಷೆಯಲ್ಲಿರುವ ಕಾಮನಿಗೆ ಇಂದ್ರಪದವನ್ನು ಕೊಡಲಿಲ್ಲ. ಅಂತೆಯೇ ದೇವತೆಗಳಲ್ಲಿಯೇ ಒಬ್ಬರನ್ನು ಇಂದ್ರಪದಕ್ಕೆ ತರದೆ ದೇವತೆಗಳು ನಹುಷನಿಗೆ ಸ್ವರ್ಗಾಧಿಪತ್ಯವನ್ನಿತ್ತಿದ್ದರು.

ಇಂಥ ನಹುಷನು ಬ್ರಹ್ಮಶಾಪದಿಂದ ಅಜಗರನಾಗಿ ಭೂಮಿಗೆ ಬಿದ್ದ ಮೇಲೆ ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ಕ್ರೂರ ಅಜಗರರೂಪದ ನಹುಷನ ಬಳಿಗೆ ಭೀಮಸೇನನು ಈ ಅಜಗರವು ನನ್ನನ್ನು ಹಿಡಿಯುವುದೆಂದು ತಿಳಿದಿದ್ದರೂ, ನಹುಷನ ಪ್ರಸಿದ್ಧ ತಪಸ್ಸು-ಬಲಗಳನ್ನು ಅವನಿಂದ ಸ್ವೀಕರಿಸಲು ತನ್ನಿಚ್ಛೆಯಿಂದಲೇ ಬಂದನು. ಹಾಗೂ ಸಕಲದೇವತೆಗಳ, ಮುನಿಗಳ ಸಮಸ್ತ ತಪಸ್ಸು ಬಲಗಳು ನಹುಷನಲ್ಲಿರುವುದೆಂದು ಅರಿತು ಅದನ್ನು ಅವನಿಂದ ಕಿತ್ತುಕೊಳ್ಳಲೆಂದೇ ಮಾರುತಾತ್ಮಜನು ಸ್ವಇಚ್ಛೆಯಿಂದಲೇ ಅಜಗರನ ವಶವಾದಂತೆ ನಟಿಸಿದನು. ಭೀಮನು ಅಶಕ್ತನಾದ್ದರಿಂದ ಅಜಗರನ ವಶ-ನಾದನೆಂದೇಕೆ ಹೇಳಬಾರದು? ಎಂದರೆ, ಮಾನವರಾಗಿ ಹುಟ್ಟಿದ ದೇವತೆಗಳಿಗೆ ಮೂಲರೂಪಾಪೇಕ್ಷೆಯಿಂದ ಅಲ್ಪ ಬಲವುಂಟಾಗುವುದು. ಅದಕ್ಕೆ ಕಾರಣ ಹೇಳುವರು - ವಾಯುದೇವರಿಗೆ ಇಚ್ಛೆಯಿಂದ ಮೂಲರೂಪದ ಬಲವು ಪ್ರಕಟ-ವಾಗುವುದು. ವಾಯುದೇವರನ್ನು ಬಿಟ್ಟು, ಇತರ ದೇವತೆಗಳಿಗೆ ಅಂತಹ ಇಚ್ಛೆಯನ್ನು ವ್ಯಕ್ತಪಡಿಸಲು ಸಾಧ್ಯವಿಲ್ಲ. ವಿಷ್ಣುವಿಗೆ ದೇಶ-ಕಾಲ-ಅವತಾರಗಳಲ್ಲಿ ನಿತ್ಯಬಲ-ಜ್ಞಾನಾದಿಗುಣಗಳು (ನಿತ್ಯವೂ) ವ್ಯಕ್ತವೇ ಆಗಿರುವುವೆಂದು ಶಾಸ್ತ್ರಗಳು ನಿರ್ಣಯಿಸಿವೆ. ಇದರಂತೆ ಅಂದರೆ ಜ್ಞಾನಾದಿಗುಣಗಳು ವಾಯುದೇವರಿಗೆ ಬಲದಂತೆಯೇ ಇನ್ನಿತರ ಜ್ಞಾನಾದಿಗುಣಗಳು ಮನುಷ್ಯಾದಿ ಜನ್ಮಗಳಲ್ಲಿ ತಮ್ಮ ಇಚ್ಛೆಯಿಂದಲೇ ವ್ಯಕ್ತವಾಗುವುದು. ಇನ್ನಿತರ ದೇವತೆಗಳಿಗೆ ಯೋಗ್ಯತಾನುಸಾರ ಸ್ವಲ್ಪ ವ್ಯಕ್ತವಾಗುವುವು. ಮನುಷ್ಯಾದಿ ಜನ್ಮಗಳಲ್ಲಿ ಬಲಾದಿಗಳನ್ನು ವ್ಯಕ್ತಪಡಿಸುವ ಶಕ್ತಿಯಿದ್ದರೂ, ಅದನ್ನು ಅಭಿವ್ಯಕ್ತಿ ಗೊಳಿಸದಿರುವುದರಿಂದ ದೇವತೆಗಳಿಗೆ ಧರ್ಮವೃದ್ಧಿಯಾಗುವುದು. ಆದರಿಂದ ಕೇಶವನೂ ಪ್ರೀತನಾಗುವನು.

ಆದುದರಿಂದ ಭೀಮನು ಮಾನವನಾಗಿ ಅವತರಿಸಿರುವ ಪ್ರಯುಕ್ತ ಬ್ರಹ್ಮದೇವರಿತ್ತ ವರದಿಂದ ಅಜಗರನಿಂದ ಹಿಡಿಲ್ಪಟ್ಟವನಂತಿದ್ದರೂ ತನ್ನ ಮೂಲರೂಪದ ಬಲವನ್ನು ವ್ಯಕ್ತಪಡಿಸಲು ಅತ್ಯಂತ ಶಕ್ತನಾಗಿದ್ದರೂ ಕೂಡ ವಾಯುಕುಮಾರನಾದ ಭೀಮನು ಅದನ್ನು ಪ್ರಕಟಗೊಳಿಸಲಿಲ್ಲ.

ಆಗ ಅಜಗರರೂಪಿ ನಹುಷನು "ನನ್ನ ಪ್ರಶ್ನೆಗೆ ಸಮಾಧಾನವನು ಹೇಳಿದರೆ ನಿನ್ನನ್ನು ಬಿಟ್ಟುಬಿಡುತ್ತೇನೆ" ಎಂದು ಹೇಳಿ ಭೀಮನಿಗೆ ಕೆಲವು ಪ್ರಶ್ನೆಗಳನ್ನು ಕೇಳಿದನು. ಭೀಮನಿಗೆ ಅವನ ಪ್ರಶ್ನೆಗಳಿಗೆ ಉತ್ತರ ತಿಳಿದಿದ್ದರೂ, ಉತ್ತರಿಸುವ ಸಾಮರ್ಥ್ಯವಿದ್ದರೂ ಉತ್ತರಹೇಳಿದರೆ ಅದು ವಿದ್ಯೋಪಜೀವನ ಅಂದರೆ ತನ್ನ ವಿದ್ಯೆಯನ್ನು ಬಿಡುಗಡೆ ರೂಪ ಧನಕ್ಕಾಗಿ ಮಾರಿಕೊಂಡಂತಾಗುವುದು. ಅದು ಬ್ರಾಹ್ಮಣರಿಗೂ ಯುಕ್ತವಲ್ಲ. ಅಂದಮೇಲೆ ಕ್ಷತ್ರಿಯನ ವಿಚಾರ ಹೇಳುವುದೇನಿದೆ? ಅಂತೆಯೇ ಭೀಮನು ಉತ್ತರವನ್ನರಿತಿದ್ದರೂ, ಉತ್ತರ ಹೇಳಿ ಅಜಗರದ ಬಂಧನದಿಂದ ಪಾರಾಗಲಿಚ್ಛಿಸಲಿಲ್ಲ. ದೃಗ್ಗೋಚರವಾದ ಸರ್ವಲೋಕಗಳ ಬಲದಿಂದ ಪೂರ್ಣನಾಗಿದ್ದರೂ ಅಜಗರರೂಪೀ ನಹುಷನು ಬಿಡಿಸಿಕೊಳ್ಳಲು ಪ್ರಯತ್ನವನ್ನು ಮಾಡದಿರುವ ಭೀಮನನ್ನು ಅಲ್ಲಾಡಿಸಲೂ ಶಕ್ತನಾಗಲಿಲ್ಲ. ಭೀಮನ ದೇಹವನ್ನು ಸುತ್ತಿಕೊಂಡು ಗಟ್ಟಿಯಾಗಿ ಹಿಡಿದಿದ್ದ ಅಜಗರರೂಪದ ನಹುಷನು ಭೀಮನನ್ನು ದಂಶನಾದಿಗಳಿಂದ (ಕಚ್ಚುವುದೇ ಮೊದಲಾದವುಗಳಿಂದ) ಹಿಂಸಿಸಲೂ ಸಮರ್ಥನಾಗಲಿಲ್ಲ. ಭೀಮನು ತಾಯಿ, ಸಹೋದರರಲ್ಲಿರುವ ಸ್ನೇಹದಿಂದ ಬೇಗ ಬಂಧನದಿಂದ ಮುಕ್ತನಾಗಬೇಕೆಂಬ ಇಚ್ಛೆಯಿದ್ದರೂ, ಬಿಡಿಸಿ-ಕೊಳ್ಳಲು ಪ್ರಯತ್ನಿಸಲಿಲ್ಲ. ಏಕೆ ಬಿಡಿಸಿಕೊಳ್ಳಲು ಯತ್ನಿಸಲಿಲ್ಲ? ಎಂದರೆ ನಹುಷನಲ್ಲಿರುವ ಸರ್ವದೇವತೆಗಳ ಮುನೀಂದ್ರರುಗಳ ತಪಸ್ಸನ್ನು ಪಡೆಯಲು ಅಜಗರದಿಂದ ಬಿಡುಗಡೆ ಹೊಂದುವ ಅಪೇಕ್ಷೆಯಿದ್ದರೂ, ಪ್ರಯತ್ನಿಸಲಿಲ್ಲ. ಕಾಲಕಳೆದಂತೆ ಶ್ರಾಂತವಾದ ಈ ಅಜಗರವು ಶ್ರೀಪತಿಯ ಆಜ್ಞೆಯಂತೆ ತಾನಾಗಿ ನನ್ನನ್ನು ಬಿಟ್ಟುಹೋಗುವುದು. ಮೇಲಾಗಿ ಇದರ ಉಪಟಳವನ್ನು ಸಹಿಸುವ ದೇಹದಾರ್ಢ್ಯವು ನನಗಿದೆ. ಶಿಥಿಲಾಂಗವಾದ ಈ ಸರ್ಪವು ಮೂರ್ಛೆ ಹೋಗಿ ಕೆಳಗೆ ಬಿದ್ದ ಮೇಲೆ ಹೋಗುತ್ತೇನೆ ಎಂದು ಚಿಂತಿಸಿ ಭೀಮನು ತನ್ನ ಸ್ವಭಾವದಂತೆ ಶ್ರೀಹರಿಯನ್ನು ಧ್ಯಾನಿಸುತ್ತಾ (ಸರ್ಪಬಂಧನದಿಂದ ಬಿಡುಗಡೆಗಾಗಿ ಪ್ರಾರ್ಥಿಸದೆ) ಹಾಗೆಯೇ ಇದ್ದನು. ಆಗ ಬ್ರಹ್ಮದೇವರು ಹೇಳಿದ್ದಂತೆ, ಕೇಶವನ ಅಪ್ಪಣೆಯಂತೆ, ನಹುಷನಲ್ಲಿದ್ದ

ಸರ್ವದೇವತೆಗಳು ಮತ್ತು ಋಷಿಮುನಿಗಳ ತಪಸ್ಸು ಬಲಗಳು ಭೀಮನನ್ನು ಆಶ್ರಯಿಸಿದವು. ಆ ತರುವಾಯ ನಹುಷನು (ಅಜಗರ) ಮೆಲ್ಲಮೆಲ್ಲನೆ, ಕಾಲಕಳೆದಂತೆ ಶಿಥಿಲಾಂಗನಾದನು.

ಭೀಮಸೇನನು ಮೃಗಯಾವಿಹಾರಕ್ಕಾಗಿ ಹೊರಟಮೇಲೆ, ಅನೇಕ ದುಃಶಕುನಗಳಿಂದ ಚಂಚಲಮನಸ್ಕನಾದ ಧರ್ಮರಾಜನು ದ್ರೌಪದಿಯನ್ನು "ಭೀಮನೆಲ್ಲಿ?" ಎಂದು ಪ್ರಶ್ನಿಸಿದನು. ದ್ರೌಪದಿಯು 'ಬೇಟೆಗಾಗಿ ಹೋಗಿದ್ದಾರೆ' ಎಂದು ಹೇಳಲು ಧರ್ಮಜನು ಭ್ರಾತೃ ವಾತ್ಸಲ್ಯದಿಂದ ವನಕ್ಕೆ ಹೋಗಿ ಅಲ್ಲಿ ಭೀಮನ ತೊಡೆಯ ಸಂಸ್ಪರ್ಶದ ಬಿರುಸಿನಿಂದ ಕಳಚಿಬಿದ್ದ ವೃಕ್ಷಗಳನ್ನು ಕಂಡು ಅದನ್ನೇ ಅನುಸರಿಸಿ ಮುಂದುವರೆದು ಒಂದು ವೃಕ್ಷದ ಬಳಿ ದೊಡ್ಡ ಅಜಗರದಿಂದ ಆವೃತನಾದ ಭೀಮನನ್ನು ಕಂಡು ಅಲ್ಲಿಗೆ ಬಂದು ಭೀಮನನ್ನು ಹಿಡಿದಿರುವುದರ ಕಾರಣವೇನೆಂದು ಅಜಗರರೂಪಿ ನಹುಷನನ್ನು ಪ್ರಶ್ನಿಸಿದನು. ನಹುಷನು ಧರ್ಮರಾಜನಿಗೆ ತನಗೆ ಬಂದ ಶಾಪ, ಅದರ ನಿವಾರಣಾದಿಗಳ ಕಾರಣ ಮುಂತಾದವನ್ನು ಹೇಳಿದನು. ಆಗ ಯುಧಿಷ್ಠರನು ಭ್ರಾತೃವಾತ್ಸಲ್ಯದಿಂದ ನಹುಷನ ಪ್ರಶ್ನೆಗಳಿಗೆ ಸರಿಯಾಗಿ ಉತ್ತರವನ್ನು ಹೇಳಿದನು. ಧರ್ಮಜನು ಪ್ರಶ್ನೆಗಳಿಗೆ ಉತ್ತರಕೊಟ್ಟ ಕೂಡಲೇ ನಹುಷನಿಗೆ ಬಂದಿದ್ದ ಅಜಗರರೂಪವು ಹೋಗಿ ನಿಜದೇಹವನ್ನು ಪಡೆದನು. ದಿವ್ಯಾಂಬರ ಕುಂಡಲಾದಿಗಳಿಂದ ಕಂಗೊಳಿಸಿದ ನಹುಷನು ದೇವವಿಮಾನದಲ್ಲಿ ಸ್ವರ್ಗಕ್ಕೆ ತೆರಳಿದನು.

ತನ್ನ ವಂಶದ ಪೂರ್ವಜನಾದ ನಹುಷನು ಸ್ವರ್ಗಕ್ಕೆ ಪ್ರಯಾಣ ಬೆಳೆಸಿದ ಮೇಲೆ ಧರ್ಮನಂದನನು ಭೀಮನೊಡನೆ ಆಶ್ರಮಕ್ಕೆ ಬಂದು ಜರುಗಿದ ಸಮಸ್ತ ವೃತ್ತಾಂತವನ್ನೂ ಎಲ್ಲರಿಗೂ ತಿಳಿಸಿದನು. ಈ ಎಲ್ಲ ಸಮಾಚಾರಗಳನ್ನೂ ತಿಳಿದ ಪಾಂಡವ ಸಹೋದರರು, ದ್ರೌಪದಿ, ಮುನೀಂದ್ರಾದಿಗಳು ಭೀಮನಲ್ಲಿ, ಅತಿಶಯ ಪ್ರೀತಿಯುಕ್ತರಾದರು ಮತ್ತು ನಹುಷನು ಭೀಮನನ್ನು ಬಂಧಿಸಿದ ಕಾರಣದಿಂದಾಗಿ ಲಜ್ಜಿತರಾದರು. ಭೀಮಸೇನನಲ್ಲಿರುವ ಪ್ರೇಮಾತಿಶಯದಿಂದ "ಭೀಮ! ನೀನು ಮಹಾಸಮರ್ಥ. ಅಜಗರದಿಂದ ಬಿಡುಗಡೆ ಹೊಂದಲು ಶಕ್ತನಾಗಿದ್ದರೂ ಆ ಕಾರ್ಯದಲ್ಲಿ ಪ್ರವೃತ್ತನಾಗದೇ ಸುಮ್ಮನಿದ್ದಿ. ಇದರಿಂದ ನಿನ್ನವರಾದ ನಮ್ಮೆಲ್ಲರ ಹೃದಯಕ್ಕೆ ದುಃಖವನ್ನುಂಟು ಮಾಡಿದ್ದೀಯೆ. ಇನ್ನು ಮುಂದೆ ಇಂತಹ ಸಾಹಸ ಕಾರ್ಯ ಮಾಡಬೇಡ" ಎಂದು ಬಿನ್ನವಿಸಿ ಸಮಸ್ತರೂ ಅವನನ್ನು ಆಲಂಗಿಸಿದರು. ಅನಂತರ ಕೆಲದಿನಗಳಾದ ಮೇಲೆ ಪಾಂಡವರು ಮುನಿಗಳಿಂದ ಸಹಿತರಾಗಿ ಕುರುಗಳ ರಾಜ್ಯದಲ್ಲಿರುವ ದ್ವೈತವನಕ್ಕೆ ಬಂದು ಸೇರಿದರು.

ಪಾಂಡವರು ದ್ವೈತವನಕ್ಕೆ ಬಂದಿರುವುದನ್ನರಿತು ಅಮಿತತೇಜನಾದ ನಾರಾಯಣನು (ಕೃಷ್ಣನು) ಸತ್ಯಭಾಮೆ-ಯಿಂದೊಡಗೂಡಿ ಅಲ್ಲಿಗೆ ಬಂದು ಪಾಂಡವರಿಂದ ಪೂಜಿತನಾಗಿ ಅವರೊಡನೆ ಸ್ನೇಹದಿಂದ ಸಲ್ಲಾಪ, ಕಥಾಕಾಲ-ಕ್ಷೇಪತತ್ಪರನಾದನು. ದ್ರೌಪದೀ-ಸತ್ಯಭಾಮೆಯರು ಪರಸ್ಪರ ಸಂತೋಷದಿಂದ ವಾರ್ತಾಲಾಪಾದಿಗಳಲ್ಲಿ ಮಗ್ನರಾಗಿ ಕಾಲಕಳೆದರು. ಸ್ತ್ರೀಯರಲ್ಲಿ ಶ್ರೇಷ್ಠಳಾದ ದ್ರೌಪದಿಯು ಸತ್ಯಭಾಮೆಗೆ ಸ್ತ್ರೀಧರ್ಮಗಳನ್ನು ನಿರೂಪಿಸಿದಳು. ಸರ್ವಜ್ಞಳಾದ, ದೋಷರಹಿತಳಾದ ಸತ್ಯಭಾಮೆಯು ದ್ರೌಪದಿಯನ್ನು ಪರೀಕ್ಷಿಸುವ ಮನೀಷೆಯಿಂದ "ಸ್ತ್ರೀಧರ್ಮಗಳೇನು? ಅವುಗಳನ್ನು ತಿಳಿಸು" ಎಂದು ಕೇಳಿದಳು. ಅವಳಿಂದ ಪ್ರೇರಿತಳಾದ ಪಾಂಚಾಲಿಯು ಅವಳಿಷ್ಟದಂತೆ ಹೇಳಿದಳು.[40]

ಸತ್ಯಭಾಮೆಯು ದೋಷದೂರಳೂ, ಸರ್ವವನ್ನೂ ತಿಳಿದವಳೆಂದು ತಿಳಿದಿದ್ದರೂ ದ್ರೌಪದಿಯು ಲೋಕಶಿಕ್ಷಾರ್ಥವಾಗಿ ಸಮಸ್ತ ಸ್ತ್ರೀಧರ್ಮಗಳನ್ನು ನಿರೂಪಿಸಿದಳು. ಪಾಂಚಾಲಿಯು, ಸತ್ಯಭಾಮೆಯು ಕ್ರೀಡಾರ್ಥವಾಗಿ ಕೇಳುತ್ತಿದ್ದಾಳೆಂದು (ಅವಳ ಮಾತಿನ ಅಭಿಪ್ರಾಯವರಿತು) ಅವಳ ಪ್ರಶ್ನೆಗಳಿಗೆ ಅದಕ್ಕನುಗುಣವಾಗಿಯೂ, ಅನುಕೂಲಕರವಾಗಿಯೂ ಸತ್ಯಭಾಮೆಯನ್ನು ಸಂತೋಷಪಡಿಸಲು ಸ್ತ್ರೀಧರ್ಮಗಳನ್ನು ಹೇಳಿದಳು. ಇದಾದ ಕೆಲದಿನಗಳಾದ ಮೇಲೆ ಜನಾರ್ದನನು ಸತ್ಯಭಾಮೆ-ಯಿಂದೊಡಗೂಡಿ ದ್ವಾರಕಾಪುರಿಗೆ ಮರಳಿದನು.

40. ಈ ವಿಚಾರವು ಗ್ರಂಥಾಂತರಗಳಲ್ಲಿ ಉಕ್ತವಾಗಿದೆ.

ಒಂದು ದಿನ ಪಾಂಡವರು ಬೇಟೆಗೆ ಹೋಗಿದ್ದಾಗ ಸಿಂಧುಪತಿಯಾದ ಜಯದ್ರಥನು ಪಾಂಡವರ ಆಶ್ರಮದತ್ತ ಬಂದನು. ಅವನ ಜೊತೆಯಲ್ಲಿ ಒಂದು ಕೋಟಿ ಸೈನ್ಯವೂ ಬಂದಿತ್ತು. ಆಶ್ರಮದಲ್ಲಿ ದ್ರೌಪದಿಯೊಬ್ಬಳೇ ಇರುವುದನ್ನು ಕಂಡು ಸೈಂಧವನು "ನೋಡಲ್ಲಿ ಸುಂದರಿಯೂ ಗುಲಾಬಿಯಂತಹ ಹೆಣ್ಣೊಬ್ಬಳು ಕಂಟಕಯುಕ್ತವಾದ ಈ ಅರಣ್ಯದಲ್ಲಿ ಒಬ್ಬಂಟಿಗಳಾಗಿರುವಳು. ಅವಳಾರೆಂದು ತಿಳಿದು ಬಾ" ಎಂದು ಕೋಟಿಕಾಶ್ಯನನ್ನು ಕಳಿಸಿದನು. ಅವನು ಅವಳಾರೆಂದು ಅರಿತು ಸೈಂಧವನ ಬಳಿಗೆ ಬಂದು "ಆ ಸ್ತ್ರೀಯು ಪಾಂಡವ ವಧುವಾದ ದ್ರೌಪದಿಯು, ನೀನು ಅವಳನ್ನು ಕರೆದುಕೊಂಡು ಸಿಂಧು-ದೇಶಕ್ಕೆ ಹೊರಟುಹೋಗು" ಎಂದು ಹೇಳಿದನು. ಆಗ ಸೈಂಧವನು ಪಾಂಚಾಲಿಯಿರುವಲ್ಲಿಗೆ ಬಂದು "ನಾನು ಜಯದ್ರಥನು. ನೀನು ನನ್ನೊಡನೆ ಬಂದುಬಿಡು" ಎಂದಾಗ ದ್ರೌಪದಿಯು "ಮೂರ್ಖ, ನಾನು ಜಗದೇಕವೀರರಾದ ಪಾಂಡವರ ಪತ್ನಿಯು ಪರಸ್ತ್ರೀಯನ್ನು ಬಾ ಎಂದು ಕರೆಯುವವನಿಗೆ ಧಿಕ್ಕಾರವಿರಲಿ" ಎಂದಳು. ಅದರಿಂದ ಕೆರಳಿದ ಜಯದ್ರಥನು ಅವಳ ಕೈಹಿಡಿದನು. ದ್ರೌಪದಿಯು ತನ್ನ ಕೈ ಕೊಸರಿಕೊಂಡು ಕೈಗಳಿಂದ ಅವನನ್ನು ತಳ್ಳಿದಳು. ಆ ರಭಸಕ್ಕೆ ಧಾರಾಶಾಯಿಯಾಗಿ ಎಚ್ಚರದಪ್ಪಿ ನಂತರ ಎಚ್ಚರಗೊಂಡು ಲಜ್ಜಿತನಾದರೂ ಅವಳತ್ತ ಧಾವಿಸಿದನು. ಅಸಹಾಯಕಳಾದ ದ್ರೌಪದಿಯು ಅಗ್ನಿಕುಂಡದಲ್ಲಿರುವ ಬೆಂಕಿಯೊಡನೆ ನನ್ನನ್ನು ಅನುಸರಿಸಿ ಬರುವಂತೆ ಧೌಮ್ಯಮುನಿಗಳಿಗೆ ಹೇಳಿ ಸೈಂಧವನ ಬಲಾತ್ಕಾರದಿಂದ ಅವನ ರಥವೇರಿದಳು. ಬೇಟೆಗೆ ಹೋಗಿದ್ದ ಪಾಂಡವರು ಕೆಲ ಅಪಶಕುನಗಳನ್ನು ಕಂಡು ಕಾತರದಿಂದ ಆಶ್ರಮಕ್ಕೆ ಹಿಂದಿರುಗಿದರು. ಅಲ್ಲಿ ದಾಸಿಯಿಂದ ಜರುಗಿದ ವೃತ್ತಾಂತವರಿತು ಅಂದರೆ ದ್ರೌಪದಿಯನ್ನು ಜಯದ್ರಥನು ಅಪಹರಿಸಿಕೊಂಡುಹೋದ ವಿಚಾರವನ್ನು ತಿಳಿದು ಸೈಂಧವನನ್ನು ಬೆನ್ನಟ್ಟಿದರು. ಆಗ ಧೌಮ್ಯರು "ಭೀಮಸೇನ ಬಾ ಬಾ" ಎಂದು ಕೂಗಿಕೊಳ್ಳಲು ಭೀಮಸೇನನು ಅವನ ಮುಂದೆ ರಥದಲ್ಲಿರುವ ಪಾಪಿಯಾದ ಸೈಂಧವನನ್ನು ಕಂಡಾಗ ಕಾಶ್ಯನು "ಜಯದ್ರಥ, ನಾನು ಭೀಮನನ್ನು ತಡೆಯುತ್ತೇನೆ. ನೀನು ದ್ರೌಪದಿಯೊಡನೆ ಬೇಗ ಹೊರಟುಬಿಡು" ಎಂದು ಕೂಗಿ ಹೇಳಿದನು. ಅದನ್ನು ಕೇಳಿ ಭೀಮನು ಕಾಶ್ಯನ ಶಿರಸ್ಸನ್ನು ಛೇದಿಸಿ ಅವನನ್ನು ಮೃತ್ಯುವಿಗೆ ಅರ್ಪಿಸಿದನು. ಆ ಪಾಪಿಯು ತಮಸ್ಸಿಗೆ ಹೋದನು. ಜಯದ್ರಥನ ಸಮಸ್ತಸೈನ್ಯವನ್ನು ಭೀಮಾರ್ಜುನರು ಸಂಹಾರ ಮಾಡಿ ನಕುಲ-ಸಹದೇವ ಸಹಿತನಾದ ಧರ್ಮರಾಜನನ್ನು ಅಲ್ಲೇ ಬಿಟ್ಟು ಸೈಂಧವನನ್ನು ಬೆನ್ನಟ್ಟಿ ಹೋದರು. ಅವರನ್ನು ಕಂಡು ರಥದಿಂದ ಹಾರಿ ಓಡಿಹೋಗುತ್ತಿದ್ದ ಜಯದ್ರಥನನ್ನು ಭೀಮನು ಹಿಡಿದು ಥಳಿಸಿದನು. ಭೀಮನನ್ನು ಕಂಡು ದ್ರೌಪದಿಯು ರಥದಿಂದ ಕೆಳಗಿಳಿದಳು. ಅವಳನ್ನು ಧೌಮ್ಯನೊಡನೆ ಆಶ್ರಮಕ್ಕೆ ಕಳಿಸಿದನು. ಭೀಮನ ಏಟು ಸಹಿಸಲಾಗದೆ ಅರಚುತ್ತಿದ್ದ ಸೈಂಧವನನ್ನು ದ್ರೌಪದಿಯ ಪಾದಗಳ ಬಳಿ ಕೆಡವಿದನು. ಆಗ ಧರ್ಮರಾಜನು ಅವನನ್ನು ಬಿಡುವಂತೆ ವೃಕೋದರನಿಗೆ ಹೇಳಿದನು. ಜಯದ್ರಥನು 'ನಾನು ದ್ರೌಪದಿಯ ದಾಸನು' ಎಂದು ಅವಳಿಗೆ ಅಡ್ಡಬಿದ್ದನು. ಆನಂತರ ಭೀಮನು ಅವನಿಗೆ ಪಂಚಶಿಖೆಗಳನ್ನು ಮಾತ್ರ ಬಿಟ್ಟು ಶಿರೋಮುಂಡನ ಮಾಡಿಬಿಟ್ಟು ಅಟ್ಟಿದನು. ಸೈಂಧವನು ನಾಚಿಕೆಯಿಂದ ತಲೆತಗ್ಗಿಸಿಕೊಂಡು ಹೊರಟುಹೋದನು. ಅನಂತರ ಪೃಥಾಪುತ್ರರಾದ ಧರ್ಮರಾಜಾದಿಗಳು ಆಶ್ರಮದಲ್ಲಿ ಆನಂದದಿಂದ ಕಾಲಕಳೆದರು.

ಇದಾದ ಮೇಲೆ ಮಾರ್ಕಂಡೇಯ ಋಷಿಗಳು ಪಾಂಡವರಿದ್ದಲ್ಲಿಗೆ ಬಂದು ಪಾಂಡವರ ಕೋರಿಕೆಯಂತೆ ಬಹು ಪ್ರಕಾರವಾದ ಚಿತ್ರವಿಚಿತ್ರವೂ ಆಶ್ಚರ್ಯಕರವೂ, ಭಾಷಾತ್ರಯಸಮನ್ವಿತವೂ (ಗುಹ್ಯ-ದರ್ಶನ-ಸಮಾಧಿ ಎಂಬ ಭಾಷಾತ್ರಯ ಯುಕ್ತವೂ) ಆದ ಶ್ರೀರಾಮಚಂದ್ರನ ಕಥೆಗಳನ್ನು ಹೇಳಿದರು. ಅವರು ನಿರೂಪಿಸಿದ ಭಾಷಾತ್ರಯಾತ್ಮಕ ಕಥಾನಕಗಳಲ್ಲಿ ಯಾವುದು ಗ್ರಾಹ್ಯ? ಯಾವುದನ್ನು ಸ್ವೀಕರಿಸಬಾರದೆಂಬುದನ್ನೀಗ ನಿರ್ಣಯಾಚಾರ್ಯರು ಸ್ಪಷ್ಟಪಡಿಸುತ್ತಾರೆ.

ದರ್ಶನ ಭಾಷೆಯು – ಲೋಕದರ್ಶನ ಭಾಷಾ ಮತ್ತು ಪರದರ್ಶನ-ಭಾಷಾ ಎಂದು ಎರಡು ವಿಧ. ಪರದರ್ಶನ ಭಾಷೆಯೂ – ಲೌಕಿಕ ಪರದರ್ಶನ ಭಾಷಾ ಮತ್ತು ವೈದಿಕ ಪರದರ್ಶನ ಭಾಷಾ ಎಂದು ಎರಡು ವಿಧ. ಲೋಕದರ್ಶನ

ಭಾಷೆಯೆಂದರೆ, ಲೋಕಶಿಕ್ಷಾರ್ಥವಾಗಿ (ಜನರಿಗೆ ಶಿಕ್ಷಣಾರ್ಥವಾಗಿ) ಹೇಳುವುದು. ಲೋಕದರ್ಶನವೆಂದರೆ, ಸ್ಮೃತಿ ಮುಂತಾದ ಧರ್ಮಶಾಸ್ತ್ರಗಳು ಅದರಲ್ಲಿ ತಾಯಿ-ತಂದೆಗಳು ಮೃತರಾದ ದಿನದಂದು ಅವರಿಗೆ ಶ್ರಾದ್ಧ ಮಾಡಿ, ತಿಲಾಂಜಲಿ-ಯನ್ನು ನೀಡಬೇಕು, ತಂದೆ, ತಾಯಿ, ಗುರುಹಿರಿಯರಿಗೆ ನಮಸ್ಕರಿಸಬೇಕು – ಮುಂತಾಗಿ ಲೋಕೋಚಿತವಾದ (ಜನರಿಗೆ ಯುಕ್ತವಾದ) ಧರ್ಮವನ್ನು ಪ್ರತಿಪಾದಿಸಲಾಗಿದೆ. ಈ ಬಗೆಯ ಲೋಕದರ್ಶನವನ್ನು ಆಶ್ರಯಿಸಿ ದೇವತೆಗಳು ಋಷಿ-ಮುನಿಗಳು ಅನೇಕ ಕಥೆಗಳನ್ನು ಹೇಳುವರು. ಇದರಂತೆ ಶ್ರೀಹರಿಯ ಬಗೆಗೂ ಕಥೆಗಳನ್ನು ಹೇಳುವರು. ಅದರಲ್ಲಿ ಲೋಕ ಶಿಕ್ಷಣಕ್ಕಾಗಿ ಅಂದರೆ ಜನತೆಯ ಶಿಕ್ಷಣಕ್ಕಾಗಿ ಹೇಳಿದ್ದನ್ನು ಮಾತ್ರ ಸ್ವೀಕರಿಸಬೇಕು. ಅದರ ಅರ್ಥವನ್ನು ಖಂಡಿತ ಗ್ರಹಿಸಬಾರದು. ಸರ್ವದಾ ಕೃತಾರ್ಥನಾದ, ಸರ್ವೋತ್ತಮನಾದ ಶ್ರೀಹರಿಗೆ ಕರ್ತವ್ಯ ಕರ್ಮಗಳಾವುವೂ ಇಲ್ಲವಷ್ಟೆ. ಶ್ರೀರಾಮನಿಗೆ ಪಿತೃಶ್ರಾದ್ಧ, ಋಷಿಮುನಿವಂದನ, ಸೀತಾನ್ವೇಷಣಾದಿಗಳು ಕೇವಲಲೀಲಾಮಾತ್ರವೆಂದು ತಿಳಿಯಬೇಕು. ಅದರ ಅರ್ಥವನ್ನು ಉದಾಸೀನ ಮಾಡಬೇಕು. ಅಂದರೆ ಅದನ್ನು ಆದರಿಸಬಾರದು. ಅಂತೆಯೇ ಮಾರ್ಕಂಡೇಯ ಮುನಿಗಳು ಪಾಂಡವರಿಗೆ ಶ್ರೀರಾಮಾಯಣ ಕಥೆಯನ್ನು ನಿರೂಪಿಸುವಾಗ ದಶರಥನು ಮೃತನಾದಾಗ ಶ್ರೀರಾಮನು ಪಿತೃಶ್ರಾದ್ಧವನ್ನು ಮಾಡಿ ತಿಲಾಂಜಲಿ ನೀಡಿದನು, ಅಗಸ್ತ್ಯಾದಿ ಮುನಿಗಳಿಗೆ ನಮಸ್ಕರಿಸಿದನು, ಸೀತೆಯನ್ನು ಹುಡುಕಿದನು ಮುಂತಾಗಿ ಹೇಳಿದ ಕಥೆಗಳಲ್ಲಿ ಬರುವ ವಿಚಾರಗಳನ್ನು ಜನರ ಶಿಕ್ಷಣಕ್ಕಾಗಿ ಹೇಳಿದ್ದಾರೆ ಎಂದು ತಿಳಿಯಬೇಕು. ಶ್ರೀರಾಮನು ತಂದೆಗೆ ಶ್ರಾದ್ಧ ಮಾಡಿದನು ಮುಂತಾಗಿ ಆ ಅರ್ಥವನ್ನು ಗ್ರಹಿಸಬಾರದು. ಸಾಕ್ಷಾತ್ ಶ್ರೀನಾರಾಯಣಾವತಾರಿಯಾದ ಶ್ರೀರಾಮನಿಗೆ ತಂದೆ-ತಾಯಿಗಳಾರೂ ಇಲ್ಲದಿರುವುದರಿಂದ ಅವನು ಮಾಡಿದ ಪಿತೃಶ್ರಾದ್ಧ, ಮುನಿವಂದನ, ಸೀತಾನ್ವೇಷಣಾದಿಗಳು ಕೇವಲ ಲೀಲೆಯೆಂದು ತಿಳಿಯಬೇಕು.

ಮತ್ತೊಂದು ಉದಾಹರಣೆ:- "ಕೃಷ್ಣೋ ವಂದೇ ಪಿತರಂ ಭಕ್ತ್ಯಾ ಪೂಜ್ಯತಮಂ ಹ್ಯಜಃ" ಅಂದರೆ ಕೃಷ್ಣನು ಪೂಜಾರ್ಹನಾದ ತಂದೆಗೆ ಭಕ್ತಿಯಿಂದ ನಮಸ್ಕರಿಸಿದನು, ಇತ್ಯಾದಿಗಳು ತಂದೆಯನ್ನು ಭಕ್ತಿಯಿಂದ ವಂದಿಸುವುದು ಮಗನ ಕರ್ತವ್ಯ (ಧರ್ಮ) ಮುಂತಾದ ಲೋಕಶಿಕ್ಷಾವನ್ನು ಮಾತ್ರ ಗ್ರಹಿಸಬೇಕು. ಕೃಷ್ಣನಿಗೂ ಒಬ್ಬ ತಂದೆ ಇದ್ದ ಮೊದಲಾದ ಅರ್ಥವನ್ನು ಗ್ರಹಿಸಬಾರದು. ಈ ಅರ್ಥವನ್ನು ಗ್ರಹಿಸಬಾರದೆಂದೇ ಸರ್ವಮೂಲಕಾರರು ಶ್ರೀಕೃಷ್ಣನು ಹುಟ್ಟಿಲ್ಲದವನೆಂದು ಸೂಚಿಸಲು "ಅಜಃ" ಎಂಬ ವಿಶೇಷಣವನ್ನು ಕೊಟ್ಟಿದ್ದಾರೆ. ಇದರಂತೆ "ಕೃಷ್ಣಸ್ಯ ದೇಹಂ ತ್ವದಹದರ್ಜುನಃ ಪತಿತಂ ಭುವಿ" ಅಂದರೆ ಭೂಮಿಯಲ್ಲಿ ಬಿದ್ದ ಕೃಷ್ಣನ ದೇಹಕ್ಕೆ ಅರ್ಜುನನು ದಹನ (ಅಗ್ನಿ)ಸಂಸ್ಕಾರ ಮಾಡಿದನು – ಎಂಬಲ್ಲಿ ಮೃತರಾದವರ ದೇಹಕ್ಕೆ ದಹನ ಸಂಸ್ಕಾರ ಮಾಡಬೇಕು ಎಂಬ ಶಿಕ್ಷಾವನ್ನು ಮಾತ್ರ ಸ್ವೀಕರಿಸಬೇಕು. ಕೃಷ್ಣನ ದೇಹವು ಬಿದ್ದಿತು ಮುಂತಾದ ಅರ್ಥವನ್ನು ಗ್ರಹಿಸಬಾರದು.

"ಉಕ್ತೋ ಯೋ ಮಹಿಮಾ ವಿಷ್ಣೋಃ ಸತೂಕ್ತೋ ಹಿ ಸಮಾಧಿನಾ" ಎಂಬ ಪ್ರಮಾಣದಂತೆ ಶ್ರೀಹರಿಯ ಮಹಿಮೆಯು ಸಮಾಧಿ ಭಾಷೆಯಲ್ಲಿ ಉಕ್ತವಾಗಿದೆ ಎಂಬುದು ಸ್ಪಷ್ಟವಾಗುವುದು. ಹದಿನೆಂಟು ಪುರಾಣಗಳನ್ನು ರಚಿಸಿದ ಶ್ರೀವೇದವ್ಯಾಸರು ಶ್ರೀವಿಷ್ಣುವಿನ ಮಹಿಮಾ ನಿರೂಪಣೆಗಾಗಿ ಸಮಾಧಿಭಾಷೆಯಲ್ಲಿ ಹೇಳಿರುವ ಸಮಸ್ತ ಅರ್ಥಗಳನ್ನೂ ಯಾವ ಸಂಶಯವೂ ಇಲ್ಲದೆ ಸ್ವೀಕರಿಸಬೇಕು. ಸಮಾಧಿ ಭಾಷೆಗಳಲ್ಲಿ ಉಕ್ತವಾದ ಸಕಲ ಅರ್ಥಗಳನ್ನೂ ಇಟ್ಟುಕೊಳ್ಳಬೇಕು. ಅಂದರೆ ಮೂರು ವಿಧವಾದ ದರ್ಶನಭಾಷೆಗಳನ್ನು ಅವಲಂಬಿಸದೆ ಕೇವಲ ಸ್ವಕೀಯ ಸಿದ್ಧಾಂತ ಪ್ರತಿಪಾದನೆಗೆ ಹೇಳಿರುವ ಸ್ಪಷ್ಟ ಅರ್ಥಗಳನ್ನು ಇಟ್ಟುಕೊಳ್ಳಬೇಕು. ಈ ವಿಷಯಕ್ಕೆ "ವಿಷ್ಣೋರ್ನುಕಂ", "ನ ತೇ ವಿಷ್ಣೋ ಜಾಯಮಾನಃ" "ಪರೋಮಾತ್ರಯಾ ತನ್ವಾ ವೃಧಾನ", "ನಾಸ್ತಿ ನಾರಾಯಣ ಸಮಂ ನ ಭೂತಂ ನ ಭವಿಷ್ಯತಿ" ಇತ್ಯಾದಿಗಳು ಉದಾಹರಣೆಯಾಗಿವೆ. ಹೀಗೆ ಹೇಳಿದರೆ ಇದೂ ಸಹ ಸಿದ್ಧಾಂತವಲ್ಲ, ವೈದಿಕ ಪರದರ್ಶನ ಭಾಷೆಯಲ್ಲಿ ಹೀಗೆ ಹೇಳಿದೆ, ಎಂದು ಇದನ್ನು ವೈಷ್ಣವದರ್ಶನ ಭಾಷಾರೂಪವೆಂದು ಹೇಳಬಾರದು. ಯಾವುದೊಂದೂ ತಮ್ಮ ಸಿದ್ಧಾಂತವಾಗದಿದ್ದರೆ

ಮೂಕತ್ವ ಬರಬೇಕಾದೀತು! ಪರಿಶೇಷಾತ್ ವೈಷ್ಣವ ಸಿದ್ಧಾಂತವೆಂದು ಆಪಾತತಃ ಕಂಡುಬರುವ, ತಮಗೆ ಅಭಿಪ್ರೇತವಲ್ಲದ ಅರ್ಥವನ್ನು ಪ್ರತಿಪಾದಿಸುವ ದರ್ಶನಭಾಷಾತ್ವಕ್ಕೆ ಈ ಬಗೆಯ ವಾಕ್ಯಗಳಲ್ಲಿ ಸಂಭವವಿಲ್ಲದಿರುವುದು ಸ್ಪಷ್ಟವಾಗಿದೆ.

ಇನ್ನು ಪರದರ್ಶನಭಾಷಾತ್ಮಕ ಕಥೆಗಳಲ್ಲಿ ಅಂದರೆ ವೈದಿಕದರ್ಶನವಲ್ಲದ ಇತರ ಪಾಶುಪತಾದಿ ದರ್ಶನಗಳನ್ನು ಆಶ್ರಯಿಸಿ - ಅಂದರೆ ಶೈವ, ಸ್ಕಾಂದ, ಸೂರ್ಯ, ವಿನಾಯಕ, ಶಕ್ತಿ ಮುಂತಾದವುಗಳಲ್ಲಿ ಯಾವ ಭಾಷೆಯು ಭಾರತಾದಿಗಳಲ್ಲಿ ಅಲ್ಲಲ್ಲಿ ಹೇಳಲ್ಪಡುವುವೋ ಅವು ಆಯಾ ದೇವತಾ ಸರ್ವೋತ್ತಮತ್ವ ಪ್ರತಿಪಾದಕಗಳಾದ್ದರಿಂದ ಆ ಕಥೆಗಳಲ್ಲಿ ಹೇಳಿರುವ ಅರ್ಥಗಳು ಅಂದರೆ - ಶಿವಾದಿ ದರ್ಶನಗಳು ಆ ಸಂಪ್ರದಾಯಗಳೆಂದು ತಿಳಿಯಬೇಕು. ಅಂದರೆ - ಶಿವನು ಸರ್ವೋತ್ತಮನು, ಶ್ರೀಕೃಷ್ಣನು ಶಿವನನ್ನು ಕುರಿತು ತಪಸ್ಸು ಮಾಡಿದನು, ಕೈಲಾಸ ಯಾತ್ರೆ ಮಾಡಿದನು, ಇವೇ ಮೊದಲಾದವುಗಳನ್ನು ತಿಳಿಸುವುದು ವೈದಿಕದರ್ಶನವಲ್ಲದ ಪಾಶುಪತಾದಿ ಸಿದ್ಧಾಂತಗಳು. ಆ ಸಿದ್ಧಾಂತವನ್ನು ಅಂದರೆ - ಪರದರ್ಶನವನ್ನು ಹೇಳುವಾಗ ಆ ಮತದ ರೀತಿಯಿಂದ ಹಾಗೆ ಹೇಳಿದ್ದಾರೆ ಎಂದು ತಿಳಿಯಬೇಕು. ಇದನ್ನು ಜ್ಞಾಪಿಸಲೆಂದೇ "ವ್ಯಾಸಾದಯೋ ವದಂತಿ" ವೇದವ್ಯಾಸಾದಿಗಳು ಹೇಳುತ್ತಾರೆ ಎಂದು ಉಕ್ತವಾಗಿದೆ. ಶ್ರೀವ್ಯಾಸಾದಿಗಳು ಆ ಮತವನ್ನು ಆ ಮತದ ಅನುವಾದರೂಪವಾಗಿ ಹಾಗೆ ಹೇಳಿದ್ದಾರೆ ಎಂದು ತಿಳಿಯಬೇಕು. ಅಲ್ಲಿ ಹೇಳಿದ ಅರ್ಥವನ್ನು ಅಂದರೆ ಪಾಶುಪತಾದಿಶಾಸ್ತ್ರಗಳು ಅವೈದಿಕಮೂಲವಾದ್ದರಿಂದ ಅದನ್ನು ತಾನೂ ಗ್ರಹಿಸಬಾರದು. ವಿವೇಕಿಗಳಾದ ಲೌಕಿಕರೂ (ಜನರೂ) ಸ್ವೀಕರಿಸಬಾರದೆಂದು ಅಭಿಪ್ರಾಯ.

ವೈದಿಕದರ್ಶನವು, ಆಪಾತತಃ ರುದ್ರಾದಿಗಳಲ್ಲಿ ಇಲ್ಲದೇ ಇರುವ ಉತ್ತಮತ್ವವನ್ನು ತೋರಿಸುವುದು. ಇದಕ್ಕೆ ರುದ್ರ-ಸೂಕ್ತಾದಿಗಳು ಉದಾಹರಣೆಯಾಗಿವೆ. ಈ ರುದ್ರಸೂಕ್ತ ಮೊದಲಾದವು ಪರದರ್ಶನವಾಗಿದ್ದರೂ, ಅಪೌರುಷೇಯ-ವಾದುದರಿಂದ ಅವನ್ನು ಸರ್ವಥಾ ಬಿಡಬಾರದೆಂದು ಸೂಚಿಸಲು "ತು" ಶಬ್ದವನ್ನು ಪ್ರಯೋಗಿಸಿದ್ದಾರೆ. ಆದ್ದರಿಂದ ಅದು ಗ್ರಾಹ್ಯವೆಂದು ಉಕ್ತವಾಗಿದೆ. ಇಲ್ಲಿ "ಚ" ಶಬ್ದದಿಂದ "ಯೋ ದೇವಾನಾಂ ನಾಮಧಾ ಏಕ ಏವ" ಎಂದು ವೇದವೇ ಹೇಳಿದ ವಿಷ್ಣುವಿಗೆ "ಸರ್ವನಾಮತ್ವ" ಮುಂತಾದ ಯುಕ್ತಿಯನ್ನು ಇಟ್ಟುಕೊಂಡು ಅರ್ಥಮಾಡಬೇಕು. ವೇದವು ಅಪೌರುಷೇಯವಾದ್ದರಿಂದ ಅದಕ್ಕೆ ಸರ್ವಥಾ ಅಗ್ರಾಹ್ಯತ್ವವು ಬರುವುದಿಲ್ಲವಾದುದರಿಂದ "ರುಜಂ ದ್ರಾವಯತೇ ಯಸ್ಮಾತ್ ರುದ್ರಸ್ತಸ್ಮಾಜ್ಜನಾರ್ದನಃ" ಇದು ಮುಂತಾದ ಸ್ಮೃತಿಯಲ್ಲಿ ಹೇಳಿದ ವ್ಯುತ್ಪತ್ತಿಯನ್ನು ಆಶ್ರಯಿಸಿ ರುದ್ರಸೂಕ್ತವೂ ವಿಷ್ಣುಸೂಕ್ತವೆಂದು ಸ್ವೀಕರಿಸಬೇಕು. ಪರದರ್ಶನದಂತೆ ಬಿಡಬಾರದು ಎಂದು ಭಾವ. ಅಂದರೆ ಶಿವಾದಿ ಸರ್ವೋತ್ತಮತ್ವವನ್ನು ನಿರೂಪಿಸುವ ಅರ್ಥವನ್ನು ಗ್ರಹಿಸಬಾರದು. ಶೈವಾದಿ ದರ್ಶನಗಳು ಅವೈದಿಕ ಮೂಲವಾದ್ದರಿಂದ ಆ ಅರ್ಥವನ್ನು ಸ್ವೀಕರಿಸಬಾರದೆಂದು ತಾತ್ಪರ್ಯ. ಇದು ಸಕಲಶಾಸ್ತ್ರಗಳ ನಿರ್ಣಯವು.

ಈ ಭಾಷೆಯೂ ಪರದರ್ಶನ ರೀತ್ಯಾ ಪ್ರವೃತ್ತವಾಗಿರುವುದರಿಂದ ದರ್ಶನಭಾಷೆಯೇ ಹೊರತು ಗುಹ್ಯಭಾಷೆಯಲ್ಲ. ದರ್ಶನಾಂತರ ಪ್ರಮೇಯವನ್ನು ಅವಲಂಬಿಸದೇ ಯಾವುದು ಲೌಕಿಕವಾದ ಅರ್ಥದಲ್ಲಿ ಹೇಳಲ್ಪಟ್ಟಿರುವುದೋ (ನಿಗೂಢ ಭಾಷ) ಅದು ಗುಹ್ಯಭಾಷೆಯು. ಈ ಬಗೆಯ ಗುಹ್ಯಭಾಷೆಯಲ್ಲಿ ಬೇರೆ ಅರ್ಥವನ್ನೇ ಗ್ರಹಿಸಬೇಕು. ಉದಾಹರಣೆಗೆ:-

"ಉಚ್ಛಿಷ್ಟಂ ಶಿವನಿರ್ಮಾಲ್ಯಂ (ವಮನಂ ಶವಕರ್ಪಟಂ) ವಾಂತಂ ಚ ಮೃತಕರ್ಪಟಮ್ ।
ಕಾಕವಿಷ್ಠಾಸಮಾಯುಕ್ತಂ (ಪಂಚೈತೇತಿ ಪವಿತ್ರಕಾಃ) ಪಂಚಭೂತಾನಿ ಭಾರತ" ಇತ್ಯಾದಿ.

ಇಲ್ಲಿ ಯಥಾವತ್ ಸ್ಥಿತ ಅರ್ಥವು ಬಾಧಿತವಾಗಿರುವುದರಿಂದ ಆ ಅರ್ಥವು, ಸ್ವೀಕಾರ್ಯವಲ್ಲ, ಇನ್ನಾವುದು ಗ್ರಾಹ್ಯ ಎಂದರೆ - ಉಚ್ಛಿಷ್ಟಪದದಿಂದ ಗೋವತ್ಸವು (ಕರುವು) ಹಾಲುಂಡು ಮಿಕ್ಕದ್ದು ಉಚ್ಛಿಷ್ಟವೆನಿಸುವುದು, ಎಂದು

ಹೇಳಲ್ಪಡುವುದು. ಶಿವನಿರ್ಮಾಲ್ಯ ಪದದಿಂದ ಶಿವನು ಶಿರದಲ್ಲಿ ಧರಿಸಿದ ಮಾತ್ರದಿಂದ ಶಿವನಿರ್ಮಾಲ್ಯದಂತೆ ಕಾಣುವ ಗಂಗಾಜಲವು ಉಕ್ತವಾಗಿದೆ. ವಾಂತಪದದಿಂದ ಜೇನುನೊಣದ ಉದರದಿಂದ ಹೊರಬಂದ ಮಾತ್ರದಿಂದ ವಾಂತಿಯಂತೆ ಇರುವ ಜೇನುತುಪ್ಪವು ಹೇಳಲ್ಪಡುತ್ತದೆ. ಅಲ್ಲಿಯೂ ಕೂಡ ಹೂವಿನರಸ ಮುಂತಾದುವನ್ನು ಸ್ವತಃ ಆಸ್ವಾದಿಸದೆ, ಚರ್ಮಪಾತ್ರದಂತೆ ತನ್ನ ಉದರದಲ್ಲಿ ಸಂಗ್ರಹಿಸಿ ಜೇನು ಹೊರಗೆ ಎರಚುತ್ತದೆ. ಮಧುವಾದ ಮೇಲೆಯೇ ಸ್ವೀಕರಿಸುತ್ತದೆ. ಆದ್ದರಿಂದ, ಅಗ್ನಿಯು ಸ್ವತಃ ಆಸ್ವಾದಿಸದೆ ತನ್ನ ಕೆನ್ನಾಲಿಗೆಯಿಂದ ನೀಡುವ 'ದೇವತಾಹುತಿ'ಯಂತೆ ಇದೂ ಸಹ ಶುದ್ಧವೆಂದು ಭಾವ. ಮೃತಕರ್ಪಟಪದದಿಂದ ಮೃತವಾದ ಕ್ರಿಮಿಯ ಕೋಶದಿಂದ (ರೇಷ್ಮೆಹುಳದ ಕೋಶದಿಂದ) ಬಂದ ವಸ್ತ್ರವೆಂದು ಉಕ್ತವಾಗಿದೆ. ಕಾಕವಿಷ್ಠಾಸಮಾಯುಕ್ತ ಎಂಬ ಪದದಿಂದ ಕಾಗೆಗಳು ಅಶ್ವತ್ಥ ವೃಕ್ಷದ ಫಲಗಳನ್ನು ಭಕ್ಷಿಸಿದ ಮೇಲೆ ಅದರ ವಿಷ್ಠೆಯಿಂದ ಬರುವ ಬೀಜವು, ಅದರಿಂದ ಹುಟ್ಟಿದ ಅಶ್ವತ್ಥವೆಂದು ಹೇಳಲ್ಪಡುವುದು. ಇದರಂತೆ ಬೇರೆ ಬೇರೆ ಅರ್ಥಗಳನ್ನು ತಿಳಿಯಬೇಕು. ಶಾಸ್ತ್ರಗಳಲ್ಲಿ ಮೇಲೆ ಹೇಳಿದ ಪ್ರಕಾರವಾಗಿ ನಿರ್ಣಯ ಮಾಡಲ್ಪಟ್ಟಿದೆ.

ಇತ್ತ ಭೀಮಸೇನನು ಜಯದ್ರಥನ ಶಿರೋಮುಂಡನ ಮಾಡಿ ಜೀವಸಹಿತವಾಗಿ ಬಿಟ್ಟು ಅಟ್ಟಿದ ಮೇಲೆ ಆ ದುಷ್ಟನು ಕೆಟ್ಟಮನದಿಂದ ರುದ್ರದೇವರನ್ನು ಕುರಿತು ತಪಸ್ಸು ಮಾಡಿ ಅವರನ್ನು ಮೆಚ್ಚಿಸಿ, ಪಾಂಡವರನ್ನು ಎದುರಿಸಿ ತಡೆದು ಜಯಿಸುವ ವರವನ್ನು ಬೇಡಿದನು. ಅರ್ಜುನನು ಈ ಮೊದಲೇ ತಮ್ಮನ್ನು ಸಂತೋಷಪಡಿಸಿ ವರವನ್ನು ಪಡೆದಿದ್ದುದರಿಂದ ರುದ್ರದೇವರು ಜಯದ್ರಥನಿಗೆ ಅರ್ಜುನನನ್ನು ಹೊರತುಪಡಿಸಿ ಉಳಿದ ಪಾಂಡವರನ್ನು ನಿರೋಧಿಸುವ ಶಕ್ತಿಯನ್ನು ವರವಾಗಿ ಅವನಿಗೆ ದಯಪಾಲಿಸಿದರು.

ಹಸ್ತಿನಾವತಿಯಲ್ಲಿ ಸುಯೋಧನನು, ಇಂದ್ರಪ್ರಸ್ಥದಲ್ಲಿ ಪಾಂಡವರಾಚರಿಸಿದ ರಾಜಸೂಯಯಾಗ, ಅದರ ವೈಭವ, ಪಾಂಡವರಿಗೆ ಬಂದ ಕೀರ್ತಿ ಮುಂತಾದವುಗಳನ್ನು ಕಂಡು ಅಸೂಯಾಪರನಾಗಿ ಸ್ಪರ್ಧೆಯಿಂದ ತಾನೂ ಸಹ "ಪೌಂಡರೀಕ" ಎಂಬ ಯಜ್ಞವನ್ನು ನೆರವೇರಿಸಿದನು. ಆದರೂ ಅದು ರಾಜಸೂಯದ ಷೋಡಶಕಲೆಗೆ ಅರ್ಹವಾಮುದಲ್ಲ. ದುರ್ಯೋಧನನ ಅಪ್ಪಣೆಯಂತೆ ದುಶ್ಶಾಸನನು ಈ ಯಜ್ಞಕ್ಕೆ ಬರುವಂತೆ ದೂತನ ಮೂಲಕ ಪಾಂಡವರಿಗೆ ಹೇಳಿಕಳಿಸಿದನು. ಆಗ ಭೀಮಸೇನನು ಈ ಯಜ್ಞಕ್ಕೆ ನಾವು ಬರುವುದಿಲ್ಲ, ರಣಯಜ್ಞಕ್ಕೆ ಖಂಡಿತ ಬರುತ್ತೇವೆ ಎಂದು ಹೇಳಿ ಕಳಿಸಿದನು.

ಕೆಲಕಾಲ ಕಳೆದ ಮೇಲೆ ಧಾರ್ತರಾಷ್ಟ್ರರು ಕರ್ಣ-ಶಕುನಿ-ಮುಂತಾದ ಆತ್ಮೀಯರೊಡನೆ ಕುಮಂತ್ರಾಲೋಚನೆ ಮಾಡಿ, ಪಾಂಡವರಿಗೆ ದ್ರೌಪದಿಗೆ ತಮ್ಮ ಸಿರಿ-ಸಂಪತ್ತು-ವೈಭವಗಳ ಹಿರಿಮೆಯನ್ನು ಪ್ರದರ್ಶಿಸಲೂ ಅವರಿಗೆ ದುಃಖವನ್ನುಂಟು ಮಾಡಬೇಕೆಂದೂ ತೀರ್ಮಾನಿಸಿ, ಅನೇಕ ರತ್ನಖಚಿತ ರಥಗಳು, ಮಹಾಗಜಗಳು, ಕುದುರೆಗಳು, ಅಗಾಧ ಪದಾತಿಗಳೊಡನೆ ಬಹುವಿಧ ಚಿತ್ರ-ವಿಚಿತ್ರ ಗಂಧಮಾಲ್ಯ-ವಸ್ತ್ರಾಭರಣಗಳಿಂದ ಅಲಂಕೃತರಾಗಿ, ಅಂತಃಪುರ ಸ್ತ್ರೀಯರೊಡನೆ ಘೋಷಯಾತ್ರೆಯ ನೆಪದಿಂದ ಪಾಂಡವರಿದ್ದ ದ್ವೈತವನಕ್ಕೆ ಬಂದರು.

ದುರ್ಯೋಧನನ ದುರ್ಹೃದಯ, ಕಪಟಗಳನ್ನರಿತ ಇಂದ್ರದೇವನು ಕೌರವರ ಮುಖಭಂಗಮಾಡಲು ಗಂಧರ್ವನಾದ ಚಿತ್ರರಥನಿಗೆ ವಿಶೇಷಶಕ್ತಿಯ ವರವಿತ್ತು ಕಳುಹಿದನು. ಚಿತ್ರರಥನು ಗಂಧರ್ವ ಮುಖ್ಯರಾದ ಅರವತ್ತು ಕೋಟಿ ಸಂಖ್ಯಾಕರಾದ ಸೇನಾನಾಯಕರಿಂದ ಸಹಿತನಾಗಿ, ಕೌರವನು ಯಾವ ಸರೋವರದಲ್ಲಿ ಸ್ನಾನಮಾಡಲು ಇಚ್ಛಿಸಿದ್ದನೋ ಅಲ್ಲಿಗೆ ಬಂದು ಬೀಡುಬಿಟ್ಟನು. ಆಗ ಅವರನ್ನು ಕಂಡು ದುರ್ಯೋಧನನ ಆಜ್ಞೆಯಂತೆ ಬಂದ ದೂತರು ಚಿತ್ರಸೇನ ಗಂಧರ್ವನಿಗೆ "ನಮ್ಮ ರಾಜಾಧಿರಾಜರಾದ ಕೌರವಸಾಮ್ರಾಟ್ ದುರ್ಯೋಧನ ಮಹಾಪ್ರಭುಗಳು ಇಲ್ಲಿ ಸ್ನಾನ ಮಾಡಲು ಬಯಸಿದ್ದಾರೆ. ಅವರ ಆಜ್ಞೆಯನ್ನು ಶಿರಸಾಧರಿಸಿ ನೀವು ಇಲ್ಲಿಂದ ಈಗಲೇ ಹೊರಟು ಹೋಗಿರಿ" ಎಂದು ಹೇಳಿದರು. ಆ ದೂತರ ಮಾತುಕೇಳಿ ಗಂಧರ್ವರು ಗಹಗಹಿಸಿ ನಗುತ್ತಾ "ನಾವು ತ್ರಿಲೋಕಾಧಿಪತಿಯಾದ ಇಂದ್ರದೇವನ ಆಜ್ಞೆಯನ್ನು ಮಾತ್ರ ಮಾನಿಸುವವರೇ

ವಿನಃ ಮಾನವರಾದ ಭರತಾದಿ ಚಕ್ರವರ್ತಿಗಳ ಮಾತನ್ನೂ ಮಾನಿಸುವವರಲ್ಲ! ಅಂದ ಮೇಲೆ ಸಾಮಾನ್ಯನೂ, ಅಲ್ಪಶಕ್ತನೂ ಆದ ನಿಮ್ಮ ದುಷ್ಟ ದುರ್ಯೋಧನನ ಮಾತಿಗೆ ವಡಕು ಕವಡೆಯ ಬೆಲೆಯನ್ನೂ ಕೊಡುವವರಲ್ಲವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೇ?" ಎಂದು ಹೇಳಿಕಳಿಸಿದರು.

ಆಗ ದುರಭಿಮಾನಿಯಾದ ದುರ್ಯೋಧನನು ಅತ್ಯಂತಕುಪಿತನಾಗಿ ಗಂಧರ್ವರ ಮೇಲೆ ಯುದ್ಧ ಸಾರಿ ಗಂಧರ್ವ ಶ್ರೇಷ್ಠರನ್ನು ಬಾಣಗಳಿಂದ ಹೊಡೆದನು. ಕರ್ಣಾದಿಗಳೂ, ಸುಯೋಧನನ ಸಹೋದರರೂ ಗಂಧರ್ವರ ಮೇಲೆ ಶರಗಳನ್ನು ಪ್ರಯೋಗಿಸಿದರು. ಆಗ ಗಂಧರ್ವರು ಕೌರವರ ಸೈನ್ಯವನ್ನೆದುರಿಸಿ ಸ್ವಲ್ಪಕಾಲ ಯುದ್ಧಮಾಡಿ ಇಂದ್ರನ ವರದಿಂದ ಯುದ್ಧದಲ್ಲಿ ವಿಜೃಂಭಿಸಿದರು. ಈ ಕದನದಲ್ಲಿಯೇ ಚೆನ್ನಾಗಿ ದುರ್ಯೋಧನನ ತೇಜೋಭಂಗವಾಗಬೇಕೆಂದು ಕಮಲಸಂಭವ ಮತ್ತು ಕೇಶವರು ಗಂಧರ್ವರಿಗೆ ಹೆಚ್ಚಾದ ಬಲವನ್ನು ಕರುಣಿಸಿದರು. (ಈ ಯುದ್ಧವನ್ನು ಬಿಟ್ಟು ಬೇರೆ ಯುದ್ಧಗಳಲ್ಲೂ ಜಯಿಸಲು ವರವನ್ನು ಕೊಡಲಿಲ್ಲವೆಂದು ತಿಳಿಯಬೇಕು).

ಮೊದಲು ಚಿತ್ರಸೇನನು ಅರ್ಜುನನಿಗೆ ರಾಜ್ಯಸಂಪತ್ತು ದೊರಕಬೇಕೆಂದು ಸ್ಪರ್ಧೆಯಿಂದ ಯುದ್ಧ ಮಾಡಿದನು. ಕರ್ಣನೂ ಸ್ಪರ್ಧೆಯಿಂದ ಯುದ್ಧ ಮಾಡಲಾರಂಭಿಸಿದನು. ಆಗ ಪರಶುರಾಮರು 'ಸ್ಪರ್ಧೆಯಿಂದ ಯುದ್ಧಮಾಡಿದಾಗ ಪರಾಜಯ ಪಡೆಯುತ್ತೀಯೆ' ಎಂದು ಹೇಳಿದ್ದಂತೆ ಚಿತ್ರರಥನೊಡನೆ ಯುದ್ಧಮಾಡಲಾಗದೆ ಪರಾಜಿತನಾದನು. ಆಗ ಕರ್ಣನ ರಥವು ಭಗ್ನವಾಯಿತು. ಅದರಿಂದ ಅವನು ವಿಕರ್ಣನ ರಥವೇರಿ ಚಾಟಿಯಿಂದ ಕುದುರೆಗಳನ್ನು ಥಳಿಸಿ ವಿಕರ್ಣನೊಡನೆ ಅಲ್ಲಿಂದ ರಥದಲ್ಲಿ ಪಲಾಯನ ಮಾಡಿದನು. ಆಗ ದುರ್ಯೋಧನನು ಚಿತ್ರರಥನೊಡನೆ ಯುದ್ಧಕ್ಕಿಳಿದನು. ಚಿತ್ರರಥನು ಸ್ವಲ್ಪಕಾಲ ಅವನೊಡನೆ ಕಾದಾಡಿದನು. ಗಂಧರ್ವಮಾಯೆಯಿಂದ ಗಂಧರ್ವರು ಸುಯೋಧನನ ರಥವನ್ನು ಭಗ್ನಗೊಳಿಸಿದರು. ದುರ್ಯೋಧನನು ನೆಲಕ್ಕೆ ಬಿದ್ದೆದ್ದು ನಿಂತನು. ಆಗ ಚಿತ್ರರಥನು ಅವನನ್ನು ಸೆರೆಹಿಡಿದನು. ದುರ್ಯೋಧನನು ಮಹಾಪರಾಕ್ರಮಶಾಲಿಯಾಗಿದ್ದರೂ ಇಂದ್ರ ಮತ್ತು ವಿಷ್ಣುವಿನ ವರಬಲದಿಂದ ಚಿತ್ರರಥನು ಕೌರವನನ್ನು ಸೋಲಿಸಿ ವಿದ್ಯುದ್ದೇವತಾಭಿಮಾನಿ ಪಾಶದಿಂದ ಬಂಧಿಸಿದನು. ದುರ್ಯೋಧನನ ಸಹೋದರರು, ಶಕುನಿ, ಸುಯೋಧನಾದಿಗಳ ಭಾರ್ಯೆಯರನ್ನೂ ಗಂಧರ್ವರು ಬಂಧಿಸಿ ರಥಗಳಲ್ಲಿ ಹಾಕಿಕೊಂಡು ಅಂಬರಮಾರ್ಗವಾಗಿ ತಮ್ಮ ಲೋಕಕ್ಕೆ ಎಳೆದ್ಯೊಯ್ಯುತ್ತಿರುವಾಗ ದುರ್ಯೋಧನನ ಮಂತ್ರಿ ಮುಂತಾದವರು ಪಾಂಡವರ ಬಳಿಗೆ ಬಂದು ಅಳುತ್ತಾ ಧರ್ಮರಾಜನಲ್ಲಿ ತಮಗಾದ ಪರಾಭವ, ಗಂಧರ್ವರು ದುರ್ಯೋಧನಾದಿಗಳನ್ನು ಬಂಧಿಸಿ ಕರೆದೊಯ್ದ ವಿಚಾರಗಳನ್ನು ಹೇಳಿ ಅವರನ್ನು ಬಿಡಿಸಬೇಕೆಂದು ಪ್ರಾರ್ಥಿಸಿದರು.

ಆಗ ಉಗ್ರತೇಜನಾದ ಭೀಮನು "ಅಣ್ಣ! ಈ ಕಾರ್ಯವು ಇಂದ್ರದೇವನಿಂದಾಗಿದೆ. ದುರ್ಯೋಧನನು ತನ್ನ ಸಂಪದ್ವೈಭವಗಳನ್ನು ನಮ್ಮ ಮುಂದೆ ಪ್ರದರ್ಶಿಸಿ ನಮಗೆ ಸಂಕಟವನ್ನುಂಟು ಮಾಡಬೇಕೆಂಬ ದುರಾಶಯದಿಂದ ಇಲ್ಲಿಗೆ ಬಂದಿರುವುದನ್ನರಿತು ಇಂದ್ರನು ಗಂಧರ್ವರಿಂದ ಅವನ ಗರ್ವಭಂಗಕ್ಕಾಗಿ ಈ ಕಾರ್ಯ ಮಾಡಿಸಿದ್ದಾನೆ. ಯುದ್ಧದಲ್ಲಿ ಪರಾಜಿತರಾದ ಕೌರವರು ಮಾಡಿದ ಪಾಪಕ್ಕೆ ಫಲವನ್ನು ಅನುಭವಿಸಿದ್ದಾರೆ. ಇದಕ್ಕಾಗಿ ನಾವು ವಿಚಾರಮಾಡಬೇಕಾಗಿಲ್ಲ" ಎಂದು ಭೀಮನು ತನಗಿರುವ ದಿವ್ಯಜ್ಞಾನವನ್ನು ಪ್ರದರ್ಶಿಸುತ್ತಾ ಹೇಳಿ ಮೌನವಹಿಸಿದನು.

ಅನಂತರ ಧರ್ಮರಾಜನ ಅಪ್ಪಣೆಯಂತೆ ಭೀಮಾರ್ಜುನರು ಚಿತ್ರಸೇನನನ್ನು ಬೆನ್ನಟ್ಟಿ ಹೋಗಿ ಯುದ್ಧಮಾಡಿ ದುರ್ಯೋಧನಾದಿಗಳನ್ನು ಬಿಡಿಸಿ ಕರೆತಂದರು. ಚಿತ್ರಸೇನನು ದುರ್ಯೋಧನಾದಿಗಳ ಕುತಂತ್ರ, ಇಂದ್ರನ ಅಪ್ಪಣೆಯಂತೆ ತಾವು ಕೌರವರಿಗೆ ಬುದ್ಧಿ ಕಲಿಸಿದ ವಿಚಾರವನ್ನು ಧರ್ಮರಾಜನಲ್ಲಿ ನಿವೇದಿಸಿದನು. ಅದನ್ನು ಕೇಳಿ ದುರ್ಯೋಧನನು ಲಜ್ಜೆಯಿಂದ ತಲೆತಗ್ಗಿಸಿ ನಿಂತನು. ಧರ್ಮರಾಜನು ಚಿತ್ರಸೇನನನ್ನು ಸಂಭಾವಿಸಿ ಇನ್ನು ಮುಂದೆ ಇಂತಹ ಕಾರ್ಯ

ಮಾಡಬೇಡ ಎಂದು ಬುದ್ಧಿಹೇಳಿ ಅವನನ್ನು ಕಳಿಸಿ ನಂತರ ದುರ್ಯೋಧನಾದಿಗಳನ್ನು ಕಳಿಸಿಕೊಟ್ಟನು. ದುರ್ಯೋಧನನು ತನ್ನ ಸಹೋದರರು, ಭಾರ್ಯೆಯರೆಲ್ಲರೊಡನೆ ಅಲ್ಲಿಂದ ಹೊರಟು ಸ್ವಲ್ಪದೂರ ಬಂದ ಮೇಲೆ ಲಜ್ಜಿತನಾಗಿ ಕುಳಿತಿದ್ದ ಕರ್ಣನನ್ನು ಕಂಡನು. ಆಗ ಕರ್ಣನು 'ಭಲೇ ಮಿತ್ರ, ಆ ಗಂಧರ್ವರನ್ನು ಜಯಿಸಿ ಬಂದಿದ್ದೀಯೆ' ಎಂದು ಅವನನ್ನು ಪ್ರಶಂಸಿಸಲು ದುರ್ಯೋಧನನು ಕರ್ಣನಿಗೆ ತನಗಾದ ಪರಾಭವಾದಿ ಸಮಸ್ತ ವಿಚಾರಗಳನ್ನೂ ತಿಳಿಸಿ ನಾನಿನ್ನು ಜೀವಿಸಿ-ರುವುದಿಲ್ಲವೆಂದು ದುಃಖಿತನಾಗಿ ಪ್ರಾಯೋಪವೇಶಕ್ಕೆ ಕುಳಿತನು. ಆಗ ಕರ್ಣ, ದುಶ್ಶಾಸನ, ಶಕುನಿ ಮೊದಲಾದವರು ಪ್ರಾಯೋಪವೇಶ ಮಾಡಬೇಡವೆಂದು ಬಗೆಬಗೆಯಿಂದ ವಿನಂತಿಸಿದರೂ ಮಾನಧನನಾದ ಆ ಸುಯೋಧನನು ತನ್ನ ಹಠಬಿಡದೆ ಪ್ರಾಯೋಪವೇಶಕ್ಕೆ ಕುಳಿತನು.

ಅಂದು ರಾತ್ರಿ ದುರ್ಯೋಧನನ ಮಂತ್ರಿಮುಖ್ಯರೇ ಮೊದಲಾದವರು ನಿದ್ರಿಸಿದ ಮೇಲೆ ಅಸುರಪಕ್ಷೀಯನಾದ ದುರ್ಯೋಧನನು ದುಃಖಿತನಾಗಿರುವುದನ್ನು ಕಂಡು ದೈತ್ಯರು ಶುಕ್ರಾಚಾರ್ಯರಿಂದ ಒಂದು ಕೃತ್ತಿ (ಭೂತ)ಯನ್ನು ನಿರ್ಮಾಣ ಮಾಡಿಸಿ ಅದರ ಬಲದಿಂದ ದುರ್ಯೋಧನನನ್ನು ಬೇಗ ತಮ್ಮ ಪಾತಾಳಲೋಕಕ್ಕೆ ಕರೆಯಿಸಿಕೊಂಡರು. ಮತ್ತು ದೊರೆಯಾದ ದುರ್ಯೋಧನನೊಡನೆ ಮಾತನಾಡಿದರು. "ದುರ್ಯೋಧನ ಮಹಾರಾಜ! ನೀನು ದಿವ್ಯಪುರುಷನು, ಮಹಾಪರಾಕ್ರಮಿಯು, ನೀನಿಂತು ದುಃಖಿಸುವುದು ತರವಲ್ಲ. ನಾವೆಲ್ಲ ದೈತ್ಯರೂ ಶಂಕರನನ್ನು ಕುರಿತು ತಪಸ್ಸು ಮಾಡಿ ಅವನಿಂದ ನಿನ್ನನ್ನು ಸೃಷ್ಟಿ ಮಾಡಿಸಿದ್ದೇವೆ. ನೀನು ಸದಾ ವಜ್ರಕಾಯನಾಗಿದ್ದೀಯೆ. ಮತ್ತು ಅವಧ್ಯನಾಗಿದ್ದೀಯೆ. ನೀನು ನಮ್ಮ ಪಕ್ಷದವನು. ಪಾಂಡವರು ದೇವತೆಗಳ ಪಕ್ಷದವರು. ನೀನು ಈಗ ದೇವತೆಗಳ ವರಬಲದಿಂದ ಯುದ್ಧದಲ್ಲಿ ಸೋತಿದ್ದೀಯೆ. ನಾವೂ ನಿನಗೆ ನಮ್ಮ ಬಲಗಳನ್ನಿತ್ತು ಅಂದರೆ ಮಹಾಶಕ್ತಿಶಾಲಿಯಾಗುವಂತೆ ಮಾಡುತ್ತೇವೆ. ನೀನು ಮುಂದೆ ಖಂಡಿತ ಪಾಂಡವರನ್ನು ಜಯಿಸುತ್ತೀಯೆ. ನೀನು ಅರ್ಜುನನ ಬಗ್ಗೆ ಚಿಂತಿಸುತ್ತಿರುವೆ. ಅವನ ವಿಚಾರವಾಗಿ ಚಿಂತಿಸಬೇಡ. ಕೃಷ್ಣನಿಂದ ಸಂಹೃತನಾದ ನರಕಾಸುರನು ಈಗ ಕರ್ಣನಲ್ಲಿ ಆವಿಷ್ಟನಾಗಿದ್ದಾನೆ. ಅವನು ಕೃಷ್ಣಾರ್ಜುನರು ಜಗತ್ತಿನಲ್ಲಿ ಇಲ್ಲದಂತೆ ಮಾಡುತ್ತಾನೆ. ಇದರಲ್ಲಿ ಸಂಶಯವಿಲ್ಲ. ನಿನಗೆ ಜಯವಾಗುವುದಕ್ಕಾಗಿ ನಾವೆಲ್ಲರೂ ಭೀಷ್ಮರೇ ಮೊದಲಾದ ಎಲ್ಲರಲ್ಲೂ ಆವಿಷ್ಟರಾಗುತ್ತೇವೆ. ನಾವು ತಪಸ್ಸಿನಿಂದ ನಿನ್ನ ಶಕ್ತಿಯನ್ನು ಅಭಿವೃದ್ಧಿಸುತ್ತೇವೆ. ಕರ್ಣಾದಿಗಳ ಶಕ್ತಿಯನ್ನೂ ಹೆಚ್ಚಿಸುತ್ತೇವೆ. ಆದ್ದರಿಂದ ಸುಯೋಧನ! ನೀನು ಭಯವನ್ನು ಬಿಡು. ನಿನ್ನ ರಾಜ್ಯಕ್ಕೆ ಹೋಗಿ ಪ್ರಜಾಪಾಲನೆ ಮಾಡು. ಈ ವಿಚಾರವು ಅತಿ ರಹಸ್ಯವು. ಆದ ಕಾರಣ ನಿನ್ನ ಶ್ರೇಯೋಭಿವೃದ್ಧಿಯ ದೃಷ್ಟಿಯಿಂದ ಯಾರಿಗೂ ತಿಳಿಸಬೇಡ" ಎಂದು ಹೇಳಿ ದುರ್ಯೋಧನನನ್ನು ಪ್ರೋತ್ಸಾಹಿಸಿ ಮತ್ತೆ ಕೃತ್ತಿಯದ್ವಾರಾ ಅವನನ್ನು ಅವನಿದ್ದ ಸ್ಥಳಕ್ಕೆ ಕಳಿಸಿಕೊಟ್ಟರು. ಆಗ ದುರ್ಯೋಧನನು ತನ್ನ ದೇಹಾರ್ಧ ಭಾಗವು ಉಮೆಯಿಂದ ನಿರ್ಮಿತವಾದದ್ದು, ಉಳಿದರ್ಧ ಭಾಗ ಶಿವನಿಂದ ನಿರ್ಮಿತವಾದುದು ಮತ್ತು ನನ್ನ ದೇಹವು ಮತ್ತಾರಿಂದಲೂ ನಾಶಪಡಿಸಲು ಸಾಧ್ಯವಿಲ್ಲದುದು ಎಂದು ತಿಳಿದನು.

ಮರುದಿನ ಪ್ರಾತಃಕಾಲ ಕರ್ಣನು "ರಾಜನ್! ಪಾಂಡವರು ನಿನ್ನ ಸೇವಕರು. ಪ್ರಭುವನ್ನು ಬಿಡಿಸುವುದು ಭೃತ್ಯರ ಕರ್ತವ್ಯ. ನಿನ್ನ ಸೇವಕರೇ ಇಂತಹ ಶೂರರೆಂದ ಮೇಲೆ ಪ್ರಭುವೂ ರಾಜಸಿಂಹನೂ ಆದ ನಿನ್ನ ವಿಚಾರ ಹೇಳುವುದೇನಿದೆ. ನೀನು ಜಗನ್ಮಾನ್ಯನಾಗಿದ್ದೀಯೆ. ಅದ್ದರಿಂದ ಸ್ಥಿರಚಿತ್ತನಾಗಿ ಎದ್ದೇಳು, ನಿನಗೆ ಅರ್ಜುನನ ಶಸ್ತ್ರಾಸ್ತ್ರಗಳ ಬಲ-ಮಾಹಾತ್ಮ್ಯದ ಬಗ್ಗೆ, ಅಂದರೆ ಅರ್ಜುನನನ್ನು ಜಯಿಸಲು ಸಾಧ್ಯವಿಲ್ಲವೆಂಬುವ ಬಗ್ಗೆ ನಿನಗಿರುವ ಶಂಕೆಯನ್ನು ಬಿಡು. ನಾನು ಅವನನ್ನು ಖಂಡಿತವಾಗಿ ಸಂಹರಿಸುತ್ತೇನೆ. ಅವನನ್ನು ಕೊಲ್ಲುವವರೆಗೆ ನನ್ನ ಭೃತ್ಯರಿಂದ ಪಾದಪ್ರಕ್ಷಾಲನೆ ಮಾಡಿಸಿಕೊಳ್ಳುವುದಿಲ್ಲ. ಸ್ವತಃ ನಾನೇ ಪಾದಪ್ರಕ್ಷಾಲನ ಮಾಡಿಕೊಳ್ಳುತ್ತೇನೆ" ಹೀಗೆ ಕರ್ಣನು, ನಂತರ ಶಕುನಿ ಮುಂತಾದವರು ದುರ್ಯೋಧನನನ್ನು ಯಾಚಿಸಲು ಅವನು ಅವರ ಮಾತಿಗೆ ಸಮ್ಮತಿಸಿ ರಥದಲ್ಲಿ ಕುಳಿತು ಹಸ್ತಿನಾವತಿಗೆ ತೆರಳಿ ಅಲ್ಲಿ ಪೂರ್ವದಂತೆ ತನ್ನವರ

ಮಧ್ಯದಲ್ಲಿ ಮಾನಿತನಾಗಿ ರಾಜಕಾರ್ಯಗಳಲ್ಲಿ ಮನವಿರಿಸಿದನು ಮತ್ತು ಹಿಂದಿನ ದಿನ ರಾತ್ರಿ ಜರುಗಿದ ವಿಚಾರವನ್ನು ಯಾರಿಗೂ ಹೇಳದೆ ರಹಸ್ಯವಾಗಿರಿಸಿ ಆನಂದದಿಂದಿದ್ದನು.

ಕವಚ-ಕುಂಡಲಗಳಿಂದೊಡಗೂಡಿ ಜನಿಸಿದ ಸೂರ್ಯಪುತ್ರನಾದ ಕರ್ಣನು ಅವಧ್ಯನೆಂದು ತಿಳಿದ ದೇವೇಂದ್ರನು ಉತ್ತಮವಾದ ಎರಡು ಕುಂಡಲಗಳು ಮತ್ತು ಕವಚವನ್ನು ಕರ್ಣನಿಂದ ಪಡೆಯಲು ಇಚ್ಛಿಸಿದನು. ಅದನ್ನು ಅರಿತು ಸೂರ್ಯನು "ಕರ್ಣ! ಇಂದ್ರನು ನಿನ್ನ ಉತ್ತಮವಾದ ಕವಚಕುಂಡಲಗಳನ್ನು ದಾನವಾಗಿ ಪಡೆಯಲು ಬರುತ್ತಾನೆ. ಅವನಿಗೆ ಅದನ್ನು ಕೊಡಬೇಡ. ಅದರಿಂದ ನಿನಗೆ ಆಪತ್ತುಂಟಾಗುತ್ತದೆ" ಎಂದು ಸ್ವಪ್ನದಲ್ಲಿ ಕರ್ಣನಿಗೆ ತಿಳಿಸಿದನು. ಆಗ ಕರ್ಣನು "ದೇವೇಂದ್ರನೇ ಬಂದು ಯಾಚಿಸುವಾಗ ಅವುಗಳನ್ನು ಕೊಡುವುದಿಲ್ಲ ಎಂದು ಹೇಳಲಾರೆ. ಖಂಡಿತ ದಾನವಾಗಿ ಕೊಡುತ್ತೇನೆ" ಎಂದನು. ಆದಕ್ಕೆ ಸೂರ್ಯನು "ಹಾಗಿದ್ದರೆ ಇಂದ್ರನಿಂದ ಶ್ರೇಷ್ಠವಾದ ಅಸ್ತ್ರವನ್ನು ಪಡೆ" ಎಂದು ಹೇಳಿ ಅದೃಶ್ಯನಾದನು. ಮರುದಿನ ದೇವೇಂದ್ರನು ಬ್ರಾಹ್ಮಣರೂಪದಿಂದ ಬಂದು ಕವಚ-ಕುಂಡಲಗಳನ್ನು ಬೇಡಿದನು. ಅವನು ಸಾಕ್ಷಾತ್ ಶಚೀಪತಿಯೆಂದು ಗೊತ್ತಿದ್ದರೂ ಅವನಿಗೆ ತನ್ನ ಕವಚ-ಕುಂಡಲಗಳನ್ನು ದೇಹದಿಂದ ಬೇರ್ಪಡಿಸಿ ದಾನ ಮಾಡಿದನು. ಅವನ ದಾನದಿಂದ ಪ್ರಭಾವಿತನಾಗಿ ನಿಜರೂಪದಿಂದ ದರ್ಶನವಿತ್ತು "ಕರ್ಣ! ನೀನು ಮಹಾದಾನ-ವೀರನಾಗಿದ್ದೀಯೆ. ನನಗೆ ಬಹಳ ಸಂತೋಷವಾಗಿದೆ. ಅದಕ್ಕಾಗಿ ನಿನಗೆ ಅತ್ಯಮೋಘವಾದ ಶಕ್ತ್ಯಾಯುಧವನ್ನು ವರರೂಪವಾಗಿ ನೀಡುತ್ತೇನೆ. ಇದರಿಂದ ಅರ್ಜುನನನ್ನು ಬಿಟ್ಟು ಪಾಂಡವರಲ್ಲಿ ಯಾರಾದರೊಬ್ಬರನ್ನು ಸಂಹರಿಸಬಹುದು" ಎಂದು ಹೇಳಿ ಇಂದ್ರನು ಕರ್ಣನಿಗೆ ಶಕ್ತ್ಯಾಯುಧವನ್ನು ಅನುಗ್ರಹಿಸಿ ಕವಚ-ಕುಂಡಲಗಳೊಡನೆ ಕಣ್ಮರೆಯಾದನು.

ಇತ್ತ ಪಾಂಡವರೆಲ್ಲರೂ ವನದಲ್ಲಿ ಒಟ್ಟಾಗಿ ಸುಖದಿಂದಿರುವಾಗ ಒಂದು ದಿನ ಓರ್ವ ಬ್ರಾಹ್ಮಣನು ಬಂದು "ಪಾಂಡು ನಂದನರೇ, ನಾನು ಪ್ರತಿನಿತ್ಯ ನೆರವೇರಿಸುವ ಹೋಮಾದಿ ಕಾರ್ಯಗಳಿಗೆ ಸಹಾಯಕವಾದ ಅರಣಿ ಮತ್ತು ಅದನ್ನು ಕಡೆಯುವ ಹಗ್ಗಗಳನ್ನಿಟ್ಟಿದ್ದ ಭಾಂಡವನ್ನು ಒಂದು ಮೃಗವು (ಜಿಂಕೆಯು) ಅಪಹರಿಸಿಕೊಂಡು ಹೊರಟುಹೋಯಿತು. ಅದರಿಂದ ನನ್ನ ನಿತ್ಯಕರ್ಮಾನುಷ್ಠಾನಕ್ಕೆ ತೊಂದರೆಯಾಗಿದೆ. ಆದ್ದರಿಂದ ನೀವು ಅದನ್ನು ಮತ್ತೆ ಸಂಪಾದಿಸಿ ನನಗೆ ತಂದುಕೊಟ್ಟು ಉಪಕರಿಸಿ" ಎಂದು ಕಳಕಳಿಯಿಂದ ಕೋರಿದನು. ಆಗ ಪಾಂಡವರು ಆ ದ್ವಿಜನಿಗೆ ಅಭಯವಿತ್ತು ಅರಣಿಯನ್ನು ಕೊಂಡೊಯ್ದ ಅರಳೆಯನ್ನು ಅರಸುತ್ತ ಹೊರಟರು. ಹೀಗೆ ಜಿಂಕೆಯನ್ನು ಬೆನ್ನಟ್ಟಿ ಪಾಂಡವರು ಹೊರಟಾಗ ಅದು ಸ್ವಲ್ಪದೂರ ಹೋದಮೇಲೆ ಅವರು ನೋಡುತ್ತಿರುವಾಗಲೇ ಅದೃಶ್ಯವಾಯಿತು. ಜಿಂಕೆಯು ಕಣ್ಮರೆಯಾಗಲು ಅತ್ಯಂತ ತೃಷಾರ್ತರಾದ ಪಾಂಡವರು ಧರ್ಮರಾಜನನ್ನು ಅಲ್ಲಿಯೇ ಕುಳ್ಳಿರಿಸಿ ಹತ್ತಿರದಲ್ಲಿ ನೀರು ದೊರಕುವುದೇನೋ ಎಂದು ಅರಿಯಲು ಬೇರೆ ಬೇರೆಯಾಗಿ ಹೊರಟರು. ಆಗ ಅವರ ಕಣ್ಣಿಗೆ ಒಂದು ಸರೋವರವು ಕಂಡು ಬಂದಿತು. ಅಲ್ಲಿಗೆ ಬೇರೆ ಬೇರೆಯಾಗಿ ಬಂದ ಭೀಮಾದಿಗಳು ನೀರಡಿಕೆಯಿಂದ ಬಳಲಿ ನೀರು ಕುಡಿಯಲು ಆ ಸರೋವರದಲ್ಲಿಳಿದಾಗ ಅದೃಶ್ಯನಾದ ಯಮಧರ್ಮರಾಜನು ಬಕರೂಪದಿಂದ ದೃಶ್ಯನಾಗಿ "ಎಚ್ಚರ! ನೀರನ್ನು ಕುಡಿಯಬೇಡಿರಿ. ನಾನು ಕೇಳುವ ಪ್ರಶ್ನೆಗೆ ಉತ್ತರ ಕೊಟ್ಟು ಆ ತರುವಾಯ ಜಲಪಾನ ಮಾಡಿರಿ. ಇಲ್ಲದಿದ್ದರೆ ನೀವು ಅಪಾಯಕ್ಕೊಳಗಾಗುವಿರಿ" ಎಂದು ಭೀಮಾದಿಗಳನ್ನು (ಬೇರೆಬೇರೆಯಾಗಿ ಬಂದಾಗ) ನಿರೋಧಿಸಿದನು.

ಭೀಮಾದಿ ಪಾಂಡವರು ತೃಷಾರ್ತರಾಗಿದ್ದುದರಿಂದಲೂ, ಕ್ಷತ್ರಿಯಧರ್ಮಪಾಲನೆಗಾಗಿಯೂ ಬಕರೂಪಿ ಯಮನ ಪ್ರಶ್ನೆಗೆ ಉತ್ತರ ತಿಳಿದಿದ್ದರೂ ವಿದ್ಯೋಪಜೀವನವು ಬ್ರಾಹ್ಮಣರಿಗೇ ಅಧರ್ಮವೆಂದ ಮೇಲೆ ಕ್ಷತ್ರಿಯರ ವಿಚಾರ ಹೇಳುವುದೇನಿದೆ? ಅಂತೆಯೇ ಅವರು ಪ್ರಶ್ನೆಗೆ ಉತ್ತರ ತಿಳಿದಿದ್ದರೂ ಹೇಳದೆ ಜಲಪಾನ ಮಾಡಿ ಯಮಧರ್ಮನ ಮಾಯೆಯಿಂದ ನಿದ್ರೆ ಹೋಗಿ ಮಲಗಿದರು. ದೇವತೆಗಳು ಮಾನವರಾಗಿ ಹುಟ್ಟಿದ್ದರೂ ಸಹ ಬಲಿಷ್ಠರಾಗಿಯೇ ಇರುತ್ತಾರೆ.

ಆದರೂ ಕೇಶವನೊಬ್ಬನನ್ನು ಬಿಟ್ಟು ಉಳಿದ ದೇವತೆಗಳು ಮನುಷ್ಯ ಸ್ವಭಾವದವರಾಗಿರುತ್ತಾರೆ. ದೇವತೆಗಳಿಗೆ ಬಲಕಾರ್ಯ ಮಾಡಬೇಕಾದ ಪ್ರಸಂಗ ಬಂದಾಗ ಸದ್ಗುಣಗಳು ಅಂದರೆ ಬಲಾದಿಗುಣಗಳು ಕ್ರಮವಾಗಿ ತಾರತಮ್ಯಾನುಸಾರವಾಗಿ ವ್ಯಕ್ತವಾಗುವುವು. ಆದ್ದರಿಂದ ಭೀಮಾರ್ಜುನರು ಮನುಷ್ಯಸ್ವಭಾವ ಯುಕ್ತರಾಗಿದ್ದುದರಿಂದ ಅವರು ಯಮಧರ್ಮನಿಗಿಂತ ಅತ್ಯುತ್ತಮ ಬಲಶಾಲಿಗಳಾಗಿದ್ದರೂ ಕೂಡ ದೇವಮಾಯೆಯನ್ನು ಅಂದರೆ ನಿದ್ರೆಯನ್ನು ಬರಿಸುವ ದೇವತಾಶಕ್ತಿ ವಿಶೇಷವನ್ನಾಶ್ರಯಿಸಿ ಯಮಧರ್ಮರಾಜನಿಂದ ಒಂದು ಕ್ಷಣ ಮಾತ್ರ ನಿದ್ರೆ ಹೋದರು. ಆ ದೇವಮಾಯೆಯು ಒಂದು ಕ್ಷಣ ಕಾಲಮಾತ್ರ ಭೀಮಾರ್ಜುನರು ನಿದ್ರಹೋಗುವಂತೆ ಮಾಡಲು ಮಾತ್ರ ಸಮರ್ಥವಾಯಿತು. ಪ್ರಬುದ್ಧರಾಗಿದ್ದ ಭೀಮಾರ್ಜುನರ ಶಕ್ತಿಯಲ್ಲಿ ಸಾವಿರ ಭಾಗದಲ್ಲಿ ಒಂದು ಅಂಶವನ್ನೂ ಯಮಧರ್ಮನು ಹೊಂದುವುದಿಲ್ಲ. ಇವೆಲ್ಲ ವಿಚಾರಗಳೂ ಪದ್ಮಪುರಾಣದಲ್ಲಿ ನಿರೂಪಿತವಾಗಿವೆ. ಆದ್ದರಿಂದ ಭೀಮಾರ್ಜುನರಿಗೆ ಮಹಾಶಕ್ತಿಯಿಲ್ಲವೆಂದು ಸಂಶಯ ಪಡಬಾರದು. ಭೀಮಾರ್ಜುನರಂತೆ, ನಕುಲ ಸಹದೇವರೂ ಬಕನ ಪ್ರಶ್ನೆಗೆ ಉತ್ತರ ಕೊಡದೆ ನೀರು ಕುಡಿದು ನಿದ್ರಿತರಾದರು.

ಬಹುಹೊತ್ತಾದರೂ ಭೀಮಾರ್ಜುನಾದಿಗಳು ಹಿಂದಿರುಗಿ ಬರದಿದ್ದುದರಿಂದ ಧರ್ಮರಾಜನು ಶ್ರಾಂತನಾಗಿದ್ದರೂ ಭೀಮಾರ್ಜುನಾದಿಗಳನ್ನೂ, ನೀರನ್ನೂ ಹುಡುಕುತ್ತಾ ಆ ಸರೋವರದ ಬಳಿಗೆ ಬಂದು ಅಲ್ಲಿ ತನ್ನ ಸಹೋದರರು ಬಿದ್ದಿರುವುದನ್ನು ಕಂಡು ದುಃಖಿತನಾದರೂ ನೀರಡಿಕೆಯನ್ನು ತಡೆಯಲಾಗದೆ ಜಲಪಾನಕ್ಕಾಗಿ ಸರೋವರದಲ್ಲಿಳಿದಾಗ ಮತ್ತೆ ಬಕರೂಪದ ಯಮಧರ್ಮನು ಅವನನ್ನು ತಡೆದು ಪ್ರಶ್ನೆಗಳಿಗೆ ಉತ್ತರಹೇಳದೇ ನೀರುಕುಡಿಯಬೇಡವೆಂದು ಹೇಳಿದಾಗ ಯುಧಿಷ್ಠಿರನು ತೃಷಾರ್ತನಾಗಿದ್ದರೂ ನೀರು ಕುಡಿಯದೆ ಯಮಧರ್ಮನ ಒಂದೊಂದು ಪ್ರಶ್ನೆಗಳಿಗೂ ತಮ್ಮಂದಿರನ್ನು ಬದುಕಿಸಲೆಂದು ಉತ್ತರ ಕೊಡಲಾಶಿಸಿದನು. ಆಗ ದಯಾಳುವಾದ ಯಮಧರ್ಮನು ಬಕರೂಪವನ್ನು ತ್ಯಜಿಸಿ ಯಕ್ಷರೂಪದಿಂದ ಪ್ರಶ್ನೆಗಳನ್ನು ಕೇಳಿದನು. ಯುಧಿಷ್ಠಿರನು ಯಕ್ಷನ ಎಲ್ಲ ಪ್ರಶ್ನೆಗಳಿಗೂ ಸಮಂಜಸವಾದ ಉತ್ತರ ನೀಡಿದನು. ಅದರಿಂದ ಸುಪ್ರೀತನಾದ ಯಮಧರ್ಮನು "ಯುಧಿಷ್ಠಿರ, ನಿನ್ನ ಉತ್ತರದಿಂದ ತೃಪ್ತನಾಗಿದ್ದೇನೆ. ಆದಕ್ಕಾಗಿ ನಿನ್ನ ಸಹೋದರರಲ್ಲಿ ಯಾರನ್ನಾದರೂ ಒಬ್ಬರನ್ನು ಉಜ್ಜೀವನಗೊಳಿಸುತ್ತೇನೆ. ಯಾರನ್ನು ನೀನು ಅಪೇಕ್ಷಿಸುವೆ" ಎಂದು ಕೇಳಿದನು. ಆಗ ಧರ್ಮರಾಜನು "ಒಬ್ಬನನ್ನು ಬದುಕಿಸುವಂತಿದ್ದರೆ ನಕುಲನನ್ನು ಉಜ್ಜೀವನಗೊಳಿಸು" ಎಂದನು. ಅದಕ್ಕೆ ಯಮಧರ್ಮನು "ನಕುಲನನ್ನೇಕೆ ಅಪೇಕ್ಷಿಸುವೆ? ನಿನಗೆ ಭೀಮನಲ್ಲಿ ಅತಿಪ್ರೀತಿಯಿದೆ. ಅವನು ಮಹಾಬಲಿಷ್ಠನು. ನಿನ್ನ ರಾಜ್ಯಸಂಪಾದನೆಗೆ ಅವನು ಕಾರಣನಾಗುತ್ತಾನೆ. ಅಂಥವನನ್ನು ಏಕೆ ಬದುಕಿಸೆಂದು ಕೇಳಲಿಲ್ಲ?" ಎಂದು ಪ್ರಶ್ನಿಸಲು, ಪಾಂಡುನಂದನನು "ದೇವ, ನನ್ನ ತಾಯಿಗೆ ನಾವು ಮೂವರು ಪುತ್ರರು. ಅದರಲ್ಲಿ ನಾನು ಬದುಕಿದ್ದೇನೆ. ನನ್ನ ಚಿಕ್ಕತಾಯಿ ಮಾದ್ರಿಗೆ ಈರ್ವರು ಪುತ್ರರು. ಅವರಲ್ಲಿ ಒಬ್ಬನಾದರೂ ಬದುಕಲೇಬೇಕು. ಇದೇ ನನ್ನ ಇಚ್ಛೆ. ನಕುಲನನ್ನು ಬದುಕಿಸು. ಬೇರಾರನ್ನೂ ಬದುಕಿಸೆಂದು ನಾನು ಕೇಳುವುದಿಲ್ಲ" ಎಂದನು. ಯುಧಿಷ್ಠಿರನ ಧರ್ಮಬುದ್ಧಿಯನ್ನು ಕಂಡು ಸುಪ್ರೀತನಾದ ಯಮಧರ್ಮನು ಭೀಮಾದಿ ನಾಲ್ವರನ್ನೂ ಉಜ್ಜೀವನಗೊಳಿಸಿದನು. ಪುನಃ ನಿಜರೂಪದಿಂದ ಅವರಿಗೆ ದರ್ಶನವಿತ್ತು "ವತ್ಸ, ಧರ್ಮರಾಜ! ನಿಮ್ಮಲ್ಲಿ ನಾನು ಬಹುಸಂತುಷ್ಟನಾಗಿದ್ದೇನೆ. ನೀವು ಅಜ್ಞಾತವಾಸದಲ್ಲಿ ನಿಮನಿಮಗೆ ಇಷ್ಟವಾದ ರೂಪಗಳನ್ನು ಪಡೆಯಲೂ, ಅಜ್ಞಾತವಾಸವು ಮುಗಿದ ಮೇಲೆ ನೀವು ಇಚ್ಛಿಸಿದಾಗ ಮತ್ತೆ ನೀವು ನಿಮ್ಮ ಮೊದಲಿನ ರೂಪವನ್ನು ಪಡೆಯಲೂ ನಿಮಗೆ ನಾನು ವರವಿತ್ತಿದ್ದೇನೆ. ಇದರಂತೆ ಅಜ್ಞಾತವಾಸ ಮುಗಿಯುವವರೆಗೆ ಯಾರಿಗೂ ನೀವು ಪಾಂಡವರೆಂದು ಗೊತ್ತಾಗದಿರುವಂತೆಯೂ ವರವನ್ನು ನೀಡಿದ್ದೇನೆ" ಎಂದು ವರವಿತ್ತು, ಧರ್ಮರಾಜನು ತನ್ನ ಪುತ್ರನಾದ್ದರಿಂದ ಸ್ವಸ್ವರೂಪ-ಭೂತನಾದ ಅವನೊಡನೆ ಮೃಗಾದಿರೂಪದಿಂದ ಅಂದರೆ ಜಿಂಕೆಯ ರೂಪದಿಂದ ಬ್ರಾಹ್ಮಣನ ಅರಣಿಯನ್ನು ಅಪಹರಿಸು-

ವುದೇ ಮೊದಲಾದ ವಿಧದಿಂದ ಕ್ರೀಡಿಸಿ, ಯುಧಿಷ್ಠಿರನ ಧರ್ಮವನ್ನೂ, ಕೀರ್ತಿಯನ್ನೂ ಬೆಳಗಿಸಿದನು. ಅಂದರೆ ಅರಣಿಯ ನೆಪದಿಂದ ಯುಧಿಷ್ಠಿರನ ಧರ್ಮದೀಕ್ಷೆ-ಕೀರ್ತಿಗಳು ಜಗತ್ತಿನಲ್ಲಿ ವೃದ್ಧಿಸುವಂತೆ ಮಾಡಿದನೆಂದು ಭಾವ.

ಅನಂತರ ಯಮಧರ್ಮನು ಅರಣಿಯ ಭಾಂಡವನ್ನು ಯುಧಿಷ್ಠಿರನಿಗಿತ್ತು, ಅದನ್ನು ಬ್ರಾಹ್ಮಣನಿಗೆ ಕೊಡುವಂತೆ ಹೇಳಿ ತನ್ನ ಲೋಕಕ್ಕೆ ತೆರಳಿದನು.

ಬಳಿಕ ಧರ್ಮರಾಜನು-ಭೀಮಾರ್ಜುನ-ನಕುಲ-ಸಹದೇವರೊಡನೆ ಆಶ್ರಮಕ್ಕೆ ಹಿಂದಿರುಗಿ ಬಂದು ಆ ಬ್ರಾಹ್ಮಣನಿಗೆ ಅರಣಿಯನ್ನು ಕೊಟ್ಟು ಸಂತೋಷಪಡಿಸಿದನು. ದ್ರೌಪದಿಯೊಡನೆ ಆ ಪಾಂಡುನಂದನರು ಅನಂತನ ಅಂದರೆ ದೇಶಕಾಲ ಗುಣಗಳಿಂದ ಅಪರಿಚ್ಛಿನ್ನನಾದ, ಅಚ್ಯುತವಾದ ಅಂದರೆ ನಾಶರಹಿತನಾದ ದೇವಕೀಸುತನಾದ ವಾಸುದೇವ ಕೃಷ್ಣನನ್ನು, ಅಥವಾ ವೇದವ್ಯಾಸದೇವರನ್ನು ಚೆನ್ನಾಗಿ ಸ್ತೋತ್ರಮಾಡಿ ಸಂತೋಷಪಡಿಸಿದರು.

*ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ "ಅರಣಿಪ್ರಾಪ್ತಿ" ಎಂಬ*
*ಇಪ್ಪತ್ತೆರಡನೆಯ ಅಧ್ಯಾಯದ ಕಥಾಸಾರವು ಮುಗಿದುದು.*

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★

# ತ್ರಯೋವಿಂಶಾಧ್ಯಾಯಭಾವಸಂಗ್ರಹ

*ಅವತಾರಿಕೆ:-*

ಶ್ರೀಮಂತ್ರಾಲಯ ಶ್ರೀಪಾದಂಗಳವರು ಶ್ರೀಮಹಾಭಾರತ ತಾತ್ಪರ್ಯ ನಿರ್ಣಯದ ಇಪ್ಪತ್ಮೂರನೆಯ ಅಧ್ಯಾಯದ ಕಥೆಯನ್ನು "ಅನ್ಯಂ ವೇಷಂ" ಎಂಬ ಪದ್ಯದಿಂದ ಸಂಗ್ರಹಿಸುತ್ತಾರೆ.

**ಅನ್ಯಂ ವೇಷಮುಪಾಗತಾಃ ಪೃಥಗಿತೋ ಗತ್ವಾ ವಿರಾಟಾಲಯಂ**
**ತದ್ದೇಹಸ್ಥಹರೇರ್ನಿಷೇವಣಪರಾಃ ಮಲ್ಲಂ ತಥಾ ಕೀಚಕಾನ್ ।**
**ಹತ್ವಾ ಗೋಗ್ರಹಣೋದ್ಯತಾನಪಿ ಕುರೂನ್ ಜಿತ್ವಾ ವಿರಾಟಾರ್ಚಿತಾಃ**
**ಪಾರ್ಥಾಃ ಸ್ವಾಂತಿಕಮಾಗತಂ ಯಮಜಿತಂ ಭೇಜುಸ್ತಮೀಡೇಽಚ್ಯುತಮ್ ॥ 23 ॥**

*ಅನ್ವಯಾರ್ಥ:-* **ಪಾರ್ಥಾಃ** = ಪೃಥಾಪುತ್ರರಾದ ಧರ್ಮರಾಜಾದಿಗಳು, **ಅನ್ಯಂ ವೇಷಂ** = ವೇಷಾಂತರವನ್ನು, **ಉಪಾಗತಾಃ** = ಹೊಂದಿದವರಾಗಿ, **ಇತಃ** = ಅರಣ್ಯದಿಂದ, **ವಿರಾಟಾಲಯಂ** = ವಿರಾಟರಾಜನ ಅರಮನೆಯನ್ನು, **ಪ್ರತ್ಯೇಕಂ** = ಬೇರೆಬೇರೆಯಾಗಿ (ಒಬ್ಬೊಬ್ಬರಾಗಿ), **ಗತ್ವಾ** = ಹೋಗಿ (ಅರಮನೆಗೆ ಹೋಗಿ), **ಪ್ರತ್ಯೇಕಂ** = (ಬೇರೆಬೇರೆಯಾಗಿ) ಪ್ರತ್ಯೇಕವಾಗಿ, **ತದ್ದೇಹಸ್ಥಹರೇರ್ನಿಷೇವಣಪರಾಃ** - **ತದ್ದೇಹಸ್ಥ** = ವಿರಾಟನ ದೇಹದಲ್ಲಿ ಅಂತರ್ಗತನಾಗಿರುವ, **ಹರೇಃ** = ಶ್ರೀಕೃಷ್ಣಪರಮಾತ್ಮನ, **ನಿಷೇವಣ** = ಸೇವೆಯಲ್ಲಿ, **ರತಾಃ** = ಆಸಕ್ತರಾಗಿ, **ಮಲ್ಲಂ** = ಜಟ್ಟಿಯನ್ನೂ, **ತಥಾ** = ಮತ್ತು, **ಕೀಚಕಾನ್** = ಕೀಚಕ ಹಾಗೂ ಉಪಕೀಚಕರನ್ನೂ, **ಹತ್ವಾ** = ಸಂಹಾರ ಮಾಡಿ, **ಗೋಗ್ರಹಣೋದ್ಯತಾನ್** - **ಗೋ** = ಗೋವುಗಳನ್ನು (ಆಕಳುಗಳನ್ನು) **ಗ್ರಹಣ** = ಹಿಡಿಯುವುದರಲ್ಲಿ, **ಉದ್ಯತಾನ್** = ಉದ್ಯುಕ್ತರಾದ, **ಕೌರವಾನ್** = ದುರ್ಯೋಧನಾದಿ ಕೌರವರನ್ನು, **ಜಿತ್ವಾ** = ಜಯಿಸಿ, **ವಿರಾಟಾರ್ಚಿತಾಃ ಸಂತಃ** = ವಿರಾಟರಾಜನಿಂದ ಪೂಜಿತರಾದಂಥವರಾಗಿ, **ಸ್ವಾಂತಿಕಂ** = ತಮ್ಮ ಬಳಿಗೆ, **ಪ್ರಾಪ್ತಂ** = ಬಂದಂಥಾ, **ಯಂ** = ಯಾವ ಭಗವಾನ್ ಶ್ರೀಕೃಷ್ಣನನ್ನು, **ಭೇಜುಃ** = ಭಜಿಸಿದರೋ, **ತಂ** = ಅಂಥ, **ಅಜಿತಂ** = ಅಚ್ಯುತನನ್ನು, **ಈಡೇ** = ಸೇವಿಸುತ್ತೇನೆ.

*ತಾತ್ಪರ್ಯ:-* ಪಾಂಡವರು ತಾವು ಪ್ರತಿಜ್ಞೆ ಮಾಡಿದ ಪ್ರಕಾರವಾಗಿ ಅರಣ್ಯದಲ್ಲಿ ಹನ್ನೆರಡು ವರ್ಷಕಾಲ ಶ್ರೀಹರಿಯ ಅನುಗ್ರಹದಿಂದ ವಾಸಮಾಡಿ ಅನಂತರ ತಮ್ಮ ವೇಷವನ್ನು ಮರೆಮಾಚಿಕೊಂಡು ಅಂದರೆ ವೇಷಾಂತರದಿಂದ ಅಜ್ಞಾತ-ವಾಸಕ್ಕಾಗಿ ಬೇರೆಬೇರೆಯಾಗಿ ವಿರಾಟನಗರಕ್ಕೆ ಬಂದು, ಅಲ್ಲಿ ವಿರಾಟರಾಜನ ಅರಮನೆಯಲ್ಲಿ ವಿವಿಧ ಉದ್ಯೋಗ- (ಕೆಲಸ) ಗಳನ್ನು ದೊರಕಿಸಿಕೊಂಡು, ವಿರಾಟರಾಜನ ದೇಹದಲ್ಲಿ ಅಂತರ್ಗತನಾಗಿರುವ ಶ್ರೀಕೃಷ್ಣ ಪರಮಾತ್ಮನನ್ನು ಸೇವಿ- ಸುತ್ತಿದ್ದರು. (ಅಂದರೆ ವಿರಾಟನಲ್ಲಿ ಅಂತರ್ಗತನಾದ ಹರಿಯನ್ನೂ ಯುಧಿಷ್ಠಿರನನ್ನೂ, ಧರ್ಮರಾಜನಲ್ಲಿ ಅಂತರ್ಗತನಾದ ಶ್ರೀಕೃಷ್ಣನನ್ನೂ ಭೀಮಾದಿಗಳು ಸೇವಿಸಿದರು ಎಂದು ಭಾವ.)

ಹೀಗಿರಲೊಂದು ದಿನ ಓರ್ವ ಜಗಜಟ್ಟಿಯು ವಿರಾಟನಗರಕ್ಕೆ ಬಂದು ಆವನ ಆಸ್ಥಾನದ ಜಟ್ಟಿಗಳನ್ನು ಮಲ್ಲಯುದ್ಧಕ್ಕೆ ಆಹ್ವಾನಿಸಿದಾಗ ಆವನ ದೇಹರಕ್ತಿಗಳನ್ನು ಕಂಡು ಆಸ್ಥಾನದ ಮಲ್ಲರೆಲ್ಲರೂ ಓಡಿಹೋದರು. ಆಗ ರಾಜನ ಗೌರವವನ್ನು ಕಾಪಾಡಲು ವಲಲನ ವೇಷದಲ್ಲಿದ್ದ ಭೀಮಸೇನನು ಆ ಜಗಜಟ್ಟಿಯೊಡನೆ ಮಲ್ಲಯುದ್ಧ ಮಾಡಿ ಆವನನ್ನು ಸಂಹರಿಸಿದನು.

ವಿರಾಟನ ಭಾವಮೈದುನನಾದ, ಮಹಾವೀರನಾದ ಕೀಚಕನು ದ್ರೌಪದಿಯನ್ನು ಕಾಮಿಸಿ ಕೆಣಕಿದಾಗ ಭೀಮನು ಅವನನ್ನು ಸಂಹಾರ ಮಾಡಿದನು. ಆದರಿಂದ ಅಂದರೆ ದ್ರೌಪದಿ(ಸ್ಯೆರಂಧ್ರಿ)ಯ ಕಾರಣದಿಂದಾಗಿ ತಮ್ಮ ಅಣ್ಣನು ಮೃತನಾದನೆಂಬ ಕೋಪದಿಂದ ಉಪಕೀಚಕರು ದ್ರೌಪದಿಯನ್ನು ಕೀಚಕನ ಮೃತಶರೀರದೊಡನೆ ಸುಡಲು ಯತ್ನಿಸಿದಾಗ, ಭೀಮನು ಆ ಎಲ್ಲ ಉಪಕೀಚಕರನ್ನೂ ಕೊಂದನು. ಇತ್ತ ದುರ್ಯೋಧನಾದಿಗಳು ಮಲ್ಲ ಮತ್ತು ಕೀಚಕನನ್ನು ಸಂಹರಿಸಲು ಭೀಮನಲ್ಲದೇ ಬೇರೊಬ್ಬರಿಂದ ಸಾಧ್ಯವಿಲ್ಲದ್ದರಿಂದ ಪಾಂಡವರು ವಿರಾಟನಗರದಲ್ಲಿ ಅಜ್ಞಾತವಾಸಮಾಡುತ್ತಿರುವರೆಂದು ನಿಶ್ಚಯಿಸಿ, ಅವರನ್ನು ಕಂಡುಹಿಡಿದು ಮತ್ತೆ ವನವಾಸಕ್ಕೆ ಅಟ್ಟಬೇಕೆಂಬ ದುರಾಗ್ರಹದಿಂದ ಗೋಗ್ರಹಣದ ನೆಪದಿಂದ ಸೈನ್ಯಸಮೇತರಾಗಿ ವಿರಾಟನಗರಕ್ಕೆ ಬಂದು ವಿರಾಟ ರಾಜನ ಗೋಸಂಪತ್ತನ್ನು ಅಪಹರಿಸಿಕೊಂಡು ಹೊರಟರು. ಅಜ್ಞಾತ-ವಾಸಾವಧಿಯು ಮುಗಿದಿದ್ದರಿಂದ ಬೃಹನ್ನಳೆಯ ವೇಷದಲ್ಲಿದ್ದ ಅರ್ಜುನನು ಉತ್ತರಕುಮಾರನನ್ನು ಸಾರಥಿಯಾಗಿ ಮಾಡಿಕೊಂಡು, ಭೀಷ್ಮ - ದ್ರೋಣ - ಕರ್ಣ ಹಾಗೂ ದುರ್ಯೋಧನಾದಿ ಸಮಸ್ತ ಕೌರವರನ್ನೂ ಜಯಿಸಿ ಗೋಸಂಪತ್ತನ್ನು ಅವರಿಂದ ಬಿಡಿಸಿ ವಿರಾಟನಿಗೆ ಅರ್ಪಿಸಿದನು. ಅನಂತರ ಪಾಂಡವರ ನಿಜವೃತ್ತಾಂತವನ್ನು ತಿಳಿದ ವಿರಾಟರಾಜನು ಅವರನ್ನು ಚೆನ್ನಾಗಿ ಪೂಜಿಸಿದನು. ತರುವಾಯ ತಮ್ಮನ್ನು ಕಾಣಲು ಬಂದ ಅಚ್ಯುತನಾದ ಶ್ರೀಕೃಷ್ಣನನ್ನು ಪಾಂಡವರು ಪೂಜಿಸಿದರು. ಇಂತು ಪಾಂಡವರಿಂದ ಪೂಜಿತನಾದ ಭಗವಾನ್ ಶ್ರೀಕೃಷ್ಣನನ್ನು ನಾನು ಭಜಿಸುತ್ತೇನೆ ಎಂದು ಭಾವ.

## ಇಪ್ಪತ್ತೂರನೆಯ ಅಧ್ಯಾಯದ ಕಥಾಸಂಗ್ರಹ

ಶ್ರೀಹರಿಪರಮಾತ್ಮನ ಅನುಗ್ರಹದಿಂದ ಹನ್ನೆರಡು ವರ್ಷ ವನವಾಸವನ್ನು ನೆರವೇರಿಸಿ ತಮಗೆ ಅಗ್ನಿಹೋತ್ರ ಅತಿಥಿ ಪೂಜಾದಿಗಳಿಗೆ ಸಹಾಯಕರಾಗಿದ್ದ ಸಮಸ್ತ ಬ್ರಾಹ್ಮಣರು, ಧೌಮ್ಯ ಋಷಿಗಳನ್ನೂ ಕಳಿಸಿಕೊಟ್ಟು ಪಾಂಡವರು ವಿರಾಟ-ನಗರದ ಸಮೀಪದಲ್ಲಿದ್ದ ಶಮೀವೃಕ್ಷದ ಮೇಲೆ ತಮ್ಮ ಆಯುಧಗಳನ್ನೆಲ್ಲಾ ಬಚ್ಚಿಟ್ಟು ಅಜ್ಞಾತವಾಸಕ್ಕಾಗಿ ಪ್ರಚ್ಛನ್ನವೇಷದಿಂದ, ಅಂದರೆ ತಾವು ಯಾರೆಂಬುದು ಯಾರಿಗೂ ತಿಳಿಯದ ಹಾಗೆ ವೇಷಾಂತರವನ್ನು ಧರಿಸಿದರು. ಧರ್ಮರಾಯನು ಯತಿ-ವೇಷದಿಂದ, ಪಾಚಕನ ವೇಷದಿಂದ ಭೀಮಸೇನನು, ಬೃಹನ್ನಳೆ ವೇಷದಿಂದ ಅರ್ಜುನನು, ಸೂತ (ರಥಿಕ) ವೇಷದಿಂದ ನಕುಲನು, ಗೋಪವೇಷದಿಂದ ಸಹದೇವನು ಮತ್ತು ಸೈರಂಧ್ರಿಯ ವೇಷದಿಂದ ದ್ರೌಪದಿಯೂ ಹೀಗೆ ಪಾಂಡವರು ಬೇರೆ ಬೇರೆಯಾಗಿ ವಿರಾಟನಗರಕ್ಕೆ ಆಗಮಿಸಿ, ವಿರಾಟರಾಜನ ಅರಮನೆಗೆ ಬಂದು ಅವನಿಂದ ಮಾನಿತರಾಗಿ ಉದ್ಯೋಗಗಳನ್ನು ದೊರಕಿಸಿಕೊಂಡು ಯುಧಿಷ್ಠಿರನಲ್ಲಿ ವಿರಾಟನಲ್ಲೂ ಅಂತರ್ಗತವಾದ ಶ್ರೀವಾಸುದೇವನ ಸೇವೆಯಲ್ಲಿ ನಿರತರಾದರು.

ಪಾಂಡವರು ಧರಿಸಿದ ವೇಷವಿಚಾರಗಳನ್ನೀಗ ವಿವರಿಸುವರು - ಸರ್ವರಿಂದ ಪೂಜ್ಯನಾದವನು ಯತಿಯು. ಆದ್ದರಿಂದ ಧರ್ಮರಾಜನು ಕಂಕನಾಮದಿಂದ ಯತಿವೇಷ ಧರಿಸಿದನು. ಸೂತನಿಂದ ವೈದೇಹಿಯಲ್ಲಿ ಜನಿಸಿದವನನ್ನು ಸೂದನೆನ್ನುವರು. ಅವನು ಅಡಿಗೆಯ ವೃತ್ತಿಯವನು. ಭೀಮಸೇನನು ವಲಲ ಎಂಬ ಹೆಸರಿನಿಂದ ಸೂದ(ಅಡಿಗೆಯವನ) ವೇಷ ಧರಿಸಿದನು. ವೈಶ್ಯನಿಂದ ಶೂದ್ರಳಲ್ಲಿ ಜನಿಸಿದವನು ನಟನು. ಅಂದರೆ ಸಂಗೀತ ನರ್ತನಾದಿಗಳಿಂದ ಜೀವಿಸುವವನು. ಅರ್ಜುನನು ಊರ್ವಶಿಯ ಶಾಪದ ಒಂದು ವರ್ಷಕಾಲವನ್ನು ಅಜ್ಞಾತವಾಸಕ್ಕೆ ಸಹಾಯಕವಾಗುವಂತೆ ಷಂಡನಾಗಿರಲು ನಿರ್ಧರಿಸಿ ನಟನಾಗಿ ಬೃಹನ್ನಳೆ ಎಂಬ ನಾಮ ಧರಿಸಿದನು. ಕ್ಷತ್ರಿಯನಿಂದ ಬ್ರಾಹ್ಮಣ ಸ್ತ್ರೀಯಲ್ಲಿ ಜನಿಸಿದವನು ಸೂತನು. ನಕುಲನು ಸೂತನ ವೇಷಧರಿಸಿ ರಥಿಕನಾದನು. ವೈಶ್ಯನಿಂದ ಶೂದ್ರಳಲ್ಲಿ ಹುಟ್ಟಿದವಳು ತರಣಿ ಎನಿಸುವಳು. ಅಂಥ ತರಣಿಯಲ್ಲಿ ವೈಶ್ಯನಿಂದ ಜನಿಸಿದವನು ಗೋಪನು. ಸಹದೇವನು ಹೀಗೆ ಗೋಪನ ವೇಷವನ್ನು ಧರಿಸಿದನು. ವೈಶ್ಯನಿಂದ ಬ್ರಾಹ್ಮಣಿಯಲ್ಲಿ ಜನಿಸಿದವನು ವೈದೇಹನು. ಕ್ಷತ್ರಿಯನಿಂದ ವೇಶ್ಯಾಸ್ತ್ರೀಯಲ್ಲಿ ಹುಟ್ಟಿದವಳಿಗೆ ಮಾಹಿಷ್ಯಾ ಎನ್ನುವರು.

ವೈದೇಹನಿಂದ ಮಾಹೇಷ್ಯಾಳಲ್ಲಿ ಜನಿಸಿದವನು ಕಾಯಸ್ಥನು. ಶೂದ್ರನಿಂದ ವೇಶ್ಯಾಸ್ತ್ರೀಯಲ್ಲಿ ಹುಟ್ಟಿದವಳು ಆಯೋಗವಿಯು. ಇಂಥಾ ಆಯೋಗವಿಯಲ್ಲಿ ಕಾಯಸ್ಥನಿಂದ ಜನಿಸಿದವಳು ಸೈರಂಧ್ರಿಯು. ಇಂತಹ ಗಂಧಲೇಪನಾಲಂಕಾರಾದಿಗಳನ್ನು ಮಾಡುವ ದಾಸಿಯಾದ ಸೈರಂಧ್ರಿಯ ವೇಷವನ್ನು ದ್ರೌಪದಿಯು ತಳೆದಳು.

ಕಂಕನಾಮಕಯತಿವೇಷಧಾರಿ ಯುಧಿಷ್ಠಿರನು ವಿರಾಟರಾಜನೊಡನೆ ದ್ಯೂತಕ್ರೀಡಾಸಕ್ತನಾಗಿ, ಸಲಹೆಗಾರನಾಗಿದ್ದನು. ಅಕ್ಷಕ್ರೀಡೆಯಲ್ಲಿ ಅವನೇಕೆ ರತನಾದನೆಂದರೆ ಮುಂದೆ ಅಜ್ಞಾತವಾಸ ಕಳೆದ ಮೇಲೆ ತನ್ನ ದ್ಯೂತಕ್ರೀಡೆಯಲ್ಲಿನ ಪ್ರಭುತ್ವ ಚಾತುರ್ಯಾದಿಗಳನ್ನು ತೋರಲು ಅದರ ವಿಶೇಷ ಅಭ್ಯಾಸದಲ್ಲೇ ಇರಲು ವಿರಾಟನೊಡನೆ ಪ್ರತಿದಿನವೂ ಅಕ್ಷಕ್ರೀಡೆಯಲ್ಲಿ ಮಗ್ನನಾಗಿದ್ದು, ಮುಂದೆ ಇಂಥ ದ್ಯೂತಕ್ರೀಡಾ ವಿಶಾರದನಾದ ಧರ್ಮರಾಜನನ್ನು ಶಕುನಿಯು ಕಪಟದಿಂದಲೇ ಜಯಿಸಿದನೆಂದು ವಿರಾಟನಿಗೆ ಮನದಟ್ಟು ಮಾಡಿಕೊಡಲು ಅವನೊಡನೆ ಅಕ್ಷಕ್ರೀಡಾನಿರತನಾಗಿದ್ದನೆಂದು ತಿಳಿಯಬೇಕು.

ಭೀಮಸೇನನು ಸೂದವೇಷವನ್ನೇಕೆ ಧರಿಸಿದನೆಂದರೆ ಅವನು ಪರಪಾಕನಿಯಮವುಳ್ಳವನು. ಬೇರೊಬ್ಬರು ಮಾಡಿದ ಅಡುಗೆಯನ್ನು ಉಣ್ಣುವವನಲ್ಲ. ಅಂತೆಯೇ ಏಕಚಕ್ರನಗರದಲ್ಲಿ ಪಾಂಡವರು ಭಿಕ್ಷಾವೃತ್ತಿಯಿಂದಿದ್ದಾಗಲೂ ತಾನೇ ಅಡುಗೆ ಮಾಡುತ್ತಿದ್ದನು. ಆದ್ದರಿಂದ ಈಗಲೂ ಸ್ವಯಂಪಾಕನಿಯಮಕ್ಕಾಗಿ ಸೂದವೇಷ ಧರಿಸಿದನು. ಒಂದು ವೇಳೆ ಬ್ರಾಹ್ಮಣನ ವೇಷ ಧರಿಸಿದರೆ, ವೈದಿಕ ವ್ಯವಹಾರದಲ್ಲಿ ತನಗೆ ಹೆಚ್ಚಿನ ಜ್ಞಾನವಿರುವುದರಿಂದ ಅದು ಪ್ರಕಟವಾಗಿ ತಾನು ಭೀಮನೆಂದು ಜನರು ಗುರುತಿಸಬಹುದೆಂಬ ಕಾರಣದಿಂದ ಸೂದವೇಷಧರಿಸಿ ಸ್ವತಃ ಅಡಿಗೆಯವನಾಗಿ ಅರಮನೆಯ ಪಾಕಶಾಲೆಯ ನೇತಾರನಾದನು. ಅರ್ಜುನನು ಬೃಹನ್ನಳೆಯಾಗಿ ರಾಜಕುಮಾರಿಗೆ ನೃತ್ಯ ಸಂಗೀತ ಶಿಕ್ಷಕನಾದನು. ಸೂತನೆಂಬ ಅಭಿದಾನದಿಂದ ನಕುಲನು ಅರಮನೆಯ ರಥಿಕನಾದನು. ಗೋಪನಾಮದಿಂದ ಸಹದೇವನು ರಾಜನ ಗೋವುಗಳ ರಕ್ಷಕನಾದನು. ದ್ರೌಪದಿಯು ಸೈರಂಧ್ರಿಕೆಯಾಗಿ ಅಂತಃಪುರದಲ್ಲಿ ರಾಣಿ ಸುಧೇಷ್ಣಾದೇವಿಗೆ ತಲೆಬಾಚಿ ಕೇಶಶೃಂಗಾರವನ್ನು ಮಾಡುವುದು, ಗಂಧಮಾಲ್ಯಾದಿಗಳಿಂದ ಅಲಂಕರಿಸುವ ದಾಸಿಯಾದಳು. ಭೀಮಸೇನನು ಸೂದಕರ್ಮದಿಂದ ಸೇವಾವೃತ್ತಿಯನ್ನು ವಹಿಸಿದ್ದರಿಂದ ದ್ರೌಪದಿಯೂ ಭೀಮನಿಗೆ ತಕ್ಕಂತೆ ಅಂದರೆ ಪತಿಯ ಸಮಾನ ಧರ್ಮದಿಂದಿರುವುದು ಸತಿಯ ಧರ್ಮವಾದ್ದರಿಂದ ತಾನೂ ಸೇವಾವೃತ್ತಿಯನ್ನು ಕೈಗೊಂಡಳೆಂದು ತಿಳಿಯಬೇಕು. ಹೀಗೆ ಪಾಂಡವರು ತಮ್ಮ ತಮ್ಮ ಉದ್ಯೋಗ ನಿರತರಾಗಿ ಅಜ್ಞಾತವಾಗಿ ವಿರಾಟನ ಅರಮನೆಯಲ್ಲಿ ವಾಸ ಮಾಡಿದರು.

ಪಾಂಡವರು ವಿರಾಟನ ಅರಮನೆಯಲ್ಲಿ ವಾಸ ಮಾಡುತ್ತಿರಲು ಕೆಲದಿನಗಳುರುಳಿದವು. ಒಂದು ದಿನ ಶಿವನ ವರದಿಂದ ಅಜೇಯನೂ, ಅದರಂತೆ, ಸಕಲರನ್ನೂ ಜಯಿಸಬಲ್ಲ ಪರಾಕ್ರಮಿಯೂ ಆದ ಜಗಜಟ್ಟಿಯೊಬ್ಬನು ವಿರಾಟನಗರಕ್ಕೆ ಬಂದು "ನನ್ನನ್ನು ಜಯಿಸಬಲ್ಲ ವೀರರಿದ್ದರೆ, ನನ್ನೊಡನೆ ಮಲ್ಲಯುದ್ಧ ಮಾಡಲು ಬನ್ನಿ" ಎಂದು ಸಿಂಹನಾದ ಮಾಡಿದನು. ಅವನ ದೈಹಿಕ ಬೆಳವಣಿಗೆ, ಶಕ್ತಿಗಳನ್ನು ಕಂಡು ವಿರಾಟರಾಜನ ಆಸ್ಥಾನದ ಮಲ್ಲರೆಲ್ಲರೂ ಭಯಗ್ರಸ್ತರಾಗಿ ಓಡಿಹೋದರು. ಆಗ ಕಂಕವೇಷದ ಯುಧಿಷ್ಠಿರನು "ರಾಜನ್, ಈ ಅರಮನೆಯಲ್ಲಿ ಬಾಣಸಿಗನಾಗಿರುವ ವಲಲನು ಈ ಮಲ್ಲನನ್ನು ಕೊಂದು ನಿನ್ನ ರಾಜ್ಯ ಯಶಸ್ಸನ್ನು ಬೆಳಗಿಸುವನು. ಅವನನ್ನು ಕರೆಯಿಸು" ಎಂದು ಸಲಹೆ ನೀಡಿದನು. ವಿರಾಟನು ವಲಲವೇಷಧಾರಿ ಭೀಮನನ್ನು ಕರೆಯಿಸಿ ಅವನಿಗೆ ಎಲ್ಲ ವಿಷಯವನ್ನೂ ಹೇಳಿ ಜಗಜಟ್ಟಿಯನ್ನು ಗೆಲ್ಲುವಂತೆ ತಿಳಿಸಿದನು. ಆಗ ಭೀಮನು "ನಾನು ಶ್ರೀಹರಿಯಪ್ರಸಾದ ಈ ಕಂಕಯತಿಗಳ ಆಶೀರ್ವಾದ ನಿಮ್ಮ ಅನುಗ್ರಹದಿಂದಲೂ ಈ ಮಲ್ಲನನ್ನು ಸಂಹರಿಸುತ್ತೇನೆ" ಎಂದು ಹೇಳಿದನು.

ಬೇರೊಂದು ಗ್ರಂಥದಲ್ಲಿ "ನಾನು ಮಹಾದೇವನ ಪ್ರಸಾದದಿಂದ ಜಯಗಳಿಸುತ್ತೇನೆ. ಮಹಾದೇವನ ಪ್ರಸಾದದಿಂದ ನನಗೆ ಮಹಾಬಲವಿದೆ. ಆ ಮಹಾದೇವನು ಇವನನ್ನು ಗೆಲ್ಲಲು ನನಗೆ ಬಲನೀಡುತ್ತಾನೆ" ಎಂದು ಹೇಳಿರುವುದರಿಂದ

"ಶ್ರೀಹರಿಯ ಪ್ರಸಾದದಿಂದ" ಎಂದು ಇಲ್ಲಿ ಹೇಳಿರುವುದು ಸರಿಯೇ? ಎಂಬ ಪ್ರಶ್ನೆಗೆ ನಿರ್ಣಯಾಚಾರ್ಯರು ಸ್ಪಷ್ಟೀಕರಣ ನೀಡಿ ಭೀಮನ ಅಭಿಪ್ರಾಯವನ್ನು ಹೀಗೆ ನಿರೂಪಿಸುವರು.

ಮಹಾದೇವನೆಂದರೆ ಪಾರ್ವತೀಪತಿಯಾದ ರುದ್ರದೇವರಲ್ಲ. ಮಹಾದೇವಾದಿ ಶಬ್ದಗಳಿಗೆ ಶ್ರೀಹರಿಯಲ್ಲಿ ಪ್ರವೃತ್ತಿ-ಯುಂಟು. ಕೇವಲ ಮಹಾದೇವ ಶಬ್ದಮಾತ್ರವಲ್ಲ; ಸಕಲದೇವತಾ ಶಬ್ದವಾಚನೂ ಕೇಶವನೇ ಆಗಿದ್ದಾನೆ. ಸಮಸ್ತ ದೇವತಾವೃಂದಕ್ಕಿಂತಲೂ ಕ್ರೀಡಾದಿ ಗುಣರೂಪನಾದ್ದರಿಂದ ಶ್ರೇಷ್ಠದೇವತೆಯೂ, ಬ್ರಹ್ಮ-ರುದ್ರಾದಿ ನಿಯಾಮಕನೂ ಆದ ಕೇಶವನು ಸರ್ವೋತ್ತಮನು. ಮಹಾದೇವ ಎಂದರೆ 'ಮಹಾಂಶ್ಚಾಸೌ ದೇವಶ್ಚ' ಎಂಬ ನಿರುಕ್ತದಂತೆ ಶ್ರೇಷ್ಠನೂ ದೇವನೂ ಆದ ಕೇಶವನೆಂದರ್ಥ. ಸಮಸ್ತ ದೇವತಾನಾಮಕನೂ, ಮಹಾದೇವಾದಿ ಸರ್ವದೇವತಾ ವಾಚ್ಯನೂ ಆದವನು ಶ್ರೀಹರಿಯು. ಅವನಲ್ಲಿನ ಭಕ್ತಿಯಿಂದ ನನಗೆ ಬೇರೆಲ್ಲರಿಗಿಂತ ಹೆಚ್ಚಿನ ಬಲವಿದೆ. ಅಥವಾ ಬೇರೆ ಸಮಸ್ತ ದೇವತೆಗಳ ಬಲವೂ ನನ್ನದೇ ಆಗಿದೆ - ಎಂದು ಭೀಮನು ಹೇಳಿದನೆಂದು ಭಾವ. ಆದ್ದರಿಂದ ಮಹಾದೇವನ ಅನುಗ್ರಹದಿಂದ ಆ ಮಲ್ಲನನ್ನು ಕೊಲ್ಲುತ್ತೇನೆ ಎಂದು ಹೇಳಿದ್ದರು. ದೇವತಾಸಮೂಹದಲ್ಲಿ ಅತ್ಯಂತ ಶ್ರೇಷ್ಠನಾದ ಶ್ರೀಹರಿಯು ಮಹಾದೇವನಾಮಕನಾಗಿದ್ದಾನೆ.[41] ಕೇಶವನು ಸಕಲ ದೇವತೆಗಳ ನಾಮವುಳ್ಳವನು. ಅಂದರೆ ಮಹಾದೇವಾದಿ ಸಕಲದೇವತೆಗಳ ಹೆಸರಿನಿಂದ ವಾಚ್ಯನೆಂದು ಭಾವ. ವಿಷ್ಣುವಿಗೆ ಸರ್ವದೇವ ನಾಮತ್ವವನ್ನು "ಯೋ ದೇವಾನಾಂ ನಾಮಧಾ ಏಕ ಏವ" ಎಂಬ ಶ್ರುತಿಯು ಸಾರುವುದು. 'ಶ್ರೀಹರಿಯು ಮಹಾದೇವನಾಮವಾಚ್ಯನಾದ್ದರಿಂದ ಅಂತಹ ವಿಷ್ಣುವು ನನಗೆ ಜಯವನ್ನು ಕರುಣಿಸುತ್ತಾನೆ' ಎಂದು ಭೀಮನು ಹೇಳಿದನು.

ಮೊದಲು ಆ ಜಗಜಟ್ಟಿಯು "ಶಿವೋ ಮಮ ಬಲಂ", "ರುದ್ರೋ ಮಮಬಲಂ" - ಶಿವನು ನನಗೆ ಬಲಪ್ರದನು. ರುದ್ರನು ನನ್ನ ಬಲವು - ಎಂದು ಶಿವನ ನಾಮಾಂತರವನ್ನೂ ಹೇಳಿದಾಗ ಪ್ರತ್ಯುತ್ತರವಾಗಿ ಭೀಮನೂ ಶ್ರೀಹರಿಯ ನಾಮಾಂತರವಾದ ಮಹದೇವ ಎಂದು ಹೇಳಿದ್ದು ಕೂಡುತ್ತದೆ. 'ಮಹಾಂಶ್ಚ ದೇವ ಏಷಃ' ಎಂಬುವ ಉಕ್ತಿ, "ಏಷ ಸರ್ವೇಶ್ವರಃ", 'ದೇವಸ್ತ್ವೇಷ' ಮುಂತಾದ ಶ್ರುತಿಗಳು ಭೀಮಸೇನದೇವರು ಹೇಳಿದ ಅರ್ಥಕ್ಕೆ ಪ್ರಮಾಣವಾಗಿದೆ ಎಂದು ಆಚಾರ್ಯರು ಸಮರ್ಥಿಸಿದ್ದಾರೆ.

ಈಗ 'ಯುಧಿಷ್ಠಿರನ ಪ್ರಸಾದದಿಂದ ಮಲ್ಲನನ್ನು ಸಂಹರಿಸುತ್ತೇನೆ' ಎಂಬುದನ್ನು ಸ್ಪಷ್ಟಪಡಿಸುವರು.

"ಯುಧಿಷ್ಠಿರಾಭಿಧಶ್ಚ" ಎಂದು ಹೇಳಿದ್ದರ ಭಾವವೇನೆಂದರೆ 'ಯುಧಿಸ್ಥಿರತ್ವಾತ್ ಯುಧಿಷ್ಠಿರಃ' ಅಂದರೆ ಯುದ್ಧದಲ್ಲಿ ಸ್ಥಿರನಾದ್ದರಿಂದ ಯುಧಿಷ್ಠಿರನೆಂದರೆ ಶ್ರೀಹರಿಯು. ನಿರುಕ್ತವಚನವಾದ್ದರಿಂದ 'ಸ'ಕಾರಕ್ಕೆ 'ಷ'ಕಾರವೂ "ಷ್ಟುನಾಷ್ಟು" ಎಂಬ ಸೂತ್ರದಿಂದ 'ಥ'ಕಾರಕ್ಕೆ 'ಠ'ಕಾರವೂ ಎಂದು ಭಾವ. ಇನ್ನೊಂದು "ಯುಧಿಷ್ಠಿರೇಸ್ಥಿತ" ಎಂಬ ವೃತ್ತಿಯಿಂದಲೂ ನಿರೂಪಿಸುವರು. 'ತವ ಬಲಾತ್' ಎಂದರೆ ಶ್ರೀಹರಿಯು ಯುಧಿಷ್ಠಿರನಲ್ಲಿ ಸನ್ನಿಹಿತನಾಗಿರುವುದರಿಂದ, ಶ್ರೀಹರಿಯು ಯುಧಿಷ್ಠಿರನೆಂಬ ಜೀವಸಹಿತನಾಗಿರುವುದರಿಂದ, ನಿನ್ನ ಬಲದಿಂದ ಅಂದರೆ ನಿನ್ನಲ್ಲಿ ಸನ್ನಿಹಿತನಾದ ಶ್ರೀಹರಿಯ ಬಲದಿಂದ ಎಂದರ್ಥ. ಇದರಂತೆ ವಿರಾಟನ ಬಗೆಗೂ ತಿಳಿಯಬೇಕು.

"ಸರ್ವಾಂತರ್ಯಾಮಿಕೋ ವಿಷ್ಣುಃ ಸರ್ವನಾಮಾಭಿಧೀಯತೇ ।
ಏಷೋಹಂ ತ್ವಮಸೌಚೇತಿ ನ ತು ಸರ್ವಸ್ವರೂಪತಃ ॥
ಅಹಂ ನಾಮ ಹರಿರ್ನಿತ್ಯಮಹೇಯತ್ವಾ ತ್ವಕೀರ್ತಿತಃ ।
ತ್ವಂಚಾಸೌ ಪ್ರತಿಯೋಗಿತ್ವಾತ್ ಪರೋಕ್ಷತ್ವಾತ್ ಸ ಇತ್ಯಪಿ ॥

41. "ಕ ಇತಿ ಬ್ರಹ್ಮಣೋ ನಾಮ ಈಶೋಹಂ ಸರ್ವದೇಹಿನಾಂ। ಆವಾಂತವಾಂಗ ಸಂಭೂತ ತತಃ ಕೇಶವ ನಾಮವಾನ್ ॥" ಸ್ಮೃತಿಃ

ಸರ್ವಾಂತರ್ಯಾಮಿಣಿ ಹರಾವಸ್ಮಚ್ಛಬ್ದವಿಭಕ್ತಯಃ ।
ಯುಷ್ಮಚ್ಛಬ್ದಗತಾಶ್ಚೈವ ಸರ್ವಾಸ್ತಚ್ಛಬ್ದಗಾ ಅಪಿ ॥"

- ನಾರಾಯಣಶ್ರುತಿ

ಮೇಲಿನ ಪ್ರಮಾಣಗಳು ಮತ್ತಿತರ ಪ್ರಮಾಣಗಳಿಂದ ಸರ್ವಗತನಾದ, ಸರ್ವನಾಮಗಳುಳ್ಳ ಶ್ರೀಹರಿಯನ್ನು ನಿರೂಪಿಸುವುದು. ಇದರಂತೆ ಏಷಃ, ಅಹಂ, ತ್ವಂ, ಅಸೌ, ಸಃ ಇತ್ಯಾದಿ ಎಲ್ಲ ಶಬ್ದಗಳೂ ಶ್ರೀಹರಿಯನ್ನೇ ನಿರೂಪಿಸುವುದರಿಂದ ಶ್ರೀಹರಿಯ ಪ್ರಸಾದದಿಂದ, ಮಹದೇವನ ಅನುಗ್ರಹದಿಂದ, ಯುಧಿಷ್ಠಿರನ ಅನುಗ್ರಹದಿಂದ ವಿರಾಟನ ಅನುಗ್ರಹದಿಂದ, ಮುಂದಿರುವವರು, ನಾನು, ನೀನು, ನಿನ್ನ, ಇವನು, ಅವನು ಇತ್ಯಾದಿ ಸಮಸ್ತ ಶಬ್ದಗಳಿಂದಲೂ ಕರೆಯಿಸಿಕೊಳ್ಳುವವನು ಶ್ರೀಹರಿಯೇ ಆದ್ದರಿಂದ ನಾಲ್ಕು ಬಗೆಯಿಂದ ಹೇಳಿದ್ದರೂ ಅವೆಲ್ಲವೂ ಸರ್ವಾಂತರ್ಯಾಮಿಯಾದ ಶ್ರೀಹರಿಯ ಅನುಗ್ರಹದಿಂದಲೇ ನಾನು ಮಲ್ಲನನ್ನು ಗೆಲ್ಲುತ್ತೇನೆಂದು ಭೀಮನ ಹೇಳಿದನೆಂದು ತಿಳಿಯಬೇಕು. ಹೀಗೆ ಹೇಳಿ ಭೀಮನು ಜಗಜಟ್ಟಿಯೊಡನೆ ಹೋರಾಡಿ ಅವನನ್ನು ಸಂಹರಿಸಿದನು.

ಹೀಗೆ ವಿರಾಟನಗರದಲ್ಲಿ ಮಹಾತ್ಮರಾದ ಪಾಂಡವರು ವಾಸ ಮಾಡುತ್ತಿರಲು ಹತ್ತು ಮಾಸಗಳು ಕಳೆದವು. ತರುವಾಯ ವಿರಾಟರಾಜನ ಭಾವಮೈದುನನಾದ, ಬಲಶಾಲಿಗಳಲ್ಲಿ ಶ್ರೇಷ್ಠನಾದ ಕೀಚಕನು ಎಲ್ಲ ನೃಪತಿಗಳನ್ನು ಗೆದ್ದು ದಿಗ್ವಿಜಯ ಯಾತ್ರೆಯಿಂದ ವಿರಾಟನಗರಕ್ಕೆ ಬಂದನು. ಅವನನ್ನು ರಾಜನು ಸ್ವಾಗತಿಸಿದನು. ಕೀಚಕನು ಅರಮನೆಯಲ್ಲಿ ಸೈರಂಧ್ರೀವೇಷದ ದ್ರೌಪದಿಯನ್ನು ಕಂಡು ಕಾಮಪೀಡಿತನಾಗಿ "ನನಗೆ ಒಲಿದು ಬಾ" ಎಂದು ಕೋರಿದನು. ಸೈರಂಧ್ರಿಯು ಅವನ ಮಾತನ್ನು ತಿರಸ್ಕರಿಸಿದಳು. ಒಂದು ತಿಂಗಳಾದ ಮೇಲೆ ಕೀಚಕನು ತನ್ನ ಅಕ್ಕ ಸುಧೇಷ್ಣಾದೇವಿಯನ್ನು ಸೈರಂಧ್ರಿಯನ್ನು ತನ್ನ ವಶಪಡಿಸುವಂತೆ ಬೇಡಿದನು. ಸುಧೇಷ್ಣಾದೇವಿಯು ಅನುಜನ ಮಾತನ್ನು ನಿರಾಕರಿಸಿ "ಅವಳು ಪರಸ್ತ್ರೀ, ಅವಳ ಸಹವಾಸ ಬೇಡ, ಈ ಕಾರ್ಯ ನಾನು ಮಾಡಲಾರೆ" ಎಂದು ಹೇಳಿದರೂ ಕೀಚಕನು ಮತ್ತೆ ಮತ್ತೆ ಅಕ್ಕನನ್ನು ಬಲವಂತಪಡಿಸಿದನು. ಆಗ ಅವಳು ಸೈರಂಧ್ರಿಯನ್ನು ಕರೆದು 'ಸೈರಂಧ್ರಿ, ನೀನು ನನ್ನ ತಮ್ಮನ ಮನೆಗೆ ಹೋಗಿ ಅಲ್ಲಿಂದ ನನಗಾಗಿ ಮದ್ಯವನ್ನು ತೆಗೆದುಕೊಂಡು ಬಾ' ಎಂದು ಹೇಳಿದಳು. ದ್ರೌಪದಿಯು ಕೀಚಕನ ಭಯದಿಂದ "ನಾನು ಅವನ ಮನೆಗೆ ಹೋಗುವುದಿಲ್ಲ, ಮದ್ಯವನ್ನು ತರುವುದಿಲ್ಲ" ಎಂದು ಹೇಳಿದಳು. ಸೈರಂಧ್ರಿಯು ಬಹು ವಿಧವಾಗಿ ನಿರಾಕರಿಸಿದರೂ ರಾಣಿಯು ಅವಳನ್ನು ಬಲಾತ್ಕರಿಸಿ ಕೀಚಕನ ಮನೆಗೆ ಕಳಿಸಿದಳು.

ಸೈರಂಧ್ರಿಯು ಬಂದುದನ್ನು ಕಂಡು ಕೀಚಕನು ಅವಳ ಕೈಹಿಡಿದು "ನನ್ನವಳಾಗು" ಎಂದು ಬಲಾತ್ಕರಿಸಲು ಅವನನ್ನು ದೂರ ತಳ್ಳಿ ಸೂರ್ಯಾಂತರ್ಗತನಾದ ಬ್ರಹ್ಮಾದಿಶ್ರೇಷ್ಠದೇವತೆಗಳಿಗೂ ನಿಯಾಮಕನಾದ ವಾಸುದೇವನನ್ನು ಸ್ಮರಿಸಿ ರಾಜಸಭೆಗೆ ಧಾವಿಸಿ ಬಂದಳು. ದ್ರೌಪದಿಯನ್ನು ಅಟ್ಟಿಸಿಕೊಂಡು ಬಂದ ಕೀಚಕನು ಅವಳನ್ನು ಕಾಲಿನಿಂದೊದ್ದು ಬೀಳಿಸಿದನು. ಆಗ ಸೂರ್ಯಾಂತರ್ಗತನಾದ ಶ್ರೀಹರಿಯು 'ಹೇತಿ' ಎಂಬ ಹೆಸರಿನ ರಕ್ಕಸನಿಗೆ ಪ್ರೇರಣೆ ಮಾಡಿದಾಗ ಅವನು ಅದೃಶ್ಯನಾಗಿ ಅಲ್ಲಿಗೆ ಆಗಮಿಸಿದನು. ಆಗ ವಾಯುದೇವರೂ ಆ ರಕ್ಕಸನಲ್ಲಿ ಪ್ರವೇಶಿಸಿ ಕೀಚಕನನ್ನು ಬಡಿದು ಬೀಳಿಸಿದನು.

ಆಗ ಭೀಮಸೇನನು ಕೀಚಕನು ದ್ರೌಪದಿಯನ್ನು ಅಟ್ಟಿಸಿಕೊಂಡು ಬಂದು ಪಾದಾಘಾತದಿಂದ ಬೀಳಿಸಿದ್ದನ್ನು ಕಂಡು ಅತ್ಯಂತ ಕುಪಿತನಾಗಿ ಅಲ್ಲಿದ್ದ ಒಂದು ದೊಡ್ಡ ವೃಕ್ಷವನ್ನು ಕಿತ್ತಲು ನೋಡುತ್ತಿರಲು ಅಣ್ಣನಾದ ಯುಧಿಷ್ಠಿರನು ಅವನನ್ನು ತಡೆದನು. ಅಂದು ರಾತ್ರಿ ಕೃಷ್ಣೆಯು ಭೀಮನ ಬಳಿಗೆ ಬಂದು ತನ್ನ ಸಂಕಟವನ್ನು ಹೇಳಿಕೊಂಡು ಕೀಚಕನನ್ನು ಸಂಹರಿಸುವಂತೆ ಪ್ರಾರ್ಥಿಸಿದಳು. ವೃಕೋದರನು ಅದಕ್ಕೆ ಸಮ್ಮತಿಸಿ ಕೀಚಕನನ್ನು ನಿರ್ಜನ ಸ್ಥಳಕ್ಕೆ ಬರುವಂತೆ ಹೇಳಲು ಅವಳಿಗೆ ಉಪಾಯವನ್ನು ತಿಳಿಸಿದನು. ದ್ರೌಪದಿಯು ಅವನು ಹೇಳಿದಂತೆ ಕೀಚಕನಿರುವಲ್ಲಿಗೆ ಹೋಗಿ ಏಕಾಂತವಾದ ನರ್ತನಶಾಲೆಗೆ ಬರುವಂತೆ

ಹೇಳಿದಳು. ಕೀಚಕನು ಹರ್ಷದಿಂದ ಅಲ್ಲಿಗೆ ಹೋದನು. ದ್ರೌಪದಿಯೂ ಹೋದಳು. ಅಲ್ಲಿಗೆ ಭೀಮನು ಬಂದು ಕೀಚಕನನ್ನು ಹೊಡೆದು ಪೀಡಿಸಿ ಅವನ ತಲೆಯನ್ನು ದೇಹದೊಳಗೆ ಹೊಗಿಸಿ ಪಿಂಡಾಕಾರದ ಮುದ್ದೆಯಂತೆ ಮಾಡಿ ಸಂಹಾರಮಾಡಿದನು.

ಶಂಕರನ ವರದಿಂದ ಅವಧ್ಯನಾದ ತನ್ನ ಅಣ್ಣನು ಮೃತನಾದುದನ್ನರಿತು ಶಿವನ ವರದಿಂದ ಅವಧ್ಯರಾದ ಕೀಚಕನ ಸಹೋದರರಾದ ನೂರಾಐದು ಜನರು ಉಪಕೀಚಕರು ಅಣ್ಣನ ಮರಣಕ್ಕೆ ಸೈರಂಧ್ರಿಯೇ ಕಾರಣಳೆಂದು ಕ್ರುದ್ಧರಾಗಿ ಅಗ್ರಜನ ಶವದೊಡನೆ ಅವಳನ್ನೂ ಸುಟ್ಟುಹಾಕಲು ನಿರ್ಧರಿಸಿ ಅಣ್ಣನ ಶವದ ಜತೆ ಸೈರಂಧ್ರಿಯನ್ನೂ ಬಲಾತ್ಕಾರದಿಂದ ಕಟ್ಟಿ ಹೊತ್ತುಕೊಂಡು ಹೊರಟರು. ಇಂತು ಸೈರಂಧ್ರಿಯನ್ನು ಅವರು ಹೊತ್ತೊಯ್ಯುತ್ತಿರುವಾಗ ದ್ರೌಪದಿಯು ಗಟ್ಟಿಯಾಗಿ ಅಳುತ್ತಿದಳು. ಅದನ್ನು ಕೇಳಿ ಭೀಮಸೇನನು ರೋಷದಿಂದ ದೊಡ್ಡದೊಂದು ವೃಕ್ಷವನ್ನು ಕಿತ್ತಿ ಅದರಿಂದ ಉಪಕೀಚಕರೆಲ್ಲರನ್ನೂ ಬಡಿದು ಸಾಯಿಸಿದನು. ನಂತರ ದ್ರೌಪದಿಯನ್ನು ಅರಮನೆಗೆ ಕರೆದುತಂದನು. ತಪಸ್ಸಿನಿಂದ ಶಿವನನ್ನು ಮೆಚ್ಚಿಸಿ ಯುದ್ಧದಲ್ಲಿ ಅಜೇಯತ್ವ, ಅವಧ್ಯತ್ವ, ಸ್ವತಃ ಶತ್ರುವಿಜಯಾದಿಗಳನ್ನು ಪಡೆದಿದ್ದ ಆ ನೂರಾಐದು ಜನ ಉಪಕೀಚಕರು ಮತ್ತು ಕೀಚಕ – ಹೀಗೆ ಒಂದು ನೂರಾ ಆರು ಜನರೂ ಭೀಮಸೇನನಿಂದ ಹತರಾದರು. ತಾನು ಗಂಧರ್ವನೆಂದು ಹೇಳಿಕೊಂಡು ಭೀಮನು ಅವರನ್ನು ಸಂಹರಿಸಿ ಸರ್ವರನ್ನೂ ಆನಂದಗೊಳಿಸಿದನು. ದ್ರೌಪದಿಯೂ ಸಂತುಷ್ಟಳಾದಳು.

ಸುಧೇಷ್ಣಾದೇವಿಯು ತನ್ನ ಬಲಾಢ್ಯನಾದ ಸಹೋದರನೂ ಉಪಕೀಚಕರೂ ಮೃತರಾದ್ದರಿಂದಲೂ ಅದಕ್ಕೆ ಸೈರಂಧ್ರಿಯೇ ಕಾರಣಳೆಂದೂ ತಿಳಿದು ಅವಳು ತನ್ನರಮನೆಯಲ್ಲಿದ್ದರೆ ಇನ್ನೇನು ಅಪಾಯವಾಗುವುದೋ ಎಂಬ ಭಯದಿಂದ "ಅಮ್ಮಾ, ಸೈರಂಧ್ರೀ ನೀನು ನನ್ನರಮನೆಯಲ್ಲಿರಬೇಡ, ಹೊರಟುಹೋಗು" ಎಂದು ಹೇಳಿದಳು. ಅದಕ್ಕೆ ದ್ರೌಪದಿಯು "ರಾಣಿಯೇ, ಇನ್ನು ಹದಿಮೂರುದಿನಗಳವರೆಗೆ ಮಾತ್ರ ಇಲ್ಲಿರುತ್ತೇನೆ. ಆನಂತರ ನೀನು ಇಲ್ಲೇ ಇರು ಎಂದರೂ ಇರುವುದಿಲ್ಲ. ಅಲ್ಲಿಯವರೆಗೆ ನಾನಿಲ್ಲಿರಲು ಅವಕಾಶಕೊಡು" ಎಂದು ಹೇಳಿದಳು. ಸುಧೇಷ್ಣಾದೇವಿಯು ಮನಸ್ಸಿಲ್ಲದಿದ್ದರೂ ಸೈರಂಧ್ರಿಯ ಭಯದಿಂದ ಅದಕ್ಕೆ ಸಮ್ಮತಿಸಿದಳು. ಹೀಗೆ ಪಾಂಡವರು ಅಲ್ಲಿ ಒಂದುವರ್ಷ ಪೂರ್ಣವಾಗಿ ಅಜ್ಞಾತವೇಷದಿಂದ ವಾಸಮಾಡಿದರು.

ಇತ್ತ ಹಸ್ತಿನಾಪುರದಲ್ಲಿ ದುರ್ಯೋಧನನ ಅಪ್ಪಣೆಯಂತೆ ಅನೇಕ ಅನುಚರರು, ಗುಪ್ತಚಾರರು, ಪಾಂಡವರನ್ನು ಎಲ್ಲ ರಾಜ್ಯಗಳಲ್ಲಿ, ಎಲ್ಲ ಪಟ್ಟಣಗಳಲ್ಲಿಯೂ ಹುಡುಕಿದರೂ ಅವರನ್ನೂ ಕಂಡು ಹಿಡಿಯಲಾಗದಿದ್ದುದರಿಂದ ರಾಜಧಾನಿಗೆ ಮರಳಿ ಬಂದರು. ಚಾರ, ಗುಪ್ತಚಾರರು ಪಾಂಡವರು ಎಲ್ಲೂ ದೊರಕಲಿಲ್ಲವೆಂದು ಹೇಳಿ, ವಿರಾಟನಗರದಲ್ಲಿ ಓರ್ವ ಸ್ತ್ರೀನಿಮಿತ್ತವಾಗಿ ಬಲಾಢ್ಯನಾದ ಕೀಚಕನು ಮೃತನಾದನೆಂಬ ವಾರ್ತೆಯನ್ನು ದುರ್ಯೋಧನನಿಗೆ ತಿಳಿಸಿದರು.

ಆಗ ದುರ್ಯೋಧನನು ದ್ರೌಪದಿ ನಿಮಿತ್ತನಾಗಿ ಭೀಮಸೇನನೇ ಕೀಚಕನನ್ನು ಸಂಹರಿಸಿದ್ದಾನೆ ಎಂದು ನಿಶ್ಚಯಿಸಿ ಪಾಂಡವರನ್ನು ಕಂಡುಹಿಡಿಯಲು ಗೋಗ್ರಹಣವನ್ನು ನಿಮಿತ್ತಮಾಡಿಕೊಂಡು ದುರ್ಯೋಧನಾದಿಗಳು ಭೀಷ್ಮ-ದ್ರೋಣಾದಿಗಳೊಡನೆ ಸೈನ್ಯ ಸಮೇತರಾಗಿ ಮತ್ಸ್ಯದೇಶಕ್ಕೆ ಹೋದರು. ಅವರೆಲ್ಲರಿಗೂ ಮುಂದಾಗಿ ಸುಶರ್ಮರಾಜನು ಅಲ್ಲಿಗೆ ಹೋಗಿ ವಿರಾಟನ ಗೋವುಗಳನ್ನು ಅಪಹರಿಸಿದನು. ಈ ವಿಚಾರವರಿತು ವಿರಾಟರಾಜನು ಸೇನಾಸಮೇತನಾಗಿ ಸುಶರ್ಮನನ್ನು ಎದುರಿಸಲು ಹೊರಟನು. ಅವನೊಡನೆ ಅರ್ಜುನನನ್ನು ಬಿಟ್ಟು ಉಳಿದ ಪಾಂಡವರೂ ಹೊರಟರು. ಆಗ ಸುಶರ್ಮನು ಯುದ್ಧದಲ್ಲಿ ವಿರಾಟನನ್ನು ಜಯಿಸಿ ಸೆರೆಹಿಡಿದನು. ಆಗ ಭೀಮಸೇನನು ಬಂದು ಅವನ ಸೈನ್ಯವನ್ನು ನಾಶ-ಪಡಿಸಿ ವಿರಾಟರಾಜನನ್ನು ಬಿಡಿಸಿ ಸುಶರ್ಮನನ್ನು ಬಂಧಿಸಿ ಕರೆತಂದನು. ಭೀಮನಿಗೆ ಹೇಳಿ ಯುಧಿಷ್ಠಿರನು ಸುಶರ್ಮನನ್ನು ಬಿಡಿಸಿದನು. ಅನಂತರ ಕೌರವರು ಅಂದು ರಾತ್ರಿ ಊರ ಹೊರಭಾಗದಲ್ಲೇ ವಿಶ್ರಾಂತಿ ಪಡೆದರು.

ಮರುದಿನ ಮಧ್ಯಾಹ್ನ ಭೀಷ್ಮಾದಿಗಳು ಕೀಚಕನಿಲ್ಲದ ವಿರಾಟರಾಜನನ್ನು ಸುಲಭವಾಗಿ ಜಯಿಸಬಹುದೆಂದು ತಿಳಿದರು. ಕೀಚಕ, ಹಿಡಿಂಬ, ಬಕ, ಕಿರ್ಮೀರ, ಜರಾಸಂಧ, ಕಂಸ ಮುಂತಾದವರು ಮಹಾ ಬಲಾಢ್ಯರಾಗಿದ್ದರಿಂದ ಅವರನ್ನು ಪೀಡಿಸಲೂ ಭೀಷ್ಮಾದಿಗಳಿಗೂ ಸಾಧ್ಯವಾಗಿರಲಿಲ್ಲ. ಅಂದ ಮೇಲೆ ಉಳಿದಿರುವವರಿಂದ ಸಾಧ್ಯವಾದೀತೇ? ಇದನ್ನು ವಿಚಾರಮಾಡಿ ಈಗ ಕೀಚಕನು ಮೃತನಾಗಿರುವುದರಿಂದ ಮತ್ಸ್ಯದೇಶಾಧೀಶನಾದ ವಿರಾಟನೊಡನೆ ಯುದ್ಧಕ್ಕಾಗಿ ಬಂದರು. ಭೀಮನಿಂದ ಧೃತರಾಷ್ಟ್ರನ ಪುತ್ರರನ್ನು ಕಾಪಾಡುತ್ತೇನೆ ಎಂದು ಪ್ರತಿಜ್ಞೆ ಮಾಡಿದ್ದರಿಂದ ದ್ರೋಣಾಚಾರ್ಯರೂ ತಮ್ಮ ಪ್ರತಿಜ್ಞೆಯನ್ನು ಸತ್ಯ ಮಾಡಲು ತಮ್ಮ ಕುಮಾರನಾದ ಅಶ್ವತ್ಥಾಮನೊಡನೆ ಕೌರವರೊಡನೆ ಬಂದರು. ಪಾಂಡವರು ಅಲ್ಲಿ ಇದ್ದ ಪಕ್ಷದಲ್ಲಿ ವಿರಾಟನ ಪರವಾಗಿ ಯುದ್ಧಕ್ಕೆ ಬರುವರು. ಆಗ ಅಂದರೆ ಅಜ್ಞಾತವಾಸದಲ್ಲಿರುವ ಪಾಂಡವರನ್ನು ಕಂಡು ಹಿಡಿಯಬಹುದು. ಒಂದು ವೇಳೆ ಅವರು ಅಲ್ಲಿ ಇರದಿದ್ದರೆ, ಉದ್ಧತನಾದ ವಿರಾಟರಾಜನನ್ನು ಮಣಿಸಬಹುದು ಎಂದು ಯೋಚಿಸಿ ಕೌರವರು ಎಲ್ಲ ಕಡೆಯಿಂದ ಆಕ್ರಮಣ ಮಾಡಿ ಗೋವುಗಳನ್ನು ಹಿಡಿದರು.

ಈ ಸಮಾಚಾರವನ್ನು ತಿಳಿದು ವಿರಾಟನ ಮಗನಾದ ಉತ್ತರಕುಮಾರನು ಕೌರವರನ್ನು ಸುಲಭವಾಗಿ ಜಯಿಸುವುದಾಗಿ ಗರ್ವದಿಂದ ಹೇಳಿಕೊಂಡು ಹೊರಟು ಅಗಾಧ ಸಾಗರದಂತಿದ್ದ ಕೌರವರ ಸೈನ್ಯವನ್ನು ಕಂಡು ಭೀತನಾಗಿ ಓಡಿಹೋಗಲು ಪ್ರಯತ್ನಿಸುತ್ತಿದ್ದಾಗ ಬೃಹನ್ನಳೆಯ ವೇಷದಲ್ಲಿದ್ದ ಅರ್ಜುನನು ಬಹುಪ್ರಯತ್ನದಿಂದ ಅವನನ್ನು ತಡೆದು ಉತ್ತರ ಕುಮಾರನನ್ನು ಸಾರಥಿಯಾಗಿ ಮಾಡಿಕೊಂಡು ಕೌರವರನ್ನು ಎದುರಿಸಲು ಹೊರಟನು. ಅರ್ಜುನನು ಶಮೀವೃಕ್ಷದ ಮೇಲೆ ಅಡಗಿಸಿಟ್ಟದ್ದ ಗಾಂಡೀವವನ್ನೂ ಹನುಮದ್ಧ್ವಜ, ದೇವದತ್ತವೆಂಬ ಶಂಖಗಳನ್ನೂ ತೆಗೆದುಕೊಂಡು ರಥಾರೂಢನಾಗಿ ಮುಂಭಾಗದಲ್ಲಿರುವ ಕೌರವ ಸೈನ್ಯವನ್ನು ಬಿಟ್ಟು ಬೇರೊಂದು ಮಾರ್ಗವಾಗಿ ಹೊರಟು ಕೌರವರು ಅಪಹರಿಸಿದ್ದ ಗೋವುಗಳನ್ನು ಬಿಡಿಸಲು ಗೋಷ್ಠದಲ್ಲಿದ್ದ ಕೌರವರ ಬಳಿಗೆ ಬಂದನು ಮತ್ತು ಭೀಷ್ಮ, ದ್ರೋಣ, ಕರ್ಣಾದಿಗಳನ್ನು ಸಮಸ್ತ ಕೌರವರನ್ನೂ ಯುದ್ಧದಲ್ಲಿ ಜಯಿಸಿದನು.

ಅರ್ಜುನನಿಂದ ಪರಾಭವ ಹೊಂದಿದ ಕೌರವರು ಪುನಃ ಸರ್ವರೂ ಒಟ್ಟಾಗಿ ಸೇರಿ ಯುದ್ಧಕ್ಕೆ ಬಂದಾಗ ಫಲ್ಗುಣನು ಸಂಮೋಹನಾಸ್ತ್ರದಿಂದ ಸಕಲರನ್ನೂ ಮೂರ್ಛೆಗೊಳಿಸಿ ಭೀಷ್ಮಾಚಾರ್ಯರನ್ನು ಬಿಟ್ಟು ಉಳಿದೆಲ್ಲ ಕೌರವಾದಿಗಳ ವಸ್ತ್ರಾದಿಗಳನ್ನು ಕಿತ್ತುಕೊಂಡನು. ಭೀಷ್ಮಾಚಾರ್ಯರು ಸಂಮೋಹನಾಸ್ತ್ರ ಪ್ರತೀಕಾರವನ್ನು ಚೆನ್ನಾಗಿ ತಿಳಿದವರಾದ್ದರಿಂದ ಅವರು ಮೂರ್ಛಿತರಾಗಿರಲಿಲ್ಲ. ಆದುದರಿಂದ ಅವರ ವಸ್ತ್ರವನ್ನು ಕಿತ್ತುಕೊಳ್ಳಲಿಲ್ಲವೆಂದು ಭಾವ. ಅನಂತರ ಅರ್ಜುನನು ಭೀಷ್ಮರ ರಥವನ್ನು ನಾಶಪಡಿಸಿ ರಣಭೂಮಿಯಿಂದ ವಿರಾಟನಗರಕ್ಕೆ ವಿಜಯಶೀಲನಾಗಿ ಮರಳಿದನು. ಮತ್ಸ್ಯನರೇಶನಾದ ವಿರಾಟನು ತನ್ನ ಕುಮಾರನಾದ ಉತ್ತರನು ಕೌರವರನ್ನು ಗೆದ್ದುಬಂದನೆಂದು ಆನಂದಿಸುತ್ತಿರಲು ಯತಿರೂಪದ ಯುಧಿಷ್ಠಿರನು 'ಕೌರವರನ್ನು ಜಯಿಸಿದವನು ನಿನ್ನ ಮಗನಲ್ಲ. ಬೃಹನ್ನಳೆ'ಯೆಂದು ಹೇಳಿದನು. ಆದರಿಂದ ಕೋಪಗೊಂಡ ವಿರಾಟನು ಕೈಯ್ಯಲ್ಲಿದ್ದ ಪಗಡೆಯಾಟದ ದಾಳದಿಂದ ಧರ್ಮರಾಜನ ಹಣೆಗೆ ಹೊಡೆದನು. ಈ ವಿಚಾರವರಿತ ಭೀಮಾರ್ಜುನರು ಕ್ರುದ್ಧರಾಗಿ ವಿರಾಟನು ವಧಾರ್ಹನೆಂದು ಅವನನ್ನು ವಧಿಸಲಿಚ್ಛಿಸಿದಾಗ ಅವರನ್ನು ತಡೆದನು. ಮರುದಿನ ಅಂದರೆ ಪಾಂಡವರು ನಿಜರೂಪದಿಂದ ಹೊರಬಂದಾಗ ನಿಜವಾದ ವಿಷಯವರಿತು ವಿರಾಟನು ತನ್ನಲ್ಲಿ (ಧರ್ಮರಾಜನಲ್ಲಿ) ಕ್ಷಮೆ ಬೇಡದಿದ್ದರೆ ಆಗ ಅವನು ವಧಾರ್ಹನಾಗುವನೆಂದು ಹೇಳಲು ಅಣ್ಣನ ಮಾತಿಗೆ ಗೌರವಕೊಟ್ಟು ತಟಸ್ಥರಾದರು.

ಮಾರನೆಯ ದಿವಸ ಪ್ರಾತಃಕಾಲ ಪಾಂಡವರು ಅಜ್ಞಾತವೇಷವನ್ನು ಕಳಚಿ ನಿಜರೂಪದಿಂದ ವಿರಾಟರಾಜನ ಸಿಂಹಾಸನವೇರಿ ಕುಳಿತರು. ಆಗ ಅಲ್ಲಿಗೆ ಆಗಮಿಸಿದ ವಿರಾಟರಾಜನು ಆಚ್ಚರಿಗೊಂಡು ನನ್ನ ಸಿಂಹಾಸನವನ್ನೇರಿರುವ ಇವರಾರು? ಏಕೆ ಕುಳಿತಿರುವರು? ಎಂದು ಪ್ರಶ್ನಿಸಿದನು. ಆಗ ಉತ್ತರಕುಮಾರನು "ತಂದೆಯೇ, ಇವರು ಮಹಾನು-

ಭಾವರಾದ ಪಾಂಡವರು. ಸಿಂಹಾಸನದಲ್ಲಿ ಮಂಡಿಸಿರುವವನೇ ಯುಧಿಷ್ಠಿರನು. ವಲಲನ ವೇಷದಲ್ಲಿದ್ದವನು ಬಲಭೀಮನು. ಬೃಹನ್ನಳೆಯಂತಿದ್ದವನು ತ್ರಿಲೋಕವಿಜಯಿಯಾದ ಅರ್ಜುನನು, ರಥಿಕ-ಗೋಪರಂತಿದ್ದವರು ನಕುಲ-ಸಹದೇವರು. ಸೈರಂಧ್ರಿಯಾಗಿದ್ದವಳೇ ಪಾಂಡವರ ಪಟ್ಟಮಹಿಷಿ ದ್ರೌಪದೀದೇವಿಯು. ನಿನ್ನೆ ಯುದ್ಧದಲ್ಲಿ ಸಮಸ್ತ ಸಮಸ್ತ ಕೌರವರನ್ನೂ ಜಯಿಸಿದವನು ಅರ್ಜುನನು. ಪಾಂಡವರು ಒಂದು ವರ್ಷ ಅಜ್ಞಾತವಾಸವನ್ನು ನಮ್ಮ ಅರಮನೆಯಲ್ಲಿ ಕಳೆದಿದ್ದಾರೆ. ನಿನ್ನೆಯೇ ಅವರ ಅಜ್ಞಾತವಾಸವು ಪರಿಸಮಾಪ್ತಿಯಾಯಿತು" ಮುಂತಾಗಿ ಸಮಸ್ತ ವಿಚಾರವನ್ನೂ ತಿಳಿಸಿದನು.

ಮಗನ ಮಾತುಕೇಳಿ ವಿರಾಟರಾಜನು ಭಯಕಂಪಿತನಾಗಿ ಪಾಂಡವರಿಗೆ ಶರಣಾಗತನಾಗಿ ನಮಸ್ಕರಿಸಿ ಕ್ಷಮೆ ಯಾಚಿಸಿದನು ಮತ್ತು ತನ್ನ ಕುಮಾರಿಯಾದ ಉತ್ತರಾದೇವಿಯನ್ನು ಫಲ್ಗುಣನಿಗೆ ಸಮರ್ಪಿಸಿದನು.

ಧನಂಜಯನು ಉತ್ತರೆಯನ್ನು ತನ್ನ ಪುತ್ರನಾದ ಅಭಿಮನ್ಯುವಿಗಾಗಿ ಸ್ವೀಕರಿಸಿದನು. ಹೀಗೆ ವಿರಾಟರಾಜನನ್ನು ಸೆರೆಯಿಂದ ಬಿಡಿಸಿ, ಗೋವುಗಳನ್ನು ಬಿಡಿಸಿ, ಕೀಚಕಾದಿಗಳನ್ನು ಸಂಹರಿಸಿ ತಮಸ್ಸಿಗೆ ಬೀಳಿಸಿ, ಪವನನಂದನನಾದ ಭೀಮಸೇನನು ಮುಖ್ಯವಾದ ಧರ್ಮವನ್ನು ಪಡೆದನು. ಅನಂತರ ಅರ್ಜುನನು ಗೋವಿಮೋಕ್ಷಣದಿಂದ ಉಪಧರ್ಮಕ್ಕೆ ಪಾತ್ರನಾದನು.

ಧರ್ಮನಂದನನು ಅಭಿಮನ್ಯುವಿನ ವಿವಾಹವನ್ನು ವಿರಾಟನಗರದಲ್ಲಿ ವೈಭವದಿಮದ ನೆರವೇರಿಸಬಯಸಿ ಶ್ರೀಕೃಷ್ಣ, ಬಲರಾಮ, ಸುಭದ್ರಾ, ಅಭಿಮನ್ಯು ಮತ್ತು ಯಾದವರನ್ನು ಕರತರಲು ದೂತರನ್ನು ಕಳಿಸಿದನು. ಅನಂತಾನಂದಚಿದ್ರೂಪನಾದ ಶ್ರೀವಾಸುದೇವನು ಸಕಲರೊಡನೆ ವಿರಾಟನ ರಾಜಧಾನಿಗೆ ಆಗಮಿಸಿದನು. ಅನಂತರ ಅಭಿಮನ್ಯುವಿನೊಡನೆ ಉತ್ತರೆಯ ವಿವಾಹವು ಅತಿವಿಜೃಂಭಣೆ ಸಡಗರಗಳಿಂದ ನೆರವೇರಿತು. ಅಜ್ಞಾತವಾಸವನ್ನು ಮುಗಿಸಿದ ಪಾಂಡವರು ಶ್ರೀಕೃಷ್ಣ-ಬಲರಾಮ ಮತ್ತು ಯಾದವರು ಪಾಂಚಾಲರಾಜ ದ್ರುಪದಾದಿಗಳಿಂದೊಡಗೂಡಿ ನೆರವೇರಿಸಿದ ಆ ಶುಭವಿವಾಹವು ಪಾಂಡುನಂದನರಿಗೆ ಬಂದು ದೊಡ್ಡ ಉತ್ಸವವಾಯಿತು. ಸಮಸ್ತರು ಪರಮಾನಂದಭರಿತರಾದರು.

ದುರ್ಯೋಧನ, ಕರ್ಣ, ಶಕುನಿ ಮೊದಲಾದವರು ಯುದ್ಧದಲ್ಲಿ ಸವ್ಯಸಾಚಿಯಿಂದ ಪೀಡಿತರಾಗಿ, ಭೀಷ್ಮಾದಿಗಳೊಡನೆ ಹಸ್ತಿನಾವತಿಗೆ ಬಂದು ಅಲ್ಲಿ ಪಾಂಡವರು ಅಜ್ಞಾತವಾಸದ ಬಗೆಗೆ ಮಂತ್ರಾಲೋಚನೆ ಮಾಡಿದರು. ದುರ್ಯೋಧನನು, 'ಪಾಂಡವರು ಅಜ್ಞಾತವಾಸದಲ್ಲಿರುವಾಗಲೇ ನಾವು ಅರ್ಜುನನನ್ನು ಕಂಡುಹಿಡಿದಿದ್ದೇವೆ. ಆದ್ದರಿಂದ ಪಾಂಡವರು ಪುನಃ ವನವಾಸಕ್ಕೆ ಹೋಗಲಿ' ಎಂದನು. ಆಗ ಭೀಷ್ಮಾಚಾರ್ಯರು 'ಪಾಂಡವರು ಅಜ್ಞಾತವಾಸ ಮುಗಿಸಿದ ಮೇಲೆಯೇ ನಮಗೆ ದೃಷ್ಟಿಗೋಚರರಾಗಿದ್ದಾರೆ' ಎಂದಾಗ ದ್ರೋಣಾಚಾರ್ಯರೂ ಭೀಷ್ಮರ ಮಾತನ್ನೇ ಸಮರ್ಥಿಸಿ ಪಾಂಡವರ ಅಜ್ಞಾತವಾಸವು ಮುಗಿದಿದೆ ಎಂದು ಹೇಳಿದರು.

ಪಾಪಿಗಳಾದ ದುರ್ಯೋಧನಾದಿಗಳು ಭೀಷ್ಮ-ದ್ರೋಣರ ಮಾತನ್ನು ತಿರಸ್ಕರಿಸಿ 'ಧರ್ಮನಂದನ! ನೀವು ಅಜ್ಞಾತವಾಸದಲ್ಲಿರುವಾಗ ನಿಮ್ಮನ್ನು ಕಂಡುಹಿಡಿದಿದ್ದೇವೆ. ನೀವು ಈಗ ಪುನಃ ವನವಾಸಕ್ಕೆ ಹೋಗಿರಿ' ಎಂದು ದೂತರ ಮುಖವಾಗಿ ಹೇಳಿಕಳಿಸಿದರು. ದೂತರ ಮಾತು ಕೇಳಿ ಯುಧಿಷ್ಠಿರನು "ಕೌರವ! ನಮ್ಮ ಅಜ್ಞಾತವಾಸವು ಮುಗಿದಿದೆ. ಅದನ್ನು ಮುಗಿಸಿಯೇ ನಾವು ನಿಮಗೆ ಕಾಣಿಸಿದ್ದೇವೆ. ಇದನ್ನು ಜ್ಞಾನಿಗಳಾದ ಬ್ರಾಹ್ಮಣರೆಲ್ಲರೂ ಬಲ್ಲರು" ಎಂದು ಹೇಳಿಕಳಿಸಿದನು.

ಅಜ್ಞಾತವಾಸವು ಪೂರ್ಣವಾಗಲಿಲ್ಲ ಎಂದು ಹೇಳುವವರ ಅಭಿಪ್ರಾಯವನ್ನು ಹೇಳುತ್ತಾರೆ. ಸೂರ್ಯನು ಒಂದು ರಾಶಿ ಸಂಚಾರ ಮಾಡುವ ಕಾಲಕ್ಕೆ ಸೌರಮಾಸವೆಂದು ಹೆಸರು. ಸೌರಮಾಸದ ಅನುಸಾರವಾಗಿ ಸಂಕ್ರಮಣದವರೆಗೆ ಸೌರಮಾಸವು. ಇದರಂತೆ ಅಜ್ಞಾತವಾಸವು ಒಂದು ವರ್ಷ ಪೂರ್ಣವಾಗಿಲ್ಲ (ಅಪೂರ್ಣ) ಎಂದು ಹೇಳುವರು.

ಅಜ್ಞಾತವಾಸ ಪೂರ್ಣವಾಗಿದೆ ಎಂಬುವವರ ಆಶಯವು ಹೀಗಿದೆ - ಚಾಂದ್ರಮಾಸದಿಂದ ಅಂದರೆ ಪೂರ್ಣಿಮೆಯಿಂದ ಪೂರ್ಣಿಮಾವರೆಗೆ, (ಕೃಷ್ಣಪಕ್ಷ ಪಾಡ್ಯದಿಂದಾರಂಭಿಸಿ ಪೂರ್ಣಿಮಾವರೆಗೆ) ಚಾಂದ್ರಮಾಸವು. ಅಥವಾ ಶುಕ್ಲಪಕ್ಷ ಪಾಡ್ಯದಿಂದ ದರ್ಶಪರ್ಯಂತವಾಗಿ ಚಾಂದ್ರಮಾಸವಾಗುವುದು. ಇದರ ಪ್ರಕಾರವಾಗಿ ಮುನ್ನೂರ ಅರವತ್ತು ದಿನಾತ್ಮಕವಾದ ಈ ಕಾಲವು ಅಜ್ಞಾತವಾಸಕ್ಕಾಗಿ ಪ್ರತಿಜ್ಞಾತವಾಗಿತ್ತು. ಅದು ಪೂರ್ಣವಾಗಿದೆ. ಶ್ರುತಿಸ್ಮೃತ್ಯಾದಿಗಳಲ್ಲಿ ಸಂವತ್ಸರಪೂರ್ಣವೆಂದು ಪ್ರಸಿದ್ಧಿಯಿದೆ. ಚಾಂದ್ರಮಾಸದಿಂದ ಎಂದು ನಿರ್ಣಯಾಚಾರ್ಯರು ಹೇಳಿದ್ದಾರೆ. "ದರ್ಶಾವಧಿಂ ಮಾಸಮುಶಂತಿಚಾಂದ್ರಂ । ಸೌರಂ ತಥಾ ಭಾಸ್ಕರ ರಾಶಿಚಾರಾತ್ ॥ ತ್ರಿಂಶದ್ದಿನಂ ಸಾವನಮಾಹುರಾರ್ಯಾಃ । ನಾಕ್ಷತ್ರಮಿಂದೋರ್ಭಗಣಭ್ರಮಾಚ್ಚ ॥" ಎಂದು ರತ್ನಮಾಲಾದಲ್ಲಿ ಉಕ್ತವಾಗಿದೆ. ಚಾಂದ್ರಮಾಸವೂ ಸಹ, ಶುಕ್ಲಪಕ್ಷಾದಿ, ಕೃಷ್ಣಪಕ್ಷಾದಿ ಎಂದು ಎರಡುವಿಧ. ಕೃಷ್ಣ ಪಕ್ಷಾದಿಗಳನ್ನು ಕೆಲವರು ಮಾಸವೆಂದು ಅಂಗೀಕರಿಸುವುದಿಲ್ಲ. ಯಾರು ಇಚ್ಛಿಸುವರೋ ಅವರಿಗೂ ಕೂಡ 'ವಿಂಧಸ್ಯ ದಕ್ಷಿಣೇ' ಎಂದು 'ತ್ರಿಕಾಂಡಮಂಡನ'ದಲ್ಲಿ ಉಕ್ತವಾಗಿದೆ. ಎಲ್ಲಕ್ಕಿಂತಲೂ ಚಾಂದ್ರಮಾಸಕ್ಕೇನೇ ಮುಖ್ಯತ್ವವಿರುವುದರಿಂದ ಜ್ಞಾನಿಗಳು 'ಅಜ್ಞಾತವಾಸ'ವೆಂಬ ವ್ರತಕರ್ಮದಲ್ಲಿ ಚಾಂದ್ರಮಾಸವೇ ಮುಖ್ಯವೆಂದು ಹೇಳುವರು. ಸೌರಮಾಸ ಪ್ರಕಾರವಾಗಿ ಅಜ್ಞಾತವಾಸವು ಪೂರ್ಣವಾಗಿಲ್ಲವೆಂದು ಕೌರವರು ಹೇಳಿದರು. ಪಾಂಡವರು 'ಚಾಂದ್ರಮಾಸ ಪ್ರಕಾರವಾಗಿ ನಮ್ಮ ಅಜ್ಞಾತವಾಸವು ಪೂರ್ಣವಾಗಿದೆ' ಎಂದು ಹೇಳಿದರು. ದಿನಗಳಿಗೆ ಅಧಿಪತಿಯು ಸೂರ್ಯನು. ಪಕ್ಷಮಾಸಾಧಿಪತಿಯು ಚಂದ್ರನು. ಆದ್ದರಿಂದ ಚಾಂದ್ರಮಾಸವೇ ಇಲ್ಲ ಮುಖ್ಯವಾದುದರಿಂದ ಅಜ್ಞಾತವಾಸವು ಪೂರ್ಣವಾಗಿದೆಯೆಂದು ಜ್ಞಾನಿಗಳು ಹೇಳುವರು. ಯಜ್ಞಾದಿಗಳಲ್ಲಿ ಚಾಂದ್ರಕಾಲವನ್ನು ಸ್ವೀಕರಿಸುವರೇ ಹೊರತು ಸೂರ್ಯಕಾಲವನ್ನಲ್ಲ. ಆದ್ದರಿಂದ ಇದನ್ನು ಅಂದರೆ ತಮ್ಮ ದೇಶದ ಆಚಾರವನ್ನೇ ತಿಳಿಯದ ಮೂಢರಾದ ಕೌರವರು ಸರಿಯಾಗಿ ವಿಚಾರಮಾಡದಲೇ ರಾಜ್ಯಲೋಭದಿಂದ ಧೃತರಾಷ್ಟ್ರನ ಮಕ್ಕಳು ಭ್ರಮಿಸಿ ಅಜ್ಞಾತವಾಸವು ಪೂರ್ಣವಾಗಲಿಲ್ಲವೆಂದು ವೃಥಾ ವಾದಿಸಿದರು. ಈ ಒಂದು ಹಠದಿಂದ ದುರ್ಯೋಧನನು ಪಾಂಡವರಿಗೆ ನ್ಯಾಯಸಮ್ಮತವಾಗಿ ಕೊಡಬೇಕಾದ ರಾಜ್ಯವನ್ನು ಕೊಡಲಿಲ್ಲ.

ಮಹಾನುಭಾವರಾದ ಪಾಂಡವರು ತಾವು ಅಜ್ಞಾತವಾಸವನ್ನು ಸಕ್ರಮವಾಗಿ ಪೂರ್ಣಗೊಳಿಸಿರುವುದಾಗಿ ಘೋಷಿಸಿ ಅದನ್ನು ವಿಪ್ರರಿಂದ ಸ್ಥಾಪನೆ ಮಾಡಿಸುತ್ತಾ ಉಪಪ್ಲಾವ್ಯನಗರಕ್ಕೆ ಬಂದರು. ಪಾಂಡುನಂದನರು ಶ್ರೀವಾಸುದೇವ ಕೃಷ್ಣನಿಂದೊಡಗೂಡಿದ ಯಾದವರು, ಪಾಂಚಾಲರಾಜ ದ್ರುಪದಾದಿಗಳು, ಮತ್ಸ್ಯನರೇಶ ವಿರಾಟರಾಜಾದಿಗಳು, ಅವರ ಪತ್ನಿಯರಿಂದೊಡಗೂಡಿ ಉಪಪ್ಲಾವ್ಯದಲ್ಲಿ ಕೆಲದಿನಗಳವರೆಗೆ ಶ್ರೀಕೃಷ್ಣ ಪರಮಾತ್ಮನಿಂದ ಧರ್ಮವಿಚಾರಗಳಲ್ಲಿ, ರಾಜಕೀಯ ವಿಚಾರಗಳಲ್ಲಿ ಚೆನ್ನಾಗಿ ಶಿಕ್ಷಣವನ್ನು ಪಡೆಯುತ್ತಾ ಸುಖವಾಗಿ ಕಾಲಕಳೆದರು.

*ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ 'ವಿರಾಟಪರ್ವಕಥಾ ನಿರೂಪಣ'ವೆಂಬ ಇಪ್ಪತ್ಮೂರನೆಯ ಅಧ್ಯಾಯದ ಕನ್ನಡಾನುವಾದ ಕಥಾಸಾರವು ಮುಗಿದುದು.*

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★



ಶ್ರೀ ಕೃಷ್ಣ ಸಂಧಾನ

# ಚತುರ್ವಿಂಶಾಧ್ಯಾಯಭಾವಸಂಗ್ರಹ

**ಅವತಾರಿಕೆ:-**

ಶ್ರೀಮಂತ್ರಾಲಯ ಶ್ರೀಪಾದಂಗಳವರು ಈಗ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ರಚಿಸಿದ ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯದ ಇಪ್ಪತ್ನಾಲ್ಕನೆಯ ಅಧ್ಯಾಯದ ಭಾವವನ್ನು "ಯತ್ಸಂಮತ್ಯಾ" ಎಂಬ ಪದ್ಯದಿಂದ ಸಂಗ್ರಹಿಸುತ್ತಾರೆ.

**ಯತ್ಸಂಮತ್ಯಾ ಪೃಷತತನುಜಪ್ರೇಷಿತಬ್ರಾಹ್ಮಣೋಕ್ತ್ಯಾ**
**ರಾಜ್ಯಂ ನಾದಾದನುಜಜನಿತಶ್ಚಾಂಬಿಕೇಯೋಽನುಜಸ್ಯ ।**
**ಯತ್ಸಾಹಾಯ್ಯಂ ವ್ಯಧಿತ ನಗರೀಂ ಕೌರವಾಣಾಮವಾಪ್ತಃ**
**ಸ್ವೋಕ್ತೇ ಕೃಷ್ಣಸ್ತದನಭಿಮತೇಽವಾಪ್ತಪಾರ್ಥಃ ಸ ನೋಽವ್ಯಾತ್ ॥ 24 ॥**

**ಅನ್ವಯಾರ್ಥ :- ಯತ್ಸಂಮತ್ಯಾ** = ಯಾವ ಶ್ರೀಕೃಷ್ಣನ ಒಪ್ಪಿಗೆಯಿಂದ, **ಪೃಷತತನುಜಪ್ರೇಷಿತಬ್ರಾಹ್ಮಣೋಕ್ತ್ಯಾ - ಪೃಷತತನುಜ** = ದ್ರುಪದರಾಜನಿಂದ , **ಪ್ರೇಷಿತ** = ಕಳುಹಿಸಲ್ಪಟ್ಟ, **ಬ್ರಾಹ್ಮಣೋಕ್ತ್ಯಾ** = ಪುರೋಹಿತರ (ಧೌಮ್ಯಾಚಾರ್ಯರ) ಮಾತಿನಿಂದ, **ಯಃ** = ಯಾವ, **ಆಂಬಿಕೇಯಃ** = ಅಂಬಿಕೆಯ ಮಗನಾದ ಧೃತರಾಷ್ಟ್ರನು, **ಅನುಜಜನಿತಃ** = ಸಹೋದರನಾದ ಪಾಂಡುರಾಜನ ಮಗನಾದ ಯುಧಿಷ್ಠಿರನಿಗೆ, **ರಾಜ್ಯಂ** = ರಾಜ್ಯವನ್ನು, **ನಾದಾತ್** = ಕೊಡಲಿಲ್ಲ. **ಯಃ** = ಯಾವ ಕೃಷ್ಣನು, **ಕೌರವಾಣಾಂ** = ಕೌರವರ, **ನಗರೀಂ** = ಪಟ್ಟಣವಾದ ಹಸ್ತಿನಾಪುರವನ್ನು, **ಅವಾಪ್ತಃ** = ಹೊಂದಿದವನಾಗಿ, **ಯತ್ಸಾಹಾಯ್ಯಂ** = ಪಾಂಡವರಿಗೆ ರಾಜ್ಯಕೊಡಿಸುವ ವಿಷಯದಲ್ಲಿ ಸಹಾಯವನ್ನು, **ವ್ಯಧಿತ** = ಮಾಡಿದನೋ, **ಸ್ವೋಕ್ತೇ** = ತನ್ನ ವಚನವು, **ತದನಭಿಮತೇ ಸತಿ** = ದುರ್ಯೋಧನ-ಧೃತರಾಷ್ಟ್ರಾದಿಗಳಿಗೆ ಒಪ್ಪಿಗೆಯಾಗದಿದ್ದುದರಿಂದ, **ಅವಾಪ್ತಪಾರ್ಥಃ** = ಮತ್ತೆ ಪಾಂಡವರ ಬಳಿಗೆ ಬಂದು ಸೇರಿದ, **ಸಃ** = ಆ ಶ್ರೀಕೃಷ್ಣಪರಮಾತ್ಮನು, **ನಃ** = ನಮ್ಮನ್ನು, **ಅವ್ಯಾತ್** = ಕಾಪಾಡಲಿ.

**ತಾತ್ಪರ್ಯ:-** ಶ್ರೀಕೃಷ್ಣಪರಮಾತ್ಮನ ಒಪ್ಪಿಗೆಯಂತೆ ದ್ರುಪದರಾಜನು ಧೃತರಾಷ್ಟ್ರನಿಗೆ, ಪುರೋಹಿತರಾದ ಧೌಮ್ಯಾಚಾರ್ಯರ ಮೂಲಕವಾಗಿ ಪಾಂಡುನಂದನರಿಗೆ ರಾಜ್ಯವನ್ನು ಕೊಟ್ಟು ಅವರೊಡನೆ ಮೈತ್ರಿಯಿಂದಿರಬೇಕೆಂದು ಹೇಳಿ ಕಳಿಸಿದನು. ಆದರೆ ಅಂಬಿಕೆಯ ಸುತನಾದ ಧೃತರಾಷ್ಟ್ರನು ತನ್ನ ತಮ್ಮನ ಮಗನಾದ ಧರ್ಮರಾಜನಿಗೆ (ಅಂದರೆ ಪಾಂಡವರಿಗೆ) ರಾಜ್ಯವನ್ನು ಕೊಡಲಿಲ್ಲ. ಅಂದರೆ ರಾಜ್ಯವನ್ನು ಕೊಡಲು ಒಪ್ಪಲಿಲ್ಲ. ಆದ್ದರಿಂದ ಪಾಂಡವರಿಗೆ ಸಹಾಯ ಮಾಡಲು ಸ್ವತಃ ದೂತನಾಗಿ ಭಗವಾನ್ ಶ್ರೀಕೃಷ್ಣನು ಹಸ್ತಿನಾವತಿಗೆ ಹೋಗಿ ರಾಜಸಭೆಯಲ್ಲಿ ಧೃತರಾಷ್ಟ್ರಾದಿಗಳಿಗೆ ಪಾಂಡವರು ತಮ್ಮ ಮಾತಿನಂತೆ ಹನ್ನೆರಡು ವರ್ಷ ಅರಣ್ಯವಾಸ, ಒಂದು ವರ್ಷ ಅಜ್ಞಾತವಾಸವನ್ನು ಪೂರೈಸಿದ್ದಾರೆ. ಆದ್ದರಿಂದ ನೀನೂ ಸಹ ಮಾತಿನಂತೆ ಅವರದಾದ ರಾಜ್ಯವನ್ನು ಅವರಿಗೆ ಒಪ್ಪಿಸಿಕೊಡು ಎಂದು ಹೇಳಿದನು. ಅದನ್ನು ಧೃತರಾಷ್ಟ್ರ, ದುರ್ಯೋಧನಾದಿಗಳು ತಿರಸ್ಕರಿಸಿದ್ದರಿಂದ ಶ್ರೀಕೃಷ್ಣನು ಪುನಃ ಅವರಿಗೆ (ಪಾಂಡವರಿಗೆ) ತಿಳಿಸಿದನು. ಇಂತಹ ಶ್ರೀಕೃಷ್ಣಪರಮಾತ್ಮನು ನಮ್ಮನ್ನು ರಕ್ಷಿಸಲಿ ಎಂದು ಭಾವ.

# ಇಪ್ಪತ್ನಾಲ್ಕನೆಯ ಅಧ್ಯಾಯದ ಕಥಾಸಂಗ್ರಹ

ಪಾಂಡವರು ಅಜ್ಞಾತವಾಸವನ್ನು ಮುಗಿಸಿ ಉಪಪ್ಲಾವ್ಯನಗರಕ್ಕೆ ಬಂದ ಮೇಲೆ ಪಾಂಚಾಲನರೇಶನಾದ ದ್ರುಪದಮಹಾರಾಜನು, ಭಗವಾನ್ ಶ್ರೀಕೃಷ್ಣಪರಮಾತ್ಮನೊಡನೆ ಮಂತ್ರಾಲೋಚನೆ ಮಾಡಿ ಶ್ರೀವಾಸುದೇವನ ಒಪ್ಪಿಗೆ-ಯಂತೆ ಪುರೋಹಿತರಾದ ಧೌಮ್ಯಾಚಾರ್ಯರ ದ್ವಾರಾ ಕುರುಪಾಂಡವರಲ್ಲಿ ಶಾಂತಿಸ್ನೇಹಗಳನ್ನೇರ್ಪಡಿಸಲು, ಧೃತರಾಷ್ಟ್ರ-ನೊಡನೆ ಮಾತನಾಡಿ ಬರಲು ಹೇಳಿ ಕಳುಹಿಸಿದನು. ಆ ಧೌಮ್ಯಾಚಾರ್ಯರು ಹಸ್ತಿನಾಪುರಕ್ಕೆ ತೆರಳಿ, ಭೀಷ್ಮ-ದ್ರೋಣಾದಿಗಳೊಡನೆ ಸಿಂಹಾಸನಾಸೀನನಾಗಿರುವ ಧೃತರಾಷ್ಟ್ರನಿಗೆ ಹೀಗೆ ಹೇಳಿದರು:-

"ಎಲೈ, ಧೃತರಾಷ್ಟ್ರಮಹಾರಾಜ! ನೀನು ಧರ್ಮನಂದನನೊಡನೆ ಸ್ನೇಹದಿಂದ ವರ್ತಿಸಬೇಕು. ಯುಧಿಷ್ಠಿರನ ವಿರೋಧವನ್ನು ಕಟ್ಟಿಕೊಳ್ಳಬೇಡ! ನಾನಿದನ್ನು ನಿನ್ನ ಹಿತಕ್ಕಾಗಿ ಹೇಳುತ್ತಿದ್ದೇನೆ. ಏಕೆ ಗೊತ್ತೆ? ಧರ್ಮಶೀಲನಾದ ಯುಧಿಷ್ಠಿರನಿಗೆ ಸಾಕ್ಷಾತ್ ಜನಾರ್ದನನೇ ಪ್ರೇರಕನಾಗಿದ್ದಾನೆ. ಇದನ್ನು ನೀನು ಗಮನಿಸಬೇಕು. ಇನ್ನು ಯುಧಿಷ್ಠಿರನ ಕಡೆ ಸಹಾಯಕರಾಗಿರುವ ಯೋಧರು ಯಾರು ಗೊತ್ತೆ? ಮಹಾಪರಾಕ್ರಮಶಾಲಿಗಳಾದ ಭೀಮಸೇನ-ಅರ್ಜುನರು ! ಜಗಜ್ಜೇತಾರನಾದ ಭೀಮಸೇನನ ಪರಾಕ್ರಮ ನಿನಗೆ ತಿಳಿದೇ ಇದೆ. ಆದರೂ ಹೇಳುತ್ತೇನೆ ಕೇಳು. ಲೋಕದಲ್ಲಿ ಮಹಾಪ್ರಚಂಡ ಬಲಶಾಲಿಗಳೆಂದು ವಿಖ್ಯಾತರಾಗಿದ್ದ ಜರಾಸಂಧ ಮೊದಲಾದವರು ಭೀಮನಿಂದ ಹತರಾದುದು ನಿನಗೆ ಅವಗತವೇ ಆಗಿದೆ. ಇನ್ನು ಜರಾಸಂಧಾದಿಗಳಂತೆ ರುದ್ರದೇವರ ವರದಿಂದ ಅವಧ್ಯರಾಗಿದ್ದ, ತೀರ್ಥಸ್ಥಳಗಳಲ್ಲಿ, ಅಂತರ್ನಿಹಿತರಾಗಿದ್ದು, ತೀರ್ಥ-ಸ್ನಾನಾದಿಗಳಿಗೆ ಬರುವವರಿಗೆ ವಿಘ್ನವನ್ನುಂಟುಮಾಡುತ್ತಿದ್ದ ಪ್ರಬಲರಾದ ಮೂರುಕೋಟಿ ರಾಕ್ಷಸಾಧಿಪತಿಗಳೆಲ್ಲರೂ ಭೀಮಸೇನನಿಂದ ಸಂಹೃತರಾದರು! ಅಣ್ಣತಮ್ಮಂದಿರು, ಬ್ರಾಹ್ಮಣರು ಮತ್ತು ಸಜ್ಜನರ ಹಿತೈಷಿಯಾದ ಭೀಮಸೇನನು ಆ ರಾಕ್ಷಸರನ್ನು ನಾಶಪಡಿಸಿದ್ದರಿಂದ ಜಗತ್ತಿನಲ್ಲಿಂದು ಸಕಲ ಮಾನವರು ಆ ತೀರ್ಥಕ್ಷೇತ್ರಗಳಿಗೆ ಹೋಗಿಬರಲು ಸಾಧ್ಯ-ವಾಯಿತೆಂಬುದನ್ನು ಸ್ಮರಿಸಿಕೋ.

ಇಷ್ಟೇ ಅಲ್ಲ; ಪಾರ್ವತಿಯ ವರಬಲದಿಂದ ಬೇರಾರಿಂದಲೂ ಸಂಹರಿಸಲಸದಳನಾದ ಜಟಾಸುರನು ಬ್ರಾಹ್ಮಣ-ವೇಷದಿಂದ ಪಾಂಡವರನ್ನು ವಂಚಿಸುತ್ತಿದ್ದರೂ ಈ ವಿಚಾರವರಿತಿದ್ದರೂ ಜಟಾಸುರನು ವಿಪ್ರವೇಷದಿಂದಿದ್ದುದರಿಂದ ಭೀಮಸೇನನು ಅವನನ್ನು ವಧಿಸಲಿಲ್ಲ. ಒಂದು ದಿನ ಭೀಮನು ಮೃಗಯಾವಿಹಾರಕ್ಕಾಗಿ ಹೋಗಿದ್ದಾಗ ಬ್ರಾಹ್ಮಣವೇಷದ ಆ ಜಟಾಸುರನು ಯುಧಿಷ್ಠಿರ-ನಕುಲ-ಸಹದೇವರು ಮತ್ತು ದ್ರೌಪದೀದೇವಿಯರನ್ನು ಅಪಹರಿಸಿ ಎತ್ತಿಕೊಂಡು ಓಡಿಹೋಗುತ್ತಿರುವಾಗ ಭೀಮಸೇನನ ದೃಷ್ಟಿಗೆ ಗೋಚರನಾದನು. ಕೂಡಲೇ ಆ ಪಾಪಿಯು ಪಾಂಡವರನ್ನು ಅಲ್ಲಿಯೇ ಬಿಟ್ಟು ಭೀಮನ ಮೇಲೆ ಯುದ್ಧಕ್ಕಾಗಿ ಧಾವಿಸಿ ಬಂದನು. ಆಗ ಭೀಮನು ಆ ಜಟಾಸುರನನ್ನು ಭೂಮಿಗೆ ಬೀಳಿಸಿ ಅವನ ಶಿರಸ್ಸನ್ನು ತನ್ನ ಪಾದಾಘಾತಗಳಿಂದ ಪುಡಿಪುಡಿ ಮಾಡಿದನು. ಇಂತಹ ಪ್ರಚಂಡರನ್ನೇ ಲೀಲೆಯೋ ಎಂಬಂತೆ ಸಂಹರಿಸಿದ ಭೀಮಸೇನನು ನಿನ್ನ ಪುತ್ರರನ್ನು ಸಂಹರಿಸುವನೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೇ?

ಮಹಾರಾಜ! ಇನ್ನು ಅರ್ಜುನನ ಪ್ರತಾಪವನ್ನು ಕೇಳು - ಅರ್ಜುನನು ಸ್ವರ್ಗಾಧಿಪತಿಯಾದ ಇಂದ್ರದೇವರ ಅಪೇಕ್ಷೆಯಂತೆ, ರುದ್ರದೇವರವರದಿಂದ ಅವಧ್ಯರೂ, ಮಹಾಬಲವಂತರೂ ಆದ ನಿವಾತಕವಚರೆಂಬ ರಾಕ್ಷಸಾಧಿಪತಿ-ಗಳೆಲ್ಲವರನ್ನೂ ಯುದ್ಧದಲ್ಲಿ ಸಂಹಾರ ಮಾಡಿ ಕೀರ್ತಿಗಳಿಸಿರುವ ವಿಚಾರ ನಿನಗೆ ವೇದ್ಯವೇ ಆಗಿದೆ. ಇನ್ನು ಪಾಂಡವರಿಗೆ ಮುಖ್ಯಸಹಾಯಕನಾದ ಭಗವಾನ್ ಶ್ರೀಕೃಷ್ಣನ ಅಪರಿಮಿತ ಪರಾಕ್ರಮವಂತೂ ನೀನು ತಿಳಿದೇ ಇದ್ದೀಯೆ. ಬ್ರಹ್ಮ-ರುದ್ರ-ಇಂದ್ರಾದಿ ಸಮಸ್ತ ಚೇತನಾಚೇತನ ಪ್ರಪಂಚವೂ ಯಾವ ಮಹಾನುಭಾವನ ಅಧೀನದಲ್ಲಿದೆಯೋ ಅಂಥ ಶ್ರೀಕೃಷ್ಣ ಪರಮಾತ್ಮನು ಪಾಂಡವರ ರಕ್ಷಕನಾಗಿದ್ದಾನೆ. ಆದ್ದರಿಂದ ಶ್ರೀಕೃಷ್ಣ, ಭೀಮಾರ್ಜುನರಿಂದ ರಕ್ಷಿತನಾಗಿರುವವನು ಧರ್ಮರಾಜನು.

ಅಂತಹ ಮಹನೀಯನ ರಾಜ್ಯವನ್ನು ನಿನ್ನ ಪುತ್ರರು ಕಪಟದ್ಯೂತರಿಂದ ಅಪಹರಿಸಿರುತ್ತಾರೆ. ಯುಧಿಷ್ಠಿರನ ಸ್ವಂತವಾದ ರಾಜ್ಯವನ್ನು ನೀನು ಅವನಿಗೆ ಕೊಟ್ಟು ಕುರು-ಪಾಂಡವರಲ್ಲಿ ಶಾಂತಿ ಸಮಾಧಾನಗಳು ಸ್ಥಿರವಾಗಿ ಉಳಿಯುವಂತೆ ಮಾಡು. ನಿನ್ನ ಅನುಜಪುತ್ರರು ಮತ್ತು ನಿನ್ನ ಪುತ್ರರು ಸ್ನೇಹದಿಂದಿರುವಂತೆ ಮಾಡಿ ಕೀರ್ತಿಶಾಲಿಯಾಗು'' ಎಂದು ಹೇಳಿದನು.

ಧೃತರಾಷ್ಟ್ರನು ಆ ಪುರೋಹಿತರ ಹಿತವಚನಗಳನ್ನು ಕೇಳಲಿಲ್ಲ. ಪಾಂಡವರ ರಾಜ್ಯವನ್ನು ಹಿಂದಿರುಗಿಕೊಡಲಿಲ್ಲ. ಆದರಿಂದ ನಿರಾಶರಾದ ಧೌಮ್ಯಾಚಾರ್ಯರು ಪಾಂಡವರಿದ್ದಲ್ಲಿಗೆ ಹಿಂದಿರುಗಿ ಬಂದು ಎಲ್ಲ ಸಮಾಚಾರಗಳನ್ನೂ ನಿರೂಪಿಸಿದರು. ಆಚಾರ್ಯ ಧೌಮ್ಯರಿಂದ ವಿಷಯವರಿತ ಧರ್ಮನಂದನನು ಶ್ರೀಕೃಷ್ಣ-ಯಾದವರು ದ್ವಾರಕೆಗೆ ತೆರಳಿದ್ದರಿಂದ ಅವನ ಸಹಾಯ ಬಯಸಿ ಅರ್ಜುನನನ್ನು ಕಳುಹಿಸಿದನು.

ದುರ್ಯೋಧನ ಮತ್ತು ಅರ್ಜುನರು ಯುದ್ಧ ಸಹಾಯವನ್ನು ಬೇಡಲು ಬೇರೆಬೇರೆಯಾಗಿ ದ್ವಾರಕಾಪುರಿಗೆ ಹೊರಟರು. ಮೊದಲು ದುರ್ಯೋಧನನು ದ್ವಾರಕೆಗಾಗಮಿಸಿ ಶ್ರೀಕೃಷ್ಣನ ಅರಮನೆಗೆ ಹೋದನು. ಅಲ್ಲಿ ಹಂಸತೂಲಿಕಾತಲ್ಪದ ಮೇಲೆ ಕೃಷ್ಣನು ಪವಡಿಸಿರುವುದನ್ನು ಕಂಡು 'ನಾನು ಚಕ್ರವರ್ತಿ! ಇವನ ಕಾಲ ಬಳಿ ಕೂಡಲಾರೆ' ಎಂದು ದರ್ಪದಿಂದ ಕೃಷ್ಣನ ಶಿರೋಭಾಗದಲ್ಲಿ ಆಸನದಲ್ಲಿ ಕುಳಿತನು. ದುರ್ಯೋಧನ ಅರ್ಜುನರು ಬಂದ ವಿಚಾರವನ್ನು ಮೊದಲೇ ತಿಳಿದಿದ್ದರೂ, ಕೃಷ್ಣನು ನಿದ್ರಿಸುತ್ತಿರುವವನಂತೆ ನಟಿಸಿದನು. ಆದೇವೇಳೆಗೆ ಅರ್ಜುನನೂ ಬಂದು ಶ್ರೀಕೃಷ್ಣನ ಪಾದಗಳಿಗೆ ವಂದಿಸಿ, ಭಕ್ತ್ಯುದ್ರೇಕದಿಂದ ಕೃತಾಂಜಲಿಪುಟನಾಗಿ ಪರಮಾತ್ಮನ ಪಾದಗಳ ಬಳಿ ಕುಳಿತನು.

ಶ್ರೀವಾಸುದೇವನು ಆಗ ತಾನೆ ನಿದ್ರೆಯಿಂದೆಚ್ಚತ್ತವನಂತೆ ಕಣ್ಣು ತೆರೆದು ದುರ್ಯೋಧನನು ಬಂದಿರುವುದು ಗೊತ್ತಿದ್ದರೂ ನಸುನಗುತ್ತಾ ಅರ್ಜುನನನ್ನು ನೋಡಿ "ಫಲ್ಗುಣ! ನಿನಗೆ ಸ್ವಾಗತ" ಎಂದು ಅವನನ್ನು ಸಂಭಾವಿಸಿದನು. ಆಗ ಸುಯೋಧನನು "ಕೃಷ್ಣ! ನಿನ್ನಲ್ಲಿಗೆ ಮೊದಲು ಬಂದವನು ನಾನು!" ಎಂದೆನಲು ಮುಗುಳುನಗೆ ಬೀರಿ ಅವನನ್ನು ಸ್ವಾಗತಿಸಿ ಗೌರವಿಸಿದನು. ತರುವಾಯ "ನೀವಿಬ್ಬರೂ ಇಲ್ಲಿಗಾಗಮಿಸಿದ ಕಾರಣವೇನು?" ಎಂದು ಕೃಷ್ಣ ಕೇಳಲು ದುರ್ಯೋಧನ-ಅರ್ಜುನರು "ಯುದ್ಧಕ್ಕೆ ನಿನ್ನ ಸಹಾಯಬೇಡಲು ಬಂದಿದ್ದೇವೆ" ಎಂದರು. ಆಗ ಜನಾರ್ದನನು "ಸಂತೋಷ. ನಿಮ್ಮಲ್ಲಿ ಒಬ್ಬರು ಮೊದಲು ಬಂದಿರುವಿರಿ. ನಾನು ಮೊದಲು ನೋಡಿದ್ದು ಆಮೇಲೆ ಬಂದವರನ್ನು ! ಆದ್ದರಿಂದ ನಿಮ್ಮಿಬ್ಬರಿಗೂ ಸಹಾಯಮಾಡುವುದು ಯುಕ್ತವಾಗಿದೆ. ಕೇಳಿ, ನಿರಾಯುಧನಾದ ನಾನು ಒಂದು ಕಡೆ, ಮತ್ತೊಂದು ಕಡೆ ದಶಲಕ್ಷಯಾದವ ಸೈನ್ಯ, ಮತ್ತು ಶೂರರಾದ ನನ್ನ ಪುತ್ರರು. ಈ ಎರಡರಲ್ಲಿ ನೀವೇನು ಅಪೇಕ್ಷಿಸುವಿರಿ?" ಎಂದನು. ಭಗವಾನ್ ಕೃಷ್ಣನಲ್ಲಿರುವ ಅತಿಶಯ ಭಕ್ತಿಯಿಂದ ಅರ್ಜುನನು, ನಿರಾಯುಧನಾದ ಶ್ರೀಕೃಷ್ಣನೇ ತನ್ನ ಪಕ್ಷದಲ್ಲಿರುವಂತೆ ಪ್ರಾರ್ಥಿಸಿದನು. ದುರ್ಯೋಧನನು ಅಭಕ್ತನಾದ್ದರಿಂದ ಯಾದವ ಸೈನ್ಯವನ್ನೇ ಅಪೇಕ್ಷಿಸಿದನು. ಶ್ರೀಕೃಷ್ಣನು ಪಾಂಡವರಿಗೇ ಸಹಾಯ ಮಾಡಿದರೂ, ದುರ್ಯೋಧನನು ಅಭಕ್ತನೆಂದೂ, ಅವನಿಗೆ ತನ್ನಲ್ಲಿ ಭಕ್ತಿಯಿಲ್ಲವೆಂಬುದನ್ನು ತೋರಿಕೊಡಲು, ಯದ್ಯಪಿ ತಾನು ಬ್ರಹ್ಮಾದಿಗಳಿಗಿಂತ ಸಮರ್ಥನಾದ ಈಶ್ವರನಾಗಿದ್ದರೂ, ತಾನೊಬ್ಬ ಒಂದುಕಡೆ, ಉಳಿದ ಸೈನ್ಯಸಹಿತರಾದ ಯಾದವರು ಮತ್ತೊಂದು ಕಡೆ ಎಂದು ಹೇಳಿ ಇಬ್ಬರೂ ಸಮಸಮರೆಂಬಂತೆ ತೋರಿಕೊಟ್ಟನು.

ಅನಂತರ ಕೃಷ್ಣನು ಧನಂಜಯನೊಡನೆ ಪಾಂಡವರಿದ್ದಲ್ಲಿಗೆ ಹೋದನು. ಬಲಭದ್ರನು ದುರ್ಯೋಧನನಲ್ಲಿ ವಿಶೇಷ ಅಭಿಮಾನವಿದ್ದರೂ ಕೃಷ್ಣನ ಭಯದಿಂದ ಅವನಿಗೆ ಸಹಾಯ ಮಾಡುವುದಾಗಿ ಹೇಳಲಿಲ್ಲ. ಉಪಪ್ಲಾವ್ಯದಲ್ಲಿ ಬಲರಾಮನು ಪಾಂಡವರ ಸಭೆಯಲ್ಲಿ ಸುಯೋಧನನಲ್ಲಿ ಪಕ್ಷಪಾತತೋರಿ ಮಾತನಾಡಿದ್ದರಿಂದ ಸಾತ್ಯಕಿಯು ಕೃಷ್ಣನ ಸಮಕ್ಷ ಬಲಭದ್ರನನ್ನು ನಿಂದಿಸಿದನು. ಈ ಕಾರಣದಿಂದಾಗಿ ಬಲರಾಮನು ಕೃತವರ್ಮಸಹಿತನಾಗಿ ದುರ್ಯೋಧನನ ಬಳಿಗೆ ಹೋಗಲಿಲ್ಲ. ಅಕ್ಷೋಹಿಣೀ ಸೈನ್ಯದೊಡನೆ ಯಾದವರು ಹಸ್ತಿನಾವತಿಗೆ ದುರ್ಯೋಧನನ ಪರವಾಗಿ ಕಾದಾಡಲು ಹೋದರು. ಇದರಿಂದ

ದುರ್ಯೋಧನನ ಸೈನ್ಯಬಲವು ನಾನಾದೇಶಗಳಿಂದ ಬಂದ ನೃಪತಿಗಳಿಂದ ಯುಕ್ತವಾಗಿ ಹನ್ನೊಂದು ಅಕ್ಷೋಹಿಣಿಯಾಯಿತು. ಪಾಂಡವರ ಬಲವು ಏಳು ಅಕ್ಷೋಹಿಣಿಯಾಯಿತು. ಮತ್ಸ್ಯ, ಪಾಂಚಾಲ, ಐವರು ದೇವಪಕ್ಷಪಾತಿಗಳಾದ ಕೈಕಯರು, ಧೃಷ್ಟಕೇತು, ಜರಾಸಂಧಪುತ್ರ ಸಹದೇವ, ಕಾಶಿರಾಜ, ಪುರುಜಿತ್, ಕುಂತಿಭೋಜ, ಚೇಕಿತಾನ, ಸಾತ್ಯಕೀ ಮುಂತಾದ ದೇವಪಕ್ಷಪಾತಿಗಳಾದ ವೀರರು ಪಾಂಡವರ ಸೇನೆಯಲ್ಲಿದ್ದರು.

ಅವಂತಿಯ ವಿಂದ, ಅನುವಿಂದ, ಜಯತ್ಸೇನ, ಇತರ ಕೈಕೆಯರು, ಕ್ಷೇಮಧೂರ್ತಿ, ದಂಡಧರ, ಕಲಿಂಗ, ಅಂಬಷ್ಠ, ಶ್ರುತಾಯು, ಅಚ್ಯುತಾಯು, ಬೃಹದ್ಬಲ, ಸುದಕ್ಷಿಣ, ಶ್ರುತಾಯುಧ, ಸೈಂಧವ, ಅಲಂಬಸು, ಅಲಾಯುಧ, ಅಲಂಬಲ-ಮುಂತಾದ ದೈತ್ಯರು ದುರ್ಯೋಧನನ ಪಕ್ಷಕ್ಕೆ ಹೋದರು. ದುರ್ಯೋಧನನಿಂದ ಆಹ್ವಾನಿತರಾದ ಭಗದತ್ತನೂ ದೇವತ್ವವಿದ್ದರೂ ಕೌರವರ ಪಕ್ಷಕ್ಕೆ ಹೋಗಿ ಸೇರಿದನು. ಪುತ್ರ-ಪೌತ್ರರಿಂದೊಡಗೂಡಿದ ಬಾಹ್ಲೀಕರಾಜ, ಭೀಷ್ಮಾಚಾರ್ಯರು, ದ್ರೋಣಾಚಾರ್ಯರು, ಕೃಪಾಚಾರ್ಯರು, ಅಶ್ವತ್ಥಾಮ ಮುಂತಾದವರು ಧೃತರಾಷ್ಟ್ರನ ಪ್ರೀತಿಗಾಗಿ ಅವನ ಮಕ್ಕಳಾದ ಕೌರವರ ಪಕ್ಷ ವಹಿಸಿದರು.

ಪಾಂಡ್ಯದೇಶಾಧಿಪತಿಯಾದ ವೀರಸೇನನು ಪಾಂಡವರನ್ನು ಆಶ್ರಯಿಸಿ ಅವರ ಪಕ್ಷ ಸೇರಿದನು. ಪಾಂಡವರ ಬಳಿಗೆ ಹೊರಟಿದ್ದ ಶಲ್ಯರಾಜನನ್ನು ತನ್ನ ಕಡೆ ಒಲಿಸಿಕೊಳ್ಳಲು ದುರ್ಯೋಧನನು ಮದ್ರಾಧಿಪತಿಗೆ ವಿಶೇಷ ಅತಿಥಿ ಸತ್ಕಾರ ಮಾಡಿ ಸಂತೋಷಪಡಿಸಿದಾಗ ತನಗಿಂತು ಆತಿಥ್ಯ ನೀಡಿದವರು ಪಾಂಡುನಂದನರೆಂದೇ ಭಾವಿಸಿ "ನನಗೆ ಈ ಪರಿ ರಾಜೋಪಚಾರಗಳಿಂದ ಹರ್ಷಗೊಳಿಸಿದವರ ಅಭೀಷ್ಟವನ್ನು ನೆರವೇರಿಸುತ್ತೇನೆ" ಎಂದು ಹೇಳಿದಾಗ ಮರೆಯಲ್ಲಿ ನಿಂತು ಅದನ್ನು ಆಲಿಸಿದ ದುರ್ಯೋಧನನು ಆನಂದದಿಂದ ಮುಂದೆ ಬಂದು "ಶಲ್ಯರಾಜ! ನಿನಗಾಗಿ ಈ ಆತಿಥ್ಯವನ್ನು ಏರ್ಪಡಿಸಿದವನು ನಾನು. ನೀನು ನನ್ನ ಪಕ್ಷವಹಿಸಿ ನಿನ್ನ ಮಾತನ್ನು ಸತ್ಯಮಾಡು. ಯುದ್ಧದಲ್ಲಿ ನನಗೆ ಸಹಾಯ ಮಾಡು" ಎಂದನು. ಆಗ ಶಲ್ಯನು ಆಡಿದಂತೆ ನಡೆಯುವವನೆಂದು ಕೀರ್ತಿಗಳಿಸಲು ದುರ್ಯೋಧನನ ಪಕ್ಷ ಸೇರಿದನು. ನಂತರ ಶಲ್ಯನು ಪಾಂಡವರ ಬಳಿಗೆ ಹೋಗಿ ಜರುಗಿದ ವಿಚಾರವನ್ನರುಹಿ ತಾನು ಕೌರವರ ಪರವಾಗಿ ಯುದ್ಧ ಮಾಡುವುದದಾಗಿ ತಿಳಿಸಿದನು. ಆಗ ಧರ್ಮರಾಜನು "ಮಾವ! ನೀನು ನಮಗೊಂದುಪಕಾರ ಮಾಡು. ಕರ್ಣನು ಅರ್ಜುನನೊಡನೆ ಯುದ್ಧ ಮಾಡುವಾಗ ಕರ್ಣನ ತೇಜೋಭಂಗವಾಗುವಂತೆ ಮಾಡು" ಎಂದು ಕೇಳಿಕೊಂಡನು. ಶಲ್ಯನು ನಸುನಕ್ಕು "ಆಗಲಿ, ನಿನ್ನಿಚ್ಛೆಯನ್ನು ನೆರವೇರಿಸುವೆನು" ಎಂದು ಹೇಳಿ ಪಾಂಡವರಿಂದ ಬೀಳ್ಕೊಂಡು ಕೌರವರ ಪಾಳ್ಯಕ್ಕೆ ಹೋಗಿ ಸೇರಿದನು.

ಧೃತರಾಷ್ಟ್ರ ಮಹಾರಾಜನು ಕೌರವ-ಪಾಂಡವರಲ್ಲಿ ಶಾಂತಿಗಾಗಿ ಧರ್ಮರಾಜನ ಬಳಿಗೆ ಸಂಜಯನನ್ನು ಕಳುಹಿಸಿದನು. ಸಂಜಯನು ಪಾಂಡವರ ಸಭೆಯಲ್ಲಿ ಯುದ್ಧ ಮತ್ತು ಯುದ್ಧ ಮಾಡುವುದು ಅಧರ್ಮವೆಂದು ವಾದಿಸಿದನು. ನಮ್ಮ ರಾಜ್ಯ ಕೇಳುವುದು ಧರ್ಮವಾಗಿದೆ. ಅದನ್ನು ಕೊಡದಿದ್ದರೆ ಜೀವಿಸುವುದೆಂತು ಎಂದು ನೀವು ಕೇಳಬಹುದು ದೇವರು ನೀಡಿದ್ದರಿಂದಲೇ ನೀವು ಜೀವಿಸಬಹುದಾದ್ದರಿಂದ ಅದಕ್ಕಾಗಿ ಯುದ್ಧ ಧರ್ಮವಲ್ಲ ಮುಂತಾಗಿ ವಾದಿಸಿದನು. ಅವನ ಹಟವಾದವನ್ನು ಕೇಳಿ ಭೀಮಸೇನನು 'ಯಾವುದು ಧರ್ಮ?' ಎಂದು ತಿಳಿಸಲು ಧರ್ಮದ ವ್ಯಾಖ್ಯೆಯನ್ನು ಮಾಡಿ ಸ್ಪಷ್ಟಪಡಿಸಿದನು. ದ್ರೌಪದಿಯೂ ಅದನ್ನೇ ನಿರೂಪಿಸಿದಳು. ಅವರಿಬ್ಬರು ಹೇಳಿದ್ದನ್ನೇ ಧರ್ಮನಂದನನು ಸಂಜಯನಿಗೆ ಹೇಳಿ ಅವನನ್ನು ನಿರುತ್ತರಗೊಳಿಸಿದನು. ಧರ್ಮರಾಜನು ನಿರೂಪಿಸಿದ ಧರ್ಮವು ಪ್ರಾಮಾಣಿಕವಾದುದು. ಅಂತೆಯೇ ಶ್ರೀಕೃಷ್ಣನು ಧರ್ಮರಾಜನು ಹೇಳಿದುದು ಪ್ರಾಮಾಣಿಕವೆಂದು ಸಮರ್ಥಿಸಿದನು. ಆಗ ನಿರುತ್ತರನಾದ ಸಂಜಯನು ಕೃಷ್ಣ ಮತ್ತು ಪಾಂಡವರಿಗೆ ವಂದಿಸಿ, ಧೃತರಾಷ್ಟ್ರನಲ್ಲಿಗೆ ಹೋಗಿ ಅವನನ್ನು ನಿಂದಿಸಿ ತನ್ನ ಮನೆಗೆ ತೆರಳಿದನು.

ಧೃತರಾಷ್ಟ್ರನು ಸಂಜಯನ ನಿಂದಾವಾಕ್ಯಗಳಿಂದ ನೊಂದು ಅಂದು ರಾತ್ರಿ ವಿದುರನನ್ನು ಕರೆಸಿಕೊಂಡು "ವಿದುರ! ಯಾವುದು ಧರ್ಮ?" ಎಂದು ಕೇಳಿದನು. ವಿದುರನು "ಅಣ್ಣ, ಪಾಂಡವರಿಗೆ ರಾಜ್ಯವನ್ನು ಕೊಡುವುದೇ ಧರ್ಮ" ಎಂದುಸುರಿದನು. ಮುಂದುವರೆದು "ಪಾರ್ಥರಿಗೆ ಅವರದಾದ ರಾಜ್ಯವನ್ನು ಕೊಟ್ಟು, ಅವರೊಡನೆ ಸೌಹಾರ್ದ-ದಿಂದಿರುವುದರಿಂದ ಐಹಿಕವಾಗಿ ಸುಖ-ಪುತ್ರ-ಪೌತ್ರ-ಧನಪ್ರಾಪ್ತಿಯಾಗುವುದು. ಇಲ್ಲದಿದ್ದರೆ, ನಿನ್ನ ಎಲ್ಲ ಪುತ್ರರೂ ನಾಶ ಹೊಂದುವರು ಮತ್ತು ಧರ್ಮವನ್ನು ಉಲ್ಲಂಘಿಸಿದ ಪಾಪಕ್ಕೂ ಕಾರಣವಾಗುತ್ತದೆ" ಎಂದು ವಿದುರನು ತಿಳಿಸಿದನು.

ಇಷ್ಟು ಸ್ಪಷ್ಟವಾಗಿ ಹೇಳಿದರೂ ಪುತ್ರಮೋಹಾಂಧನಾದ ಆ ಧೃತರಾಷ್ಟ್ರನು ಧರ್ಮಿಷ್ಠರಾದ ಪಾಂಡುನಂದನರಿಗೆ ರಾಜ್ಯವನ್ನು ಕೊಡಮಾಡುವ ಬಗೆಗೆ ಮನಸ್ಸು ಮಾಡದೆ, ಪಾಂಡವದ್ವೇಷದಿಂದ ಪ್ರಾಪ್ತವಾದ ಪಾಪದ ಕ್ಷಯವಾಗಲು ಶ್ರೀವಿಷ್ಣುವಿನ ಸ್ವರೂಪದ ಬಗ್ಗೆ ಪ್ರಶ್ನಿಸಿದನು. ಆಗ ವಿದುರನು ಧೃತರಾಷ್ಟ್ರನಿಗೆ ಬೋಧಿಸಲು ಸನಾತನನೆಂಬ ಋಷಿಯನ್ನು ಸ್ಮರಿಸಿದನು. ಸನಾತನ ಋಷಿಗಳಲ್ಲಿಗೆ ಬಂದು ವಿದುರನ ಪ್ರಾರ್ಥನೆಯಂತೆ ಧೃತರಾಷ್ಟ್ರನಿಗೆ ಶ್ರೀಹರಿತತ್ತ್ವಸ್ವರೂಪವನ್ನುಪದೇಶಿಸಿ, "ಕಪಟಿಗಳಿಗೆ ಎಂದಿಗೂ ಮಂಗಳಕರಗತಿಯಾಗುವುದಿಲ್ಲ" ಎಂದು ಹೇಳಿದರು. ಆಗ ಸಂಜಯನು ಬಂದು ಧರ್ಮ-ರಾಜನು ಹೇಳಿದ್ದನ್ನು ತಿಳಿಸಲು, ಧೃತರಾಷ್ಟ್ರನು ಅದನ್ನಾಲಿಸಿ ಭೀತನಾದರೂ ಸಹ ಪುತ್ರವ್ಯಾಮೋಹ ಗ್ರಹಗ್ರಸ್ತನಾಗಿ ದುರ್ಯೋಧನಾದಿಗಳ ಮಾತಿನ ಮೋಡಿಗೆ ಬಲಿಯಾಗಿ ಪಾಂಡವರಿಗೆ ರಾಜ್ಯವನ್ನು ಕೊಡದಾದನು. ಧರ್ಮರಾಜನು, "ನಮ್ಮ ದೊಡ್ಡಪ್ಪನು ನಮಗೆ ರಾಜ್ಯವನ್ನು ಕೊಡಲೊಪ್ಪದಿದ್ದರೆ, ಅದನ್ನು ತಿಳಿಸಲು ನೀನು ಮತ್ತು ವಿದುರರು ಬರಬೇಡಿ" ಎಂದು ಸಂಜಯನಿಗೆ ಹೇಳಿದ್ದನು. ಆದ ಕಾರಣವೇ ಸಂಜಯ-ವಿದುರರು 'ಧೃತರಾಷ್ಟ್ರನು ರಾಜ್ಯವನ್ನು ಕೊಡುವು-ದಿಲ್ಲವೆಂದನು' ಎಂಬುದನ್ನು ಧರ್ಮಜನಿಗೆ ತಿಳಿಸಲು ಅವನಲ್ಲಿಗೆ ಹೋಗಲಿಲ್ಲ.

ಸಂಜಯ-ವಿದುರರು ಯುಧಿಷ್ಠಿರನ ಸಮೀಪಕ್ಕೆ ಬಾರದಿದ್ದುದರಿಂದ ಧೃತರಾಷ್ಟ್ರನು ತಮಗೆ ರಾಜ್ಯವನ್ನು ಕೊಡಲೊಪ್ಪಲಿಲ್ಲವೆಂದರಿತು ಧರ್ಮರಾಜನು ಕೃಷ್ಣನ ಜೊತೆಗೆ ಮುಂದಿನ ಕರ್ತವ್ಯವೇನೆಂದು ನಿಶ್ಚಯಿಸಲು ಮಂತ್ರಾಲೋಚನೆ ಮಾಡಿದನು. ಆಗ ವಾಸುದೇವನು "ಧರ್ಮನಂದನ! ನಾನು ಹಸ್ತಿನಾಪುರಿಗೆ ತೆರಳಿ ಅಲ್ಲಿ, ಋಷಿ-ಮುನಿಗಳ ಸಮಕ್ಷಮ ಕುರುಸಭೆಯಲ್ಲಿ ದುರ್ಯೋಧನನಿಗೆ ಯುಕ್ತಾಯುಕ್ತ ವಿಚಾರಗಳನ್ನು, ಧರ್ಮಸೂಕ್ಷ್ಮಾದಿಗಳನ್ನೂ ನಿರೂಪಿಸುತ್ತೇನೆ. ನನ್ನ ಮಾತು ಕೇಳಿ ಅದಕ್ಕೆ ಸಮ್ಮತಿಸಿ ನಿಮಗೆ ರಾಜ್ಯವನ್ನು ಕೊಡಲೊಪ್ಪಿದರೆ ಸರಿ; ಇಲ್ಲದಿದ್ದರೆ ಸಹೋದರ ಸಹಿತನಾದ ಸುಯೋಧನನು ವಧಾರ್ಹನಾಗುವನು. ಜಗತ್ತೂ ವಧಾರ್ಹವಾಗುವುದು. 'ಶ್ರುತಿಸ್ಮೃತೀ ಹರೇರಾಜ್ಞೇ' ಎಂದು ಪ್ರಮಾಣ-ವಿರುವುದರಿಂದ ನನ್ನ ಆಜ್ಞೆಯನ್ನು ಮೀರಿ ನಡೆದವರು ಧರ್ಮಘಾತಕರಾಗುವರು" ಎಂದನು. ಮಾಧವನ ವಚನವಾಲಿಸಿ ವಾಯುನಂದನನಾದ ಭೀಮಸೇನನು "ಮಾಧವ! ನನ್ನ ಕಾರಣದಿಂದಾಗಿ ಕುರುಕುಲದ ನಾಶವಾಗುವುದು ಬೇಡ, ನಮ್ಮ ಕುಲರಕ್ಷಣೆಗಾಗಿ ನಾವು ದುರ್ಯೋಧನನ ಕೆಳಗೆ ಚರಿಸಿ ಬಾಳುವೆವು" ಎಂದು ಹೇಳಿದನು.[42] ಭೀಮನು ಕೌರವರನ್ನು ಸಂಹರಿಸಲು ಇಚ್ಛಿಸುತ್ತಿದ್ದರೂ ಸಹ ಲೋಕಸಂಗ್ರಹಕ್ಕಾಗಿ ಹೇಳಿದುದನ್ನು ಕೇಳಿ ಕೃಷ್ಣನು ಧಾರ್ತರಾಷ್ಟ್ರರ ಸಂಹಾರವೇ

42. ಭೀಮನು ಧರ್ಮಮಾರ್ಗದಿಂದ ಎಂದಿಗೂ ಅತ್ತಿತ್ತ ಚಲಿಸುವವನಲ್ಲ. ಲೋಕಸಂಗ್ರಹಕ್ಕಾಗಿಯೂ ಸತ್ಯವನ್ನು ಬಿಡುವವನಲ್ಲ. ದ್ವೇಷಿಯಾದ ದುರ್ಯೋಧನನೊಡನೆ ಯುದ್ಧವು ಕ್ಷತ್ರಿಯನಾದ ಭೀಮನ ಧರ್ಮ. ಹೀಗಿರಲು ಲೋಕಸಂಗ್ರಹಕ್ಕಾಗಿ ದುರ್ಯೋ-ಧನನೊಡನೆ ಯುದ್ಧಬಿಟ್ಟು ಅವನ ಕೆಳಗೆ ಆಳಾಗಿ ಬಾಳುವೆನೆಂದು ಹೇಳಬಹುದೇ ಎಂಬ ಪ್ರಶ್ನೆ ಬರುತ್ತದೆ. ಭೀಮನು ಹೇಳಿದ್ದು ಸುಳ್ಳಲ್ಲ, ಸತ್ಯವೇ ಆಗಿದೆ. ಹೇಗೆಂದರೆ ದುರ್ಯೋಧನನ ಕೆಳಗೆ - ಎಂದರೆ ದುರ್ಯೋಧನನು ಯುದ್ಧದಲ್ಲಿ ಮೃತನಾಗಿ ಕೆಲಕಾಲ ಸ್ವರ್ಗದಲ್ಲಿ ವಾಸಿಸುತ್ತಾನೆ. ಅವನಿರುವುದು ಸ್ವರ್ಗವಾದರೆ ಅದರ ಕೆಳಗಿರುವುದು ಭೂಮಿ, ನಾವು ಭೂಮಿಯಲ್ಲಿ ರಾಜ್ಯಭಾರ ಮಾಡುತ್ತಾಚರಿಸುತ್ತೇವೆ - ಎಂದು ಭೀಮನು ಸತ್ಯವನ್ನೇ ನುಡಿದಿದ್ದಾನೆ ಎಂದು ಭಾವ.

ಧರ್ಮವೆಂದು ಜಗತ್ತಿನಲ್ಲಿ ಧರ್ಮಸ್ವರೂಪವನ್ನು ಪ್ರಖ್ಯಾತಿಗೊಳಿಸಲು ಭೀಮನನ್ನು ಆಕ್ಷೇಪಿಸುವವನಂತೆ ಯುದ್ಧವೇ ನಿಮಗೆ ಧರ್ಮವೆಂದು ಪ್ರೇರಿಸಿದನು.

ಆಗ ಭೀಮಸೇನನು ತನ್ನ ಸಾಮರ್ಥ್ಯವನ್ನು ಪ್ರಕಟಿಸುವುದು ಕೃಷ್ಣನ ಅಭಿಪ್ರಾಯವೆಂದು ತಿಳಿದು ಆ ಸಭೆಯಲ್ಲಿ "ನಾನು ಸಮಸ್ತ ಕೌರವರನ್ನೂ ಸಂಹರಿಸಲು ಸಮರ್ಥನೆಂದು ತನ್ನ ಸಾಮರ್ಥ್ಯವನ್ನು ನಿರೂಪಿಸಿದನು. ಆಗ ವಾಸುದೇವನು ಯಥಾರ್ಥವಚನಗಳಿಂದ ಸಜ್ಜನರಿಗೆ ಧರ್ಮವನ್ನು ಅಂದರೆ ಸದ್ಧರ್ಮಸಾಧನವಾದ ಮಾತನ್ನು ಹೇಳಿ, ಕೌರವರ ಸಂಹಾರವು ಅನಿವಾರ್ಯವೆಂದು ಪ್ರಕಾಶಪಡಿಸಿ, ಭೀಮಸೇನನ ಅಮಿತ ಕ್ಷಮೆ, ಬಲ, ವೀರ್ಯಾದಿ ಅಸಂಖ್ಯಗುಣಗಳನ್ನು ಚೆನ್ನಾಗಿ ಪ್ರಕಾಶಗೊಳಿಸುತ್ತಾ ಭೀಮನನ್ನು ಪ್ರಶಂಸಿಸಿದನು. ಹೀಗೆ ಕೇಶವ-ವೃಕೋದರರು ಏಕಮನಸ್ಕ (ಏಕಾಭಿಪ್ರಾಯ)ರಾಗಿದ್ದರೂ, ಲೋಕಸಂವಾದಕಾರಣಕ್ಕಾಗಿ ಆಕ್ಷೇಪ-ಸಮಾಧಾನರೂಪವಾಗಿ ಆ ಸಭೆಯಲ್ಲಿ ಮಾತನಾಡಿದರು.

ಅನಂತರ ಜಗತ್ಪತಿಯಾದ ವಾಸುದೇವನು ಸಂಧಿಯನ್ನು ಅಪೇಕ್ಷಿಸುವ ಯುದ್ಧವಿಷಯಕ ಮಾತುಗಳಿಂದ, ಯುದ್ಧ ಮಾಡುವುದು ದೋಷವಲ್ಲ-ಅಧರ್ಮವಲ್ಲವೆಂದು ಸ್ಥಾಪಿಸಿ, ಅರ್ಜುನನು ಯುದ್ಧಕ್ಕೆ ಅನುಕೂಲವಾಗುವಂತೆ ಮಾಡಿದನು. ಆ ತರುವಾಯ ನಕುಲನು – ಮಾನವ ಸಹಜಬುದ್ಧಿಯಿಂದ, ಶ್ರೀಕೃಷ್ಣನು ಸರ್ವಜ್ಞನೆಂದರಿಯದಿರುವುದರಿಂದ ಕೃಷ್ಣನಿಗೆ ಲೌಕಿಕ ನೀತಿವಾಕ್ಯಗಳಿಂದ ಸಂಧಾನಕಾಲದಲ್ಲಿ ಹೇಗೆ ವ್ಯವಹರಿಸಬೇಕು, ಮಾತನಾಡಬೇಕೆಂಬುದನ್ನು ತಿಳಿಸಿದನು. ಆ ಬಳಿಕ ಸಹದೇವನು "ಶ್ರೀಕೃಷ್ಣ! ನೀನು ಯುದ್ಧವನ್ನೇ ನಿಶ್ಚಯಿಸಿಕೊಂಡು ಬಾ" ಎಂದು ತನ್ನ ಶೌರ್ಯ ಪ್ರಕಟನೆಗಾಗಿ ಹೇಳಿದನು. ಇಂತು ಎಲ್ಲರ ಅಭಿಮತವನ್ನಾಲಿಸಿ ಯುಯುಧಾನನು (ಸಾತ್ಯಕಿಯು) ಸಹದೇವನ ಮಾತನ್ನೇ ಸಮರ್ಥಿಸಿ "ಕ್ಷತ್ರಿಯರು ದಸ್ಯುಗಳನ್ನು ನಿಗ್ರಹಿಸುವುದು ಅಂದರೆ ದಸ್ಯುಸಂಹಾರವು ಅತಿ ಮುಖ್ಯ" ಮತ್ತು ಧರ್ಮ ಎಂದು ಅರುಹಿದನು. ದ್ರೌಪದಿಯು ಕೌರವರೊಡನೆ ಸಂಧಿಮಾಡಿಕೊಳ್ಳಬಾರದೆಂದು ತನ್ನ ಅಭಿಪ್ರಾಯವನ್ನು ನಿವೇದಿಸಿದಳು.

ಶ್ರೀಕೃಷ್ಣನು ಪಾಂಚಾಲಿಯ ವಚನವನ್ನಾಲಿಸಿ "ತಂಗಿ, ನಿನ್ನ ಅಭಿಪ್ರಾಯದಂತೆಯೇ ವರ್ತಿಸುವೆನು" ಎಂದು ಹೇಳಿ ಮಂದಹಾಸ ಬೀರಿ, ಸಾತ್ಯಕಿಯೊಡನೆ ರಥವನ್ನೇರಿ ಹೊರಟನು. ಅನೇಕ ಭೂಪಾಲರು, ಪಾಂಡವರು ಶ್ರೀಯದುಪತಿಯನ್ನು ಸ್ವಲ್ಪದೂರ ಅನುಸರಿಸಿ ಹೋದರು. ಕೃಷ್ಣನು "ನೀವಿನ್ನು ನಿಲ್ಲಿರಿ, ನಾನು ಹೋಗಿ ಬರುತ್ತೇನೆ" ಎಂದು ಹೇಳಿ ಅವರಿಂದ ಬೀಳ್ಕೊಂಡು ಕೌರವರಪುರಿಗೆ ತೆರಳಿದನು. ಶ್ರೀಭಾರ್ಗವರಾಮ, ಶ್ರೀವೇದವ್ಯಾಸ ಮತ್ತು ಯಾದವಕೃಷ್ಣ ಹೀಗೆ ಈ ಮೂರುರೂಪಗಳೂ ನಾರಾಯಣನ ಅವತಾರರೂಪವೇ ಆಗಿದ್ದರೂ, ಪರಶುರಾಮ-ವೇದವ್ಯಾಸರು ಮತ್ತು ಇತರ ಋಷಿಗಳೂ ಶ್ರೀಕೃಷ್ಣನನ್ನು ಹಿಂಬಾಲಿಸಿ ಹೊರಟರು. ಭಾರ್ಗವರಾಮ-ವೇದವ್ಯಾಸ-ಕೃಷ್ಣರು ಒಬ್ಬರೇ ಆಗಿದ್ದಲ್ಲಿ ಅವರೇಕೆ ಬೇರೆ ಬೇರೆ ರೂಪದಿಂದ ಹೊರಟರು? ಎಂದರೆ – ಶ್ರೀಕೃಷ್ಣನು ಹಾರ್ದವನ್ನು ಪ್ರಭುವಾದ ವಿಷ್ಣುವಿನ ವಿನಃ ಬೇರಾರೂ ತಿಳಿಯಲು ಶಕ್ತರಲ್ಲವಷ್ಟೆ? ಅಂತೆಯೇ ಶ್ರೀಕೃಷ್ಣನ ಮಾತಿನಂತೆ ಅವರೂ ಹೊರಟರೆಂದು ಭಾವ. ಶ್ರೀಕೃಷ್ಣನು ಪ್ರಯಾಣ ಮಾಡುತ್ತಿರುವಾಗ ಸಮಸ್ತ ರಾಷ್ಟ್ರವಾಸಿ ಜನರು ಅವನನ್ನು ಜಯಜಯಕಾರಗಳಿಂದ ಸತ್ಕರಿಸಿದರು. ಬ್ರಹ್ಮರುದ್ರಾದಿ ದೇವತೆಗಳು ಮಾಧವನನ್ನು ಸ್ತುತಿಸುತ್ತಾ ಕುಸುಮ ವರ್ಷ ಮಾಡುತ್ತಾ ನಮಸ್ಕರಿಸುತ್ತಿರಲು, ಅಪ್ರಮೇಯನೂ, ಸರ್ವೋತ್ತಮನೂ ಆದ ಭಗವಾನ್ ಶ್ರೀಯದುನಾಥನು ಹಸ್ತಿನಾಪುರಕ್ಕೆ ದಯಮಾಡಿಸಿದನು.

ಶ್ರೀವಾಸುದೇವನು ಆಗಮಿಸುತ್ತಿರುವ ವಿಚಾರವರಿತು ಭೀಷ್ಮ-ದ್ರೋಣಾದಿಗಳು ಧಾವಿಸಿಬಂದು ಆ ಜಗದೊಡೆಯನನ್ನು ಸ್ವಾಗತಿಸಿದರು. ನಂದನಂದನನಾದ ಗೋವಿಂದನು ಆನಂದದಿಂದ ಅವರೊಡನೆ ಹೊರಟನು. ಜಗದೇಕಸುಂದರನೂ, ಗುಣಸಾಗರನೂ ಆದ ಶ್ರೀಕೃಷ್ಣನನ್ನು ನೋಡಲು ರಾಜಬೀದಿಯ ಇಕ್ಕೆಲಗಳಲ್ಲಿ ಸಮಸ್ತ ಪೌರಜಾನಪದರು ಬಂದು ನೆರೆದು ಜಯಧ್ವನಿಗೈಯ್ಯುತ್ತಿರಲು ಆ ಜಗದಭಿರಾಮನು ಅವರೆಲ್ಲರಿಂದ ಸಂಭಾವಿತನಾಗಿ, ಅನಂತನಾದ ಆ ಶ್ರೀಹರಿಯು

ಧೃತರಾಷ್ಟ್ರನ ಅರಮನೆಗೆ ಹೋದನು. ವಿಚಿತ್ರವೀರ್ಯ ಕುಮಾರನಾದ ಧೃತರಾಷ್ಟ್ರನು ಅಲ್ಲಿ ಭೀಷ್ಮಾದಿಗಳನ್ನು ಮುಂದು ಮಾಡಿಕೊಂಡು ಅಜನಾದ ಶ್ರೀಕೃಷ್ಣನಿಗೆ ಸ್ವಾಗತಬಯಸಿ ಪೂಜಿಸಿದನು. ಆಗ ಪ್ರಭುವಾದ ಪ್ರದ್ಯುಮ್ನ ಪಿತನು ಪ್ರಕರ್ಷವಾದ ಸುವರ್ಣಸಿಂಹಪೀಠದಲ್ಲಿ ತನ್ನ ಅಮಿತ ತೇಜಸ್ಸಿನಿಂದ ಸಕಲದಿಕ್ಕುಗಳನ್ನೂ ಬೆಳಗಿಸುತ್ತಾ ಮಂಡಿಸಿದನು. ಕೃಷ್ಣನು ಯಥಾಯೋಗ್ಯವಾಗಿ ಭೀಷ್ಮಾದಿಗಳನ್ನು ಸನ್ಮಾನಿಸಿ, ದುರ್ಯೋಧನನು ತನ್ನನ್ನು ಪೂಜಿಸಲಿಚ್ಛಿಸಿದ್ದರಿಂದ ಅವನ ಪೂಜೆಯನ್ನು ಕೈಗೊಂಡರೂ ಅವನು ಪಾಂಡವದ್ವೇಷಿಯೆಂದವನ ಪೂಜೆಯನ್ನು ಸ್ವೀಕರಿಸಲೇ ಇಲ್ಲ. ಅಂತೆಯೇ ಆ ಅನಂತನು ದುರ್ಯೋಧನ-ಆತಿಥ್ಯವನ್ನು ಸ್ವೀಕರಿಸಲೊಪ್ಪದೆ, ಭೀಷ್ಮಾದಿಗಳು ತಮ್ಮ ಮನೆಗೆ ಬರಬೇಕೆಂದು ಪ್ರಾರ್ಥಿಸಿದರೂ, ಕಪಟ-ದ್ಯೂತಕಾಲದಲ್ಲಿ ಅವರು ದ್ರೌಪದಿಯನ್ನು ಉಪೇಕ್ಷಿಸಿದ ಕಾರಣಕ್ಕಾಗಿ ಅವರ ಮನೆಗೂ ಹೋಗದೆ ಆದಿದೇವನಾದ ವಾಸುದೇವನು ವಿದುರನ ಮನೆಗೆ ಹೋದನು.

ಪುರುಷೋತ್ತಮನು ತನ್ನ ಮನೆಗೆ ಬಂದುದನ್ನು ಕಂಡು ಪರಮಾನಂದಭರಿತನಾದ ವಿದುರನು ಶ್ರೀಹರಿಯನ್ನು ಸಂತಸದಿಂದ ಸ್ವಾಗತಿಸಿ ಅಂತರ್ಗೃಹದಲ್ಲಿ ಭಕ್ತಿಭರಿತನಾಗಿ ಸಂಭ್ರಮದಿಂದ ಸರ್ವೇಂದ್ರಿಯಗಳಿಂದಲೂ ಪೂಜಿಸಿ ಪರಮ ಧನ್ಯನಾದನು.

ಮಾರನೆಯ ದಿನ ಮಧುಸೂದನನು ಕುರುರಾಯರ ಸಭೆಯಲ್ಲಿ ದುರ್ಯೋಧನನಿಂದ ಸನ್ಮಾನಿತನಾಗಿ, ದಿವ್ಯವಾದ ರತ್ನಖಚಿತ ಕನಕಸಿಂಹಾಸನದಲ್ಲಿ, (ತಾನು ಶ್ರೀವಿಷ್ಣುವೆಂದು ತಿಳಿದ) ಪರಮಾರ್ಥವೇದಿಗಳಾದ ಮುನಿಗಳೊಡನೆ ಕುಳಿತನು. ರಾಜೀವ ಲೋಚನನಾದ ರುಕ್ಮಿಣೀರಮಣನು ಭೀಷ್ಮಾದಿಸಕಲರಿಂದ ಪೂಜಿತನಾಗಿ, ಕಾಲೋಚಿತರೀತ್ಯಾ ಕುಶಲ ಪ್ರಶ್ನೆಗಳನ್ನು ಮಾಡಿದನು. ನಂತರ ಕಲಿಮಲನಾಶಕನಾದ ಶ್ರೀಕಮಲನಾಭನು ತಾನು ಬಂದ ವಿಚಾರವನ್ನು ಪ್ರಸ್ತಾಪಿಸುವ ಸಮಯ ಬಂದಾಗ ಧೃತರಾಷ್ಟ್ರನನ್ನು ಕುರಿತು ಇಂತೆಂದನು:-

"ವಿಚಿತ್ರವೀರ್ಯನ ಮಗನಾದ ಎಲೈ ಧೃತರಾಷ್ಟ್ರ! ನಿನ್ನ ವಂಶದ ಅಭಿವೃದ್ಧಿಗಾಗಿ ನಾನು ಹೇಳುವ ಹಿತವಚನವನ್ನಾಲಿಸು. ನಿನ್ನ ಸತ್ಪುತ್ರನೇ ಆದ ಧರ್ಮರಾಜನಿಗೆ ಅವನದಾದ ರಾಜ್ಯವನ್ನು ಕೊಡು. ಅದರಿಂದ ಕೀರ್ತಿಯನ್ನೂ, ಧರ್ಮವನ್ನೂ ಪಡೆಯುವೆ. ಜೊತೆಗೆ ನನ್ನ ಪರಮಪ್ರಸಾದಕ್ಕೂ ಪಾತ್ರನಾಗುತ್ತೀಯೆ (ಇಲ್ಲಿ ಯುಧಿಷ್ಠಿರನು ಸತ್ಪುತ್ರನೆಂದಿದ್ದರಿಂದ ದುರ್ಯೋಧನನು ದುಷ್ಟಪುತ್ರನೆಂದು ಹೇಳಿದಂತಾಯಿತೆಂದು ತಿಳಿಯಬೇಕು). ಹೇ ರಾಜನ್, ನಾನು ಹೇಳಿದುದೇ ನಿನಗೆ ಯೋಗ್ಯವೂ ಹಿತಕರವೂ ಆಗಿದೆ. ಒಂದು ವೇಳೆ ನೀನು ರಾಜ್ಯವನ್ನು ಯುಧಿಷ್ಠಿರನಿಗೆ ಕೊಡದಿದ್ದರೆ, ಅಪಕೀರ್ತಿಗೂ ಪಾತ್ರನಾಗಿ ಧರ್ಮಹೀನನೂ ಆಗುತ್ತೀಯೆ! (ಧರ್ಮಹೀನನಾಗುವುದರಿಂದ ನನ್ನ ನಿಗ್ರಹಕ್ಕೂ ಪಾತ್ರನಾಗುತ್ತೀಯೆ ಎಂದು ಭಾವ) ಆದ್ದರಿಂದ ಪಾಂಡವರಿಗೆ ರಾಜ್ಯವನ್ನು ಕೊಡು". ಆಗ ಧೃತರಾಷ್ಟ್ರನು "ಕೃಷ್ಣ ! ನನ್ನ ಮಗನಿಗೆ ನೀನೇ ಬುದ್ಧಿಹೇಳು" ಎಂದನು. ಶ್ರೀಕೃಷ್ಣನು ದುರ್ಯೋಧನನಿಗೆ ಬಹುಪ್ರಕಾರವಾಗಿ ಉಪದೇಶಿಸಿದನು. ಆದರಿಂದ ಪಾಪಬುದ್ಧಿಯಾದ ದುರ್ಯೋಧನನ ಮೇಲೆ ಯಾವ ರೀತಿ ಪರಿಣಾಮವೂ ಆಗಲಿಲ್ಲ. ದುರ್ಯೋಧನನು ತನಗೆ ಹಿತವನ್ನು ಬಯಸಿದ ಕೃಷ್ಣನಿಗೆ ಅಹಿತ ಮಾಡಲು ತನ್ನ ಸಹೋದರರು, ಮಂತ್ರಿಗಳೊಡನೆ ಎದ್ದುಹೋಗಿ ವಾಸುದೇವನನ್ನು ಬಂಧಿಸಲು ಮನಸ್ಸು ಮಾಡಿದನು.

ದೇವದ್ವೇಷಿಗಳಾದ ಅವರೆಲ್ಲರೂ ಶ್ರೀಕೃಷ್ಣನನ್ನು ಬಂಧಿಸಲು ಮಂತ್ರಾಲೋಚನೆ ಮಾಡಿದರು. ಆದ್ದರಿಂದಲೇ ಯಾರು ಯಾರು ಭವಬಂಧಮೋಚಕನಾದ ಭಗವಂತನನ್ನು ಬಂಧಿಸಲು ಕುಮಂತ್ರಾಲೋಚನ ಮಾಡಿದರೋ ಅವರೆಲ್ಲರೂ ವಿಕರ್ಣನೂ ಸೇರಿದಂತೆ ಈ ಅಪರಾಧದ ಪರಿಣಾಮವಾಗಿ ಮುಂದೆ ಹತರಾಗಿ ಅಶುಭೇತರ(ಅಮಂಗಳ) ಗತಿಯನ್ನು ಪಡೆದರೆಂದು ತಿಳಿಯಬೇಕು. ಕರ್ಣನು ಸ್ವಾಭಾವಿಕವಾಗಿ ಸುಬುದ್ಧಿಯುಳ್ಳವನಾದರೂ, "ಸಹಸ್ರವರ್ಮ"ನೆಂಬ ಅಸುರನ ಆವೇಶಯುಕ್ತನಾದುದರಿಂದ ದುರ್ಯೋಧನನ ಪ್ರೀತಿಗಾಗಿ ಆ ಕುಮಂತ್ರಾಲೋಚನೆಯಲ್ಲಿ ಭಾಗಿಯಾದನು.

ಋಷಿಮುನಿಗಳು, ಜಮದಗ್ನಿಪುತ್ರರಾದ ಪರಶುರಾಮದೇವರು, ಅಮಿತತೇಜರಾದ ವೇದವ್ಯಾಸದೇವರು, ಶ್ರೀಕೃಷ್ಣ ಹೀಗೆ ಅವರು ಮೂರು ರೂಪದಿಂದ ಶ್ರೀವಾಸುದೇವಾತ್ಮಕರೇ ಆಗಿದ್ದರೂ, ಅವರುಗಳು ಬೇರೆ ಬೇರೆಯಾಗಿ ದುರ್ಯೋಧನನಿಗೆ ಬುದ್ಧಿಹೇಳಿ ಪಾಂಡವರಿಗೆ ರಾಜ್ಯವನ್ನು ನೀಡುವಂತೆ ಉಪದೇಶಿಸಿದರು. ಧೃತರಾಷ್ಟ್ರ, ಗಾಂಧಾರಿ, ಭೀಷ್ಮ-ದ್ರೋಣಾದಿಗಳೂ ಬಹುವಾಗಿ ಉಪದೇಶಿಸಿದರೂ ಸಹ ದುರ್ಮತಿಯಾದ ದುರ್ಯೋಧನನು ಎಲ್ಲರ ಮಾತನ್ನೂ ಧಿಕ್ಕರಿಸಿ, ಭವಬಂಧಮೋಚಕನಾದ ಮುಕುಂದನನ್ನು ಬಂಧಿಸಲು ಆಲೋಚಿಸಿದನು. ಇದರಿಂದ ವಿಪರೀತ ಬುದ್ಧಿತೋರಿದ ದುರ್ಯೋಧನನಿಗೂ ಅಂಧತಮಸ್ಸಿನಲ್ಲಿ ಶೃಂಖಲಾದಿಗಳಿಂದ ಬಂಧನ (ಅನು-ಬಂಧನ) ಸಿದ್ಧವಾದಂತಾಯಿತು.

ದುರ್ಯೋಧನಾದಿಗಳ ಕುಮಂತ್ರಾಲೋಚನೆಯನ್ನು ಸಾತ್ಯಕಿ, ಕೃತವರ್ಮರು ಕೇಳಿಸಿಕೊಂಡರು. ಸಾತ್ಯಕಿಯು ರಹಸ್ಯವಾಗಿ ಕೃತವರ್ಮವನ್ನು ಅಲ್ಲಿ ನಿಲ್ಲಿಸಿ, ಮಾಧವನ ಬಳಿಗೆ ಬಂದು ದುರ್ಯೋಧನನ ದುರಾಲೋಚನೆಯನ್ನು ತಿಳಿಸಿದನು. ಸರ್ವಜ್ಞನಾಗಿದ್ದರೂ ವಾಸುದೇವನು ಸಾತ್ಯಕಿಯ ಮುಖದಿಂದ ತನ್ನ ಬಂಧನ ವಿಚಾರವನ್ನು ತಿಳಿದು ಧೃತರಾಷ್ಟ್ರನನ್ನು ಕುರಿತು "ರಾಜನ್, ನಿನ್ನ ಪುತ್ರರು ನನ್ನನ್ನು ಬಂಧಿಸಲು ಆಲೋಚಿಸಿದ್ದಾರೆ. ಪಾಪ, ಅವರೇನು ಬಲ್ಲರು ನನ್ನ ಮಹಿಮೆಯನ್ನು! ಇಕೋ ಸರ್ವತ್ರವ್ಯಾಪ್ತನಾಗಿರುವ ನನ್ನನ್ನು ನೋಡು" ಎಂದನು. ಧೃತರಾಷ್ಟ್ರನು ದುರ್ಮಂತ್ರಿಗಳಿಂದ ಸಹಿತನಾದ ದುರ್ಯೋಧನನನ್ನು ಅಲ್ಲಿಗೆ ಕರೆಸಿದನು. ಆಗ ಪುರುಷೋತ್ತಮನಾದ ಪುಂಡರೀಕಾಕ್ಷನು ತನ್ನ ವಿಶ್ವರೂಪವನ್ನು ಅಂದರೆ ಎಲ್ಲರಲ್ಲಿಯೂ ವ್ಯಾಪ್ತನಾಗಿದ್ದರೂ, ಷಡ್ಗುಣೈಶ್ವರ್ಯ ಸಂಪನ್ನನಾಗಿರುವ ಸ್ವರೂಪವನ್ನು ತೋರಿಸಿದನು. ಶಬ್ದದೇಕ ಪ್ರಕಾರವಾದ, ತಿಳಿಯಲಸದೃಶವಾದ ರೂಪವನ್ನು ಧೃತರಾಷ್ಟ್ರನಿಗೆ ದಿವ್ಯದೃಷ್ಟಿಯನ್ನು ಕರುಣಿಸಿ ತೋರಿಸಿದನು. ಪ್ರಳಯ-ಕಾಲದಲ್ಲಿರುವ ಸೂರ್ಯನಿಗಿಂತಲೂ ಅತ್ಯಂತ ಕಾಂತಿಪುಂಜರಂಜಿತನಾದ, ಸಮಸ್ತ ಪ್ರಪಂಚವನ್ನೂ ಭರಿಸಿರುವ (ಅಂದರೆ ಶಬ್ದದೇಕಪ್ರಕಾರವಾಗಿ ನಿತ್ಯವಾದ ಜಗತ್ತನ್ನು ಧರಿಸಿರುವ) ಅಪ್ರಮೇಯ ಅಂದರೆ ತಿಳಿಯಲಸಾಧ್ಯವಾದ, ಶಾಶ್ವತವಾದ ಶ್ರೀಕೃಷ್ಣನ ಅದ್ಭುತ ಭಗವದ್ರೂಪವನ್ನು ನೋಡಿದ ಮಾತ್ರದಿಂದಲೇ ಆ ರೂಪವನ್ನು ನೋಡಲಾಗದೇ ಅಸಮರ್ಥರಾಗಿ ದುರ್ಯೋಧನಾದಿಗಳು ಕಣ್ಣುಮುಚ್ಚಿದರು. ಅನಂತರ ಕೃಷ್ಣನು ತನ್ನ ರೂಪವನ್ನು ಮರೆಮಾಚಿ ಕೃಷ್ಣರೂಪದಿಂದ ನಿಂತನು. ಆಗ ಧೃತರಾಷ್ಟ್ರನು "ದೇವ! ನನ್ನನ್ನು ಪುನಃ ಕುರುಡನನ್ನಾಗಿಯೇ ಮಾಡು" ಎಂದು ಪ್ರಾರ್ಥಿಸಲು ಅದರಂತೆ ಧೃತರಾಷ್ಟ್ರನನ್ನು ಪೂರ್ವದಂತೆ ಅಂಧನನ್ನಾಗಿ ಮಾಡಿ ಶ್ರೀವಾಸುದೇವನು ಕುಮಂತ್ರಿಗಳಿಂದ ಸಹಿತವಾದ ದುರ್ಯೋಧನನು ಮಹಾ-ಪಾಪಿಯೆಂದು ಎಲ್ಲರಿಗೂ ಪ್ರಕಾಶಪಡಿಸಿ ರಾಜಸಭೆಯಿಂದ ನಿರ್ಗಮಿಸಿದನು. ಅನಂತಶಕ್ತಿಸಂಪನ್ನನಾದ ಪುರುಷೋತ್ತಮನು ದುರ್ಯೋಧನನ ಮನಸ್ಸನ್ನು ನಿಗ್ರಹಿಸಲು ಶಕ್ತನಾಗಿದ್ದರೂ, ಅವನು ತನ್ನ ಮಾತನ್ನು ಕೇಳುವಂತೆ ಮಾಡಬಹು-ದಾಗಿದ್ದರೂ, ಹಾಗೆ ಅವನಿಗೆ ಪ್ರೇರಿಸದೇ ಅನಂತನಾದ ಆ ಅಂಬುಜಾಸನಾವಲ್ಲಭನು ದುರ್ಯೋಧನನನ್ನು ಅಂಧಂತಮಸ್ಸಿಗೆ ಕೆಡಹಿದನು.

ಇದಾದನಂತರ ಕೃಷ್ಣನು ಕುಂತಿಯ ಮನೆಗೆ ಹೋಗಿ ಧರ್ಮರಾಜನಿಗೂ ಕೌರವರಿಗೂ ನಡೆಯಲಿರುವ ಯುದ್ಧವಿಚಾರವನ್ನು ತಿಳಿಸಿ. ಸೂರ್ಯಸುತನಾದ ಕರ್ಣನನ್ನು ಕಂಡು ಅವನನ್ನು ತನ್ನರಥದಲ್ಲಿ ಕುಳ್ಳಿರಿಸಿಕೊಂಡು ಸ್ವಲ್ಪದೂರ ಹೋಗಿ ರಹಸ್ಯವಾಗಿ ಅವನಿಗೆ - "ಕರ್ಣ! ನೀನು ಕುಂತೀದೇವಿಯ ಮಗನು. ಪಾಂಡವರಿಗೆಲ್ಲಾ ಹಿರಿಯನು. ಆದ್ದರಿಂದ ನೀನು ಪಾಂಡವರ ಕಡೆಗೆ ಬಂದು ಅವರೆಲ್ಲರಿಂದ ಸೇವಿತನಾಗಿ ರಾಜ್ಯವಾಳು" ಎಂದು ಹೇಳಿದನು. ಆದರೆ ಕರ್ಣನು "ವಾಸುದೇವ! ನಾನು ಸೂತಪುತ್ರನೆಂದು ಸರ್ವರೂ ಹೀನಾಯವಾಗಿ ಕಾಣುತ್ತಿದ್ದಾಗ ನನಗೆ ಅಂಗರಾಜ್ಯಾಧಿಪತ್ಯವನ್ನು ನೀಡಿ, ನನ್ನ ಪರಮಮಿತ್ರನಾಗಿರುವ ಸುಯೋಧನನನ್ನು ಬಿಟ್ಟುಬರಲಾರೆ" ಎಂದು ಹೇಳಿದನು. ಅನಂತರ ಕರ್ಣನನ್ನು ರಥದಿಂದಿಳಿಸಿ ಕಳಿಸಿಕೊಟ್ಟು ಅಶ್ವತ್ಥಾಮನ ಬಳಿಗೆ ರಹಸ್ಯವಾಗಿ ಬಂದು ಪಾಂಡವರಲ್ಲಿ ಮಿತ್ರಭಾವದಿಂದಿರುವಂತೆ ಹೇಳಿದನು.

ಅಶ್ವತ್ಥಾಮನು "ಕೃಷ್ಣ, ನನ್ನ ಜನಕರಾದ ದ್ರೋಣಾಚಾರ್ಯರು ಜೀವಿಸಿರುವವರೆಗೆ ನಾನು ಪಾರ್ಥರೊಡನೆ ಸ್ನೇಹ-ದಿಂದಿರುತ್ತೇನೆ" ಎಂದು ಹೇಳಿದನು. ನಂತರ ವಾಸುದೇವನು ಅವನಿಂದ ಬೀಳ್ಕೊಂಡು ಹೊರಟನು.

ಕೃಷ್ಣ ಪರಮಾತ್ಮನು ಹಿಂದಿನ ದಿನ ಕುಂತಿಯ ಮನೆಗೆ ಹೋಗಿ ಅವಳಿಗೆ ಪಾಂಡವರ ಕುಶಲವಾರ್ತೆಯನ್ನು ತಿಳಿಸಿದನು. ಮರುದಿನ ಕುರುಸಭೆಯಲ್ಲಿ ವಿಶ್ವರೂಪತೋರಿಸಿ ಅಲ್ಲಿಂದ ಹೊರಟು ಕುಂತಿಯ ಮನೆಗೆ ಬಂದು ಅಲ್ಲಿ ಅವಳಿಗೆ ಕುರುಪಾಂಡವರಿಗೆ ಅನಿವಾರ್ಯವಾದ ಯುದ್ಧಸಮಾಚಾರವನ್ನರುಹಿ, ಪಾಂಡವರಿಗೆ ಏನು ಸಂದೇಶ ಕಳಿಸುವೆ? ಎಂದವಳನ್ನು ಕೇಳಿದನು. ಈ ಭಾರತ ಕಥೆಯನ್ನು ಸೂಚಿಸಲು ನಿರ್ಣಯಾಚಾರ್ಯರು ಇಲ್ಲಿ "ಪುನಃ" ಎಂದು ಹೇಳಿದ್ದಾರೆ. ಕೃಷ್ಣನು ಕರ್ಣನೊಡನೆ ಮಾತನಾಡಿದ ಹಿಂದಿನ ದಿನವೇ ಕೌರವರನ್ನು ಬಿಟ್ಟು ಪಾಂಡವರ ಬಳಿಗೆ ಹೋದನು.

ಕೃಷ್ಣನು ಕರ್ಣನನ್ನು ತನ್ನ ರಥದಲ್ಲಿ ಕೂಡಿಸಿಕೊಂಡು ಹೋಗಿ "ಕುಂತಿಯು ನಿನ್ನ ತಾಯಿ" ಎಂದು ಹೇಳಿದನು ಎಂಬಲ್ಲಿ ಕುಂತೀಪದದ ಅಧ್ಯಾಹಾರದಿಂದ ಕೆಲ ವ್ಯಾಖ್ಯಾನಗಳಲ್ಲಿ ಭಾರತವಾಕ್ಯ ವಿರೋಧವು ಕಂಡು ಬರುತ್ತದೆ. ಕೃಷ್ಣವಚನವನ್ನು ನೆರವೇರಿಸಲಿಲ್ಲ ಎಂಬಲ್ಲಿ ಸ್ವವಚನದಲ್ಲಿಯೂ ವ್ಯಾಘಾತವು ಕಂಡು ಬರುವುದು.

ಶ್ರೀಕೃಷ್ಣನು ಪಾಂಡವರಿದ್ದಲ್ಲಿಗೆ ಪ್ರಯಾಣಬೆಳೆಸಿದ ಮೇಲೆ ಗಂಗಾತೀರದಲ್ಲಿ ಕರ್ಣನು ಜಪಮಾಡುತ್ತಿರುವಾಗ ಬಂದ ಕುಂತೀದೇವಿಯನ್ನು ಕಂಡು "ದೇವಿ! ನೀನು ಇಲ್ಲಿಗೆ ಏಕೆ ಬಂದೆ?" ಎಂದು ಕೇಳಿದನು. ಕುಂತೀದೇವಿಯು "ಕುಮಾರ ಕರ್ಣ! ನೀನು ನನ್ನ ಪುತ್ರನು. ಸೂರ್ಯನಿಂದ ನಾನು ನಿನ್ನನ್ನು ಪಡೆದನು. ಆದ್ದರಿಂದ ನೀನು ನಿನ್ನ ಸಹೋದರರಾದ ಪಾಂಡವರ ಬಳಿಗೆ ಬಾ" ಎಂದು ಕೋರಿದಳು. ಆಗ ಕರ್ಣನು "ಅಮ್ಮಾ, ನಾನು ದುರ್ಯೋಧನನನ್ನು ಬಿಟ್ಟು ಬರಲಾರೆ. ಆದರೆ ಅರ್ಜುನನೊಬ್ಬನನ್ನು ಬಿಟ್ಟು ನಿನ್ನ ಉಳಿದ ಮಕ್ಕಳನ್ನು ನಾನು ಸಂಹರಿಸುವುದಿಲ್ಲ" ಎಂದು ಪ್ರತಿಜ್ಞಾಪೂರ್ವಕವಾಗಿ ಹೇಳಿ ಕುಂತೀದೇವಿಯನ್ನು ಕಳುಹಿಸಿಕೊಟ್ಟನು.

ಶ್ರೀವಾಸುದೇವನು ಹಸ್ತಿನಾವತಿಯಿಂದ ಹೊರಟ ಮೇಲೆ ಕೌರವರು ಮತ್ತು ಪಾಂಡವರು ಕುರುಕ್ಷೇತ್ರದಲ್ಲಿ ಯುದ್ಧ ಮಾಡಲು ಹೊರಟರು. ಅಲ್ಲಿ ಪಾಂಡವರು ಶ್ರೀಕೃಷ್ಣನು ಹೇಳಿದ ಜಯಪ್ರದವಾದ ಸ್ಥಳದಲ್ಲಿ ತಾವು ಮತ್ತು ಸೈನಿಕರು-ಗಳಿರಲು ಶಿಬಿರಗಳನ್ನು (ಡೇರೆಗಳಿಂದೊಡಗೂಡಿ ಶಿಬಿರಗಳನ್ನು) ಸ್ಥಾಪಿಸಿದರು. ಕೌರವರೂ ಸಹ ತಮಗೆ ಬೇಕಾದ ಕಡೆಯಲ್ಲಿ ಶಿಬಿರಗಳನ್ನು ಸ್ಥಾಪಿಸಿದರು.

*ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ 'ಉದ್ಯೋಗಪರ್ವವೆಂಬ'*
*ಇಪ್ಪತ್ನಾಲ್ಕನೆಯ ಅಧ್ಯಾಯದ ಕಥಾಸಾರವು ಮುಗಿದುದು.*

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★

## ಪಂಚವಿಂಶಾಧ್ಯಾಯಭಾವಸಂಗ್ರಹ

*ಅವತಾರಿಕೆ :-*

ಈಗ ಶ್ರೀಮಂತ್ರಾಲಯ ಶ್ರೀಪಾದಂಗಳವರು ಶ್ರೀಮದಾಚಾರ್ಯರ ಮಹಾಭಾರತ ತಾತ್ಪರ್ಯ ನಿರ್ಣಯದ ಇಪ್ಪತ್ತೈದನೆಯ ಅಧ್ಯಾಯಾರ್ಥವನ್ನು "ಸೇನೇ" ಈ ಶ್ಲೋಕದಿಂದ ಸಂಗ್ರಹಿಸುತ್ತಾರೆ.

**ಸೇನೇ ವೀಕ್ಷ್ಯ ರಣೋನ್ಮುಖೇ ಕರುಣಯಾ ಶಸ್ತ್ರೋಜ್ಝಿತಂ ಫಲ್ಗುಣಂ**
**ಸದ್ಗೀತಾಮುಪದಿಶ್ಯ ಕಾರ್ಮುಕಧರಂ ಚಕ್ರೇಽಸ್ಯ ಯಃ ಸಾರಥಿಃ ।**
**ಅನ್ಯೋನ್ಯಂ ಕುರುಪಾಂಡವೈಶ್ಯ ಪೃತನಾಂ ಯೋಽಜೀಷಯತ್ ಸ್ಯಂದನಾತ್ ।**
**ಯೋ ಭೀಷ್ಮಂ ನಿರಪಾತಯತ್ ಸುತಶರೈಃ ಪಾಂಡೋಸ್ತಮೀಡೇಽಚ್ಯುತಮ್ ।।25।।**

***ಅನ್ವಯಾರ್ಥ*** - **ಸೇನೇ** = ಕುರುಪಾಂಡವ ಸೈನಿಕರು, **ಅನ್ಯೋನ್ಯಂ** = ಪರಸ್ಪರ, **ರಣೋನ್ಮುಖೇ ಸತಿ** = ಯುದ್ಧಕ್ಕೆ ಸಿದ್ಧವಾಗುತ್ತಿರುವುದನ್ನು, **ವೀಕ್ಷ್ಯ** = ನೋಡಿ, **ಕರುಣಯಾ** = ಕಾರುಣ್ಯದಿಂದ, **ಶಸ್ತ್ರೋಜ್ಝಿತಂ** = ಶಸ್ತ್ರವನ್ನು ಪರಿತ್ಯಜಿಸಿದ, **ತಂ** = ಆ, **ಫಲ್ಗುಣಂ** = ಅರ್ಜುನನನ್ನು, **ಯಃ** = ಯಾರು, **ಸದ್ಗೀತಾಮುಪದಿಶ್ಯ** = ಸಮೀಚೀನವಾದ ಗೀತೆಯನ್ನು (ಶ್ರೇಷ್ಠವಾದ ಗೀತಾಶಾಸ್ತ್ರವನ್ನು), **ಉಪದಿಶ್ಯ** = ಉಪದೇಶಮಾಡಿ, **ಕಾರ್ಮುಕಧರಂ** = ಪುನಃ ಧನುರ್ಧಾರಿಯಾಗುವಂತೆ, **ಚಕ್ರೇ** = ಮಾಡಿದನೋ, **ಅಸ್ಯ** = ಅರ್ಜುನನ, **ಸಾರಥಿಃ** = ರಥದ ಸಾರಥಿಯಾದ ಶ್ರೀಕೃಷ್ಣನು, **ಕುರುಪಾಂಡವೈಃ** = ಕೌರವರು ಮತ್ತು ಪಾಂಡವರಿಂದಲೂ, **ಅನ್ಯೋನ್ಯಂ** - ಪರಸ್ಪರವಾಗಿ, **ಪೃತನಾಂ** = ಸೈನ್ಯವನ್ನು, **ಅಜೀಷಯತ್** = ಗೆಲ್ಲುವಂತೆ ಮಾಡಿದನೋ, **ಯತಃ** = ಯಾವ, **ಸ್ಯಂದನಾತ್** = ರಥದಿಂದ, **ಪಾಂಡೋಃ** = ಪಾಂಡು ರಾಜನ, **ಸುತಶರೈಃ** = ಪುತ್ರನಾದ ಅರ್ಜುನನ ಬಾಣಗಳಿಂದ, **ಭೀಷ್ಮಂ** = ಪಿತಾಮಹನಾದ ಭೀಷ್ಮನನ್ನು, **ನಿರಪಾತಯತ್** = ಬೀಳಿಸಿದನೋ, **ತಂ** = ಅಂತಹ, **ಅಚ್ಯುತಂ** = ಚ್ಯುತಿರಹಿತನಾದ ಭಗವಾನ್ ಶ್ರೀಕೃಷ್ಣನನ್ನು, **ಈಡೇ** = ನಮಸ್ಕರಿಸುತ್ತೇನೆ (ಸ್ತುತಿಸುತ್ತೇನೆ).

***ತಾತ್ಪರ್ಯ*** :- ಕುರುಕ್ಷೇತ್ರದಲ್ಲಿ ಕೌರವ-ಪಾಂಡವರ ಸೈನ್ಯವು ಮಿಳಿತವಾಗಿದೆ. ಉಭಯ ಸೈನ್ಯದವರೂ ಪರಸ್ಪರ ಯುದ್ಧ ಮಾಡಲು ಸನ್ನದ್ಧರಾಗಿದ್ದಾರೆ. ಆಗ ತಾನೆ ರಣರಂಗವನ್ನು ಪ್ರವೇಶಿಸಿದ ಮಧ್ಯಮಪಾಂಡವ ಅರ್ಜುನನು ರಥದಲ್ಲಿ ಕುಳಿತಂತೆಯೇ ಆ ದೃಶ್ಯವನ್ನು ನೋಡಿ, ಬಂಧು-ಬಾಂಧವರು ಪರಸ್ಪರ ಯುದ್ಧಮಾಡಿ ಹತರಾಗುವರಲ್ಲಾ ಎಂಬ ಕಾರುಣ್ಯ-ದಿಂದ ವಿಷಣ್ಣಮನಸ್ಕನಾಗಿ "ನಾನು, ಯುದ್ಧಮಾಡುವುದಿಲ್ಲ"ವೆಂದು ಹೇಳಿ ಧನುರ್ಬಾಣಗಳನ್ನು ತ್ಯಜಿಸಿ ಚಿಂತಾಕ್ರಾಂತನಾಗಿ ಕುಳಿತನು. ಆಗ ಶ್ರೀಕೃಷ್ಣ ಪರಮಾತ್ಮನು ಧನಂಜಯನಿಗೆ "ಗೀತೋಪದೇಶ" ಮಾಡಿ "ಅರ್ಜುನ ! ಕ್ಷತ್ರಿಯರಿಗೆ ಯುದ್ಧವು ಸ್ವಧರ್ಮವಾಗಿದೆ. ಅದನ್ನು ನಿರ್ವಹಿಸದಿದ್ದಲ್ಲಿ ಅನರ್ಥಕ್ಕೆ ಭಾಗಿಯಾಗಬೇಕಾಗುತ್ತದೆ. ಈ ಯುದ್ಧ, ಕೊಲ್ಲುವುದು ಇವೆಲ್ಲವೂ ನನ್ನಿಂದಲೇ ಜರುಗುವುದು. ಕೊಲ್ಲಲು ನೀನಾರು? ಎಲ್ಲಕ್ಕೂ ನಾನೇ ಕಾರಣನು. ನಿನ್ನ ಸ್ವಧರ್ಮವಾದ ಯುದ್ಧರೂಪ ಕರ್ತವ್ಯವನ್ನು ನೆರವೇರಿಸು"- ಮುಂತಾಗಿ ಉಪದೇಶಿಸಿ ಪಾರ್ಥನಿಗೆ ತನ್ನ ವಿಶ್ವರೂಪವನ್ನು ತೋರಿಸಿ "ಕರಿಷ್ಯೇ ವಚನಂ ತವ"-"ಕೃಷ್ಣ ! ನಿನ್ನ ಮಾತಿನಂತೆ ವರ್ತಿಸುತ್ತೇನೆ. ಯುದ್ಧಮಾಡುತ್ತೇನೆ" ಎಂದು ಹೇಳಿ ಮತ್ತೆ ಧನುರ್ಬಾಣಗಳನ್ನು ಧರಿಸಿ-ದನು. ಇಂತು ಮಾಡಿದ ಅರ್ಜುನನ ಸಾರಥಿಯಾದ ಭಗವಾನ್ ಶ್ರೀಕೃಷ್ಣನು ಕುರುಪಾಂಡವರ ಯುದ್ಧದಲ್ಲಿ ಪಾಂಡವರು ಗೆಲ್ಲುವಂತೆ ಯಾವನು ಮಾಡಿದನೋ, ಪುನಃ ಯುದ್ಧದಲ್ಲಿ ಪಾಂಡುಕುಮಾರನಾದ ಅರ್ಜುನನ ಬಾಣಗಳಿಂದ ರಥದಿಂದ ಭೀಷ್ಮಾಚಾರ್ಯರನ್ನು ಕೆಳಗೆ ಕೆಡಹಿಸಿದನೋ, ಅಂತಹ ಚ್ಯುತಿರಹಿತನಾದ ಶ್ರೀಕೃಷ್ಣನನ್ನು ಸ್ತುತಿಸುತ್ತೇನೆ - ಎಂದು ಭಾವ.

# ಇಪ್ಪತ್ತೈದನೆಯ ಅಧ್ಯಾಯದ ಕಥಾಸಂಗ್ರಹ

ಪಿತಾಮಹ ಭೀಷ್ಮರು ಮತ್ತು ಭೀಮಸೇನದೇವರ ನೇತೃತ್ವದಲ್ಲಿ ಬೇರೆ ಬೇರೆ ದೇಶಗಳಿಂದ ಬಂದು ಯುದ್ಧಕ್ಕಾಗಿ ಸೇರಿರುವ ಮತ್ತು ಬಲ-ಶಿಕ್ಷಣಾದಿಗಳಲ್ಲಿ ಸಮುದ್ರದಂತಿರುವ ಕುರು-ಪಾಂಡವವೀರರನ್ನು, ಬಾಂಧವರನ್ನು ಕಂಡು ಅರ್ಜುನನು ಎರಡು ಸೇನೆಗಳ ಮಧ್ಯದಲ್ಲಿ ರಥವನ್ನು ನಿಲ್ಲಿಸುವಂತೆ ಶ್ರೀಕೃಷ್ಣನನ್ನು ಪ್ರಾರ್ಥಿಸಿದನು. ಭಗವಾನ್ ಶ್ರೀವಾಸುದೇವನು ಉಭಯ ಸೈನ್ಯಗಳ ಮಧ್ಯೆ ರಥವನ್ನು ನಿಲ್ಲಿಸಿದನು. ಆಗ ಅರ್ಜುನನು ಅಲ್ಲಿ ನೆರೆದಿರುವ ಬಂಧು-ಬಾಂಧವರನ್ನು ನೋಡಿ ಅವರೊಡನೆ ಯುದ್ಧ ಮಾಡಿ ಸಂಹರಿಸಿದರೆ ಪಾಪ ಬರುವುದೆಂಬ ಸಂಶಯದಿಂದ ರಥದಲ್ಲಿ ಬಿಲ್ಲುಗಳನ್ನು ತ್ಯಜಿಸಿ ಯುದ್ಧ ಮಾಡುವುದಿಲ್ಲವೆಂದು ಹೇಳಿ ಕುಳಿತನು. ಅದನ್ನು ಕಂಡು ಮಾಧವನು ಹೇಳಿದನು - "ಅರ್ಜುನ! ಧರ್ಮಜ್ಞಾನಗಳ ರಕ್ಷಣೆಗೆ ಕಾರಣವಾಗಿರುದರಿಂದ ದುಷ್ಟ ಸಂಹಾರವು ಕ್ಷತ್ರಿಯರಿಗೆ ಅಸಾಧಾರಣ ಧರ್ಮ-ವಾಗಿದೆ. ಅಂದರೆ ಕ್ಷತ್ರಿಯರಿಗೆ ಯುದ್ಧವು ಸ್ವಧರ್ಮವು. ತನ್ನ ಧರ್ಮವನ್ನು ಪರಿಪಾಲಿಸುವುದು ಅತ್ಯವಶ್ಯವು. ದುಷ್ಟರನ್ನು ಸಂಹರಿಸುವುದು ಕ್ಷತ್ರಿಯರಿಗೆ ಸ್ವಧರ್ಮವಾದುದರಿಂದ ಅದನ್ನು ನೆರವೇರಿಸದಿದ್ದರೆ ಅಂಥವನು ಲೋಕದಲ್ಲಿ ನಿಂದಿತನಾಗಿ ನಿಶ್ಚಯವಾಗಿ ಅಧೋಗತಿಯನ್ನು ಹೊಂದಬೇಕಾಗುವುದು" ಎಂದು ಹೇಳಿದನು.

ಅದು ಸರಿ, ವಿಷ್ಣುಪೂಜೆಯು ಸ್ವಧರ್ಮವಾದುದರಿಂದ ದುಷ್ಟ ಮರ್ದನವು ಅದೆಂತು ಸ್ವಧರ್ಮವಾಗುವುದು? ಎಂದರೆ ಶ್ರೀಕೃಷ್ಣ ಹೇಳುತ್ತಾನೆ -

ವಿಷ್ಣುವಿನಿಂದಲೇ ಸಕಲಭೂತಗಳ ಪ್ರಾಣಗಳ ಪ್ರವೃತ್ತಿಯು (ವ್ಯಾಪಾರವು) ಉಂಟಾಗುವುದು. ಈ ಸಮಸ್ತ ಜಗತ್ತೂ ಪರಮಾತ್ಮನಿಂದ ವ್ಯಾಪ್ತವಾಗಿದೆ. ಅಂತೆಯೇ ಭೂತ-ಪ್ರಾಣಿಗಳಿಗೆ ಪ್ರವೃತ್ತಿಯುಂಟಾಗುವುದು. ಮಾನವನು ತನ್ನ ಸ್ವಧರ್ಮ-ದಿಂದ ಅಂದರೆ ತನಗೆ ವಿಹಿತವಾದ ಸ್ವವರ್ಣಾಶ್ರಮೋಚಿತ ಕರ್ಮದಿಂದ ಸಿದ್ಧಿಯನ್ನು - ಮೋಕ್ಷವನ್ನು ಪಡೆಯುವನು. ಅಂದರೆ ಸ್ವವರ್ಣಾಶ್ರಮೋಚಿತ ಕರ್ಮಾಚರಣೆಯು ವಿಷ್ಣುಪೂಜೆಯೆಂದು ತಿಳಿಯಬೇಕು.

ಬಂಧು-ಬಾಂಧವರ ಸಂಹಾರಕಾರಣೀಭೂತವಾದ ಇಚ್ಛೆಯಿಂದ ಶೋಕಿಸಬಾರದೆಂದು ಆಶಂಕಿಸಿ ಶ್ರೀಕೃಷ್ಣನು ಹೇಳುತ್ತಾನೆ -

ಅರ್ಜುನ ! ಯುದ್ಧಮಾಡಿ ಶತ್ರುಗಳನ್ನು ಸಂಹರಿಸಿದರೆ ಅವರ ದೇಹನಾಶವಾಗುವುದೆಂದು ನೀನು ಶೋಕಿಸುವೆಯಾ ? ಅಥವಾ ಚೇತನ(ಜೀವ) ನಾಶವಾಗುವುದೆಂದು ದುಃಖಿಸುವೆಯಾ? ಎರಡು ವಿಧದಿಂದಲೂ ಅದು ಯುಕ್ತವಲ್ಲ. ಯುದ್ಧಾದಿ ಕಾರಣಗಳಿಲ್ಲದಿದ್ದರೂ ನಿಶ್ಚಯವಾಗಿ ಆ ದೇಹ ನಾಶವಾಗಿಯೇ ತೀರುವುದು. ಇನ್ನು ಚೇತನ (ಜೀವನು) ನಿತ್ಯನಾದುದರಿಂದ ಅವನಿಗೆ ನಾಶವಿಲ್ಲ. ಆದ್ದರಿಂದ ದುಃಖಿಸಬಾರದು. ಯುದ್ಧ ಮಾಡಿದರೆ ಬಂಧುಗಳ ದೇಹ ನಾಶ. ಯುದ್ಧ ಮಾಡದಿದ್ದರೆ ದೇಹನಾಶವಾಗುವುದಿಲ್ಲವೆಂದರೆ ದೇಹನಾಶಕ್ಕೆ ಯುದ್ಧಾದಿ ನಿಮಿತ್ತಕತ್ವವಿಲ್ಲದಿರುವುದು ಹೇಗೆ? ಎಂದರೆ, ಸೃಷ್ಟಿ, ಸ್ಥಿತಿ, ಪ್ರಳಯ, ಅಜ್ಞಾನ, ಬಂಧ (ಸಂಸಾರಬಂಧ), ಮೋಕ್ಷ ಅಂದರೆ ಸಂಸಾರಮೋಕ್ಷ ಗಮನಾಗಮನಾದಿಚೇಷ್ಟೆ ಇದೆಲ್ಲವನ್ನು ಎಲ್ಲರಿಗೂ ಕೊಡುವವನು ಶ್ರೀಹರಿಯು (ನಾನು). ಜ್ಞಾನ ನಿಯಮನಗಳನ್ನು ಚತುರಾನನ ಬ್ರಹ್ಮರುದ್ರದೇವಾದಿ ಕ್ಷರ ಪುರುಷರಿಗೂ ಅಕ್ಷರಶಬ್ದವಾಚ್ಯಳಾದ ಲಕ್ಷ್ಮೀದೇವಿಗೂ ಕೂಡ ನನ್ನಿದಂಲೇ ಉಂಟಾಗುವುದು. ನನ್ನನ್ನು ಬಿಟ್ಟು ಇವುಗಳಿಗೆ ಬೇರೊಬ್ಬರಾರೂ ಕಾರಣರಿಲ್ಲ. ಅಕ್ಷರ ಪ್ರಕೃತಿ ಎನಿಸಿದ ಲಕ್ಷ್ಮೀದೇವಿಗೆ ಸೃಷ್ಟಿ ಮುಂತಾದವುಗಳಿಲ್ಲ. ಸ್ಥಿತಿ, ಪ್ರವೃತ್ತಿ, ಜ್ಞಾನ, ನಿಯಮನಾದಿಗಳನ್ನು ಉಂಟುಮಾಡುವವನು ನಾನೇ ಆಗಿದ್ದೇನೆ. ಅಪ್ರಾಕೃತ ದೇಹವಿರುವುದರಿಂದ ಸೃಷ್ಟಿ-ನಾಶಾದಿಗಳಿಲ್ಲ. ಸರ್ವಜ್ಞನಾದುದರಿಂದ ಅಜ್ಞಾನ-ಬಂಧಗಳೂ ಇಲ್ಲ. ನಿತ್ಯಮುಕ್ತಳಾದುದರಿಂದ ಮೋಕ್ಷವು ವಿವಕ್ಷಿತವಲ್ಲ.

ಹಾಗಾದರೆ ನಿನಗೂ ಬೇರೊಬ್ಬನೇಕಿಲ್ಲ ಎಂದರೆ ಹೇಳುತ್ತಾನೆ - ನಾನು ಸರ್ವಸ್ವತಂತ್ರನಾದುದರಿಂದಲೂ, ಗುಣ-ಪರಿಪೂರ್ಣನಾದುದರಿಂದಲೂ ನನಗೆ ಸಮರು, ಅಧಿಕರು ಇಲ್ಲದಿರುವುದರಿಂದಲೂ ಎಲ್ಲವೂ ನನ್ನ ವಶದಲ್ಲಿರುವುದ-ರಿಂದಲೂ ನನಗೆ ಬೇರೊಬ್ಬರಾರಿಂದಲೂ ಸ್ವರ್ಗಾದಿಗಳಿಲ್ಲ. ಸಂಹಾರ ಸೃಷ್ಟ್ಯಾದಿಗಳು ನನ್ನ ಅಧೀನವೆಂದರಿತು ಯುದ್ಧದಿಂದ ಪರಾವೃತ್ತನಾಗುವ ವಿಷಯದಲ್ಲಿ ನಿನಗೆ ಸ್ವಾತಂತ್ರ್ಯವಿಲ್ಲದಿರುವುದರಿಂದ ಹೇ ಅರ್ಜುನ ! ಯುದ್ಧವನ್ನು ಮಾಡು. ಯುದ್ಧ ಮಾಡುವವನು ಶ್ರೀಹರಿಯೆಂದು ಸ್ಮರಿಸು. ಸಂಹಾರವು ನನ್ನ (ಶ್ರೀಹರಿಯ) ಪೂಜೆಯೆಂದಾದರೂ ಸ್ಮರಿಸು.

"ಸ್ವ ಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ" ಎಂದೂ ನಿರೂಪಿಸಿದ್ದನ್ನು ವಿವರಿಸುವನು. ನಾನೇ ಪರಾತ್ಪರನೆಂಬ ಬುದ್ಧಿಯಿಂದ ಯಾರು ತಾವು ಮಾಡುವ ಎಲ್ಲ ಕರ್ಮಗಳನ್ನೂ, ಕರ್ಮಫಲಗಳನ್ನು ನನ್ನ ಪೂಜಾರ್ಥ-ವೆಂದರಿತು ನನಗೆ ಸಮರ್ಪಿಸಿ ನನ್ನಲ್ಲಿರುವ ಮತ್ತೊಬ್ಬರಲ್ಲಿ ಇಲ್ಲದಿರುವ ಭಕ್ತಿಯೋಗದಿಂದ ಇಲ್ಲವೇ ಇತರ ವಿಷಯರಹಿತ ಮನೋಯೋಗದಿಂದಲೇ ನನ್ನನ್ನು ಧ್ಯಾನಿಸಿ ಉಪಾಸನೆ ಮಾಡುವರು.

ಅರ್ಜುನ, ನನ್ನಲ್ಲೇ ಮನಸ್ಸಿಟ್ಟಿರುವ ನನ್ನ ಭಕ್ತರನ್ನು ನಾನು ಶೀಘ್ರವಾಗಿ ಮೃತ್ಯುರೂಪವಾದ ಸಂಸಾರ ಸಮುದ್ರದಿಂದ ದಾಟಿಸುತ್ತೇನೆ. ಅದೃಶ್ಯಸ್ವರೂಪಿಯಾದ ನಾನು ಜಗತ್ತನ್ನು ನಿಯಮಿಸುವುದಕ್ಕಾಗಿ ಈ ಎಲ್ಲಾ ಜಗತ್ತಿನಲ್ಲಿಯೂ ವ್ಯಾಪ್ತನಾಗಿದ್ದೇನೆ, ಅಂದರೆ ಆಧಾರಭೂತನಾಗಿದ್ದೇನೆ. ಎಲ್ಲ ಭೂತಗಳೂ ನನ್ನಲ್ಲಿಯೇ ಇರುವವು, ಅಂದರೆ ಅದಕ್ಕೆ ನಾನೇ ಆಧಾರಭೂತನು. ಅವು ನನಗೆ ಆಧಾರವಾಗಿಲ್ಲ ಎಂದು ತಿಳಿ. ಅವುಗಳಿಸಗಿದ ಪುಣ್ಯ-ಪಾಪಾದಿ ಲೇಪವೂ ನನಗಿಲ್ಲ. ಹೇಗೆ ಅಂಗಚೇಷ್ಟಾದಿಗಳಿಗೆ ಒಳಗಿರುವ ಪುರುಷನೇ (ಆತ್ಮನೇ) ಆಧಾರನೋ, ಹೇಗೆ ಕೃತ್ರಿಮ ಗಜತುರಗಾದಿಗಳಿಗೆ ಅದೃಶ್ಯನಾಗಿ ಒಳಗಿರುವ ಪುರುಷನೇ ಆಧಾರನಾಗಿರುವನೋ, ಹೇಗೆ, ದೇಹದಲ್ಲಿರುವ ಜೀವನೇ ಜಡಶರೀರಕ್ಕೆ ಪ್ರವರ್ತಕನೋ ಹಾಗೆಯೇ ಅಂತಃಸ್ಥಿತನಾದ ನಾನೇ ಅವರಿಗೆ ಆಧಾರನಾಗಿದ್ದೇನೆ. ಅವರು ನನಗೆ ಆಧಾರರಲ್ಲ ಎಂದು ತಿಳಿ.

ಸೃಷ್ಟ್ಯಾದಿಕರ್ತೃತ್ವ ಜಗದ್ವ್ಯಾಪಾರಕರ್ತೃತ್ವದಲ್ಲಿ ನಿನಗೆ ಹೇಗೆ ಶಕ್ತಿಯಿದೆ ಎಂದರೆ, ವಿವರಿಸುತ್ತಾನೆ. ಸರ್ವದಾ ಸರ್ವ ಕಾಲಗಳಲ್ಲಿಯೂ ಸಂಪೂರ್ಣನಾಗಿರುವ ನಿರ್ದುಷ್ಟಗಳಾದ ಅನಂದಾದ್ಯನಂತಗುಣಗಳುಳ್ಳವನು ನಾನು. ನನಗೆ ಪಾರತಂತ್ರ್ಯಾದಿ ಸಮಸ್ತ ದೋಷಗಳಾವುವೂ ಇಲ್ಲ. ನಾನು ಒಂದೇ ರೀತಿಯಾದ, ನಿತ್ಯವೂ ಮಂಗಳಕರವೂ ಆದ ಸ್ವರೂಪವುಳ್ಳವನಾಗಿದ್ದೇನೆ. ಅಂದರೆ ಸರ್ವವಿಷಯದಲ್ಲಿಯೂ ಸಮರ್ಥನಾಗಿದ್ದೇನೆ.

ಹೀಗೆ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶ ಮಾಡಿದನು. ಆಗ ಅರ್ಜುನನು "ದೇವ! ನಿನ್ನ ವ್ಯಾಪ್ತಿಯನ್ನು ದಯ ಮಾಡಿ ನನಗೆ ತೋರಿಸು" ಎಂದು ಪ್ರಾರ್ಥಿಸಲು ಭಗವಾನ್ ಶ್ರೀಕೃಷ್ಣನು ಅರ್ಜುನನಿಗೆ ದಿವ್ಯ ದೃಷ್ಟಿಯನ್ನು ಕರುಣಿಸಿ ಅವನ ಯೋಗ್ಯತೆಗೆ ತಕ್ಕಂತೆ ದೇಶತಃ, ಕಾಲತಃ, ಸರ್ವಗುಣಗಳಿಂದ ಪೂರ್ಣವಾದ, ಅಂತೆಯೇ ವ್ಯಾಪ್ತವಾದ ತನ್ನ ಸ್ವರೂಪವನ್ನು ಅರ್ಜುನನು ಎಷ್ಟರಮಟ್ಟಿಗೆ ನೋಡಲು ಯೋಗ್ಯನಾಗಿರುವನೋ ಆ ಯೋಗ್ಯತೆಗೆ ತಕ್ಕಂತೆ ತನ್ನ ಭವ್ಯ ಸ್ವರೂಪವನ್ನು ದರ್ಶನ ಮಾಡಿಸಿದನು. ಅರ್ಜುನನು ಭಗವದ್ದರ್ಶನ ಮಾಡಿ ಅದನ್ನು, ಅಂದರೆ ಭಗವಂತನ ಅದ್ಭುತ ಸ್ವರೂಪವನ್ನು ಪೂರ್ಣವಾಗಿ ನೋಡಲು ಅಶಕ್ತನಾಗಿ ಶ್ರೀಕೃಷ್ಣನನ್ನು 'ದೇವ ನಿನ್ನ ವ್ಯಾಪ್ತರೂಪವನ್ನು ಆಚ್ಛಾದನಮಾಡಿ ನಿನ್ನ ಮೊದಲಿನ ರೂಪವನ್ನು ಕರುಣಿಸು' ಎಂದು ಪ್ರಾರ್ಥಿಸಿದನು. ಆಗ ಭಗವಂತನು ದ್ವಾಪರಯುಗದ ಮಾನವರ ಪ್ರಮಾಣದಂತೆ ತನ್ನ ಪೂರ್ವದ ಸ್ವರೂಪವನ್ನು ದರ್ಶನ ಮಾಡಿಸಿದನು ಮತ್ತು ತನ್ನ ಸ್ವರೂಪ ದರ್ಶನ ಮಾಡಿಸಿದ ಮೇಲೆ ಪುರುಷೋತ್ತಮನಾದ ಶ್ರೀಕೃಷ್ಣನು ಜ್ಞಾನಸಾಧನವಾದ ಭಕ್ತಿಯೋಗಾದಿ ವಿಜ್ಞೇಯವಾದ (ತಿಳಿಯಬೇಕಾದ) ಪರತತ್ವವನ್ನು ಪ್ರಕೃತ್ಯಾದಿಗಳ ಅಸ್ವಾತಂತ್ರ್ಯವನ್ನೂ ಅರ್ಜುನನಿಗೆ ಉಪದೇಶ ಮಾಡಿದನು. ಆ ನಂತರ ಅರ್ಜುನನು ಧನುರ್ಬಾಣಗಳನ್ನು ಕೈಗೆತ್ತಿಕೊಂಡು ಯುದ್ಧಮಾಡಲು ಸಿದ್ಧನಾದನು.

ಆಗ ಯುದ್ಧಕ್ಕೆ ಸಿದ್ಧರಾದ ಕುರು-ಪಾಂಡವ ಸೈನ್ಯವ್ಯೂಹದವರು ಪರಸ್ಪರ ಬಾಣಗಳನ್ನು ಬಿಟ್ಟರು. ಆಗ ವಾಯು-ನಂದನನಾದ ಭೀಮಸೇನನು ಗರ್ಜಿಸುತ್ತಾ ಮುಂದೆ ಬಂದನು. ಎಲ್ಲ ಕೌರವರು ಅವನನ್ನು ತಡೆದರು. ಜ್ಞಾನಿಗಳು, ಸ್ವಗೋತ್ರೀಯರು ಬಾಣಗಳಿಂದ ಹೊಡೆಯುತ್ತಿದ್ದರು. ತಾನು ಕೂಡಲೇ ಬಾಣಗಳಿಂದ ಅವರನ್ನು ಹೊಡೆಯಬಾರದೆಂಬ ಅಭಿಪ್ರಾಯದಿಂದ ಭೀಮನು ಸುಮ್ಮನಿದ್ದನು. ಶತ್ರುಗಳು ಶರಗಳಿಂದ ಭೀಮಸೇನನನ್ನು ತಾಡನಮಾಡಿರು. ಆಗ ಪಾಂಡು ಕುಮಾರರಾದ ಅಭಿಮನ್ಯು ಮುಂತಾದ ಪ್ರಮುಖವೀರರು ಸಹಿಸಲಸದೃಶವಾದ ಶರವೃಷ್ಟಿಯಿಂದ ಧಾರ್ತರಾಷ್ಟ್ರೀಯರನ್ನು ನೋಯಿಸಿದರು. ಅದರಿಂದ ಕುಪಿತರಾದ ಕೌರವವೀರರು ಶಸ್ತ್ರಸಮೂಹದಿಂದ ಪಾಂಡವವೀರರನ್ನು ಎಲ್ಲ ಕಡೆಗಳಿಂದ ಪೀಡಿಸಿದರು. ಆಗ ವಾಯುಕುಮಾರನು ಶರಸಮೂಹಗಳನ್ನು ವರ್ಷಿಸಿ ಪಾಂಡವವೀರರನ್ನು ರಕ್ಷಿಸಿದನು. ಭೀಮಸೇನನ ಶರಾಘಾತಗಳಿಂದ ಕಡುನೊಂದು ಕೌರವ ಸೈನ್ಯದವರು ಪಲಾಯನ ಮಾಡಲು ಉದ್ಯುಕ್ತರಾದಾಗ ದಿವ್ಯಾಸ್ತ್ರಪ್ರಯೋಗ ಚತುರನಾದ, ಗಂಗಾಸುತನಾದ ಭೀಷ್ಮನು ಧಾರ್ತರಾಷ್ಟ್ರೀಯರಾದ ಯೋಧರನ್ನು ತಡೆದು ನಿಲ್ಲಿಸಿದನು.

ಪರಸ್ಪರ ವೈರಿಗಳಾದ ಕುರುಪಾಂಡವರು ಪರಸ್ಪರ ದ್ವಂದ್ವಯುದ್ಧ ಮಾಡಲಾರಂಭಿಸಿದರು. ದ್ರೋಣ - ಸಹದೇವರಿಗೂ, ಕೃತವರ್ಮ - ಸೈನಿಕರಿಗೂ, ಸಹದೇವ - ದುಶ್ಶಾಸನರಿಗೂ, ನಕುಲ - ಕರ್ಣರಿಗೂ, ದ್ರೌಪದಿಯ ಪುತ್ರ, ಮರುತ್ತು ಮತ್ತು ದುರ್ಮುಖಾದಿಗಳಿಗೂ ಪರಸ್ಪರ ದ್ವಂದ್ವಯುದ್ಧವಾಯಿತು. ಆಗ ಧರ್ಮರಾಜನ ಪಕ್ಷದವರೆಲ್ಲರೂ ಸಾತ್ಯಕಿಯ ವಿನಃ ಸೋತರು. ಶೈನೇಯನು (ಸಾತ್ಯಕಿಯು) ಹೃದೀಕನ ಮಗನನ್ನು ಜಯಿಸಿದನು. ಅನಂತರ ಭೀಷ್ಮ, ದ್ರೋಣ, ಭಗದತ್ತ, ಕೃಪ, ದುರ್ಯೋಧನಾದಿಗಳೊಡನೆ ಭೀಮಸೇನನು ಯುದ್ಧಮಾಡಿ ತಮ್ಮ ಸೈನ್ಯದವರನ್ನು ತಡೆದು ನಿಲ್ಲಿಸಿ, ಶಸ್ತ್ರಾಸ್ತ್ರ ಬಲ-ವಿಲ್ಲದೇ, ತನ್ನ ಬಾಹುಬಲದಿಂದಲೇ ಶತ್ರುಗಳನ್ನು ಜಯಿಸಿದನು. ಮದ್ರರಾಜ (ಶಲ್ಯ)ನು ಉತ್ತರಕುಮಾರನನ್ನು ಸಂಹರಿಸಿ ಪಾಂಡವ ಸೈನ್ಯವನ್ನು ಓಡಿಸಿದನು. ಭೀಷ್ಮನು ತಮ್ಮ ಸೇನೆಯನ್ನು ಪಲಾಯನಗೊಳಿಸುತ್ತಿರಲು ಸೋಮದತ್ತನೊಡನಿರುವ ಸೈನ್ಯವನ್ನು ಉತ್ಕೃಷ್ಟಾಸ್ತ್ರಪ್ರಯೋಗ ಕುಶಲನಾದ ಭೀಷ್ಮನು ಅತಿ ವಿಕ್ರಾಂತ ಪರಾಕ್ರಮಿಯಾದ ಅಭಿಮನ್ಯುವನ್ನು ಅನಾದರ ಮಾಡಿ ಅರ್ಜುನನು ನೋಡುತ್ತಿರುವಂತೆ ಪಾಂಚಾಲರನ್ನು ಹೊಡೆದೋಡಿಸಿ ಯುದ್ಧದಲ್ಲಿ ಕೋಲಾಹಲವನ್ನುಂಟುಮಾಡಿದನು. ಅರ್ಜುನನು ಭೀಷ್ಮಾಚಾರ್ಯರಲ್ಲಿರುವ ಗೌರವದಿಂದ ಸುಮ್ಮನಿರಲು ಕುಪಿತನಾದ ಧರ್ಮರಾಜನು ಸೈನ್ಯದೊಡನೆ ಶಿಬಿರಕ್ಕೆ ವಾಪಸಾದನು.

ಅಂದು ರಾತ್ರಿ ಶಿಬಿರದಲ್ಲಿ ಧರ್ಮರಾಜನು ಅರ್ಜುನನನ್ನು ನಿಂದಿಸಿದನು. ಆಗ ಕೃಷ್ಣ ಮೊದಲಾದವರು ಅವನನ್ನೂ, ಅರ್ಜುನನನ್ನೂ ಸಮಾಧಾನಪಡಿಸಿದರು. ಆ ತರುವಾಯ ಅರ್ಜುನಾದಿಗಳು ಮತ್ತೆ ಯುದ್ಧಕ್ಕೆ ಹೊರಟರು. ಹೀಗೆ ಭೀಷ್ಮನು ಹತ್ತು ದಿನ ಸೇನಾಧಿಪತಿತ್ವವನ್ನು ನಿರ್ವಹಿಸಿದನು. ಮತ್ತು ಪಾಂಡವರೊಡನೆ ಮತ್ತೊಬ್ಬರು ಮಾಡಲಾಗದ ರೀತಿಯಲ್ಲಿ ಯುದ್ಧಮಾಡಿದನು. ಆಗ ಯುದ್ಧದಲ್ಲಿ ಭಾಗಿಯಾಗಲು ಬಂದ ಕರ್ಣನನ್ನು ನೋಡಿ ಭೀಷ್ಮನು ನೀನು ಅರ್ಧರಥಿಕನೆಂದು ಹೇಳಿದರು. ಅದರಿಂದ ಕುಪಿತನಾದ ಕರ್ಣನು "ಭೀಷ್ಮ! ನೀನು ಯುದ್ಧಮಾಡುತ್ತಿರುವವರೆಗೆ ನಾನು ಯುದ್ಧ ಮಾಡು-ವುದಿಲ್ಲ" ಎಂದು ಹೇಳಿ ಯುದ್ಧಭೂಮಿಯಿಂದ ನಿರ್ಗಮಿಸಿದನು. ಭೀಷ್ಮನು ಆಗ ಪ್ರತಿದಿನ ಹತ್ತುಸಾವಿರ ಜನರನ್ನು ಯುದ್ಧದಲ್ಲಿ ಸಂಹರಿಸುತ್ತೇನೆ ಎಂದು ಪ್ರತಿಜ್ಞೆ ಮಾಡಿ ಅದರಂತೆ ದಿನದಿನವೂ ಹತ್ತು ಸಹಸ್ರ ಜನರನ್ನು ಸಂಹರಿಸಹತ್ತಿದನು. ಭೀಷ್ಮರನ್ನು ಸಂಹರಿಸಲು ಸ್ವತಃ ಸಮರ್ಥರಾಗಿದ್ದರೂ ಭೀಮಾರ್ಜುನರು ಪಿತಾಮಹ ಭೀಷ್ಮರಲ್ಲಿರುವ ಸ್ನೇಹ-ಗುರುತ್ವ ಬುದ್ಧಿಯಿಂದ ನಿಯಂತ್ರಿತರಾಗಿ ವರ್ತಿಸಿದರು. ಆಗ ರಣರಂಗದಲ್ಲಿ ಚಿತ್ರವಿಚಿತ್ರ ರೀತಿಯಲ್ಲಿ ಯುದ್ಧಗಳಾದವು. ಅವನ್ನು ಅಂಬರದಲ್ಲಿ ವಿಮಾನಗಳಲ್ಲಿ ಕುಳಿತು ಬ್ರಹ್ಮ ರುದ್ರಾದಿಗಳು ದೇವತೆಗಳು, ಗಂಧರ್ವರು, ಅಪ್ಸರಾಸ್ತ್ರೀಯರು, ಅಸುರರು ಅವಲೋಕಿಸಿದರು.

ಯುದ್ಧದಲ್ಲಿ ರಿಪುಗಳಿಂದ ಅಜೇಯನಾದ, ಶ್ರೇಷ್ಠ ಧನ್ವಿಯಾದ ದೃಷ್ಟದ್ಯುಮ್ನನು ಗಾಂಗೇಯನಾದ ಭೀಷ್ಮಾಚಾರ್ಯರನ್ನು ಎದುರಿಸಿದನು. ಶ್ರೇಷ್ಠಮಟ್ಟದಲ್ಲಿ ಬಹುವಿಧವಾಗಿ ಯುದ್ಧವೆಸಗಿದನು. ಆಗ ಅಲ್ಲಿ ದೃಷ್ಟದ್ಯುಮ್ನಾದಿಗಳು ಭೀಷ್ಮರೊಡನೆ ಯುದ್ಧ ಮುಗಿಸಿದ ಮೇಲೆ ನಾನು ಆಯುದವನ್ನು ಹಿಡಿಯುವುದಿಲ್ಲ ಎಂದು ಪ್ರತಿಜ್ಞಾಬದ್ಧನಾಗಿದ್ದರೂ, ಭೀಷ್ಮಾ-ಚಾರ್ಯರೊಡನೆ ಮೃದುವಾಗಿ ಯುದ್ಧ ಮಾಡುತ್ತಿರುವ ಅರ್ಜುನನನ್ನು ನೋಡಿ ಶ್ರೀಕೃಷ್ಣನು ಭೀಷ್ಮರೊಡನೆ ಕಾದಾಡಲು ಕರದಲ್ಲಿ ಚಕ್ರವನ್ನು ಹಿಡಿದು ರಥದಿಂದ ಧುಮುಕಿ ಭೀಷ್ಮರತ್ತ ಧಾವಿಸಿದನು. ಆಗ ಪಿತಾಮಹ ಭೀಷ್ಮರು ಕರಮುಗಿದು ಶ್ರೀಕೃಷ್ಣನನ್ನು ಸ್ತೋತ್ರ ಮಾಡಿದರು. ಆಗ ಅರ್ಜುನನು ಶ್ರೀಕೃಷ್ಣನಿಗೆ ನಮಸ್ಕರಿಸಿ, ಅವನ ಕರದಿಂದ ಚಕ್ರವನ್ನು ತೆಗೆದು-ಕೊಂಡು, 'ದೇವ! ನೀನು ಯುದ್ಧಕ್ಕೆ ಹೋಗಬೇಡ'ವೆಂದು ಪ್ರಾರ್ಥಿಸಲು ಶ್ರೀಕೃಷ್ಣನು ಸಮಾಧಾನತಾಳಿ ಪುನಃ ರಥವನ್ನೇರಿ ಕುಳಿತು ಪಾಂಚಜನ್ಯವನ್ನು ಧ್ವನಿಸಿದನು. ಆಗ ಭೀಷ್ಮ - ಅರ್ಜುನರು ಶಸ್ತ್ರಾಸ್ತ್ರಗಳಿಂದ ಕದನವೆಸಗಿದರು. ಕದನದಲ್ಲಿ ಪಾರ್ಥನು ಶ್ರಮವಿಲ್ಲದೇ ಭೀಷ್ಮಾಚಾರ್ಯರನ್ನು ಸೋಲಿಸಿದನು. ಆದರೂ ಭೀಷ್ಮರು ರಣರಂಗದಲ್ಲಿ ರಥ ಮತ್ತು ರಥಿಕರಿಂದ ಕೂಡಿದ ಹತ್ತುಸಾವಿರ ಜನರನ್ನು ಸಂಹರಿಸಿದರು. ಅನಂತರ ಭೀಷ್ಮಾದಿಗಳು ಪರಾಜಿತರಾಗಿ ಸೇನೆಯೊಡನೆ ಶಿಬಿರಕ್ಕೆ ಹಿಂದಿರುಗಿದರು.

ಒಮ್ಮೆ ಭೀಮಸೇನನು ಯುದ್ಧ ಸಮಯದಲ್ಲಿ ಮುಂದಾಳಾಗಿ ರಥಿಕರಿಂದೊಡಮಾಡಿದ ಸೇನಾಸಮೂಹವನ್ನು ಭೇದಿಸಿ ಒಳಗೆ ಪ್ರವೇಶಿಸಿದನು. ಮತ್ತೆ ರಥವೇರಿ ಕುಳಿತು ಯುದ್ಧಪ್ರಯತ್ನ ಮಾಡಿದ ಭೀಷ್ಮ-ದ್ರೋಣಾದಿಗಳನ್ನು ಮಹಾಬಲಶಾಲಿಯಾದ ಭೀಮನು ಪುನಃ ಜಯಿಸಿ ದುರ್ಯೋಧನನ ಅನುಜರನ್ನು ಸಂಹಾರ ಮಾಡಿದನು. ಆ ಯುದ್ಧದಲ್ಲಿ ಬಹು ಬಲಶಾಲಿಗಳಾದ ಇಪ್ಪತ್ತೈದು ಜನ ಧೃತರಾಷ್ಟ್ರನ ಪುತ್ರರು ಮೃತರಾದರು. ಭಗದತ್ತ, ಅಶ್ವತ್ಥಾಮ, ಕೃಪ, ಶಲ್ಯ, ದುರ್ಯೋಧನಾದಿಗಳು ಭೀಮಸೇನನ ಪ್ರತಾಪದ ಮುಂದೆ ನಿಲ್ಲಲಾಗದೆ ಎಲ್ಲರೂ ಪರಾಜಿತರಾಗಿ ಪಲಾಯನ ಮಾಡಿದರು. ಬಹುವಾದ ಸೈನ್ಯವೂ ಭೀಮನಿಂದ ಸಂಹರಿಸಲ್ಪಟ್ಟಿತು. ಸರ್ವರೂ ನೋಡುತ್ತಿರುವಂತೆ ಭೀಮಸೇನನ ಅರ್ಭಟಮಯ ಯುದ್ಧದಿಂದಾಗಿ ರಥರಹಿತನೂ, ಆಯುಧರಹಿತನೂ, ಗದಾಪ್ರಹಾರದಿಂದ ಮೂರ್ಛಿತನಾದ ದುರ್ಯೋಧನನನ್ನು ಕೌರವರು ಶಿಬಿರಕ್ಕೆ ಕರೆದೊಯ್ದರು.

ಅಂದು ರಾತ್ರಿ ಸುಯೋಧನನು ರಕ್ತಸಿಕ್ತ ಶರೀರನಾಗಿ ಭೀಮನ ಶರಾಹಣಿಯ ವ್ಯಥೆಯಿಂದ ಪೀಡಿತನಾಗಿ ಭೀಷ್ಮ-ನಿರುವಲ್ಲಿಗೆ ಬಂದು ಅವರಿಗೆ ನಮಸ್ಕರಿಸಿ "ಪಿತಾಮಹ! ನಾವು ಯಾವ ಕಾರಣದಿಂದ ದಿನಾ ಪರಾಭವ ಹೊಂದುತ್ತಿದ್ದೇವೆ? ನಿತ್ಯವೂ ಪಾಂಡವರೇ ಜಯಶೀಲರಾಗಿ ಹರ್ಷ ಪಡುವರು?" ಎಂದು ಪ್ರಶ್ನಿಸಲು ಪಿತಾಮಹ ಭೀಷ್ಮಾಚಾರ್ಯರು ಇಂತು ನಿರೂಪಿಸಿದರು -

'ದುರ್ಯೋಧನ! ಪಾಂಡವರು ಧರೆಗಿಳಿದು ಬಂದ ದೇವತೆಗಳು. ಆದ್ದರಿಂದ ಅವರು ಅಜೇಯರು ಮತ್ತು ವಿಶೇಷಾಕಾರವಾಗಿದ್ದರೂ ಶ್ರೀಕೃಷ್ಣನಿಗೆ ಪ್ರಿಯರು. ಕೇಶವನಿಂದ (ಅಂದರೆ ರುದ್ರೇಂದ್ರಾದಿ ನಿಯಾಮಕನಾದ ಶ್ರೀಕೃಷ್ಣನಿಂದ ರಕ್ಷಿತರಾಗಿದ್ದಾರೆ. (ಪಾಂಡವರೇಕೆ ಭೂಮಿಯಲ್ಲಿ ಅವತರಿಸಿದರು?) ಎಂದರೆ ಭೀಷ್ಮರು ಹೀಗೆ ವಿವರಿಸಿದರು.

'ದುರ್ಯೋಧನ! ಮಾನಸ ಸರಸ್ಸಿನ ಉತ್ತರಕ್ಕಿರುವ ಪರ್ವತದಲ್ಲಿ, ಪೂರ್ವದಲ್ಲಿ ದೇವತೆಗಳೆಲ್ಲರೂ ಸಮಾಗಮಿಸಿ ನಿಂತು ಶ್ರೀಹರಿಯನ್ನು ಪ್ರಾರ್ಥಿಸಿದರು. ಆಗ ಕಮಲಸಂಭವರೊಬ್ಬರೇ ಅಂಬರದಲ್ಲಿ ಪ್ರತ್ಯಕ್ಷನಾದ ಶ್ರೀಹರಿಯನ್ನು ಕಂಡರು. ಮತ್ತು ಅವರು ಶ್ರೀಹರಿಯನ್ನು ಪೂಜಿಸಿ ಸ್ತೋತ್ರಮಾಡಿ ಭೂಭಾರಹರಣಕ್ಕಾಗಿ ಪ್ರಾರ್ಥಿಸಿದರು. ಆಗ ಶ್ರೀಹರಿಯು ಅವರಿಗೆ ಆಜ್ಞಾಪಿಸಿದ ವಿಚಾರವನ್ನು ಅವರ ಇಂತು ನಿರೂಪಿಸಿದರು. "ಪೂರ್ಣನೂ, ಅನಂತಗುಣಸಾಗರನೂ ಆದ ಶ್ರೀಹರಿಯು ದೇವತೆಗಳೆಲ್ಲರೂ ಭೂಮಿಯಲ್ಲಿ ಅವತರಿಸಬೇಕೆಂದು ಆಜ್ಞಾಪಿಸಿದ್ದಾನೆ. ಸ್ವಯಂಜನ್ಮರಹಿತನಾಗಿದ್ದರೂ ಜಗತ್ಪತಿಯಾದ

ಶ್ರೀಹರಿಯು ದೇವಕಿಯ ಪುತ್ರನಾಗಿ ಪ್ರಾದುರ್ಭವಿಸುವನು. ಇಂತು ಭಗವಂತನಿಂದ ಆದೇಶ ಪಡೆದ ಯಮ-ವಾಯು-ಇಂದ್ರ-ಮರುದ್ಗಣಗಳು, ಗಂಧರ್ವಾದಿಗಳು ಮುಂತಾದವರೆಲ್ಲರೂ ಪಾಂಡವರಾಗಿ, ಯಾದವರಾಗಿ, ಶಲ್ಯ, ಬಾಹ್ಲಿಕಾದಿ-ಗಳಾಗಿ ಅವತರಿಸಿದ್ದಾರೆ. ಸಾಕ್ಷಾತ್ ಶ್ರೀನಾರಾಯಣನು ದೇವಕಿಗೆ ಪುತ್ರನಾಗಿ ಅವತರಿಸಿದನು. ಇಂತು ಮಹಾಮಹಿಮ-ನಾದ ಶ್ರೀನಾರಾಯಣನಿಂದ ಪಾಲಿತರಾದ ಯಮಾದಿ ದೇವತೆಗಳಿಂದ ಉತ್ಪನ್ನರಾದ ಪಾಂಡವರು ಅಂತೆಯೇ ಅಜೇಯ-ರಾಗಿದ್ದಾರೆ. ಆದುದರಿಂದ ದುರ್ಯೋಧನ ನೀನು ಅಪಜಯವಾಗಬಾರದೆಂದು ಬಯಸಿದ ಪಕ್ಷದಲ್ಲಿ ಪಾಂಡವರೊಡನೆ ಸಂಧಿ ಮಾಡಿಕೊಳ್ಳುವುದು ನಿಮಗೆ ಶ್ರೇಯಸ್ಕರವು. "

ಹೀಗೆ ಭೀಷ್ಮರು ಹೇಳಲು ದುರ್ಯೋಧನನು ಪಿತಾಮಹರಿಗೆ ಉತ್ತರ ಹೇಳದೆ ಅಲ್ಲಿಂದ ತನ್ನ ಶಿಬಿರಕ್ಕೆ ಡಂಬ ಬುದ್ಧಿಯುಳ್ಳವನಾಗಿ ಮರಳಿದನು. ದುರ್ಮತಿಯಾದ ದುರ್ಯೋಧನನು ಮರುದಿನ ಬೆಳಗಾದ ಮೇಲೆ ಯುದ್ಧಕ್ಕಾಗಿ ತನ್ನ ಸೈನ್ಯವನ್ನು ಕಳುಹಿದನು. ಭೀಷ್ಮನು ದಿವ್ಯೌಷಧ ಸೇವನೆಯಿಂದ ನಿರೋಗಿಯಾಗಿ ಯುದ್ಧಕ್ಕೆ ಹೊರಟನು. ಕೌರವರು ಭೀಷ್ಮರನ್ನು ಮುಂದಿಟ್ಟುಕೊಂಡು ಯುದ್ಧಾರ್ಥವಾಗಿ ಹೊರಟರು.

ಅಲ್ಲಿ ಪಾಂಡವ-ಕೌರವ ವೀರರುಗಳಿಗೆ ಘೋರ ಯುದ್ಧವಾಯಿತು. ಭೀಮಾನುಯಾಯಿಯಾದ ಧೃಷ್ಟದ್ಯುಮ್ನನು ದುರ್ಯೋಧನನ ಸಹೋದರರೊಡನೆ ಯುದ್ಧ ಮಾಡಿ ಕರ್ಣ ಮೊದಲಾದವರನ್ನು, ಕೌರವ ಸೈನ್ಯವನ್ನೂ ಸಮ್ಮೋಹನಾಸ್ತ್ರ-ದಿಂದ ಮೂರ್ಛಿತಗೊಳಿಸಿದನು. ನಂತರ ದ್ರೋಣಾಚಾರ್ಯರು ಅವರನ್ನು ವಿಜ್ಞಾನಾಸ್ತ್ರದಿಂದ ಮುಕ್ತಗೊಳಿಸಿದರು. ಆಗ ಭೀಮನು ದ್ರೋಣರ ಸಾರಥಿಯನ್ನು ಕೊಂದು ಬಾಣಗಳ ಸಮೂಹದಿಂದ ಶತ್ರುಸಮೂಹವನ್ನು ಪಲಾಯನಗೊಳಿಸಿದನು. ಆಗ ಧೃಷ್ಟದ್ಯುಮ್ನನು ರಥಾರೂಢನಾಗಿ ಕೃತವರ್ಮನ ಬಳಿಗೆ ಬಂದನು. ಅವರೀರ್ವರ ಮಧ್ಯೆ ಅಭಿಮನ್ಯುವು ಬಂದನು. ಧೃಷ್ಟದ್ಯುಮ್ನನು ಕೃತವರ್ಮನ ರಥವನ್ನು ಪುಡಿಪುಡಿ ಮಾಡಿದನು. ಕೃತವರ್ಮನು ಪರಾಜಿತನಾಗಲು, ಸ್ವಯಂ ದುರ್ಯೋಧನನು ಧೃಷ್ಟದ್ಯುಮ್ನನ ಬಳಿಗೆ ಬಂದನು. ಅವನ ರಥ ಆಯುಧಗಳನ್ನು ಧ್ವಂಸ ಮಾಡಿ ದುರ್ಯೋಧನನ ಕಂಠ, ವಕ್ಷಸ್ಥಳಗಳನ್ನು ಬಾಣಗಳಿಂದ ಹೊಡೆದನು. ರಕ್ತವನ್ನು ಕಾರುತ್ತಾ ಮೂರ್ಛಿತನಾಗಿ ಬಿದ್ದು ದುರ್ಯೋಧನನ್ನು ನೋಡಿ ಕೃಪಾಚಾರ್ಯನು ಅವನನ್ನು ತನ್ನ ರಥದಲ್ಲಿ ಮಲಗಿಸಿಕೊಂಡು ರಣರಂಗದಿಂದ ಹೊರಟುಹೋದನು. ಆಗ ಭೀಮನು ಕೌರವಸೈನ್ಯವನ್ನು ಶರವರ್ಷದಿಂದ ಓಡಿಸಿದನು,

ಆಗ ಇಂದ್ರಸುತನಾದ ಅರ್ಜುನನು, ಕೇಶವನು ರಥಸಾರಥ್ಯ ಮಾಡುತ್ತಿರಲು ಶತ್ರುಗಳನ್ನು ಬಾಣವರ್ಷದಿಂದ ಸಂಹಾರಗೊಳಿಸಿದನು ಮತ್ತು ಇಪ್ಪತ್ತೈದುಸಹಸ್ರ ರಥಿಕರನ್ನು ಯುದ್ಧದಲ್ಲಿ ಯಮಸದನಕ್ಕಟ್ಟಿದ್ದನು. ಆಗ ಸಾತ್ಯಕಿಯು ಅರ್ಜುನನನ್ನು ಅನುಸರಿಸಿ ಧಾರ್ತರಾಷ್ಟ್ರನ ಸೈನ್ಯವನ್ನು ಓಡಿಸಿದನು. ಅವನನ್ನು ಸೋಮದತ್ತ, ಭೂರಿಶ್ರವರು ತರುಬಿದರು. ಆಗ ಅವರಿಬ್ಬರಲ್ಲಿ ಭಯಂಕರ ಅಸ್ತ್ರಗಳಿಂದ ಘೋರಯುದ್ಧವಾಯಿತು. ಪರಾಕ್ರಮಶಾಲಿಯಾದ ಭೂರಿಶ್ರವನು ಸಾತ್ಯಕಿಯ ಹತ್ತುಜನ ಪುತ್ರರನ್ನು ಸಂಹರಿಸಿದನು. ಆಗ ಅವರೀರ್ವರೂ ಪರಸ್ಪರ ರಥಗಳನ್ನು ನಾಶಪಡಿಸಿ ವಿರಥರಾದರು. ಆಗ ಸೋಮದತ್ತಿಯು ಮಹಾಖಡ್ಗಪಾಣಿಯಾಗಿ ಯುಯುಧಾನನತ್ತ ಯುದ್ಧಮಾಡಲು ಬರುತ್ತಿರುವುದನ್ನು ಕಂಡು ಭೀಮ-ಸೇನನು ಯುಯುಧಾನನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡನು. ದುರ್ಯೋಧನನು ಸೋಮದತ್ತನನ್ನು ತನ್ನ ರಥದಲ್ಲಿ ಕೂಡಿಸಿಕೊಂಡು ಭೀಮಸೇನನಿಂದ ದೂರವಾಗಿ ಪಲಾಯನ ಮಾಡಿದನು.

ಆಗ ಇಂದ್ರಸಮಾನನಾದ ಅರ್ಜುನನು ಯುದ್ಧಭೂಮಿಯಲ್ಲಿ ಶೀಘ್ರವಾಗಿ ಭೀಷ್ಮರ ಬಳಿ ಬಂದನು. ಯುದ್ಧದಲ್ಲಿ ದರ್ಪಿಷ್ಠನಾದ, ಶಸ್ತ್ರಾಸ್ತ್ರವಿದ್ಯೆಯಲ್ಲಿ ಶ್ರೇಷ್ಠರಾದ ಅರ್ಜುನ ಭೀಷ್ಮರು ಮಹಾಮಂತ್ರೌಷಧಗಳಿಂದಲೂ ನಿವಾರಿಸಲು, ಸರ್ಪವಿಷಸಮಾನವಾದ ಬಾಣಗಳಿಂದ ದೇವತಾಸಮೂಹವು ನೋಡುತ್ತಿರುವಂತೆ ಹೋರಾಡಿದರು. ಅಂದು ರಾತ್ರಿ

ಯುದ್ಧದಲ್ಲಿ ಜಗನ್ನಸಾರಥಿಯಾದ ಅರ್ಜುನನು ಬಾಹುವೀರ್ಯದಿಂದ ಭೀಷ್ಮರನ್ನು ಜಯಿಸಿದನು. ಆಗ ಭೀಷ್ಮಾಚಾರ್ಯರು ಸೈನ್ಯವನ್ನು ಪರಾವೃತಗೊಳಿಸಿ ತಮ್ಮ ಶಿಬಿರಕ್ಕೆ ಹೋದರು. ಪಾಂಡವರೂ ಸಹ ತಮ್ಮ ಶಿಬಿರಕ್ಕೆ ತೆರಳಿದರು.

ಮರುದಿನ ರಣರಂಗದಲ್ಲಿ ಭೀಮ ಮತ್ತು ಭೀಷ್ಮರ ನಾಯಕತ್ವದಲ್ಲಿ ಕುರುಪಾಂಡವರ ಸೇನೆಗಳು ಕದನರತವಾದವು. ಆಗ ವೃಕೋದರನು ಭೀಷ್ಮರ ಸಾರಥಿಯನ್ನು ಕೊಂದು ಇನ್ನಿತರರನ್ನು ಧರೆಗುರುಳಿಸಿದನು. ಅವನ ತಾಡನದಿಂದ ರಥ, ಗಜ, ತುರಗಾದಿಗಳು ಧ್ವಂಸವಾಯಿತು. ಭೀಮನಿಂದ ಭೀಷ್ಮಾಚಾರ್ಯರು, ದ್ರೋಣಾಚಾರ್ಯರು, ಅಶ್ವತ್ಥಾಮಾಚಾರ್ಯರು, ಇವರೇ ಮೊದಲಾದವರುಳ್ಳ ದುರ್ಯೋಧನನೇ ಮೊದಲಾದವರು ಪರಾಜಿತರಾದರು. ಉಳಿದವರು ಪಲಾಯನಗೈದರು. ಆಗ ಮಹಾಗಜವನ್ನೇರಿದ ಭಗದತ್ತನು ರಣಭೂಮಿಗೆ ಬಂದು ಭೀಮನ ಮೇಲೆ ಶರವರ್ಷ ಮಾಡಿದನು. ಭೀಮಸೇನನು ಆ ಹೊಡೆತಕ್ಕೆ ಸಿಕ್ಕಿರಲು, ಭೀಮಕುಮಾರನಾದ ಘಟೋತ್ಕಜನು ತನ್ನ ಮಾಯೆಯಿಂದ ನಾಲ್ಕು ಗಜಗಳ ರೂಪತಾಳಿ ಆ ಗಜಗಳ ಮೇಲೂ ಕುಳಿತು ಬಂದು ತಂದೆಯಾದ ಭೀಮನನ್ನು ತಡೆದು ತಾನೇ ತನ್ನ ಮಾಯಾಯುದ್ಧದಿಂದ ಎಲ್ಲರನ್ನೂ ಹೊಡೆದೋಡಿಸಿದನು. ಆಗ ಭೀಮನು ಶ್ರೀವರಾಹರೂಪಿ ಶ್ರೀಹರಿಯಿಂದ ಅನುಗ್ರಹೀತವಾದ ಮತ್ತು ಶ್ರೀಹರಿಯಿಂದಲ್ಲದೆ ಇನ್ನಾರಿಂದಲೂ ಎದುರಿಸಲು ಅಸಾಧ್ಯವಾದ ಅತ್ಯಂತ ಶಕ್ತವಾದ ಅಮೋಘವಾದ ವೈಷ್ಣವಾಸ್ತ್ರವು ಭಗದತ್ತನಲ್ಲಿರುವುದನ್ನು ಅರಿತಿದ್ದರಿಂದ ಘಟೋತ್ಕಜನು ಭಗದತ್ತನ ಮೇಲೆ ಯುದ್ಧಕ್ಕೆ ಹೊರಟಾಗ ಅವನನ್ನು ತಡೆಯಲಿಲ್ಲ ಮತ್ತು ತಾನು ಹೋಗಲಿಲ್ಲ. ಆ ವೈಷ್ಣವಾಸ್ತ್ರವು ವಿಷ್ಣುವನ್ನು ಬಿಟ್ಟು ಇತರರನ್ನು ನಾಶಪಡಿಸಲು ಅಮೋಘವಾದುದರಿಂದಲೂ, ಶ್ರೀಹರಿಯಲ್ಲಿರುವ ಭಕ್ತ್ಯತಿಶಯದಿಂದಲೂ ಅವರು ಶ್ರೀವಾಸುದೇವನ ನಿತ್ಯಅವಿಚ್ಛಿನ್ನ ಭಕ್ತರಾದ್ದರಿಂದ ರುದ್ರಾದಿಗಳನ್ನು ಭಗದತ್ತನಿಗಿತ್ತ ವರವನ್ನು ಸಾರ್ಥಕಪಡಿಸಿ ರುದ್ರಾದಿಗಳಲ್ಲಿ ತಮ್ಮ ವಿಶೇಷಾನುಗ್ರಹ ತೋರಲು, ಶ್ರೀಹರಿಯ ವಾಕ್ಯವನ್ನು ಸತ್ಯ ಮಾಡಲು ಭೀಮ-ಸೇನದೇವರು ಭಗದತ್ತನ ಮೇಲೆ ಯುದ್ಧಕ್ಕೆ ಹೋಗಲಿಲ್ಲ. ಘಟೋತ್ಕಜನು ಜಯಿಸಿದರೆ ಅದು ತನ್ನ ಜಯವೇ ಎಂದು ತೋರಿಸಲು ಭಗದತ್ತನು ಯಾವಾಗ ವೈಷ್ಣವಾಸ್ತ್ರವನ್ನು ಮರೆಯುವನೋ ಆಗ ಭೀಮನು ಭಗದತ್ತನ ಮೇಲೆ ಯುದ್ಧಕ್ಕೆ ಹೋಗುವನೆಂದು ತಿಳಿಯಬೇಕು. ಮತ್ತು ಭಗದತ್ತನು ಭೀಮ ಮತ್ತು ಅರ್ಜುನರನ್ನು ಬಿಟ್ಟು ಬೇರೆಯವರ ಮೇಲೆ ಆ ವೈಷ್ಣವಾಸ್ತ್ರವನ್ನು `ಬಿಡುವುದಿಲ್ಲವೆಂಬುದನ್ನೂ ಭೀಮನು ಅರಿತಿದ್ದನು. ಅಂತೆಯೇ ಘಟೋತ್ಕಜನು ಭಗದತ್ತನ ಮೇಲೆ ಯುದ್ಧಕ್ಕೆ ಹೊರಟಾಗ ಅವನು ತಡೆಯಲಿಲ್ಲವೆಂದೂ ತಿಳಿಯಬೇಕು.

ಇತ್ತ ಘಟೋತ್ಕಜನು ನಾಲ್ಕು ಮಹಾಗಜರೂಪ ತಾಳಿ ಅವುಗಳ ಮೇಲೆ ಸ್ವಯಂ ನಾಲ್ಕುರೂಪ ತಾಳಿ ಕುಳಿತು ಬಂದು ಸಮಸ್ತ ಜಗತ್ತು ನೋಡುತ್ತಿರುವಂತೆ ಭಗದತ್ತನನ್ನೂ ಅವನ ಸುಪ್ರತೀಕವೆಂಬ ಮಹಾಗಜವನ್ನೂ ನಾನಾವಿಧ ಪ್ರಹಾರಗಳಿಂದ ಅತ್ಯಂತ ವ್ಯಥೆಗೆ ಗುರಿಮಾಡಿ ಅವರ ಜೀವಿತದ ಬಗೆಗೆ ಸಂದೇಹ ಬರುವಂತೆ ಮಾಡಿದನು. ಆ ಸುಪ್ರತೀಕ ಗಜದ ಆರ್ತನಾದವನ್ನು ಕೇಳಿ ಭೀಷ್ಮಾದಿಗಳು ಅಲ್ಲಿಗೆ ಬಂದು, ಮಹಾಕಾಯನೂ, ಭಯಂಕರನೂ ಆದ ಘಟೋತ್ಕಜನನ್ನು ಅವಲೋಕಿಸಿ ಅವನ ಹಿಂದೆ ರಕ್ಷಕನಾಗಿ ನಿಂತಿರುವ ಗದಾಪಾಣಿಯಾದ ಭೀಮಸೇನನನ್ನು ನೋಡಿ ಅವರೆಲ್ಲರೂ ಭೀತರಾಗಿ ರಣರಂಗದಿಂದ ಕಾಲ್ತೆಗೆದು ಸೈನ್ಯದೊಡನೆ ಶಿಬಿರಕ್ಕೆ ಹೊರಟುಹೋದರು.

ಮಾರನೆಯ ದಿನ ಮತ್ತೆ ಉಭಯಸೇನೆಗಳು ಸಮರಭೂಮಿಯಲ್ಲಿ ಮಿಳಿತವಾದವು. ಆ ದಿನದ ಕದನದಲ್ಲಿ ನಾಗಕನ್ಯೆಯಾದ ಉಲೂಪಿಯಲ್ಲಿ ಜನಿಸಿದ ಅರ್ಜುನನ ಕುಮಾರನಾದ ಇರಾವಂತನು ಒಬ್ಬನೇ ಶಕುನಿ ಪುತ್ರರಿಂದ ಕ್ಷತಿ-ಕಾಯನಾಗಿದ್ದ. ಇರಾವಂತನು ಕೌರವರಲ್ಲಿ ಅತ್ಯುಗ್ರಭಯವನ್ನುಂಟುಮಾಡುತ್ತಾ ಶಕುನಿಯ ಪುತ್ರರ ಶಿರಗಳನ್ನು ಖಡ್ಗದಿಂದ ಕತ್ತರಿಸಿ ಹಾಕಿ ಧಾರ್ತರಾಷ್ಟ್ರರಲ್ಲಿ ಅತಿಶಯ ಭಯವನ್ನುಂಟುಮಾಡಿದನು. ಆಗ ಸುಯೋಧನನು ಉಗ್ರನಾದ ಇರಾವಂತನನ್ನು ನೋಡಿ ರಾಕ್ಷಸನಾದ ಅಲಂಬುಸನಿಗೆ ಪಾರ್ಥ ಪುತ್ರನಾದ ಇರಾವಂತನನ್ನು ತಕ್ಷಣವೇ ಸಂಹರಿಸುವಂತೆ ಆಜ್ಞಾಪಿಸಿದನು.

ಆಗ ಅಲಂಬುಸನು ಇರಾವಂತನ ಬಳಿಗೆ ತಂದನು. ಆಗ ಮಾಯಾವಿದ್ಯಾವಿಶಾರದರೂ, ಅತಿ ಪರಾಕ್ರಮಿಗಳೂ ಆದ ಅವರೀರ್ವರಲ್ಲಿ ಭಯಂಕರ ಕದನವಾಯಿತು. ಅಲಂಬುಸನ ಅಶ್ವಾರೂಢ ಸೈನಿಕರು ಇರಾವಂತರ ಅಶ್ವಾರೂಢ ಸೈನಿಕರನ್ನು ಸಂಹರಿಸಿದರು. ಆಗ ಅನಂತ(ಸರ್ಪ)ರೂಪವನ್ನು ತಾಳಿದ ಇರಾವಂತನನ್ನು ಗರುಡರೂಪ ತಾಳಿದ ಅಲಂಬುಸನು ಸಂಹರಿಸಿದನು. ಅರ್ಜುನಕುಮಾರ ಇರಾವಂತನು ಹತನಾದುದನ್ನು ತಿಳಿದ ವೃಕೋದರನ ಮಗನಾದ ಉಗ್ರ ಪರಾಕ್ರಮಿಯಾದ ಘಟೋತ್ಕಜನು ಕ್ರೋಧಾವಿಷ್ಟನಾಗಿ ಸಿಂಹನಾದ ಮಾಡಿದನು. ಆ ಭಯಂಕರ ಸಿಂಹನಾದ ಧ್ವನಿಯಿಂದ ಸಾಗರ ಪರ್ವತ ವೃಕ್ಷಶ್ರೇಷ್ಠಗಳಿಂದೊಡಗೂಡಿದ ಭೂಮಿಯೇ ನಡುಗಿತು. ಬಲಾಢ್ಯನಾದ ಘಟೋತ್ಕಜನ ರೌದ್ರಾವತಾರವನ್ನು ಕಂಡು ಭಯಗೊಂಡ ಅಲಂಬುಸನು ಓಡಿ ಹೋದನು. ಕೌರವಸೈನ್ಯವನ್ನು ವಿದ್ರಾವಣಗೊಳಿಸಿದ ಘಟೋತ್ಕಜನನ್ನು ಕಂಡು ದುರ್ಯೋಧನನು ಘಟೋತ್ಕಜನ ನಾಲ್ವರು ಬಲಿಷ್ಠರಾದ ಮಂತ್ರಿಗಳನ್ನು ಇತರರನ್ನೂ ಸಂಹರಿಸಿದನು. ಉಳಿದ ಸೈನಿಕರು ಓಡುತ್ತಿರುವುದನ್ನು ನೋಡಿ ಘಟೋತ್ಕಜನು ಸುಯೋಧನನತ್ತ ಧಾವಿಸಿದನು. ಯುದ್ಧದಲ್ಲಿ ಭೀಮಪುತ್ರನಿಂದ ಬಹುವಾಗಿ ಪೀಡಿತನಾದ ದುರ್ಯೋಧನನು ಘಟೋತ್ಕಜನ ಮೇಲೆ ಬಾಣಗಳ ಮಳೆಗರೆದನು. ಬಲವಾದ ಬಾಣಗಳಿಂದ ತಾಡಿತನಾದ ಘಟೋತ್ಕಜನು ಅತಿಯಾಗಿ ನೋವನ್ನನುಭವಿಸಿ ರಥದಿಂದ ಕೆಳಗೆ ಬೀಳುತ್ತಿದ್ದವನು ಹೇಗೋ ಅತಿಪ್ರಯಾಸದಿಂದ ಹಾಗೆಯೇ ನಿಂತು ದುರ್ಯೋಧನನ ಮೇಲೆ ಶರವೃಷ್ಟಿ ಮಾಡಿದನು.

ಹೀಗೆ ರಣರಂಗದಲ್ಲಿ ಅಪರಾಜಿತರಾದ ಸುಯೋಧನ, ಘಟೋತ್ಕಜರು ಬಹುಕಾಲ ಬಿರುಸಿನಿಂದ ಕಾದಾಡಿದರು. ಅದನ್ನು ಕಂಡು ದ್ರೋಣಾದಿಗಳು ದುರ್ಯೋಧನನನ್ನು ರಕ್ಷಿಸಲು ಧಾವಿಸಿ ಬಂದರು. ದ್ರೋಣ, ಶಲ್ಯ, ಅಶ್ವತ್ಥಾಮ, ಕೃಪ, ಭೂರಿಶ್ರವ, ಕೃತವರ್ಮ, ಮೊದಲಾದವರು ಬಂದರು. ಆಗ ಘಟೋತ್ಕಜನು ಗಗನಕ್ಕೆ ಹಾರಿ ನಿಂತನು. ಅವರ ಮೇಲೆ ಅತ್ಯಂತ ವೇಗವುಳ್ಳ ತೀವ್ರಕರವಾದ ಬಾಣಗಳಿಂದ ಮಳೆಗರೆದನು. ಶ್ರೇಷ್ಠರಾದ ದ್ರೋಣಾದಿಗಳೆಲ್ಲರೂ ಏಕಾಂಗಿಯಾದ ತನ್ನ ಮಗನ ಮೇಳೆ ಆಕ್ರಮಣ ಮಾಡಿದ್ದನ್ನು ಕಂಡು ಭೀಮಸೇನನು ದ್ರೋಣಾದಿಗಳತ್ತ ಧಾವಿಸಿ ಬಂದನು. ಆಗ ಭೀಮನ ಶರಾಹತಿಯಿಂದ ಪೀಡಿತನಾಗಿ ದ್ರೋಣನು ಮೂರ್ಛಿತನಾಗಿ ಕೆಳಗೆ ಬಿದ್ದನು. ನಂತರ ಭೀಮನು ಅಶ್ವತ್ಥಾಮ, ಕೃಪ, ಸುಯೋಧನಾದಿಗಳ ರಥಗಳನ್ನು ಕ್ಷಣಮಾತ್ರದಲ್ಲಿ ಪುಡಿಪುಡಿಮಾಡಿ ಅವರನ್ನು ರಥರಹಿತರನ್ನಾಗಿಸಿದನು. ಭೀಮನಿಂದ ನಿವಾರ್ಯಮಾಣರಾದ ಅವರ ಮೇಲೆ ಘಟೋತ್ಕಜನು ಬಾಣಗಳ ಸುರಿಮಳೆ ಮಾಡಿದನು. ಅಂಬರದಲ್ಲಿದ್ದ ಅವನು (ಭೀಷ್ಮರನ್ನು ಬಿಟ್ಟು) ವೃಕ್ಷಾದಿಗಳನ್ನೆಸೆದು ಪೀಡಿಸಹತ್ತಿದನು. ಇತ್ತ ಧರೆಯಲ್ಲಿ ನಿಂತು ಯುದ್ಧ ಮಾಡುತ್ತಿದ್ದ ಭೀಮನು ಅವನ ಬಾಣಗಳಿಂದ ಹಿಂಸಿಸಿದನು. ಅದರಿಂದಾಗಿ ಭಯಗೊಂಡು ಅವರೆಲ್ಲರೂ ಪಲಾಯನ ಮಾಡಿದರು. ಭೀಷ್ಮನನ್ನು ಬಿಟ್ಟು ಅವರೆಲ್ಲರೂ ಶಿಬಿರಕ್ಕೆ ಬಂದರು. ಆಗ ಘಟೋತ್ಕಜನ ವಿಜಯನಾದದಿಂದ ಲೋಕವೆಲ್ಲವೂ ಪೂರ್ಣವಾಯಿತು.

ಆ ತರುವಾಯ ಕುರುಪತಿಯು ಸ್ವಜನರಿಂದೊಡಗೂಡಿ ಯುದ್ಧಭೂಮಿಗೆ ಬಂದು ಭೀಷ್ಮರನ್ನು, ಘಟೋತ್ಕಚನನ್ನು ಜಯಿಸುವ ಉಪಾಯವೇನೆಂದು ಪ್ರಶ್ನಿಸಿದನು. ಆಗ ಗಾಂಗೇಯನು ಘಟೋತ್ಕಜನ ಬಳಿಗೆ ಹೋಗಬೇಡವೆಂದು ಹೇಳಿದನು. ಮತ್ತು ಘಟೋತ್ಕಜನೊಡನೆ ಹೋರಾಡಲು ಭಗದತ್ತನನ್ನು ಕಳುಹಿದನು. ಭಗದತ್ತನು ಸುಪ್ರತೀಕವನ್ನೇರಿ ಘಟೋತ್ಕಜನ ಬಳಿಗೆ ಬಂದು ಯುದ್ಧ ಮಾಡಿದನು. ಮಹಾಬಲವಂತನಾದ ಘಟೋತ್ಕಜನು ಅವನ ಗಜವನ್ನು ಬಹುವಾಗಿ ಪೀಡಿಸಿದನು. ಇಂತು ವ್ಯಥಿತನಾದ ಭಗದತ್ತನು ಅವನ ಮೇಲೆ ಪ್ರಬಲವಾದ ಶೂಲಾಯುಧವನ್ನೆಸೆದನು. ಆಗ ಆಕಾಶಕ್ಕೆ ಹಾರಿದ ಘಟೋತ್ಕಜನು ಶೂಲಾಯುಧವನ್ನು ಎರಡು ತುಂಡಾಗಿ ಮುರಿದುಹಾಕಿದನು. ಅದನ್ನು ನೋಡಿ ದೇವತೆಗಳು ಹರ್ಷಿಸಿದರು. ಆಗ ರಾಜಾಭಗದತ್ತನು ಘಟೋತ್ಕಜನ ಪಾದಚಾರಿಗಳಾದ ಸೈನಿಕರನ್ನು ಸಂಹರಿಸಿದನು. ಅನಂತರ ತನ್ನ ಗಜವನ್ನು ಭೀಮನ ಮೇಲೆ ಬಿಟ್ಟನು. ವೀರನಾದ ಭೀಮಸೇನನು ಅದನ್ನು ತಡೆದು ತೀಕ್ಷ್ಣ ಬಾಣಗಳಿಂದ ಅದನ್ನು ಪೀಡಿಸಲು,

ಗಜವು ಸ್ತಂಭಿತವಾಗಲು, ಭಗದತ್ತನು ಭೀಮನ ರಥದ ಅಶ್ವಗಳನ್ನು ಕ್ರೂರವಾದ ಬಾಣಗಳಿಂದ ನೋಯಿಸಿದನು. ಇಂತಾದರೂ ಭೀಮನು ಗದೆಯನ್ನು ಹಿಡಿದು ಭಗದತ್ತನನ್ನು ಸಂಹರಿಸಲು ಗಜಸಹಿತನಾದ ಅವನ ಬಳಿಗೆ ಬಂದನು. ಶ್ರೀವರಾಹದೇವರು ಭಗದತ್ತನಿಗೆ ಅನುಗ್ರಹಿಸಿದ ವೈಷ್ಣವಾಸ್ತ್ರವನ್ನು ಹಿಡಿಯಲು ಕೃಷ್ಣಾರ್ಜುನರು ಮುನ್ನುಗ್ಗಿ ಬಂದರು. ಆದರಿಂದ ಭಯಗೊಂಡ ಭಗದತ್ತನು ರಣರಂಗದಿಂದ ಹೊರಟು ಹೋದನು. ಆ ತರುವಾಯ ಭೀಮಾರ್ಜುನರಿಂದ ಸಮಸ್ತ ರಣರಂಗವು ವಿದ್ರಾವಿಸಲ್ಪಡಲು ಭೀಷ್ಮನು ಸೇನೆಯೊಡನೆ ಹೊರಟು ಹೋದನು.

ಅಂದು ರಾತ್ರಿ ದುರ್ಯೋಧನನು ಭೀಷ್ಮರ ಬಳಿಗೆ ಬಂದನು ಮತ್ತು ಭೀಷ್ಮಾಚಾರ್ಯರನ್ನು ಕಠೋರ ವಚನಗಳಿಂದ ನಿಂದಿಸಿದನು. ಆದರಿಂದ ಭೀಷ್ಮಾಚಾರ್ಯರು ತನ್ನ ಪ್ರಾಣದಾಶೆಯನ್ನು ಬಿಟ್ಟು ಶಕ್ತ್ಯಾನುಸಾರವಾಗಿ ಶತ್ರುಗಳನ್ನು ಸಂಹರಿಸುವುದಾಗಿ ಪ್ರತಿಜ್ಞೆ ಮಾಡಿದರು. ಅದರಂತೆಯೇ ಪಾಂಡವರ ಸೈನ್ಯಾದಿಗಳನ್ನು ಬಹುಸಂಖ್ಯಾಕವಾಗಿ ಸಂಹರಿಸಿದರು. ಕೌರವರು ಅವರಿಗೆ ಬೆಂಬಲವಾಗಿ ಜತೆಗೂಡಿದರು. ಚೇದಿ, ಪಾಂಚಾಲ, ಮತ್ಸ್ಯಾದಿರಾಜರು ಭೀಷ್ಮರ ಮಾರ್ಗಣಾಹತಿಗಳಿಂದ ಬಹಳವಾಗಿ ಬೆದರಿ, ಪೀಡಿತ ಕ್ಷುದ್ರಮೃಗಗಳಂತೆ ಬಹು ಪೀಡಿತರಾದರು, ಭಯದಿಂದ ಓಡಿಹೋದರು. ಇಂತು ಓಡುತ್ತಿರುವ ಅವರನ್ನು ತಡೆದು ನಿಲ್ಲಿಸಿ, ಅರ್ಜುನನ ಮಗನೂ, ಕೃಷ್ಣನ ಸೋದರಳಿಯನೂ ಆದ ಅಭಿಮನ್ಯುವು ಪಾಂಚಾಲಾದಿಗಳನ್ನು ರಕ್ಷಿಸಲು ಭೀಷ್ಮರ ಬಳಿಗೆ ಧಾವಿಸುತ್ತಿರಲು ಅಲಂಬುಸನು ಅವನೊಡನೆ ಕಾದಾಡಲು ಬಂದನು. ಅಭಿಮನ್ಯುವು ಅಲಂಬುಸನನ್ನು ಜಯಿಸಿ ಭೀಷ್ಮರತ್ತ ನಡೆದಾಗ ದುರ್ಯೋಧನನು ಅವನತ್ತ ಧಾವಿಸಿ ಬಂದನು. ಆಗ ಅವರೀರ್ವರಲ್ಲಿ ವಿಚಿತ್ರವೂ ಆಶ್ಚರ್ಯಕರವೂ ಆದ ಯುದ್ಧವಾಯಿತು. ದುರ್ಯೋಧನನು ಬಹು ಪ್ರಯಾಸದಿಂದ ಅಭಿಮನ್ಯುವಿನ ಧನು-ವನ್ನೂ ಧ್ವಜವನ್ನೂ ಕತ್ತರಿಸಿದನು. ಮತ್ತೊಂದು ಬಿಲ್ಲನ್ನು ಹಿಡಿದ ಅಭಿಮನ್ಯುವು ಬಾಣಗಳ ಮಳೆಗರೆದು ದುರ್ಯೋಧನನ ಸಾರಥಿಯನ್ನು ಸಂಹರಿಸಿದನು. ಭೀಮಸೇನನು ಆಗ ದುರ್ಯೋಧನನತ್ತ ಧಾವಿಸಿದನು. ಸುಯೋಧನನ ತಮ್ಮನಾದ ಚಿತ್ರ-ಸೇನನೂ ಕಾದುತ್ತಿರಲು ಭೀಮನು ಚಿತ್ರಸೇನನನ್ನೂ ಅವನೊಡನಿದ್ದವರನ್ನೂ ಓಡುವಂತೆ ಮಾಡಿದನು ಮತ್ತು ದುರ್ಯೋಧನನ ಅಶ್ವಗಳನ್ನು ಕೊಂದುಹಾಕಿದನು. ಆಗ ದ್ರೋಣ, ಅಶ್ವತ್ಥಾಮ, ಭಗದತ್ತ, ಕೃಪಾದಿಗಳು ಚಿತ್ರಸೇನನೊಡಗೂಡಿ ಭೀಮ-ನೆಡೆಗೈತಂದು ಯುದ್ಧ ಮಾಡಿದರು. ಭೀಮನು ಅವರೆಲ್ಲರನ್ನೂ ವಿಮುಖರನ್ನಾಗಿಸಿ ಚಿತ್ರಸೇನನನ್ನು ಸಂಹರಿಸಲು ಅವನತ್ತ ತನ್ನ ಪ್ರಚಂಡಗದೆಯನ್ನೆಸೆದನು. ಅದನ್ನು ನೋಡಿ ಅವರೆಲ್ಲರೂ ಪಲಾಯನಗೈದರು. ಆಗ ಚಿತ್ರಸೇನನು ರಥದಿಂದ ಕೆಳಕ್ಕೆ ಹಾರಿದನು. ಭೀಮನ ಗದೆಯು ಅವನ ರಥವನ್ನು ಪುಡಿಪುಡಿ ಮಾಡಿತು. ಚಿತ್ರಸೇನನು ಜೀವಿಸಿದ್ದಕ್ಕಾಗಿ ಕೌರವರು ಹರ್ಷಿಸಿದರು.

ಆಗ ಉಗ್ರರಾದ ಭೀಷ್ಮಪಿತಾಮಹರು ಪಾಂಚಾಲ ರಾಜ, ಚೇದಿರಾಜರು ಮತ್ತು ಅವರ ಸೈನ್ಯಗಳಲ್ಲಿ ಹದಿನಾಲ್ಕು ಸಾವಿರ ಜನರನ್ನು ಯಮಸದನಕ್ಕಟ್ಟಿದರು. ಮತ್ತು ಮಹಾಸಾಮರ್ಥ್ಯಶಾಲಿಗಳಾದ ಭೀಷ್ಮರು ಪಾಂಡವರ ಉಳಿದ ರಥಿಕರುಗಳನ್ನು ಶರಾಕ್ರಾಂತದಿಂದ ವೃಕವು ಮೇಷದೋಪಾದಿಯಂತೆ ಓಡಿಸಿ ಪಾಂಡವರ ಸೈನ್ಯವನ್ನೆಲ್ಲಾ ವಿದ್ರಾವಿಸಿ ಜಗತ್ತಿನಲ್ಲಿ ತಮ್ಮ ಕೀರ್ತಿಯನ್ನು ಪ್ರತಿಷ್ಠಾಪಿಸಿ ಸೇನೆಯೊಡನೆ ತಮ್ಮ ಶಿಬಿರಕ್ಕೆ ತೆರಳಿದರು. ಅಂದು ರಾತ್ರಿ ಕೌರವರು ಭೀಷ್ಮನನ್ನು ಬಹುವಾಗಿ ಕೊಂಡಾಡಿದರು. ದ್ರೋಣಾಚಾರ್ಯರು ವಿರಾಟನ ಎದುರಿಗೆ ಅವನ ಮಗನಾದ ಶಂಖನನ್ನು ಸಂಹರಿಸಿ ಪಾಂಡವರ ಸೇನೆಯನ್ನು ಪಲಾಯನಗೊಳಿಸಿ ಗಾಂಗೇಯನೊಡನೆ ಸಂತೋಷದಿಂದ ಶಿಬಿರಕ್ಕೆ ತೆರಳಿದರು. ಭೀಮಾರ್ಜುನರೂ ಸಹ ಶತ್ರುಗಳನ್ನು ಸಂಹರಿಸಿ ಎಲ್ಲ ಶ್ರೇಷ್ಠ ವೀರರನ್ನು ಹೊಡೆದೋಡಿಸಿದರು. ಮತ್ತು ಭೀಷ್ಮರ ಪರಾಕ್ರಮದಿಂದ ಭಯಗೊಂಡ ಧರ್ಮನಂದನನು ಸೇನೆಯೊಡನೆ ಹೊರಡಲು ಅವನೊಡನೆ ಭೀಮಾರ್ಜುನರೂ ಸಹ ತೆರಳಿದರು.

ಅಂದು ರಾತ್ರಿ ಭೀಷ್ಮರ ಮಹಾಪರಾಕ್ರಮದಿಂದ ಭಯಗೊಂಡಿದ್ದ ಧರ್ಮರಾಜನು ಭೀಷ್ಮರ ಸಂಹಾರದ ಉಪಾಯ-ವನ್ನು ಅವರಿಂದಲೇ ತಿಳಿಯಲಾಶಿಸಿ ಭೀಷ್ಮರ ಶಿಬಿರಕ್ಕೆ ಹೋದನು. ಶ್ರೀಕೃಷ್ಣನು ಭೀಮಾರ್ಜುನರೊಡನೆ ಧರ್ಮನಂದನನನ್ನು ಹಿಂಬಾಲಿಸಿ ಹೋದನು.

ಯದ್ಯಪಿ ಭೀಮಾರ್ಜುನರು ಭೀಷ್ಮರನ್ನು ಸಂಹರಿಸಲು ಸಮರ್ಥರೇ ಅಹುದು. ಆದರೂ ಭೀಷ್ಮರ ಅಪ್ಪಣೆಯಿಲ್ಲದ ಅವರನ್ನು ಸಂಹರಿಸಲು ಅವರು ಇಚ್ಛಿಸಿಲಿಲ್ಲ. ಏಕೆಂದರೆ ಭೀಷ್ಮಾಚಾರ್ಯರು ತಮ್ಮ ಪಿತಾಮಹರು ಮತ್ತು ತಮಗೆ ಪರಮ ಪೂಜ್ಯರು. ಆತ ಏವ ಅವರನ್ನು ಸಂಹರಿಸಲು ಇಚ್ಛಿಸಿಲಿಲ್ಲವೆಂದು ತಿಳಿಯಬೇಕು. ಸರ್ವಚೇಷ್ಟಕನಾದ ಶ್ರೀಕೃಷ್ಣನು ಪಾಂಡವರಿಗಾಗಿ ಭೀಷ್ಮರಿಗೆ ಪ್ರೇರಣೆಮಾಡಿ ತಮ್ಮನ್ನು ಸಂಹರಿಸಬಹುದೆಂದು ಅವರಿಂದಲೇ ಅಪ್ಪಣೆ ಕೊಡಿಸಲೋಸುಗ ಆ ವಾಸುದೇವನು ಪಾಂಡವರೊಡನೆ ಭೀಷ್ಮರಲ್ಲಿಗೆ ದಯಮಾಡಿಸಿದನು. ಆದುದರಿಂದ ಶ್ರೀಕೃಷ್ಣನು ಉದಾರಚರಿತನು.

ಶಿಬಿರಕ್ಕೆ ಬಂದ ಧರ್ಮಜನು ಭೀಷ್ಮಪಿತಾಮಹರಿಗೆ ಸಾಷ್ಟಾಂಗವೆರಗಿ "ಪೂಜ್ಯ ಪಿತಾಮಹ! ಇಂದಿನ ತಮ್ಮ ಪರಾಕ್ರಮದಿಂದ ಭಯಗೊಂಡಿದ್ದೇನೆ. ನಿಮ್ಮ ಬಾಲಕರಾದ ತಮ್ಮ ಮೇಲೆ ಕೃಪೆ ತೋರಿ ನಮಗೆ ವಿಜಯವಾಗುವಂತೆ ಆಶೀರ್ವದಿಸಬೇಕು. ಅದಕ್ಕೆ ತಮ್ಮನ್ನು ಸಂಹರಿಸಲು ಉಪಾಯವೇನೆಂಬುದನ್ನು ತಾವೇ ಅಪ್ಪಣೆ ಕೊಡಿಸಿ ನಮ್ಮನ್ನು ಕಾಪಾಡಬೇಕು" ಎಂದು ಕಣ್ಣೀರು ಸುರಿಸುತ್ತಾ ಪ್ರಾರ್ಥಿಸಿದನು.

ಧರ್ಮರಾಜನ ಮಾತು, ಪ್ರಾರ್ಥನೆಗಳನ್ನಾಲಿಸಿದ ಪಿತಾಮಹಭೀಷ್ಮರು ನಗೆಮೊಗದಿಂದ "ಕುಮಾರ ಧರ್ಮ-ನಂದನ, "ಯತೋ ಧರ್ಮಸ್ತತೋ ಜಯಃ" ಎಂಬುದನ್ನು ನೀನರಿಯೆಯೋ? ಮೇಲಾಗಿ ಜಗಜ್ಜನ್ಮಾದಿಕಾರಣನು, ಜಗದೊಡೆಯನು ಆದ ಈ ಕೃಷ್ಣಪರಮಾತ್ಮನ ಅನುಗ್ರಹ, ಬೆಂಬಲ ನಿಮಗಿರುವಾಗ ಎಂದಿಗೂ ಜಯವು ನಿಮಗೆ ಸಿದ್ಧ. ಹೋ! ಭಗವಂತನ ಸಂಕಲ್ಪಕ್ಕೆ ಎದುರಾರು? ಧರ್ಮರಾಜ! ನನ್ನ ಸಂಹಾರದ ಉಪಾಯವನ್ನು ಹೇಳುತ್ತೇನೆ ಕೇಳು. ಶಿಖಂಡಿಯು ನನ್ನ ಮುಂದೆ ಯುದ್ಧಕ್ಕೆ ಬಂದರೆ ನಾನು ಯುದ್ಧದಿಂದ ನಿವೃತ್ತನಾಗುತ್ತೇನೆ. ಆಗ ನನ್ನನ್ನು ಸಂಹರಿಸಬಹುದು. ನಿಮ್ಮದೇ ವಿಜಯವಾಗಲಿ, ಮಂಗಳವಾಗಲಿ" ಎಂದು ಹೇಳಿ ಆಶೀರ್ವದಿಸಿ ಕಳಿಸಿದರು.

ಮರುದಿನ ಧರ್ಮರಾಜ ಮೊದಲಾದವರು ರಣಭೂಮಿಯಲ್ಲಿ ಶಿಖಂಡಿಯನ್ನು ಮುಂದೆ ಇರಿಸಿ, ನಾಯಕನನ್ನಾಗಿ ಮಾಡಿಕೊಂಡು ಯುದ್ಧಕ್ಕೆ ಬಂದರು. ಕೌರವರು ಭೀಷ್ಮರನ್ನು ಮುಂದೆ ಮಾಡಿಕೊಂಡು ಯುದ್ಧಕ್ಕಾಗಿ ಆಗಮಿಸಿದರು. ಶಿಖಂಡಿಯ ರಕ್ಷಕನಾಗಿ ಅರ್ಜುನನೂ, ಭೀಷ್ಮರ ರಕ್ಷಣೆಗಾಗಿ ದುಶ್ಶಾಸನನೂ ಮುಂದೆ ಬಂದರು. ಉಳಿದ ಎಲ್ಲರೂ ಭೀಷ್ಮರನ್ನು ಅನುಸರಿಸಿದರು. ಭೀಮಸೇನನು ಅವರೆಲ್ಲರನ್ನು ಮುಂದೆ ಬರದಂತೆ ತಡೆದನು. ಭೀಷ್ಮರನ್ನು ಎದುರಿಸಲು ಬಂದ ಯುಯುಧಾನನನ್ನು ರಾಕ್ಷಸನಾದ ಅಲಂಬುಸನು ತಡೆದನು. ಆಗ ಯುದ್ಧವೀರನಾದ ಯುಯುಧಾನನು ಅಲಂಬುಸನನ್ನು ವಜ್ರಾಯುಧ ಸದೃಶವಾದ ಬಾಣಗಳಿಂದ (ಈ ಭಾಗದ ಕಥೆಯು ತಾತ್ಪರ್ಯನಿರ್ಣಯದಲ್ಲಿ ವಿಸ್ತಾರವಾಗಿದೆ) ನೋಯಿಸಿದನು. ಆಗ ಅಲಂಬುಸನು ಉಗ್ರವಾದ ತನ್ನ ಮಾಯೆಯನ್ನು ಸೃಜಿಸಿದನು. ಆಗ ಸಾತ್ಯಕಿಯು ದಿವ್ಯಾಸ್ತ್ರದಿಂದ ರಾಕ್ಷಸನ ಮಾಯೆಯನ್ನು ಭಂಗಗೊಳಿಸಿ ಅವನನ್ನು ಹೊಡೆದೋಡಿಸಿದನು. ಯುಯುಧಾನನು ರಥದಲ್ಲಿ ಮಂಡಿಸಿ ಭೀಷ್ಮರ ಬಳಿಗೆ ಅರ್ಜುನನನ್ನು ಅನುಸರಿಸಿ ಹೊರಟನು.

ಆಗ ದ್ರೋಣ, ಅಶ್ವತ್ಥಾಮ, ದುರ್ಯೋಧನ, ಭೂರಿಶ್ರವ, ಭಗದತ್ತ, ಶಲ್ಯ, ಬಾಹ್ಲೀಕ, ಕೃತವರ್ಮ, ಸುಶರ್ಮ ಮೊದಲಾದವರು ಮುಂದೆ ಬರಲು ಅವರೆಲ್ಲರನ್ನೂ ವಾಯುನಂದನನಾದ ಭೀಮಸೇನನು ನಿವಾರಿಸಿದನು. ಭೀಮಸೇನನು ಆ ದ್ರೋಣಾದಿಗಳನ್ನು ಮತ್ತೆಮತ್ತೆ ವಿರಥರನ್ನಾಗಿ ಮಾಡಿ ತಡೆಗಟ್ಟಿದನು. ಆಗ ಅರ್ಜುನನೊಡನೆ ಕಾದಾಡಬಯಸಿ ಸುಪ್ರತೀಕ ಗಜದೊಡನೆ ಆಗಮಿಸಿದ ಭಗದತ್ತನನ್ನು ಓಡಿಸಿದನು. ಅರ್ಜುನನು ದೇವವ್ರತ (ಭೀಷ್ಮ)ನ ಬಳಿಗೆ ಬಂದನು. ಧರ್ಮರಾಜ ನಕುಲ ಸಹದೇವರು ಅಕ್ಷೋಹಿಣೀಸೈನ್ಯದೊಡನೆ ಭೀಷ್ಮರ ಬಳಿಗೆ ಬರಲು ಶಕುನಿಯು ಅಶ್ವಸೇನಾನಾಯಕನಾಗಿ ಅವರನ್ನು ತಡೆದು ಪ್ರತಿಭಟಿಸಿದರು. ಆಗ ಪಾಂಡವರು ಅವನ ಅಶ್ವಾರೋಹಿ ಸೈನಿಕರೆಲ್ಲರನ್ನೂ ಜಯಿಸಿ ಸಂಹರಿಸಿ, ಶಕುನಿಯನ್ನು ಪರಾಭವಗೊಳಿಸಿ ಭೀಷ್ಮರ ಬಳಿಗೆ ಬಂದರು. ದ್ರೌಪದಿಯ ಸಕಲ ಮಕ್ಕಳು, ವಿರಾಟ, ದ್ರುಪದ, ಕುಂತಿಭೋಜ,

ಧೃಷ್ಟದ್ಯುಮ್ನನನ್ನು ಸೈಂಧವನು ಬಾಣಪ್ರಯೋಗದಿಂದ ತಡೆದನು. ಆಗ ಧೃಷ್ಟದ್ಯುಮ್ನನು ಸೈಂಧವನ ಸೈನ್ಯವನ್ನು ಬಾಣ ಸಮೂಹಗಳಿಂದ ತರಿದು, ಹತರಾದ ಅಶ್ವ ಸಾರಥಿಗಳುಳ್ಳ ಸೈಂಧವನನ್ನು ಓಡಿಸಿ ಆ ವೀರನು ಭೀಷ್ಮರಲ್ಲಿಗೆ ಬಂದನು.

ರಣಮುಖದಲ್ಲಿ ಅರ್ಜುನನು ಶಿಖಂಡಿಯ ರಕ್ಷಕನಾಗಿದ್ದನು. ಶಿಖಂಡಿಯು ಭೀಷ್ಮರತ್ತ ಧಾವಿಸಿ ಬಂದು ಅವರನ್ನು ಬಾಣಗಳಿಂದ ತಾಡಿಸಿದನು. ಭೀಷ್ಮರು ಶಿಖಂಡಿಯು ಹೆಣ್ಣೆಂದರಿತು ಅವನ ಮೇಲೆ ಬಾಣವನ್ನು ಪ್ರಯೋಗಿಸಲಿಲ್ಲ. ಆಗ ದುರ್ಯೋಧನನ ತಮ್ಮನಾದ ದುರ್ಮರ್ಷಣನು ತೀಕ್ಷ್ಣವಾದ ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡನು. ಪಾಕಶಾಸನಿಯು (ಅರ್ಜುನನು) ಅದನ್ನೂ ಖಂಡಿಸಿದನು. ಇಂತು ಅರ್ಜುನನು ಭೀಷ್ಮರಿಗೆ ದುರ್ಯೋಧನನ ಜನರಿಂದ ಕೊಡಲ್ಪಟ್ಟ ಗುರಾಣಿ, ಖಡ್ಗ ಮತ್ತು ಬಿಲ್ಲುಗಳನ್ನೂ ಎಂಟು ಬಾರಿ ಮುರಿದು ಹಾಕಿದನು. ಪುನಃ, ದುರ್ಯೋಧನನ ವೀರರಿಂದ ಪುನಃ ಪುನಃ ಕೊಡಲ್ಪಟ್ಟ ಅಸ್ತ್ರಧನುಸ್ಸುಗಳೆಲ್ಲವನ್ನೂ ಭೇದಿಸಿಬಿಟ್ಟನು. ಆ ನಂತರ ಸೂರ್ಯನಂತೆ ಬೆಳಗುವ ಬಾಣಗಳಿಂದ ಪಿತಾ-ಮಹರೊಡನೆ ಯುಧಿಷ್ಠಿರಾದಿಗಳು ಹೋರಾಡಿದರು. ಇಂತು ಅವರೆಲ್ಲರಿಂದ ನೋಯಿಸಲ್ಪಟ್ಟ ಭೀಷ್ಮಾಚಾರ್ಯರು ಭೂಮಿಗುರುಳಿದರು. ಅವರು ಇಚ್ಛಾಮರಣಿಗಳಾದುದರಿಂದ ಭೂಮಿಗುರುಳಿದರೂ ಉತ್ತರಾಯಣವನ್ನು ನಿರೀಕ್ಷಿಸುತ್ತಾ ಆ ವರೆವಿಗೆ ಪ್ರಾಣಧಾರಣ ಮಾಡಿದರು.

ಭೀಷ್ಮರು ಧರೆಗುರುಳಿದ ಮೇಲೆ ಭೀಮಸೇನನು ದ್ರೋಣಾಚಾರ್ಯರೇ ಮೊದಲಾದವರನ್ನು ಓಡಿಸಿ ಬೇಗನೆ ಭೀಷ್ಮಾಚಾರ್ಯರ ಬಳಿಗೆ ಆಗಮಿಸಿದನು. ಆಗ ಭೀಷ್ಮರು ಮತ್ತು ಪಾಂಡವರು ಯುದ್ಧ ಮಾಡುತ್ತಿದ್ದ ಕಡೆಗೆ ದ್ರೋಣಾಚಾರ್ಯಾದಿ ಪ್ರಮುಖರು ಬಂದರು. ವೀರರಾದ ಅರ್ಜುನಾದಿ ಪಾಂಡವರೂ ಇನ್ನಿತರ ಕೌರವಾದಿಗಳೂ ಭೀಷ್ಮ ಪಿತಾಮಹರ ಬಳಿಗೆ ಧಾವಿಸಿ ಬಂದರು. ಆಯುಧಗಳನ್ನು ಕೆಳಗಿರಿಸಿ ವೀರರಾದ ಪಾಂಡವರು ಮಿಕ್ಕುಳಿದವರೂ ಭೀಷ್ಮಾಚಾರ್ಯರ ಬಳಿಗೆ ಆಗಮಿಸಿದರು.

ಅನಂತರ ಪಿತಾಮಹರಾದ ಭೀಷ್ಮಾಚಾರ್ಯರ ವಚನದಂತೆ ಸಕಲ ಕುರು-ಪಾಂಡವರು ಆ ದಿನ ಯುದ್ಧವನ್ನು ನಿಲ್ಲಿಸಿ ಶಿಬಿರಕ್ಕೆ ಹೋದರು.

ಮರುದಿವಸ ಯದುಪತಿ ಶ್ರೀಕೃಷ್ಣನೊಡನೆ ಪಾಂಡವ ಕೌರವರೆಲ್ಲರೂ ಭೀಷ್ಮಾಚಾರ್ಯರ ಬಳಿ ಇದ್ದರು. ಹಿಂದಿನ ದಿನ ಭೀಷ್ಮಪಿತಾಮಹರು ನೆಲದ ಮೇಲೆ ಬೀಳದಂತೆ ಅರ್ಜುನನು ಶರಪಂಜರವನ್ನು ನಿರ್ಮಿಸಿಕೊಟ್ಟನು. ಭೀಷ್ಮಾಚಾರ್ಯರು ಶರಪಂಜರದಲ್ಲಿ ಪವಡಿಸಿದರು. ಆಗ ಭೀಷ್ಮಾಚಾರ್ಯರು ಬಾಯಾರಿಕೆಯಿಂದ ಯೋಗ್ಯವಾದ ಪಾನೀಯವನ್ನು ಅಪೇಕ್ಷಿಸಿದರು. ಯಾವ ಪಾನೀಯವನ್ನು ಕೊಡಬೇಕೆಂಬುದನ್ನು ಅರಿಯಲಾಗದೆ ಕೌರವರು ಚಿಂತಿಸುತ್ತಿರುವಾಗ ಭೀಷ್ಮರ ಮನದಿಂಗಿತವನ್ನರಿತ ಅರ್ಜುನನು ವಾರುಣಾಸ್ತ್ರದಿಂದ ಭೂಮಿಯನ್ನು ಭೇದಿಸಿ ಸುಗಂಧಮಯ ಜಲವನ್ನು ಊರ್ಧ್ವ-ಧಾರೆಯಾಗಿ ಭೀಷ್ಮಾಚಾರ್ಯರ ಬಾಯಿಗೆ ಬೀಳುವಂತೆ ಮಾಡಿದನು. ಅದರಿಂದ ಪಿತಾಮಹ ಭೀಷ್ಮಾಚಾರ್ಯರು ಸಂತೃಪ್ತರಾಗಿ ಇಂತು ನುಡಿದರು.

"ಎಲೈ ಕೌರವರೇ! ನನಗೆ ಜಲಪಾನ ಮಾಡಿದ ಅರ್ಜುನನ ಅಸ್ತ್ರವಿದ್ಯಾ ವಿಶಾರದತೆಯನ್ನು, ಯುದ್ಧದಲ್ಲಿ ಭೀಮಸೇನನ ಮಹಾಬಾಹುಬಲವನ್ನೂ ಪುನಃ ಪುನಃ ನೋಡಿದ್ದೀರಿ ಮತ್ತು ವೇದಾದಿ ಶಾಸ್ತ್ರಗಳಿಂದಲೂ ಅಜ್ಞೇಯವಾದ (ತಿಳಿಯಲಾಗದ) ಶ್ರೀವಾಸುದೇವನ ಮಹಾತ್ಮ್ಯವನ್ನು, ರಾಜಸಭೆಯಲ್ಲಿ ನೀವು ಶ್ರೀಕೃಷ್ಣನನ್ನು ಬಂಧಿಸಲು ಯತ್ನಿಸಿದಾಗ ಅವನು ತೋರಿದ ವಿಶ್ವರೂಪದರ್ಶನಾದಿಗಳಿಂದ ಮನದಟ್ಟು ಮಾಡಿಕೊಂಡಿದ್ದೀರಿ. ಆದುದರಿಂದ ನೀವು ಯುದ್ಧವನ್ನು ನಿಲ್ಲಿಸಿರಿ. ನಿಮ್ಮ ಸಹಾಯಾರ್ಥವಾಗಿ ಬಂದ ಎಲ್ಲ ರಾಜರುಗಳೂ ತಮ್ಮ ತಮ್ಮ ರಾಜ್ಯಗಳಿಗೆ ಹೋಗಿ ಸುಖಿಗಳಾಗಲಿ.

ನ್ಯಾಯರೀತಿಯಿಂದ, ಯಥೋಚಿತವಾಗಿ ಪರಮಾತ್ಮನು ಕರುಣಿಸಿದ ರಾಜ್ಯವನ್ನು ವಿಭಾಗ ಮಾಡಿಕೊಂಡು ರಾಜರಾಗಿ ನೀವಿಬ್ಬರೂ ಅನುಭೋಗಿಸುತ್ತಾ ಕ್ಷೇಮದಿಂದಿರಿ'' ಎಂದು ಉಪದೇಶಿಸಿದರು. ಪಿತಾಮಹರ ಉಪದೇಶವನ್ನು ಕೇಳಿದ ಕೌರವರು ಅದಕ್ಕೆ ಉತ್ತರಿಸದೇ ಮೌನವಾಗಿ ತಮ್ಮ ಶಿಬಿರಗಳಿಗೆ ತೆರಳಿದರು.

ಶ್ರೀವೇದವ್ಯಾಸದೇವರ ಅನಗ್ರಹದಿಂದ ರಣರಂಗದಲ್ಲಿ ಜರುಗಿದ ಯುದ್ಧ ವಿಚಾರಗಳನ್ನು ಕರಬದಿರ ನ್ಯಾಯದಂತೆ (ಅಂಗೈಯ್ಯಲ್ಲಿ ನೆಲ್ಲಿಕಾಯಿಯನ್ನು ಕಂಡಂತೆ) ತಿಳಿಯಲು ಸಮರ್ಥನಾದ ಸಂಜಯನಿಂದ, ಪಿತಾಮಹರಾದ ಭೀಷ್ಮಾ-ಚಾರ್ಯರು ಧರೆಗುರುಳಿದ ವಿಚಾರವನ್ನು ಅರಿತು ಧೃತರಾಷ್ಟ್ರನು ಅತಿಯಾಗಿ ದುಃಖಿಸಿದನು. ಶ್ರೀಕೃಷ್ಣನಿಂದ ರಕ್ಷಿತರಾದ ಪಾಂಡವರನ್ನು, ಶ್ರೀಕೃಷ್ಣನನ್ನೇ ದೈವವಾಗಿ ತಿಳಿದಿರುವ ಪಾಂಡವರೂ ತಮ್ಮ ಶಿಬಿರಕ್ಕೆ ಬಂದು ಸಕಲರಿಂದ ಪೂಜ್ಯರಾದ ಭೀಷ್ಮಪಿತಾಮಹರು ಧರೆಗುರುಳಿದ್ದರಿಂದ ಅತ್ಯಂತ ದುಃಖಿತರಾಗಿ ನಂತರ ಸಂತೋಷಿಸಿದರು.

*ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ 'ಭೀಷ್ಮಪತನ'ವೆಂಬ*
*ಇಪ್ಪತ್ತೈದನೆಯ ಅಧ್ಯಾಯದ ಕಥಾಸಾರವು ಮುಗಿದುದು.*

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★

## ಷಡ್ವಿಂಶಾಧ್ಯಾಯಭಾವಸಂಗ್ರಹ

*ಅವತಾರಿಕೆ:-*

**ಅವತಾರಿಕೆ :-** ಶ್ರೀ ಮಂತ್ರಾಲಯಶ್ರೀಪಾದಂಗಳವರು ಈಗ ಶ್ರೀಮದಾನಂತೀರ್ಥ ಭಗವತ್ಪಾದರು ರಚಿಸಿದ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದ ಇಪ್ಪತ್ತಾರನೆಯ ಅಧ್ಯಾಯಾರ್ಥವನ್ನು "ದ್ರೋಣೇ" ಎಂಬ ಪದ್ಯದಿಂದ ಸಂಗ್ರಹಿಸುತ್ತಾರೆ.

**ದ್ರೋಣೇ ಯುಧ್ಯತಿ ಪಾಂಡವೈರ್ವಿನಿಹತಂ ಪ್ರಾಗ್ಜ್ಯೋತಿಷಂ ಪಾರ್ಥತಃ**
**ಕೃತ್ವಾ ತಸ್ಯ ಸುತೇ ಹತೇ ನಿಶಿ ಶಿವಂ ನೀತ್ವಾಽರ್ಜುನಂ ಸೈಂಧವಮ್ ।**
**ತದ್ದತ್ತಾಸ್ತ್ರಬಲಾದಜೀಘನದತೋ ದ್ರೌಣೇ ಹತೇ ದ್ರೌಪದೇಃ**
**ಯೋ ಭೀಮಂ ಚ ನಿಜಾಸ್ತ್ರನಮ್ರಮಕರೋತ್ ತಂ ನೌಮಿ ನಾರಾಯಣಮ್ ॥ 26 ॥**

**ಅನ್ವಯಾರ್ಥ :-** **ದ್ರೋಣೇ** = ದ್ರೋಣಾಚಾರ್ಯರು, **ಪಾಂಡವೈಃ** = ಪಾಂಡವರಿಂದೊಡಗೂಡಿ, **ಯುಧ್ಯತಿ ಸತಿ** = ಯುದ್ಧ ಮಾಡುತ್ತಿರಲು, **ಪ್ರಾಗ್ಜ್ಯೋತಿಷಂ** = ಪ್ರಾಗ್ಜ್ಯೋತಿಷರಾಜ್ಯದ ಅರಸನಾದ ಭಗದತ್ತನನ್ನು, **ವಿನಿಹಿತಂ** = ಕೊಲ್ಲಲ್ಪಟ್ಟವನನ್ನಾಗಿ, **ಕೃತ್ವಾ** = ಮಾಡಿ, **ತಸ್ಯ** = ಆ ಅರ್ಜುನನ, **ಸುತೇ** = ಕುಮಾರನಾದ ಅಭಿಮನ್ಯುವು, **ಹತೇ ಸತಿ** = ಸಂಹರಿಸಲ್ಪಡಲು, **ಅರ್ಜುನಂ** = ಪಾರ್ಥನನ್ನು, **ನಿಶಿ** = ರಾತ್ರಿಯಲ್ಲಿ, **ಶಿವಂ** = ರುದ್ರದೇವರನ್ನು ಕುರಿತು, **ನೀತ್ವಾ** = ಕರೆದುಕೊಂಡು ಹೋಗಿ, **ತತ್** = ಆ ಮಹಾರುದ್ರದೇವರಿಂದ, **ದತ್ತ** = ಕೊಡಲ್ಪಟ್ಟ , **ಅಸ್ತ್ರಬಲಾತ್** = ಶಸ್ತ್ರದ (ಆಯುಧದ) ಬಲದಿಂದ, **ಸೈಂಧವಂ** = ಜಯದ್ರಥನನ್ನು, **ಅಜೀಘನತ್** = ಸಂಹಾರಮಾಡಿಸಿದನು. **ಅತೋ** = ಅನಂತರ, **ದ್ರೌಪದೇಃ** = ದ್ರುಪದರಾಜಪುತ್ರನಾದ ಧೃಷ್ಟದ್ಯುಮ್ನನಿಂದ, **ದ್ರೋಣೇ** = ದ್ರೋಣಾಚಾರ್ಯರು, **ಹತೇ** = ಕೊಲ್ಲಲ್ಪಡಲು, **ಯಃ** = ಯಾವ ಶ್ರೀಕೃಷ್ಣನು, **ಭೀಮಂ ಚ** = ಭೀಮಸೇನನನ್ನೂ ಸಹ, **ನಿಜಾಸ್ತ್ರನಮ್ರಂ** = ಅಶ್ವತ್ಥಾಮಾಚಾರ್ಯನು ಪ್ರಯೋಗಿಸಿದ ತನ್ನ ಸಂಬಂಧಿಯಾದ ನಾರಾಯಣಾಸ್ತ್ರಕ್ಕೆ ನಮ್ರನನ್ನಾಗಿ ಅಂದರೆ ವಿಧೇಯನನ್ನಾಗಿ, **ಅಕರೋತ್** = ಮಾಡಿದನೋ, **ತಂ** = ಆ, **ನಾರಾಯಣಂ** = ನಾರಾಯಣಾಭಿನ್ನನಾದ ಶ್ರೀಕೃಷ್ಣನನ್ನು, **ನೌಮಿ** = ನಮಸ್ಕರಿಸುತ್ತೇನೆ.

**ತಾತ್ಪರ್ಯ :-** ಪಿತಾಮಹರಾದ ಭೀಷ್ಮಾಚಾರ್ಯರ ಪತನಾನಂತರ ದುರ್ಯೋಧನನು, ಶಸ್ತ್ರವಿದ್ಯಾಚಾರ್ಯರಾದ ದ್ರೋಣಾಚಾರ್ಯರನ್ನು ಮಹಾರಣರಂಗದಲ್ಲಿ ಸೇನಾಧಿಪತಿಗಳನ್ನಾಗಿ ಮಾಡಿದನು. ಆಗ ಮಹಾಪಾಂಡವರಿಗೂ, ದ್ರೋಣಾಚಾರ್ಯರಿಗೂ ಉಗ್ರವಾದ ಕದನವಾಯಿತು. ಆ ಸಮಯದಲ್ಲಿ ಮುಂದೆ ಬಂದು ಮಹಾಬಲಪ್ರದರ್ಶನ ಮಾಡಿದ ಪ್ರಾಗ್ಜ್ಯೋತಿಷರಾಜ್ಯಾಧಿಪತಿಯಾದ ಭಗದತ್ತನನ್ನು ಶ್ರೀವಾಸುದೇವನು ಅರ್ಜುನನಿಂದ ಸಂಹಾರ ಮಾಡಿಸಿದನು. ಆ ತರುವಾಯ ದ್ರೋಣಾಚಾರ್ಯರು ನಿರ್ಮಿಸಿದ ಪದ್ಮವ್ಯೂಹವನ್ನು ಮುರಿದು ಅಭಿಮನ್ಯುವು ಬಹುಪರಾಕ್ರಮದಿಂದ ಕಾದಾಡುತ್ತಿರಲು, ರುದ್ರದೇವರ ವರಬಲದಿಂದ, ಅಭಿಮನ್ಯುವಿಗೆ ಸಹಾಯಕರಾಗಿ ಬಂದ ಭೀಮಸೇನಾದಿಗಳನ್ನು ಪದ್ಮವ್ಯೂಹ ದ್ವಾರದಲ್ಲಿ ಪ್ರವೇಶಿಸದಂತೆ ಸೈಂಧವನು ತಡೆದನು. ಆ ಕಾರಣದಿಂದಾಗಿ ಅಭಿಮನ್ಯುವು ಕೌರವರ ಸಮಸ್ತ ಮಹಾರಥಿಗಳಾದ ದ್ರೋಣ-ಕರ್ಣಾದಿಗಳ ಅಧರ್ಮಾಚರಣೆಯಿಂದ ಆ ಅಧರ್ಮಯುದ್ಧದಲ್ಲಿ ಏಕಾಂಗಿಯಾಗಿ ಹೋರಾಡಿ ಮೃತನಾದನು. ಇದರಿಂದ ಕೆರಳಿದ ಅರ್ಜುನನು "ನಾಳೆ (ಮರು ದಿನ) ಸೂರ್ಯನು ಅಸ್ತಂಗತನಾಗುವುದರೊಳಗೆ ಸೈಂಧವನನ್ನು ಸಂಹರಿಸುವೆನು, ಅದು ಆಗದಿದ್ದಲ್ಲಿ ಅಗ್ನಿಪ್ರವೇಶಮಾಡುತ್ತೇನೆ" ಎಂದು ಘೋರ ಪ್ರತಿಜ್ಞೆ ಮಾಡಿದನು.

# ಇಪ್ಪತ್ತಾರನೆಯ ಅಧ್ಯಾಯದ ಕಥಾಸಾರವು

ಶ್ರೀಶ್ರೀಭೀಷ್ಮಪಿತಾಮಹರ ಪತನಾನಂತರ ಸಕಲ ರಾಜರುಗಳಿಗೂ ಆಚಾರ್ಯರಾದ ಅಂದರೆ ಅಸ್ತ್ರವಿದ್ಯಾಶಿಷ್ಯರಾದ ನಿಖಿಲ ಮಹಾರಥಿಗಳ ಮಧ್ಯದಲ್ಲಿ ಅತ್ಯಂತ ಶ್ರೇಷ್ಠರಾದ ಜಗತ್ಪತಿಗಳಾದ ಶ್ರೀಪರುಶರಾಮದೇವರ ಶ್ರೇಷ್ಠಶಿಷ್ಯರಾದ ದ್ರೋಣಾಚಾರ್ಯರನ್ನು, ಕುರುಪತಿಯಾದ ದುರ್ಯೋಧನನು ಕೌರವರ ಸಮಸ್ತ ಸೈನ್ಯಗಳನ್ನು ಮಹಾಸೇನಾಪತಿಗಳನ್ನಾಗಿ ಮಾಡಿ ಗೌರವಿಸಿದನು. ಹಿಂದೆ ಭೀಷ್ಮಾಚಾರ್ಯರ ಸೇನಾಪತಿತ್ವಕಾಲದಲ್ಲಿ ಕರ್ಣ! ನೀನು ಅರ್ಧರಥಿಯಾಗಿದ್ದೀ ಎಂದು ಭೀಷ್ಮರು ಹೀಯಾಳಿಸಿದಾಗ ಕರ್ಣನು ಕೋಪದಿಂದ ಭೀಷ್ಮರು ಸೇನಾಪತಿಗಳಾಗಿರುವವರೆಗೆ ನಾನು ಯುದ್ಧ ಮಾಡುವುದಿಲ್ಲ ಎಂದು ಹೇಳಿ ಧನುರ್ಬಾಣಗಳನ್ನು ತ್ಯಜಿಸಿದ್ದನಷ್ಟೇ ? ಅಂತಹ ಕರ್ಣನಿಗೆ ಭೀಷ್ಮಾಚಾರ್ಯರ ಪತನಾನಂತರ ದ್ರೋಣರು ಮಹಾಸೈನ್ಯಾಧಿಪತಿಗಳಾದ ಮೇಲೆ "ಕರ್ಣ! ನೀನು ಶ್ರೇಷ್ಠರಥಿ ಯೋಧ. ಯುದ್ಧಮಾಡು" ಎಂದು ಶರಪಂಜರದಲ್ಲಿ ಪವಡಿಸಿದ್ದ ಭೀಷ್ಮರಿಂದ ಆಜ್ಞಪ್ತನಾಗಿ ಅವರ ಸಮ್ಮತಿಯಂತೆ ಶ್ರೇಷ್ಠಧನುರ್ಧಾರಿಯಾದ ಕರ್ಣನು ದಿವ್ಯ ರಥದಲ್ಲಿ ಕುಳಿತು ಆಚಾರ್ಯ ದ್ರೋಣರನ್ನು ಅನುಸರಿಸಿ ಯುದ್ಧಮಾಡಲು ರಣರಂಗಕ್ಕೆ ತೆರಳಿದನು.

ಅಂದು ದುರ್ಯೋಧನನು "ಆಚಾರ್ಯರೇ! ನೀವು ಇಂದು ಧರ್ಮರಾಜನನ್ನು ಸೆರೆ ಹಿಡಿಯಬೇಕೆಂದು ಪ್ರಾರ್ಥಿಸಿದಾಗ, ದ್ರೋಣರು ಧರ್ಮರಾಜನನ್ನು ಬಂಧಿಸುವುದಾಗಿ ಪ್ರತಿಜ್ಞೆ ಮಾಡಿದರು. ಇದನ್ನು ತಿಳಿದ ಭೀಮಾರ್ಜುನ ಮುಂತಾದವರು ಸರ್ವಪ್ರಕಾರದಿಂದ ಯುಧಿಷ್ಠಿರನನ್ನು ರಕ್ಷಿಸುವುದಾಗಿ ಪ್ರತಿಜ್ಞಾಬದ್ಧರಾಗಿ ಯುದ್ಧ ಭೂಮಿಗೆ ಆಗಮಿಸಿದರು. ಆಗ ದ್ರೋಣಾಚಾರ್ಯ ಹಾಗೂ ಪಾಂಡವರ ಮಧ್ಯೆ ಅತಿ ಭಯಂಕರವಾದ ಯುದ್ಧವಾಯಿತು.

ಆಗ ದ್ರೋಣಾಚಾರ್ಯರು ಮಂಡಲಾಕಾರವಾದ ಧನುಸ್ಸಿನಿಂದ ದೇವತಾಪ್ರಾರ್ಥನೆ ಮಾಡಿ ಮಂತ್ರಾಸ್ತ್ರಗಳನ್ನು ಪ್ರಯೋಗಿಸಿ ಶತ್ರುಗಳನ್ನು ನೋಯಿಸಿದರು. ಆಗ ಭೀಮಸೇನನು ಸಿಂಹನಾದಮಾಡಿ ದ್ರೋಣಾಚಾರ್ಯರ ಬಳಿಗೆ ಬರುತ್ತಿರಲು ಅಶ್ವತ್ಥಾಮ, ಕೃಪ, ಶಲ್ಯ, ಈ ಮೂವರೂ ಅವನನ್ನು ತಡೆದರು. ಭೀಮಸೇನನು ಅವರನ್ನು ಪರಾಭವಗೊಳಿಸಿ ದ್ರೋಣರಲ್ಲಿಗೆ ಧಾವಿಸಿದನು. ಅಭಿಮನ್ಯುವು ಭೀಮಸೇನನಿಗೆ ಸಹಾಯಕನಾಗಿ ಅವನನ್ನು ಅನುಸರಿಸಿದನು. ಅದನ್ನು ಕಂಡ ಮದ್ರಪತಿಯಾದ ಶಲ್ಯನು ಅಭಿಮನ್ಯುವನ್ನು ಕುರಿತು ಕೆರಳಿದನು. ಆಗ ಅಭಿಮನ್ಯು-ಶಲ್ಯರ ಮಧ್ಯೆ ಭೀಕರ ಸಂಗ್ರಾಮ-ವಾಯಿತು. ಆಗ ಶಲ್ಯರಾಜನು ಅಭಿಮನ್ಯುವನ್ನು ಸಂಹರಿಸಲು ಪ್ರಚಂಡಗದೆಯನ್ನು ಹಿಡಿದು ಮುನ್ನುಗ್ಗಿದನು. ಅದನ್ನು ಅವಲೋಕಿಸಿದ ಭೀಮನು ಗದಾಧಾರಿಯಾಗಿ ಅಭಿಮನ್ಯುವಿನ ರಕ್ಷಣೆಗಾಗಿ ಶಲ್ಯನತ್ತ ಧಾವಿಸಿಬಂದನು.[43]

ಆಗ ಶಲ್ಯರಾಜ ಭೀಮಸೇನನಿಗೆ ಯುದ್ಧವಾಯಿತು. ಅಜೇಯರೂ, ಗಾದಪಾಣಿಗಳೂ, ಸಮಾನಬಲಶಾಲಿಗಳೂ, ಆದ ಭೀಮ ಮತ್ತು ಶಲ್ಯರು ಸರ್ವರಿಗೂ ಆಶ್ಚರ್ಯವಾಗುವಂತೆ ಸಂಚರಿಸುತ್ತ ತಮ್ಮ ಮನೋಹರ ಯುದ್ಧ ಚಮತ್ಕಾರದಿಂದ ಹೋರಾಡುತ್ತಾ, ಪರಸ್ಪರ ಗದಾಪ್ರಹಾರದಿಂದ ಅಂಕಿತವಾದ ವಜ್ರಗಾತ್ರವುಳ್ಳ ಅವರನ್ನು ಸಮಸ್ತಲೋಕದ ಜನರೂ ಬೆರಗಾಗಿ ನೋಡಿದರು. ಆಗ ಭೀಮನ ಗದಾಪ್ರಹಾರದಿಂದ ಶಲ್ಯರಾಜನು ಮೂರ್ಛಿತನಾದನು. ಭೀಮಸೇನನೂ ಬೀಳುವುದರಲ್ಲಿದ್ದು, ಭೂಮಿಗೆ ಮೊಳಕಾಲೂರಿ ಚೇತರಿಸಿಕೊಂಡು ಬಹು ಕ್ರುದ್ಧನಾಗಿ ಕಾಲಪ್ಪಳಿಸುತ್ತ ಮೇಲೆದ್ದು ನಿಂತನು ಮತ್ತು ಮೂರ್ಛಿತನಾದ ಶಲ್ಯನನ್ನು ಯುದ್ಧಕ್ಕೆ ಆಹ್ವಾನಿಸುತ್ತಿರುವ ಭೀಮನನ್ನು ನೋಡುತ್ತಿರುವಂತೆ ಶಲ್ಯನನ್ನು ರಥದಲ್ಲಿ ಕೂಡಿಸಿಕೊಂಡು

43. (ಕೆಲ ವ್ಯಾಖ್ಯಾನಗಳಲ್ಲಿ ಶಲ್ಯನು ಗದಾಧಾರಿಯಾಗಿ ಭೀಮ। ತಂ ದೀಪ್ತಮಿವ ಕಾಲಾಗ್ನಿಂ ದಂಡಹಸ್ತಮಿವಾಂತಕಂ। ಜವೇನಾಭ್ಯಪತತ್ ಭೀಮಃ ಪ್ರಗೃಹ್ಯ ಮಹತೀಂ ಗದಾಂ॥' ದ್ರೋಣಪರ್ವದಲ್ಲಿ ಉಕ್ತವಾಗಿರುವ ವಚನಕ್ಕೆ ವಿರೋಧವಾಗಿರುವುದರಿಂದ ಅದನ್ನು ಅನಾದರ ಮಾಡಬೇಕು.)

ಕೃಪಾಚಾರ್ಯರು ಹೊರಟುಹೋದರು. ಭೀಮನು ಮದ್ರರಾಜನನ್ನು ಜಯಿಸಿ ತೇಜಸ್ಸಿನಿಂದ ಬೆಳಗುತ್ತಾ ಸಿಂಹನಾದ ಮಾಡುತ್ತಿರುವ ವಾಯುನಂದನನು ತನ್ನ ರಥವೇರಿ ತನ್ನ ಶರಾಹತಗಳಿಂದ ದ್ರೋಣಾಚಾರ್ಯರು ನೋಡುತ್ತಿರುವಂತೆ ಕೌರವ ಸೈನ್ಯವನ್ನು ಪಲಾಯನಗೊಳಿಸಿದನು.

ವೃಕೋದರನು ಕುರುಸೈನ್ಯವನ್ನು ವಿದ್ರಾವಣಗೊಳಿಸುತ್ತಿರಲು ದ್ರೋಣಾಚಾರ್ಯರು ಸಾತ್ಯಕಿಯಿಂದೊಡಗೂಡಿದ ಅಭಿಮನ್ಯು ಮುಂತಾದವರನ್ನು ಜಯಿಸಿ. ಯುಧಿಷ್ಠಿರನನ್ನು ಬಂಧಿಸಲು ಮುನ್ನುಗ್ಗಿದನು. ಆಗ ಶ್ರೀಕೃಷ್ಣನು ಸಾರಥ್ಯ ಮಾಡುತ್ತಿರಲು ರಥಾರೂಢನಾದ ಧನಂಜಯನು ಶರೀರವನ್ನು ಭೇದಿಸಿ ನಾಶಪಡಿಸಲು ಸಮರ್ಥವಾದ ಬಾಣಗಳಿಂದ ಸರ್ವತ್ರ ಸಕಲ ಸೈನಿಕರನ್ನೂ ಗಜರಥಗಳನ್ನೂ ಸಂಹರಿಸಿ, ಅವುಗಳ ರಕ್ತ ನದಿಯನ್ನೇ ಹರಿಸಿದನು. ಇಂತು ಅರ್ಜುನನು ಕೌರವ ಸೈನ್ಯವನ್ನು ನಾಶಪಡಿಸುತ್ತಾ (ಸಂಹರಿಸುತ್ತಾ) ಅಣ್ಣನಾದ ಧರ್ಮರಾಜನನ್ನು ಆಪತ್ತಿನಿಂದ ರಕ್ಷಿಸಿದನು. ಭೀಮಾರ್ಜುನರ ಬಾಣಗಳಿಂದ ಭಗ್ನವಾದ ಸೈನ್ಯವನ್ನು ಕಂಡು ದ್ರೋಣಾಚಾರ್ಯರು ಅಳಿದುಳಿದ ಸೈನ್ಯದೊಡನೆ ಶಿಬಿರ ಸೇರಿದರು.

ಅಂದು ರಾತ್ರಿ ದುರ್ಯೋಧನನು ಧರ್ಮರಾಜನನ್ನು ಹಿಡಿಯಲಿಲ್ಲವೆಂದು ಅಸಮಾಧಾನದಿಂದ ದ್ರೋಣಾಚಾರ್ಯರನ್ನು ನಿಷ್ಠುರನುಡಿಗಳಿಂದ ನಿಂದಿಸಿದನು. ಕೌರವನ ಮಾತನ್ನಾಲಿಸಿ ದ್ರೋಣಾಚಾರ್ಯರು ಅರ್ಜುನನು ರಣರಂಗದಲ್ಲಿರುವವರೆಗೆ ಆ ಕಾರ್ಯವು ಕಷ್ಟಕರವಾಗುವುದು. ಆದುದರಿಂದ ನೀವು ಅರ್ಜುನನು ಯುದ್ಧಭೂಮಿಯಿಂದ ದೂರಹೋಗುವಂತೆ ಮಾಡಿರಿ. ಆಗ ನಾನು ಖಂಡಿತವಾಗಿ ಯುಧಿಷ್ಠಿರನನ್ನು ಬಂಧಿಸುವೆನು ಎಂದು ಹೇಳಿದರು. ಆಗ ದುರ್ಯೋಧನನು ಸಂಸಪ್ತಕರ ನಾಯಕನಾದ ಸುಶರ್ಮನನ್ನು ಕರೆದು, ಸುಶರ್ಮಾ! ನೀನು ಭೀಮಾನುಜನಾದ ಅರ್ಜುನನನ್ನು ಯುದ್ಧಕ್ಕೆ ಆಹ್ವಾನಿಸಿ ಸಂಸಪ್ತಕರಿಂದ ಸಹಿತನಾಗಿ ಅರ್ಜುನನನ್ನು ಬೇರೊಂದು ಕಡೆಗೆ ಬಹುದೂರ ಕರೆದು ಕೊಂಡು ಹೋಗಿ ಯುದ್ಧಮಾಡು ಎಂದಾಜ್ಞಾಪಿಸಿದನು. ಸುಶರ್ಮನು ದುರ್ಯೋಧನನ ಮಾತಿಗೆ ಒಪ್ಪಿ ಅದರಂತೆ ಮಾಡುವುದಾಗಿ ಹೇಳಿದನು. ಅದರಂತೆ, ಮರುದಿನ ಸುಶರ್ಮನು ದಕ್ಷಿಣ ದಿಕ್ಕಿನಲ್ಲಿ ನೀನು ನಮ್ಮೊಡನೆ ಯುದ್ಧಮಾಡಲು ಬರಬೇಕೆಂದು ಅರ್ಜುನನಿಗೆ ಯುದ್ಧಾಹ್ವಾನ ನೀಡಿದನು. ಪಾರ್ಥನು ಅದಕ್ಕೆ ಸಮ್ಮತಿಸಿ, ದೂರದ ಆಗ್ನೇಯ ದಿಕ್ಕಿನ ಪ್ರದೇಶದಲ್ಲಿ ಸುಶರ್ಮ, ಸಂಶಪ್ತಕರೊಡನೆ ಯುದ್ಧ ಮಾಡಲು ಪ್ರಾರಂಭಿಸಿದನು.

ಇತ್ತ ರಣರಂಗದಲ್ಲಿ ಭೀಮಸೇನನು ಅನೇಕ ಗಜಸಮೂಹಗಳನ್ನು ಸಂಹರಿಸಿದನು. ಭೀಮನು ಗಜಸಮೂಹವನ್ನು ನಾಶಪಡಿಸುತ್ತಿರಲು, ಹಿಂಡುಹಿಂಡಾಗಿ ಎಲ್ಲ ಆನೆಗಳೂ ಪ್ರಾಣಭಯದಿಂದ ರಾಜರೂ ಸಹ ಓಡುತ್ತಿರಲು ದುರ್ಯೋಧನನ ಅಪೇಕ್ಷೆಯಂತೆ ಭಗದತ್ತನು ತನ್ನ ಸುಪ್ರತೀಕವೆಂಬ ಗಜದೊಡನೆ ಧನುರ್ಧಾರಿಯಾಗಿ ಬಂದು ರಣಭೂಮಿಯಲ್ಲಿ ಕೋಲಾಹಲ ಮಾಡಲಾರಂಭಿಸಿದನು. ಸುಪ್ರತೀಕಗಜದಿಂದ ಭೀತವಾದ ಭೀಮನ ರಥದ ಅಶ್ವಗಳು ಅಲ್ಲಿ ನಿಂತಲ್ಲಿ ನಿಲ್ಲದಂತಾಗಲು. ಸಾತ್ಯಕಿ, ಅಭಿಮನ್ಯು ಮೊದಲಾದ ಪಾಂಡವವೀರರು ಸುಪ್ರತೀಕದತ್ತ ಧಾವಿಸಿ ಬರಲು ಆ ಗಜವು ಅವರ ರಥಗಳನ್ನು ಆಕಾಶಕ್ಕೆತ್ತಿ ಹಾರಿಸಿತು. ಸಾತ್ಯಕಿ ಮುಂತಾದವರು ರಥರಹಿತರಾಗಿ ರಥದಿಂದ ಭೂಮಿಗೆ ಹಾರಿ ಪ್ರಯಾಸದಿಂದ ಉಳಿದು ನಿಂತರು. ಆಗ ಭೀಮಸೇನನು ಬೆದರಿದ ಕುದುರೆಗಳನ್ನು ನಿಯಂತ್ರಿಸಿ ಯುದ್ಧ ಮಾಡುತ್ತಿರಲು ಶ್ರೀಕೃಷ್ಣನು ಅದನ್ನು ತಾನಿದ್ದಲ್ಲಿಂದ ಕಂಡನು. ಭೀಮನಿಂದ ಕ್ಲೇಶಿತನಾದ ಭಗದತ್ತನು ಭೀಮನ ಮೇಲೆ ವೈಷ್ಣವಾಸ್ತ್ರವನ್ನು ಪ್ರಯೋಗಿಸಬಹುದೆಂದು ತರ್ಕಿಸಿ ತನ್ನ ಅಸ್ತ್ರವನ್ನು (ವೈಷ್ಣವಾಸ್ತ್ರವನ್ನು) ತಾನೇ ಸ್ವೀಕರಿಸಬೇಕೆಂದು ಚಿಂತಿಸಿ, ಯೋಚಿಸಿ, ಅರ್ಜುನನೊಡನೆ ಮತ್ತೆ ರಣಭೂಮಿಗೆ ಬರುತ್ತಿರುವಾಗ ತ್ರಿಗರ್ತನೆಂಬ ಅಸುರರು ಅರ್ಜುನನನ್ನು ಮಧ್ಯದಲ್ಲಿಯೇ ತಡೆಗಟ್ಟಿದರು. ಆಗ ಅರ್ಜುನನು ಅವರನ್ನು ಮೋಹಗೊಳಿಸಲು ತ್ವಷ್ಟದೇವತಾಕವಾದ ಅಸ್ತ್ರವನ್ನು ಪರಸ್ಪರವಾಗಿ ಪ್ರಯೋಗಿಸಿದನು. ಆದರಿಂದ ತ್ರಿಗರ್ತರು ಇವನು ಅರ್ಜುನ, ಇವನು ಕೃಷ್ಣ ಎಂದು ಭ್ರಮಿಸಿ ಪರಸ್ಪರ ಕೊಲ್ಲಲಾರಂಭಿಸಿ ತಾವೇ ಮೃತರಾಗಹತ್ತಿದರು.

ಆಗ ಅರ್ಜುನನು ಅವರ ಪಾಡಿಗೆ ಅವರನ್ನು ಬಿಟ್ಟು, ಭಗದತ್ತನನ್ನು ಸಂಹರಿಸಲು ಶೀಘ್ರವಾಗಿ ಧಾವಿಸಿ ಬಂದನು. ಆಗ ಭೀಮನನ್ನು ಬಿಟ್ಟು ಭಗದತ್ತನು ಪಾರ್ಥನ ಮೇಲೆ ಯುದ್ಧಕ್ಕೆ ಹೊರಟನು. ಗಜದಮೇಲೆ ಕುಳಿತ ಭಗದತ್ತನು ತನ್ನ ಗಜವನ್ನು ಅರ್ಜುನನ ರಥದಮೇಲೇರಿಹೋಗುವಂತೆ ಚೋದನ ಮಾಡಿದನು. ಆ ಸಮಯದಲ್ಲಿ ಶ್ರೀಕೃಷ್ಣನು ಅರ್ಜುನನ ರಥವನ್ನು ಅಪಸವ್ಯವಾಗಿ ಸುಪ್ರತೀಕ ಗಜವನ್ನು ಮಧ್ಯೆ ಮಾಡಿಕೊಂಡು ಚಾಕಚಕ್ಯತೆಯಿಂದ ರಥವನ್ನು ತಿರುಗಿಸಿದನು. ಹೀಗೆ ಮನೋಜವದಿಂದ ಕೃಷ್ಣನು ರಥವನ್ನೋಡಿಸುತ್ತಿರಲು ಸುಪ್ರತೀಕವು ಅರ್ಜುನನತ್ತ ಬರಲು ಸಮರ್ಥವಾಗಲಿಲ್ಲ. ಆಗ ಪಾರ್ಥನು ತೀಕ್ಷ್ಣ ಶರಗಳಿಂದ ವ್ಯಥೆಪಡಿಸಿದನು. ನರವೀರರೂ, ಬಲಶಾಲಿಗಳಲ್ಲಿ ಶ್ರೇಷ್ಠರೂ ಆದ ಅರ್ಜುನ ಭಗದತ್ತರು ಅಸ್ತ್ರಶಸ್ತ್ರಗಳಿಂದ, ಬಹುಕಾಲ ಯುದ್ಧ ಮಾಡಿದರು. ಅರ್ಜುನನು ಭಗದತ್ತನ ಧನುವನ್ನು ಕತ್ತರಿಸಿ ಹಾಕಿದನು. ಆಗ ಕೃತ-ವರ್ಮವನು ಪರಾಜಿತನಾಗಲು ಭಗದತ್ತನು ಅಂಕುಶದಲ್ಲಿ ವೈಷ್ಣವಾಸ್ತ್ರವನ್ನು ಸಂಯೋಜಿಸಿ ಅರ್ಜುನನ ಮೇಲೆ ಪ್ರಯೋಗಿಸಿದನು. ಅದನ್ನು ಅಮಿತ ತೇಜಸ್ವಿಯಾದ ಶ್ರೀವಾಸುದೇವನು ತಾನೇ ಸ್ವೀಕರಿಸಿದನು. ಆಗ ಆ ವೈಷ್ಣವಾಸ್ತ್ರವು ಸಮಸ್ತ ಜಗತ್‌ಸ್ವಾಮಿಯಾದ ಕೃಷ್ಣನ ಭುಜದಲ್ಲಿ ವೈಜಯಂತಿ ಮಾಲೆಯಾಗಿ ಕಂಗೊಳಿಸಿತು. ಅಚ್ಯುತನು ಅಸ್ತ್ರವನ್ನು ಧರಿಸಿದ್ದನ್ನು ಕಂಡು ಅರ್ಜುನನು 'ವೈಷ್ಣವಾಸ್ತ್ರವನ್ನು ನೀನೇಕೆ ಧರಿಸಿದೆ?' ಎಂದಾಗ ಶ್ರೀಕೃಷ್ಣನು ಹೀಗೆ ಹೇಳಿದನು-

ಪ್ರೀತಿಪಾತ್ರನಾದ ಹೇ ಅರ್ಜುನ! ಕೇಳು. ನಾನು ಜಗನ್ನಿವಾಸನು. ಸರ್ವದಾ ನಾನು ಸಮಸ್ತ ಚೇತನಾಚೇತನಾತ್ಮಕವಾದ ಜಗತ್ತನ್ನು ಸೃಷ್ಟ್ಯಾದ್ಯವಸ್ಥೆಗಳಲ್ಲಿ ಧರಿಸಿದ್ದೇನೆ. ನನಗೆ ಸದೃಶರಾದವರು ಬೇರಾರೂ ಇಲ್ಲ. ಅಂದಮೇಲೆ ನನಗಿಂದ ಉತ್ತಮರೆಲ್ಲಿಂದ ಬರಬೇಕು? ನಾನು ಸಮ-ಅಧಿಕರಿಂದ ಸರ್ವೋತ್ತಮನು. ನಾನು ಜಗತ್ತಿನ ಹಿತಕ್ಕಾಗಿ ವಾಸುದೇವಾದಿ ನಾಲ್ಕು ರೂಪಗಳುಳ್ಳವನಾಗಿದ್ದೇನೆ. ಮತ್ತು ಕ್ರಮವಾಗಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧಾತ್ಮಕ ಸ್ವಮೂರ್ತಿ- ಗಳಿಂದ ಯುಕ್ತನಾಗಿ ನಾಲ್ಕು ರೂಪಗಳಿಂದ ಮೋಕ್ಷ (ಮುಕ್ತಿ) ಪ್ರಲಯ (ನಾಶ) ಸ್ಥಿತಿ (ಪಾಲನ) ಮತ್ತು ಚೇತನಾಚೇತನಾತ್ಮಕ ಜಗತ್ತಿನ ಸೃಷ್ಟಿ(ಉತ್ಪತ್ತಿ) ಇವುಗಳಿಗೆ ವಾಸುದೇವಾದಿ ಕ್ರಮದಿಂದ ಕರ್ತೃವಾಗಿದ್ದೇನೆ. ಹೀಗೆ ವಾಸುದೇವಾದಿ ನಾಲ್ಕು ರೂಪನಾದ ನಾನು ಅನಿರುದ್ಧ ಸಂಜ್ಞಕನಾಗಿ ಸಮಸ್ತ ಜಗತ್ತಿನ ಹೃದಯ ಕಮಲದಲ್ಲಿ ಇದ್ದವನಾಗಿದ್ದೇನೆ. ಇಂತಹ ವಾಸು- ದೇವಾದಿ ರೂಪವನಾದ ಮತ್ತು ವರಾಹರೂಪಿಯೂ ಆದ ನಾನು ಪೂರ್ವದಲ್ಲಿ ಭೂದೇವಿಯ ಪ್ರೀತ್ಯರ್ಥವಾಗಿ ಅವಳ ಮಗನಾದ ನರಕಾಸುರನಿಗೆ ನನ್ನ ವೈಷ್ಣವಾಸ್ತ್ರವನ್ನು ಕೊಟ್ಟೆನು. ಅವನ ಮಗನಾದ ಭಗದತ್ತ ಸಹಿತನಾದ ನರಕಾಸುರನಲ್ಲಿ ಎಲ್ಲಿಯವರೆಗೆ ನನ್ನ ಅಸ್ತ್ರವಿರುವುದೋ ಅಲ್ಲಿಯವರೆಗೆ ಅವರು ಮತ್ತೊಬ್ಬರಿಂದ ಅವಧ್ಯರಾಗಿರುವಂತೆಯೂ ವರವನ್ನು ಕೊಟ್ಟೆನು. ಆದುದರಿಂದಲೇ ಆ ವೈಷ್ಣವಾಸ್ತ್ರವು ನರಕಾಸುರನಲ್ಲಿದ್ದುದರಿಂದ ಅವನನ್ನು ಬೇರೊಬ್ಬರು ಕೊಲ್ಲಲು ಅಶಕ್ಯವಾದ್ದರಿಂದ ವರಾಹರೂಪಿಯೂ ಕೃಷ್ಣನೂ ಆದ ನಾನೇ ನರಕಾಸುರನನ್ನು ಸಂಹರಿಸಬೇಕಾಯಿತು. ನರಕನ ಮಗನಾದ ಭಗದತ್ತನಿಗೂ ವೈಷ್ಣವಾಸ್ತ್ರವು ಅವನಲ್ಲಿರುವವರೆಗೆ ಅವಧ್ಯನಾಗಿರುವಂತೆ ವರವನ್ನು ಕೊಟ್ಟೆನು.

ಅರ್ಜುನ, ನನ್ನನ್ನು ಬಿಟ್ಟು ಯಾವ ಪುರುಷನೂ, ಯಾವುದೇ ಕಾರಣದಿಂದಲೂ ಅವಧ್ಯನಲ್ಲವಾದುದರಿಂದ ಈ ಕಾರಣದಿಂದಲೇ ನನ್ನ ಅಸ್ತ್ರವನ್ನು ನಾನೇ ಸ್ವೀಕರಿಸಿದೆನು. ಆದುದರಿಂದ ಅಸ್ತ್ರಹೀನನಾಗಿರುವ ಈ ಭಗದತ್ತನನ್ನು ನೀನೀಗ ಸಂಹರಿಸು ಎಂದು ಆಜ್ಞಾಪಿಸಿದನು.

ಕೇಶವನ ಮಾತನ್ನಾಲಿಸಿ ಅರ್ಜುನನು ಒಂದು ಬಾಣವನ್ನು ಅಭಿಮಂತ್ರಿಸಿ ಭಗದತ್ತನ ಹೃದಯದಲ್ಲಿ ಪ್ರಯೋಗಿಸಿ-ದನು. ಮತ್ತೊಂದು ಉತ್ತಮವಾದ ಬಾಣವನ್ನು ಸುಪ್ರತೀಕ ಗಜದ ಕುಂಭಸ್ಥಳಕ್ಕೆ ಪ್ರಯೋಗಿಸಿದನು. ಪರ್ವತ ಸದೃಶರಾದ ಗಜ ಮತ್ತು ಭಗದತ್ತರು ಮಹೇಂದ್ರನ ವಜ್ರಾಯುಧದಿಂದ ತಾಡಿತರಾದವರಂತೆ ಧರೆಗುರುಳಿ ಅಸುನೀಗಿದರು. ಇಂತು ತಕ್ಷಣವೇ ಅರ್ಜುನನಿಂದ ಅವರು ಸಂಹೃತರಾದ ಮೇಲೆ ಸ್ವಜನರಿಂದ ಪೂಜಿತನಾದ ಧನಂಜಯನು ಹರ್ಷ ನಿರ್ಭರನಾದನು.

ಆ ತರುವಾಯ ಪಾರ್ಥನು ಬಾಣಗಳಿಂದ ಶಕುನಿಯ ಕಿರಿಯ ಸಹೋದರರಾದ 'ಅಚಲ' ಮತ್ತು 'ವೃಷಭ' ಎಂಬುವವರನ್ನು ಸಂಹಾರ ಮಾಡಿದನು. ಇದರಿಂದ ಕುಪಿತನಾದ ಶಕುನಿಯು ತನ್ನ ಮಾಯಾಜಾಲವನ್ನು ಸೃಜಿಸಿದನು. ಆಗ ಅರ್ಜುನನು ಮಾಯೆಯ ಮೇಲೆ ವಿಜ್ಞಾನಾಸ್ತ್ರವನ್ನು ಪ್ರಯೋಗಿಸಿ ಮಾಯಾಜಾಲವನ್ನು ನಾಶಗೊಳಿಸಿದನು. ತನ್ನ ಮಾಯೆಯು ನಷ್ಟವಾದ ಮೇಲೆ ಪಾಪಕರ್ಮಿಯಾದ ಶಕುನಿಯು ಅಲ್ಲಿಂದ ಓಡಿ ಹೋದನು. ಧನಂಜಯನು ಶರ ಸಂತತಿಗಳಿಂದ ಶಕುನಿಯ ಸೇನೆಯನ್ನು ವಿದ್ರಾವಿತಗೊಳಿಸಿದನು. ಆಗ ಅಶ್ವತ್ಥಾಮನು ಯುದ್ಧದಲ್ಲಿ ಮಾಹಿಷ್ಮತೀರಾಜನನ್ನು ಸಂಹರಿಸಿದನು. ಭೀಮಸೇನನಾಗ ಅವನ ಕುದುರೆಗಳನ್ನೂ, ದುರ್ಯೋಧನನ ಸೈನ್ಯವನ್ನೂ ಓಡಿಸಿ ನಾಶಪಡಿಸಿದನು. ಭೀಮಾರ್ಜುನರು ಕೌರವರ ಸೈನ್ಯವನ್ನು ಸಂಹರಿಸುತ್ತಿರುವುದನ್ನು ನೋಡಿ, ಸುಯೋಧನನು ಕೂಡಲೆ ಸೈನ್ಯವನ್ನು ಹಿಂತೆಗೆದುಕೊಂಡು ಶಿಬಿರಕ್ಕೆ ತೆರಳಿದನು.

ಪ್ರಾಗ್ಜ್ಯೋತಿಷಾಧಿಪತಿಯಾದ ಭಗದತ್ತನು ಹತನಾದಮೇಲೆ ದ್ರೋಣರು ಯುಧಿಷ್ಠಿರನನ್ನು ಹಿಡಿಯಲಿಲ್ಲವೆಂಬ ಅಸಮಾಧಾನ ವಿಷಾದಗಳಿಂದ ಅಂದು ರಾತ್ರಿ ದುರ್ಯೋಧನನು ದ್ರೋಣಾಚಾರ್ಯರನ್ನು ದುರ್ವಚನಗಳಿಂದ ನಿಂದಿಸಿ, ತಮಗಾದ ಅಪಜಯದ ಬಗೆಗೆ ಕಾರುಣ್ಯವುಂಟಾಗುವಂತೆ ಮಾತನಾಡಿದನು. ಆಗ ದ್ರೋಣಾಚಾರ್ಯರು ದುರ್ಯೋಧನನನ್ನು ಕುರಿತು, 'ರಾಜನ್! ನಾಳೆ, ಅರ್ಜುನನು ಬೇರೊಂದು ಕಡೆ ಯುದ್ಧಕ್ಕೆ ಹೋದಾಗ ಖಂಡಿತ ನಾನು ಧರ್ಮರಾಜನನ್ನು ಬಂಧಿಸುತ್ತೇನೆ ಅಥವಾ ಅವನಿಗೆ ಸಮಾನರಾದ ಅವರ ಗುಂಪಿನಲ್ಲಿ ಒಬ್ಬನನ್ನು ಕೊಲ್ಲುತ್ತೇನೆ' ಎಂದು ಪ್ರತಿಜ್ಞೆ ಮಾಡಿದರು.

ಅದರಂತೆ ಮರುದಿನ ಪ್ರಾತಃಕಾಲ ದ್ರೋಣಾಚಾರ್ಯರು ಯುದ್ಧವನ್ನು ಬಯಸಿ ರಣಭೂಮಿಗೆ ಹೊರಟರು. ಆಚಾರ್ಯ ದ್ರೋಣರು "ವಿಷ್ಣುಮಂತ್ರ" ಜಪಮಾಡಿ ವ್ಯೂಹವನ್ನು ರಚಿಸಿದರೆ, ಅದು ಇನ್ನೊಬ್ಬರಿಂದ ಅಭೇದ್ಯವಾಗುವುದು (ಭೇದಿಸಲಾಗದು) ಎಂಬ ವಿಷ್ಣುವಿನ ವರವಿದ್ದುದರಿಂದ "ವಿಷ್ಣುಮಂತ್ರ" ವನ್ನು ಜಪಿಸಿ, ಪದ್ಮಾಕಾರದಲ್ಲಿ ಸೈನಿಕರಿಂದ ಕೂಡಿದ "ಪದ್ಮವ್ಯೂಹವನ್ನು" ರಚಿಸಿದರು. ಆ ಪದ್ಮವ್ಯೂಹವನ್ನು ಪಾರ್ಥನ ವಿನಃ ಬೇರೊಬ್ಬರಿಂದ ಭೇದಿಸಲಸದಳವಾಗಿತ್ತು. ಅರ್ಜುನನಾದರೋ ಸಂಶಪ್ತಕರೊಡನೆ ಯುದ್ಧಾಸಕ್ತನಾಗಿದ್ದನು. ಪಾಂಡವರು ಆ ಪದ್ಮವ್ಯೂಹದ ಬಳಿಗೆ ಬಂದರು. ಆದರೆ ಅದನ್ನು ಭೇದಿಸಲು ಉದ್ಯುಕ್ತರಾದರೂ ಸಹ ಅದರಲ್ಲಿ ಯಶಸ್ವಿಗಳಾಗಲಿಲ್ಲ. ಯದ್ಯಪಿ ಭೀಮಸೇನದೇವರು ಪ್ರತಿಭಾಯೋಗದಿಂದ ಅಂದರೆ ಸ್ವಾಭಾವಿಕಜ್ಞಾನದಿಂದ ಪದ್ಮವ್ಯೂಹ ಭೇದನವನ್ನು ಅರಿತಿದ್ದರೂ, ಕಾಮ್ಯಫಲೋದ್ದೇಶಕವಾದ ಮಂತ್ರವನ್ನು ಯಾವಾಗಲೂ ಜಪಿಸುತ್ತಿರಲಿಲ್ಲವಾದುದರಿಂದ ಈಗಲೂ ಅದರಲ್ಲಿ ಪ್ರವೃತ್ತರಾಗಲಿಲ್ಲ. ಆಗ ಧರ್ಮರಾಜನು, ವ್ಯೂಹವನ್ನು ಭೇದಿಸುವುದನ್ನು ತಿಳಿದಿದ್ದ ಅಭಿಮನ್ಯುವಿಗೆ ಪದ್ಮವ್ಯೂಹವನ್ನು ಭೇದಿಸುವಂತೆ ಆಜ್ಞಾಪಿಸಿ "ವತ್ಸ ನೀನು ವ್ಯೂಹವನ್ನು ಭೇದಿಸು, ನಾವು ನಿನ್ನನ್ನು ಅನುಸರಿಸಿ ಬರುತ್ತೇವೆ" ಎಂದು ಹೇಳಿದನು.

ಇಂತು ಧರ್ಮರಾಜನಿಂದ ಆಜ್ಞಾಪ್ತನಾದ ಅಭಿಮನ್ಯುವು ಪದ್ಮವ್ಯೂಹವನ್ನು ಭೇದಿಸಿ ಒಳನುಗ್ಗಿದನು. ವಾಯುಪುತ್ರನಾದ ಭೀಮಸೇನಾದಿಗಳು ಪದ್ಮವ್ಯೂಹದ ಒಳಗಿರುವ ಶತ್ರುಸೈನ್ಯದೊಳಗೆ ಪ್ರವೇಶಿಸಲಿಚ್ಛಿಸಿ, ವ್ಯೂಹದೊಳಗೆ ಹೋಗಲು ಯತ್ನಿಸಿದರು. ಆದರ ರುದ್ರದೇವರ ವರದಿಂದ ಅಂದು ಅತಿಬಲವಂತನಾಗಿದ್ದ ಸೈಂಧವನು ಅವರನ್ನು ತಡೆಗಟ್ಟಿದ್ದನು.

ಹಿಂದೆ ಸೈಂಧವನು ಪಾಂಡವರ ವನವಾಸಕಾಲದಲ್ಲಿ ಪಾಂಡವರ ಆಶ್ರಮಕ್ಕೆ ಬಂದು ಬಲಾತ್ಕಾರವಾಗಿ ದ್ರೌಪದಾದೇವಿಯನ್ನು ಸೆಳೆದೊಯ್ಯಲು ಯತ್ನಿಸಿದಾಗ ಭೀಮಾರ್ಜುನರಿಂದ ಚೆನ್ನಾಗಿ ಹೊಡೆತ ತಿಂದು ಮುಖಭಂಗಿತನಾಗಿದ್ದನು. ಅಂದು ತನಗಾದ ಪರಾಭವದ ಸೇಡನ್ನು ತೀರಿಸಿಕೊಳ್ಳಲು ಸೈಂಧವನು ರುದ್ರದೇವರನ್ನು ಕುರಿತು ಉಗ್ರ ತಪಸ್ಸು ಮಾಡಿ ಶಿವನನ್ನು ಮೆಚ್ಚಿಸಿ ರುದ್ರದೇವರಿಂದ ಅವನು ಬಯಸುವ ಒಂದು ದಿನ ಮಾತ್ರ ಪಾಂಡವರನ್ನು ನಿರೋಧಿಸುವ ಶಕ್ತಿ-

ಯುಂಟಾಗುವಂತೆ ವರವನ್ನು ಪಡೆದಿದ್ದನು. ಆ ವರವನ್ನು ಈಗ ಉಪಯೋಗಿಸಿಕೊಂಡು ಸೈಂಧವನು ಭೀಮಸೇನ ಮೊದಲಾದ ಪಾಂಡವರನ್ನು ತಡೆಗಟ್ಟಿದನೆಂದು ತಿಳಿಯಬೇಕು. ರುದ್ರದೇವರ ವರ ಪ್ರಭಾವದಿಂದ ಜಯದ್ರಥನಿಂದ ತಡೆಗಟ್ಟಲ್ಪಟ್ಟ ಭೀಮಸೇನದೇವರು ಅಂದು ಅಭಿಮನ್ಯುವಿನ ವಧವಾಗಬೇಕೆಂಬುದು ಶ್ರೀಹರಿಯ ಅಭೀಪ್ಸವೆಂಬುದನ್ನು ತಿಳಿದು, ಸ್ವತಃ ಮಹಾಶಕ್ತರಾಗಿದ್ದರೂ ಶ್ರೀಹರಿಯ ಇಚ್ಛೆಯನ್ನು ಅತಿಕ್ರಮಿಸಲು ಪ್ರಯತ್ನಿಸಲಿಲ್ಲ. ಜಯದ್ರಥ ಮತ್ತು ವೃಷಭಧ್ವಜರೊಡನೆ ವೃಕೋದರಾದಿಗಳು ಯುದ್ಧ ಪ್ರಾರಂಭಿಸಿದರು.

ಅತ್ತ ಅರ್ಜುನ ಕುಮಾರನಾದ ವೀರ ಅಭಿಮನ್ಯುವು, ಪದ್ಮವ್ಯೂಹವನ್ನು ಪ್ರವೇಶಿಸಿ ಶತ್ರುಗಳ ಸಮಸ್ತ ಸೈನ್ಯವನ್ನು ಕ್ಷೋಭೆಗೊಳಿಸಿದನು. ಆಗ ದ್ರೋಣ, ದುರ್ಯೋಧನ, ಕರ್ಣ, ಶಲ್ಯ, ಅಶ್ವತ್ಥಾಮಾ, ಕೃತವರ್ಮಾದಿ, ಅಗ್ರಗಣ್ಯ ಮಹಾರಥಿಗಳು ಅಭಿಮನ್ಯುವನ್ನು ತಡೆಗಟ್ಟಿದರೂ, ಭಯರಹಿತನಾಗಿ ದ್ರೋಣಾದಿಗಳನ್ನನುಸರಿಸಿಬಂದ ವೈರಿಗಳ ಶಿರಗಳನ್ನು ಛೇದಿಸಿ, ಶತ್ರುಸೈನ್ಯದ ಮಧ್ಯದಲ್ಲಿ ಚಮತ್ಕಾರದಿಂದ ಸಂಚರಿಸಿ ಮೆರೆದನು. ಆಗ ಅಭಿಮನ್ಯುವು ದುರ್ಯೋಧನ ಕುಮಾರನಾದ ಲಕ್ಷ್ಮಣನನ್ನೂ ಮೃತ್ಯುವಿಗೆ ಸಮರ್ಪಿಸಿದನು. ಅದರಂತೆ ಬೃಹದ್ಬಲನೆಂಬ ವೀರನನ್ನೂ ಬಲ ಅಸ್ತ್ರಾದಿಗಳಿಂದ ಉತ್ಪನ್ನನಾದ ಹತ್ತುಸಾವಿರ ರಥಿಕರನ್ನೂ ಯಮಸದನಕ್ಕಟ್ಟಿದನು.[44]

ದ್ರೋಣಾಚಾರ್ಯರೇ ಮೊದಲಾದವರು, ಅಭಿಮನ್ಯುವು ಶ್ರೀಕೃಷ್ಣನ ಸೋದರಳಿಯನಾದುದರಿಂದ ಅವನಿಗೆ ಕೇಡು ಬಗೆದರೆ ಶ್ರೀಕೃಷ್ಣನ ಕೋಪಕ್ಕೂ, ನಿಗ್ರಹಕ್ಕೂ ಪಾತ್ರರಾಗಬೇಕಾಗುವುದೆಂಬ ಭಯದಿಂದ ಅಭಿಮನ್ಯುವನ್ನು ಪ್ರತ್ಯಕ್ಷವಾಗಿ ಸಂಹರಿಸಲು ಅಶಕ್ತರಾಗಿ, ಅವರೆಲ್ಲರೂ ಸೇರಿ ಕುಮಂತ್ರಾಲೋಚನೆ ಮಾಡಿ ಅಭಿಮನ್ಯುವಿನ ಧನುಸ್ಸು, ರಥ, ಅಶ್ವಗಳನ್ನು ಏಕಕಾಲದಲ್ಲಿ ನಾಶಪಡಿಸಿದರು. ಅದನ್ನೇ ಶ್ರೀನಿರ್ಣಯಾಚಾರ್ಯರು ಇಂತು ವಿವರಿಸುತ್ತಾರೆ – ಕರ್ಣನು ಅಭಿಮನ್ಯುವಿನ ಧನುಸ್ಸನ್ನು ಛೇದಿಸಿದನು, ಕೃಪಾಚಾರ್ಯರು ಅವನ ರಥದ ಸಾರಥಿಯನ್ನೂ, ದ್ರೋಣಾಚಾರ್ಯರು ರಥದ ಕುದುರೆಗಳನ್ನೂ, ಹೀಗೆ ಏಕಕಾಲದಲ್ಲಿ ಆ ಮೂರು ಜನರೂ ಶರಪ್ರಯೋಗದಿಂದ ಅಭಿಮನ್ಯುವಿನ ಧನುಸ್ಸು, ಸಾರಥಿ, ಕುದುರೆಗಳನ್ನು ನಾಶಪಡಿಸಿದರು, ಮತ್ತು ಗುರಾಣಿ, ಖಡ್ಗ, ರಥಧ ಚಕ್ರಗಳನ್ನು ನಾಶಪಡಿಸಿದರು. ಆಗ ಆಯುಧಹೀನನಾದ ಅಭಿಮನ್ಯುವು ಚಕ್ರಾಯುಧವನ್ನು ಮೇಲೆತ್ತಿದನು. ಅದನ್ನೂ ಕತ್ತರಿಸಿಹಾಕಿದ ಅವರು ಅಭಿಮನ್ಯುವನ್ನು ಕೊಲ್ಲದೆ ಮೌನವಾಗಿ ನಿಂತರು. ಅವರೆಲ್ಲರೂ ಶ್ರೀಕೃಷ್ಣನ ಭಯದಿಂದ ಅಭಿಮನ್ಯುವನ್ನು ಸಂಹರಿಸಲು ಹೆದರಿ ಸುಮ್ಮನೆ ನಿಂತಿರಲು ದುಷ್ಟನಾದ ಗದಾಪಾಣಿಯಾದ ದುಶ್ಶಾಸನನ ಮಗನು ಅಭಿಮನ್ಯುವಿನ ಮೇಲೇರಿಬಂದು ಗದಾಪ್ರಹಾರ ಮಾಡುತ್ತಾ ಇಬ್ಬರೂ ಏಕ ಕಾಲದಲ್ಲಿ ಮೃತರಾದರು. ಮಹಾವೀರನಾದ ಅಭಿಮನ್ಯುವು ಕೌರವರ ಕಪಟವೂ ಅಧರ್ಮವೂ ಆದ ಸಂಚಿನಿಂದಾಗಿ ಧರೆಗುರುಳಿ ಪ್ರಾಣಬಿಟ್ಟನು. ಅಭಿಮನ್ಯು ಮೃತನಾದುದನ್ನು ಕಂಡು ಕೌರವರು ಆನಂದದಿಂದ ವಿಜಯಧ್ವನಿ ಮಾಡಿದರು. ಅದನ್ನಾಲಿಸಿ ಸಮಸ್ತರನ್ನು ಜಯಿಸಿ ಧರ್ಮರಾಜನು ಅಲ್ಲಿಗೆ ಬಂದನು.

ಆಗ ಸ್ವರೂಪಭೂತ ಜ್ಞಾನಾದಿ ಸಂಪದ್ಯುಕ್ತರಾದ ಶ್ರೀವೇದವ್ಯಾಸದೇವರು ಅಲ್ಲಿಗೆ ದಯಮಾಡಿಸಿ ದುಃಖಿತರಾದ ಯುಧಿಷ್ಠಿರಾದಿಗಳಿಗೆ ಉಪದೇಶಮಾಡಿ ಸಮಾಧಾನಪಡಿಸಿದರು. ಅರ್ಜುನನು ಸಂಶಪ್ತಕರನ್ನು ಜಯಿಸಿ ಅಚ್ಯುತನಿಂದೊಡಗೂಡಿ ರಾತ್ರಿ ಶಿಬಿರಕ್ಕೆ ಆಗಮಿಸಿದರು. ಆಗ ಅವನಿಗೆ ಅಭಿಮನ್ಯುವೂ ಪದ್ಮವ್ಯೂಹವನ್ನು ಭೇದಿಸಿ ಎಲ್ಲ ಕೌರವವೀರರನ್ನೂ ಜಯಿಸಿ ಸಹಸ್ರಾಧಿಕ ಸೈನಿಕರನ್ನು ಸಂಹರಿಸಿ ರಣತಾಂಡವವಾಡಿ ಕೊನೆಗೆ ಕೌರವರ ಕುತಂತ್ರದಿಂದಾಗಿ ಹೋರಾಡುತ್ತಲೇ

44. ಕೆಲವರು ಬೃಹದ್ಬಲನೆಂದರೆ ಹತ್ತುಸಾವಿರ ಸೈನ್ಯವೆಂದು ಹೇಳುವರು. ಅದು ಸರಿಯಲ್ಲ. ದ್ರೋಣಪರ್ವದಲ್ಲಿ " ತಥಾ ಬೃಹದ್ಬಲಂ ಹತ್ವಾ ಸೌಭದ್ರೋ ವ್ಯಚಿರದ್ರಣೇ" ಎಂದೂ, 'ಬೃಹದ್ಬಲಂ ಚ ರಾಜಾನಾಂ ಸ್ವರ್ಗೇಣಾಶಾಪ್ರಯೋ....' ಎಂದು ಹೇಳಿರುವುದರಿಂದ ಬೃಹದ್ಬಲನೆಂಬ ರಾಜನನ್ನೂ, ಹತ್ತು ಸಾವಿರ ರಥಿಕರನ್ನು ಸಂಹರಿಸಿದನೆಂದು ತಿಳಿಯಬೇಕು.

ವೀರಸ್ವರ್ಗವನ್ನು ಪಡೆದ ವಿಚಾರವೂ ತಿಳಿಯಿತು. ಪುತ್ರನ ಮರಣದಿಂದ ಅತ್ಯಂತ ದುಃಖಿತನಾದ ಅರ್ಜುನನು 'ಅಭಿಮನ್ಯು-ವಿನ ಮರಣಕ್ಕೆ ಕಾರಣನಾದ ಜಯದ್ರಥನನ್ನು ನಾಳೆ ಸೂರ್ಯಾಸ್ತವಾಗುವದರೊಳಗೆ ಸಂಹರಿಸುತ್ತೇನೆ. ಅದಾಗದಿದ್ದರೆ ಅಗ್ನಿ-ಪ್ರವೇಶ ಮಾಡುತ್ತೇನೆ' ಎಂದು ಪ್ರತಿಜ್ಞೆ ಮಾಡಿದನು ಮತ್ತು ಶ್ರೀಕೃಷ್ಣನು ಎಲ್ಲರನ್ನು ಸಾಂತ್ವನಗೊಳಿಸಿದನು ಮತ್ತು ಅಂದು ರಾತ್ರಿ ಪಾರ್ಥನನ್ನು ರುದ್ರದೇವರ ಬಳಿಗೆ ಕರೆದುಕೊಂಡು ಹೋದನು. ಅರ್ಜುನನ್ನು ರಕ್ಷಿಸಲು ತಾನು ಅಸಮರ್ಥನಾದ್ದರಿಂದ ಗೌರೀಶನ ಬಳಿಗೆ ಅರ್ಜುನನನ್ನು ಶ್ರೀಮಾಧವನು ಕರೆದುಕೊಂಡು ಹೋದನೇನು? ಎಂಬ ಶಂಕೆಗೆ ಶ್ರೀನಿರ್ಣಯಾಚಾರ್ಯರು ಹೀಗೆ ಉತ್ತರಿಸುತ್ತಾರೆ - ಯದ್ಯಪಿ ಶ್ರೀಕೃಷ್ಣನು ಸ್ವತಃ ಅಖಿಲ ಜಗದ್ರಕ್ಷಣಾದಿಗಳಲ್ಲಿ ಅತ್ಯಂತ ಸಮರ್ಥನಾಗಿದ್ದರು ಸಹ 'ಅಪ್ಯಚ್ಯುತೋ... ಗುರುದ್ವಾರಾ ಪ್ರಸಾದಕೃದದಂ' ಅಂದರೆ ನಾನು ಗುರುಗಳ ಮೂಲಕವಾಗಿಯೇ ಅನುಗ್ರಹ ಮಾಡುವೆನು ಎಂಬ ಹರಿಯ ವಚನದಂತೆ ಅರ್ಜುನನಿಗೆ ತಾರತಮ್ಯದಲ್ಲಿ ಗುರುಗಳಾದ ರುದ್ರದೇವರ ಮೂಲಕವೇ ಅನುಗ್ರಹಮಾಡ-ಬೇಕೆಂದು ಅರ್ಜುನನನ್ನು ಪಾರ್ವತೀಶನ ಬಳಿ ಕರೆದುಕೊಂಡು ಹೋದನೆಂದು ತಿಳಿಯಬೇಕೆಂದು ಅಪ್ಪಣೆ ಕೊಡಿಸಿದ್ದಾರೆ.

ಶ್ರೀಕೃಷ್ಣಪರಮಾತ್ಮನು, ಅರ್ಜುನನ ಅಸ್ತ್ರಗುರುವಾದ ರುದ್ರದೇವರನ್ನು ನೆನಪಿಗೆ ತಂದುಕೊಂಡು ಅವನಿಗೆ ರುದ್ರ ಪ್ರಸಾದರೂಪ ರಕ್ಷಣೆಯನ್ನೂ, ಸೈಂಧವನ ಸಂಹಾರಕ್ಕೆ ಮಹಾರಕ್ತವಾದ ಪಾಶುಪತಾಸ್ತ್ರವನ್ನು ರುದ್ರದೇವರಿಂದ ಕೊಡಿಸಿದನು ಮತ್ತು ಪಾರ್ಥನಿಗೆ ಶ್ರೀರುದ್ರದೇವತಾರೂಪ ರಕ್ಷಣೆಯನ್ನುಂಟು ಮಾಡಿದನು.

ಅನಂತರ ಶ್ರೀವಾಸುದೇವನು ಉಪಪ್ಲಾವ್ಯಕ್ಕೆ ತೆರಳಿ, ಅಭಿಮನ್ಯುವಿನ ಮರಣದಿಂದ ಅತಿದುಃಖಿತಳಾದ ತನ್ನ ತಂಗಿಯಾದ ಸುಭದ್ರೆಯನ್ನು ಬಹುವಿಧ ಸಮಾಧಾನ ವಚನಗಳಿಂದ ಸಾಂತ್ವನಗೊಳಿಸಿ ದಿವ್ಯರಥಕ್ಕೆ ಅಶ್ವಗಳನ್ನು ಹೂಡಿ ಅರ್ಜುನನೊಡನೆ ಯುದ್ಧಕ್ಕಾಗಿ ಹೊರಟನು.

ಇತ್ತ ಇಂದ್ರ ಪುತ್ರನಾದ ಅರ್ಜುನನು ಮಾಡಿದ ಪ್ರತಿಜ್ಞೆಯನ್ನು ತಿಳಿದು ದುರ್ಯೋಧನನು ಆಚಾರ್ಯ ದ್ರೋಣರನ್ನು ಸಿಂಧುರಾಜ ಜಯದ್ರಥನನ್ನು ರಕ್ಷಿಸುವಂತೆ ಪ್ರಾರ್ಥಿಸಿದನು. ದ್ರೋಣರು ಸರ್ವಪ್ರಯತ್ನದಿಂದ ಸೈಂಧವನನ್ನು ನಾನು ರಕ್ಷಿಸುತ್ತೇನೆ ಎಂದು ಪ್ರತಿಜ್ಞೆಮಾಡಿ ಅಭೇದ್ಯವೂ ದೈವಿಕವೂ ಆದ "ಶಕಟಾಬ್ಜಚಕ್ರ" ವೆಂಬ ವ್ಯೂಹವನ್ನು ರಚಿಸಿ ಹಿಂಭಾಗದಲ್ಲಿ ಕರ್ಣ, ಅಶ್ವತ್ಥಾಮ, ಸೋಮದತ್ತ, ಶಲ್ಯ, ಕೃಪಾಚಾರ್ಯಾದಿಗಳನ್ನು ಸೈಂಧವನ ರಕ್ಷಕರನ್ನಾಗಿ ನಿಲ್ಲಿಸಿ, ಸ್ವತಃ ತಾವು ಮುಂಭಾಗದಲ್ಲಿ ವ್ಯೂಹರಕ್ಷಕರಾಗಿ ನಿಂತರು. (ಅಂದರೆ ಹೊರಗಡೆ ಶಕಟಾಕಾರವಾಗಿಯೂ, ಒಳಗೆ ಚಕ್ರದಾಕಾರವಾಗಿಯೂ, ಮಧ್ಯದಲ್ಲಿ ಪದ್ಮದ ಆಕಾರವಾಗಿಯೂ ಸೈನಿಕರ ಸಮೂಹವನ್ನು ನಿಲ್ಲಿಸುವ ವಿಧಾನಕ್ಕೆ ಶಕಟಾಬ್ಜಚಕ್ರವೆಂದು ಹೆಸರು). ಆಗ ದಿವ್ಯರಥದಲ್ಲಿ ಕುಳಿತು ಕೇಶವನಿಂದ ಸುರಕ್ಷಿತನಾದ ಅರ್ಜುನನು, ಜಯದ್ರಥನ ಸಂಹಾರ ಮುಖ್ಯವಾದುದ್ದರಿಂದ ಆಚಾರ್ಯ ದ್ರೋಣರೊಡನೆ ಕಾದಾಡುತ್ತಾ ನಿಂತರೆ ಕಾಲಾತೀತವಾದೀತೆಂಬ ಭಯದಿಂದ ದ್ರೋಣಾಚಾರ್ಯರಿಗೆ ಪ್ರದಕ್ಷಿಣೆ ಮಾಡಿ ಮುನ್ನುಗ್ಗಿದನು. ಕೃಷ್ಣನು ಮನೋವೇಗದಿಂದ ರಥಚಾಲನೆ ಮಾಡುತ್ತಿದ್ದುದರಿಂದ ಶತ್ರುಗಳ ಬಾಣಗಳು ಅವರಿಗೆ ತಾಕದೆ ಹಿಂದೆ ಬೀಳುತ್ತಿದ್ದವು. ಶತ್ರುಗಳನ್ನು ಜಯಿಸುತ್ತಾ ಉತ್ತಮರಥದಲ್ಲಿ ಶ್ರೀವಾಸುದೇವನಿಂದ ಸಹಿತನಾದ ಅರ್ಜುನನು, ಉಪೇಂದ್ರನಿಂದ ಸಹಿತನಾದ ದೇವೇಂದ್ರನಂತೆ ಪರಿಶೋಭಿಸುತ್ತಾ ಸುತ್ತಮುತ್ತಲೂ ಶತ್ರುಗಳ ಶಿರಸ್ಸುಗಳನ್ನು ಛೇದಿಸುತ್ತಾ ಹೊರಟನು.

ಅನಂತರ ಅರ್ಜುನನು ದೃಢಾಯು, ಅಚ್ಯುತಾಯುಗಳನ್ನು ಸಂಹರಿಸಿ ಪುನಃ ವಿಂದ, ಅನುವಿಂದರನ್ನು ಬಾಣಾ-ಹುತಿಗಳಿಂದ ಕೊಂದು ಯಮುನಸದನಕ್ಕಟ್ಟಿದನು. ತರುವಾಯ ಕಾಂಭೋಜರಾಜನ ಮಗನಾದ ಸುದಕ್ಷಿಣನನ್ನು, ಅಂಬಷ್ಠಕ-ನನ್ನೂ ಸಂಹರಿಸಿ ವರುಣ ಗಂಗೆಯರ ಪುತ್ರನಾದ ಶ್ರುತಾಯುಧನ ಬಳಿಗೆ ಬಂದನು. ಶ್ರುತಾಯುಧನಿಗೆ ವರುಣನು ಅಮೋಘವಾದ ದಿವ್ಯಗದೆಯನ್ನು ಅನುಗ್ರಹಿಸಿದ್ದನು. ಅರ್ಜುನನು ಶ್ರುತಾಯುಧನ ರಥವನ್ನು ಬಾಣದಿಂದ ಭಗ್ನ-

ಗೊಳಿಸಿದನು. ಆಗ ಶ್ರುತಾಯುಧನು ದಿವ್ಯಗದೆಯನ್ನು ಶ್ರೀಕೃಷ್ಣನ ಮೇಲೆ ಪ್ರಯೋಗಿಸಿದನು. ಕೃಷ್ಣನು ಅದನ್ನು ಶ್ರುತಾಯು ಧಿರಕ್ಕೆ ಎಸೆದನು. ಅದರಿಂದ ಶ್ರುತಾಯುಧನ ಶಿರಸ್ಸು ನೂರು ಭಾಗವಾಗಿ ಭಗ್ನವಾಗಿ ಅವನು ಭೂಮಿಗೆ ಬಿದ್ದನು. ಹಿಂದೆ ವರುಣನು ಶ್ರುತಾಯುಧನಿಗೆ ಮಹಾಗದೆಯನ್ನು ಕೊಡುವಾಗ "ಇದನ್ನು ಯುದ್ಧವನ್ನು ಮಾಡದೇ ಇರುವವರ ಮೇಲೆ ಪ್ರಯೋಗಿಸಬೇಡ, ಒಂದು ವೇಳೆ ಯುದ್ಧಮಾಡದಿರುವವರನ್ನು ನೀನು ಈ ಗದೆಯಿಂದ ಹೊಡೆದರೆ ಅದರಿಂದ ನೀನೇ ತಲೆಯೊಡೆದು ಮೃತನಾಗುವಿ. ನೀನು ಯುದ್ಧಮಾಡುವ ಶತ್ರುವಿನ ಮೇಲೆ ಇದನ್ನು ಪ್ರಯೋಗಿಸಿದರೆ ಇದು ಅಮೋಘವಾಗಿ ನಿನಗೆ ಜಯಪ್ರದವಾಗುವುದು" ಎಂದು ಹೇಳಿದ್ದನು. ಈಗ ಶ್ರುತಾಯುಧನು ಯುದ್ಧಮಾಡದಿರುವ ಶ್ರೀಕೃಷ್ಣನ ಮೇಲೆ ಆ ಗದೆಯನ್ನು ಪ್ರಯೋಗಿಸಿದ್ದರಿಂದ ಶ್ರುತಾಯುಧನೇ ಶಿರಸ್ಫೋಟದಿಂದ ಮೃತನಾದನು.

ಆಗ ದುರ್ಯೋಧನನು ತನ್ನ ವೀರರು ಸಂಹೃತರಾಗುತ್ತಿರುವುದನ್ನು, ತನ್ನ ಸೈನ್ಯವೂ ವಿದ್ರಾವಿತವಾಗುತ್ತಿರುವುದನ್ನು ನೋಡಿ ವಿಷಾದದಿಂದ ದ್ರೋಣಾಚಾರ್ಯರ ಬಳಿಗೆ ಬಂದು ದೀನನಾಗಿ "ಸ್ವಾಮಿ ನೀವು ಅರ್ಜುನನನ್ನು ಉಪೇಕ್ಷಿಸಿ ಅವನನ್ನು ಒಳಗೆ ಬಿಟ್ಟಿದ್ದೀರಿ. ಇದು ಸರಿಯೇ" ಎಂದು ಕೇಳಿದನು. ಆಗ ದ್ರೋಣಾಚಾರ್ಯರು ದುರ್ಯೋಧನನಿಗೆ ಮಂತ್ರ ಬಲದಿಂದ ಅಭೇದ್ಯವಾದ ಕವಚವನ್ನು ತೊಡಿಸಿ "ದುರ್ಯೋಧನ! ನೀನು ಎಷ್ಟು ಬಲದಿಂದ ಧರ್ಮರಾಜಾದಿ ನಾಲ್ವರನ್ನು ವಿರೋಧಿಸುವೆಯೋ ಅಷ್ಟು ಬಲದಿಂದ ಅರ್ಜುನನ ಬಳಿಗೆ ಯುದ್ಧಕ್ಕೆ ಹೋಗು" ಎಂದು ಹೇಳಿದರು. ಆಗ ದುರ್ಯೋಧನನು ಧನುಸ್ಸನ್ನು ಧರಿಸಿ ಸುವರ್ಣರಥದಲ್ಲಿ ಕುಳಿತು ಅರ್ಜುನನ ಬಳಿಗೆ ಬಂದು ಅಗ್ನಿಯಂತೆ ಬೆಳಗುವ ಬಾಣಗಳಿಂದ ಅವನನ್ನು ತಡೆದನು. ಪಾರ್ಥನು ಉಗ್ರಶರಗಳಿಂದ ದುರ್ಯೋಧನನ ಕವಚಕ್ಕೆ ಹೊಡೆದನು. ಆದರೂ ಅದು ಭಗ್ನವಾಗಲಿಲ್ಲ. ಆಗ ಅರ್ಜುನನು ದುರ್ಯೋಧನನ ಕವಚವನ್ನು ಭೇದಿಸಲು ಕೋಪಾವಿಷ್ಟನಾಗಿ ದಿವ್ಯಾಸ್ತ್ರವನ್ನು ಕೈಗೆತ್ತಿಕೊಂಡನು. ಅದನ್ನು ಕಂಡು ಅಶ್ವತ್ಥಾಮನು ಅದನ್ನು ಭೇಧಿಸಿದನು. ಪಾರ್ಥನು ದುರ್ಯೋಧನನ ಅಶ್ವಗಳನ್ನು ಕೊಂದು ಅವನ ಹಸ್ತತಲಕ್ಕೆ ಹೊಡೆದನು. ಅಶ್ವತ್ಥಾಮನು ಅರ್ಜುನನ್ನು ತಡೆದನು. ಆಗ ಅರ್ಜುನನು ಅಶ್ವತ್ಥಾಮ, ಕರ್ಣಾದಿಗಳೊಡನೆ ಕಾದಾಡಿದನು. ಅವರೂ ಬಾಣಗಳಿಂದ ಅವನನ್ನು ತಡೆದರು. ಆಗ ಜಯದ್ರಥನ ರಕ್ಷಣೆಗಾಗಿ ಜರುಗಿದ ಆ ಯುದ್ಧವು ಅತಲವೂ ಆಶ್ಚರ್ಯಕರೂ ಆಗಿದ್ದಿತು.

ಅರ್ಜುನನು ಕುರುಸೈನ್ಯ ಮಧ್ಯ ಪ್ರವೇಶಿಸಲು, ಇತ್ತ ದ್ರೋಣರು ಪಾಂಡವರ ಸೈನ್ಯವನ್ನು ಪ್ರವೇಶಿಸಿ ಪಾಂಡವರ ರಥಸಮೂಹವನ್ನೂ, ವೀರರನ್ನೂ ವೇಗವಾಗಿ ಶರಗಳಿಂದ ಸಂಹರಿಸಿದರು. ವೃದ್ಧನಾದ ಆ ಮಹಾವೀರನು ಯುವಕರಂತೆ ಧನುರ್ಧರರಾದ ವೀರರ ಮಧ್ಯೆ ಸಂಚರಿಸಿ ಶತ್ರುಗಳ ಶಿರತರಿದು ಯುಧಿಷ್ಠಿರನನ್ನು ಬಂಧಿಸಲು ಬಂದನು. ದ್ರುಪದನ ಪುತ್ರನಾದ ವೀರಸತ್ಯಜಿತನು ಅವರನ್ನು ತಡೆದನು. ಆಗ ದ್ರೋಣರು ಅವನ ಶಿರಸ್ಸನ್ನು ತೀಕ್ಷ್ಣವಾದ ಆಗ್ನೇಯಾಸ್ತ್ರ ಬಾಣದಿಂದ ಕತ್ತರಿಸಿಹಾಕಿದರು. ಅನಂತರ ಧರ್ಮರಾಜನನ್ನು ಬಾಣಸಮೂಹದಿಂದ ಮರ್ದಿಸಿದರು. ತನ್ನ ಶಕ್ತಿಗನುಸಾರವಾಗಿ ದ್ರೋಣ-ರೊಡನೆ ಯುದ್ಧಮಾಡಿ ನಿರಾಯುಧನೂ ರಥಾಶ್ವರಹಿತನೂ ಆದ ಧರ್ಮರಾಜನು ಕರಗಳನ್ನು ಮೇಲೆತ್ತಿ ಭೂಮಿಯಲ್ಲಿ ನಿಂತು ಬಿಟ್ಟನು. ಆಗ ದ್ರೋಣರು ಧರ್ಮರಾಜನನ್ನು ಬಂಧಿಸಲಿರುವುದನ್ನು ಅರಿತು ಸಹದೇವನು ರಥವನ್ನು ಹತ್ತಿ ವೇಗವಾಗಿ ಅಲ್ಲಿಗೆ ಬರಲು, ಧರ್ಮರಾಜನು ಆ ರಥದಲ್ಲಿ ಹತ್ತಿ ವೇಗವಾಗಿ ಹೊರಟುಹೋದನು.

ಧರ್ಮರಾಜನ ರಕ್ಷಣೆಯ ತರುವಾಯ, ಪುತ್ರಸಹಿತನಾದ ಶಿಶುಪಾಲನ ಮಗನೂ ಜರಾಸಂಧನ ಮಗನೂ ಸೈನ್ಯನಿಂದ ಕೂಡಿದ ಕಾಶೀ ರಾಜನೂ ಪಂಚ ಕೈಕೇಯರುಗಳು ದ್ರೋಣರ ಬಳಿಗೆ ಬಂದು ಎಲ್ಲ ಕಡೆಯಿಂದ ಬಾಣವರ್ಷಣೆ ಮಾಡಿ ದ್ರೋಣರನ್ನು ನೋಯಿಸಿದರು. ಆಗ ದ್ರೋಣಾಚಾರ್ಯರು ನಿಶಿತಗಳಾದ ಬಾಣಗಳಿಂದ ಕ್ರಮವಾಗಿ ಆ ಎಲ್ಲರ ಶಿರಸ್ಸುಗಳನ್ನೂ ಭೇದಿಸಿ ನೈಷ್ಠಿಕ ಬ್ರಹ್ಮಚರ್ಯವ್ರತದಲ್ಲಿರುವವರು ಸೂರ್ಯಮಂಡಲವನ್ನು ಭೇದಿಸಿಕೊಂಡು ಯಾವ

ಲೋಕಕ್ಕೆ ತೆರಳುವರೋ ಅಂಥ ಶ್ರೇಷ್ಠಲೋಕಕ್ಕೆ ಅವರನ್ನು ಕಳಿಸಿದರು. ದ್ರೋಣಾಚಾರ್ಯರಿಂದ ಹೆಚ್ಚಾದ ಪಾಂಡವರ ಸೈನ್ಯದವರು ಹತಶೌರ್ಯರಾಗಿ ಪರಾಭವ ಹೊಂದಿದರು. ಆದರೆ ಭೀಮಸೇನನಿಂದ ನೋಯಿಸಲ್ಪಟ್ಟ ಕೌರವಸೈನ್ಯವು ಪಲಾಯನಗೊಂಡಿತು. ಆಗ ಅಲಂಬುಸನನೆಂಬ ರಾಕ್ಷಸನು, ಉಗ್ರ ಪೌರುಷನಾದ ಭೀಮನ ಬಳಿಗೆ ಬಂದನು. ಭೀಮನು ಅವನನ್ನು ತೀಕ್ಷ್ಣ ಬಾಣಗಳಿಂದ ಪೀಡಿಸಲು ಅವನು ಕ್ಷಣಮಾತ್ರಗಲ್ಲಿ ಮಾಯೆಯಿಂದ ಅದೃಶ್ಯನಾದನು.

ಆಗ ಅದೃಶ್ಯರೂಪನಾದ ಅಲಂಬುಸನು ಭೀಮನ ಅನುಚರರಾದ ಸೈನಿಕರೆಲ್ಲರನ್ನೂ ಮಾಯಾಯುದ್ಧದಿಂದ ಅತಿಯಾಗಿ ಪೀಡಿಸಿದನು. ಆಗ ಕೋಪಗೊಂಡ ಭೀಮಸೇನನು ಉಭಯ ಸಂಕಟದಲ್ಲಿ ಸಿಲುಕಿದನು. ತಾನು ಮಹಾಸ್ತ್ರವೇತ್ತನಾಗಿದ್ದರೂ ಸಹ ಸ್ವಾರ್ಥಕ್ಕಾಗಿ ಅಸ್ತ್ರ ಪ್ರಯೋಗಮಾಡವುದಿಲ್ಲವೆಂದು ಅವನು ನಿರ್ಧರಿಸಿದ್ದನು. ಆದರೆ ಈಗ ಸ್ವಜನರು ಕಷ್ಟಕ್ಕೆ ಸಿಲುಕಿದ್ದಾರೆ. ಅವರನ್ನು ರಕ್ಷಿಸುವುದು ತನ್ನ ಧರ್ಮ ಒಂದು ಕಡೆ. ತನ್ನ ನಿರ್ಧಾರ ಮತ್ತೊಂದು ಕಡೆ. ಸ್ವಜನರ ರಕ್ಷಣೆ ಧರ್ಮ. ಹೀಗೆ ಉಭಯ ಸಂಕಟಕ್ಕೆ ಸಿಲುಕಿದ ಭೀಮನು ಸ್ವಾಶ್ರಿತರ ರಕ್ಷಣೆಗಾಗಿ ಶ್ರೀಕೃಷ್ಣನ ಪ್ರೇರಣೆಯಂತೆ ಸ್ವಜನರ ರಕ್ಷಣೆಗಾಗಿ ತನ್ನ ಅಸ್ತ್ರವಿದ್ಯಾ ಕೌಶಲವನ್ನು ಪ್ರದರ್ಶಿಸುತ್ತಾ ತ್ವಷ್ಟದೇವತಾಕವಾದ ಅಸ್ತ್ರವನ್ನು ಕೈಗೆತ್ತಿಕೊಂಡು ಧನುಸ್ಸಿಗೆ ಹೂಡಿ ಪ್ರಯೋಗಿಸಿದನು. ಅಸ್ತ್ರದಿಂದ ಉತ್ಪನ್ನವಾದ ಅದೃಶ್ಯವೇಧಿಗಳಾದ ಆ ಬಾಣಗಳು ಅಲಂಬುಸನ ಮಾಯೆಯನ್ನು ಭೇದಿಸಿ ಭೂಮಿಯೊಳಗೆ ಹೊಕ್ಕಿತು. ಆಗ ಅದೃಶ್ಯತ್ವವನ್ನು ಕಳೆದುಕೊಂಡ ಅಲಂಬುಸನು ಭೀಮನಿಂದ ಪೀಡಿತನಾಗಿ ಭಯದಿಂದ ಬಹುದೂರ ಓಡಿ ಹೋದನು. ಅನಂತರ ಭೀಮನು ಶತ್ರು ಸೈನ್ಯವನ್ನು ಶರಾಹತಗಳಿಂದ ಹೊಡೆದೋಡಿಸಿದನು. ಆಗ ದ್ರೌಪದಿಯ ಪುತ್ರರು ಸೋಮದತ್ತನ ಮಗನಾದ ಶಲನನ್ನು ಸಂಹಾರ ಮಾಡಿದರು. ಭೀಮಕುಮಾರನಾದ ಘಟೋತ್ಕಚನು ಅಲಂಬುಸನತ್ತ ಬಂದನು.

ಘಟೋತ್ಕಚನು ಆಕಾಶದಲ್ಲಿರುವ ಅಲಂಬುಸನನ್ನು ವಿರಥನನ್ನಾಗಿ ಮಾಡಿ ತಾನೂ ಅಂಬರದಲ್ಲಿದ್ದು ಯುದ್ಧ ಮಾಡಿದನು. ಅನಂತರ ಆ ಭೀಮಕುಮಾರನು ಅಲಂಬುಸನನ್ನು ಹಿಡಿದು ಭೂಮಿಗೆ ಜಿಳಿಸಿ ತನ್ನ ಪಾದಗಳಿಂದ ಅವನ ಶಿರಸ್ಸನ್ನು ಪ್ರಹಾರಿಸಿ ಹಿಟ್ಟಿನ ತಲೆಯಂತೆ ಮಾಡಿ ಪೃಥಿವೀಪತಿಗಳು ನೋಡುತ್ತಿರುವಂತೆ ಅಲಂಬುಸನನ್ನು ಸಂಹಾರ ಮಾಡಿದನು. ಅಲಂಬುಸನು ಹತನಾದ ಮೇಲೆ ಘಟೋತ್ಕಚನು ಕೌರವರ ರಥಸಮೂಹವನ್ನು ಎಲ್ಲ ಕಡೆಗೂ ಓಡಿಸಿದನು. ಆಗ ಕೃತವರ್ಮನು ರಥಾರೂಢನಾಗಿ ಬಂದು ಪಾಂಡವರ ಸೈನ್ಯದ ಮೇಲೆ ಶರವರ್ಷ ಮಾಡಿದನು. ಹಿಂದೆ ಅಚ್ಯುತನು ಕೃತವರ್ಮನು ಮಾಡಿದ ಸ್ತುತಿಯಿಂದ ಪ್ರೀತನಾಗಿ ಒಂದು ಮುಹೂರ್ತಕಾಲ ನೀನು ಯಾರ ಮೇಲೆ ಯುದ್ಧ ಮಾಡಿದರೂ ನಿನಗೇ ಜಯವಾಗುವುದು ಎಂದು ವರವನ್ನು ಕೊಟ್ಟಿದ್ದನು. ಆ ಕಾರಣದಿಂದ ಕೃತವರ್ಮನು ಪಾಂಚಾಲಸಮೂಹವನ್ನು ಜಯಿಸಿ ಭೀಮಸೇನನ ಎದುರಿಗೇ ನಕುಲ ಸಹದೇವರನ್ನೂ ಜಯಿಸಿ, ಬಾಣಗಳಿಂದ ನೋಯಿಸಿದನು. ಭೀಮಸೇನನು ಶ್ರೀವಾಸುದೇವನು ಕೃತವರ್ಮನಿಗಿತ್ತ ವರವನ್ನು ತಿಳಿದಿದ್ದುದರಿಂದ ಕೃತವರ್ಮನ ಮೇಲೆ ಯುದ್ಧಕ್ಕೆ ಹೋಗಲಿಲ್ಲ. ಕೃಷ್ಣನು ವೃಷ್ಣಿ (ಯಾದವರು)ಗಳನ್ನು ಬಿಟ್ಟು ಬೇರೆ ಎಲ್ಲರನ್ನೂ ಜಯಿಸುವೆ ಎಂದು ವರ ಕೊಟ್ಟಿದ್ದನು. ಅಂತೆಯೇ ಸಾತ್ಯಕಿಯು ಕೃತವರ್ಮನ ಅಶ್ವಗಳನ್ನು ಸಂಹರಿಸಿ ಅವನನ್ನು ಪೀಡಿಸಿದನು. ಆಗ ಕೃತವರ್ಮನು ರಥಕ್ಕೆ ಬೇರೊಂದು ಕುದುರೆಯನ್ನು ಹೂಡಿ ಅಲ್ಲಿಂದ ಹೊರಟು ಹೋದನು.

ಅತಿ ಜಯವುಳ್ಳ ಅರ್ಜುನನು ಕರ್ಣ, ಅಶ್ವತ್ಥಾಮಾದಿಗಳೊಡನೆ ಯುದ್ಧ ಮಾಡುತ್ತಿರಲು, ಸರ್ವೋತ್ತಮನಾದ ಶ್ರೀಕೃಷ್ಣನು ಶತ್ರುಗಳ ಬಲನಾಶಕ್ಕಾಗಿ ಅತ್ಯಂತ ಧ್ವನಿಸುವ ತನ್ನ ಪಾಂಚಜನ್ಯವನ್ನು ಊದಿದನು. ಪಾಂಚಜನ್ಯದ ನಾದದಿಂದ ಘೂಮ್ಯಾಕಾಶದಿಗಳು ಪೂರ್ಣವಾದವು. ಶ್ರೀಕೃಷ್ಣನ ಪಾಂಚಜನ್ಯವು ಅಚ್ಯುತನ ಮುಖವಾಯುವಿನಿಂದ ಅತಿಯಾಗಿ ಹೊರ ಹೊಮ್ಮಿ ಯುಗಾಂತ್ಯಕಾಲದಲ್ಲಿ ಬ್ರಹ್ಮ ರುದ್ರೇಂದ್ರಾದಿಗಳನ್ನು ನಡುಗಿಸಿದಂತೆ ಜಗತ್ತನ್ನು ನಡುಗಿಸಿತು. ಆಗ ಗಾಂಡೀವ-

ಘೋಷವು ಅದರಲ್ಲಿ ಲೀನವಾದ್ದರಿಂದ ಯುಧಿಷ್ಠರನು ಅದನ್ನು ಕೇಳಿ ಭೀತನಾಗಿ ಸಾತ್ಯಕಿಯನ್ನು ಕುರಿತು "ಸಾತ್ಯಕಿ, ವೈರಿಸೈನ್ಯಗಳೊಡನೆ ಪಾರ್ಥನು ಯುದ್ಧಮಾಡುತ್ತಿರುವನೋ? ಅಥವಾ ಅರ್ಜುನನು ಮೃತನಾದ್ದರಿಂದ ಕೇಶವನು ಯುದ್ಧ ಮಾಡುತ್ತಿರುವನೋ" ಎಂದು ಪ್ರಶ್ನಿಸಿದನು. ಮತ್ತೆ ಮುಂದುವರೆದು "ಈಗ ಗಾಂಡೀವಿಯ ದೈವದತ್ತ ಶಂಖಧ್ವನಿಯೊಂದೇ ಕೇಳಿಸುತ್ತಿದೆ. ಆದ್ದರಿಂದ ಅಸಹಾಯನಾದ ಅರ್ಜುನನು ಬದುಕಿರುವನೇ ಇಲ್ಲವೇ ಎಂಬುದನ್ನು ತಿಳಿದು, ಅರ್ಜುನನು ಜೀವಿಸಿದ್ದರೆ ಅವನಿಗೆ ಸಹಾಯಕನಾಗು" ಎಂದು ತಿಳಿಸಿದನು.

ಆಗ ಸಾತ್ಯಕಿಯ ಬ್ರಾಹ್ಮಣ ಶ್ರೇಷ್ಠರುಗಳನ್ನು ಪೂಜಿಸಿ ಅವರಿಗೆ ಬಹುದ್ರವ್ಯಾದಿಗಳನ್ನು ಅರ್ಪಿಸಿ ವಿಜಯಕ್ಕಾಗಿ ಅವರ ಆಶೀರ್ವಾದ ಪಡೆದು ಪ್ರತಿರೋಧವನ್ನು ನಿವಾರಿಸಲು ಭೀಮಸೇನನ್ನು ಹಿಂಬಾಲಿಸಿ ಬರುತ್ತಿರಲು ಕುರುಸೈನ್ಯಾಭಿಮುಖನಾಗಿ ಹೊರಟನು. ಭೀಮಸೇನನು ಯುಯುಧಾನನನ್ನೂ ಅವನ ಸೈನ್ಯವನ್ನೂ ಭೇಧಿಸಿ, ಸೇನಾಮುಖವನ್ನು ಪ್ರವೇಶಿಸಿದನು. ಆಗ ದ್ರೋಣರು ಸಾತ್ಯಕಿಯನ್ನು ಉಪೇಕ್ಷಿಮಾಡಿದರು. ಆಗ ಅವರ ಸಾರಥಿಯನ್ನು ಕೊಂದು ಅಶ್ವಗಳನ್ನು ವಿದ್ರಾವಣಗೊಳಿಸಿದನು. ವೈರಿಸೇನೆಯನ್ನು ಹೊಕ್ಕ ಸಾತ್ಯಕಿಗೆ ಬ್ರಾಹ್ಮಣರ ಆಶೀರ್ವಾದ ಮತ್ತು ಶ್ರೀಕೃಷ್ಣನು 'ಸಾತ್ಯಕಿ ನೀನು ಅರ್ಜುನನ ಸಹಾಯಕ್ಕಾಗಿ ಹೋದ ದಿನ ನಿನ್ನ ಬಲವು ವೃದ್ಧಿಯಾಗಲಿ' ಎಂದು ವರಕೊಟಿದ್ದರಿಂದ ಅದರ ಪ್ರಭಾವದಿಂದಲೂ ಸಾತ್ಯಕಿಯ ಬಲವು ಅತ್ಯಂತವಾಗಿ ಅಭಿವೃದ್ಧವಾಯಿತು. ಆಗ ಅತಿ ಬಲಾಭಿವೃದ್ಧಿ ಹೊಂದಿದ ಸಾತ್ಯಕಿಯು ಭೀಮಸೇನನನ್ನು ಅಲ್ಲಿಯೇ ನಿಲ್ಲಿಸಿ, ತಾನೊಬ್ಬನೇ ರಥದಲ್ಲಿ ಹೊರಟನು. ಸಾತ್ಯಕಿಯು ಬಾಣವರ್ಷದಿಂದ ಕೃತವರ್ಮನ ರಥವನ್ನು ವಾಜಿಗಳನ್ನೂ ನಾಶಪಡಿಸಿ ಎಲ್ಲೆಡೆ ಸೈನ್ಯವನ್ನು ಸಂಹರಿಸುತ್ತಾ ಕೃತವರ್ಮನನ್ನು ಜಯಿಸಿ, ಯುವಕರಾದ ಸೈನಿಕರ ಶಿರಗಳನ್ನು ಬಾಣಗಳಿಂದ ಛೇದಿಸುತ್ತಾ ಹೊರಟನು. ಆಗ ಜಲಸಂಧನೆಂಬ ವೀರನು ರಥದ ಮೇಲೇರಿ ಕುಳಿತು ಯುದ್ಧಕ್ಕೆ ಬಂದು ಸಾತ್ಯಕಿಯನ್ನು ತಡೆಯುತ್ತಿರಲು ಸಾತ್ಯಕಿಯು ಬಾಣಗಳಿಂದ ಅಸದೃಶ ಪರಾಕ್ರಮಿಯಾದ ಜಲಸಂಧನನ್ನು ಸಂಹರಿಸಿದನು. ಜಲಸಂಧನನ್ನು ಸಂಹರಿಸಿದ ಸಾತ್ಯಕಿಯು ಗಜ, ರಥ, ತುರಗಾರೂಢರಾದ ವೀರರನ್ನೂ ಸಂಹರಿಸಿ ಕೌರವ ಸೈನ್ಯವನ್ನು ಮಥಿಸಿದನು ಮತ್ತು ಶರಾವರ್ಷಣ ಮಾಡುತ್ತಿರುವ ಪರ್ವತಸಂಬಂಧಿಗಳಾದ ಪಾರ್ವತೇಯರೆಂಬ ರಾಜರನ್ನೂ ಎಲ್ಲ ಸೈನಿಕರನ್ನೂ ಸಂಹರಿಸಿ ಕೇಶವಾರ್ಜುನ-ರಿರುವಲ್ಲಿಗೆ ಬಂದನು. ಆಗ ಯೂಪಕೇತುವಾದ ಭೂರಿಶ್ರವನು ಅವನನ್ನೆದುರಿಸಲು ಬಂದನು.

ಆಗ ಸಾತ್ಯಕಿ-ಭೂರಿಶ್ರವರ ಮಧ್ಯೆ ಘೋರವೂ ವಿಚಿತ್ರವೂ ಆದ ಯುದ್ಧವಾಯಿತು. ಆಗ ಅವರಿಬ್ಬರೂ ಪರಸ್ಪರ ಅಶ್ವಗಳನ್ನು ಕೊಂದು ಸಾರಥಿಗಳನ್ನು ಹೊಡೆದು ಬೀಳಿಸಿ ಧನುಸ್ಸುಗಳನ್ನು ಛೇದಿಸಿದರು. ನಂತರ ಶತಚಂದ್ರ ಖಡ್ಗಹಸ್ತರಾಗಿ ಕಾದಾಡಿದರು. ಆಗ ಭೂರಿಶ್ರವನು ಸಾತ್ಯಕಿಯನ್ನು ನೆಲಕ್ಕೆ ಕೆಡವಿ ಬೀಳಿಸಿ ಅವನ ತಲೆಯ ಕೇಶಗಳನ್ನು ಹಿಡಿದು, ಅವನ ಎದೆಯ ಮೇಲೆ ಕುಳಿತು ಖಡ್ಗವನ್ನು ಮೇಲೆತ್ತಿ ಕೊಲ್ಲಲುದ್ಯುಕ್ತನಾದನು. ಆಗ ದೂರದಲ್ಲಿ ಅರ್ಜುನನ ರಥದ ಸಾರಥ್ಯ ಮಾಡುತ್ತಿದ್ದ ಶ್ರೀಕೃಷ್ಣನು ಅದನ್ನು ತಿಳಿದು "ಅರ್ಜುನ! ಸಾತ್ಯಕಿಯನ್ನು ರಕ್ಷಿಸು"ಎಂದನು. ಅರ್ಜುನನು ಒಂದು ತೀಕ್ಷ್ಣವಾದ ಬಲೆಯನ್ನೆಸೆದು ಸಾತ್ಯಕಿಯನ್ನು ಕೊಲ್ಲಲು ಕೈಯ್ಯನ್ನು ಮೇಲೆತ್ತಿದ್ದ ಭೂರಿಶ್ರವನ ತೋಳುಗಳನ್ನು ಕತ್ತರಿಸಿಹಾಕಿದನು.

ಅದು ಸರಿ. ಸಾತ್ಯಕಿಯನ್ನು ಭೂರಿಶ್ರವನು ಕೊಲ್ಲಲಿದ್ದಾನೆಂದು ಕೃಷ್ಣನಿಗೆ ಹೇಗೆ ಗೊತ್ತಾಯಿತು? ಎಂಬ ಸಂದೇಹ ಬಂದರೆ ಶ್ರೀಕೃಷ್ಣನು "ವಿಶ್ವತಃ ಚಕ್ಷುಃ" ಎಂದು ವೇದಗಳು ಹೊಗಳುವವು. ಅಂತೆಯೇ ವಿಶ್ವತಃ ಚಕ್ಷುವಾದ್ದರಿಂದ ದೂರ-ವಿದ್ದರೂ ಅದನ್ನು ಕಂಡು ಹೇಳಿದನು ಎಂದು ಶ್ರೀನಿರ್ಣಯಾಚಾರ್ಯರು ನಿರ್ಣಯದಲ್ಲಿ ಹೇಳಿದ್ದಾರೆ.

ಅರ್ಜುನನ ಬಲೆಯಿಂದ ತುಂಡರಿಸಲ್ಪಟ್ಟ ಬಾಹುಗಳುಳ್ಳ ಭೂರಿಶ್ರವನು ಅರ್ಜುನನ್ನೂ ನಿಂದಿಸಿ, ಅಸುರಾವೇಶದಿಂದ ಕೃಷ್ಣನು ಮಾನವನೆಂಬ ಬುದ್ಧಿಯಿಂದ ಮೊದಲು ನಿಂದಿಸಿದನು. ಅನಂತರ ಅಸುರಾವೇಶ ತೊಲಗಿದಮೇಲೆ ಶ್ರೀಹರಿಯನ್ನು ಧ್ಯಾನಿಸುತ್ತಾ ಗರುಡಧ್ವಜನಾದ ಶ್ರೀಕೃಷ್ಣನನ್ನು ಹೆಚ್ಚಾದ ಭಕ್ತಿಯಿಂದ ಧ್ಯಾನ ಮಾಡುತ್ತಿರಲು, ಸಾತ್ಯಕಿಯು ಮೇಲೆದ್ದು

ಕೃಷ್ಣಾರ್ಜುನರು ಬೇಡಬೇಡವೆಂದು ಹೇಳುತ್ತಿದ್ದರೂ ಭೂರಿಶ್ರವನ ತಲೆಯನ್ನು ಕತ್ತರಿಸಿ ಹಾಕಿದನು. ಆಗ ಶ್ರೀಕೃಷ್ಣನು ಸಾತ್ಯಕಿಗಾಗಿಯೇ ಸಂಪಾದಿಸಿದ್ದ ತನ್ನ ರಥವನ್ನೂ ಸಾರಥಿ ಸಹಿತವಾಗಿ ಸಾತ್ಯಕಿಗೆ ನೀಡಿದನು.

ಅನಂತರ ಅರ್ಜುನನ ರಥದ ಕುದುರೆಗಳು ಬಾಯಾರಿಕೆಯಿಂದ ಬಳಲುತ್ತಿರುವುದನ್ನು ಶ್ರೀಕೃಷ್ಣನಿಂದ ತಿಳಿದು ಅರ್ಜುನನು ವಾರುಣಾಸ್ತ್ರವನ್ನು (ವರುಣದೇವತಾಕವಾದ ಅಸ್ತ್ರವನ್ನು) ಸೃಷ್ಟಿಸಿದನು. ಅದರಿಂದ ಜಲವನ್ನೂ ನಿರ್ಮಿಸಿದನು. ಅದರಂತೆ ಅದೇ ಅಸ್ತ್ರದಿಂದ ಬಾಣಾಕಾರವಾದ ಅಶ್ವಶಾಲೆಯನ್ನೂ ನಿರ್ಮಿಸಿದನು. ಆಗ ಕೃಷ್ಣನು ರಥದಿಂದ ಅಶ್ವಗಳನ್ನು ಬಿಚ್ಚಿ ಅಶ್ವಶಾಲೆಯಲ್ಲಿ ಬಿಟ್ಟನು. ನೀರನ್ನೂ ಕುಡಿಸಿದನು. ಆಗ ಅರ್ಜುನನು ಶರಗಳಿಂದ ಶತ್ರುಗಳನ್ನು ಪೀಡಿಸಿದನು. ಕೃಷ್ಣನು ಕುದುರೆಗಳನ್ನು ಮಾತ್ರ ರಥಕ್ಕೆ ಕಟ್ಟಿದನು. ಶ್ರೀಕೃಷ್ಣನು ರಥವನ್ನು ಚಾಲನೆ ಮಾಡುತ್ತಿರಲು ಅರ್ಜುನನು ಭೀಭತ್ಸವಾದ ಶತ್ರುಗಳೊಡನೆ ಹೋರಾಡಹತ್ತಿದನು.

ಇತ್ತ ಧರ್ಮರಾಜನು ಸಾತ್ಯಿಕಿಯನ್ನು ಕಳಿಸಿದ ಮೇಲೆ, ಮತ್ತೆ ಚಿಂತಾಕ್ರಾಂತನಾಗಿ "ಭೀಮ ಪಾಂಚಜನ್ಯ ಧ್ವನಿಯು ಕೇಳಿಸುತ್ತಿದೆ, ಆದರೆ ಗಾಂಡೀವಿಯ ಶಂಖಧ್ವನಿಯು ಕೇಳಿಸುತ್ತಿಲ್ಲ. ನಾನು ಸಾತ್ಯಕಿಗೆ ಹೊರಲಾಗದಕ್ಕಿಂತ ದೊಡ್ಡ ಭಾರಹೊರಿಸಿ ಕಳುಹಿಸಿದೆನು. ಅವನ ಸಮಾಚಾರವೂ ತಿಳಿಯಲಿಲ್ಲ. ಆದುದರಿಂದ ವೃಕೋದರ ನೀನು ಹೋಗಿ ಸಾತ್ಯಕಿ ಮತ್ತು ಅರ್ಜುನರು ಇನ್ನೂ ಜೀವಿಸಿದ್ದಲ್ಲಿ ಅವರನ್ನು ಸಂರಕ್ಷಿಸು" ಎಂದು ಹೇಳಲು, ಭೀಮನು "ಅಗ್ರಜ ವಾಸುದೇವನಿಂದ ರಕ್ಷಿತನಾದ ಅರ್ಜುನನನ್ನು ಬಹ್ಮ ರುದ್ರಾದಿಗಳೂ ಜಯಿಸಲು ಸಾಧ್ಯವಿಲ್ಲ. ಇನ್ನು ದ್ರೋಣ-ಕರ್ಣಾದಿಗಳು ಅರ್ಜುನನನ್ನು ಜಯಿಸಲು ಸಾಧ್ಯವಿಲ್ಲವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೇ? ಆದಕಾರಣ ನೀನು ಚಿಂತಿಸಬೇಡ. ಶ್ರೀಹರಿಯ ಪ್ರಸಾದದಿಂದ ಧನಂಜಯ ಮತ್ತು ಸಾತ್ಯಕಿಗಳಿಗೇನೂ ಭಯವಿಲ್ಲ. ದ್ರೋಣರು ನಿನ್ನನ್ನು ಬಂಧಿಸಲು ಯತ್ನಿಸುತ್ತಿದ್ದಾರೆ. ಈ ಸಮಯದಲ್ಲಿ ನಿನ್ನನ್ನು ರಕ್ಷಿಸಲು ನಾನು ಇಲ್ಲಿ ಇರಲೇಬೇಕಾಗಿದೆ" ಎಂದು ಹೇಳಿದನು.

ವೃಕೋದರನ ನುಡಿಯನ್ನಾಲಿಸಿ ಧರ್ಮನಂದನನು, "ಭೀಮಸೇನ ಜೀವಿಸಿರುವಾಗ, ಮಹಾಬಲವಂತರಾದ ಘಟೋತ್ಕಚ ಮತ್ತು ಧೃಷ್ಟದ್ಯುಮ್ನರು ನನ್ನ ರಕ್ಷಣೆಗೆ ಕಟಿಬದ್ಧರಾಗಿರುವಾಗ ಆಚಾರ್ಯ ದ್ರೋಣರು ನನ್ನನ್ನು ಸೆರೆಹಿಡಿಯಲು ಅದೆಂತು ಶಕ್ತರಾದರು ? ಸಹೋದರ! ನೀನು ನಿಜವಾಗಿಯೂ ನನಗೆ ಪ್ರಿಯವಾದುದನ್ನು ಮಾಡಲು ಮನ ಮಾಡಿದೆಯಾದರೆ ಜಾಗ್ರತೆಯಾಗಿ ಪ್ರಿಯ ಪಾರ್ಥ ಮತ್ತು ಸಾತ್ಯಕಿಗಳಿರುವೆಡೆಗೆ ಹೋಗಿ ಅವರನ್ನು ಸಂರಕ್ಷಿಸು ಮತ್ತು ನೀನು ಪಾರ್ಥ ಸಾತ್ಯಕಿಗಳನ್ನು ಕಂಡೊಡನೆ ನನಗದು ತಿಳಿಯಲೋಸುಗ ಸಿಂಹನಾದವನ್ನು ಮಾಡು ಮತ್ತು ಅದರಂತೆ ಜಯದ್ರಥನು ಸಂಹೃತನಾದರೆ ಅದನ್ನು ನನಗೆ ಸಿಂಹನಾದವನ್ನು ಮಾಡುವ ಮೂಲಕ ತಿಳಿಯಪಡಿಸು" ಎಂದರುಹಿದನು.

ಆಗ ಬಲಭೀಮನು, ಅಣ್ಣ ಯುಧಿಷ್ಠಿರನನ್ನು ರಕ್ಷಿಸುವ ಹೊಣೆಯನ್ನು ಧೃಷ್ಟದ್ಯುಮ್ನ ಹಾಗೂ ತನ್ನ ಕುಮಾರನಾದ ಘಟೋತ್ಕಚರಿಗೆ ವಹಿಸಿಕೊಟ್ಟು ಸರ್ವಥಾ ಧರ್ಮರಾಜನನ್ನು ರಕ್ಷಿಸಬೇಕೆಂದು ಅವರಿಗೆ ಹೇಳಿದನು. ಆಗ ಸೇನಾಧಿಪನಾದ ಧೃಷ್ಟದ್ಯುಮ್ನನು ಭೀಮಸೇನ ನೀನು ಕೇಶವಾರ್ಜುನರಿರುವಲ್ಲಿಗೆ ಹೊರಡು. ನಾನು ಜೀವಿಸಿರುವವರೆಗೂ ದ್ರೋಣಾ-ಚಾರ್ಯರು ನಮ್ಮ ಧರ್ಮನಂದನನ್ನು ಹಿಡಿಯಲಾರರು. ನಾನು ಅವರಿಗೆ ಮೃತ್ಯುವಾಗಿರುವೆನು! ಆದುದರಿಂದ ಯುಧಿಷ್ಠಿರನನ್ನು ಬಂಧಿಸಲು ಅವರು ಸಮರ್ಥರಾಗಲಾರರು ಎಂದು ಹೇಳಲು ಧರ್ಮರಾಜನ ರಕ್ಷಣೆಗೆ ಅವನನ್ನು ನಿಯಮಿಸಿ, ಗದಾಧಾರಿಯಾದ ಭೀಮನು ರಣರಂಗಕ್ಕೆ ತೆರಳಿ ಸರಳು ಸಂತತಿಯನ್ನು ವರ್ಷಿಸುತ್ತಾ ಶತ್ರುಸೈನ್ಯದ ಒಳನುಗ್ಗಿದನು.

ಆಗ ದ್ರೋಣರು ಶರಗಳ ವರ್ಷಣ ಮಾಡುತ್ತಾ, ವೃಕೋದರನನ್ನು ತಡೆಗಟ್ಟಿ "ಭೀಮಸೇನ ನಾನು ಶಿಷ್ಯ ಸ್ನೇಹದಿಂದ ಅರ್ಜುನ ಸಾತ್ಯಕಿಗಳು ನಮಸ್ಕರಿಸಿದ್ದರಿಂದಲೂ ಶಿಷ್ಯಸ್ನೇಹದಿಂದಲೂ ಯದ್ಯಪಿ ನಾನು ಜಯದ್ರಥನನನ್ನು ರಕ್ಷಿಸುವುದಾಗಿ ಪ್ರತಿಜ್ಞೆ ಮಾಡಿದ್ದರೂ, ಪ್ರಿಯಶಿಷ್ಯ ಅರ್ಜುನನಿಗಾಗಿ ಸಾತ್ಯಕಿಗಾಗಿಯೂ ಮಾರ್ಗ ನೀಡಿದೆನು. ಆದರೆ ಭೀಮ! ನಿನಗೆ ಮಾತ್ರ ನಾನು ದಾರಿ ಬಿಡುವುದಿಲ್ಲ. ನೋಡೀಗ ನನ್ನ ಅಸ್ತ್ರಪೌರುಷವನ್ನು" ಎಂದು ಹೇಳಿದರು. ಆಗ ಭೀಮನು ಗದೆಯನ್ನು ದ್ರೋಣರ ರಥದ ಮೇಲೆ ಪ್ರಯೋಗಿಸಿ ಇಂತು ವಿಜ್ಞಾಪಿಸಿದನು. 'ಆಚಾರ್ಯರೆ! ನಿಮ್ಮನ್ನು ನಾನು ತಂದೆಯಂತೆ ಮಾನಿಸುವೆನು. ಅಂತೆಯೇ ನಾನು ಸದಾ ನಿಮ್ಮ ವಿಷಯದಲ್ಲಿ ಮೃದುವಾಗಿ ವರ್ತಿಸುತ್ತಿದ್ದೇನೆ. ಕಠಿಣವಾಗಿ ವರ್ತಿಸುವುದಿಲ್ಲ" ಎಂದು ನಿರೂಪಿಸಿ ತತ್‌ಕ್ಷಣವೇ ಗದಾಘಾತದಿಂದ ರಥದ ಚಕ್ರ ಸಾರಥಿಗಳನ್ನು ಪುಡಿಪುಡಿ ಮಾಡಿದನು. ಭೀಮನ ಗದೆಯು ತಮ್ಮ ರಥದತ್ತ ಬರುತ್ತಿರುವುದನ್ನು ಅವಲೋಕಿಸಿ ದ್ರೋಣರು ತ್ವರೆಯಾಗಿ ರಥದಿಂದ ಧರೆಗೆ ಹಾರಿದರು. ಆ ಬಳಿಕ ಸುಯೋಧನನು ಸಮರ್ಪಿಸಿದ ಬೇರೊಂದು ಶ್ರೇಷ್ಠರಥದಲ್ಲಿ ಕುಳಿತು ಶರವರ್ಷಣ ಮಾಡಿದರು. ಪರಮಾಸ್ತ್ರ ಮಂತ್ರಿತವಾದ ಆ ಬಾಣಗಳಿಂದ ತಾಡಿತನಾದ ಜಗತ್ತ್ರೇರಕನಾದ ಪವನನಂದನಾದ ಭೀಮಸೇನನು ಮನೋವೇಗದಿಂದ ರಥದಿಂದ ಧುಮುಕಿ ವೃಷಭದಂತೆ ಶಿರವನ್ನು ಮುಂದೆ ಮಾಡಿ ದ್ರೋಣರ ಬಳಿಗಾಗಮಿಸಿ "ಆಚಾರ್ಯರೇ! ನಾನು ನಿಮ್ಮನ್ನು ಸಂಹರಿಸಲು ಶಕ್ತನಾದರೂ ನೀವು ಗುರುಗಳಾದ್ದರಿಂದ ಆ ಗೌರವದಿಂದ ಕೊಲ್ಲುವುದಿಲ್ಲವೆಂದು" ತಿಳಿಸಲು ಅವರ ರಥವನ್ನು ತುರಗ ಸಾರಥಿಗಳೊಡನೆ ಗಗನಕ್ಕೆ ಹಾರಿಸಿದನು. ಅದು ನೆಲಕ್ಕೆ ಅಪ್ಪಳಿಸಿ ಚೂರ್ಣಿಕೃತವಾಯಿತು. ದ್ರೋಣರು ಹೇಗೋ ಕೆಳಗೆ ಹಾರಿದರು. ಆಗ ಭೀಮನ ಸಾರಥಿಯಾದ ವಿಶೋಕನು ರಥವನ್ನು ತರಲು ಉದಾರ ವಿಕ್ರಮನಾದ ಭೀಮನು ಅದನ್ನೇರಿ ಕುಳಿತನು.

ದ್ರೋಣಾಚಾರ್ಯರು ಸಹ ದುರ್ಯೋಧನನಿತ್ತ ಮತ್ತೊಂದು ರಥದಲ್ಲಿ ಮಂಡಿಸಿ ಯುಧಿಷ್ಠಿರನ ಬಳಿಗಾಗಮಿಸಿದರು. ಧರ್ಮರಾಜನ ಬಂಧನಕ್ಕಾಗಿ ಬಂದು ಅವರನ್ನು ಸೇನಾಧಿಪತಿಯಾದ ಪಾಂಚಾಲ ಪುತ್ರ ಧೃಷ್ಟದ್ಯುಮ್ನನು ಅಡ್ಡ ತಡೆದನು ಮತ್ತು ದ್ರೋಣರ ಬಾಣಗಳ ಹೊಡೆತಗಳಿಂದ ವಿದ್ರಾವಿತವಾದ ತನ್ನ ಸೇನೆಯನ್ನು ಪುನಃ ಸಂಘಟಿಸಿಕೊಂಡು ಆ ದ್ರುಪದತನಯನು ಬಾಣಗಳಿಂದ ದ್ರೋಣರನ್ನು ತರುವಿ ಅವರು ನೋಡುತ್ತಿರುವಂತೆಯೇ ಶತ್ರುಸೈನ್ಯವನ್ನು ವಿದ್ರಾವ-ಗೊಳಿಸಿದನು. ಆಗ ಪರಸ್ಪರ ವಿಜಯಾಕಾಂಕ್ಷಿಗಳಾದ ಧರ್ಮಜ ದುರ್ಯೋಧನರಿಗೂ, ಧೃಷ್ಟದ್ಯುಮ್ನ ದ್ರೋಣರಿಗೂ ರುದ್ರ-ಭೀಕರವೂ, ವಿಸ್ಮಯಜನಕವೂ ಆದ ಸತತ ಮಾರ್ಗಣ ಸಂತತಿವರ್ಷಣದಿಂದ ಸಹಿತವಾದ ಯುದ್ಧವಾಯಿತು.

ಇತ್ತ ಅಮಿತಪರಾಕ್ರಮಿಯಾದ ಬಲಭೀಮನು ಶರವರ್ಷಣದಿಂದ ಹೊಡೆದೋಡಿಸಲು ವಿಂದ-ಅನುವಿಂದ ಎಂಬಿಬ್ಬರು ಪ್ರಮುಖ ವೀರರಿಂದೊಡಗೂಡಿದ ಧೃತರಾಷ್ಟ್ರನ ಹನ್ನೆರಡು ಜನ ಪುತ್ರರು ಭೀಮನ ಮೇಲೆ ಬಾಣ ವರ್ಷಣಗೈದರು. ಆಗ ಅಸದೃಶ ಪರಾಕ್ರಮಿಯಾದ ವಾಯುಕುಮಾರನು ಅವರೆಲ್ಲರ ತಲೆಗಳನ್ನು ತರಿದು ಹಾಕಿದನು. ಭೀಮಸೇನನು ವಿಂದ ಅನುವಿಂದರೆಂಬ ಅವಂತಿಯ ವೀರರನ್ನು ಸಂಹರಿಸಿದ್ದನು. ಇವರು ಅವರಲ್ಲ. ಇವರು ಧೃತರಾಷ್ಟ್ರನ ಮಕ್ಕಳೆಂದು ತಿಳಿಯಬೇಕು. ಅವರೆಲ್ಲರೂ ಮೃತರಾದ ಮೇಲೆ ಸತ್ಯವ್ರತ. ಪುರುಮಿತ್ರ. ಜಯ. ವೃಂದಾರಕ ಮತ್ತು ಪೌರವರೆಂಬ ಕುರುರಾಜ ಧೃತರಾಷ್ಟ್ರನ ಅಮಾತ್ಯರು ಭೀಮನ ಮೇಲೆರಗಿ ಬಂದರು. ಅವರು ಬಾಣದ ಮಳೆ ಸುರಿಸುತ್ತಿದ್ದರೂ ಕ್ರೂರಿಗಳಾದ 'ವಿಪಾಠಕ'ಗಳೆಂಬ ಬಾಣಗಳಿಂದ ಭೀಮನು ಅವರನ್ನು ಕೊಂದನು. ಉಳಿದುಳಿದವರು ಪಲಾಯನ ಮಾಡಿದರು. ಅಲ್ಲಿ ರಕ್ತಿಯುಳ್ಳ ಶೃಗಾಲಾದಿ ಮೃಗಗಳನ್ನು ಸಿಂಹವು ಹೊಡೆದೋಡಿಸುವಂತೆ ಶತ್ರುನಿವಹವನ್ನು ಭೀಮಸೇನನು ಓಡಿಸಿದನು. ಅದನ್ನು ಕಂಡ ಕೃತವರ್ಮನು ಭೀಮನನ್ನು ತಡೆಯಲು ಅವನು ಕ್ಷಣದಲ್ಲಿಯೇ ಬಾಣಗಳಿಂದ ಕೃತವರ್ಮನನ್ನು ಸಾರಥಿರಹಿತನನ್ನಾಗಿ ವಿರಥನನ್ನಾಗಿ ಮಾಡಿದನು. ಭೀಮನಿಂದ ಹೊಡೆತಗಳನ್ನು ತಿಂದ ಕೃತವರ್ಮನು ಕೂಡಲೇ ಅಲ್ಲಿಂದ

ಪರಾರಿಯಾದನು. ಆ ಹಾರ್ದಿಕನನ್ನು ಜಯಿಸಿದ ಪಾಂಡುಪುತ್ರ ವೃಕೋದರನು ಕೌರವರ ಸೈನ್ಯವನ್ನು ವಿಚಲಿತಗೊಳಿಸಿ ಸಕಲ ನರರು ಕುದುರೆ ಆನೆಗಳನ್ನು ಅಂತಕನಿಗೆ ಬಳವಳಿಯಾಗಿತ್ತು ಶ್ರೀಕೃಷ್ಣ, ಪಾರ್ಥರ ಬಳಿಗೆ ಆಗಮಿಸಿದನು.

ಆಗ ನರ-ನಾರಾಯಣರೆನಿಸಿದ ಅರ್ಜುನ ಕೃಷ್ಣರು ಭೀಮನನ್ನು ಪರಮಸಂತಸದಿಂದವಲೋಕಿಸಿ ಅವನೊಡನೆ ಮಾತನಾಡಿದರು. ಭೀಮನು ತಾನು ಕೃಷ್ಣಾರ್ಜುನರನ್ನು ಕಂಡ ವಿಷಯವನ್ನು ಧರ್ಮರಾಜನಿಗೆ ತಿಳಿಸಲು ಉಚ್ಚಕಂಠದಿಂದ ಸಿಂಹನಾದ ಮಾಡಿದನು. ಅದನ್ನು ಕೇಳಿ ಧರ್ಮರಾಜನು ಪರಮಾನಂದಭರಿತನಾದನು. ಆ ಬಲಭೀಮನ ಸಿಂಹನಾದ ಮಹಾಧ್ವನಿಯಿಂದ ಕೌರವರ ಸೈನಿಕರನೇಕರು ಕಿವಿಗಳಿಂದ ರಕ್ತಸ್ರಾವದಿಂದ ನರಳಿದರೆ, ಮತ್ತೆ ಕೆಲವರು ಮರಣಿಸಿದರು. ಇಂತು ಮಹಾಬಲವಂತನಾದ ಕುಂತೀಕುಮಾರ ಭೀಮನ ವಿಕಟಾಟ್ಟಹಾಸ ಸಿಂಹನಾದಗಳಿಂದ ಸಕಲ ರಾಜನ್ಯರೂ ಭಯಭೀತರಾಗಲು ಮಹಾವೀರ ಕರ್ಣನು ಭೀಮನ ಮೇಲೇರಿ ಬಂದನು. ಅದರಿಂದ ಕೋಪಿಷ್ಟನಾದ ಪವನನಂದನನು ವಿಕರ್ಣ ಚಿತ್ರಸೇನರನ್ನು ಮೃತ್ಯುವಿಗರ್ಪಿಸಿ ಕರ್ಣನ ರಥವನ್ನು ಚೂರ್ಣಗೊಳಿಸಿ, ಘೋರಶರಪ್ರಯೋಗದಿಂದ ಕರ್ಣನನ್ನು ಪಲಾಯನಗೊಳಿಸಿದನು. ಧೃತರಾಷ್ಟ್ರನ ಕುವರರು ಪುನಃ ಭೀಮನೊಡನೆ ಕಾದಾಡಲು ಅವರನ್ನೂ ಸಂಹರಿಸಿ, ಒಂದೇ ಕ್ಷಣದಲ್ಲಿ ಅಂಗರಾಜನನ್ನು ವಿರಥನನ್ನಾಗಿಯೂ ನಿರಾಯುಧನನ್ನಾಗಿಯೂ ಮಾಡಿದನು.

ಇಂತು ಕರ್ಣ ಸಹಾಯಕರೂ ಶೂರರೂ ಆದ ವಿಕರ್ಣ ಚಿತ್ರಸೇನಾದಿಗಳು ತಲೆಕಳೆದುಕೊಂಡು ಯಮಸದನ ಸೇರಿದರು. ಇದರಂತೆ ಕರ್ಣನಿಗೆ ಸಹಾಯಕರಾಗಿ ಬಂದ ಇಪ್ಪತ್ತೂರು ಜನ ಧೃತರಾಷ್ಟ್ರಕುಮಾರರು ಕರ್ಣನು ನೋಡು-ತ್ತಿರುವಂತೆಯೇ ಭೀಮನ ಬಾಣಗಳಿಗೆ ಆಹುತಿಯಾದರು. ಹೀಗೆ ಇಪ್ಪತ್ತೊಂದು ಬಾರಿ ಅಂಗರಾಜ ಕರ್ಣನು ಅಶ್ವ ಸಾರಥಿ ರಥ ಧ್ವಜಗಳನ್ನು ಕಳೆದುಕೊಂಡು ಭೀಮನ ಬಾಣಗಳಿಂದ ಅತ್ಯಂತ ಬಾಧಿತನಾಗಿ ತನ್ನ ಪ್ರಾಣವುಳಿಯುವುದೋ ಇಲ್ಲವೋ ಸಂಶಯದಿಂದ ಅತಿ ದುಃಖಿತನಾಗಿ, ಮತ್ತೆ ಮತ್ತೆ ಅಳುತ್ತಾ, ಎಲ್ಲರೂ ನೋಡುತ್ತಿರುವಂತೆಯೇ ರಣಭೂಮಿಯಿಂದ ಪಲಾಯನಮಾಡಿದನು.

ಅನಂತರ 33ನೆಯ ಬಾರಿ ಯುದ್ಧಕ್ಕಾಗಿ ಸೂರ್ಯ ಪುತ್ರನಾದ ಕರ್ಣನು ಪರಶುರಾಮದೇವರು ಕೊಟ್ಟ ಅತ್ಯಂತ ಪ್ರಕಾಶಮಾನವೂ, ಅಭೇದ್ಯವೂ, ಜಯಪ್ರದವೂ ಆದ ದಿವ್ಯರಥದಲ್ಲಿ ಮಂಡಿತನಾಗಿ ಶ್ರೇಷ್ಠಧನುಸ್ಸನ್ನೂ ಅಕ್ಷಯ ಬಾಣಗಳನ್ನೂ ಧರಿಸಿ ಕ್ರೋಧೋನ್ಮತ್ತನಾಗಿ ವೃಕೋದರನ ಮೇಲೇರಿ ಬಂದನು. ಆಗ ಸಮಹಾವೀರರಾದ ಭೀಮ ಕರ್ಣರಲ್ಲಿ ಬಹುಕಾಲ ಅತಿ ಘೋರಕದನವಾಯಿತು. ಅವರಿಬ್ಬರೂ ಕೆಂಗಣ್ಣುಗಳಿಂದ ಶರವರ್ಷ ಮಾಡುತ್ತಾ ಅವುಗಳಿಂದ ಅಂಬರವನ್ನೇ ಮುಚ್ಚಿ-ಬಿಟ್ಟರು. ಅನಂತರ ಮಹಾಬಾಹುವಾದ ಭೀಮನು ಯುದ್ಧದಲ್ಲಿ ಕವಚ ಕುಂಡಲಗಳಿಂದ ಯುಕ್ತವಾದ ನಿನ್ನನ್ನು ಕೊಲ್ಲಬಲ್ಲೆ ಎಂಬುದನ್ನು ಜ್ಞಾಪಿಸಲು ಕರ್ಣನ ಎರಡು ಕುಂಡಲಗಳು ಮತ್ತು ಕವಚವನ್ನು ಬಾಣಗಳಿಂದ ಕತ್ತರಿಸಿ ಭೂಮಿಗೆ ಬೀಳಿಸಿದನು. "ಎಲೈ ಕರ್ಣ! ಸ್ವಾಭಾವಿಕ ಕರ್ಣಕುಂಡಲ-ಕವಚಗಳಿಂದ ಶೋಭಿತನಾದ ನಿನ್ನನ್ನು ಅರ್ಜುನನು ಸಂಹರಿಸಲು ಸಾಧ್ಯ-ವಿಲ್ಲವೆಂದು ಬಗೆದು ಭಯದಿಂದ ಇಂದ್ರದೇವನು ಅವುಗಳನ್ನು ಯಾಚಿಸಿ ಪಡೆದಿದ್ದನಲ್ಲವೇ? ಆದರೆ ಎಲೈ ಅಂಗರಾಜ, ಅವುಗಳಿದ್ದಿದ್ದರೂ ನಾನು ನಿನ್ನನ್ನು ಸಂಹರಿಸಲು ಸಮರ್ಥನಾಗಿದ್ದೇನೆ" ಎಂದು ಕರ್ಣನಿಗೆ ಮನವರಿಕೆ ಮಾಡಿಕೊಂಡು ಭೀಮನು ತೀಕ್ಷ್ಣ ಶರಾಘಾತಗಳಿಂದ ಕರ್ಣನನ್ನು ಬಹುವಾಗಿ ಮರ್ದಿಸಿದನು.

ಪುನಃ ಭೀಮಸೇನನು ಇಂತು ಯೋಚಿಸಿದನು. ಶ್ರೀಪರುಶುರಾಮ ಕರ್ಣನಿಗೆ ಸ್ಪರ್ಧೆಯಿಲ್ಲದೆ ಯುದ್ಧ ಮಾಡುವಾಗ ಎಲ್ಲರನ್ನೂ ಜಯಿಸುವ ವರವಿತ್ತಿದ್ದಾರೆ. ಆದರೆ ಕರ್ಣನು ನನ್ನ ಜೊತೆಗೆ ಸ್ಪರ್ಧೆಯಿಂದ ಕದನ ಮಾಡುವುದಿಲ್ಲ. ಅತಃ ಈಗ ಒಳ್ಳೆಯ ಬಂದೊದಗಿತು. ಯದ್ಯಪಿ ಭಗವಾನ್ ಪರಶುರಾಮರು ಅಂಗರಾಜನಿಗೆ ಸರ್ವರನ್ನೂ ಗೆಲ್ಲುವ ವರವಿತ್ತಿದ್ದರೂ ನನ್ನಲ್ಲಿರುವ ಅತಿಶಯ ಅನುಗ್ರಹದಿಂದ ತಮ್ಮ ವಚನ ಭಂಗವಾದರೂ ಸರಿಯೇ ಎಂದು ಸ್ಪರ್ಧಿಸದೆ ಇರುವ ಕರ್ಣನ

ಮೇಲೆ ನನಗೆ ವಿಜಯವನ್ನು ಅನುಗ್ರಹಿಸುತ್ತಾರೆ. ಆದರೂ ನಾನೀಗ ಪರುಶುರಾಮರ ವರಕ್ಕೆ ಗೌರವ ಕೊಡಲೇಬೇಕು. ಆದುದರಿಂದೀಗ ಈ ಕರ್ಣನಿಗೆ ಒಂದವಕಾಶವನ್ನು ನೀಡುತ್ತೇನೆ ಎಂದು ನಿಶ್ಚಯಿಸಿದನು. ಆಗ ಕರ್ಣನು ಭೀಮನ ಧನುವಿನ ರಜ್ಜುವನ್ನೂ ಕುದುರೆಗಳನ್ನೂ ಕತ್ತರಿಸಿ ಹಾಕಿದನು. ಆವಾಗ ಭೀಮನು ರಥವನ್ನು ಬಿಟ್ಟಿಳಿದು 'ನನಗೆ ಈ ಧನುಸ್ಸು ಅಸ್ತ್ರಗಳು ರಥ ಅಶ್ವಗಳಾವುದರ ಆವಶ್ಯಕತೆಯೂ ಇಲ್ಲ. ನನ್ನ ಸ್ವಾಭಾವಿಕ ಪರಾಕ್ರಮದಿಂದಲೇ ಹೋರಾಡಲು ಸಮರ್ಥನಾಗಿದ್ದೇನೆ' ಎಂದು ಜ್ಞಾಪಿಸುತ್ತಾ ಕರ್ಣನ ರಥವನ್ನೇ ಏರಿ ನಿಂತನು. ಆಗ ಕರ್ಣನು ಪ್ರಾಣಭಯದಿಂದ ರಥದ ಚಕ್ರ ಮತ್ತು ಕುದುರೆಗಳ ಮಧ್ಯಭಾಗವಾದ ದೂರಿಯ ಕೆಳಗೆ ಅವಿತುಕೊಂಡನು. ಭೀಮನು ಕರ್ಣನ ರಥವನ್ನೇಕೇ ಏರಿ ನಿಂತನು? ಎಂದರೆ ವೃಕೋದರನು ನಾನು ನಿರಾಯುಧನಾಗಿದ್ದರೂ ಶತ್ರುನಿಗ್ರಹ ಮತ್ತು ಸಂಹಾರ ಮಾಡುವ ವಿಷಯದಲ್ಲಿ ಅತ್ಯಂತ ಸಮರ್ಥನಾಗಿದ್ದೇನೆ ಎಂದು ತನ್ನ ಬಾಹುಬಲವನ್ನು ನೆನಪಿಸಲು ಕರ್ಣನ ರಥವೇರಿ ನಿಂತನು. ಆನಂತರ ರಥದಿಂದ ಕೆಳಗಿಳಿದನು.

ಭೀಮಸೇನನು ಕರ್ಣನ ಧನುಸ್ಸು ರಥಾದಿಗಳನ್ನು ಅಪಹರಿಸಲು ಅಥವಾ ನಾಶಪಡಿಸಲು ಇಲ್ಲವೇ ಅವನನ್ನು ಕೊಲ್ಲಲು ಬಯಸಲಿಲ್ಲ. ಹಿಂದೆ ದ್ರೋಣಾಚಾರ್ಯರ ಧನುಸ್ಸು ರಥಾದಿಗಳನ್ನೂ ನಾಶಪಡಿಸಲು ಸಮರ್ಥನಾಗಿದ್ದರೂ ಎಂತು ಆ ಕಾರ್ಯವೆಸಗದಲೇ ಸುಮ್ಮನಾದನೋ, ಅದರಂತೆ ಈಗಲೂ ಕರ್ಣನ ರಥಾದಿಗಳನ್ನು ಸಂಹರಿಸಿ ಅವನನ್ನು ಸಂಹಾರಮಾಡಲು ಅತಿಶಕ್ತನಾಗಿದ್ದರೂ ಶ್ರೀಪರುಶರಾಮದೇವರು ನೀಡಿದ ವರವನ್ನು ಗೌರವಿಸಲು ಅವರಲ್ಲಿ ತನಗಿರುವ ಭಕ್ತಿಯಿಂದ ಸುಮ್ಮನಾದನು ಮತ್ತು ಇಂದ್ರನಂದನನಾದ ಅರ್ಜುನನು 'ಕರ್ಣನನ್ನು ವಧಿಸುತ್ತೇನೆ' ಎಂದು ಪ್ರತಿಜ್ಞೆ ಮಾಡಿರುವುದರಿಂದಲೂ ಅದನ್ನು ಸತ್ಯಮಾಡಲೂ ಸಹ ಕರ್ಣನನ್ನು ವಧಿಸಲಿಲ್ಲ. ಈ ಎರಡು ಕಾರಣಗಳಿಂದ ಕರ್ಣನು ತನ್ನ ಮೇಲೆ ಬಾಣಪ್ರಯೋಗಮಾಡಲು ಅವಕಾಶ ಮಾಡಿಕೊಡಲು ಅವನನ್ನು ಬಿಟ್ಟು ದೂರ ಹೋದನು. ಅದನ್ನು ಕಂಡು ಕರ್ಣನು ಈಗ ಭೀಮನು ಪರಶುರಾಮರ ವಾಕ್ಯವನ್ನು ಮಾನಿಸಲು ದೂರ ಹೋದನೆಂದು ತಿಳಿದು ಅವನ ಮೇಲೆ ಶರವರ್ಷಮಾಡಿದನು. ಭೀಮನು ಮೃತವಾದ ಗಜಗಳನ್ನು ಆ ಬಾಣಗಳತ್ತ ತೂರಿದನು. ಕರ್ಣನು ಆ ಮೃತಗಜಗಳನ್ನು ಕತ್ತರಿಸಿ ಹಾಕಿದನು. ಆ ಕರ್ಣನು ದುರ್ಯೋಧನನ ಪ್ರೀತಿಗಾಗಿ ಭೀಮನ ಪರಾಕ್ರಮವರಿತಿದ್ದರೂ, ಅವನನ್ನು ಕ್ರೂರ ವಾಕ್ಯಗಳಿಂದ ನಿಂದಿಸಿದನು. ಅದನ್ನು ಕೇಳಿ ಧನಂಜಯನು ಅಂಗ ಭೂಪತಿ ಕರ್ಣನ ಮೇಲೆ ಬಾಣಗಳನ್ನೆಸೆದನು. ಕವಚ-ಹೀನನಾದ ಕರ್ಣನು ಅರ್ಜುನನ ಶರಾಹತಿಯಿಂದ ಕಡುನೊಂದು ಅಲ್ಲಿಂದ ಹೊರಟು ಹೋದನು. ಭೀಮನೂ ತನ್ನ ರಥವನ್ನು ಹತ್ತಿದನು.

ಹಿಂದೆ ಕರ್ಣನು, ಅರ್ಜುನನ್ನು ಬಿಟ್ಟು ಉಳಿದ ಧರ್ಮರಾಜಾದಿ ನಾಲ್ವರನ್ನು ಕೊಲ್ಲುವುದಿಲ್ಲವೆಂದು ಕುಂತೀದೇವಿಗೆ ಮಾತು ಕೊಟ್ಟಿದ್ದರಿಂದ ಇಂದ್ರನ ಶಕ್ತ್ಯಾಯುಧವನ್ನು ಭೀಮನ ಮೇಲೆ ಪ್ರಯೋಗಿಸಲು ಇಚ್ಛಿಸಲಿಲ್ಲ. ಒಂದು ವೇಳೆ ಭೀಮನ ಮೇಲದನ್ನು ಪ್ರಯೋಗಿಸಿದರೂ ಭೀಮಸೇನನು ಮೃತನಾಗುವುದಿಲ್ಲ. ಏಕೆಂದರೆ ಅವನು ಅವಧ್ಯನಾಗಿದ್ದಾನೆ. ಹಿಂದೆ ರಣರಂಗದಲ್ಲಿ ದ್ರೋಣರ ವಧಾನಂತರ ಕೋಪೋದ್ರಿಕ್ತನಾದ ಅಶ್ವತ್ಥಾಮಾಚಾರ್ಯರು ಅದ್ವಿತೀಯವಾದ ನಾರಾಯ-ಣಾಸ್ತ್ರವನ್ನು ಪ್ರಯೋಗಿಸಿದಾಗ ಅದು ಭೀಮಸೇನನ ತಲೆಯಿರಲಿ, ತಲೆಯ ಕೂದಲಂಬ್ನು ಕೊಂಕಿಸಲಾಗಲಿಲ್ಲ. ಅಂಥವನ ಮೇಲೆ ಇಂದ್ರನು ನೀಡಿದ ಶಕ್ತ್ಯಾಯುಧವೇ ಆಗಲಿ ಇತರ ಬಲವತ್ತರವಾದ ಮಹಾಸ್ತ್ರ ಶಸ್ತ್ರಗಳಾಗಲೀ ಏನು ಮಾಡಿಯಾವು? ಉದಾರಚರಿತನಾದ ಭೀಮನು ಕರ್ಣನ ರಥವನ್ನೇರಿ ನಿಂತಾಗ ಇಂದ್ರನ ಆ ಶಕ್ತ್ಯಾಯುಧವನ್ನು ತೆಗೆದುಕೊಳ್ಳಲು ಅಪೇಕ್ಷಿಸಲಿಲ್ಲ. ಕಾರಣವೇನೆಂದರೆ ಮುಂದೆ ಆ ಶಕ್ತ್ಯಾಯುಧದಿಂದ ಘಟೋತ್ಕಚನ ಮರಣವಾಗಬೇಕೆಂಬುದು ಶ್ರೀಕೃಷ್ಣನ ಇಚ್ಛೆ ಎಂಬುದನ್ನವನು ತಿಳಿದಿದ್ದನು. ಅಂಗರಾಜನು ಆಗ ಬೇರೊಂದು ರಥವನ್ನೇರಿ ಅರ್ಜುನನೆಡೆಗೆ ಸಾಗಿ ಬಂದನು.

ಒಂದುವೇಳೆ ಶ್ರೀಮಾಧವನ ಸಲಹೆಯಂತೆ ಅರ್ಜುನನು ಶ್ರೀಪರುಶುರಾಮನಿತ್ತ ದಿವ್ಯರಥ ಧನುಸ್ಸು ಮುಂತಾದವನ್ನು ನಾಶಪಡಿಸಿದರೇನು ಮಾಡುವುದೆಂಬ ಭಯದಿಂದ ಆ ದಿವ್ಯರಥ ಮತ್ತಿತರ ಶ್ರೇಷ್ಠಾಸ್ತ್ರ ಧನುಸ್ಸುಗಳು ತನ್ನ ಹಿಂದೆ ಅನುಸರಿಸಿ ಬರುವಂತೆ ವ್ಯವಸ್ಥೆ ಮಾಡಿ, ಕರ್ಣನು ಒಂದು ಸಾಮಾನ್ಯ ರಥದಲ್ಲಿ ಧನುರ್ಧಾರಿಯಾಗಿ ಶಕ್ತ್ಯಾಯುಧವನ್ನು ಮಾತ್ರ ಹಿಡಿದು ಬಂದನು. ಒಂದು ಹೋದರೆ ಮತ್ತೊಂದಿರಲಿ ಎಂದು ಹಾಗೆ ಮಾಡಿದನು. ಅವನಿಗೆ ಶ್ರೀಕೃಷ್ಣನ ಅಮಿತವೀರ್ಯ ತೇಜಸ್ಸುಗಳ ಭಯವು ಇದ್ದೇ ಇದ್ದಿತು. ಅಂತೆಯೇ ಪರಶುರಾಮರಿತ್ತ ರಥಾದಿಗಳು ಸುರಕ್ಷಿತವಾಗಿರುವಂತೆ ಮಾಡಲು ತಾನೀಗ ಬೇರೊಂದು ರಥವೇರಿ ಶಕ್ತ್ಯಾಯುಧ ಸಾಮಾನ್ಯ ಧನುಸ್ಸುಗಳೊಡನೆ ಬಂದನು. (ತನ್ನ ಮರಣವು ನಿಶ್ಚಿತವೆಂದು ತಿಳಿದಾಗ ಇನ್ನು ಪರಶುರಾಮರಿತ್ತ ರಥ ಧನುಸ್ಸುಗಳಿಂದೇನು ಪ್ರಯೋಜನವೆಂದು ಭಾವಿಸಿ ಸಾಯುವ ದಿನ ಆ ದಿವ್ಯರಥದಲ್ಲಿ ಕುಳಿತು ದಿವ್ಯಧನುವನ್ನು ಹಿಡಿದು ಬರುವನೆಂದು ತಿಳಿಯಬೇಕು. )

ಕರ್ಣನು ಕುಳಿತು ಬಂದ ರಥದಲ್ಲಿ ಇಂದ್ರದೇವರು ಕರ್ಣನಿಗೆ ನೀಡಿದ ಶಕ್ತ್ಯಾಯುಧವಿರುವುದನ್ನು ಕಂಡು ಶ್ರೀವಾಸುದೇವನು ಸಾತ್ಯಕಿಗೆ ಅಪಾರ ಬಲವನ್ನು ಅನುಗ್ರಹಿಸಿ. ತನ್ನ ರಥವನ್ನು ಕೊಟ್ಟು ಸೂರ್ಯಪುತ್ರನಾದ ಕರ್ಣನೊಡನೆ ಯುದ್ಧಮಾಡಿ ಅವನನ್ನು ಜಯಿಸಬೇಕೆಂದು ಆದೇಶವಿತ್ತು ಕಳುಹಿಸಿದನು. ಕೃಷ್ಣನು ಶಿಷ್ಯನಾದ ಸಾತ್ಯಕಿಗೆ ತನ್ನೊಡನೆ ಯುದ್ಧಮಾಡಲು ತನ್ನ ರಥವನ್ನು ಕೊಟ್ಟು ಕಳುಹಿಸಿದ್ದಾನೆಂದು ತಿಳಿದ ಕರ್ಣನು ಸಾತ್ಯಕಿಯನ್ನವಲೋಕಿಸಿ ಅವನೊಡನೆ ಸ್ಪರ್ಧೆಯಿಂದ ಯುದ್ಧ ಮಾಡಲಾರಂಭಿಸಿದನು. ಆಗ ಶೈನೇಯನು ಶ್ರೀಕೃಷ್ಣನ ರಥಲ್ಲಿ ಕುಳಿತು ಬಂದು ಕರ್ಣನನ್ನು ವಿರಥನನ್ನಾಗಿ ಮಾಡಿದನು. ಕೇಶವನ ರಥದಲ್ಲಿ ಯಾರೇ ಕುಳಿತು ಯುದ್ಧಮಾಡಿದರೂ ಅವರಿಗೆ ಅಪಜಯವಾಗುವದಿಲ್ಲ. ಅಂತೆಯೇ ಸಾತ್ಯಕಿಯು ಕರ್ಣನಿಂದ ಪರಾಜಿತನಾಗಲಿಲ್ಲ.

ಆಗ ಕರ್ಣನು ಭೀಮನನ್ನು ನೋಡಿ 'ಭೀಮ ನೀನು ತೂಬರನು, ತೂಬರನು' ಎಂದು ಹಂಗಿಸಿ ನಿಂದಿಸಿದನು. ವದನದ ಗದ್ದಾಗ್ರ ಭಾಗದಲ್ಲಿ ಮಾತ್ರ ಕೂದಲಿರುವವರನ್ನು ತೂಬರನೆನ್ನುವುರು. ಅದನ್ನು ಕೇಳಿದ ಕೂಡಲೇ ಭೀಮಸೇನನು ಕರ್ಣನನ್ನು ಸಂಹರಿಸುವ ನಿಶ್ಚಯ ಮಾಡಿದನು. ಅದರ ಕಾರಣವನ್ನು ನಿರ್ಣಯಾಚಾರ್ಯರು ಹೀಗೆ ವಿವರಿಸುತ್ತಾರೆ.

ಕುರು-ಪಾಂಡವ ಕುಮಾರರು ಧನುರ್ವಿದ್ಯಾಭ್ಯಾಸ ಮಾಡುವ ಕಾಲದಲ್ಲಿ ಮೊದಲ ಉದ್ಘಾಟನಾಭಾಷಣ ಮಾಡಿದ ಶ್ರೀಪರಶುರಾಮದೇವರು ದ್ರೋಣರಿಗೆ ವಿದ್ಯಾಭ್ಯಾಸಮಾಡಿಸುವ ಕಾಲದಲ್ಲಿ ಕುಮಾರರು ಒಂದು ವ್ರತವನ್ನು ಆಚರಿಸಬೇಕು. ಅದು ಗೌಪ್ಯವಾಗಿರಬೇಕಾದ ವ್ರತ. ಆ ವ್ರತಾನುಷ್ಠಾನ ಕಾಲದಲ್ಲಿ. ಶಸ್ತ್ರಾಸ್ತ್ರವಿದ್ಯಾಭ್ಯಾಸೇಚ್ಛುಗಳಾದ ಕ್ಷತ್ರಿಯ ಕುಮಾರರು ಆ ವ್ರತವನ್ನಾಚರಿಸಿ ಪ್ರತಿಜ್ಞೆ ಮಾಡಬೇಕು. ಪ್ರತಿಜ್ಞಾ ಪ್ರಕಾರವು ಹೀಗಿದೆ. ತನಗೆ ಅನಿಷ್ಟವಾದುದನ್ನು ನಿಂದಾರೂಪವಾಗಿ ಯಾರು ಹೇಳುವರೋ ಅಂಥವರನ್ನು ಸಂಹರಿಸುತ್ತೇನೆ ಎಂಬ ಪ್ರತಿಜ್ಞಾಬದ್ಧವಾದದ್ದು ಈ ವ್ರತ. ಅದು ಗೌಪ್ಯವಾಗಿರಬೇಕಾದ ವ್ರತ ಮತ್ತು ಪ್ರತಿಜ್ಞೆ. ಅದನ್ನು ಭೀಮಸೇನನು ಮಾಡಿದ್ದನು. ಭೀಮನು ಯಾರು ನನ್ನನ್ನು ತೂಬರನೆಂದು ಹಂಗಿಸುವರೋ ಅಂಥವರನ್ನು ಸಂಹರಿಸುತ್ತೇನೆ ಎಂದು ವ್ರತಸ್ವೀಕಾರ ಸಮಯದಲ್ಲಿ ಮಾನಸಿಕವಾಗಿ ಪ್ರತಿಜ್ಞೆ ಮಾಡಿದ್ದನು. ಅದು ಗೌಪ್ಯ-ವ್ರತವಾದ್ದರಿಂದ ಅದನ್ನು ಸ್ಫೋಟ ಮಾಡಿ ಹೇಳಿದವರನ್ನು ಸಂಹರಿಸಬೇಕಾಗುವುದು. ಆದ್ದರಿಂದ ಅದನ್ನಾರಿಗೂ (ಪ್ರತಿಜ್ಞೆ-ಯನ್ನು) ಕೇಳಿಸಬಾರದು, ಗೌಪ್ಯವಾಗಿಟ್ಟರಬೇಕು. ಧರ್ಮಕ್ಕೆ ಅವಿರುದ್ಧವಾದ ಅನುಪಮವ್ರತಕಾರಿಯಾದ ಪರಶುರಾಮ-ರಿಗೆ ಆನಂದದಾಯಕವಾದ ಆ ವ್ರತವನ್ನಾಚರಿಸಬೇಕೆಂದು ಜಾಮದಗ್ನಿಗಳು(ಪರಶುರಾಮರು) ಹೇಳಿದ್ದಾರೆ. ಆದುದರಿಂದ 'ರೋಭನಕರವಾದ ಗಡ್ಡವುಳ್ಳ ದಪ್ಪಮೀಸೆಯುಳ್ಳ ನನ್ನನ್ನು ತೂಬರನೆಂದು ನಿಂದಿಸಿದವರನ್ನು ಹಂಗಿಸಿದವರನ್ನು ಸಂಹರಿಸುತ್ತೇನೆ' ಎಂದು ಭೀಮಸೇನನು ಏಕಾಂತವಾಗಿ ಪ್ರತಿಜ್ಞೆ ಮಾಡಿದ್ದನು. ಅದನ್ನು ಒಂದು ದಿನ ಪ್ರೀತಿಯಿಂದ ಏಕಾಂತದಲ್ಲಿರುವಾಗ ತಮ್ಮನಾದ ಅರ್ಜುನನಿಗೆ ಮಾತ್ರ ಹೇಳಿದ್ದನು. ಭೀಮನಂತೆ ಅರ್ಜುನನೂ ಯಾರಾದರೂ ನನ್ನ ಗಾಂಡೀವವನ್ನು ಕೊಡು

ಎಂದು ನಿಂದಿಸಿ ಮಾತನಾಡಿದರೆ ಅಂಥವರನ್ನು ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿದ್ದನು. ಅದನ್ನವನು ಏಕಾಂತದಲ್ಲಿ ಅಣ್ಣ ಭೀಮನೊಬ್ಬನಿಗೆ ಮಾತ್ರ ತಿಳಿಸಿದ್ದನು. ಅದು ಸರಿ ಅಸ್ತ್ರ ವಿದ್ಯಾಭ್ಯಾಸ ಪ್ರಾರಂಭಿಸುವಾಗ ಅರ್ಜುನನಲ್ಲಿ ಗಾಂಡೀವ ಧನು-ವಿರಲಿಲ್ಲವಲ್ಲ! ಅಂದ ಮೇಲೆ ಅರ್ಜುನನೆಂತು ಪ್ರತಿಜ್ಞೆ ಮಾಡಿದನು? ಎಂದರೆ 'ಅರ್ಜುನ! ನಿನಗೆ ಜಗತ್ತನ್ನೇ ಜಯಿಸಲು ಸಮರ್ಥವಾದ ಗಾಂಡೀವ ಧನುಸ್ಸು ದೊರಕುವುದು' ಎಂದು ದೇವರ್ಷಿ ನಾರದರು ಧನಂಜಯನಿಗೆ ಹೇಳಿದ್ದರು. ಆದ್ದರಿಂದ ತನಗೆ ಖಂಡಿತವಾಗಿ ಅತ್ಯಂತ ಶ್ರೇಷ್ಠವಾದ ಗಾಂಡೀವವು ದೊರಕುವುದೆಂದು ತಿಳಿದಿದ್ದ ಅವನು ವ್ರತಾಚರಣೆಯ ಸಮಯದಲ್ಲಿ ಹಾಗೆ ಪ್ರತಿಜ್ಞೆ ಮಾಡಿದ್ದನು. ಅದನ್ನು ಅವನು ಅಣ್ಣ ಭೀಮನಿಗೆ ರಹಸ್ಯವಾಗಿ ತಿಳಿಸಿದ್ದನು. ಆದ್ದರಿಂದ ಭೀಮನೊಬ್ಬನು ಮಾತ್ರ ಅದನ್ನು ಅರಿತಿದ್ದಾನೆ. ಅದು ಮತ್ತ್ಯಾರಿಗೂ ತಿಳಿದಿಲ್ಲ. ದುರ್ಯೋಧನನು, ಭೀಮಾರ್ಜುನರ ಈ ರಹಸ್ಯ ಸಂಭಾಷಣವನ್ನು ಕದ್ದು ಕೇಳಿದ್ದನು. ಅಂತೆಯೇ ಅದನ್ನು ಪ್ರಿಯನಾದ ಕರ್ಣನಿಗೆ ಆ ವಿಚಾರವನ್ನು ತಿಳಿಸಿದ್ದನು. ತಾನು ತೂಬರನಾಗಿರದಿದ್ದರೂ ಈಗ ಕರ್ಣನು ಭೀಮ ನೀನೂ ತೂಬರ ತೂಬರನೆಂದು ಹೀಯಾಳಿಸಿ ಮಾತನಾಡಿದ್ದರಿಂದ ಕರ್ಣನು ತನಗೆ ಕೋಪಬರುವಂತೆ ಮಾಡಬೇಕೆಂದೇ ತನ್ನನ್ನು ಅವನು ತೂಬರನೆಂದು ನಿಂದಿಸಿದನೆಂದು ತಿಳಿದು ಅರ್ಜುನನ್ನು ಕುರಿತು ಹೀಗೆ ಹೇಳಿದನು.

"ಅರ್ಜುನ ನನ್ನ ವ್ರತಪ್ರತಿಜ್ಞೆಯ ವಿಚಾರವನ್ನು ನೀನು ಮಾತ್ರ ತಿಳಿದಿರುವೆ. ನಿನ್ನ ಪ್ರತಿಜ್ಞೆಯನ್ನು ನಾನು ಅರಿತಿದ್ದೇನೆ. ಹಿಂದೆ ದ್ಯೂತಕ್ರೀಡಾಕಾಲದಲ್ಲಿ ಕರ್ಣನನ್ನು ಸಂಹರಿಸುವುದಾಗಿ ನನ್ನ ಅನುಜ್ಞಾನುಸಾರವಾಗಿ ಸಭೆಯಲ್ಲಿ ನೀನು ಪ್ರತಿಜ್ಞೆ ಮಾಡಿದ್ದೆ. ಆದುದರಿಂದ ಸೂತ ಪುತ್ರನಾದ ಆ ಕರ್ಣನು ನಮ್ಮಿಬ್ಬರಿಂದಲೂ ಸಂಹಾರಾರ್ಹನಾಗಿದ್ದಾನೆ. ನಮ್ಮಿಬ್ಬರ ಪ್ರತಿಜ್ಞೆಯಲ್ಲಿ ತೂಬರ ವಿಷಯಕವಾದ ನನ್ನ ಪ್ರತಿಜ್ಞೆಯು ಗೌಪ್ಯವಾದುದರಿಂದ ಸಾಮಾನ್ಯ ವಿಷಯರೂಪವಾದದ್ದು. ರಾಜಸಭೆಯಲ್ಲಿ ಎಲ್ಲರಿಗೂ ತಿಳಿಯುವಂತೆ ಸ್ಪಷ್ಟವಾಗಿ ಕರ್ಣನನ್ನು ಸಂಹರಿಸುತ್ತೇನೆ ಎಂಬ ಪ್ರತಿಜ್ಞೆಯು ವಿಶೇಷರೂಪ-ವಾದುದು. ಸಾಮಾನ್ಯ ಪ್ರತಿಜ್ಞೆಯು ವಿಶೇಷ ಪ್ರತಿಜ್ಞೆಯಿಂದ ಬಾಧಿತವಾಗುವುದರಿಂದ ನನ್ನ ಅಪ್ಪಣೆಯಂತೆ ನೀನು ಮಾಡಿದ ಪ್ರತಿಜ್ಞೆಯೂ ಕೂಡ ನಾನು ಮಾಡಿದಂತೆಯೇ ಆಗಿರುವುದರಿಂದ ಸಾಕ್ಷಾತ್ ಕರ್ಣನನ್ನು ಕೊಲ್ಲುವೆನೆಂಬ ನಿನ್ನ ಪ್ರತಿಜ್ಞೆಯನ್ನು ಸತ್ಯಮಾಡುವುದಕ್ಕಾಗಿ ನನ್ನ ಅಂಶದಿಂದ ಆವಿಷ್ಟನಾಗಿರುವ ನೀನೇ ಕರ್ಣನನ್ನು ಸಂಹರಿಸಿದರೆ ನಮ್ಮಿಬ್ಬರ ಪ್ರತಿಜ್ಞೆಯೂ ನೆರವೇರಿದಂತಾಗುವುದು" ಎಂದು ಹೇಳಿದನು. ಆಗ ಭೀಮಸೇನಾನುಜನಾದ ಅರ್ಜುನನು –

"ಅಣ್ಣ ಭೀಮಸೇನ, ಕರ್ಣನನ್ನು ನಾನೇ ಸಂಹರಿಸಬೇಕು. ನಾನು ನಿನ್ನ ಶಿಷ್ಯನೂ ಸೋದರನೂ ಮತ್ತು ನಿನ್ನ ಆವೇಶಯುಕ್ತನೂ ಆಗಿರುವುದರಿಂದ ನಾನು ಮಾಡಿದ್ದು ನೀನು ಮಾಡಿದಂತೆಯೇ ಆಗುವುದು. ನೀನು ಮಾಡಿದ್ದು ನಾನು ಮಾಡಿದಂತಾಗುವುದಿಲ್ಲ. ನೀನು ನನ್ನ ಗುರುವಾಗಿರುವುದರಿಂದ ಕರ್ಣನು ನನ್ನಿಂದಲೇ ಸಂಹೃತನಾಗಲು ಅರ್ಹನಾಗಿದ್ದಾನೆ" ಎಂದು ಹೇಳಿ, ಕರ್ಣನನ್ನು ಕುರಿತು "ಕರ್ಣ, ನೀನು ಶ್ರೀಕೃಷ್ಣನು ಕೇಳುವಂತೆ ನಮ್ಮಣ್ಣನಾದ ಭೀಮಸೇನನನ್ನು ಕ್ರೂರ ವಚನಗಳಿಂದ ಹಂಗಿಸಿ ನಿಂದಿಸಿರುತ್ತೀಯೆ. ಒಬ್ಬನೇ ಹೋರಾಡುತ್ತಿರುವಾಗ ಅಭಿಮನ್ಯುವಿನ ಬಿಲ್ಲನ್ನು ಹಿಂಬದಿಯಿಂದ ಕತ್ತರಿಸಿ, ನೀವೆಲ್ಲರೂ ಸೇರಿ ಅಧರ್ಮಯುದ್ಧ ಮಾಡಿ ನನ್ನ ಕುಮಾರನನ್ನು ಕೊಂದಿದ್ದೀರಿ. ಆದ್ದರಿಂದ ನಾನು ನಿನ್ನನ್ನು ಸಂಹರಿಸುತ್ತೇನೆ ಮತ್ತು ನಿನ್ನ ಕಣ್ಣೆದುರಿಗೇ ನಿನ್ನ ಮಗನನ್ನು ಸಂಹರಿಸುತ್ತೇನೆ ಎಚ್ಚರದಿಂದಿರು ಎಂದು ನುಡಿಯಲು, ಆಗ ಕರ್ಣನು ಮಾತನಾಡದೆಯೇ ಬೇರೊಂದು ರಥವೇರಿ ಜಯದ್ರಥನ ರಕ್ಷಣೆಗಾಗಿ ಹೊರಟು ಹೋದನು.

ಆಗ ಅರ್ಜುನನು ಜಯದ್ರಥನ ಬಳಿಗೆ ಹೋಗಲೆತ್ನಿಸಿದನು. ಅಶ್ವತ್ಥಾಮ-ಕರ್ಣರಿಂದ ರಕ್ಷಿತನಾದ ಸೈಂಧವನನ್ನು ಕೊಲ್ಲಲು ಅವನು ಶಕ್ತನಾಗಲಿಲ್ಲ. ಅಶ್ವತ್ಥಾಮನು ಅರ್ಜುನನನ್ನು ತಡೆಯಲು ಚಮತ್ಕಾರವಾಗಿ ಯುದ್ಧ ಮಾಡಿದನು. ಪ್ರಯತ್ನಿಸಿದರೂ ಅಶ್ವತ್ಥಾಮನನ್ನು ತೊಲಗಿಸಲು ಧನಂಜಯನಿಗೆ ಸಾಧ್ಯವಾಗಲಿಲ್ಲ. ಅವರಿಬ್ಬರಿಗೂ ವಿಚಿತ್ರರೀತಿಯಲ್ಲಿ ಯುದ್ಧವಾಯಿತು.

ಭಗವಾನ್ ಶ್ರೀಕೃಷ್ಣನು ಅವರಿಬ್ಬರ ಯುದ್ಧ ವೈಖರಿಯನ್ನು ನೋಡಿದನು. ಅಶ್ವತ್ಥಾಮ ಭೀತನಾಗದಿರುವುದನ್ನೂ, ಜಯದ್ರಥನಿನ್ನೂ ಹತನಾಗದಿರುವುದನ್ನೂ, ಅದರಂತೆ ಸೂರ್ಯನು ಅಸ್ತಂಗತನಾಗುವನೆಂದು ಸೂಚಿಸುವ ಕೆಂಬಣ್ಣ ತಾಳಿದ್ದನ್ನೂ ಅವಲೋಕಿಸಿದನು. ಆಗ ಶ್ರೀವಾಸುದೇವನು ಅರ್ಜುನನು ಜಯಿಸಬೇಕೆಂದು ಅಪೇಕ್ಷಿಸಿ ತನ್ನ ಅದ್ಭುತ ಮಾಯೆಯಿಂದ ತಮಸ್ಸನ್ನು ಸೃಜಿಸಿದನು (ಕತ್ತಲನ್ನು ಜಯಿಸಿದನು.) ಅದೇನಾಶ್ಚರ್ಯ! ಆಗ ಆಕಾಶದಲ್ಲಿ ಎಲ್ಲೆಡೆಯಲ್ಲಿಯೂ ಅಂಧಕಾರವು ಆವರಿಸಿತು. ಆಗ ದ್ರೋಣಾಚಾರ್ಯರೇ ಮೊದಲಾದ ಸಕಲರೂ ಸೂರ್ಯನು ಅಸ್ತಂಗತನಾದನೆಂದು ತಿಳಿದು ಯುದ್ಧವನ್ನು ನಿಲ್ಲಿಸಿ ವಿಶ್ರಾಂತಿ ಪಡೆದರು. ಸೂರ್ಯಾಸ್ತವಾಗುವುದರೊಳಗೆ ಸೈಂಧವನನ್ನು ಸಂಹರಿಸದಿದ್ದರೆ ಅಗ್ನಿಪ್ರವೇಶಮಾಡಿ ಮೃತನಾಗುತ್ತೇನೆಂದು ಅರ್ಜುನನು ಪ್ರತಿಜ್ಞೆಗೈದಿದ್ದರಿಂದ ಅರ್ಜುನನು ಮರಣ ಹೊಂದಿದನೆಂದೇ ಭಾವಿಸಿ ಜಯದ್ರಥನು ವಿಕಟಾಟ್ಟಹಾಸ ಮಾಡುತ್ತಾ ವ್ಯೂಹದಿಂದ ಹೊರಬಂದು ಅರ್ಜುನನ ಮುಖವನ್ನು ನೋಡಿದನು.

ಆಗ ಅರ್ಜುನನು ಭಗವಾನ್ ಶ್ರೀಕೃಷ್ಣನ ಅಪ್ಪಣೆಯಂತೆ ಅಗ್ನಿ ಪ್ರವೇಶ ಮಾಡುವವನಂತೆ ಅಭಿನಯಿಸುತ್ತಿರುವಾಗ, ಕೃಷ್ಣಪರಮಾತ್ಮನ ಆಣತಿಯಂತೆ ಇಂದ್ರಕುಮಾರನಾದ ಪಾರ್ಥನು ಬಾಣದಿಂದ ಜಯದ್ರಥನ ಶಿರಸ್ಸನ್ನು ಕತ್ತರಿಸಿಹಾಕಿದನು. ಆಗ ಜನಾರ್ದನನು "ಅರ್ಜುನ ಸೈಂಧವನ ಶಿರಸ್ಸು ಭೂಮಿಗೆ ಬೀಳಿಸಬೇಡ. ಅದನ್ನು ತಡೆ" ಎನ್ನಲು ಪಾರ್ಥನು ಪಾಶುಪತಾಸ್ತ್ರದ ತೇಜಸ್ಸಿನಿಂದ ಪುಂಖಾನುಪುಂಖಗಳಾದ ಬಾಣಗಳಿಂದ ಸೈಂಧವನ ಶಿರವು ಧರೆಗುರುಳದಂತೆ ತಡೆದನು. ಆಗ ಗರುಡಧ್ವಜನು 'ಈ ಜಯದ್ರಥನ ತಲೆಯನ್ನು ಅವನ ತಂದೆಯ ಕರಗಳಲ್ಲಿ ಬೀಳುವಂತೆ ಹಾಕು. ಏಕೆಂದರೆ ಹಿಂದೆ ಜಯದ್ರಥನ ಪಿತನು 'ಕುಮಾರ ನಿನ್ನ ಶಿರಸ್ಸನ್ನು ಯಾರು ಭೂಮಿಗೆ ಕೆಡಹುವರೋ ಅವರ ಶಿರಸ್ಸು ಸಹಸ್ರಹೋಳಾಗಲಿ' ಎಂದು ವರವನ್ನು ಕೊಟ್ಟಿದ್ದಾನೆ. ಆದುದರಿಂದ ಇವನ ಶಿರಸ್ಸನ್ನು ಧ್ಯಾನಾಸಕ್ತನಾಗಿ ಅಂಕಸ್ಥಕರನಾಗಿ ಅಂದರೆ ತೊಡೆಯ ಮೇಲೆ ಅಂಗೈಗಳನ್ನಿಟ್ಟುಕೊಂಡು ಕುಳಿತಿರುವ ಆತನ ಕರಗಳಲ್ಲಿ ಬೀಳುವಂತೆ ಮಾಡು. ಅದರಿಂದ ಅವನು ತಲೆಯೊಡೆದು ಹತನಾಗುವನು' ಎಂದು ಹೇಳಿದನು. ಧನಂಜಯನು ತನ್ನ ಅಸ್ತ್ರವಿದ್ಯಾಕೌಶಲದಿಂದ ಅದರಂತೆ ಮಾಡಿದನು. ಆಗ ಸೈಂಧವನ ಶಿರವು ಅವನ ತಂದೆಯ ಕರಗಳಲ್ಲಿ ಬಿದ್ದಿತು. ಆತನು ಶಿರವನ್ನು ಕೆಳಗೆಸೆದನು. ಅದರ ಪರಿಣಾಮವಾಗಿ ಅದರಿಂದ ಬೆದರಿದ ಆತನ ಶಿರಸ್ಸು ಸಹಸ್ರ ಹೋಳಾಯಿತು. ಆ ತರುವಾಯ ಮಾಧವನು ತನ್ನ ಮಾಯಾಜಾಲದಿಂದ ಸೃಜಿಸಿದ್ದ ತಮಸ್ಸನ್ನು ಲಯಗೊಳಿಸಿದನು (ಹೋಗಲಾಡಿಸಿದನು). ಆಗ ಅಂಬರದಲ್ಲಿ ಭಗವಾನ್ ಸೂರ್ಯನು ಬೆಳಗುತ್ತಿರುವುದನ್ನು ಸಮಸ್ತರೂ ಕಂಡು ಹಾಹಾಕಾರ ಮಾಡಿದರು.

ಆಗ ಭೀಮಸೇನನು ಶಲ್ಯ, ದುರ್ಯೋಧನ ಕೃಪಾಚಾರ್ಯರುಗಳನ್ನು ಜಯಿಸಿ ಭಯಂಕರ ಜಯಘೋಷ ಮಾಡಿದನು. ಶತ್ರುವು ಹತನಾದಮೇಲೆ ಅರ್ಜುನನಿಗೆ ಸಹಾಯ ಮಾಡಿದ ಸಾತ್ಯಕಿಯು ಬಹು ಸಂತಸಗೊಂಡನು. ಕೃಷ್ಣನು ಸಂತೋಷದಿಂದ ಪಾಂಚಜನ್ಯವನ್ನು ಧ್ವನಿಸಿದನು. ಅರ್ಜುನನು ದೇವದತ್ತವೆಂಬ ತನ್ನ ವಿಜಯಶಂಖವನ್ನು ಊದಿದನು. ಪಾಂಚಜನ್ಯ ದೇವದತ್ತಗಳ ಧ್ವನಿಯೊಡನೆ ಭೀಮನು ತನ್ನ ಜಯಧ್ವನಿಯನ್ನೂ ಬೆರೆಸಿದನು. ಆ ಅದ್ಭುತ ವಿಜಯಧ್ವನಿಗಳನ್ನಾಲಿಸಿ ಸೈಂಧವನು ಮೃತನಾದನೆಂದು ತಿಳಿದು ಧರ್ಮರಾಜನು ಪರಮಾನಂದ ತುಂದಿಲನಾದನು. ಆಗ ಸುಯೋಧನನು ಪರಮ ದುಃಖವನ್ನನುಭವಿಸಿದನು.

ಅನಂತರ ಭೀಮನು ಅಶ್ವತ್ಥಾಮಾದಿ ಪ್ರಮುಖ ಸೇನೆಯನ್ನು ಭಗ್ನಗೊಳಿಸಿದನು. ಅರ್ಜುನನು ಕರ್ಣಾದಿಗಳ ಉಳಿದ ಸೈನ್ಯವನ್ನು ಭಂಗಗೊಳಿಸಿದನು. ಹೀಗೆ ಸೇನೆಯು ಭಗ್ನವಾದ ಮೇಲೆ ಧೃಷ್ಟದ್ಯುಮ್ನಾದಿಗಳು ಅಲ್ಲಿಗೆ ಬಂದು ಭೀಮಾರ್ಜುನರನ್ನು ಸೇರಿದರು. ಅನಂತರ ಪಾಂಡವರು, ಸೋಮಕರು, ಪಾಂಚಾಲರಿಂದ ಸಹಿತರಾಗಿ ಎಲ್ಲರೂ ಒಟ್ಟಿಗೆ ಮಿಳಿತರಾಗಿ ಉಳಿದವರನ್ನು

ಹೊಡೆದೋಡಿಸಿದರು. ಶತ್ರುಗಳು ಭಯಗೊಂಡು ದಿಕ್ಕುದಿಕ್ಕುಗಳಿಗೆ ಚದುರಿ ಹೋದರು. ಇಂತು ಪಲಾಯನಗೈಯ್ಯುತ್ತಿರುವ ಸೈನ್ಯವನ್ನು ನೋಡಿ, ಜಯದ್ರಥನ ಮರಣದಿಂದ ಅತಿದುಃಖಿತನಾದ ದುರ್ಯೋಧನನು, ಭೀಮ, ಧನಂಜಯ, ಧರ್ಮರಾಜ, ನಕುಲ, ಸಹದೇವರು, ಧೃಷ್ಟದ್ಯುಮ್ನ, ಸಾತ್ಯಕಿ ಹಾಗೂ ದ್ರೌಪದಿಯ ಪುತ್ರ ಮತ್ತು ಸರ್ವರನ್ನೂ ಅತಿ ಕೋಪದಿಂದ ತಾನೊಬ್ಬನೇ ಎದುರಿಸಿ ಶರವರ್ಷ ಮಾಡಿದನು. ಭೀಮಾದಿಗಳು ಅನೇಕ ಬಾಣಗಳಿಂದ ದುರ್ಯೋಧನನನ್ನು ಪೀಡಿಸಿದರು. ಅವನು ಅದನ್ನು ಲಕ್ಷಿಸದೇ ಬಾಣನಿವಹದಿಂದ ಮಹಾರಥಿಕರ ಬಿಲ್ಲುಗಳನ್ನು ಭಂಗಗೊಳಿಸಿದ್ದಲ್ಲದೇ, ನಕುಲ-ಸಹದೇವರ ರಥಗಳನ್ನು ನಾಶಪಡಿಸಿದನು. ಆಗ ಅವರು ಬೇರೆ ಬಿಲ್ಲುಗಳನ್ನು ಹಿಡಿದು ಬಾಣಗಳ ಮಳೆಗರೆದರು. ಅವನ್ನು ಚಿಂತಿಸದೆ ದುರ್ಯೋಧನನೊಬ್ಬನೇ ಆ ಎಲ್ಲ ಬಾಣಗಳನ್ನೂ ನಿವಾರಿಸಿಕೊಂಡು ಶತ್ರುಗಳ ಮಧ್ಯದಲ್ಲಿ ಒಬ್ಬಂಟಿಗನಾಗಿ ಹೋರಾಡುತ್ತಿರುವುದನ್ನು ಗಮನಿಸಿ ಆಚಾರ್ಯ ದ್ರೋಣ, ಅಶ್ವತ್ಥಾಮ, ಕೃಪಾದಿಗಳು ಧನುರ್ಧಾರಿಗಳಾಗಿ ಅನವರತ ಶರವರ್ಷ ಮಾಡುತ್ತಾ ಸುಯೋಧನನನ್ನು ರಕ್ಷಿಸಿದರು. ಆಗವನು 'ಭೀಮನನ್ನು ಸಂಹರಿಸು' ಎಂದು ಅಂಗರಾಜನಿಗೆ ಹೇಳಲು ಅವನು "ರಾಜನ್ ಭೀಮನನ್ನು ಸಂಹರಿಸಲು ಇಂದ್ರ ಸಹಿತರಾದ ದೇವತೆಗಳಿಗೂ ಸಾಧ್ಯವಿಲ್ಲ. ನಾನು ಅವನೊಡನೆ ಕದನಮಾಡಿ ಅವನಿಂದ ಅತಿಯಾಗಿ ಪೀಡಿತನಾಗಿ ಹೇಗೋ ದೈವಾನುಗ್ರಹದಿಂದ ಜೀವಿಸಿದ್ದೇನೆ. ಆದಕಾರಣ ನಮ್ಮ ರಕ್ಷಾನುಸಾರ ಹೋರಾಡೋಣ ಜಯವು ದೈವಾಧೀನವಾಗಿದೆ" ಎಂದು ಹೇಳಿದನು.

ಆಗ ಸುಯೋಧನನು 'ಆಚಾರ್ಯರೇ ನಿಮ್ಮ ಉದಾಸೀನದಿಂದಾಗಿ ಪಾರ್ಥನು ಜಯದ್ರಥನನ್ನು ಸಂಹರಿಸಿದನು. ಭೀಮ-ಸಾತ್ಯಕಿಗಳಿಂದ ನನ್ನ ಸೈನ್ಯವೆಲ್ಲವೂ ನಾಶವಾಯಿತು. ನೀವು ಮಾಡಿದ ಪ್ರತಿಜ್ಞೆಯನ್ನು ಮರೆತು ಪಾಂಡವರಲ್ಲಿನ ಸ್ನೇಹದಿಂದ ಬಿಟ್ಟುಬಿಟ್ಟಿರಿ' ಎಂದು ಕಟು ನುಡಿಗಳನ್ನಾಡಿದರು. ಕೌರವನ ಮಾತನ್ನಾಲಿಸಿ ಕ್ಷುಬ್ಧರಾದ ದ್ರೋಣಾಚಾರ್ಯರು "ರಾಜೇಂದ್ರ ಇನ್ನು ಮುಂದೆ ನಾನು ರಾತ್ರಿ ಹಗಲು ಯುದ್ಧಭೂಮಿಯಿಂದ ಹಿಂದಿರುಗುವುದಿಲ್ಲ. ಕಟ್ಟಿದ ಕವಚವನ್ನು ಬಿಚ್ಚುವುದಿಲ್ಲ" ಎಂದು ಪುನಃ ಪ್ರತಿಜ್ಞೆ ಮಾಡಿದರು. ಪುತ್ರ ಅಶ್ವತ್ಥಾಮನಿಗೆ, ಅವರು 'ವತ್ಸ ದ್ರೌಪದಿಯ ಸುತರನ್ನೊಳಗೊಂಡ ದ್ರುಪದ ಮುಂತಾದ ಪಾಂಚಾಲರನ್ನು ನಿಶ್ಶೇಷಗೊಳಿಸು' ಎಂದು ನಿರೂಪಿಸಿ ದ್ರೋಣರು ಸಾಯಂಕಾಲ ನಂತರವೂ ಶತ್ರು ಸೈನ್ಯದಲ್ಲಿ ನುಗ್ಗಿ ಅದನ್ನು ಮಥಿಸಿದರು. ಅವರನ್ನು ಎದುರಿಸಲು ಆಗ ಧೃಷ್ಟದ್ಯುಮ್ನನಾಗಮಿಸಿದನು. ಆಗ ಮಾರುತಿಯು ಅಶ್ವತ್ಥಾಮ ದುರ್ಯೋಧನರ ರಥಗಳನ್ನು ಚೂರ್ಣಗೊಳಿಸಿ ಎಲ್ಲ ರಾಜರು ನೋಡುತ್ತಿರುವಂತೆ ಅವರ ಸೈನ್ಯವನ್ನು ದ್ರಾವಣ-ಗೊಳಿಸಿದನು. ಆ ಕದನದಲ್ಲಿ ಒಟ್ಟು ಉಭಯಸೈನ್ಯದ ಮಧ್ಯ ಏಳು ಅಕ್ಷೋಹಿಣೀ ಸೈನ್ಯವು ನಾಶವಾಯಿತು. ಭೀಮಸೇನನು ಮೂರು ಅಕ್ಷೋಹಿಣೀಸೈನ್ಯವನ್ನು ನಾಶಮಾಡಿಸಿದನು. ಅರ್ಜುನನು ಎರಡು ಅಕ್ಷೋಹಿಣೀ ಸೈನ್ಯವನ್ನು ನಾಶಗೊಳಿಸಿದನು. ಹೀಗೆ ಆ ವೀರ ಸಹೋದರರು ಐದು ಅಕ್ಷೋಹಿಣೀ ಸೈನ್ಯವನ್ನು ಧ್ವಂಸಗೊಳಿಸಿದರು. ಅರ್ಜುನನು ನಾಶಮಾಡಿದ ಆ ಆ ಎರಡು ಅಕ್ಷೋಹಿಣೀ ಸೈನ್ಯದಲ್ಲಿ ಅಭಿಮನ್ಯುವು ಸಾತ್ಯಕಿ ಮುಂತಾದವರಿಂದ ಹದಿನಾರನೇ ಒಂದು ಭಾಗವು ಕೊಲ್ಲಲ್ಪಟ್ಟಿತು. ಹದಿನೈದನೇ ಒಂದು ಭಾಗ ಅರ್ಜುನನಿಂದ ಹತವಾಯಿತು. ಭೀಮನು ನಾಶಪಡಿಸಿದ ಮೂರು ಅಕ್ಷೋಹಿಣಿಯಲ್ಲಿ ಒಂಭತ್ತು ಭಾಗಗಳು ಭೀಮನಿಂದಲೇ ಹತವಾಯಿತು. ಉಳಿದ ಹತ್ತನೇ ಒಂದು ಭಾಗವು ಘಟೋತ್ಕಚಾದಿಗಳಿಂದ ನಾಶ-ವಾಯಿತು. ಆ ಯುದ್ಧದಲ್ಲಿ ಭೀಷ್ಮಾಚಾರ್ಯ, ದ್ರೋಣಾಚಾರ್ಯರು ಪಾಂಡವರ ಎರಡುಅಕ್ಷೋಹಿಣೀ ಸೈನ್ಯವನ್ನು ಸಮ-ಸಮವಾಗಿ (ಒಬ್ಬೊಬ್ಬರು ಒಂದೊಂದು ಅಕ್ಷೋಹಿಣಿ ಸೈನ್ಯವನ್ನು ಎರಡು ಅಕ್ಷೋಹಿಣೀ ಸೈನ್ಯದಲ್ಲಿ ಭೀಷ್ಮರು ಒಂದು ಭಾಗ, ದ್ರೋಣರು ಒಂದು ಭಾಗ, ಅಶ್ವತ್ಥಾಮನು ಒಂದು ಭಾಗ, ಸೋಮದತ್ತಾದಿಗಳು ಒಂದು ಭಾಗ ಹೀಗೆ ಎಲ್ಲರೂ ಸೇರಿ ನಾಲ್ಕು ಭಾಗಗಳನ್ನು ಸಂಹರಿಸಿದರು. ಅವರನ್ನು ಬಿಟ್ಟು ಸೋಮದತ್ತಾದಿ ವೀರರು ಒಟ್ಟಾರೆ ಎರಡು ಅಕ್ಷೋಹಿಣೀ ಸೈನ್ಯದಲ್ಲಿ ನಾಲ್ಕನೇ ಒಂದು ಭಾಗವನ್ನು ನಾಶಪಡಿಸಿದರು. ಅಂದು ರಾತ್ರಿ ಪಾಂಡವರು ಐದು ಅಕ್ಷೋಹಿಣೀ ಸೈನ್ಯ, ಕೌರವರು ಆರು ಅಕ್ಷೋಹಿಣೀ ಸೈನ್ಯವನ್ನು ವ್ಯೂಹರಚನೆಮಾಡಿ ಭೀಕರವಾಗಿ ಯುದ್ಧ ಮಾಡಿದರು. ಭೀಮನು ಧಾರ್ತರಾಷ್ಟ್ರರ ಸೈನ್ಯವನ್ನು

ಕ್ಷೋಭಿಸುತ್ತಿರುವಾಗ ಕರ್ಣನು ಬಂದನು. ಆಗ ಭೀಮನು ರಥ, ಕುದುರೆ, ಧ್ವಜಗಳಿಂದ ಸೂತರುಗಳಿಂದ ಸಹಿತರಾದ ದುರ್ಯೋಧನನ ಕಿರಿಯಸಹೋದರರಾದ ದುಷ್ಕರ್ಣ ಮತ್ತು ಕರ್ಣ ಎಂಬುವವರನ್ನು ಪಾದಾಘಾತದಿಂದ ಮರ್ದಿಸಿದನು.

ಭೀಮಸೇನನು ಗದಾಯುದ್ಧ ಮಾಡಬಹುದಾಗಿದ್ದರೂ, ಅದನ್ನು ಬಿಟ್ಟು ದುಷ್ಕರ್ಣ ಮತ್ತು ಕರ್ಣರನ್ನು ಕಾಲಿನಿಂದ ಒದ್ದು ಏಕೆ ಕೊಂದ? ಎಂದು ಶಂಕಿಸಿ ನಿರ್ಣಯಾಚಾರ್ಯರು ಹೀಗೆ ನಿರೂಪಿಸುತ್ತಾರೆ. ಅಂಗರಾಜನೊಡನೆ ಯುದ್ಧ ಮಾಡುವಾಗ ಭೀಮಸೇನನು "ಕರ್ಣ! ಹಿಂದೆ ನಾನು ನಿರಾಯುಧನೆಂದು ತಿಳಿದು ನೀನು ನನ್ನನ್ನು ದುರ್ವಚನಗಳಿಂದ ನಿಂದಿಸಿ, ನಾನು ನಿರಾಯುಧನಾಗಿದ್ದರೂ ನಿನ್ನನ್ನು ನನ್ನ ಪಾಪಗಳಿಂದಲೇ ಕೊಲ್ಲಲು ಸಮರ್ಥನಾಗಿದ್ದೆ" ಎಂದು ಸೂಚಿಸಲು ದುಷ್ಕರ್ಣ-ಕರ್ಣರನ್ನು ಪಾದಗಳಿಂದಲೇ ಮರ್ದಿಸಿದನೆಂದು ತಿಳಿಯಬೇಕು. ಇದರಂತೆ ಕಾಲಿಂಗನನ್ನು ಮುಷ್ಟಿಗಳಿಂದ ಹತಗೊಳಿಸಿದ್ದನ್ನೂ ಆಚಾರ್ಯರು ವಿವರಿಸುತ್ತಾರೆ. ಅಂಗರಾಜ ಹಿಂದೆ ಹೇಳಿದಂತೆ ನಿನ್ನನ್ನು ಕಾಲಿನಿಂದಲೇ ಕೊಲ್ಲಬಲ್ಲನೆಂದು ಮೇಲೆ ಇನ್ನು ಮುಷ್ಟಿಪ್ರಹಾರದಿಂದ ಸಂಹರಿಸಬಲ್ಲೆನೆಂದು ಹೇಳಬೇಕಾಗಿಲ್ಲವಷ್ಟೇ? ಎಂದು ಸೂಚಿಸಲು ಕಾಲಿಂಗನನ್ನು ಮುಷ್ಟಿಪ್ರಹಾರಗಳಿಂದ ಕೊಂದನು. ಈಗ ನಡೆಯುತ್ತಿರುವ ರಾತ್ರಿಯುದ್ಧವನ್ನು ಪ್ರಸ್ತಾಪಿಸಿ, ಆ ಕಥಾಭಾಗವನ್ನು ಆಚಾರ್ಯರು ಸಂಗ್ರಹಿಸುತ್ತಾರೆ. ಕಾಲಿಂಗವಧ ಪ್ರಸಂಗದಿಂದ ಭೀಷ್ಮರ ಸೈನ್ಯಾಧಿಪತ್ಯದ ಎರಡನೆಯ ದಿನ ಹತರಾದ ಕಾಲಿಂಗರ ವಿಚಾರವನ್ನು ತಿಳಿಸುತ್ತಾರೆ. ಹಿಂದೆ, ಭೀಷ್ಮರು ಸೈನ್ಯಾಧಿಪತ್ಯದ ಎರಡನೆಯ ದಿನ ಖಡ್ಗಯುದ್ಧದಲ್ಲಿ ಕಾಲಿಂಗನ ತಂದೆ ಕೇತುಮಾನ್, ಶಕ್ರದೇವ, ಶ್ರುತಾಯುಧರೆಂಬ ಮೂವರು, ಅಕ್ಷೋಹಿಣೀ ಸಂಖ್ಯೆಯ ಸೈನ್ಯದೊಡನೆ ಭೀಮನಿಂದ ಹತರಾದರು. ಇದು ಭೀಷ್ಮಪರ್ವದಲ್ಲಿ ಹೀಗೆ ಉಕ್ತವಾಗಿದೆ.

ತತಃ ಶ್ರುತಾಯುಧಃ ಕ್ರುದ್ಧೋ ರಾಜ್ಞಾಕೇತುಮತಾ ಸಹ ।
ಆಸಸಾದ ರಣೇ ಭೀಮವ್ಯೂಢಾನೀಕೇಷು ಚೇದಿಸು ॥ ಮತ್ತು

ಕಲಿಂಗಸ್ತು ಮಹೇಷ್ವಾಸಃ ಸಪುತ್ರಸ್ಸ ಮಹಾಬಲಃ ।
ಶಕ್ರದೇವ ಇತಿ ಖ್ಯಾತೋ ಜಘ್ನತಃ ಪಾಂಡವಂ ರಣೇ ॥ ಹಾಗೂ

ಶಕ್ರದೇವಾಯ ಚಿಕ್ಷೇಪ ಸರ್ವಶಾಖ್ಯಾಯಸೀಂ ಗದಾಂ ।
ಸ ತಯಾ ನಿಹಿತೋ ರಾಜನ್ ಕಲಿಂಗಸ್ಯ ಸುತೋ ರಥಾತ್ ॥ ಎಂದು, ಮತ್ತು

ಕೇತುಮಂತಂ ರಣೇ ಭೀಮೋ ಗದಾಮುದ್ಯದುಸಾದನ ಇತ್ಯಾದಿ

ಇದರಂತೆ ಭೀಮನು ಧ್ರುವ ಮೊದಲಾದ ಕರ್ಣನ ಅನೇಕ ಅನುಜರನ್ನು ದ್ರೋಣರ ಸೈನ್ಯಾಧಿಪತ್ಯಕಾಲದ ರಾತ್ರಿಯುದ್ಧದಲ್ಲಿ ಸಂಹರಿಸಿದನು. ಇದು ದ್ರೋಣಪರ್ವದಲ್ಲಿ ಇಂತು ನಿರೂಪಿತವಾಗಿದೆ.

"ಧ್ರುವಂ ಚಾಸ್ಯಂ ತಮನಿರಂ ।" ಮತ್ತು "ಮುಷ್ಟಿನಾ ಸಮಹೋದಾಯತ್ ॥" ಮತ್ತು "ತತಃ ಶತ್ರುರಥಂ ಹತ್ವಾ ಭೀಮೋ ಧ್ರುವರಥಂ ಗತಃ ।" ಇತಿ' ಮತ್ತು ಜಯರಾತ ರಥಂ ಕ್ಷಿಪ್ರಂ ಮರ್ದನ್ ಸವ್ಯೇನ ಪಾಣಿನಾ । ತಲೇನ ನಾಶಯಾಮಾಸ ಕರ್ಣಸ್ಯಾಗ್ರೇ ತತಃ ಸ್ಥಿತಮ್ ॥ ಮುಂತಾಗಿ ಹೇಳಲಾಗಿದೆ.

ಹೀಗೆ ನಿನ್ನನ್ನು ಮುಷ್ಟಿಪ್ರಹಾರಗಳಿಂದಲೇ ಕೊಲ್ಲಬಲ್ಲೆ ಎಂದು ಸೂಚಿಸಿದ್ದನ್ನು ಅರಿತ ಕರ್ಣನು "ಭೀಮ ಆಗ ನಾನು ಇಂದ್ರನಿತ್ತ ಶಕ್ತಿಯನ್ನು ಉಪಯೋಗಿಸದಲೇ ಬೇರೊಂದು ಶಸ್ತ್ರಾಯುಧವನ್ನು ಪ್ರಯೋಗಿಸಿದ್ದೆ. ಆದ್ದರಿಂದ ನೀನು ಇನ್ನೂ ಜೀವಿಸಿದ್ದೀಯೆ ಎಂದು ಭೀಮನಿಗೆ ಜ್ಞಾಪಿಸಲು ಇಂದ್ರದತ್ತವಲ್ಲದ ಬೇರೊಂದು ಶಸ್ತ್ರಾಯುಧವನ್ನು ಭೀಮನ ಮೇಲೆಸೆದನು. ಕರ್ಣನ ಅಭಿಪ್ರಾಯವನ್ನು ಅರಿತ ಭೀಮನು ಕೂಡಲೇ ಆಕಾಶಕ್ಕೆರಗಿ ಆ ಶಸ್ತ್ರಾಯುಧವನ್ನು ಕರದಿಂದ ಹಿಡಿದು ತಕ್ಷಣವೇ ಅದನ್ನು ಕರ್ಣನ ಮೇಲೆಯೇ ಎಸೆದನು. ಕರ್ಣನ ಮೇಲೇ ಆ ಶಕ್ತಿಯನ್ನು ಎಸೆದನೆಂದರೆ, ವಿವರಿಸುತ್ತಾರೆ-

"ಕರ್ಣ ನೀನು ಆಗ ಇಂದ್ರನು ಕೊಟ್ಟ ಶಕ್ತ್ಯಾಯುಧವನ್ನೆಸೆದಿದ್ದರೂ ಅದು ನಿನ್ನನ್ನೇ ನಾಶಮಾಡುತ್ತಿತ್ತು" ಎಂದು ಜ್ಞಾಪಿಸಲು ಅರ್ಜುನನಿಗಾಗಿ ಕರ್ಣನನ್ನು ಉಳಿಸಲೂ ಕರ್ಣನ ಭುಜಕ್ಕೆ ಶಕ್ತ್ಯಾಯುಧವನ್ನೆಸೆದನು. ಅದು ಅಂಗರಾಜನ ದಕ್ಷಿಣ(ಬಲ)ಭುಜವನ್ನು ಸೀಳಿಕೊಂಡು ಭೂಮಿಯನ್ನು ಭೇದಿಸಿ ಅದರಲ್ಲಿ ಪ್ರವೇಶಿಸಿತು. ಅನಂತರ ಭೀಮನು ರಥವನ್ನೇರಿ ಧನುರ್ಧಾರಿಯಾಗಿ ಕರ್ಣನ ಸಮಕ್ಷವೇ ಎಲ್ಲೆಡೆ ಶತ್ರುಗಳನ್ನು ದ್ರಾವಣಗೊಳಿಸಿದನು. ಭೀಮನು ಕರ್ಣನ ರಥಕ್ಕೆ ವೇಗ ತನ್ನ ಗದೆಯನ್ನೆಸೆದನು. ಅದನ್ನು ನಾಶಪಡಿಸಲು "ಸ್ಥೂಣಾಕರ್ಣ" ಎಂಬ ಅಸ್ತ್ರವನ್ನು ಬಿಟ್ಟನು. ಅದರಿಂದ ಭೀಮನ ಗದೆಯು ಮತ್ತೆ ಭೀಮನನ್ನು ಸೇರಿತು. ಭೀಮನು ಪುನಃ ಗದೆಯನ್ನು ಹಿಡಿದು ಕರ್ಣನ ರಥವನ್ನೇರಿದನು. ರಥದ ಯುಗಂಧರ(ದೂರಿ) ವನ್ನು ಪುಡಿ ಪುಡಿಮಾಡಿ, "ಹೇ ಅಂಗರಾಜ ಇದರಂತೆ ನಿನ್ನನ್ನೂ ಚೂರ್ಣಮಾಡಲು ನಾನು ಸಮರ್ಥನೆಂಬುದನ್ನು ಸೂಚಿಸಿ ಕರ್ಣ ನನ್ನಿಂದಾಗಿ ನೀನು ಇನ್ನೂ ಬದುಕಿರುವೆ" ಎಂಬುದನ್ನು ನಿದರ್ಶನ ಪೂರ್ವಕವಾಗಿ ತಿಳಿಸಿಕೊಟ್ಟು, ಪುನಃ ರಥವನ್ನೇರಿ ಭೀಮಸೇನನು ಕರ್ಣನೆದುರಿಗೇ ಅನೇಕಬಾರಿ ಸೇನೆಯನ್ನು ಯುದ್ಧದಲ್ಲಿ ಹೊಡೆದು ಹಾಕಿದನು. ಆಗ ಕರ್ಣನು ಭೀಮನನ್ನು ಬಿಟ್ಟು ಸಹದೇವನ ಬಳಿಗೆ ಧಾವಿಸಿ ಬಂದು ಅವನ ರಥವನ್ನು ಹಾಳುಗೆಡವಿ ಧನುವನ್ನು ಕತ್ತರಿಸಿ ಕುತ್ಸಿತ ವಚನಗಳಿಂದ ಭರ್ತ್ಸನ ಮಾಡಿದನು. ಅದರಿಂದ ಸಹದೇವನು ವ್ಯಥಿತನಾದನು. ಕರ್ಣನು ಕುಂತೀದೇವಿಗೆ ಅರ್ಜುನನನ್ನು ಬಿಟ್ಟು ನಿನ್ನ ಉಳಿದ ನಾಲ್ವರು ಪುತ್ರರನ್ನು ಕೊಲ್ಲುವುದಿಲ್ಲವೆಂದು ಮಾತುಕೊಟ್ಟದ್ದನ್ನು ನೆನೆದು ಸಹದೇವನನ್ನು ಸಂಹರಿಸದೆ ಪಾರ್ಥನ ಸೈನ್ಯವನ್ನು ನಾಶಪಡಿಸಿದನು. ಅನಂತರ ಅಶ್ವತ್ಥಾಮನು ವಿವಿಧ ಬಾಣಗಳ ಸಮೂಹದಿಂದ ಪಾರ್ಥನ ಸೈನ್ಯವನ್ನು ಸುತ್ತಲೂ ನಾಶಪಡಿಸಹತ್ತಿದನು. ಹೀಗೆ ರಣವಿಶಾರದನಾದ ದ್ರೋಣಿಯಿಂದ ಮೃತ್ಯುವಿನಿಂದ ಆರ್ತರಾದ ಪ್ರಜರಂತೆ ಸೈನಿಕರು ನಾಶವಾಗತೊಡಗಿದರು. ಅಶ್ವತ್ಥಾಮನಿಂದ ಸೇನೆಯು ಪರಾಜಿತವಾಗುತ್ತಿರುವುದನ್ನು ಕಂಡು ಘಟೋತ್ಕಚನು ದ್ರೋಣಿಯನ್ನು ಕದನಕ್ಕೆ ಆಹ್ವಾನಿಸಿದನು.

ಆಗ ಅಶ್ವತ್ಥಾಮನು "ಸಾಕು ಸಾಕು, ಕುಮಾರ ನಾನು ನಿನಗೆ ತಂದೆಯಂತಿದ್ದೇನೆ. ನನ್ನೊಡನೆ ಏಕೆ ಯುದ್ಧ? ಎನ್ನಲು, ಘಟೋತ್ಕಚನು ನೀನು ನನ್ನ ತಂದೆಯಲ್ಲ, ನನ್ನ ಪಿತನ ಸ್ನೇಹಿತನು. ಆದರೆ ಶತ್ರುಗಳನ್ನಾಶ್ರಯಿಸಿರುವುದರಿಂದ ನೀನು ನನಗೆ ಶತ್ರುವಾಗಿದ್ದೀಯೆ. ಇಂದ್ರಚಾಪದಂತೆ ಪ್ರಕಾಶಮಾನವಾಗಿರುವ ಧನುವನ್ನು ಠೇಂಕರಿಸಿ ಶರಸಮೂಹವನ್ನು ಬಿಟ್ಟನು. ಆಗ ಉಗ್ರಪ್ರತಾಪನಾದ ಆ ರಾಕ್ಷಸವೀರನು ಲಕ್ಷ ಲಕ್ಷ ಸೇನೆಯಿಂದಲೂ ರಣಪರಿಣತರಾದ ಮಾನವ ಸೈನ್ಯ ಹೀಗೆ ಅಕ್ಷೋಹಿಣೀ ಸೈನ್ಯ ಸಹಿತನಾಗಿ ಯುದ್ಧಕ್ಕೆ ಬಂದ ಘಟೋತ್ಕಚನು ಗುರುಪುತ್ರನಾದ ಅಶ್ವತ್ಥಾಮನನ್ನು ಕ್ಷೋಭೆಗೊಳಿಸಿದನು. ರಾಕ್ಷಸನ ಬಾಣಗಳಿಂದ ಪೀಡಿತನಾದ ಅಶ್ವತ್ಥಾಮನ ದೇಹದಲ್ಲಿ ರಕ್ತಸ್ರಾವವಾಗುತ್ತಿರಲು ಕಣ್ಣನ್ನು ತಿರುಗಿಸುತ್ತಾ ಕೋಪದಿಂದ ಮಹಾಧನುವನ್ನು ವಿಸ್ಫಾರಿಸುತ್ತಾ ಶರಸಂತಿಯಿಂದ ಎಲ್ಲೆಡೆ ರಾತ್ರಿಯನ್ನಾಗಿಸಿ, ಅಂದರೆ ಅಂಧಕಾರಯುಕ್ತವನ್ನಾಗಿ ಮಾಡಿದನು. ಮತ್ತು ಅಕ್ಷೋಹಿಣೀ ಮಾನವ ವೀರರಿಂದ ಕೂಡಿದ ಲಕ್ಷ ಸಂಖ್ಯಾಕರಾದ ರಾಕ್ಷಸರನ್ನು ಕ್ಷಣಮಾತ್ರದಲ್ಲಿ ನಾಶಗೊಳಿಸಿದನು. ಹಿಂದೆ ಅಂಜನವರ್ಮನೆಂಬ ರಾಕ್ಷಸನಾಗಿದ್ದ, ಈಗ ಘಟೋತ್ಕಚನ ಮಗನಾಗಿ ಜನಿಸಿರುವ ನಿಷ್ಪ್ರನಾಮಕನನ್ನು ಸಂಹರಿಸಿದನು. ತನ್ನ ಪೇದೆಗಳು ಮತ್ತು ಮಗನು ನಾಶವಾದುದನ್ನು ಕಂಡು ಘಟೋತ್ಕಚನು ದ್ರೋಣಿಯನ್ನು ಬಹುವಾಗಿ ಬಾಣಗಳಿಂದ ಘಾಸಿಗೊಳಿಸಿದನು. ಅದರಿಂದ ವಿಹ್ವಲಿತನಾದ ಗುರುಪುತ್ರನು ರಥಧ್ವಜವನ್ನು ಆಶ್ರಯಿಸಿ ಮೂರ್ಛಿತನಾದನು. ತರುವಾಯ ಮೂರ್ಛೆ ತಿಳಿದದ್ದು ಧನುಸ್ಸಿಗೆ ಯಮದಂಡ ಸದೃಶವಾದ ಬಾಣವನ್ನು ಹೂಡಿ ಘಟೋತ್ಕಚನ ಮೇಲೆ ಪ್ರಯೋಗಿಸಿದನು. ಅದರಿಂದ ಘಟೋತ್ಕಚನು ಪ್ರಜ್ಞೆತಪ್ಪಿ ರಥದಲ್ಲಿ ಬಿದ್ದನು. ಘಟೋತ್ಕಚನು ಮೂರ್ಛಿತನಾದುದನ್ನು ಕಂಡು ಅವನ ಸಾರಥಿಯು ಅವನನ್ನು ಎಲ್ಲರೂ ನೋಡುತ್ತಿರುವಂತೆ ಯುದ್ಧಭೂಮಿಯಿಂದ ದೂರಪ್ರದೇಶಕ್ಕೆ ಕೊಂಡೊಯ್ದನು. ಅಶ್ವತ್ಥಾಮನು ಪಾಂಡವರ ಸೋದರರುಗಳ ಸೈನ್ಯವನ್ನು ನಿಶಿತವಾದ ಬಾಣಗಳಿಂದ ಪೀಡಿಸಿದನು. ಇತ್ತ ಮೂರ್ಛೆಯಿಂದ ಎದ್ದ

ಘಟೋತ್ಕಚನು ಎಚ್ಚೆತ್ತು ಕೋಪೋದ್ರೇಕದಿಂದ ಕೌರವರ ಸೈನ್ಯವನ್ನು ಪ್ರವೇಶಿಸಿ ಬಾಣವರ್ಷಣದಿಂದ ಕೌರವ ಸೈನ್ಯವನ್ನು ವಿದ್ರಾವಿಸಿದನು ಮತ್ತು ಮಹಾರಥಿಕರನ್ನು ನಡುಗಿಸಿದನು.

ಅದೇ ಸಮಯಕ್ಕೆ ಪಾರ್ಥನೊಡನೆ ಕಾದಾಡಲು ಬಂದ ಕರ್ಣನನ್ನು ನೋಡಿ ಜಗತ್ಪತಿಯಾದ ಶ್ರೀಹರಿಯು(ಕೃಷ್ಣನು) ಕರ್ಣನಲ್ಲಿದ್ದ ಇಂದ್ರನ ಶಕ್ತ್ಯಾಯುಧದಿಂದ ರಕ್ಷಿಸಲು, ಅದು ಘಟೋತ್ಕಚನ ಮೇಲೆ ಪ್ರಯೋಗವಾಗುವಂತೆ ಮಾಡಲು ಘಟೋತ್ಕಚನನ್ನು ಕರ್ಣನೊಡನೆ ಹೋರಾಡಲು ಕಳಿಸಿದನು.

ಘಟೋತ್ಕಚನು ಕರ್ಣನನ್ನನುಸರಿಸಿಬಂದ ದುರ್ಯೋಧನ-ದ್ರೋಣಾದಿಗಳನ್ನು ಏಕಾಂಗಿಯಾಗಿ ನಿವಾರಿಸಿಕೊಂಡು ಅಧಿಕ ಸೈನಿಕರನ್ನು ಮರ್ದನ ಮಾಡಿದನು. ಅವನಿಂದ ಬಹುಸಲ ಬಾಧಿತರಾದ ಧಾರ್ತರಾಷ್ಟ್ರರು ಕರ್ಣನನ್ನು ಮುಂದೆ ಮಾಡಿಕೊಂಡು ಯುದ್ಧಮಾಡಿದರು. ಮಹಾಸ್ತ್ರಗಳನ್ನು ಬಲ್ಲ ರಾಧೇಯನು ಸ್ವಪೌರುಷದಿಂದ ಹೋರಾಡಿದನು. ರಾಕ್ಷಸನ ದಾಂಧಲೆಯಿಂದ ಪೀಡಿತನಾಗಲಿಲ್ಲ. ಆಗ ಭೀಮನು ಅಶ್ವತ್ಥಾಮನನ್ನು ಅರ್ಜುನನು ತ್ರಿಗರ್ತರನ್ನೂ ತಡೆದನು. ಇಂದ್ರಸುತ ಅರ್ಜುನನು ಘಟೋತ್ಕಚನ ಮೇಲೆ ಕರ್ಣನು ಏರಿಬರುತ್ತಿರಲು ಅವನನ್ನು ತಡೆದನು. ಆಗ ಭೀಮಸೇನನನ್ನು ಕೊಲ್ಲಲು ಅಲಂಬುಸನೆಂಬವನು ಯುದ್ಧಕ್ಕಾಗಿ ಮೀಸಲು ಘಟೋತ್ಕಚನನೊಡನೆ ಕದನಮಾಡಿ ಅಲಂಬುಸನನ್ನು ಧರಗೆ ಅಪ್ಪಳಿಸಿ ಖಡ್ಗದಿಂದ ಅವನ ಶಿರಸ್ಸನ್ನು ತರಿದು, ಅದರಿಂದ ದುರ್ಯೋಧನನ್ನು ತಾಡಿಸಿದನು. ಘಟೋತ್ಕಚನ ಪರಾಕ್ರಮವನ್ನು ಕಂಡು ಕೌರವ ಭೂಪಾಲರು ವಿಷಾದಿಸಿದರು.

ಆಗ ಉಗ್ರವೀರನಾದ ನರಭಕ್ಷಕನಾದ ಅಲಾಯುಧನೆಂಬ ರಕ್ಕಸನು ಘಟೋತ್ಕಚನ ಮೇಲೇರಿ ಬಂದನು. ಆಗ ಭೀಮಕುಮಾರ ಮೂಹೂರ್ತಕಾಲ ಅವನೊಡನೆ ಸೆಣಿಸಿ ಅಲಾಯುಧನನ್ನು ಭೂಮಿಗೆ ಬೀಳಿಸಿ ಆ ಯುದ್ಧಕ್ಕೆ ಅವನನ್ನು ಬಲಿಪಶುವಾಗಿ ಮಾಡಿದನು ಮತ್ತು ಅವನ ಕುತ್ತಿಗೆಯನ್ನು ಕಡಿದು ದುರ್ಯೋಧನನ ತಲೆಯ ಮೇಲೆಸೆದನು. ಅದನ್ನು ಕಂಡು ದುರ್ಯೋಧನಾದಿ ಸಕಲರೂ ಸಂಭ್ರಾಂತರಾದರು. ಅದು ಸರಿ, ಭೀಮನೇ ಅಲಾಯುಧನನ್ನು ನಾಶಪಡಿಸಲು ಶಕ್ತನಾಗಿದ್ದರೂ ತನ್ನ ಕುಮಾರನಿಗೆ ಕೀರ್ತಿಬರಲೆಂದು ಅವನನ್ನು ಘಟೋತ್ಕಚನಿಂದ ಸಂಹಾರ ಮಾಡಿಸಿದನೆಂದು ತಿಳಿಯಬೇಕು. ಆಗ ಕೌರವರೆಲ್ಲರೂ ಇಂದ್ರನ ಶಕ್ತ್ಯಾಯುಧವನ್ನು ಘಟೋತ್ಕಚನಮೇಲೆ ಪ್ರಯೋಗಿಸಬೇಕೆಂತಲೂ ಆ ಘಟೋತ್ಕಚನು ಮೃತನಾದರೆ ಅರ್ಜುನನು ಏನು ಮಾಡುವನು ಎಂದು ದುರ್ಯೋಧನಾದಿಗಳು ಮತ್ತೆ ಮತ್ತೆ ಕರ್ಣನನ್ನು ಪ್ರೇರಿಸಿದರು.

ಆಗ ಕರ್ಣನು ಎಲ್ಲರನ್ನೂ ಪೀಡಿಸುತ್ತರುವ ರಕ್ಕಸನನ್ನು ಕಂಡು ತಾನೂ ಪೀಡಿತನಾಗಿ ಘಟೋತ್ಕಜನ ಸಂಹಾರಕ್ಕೆ ಇಂದ್ರನು ಕೊಟ್ಟ ಶಕ್ತ್ಯಾಯುಧವನ್ನು ಕೈಗೆತ್ತಿಕೊಂಡು ಮೃತ್ಯುವಿನ ನಾಲಿಗೆಯಂತೆ ಎಲ್ಲ ದಿಕ್ಕುಗಳನ್ನು ಪ್ರಕಾಶಿಸುತ್ತಿರುವ ಆ ಶಕ್ತ್ಯಾಯುಧವನ್ನು ಆಕಾಶದಲ್ಲಿ ಚೆಟ್ಟದಂತೆ ಕಂಗೊಳಿಸುತ್ತಿರುವ ಘಟೋತ್ಕಚನ ಮೇಲೆ ಪ್ರಯೋಗಿಸಿದನು. ಆ ಶಕ್ತ್ಯಾಯುಧವು ಘಟೋತ್ಕಚನ ವಕ್ಷಸ್ಥಳವನ್ನು ಭೇದಿಸಿತು. ಆಗ ಅಗಾಧ ಶರೀರಿಯಾದ ಘಟೋತ್ಕಚನು ನೆಲಕ್ಕುರುಳಿ ಮೃತನಾದನು. ಇಂತು ಧರೆಗುರುಳುವಾಗಲೂ ಘಟೋತ್ಕಚನು ತನ್ನ ಭಾರಿ ಶರೀರಾಘಾತದಿಂದ ಅನೇಕ ಕೌರವ ಸೈನ್ಯವನ್ನು ಹತಗೊಳಿಸಿದನು. ಕೌರವರು ಘಟೋತ್ಕಚನ ಮರಣದಿಂದ ಬಹು ಹರ್ಷಿಸಿದರು. ತಮ್ಮ ವಸ್ತ್ರಗಳೆಲ್ಲವನ್ನು ಅಲ್ಲಾಡಿಸುತ್ತಾ, ವಿಜಯಧ್ವನಿ ಮಾಡಿದರು. ಆಗ ಕೃಷ್ಣನು ಪಾರ್ಥನನ್ನು ಆಲಂಗಿಸಿ ನರ್ತಿಸುತ್ತಾ ಶಂಖಧ್ವನಿಗೈಯುತ್ತಾ ನಗಲು ಪ್ರಾರಂಭಿಸಿದನು. ಆಗ ಕೃಷ್ಣನ ವರ್ತನೆಯಿಂದ ಕಡುನೊಂದು ಅರ್ಜುನನು ಪ್ರಭು ಮಹಾವೀರನಾದ ನಮ್ಮಣ್ಣನ ಮಗನು ಮೃತನಾದರೆ ದುಃಖಿಸಬೇಕೇ ವಿನಃ ಏಕಿಂತು ಹರ್ಷಿಸುತ್ತಿರುವೆ? ಎಂದು ಪ್ರಶ್ನಿಸಿದನು. ಆಗ ಭಗವಾನ್ ಶ್ರೀಕೃಷ್ಣನು "ಅರ್ಜುನ! ನೀನು ಬದುಕಿದೆ. ಕರ್ಣನು ನಿನ್ನ ಸಂಹಾರಕ್ಕಾಗಿ ಇಂದ್ರನ ಶಕ್ತ್ಯಾಯುಧವನ್ನು ಕಾದಿರಿಸಿದ್ದನು. ಅದನ್ನೀಗ ಅವನು ಘಟೋತ್ಕಚನಮೇಲೆ

ಪ್ರಯೋಗಿಸಿದ್ದರಿಂದ ಅದು ವ್ಯರ್ಥವಾಯಿತು ನೀನು ಜೀವಿಸಿದೆ ಅದಕ್ಕಾಗಿ ನಾನು ಸಂತೋಷಿಸುತ್ತಿದ್ದೇನೆ" ಎಂದು ಹೇಳಿದನು.

ಆಗ ಧರ್ಮರಾಜನು ಕರ್ಣನ ಪರಾಕ್ರಮವನ್ನು ಸಹಿಸಿದೆ ಕರ್ಣನೊಡನೆ ಯುದ್ಧಮಾಡಲು ಧಾವಿಸಿದನು. ಆಗ ಅಲ್ಲಿ ಪ್ರತ್ಯಕ್ಷರಾದ ಶ್ರೀವೇದವ್ಯಾಸದೇವರು "ರಾಜೇಂದ್ರ! ಧರ್ಮನಂದನ, ಘಟೋತ್ಕಚನು ಶಕ್ತ್ಯಾಯುಧದಿಂದ ಮೃತ-ನಾದನೆಂದು ನೀನು ದುಃಖಿಸಬೇಡ. ಆ ಆಯುಧವೀಗ ವ್ಯರ್ಥವಾದ್ದರಿಂದ ಕರ್ಣನಿಂದ ಉಳಿದ ಅರ್ಜುನನು ಜೀವಿಸಿ-ದನು" ಎಂದು ಅವನನ್ನು ಸಾಂತ್ವನಗೊಳಿಸಿ ಅದೃಶ್ಯರಾದರು. ಈ ವಿಚಾರವು ಭಾರತದಲ್ಲಿ

**ತಂ ದೃಷ್ಟ್ವಾ ಸಹಸಾಯಾಂತಂ ಸೂತಪುತ್ರಂ ಜಿಘಾಂಸಯಾ ।**
**ಅಭಿಗಮ್ಯಾಬ್ರವೀದ್ವ್ಯಾಸೋ ಧರ್ಮಪುತ್ರಂ ಯುಧಿಷ್ಠಿರಮ್ ॥ ಕಿಮಿತಿ ?**
**ಯಥಾ ಶಕ್ತ್ಯಾಹತೋ ಯಸ್ಮಾತ್ ತಸ್ಮಾನ್ಮಾ ಶುಚಃ**

ಎಂದು ಉಕ್ತವಾಗಿದೆ. ಅನಂತರ ಪಾಂಡವ ಕೌರವರಲ್ಲಿ ಘೋರ ಯುದ್ಧವಾಯಿತು. ಭೀಮಾರ್ಜುನ ಧರ್ಮರಾಜರಿಂದ ಶತ್ರುಸೈನ್ಯವು ಸಂಹರಿಸಲ್ಪಡುತ್ತಿರಲು ಕೌರವಾದಿಗಳಿಂದ ಪಾಂಡವಸೈನ್ಯವೂ ನಾಶವಾಗುತ್ತಿರಲು, ಕರದಲ್ಲಿ ದೀವಟಿಕೆಗಳನ್ನು ಹಿಡಿದ ಸೈನಿಕರು ಯುದ್ಧ ಮಾಡುತ್ತಾ ಮಾಡುತ್ತಾ ಆ ರಾತ್ರಿ ಹಾಗೆಯೇ ನಿದ್ರಿಸಿದರು. ಆಗ ಅರ್ಜುನನು 'ಚಂದ್ರನ ಬೆಳಕಿರುವವರೆಗೆ ನೀವೆಲ್ಲರೂ ನಿದ್ರಿಸಿರಿ' ಎಂದು ಹೇಳಲು ಎಲ್ಲ ಸೈನಿಕರೂ ಅರ್ಜುನನನ್ನು ಆಶೀರ್ವದಿಸಿ ಎಲ್ಲರೂ ಹೇಗಿದ್ದರೋ ಹಾಗೆಯೇ ನಿದ್ರಿಸಿದರು. ಆನೆಯ ಮೇಲೆ ಕುಳಿತವರು, ರಥದಲ್ಲಿದ್ದವರು, ಅಶ್ವಗಳ ಮೇಲಿದ್ದವರು, ಕಾಲಾಳುಗಳು ಹೀಗೆ ಸಕಲರೂ ತಾವಿದ್ದ ಪರಿಸ್ಥಿತಿಯಲ್ಲಿಯೇ ನಿದ್ರಿಸಿದರೆಂದು ಭಾವ.

ಚಂದ್ರೋದಯವಾದ ಮೇಲೆ ಮತ್ತೆ ಯುದ್ಧವು ಪ್ರಾರಂಭವಾಯಿತು. ಆಗ ಸೋಮದತ್ತ ಭೂರಿಶ್ರವರೂ ಸಾತ್ಯಕಿಯ ಮೇಲೆ ಯುದ್ಧಕ್ಕೆ ಬರಲು ಸಾತ್ಯಕಿಯೊಬ್ಬನೇ ಕದನ ಮಾಡಿ ಅವರನ್ನು ಸಂಹರಿಸಿದನು. ಅದನ್ನು ಕಂಡು ಬಾಹ್ಲೀಕರಾಜನು ಸಾತ್ಯಕಿಯ ರಥವನ್ನು ಹಾಳುಮಾಡಿ ಸಾತ್ಯಕಿಯ ಸಂಹಾರಕ್ಕಾಗಿ ಬಾಣ ಬಿಟ್ಟನು. ಅದನ್ನವಲೋಕಿಸಿ ಭೀಮಸೇನನು ಮುನ್ನುಗ್ಗಿ ಆ ಬಾಣವನ್ನು ಮೂರು ಭಾಗವಾಗಿ ಕತ್ತರಿಸಿ ಹಾಕಿದನು. ಆಗ ಬಾಹ್ಲೀಕರಾಜನು ಭೀಮನ ಮೇಲೆ ತನ್ನ 'ಶತಘ್ನಿ' ಎಂಬ ಗದೆಯನ್ನು ಎಸೆದನು. ಅದರಿಂದ ಪೆಟ್ಟುತಿಂದ ವಿಹ್ವಲಿತನಾದ ಭೀಮನು ಬಾಹ್ಲೀಕರಾಜನನ್ನು ತನ್ನ ಗದಾಪ್ರಹಾರದಿಂದ ಸಂಹಾರಮಾಡಿದನು. ಬಾಹ್ಲೀಕನು ಧರೆಗೆ ಬಿದ್ದನು.

ಇಲ್ಲೊಂದು ವಿಚಾರವು ವಿಚಾರಣೀಯವಾಗಿದೆ. ಹಿಂದೆ ಕರ್ಣನು ವೈಷ್ಣವನೆಂದು ಭೀಮನು ಅವನನ್ನು ಸಂಹರಿಸದೆ ಬಿಟ್ಟನೆಂದು ಹೇಳಿದೆಯಲ್ಲವೇ ? ಹಾಗಾದರೆ ಬಾಹ್ಲೀಕರಾಜನು ವೈಷ್ಣವನೇ ಆದ್ದರಿಂದ ಭೀಮನು ಈಗ ಅವನನ್ನು ಹೇಗೆ ಸಂಹರಿಸಿದನು ಎಂಬ ಸಂದೇಹವನ್ನು ಹೀಗೆ ಪರಿಹರಿಸುತ್ತಿದ್ದಾರೆ. ಕುರುಕ್ಷೇತ್ರದಲ್ಲಿ ಕುರುಪಾಂಡವರ ಯುದ್ಧವು ಪ್ರಾರಂಭ-ವಾಗುವ ಮೊದಲು ಬಾಹ್ಲೀಕರಾಜನು ಭೀಮನ ಬಳಿಗೆ ಬಂದು, 'ಭೀಮಸೇನ ನನ್ನಲ್ಲಿ ಪ್ರೀತಿ ಅನುಗ್ರಹ ಮಾಡಲು ನೀನು ಇಚ್ಛಿಸಿದಲ್ಲಿ ನೀನೇ ನನ್ನನ್ನು ಸಂಹರಿಸಬೇಕು. ಅದ್ದರಿಂದ ಅಂದರೆ ನಿನ್ನಿಂದ ಮೃತನಾದರೆ ನನಗೆ ಕೀರ್ತಿಯೂ ಧರ್ಮವೂ ಪ್ರಾಪ್ತವಾಗುವುದು ಮತ್ತು ವೀರರಿಂದ ಪ್ರಾಪ್ಯವಾದ ಭಗವಲ್ಲೋಕವನ್ನು ನಾನು ಪಡೆಯುವೆನು. ನನಗೆ ಕೀರ್ತಿಯೂ ಬರುವುದು' ಎಂದು ಕೇಳಿಕೊಂಡನು. ಆ ಕುರುವೃದ್ಧನ ಮಾತು ಕೇಳಿ ವಾಯುಕುಮಾರನಾದ ಭೀಮನು 'ಆರ್ಯ ನನ್ನನ್ನು ಘಾಸಿಪಡಿಸದೇ ಇರುವವರನ್ನು ನಾನು ಸಂಹರಿಸುವುದಿಲ್ಲ. ನೀನು ನನ್ನಿಂದ ಮರಣಸಲು ಅಪೇಕ್ಷಿಸಿದ್ದಲ್ಲಿ ನನ್ನನ್ನು ಬಾಧಿಸ-ಬೇಕು ಅಂದರೆ ಆಗ ನಾನು ನಿನ್ನನ್ನು ಸಂಹರಿಸುವವೆನು. ಅದು ನಿನಗೆ ಶುಶ್ರೂಷೆಯಾಗುವುದು' ಎಂದು ಹೇಳಿದ್ದನು.

ಬಾಹ್ಲೀಕರಾಜನು ಮರಣಿಸುವ ಮೊದಲು ಭೀಮನಿಗೆ ಕರಜೋಡಿಸಿ, ಸ್ವಾಮಿ ನೀವು ಮುಂದೆ ಶ್ರೀಹರಿಯ ಜ್ಞಾನಕಾರ್ಯಕ್ಕಾಗಿ ಅವತರಿಸಿದಾಗ ನಿಮ್ಮ ಮತಾನುಯಾಯಿಯಾಗಿ, ನಿಮ್ಮ ಭಕ್ತನಾಗಿ ಭಗವಂತನ ಜ್ಞಾನಕಾರ್ಯದಲ್ಲಿ ನಾನು ವಿಶೇಷ ಸೇವೆ ಮಾಡಲು ಆಶಿಸುತ್ತೇನೆ. ಆದರನಂತರ ನೀವು ಅನುಗ್ರಹಿಸಿ ವರ ನೀಡಬೇಕು' ಎಂದು ರಾಜರಾಗಿ ಪ್ರಾರ್ಥಿಸಿದರು. ಭೀಮಸೇನದೇವರು ಆದರಂತೆ ವರವನ್ನು ಕರುಣಿಸಿದರು. ಅಂತೆಯೇ ಬಾಹ್ಲೀಕರಾಜನು ಭೀಮನಿಂದ ಮರಣವನ್ನು ಬಯಸಿ ಅವನಮೇಲೆ ತನ್ನ ಬಲವತ್ತರವಾದ 'ಶತಘ್ನಿ' ಎಂಬ ಮಹಾಗದೆಯನ್ನು ಪ್ರಯೋಗಿಸಿ ಭೀಮನನ್ನು ನೋಯಿಸಿದನು. ಆಗ ಭೀಮನು ವಚನವಿತ್ತಂತೆ ಬಾಹ್ಲೀಕರಾಜರನ್ನು ತಮ್ಮ ಗದಾಪ್ರಹಾರದಿಂದ ಸಂಹರಿಸಿದನೆಂದು ತಿಳಿಯಬೇಕು ಎಂದು ಶ್ರೀನಿರ್ಣಯಾಚಾರ್ಯರು ಆ ಸಂದೇಹವನ್ನು ಪರಿಹರಿಸಿದ್ದಾರೆ.

(ವೃಕೋದರನಿಂದ ದೇಹವನ್ನು ಬಿಡುವಾಗ ಬಾಹ್ಲೀಕರಾಜನಾಗಿ ಹುಟ್ಟಿದ ಪ್ರಹ್ಲಾದ 'ತಾನು ಭಕುತಿಯಿಂದ ಪೋಗಳಿ ವರವ ಬೇಡಿದನು. ವೈದಿಕಮಾರ್ಗವನ್ನೇ ಹಿಡಿದು, ಭಕ್ತಿಯನ್ನು ಸಾಧಿಸುತಲಿ ಕಲಿಯೊಳಗೆ ನಿಮ್ಮ ಪೂಜಕರಾಗಿ ಬಾಳುವೆನು' ಎಂದು ತಲೆ ಬಾಗಿದನು. ಭಕುತಿಗೆ ಮೆಚ್ಚಿಸಲೆಯಿಂದ' ಎಂದು ವಿಜಯದಾಸರು ಈ ಸಂದರ್ಭವನ್ನು ತಮ್ಮ ಪ್ರತಿಯೊಂದರಲ್ಲಿ ನಿರೂಪಿಸಿದ್ದಾರೆ. ಪ್ರಹ್ಲಾದಾವತಾರ ಬಾಹ್ಲೀಕರೇ ಕಲಿಯುಗದಲ್ಲಿ ವ್ಯಾಸರಾಜರಾಗಿ, ಅನಂತರ ರಾಘವೇಂದ್ರರಾಗಿ ಅವತರಿಸಿದರು - ಅನುವಾದಕ)

ಬಾಹ್ಲೀಕರಾಜನು ಹತನಾದ ಮೇಲೆ ಕರ್ಣ ಸುಯೋಧನಾದಿ ಕೌರವರು ಅಶ್ವತ್ಥಾಮನನ್ನು ಮುಂದೆ ಮಾಡಿಕೊಂಡು ಭೀಮನ ಮೇಲೆ ಯುದ್ಧಕ್ಕೆ ಬಂದರು. ಆಗ ಸಾತ್ಯಕಿ ಮತ್ತು ಸಹೋದರನಿಂದಯುಕ್ತನಾದ ಧೃಷ್ಟದ್ಯುಮ್ನರು ದ್ರೋಣರ ಮೇಲೆ ಯುದ್ಧಕ್ಕೆ ಬಂದರು. ಅರ್ಜುನನು ಸಂಸಪ್ತಕರೊಡನೆ ಅತಿಭಯಂಕರವೂ ಆಶ್ಚರ್ಯಕರವೂ ಆದ ರೀತಿಯಲ್ಲಿ ಯುದ್ಧಮಾಡಿದನು. ಅಂದು ರಾತ್ರಿ ಯುದ್ಧದಲ್ಲಿ ಭೀಮಾರ್ಜುನರು ಒಂದು ಅಕ್ಷೋಹಿಣೀಸೈನ್ಯವನ್ನು ನಾಶಪಡಿಸಿದರು.

ಮರುದಿನ ಸೂರ್ಯೋದಯವಾದ ಮೇಲೆ ಆಚಾರ್ಯ ದ್ರೋಣರು ಅತಿಘೋರವಾದ ಯುದ್ಧಮಾಡಿದರು. ಅವರು ಪಾಂಚಾಲರ ರಥಸಮೂಹವನ್ನು ಪ್ರವೇಶಿಸಿ, ಆನೆ, ಕುದುರೆ, ರಥ ಮತ್ತು ಪದಾತಿಗಳನ್ನು, ಮಹಾರಥಿಕಲೆಲ್ಲರನ್ನೂ ಶರಾಘಾತದಿಂದ ಓಡಿಸಿದರು. ದ್ರೋಣರು ಬಿಟ್ಟ ಬಾಣಪರಂಪರೆಯ ಅಂಧಕಾರದಲ್ಲಿ ಸಿಲುಕಿದ ಪಾಂಡವರು ಸುಖಿಗಳಾಗಲಿಲ್ಲ. ಆ ಯುದ್ಧದಲ್ಲಿ ವೃದ್ಧರಾದ ದ್ರೋಣಾಚಾರ್ಯರು ಒಂದು ಅರ್ಬುದ ರಥಗಳು, ಸಹಸ್ರಾರ್ಬುದ ಸೈನಿಕರು, ಮತ್ತು ನೂರು ಅರ್ಬುದ ಕುದುರೆಗಳನ್ನು ನಾಶಪಡಿಸಿದರು. (ಅರ್ಬುದ ರಥ ಎಂಬಲ್ಲಿ ಇಪತ್ತು ಸಾವಿರವೆಂದು ಅರ್ಥ. ಅರ್ಬುದ ಪದದಿಂದ ಮಹಾಸಂಖ್ಯೆಯೂ ಉಕ್ತವಾಗುವುದು. ಅದರಂತೆ ಮೂವತ್ತು ಸಾವಿರವೆಂದೂ ಅರ್ಥ-ವಾಗುವುದು. ಇಲ್ಲಿ ಅರ್ಬುದವೆಂದರೆ ಇಪ್ಪತ್ತುಸಾವಿರವೆಂದು ಅಭಿಪ್ರಾಯವು)

ಅನಂತರ ದ್ರೋಣರು ಯುದ್ಧದಲ್ಲಿ ಬಾಣ ಪ್ರಯೋಗದಿಂದ ವಿರಾಟ ಮತ್ತು ದ್ರುಪದರಾಜರನ್ನು ಯಮಲೋಕಕ್ಕೆ ಅಟ್ಟಿದರು. ಆಗ ವಾಯುಸುತನು ಅಶ್ವತ್ಥಾಮಾದಿಗಳನ್ನು ಜಯಿಸಿ ಧೃಷ್ಟದ್ಯುಮ್ನನನ್ನು ರಕ್ಷಿಸಿದನು. ಧೃಷ್ಟದ್ಯುಮ್ನನಾಗ ದ್ರೋಣರನ್ನು ಕೊಲ್ಲಲು ಬಹುವಾಗಿ ಯತ್ನಿಸಿದನು. ಆಗ ದ್ರೋಣರು ಅವನನ್ನು ಶರಾಘಾತಗಳಿಂದ ನಿವಾರಿಸಿದರು. ಧೃಷ್ಟದ್ಯುಮ್ನನು ದ್ರೋಣರನ್ನು ಶರಗಳಿಂದ ಹೊಡೆದನು. ದ್ರೋಣರು ಮೂರ್ಛೆಹೋಗಿ ರಥದಲ್ಲಿ ಕುಳಿತರು. ಕೂಡಲೇ ಧೃಷ್ಟದ್ಯುಮ್ನನು ಖಡ್ಗಾದಿಗಳನ್ನು ಹಿಡಿದು ದ್ರೋಣರ ರಥವನ್ನೇರಿದನು. ಆಗ ದ್ರೋಣರು ಮೂರ್ಛೆಯಿಂದೆದ್ದು, ಬಾಣಗಳಿಂದ ಅವನನ್ನು ನೋಯಿಸಿದರು. ನೊಂದ ಧೃಷ್ಟದ್ಯುಮ್ನನು ಅವರ ರಥದಿಂದ ಪರಾವೃತ್ತನಾಗಿ ತನ್ನ ರಥವನೇರಿದನು. ತರುವಾಯ ಅವರಿಬ್ಬರೂ ಮತ್ತೆ ಯುದ್ಧಮಾಡಿ ಬಾಣಗಳ ಮಳೆಗರೆದರು. ದ್ರೋಣರು ಆಗ ಶತ್ರುವಿನ ಶರಗಳನ್ನು ತಮ್ಮ ಬಾಣಗಳಿಂದ ನಿವಾರಿಸಿಕೊಂಡು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ಬಹುಸಂಖ್ಯಾತರಾದ ಪಾಂಚಾಲರನ್ನು ದಹಿಸಿದರು. ಆದರಿಂದ ಪುರುಜಿತ್ ಕುಂತಿ ಭೋಜ ಮತ್ತಿತರರು ಹತರಾದರು.

ಆ ಬಳಿಕ ಭೀಮ ಧನಂಜಯರು ಮತ್ತು ಸಾತ್ಯಕಿಯೂ ಸೇರಿ ಅಧಿಕ ಸೇನಾಸಹಿತರಾಗಿ ಹೇಗೋ ಅಶ್ವತ್ಥಾಮನನ್ನು ತಡೆದರು. ಕರ್ಣ, ದುರ್ಯೋಧನ, ಶಲ್ಯ, ಭೋಜ, ಕೃಪಾದಿಗಳನ್ನು ಭೀಮಾರ್ಜುನರು ಶರಗಳಿಂದ ತಡೆದರು. ಆ ಕದನ-ದಲ್ಲಿ ಭೀಮನು ಗಜಸೈನ್ಯಗಳ ಗುಂಪನ್ನೂ ಜಯತ್ಸೇನನನ್ನೂ ಸಂಹರಿಸಿದ್ದಲ್ಲದೇ ಮಗಧರ ಬಹುಸಂಖ್ಯಾಕವಾದ ರಥಿಕ ಸಮೂಹವನ್ನೂ ಕೊಂದು ಹಾಕಿದನು.

ಆಗ ಯುದ್ಧದಲ್ಲಿ ಮಾಲವರಾಜನ 'ಅಶ್ವತ್ಥಾಮಾ' ಎಂಬ ಆನೆಯನ್ನು ಸಂಹರಿಸಿದ್ದನ್ನು ನೋಡಿದ ಕೃಷ್ಣನಿಂದ ಪ್ರೇರಿತನಾದ ಯುಧಿಷ್ಠಿರನು ಅಶ್ವತ್ಥಾಮನು ಮೃತನಾದನೆಂದು ಘೋಷಿಸಿದನು. ಧರ್ಮರಾಜನು ಅಶ್ವತ್ಥಾಮನು ಮೃತ-ನಾದನೆಂದು ಏಕೆ ಹೇಳಿದನೆಂಬುದು ಈಗ ವಿವರಿಸುವರು. ಹಿಂದೆ ದ್ರೋಣಾಚಾರ್ಯರು ಯುಧಿಷ್ಠಿರನೆದುರಿಗೆ ಯುದ್ಧದಲ್ಲಿ ಅಶ್ವತ್ಥಾಮನು ಹತನಾದನೆಂಬ ವಾರ್ತೆಯನ್ನು ಕೇಳಿದರೆ ನಾನು ಯುದ್ಧ ಮಾಡುವುದಿಲ್ಲವೆಂದು ಹೇಳಿದ್ದರು. ಆದ್ದರಿಂದ ಈಗ ದ್ರೋಣರನ್ನು ಯುದ್ಧದಿಂದ ಪರಾವೃತ್ತಗೊಳಿಸಲು ಹಾಗೆ ಹೇಳಿದನು. ಆಗ ದ್ರೋಣರು ಧರ್ಮನಂದನನ್ನು 'ನಿಜ ಹೇಳು' ಎಂದು ಪ್ರಶ್ನಿಸಲು, ಧರ್ಮರಾಜನು 'ನಿಜ ಅಶ್ವತ್ಥಾಮ ಎಂಬ ಗಜರಾಜನು ಮೃತನಾದನು' ಎಂದು ಹೇಳಿದನು. ಗಜ ಎಂಬುದನ್ನು ದ್ರೋಣರಿಗೆ ಕೇಳಿಸದಷ್ಟು ಮೆಲ್ಲಗೆ ಹೇಳಿದನು. ಅದನ್ನು ಕೇಳಿ ದ್ರೋಣರು ಅತಿದುಃಖಿತರಾದರು. ಆಗ ಭೀಮಸೇನನು ದ್ರೋಣರನ್ನು ಸಂಬೋಧಿಸಿ 'ಆಚಾರ್ಯರೇ ಗುಣವಂತರೂ ಶ್ರೇಷ್ಠ ಬ್ರಾಹ್ಮಣರೂ ಆದ ನೀವು ನಿಮ್ಮ ಧರ್ಮವನ್ನು ಬಿಟ್ಟು ಪರಧರ್ಮವಾದ ಕ್ಷತ್ರಿಯಧರ್ಮವನ್ನು ಅವಲಂಬಿಸಿ ನಿತ್ಯವೂ ಜೀವಿಸುತ್ತಿರುವುದು ಯೋಗ್ಯವಲ್ಲ' ಎಂದನು. ಆಕಾಶದಲ್ಲಿದ್ದ ಮುನಿಗಳು, ದ್ರೋಣಾಚಾರ್ಯರೇ ಯುದ್ಧ ಸಾಕು. ನಿಮ್ಮ ಲೋಕಕ್ಕೆ ತೆರಳಿರಿ ಎಂದು ಹೇಳಿದರು. ಇವೆಲ್ಲವನ್ನೂ ಕೇಳಿ ಭೀಮ ಹಾಗೂ ಮುನಿಗಳ ವಚನವು ತಮಗೆ ಹಿತರೂಪವೆಂದು ತಿಳಿದು ಆಚಾರ್ಯ ದ್ರೋಣಾಚಾರ್ಯರು ಶಸ್ತ್ರತ್ಯಾಗಮಾಡಿ ಸರ್ವಕರ್ಮಗಳನ್ನೂ ಪರಮಾತ್ಮನ ಚರಣಗಳಿಗೆ ಸಮರ್ಪಿಸಿ ಯೋಗಾರೂಢರಾಗಿ ಸರ್ವೇಶ್ವರನೂ ನಿತ್ಯ ನಿರ್ದೋಷನೂ ಆದ ಶ್ರೀವಾಸುದೇವನನ್ನು ಧ್ಯಾನಿಸುತ್ತಾ ದೇಹತ್ಯಾಗಮಾಡಿ ತಮ್ಮ ಲೋಕವನ್ನು ಕುರಿತು ತೆರಳಿದರು.

ಆಕಾಶಮಾರ್ಗವಾಗಿ ಸ್ವಲೋಕಕ್ಕೆ ತೆರಳುತ್ತಿರುವ ದ್ರೋಣಾಚಾರ್ಯರನ್ನು ಕೇಶವ ಪಾಂಡವರು ಕೃಪಾದಿಗಳು ಕಂಡರು. ಆಗ ಧೃಷ್ಟದ್ಯುಮ್ನನು, ಪಾಂಡವರು ತಡೆಯುತ್ತಿದ್ದರೂ ಕತ್ತಿಯನ್ನು ಹಿರಿದು ದ್ರೋಣರ ಶರೀರದ ಬಳಿಗೆ ಬಂದು ಅವರ ಶಿರಸ್ಸನ್ನು ಕತ್ತರಿಸಿ ಹಾಕಿ ಪುನಃ ತನ್ನ ರಥಕ್ಕೆ ಶೀಘ್ರವಾಗಿ ಬಂದು ಕುಳಿತನು. ಅದನ್ನು ಅವಲೋಕಿಸಿ ಕೃಪಾಚಾರ್ಯರು ಭಯಗೊಂಡು ಒಂದು ಕುದುರೆಯನ್ನೇರಿ ಪಲಾಯನ ಮಾಡಿದರು.

ಧೃಷ್ಟದ್ಯುಮ್ನನು ದ್ರೋಣರ ಶಿರಸ್ಸನ್ನು ಕತ್ತರಿಸಿದ್ದನ್ನು ಕಂಡು ಅರ್ಜುನ, ಯುಧಿಷ್ಠಿರ. ಸಾತ್ಯಕಿ ಇವರುಗಳು ಕುಪಿತರಾಗಿ ಅವನನ್ನು ನಿಂದಿಸಿದರು. ಆಗ ಧೃಷ್ಟದ್ಯುಮ್ನನು ಭೂರಿಶ್ರವನು ಹೇಗೆ ಹತನಾದನು ಹೇಳಿರಿ ಎಂದು ಕೇಳಿದನು. ಆದರಿಂದ ಮತ್ತಷ್ಟು ಕ್ರುದ್ಧರಾದ ಅರ್ಜುನನು ಮತ್ತು ಸಾತ್ಯಕಿಯ ಗದಾಪಾಣಿಯಾಗಿ ಧೃಷ್ಟದ್ಯುಮ್ನನತ್ತ ಧಾವಿಸಿದರು. ಆಗ ಖಡ್ಗವನ್ನು ಸೆಳೆದು ಸಾತ್ಯಕಿಯನ್ನು ಧೃಷ್ಟದ್ಯುಮ್ನನು ಯುದ್ಧಕ್ಕೆ ಆಹ್ವಾನಿಸಿದನು. ಆಗ ಶ್ರೀಕೃಷ್ಣನಿಂದ ಪ್ರೇರಿತನಾದ ಭೀಮಸೇನನು ಸಾತ್ಯಕಿಯನ್ನು ಯುದ್ಧ ಮಾಡದಂತೆ ತಡೆದು ನಿಲ್ಲಿಸಿದನು. ಪಾಂಚಾಲನಲ್ಲಿ ಸ್ನೇಹಬದ್ಧನಾದ ಭೀಮನು, ಅರ್ಜುನನನ್ನು ಸಮಾಧಾನಪಡಿಸಿದನು. ಆಗ ಅವರು ಶ್ರೀವಾಸುದೇವನ ಉಪದೇಶದಂತೆ ಪುನಃ ಆ ಪಾರ್ಥ, ಸಾತ್ಯಕಿ, ಧೃಷ್ಟದ್ಯುಮ್ನರು ಪೂರ್ವದಂತೆ ಸ್ನೇಹಿತರಾದರು. ಅನಂತರ ಅರ್ಜುನಾದಿಗಳು ಆಯುಧಪಾಣಿಗಳಾಗಿ ಮೇಲೆದ್ದು ನಿಂತರು.

ತನ್ನ ತಂದೆಯು ಮೃತನಾದ ವಿಚಾರ ಕೇಳಿ ಅಶ್ವತ್ಥಾಮನು ಸಮಸ್ತ ಶತ್ರುಗಳು ಒಬ್ಬರೂ ಉಳಿಯದಂತೆ ನಾಶ-ಪಡಿಸುವುದಾಗಿ ಪ್ರತಿಜ್ಞೆಮಾಡಿ ಕೋಪದಿಂದ ಪಾಂಡವರಮೇಲೆ ನಾರಾಯಣಾಸ್ತ್ರವನ್ನು ಪ್ರಯೋಗಿಸಿದನು. ಆಗ ಭೀಮ-ನೊಬ್ಬನನ್ನು ಬಿಟ್ಟು ಉಳಿದವರೆಲ್ಲರೂ ಭಯಗೊಂಡರು. ವಿಷಾದಗೊಂಡ ಧರ್ಮರಾಜನು ಸಾತ್ಯಕಿ ಮೊದಲಾದವರೆಲ್ಲರೂ

ಇಲ್ಲಿಂದ ಹೊರಟು ಹೋಗಿರಿ ಅಶ್ವತ್ಥಾಮನ ಅಸ್ತ್ರಕ್ಕೆ ನಾನು ತಲೆಯೊಡ್ಡಿ ಭಗ್ನನಾಗಿ ದಗ್ಧನಾಗುತ್ತೇನೆ ಎಂದು ಹೇಳಿದನು. ಆಗ ಶ್ರೀಕೃಷ್ಣನು ಎಲ್ಲರೂ ನಾರಾಯಣಾಸ್ತ್ರಕ್ಕೆ ನಮಸ್ಕಾರ ಮಾಡಿರಿ, ಅಂದರೆ ನೀವು ಉಳಿಯುತ್ತೀರಿ ಎಂದು ಹೇಳಲು ಅರ್ಜುನಾದಿ ಸಮಸ್ತರೂ ನಮಸ್ಕರಿಸಿದರು.

ಆದರೆ ಭೀಮಸೊಬನು ಮಾತ್ರ ನಮಸ್ಕರಿಸಲಿಲ್ಲ. ಆಗ ಆ ಅಸ್ತ್ರವು ಭೀಮನ ತಲೆಯಮೇಲೆ ಅಪ್ಪಳಿಸಿತು. ಭೀಮನು ಅಗ್ನಿಯಂತೆ ಬೆಳಗುತ್ತಾ ನಿಂತನು. ಬೆಂಕಿಯಲ್ಲಿ ಬೆಂಕಿಯಂತೆ ದಹಿಸದೆ ಭೀಮನು ನಿಂತಿರಲು ಅರ್ಜುನನು ಆ ಅಸ್ತ್ರಬಾಧೆಯ ಪರಿಹಾರಕ್ಕಾಗಿ ಭೀಮನ ಮೇಲಿನ ಸ್ನೇಹದಿಂದ ವಾರುಣಾಸ್ತ್ರವನ್ನು ಪೂಜಾರೂಪವಾಗಿ ನಾರಾಯಣಾಸ್ತ್ರವನ್ನು ಸುತ್ತಲೂ ವೇಷ್ಟನಗೊಳಿಸದನು. (ನಾರಾಯಣಾಸ್ತ್ರವನ್ನು ಸುತ್ತುಗಟ್ಟದನು)ಭೀಮನ ರಕ್ಷಣೆಗಾಗಿ ವಾರುಣಾಸ್ತ್ರದಿಂದ ಭೀಮನನ್ನು ಸುತ್ತುಗಟ್ಟಿದನೆಂದೇಕೆ ಹೇಳಬಾರದು? ಎಂದರೆ ಯದ್ಯಪಿ ಭೀಮನ ಮೇಲೆರಗಿದ ನಾರಾಯಣಾಸ್ತ್ರವನ್ನು ಹೊರಗೆ ನಾರಾ-ಯಣಾಸ್ತ್ರದಿಂದ ವೇಷ್ಟನ ಮಾಡಿದ್ದರಿಂದ ಫಲವೇನೂ ಇಲ್ಲ. ಆದರೂ ಅರ್ಜುನನು ಅಣ್ಣನ ಮೇಲಿನ ಸ್ನೇಹಾಧೀನನಾಗಿ ವಾರುಣಾಸ್ತ್ರದಿಂದ ಸುತ್ತುಗಟ್ಟಿದನು. ಇದರಿಂದ ತನ್ನ ನಾರಾಯಣಾಸ್ತ್ರದ ಅಮೋಘತ್ವವನ್ನೂ ಭೀಮನ ಅವಧ್ಯತ್ವವನ್ನೂ ಸಾಧನೆ ಮಾಡಿ ಅರ್ಜುನ ಸಹಿತನಾದ ಶ್ರೀಕೃಷ್ಣನು ಭೀಮನ ರಥವನ್ನೇರಿದನು.

ಭೀಮನ ರಥದ ಬಳಿಗೆ ಬಂದ ಅರ್ಜುನನನ್ನು ಆ ನಾರಾಯಣಾಸ್ತ್ರವು ಏಕೆ ದಹಿಸಲಿಲ್ಲ ಎಂಬುದನ್ನು ನಿರ್ಣಯಾ-ಚಾರ್ಯರು (ಆಚಾರ್ಯ ಮಧ್ವರು)ವಿವರಿಸುತ್ತಾರೆ. ನಾರಾಯಣಾಸ್ತ್ರವು ಬಹಿರ್ಭಾಗದಲ್ಲಿ ವಾರುಣಾಸ್ತ್ರದಿಂದ ಸುತ್ತ-ಲ್ಪಟ್ಟಿದ್ದಿತು. ವಾರುಣಾಸ್ತ್ರದ ಹೊರಭಾಗದಲ್ಲಿದ್ದುದರಿಂದ ಅರ್ಜುನನನ್ನು ನಾರಾಯಣಾಸ್ತ್ರವು ದಹಿಸಲಿಲ್ಲ ಮತ್ತು ಅವನು ಶ್ರೀಕೃಷ್ಣನೊಡನಿದ್ದನು. ಅರ್ಜುನನು ನರಾವೇಶಯುಕ್ತನೂ ಆಗಿದ್ದನು. ಅಂದರೆ ವಾರುಣಾಸ್ತ್ರದ ಹೊರಭಾಗ-ದಲ್ಲಿದ್ದುದರಿಂದಲೂ, ಕೃಷ್ಣನೊಡನಿದ್ದುದ್ದರಿಂದಲೂ ನಾರಾವೇಶಯುಕ್ತನಾದುದರಿಂದಲೂ ಹೀಗೆ ಈ ಮೂರು ಕಾರಣಗಳಿಂದ ನಾರಾಯಣಾಸ್ತ್ರವು ಪಾರ್ಥನನ್ನು ದಹಿಸಲಿಲ್ಲವೆಂದು ತಿಳಿಯಬೇಕು. ಕೃಷ್ಣಾರ್ಜುನರಿಂದ ಕಿತ್ತುಕೊಳ್ಳಲ್ಪಟ್ಟ ಆಯುಧಗಳುಳ್ಳ ಭೀಮಸೇನನು ರಥದಿಂದ ಇಳಿಯಲ್ಪಟ್ಟನು. ಉಳಿದ ಎಲ್ಲರೂ ರಥದಿಂದ ಇಳಿದು ನಾರಾಯಣಾಸ್ತ್ರಕ್ಕೆ ನಮಸ್ಕರಿಸಿದರೂ, ವಾರುಣಾಸ್ತ್ರದಿಂದ ಹೊರಗೆ ಸುತ್ತುವರಿಯಲ್ಪಟ್ಟ ನಾರಾಯಣಾಸ್ತ್ರವು ತನ್ನ ಜ್ವಾಲಾಮಧ್ಯ ಪ್ರವಿಷ್ಟನಾಗಿದ್ದರೂ ಭೀಮನನ್ನು ಹಿತವಾದ ಶೀತಲೋಕದಿಂದ ಮಿಶ್ರಿತವಾದ ಬಿಸಿ ನೀರಿನಂತಾಯಿತು. ಅಂದರೆ ಭೀಮನನ್ನು ದಹಿಸಲಿಲ್ಲ.

ಭೀಮಸೇನನನ್ನು ಬಿಟ್ಟು ಎಲ್ಲರೂ ನಮಸ್ಕರಿಸಿದರು, ತಾನು ಮಾತ್ರ ಏಕೆ ನಮಸ್ಕರಿಸಲಿಲ್ಲ ಎಂದರೆ ಅವನು ಶುದ್ಧ ಕ್ಷತ್ರಿಯ ಧರ್ಮದೀಕ್ಷೆ ಬದ್ಧನು. ಆಯುಧಸಹಿತನಾಗಿ ತನ್ನ ರಥದಲ್ಲಿ ಕುಳಿತಿದ್ದ ಭೀಮಸೇನನು ಬ್ರಹ್ಮಾದಿಗಳಿಂದಲೂ ಸಹಿಸ-ಲಸಾಧ್ಯವಾದ ನಾರಾಯಣಾಸ್ತ್ರದ ಬಾಧೆಯನ್ನು ಸಹಿಸಿದನು. ಅಸ್ತ್ರವು ಶಾಂತವಾಯಿತು. ಭೀಮನು ಇತರರಿಗೆ ನಾರಾ-ಯಣಾಸ್ತ್ರಕ್ಕೆ ನಮಸ್ಕರಿಸಬೇಡಿರೆಂದು ಏಕೆ ಹೇಳಿದನು? ಹಾಗೆ ಮಾಡಿದರೆ ಸ್ವಧರ್ಮಹಾನಿಯಾಗುವುದು. ಅಂದರೆ ಸ್ವಸ್ವವರ್ಣಾಶ್ರಮೋಚಿತ ಧರ್ಮತ್ಯಾಗ ಮಾಡಿ ಅಸ್ತ್ರಕ್ಕೆ ನಮಸ್ಕರಿಸಿದ ಮಿತ್ರರಿಗೆ ಹಾಗೆ ಮಾಡಬೇಡಿರಿ ಎಂದು ಹೇಳುವುದು ಭೀಮನಿಗೆ ಧರ್ಮವೇ ಆಗಿದೆ ಮತ್ತು ಅದನ್ನು ತಡೆಯುವುದು ಕರ್ತವ್ಯವು. ಆದುದರಿಂದಲೇ ಭೀಮನು ಅರ್ಜುನಾದಿ-ಗಳಿಗೂ ಅಸ್ತ್ರಕ್ಕೆ ನಮಸ್ಕಾರ ಮಾಡಬೇಡಿರಿ ಎಂದು ಹೇಳಿದನು, ತಾನೂ ನಮಸ್ಕರಿಸಲಿಲ್ಲ. ನಾರಾಯಣಾಸ್ತ್ರವು ನಮಸ್ಕಾ-ರಾರ್ಹವಾಗಿದ್ದರೂ ಯುದ್ಧದಲ್ಲಿ ಶತ್ರುವಿನಿಂದ ಬಿಡಲ್ಪಟ್ಟು, ಅಸ್ತ್ರಕ್ಕೆ ಜೀವನೇಚ್ಛೆಯಿಂದ ನಮಸ್ಕರಿಸಬಾರದು. ಆದ್ದರಿಂದಲೇ ನಮಸ್ಕರಿಸಲಿಲ್ಲವೆಂದು ತಿಳಿಯಬೇಕು ಇದೂ ಅಲ್ಲದೆ, ನಾರಾಯಣಾಸ್ತ್ರದ ಅಭಿಮಾನಿಯು ಶ್ರೀವಾಯುದೇವರು. ಅಸ್ತ್ರದ ದೇವತೆ ಶ್ರೀಹರಿಯು. ಆ ಅಸ್ತ್ರವು ಭೀಮಸ್ವರೂಪವಾದುದರಿಂದ ಅಗ್ನಿಯು ಅಗ್ನಿಯನ್ನು ಧರಿಸದಿರುವಂತೆ ಭೀಮನನ್ನು ದಹಿಸಲಿಲ್ಲ. ಭೀಮನು ಮನಸ್ಸಿನಲ್ಲಿಯೇ ಅಸ್ತ್ರಕ್ಕೂ ಶ್ರೀಹರಿಗೂ ನಮಸ್ಕರಿಸಿದನು. ಆದರೆ ಹೊರಗೆಮಾತ್ರ ನಮಸ್ಕರಿಸಲಿಲ್ಲ.

ಅನಂತ ಶಕ್ತಿಸಂಪನ್ನನಾದ ಶ್ರೀವಾಸುದೇವಕೃಷ್ಣನು ತನ್ನದಾದ ನಾರಾಯಣಾಸ್ತ್ರದ ಅಮೋಘತೆಯನ್ನೂ ಭೀಮನ ಅವಧ್ಯತೆಯನ್ನೂ ಸಾಧಿಸಿ ತೋರಿಸಿದನು. ಬಲಾತ್ಕಾರದಿಂದ ಬಿಡಲ್ಪಟ್ಟ ನಾರಾಯಣಾಸ್ತ್ರವು ಶಾಂತವಾಯಿತು. ಅನಂತರ ಶ್ರೀಕೃಷ್ಣನು ರಥವೇರಿ ಕುಳಿತು ಅಶ್ವವನ್ನು ಪ್ರಚೋದಿಸಿದನು.

ನಾರಾಯಣಾಸ್ತ್ರದಿಂದ ಪಾಂಡವರೂ ಅವರ ಸೈನ್ಯವೂ ಪಾರಾದುದನ್ನು ನೋಡಿ ದುರ್ಯೋಧನನು ಪುನಃ ನಾರಾಯಣಾಸ್ತ್ರವನ್ನು ಪಾಂಡವರ ಮೇಲೆ ಪ್ರಯೋಗಿಸುವಂತೆ ಅಶ್ವತ್ಥಾಮನನ್ನು ಪ್ರಾರ್ಥಿಸಿದನು. ಆಗ ಅಶ್ವತ್ಥಾಮನು ಅದು ಸಾಧ್ಯವಿಲ್ಲವೆಂದು ಹೇಳಿ ತನ್ನ ತಂದೆಯನ್ನು ಸಂಹರಿಸಿದ ಧೃಷ್ಟದ್ಯುಮ್ನನನ್ನು ಶಿಕ್ಷಿಸಲು ಅವನ ಬಳಿಗೆ ಯುದ್ಧಕ್ಕೆ ಸಾಗಿ ಬಂದನು. ಅಶ್ವತ್ಥಾಮನು ಬರುತ್ತಿರುವುದನ್ನು ಗಮನಿಸಿ ಸಾತ್ಯಕಿಯು ಧೃಷ್ಟದ್ಯುಮ್ನನಿಗೆ ಸಹಾಯಕನಾಗಿ ಬಂದನು. ಅವರಿಬ್ಬರು ಬಾಣಗಳಿಂದ ಯುದ್ಧಮಾಡಿ ಅಶ್ವತ್ಥಾಮನ ಬಾಣಗಳ ಪೆಟ್ಟಿನಿಂದ ಮೂರ್ಛಿತರಾದರು. ಆಗ ತನ್ನತ್ತ ಬಂದ ಭೀಮನ ರಥದ ಅಶ್ವಗಳನ್ನು ಅಶ್ವತ್ಥಾಮನು ಪೀಡಿಸಿದನು. ಭೀಮನು ಮತ್ತೆ ಅಶ್ವಗಳನ್ನು ರಥಕ್ಕೆ ಕಟ್ಟುತ್ತಿರುವಾಗ ಅರ್ಜುನನು ಅಶ್ವತ್ಥಾಮನನ್ನು ಕಂಡನು. ಅರ್ಜುನನು ಕ್ರೂರವಾಕ್ಯಗಳಿಂದ ತೆಗಳಿ ಯುದ್ಧಕ್ಕೆ ಬಂದನು. ಅದರಿಂದ ಕ್ರುದ್ಧನಾದ ಅಶ್ವತ್ಥಾಮನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಅದರಿಂದ ಪಾಂಡವರ ಸೇನೆಯು ಮುಚ್ಚಲ್ಪಟ್ಟಿತು. ಆ ಅಸ್ತ್ರದಿಂದ ಪಾಂಡವರ ಅಕ್ಷೋಹಿಣೀ ಸೈನ್ಯವು ನಾಶವಾಯಿತು. ಆಗ ಶ್ರೀಕೃಷ್ಣನು ಅರ್ಜುನನ ರಥವನ್ನು ಅಸ್ತ್ರಕ್ಕಿಂತ ಮೇಲೆ ಕೊಂಡೊಯ್ದು ಪಾರ್ಥನನ್ನು ರಕ್ಷಿಸಿದನು. ತನ್ನ ಆಗ್ನೇಯಾಸ್ತ್ರದಿಂದಲೂ ಸುರೇಂದ್ರನಂದನನಾದ ಅರ್ಜುನನು ಬದುಕಿರುವುದನ್ನು ಕಂಡು ಅಶ್ವತ್ಥಾಮನು ಧನುರ್ಬಾಣಗಳನ್ನು ತ್ಯಜಿಸಿ ರಣಭೂಮಿಯನ್ನು ಬಿಟ್ಟು ತೆರಳಿದನು.

ಆಗ ವೇದಗಳ ಅರ್ಥವನ್ನು ನಿರ್ಣಯ ಮಾಡಿದ್ದರಿಂದ 'ವೇದಾಂತಕೃತ್' ಎಂದು ವಂದ್ಯರಾದ ಸದ್ಗುಣೈಶ್ವರ್ಯ ದೇಹಿಗಳಾದ ಶ್ರೀವೇದವ್ಯಾಸದೇವರು ಅಶ್ವತ್ಥಾಮನ ಬಳಿಗೆ ಆಗಮಿಸಿ ಅಶ್ವತ್ಥಾಮಾ ನೀನು ಯುದ್ಧವನ್ನು ತ್ಯಜಿಸಿ ಹೋಗಬೇಡ. ನೀನು ಮಹಾಬಲವಂತನಾದ ರುದ್ರದೇವನ ಅಂಶಸಂಭೂತನು. ದೇವತೆಗಳ ಕಾರ್ಯಕ್ಕಾಗಿ ಭೂಮಿಯಲ್ಲಿ ಹುಟ್ಟಿರುತ್ತೀಯೇ. ನಾರಾಯಣಾಸ್ತ್ರ ಪ್ರಯೋಗರೂಪವಾದ ನಿನ್ನ ಮಹತ್ಕಾರ್ಯವನ್ನು ನೋಡಿದೆವು. ಇಂದು ಯುದ್ಧವು ಮುಗಿದಮೇಲೆ ಶಿಬಿರದಲ್ಲಿರುವ ಪಾಂಡವಸೈನ್ಯ ನಾಶರೂಪವಾದ ಮಾಡಲೇಬೇಕಾದ ಕಾರ್ಯವಿದೆ ಅದನ್ನು ನೀನು ನೆರವೇರಿಸಬೇಕು ಎಂದು ಅಪ್ಪಣೆ ಮಾಡಿದರು. ಆಗ ಅಶ್ವತ್ಥಾಮನು ವೇದವ್ಯಾಸದೇವರ ಆಣತಿಯನ್ನಾಲಿಸಿ 'ಸ್ವಾಮಿ ನಾಳೆಯ ದಿವಸ ನೀವು ಆಜ್ಞಾಪಿಸಿದ ಕಾರ್ಯವನ್ನು ಮಾಡುತ್ತೇನೆ' ಎಂದು ವಿಜ್ಞಾಪಿಸಿ ಅಖಿಲವೇದಯೋಗಿಗಳಾದ ಶ್ರೀವೇದವ್ಯಾಸದೇವರಿಗೆ ನಮಸ್ಕಾರ ಮಾಡಿ ಶಿಬಿರಕ್ಕೆ ತೆರಳಿದನು. ದುಃಖಿತರೂ ಭೀತರೂ ಆದ ದುರ್ಯೋಧನಾದಿಗಳು ತಮ್ಮ ಶಿಬಿರಕ್ಕೆ ಹೋದರು. ಪಾಂಡವರೆಲ್ಲರೂ ಸಂತೋಷಭರಿತರಾಗಿ ಶ್ರೀಜನಾರ್ದನನನ್ನೂ ಬಹುವಿಧದಿಂದ ಸ್ತೋತ್ರ ಮಾಡುತ್ತಾ ಶಿಬಿರಕ್ಕೆ ತೆರಳಿದರು. ಶಿಬಿರದಲ್ಲಿಯೂ ಸಹ ಅಂದು ರಾತ್ರಿ ಸಕಲರೂ ಒಟ್ಟಾಗಿ ಸೇರಿ ಶ್ರೀಹರಿಯ ಗುಣಗಳನ್ನು ಸ್ಮರಿಸುತ್ತಾ, ಸ್ತುತಿಸುತ್ತಾ ಹರ್ಷಗೊಂಡರು.

ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯದ "ಶ್ರೀನಾರಾಯಣಾಸ್ತ್ರೋಪಶಮನ" ವೆಂಬ
ಇಪ್ಪತ್ತಾರನೆಯ ಅಧ್ಯಾಯದ ಕಥಾಸಾರವು ಮುಗಿದುದು.

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★

# ಸಪ್ತವಿಂಶಾಧ್ಯಾಯಭಾವಸಂಗ್ರಹ

ಅವತಾರಿಕೆ:-

**ಯತ್ಸಾಮರ್ಥ್ಯಬಲೇನ ಸೂರ್ಯತನುಜೇ ಪಾರ್ಥೇನ ಯುದ್ಧೇ ಜಿತೇ**
**ಪಶ್ಚಾಚ್ಛಲ್ಯಮವಾಪ್ಯ ಸಾರಥಿವರಂ ಧರ್ಮಾತ್ಮಜಂ ಸಾಯಕೈಃ ।**
**ಶೀರ್ಣಾಂಗಂ ಕೃತವತ್ಯಮುಂ ಶಿಬಿರಗಂ ಪಾರ್ಥಂ ಚ ಮೃತ್ಯೋರಪಾತ್**
**ಯಃ ಪಾರ್ಥೇನ ಹತೇಽರ್ಕಜೇ ನೃಪನುತಃ ಪಾಯಾತ್ ಸ ನಃ ಕೇಶವಃ ।। 27 ।।**

ಅನ್ವಯಾರ್ಥ :- "ಯತ್ಸಾಮರ್ಥ್ಯಬಲೇನ" - ಇತಿ. ಯತ್ = ಯಾವ (ಶ್ರೀಕೃಷ್ಣಪರಮಾತ್ಮನ), ಸಾಮರ್ಥ್ಯಬಲೇನ = ಶಕ್ತಿಯ ಸಹಾಯದಿಂದ, ಸೂರ್ಯತನುಜೇ = ಸೂರ್ಯನ ಮಗನಾದ ಕರ್ಣನು, ಪಾರ್ಥೇನ = ಅರ್ಜುನನಿಂದ, ಜಿತೇ ಸತಿ = ಜಯಿಸಲ್ಪಟ್ಟವನಾಗಿ, ಪಶ್ಚಾತ್ = ಅನಂತರ, ಸಾರಥಿವರಂ = ಶ್ರೇಷ್ಠಸಾರಥಿಯಾದ, ಶಲ್ಯಂ = ಶಲ್ಯರಾಜನನ್ನು, ಅವಾಪ್ಯ = ಹೊಂದಿ, ಧರ್ಮಾತ್ಮಜಂ = ಧರ್ಮನಂದನನಾದ ಯುಧಿಷ್ಠಿರನನ್ನು, ಸಾಯಕೈಃ = ಬಾಣಗಳಿಂದ, ಶೀರ್ಣಾಂಗಂ = ಶಿಥಿಲವಾದ ದೇಹವುಳ್ಳವನನ್ನಾಗಿ, ಕೃತವತಿ ಸತಿ = ಮಾಡುತ್ತಿರಲು, ಯಃ = ಯಾವ ಶ್ರೀಕೃಷ್ಣನು, ಅಮುಂ = ಧರ್ಮರಾಜನನ್ನು, (ಧರ್ಮರಾಜನ ಸಂಹಾರದಲ್ಲಿ ಉದ್ಯುಕ್ತನಾದ ಅರ್ಜುನನನ್ನು ತಡೆದು), ಅಥವಾ ಅಣ್ಣನ ಸಂಹಾರದಲ್ಲಿ ಉದ್ಯುಕ್ತನಾದ್ದರಿಂದ ಉಂಟಾದ ಅಪರಾಧದಿಂದ ನೊಂದು, ಆತ್ಮಹತ್ಯೆ ಮಾಡಿಕೊಳ್ಳಲು ಉದ್ಯುಕ್ತನಾದ ಅರ್ಜುನನನ್ನು ತಡೆದು, (ಆತ್ಮಸ್ತುತಿ ಮಾಡಿಕೊಂಡಲ್ಲಿ ಆತ್ಮಹತ್ಯೆ ಮಾಡಿಕೊಂಡಂತಾಗುವುದೆಂದು ಸಮಧಾನ ಪಡಿಸಿ) ಮೃತ್ಯೋಃ = ಮರಣದಿಂದ, ಅಪಾತ್ = ಸಂರಕ್ಷಣ ಮಾಡಿದನೋ, ಯಃ = ಯಾವ ಶ್ರೀಕೃಷ್ಣನು, ಪಾರ್ಥೇನ = ಅರ್ಜುನನಿಂದ, ಅರ್ಕಜೇ = ಕರ್ಣನು, ಹತೇ ಸತಿ = ಸಂಹೃತನಾಗಲು, ನೃಪನುತಃ = ಧರ್ಮರಾಜನಿಂದ ನಮಸ್ಕೃತನಾದ, ಸಃ ಕೇಶವಃ = ಬ್ರಹ್ಮರುದ್ರಾದಿ ನಿಯಾಮಕನಾದ ಆ ಶ್ರೀಹರಿಯು (ಕೃಷ್ಣನು), ನಃ = ನಮ್ಮನ್ನು, ಪಾಯಾತ್ = ಸಂರಕ್ಷಣೆ ಮಾಡಲಿ.

ತಾತ್ಪರ್ಯ :- ಕುರುಕ್ಷೇತ್ರಯುದ್ಧದಲ್ಲಿ ಅರ್ಜುನನು ಶ್ರೀಕೃಷ್ಣಪರಮಾತ್ಮನ ಅಪರಿಮಿತ ಶಕ್ತಿಯ ಸಹಾಯದಿಂದ, ಸೂರ್ಯಸುತನಾದ ಅಂಗರಾಜ ಕರ್ಣನನ್ನು ಸೋಲಿಸಿದನು. ಆ ತರುವಾಯ ಮದ್ರದೇಶಾಧಿಪತಿಯಾದ, ಶ್ರೇಷ್ಠ ಸಾರಥಿಯಾದ ಶಲ್ಯರಾಜನನ್ನು ತನ್ನ ಸಾರಥಿಯನ್ನಾಗಿ ಪಡೆದು ಕರ್ಣನು ಧರ್ಮರಾಜನನ್ನು ಶರಾಹತಿಗಳಿಂದ ಶಿಥಿಲದೇಹವುಳ್ಳವನನ್ನಾಗಿ ಮಾಡಿದನು. ಆಗ ಧರ್ಮನಂದನನು ಶಿಬಿರಕ್ಕೆ ಆಗಮಿಸಿ ಮಲಗಿ ವಿಶ್ರಾಂತಿಯನ್ನು ಪಡೆದನು. ಆಗ ಧರ್ಮರಾಜನ ಕ್ಷೇಮಸಮಾಚಾರವನ್ನು ತಿಳಿಯಲು ಶ್ರೀಕೃಷ್ಣಾರ್ಜುನರು ಬಂದರು. ಅವರನ್ನು ನೋಡಿ, ಅರ್ಜುನನನ್ನು 'ಕರ್ಣನನ್ನು ಸೋಲಿಸಿದೆಯಾ? ಸಂಹರಿಸಿದೆಯಾ?' ಎಂದು ಪ್ರಶ್ನಿಸಲು ಪಾರ್ಥನು 'ಅಣ್ಣ ನಾನು ಖಂಡಿತವಾಗಿ ಕರ್ಣನನ್ನು ಸೋಲಿಸುತ್ತೇನೆ' ಎಂದು ಹೇಳಿದಾಗ ಯುಧಿಷ್ಠಿರನು "ಅರ್ಜುನ ! ನಿನಗೇತಕ್ಕೆ ಈ ಗಾಂಡೀವ? ಅದನ್ನು ಬಿಸುಡು" ಎಂದು ನಿಂದಿಸಿದನು. ಆಗ ಅರ್ಜುನನು ಹಿಂದೆ "ನನ್ನ ಗಾಂಡೀವವನ್ನು ಅವಹೇಳನ ಮಾಡಿದವರನ್ನು ಸಂಹರಿಸುತ್ತೇನೆ" ಎಂದು ಪ್ರತಿಜ್ಞೆಮಾಡಿದ್ದರಿಂದ, ಗಾಂಡೀವವನ್ನು ನಿಂದಿಸಿದ ಅಣ್ಣನಾದ ಧರ್ಮರಾಜನನ್ನೇ ಸಂಹರಿಸಲು ಉದ್ಯುಕ್ತನಾದನು. ಆಗ ಶ್ರೀವಾಸುದೇವನು ಧನಂಜಯನನ್ನು ತಡೆದು ಆ ದೋಷದಿಂದ ಅರ್ಜುನನನ್ನು ಮತ್ತು ಧರ್ಮರಾಜನನ್ನು ರಕ್ಷಿಸಿದನು. ಆಗ ಪಾರ್ಥನು ಅಣ್ಣನನ್ನೇ ಸಂಹರಿಸಲು ಮುಂದಾದೆನಲ್ಲಾ ಎಂದು ಕಡುನೊಂದು ಭ್ರಾತೃವಧಪ್ರಯತ್ನ ಮತ್ತು ನಿಂದನೆಯ ಅಪರಾಧ ಮಾಡಿದ್ದಕ್ಕಾಗಿ ಆತ್ಮಹತ್ಯೆ ಮಾಡಿಕೊಳ್ಳಲು ಸಿದ್ಧನಾದಾಗ ಶ್ರೀಕೃಷ್ಣನು "ಅರ್ಜುನ ! ತಡೆ, ತಡೆ, ಭ್ರಾತೃಹತ್ಯಾ

ಪ್ರಯತ್ನದಿಂದ ಅಪರಾಧವಾಯಿತೆಂದು ಭಾವಿಸುವಿಯಾದರೆ ಆತ್ಮಸ್ತುತಿಯನ್ನು ಮಾಡಿಕೋ. ಅದು ಆತ್ಮಹತ್ಯೆ ಮಾಡಿ-ಕೊಂಡಂತಾಗುವುದು", ಎಂದು ಹೇಳಿ ಅರ್ಜುನನು ಆತ್ಮಸ್ತುತಿ ಮಾಡಿಕೊಳ್ಳುವಂತೆ ಮಾಡಿ ಅರ್ಜುನನನ್ನು ಸಂರಕ್ಷಿಸಿದನು. ಹೀಗೆ ಧರ್ಮರಾಜ – ಅರ್ಜುನರಿಬ್ಬರನ್ನೂ ಮರಣದಿಂದ ಕಾಪಾಡಿದನು. ಆ ತರುವಾಯ ಅರ್ಜುನನು ಯುದ್ಧದಲ್ಲಿ ಕರ್ಣನನ್ನು ಸಂಹರಿಸಿದನು. ಆದರಿಂದ ಪರಮಾನಂದಭರಿತನಾದ ಧರ್ಮರಾಜನು ಶ್ರೀಕೃಷ್ಣಪರಮಾತ್ಮನನ್ನು ಸ್ತುತಿಸಿದನು. ಇಂತಹ ಭಗವಾನ್ ಶ್ರೀಕೃಷ್ಣನು ನಮ್ಮನ್ನು ಕಾಪಾಡಲಿ ಎಂದು ಭಾವ.

## ಇಪ್ಪತ್ತೆಳನೆಯ ಅಧ್ಯಾಯದ ಕಥಾಸಾರವು

ಆಚಾರ್ಯ ದ್ರೋಣರು ಪರಲೋಕವಾಸಿಗಳಾದ ಮೇಲೆ ಕುರುಪತಿಯಾದ ದುರ್ಯೋಧನನು ಅಶ್ವತ್ಥಾಮನ ಅನುಮತಿಯನ್ನು ಪಡೆದು ಅಂಗರಾಜ ಕರ್ಣನನ್ನು ಕೌರವಸೈನ್ಯದ ಮಹಾಸೈನ್ಯಾಧಿಪತಿಯನ್ನಾಗಿ ನಿಯಮಿಸಿ ಗೌರವಿಸಿದನು. ಕರ್ಣನು ಕವಚಬದ್ಧನಾಗಿ ರಣರಂಗಕ್ಕೆ ಯುದ್ಧಮಾಡಲು ತೆರಳಿದನು. ಪಾಂಡುಪುತ್ರರಿಗೂ ಕೌರವರಿಗೂ ಅತಿದಾರುಣವಾದ ಕದನವೇರ್ಪಟ್ಟಿತು. ಆ ಯುದ್ಧದ ಮಧ್ಯದಲ್ಲಿ ಉದಯಪರ್ವತಸದೃಶವಾದ ಶ್ರೇಷ್ಠ ಗಜದ ಮೇಲೆ ಕುಳಿತು ಅತಿ ನಿರ್ಮಲನು, ಅಂದರೆ ಯುದ್ಧದಲ್ಲಿ ರಕ್ತಲೇಪ ವ್ರಣಾದಿಗಳಿಲ್ಲದ ಅಥವಾ ಕುಲಕ್ಷಯಾದಿದೋಷರಹಿತನಾದ ವಾಯು-ಕುಮಾರ ಭೀಮಸೇನನು ಉದಯಿಸುತ್ತಿರುವ ಭಾಸ್ಕರನಂತೆ ದೇದೀಪ್ಯಮಾನನಾಗಿದ್ದನು. ಅವನನ್ನು ಸಕಲರೂ ಅವಲೋಕಿಸಿದರು. ಯುದ್ಧದಲ್ಲಿ ಎಲ್ಲರನ್ನೂ ಪೀಡಿಸುತ್ತಿರುವ ಭೀಮಸೇನನ ಬಳಿಗೆ ಬಂದ ಕ್ಷೇಮಧೂರ್ತಿಯು ಭೀಮನ ಆನೆಯನ್ನು ಯಮಸದನಕ್ಕಟ್ಟಿದನು. ಇಂತು ವೀರ್ಯವತ್ತನಾದ ಕ್ಷೇಮಧೂರ್ತಿಯನ್ನು ಪವನನಂದನನು ಮೃತ್ಯುವಿಗೆ ಆಹಾರವಾಗಿ ನೀಡಿದನು. ಭೀಮನು ಶತ್ರುಪಕ್ಷಪಾತಿಗಳಾದ ತರುಣರ ಶಿರಗಳನ್ನು ತರಿದು ನಾಯಿನರಿಗಳನ್ನೋಪಾದಿಯಲ್ಲಿ ವಿಕ್ಷೋಭಗೊಳಿಸಿದನು.

ಹೀಗೆ ಧಾರ್ತರಾಷ್ಟ್ರರ ಸೈನ್ಯವನ್ನು ಮಥನಗೊಳಿಸುತ್ತಿರುವ ಭೀಮನನ್ನು ನೋಡಿ ಅಶ್ವತ್ಥಾಮನು ಅವನ ಮೇಲೆ ಯುದ್ಧಕ್ಕೆ ಬಂದನು. ಆಗ ಅವರಿಬ್ಬರಲ್ಲಿ ಕದನವಾಯಿತು. ಆ ಕದನವು ಅತಿಭಯಾನಕವೂ ಆಶ್ಚರ್ಯಕರವೂ ಆಗಿದ್ದುದಲ್ಲದೆ ಅಪೂರ್ವವಾಗಿದ್ದಿತು. ಅಂದರೆ ಹಿಂದೆಂದೂ ಎಲ್ಲೂ ನಡೆಯದಿರುವ ರೀತಿಯಲ್ಲಿದ್ದಿತು. ಆಗ ದೇವತೆಗಳು ಗಂಧರ್ವರು ಬ್ರಾಹ್ಮಣರೂ ಸಹ ಈ ರೀತಿಯ ಕದನವನ್ನು ಉಭಯ ಪಕ್ಷಗಳ ಪೂರ್ವಿಕರಾದ ಕುಲವೃದ್ಧರೂ ನೋಡಿರಲಿಲ್ಲವೆಂದರೆ ಆಶ್ಚರ್ಯವಾಗದು. ಇಂತಿದ್ದಿತು, ಭೀಮಾಶ್ವತ್ಥಾಮರ ಕದನವೈಖರಿ! ಅಂತಹ ಷೋಡಶಕಲೆಗಳಿಂದ ಪೂರ್ಣವಾದ ಯುದ್ಧವನ್ನು ಕಾಣುವುದು ಅಸದಳವು.

ಭೀಮ ಅಶ್ವತ್ಥಾಮರಂತಹ ಜ್ಞಾನ-ಬಲ-ಪೂರ್ಣರಾದವರನ್ನು ಕಾಣುವುದು ದುರ್ಲಭವು. ಒಂದೇ ಕಡೆ ಮಹಾಜ್ಞಾನ ಮತ್ತು ಸಾಮರ್ಥ್ಯವುಳ್ಳವರೆಂದರೆ ಪವಮಾನಪುತ್ರರಾದ ಭೀಮಸೇನದೇವರು ಮತ್ತು ರುದ್ರದೇವರನ್ನು ಬಿಟ್ಟರೆ ಇಲ್ಲವೆಂದು ತಾತ್ಪರ್ಯ. ವಾಯುದೇವರ ಅವತಾರರಾದ ಭೀಮಸೇನದೇವರು ಶ್ರೀರುದ್ರದೇವರ ಅಂಶದಿಂದ ಅವತರಿಸಿದ ಅಶ್ವತ್ಥಾಮಾ-ಚಾರ್ಯರು ಇವರಿಬ್ಬರೂ ಮತ್ತಾರಲ್ಲೂ ಕಾಣಲಾಗದ ಮಹಾಜ್ಞಾನಸಂಪತ್ತು ಅಸದೃಶ ಪರಾಕ್ರಮಸಂಪತ್ತು ಇವೆರಡರಿಂದಲೂ ಪೂರ್ಣರಾಗಿದ್ದವರು ಅವರು ಎಂದು ಭಾವ. ಅವರೀರ್ವರ ಯುದ್ಧವೈಖರಿಯಿಂದ ಅಲ್ಲಿದ್ದವರೆಲ್ಲ ಪ್ರೀತರಾದರು.

ಉತ್ತಮ ಓಜಸ್ವಿಗಳಾದ ಭೀಮಸೇನ-ದ್ರೌಣಿಗಳು, ಅಲ್ಲಿದ್ದ ವಿಬುಧರು ಪ್ರಶಂಸಿಸುತ್ತಿರಲು ಎಡಬಿಡದೆ ಬಾಣ ಪ್ರಯೋಗದಿಂದ ಆಕಾಶ ಅವಕಾಶರಹಿತವನ್ನಾಗಿ ಮಾಡಿದರು. ಅಶ್ವತ್ಥಾಮನ ಬಾಣಗಳನ್ನು ಪರಿಹರಿಸಿಕೊಳ್ಳುತ್ತಿರುವುದನ್ನು ಕಂಡು ದ್ರೌಣಿಯು ಭೀಮಸೇನನ ಮೇಲೆ ಮಹಾಸ್ತ್ರಗಳನ್ನು ಬಿಟ್ಟರು. ಧನುಸ್ಸಿನ ಅಪೇಕ್ಷೆಯಿಲ್ಲದ ಪ್ರಚಂಡ ಬಲಶಾಲಿಯಾದ

ವಾಯುಪುತ್ರ ಭೀಮಸೇನನು ಶಕ್ತ್ಯಾಯುಧ, ಪ್ರಾಸ, ಅಸಿ, ಪರಿಘ, ಶತಘ್ನ ಮುಂತಾದ ಮಂತ್ರಪೂರ್ವಕವಾದ ಶಸ್ತ್ರಗಳನ್ನೇ ಅಸ್ತ್ರಗಳನ್ನಾಗಿ ಮಾಡಿ ಅವುಗಳ ಪ್ರಯೋಗದಿಂದ ಅಶ್ವತ್ಥಾಮನ ಎಲ್ಲ ಮಹಾಸ್ತ್ರಗಳನ್ನೂ ಶಾಂತಗೊಳಿಸಿದನು. ಆಗ ಪುನಃ ಭೀಮಾಶ್ವತ್ಥಾಮರು ಬಾಣಗಳಿಂದಲೇ ಆಶ್ಚರ್ಯಕರವಾಗಿ ಕೌಶಲದಿಂದ ಯುದ್ಧ ಮಾಡಿದರು. ಆಗ ಭೀಮನ ಬಾಣಗಳ ಹೊಡೆತದಿಂದ ಅಶ್ವತ್ಥಾಮನು ಕಡುನೊಂದು ಮೂರ್ಛಿತನಾಗಿ ಬಿದ್ದನು. ಭೀಮನು, ಅಶ್ವತ್ಥಾಮನು ದೃಢಮೂರ್ಛೆ ಹೊಂದಲು ಪ್ರಥಮತಃ ಚಂಚಲಿತ ಶರೀರನಾಗಿ ಕೂಡಲೆ ದೃಢನಾಗಿ ಯುದ್ಧಶ್ರಮಪರಿಹೃತನಾಗಿ ಧನುವನ್ನು ಹಿಡಿದು ಶಬ್ದಾಯಮಾನ ಧನುವಿನ ಠೇಂಕಾರ ಮಾಡುತ್ತಾ ಗಜಗಳನ್ನು ನಾಶಪಡಿಸಲು ಚೇಷ್ಟೆಸಿದನು. ಭೀಮನು ಗಜಸಮೂಹವನ್ನು ಮರ್ದಿಸುತ್ತಿರಲು, ಇತ್ತ ದುರ್ಯೋಧನನು ಧರ್ಮರಾಜನ ಮೇಲೆ ಯುದ್ಧಕ್ಕೆ ಬಂದನು. ಆಗ ಧರ್ಮಜನು ಸುಯೋಧನನನ್ನು ವಿರಥಗೊಳಿಸಲು, ಅವನು ಮಹಾಗದಾಧಾರಿಯಾಗಿ ನಿಂತನು. ಆಗ ಗದಾಪಾಣಿಯಾದ ಭೀಮನು ಕೌರವರತ್ತ ಧಾವಿಸಿದನು. ಆಗ ಕೃಪಾಚಾರ್ಯರು ದುರ್ಯೋಧನನನ್ನು ತಮ್ಮ ರಥದಲ್ಲಿ ಕೂಡಿಸಿಕೊಂಡು ಅಲ್ಲಿಂದ ಹೊರಟುಹೋದರು. ಅದೇ ಸಮಯದಲ್ಲಿ ಕರ್ಣ-ನಕುಲರು ಶರಗಳಿಂದ ಕಾದಾಡಿದರು. ಕರ್ಣನು ನಕುಲನ ರಥವನ್ನು ನಾಶಪಡಿಸಿ, ಅವನು ಓಡುತ್ತಿರುವಾಗ ನಕುಲನನ್ನು ಹಿಂಬಾಲಿಸಿ ನಕುಲನ ಕುತ್ತಿಗೆಯ ಮೇಲೆ ಧನುಸ್ಸಿನಿಂದ ಹೊಡೆದು ಘಾಸಿಗೊಳಿಸಿದನು. ಆದರೆ ಕುಂತೀದೇವಿಗಿತ್ತ ವಚನದಂತೆ ಅವನನ್ನು ಸಂಹರಿಸದೆ ಕ್ರೂರವಚನಗಳಿಂದ ನಕುಲನನ್ನು ನಿಂದಿಸಿ ಬೇರೊಂದೆಡೆಗೆ ಯುದ್ಧಕ್ಕೆ ಹೋದನು.

ಆಗ ಕೈಕೇಯದೇಶೀಯರಾದ ವಿಂದ-ಅನುವಿಂದರು ಯುದ್ಧಕ್ಕೆ ಬರಲು ಸಾತ್ಯಕಿಯು ಅವರಿಬ್ಬರೊಡನೆಯೂ ಶರವರ್ಷ ಮಾಡುತ್ತಾ ಹೋರಾಡಿದರು. ವಿಂದಾನುವಿಂದರು ಸಾತ್ಯಕಿಯನ್ನು ತಡೆಯಲು ಅವನು ತತ್ಕ್ಷಣವೇ ಅನುವಿಂದನ ಶಿರಸ್ಸನ್ನು ಕತ್ತರಿಸಿ ಹಾಕಿದನು. ಆಗ ವಿಂದನು ಅವನೊಡನೆ ಕಾದಾಡಿದನು. ಇಂತು ಹೋರಾಡುತ್ತಿದ್ದ ಅವರು ರಥಹೀನರಾದರು. ನಂತರ ಶ್ರೇಷ್ಠ ಖಡ್ಗಗಳಿಂದ ಕಾದಾಡುತ್ತಾ ಒಬ್ಬರನ್ನೊಬ್ಬರು ಸಾಯಿಸಲು ಹತ್ತಿರವಾದರು. ಆ ಸಮಯದಲ್ಲಿ ಸಾತ್ಯಕಿಯು ತಲಹಸ್ತದಿಂದ ಕುಂಡಲವಿರಾಜಿತವಾದ ವಿಂದನ ಶಿರಸ್ಸನ್ನು ತರಿದನು. ಇಂತು ಅವರೀರ್ವರನ್ನೂ ಸಂಹರಿಸಿ ಬಂದ ಶೈನೇಯನನ್ನು ಜನರು ಹೊಗಳಿದರು. ಮತ್ತೆ ಸಾತ್ಯಕಿಯು ಇತರ ರಿಪುಗಳನ್ನು ನಡುಗಿಸಿದನು. ಆಗ ಕೃಪಾಚಾರ್ಯರು ಧೃಷ್ಟದ್ಯುಮ್ನನತ್ತ ಸಾಗಿ ಬರುವುದನ್ನು ಕಂಡು ಧೃಷ್ಟದ್ಯುಮ್ನನು ತಪಸ್ವಿಗಳಾದ ಅವರು ತನ್ನನ್ನು ಪೀಡಿಸಬಹುದೆಂದಾಶಂಕಿಸಿ ಭೀಮಸೇನನಿಗೆ ಶರಣು ಹೋದನು. ಅತ್ತ ತಮ್ಮ ಸೈನ್ಯವನ್ನೆಲ್ಲಾ ಪೀಡಿಸುತ್ತಿರುವ ಕರ್ಣನನ್ನು ನೋಡಿ ಅರ್ಜುನನು ಅವನತ್ತ ಬಂದು ಅವನ ರಥವನ್ನು ನಾಶಪಡಿಸಿದನು. ಆಗ ಕರ್ಣನು ತನ್ನ ಸೈನ್ಯವನ್ನು ಹಿಂದೆ ತೆಗೆದುಕೊಂಡು ಯುದ್ಧದಲ್ಲಿ ಇಂದ್ರಸುತನಿಂದ ಪರಾಜಿತನಾದ ಅಂಗರಾಜ ಕರ್ಣನು ಸುಯೋಧನನ ಬಳಿಗೆ ಬಂದು ಅವನ ಭುಜದ ಮೇಲೆ ಕೈ ಹಾಕಿ ಬೇರೊಂದೆಡೆಗೆ ಕರೆದೊಯ್ದು "ಮಿತ್ರ ! ನಾನು ಅನ್ಯಮನಸ್ಕನಾಗಿರುವಾಗ ಪಾರ್ಥನು ನನ್ನನ್ನು ಜಯಿಸಿದನು. ರಾಜನ್! ಶ್ರೀಪರಶುರಾಮರು ನನಗೆ ಶ್ರೇಷ್ಠವೂ ಅಭೇದ್ಯವೂ ಆದ ರಥವನ್ನು, ಧನುಸ್ಸನ್ನು ಕೊಟ್ಟಿದ್ದಾರೆ. ಆದರೆ ಕೃಷ್ಣನಂತೆ ರಥವನ್ನು ನಡೆಸುವ ಶ್ರೇಷ್ಠ ಸಾರಥಿಯು ನನಗಿಲ್ಲ. ಆದುದರಿಂದ ನಾನು ಚಿಂತಿತನಾಗಿದ್ದೇನೆ. ನೀನು ಶ್ರೇಷ್ಠ ಸಾರಥಿಯಾದ ಶಲ್ಯನನ್ನು ನನ್ನ ಸಾರಥಿಯನ್ನಾಗಿ ಮಾಡಿಕೊಟ್ಟಲ್ಲಿ ಶತ್ರುವನ್ನು ನಿಶ್ಚಯವಾಗಿ ಸಂಹರಿಸುತ್ತೇನೆ" ಎಂದು ಹೇಳಿದನು.

ದುರ್ಯೋಧನನು ಶಲ್ಯರಾಜನನ್ನು ಕರೆದು "ನೀನು ಕರ್ಣನಿಗೆ ಸಾರಥಿಯಾಗಬೇಕು" ಎಂದು ಕೋರಿದನು. ಆದರಿಂದ ಶಲ್ಯನು ಕೋಪಗೊಂಡನು. ಆಗ ದುರ್ಯೋಧನನು ಶಲ್ಯನ ಮನ ಒಲಿಸುತ್ತಾ ರಥಿಕ ಮತ್ತು ಸಾರಥಿಗಳ ವೈಶಿಷ್ಟ್ಯವನ್ನು ಅವನಿಗೆ ತಿಳಿಸುತ್ತಾ - "ಅಂಗರಾಜ! ಬುದ್ಧಿ-ಬಲ-ಜ್ಞಾನ-ವೈರಾಗ್ಯಾದಿಗಳಲ್ಲಿ ರಥಿಕನಿಗಿಂತ ಶ್ರೇಷ್ಠರಾದವರೇ

ಸಾರಥಿಗಳಾಗಬೇಕು. ಅಂದರೇ ಆಗ ವಿಜಯವು ಸುಲಭವಾಗುವುದು. ಈಗ ನೋಡು, ಶ್ರೀಕೃಷ್ಣನು ಅರ್ಜುನನಿಗೆ ಸಾರಥಿಯಾಗಿಲ್ಲವೇ? ಹಿಂದೆ ತ್ರಿಪುರಾಸುರರೊಡನೆ ಯುದ್ಧವಾದಾಗ ಶ್ರೀಬ್ರಹ್ಮದೇವನು ರುದ್ರದೇವನಿಗೆ ಸಾರಥಿಯಾಗಿರಲಿಲ್ಲವೇ? ನೀನು ಶ್ರೀಕೃಷ್ಣನಿಗೆ ಸರಿಸಮನಾದವನಾಗಿದ್ದೀಯೇ. ಆದ್ದರಿಂದ ನನ್ನ ಹಿತಕ್ಕಾಗಿ ನೀನು ಕರ್ಣನಿಗೆ ಸಾರಥಿಯಾದಲ್ಲಿ ನಮಗೆ ಖಂಡಿತ ವಿಜಯವಾಗುವುದು'' ಮುಂತಾಗಿ ಶಲ್ಯನನ್ನು ಹೊಗಳಿ ಅವನು ಸಾರಥಿಯಾಗಲು ಒಪ್ಪುವಂತೆ ಮಾಡಿದನು.

ಹೀಗೆ ಕರ್ಣನು ಶಲ್ಯರಾಜನು ತನಗೆ ಸಾರಥಿಯಾಗಿರಲು ಅತಿ ಗರ್ವದಿಂದ ಯುದ್ಧಭೂಮಿಗೆ ತೆರಳಿ ''ಯಾರು ನನಗೆ ಅರ್ಜುನನನ್ನು ತೋರಿಸುವರೋ ಅವರಿಗೆ ಪ್ರೀತನಾದ ನಾನು ಹೇರಳ ಧನವನ್ನು ಕೊಡುವೆನು'' ಎಂದು ಅನೇಕ ಬಾರಿ ಹೇಳಿದನು. ಕರ್ಣನ ವಚನವನ್ನಾಲಿಸಿ ಶಲ್ಯನು ನಗುತ್ತಾ ''ಅಯ್ಯಾ ಕರ್ಣ! ಜಗತ್ಪ್ರಸಿದ್ಧರಾದ ನಿವಾತಕವಚರೆಂಬ ರಾಕ್ಷಸರನ್ನು ಅಗಾಧ ಸೈನ್ಯಸಹಿತವಾಗಿ ಯಾರು ಸಂಹಾರ ಮಾಡಿದನೋ, ಯಾವನು ಖಾಂಡವವನವನ್ನು ಸಂಪೂರ್ಣವಾಗಿ ನಾಶಪಡಿಸಿದನೋ (ದಗ್ಧಗೊಳಿಸಿದನೋ) ಅಂತಹ ತ್ರಿಲೋಕವಿಜಯಿಯೂ ವೀರಾಗ್ರಣಿಯೂ ಆದ ಅರ್ಜುನನನ್ನು ಅದ್ಯಾವ ಮಾನವನು ತಾನೇ ಜಯಿಸಲು ಸಾಧ್ಯ? ನಿನ್ನ ಪೌರುಷವೆಷ್ಟೆಂಬುದು ಜಗತ್ತಿಗೇ ಗೊತ್ತಿದೆ. ನಿನ್ನ ಸಾಮರ್ಥ್ಯವೆಷ್ಟೆಂಬುದನ್ನು ವೀರ ಪಾರ್ಥನು ಗೋಗ್ರಹಣ ಸಂದರ್ಭದಲ್ಲಿ ತೋರಿಸಿ ಕೊಟ್ಟಿದ್ದಾನಲ್ಲವೆ ? ಕಾಗೆ-ನರಿಗಳ ಧರ್ಮವುಳ್ಳ ನೀನು ಹಂಸ ಮತ್ತು ಸಿಂಹಸದೃಶನಾದ ಅರ್ಜುನನ ಬಳಿಗೆ ಯುದ್ಧಕ್ಕೆ ಹೋಗಬೇಡ ! ಮತ್ತು ಅವನಿಂದ ಮೃತನಾಗಿ ಯಮರಾಜನಿಗೆ ಆಹಾರವಾಗಬೇಡ !'' ಎಂದು ಹಂಗಿಸಿ ಹೇಳಿದನು. ಆಗ ಅಂಗರಾಜ ಕರ್ಣನು ಪ್ರಬುದ್ಧನಾಗಿ ಮದ್ರದೇಶೀಯರನ್ನು ಕಟುವಾಗಿ ನಿಂದಿಸಲು ಶಲ್ಯರಾಜನು ''ಕರ್ಣ! ಎಲ್ಲ ದೇಶಗಳಲ್ಲಿಯೂ ಉತ್ತಮರು ಮಧ್ಯಮರು ನೀಚರಾದ ಮನುಷ್ಯರು ಇದ್ದೇ ಇರುತ್ತಾರೆ'' ಎಂದು ಹೇಳಿ ಅರ್ಜುನನ ಹಿತೇಚ್ಛೆಯಿಂದ ಅಂದರೆ ಕರ್ಣನ ಮೇಲೆ ಅರ್ಜುನನಿಗೆ ವಿಜಯವಾಗಬೇಕೆಂಬ ಆಕಾಂಕ್ಷೆಯಿಂದ ಕರ್ಣನ ರಥದ ಸಾರಥ್ಯ ಮಾಡಿದನು.

ಇಂತು ಶಲ್ಯನಿಂದ ಪ್ರಚೋದಿತನಾಗಿ ಅವಹೇಳನ ಮಾಡಿಸಿಕೊಂಡ ಕರ್ಣನು ,ದುರ್ಯೋಧನ, ಕೃಪಾಚಾರ್ಯ, ಮತ್ತು ಮಹಾಸ್ತ್ರವಿಶಾರದನಾದ ಅಶ್ವತ್ಥಾಮರಿಂದ ಸಂರಕ್ಷಿತನಾಗಿ ಭೀಮಸೇನ, ಧೃಷ್ಟದ್ಯುಮ್ನ, ಸಾತ್ಯಕಿಗಳಿಂದ ಸಂರಕ್ಷಿತವಾದ ಪಾಂಡವಸೈನ್ಯದ ಮೇಲೆ ಮಾರ್ಗಣಗಳಿಂದ ಮಳೆಗರೆದನು. ಸೈನ್ಯವನ್ನು ಭೇದಿಸಿ ಧರ್ಮರಾಜನನ್ನು ನೂರು ಬಾಣಗಳಿಂದ ನೋಯಿಸಿ ಅವನ ರಥ, ಧನುವನ್ನು ನಾಶಪಡಿಸಿ, ಧರ್ಮಜನ ಕಂಠದಲ್ಲಿ ಧನುವಿಟ್ಟು ''ಧರ್ಮನಂದನ ! ನಿಮ್ಮ ರಕ್ಷಕನಾದ ಕೃಷ್ಣನೆಲ್ಲಿದ್ದಾನೆ? ಈಗ ಅವನು ನಿನ್ನನ್ನು ರಕ್ಷಿಸುವನೇ?'' ಎಂದು ಕಟು ವಚನಗಳಿಂದ ಯುಧಿಷ್ಠಿರನನ್ನು ನಿಂದಿಸಿದನು. ಅದನ್ನು ಕಂಡು ಭೀಮನು ದುರ್ಯೋಧನನ ರಥ-ಧನುಸ್ಸುಗಳನ್ನು ನಾಶಪಡಿಸಿ ಅವನನ್ನು ಬಹುವಾಗಿ ಪೀಡಿಸಿ ಅವನಿಗೆ ಪ್ರಾಣಸಂಕಟವಾಗುವಂತೆ ಮಾಡಿದನು. ಭೀಮಸೇನನು ಅಣ್ಣನನ್ನು ಬಿಡಿಸಲು ಹೋಗದೆ ದುರ್ಯೋಧನನು ಪ್ರಾಣಸಂಕಟದಲ್ಲಿರುವುದನ್ನು ಕಂಡು ಕರ್ಣನು ತಾನಾಗಿ ಧರ್ಮರಾಜನನ್ನು ಬಿಟ್ಟು ಸುಯೋಧನನ ರಕ್ಷಣೆಗೆ ಧಾವಿಸುವನೆಂದು ಅರಿತು ಹಾಗೆ ಮಾಡಿದನು. ಅದನ್ನು ಅವಲೋಕಿಸಿದ ಶಲ್ಯನು ''ಕರ್ಣ ! ಈ ಯುದ್ಧ, ನೀನು, ಈ ಅಗಾಧ ಸೈನ್ಯ, ಇವೆಲ್ಲ ಯಾರ ಉದ್ದಿಶ್ಯ, ಯಾರಿಗಾಗಿ ಜರುಗುತ್ತಿದೆಯೋ ಅಂಥ ನಿನ್ನ ದೊರೆ ಯಮಸದನಕ್ಕೆ ತೆರಳಲಿದ್ದಾನೆ! ನೀನು ಯಾರಿಗಾಗಿ ಇಷ್ಟು ಸೈನ್ಯಗಳನ್ನು ನಾಶಪಡಿಸುತ್ತಾ ಹೋರಾಡುತ್ತಿರುವೆಯೋ ಅಂತಹ ನಿನ್ನ ಪ್ರಭುವಾದ ದುರ್ಯೋಧನನನ್ನು ಭೀಮಸೇನನು ಯಮಾಲಯಕ್ಕೆ ಕಳಿಸಲು ಯತ್ನಿಸಿದ್ದಾನೆ. ನಿನ್ನ ಮಹಾರಾಜನು ಮೃತನಾದ ಮೇಲೆ ಯಾರಿಗಾಗಿ ಯುದ್ಧ ಮಾಡುವೆ? ಧರ್ಮಜನನ್ನು ಸಂಹರಿಸಿ ನೀನು ಸಾಧಿಸುವುದಾದರೂ ಏನು? ಮೊದಲು ನೀನು ಬೇಗ ದುರ್ಯೋಧನನನ್ನು ಭೀಮನ ಪೀಡೆಯಿಂದ ಬಿಡಿಸಿ ಕಾಪಾಡು'' ಎಂದನು. ಆಗ ಅಂಗರಾಜನು ಧರ್ಮರಾಜನನ್ನು ಬಿಟ್ಟು ಸುಯೋಧನನ ರಕ್ಷಣೆಗಾಗಿ ಹೋದನು.

ಆಗ ಅಪರಿಮಿತ ಪರಾಕ್ರಮಿಯಾದ ಪವನನಂದನನು ಕರ್ಣನನ್ನು ಕಂಡೊಡನೆಯೇ ಕಡುಕೋಪದಿಂದ ಅವನನ್ನು ದಹಿಸಲಿಚ್ಛಿಸುವವನಂತೆ ಕರ್ಣನತ್ತ ಧಾವಿಸಿದನು. ಅದು ಹೇಗಿತ್ತೆಂದರೆ – ಮಹಾಪ್ರಲಯಕಾಲದಲ್ಲಿ ಸಮಸ್ತ ಪ್ರಪಂಚವನ್ನು ಭಕ್ಷಿಸಿದ ರುದ್ರದೇವನನ್ನು ನುಂಗುವ ಕಾಲಯಮನಾದ ನರಸಿಂಹಸ್ವರೂಪನಾದ ಶ್ರೀವಿಷ್ಣುವಿನ ರೂಪವೆಂತಿರುವುದೋ ಅಂತಹ ಮಹಾರೌದ್ರರೂಪ ತಾಳಿರುವ ಭೀಮಸೇನನು ಕರ್ಣನತ್ತ ಹೊರಟನು. ಆ ಭೀಮನ ಗಮನವೇಗದಿಂದ ಸಕಲ ಜಗತ್ತೂ ಶತ್ರುಸೈನ್ಯವೂ ಗಡಗಡನೆ ಕಂಪಿಸಿತು. ಕರ್ಣನು ಶರಗಳಿಂದ ಭೀಮನನ್ನು ಪೀಡಿಸಿ ಶ್ರೀಕೃಷ್ಣನನ್ನು ನಿಂದಿಸಿದನು. ಆಗ ಭೀಮನು ವಜ್ರಸದೃಶವಾದ ಬಾಣವನ್ನು ಕರ್ಣನ ಮೇಲೆ ಪ್ರಯೋಗಿಸಿದನು. ಆದರಿಂದ ಬಹಳ ಪೀಡಿತನಾದ ಕರ್ಣನು ಸತ್ತವನಂತೆ ಧರೆಗುರುಳಿದನು. ಭೀಮನು ತೀಕ್ಷ್ಣವಾದ ಖಡ್ಗವನ್ನು ಹಿಡಿದು ಅವನ ಬಳಿಗೆ ಹೋದನು.

ಭೀಮಸೇನನು ಕತ್ತಿಯನ್ನು ಹಿಡಿದು ಕರ್ಣನ ಬಳಿಗೆ ಏಕೆ ಭರದಿಂದ ಹೋದನೆಂಬುದನ್ನು ಶ್ರೀನಿರ್ಣಯಾ-ಚಾರ್ಯರು ಈಗ ವಿವರಿಸುವರು– ಭೀಮನು "ಶ್ರೀಹರಿನಿಂದೆಯನ್ನು, ಹರಿಭಕ್ತರ ನಿಂದೆಯನ್ನು ಪ್ರತ್ಯಕ್ಷವಾಗಲಿ, ಪರೋಕ್ಷ-ವಾಗಲಿ ಯಾರು ಮಾಡುವರೋ ಅಂಥವರ ನಾಲಿಗೆಯನ್ನು ಕತ್ತರಿಸಿ ಹಾಕುವೆನು" ಎಂದು ಪ್ರತಿಜ್ಞಾಬದ್ಧನಾಗಿರುವನು. ಭೀಮಸೇನನು ಸರ್ವಜೀವನಿಯಾಮಕನಾದ ವಾಯುದೇವನು. ಆದ್ದರಿಂದಲೂ ಶ್ರೀಹರಿಯ ಏಕಾಂತಭಕ್ತನಾದ್ದರಿಂದ ಕರ್ಣನು ಧರ್ಮರಾಜನನ್ನು ಪರುಷವಚನದಿಂದ ಅಂದರೆ "ನಿಮ್ಮ ಕೃಷ್ಣನು ಈಗೆಲ್ಲಿದ್ದಾನೆ? ನಿನ್ನನ್ನು ಈಗ ರಕ್ಷಿಸುವನೇ?" ಎಂದು ಪರೋಕ್ಷವಾಗಿ ನಿಂದಿಸಿದ್ದನ್ನು ಸರ್ವಜೀವನಿಯಾಮಕನಾದ ಭೀಮನು ಅರಿತನು. ಇದೆಲ್ಲ ಏಕಾಂತಭಕ್ತರಿಗೆ ಪರುಷ-ವಚನವು. "ಜೀವಾಭೇದೋ ನಿರ್ಗುಣತ್ವಂ ಅಪೂರ್ಣಗುಣತಾ ತಥಾ । ಸಮಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ । ಪ್ರಾದುರ್ಭಾವವಿಪರ್ಯಾಸದ್ಭಕ್ತದ್ವೇಷ ಏವ ಚ । ತತ್ಪ್ರಾಮಾಣ್ಯಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ ॥" ಎಂಬ ವಚನದಂತೆ ಪರವೈಷ್ಣವನಾದ ತನ್ನ ಅಣ್ಣನನ್ನು ನಿಂದಿಸಿದ್ದರಿಂದಲೂ "ಮಮ ಪ್ರಾಣಾ ಹಿ ಪಾಂಡವಾಃ" ಎಂಬ ಶ್ರೀಕೃಷ್ಣನ ವಾಕ್ಯವು ಸುಳ್ಳೆಂದು ತಿಳಿಸಲು ಕರ್ಣನು ಈಗ ನಿಮ್ಮ ರಕ್ಷಕನಾದ ಕೃಷ್ಣನೆಲ್ಲಿ ? ಎಂದು ನಿಂದಿಸಿದ್ದರಿಂದ ಅದು ಶ್ರೀಹರಿಯ ನಿಂದೆಯೇ ಆದ್ದರಿಂದ ಹೀಗೆ ಉಭಯವಿಧದಿಂದಲೂ ವಿಷ್ಣುನಿಂದೆಯನ್ನು ಕರ್ಣನು ಮಾಡಿದ್ದರಿಂದ ಭೀಮಸೇನನು ಕರ್ಣನ ನಾಲಿಗೆಯನ್ನು ಕತ್ತರಿಸಲು ಹೋದನು ಎಂದು ತಿಳಿಯಬೇಕು.

ಕರ್ಣನಿಗೆ ಅಂತಕನಾಗಿ ಬರುತ್ತಿರುವ ಭೀಮನನ್ನು ನೋಡಿ ಶಲ್ಯರಾಜನು "ಪವನಕುಮಾರ ಭೀಮ ! ಈ ಕಾರ್ಯ ಮಾಡಬೇಡ. ಕರ್ಣನನ್ನು ಸಂಹರಿಸುವೆನೆಂಬ ಅರ್ಜುನನ ಪ್ರತಿಜ್ಞೆಯು ಸುಳ್ಳಾಗುವಂತೆ ಮಾಡಬೇಡ. ಅದು ಸರಿಯಲ್ಲ. ನೀನವನ ನಾಲಿಗೆ ಸೀಳಿದರೆ ಮಹಾ ಅಭಿಮಾನಿಯಾದ ಕರ್ಣನು ಜೀವಿಸುವುದಿಲ್ಲ. ನಾಲಿಗೆ ಕತ್ತರಿಸಿದ್ದರಿಂದ ಕರ್ಣನನ್ನು ಕತ್ತರಿಸಿದಂತೆಯೇ ಆಗುವುದು. ಈ ಎರಡುವಿಧದಿಂದಲೂ ಅರ್ಜುನನ ಪ್ರತಿಜ್ಞೆಯು ಭಂಗವಾಗುವುದು. ಅರ್ಜುನನ ಪ್ರತಿಜ್ಞೆ ಸತ್ಯವಾಗಲಿ ಎಂಬ ಕಾರಣದಿಂದ ಕರ್ಣನ ಜಿಹ್ವಾಛೇದನ ಮಾಡದೇ ಇವನನ್ನು ಬಿಟ್ಟುಬಿಡು" ಎಂದು ಮುಂತಾಗಿ ಹೇಳಿ ಭೀಮನ ಆ ಕಾರ್ಯ ಮಾಡದಂತೆ ನಿವಾರಿಸಿದನು. ಸೂರ್ಯಸುತನಾದ ಕರ್ಣನನ್ನು ಜಯಿಸಿದ ಭೀಮನು ಅಶ್ವತ್ಥಾಮ ದುರ್ಯೋಧನ ಸಹಿತವಾದ ಸಮಸ್ತ ಕೌರವಸೇನೆಯನ್ನು ವಿದ್ರಾವಿಸಿದನು. ಮೂರು ಅಕ್ಷೋಹಿಣಿ ಸೈನ್ಯವನ್ನು ಕ್ಷಣಮಾತ್ರದಲ್ಲಿ ಭೀಮನು ಪೀಡಿಸಿದನು.

ಅದೇ ಕಾಲದಲ್ಲಿ ಗುರುಪುತ್ರನಾದ ಅಶ್ವತ್ಥಾಮನು ಪಾಂಡವಸೈನ್ಯವನ್ನು ವಿಮರ್ದಿಸಿ ರಾಜಾ ಧರ್ಮರಾಜನನ್ನು ವಿರಥಗೊಳಿಸಿ ನಕುಲ-ಸಹದೇವರನ್ನು, ಧೃಷ್ಟದ್ಯುಮ್ನ, ಸಾತ್ಯಕಿ, ದ್ರೌಪದೀಪುತ್ರರುಗಳನ್ನು ರಥ-ರಹಿತರನ್ನಾಗಿ ಮಾಡಿ ಎಲ್ಲರನ್ನು ನಿರಾಯುಧಗೊಳಿಸಿದನು. ಅಹಂಕಾರರಹಿತರಾಗಿ ರಣರಂಗದಿಂದ ಓಡುತ್ತಿರುವ ಯುಧಿಷ್ಠಿರಾದಿಗಳನ್ನು ಬೆನ್ನಟ್ಟಿ ಬಾಣಗಳಿಂದ ಅಂತರಿಕ್ಷವನ್ನು ಮುಚ್ಚುತ್ತಾ ಹೋದನು. ಆಗ ಧರ್ಮರಾಜನು "ಅಶ್ವತ್ಥಾಮಾ ! ಸ್ವಧರ್ಮದಲ್ಲಿ ನಿರತರಾದ

ನಮ್ಮನ್ನು ಪರಧರ್ಮವಾದ ಬ್ರಾಹ್ಮಣನಾಗಿ ನಿನ್ನದಲ್ಲದ ಕ್ಷತ್ರಿಯಧರ್ಮವನ್ನು ಅವಲಂಬಿಸಿ ಕ್ಷತ್ರಿಯರಾದ ನಮ್ಮನ್ನೇಕೆ ಓಂಸಿರುವೆ?" ಎಂದು ಹೇಳಲು ನಗುತ್ತಾ ಅಶ್ವತ್ಥಾಮನು ಕೃಷ್ಣಾರ್ಜುನರಿರುವಲ್ಲಿಗೆ ಹೋದನು. ಸಂಶಪ್ತಕರೊಡನೆ ಹೋರಾಡುತ್ತಿರುವ ಶೇಷನ ಹೆಡೆಯಂತೆ ಮೇಲೆತ್ತಿದ ಭುಜ, ಬಾಣಗಳುಳ್ಳ ಅಶ್ವತ್ಥಾಮನು ಇಂದ್ರಸೂನುವನ್ನು ಯುದ್ಧಕ್ಕೆ ಆಹ್ವಾನಿಸಿದನು. ಆಗ ಅರ್ಜುನನು "ನಾನೀಗ ಸಂಶಪ್ತಕರೊಡನೆ ಹೋರಾಡುತ್ತಿದ್ದೇನೆ. ಅಶ್ವತ್ಥಾಮನೂ ಯುದ್ಧಾಹ್ವಾನ-ವೀಯುತ್ತಿದ್ದಾನೆ. ಈಗೇನು ಮಾಡಬೇಕು ?" ಎಂದು ಕೃಷ್ಣನನ್ನು ಪ್ರಶ್ನಿಸಲು ಅದಕ್ಕೆ ಉತ್ತರರೂಪವಾಗಿ ಎಂಬಂತೆ ಮಾಧವನು ಅರ್ಜುನನ ರಥವನ್ನು ಅಶ್ವತ್ಥಾಮನ ಬಳಿಗೆ ಕೊಂಡ್ಯೆದನು. ಅಸ್ತ್ರವೇತ್ತರಲ್ಲಿ ಅಗ್ರಣಿಗಳಾದ ಮಹಾಪರಾಕ್ರಮಶಾಲಿಗಳಾದ ಅಶ್ವತ್ಥಾಮಾರ್ಜುನರು ಶರವರ್ಷಗಳಿಂದ ಸಕಲ ದಿಕ್ಕುಗಳನ್ನೂ ಅಂಧಕಾರಗೊಳಿಸಿದರು. ಅಶ್ವತ್ಥಾಮನು ಪಾರ್ಥನ ರಥದ ಕುದುರೆಗಳ ರೋಮಕೂಪಗಳಲ್ಲೆಲ್ಲಾ ಮತ್ತು ಧ್ವಜ-ಧನುಸ್ಸುಗಳಲ್ಲೆಲ್ಲಾ ಬಾಣಗಳನ್ನು ನೆಟ್ಟು (ಸೃಷ್ಟಿಮಾಡಿ) ಶರಪಂಜರವನ್ನು ನಿರ್ಮಿಸಿ ಅರ್ಜುನನನ್ನು ಬಂಧಿಸಿದನು. ಅರ್ಜುನನು ಬಂಧಿತನಾಗಲು ಅಪ್ರಮೇಯನಾದ ಶ್ರೀಹರಿಯು ಅರ್ಜುನನನ್ನು ಜಾಗೃತಗೊಳಿಸಿದನು. ಮತ್ತು ಅವನನ್ನು ಆಲಂಗಿಸಿ ಅವನಿಗೆ ವಿಶೇಷ ಬಲವನ್ನು ಅನುಗ್ರಹಿಸಿದನು. ಆಗ ಮೇಲೆದ್ದ ಅರ್ಜುನನು ಬಹುವಿಧವಾಗಿ ಅಶ್ವತ್ಥಾಮನ ಮೇಲೆ ಬಾಣಗಳನ್ನು ವರ್ಷಿಸಲು ಅದನ್ನು ನಿವಾರಿಸಿದ ಗುರುಪುತ್ರನು ಪಾರ್ಥನ ಧನುವಿನ ಜ್ಯಾವನ್ನು (ಮಾರ್ಢಿ) ಖಂಡಿಸಿ ಮೇಲೆ ಶರವರ್ಷ ಮಾಡಿದನು. ಗಾಂಡೀವಕ್ಕೆ ಮತ್ತೊಂದು ಮಾರ್ಢಿಯಿತ್ತು ಅದನ್ನು ಕಟ್ಟಿ ಪಾರ್ಥನು ಯುದ್ಧಮಾಡಿದನು.

**ವಿಶೇಷ ವಿಚಾರ-** ಇಲ್ಲಿ ಅರ್ಜುನನು 'ಮೇಲೆದ್ದು' ಎಂಬಲ್ಲಿ ಮೇಲೆದ್ದನೆಂದರೆ ಶರಪಂಜರದ ಮೇಲ್ಭಾಗದಿಂದ ಎದ್ದನೆಂದು ತಾತ್ಪರ್ಯ. ಇನ್ನೊಂದು ಜ್ಯಾ ಆಯಿತು ಎಂಬಲ್ಲಿ "ಗಾಂಡೀವವು ಹೇಗೆ ಅಚ್ಛೇದ್ಯವೋ ಅದರಂತೆ ಜ್ಯಾಸಹಿತ ಅಚ್ಛೇದ್ಯವಾದ್ದರಿಂದ ಖಂಡಿಸಲ್ಪಟ್ಟ ಲತೆಯಂತೆ ಆ ಜ್ಯಾವು ಮತ್ತೆ ಅಂಕುರಿಸಿತು" ಎಂಬ ಭಾವದಿಂದ ಗ್ರಂಥಕಾರರು "ಅಥಾನ್ಯಾ ಜ್ಯಾಽಽಸೀತ್" ಎಂದು ಹೇಳಿದ್ದಂದು ತಿಳಿಯಬೇಕು. ಖಂಡಿಸದೇ ಇದ್ದ ಮತ್ತೊಂದು ಜ್ಯಾವನ್ನು ಕಟ್ಟಿದನೆಂದು ಗ್ರಂಥಕಾರರು ಹೇಳಿರುವರು.

ಆ ತರುವಾಯ ಮಧ್ಯಮ ಪಾಂಡವನಾದ ಧನಂಜಯನು ಅಶ್ವತ್ಥಾಮನ ಸಾರಥಿಯ ಶಿರಸ್ಸನ್ನು ತೀಕ್ಷ್ಣವಾದ ಬಾಣದಿಂದ ಕತ್ತರಿಸಲು ಅಶ್ವತ್ಥಾಮನು ಸ್ವತಃ ತಾನೇ ರಥವನ್ನು ನಡೆಸುತ್ತಾ ಅರ್ಜುನನ ಮೇಲೆ ಬಾಣಸಂತತಿಯನ್ನೆಸದು ಮತ್ತೆ ಅವನನ್ನು ಬಂಧಿಸಿದನು. ಆಗ ಪುನಃ ಶ್ರೀಕೃಷ್ಣನು ಪಾರ್ಥನನ್ನು ಆಲಿಂಗಿಸಿ ಶತ್ರುವಿಘಾತಕವಾದ ಬಲವನ್ನು ಅವನಿಗೆ ಕರುಣಿಸಿದನು. ಆಗ ಶರಕೂಟದಿಂದ ಮುಕ್ತನಾದ ಅರ್ಜುನನು ಶರವರ್ಷಣ ಮಾಡಿದನು. ಆಗ ಗುರುಪುತ್ರನು ಮತ್ತೆ ಪಾರ್ಥನ ಧನುವಿನ ಮೌರ್ವಿಯನ್ನು ಛೇದಿಸಿದನು. ಅದನ್ನು ಮತ್ತೆ ಸಂಧಾನಮಾಡಿ ಪಾರ್ಥನು ಅಶ್ವತ್ಥಾಮನ ಅಶ್ವಗಳಿಗೆ ಕಟ್ಟಿದ್ದ ರಜ್ಜುವನ್ನು ಬಾಣಗಳಿಂದ ತುಂಡರಿಸಿದನು. ಅಶ್ವಗಳು ಪಾರ್ಥನ ಬಾಣಗಳಿಂದ ಹೊಡೆತ ತಿಂದು ಅತಿದೂರ ಓಡಿಹೋದವು. ಅಶ್ವತ್ಥಾಮನು ಪುನಃ ಅವನ್ನು ರಥಕ್ಕೆ ಕಟ್ಟಿದನು. ಮತ್ತು "ಇದಕ್ಕಿಂತ ಇನ್ನು ಹೆಚ್ಚೇನೂ ಮಾಡಲು ಸಾಧ್ಯವಿಲ್ಲ ! ಏಕೆಂದರೆ ಕೇಶವನು ಅವನ ಸಾರಥಿಯಾಗಿದ್ದಾನೆ. ಅರ್ಜುನನ ರಥದಲ್ಲಿ ಹನೂಮಂತನಿದ್ದಾನೆ. ಅಂದರೆ ಪಾರ್ಥನ ರಥವು ಸಾಕ್ಷಾತ್ ಹನೂಮದ್ಧ್ವಜಶೋಭಿತವಾಗಿದೆ. ಅವನ ಕಾರ್ಮುಕ(ಧನುಸ್ಸು)ವು ಮಹಾಗಾಂಡೀವವಾಗಿದೆ. ಅಂತೆಯೇ ಅಶ್ವಗಳೂ ಅವಧ್ಯವಾಗಿವೆ. ರಥವು ಅಭೇದ್ಯವಾಗಿದೆ. ಇದರಂತೆ ಬಾಣಗಳೂ ಕ್ಷಯರಹಿತವಾಗಿವೆ. ಯದ್ಯಪಿ ನಾನು ಯುದ್ಧ ಮಾಡಲು ಸಮರ್ಥನಾದರೂ ಈ ಪರಿಸ್ಥಿತಿಯಲ್ಲಿ ನಾನೀಗ ಪಾರ್ಥನ ಮೇಲೇರಿ ಹೋಗಲಾರೆ" ಎಂದು ಚಿಂತಿಸಿ ಅಶ್ವತ್ಥಾಮನು ಅರ್ಜುನನನ್ನು ತ್ಯಜಿಸಿ ಪಾಂಡವಸ್ಯೆನ್ಯವನ್ನು ಹೊಕ್ಕನು. ಆಗ ಅವನೊಡನೆ ಪಾಂಡ್ಯದೇಶದ ರಾಜನು ಕದನಕ್ಕೆ ಬಂದನು. ಪಾಂಡ್ಯ ಮತ್ತು ಅಶ್ವತ್ಥಾಮರ ನಡುವೆ ಘೋರ ಯುದ್ಧವಾಯಿತು. ಆ ಯುದ್ಧಕ್ಕಾಗಿ ಪಾಂಡ್ಯನನ್ನು

ಅನುಸರಿಸಿ ಆಯುಧಗಳಿಂದ ಯುಕ್ತವಾಗಿದ್ದ ನೂರೆಂಟು ಮೇಲೆಂಟು ಗಾಡಿಗಳು ಬರುತ್ತಿದ್ದವು. ಅಶ್ವತ್ಥಾಮ ಆ ದಿನದ ಒಂದು ಯಾಮದ ಯುದ್ಧದಲ್ಲಿ ಅವೆಲ್ಲವನ್ನು ನಾಶಪಡಿಸಿದನು. ಅನಂತರ ಪಾಂಡ್ಯರಾಜನನ್ನು ರಥ-ಧನುವಿಹೀನನನ್ನಾಗಿಸಿ ಕುಂಡಲಾಲಂಕೃತವೂ ಉಜ್ವಲಕಿರೀಟಶೋಭಿತವೂ ಆದ ಪಾಂಡ್ಯ ಭೂಪತೀಯ ಶಿರವನ್ನು ತರಿದುಹಾಕಿದನು. ತರುವಾಯ ಶರಸಮೂಹದಿಂದ ಪಾಂಡವಸೈನ್ಯವನ್ನು ವಿದ್ರಾವಗೊಳಿಸಿದನು. ಅಂದರೆ ಪಲಾಯನಗೊಳಿಸಿದನು. ಆಗ ಅರ್ಜುನನೂ ದಂಡಧರನೆಂಬ ಮಗಧ ದೇಶದ ರಾಜನನ್ನು ಸಂಹರಿಸಿದನು.

ತಮ್ಮ ಸೇನೆಯು ಓಡಿಹೋಗುತ್ತಿರುವುದನ್ನು ಕಂಡು ಧೃಷ್ಟದ್ಯುಮ್ನನು ಅಶ್ವತ್ಥಾಮನ ಮೇಲೇರಿ ಬಂದನು. ಆಗ ಅಶ್ವತ್ಥಾಮನು "ಎಲವೋ ಪಾಪಿಷ್ಠನೇ ! ಆಚಾರ್ಯ ದ್ರೋಣರನ್ನು ಸಂಹರಿಸಿದ ನಿನ್ನನ್ನು ಯುದ್ಧದಲ್ಲಿ ಸಂಹರಿಸುತ್ತೇನೆ!" ಎಂತೆಂದು ಬಾಣಗಳನ್ನು ಪ್ರಯೋಗಿಸಿದನು. ಆಗ ಧೃಷ್ಟದ್ಯುಮ್ನನು ತನ್ನ ಖಡ್ಗವನ್ನು ತೋರಿಸಿ "ನಿನ್ನ ತಂದೆಯನ್ನು ಸಂಹರಿಸಿದ ಈ ಕತ್ತಿಯೇ ನಿನಗೆ ಉತ್ತರ ಕೊಡುವುದು" ಎಂದು ಹೇಳಿದನು. ಆಗ ಅವರೀರ್ವರಲ್ಲಿ ಮೈನವಿರೇಳುವ ಯುದ್ಧವಾಯಿತು.

ಆಗ ದ್ರೋಣಕುಮಾರನು ಅವನನ್ನು ವಿರಥನನ್ನಾಗಿ ಮಾಡಿ (ಧೃಷ್ಟದ್ಯುಮ್ನನ) ನಾಶಕ್ಕಾಗಿ ತೀಕ್ಷ್ಣವಾದ ಬಾಣಗಳನ್ನು ಬಿಟ್ಟನು. ಅವು ಧೃಷ್ಟದ್ಯುಮ್ನನ ಕವಚವನ್ನೂ ಭಂಗಗೊಳಿಸಲು ಸಮರ್ಥವಾದವು. ಆಗ ದ್ರೋಣಿಯು ಕತ್ತಿಯನ್ನು ಹಿಡಿದು ಅವನತ್ತ ಬಂದನು. ಖಡ್ಗ ಅಸ್ತ್ರ ಶಸ್ತ್ರಗಳಿಂದಲೂ ಪಾರ್ಷತನ ಚರ್ಮವನ್ನು ಭೇದಿಸಲಾಗದಿರಲು ಅವನನ್ನು ಧರೆಗೆ ಕೆಡವಿ ಧನುವಿನ ಮೌರ್ವಿಯಿಂದ ಮಥಿಸಿ ಎಳೆಯುತ್ತಿರಲು ಶ್ರೀಕೃಷ್ಣನಿಂದ ಪ್ರೇರಿತನಾದ ಪಾರ್ಥ-ಭೀಮಸೇನರು ಎರಡು ಕಡೆಗಳಿಂದ ಬಾಣಗಳಿಂದ ಅಶ್ವತ್ಥಾಮನನ್ನು ನೋಯಿಸಿದರು. ವಜ್ರಸಮಾನವಾದ ಬಾಣಗಳಿಂದ ಹೆಚ್ಚಾಗಿ ತಾಡಿತನಾದ ಅಶ್ವತ್ಥಾಮನು ಧೃಷ್ಟದ್ಯುಮ್ನನನ್ನು ಬಿಟ್ಟು ತನ್ನ ರಥಕ್ಕೆ ಬಂದು ಕುಳಿತು ಯುದ್ಧರಂಗದ ಬೇರೊಂದೆಡೆಗೆ ಹೊರಟು ಹೋದನು.

ಧೃಷ್ಟದ್ಯುಮ್ನನೂ ಸಹ ತನ್ನ ರಥವೇರಿ ಬೇರೊಂದು ಧನುಸ್ಸನ್ನು ಹಿಡಿದು ಕೃತವರ್ಮನತ್ತ ಸಾಗಿದನು. ಅವರಿಬ್ಬರಲ್ಲಿ ಅದ್ಭುತ ಪ್ರದರ್ಶಕವಾದ ದ್ವಂದ್ವಯುದ್ಧವಾಯಿತು. ಆಗ ಪಾಂಚಾಲರಾಜಪುತ್ರನು ಪ್ರಯಾಸವಿಲ್ಲದೆ ಕೃತವರ್ಮನ ರಥ-ಆಯುಧಗಳನ್ನು ಹಾಳುಮಾಡಿದನು. ಆಗ ಕೃಪಾಚಾರ್ಯನು ಕೃತವರ್ಮನನ್ನು ಬೇರೊಂದೆಡೆಗೆ ಕರೆದುಕೊಂಡು ಹೋದನು.

ಆಗ ದುರ್ಯೋಧನನು ನಕುಲ-ಸಹದೇವರೊಡನೆ ಯುದ್ಧಮಾಡಿ ಸುಲಭವಾಗಿ ಅವರನ್ನು ವಿರಥಗೊಳಿಸಿದನು. ಆಗ ರಾಜಾ ಯುಧಿಷ್ಠಿರನು ಸ್ವಯಂ ಅವನನ್ನು ನಿವಾರಿಸಿದನು. ಕೋಪಗೊಂಡ ಭೀಮನು ದುರ್ಯೋಧನನ ಕುದುರೆ, ಸಾರಥಿ, ಧ್ವಜಗಳನ್ನು ನಾಶಪಡಿಸಿದನು. ಆಗ ಅಲ್ಲಿಗೆ ಬಂದ ಕರ್ಣನ ಬಳಿಗೆ ಬಂದ ಭೀಮನು ಕರ್ಣನ ಎದುರಿಗೆ ದುರ್ಯೋಧನನ ರಥವನ್ನು ಭಂಗಗೊಳಿಸಿದನು. ಅದನ್ನು ತಡೆಯಲಾಗಮಿಸಿದ ಅಂಗರಾಜನನ್ನು ಬಾಣಗಳಿಂದ ನಿವಾರಿಸಿ ಕರ್ಣಪುತ್ರನಾದ ಸುಷೇಣನ ಶಿರವನ್ನು ಕತ್ತರಿಸಿದನು. ಸುಷೇಣನು ಶಿರವಿಲ್ಲದವನಾಗಿ ತಂದೆಯ ಮುಂದೆಯೇ ಸತ್ತು ಬಿದ್ದನು. ಭೀಮನು ಸತ್ಯಸೇನನನ್ನೂ ಸಂಹರಿಸಿದನು. ಹಿಂದೆ ಕರ್ಣನೆದುರಿಗೇ ಅವನ ಇಬ್ಬರು ಸಹೋದರರನ್ನು ಹೊಡೆದು ಉರುಳಿಸಿದ್ದನು. ಅದರಂತೆ ಈಗ ಸುಷೇಣನೂ ಹತನಾದುದನ್ನು ಕಂಡು ಕರ್ಣನು ಅತಿ ಕುಪಿತನಾಗಿ ಬೇರೊಂದು ರಥವೇರಿ ಭೀಮನನ್ನು ಬಿಟ್ಟು ಧರ್ಮಜನತ್ತ ಸಾಗಿದನು. ಅದನ್ನು ಕಂಡು ಸಾತ್ಯಕಿ, ಧೃಷ್ಟದ್ಯುಮ್ನ, ದ್ರೌಪದಿಯ ಕುಮಾರರು, ಸೋಮಕರ ಗುಂಪಿನೊಡನೆ ಹತ್ತಿರ ಬರದಂತೆ ತಡೆದರು. ಕರ್ಣನು ಆಗ ಅವರೆಲ್ಲರನ್ನೂ ರಥವಿಲ್ಲದವರಂತೆ ಮಾಡಿ ನಕುಲ-ಸಹದೇವರಿಂದ ಸಹಿತನಾದ ಧರ್ಮರಾಯನ ಬಳಿಗೆ ಬಂದು ನಕುಲ-ಸಹದೇವರನ್ನು ನಿರಾಯುಧಗೊಳಿಸಿ

ಧರ್ಮಜನ ತುರುಗಗಳನ್ನು ಕೊಂದನು. ಮತ್ತೆ ಆಗ ಒಂದೇ ರಥದಲ್ಲಿ ಕುಳಿತ ಅವರನ್ನು ಉಗ್ರಬಾಣಗಳಿಂದ ಮರ್ದಿಸಿ ಕಟುವಚನಗಳಿಂದ ನೋಯಿಸಿದನು. ಆಗ ಭೀಮನು ಧರ್ಮಜನನ್ನು ಬಿಡಿಸಲು ದುರ್ಯೋಧನನ್ನು ರಥರಹಿತನನ್ನಾಗಿಸಿದನು. ಆ ದೃಶ್ಯವನ್ನು ಶಲ್ಯನು ಕರ್ಣನಿಗೆ ತೋರಿಸಿದನು. ಆಗ ಕರ್ಣನು ಸುಯೋಧನನ ರಕ್ಷಣೆಗಾಗಿ ಧರ್ಮಜನನ್ನು ಬಿಟ್ಟು ದುರ್ಯೋಧನನ ಬಳಿಗೆ ಹೋಗಲು ಧರ್ಮರಾಜನು ಮೆಲ್ಲನೆ ಶಿಬಿರಕ್ಕೆ ಹೋಗಿ ಅಲ್ಲಿ ವಿಶ್ರಾಂತಿ ಪಡೆದನು.

ಆಗ ಅಶ್ವತ್ಥಾಮ-ಕೃಪಾಚಾರ್ಯರು ದುರ್ಯೋಧನನ ಸಮೀಪಕ್ಕೆ ಬಂದರು. ಭೀಮನು ದ್ರೋಣಿ ಹಾಗು ಕರ್ಣನತ್ತ ಬಂದನು. ಕೃಪಾಚಾರ್ಯರು ಭೀಮನ ಶರಾಹತಿಯಿಂದ ವ್ಯಥೆಪಡುತ್ತಿರುವ ಸುಯೋಧನನನ್ನು ತನ್ನ ರಥದಲ್ಲಿ ಕೂಡಿಸಿಕೊಂಡು ಹೋರಡಲು ಅಶ್ವತ್ಥಾಮ-ಕರ್ಣರು ಭೀಮನ ಬಾಣಗಳಿಂದ ಹೊಡೆತ ತಿಂದು ನೊಂದು ಅವನನ್ನು ಬಿಟ್ಟು ಸೋಮಕರ ಸೇನೆಯತ್ತ ತೆರಳಿ ಆ ಸೈನ್ಯದ ಮೇಲೆ ಶರವರ್ಷ ಮಾಡಿ ಪೀಡಿಸಲಾರಂಭಿಸಿದರು. ಆ ರಣಭೂಮಿಯಲ್ಲಿ ರಾಜಾ ಯುಧಿಷ್ಠಿರನನ್ನು ಕಾಣದೆ ಕೃಷ್ಣನಿಂದ ಪ್ರೇರಿತನಾಗಿ ಧನಂಜಯನು ಧರ್ಮರಾಜನನ್ನು ನೋಡಲು ಶಿಬಿರಕ್ಕೆ ಹೊರಟನು. ಆ ವೇಳೆಯಲ್ಲಿ ಧೃಷ್ಟದ್ಯುಮ್ನನು ಕರ್ಣನಿಂದ ಹೊಡೆಯಲ್ಪಟ್ಟ ತನ್ನ ಸೇನೆಯನ್ನು ಕಂಡು ಕೌರವಸೇನೆಯನ್ನು ಪೀಡಿಸಿದನು. ಆಗ ಹನುಮದ್ಧ್ವಜನಾದ ಅರ್ಜುನನನ್ನು ಅಶ್ವತ್ಥಾಮನು ತರುಬಿದನು. ಮತ್ತು ಅವನು ಹಾಗೂ ದುಶ್ಶಾಸನರು ಧೃಷ್ಟದ್ಯುಮ್ನನನ್ನು ಬರದಂತೆ ತಡೆಗಟ್ಟಿದರು. ಆ ಯುದ್ಧದಲ್ಲಿ ದುಶ್ಶಾಸನನಿಂದ ಸ್ತಂಭಿತನಾದ ಪಾರ್ಷತನು ಎಷ್ಟು ಯತ್ನಿಸಿದರೂ ಸಾಧ್ಯವಾಗದೆ ನಿರಾಯುಧನಾದನು. ಇತ್ತ ಅರ್ಜುನ-ಅಶ್ವತ್ಥಾಮರಿಗೆ ದಾರುಣವಾದ ಕದನವಾಯಿತು. ಆಗಲೂ ಧನಂಜಯನು ಶರಪಂಜರದಲ್ಲಿ ಬದ್ಧನಾದನು. ಅವನ ಗಾಂಡೀವದ ಮೌರ್ವೀಯು ಛೇದಿಸಲ್ಪಟ್ಟಿತು.

ಅರ್ಜುನನು ಆಗ ಕೃಷ್ಣನ ಪ್ರೇರಣೆಯಂತೆ ಅಶ್ವತ್ಥಾಮನ ಸಾರಥಿಯನ್ನು ವಧಿಸಿ ರಥದ ಕುದುರೆಗಳ ಕಟ್ಟುಗಳನ್ನು ಕತ್ತರಿಸಿ ಹಾಕಿ ಬಾಣಗಳಿಂದ ಅಶ್ವಗಳನ್ನು ಬಹುದೂರಕ್ಕೆ ಅಟ್ಟಿಸಿದನು. ಕರ್ಣನಾಗ ಗುರುಪುತ್ರ ಅಶ್ವತ್ಥಾಮನನ್ನು ಹಿಂದೆ ಹಾಕಿ ಪಾರ್ಥನ ಬಳಿ ಬಂದು ಪಾಂಡವರ ಸೈನಿಕರನ್ನು ಸರಳುಗಳ ಹೊಡೆತದಿಂದ ವಿದ್ರಾವಗೊಳಿಸಿದನು. ದುರ್ಯೋಧನನು ಅವನನ್ನು ಹಿಂಬಾಲಿಸಿ ಬಂದನು. ಕರ್ಣನು ಬರುತ್ತಿರುವುದನ್ನೂ ಪಾಂಡವರ ಸೈನ್ಯವು ಓಡುತ್ತಿರುವುದನ್ನೂ ನೋಡಿದ ಧೃಷ್ಟದ್ಯುಮ್ನನು ಬೇರೊಂದು ಕಾರ್ಮುಕವನ್ನು ಧರಿಸಿ ಅದನ್ನು ನಿವಾರಿಸಿದನು. ಆಗ ಅವರಿಬ್ಬರಲ್ಲಿ ವಿಶ್ರಾಂತಿವಿಲ್ಲದಂತೆ ಬಹುಕಾಲ ಸಮ-ಸಮವಾದ ಮಹಾಸ್ತ್ರಯುದ್ಧವಾಯಿತು. ಆಗ ಯಾದವವೀರನಾದ ಸಾತ್ಯಕಿಯು ದುರ್ಯೋಧನನು ಮುಂದೆ ಬರದಂತೆ ತಡೆದನು. ಆಗ ಕುರುಪತಿಯು ಸಾತ್ಯಕಿಯ ಅಶ್ವಗಳನ್ನು ಕೊಂದು ಧೃಷ್ಟದ್ಯುಮ್ನನ ಬಿಲ್ಲನ್ನು ಕತ್ತರಿಸಿದನು. ಶೈನೇಯನ ಅಶ್ವಗಳು ಮೃತವಾಗಿ ಧೃಷ್ಟದ್ಯುಮ್ನನ ಬಿಲ್ಲು ಮುರಿಯಲ್ಪಟ್ಟ ಮಧ್ಯಂತರದಲ್ಲೇ ಕರ್ಣನು ಪಾಂಡವರ ಸೈನ್ಯವನ್ನು ಸಾಯಬಡಿದನು. ತಮ್ಮ ಸೈನ್ಯವು ಛಿನ್ನಭಿನ್ನವಾದುದನ್ನು ಪರೀಕ್ಷಿಸಿದ ಮೃಗರಾಜಧ್ವಜನಾದ ಭೀಮಸೇನನು ಧರಣಿಯು ಕಂಪಿಸುವಂತೆ ಭೀಕರ ನಾದ ಮಾಡುತ್ತಾ ಕೌರವರ ಸೈನ್ಯವನ್ನು ಹೊಕ್ಕನು. ಆಗ ಭೀಕರವಾದ ನಾದ ಮತ್ತು ಚಾಪಗಳಿಂದ ಧಾರ್ತರಾಷ್ಟ್ರರ ಸೈನ್ಯವನ್ನು ಶೀಘ್ರವಾಗಿ ಭಗ್ನಗೊಳಿಸಿ ದುರ್ಯೋಧನನ ವಾಹನವನ್ನೂ ಆಯುಧಗಳನ್ನೂ ನಾಶಗೊಳಿಸಿ ಓಡಿಸಿದನು. ಭೀಮನ ಈ ಕಾರ್ಯವನ್ನು ನೋಡಿ ಪಾಂಡವರ ಸೈನ್ಯವು ಮತ್ತೆ ರಣರಂಗಕ್ಕೆ ಬಂದಿತು. ಅಡೆತಡೆಯಿಲ್ಲದ ಪರಾಕ್ರಮವುಳ್ಳ ಆ ಸೈನ್ಯವು ಕೌರವರ ಬಲವನ್ನು ಭಗ್ನಗೊಳಿಸಲು ಅದು ದೂರ ಅತಿದೂರಕ್ಕೆ ವಿದ್ರಾವಿಸಿತು. ಭೀಮನ ಆಶ್ರಯದಲ್ಲಿ ಪಾಂಚಾಲರಿಂದ ದಿಕ್ಕುದಿಕ್ಕಿಗಳಿಗೋಡಿದ ಕೌರವಸೈನ್ಯವನ್ನು ಕಂಡು ಕರ್ಣನು ಕ್ರುದ್ಧನಾಗಿ ಪ್ರಜ್ವಲಿಸಿದನು. ಮತ್ತು ಅಮೋಘವು ದಿವ್ಯವೂ ಎದುರಿಲ್ಲದುದೂ ಆದ ಪಾಂಡವಸೈನ್ಯದ ಸಕಲ ಅಸ್ತ್ರಗಳನ್ನು ನಾಶಪಡಿಸಿದ ಅಂಗರಾಜನು ಅವರ ಮೇಲೆ ಪರಶುರಾಮಾಸ್ತ್ರವನ್ನು ಪ್ರಯೋಗಿಸಿದನು. ಆ ಅಸ್ತ್ರವು ಪರಶುರಾಮರ ಪ್ರಸಾದದಿಂದ ಭೀಮನೊಬ್ಬನನ್ನು ಹೊರತುಪಡಿಸಿ ಮಿಕ್ಕ ಪಾರ್ಷತಾದಿಗಳನ್ನು ವಿದ್ರಾವಗೊಳಿಸಿತು. ಎಲ್ಲ ಸೈನ್ಯವೂ ಓಡತೊಡಗಿತು.

ಮಿಕ್ಕವರು ಹತರಾದರು. ಓಡುವವರನ್ನು ಆ ಅಸ್ತ್ರವು ನಾಶಪಡಿಸುವುದಿಲ್ಲವಾದ್ದರಿಂದ ಪಲಾಯನಗೊಂಡಿದ್ದರಿಂದ ಪಾರ್ಷತಾದಿಗಳು ಜೀವಂತ ಉಳಿದರು.

ಅಂಗರಾಜನು ಪರಶುರಾಮಾಸ್ತ್ರವನ್ನು ಬಿಡಲು ಉದ್ಯುಕ್ತನಾದುದನ್ನು ಗಮನಿಸಿ ಅರ್ಜುನನು ಆ ಅಸ್ತ್ರಕ್ಕೆ ಪ್ರತ್ಯಾಸ್ತ್ರ-ವಿಲ್ಲದ್ದರಿಂದ ಶ್ರೀವಾಸುದೇವನನ್ನು ಕುರಿತು "ಕೃಷ್ಣ ! ಈ ಸೂತಪುತ್ರನನ್ನು ಬಿಟ್ಟು ಬೇರೊಂದೊಡನೆ ಹೋಗಬಯಸುತ್ತೇನೆ. ಇಲ್ಲದಿದ್ದರೆ ಈ ಅಸ್ತ್ರದಿಂದ ನಾವು ಬದುಕುಳಿಯುವುದು ಅಸಾಧ್ಯ" ಎಂದೆನಲು ಕರ್ಣನ ಬಳಿಗೆ ಹೋಗದೆ ಪ್ರಪಂಚದ ಸಕಲ ಕಾರ್ಯ ಮಾಡಲು ಸಮರ್ಥನಾದ ಶ್ರೀಮುರಾರಿಯು ಬೇರೊಂದು ಮಾರ್ಗವಾಗಿ ಭೀಮನ ಬಳಿಗೆ ರಥವನ್ನು ಕೊಂಡು ಹೋದನು. ಅಲ್ಲಿ ಅರ್ಜುನನು ಅಣ್ಣನಾದ ವಾಯುನಂದನನಿಗೆ "ಅಣ್ಣ ! ನೀನು ಧರ್ಮಜನ ಬಳಿಗೆ ಹೋಗಿ ಅವನ ವಿಚಾರವನ್ನು ತಿಳಿ. ನಾನು ಅಳಿದುಳಿದ ಸಂಶಪ್ತಕರ ಆಹ್ವಾನದಂತೆ ಅವರಲ್ಲಿಗೆ ಯುದ್ಧಕ್ಕೆ ತೆರಳುವೆನು" ಎಂದು ಹೇಳಿದನು. ಆಗ ತನ್ನ ಅಪ್ರಮೇಯವಾದ ಬಾಹುಬಲವನ್ನು ಅರಿತಿದ್ದ ವೃಕೋದರನು "ಅರ್ಜುನ ! ಆ ಸಂಶಪ್ತಕರು ಕರ್ಣ-ಕೌರವರೊಡನೆ ನಾನೊಬ್ಬನೇ ಹೋರಾಡುತ್ತೇನೆ. ನೀನು ಮಹಾರಾಜಾ ಯುಧಿಷ್ಠಿರನ ಸನಿಹಕ್ಕೆ ಹೋಗು. ಭೀಮನು ಯುದ್ಧಭಯದಿಂದ ರಣರಂಗವನ್ನು ಬಿಟ್ಟೋಡಿದನೆಂದು ಜನರು ಆಡದಿರಲಿ. ಆದುದರಿಂದ ನೀನೇ ಅಣ್ಣನ ಬಳಿಗೆ ಹೋಗು" ಎಂದು ಹೇಳಿದನು. ಹೀಗೆ ನುಡಿದ ಭೀಮನಲ್ಲಿ ಸುಪ್ರೀತನಾದ ಅನಂತ ಶಕ್ತಿಸಂಪನ್ನವಾದ ಶ್ರೀಮಧುಸೂದನನು ಭೀಮನನ್ನು ಬಹುವಾಗಿ ಪ್ರಶಂಸಿದನು. ಆಗ ಕೃಷ್ಣಾರ್ಜುನರು ಯುಧಿಷ್ಠಿರನನ್ನು ಕಾಣಲು ಶಿಬಿರಕ್ಕೆ ಹೊದರು.

ಶಿಬಿರಕ್ಕೆ ಆಗಮಿಸಿದ ಕೃಷ್ಣಾರ್ಜುನರನ್ನು ಕಂಡು ಧರ್ಮರಾಜನು ಕರ್ಣನು ಹತನಾದನೆಂದು ಬಗೆದು ಅವರೀರ್ವರನ್ನೂ ಪ್ರಶಂಸಿಸಿದನು. ಅಣ್ಣನಿಗೆ ಅಭಿವಂದನೆ ಮಾಡಿದ ಪಾರ್ಥನು "ಅಣ್ಣ ! ಕರ್ಣನನ್ನು ನಾನು ಖಂಡಿತವಾಗಿ ಸಂಹರಿಸುತ್ತೇನೆ" ಎನಲು ಧರ್ಮಜನು ಕ್ರೋಧದಿಂದ ಭೀಭತ್ಸುವನ್ನು ನಿಂದಿಸಿ, "ಅರ್ಜುನ ! ನಿನ್ನ ಗಾಂಡೀವವನ್ನು ಶ್ರೀಕೃಷ್ಣನಿಗೆ ಕೊಡು. ಅವನು ಸೂತಪುತ್ರನನ್ನು ನಿಶ್ಚಯವಾಗಿ ಸಂಹಾರಮಾಡುವನು. ಇದರಲ್ಲಿ ಸಂದೇಹವಿಲ್ಲ. ಅಥವಾ ನೀನು ಯುದ್ಧದಿಂದ ನಿವೃತ್ತನಾದಮೇಲೆ ಭೀಮಸೇನನು ಕರ್ಣನನ್ನು ಕೊಂದಾನು. ನೀನು ಮಾತೆಯಾದ ಕುಂತಿಗೆ ವ್ಯರ್ಥವಾಗಿ ಜನಿಸಿದೆ. ನೀನು ಷಂಡ, ವ್ಯರ್ಥಪ್ರತಿಜ್ಞನು. ಕರ್ಣನಿಂದ ನೊಂದ ನಾನು ಭೀಮನ ಮಹಾತೇಜಸ್ಸಿನಿಂದ ಜೀವಿಸಿದ್ದೇನೆ" ಮುಂತಾಗಿ ಹೇಳಲು ಅರ್ಜುನನು ಒರೆಯಿಂದ ಖಡ್ಗವನ್ನು ಸೆಳೆದನು. ಆಗ ಶ್ರೀವಾಸುದೇವನು ಸರ್ವಜ್ಞನಾಗಿದ್ದರೂ ಏನೂ ತಿಳಿಯದವನಂತೆ ನಟನೆ ಮಾಡುತ್ತಾ "ಪಾರ್ಥ! ಇದೇನು ? ಖಡ್ಗವನ್ನೇಕೆ ಸೆಳೆದೆ ?" ಎಂದು ಕೇಳಿದನು. ಅರ್ಜುನನು ಆಗ "ವಾಸುದೇವ! ಯಾರು ಗಾಂಡೀವವನ್ನು ಕೊಡು ಎಂದು ಹೇಳುವರೋ ಅವರು ಯಾರೇ ಆಗಿರಲಿ ಅವರನ್ನು ಸಂಹರಿಸುವೆನೆಂದು ನನ್ನ ಪ್ರತಿಜ್ಞೆಯಿದೆ. ನನ್ನನ್ನು ನಿಂದಿಸಿರುವುದರಿಂದ ನಾನು ಧರ್ಮರಾಜನನ್ನು ಸಂಹರಿಸುವೆನು" ಎಂದು ಕೋಪದಿಂದ ನುಡಿದನು.

ಅರ್ಜುನನ ವಚನವನ್ನಾಲಿಸಿ ಕೃಷ್ಣನು "ಪಾರ್ಥ ! ಇದೇನು ನಿನ್ನ ಮಾತು ? ಸತ್ಯವಾಕ್ಯವು ಪುಣ್ಯಕರವೇನೋ ಅಹುದು. ಸತ್ಯವು ಯಾವುದೆಂಬುದನ್ನು ಅರಿಯುವುದು ದುಷ್ಕರವು. ಇಂತಹುದೇ ಸತ್ಯವೆಂದು ತಿಳಿಯುವುದೂ ಅಶಕ್ಯವು. ಕೇಳಿಲ್ಲಿ. ವಚನವು ಸತ್ಯವಾಗಿರಲಿ ಅಥವಾ ಅಸತ್ಯವಾಗಿರಲಿ ಅದು ಸಜ್ಜನರಿಗೆ ಹಿತಕರವಾಗಿರಬೇಕು. ಅದೇ ಸತ್ಯವು. ಇದರಂತೆ ಧರ್ಮ ಮಾಡಬೇಕೆಂಬುದೂ ಪುಣ್ಯಕರವು. ಇಂತಹುದೇ ಧರ್ಮವೆಂದು ತಿಳಿಯುವ ಜ್ಞಾನವು ಬಹು ದುಷ್ಕರ-ವಾದುದು. ಅಂದರೆ ತಿಳಿಯಲು ಅಶಕ್ಯವು. ನಿಷಿದ್ಧವಾದುದನ್ನು ಬಿಡುವುದು ಅಥವಾ ದಾನ ಮಾಡುವುದು ಧರ್ಮವೆಂದು ಪ್ರಸಿದ್ಧವಾಗಿರುವುದರಿಂದ ಧರ್ಮಜ್ಞಾನವನ್ನು ತಿಳಿಯಲೇಕೆ ಅಸದಳವು ? ಎಂದರೆ - ಪಾರ್ಥ, ಯಾವುದು ಸಜ್ಜನ-ಪೋಷಕವೋ ಅದು ಹಿತರೂಪವು. ಪ್ರತೀಯಮಾನವಾದ ಧರ್ಮವು ಸುಜನಧಾರಕವಾದಲ್ಲಿ ಅದುವೇ ಧರ್ಮವು. ಅದು

ಸರಿ, ಕಣ್ಣಿಗೆ ಕಾಣುವುದೇ (ಪ್ರತೀಯಮಾನವಾದುದ್ದೇ) ಏಕೆ ಸತ್ಯವಾಗಬಾರದು ? ಎಂದು ಪ್ರಶ್ನಿಸುವೆಯಾ ? ಹಾಗಾದರೆ ಕೇಳು, ಹಿಂದಿನ ಒಂದು ಪ್ರಕರಣವನ್ನು ನಿರೂಪಿಸುತ್ತೇನೆ.

ಹಿಂದೆ ಕೌಶಿಕನೆಂಬ ಒಬ್ಬ ಋಷಿಯು ಒಂದು ಕಾಡಿನಲ್ಲಿ ಕುಳಿತು ಧ್ಯಾನಾಸಕ್ತನಾಗಿದ್ದನು. ಆಗ ಕಳ್ಳರ ಭಯದಿಂದ ಕೆಲವರು ಗ್ರಾಮನಿವಾಸಿಗಳು ಅಲ್ಲಿಗೆ ಓಡಿ ಬಂದು ಒಂದು ಪೊದೆಯಲ್ಲಿ ಬಚ್ಚಿಟ್ಟುಕೊಂಡರು. ಅದನ್ನು ಕೌಶಿಕನು ಗಮನಿಸಿದನು. ಅಲ್ಲಿಗೆ ಸ್ವಲ್ಪ ಹೊತ್ತಿನಲ್ಲಿಯೇ ಕಳ್ಳರು ಬಂದು ಕೌಶಿಕನನ್ನು ನೋಡಿ "ಸ್ವಾಮಿ ! ಇಲ್ಲಿಗೆ ಕೆಲ ಗ್ರಾಮವಾಸಿಗಳು ಬಂದರೇ ? ಅವರು ಎತ್ತ ಹೋದರು ? ಎಂದು ಪ್ರಶ್ನಿಸಿದರು. ಆಗ ಸತ್ಯವನ್ನೇ ಹೇಳಬೇಕೆಂದು ನಿಶ್ಚಯಿಸಿ ಕೌಶಿಕನು ಆ ಗ್ರಾಮಸ್ಥರು ಅಡಗಿದ್ದ ಸ್ಥಳವನ್ನು ತೋರಿಸಿದನು. ಆಗ ಕಳ್ಳರು ಆ ಗ್ರಾಮವಾಸಿಗಳನ್ನು ಸಂಹರಿಸಿ ಅವರ ವಡವೆ-ವಸ್ತುಗಳನ್ನು ಅಪಹರಿಸಿಕೊಂಡು ಹೋದರು. ಕೌಶಿಕನು ಸತ್ಯವನ್ನೇ ನುಡಿದಿದ್ದರೂ ಆದರಿಂದ ಅನೇಕ ಗ್ರಾಮಸ್ಥರು ಸಂಹೃತರಾದ್ದರಿಂದ ಕೌಶಿಕನು ನರಕಕ್ಕೆ ತೆರಳಿದನು. "ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ ನ ಬ್ರೂಯಾತ್ ಸತ್ಯಮಪ್ರಿಯಂ" ಎಂದು ಪ್ರಮಾಣವಿದೆ. ಅಂದರೆ ಸತ್ಯವನ್ನು ಹೇಳಬೇಕು. ಅದರಂತೆ ಇತರರಿಗೆ ಪ್ರಿಯವಾದುದನ್ನು ಹೇಳಬೇಕು. ಮತ್ತೊಬ್ಬರಿಗೆ ಅಪ್ರಿಯವಾಗುವಂತಿದ್ದರೆ ಅದು ಸತ್ಯವಾದರೂ ಹೇಳಬಾರದು. ಇದೇ ಸತ್ಯ. ಕರ್ತವ್ಯ" ಮುಂದುವರೆದು ಶ್ರೀಕೃಷ್ಣನು ಇಂತೆಂದನು-

"ಅರ್ಜುನ ! ಇದರಂತೆ ಧರ್ಮವಿಚಾರವನ್ನು ಹೇಳುವೆನು, ಕೇಳು. ಹಿಂದೆ ಓರ್ವ ವ್ಯಾಧನು ತನ್ನ ತಂದೆ-ತಾಯಿಯರ ರಕ್ಷಣೆಗಾಗಿ ಮೃಗವನ್ನು ಕೊಂದು ಅದರ ಮಾಂಸದಿಂದ ಅವರಿಗೆ ಭೋಜನ ಮಾಡಿಸಿದನು. ಫಲ-ಕಂದಮೂಲಗಳಿರುವಾಗ ಹಸಿವು ಪರಿಹಾರಕ್ಕೆ ಅವನ್ನು ಬಿಟ್ಟು ಹಿಂಸಾರೂಪವೂ ಅಧರ್ಮವೂ ಆದ ಪ್ರಾಣಿವಧೆಯನ್ನು ಮಾಡಿ ಭೋಜನ ಮಾಡಿಸಿದ್ದು ಅದೆಂತು ಧರ್ಮವಾದೀತು ? ಎಂದರೆ ಆ ವ್ಯಾಧನು ಅಸುರನು, ಆದ್ದರಿಂದ ಲೋಕೋಪದ್ರವಕ್ಕಾಗಿ ತಪಸ್ಸು ಮಾಡುತ್ತಿದ್ದನು. ಅಂತೆಯೇ ದುರ್ಮತಿಯಾದ ಅವನು ದುಷ್ಟಪ್ರಾಣಿಗಳ ಸಂಹಾರವು ಲೋಕೋಪಕಾರವಾದುದರಿಂದ ಅದು ಧರ್ಮವೇ ಆಯಿತು. ಅಂತೆಯೇ ಅಸುರನಾದರೂ ತಂದೆ-ತಾಯಿಗಳ ಭಕ್ಷಣಕ್ಕಾಗಿ ಲೋಕಹಿತರೂಪವಾದ ಕ್ರೂರ ಪ್ರಾಣಿಸಂಹಾರವನ್ನು ಮಾಡಿದ್ದರಿಂದ ಅವನಿಗೆ ಅದು ಧರ್ಮವಾಗಿ ಪರಿಣಮಿಸಿ ಅದರ ಫಲದಿಂದ ಅಸುರನಾದ ವ್ಯಾಧನು ಸ್ವರ್ಗಕ್ಕೆ ಹೋದನು. ಆದ್ದರಿಂದ ಸಜ್ಜನರ ರಕ್ಷಕವಾದುದೇ ಧರ್ಮವೆಂದು ನಿಶ್ಚಯವಾಗಿ ತಿಳಿದು ನೀನು ಅಗ್ರಜನೂ ರಾಜನೂ ಆದ ಯುಧಿಷ್ಠಿರನನ್ನು ಸಂಹರಿಸಬೇಡ. ಅದು ಯುಕ್ತವಲ್ಲ. ಹಾಗಾದರೆ ನನ್ನ ಪ್ರತಿಜ್ಞೆಯ ಗತಿಯೇನು ಎನ್ನುವೆಯಾ? "ಗಾಂಡೀವ -ವನ್ನು ಕೊಡು ಎಂದವರನ್ನು ಕೊಲ್ಲುವೆನು" ಎಂಬುದು ತಾನೆ ನಿನ್ನ ಪ್ರತಿಜ್ಞೆ? ಅದನ್ನು ಸತ್ಯ ಮಾಡಲು ವಚನಗಳಿಂದಲೇ (ನಿಂದಾವಚನಗಳಿಂದಲೇ) ಅವನನ್ನು ಸಂಹರಿಸು. ಅಂದರೆ ಧರ್ಮರಾಜನನ್ನು ನಿಂದಿಸು. ಅದೇ ಅವನ ಸಂಹಾರ-ವೆನಿಸುವುದು" ಎಂದು ಬುದ್ಧಿ ಹೇಳಿದನು.

ಆಗ ಅರ್ಜುನನು ಕೋಪದಿಂದಲೇ ರಾಜಾ ಯುಧಿಷ್ಠಿರನನ್ನು ಸ್ತೋತ್ರಮ ತಿರಸ್ಕಾರವೇ ವಧೆಯಾದುದರಿಂದ "ನೀನು ಕ್ರೂರಿಯು(ಹಿಂಸಾರತನು), ಉಪಕಾರ ಮಾಡಿದವರನ್ನು ಕೊಲ್ಲುವವನು (ಕೃತಘ್ನನು), ಪೌರುಷಹೀನನು, ನಿಷ್ಠುರ-ವನ್ನಾಡುವವನು. ನಿನ್ನಿಂದ ನಿನ್ನವರಿಗೆ ಸ್ವಲ್ಪವೂ ಸುಖವಿಲ್ಲ. ಇಂತಹ ನೀನು ನನ್ನನ್ನು ನಿಂದಿಸಲು ಅರ್ಹನಲ್ಲ. ಅಣ್ಣ ಭೀಮಸೇನನು ನಮಗೆ ಸರ್ವದಾ ರಕ್ಷಕನಾದ್ದರಿಂದ ಅವನು ಬೇಕಾದರೆ ನನ್ನನ್ನು ನಿಂದಿಸಲು ಅರ್ಹನು. ಅವನು ಅದ್ಯಾಪಿ ಸಕಲವೀರರೊಡನೆ ಯುದ್ಧ ಮಾಡುತ್ತಿದ್ದಾನೆ. ನೀನು ಕೇವಲ ನಿಂದಕನು" ಮುಂತಾಗಿ ಬಹುವಿಧವಾಗಿ ಧರ್ಮರಾಜನನ್ನು ನಿಂದಿಸಿ ನಂತರ ತನ್ನನ್ನು ತಾನೇ ವಧಿಸಿಕೊಳ್ಳಲು ಮತ್ತೆ ಖಡ್ಗವನ್ನು ವರೆಯಿಂದ ಹಿರಿದನು.

ಆಗ ಕೃಷ್ಣನು "ಅರ್ಜುನ ! ಈಗ ಮತ್ತೇಕೆ ಖಡ್ಗವನ್ನು ಹೊರತೆಗೆದೆ ? ಎಂದು ಕೇಳಲು, ಪಾರ್ಥನು "ವಾಸುದೇವ ! ಅಗ್ರಜನನ್ನು ನಾನು ನಿಂದಿಸಿದೆನು. ಅದರ ಪ್ರಾಯಶ್ಚಿತ್ತಕ್ಕಾಗಿ ನಾನು ಸ್ವತಃ ಸಂಹೃತನಾಗಲು ಕತ್ತಿಯನ್ನು ಹಿರಿದಿದ್ದೇನೆ" ಎಂದನು. ಆಗ ವಾಸುದೇವನು-

"ಅರ್ಜುನ ! ಬುದ್ಧಿಪೂರ್ವಕವಾಗಿ ದೇಹನಾಶ ಮಡಿಕೊಳ್ಳುವುದರಿಂದ ಮಹಾಪಾಪವು ಬರುತ್ತದೆ. ಸರ್ವವಿಧದಿಂದ ದೇಹರಕ್ಷಣೆ ಮಾಡಿಕೊಳ್ಳಬೇಕು. ಏಕೆಂದರೆ ದೇಹ ಧರ್ಮ-ಅರ್ಥ-ಕಾಮ-ಮೋಕ್ಷ-ಗಳೆಂಬ ನಾಲ್ಕು ವಿಧವಾದ ಪುರುಷಾರ್ಥಕ್ಕೆ ಸಾಧನವಾಗುವುದು. ದೇಹವು ಚತುರ್ವಿಧ ಪುರುಷಾರ್ಥಸಾಧನಕ್ಕೆ ಸಹಾಯಕವಾದುದರಿಂದ ದೇಹತ್ಯಾಗ ಮಾಡಬೇಡ. ಹಾಗಾದರೆ ಧರ್ಮರತನೂ ಜ್ಯೇಷ್ಠನೂ ಆದ ಧರ್ಮರಾಜನ ನಿಂದೆಯಿಂದ ಪ್ರಾಪ್ತವಾದ ಪಾಪಪರಿಹಾರವೆಂತು ಸಾಧ್ಯ ? ಎಂದು ಪ್ರಶ್ನಿಸುವೆಯಾ ? ಹಾಗಾದರೆ ಕೇಳು- ನಿನ್ನ ವಧೆಗೆ ಪ್ರತಿನಿಧಿಭೂತವಾದ ವಿಶೇಷವಾದ ಆತ್ಮಪ್ರಶಂಸೆಯನ್ನು ಮಾಡಿಕೋ. ಅದೇ ನಿನ್ನ ವಧೆಯನಿಸುವುದು". ಈ ಸಂದರ್ಭದಲ್ಲಿ ಶ್ರೀನಿರ್ಣಯಾಚಾರ್ಯರು "ವಧೋ ಗುರೂಣಾಂ ತ್ವಂಹಕಾರಃ ಸ್ವಪ್ರಶಂಸೈವ ಚಾತ್ಮನಃ" ಅಂದರೆ "ಹಿರಿಯರ ತಿರಸ್ಕಾರವು ಅವರ ವಧೆ. ಆತ್ಮಪ್ರಶಂಸೆಯೇ ತನ್ನ ವಧೆಯು" ಎಂದು ನಿರೂಪಿಸಿದ್ದಾರೆ. ಆಗ ಅರ್ಜುನನು ಅನೇಕ ಪ್ರಕಾರವಾಗಿ ತನ್ನ ಗುಣಗಳನ್ನು ಹೇಳಿಕೊಂಡು ತನ್ನನ್ನು ತಾನೇ ಹೊಗಳಿಕೊಂಡನು. (ಅಂದರೆ ಆತ್ಮಪ್ರಶಂಸೆ ಮಾಡಿಕೊಂಡನು). ಅರ್ಜುನನು ಅತಿ ಅಹಂಕಾರದಿಂದ ತನ್ನ ಪೌರುಷ ಪ್ರಾಗಲ್ಭ್ಯಾದಿ ಗುಣಗಳನ್ನು ಹೊಗಳಿಕೊಂಡನೆಂದು ಭಾವ).

ಯದ್ಯಪಿ ಗುರುನಿಂದಾ, ಆತ್ಮಸ್ತುತಿ ಎರಡೂ ಧರ್ಮವಾಗಲಾರದು. ಜನಾರ್ದನನು ರಾಜನ ವಧರೂಪ ಪ್ರತಿಜ್ಞಾಪಾಲನರೂಪ ಧರ್ಮ ಮತ್ತು ಸ್ತೋತ್ರಮನಿಂದೆಯಿಂದುಂಟಾದ ದೋಷಪರಿಹಾರಕವಾದ ಆತ್ಮಪ್ರಶಂಸಾರೂಪವಾದ ಅರ್ಜುನನ ಹಾರ್ದವನ್ನು ಪ್ರಕಟಗೊಳಿಸಿ ಅರ್ಜುನನಿಗೆ ನಾಚಿಕೆಯುಂಟಾಗುವಂತೆಯು ನಾನು ಎಲ್ಲವನ್ನು ತಿಳಿದಿದ್ದೇನೆ ಎಂದು ಅವನಿಗಿದ್ದ ಮದವನ್ನು ಪರಿಹಾರ ಮಾಡಿ ಅಂದರೆ ನನಗೆ ಧರ್ಮಜ್ಞಾನವಿಲ್ಲ ಎಂಬ ಲಜ್ಜೆಯುಂಟಾಗವಂತೆಯೂ ತಾನು ಸಕಲವನ್ನು ಬಲ್ಲವನೆಂಬ ಸರ್ವವನ್ನು ನಾಶಪಡಿಸಿ, ನಾನು ಮುಖ್ಯ ಧರ್ಮವನ್ನು ತಿಳಿದಿಲ್ಲ, ಶ್ರೀಕೃಷ್ಣನೊಬ್ಬನೇ ನನಗೆ ಜ್ಞಾನರೂಪದ ಆಶ್ರಯ ಅಂದರೆ ಜಗತ್ತ್ರತಿಯಾದ ಶ್ರೀಹರಿ ಪರಮಾತ್ಮನೊಬ್ಬನೇ ದೋಷಪರಿಹಾರಕನೆಂಬ ಬುದ್ಧಿಯನ್ನುಂಟುಮಾಡಿ ಗುರುನಿಂದಾ ಆತ್ಮಸ್ತುತಿ ಮುಂತಾದುದನ್ನು ಅರ್ಜುನನಿಂದ ಮಾಡಿಸಿದನು.

ಈಗ ಜರುಗಿದ ಕಾರ್ಯಗಳೆಲ್ಲವೂ ಶ್ರೀವಾಸುದೇವನು ಮಾಡಿಸಿದ್ದೆಂಬುದನ್ನರಿಯದೆ ಧರ್ಮರಾಜನು ಅತಿಕುಪಿತನಾಗಿ "ಪಾರ್ಥ ! ಭೀಮಸೇನನು ರಾಜನಾಗಲಿ. ನೀನು ಯುವರಾಜನಾಗು. ನನ್ನನ್ನು ತ್ಯಜಿಸು. ಅಪ್ರಯೋಜಕನಾದ ನಾನು ಕಾಡಿಗೆ ಹೋಗುತ್ತೇನೆ" ಎಂದು ನುಡಿದು ತನ್ನ ತಲ್ಪದಿಂದ ಅರಣ್ಯಕ್ಕೆ ತೆರಳಲು ಮೇಲೆದ್ದನು. ಆಗ ಸರ್ವನಿಯಾಮಕನಾದ ಭಗವಾನ್ ವಾಸುದೇವನು ಯುಧಿಷ್ಠಿರನ ಕರಪಿಡಿದು ನಿಲ್ಲಿಸಿ ಅದುವರೆಗೆ ನೆರವೇರಿದ ಕಾರ್ಯಗಳ ಕಾರಣವನ್ನು ವಿವರಿಸಿ ಎಲ್ಲರನ್ನೂ ಶಾಂತಪಡಿಸಿದನು. ಅರ್ಜುನನೂ ಧರ್ಮರಾಜನ ಚರಣಗಳಿಗೆ ಅಡ್ಡಬಿದ್ದು ನಮಸ್ಕರಿಸಿ ತನ್ನನ್ನು ಕ್ಷಮಿಸುವಂತೆ ಪ್ರಾರ್ಥಿಸಿದನು. ಧರ್ಮನಂದನನು ಅವನನ್ನು ಕ್ಷಮಿಸಿ ಅವನಲ್ಲಿ ಸುಪ್ರೀತನಾದನು. ಆಗ ಆ ಧರ್ಮರಾಜ-ಅರ್ಜುನರು ಶ್ರೀವಾಸುದೇವನ ಅನುಗ್ರಹದಿಂದ ಬಂದೊದಗಿದ್ದ ಮರಣಭಯರೂಪವಾದ ಆಪತ್ತಿನಿಂದ ಪಾರಾಗಿ ಅತಿ ಹರುಷದಿಂದ ಯುಕ್ತರಾಗಿ ಸಮಸ್ತರಿಗೂ ಪ್ರಭುವಾದ ಶ್ರೀಕೃಷ್ಣನನ್ನು "ಕೃಷ್ಣ ! ನಿನ್ನನ್ನು ಬಿಟ್ಟರೆ ನಮಗಿನ್ನಾರು ಹಿತವರು ?" ಎಂದು ಭಕ್ತಿಯಿಂದ ಪ್ರಶಂಸಿಸಿದರು.

ಆ ತರುವಾಯ ಧರ್ಮಜನು ತನ್ನ ಚರಣಕ್ಕೆರಗಿ ಕ್ಷಮಿಸುವಂತೆ ಪ್ರಾರ್ಥಿಸಿ ಅರ್ಜುನನನ್ನು ಆಲಿಂಗಿಸಿ ಪ್ರೀತಿಪೂರ್ವಕವಾಗಿ ಆಶೀರ್ವದಿಸಿದನು. ಅನಂತರ ಅಣ್ಣನ ಅಪ್ಪಣೆ ಪಡೆದು ಪಾರ್ಥನು ರಣಭೂಮಿಗೆ ತೆರಳಿದನು. ಆಗ ಪಾರ್ಥನು

ಕರ್ಣನನ್ನು ಜಯಿಸಲು ತನಗಾಗುವುದಿಲ್ಲವೆಂದು ಭಯಗೊಂಡನು. ಆದರಿಂದ ಅವನ ಮೈಬೆವರಿತು. ಆಗ ಶ್ರೀಕೃಷ್ಣನು ಅವನಲ್ಲಿ ಧೈರ್ಯತುಂಬುತ್ತಾ ಅರ್ಜುನನಿಗೆ ಪೂರ್ವದಲ್ಲಿ ಅವನು ನಿವಾತಕವಚರು ಮುಂತಾದವರನ್ನು ಸಂಹಾರ ಮಾಡಿದ ವಿಚಾರವನ್ನು ನೆನಪಿಗೆ ತಂದುಕೊಟ್ಟು ಅವನಲ್ಲಿ ವಿಶೇಷವಾದ 'ನರಾಂಶ'ವನ್ನು ಅಭಿವ್ಯಕ್ತಗೊಳಿಸಿದನು. ಆದರಿಂದ ಅಂದರೆ 'ನರಾಂಶ'ದಿಂದ ಪಾರ್ಥನಿಗೆ ಅತಿ ಸ್ಥೈರ್ಯವುಂಟಾಯಿತು.

ಅದೇ ಸಮಯದಲ್ಲಿ ಭೀಮಸೇನನು ನಿರ್ಭಯವಾಗಿ ತನ್ನ ಸಾರಥಿಯೊಂದಿಗೆ ವಾರ್ತಾಲಾಪ ಮಾಡುತ್ತಾ ಕ್ರೀಡಿಸುತ್ತಾ ಶತ್ರುಸೈನ್ಯವನ್ನು ಓಡಿಸಿದನು. ರಣರಂಗದಲ್ಲಿ ತನ್ನ ಮೇಲೆ ಹೋರಾಡಲು ಬಂದ ವೀರರನ್ನು ಸಂಹಾರ ಮಾಡಿದನು. ಆಗ ಶಕುನಿಯು ಸೈನ್ಯಸಹಿತನಾಗಿ ದುರ್ಯೋಧನನ ಸಹೋದರರಿಂದೊಡಗೂಡಿ ಭೀಮನ ಮೇಲೆ ಯುದ್ಧಕ್ಕೆ ಬರಲು ವೃಕೋದರನು ಅವನನ್ನು ರಥವಿಹೀನನನ್ನಾಗಿ ಮಾಡಿ ನಿರಾಯುಧನನ್ನಾಗಿ ಮಾಡಿ ಬಾಣಗಳಿಂದ ಶಕುನಿಯನ್ನು ಧರೆ-ಗುರುಳಿಸಿದನು. ಹಿಂದೆ ಕಪಟದ್ಯೂತಕಾಲದಲ್ಲಿ ಶಕುನಿಯನ್ನು ಸಂಹರಿಸುವುದಾಗಿ ಸಹದೇವನು ಪ್ರತಿಜ್ಞೆ ಮಾಡಿದ್ದರಿಂದಲೂ ಹೇಳಿದ್ದರಿಂದಲೂ ತನ್ನ ವಚನವನ್ನು ಸತ್ಯ ಮಾಡಲು ಆಗ ಭೀಮನು ಶಕುನಿಯನ್ನು ಸಂಹರಿಸದೇ ಬಿಟ್ಟನು. ದುರ್ಯೋಧನನು ಮೂರ್ಛಿತನಾದ ಶಕುನಿಯನ್ನು ತನ್ನ ರಥದಲ್ಲಿ ಕೂಡಿಸಿಕೊಂಡು ಬೇರೊಂದು ಕಡೆಗೆ ಕೊಂಡ್ಯೆದನು. ಆಗ ದುರ್ಯೋಧನನ ಹತ್ತು ಜನ ಸಹೋದರರು ಭಯಾರ್ತರಾಗಿ ಭೀಮನನ್ನು ಬಿಟ್ಟು ಓಡಿ ಹೋದರು. ಅನಂತರ ಭೀಮನೂ ಅರ್ಜುನ-ವಾಸುದೇವರನ್ನು ಕಂಡು ಅವರಿಂದ ಧರ್ಮರಾಯನ ಕ್ಷೇಮಸಮಾಚಾರವನ್ನು ತಿಳಿದು ಸುಪ್ರೀತನಾದನು. ಮತ್ತೆ ತಮ್ಮ ವೀರರೆಲ್ಲರನ್ನೂ ಕೊಲ್ಲುತ್ತಿರುವ ಸೈನಿಕರನ್ನು ಓಡಿಸುತ್ತಿರುವ ಭೀಮಸೇನನನ್ನು ನೋಡಿ ದುಶ್ಶಾಸನನು ಧನುರ್ಧಾರಿಯಾಗಿ ಅವನತ್ತ ನಡೆದನು. ಅವನನ್ನು ಕಂಡು ಭೀಮನು ಮೃಗವನ್ನಟ್ಟಿಸಿಕೊಂಡು ಹೋಗುವ ಸಿಂಹದಂತೆ ಅವನತ್ತ ಧಾವಿಸಿ ಹೋದನು.

ಮತ್ತೆ ಮತ್ತೆ ಕ್ರೂರವಚನಗಳಿಂದ ತನ್ನನ್ನು ನಿಂದಿಸುತ್ತಿರುವ ದುಶ್ಶಾಸನನನ್ನು ಕ್ಷಣಮಾತ್ರದಲ್ಲಿ ರಥವಿಹೀನನನ್ನಾಗಿ ಮಾಡಿ ಅವನನ್ನು ಭೂಮಿಗೆ ಕೆಡಹಿ ಭೀಮಸೇನನು ದುಶ್ಶಾಸನನ ವಕ್ಷಸ್ಥಳವನ್ನು ಗದಾಪ್ರಹಾರದಿಂದ ಸೀಳಿದನು. ತನ್ನ ಪಾದದಿಂದ ಅವನ ಕಂಠವನ್ನಾಕ್ರಮಿಸಿ ಅವನ ಹೊಟ್ಟೆಮೇಲೆ ಕುಳಿತು ಅತಿ ಕೋಪದಿಂದ ಅವನ ಮುಖವನ್ನು ನೋಡುತ್ತಾ ಆಕಾಶದಂತೆ ನಿರ್ಮಲವಾದ ನೀಲವರ್ಣದ ಖಡ್ಗವನ್ನು ಹಿರಿದು ಶತ್ರುವಾದ ದುಶ್ಶಾಸನನ ಹೃದಯವನ್ನು ಬಗೆದು ಹಾಕಿದನು. ಮತ್ತು ನೀರಡಿಕೆಯಿಂದ ಬಳಲಿದ ವೃಕೋದರನು ದುಶ್ಶಾಸನನ ವಕ್ಷಸ್ಥಳದಲ್ಲಿ ದೊಡ್ಡದಾದ ರಕ್ತದ ಮಡುವನ್ನು ನಿರ್ಮಿಸಿ ದುಶ್ಶಾಸನನ ರಕ್ತವೆಂಬ ನೀರನ್ನು ಅಮೃತವನ್ನಾಗಿ ಮಾಡಿ ಯಥೇಷ್ಟವಾಗಿ ಪಾನ ಮಾಡಿದವನಂತೆ ನಟಿಸಿದನು. ಕಣ್ಣು ಕಣ್ಣು ಬಿಡುತ್ತಾ ಬಿದ್ದಿರುವ ದುಶ್ಶಾಸನನನ್ನು ಹಿಂದೆ ಕಪಟದ್ಯೂತಕಾಲದಲ್ಲಿ ದ್ರೌಪದಿಯ ವಸ್ತ್ರಾಪಹರಣ ಮಾಡಿದ್ದೇ ಮೊದಲಾದ ಅವನ ತುಚ್ಛಕಾರ್ಯಗಳನ್ನು ಅವನ ಸ್ಮರಣೆಗೆ ತಂದುಕೊಟ್ಟನು. ಹಿಂದೆ ಅವನಾಡಿದ ವಾಗ್ರೂಪಬಾಣ ಪ್ರಹಾರ-ಗಳನ್ನೂ ಪುನಃ ಪುನಃ ದುಶ್ಶಾಸನನಿಗೆ ಜ್ಞಾಪಕಪಡಿಸಿದನು. ಅಪೇಯವಾದ ಅಂದರೆ ಕುಡಿಯಬಾರದಾದ ದುಶ್ಶಾಸನನ ರಕ್ತವನ್ನು ಭೀಮನು ಅದೆಂತು ಕುಡಿದ? ಎಂಬುದನ್ನು ನಿರ್ಣಯಗ್ರಂಥಕಾರರು ಈಗ ಸ್ಪಷ್ಟಪಡಿಸುತ್ತಾರೆ-

ಮಾನವ ರಕ್ತವು ಅಪೇಯವೆಂದು ಧರ್ಮಶಾಸ್ತ್ರದಲ್ಲಿ ಪ್ರಸಿದ್ಧವಾಗಿದೆ. ಅದನ್ನು ಚೆನ್ನಾಗಿ ಬಲ್ಲ ಭೀಮನು ಶತ್ರುವಿನ ರಕ್ತವನ್ನು ಹಲ್ಲುಗಳ ಒಳಭಾಗಕ್ಕೆ ಹೋಗದಂತೆ ಹೊರಗೇ ಇಟ್ಟುಕೊಂಡು ಶತ್ರುವನ್ನು ಭಯಗೊಳಿಸಲು ಪುನಃ ಪುನಃ ರಕ್ತಪಾನ ಮಾಡಿದವನಂತೆ ನಟನೆ ಮಾಡಿದನೆಂದು ತಿಳಿಯಬೇಕು. ಆ ಭೀಮಸೇನನು "ಯಸ್ತೇ ಮನ್ಯೋ ವಿಧದ್ವಜ್ರಸಾಯಕ" ಮುಂತಾದ ಮನ್ಯುಸೂಕ್ತಪ್ರತಿಪಾದ್ಯವಾದ ಭಗವಾನ್ ಶ್ರೀನರಸಿಂಹದೇವರನ್ನು ಭಕ್ತಿಯಿಂದ ದರ್ಶನ ಮಾಡಿದನು. ಅಂದರೆ ಮನ್ಯುಸೂಕ್ತವನ್ನು ದರ್ಶನ ಮಾಡಿದನು. ಮನ್ಯುಸೂಕ್ತ ದರ್ಶನಾನಂತರ ಯುದ್ಧವೆಂಬ ಯಜ್ಞದಲ್ಲಿ "ಸೋಮವಲ್ಲೀಂ

ಜಿದಾಗೀತ್" ಎಂಬ ಸಾಮಮಂತ್ರದಿಂದ ಶತ್ರುವಿನ ಎದೆಯನ್ನು ಗದೆಯಿಂದ ಭೇದಿಸಿ ರಕ್ತವೆಂಬ ಸೋಮವನ್ನು ಮನ್ಯು-ನಾಮಕ ನರಸಿಂಹದೇವರಿಗೆ ಸಮರ್ಪಣೆ ಮಾಡಿದನು.

ಹೀಗೆ ಭೀಮಸೇನನು ಹಿಂದೆ ಸಕಲ ಜನರೆದುರಿಗೆ "ದುಶ್ಶಾಸನನ ವಕ್ಷಸ್ಥಳವನ್ನು ಬಗೆದು ರಕ್ತಕುಡಿಯುತ್ತೇನೆ" ಎಂದು ಪ್ರತಿಜ್ಞೆ ಮಾಡಿದಂತೆ ಆ ಮಾತನ್ನು (ಪ್ರತಿಜ್ಞೆಯನ್ನು) ಸತ್ಯವನ್ನಾಗಿ ಮಾಡಿ ತೋರಿಸಿದನು. ಹಿಂದೆ ಯಾವ ಧಾರ್ತರಾಷ್ಟ್ರನ (ದುಶ್ಶಾಸನನ) ಪತ್ನಿಯರು ಪತಿಸಹಿತರಾಗಿದ್ದರೋ ಅವರಿಂದು ಪತಿವಿಹೀನರಾದರು. ಕಲ್ಯಾಣಿಯಾದ ಯಾವ ದ್ರೌಪದಾ-ದೇವಿಯನ್ನು "ನೀನು ಪತಿವಿಹೀನಳಾದೆ" ಎಂದು ನಿಂದಿತಳಾಗಿ ದ್ಯೂತಸಮಯದಲ್ಲಿ ಪತಿವಿಹೀನಳಾಗಿದ್ದಳೋ ಆ ದ್ರೌಪದಿಯು ಈಗ ಪತಿಸಹಿತವಾದಳು. ಹಿಂದೆ ಯಾವ ಧೃತರಾಷ್ಟ್ರಪುತ್ರರು ತಾವು ವೀರ್ಯವಂತರೆಂದು ಅಹಂಕಾರಪಡುತ್ತಿದ್ದರೋ ಅವರಿಂದು ಷಂಡತಿಲರಾದರು. ಅಂದರೆ ನಿರ್ವೀರ್ಯರಾದರು. ಯಾವ ಪಾಂಡವರು ಷಂಡತಿಲರೆಂದು ಕೌರವರಿಂದ ನಿಂದಿಸಲ್ಪಟ್ಟಿದ್ದರೋ ಈಗವರು ನಿಶ್ಚಯವಾಗಿ ಮಹಾಪೌರುಷವಂತರಾದರು ಎಂದು ಹೇಳಿ ಭೀಮಸೇನನು "ಎಲೈ ವೀರರೇ! ಪರಮಾತ್ಮನಾದ ಶ್ರೀಹರಿಯ ವಿಚಿತ್ರ ಶಕ್ತಿಯನ್ನು ನೋಡಿರಿ. ಈಗ ಇಲ್ಲಿ ಈ ಶೂರವೀರರ ಸಮೂಹದಲ್ಲಿ ನನ್ನ ಬಲವಾದ ಮುಷ್ಟಿಯಲ್ಲಿ ಸಿಕ್ಕಿ ಬಿದ್ದಿರುವ ದುಶ್ಶಾಸನನನ್ನು ಯಾರಾದರೂ ನಿಮ್ಮಲ್ಲಿ ನಿಜವಾದ ಪೌರುಷಶಾಲಿಗಳು ಗಂಡಸರು ಇದ್ದಲ್ಲಿ ಅವರೆಲ್ಲರೂ ಬಂದು ತಮ್ಮ ಸಾಮರ್ಥ್ಯದಿಂದ ಈ ದುಶ್ಶಾಸನನನ್ನು ಬಿಡಿಸಿಕೊಳ್ಳಿರಿ" ಹೀಗೆ ಮತ್ತೇ ಮತ್ತೇ ಹೇಳುತ್ತಾ ಭೀಮಸೇನನು ಅವರೆಲ್ಲರಿಗೂ ಸವಾಲುಹಾಕಿದನು. ದೇವಲೋಕದಲ್ಲಿ ದೇವೇಂದ್ರನು ಅಮೃತ ಕುಡಿಯುವಂತೆ ದುಶ್ಶಾಸನನ ರಕ್ತಪಾನ ಮಾಡುವವನಂತೆ ನಟನೆ ಮಾಡಿದನು. ಪುನಃ ಇನ್ನೂ ಉಸಿರೆಳೆಯುತ್ತಿರುವ ದುಶ್ಶಾಸನನನ್ನು ಬಿಟ್ಟು ಸಿಂಹನಾದ ಮಾಡುತ್ತಾ ನಿರಾಯುಧನಾಗಿ ಶತ್ರುಸೈನ್ಯಮಧ್ಯದಲ್ಲಿ ನರ್ತನ ಮಾಡಿದನು.

ಹಿಂದೆ ಈ ಧೃತರಾಷ್ಟ್ರನ ಪುತ್ರರು ನಮ್ಮನ್ನೂ "ಗೌಃ ಗೌಃ" ಅಂದರೆ "ಗೋವುಗಳು ಗೋವುಗಳು (ಪಶುಗಳು)" ಎಂದು ಹಾಸ್ಯಮಾಡಿ ನರ್ತಿಸಿದ್ದರು. ಈಗ ನಾವು ಅವರನ್ನು ಪುನಃ ಪುನಃ "ಗೋವುಗಳು ಗೋವುಗಳು" ಎಂದು ಹೇಳುತ್ತಾ ನರ್ತಿಸುವವು. ಇಂತು ನುಡಿಯುತ್ತಾ ಭೀಮನು ಶತ್ರುಗಳ ಮಧ್ಯೆ ಕುಣಿಯುತ್ತಾ ತೊಡೆಗಳನ್ನು ತಟ್ಟುತ್ತಾ "ನೀವು ನಿಜವಾಗಿ ವೀರರಾಗಿದ್ದರೆ ಯುದ್ಧಕ್ಕೆ ಬನ್ನಿರಿ" ಎಂದು ಶತ್ರುಗಳನ್ನು ಆಹ್ವಾನಿಸಿದನು. ಆಗ ಭೀಮನ ರೌದ್ರಾವತಾರವನ್ನು ಕಣ್ಣಿನಿಂದ ನೋಡಲೂ ಸಹ ಕರ್ಣ, ಅಶ್ವತ್ಥಾಮ, ದುರ್ಯೋಧನಾದಿಗಳಲ್ಲಿ ಯರೊಬ್ಬರೂ ಸಮರ್ಥರಾಗಲಿಲ್ಲ. ಭೀಮನ ಭಯಂಕರ ಉಗ್ರರೂಪ ಪೌರುಷಗಳನ್ನು ಕಂಡು ಭಯದಿಂದ ಕರ್ಣನ ಕೈಯಿಂದ ಧನುಸ್ಸು ಕಳಚಿ ಕೆಳಗೆ ಬಿದ್ದಿತು. ಕಣ್ಣುಗಳು ಮುಚ್ಚಿ-ಕೊಂಡವು. ಆಗ ಶಲ್ಯರಾಜನು "ಹೆದರಬೇಡ ಕರ್ಣ ! ನೀನು ಅರ್ಜುನನ ಭಾಗವಾಗಿದ್ದೀಯೇ. ನಿನ್ನನ್ನು ಅರ್ಜುನನು ಸಂಹರಿಸುವನೆಂದು ಪ್ರತಿಜ್ಞೆ ಮಾಡುವುದರಿಂದ ಖಂಡಿತ ಆ ವಾಕ್ಯವನ್ನು ಸತ್ಯಮಾಡಲು ಭೀಮನು ನಿನ್ನನ್ನು ಸಾಯಿಸುವುದಿಲ್ಲ. ಆದ್ದರಿಂದ ಭೀತನಾಗಬೇಡ" ಎಂದು ಹೇಳಿದನು. ಅದರಿಂದ ಹೇಗೋ ಬಹುಪ್ರಯಾಸದಿಂದ ಯುದ್ಧಭೂಮಿಯಲ್ಲಿ ಸ್ಥಿರವಾಗಿ ನಿಂತನು. ಅಶ್ವತ್ಥಾಮನು ಭೀಮನಿಂದ ದೂರವಾಗಿ ಹೋದನು. ಆಗ ಭೀಮಸೇನನು "ಈಗ ನಾನು ಯುದ್ಧರೂಪ ಯಜ್ಞದಲ್ಲಿ ಸೋಮರಸವನ್ನು ಪಾನ ಮಾಡಿದ್ದೇನೆ. ಇನ್ನು ಯಜ್ಞಪಶುವಾದ ದುರ್ಯೋಧನನನ್ನು ಶ್ರೀಹರಿಯ ಪ್ರೀತಿಗಾಗಿ ನಾನು ವಧಿಸಬೇಕು" ಎಂದು ಹೇಳಿದನು.

ಆತರುವಾಯ ಭೀಮನು ಮೃತನಾದ ದುಶ್ಶಾಸನನನ್ನು ಅಲ್ಲಿಯೇ ಎಸೆದು ಕೋಪದಿಂದ ದುರ್ಯೋಧನ ಬಳಿಗೆ ಹೊರಟನು. ಉಗ್ರಪೌರುಷನಾದ ಭೀಮನು ತನ್ನತ್ತ ಬರುತ್ತಿರುವುದನ್ನು ಕಂಡು ಆ ಕುರುಪತಿಯು ಭಯಗ್ರಸ್ತನಾಗಿ ಶೀಘ್ರ-ವಾಗಿ ಅಲ್ಲಿಂದ ಪಲಾಯನ ಮಾಡಿದನು. ಶ್ರೀಕೃಷ್ಣ ಮತ್ತು ಅರ್ಜುನರನ್ನು ಬಿಟ್ಟು ಉಳಿದ ಉಭಯ ಪಂಗಡಗಳ ಸೈನ್ಯ-ವೆಲ್ಲವೂ ಭಯದಿಂದ ಯುದ್ಧಭೂಮಿಯನ್ನು ತ್ಯಜಿಸಿ ಹೊರಟು ಹೋಯಿತು. ಆಗ ಆ ರಣಭೂಮಿಯು ಜನರಹಿತ-

ವಾಯಿತು. ಒಂದು ಮುಹೂರ್ತ ಕಾಲ ಭೀಮಸೇನನು ವ್ಯಾಘ್ರನಡೆಯಿಂದ ಭೂಮಿಯಲ್ಲಿ ಹಸ್ತಗಳನ್ನಿಟ್ಟು ಹರುಷದಿಂದ ನರ್ತನ ಮಾಡಿದನು. ರಣಭೂಮಿಯಲ್ಲಿ ಪ್ರತಿಜ್ಞಾಪೂರ್ವಕವಾಗಿ ಶಾರ್ದೂಲವು ಗೋವನ್ನು ಸಂಹರಿಸುವಂತೆ ದುಶ್ಶಾಸನನನ್ನು ಸಂಹರಿಸಿದ ಭೀಮನನ್ನು ಕಂಡು ಕೃಷ್ಣಾರ್ಜುನರು ನಕ್ಕರು ಮತ್ತು ಬಹಳ ಹರ್ಷಗೊಂಡು ಭೀಮನನ್ನು ಪ್ರಶಂಸಿಸಿದರು. ಒಂದು ಮುಹೂರ್ತದಲ್ಲಿ ಆ ರಣರಂಗವು ಪವನನಂದನನಿಂದ ಶೂನ್ಯಗೊಳಿಸಲ್ಪಟ್ಟಿತು.

ಮರುದಿನ ಯುದ್ಧಭೂಮಿಯಲ್ಲಿ ದುರ್ಯೋಧನನ ಸಹೋದರರು ಉದಾರಸತ್ವನಾದ ಭೀಮನ ಮೇಲೆ ಶರವರ್ಷ ಮಾಡಿದರು. ಆಗ ಮಾರುತಿಯು ಶ್ರೇಷ್ಠ ಬಾಣಗಳಿಂದ ಅವರ ತಲೆಗಳನ್ನು ಛೇದಿಸಿ ಯಮರಾಯನಿಗೆ ಆಹುತಿಯಾಗಿ ಅರ್ಪಿಸಿದನು. ಅಂದಿನ ಕದನದಲ್ಲಿ ಇಪ್ಪತ್ತು ಜನ ದುರ್ಯೋಧನನ ಅನುಜರು ಮೃತರಾದರು. ಉಳಿದವರು ಯುದ್ಧ-ಭೂಮಿಯಿಂದ ಓಡಿಹೋದರು. ಭೀಮನನ್ನು ಬಿಟ್ಟು ಮತ್ತಾರಿಂದಲೂ ಮಾಡಲಸಾಧ್ಯವಾದ ಈ ಬಗೆಯ ವ್ಯಾಪಾರವನ್ನು ವೃಕೋದರನು ಮಾಡುತ್ತಿರಲು ಕರ್ಣನು ಕಣ್ಣುಮುಚ್ಚಿ ಹೆಚ್ಚಾಗಿ ಭೀತನಾಗಿರಲು ಕರ್ಣನ ಕುಮಾರನಾದ ವೃಷಸೇನನು ನಕುಲನ ಬಳಿಗಾಗಮಿಸಿ ಅವನು ಮುಂದೆ ಬಾರದಂತೆ ತಡೆದನು. ಆಗ ನಕುಲನು ವೃಷಸೇನನನ್ನು ರಥರಹಿತನನ್ನಾಗಿ ಮಾಡಿ ಅವನನ್ನು ಕವಚಖಡ್ಗಧಾರಿಗಳಾಗಿ ಅನುಸರಿಸಿ ಬಂದ ಅವನ ಮೂರು ಸಾವಿರ ಜನರನ್ನು ಸಂಹಾರ ಮಾಡಿದನು. ಆಗ ವೃಷಸೇನನು ನಕುಲನನ್ನೂ ಭೀಮಾರ್ಜುನಾದಿಗಳನ್ನು ಬಾಣಸಮೂಹದಿಂದ ವರ್ಷಿಸಿದನು. ಆಗ ಪಾರ್ಥನು ಏಕಕಾಲದಲ್ಲಿ ಒಂದೇ ಬಾಣದಿಂದ ವೃಷಸೇನನ ತಲೆ, ಕರಗಳು, ತೊಡೆಗಳನ್ನು ಕತ್ತರಿಸಿದನು.

ಒಂದೇ ಬಾಣದಿಂದ ತನ್ನ ಮಗನನ್ನು ಕೊಂದದ್ದನ್ನು ನೋಡಿ ಸೂರ್ಯಸುತನಾದ ಕರ್ಣನು ಇಂದ್ರಸುತನಾದ ಅರ್ಜುನನತ್ತ ಧಾವಿಸಿದನು. ಮಧ್ಯೆ ಆಗ ಅದ್ಭುತ ರಥಾರೂಢರಾದ ಸಕಲ ಅಸ್ತ್ರವಿಶಾರದರಾದ ಕರ್ಣಾರ್ಜುನರ ದ್ವಂದ್ವ-ಯುದ್ಧವಾಯಿತು. ಆಗ ಗಗನದಲ್ಲಿ ಕದನನಿರೀಕ್ಷಣಕುತೂಹಲದಿಂದ ಬಂದು ಸೇರಿದ ದೇವತೆಗಳು ಹಾಗೂ ಅಸುರರಲ್ಲಿ ವಿವಾದವೇರ್ಪಟ್ಟಿತು. ಅಮರರು ಅರ್ಜುನನ ಪಕ್ಷ ವಹಿಸಿದರೆ ಅಸುರರು ಕರ್ಣನ ಪಕ್ಷ ವಹಿಸಿದರು ಮತ್ತು "ಅರ್ಜುನನು ಗೆಲ್ಲುತ್ತಾನೆ-ಕರ್ಣನೇ ಜಯಿಸುವನು" ಎಂದು ಪರಸ್ಪರ ವಿವಾದವೇರ್ಪಟ್ಟಿತು. ಆಗ ಇತರ ಭೂತಪಿಶಾಚಾದಿಗಳು ಅಂಬರದಲ್ಲಿ ನೆರೆದು ಕರ್ಣಾರ್ಜುನರ ಪಕ್ಷಪಾತಿಗಳಾದ ದೇವಾಸುರರ ಗುಂಪಿನಲ್ಲಿ ಭಾಗವಹಿಸಿದರು. ಆಗ ರುದ್ರದೇವರು ಕಮಲಸಂಭವರಾದ ಬ್ರಹ್ಮದೇವರನ್ನು ಕುರಿತು ಇಂತು ನುಡಿದರು.

"ಪಿತಾಮಹ! ದೇವತೆಗಳು ಅಸುರರಿಗೆ ಭೀಮ-ದುರ್ಯೋಧನರೇ ಆಶ್ರಯರು. ಅಂದರೆ ಸುಮನಸರು ಭೀಮ-ನನ್ನೂ ದೈತ್ಯರು ಸುಯೋಧನನನ್ನೂ ಆಶ್ರಯಿಸಿದ್ದಾರೆ. ಭೀಮ-ದುರ್ಯೋಧನರಿಗೆ ಅತಿ ಪ್ರಾಣಸಮಾನವಾಗಿ ಪ್ರಿಯ-ರಾದವರು ಅರ್ಜುನ ಮತ್ತು ಕರ್ಣರು. ಆದುದರಿಂದ ಅವರಿಬ್ಬರಿಗೋಸುಗ ಈ ದೇವಾಸುರರೂ ಯುದ್ಧಮಾಡಲು ಅಪೇಕ್ಷಿಸಿದ್ದಾರೆ. ಹಾಗಾದಲ್ಲಿ ಜಗತ್ತಿನ ಮಹಾನಾಶವುಂಟಾಗುವುದು. ಆದ್ದರಿಂದ ಕರ್ಣಾರ್ಜುನರಲ್ಲಿ ಯುದ್ಧವೂ ಸಮ-ವಾಗುವುದು ಒಳ್ಳೆಯದು ಎಂದರು.

ರುದ್ರದೇವರ ವಚನವಾಲಿಸಿ ಇಂದ್ರದೇವರು ಪದ್ಮಯೋನಿಯನ್ನು ಕುರಿತು– "ಪಿತಾಮಹ ! ಶ್ರೀಕೃಷ್ಣನೆಲ್ಲಿರುವವನೋ ಅಲ್ಲಿ ಜಯವು ಸಿದ್ಧವು. ಕಾರಣವೇನೆಂದರೆ ಶ್ರೀಕೃಷ್ಣನ ಸಂಕಲ್ಪವು ಸುಳ್ಳಾಗಲಾರದೆಂದು ಶ್ರುತಿಪ್ರಸಿದ್ಧವಾಗಿದೆ. ಪಾರ್ಥನಿಗೆ ವಿಜಯವನ್ನು ಕರುಣಿಸಲು ಭಗವಾನ್ ಶ್ರೀಮಧುಸೂದನನು ಸಂಕಲ್ಪ ಮಾಡಿದ್ದರಿಂದ ಅರ್ಜುನನಿಗೆ ಜಯವಾಗಲಿ ಅದರಂತೆಯೆ ಕರ್ಣನ ವಧವು ಆಗಲಿ" ಎಂದು ವಿಜ್ಞಾಪಿಸಿ ಚತುರಾನನರಿಗೆ ನಮಸ್ಕರಿಸಿದನು. ಆಗ ಬ್ರಹ್ಮದೇವರು 'ಹಾಗೆಯೇ ಆಗಲಿ' ಎಂದು ನುಡಿದು ದೇವ-ದಾನವರನ್ನು ಸಂಬೋಧಿಸಿ "ಎಲೈ ದೇವತೆಗಳೇ! ಅಸುರರೇ! ಅರ್ಜುನ-ಕರ್ಣರ ಜಯಾಪಜಯವಿಚಾರವಾಗಿ ಏಕೆ ಕಾದಾಡುವಿರಿ? ಹಾಗೆ ಮಾಡಬೇಡಿರಿ ಮತ್ತು ಭೀಮ-ದುರ್ಯೋಧನರಿ-

ಗಾಗಿಯೂ ವಾದ-ವಿವಾದ ಮಾಡಬೇಡಿರಿ. ಶಾಂತರಾಗಿ ಅರ್ಜುನ-ಕರ್ಣರ ಯುದ್ಧವನ್ನು ನೋಡಿರಿ" ಎಂದು ಅಪ್ಪಣೆ ಮಾಡಿದರು. ಆಗ ಸುರಾಸುರರು ಜಗಳವನ್ನು ಬಿಟ್ಟು ಶಾಂತರಾಗಿ ಯುದ್ಧವನ್ನು ನೋಡಹತ್ತಿದರು.

ಇತ್ತ ಕರ್ಣಾರ್ಜುನರಲ್ಲಿ ಮಹಾಕದನವೇರ್ಪಟ್ಟಿತು. ಆ ವೀರರಿಬ್ಬರೂ ಪರಸ್ಪರ ಮಹಾಸ್ತ್ರ-ಶಸ್ತ್ರಗಳ ಮಳೆಗರೆದರು. ರಥಾರೂಢನಾದ ಪವನನಂದನನು ಅನುಜನಾದ ಪಾರ್ಥನ ರಕ್ಷಣೆಗೆ ನಿಂತನು. ಸಾತ್ಯಕಿ ಪಾಂಚಾಲಾದಿ ಪ್ರಮುಖರು ಅರ್ಜುನನನ್ನು ಸುತ್ತುವರೆದು ಆನಂದದಿಂದ ಯುದ್ಧವನ್ನು ನಿರೀಕ್ಷಿಸಹತ್ತಿದರು. ಇದರಂತೆ ದುರ್ಯೋಧನ-ಅಶ್ವತ್ಥಾಮ-ಪ್ರಮುಖರು ಅಂಗರಾಜ ಕರ್ಣನನ್ನು ಸುತ್ತುವರೆದು ನಿಂತು ಅವನಿಗೆ ಬೆಂಬಲಿಗರಾಗಿ ಕದನವನ್ನು ನೋಡಲಾರಂಭಿಸಿದರು. ಆಗ ಅತಿ ಭಯಂಕರ ಯುದ್ಧ ಪ್ರಾರಂಭವಾಯಿತು. ಆ ಯುದ್ಧದಲ್ಲಿ ಕರ್ಣನು ಅರ್ಜುನನಿಗಿಂತ ಮಿಗಿಲಾಗಿ ಶರಗಳಿಂದ ಫಲ್ಗುಣನನ್ನು ನೋಯಿಸಿದನು. ಅದನ್ನು ಅವಲೋಕಿಸಿದ ಭೀಮಸೇನನು ರೋಷದಿಂದ ಗದಾಪಾಣಿಯಾಗಿ ಗರ್ಜಿಸುತ್ತಾ "ಅರ್ಜುನ ! ನಾನೀಗ ಈ ಸೂತಪುತ್ರ ಕರ್ಣನನ್ನು ಈ ಗದೆಯಿಂದ ಹೊಡೆದುರುಳಿಸುತ್ತೇನೆ ಅಥವಾ ನೀನೀಗ ಪರಾಕ್ರಮ-ದಿಂದ ಇವನನ್ನು ಸಂಹರಿಸು" ಎಂದೆನಲು, ಶ್ರೀಕೃಷ್ಣನೂ ಸಹ ಅರ್ಜುನನಲ್ಲಿರುವ ಸರಾವೇಶವನ್ನು ವಿಶೇಷಾಕಾರವಾಗಿ ಅಭಿವ್ಯಕ್ತಿಗೊಳಿಸಿ "ಪಾರ್ಥ ! ನೀನು ತ್ರಿಲೋಕವಿಜಯಿಯಾಗಿದ್ದೀಯೆ. ಈ ಕರ್ಣನನ್ನು ಸಂಹರಿಸುವುದು ನಿನಗೊಂದು ಮಹತ್ಕಾರ್ಯವಾಗಲಾರದು. ಅವನನ್ನು ಕೊಲ್ಲಲು ನೀನು ಸಮರ್ಥವಾಗಿರುವೆ" ಮುಂತಾದ ವಚನಗಳಿಂದ ಧನಂಜಯ-ನನ್ನು ಪ್ರೋತ್ಸಾಹಿಸುತ್ತಾ ಧೈರ್ಯ ಹೇಳಲಾರಂಭಿಸಿದನು. ಭಗವಂತನ ವಚನವನ್ನಾಲಿಸಿ ಅತಿಶಯ ಸಮೃದ್ಧ ಪರಾಕ್ರಮ-ಯುಕ್ತನಾಗಿ ಏಕಕಾಲದಲ್ಲಿ ಪಾರ್ಥನು ದುರ್ಯೋಧನ, ಅಶ್ವತ್ಥಾಮ, ಕೃಪಾಚಾರ್ಯರು ಮತ್ತು ಭೋಜದೇಶೀಯ ವೀರರುಗಳನ್ನು ವಿರಥಗೊಳಿಸಿ ಶತ್ರುಸಂಹಾರಕನಾದ ಧನಂಜಯನು ವಿಚಿತ್ರ ರೀತಿಯಿಂದ ಅವರೆಲ್ಲರ ಮೇಲೆ ಬಾಣಗಳು ಸುರಿಮಳೆಗೈಯುತ್ತಾ ಹೋರಾಡಿದರು.

ಆಗ ಕುರುರಾಜನಾದ ದುರ್ಯೋಧನ ಮೊದಲಾದವರು ಅರ್ಜುನನ ಅಲೌಕಿಕವಾದ ಕದನಚಾತುರ್ಯವನ್ನು ದೂರದಲ್ಲಿ ನಿಂತು ನೋಡತೊಡಗಿದರು. ಆಗ ಗುರುಪುತ್ರನಾದ ಅಶ್ವತ್ಥಾಮನು ದುರ್ಯೋಧನನ ಕರವನ್ನು ತನ್ನ ಕರಗಳಿಂದ ಹಿಡಿದು "ರಾಜನ್ ದುರ್ಯೋಧನ ! ಭೀಮಸೇನನ ಪರಾಕ್ರಮವನ್ನು ನೀನು ನೋಡಿದ್ದೀಯೆ. ಈಗ ನಾವು ಪರಾಜಿತರಾಗಿರುವುದರಿಂದ ಪಾರ್ಥನ ಮಹಾಬಲವನ್ನು ನೋಡಿದ್ದೀಯೆ! ಆದುದರಿಂದ ರಾಜೇಂದ್ರ ! ಸಾಕಿನ್ನು ಈ ದ್ವೇಷ. ನಿನ್ನ ಹಗೆತನವನ್ನು ತ್ಯಜಿಸು. ಪಾಂಡವರೊಡನೆ ಸೇರಿ ನನ್ನ ಸಹಿತನಾಗಿ ರಾಜ್ಯವನ್ನು ಪರಿಪಾಲಿಸು. ಪಾಂಡುನಂದನರೊಡನೆ ಸ್ನೇಹದಿಂದ ನಾನು, ಅರ್ಜುನನು ಯುದ್ಧ ಮಾಡದಂತೆ ತಡೆಯುತ್ತೇನೆ ಮತ್ತು ಯುದ್ಧ ನಿವೃತ್ತನಾಗುವಂತೆ ಅವನನ್ನು ಒಪ್ಪಿಸುತ್ತೇನೆ. ಶ್ರೀಜನಾರ್ದನನೂ ಇದನ್ನೂ ವಿರೋಧಿಸುವುದಿಲ್ಲ. ಭೀಮನು ಸದಾ ಕೃಷ್ಣನು ಹೇಳಿದಂತೆ ಕೇಳಿ ಅದರಂತೆ ವರ್ತಿಸುತ್ತಾನೆ. ಧರ್ಮಜನು ಸದಾ ಶಾಂತಮನಸ್ಕನು. ಅತಃ ಅವನೂ ಸಂತೋಷದಿಂದ ಒಪ್ಪುವನು. ಇದರಂತೆ ನಕುಲ-ಸಹದೇವರೂ ಶಾಂತಮನದವರು. ಅಣ್ಣನ ಮಾತಿಗೆ ಪ್ರತಿಹೇಳದೆ ಒಪ್ಪುತ್ತಾರೆ. ನಾನು ಇದನ್ನು ನಿನ್ನ ಹಿತದೃಷ್ಟಿಯಿಂದ ನಿನ್ನ ಹಿತಕ್ಕಾಗಿಯೇ ಹೇಳುತ್ತಿದ್ದೇನೆ. ಆದ್ದರಿಂದ ನನ್ನ ಮಾತನ್ನು ಕೇಳು. ಮರಣಭಯದಿಂದ ಇಂತು ಹೇಳುವೆನೆಂದು ಭಾವಿಸಬೇಡ. ನಾನು ಮತ್ತು ಸೋದರಮಾವರಾದ ಕೃಪಾಚಾರ್ಯರಿಬ್ಬರೂ ಚಿರಂಜೀವಿಗಳು. ನಮಗೆ ಮರಣ ಭಯವಿಲ್ಲ. ಆದ್ದರಿಂದ ನನ್ನ ಮಾತನ್ನು ಶಂಕಿಸದೆ ಕೇಳಿ ಸುಖಿಯಾಗು" ಎಂದು ಹೇಳಿದನು. ಆಗ ದುರ್ಯೋಧನನು "ಗುರುಪುತ್ರ ! ಈಗ ಭೀಮನು ನಮ್ಮ ದುಶ್ಶಾಸನನ ರಕ್ತವನ್ನು ಕುಡಿದು ಶಾರ್ದೂಲ ಚೇಷ್ಟೆ ಮಾಡಿ ನರ್ತಿಸಿದ್ದಾನೆ. ಇಂಥ ಭೀಮನೊಡನೆ ನಾನೆಂದಿಗೂ ಸಂಧಿಗೆ ಒಪ್ಪಲಾರೆ" ಎಂದನು. ಅದನ್ನಾಲಿಸಿ ಅಶ್ವತ್ಥಾಮನು ಮತ್ತೇನೂ ಹೇಳದೆ ಮೌನವಹಿಸಿದನು.

ಆಗ ಕರ್ಣಾರ್ಜುನರು ಮಹಾಸ್ತ್ರವರ್ಷದಿಂದ ನಿರಂತರವಾಗಿ ಆಕಾಶವನ್ನು ಅವಕಾಶರಹಿತವನ್ನಾಗಿ ಮಾಡಿದರು. ಮತ್ತು ಒಬ್ಬರಿಗೊಬ್ಬರು ಸಂಹಾರೋದ್ದೇಶದಿಂದ ಆಗ್ನೇಯಾಸ್ತ್ರ, ವಾರುಣಾಸ್ತ್ರ, ಐಂದ್ರಾಸ್ತ್ರಾದಿಗಳನ್ನು ಪ್ರಯೋಗಿಸಿದರು. ಆ ಯುದ್ಧದಲ್ಲಿ ಅವರೀರ್ವರೂ ಬ್ರಹ್ಮಾಸ್ತ್ರ ಪ್ರಯೋಗಿಸಿ ಗರ್ಜಿಸಿದರು. ಹಾಗೂ ಪರಸ್ಪರ ಅಸ್ತ್ರಗಳಿಗೆ ಪ್ರತ್ಯಸ್ತ್ರಗಳನ್ನು ಬಿಡುತ್ತಾ ಆ ರಣಭೂಮಿಯಲ್ಲಿ ಸಂಚರಿಸಿದರು. ಆಗ ಯುದ್ಧದಲ್ಲಿ ಕ್ರಮೇಣ ಬಲವೃದ್ಧನಾದ ಪಾರ್ಥನಿಂದ ಪರಾಜಿತನಾದ ಕರ್ಣನು ಬ್ರಹ್ಮಾಸ್ತ್ರದಿಂದ ಸಹಿತವಾದ ನಾಗಾಸ್ತ್ರವನ್ನು ಅರ್ಜುನನ ಮೇಲೆ ಪ್ರಯೋಗಿಸಿದನು. ಆಗ ಕೃಷ್ಣನು ಅದರಿಂದ ಪಾರ್ಥನನ್ನು ರಕ್ಷಿಸಲು ತನ್ನ ಆಶ್ಚರ್ಯಕರವಾದ ರಥವು ಭೂಮಿಯನ್ನು ಭೇದಿಸಿಕೊಂಡು ಕೆಳಗೆ ಹೋಗುವಂತೆ ಮಾಡಿ ನಾಗಾಸ್ತ್ರವನ್ನು ವ್ಯರ್ಥಗೊಳಿಸಿದನು. ಆಗ ನಾಗಾಸ್ತ್ರವು ಅವನ ಕಿರೀಟವನ್ನು ಪುಡಿಪುಡಿ ಮಾಡಿ ಸ್ವರ್ಗಕ್ಕೆ ತೆರಳಿತು. ಆ ಅಸ್ತ್ರದಲ್ಲಿ ಆವಿಷ್ಟನಾಗಿದ್ದ ಅಶ್ವಸೇನನು, ವಾಸುದೇವನು ರಥವು ಐದು ಅಂಗುಲ ಕೇಳಗಿಳಿಯದಂತೆ ಮಾಡಿದ್ದರಿಂದ ಕರ್ಣನು ಅರ್ಜುನನ ಕಣ್ಣಿಗೆ ಗುರಿಯಿಟ್ಟು ಬಿಟ್ಟದ್ದರಿಂದ (ಅಶ್ವಸೇನನು) ಅರ್ಜುನನ ಕಿರೀಟವನ್ನು ಭೇದಿಸಿ ಆಕಾಶಮಾರ್ಗವಾಗಿ ಹೋಗಹತ್ತಿತು. ಆಗ ಆಣತಿಯಂತೆ ಖಾಂಡವದಹನಕಾಲದ ತನ್ನ ಪೂರ್ವಶತ್ರುವಾದ ತಕ್ಷಕನ ಮಗನಾದ ಅಶ್ವಸೇನನೆಂಬ ನಾಗನನ್ನು ಅರ್ಜುನನು ಬಾಣಪ್ರಯೋಗದಿಂದ ಸಂಹರಿಸಿ ಕರ್ಣನು ನೋಡುತ್ತಿರುವಂತೆ ಭೂಮಿಗುರುಳಿಸಿದನು.

ಅದು ಸರಿ, ಅರ್ಜುನನು ತನ್ನ ಕಿರೀಟವು ಭಗ್ನವಾಗುವುದಕ್ಕೆ ಮೊದಲೇ ಏಕೆ ಪರಿಹಾರರೂಪ ಅಸ್ತ್ರವನ್ನು ಪ್ರಯೋ-ಗಿಸಲಿಲ್ಲವೆಂದರೆ ಆ ನಾಗಾಸ್ತ್ರವು ಬ್ರಹ್ಮಾಸ್ತ್ರಸಹಿತವಾಗಿತ್ತು. ಬ್ರಹ್ಮಾಸ್ತ್ರವು ಅತಿವೇಗವುಳ್ಳದ್ದು. ಅತಃ ಅತಿವೇಗವಾದ ಬ್ರಹ್ಮಾಸ್ತ್ರ-ಸಹಿತವಾದ್ದರಿಂದ ಪ್ರತ್ಯಸ್ತ್ರ ಬಿಡಲು ಕಾಲಾವಕಾಶವಿರಲಿಲ್ಲವಾದುದರಿಂದ ಕಿರೀಟವು ಭಗ್ನವಾದ ಮೇಲೆ ಬ್ರಹ್ಮಾಸ್ತ್ರರಹಿತನಾದ ನಾಗಾಸ್ತ್ರವನ್ನು ಬಿಟ್ಟು (ಅಶ್ವಸೇನನನ್ನು) ಕೊಂದು ಧರೆಗುರುಳಿಸಿದನೆಂದು ತಿಳಿಯಬೇಕು.

ಪುನಃ ಅರ್ಜುನನೊಂದಿಗೆ ಮಹಾಸ್ತ್ರಗಳಿಂದ ಯುದ್ಧಮಾಡುತ್ತಿರುವ ಸೂರ್ಯಪುತ್ರ ಕರ್ಣನ ರಥವು ಭೂಮಿಯಲ್ಲಿ ಹುಗಿದು ಹೋಯಿತು. (ರಥದ ಚಕ್ರವನ್ನು ಭೂಮಿಯು ನುಂಗಿತು. ) ಮತ್ತು ವಿಪ್ರ(ಪರಶುರಾಮರ ಶಾಪ)ಶಾಪದಿಂದ ಕರ್ಣ-ನಿಗೆ ದಿವ್ಯವಾದ ಮಹಾಸ್ತ್ರಗಳೂ ಮರೆತುಹೋದವು. ಆಗ ಕರ್ಣನು ಆ ಚಕ್ರಗಳನ್ನು ಮೇಲೆತ್ತಲವಕಾಶಕೊಡುವಂತೆ ಪಾರ್ಥನನ್ನು ಕೋರಿದನು. ಆದರೆ ಅದಕ್ಕೆ ಕೃಷ್ಣನು ಒಪ್ಪಲಿಲ್ಲ ಮತ್ತು ಅವಕಾಶವೀಯದಂತೆ ಕರ್ಣನನ್ನು ಸಂಹರಿಸುವಂತೆ ಆಜ್ಞಾಪಿಸಿದನು. ಆಗ ಅರ್ಜುನನು ತ್ರಿನೇತ್ರನಾದ ಶ್ರೀರುದ್ರನು ಅನುಗ್ರಹಿಸಿದ 'ಅಂಜಲಿಕಂ' ಎಂಬ ಬಾಣವನ್ನು ಧನುವಿಗೆ ಹೂಡಿ ತನ್ನಲ್ಲಿರುವ ಸತ್ಯ-ಧರ್ಮಗಳಿಂದ ಬಾಣವನ್ನು ಸಂಯೋಜಿಸಿ ಕರ್ಣನನ್ನು ಸಂಹರಿಸಲು ಬಾಣಬಿಡಲು ಅರ್ಜುನನು ಸಿದ್ಧನಾಗಲು ಕರ್ಣನು ಆ ಅಂಜಲಿಕಂ ಎಂಬ ಬಾಣವನ್ನೇ ಕತ್ತರಿಸಿ ಹಾಕಲು ಉದ್ಯುಕ್ತನಾದನು. ಪಾರ್ಥನು ಅತ್ಯಂತ ಘೋರವಾದ ಆ ಬಾಣನಿಂದ ಕರ್ಣನ ಶಿರಸ್ಸನ್ನು ಛೇದಿಸಿದನು. ಅಪರಾಹ್ಣಕಾಲದಲ್ಲಿ ಅಂದರೆ ದಿನದ ಪ್ರಾತಃಕಾಲಾದಿ ಐದುಕಾಲಗಳ ಮಧ್ಯದಲ್ಲಿ ಅಪರಾಹ್ಣದ ನಾಲ್ಕನೆಯ ಕಾಲದಲ್ಲಿ ಅಂಜಲಿಕಂ ಎಂಬ ಬಾಣದಿಂದ ಸೂರ್ಯಪುತ್ರನಾದ ಕರ್ಣನ ಶಿರಸ್ಸು ಶರೀರದಿಂದ ಬೇರ್ಪಟ್ಟು ಧರೆಗುರುಳಿತು.

ಇಂತು ಕರ್ಣನು ಹತನಾಗಲು ದೀನವದನನಾಗಿ ದುರ್ಯೋಧನನು ಸೈನ್ಯವನ್ನು ಹಿಂತೆಗೆದುಕೊಂಡು ರಣಭೂಮಿ-ಯಿಂದ ಹೊರಟು ಹೋದನು. ಕರ್ಣನನ್ನು ಅರ್ಜುನನು ಸಂಹರಿಸಿದ ವಿಚಾರವನ್ನು ಅರಿತ ರಾಜಾ ಯುಧಿಷ್ಠರನು ಪರಮಾನಂದತುಂದಿಲನಾಗಿ ರಣಭೂಮಿಗೆ ಬಂದು ಕತ್ತರಿಸಲ್ಪಟ್ಟ ಕರ್ಣನ ಶಿರವನ್ನು ನೋಡಿದನು. ಶ್ರೀಕೃಷ್ಣನು ಅರ್ಜುನ ಭೀಮಸೇನರನ್ನೂ ಪರಾಕ್ರಮಿಗಳಾದ ಧೃಷ್ಟದ್ಯುಮ್ನ ಸಾತ್ಯಕಿ ಮುಂತಾದ ವೀರರನ್ನೂ ಧರ್ಮರಾಜನು ಹೊಗಳಿದನು. ಅನಂತರ ಶ್ರೀಕೃಷ್ಣನನ್ನು ಅನುಸರಿಸಿ ಆ ಎಲ್ಲ ಪಾಂಡವರೂ ಶಿಬಿರಕ್ಕೆ ಹೋಗಿ ಅಂದು ರಾತ್ರಿಯನ್ನು ಬಹಳ ಸಂತೋಷದಿಂದ ಕಳೆದರು.

ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಗ್ರಂಥದಲ್ಲಿ ಇಪ್ಪತ್ತೇಳನೆಯ ಅಧ್ಯಾಯದ ಕಥಾಸಾರವು ಮುಗಿದುದು.

॥ ಶ್ರೀಕೃಷ್ಣಾರ್ಪಣಮಸ್ತು ॥

# ಅಷ್ಟಾವಿಂಶಾಧ್ಯಾಯಭಾವಸಂಗ್ರಹ

**ಅವತಾರಿಕೆ:-**

ಈಗ ಶ್ರೀರಾಘವೇಂದ್ರ ಗುರುಸಾರ್ವಭೌಮರು ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ರಚಿಸಿದ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಕ್ಕೆ ವಿರಚಿಸಿದ "ಭಾವಸಂಗ್ರಹ"ದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯಾರ್ಥವನ್ನು "ಶಲ್ಯೇ" ಎಂಬ ಪದ್ಯದಿಂದ ಸಂಗ್ರಹಿಸುತ್ತಾರೆ.

**ಶಲ್ಯೇ ಧರ್ಮಸುತಾದ್ಧತೇ ಕುರುಕುಲೇ ಪಾರ್ಥೈಃ ಸಮೂಹೇ ಹತೇ**
**ಭೀಮೇನಾನುಜಸಂಯುತೇ ವಿನಿಹತೇ ದುರ್ಯೋಧನೇ ದ್ರೌಣಿನಾ ।**
**ಸುಪ್ತಾನಾಂ ನಿಧನೇ ಕೃತೇ ನಿಶಿ ತತೋ ಮುಕ್ತ್ವಾ ವಿಧೇರಸ್ತ್ರತಃ**
**ಪಾರ್ಥಾನ್ ರಾಜ್ಯಮಿತಾಂಶ್ಚ ತತ್ಸುತಸುತಂ ಯೋऽಧಾತ್ಸ ನೋऽವ್ಯಾದ್ಧರಿಃ ॥ 28 ॥**

**ಅನ್ವಯಾರ್ಥ:-** **ಶಲ್ಯೇ** = ಶಲ್ಯ ರಾಜನು, **ಧರ್ಮಸುತಾತ್** = ಧರ್ಮರಾಜನಿಂದ, **ಹತೇ ಸತಿ** = ಕೊಲ್ಲಲ್ಪಡಲು, **ಸಮೂಹೇ** = ಸಮಸ್ತವಾದ, **ಕುರುಕುಲೆ** = ಕೌರವವಂಶೀಯರೆಲ್ಲರೂ, **ಪಾರ್ಥೈಃ** = ಪಾಂಡವರಿಂದ (ಕುಂತಿ ಮಕ್ಕಳಿಂದ), **ಹತೇ ಸತಿ** = ಸಂಹರಿಸಲ್ಪಡಲು, **ಅನುಜಸಂಯುತೇ** = ಅರ್ಜುನನಿಂದ ಸಹಿತನಾದ, **ಭೀಮೇನ** = ಭೀಮಸೇನನಿಂದ, **ದುರ್ಯೋಧನೇ** = ದುರ್ಯೋಧನನು, **ವಿನಿಹತೇ ಸತಿ** = ಕೊಲ್ಲಲ್ಪಡಲು, **ನಿಶಿ** = ರಾತ್ರಿಯಲ್ಲಿ, **ದ್ರೌಣಿನಾ** = ಆಚಾರ್ಯ ದ್ರೋಣರ ಮಗನಾದ ಅಶ್ವತ್ಥಾಮನಿಂದ, **ಸುಪ್ತಾನಾಂ** = ಮಲಗಿ ನಿದ್ರಿಸುತ್ತಿದ್ದ ಉಪಪಾಂಡವಾದಿಗಳ, **ನಿಧನೇ** = ನಾಶವು, **ಕೃತೇ ಸತಿ** = ಮಾಡಲ್ಪಡಲು, (**ಮುಕ್ತಾಃ** = ಶಸ್ತ್ರಗಳನ್ನು ತ್ಯಜಿಸಿರುವಾಗ), **ತತಃ** = ಆನಂತರ, **ಯಃ** = ಯಾವ ಶ್ರೀಕೃಷ್ಣನು, ಅಶ್ವತ್ಥಾಮನು ಪ್ರಯೋಗಿಸಿದ, **ವಿಧೇರಸ್ತ್ರತಃ** = ಉಭಯ ಬ್ರಹ್ಮಾಸ್ತ್ರದಿಂದ, **ಮುಕ್ತ್ವಾ** = ಬಿಡಿಸಿ, **ರಾಜ್ಯಮಿತಾನ್** = ರಾಜ್ಯವನ್ನು ಪಡೆದ, **ಪಾರ್ಥಾನ್** = ಪಾಂಡವರನ್ನೂ, **ತತ್ಸುತಸುತಂ** = ಆ ಪಾಂಡವರ ಅಂದರೆ ಅರ್ಜುನನ, **ಸುತ** = ಮಗನಾದ ಅಭಿಮನ್ಯುವಿನ, **ಸುತಂ** = ಪುತ್ರನಾದ ಪರೀಕ್ಷಿತನನ್ನೂ, **ಅಧಾತ್** = ಕಾಪಾಡಿದನೋ, **ಸಃ** = ಅಂತಹ, **ಹರಿಃ** = ಶ್ರೀಕೃಷ್ಣಪರಮಾತ್ಮನು, **ನಃ** = ನಮ್ಮನ್ನು, **ಅವ್ಯಾತ್** = ಸಂರಕ್ಷಣಮಾಡಲಿ.

**ತಾತ್ಪರ್ಯ:-** ಕುರುಕ್ಷೇತ್ರದ ರಣಭೂಮಿಯಲ್ಲಿ ಜರುಗಿದ ಯುದ್ಧದಲ್ಲಿ ಧರ್ಮರಾಜನು ಮದ್ರದೇಶಾಧಿಪತಿಯಾದ ಶಲ್ಯರಾಜನನ್ನು ಸಂಹಾರಮಾಡಿದನು. ಪಾಂಡವರು ಸಮಸ್ತ ಕೌರವ ಕುಲದವರನ್ನು ಸಂಹರಿಸಿದರು. ಆ ತರುವಾಯ ಅರ್ಜುನ, ಧರ್ಮರಾಜ, ನಕುಲ, ಸಹದೇವರು ಮತ್ತು ಶ್ರೀಕೃಷ್ಣನಿಂದ ಸಹಿತನಾದ ವಾಯುಕುಮಾರನಾದ ಭೀಮಸೇನನು ಗದಾಯುದ್ಧದಲ್ಲಿ ದುರ್ಯೋಧನನನ್ನು ಸಂಹಾರ ಮಾಡಿದನು. ಅಂದು ರಾತ್ರಿ ದುರ್ಯೋಧನನ ಪ್ರೇರಣೆಯಿಂದ ಅಶ್ವತ್ಥಾಮನು, ಶಿಬಿರದಲ್ಲಿ ಮಲಗಿ ನಿದ್ರಿಸುತ್ತಿದ್ದ ಉಪಪಾಂಡವಾದಿಗಳನ್ನು ನಾಶಪಡಿಸಿದನು. ಆದರಿಂದ ಪಾಂಡವರು ಶಸ್ತ್ರವನ್ನು ತ್ಯಜಿಸಿರುವಾಗ ದ್ರೋಣಪುತ್ರನಾದ ಅಶ್ವತ್ಥಾಮನು ಸಕಲ ಪಾಂಡವರ ನಾಶಕ್ಕಾಗಿ ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ, ರಾಜ್ಯವನ್ನು ಪಡೆದ ಪಾಂಡವರನ್ನೂ, ಪಾಂಡವಮಧ್ಯಮನಾದ ಅರ್ಜುನನ ಮಗನಾದ, ಅಭಿಮನ್ಯುವಿನ ಪುತ್ರನಾದ ಪರೀಕ್ಷಿತ್ ರಾಜನನ್ನು (ಗರ್ಭಸ್ಥನಾಗಿದ್ದ ಪರೀಕ್ಷಿತ್ ರಾಜನನ್ನು) ಯಾವ ಭಗವಾನ್ ಶ್ರೀಕೃಷ್ಣನು ಕಾಪಾಡಿದನೋ, ಅಂತಹ ಶ್ರೀಹರಿಯು ನಮ್ಮನ್ನು ಸಂರಕ್ಷಣ ಮಾಡಲಿ ಎಂದು ಭಾವ.

# ಇಪ್ಪತ್ತೆಂಟನೆಯ ಅಧ್ಯಾಯದ ಕಥಾಸಾರವು

ಸೂರ್ಯಪುತ್ರನಾದ ಅಂಗರಾಜಕರ್ಣನು ಮೃತನಾದ ಮೇಲೆ ಅಂದು ರಾತ್ರಿ ಕಳೆದು ಮರುದಿನ ಸೂರ್ಯೋದಯವಾದ ಮೇಲೆ ದುರ್ಯೋಧನನು ಶಲ್ಯರಾಜನನ್ನು ಸೇನಾಧಿಪತಿಯನ್ನಾಗಿ ಮಾಡಲು ಗುರುಪುತ್ರ ಅಶ್ವತ್ಥಾಮಾಚಾರ್ಯರೊಡನೆ ಚರ್ಚಿಸಿ, ಅವನು ಒಪ್ಪಿದ ಮೇಲೆ ಮದ್ರೇಶನಾದ ಶಲ್ಯಭೂಪತಿಯನ್ನು ಕುರುಸೈನ್ಯದ ಮಹಾದಂಡನಾಯಕನನ್ನಾಗಿ ಮಾಡಿ ಯುದ್ಧಕ್ಕಾಗಿ ರಣರಂಗಕ್ಕೆ ಹೊರಟನು. ಅದನ್ನು ಗಮನಿಸಿ, ಪಾಂಡವರೂ ಕವಚಧಾರಿಗಳಾಗಿ ರಣಭೂಮಿಗೆ ಬಂದರು. ಆಗ ಕುರು-ಪಾಂಡವರಲ್ಲಿ ಮಹಾಕದನವೇರ್ಪಟ್ಟಿತು. ಪಾಂಡವ ಸೈನ್ಯದ ಅಗ್ರಭಾಗದಲ್ಲಿ ಭೀಮಸೇನನೂ, ಮಧ್ಯದಲ್ಲಿ ರಾಜಾ ಯುಧಿಷ್ಠಿರನೂ, ಅವನ ಹಿಂಭಾಗದಲ್ಲಿ ಶ್ರೀಕೃಷ್ಣನಿಂದ ರಕ್ಷಿತನಾದ ಅರ್ಜುನನೂ, ರಾಜನ ರಥದ ಚಕ್ರದ ರಕ್ಷಕರಾಗಿ ನಕುಲ, ಸಹದೇವ, ಧೃಷ್ಟದ್ಯುಮ್ನ ಮತ್ತು ಸಾತ್ಯಕಿ ಮುಂತಾದವರು ರಾಜಾ ಧರ್ಮನಂದನನ ಪಾರ್ಶ್ವಗಳಲ್ಲಿಯೂ ಇದ್ದರು. ಇತ್ತ ಕೌರವರ ಸೈನ್ಯದ ಮುಂಭಾಗದಲ್ಲಿ ಗುರುಸುತನಾದ ಅಶ್ವತ್ಥಾಮನೂ, ಮಧ್ಯದಲ್ಲಿ ಸೈನ್ಯಾಧಿಪತಿ ಶಲ್ಯರಾಜನೂ, ಹಿಂಭಾಗದಲ್ಲಿ ತನ್ನ ಸಹೋದರರಿಂದೊಡಗೂಡಿ ಸುಯೋಧನನೂ, ಶಲ್ಯನ ರಥದ ಚಕ್ರ ರಕ್ಷಕರಾಗಿ ಶಕುನಿ ಮತ್ತು ಅವನ ಮಗನಾದ ಉಲೂಕನೂ, ಎಡಭಾಗಗಳಲ್ಲಿ ಕೃಪಾಚಾರ್ಯ, ಕೃತವರ್ಮರು ಬರುತ್ತಿದ್ದರು.

ಆಗ ಭೀಮ ಅಶ್ವತ್ಥಾಮರಲ್ಲಿ ಕದನವಾಯಿತು. ಭೀಮಸೇನನು ಪ್ರಯಾಸವಿಲ್ಲದೆ ಅಶ್ವತ್ಥಾಮನ ರಥವನ್ನು ಭಗ್ನಗೊಳಿಸಿದನು. ಶಲ್ಯರಾಜನು ಧರ್ಮಜನ ರಥವನ್ನು ಹಾಳುಗೆಡಹಿದನು. ಅದೇ ವೇಳೆಗೆ ಕಪಿಧ್ವಜನಾದ ಪಾರ್ಥನು ಆಗಮಿಸಿದನು. ಅವರಿಬ್ಬರಿಗೂ ರೋಮಹರ್ಷಕವೂ, ವಿಸ್ಮಯಕಾರಕವೂ ಆದ ಹೋರಾಟವಾಯಿತು. ಬೇರೊಂದು ರಥವನ್ನೇರಿದ ಅಶ್ವತ್ಥಾಮನು ಭೀಮನ ಬಳಿಗೆ ಬಂದನು. ಮತ್ತೊಂದು ಕಡೆಯಿಂದ ಸುಯೋಧನನು ಶರವರ್ಷದಿಂದ ದಿಕ್ಕುಗಳನ್ನು ಮುಚ್ಚಿದನು. ಅವರಿಬ್ಬರನ್ನೂ ಭೀಮನು ಬಾಣಪರಂಪರೆಯಿಂದ ಮಳೆಗರೆದು ತರುಬಿದನು. ಅವರೀರ್ವರಿಗೂ ಅಮಾನುಷವೂ, ಘೋರವೂ ಆದ ಯುದ್ಧವಾಯಿತು. ಆಗ ದ್ರೌಪದಿಯ ಪುತ್ರರು ಯುಯುತ್ಸು ಮತ್ತು ಸೋದರ ಮಾವಂದಿರಾದ ಶಾಂಡಿಲ್ಯರಿಂದೊಡಗೂಡಿ ದುರ್ಯೋಧನನ ಅನುಜರನ್ನು ತಡೆಗಟ್ಟಿದರು. ಆಗ ಶಕುನಿಯನ್ನು ಸಹದೇವನೂ, ಉಲೂಕನನ್ನು ನಕುಲನೂ, ಕೃಪನನ್ನು ಧೃಷ್ಟದ್ಯುಮ್ನನೂ, ಸಾತ್ಯಕಿಯೂ ತಡೆದರು. ಅವರ ಯುದ್ಧವು, ಶರವರ್ಷಣ ಹಸ್ತಕೌಶಲ ಪ್ರದರ್ಶಕವೂ ಆಗಿದ್ದು ನೋಡುವವರಿಗೆ ಮನರಂಜಕವಾಗಿತ್ತು.

ಅದೇ ಸಮಯದಲ್ಲಿ ಶಲ್ಯಾರ್ಜುನರಿಗೆ ಅದ್ಭುತ ಯುದ್ಧವಾಯಿತು. ಶಲ್ಯನು ಬಾಣಗಳಿಂದ ದಿಕ್ಕುಗಳನ್ನು ತುಂಬಿದನು. ಅರ್ಜುನನೂ ಯುದ್ಧದಲ್ಲಿ ಬೆಡಗುಗೊಂಡು ಹೋರಾಡಿದನು. ಅದು ದೇವಾಸುರರ ಕದನವನ್ನು ನೆನಪಿಗೆ ತರುವಂತಿದ್ದು, ಸಮವಾಯಿತು. ಆಗ ಮದ್ರರಾಜನಾದ ಶಲ್ಯನು ವಜ್ರಾಯುಧಸದೃಶವಾದ ಅಸ್ತ್ರವನ್ನು ಭೀಭತ್ಸುವಿನ ಮೇಲೆ ಬಿಟ್ಟನು. ಅದು ಅವನನ್ನು(ಪಾರ್ಥನನ್ನು)ಮೂರ್ಛೆಗೊಳಿಸಿತು. ಶತ್ರುತಾಪಕರನಾದ ಧನಂಜಯನು ಮೂರ್ಛೆ ತಿಳಿದೆದ್ದು ಶಲ್ಯನ ಧನುವನ್ನು ಕತ್ತರಿಸಿದನು. ಆಗ ಶಲ್ಯನು ಬೇರೊಂದು ಬಿಲ್ಲನ್ನು ಹಿಡಿದು ಅರ್ಜುನನ ಮೇಲೆ ಸೌರ ಮೊದಲಾದ ಅಸ್ತ್ರಗಳನ್ನು ಪ್ರಯೋಗಿಸಿದನು. ಅದನ್ನು ಸಹಿಸದ ಪಾರ್ಥನು ಐಂದ್ರಾಸ್ತ್ರದಿಂದ ಆ ಅಸ್ತ್ರವನ್ನು ಪರಿಹರಿಸಿದನು. ಶಲ್ಯರಾಜನು ಗದೆಯಿಂದ ಅರ್ಜುನನ ವಕ್ಷಃಸ್ಥಳಕ್ಕೆ ಹೊಡೆದನು. ಅದರಿಂದ ಪಾರ್ಥನು ತಿಳಿವು ಕಳೆದುಕೊಂಡನು. ಅದನ್ನು ಅವಲೋಕಿಸಿ ದುರ್ಯೋಧನಾದಿಗಳು ಸಿಂಹನಾದ ಮಾಡಿದರು. ಅರ್ಜುನನು ಮೂರ್ಛೆಯಿಂದೆಚ್ಚೆತ್ತು ಶಲ್ಯನ ವಕ್ಷಃಸ್ಥಳಕ್ಕೆ ಹೊಡೆದನು. ಆದಕಾರಣ ಶಲ್ಯನು ಸರ್ವಾಂಗವಿಹ್ವಲಿತನಾಗಿ ಧ್ವಜಸ್ತಂಭವನ್ನಾಶ್ರಯಿಸಿ ನಿಂತನು. ಸ್ವಲ್ಪ ವಿಶ್ರಾಂತಿ ಪಡೆದು ಮದ್ರರಾಜನು ಯಮದಂಡ ಸಮಾನವಾದ ಬಾಣದಿಂದ ಪಾರ್ಥನ ಸ್ತನಗಳ ಮಧ್ಯಭಾಗವನ್ನು ಸೀಳಿದನು. ಅದರಿಂದ ಪಾರ್ಥನು

ವಿಹ್ವಲಿತಾಂಗನಾಗಿ, ಸ್ವಲ್ಪ ಚೇತರಿಸಿಕೊಂಡು ಧ್ವಜದಂಡವನ್ನು ಹಿಡಿದು ನಿಂತು ನಂತರ ಶಲ್ಯನ ಬಿಲ್ಲನ್ನು ಛೇದಿಸಿದನು ಮತ್ತು ಛತ್ರ, ಧ್ವಜ ಮತ್ತು ಸಾರಥಿಗಳನ್ನು ಶರಗಳಿಂದ ಮುರಿದು ಕೆಳಗುರುಳಿಸಿದನು. ಇತ್ತ ಶಲ್ಯನಿಂದ ವಿರಥನಾಗಿದ್ದ ಧರ್ಮರಾಜನು ನಾಲ್ಕು ಉತ್ತಮ ಬಾಣಗಳಿಂದ ಶಲ್ಯನ ವಾಹನವನ್ನು ಹೊಡೆದನು.

ಆಗ ಶಲ್ಯನು ಬೇರೊಂದು ರಥವನ್ನು ಏರಿ ಸಕಲರನ್ನೂ ಬಾಣಪ್ರವಾಹದಿಂದ ಮುಚ್ಚಿಬಿಟ್ಟನು ಮತ್ತು ಯುಧಿಷ್ಠಿರನ ರಥವನ್ನು ನಾಶಪಡಿಸಿದನು. ಸಾತ್ಯಕಿಯ ಅಶ್ವಗಳನ್ನೂ, ಧೃಷ್ಟದ್ಯುಮ್ನನ ಅಶ್ವಗಳನ್ನೂ, ನಕುಲ ಸಹದೇವರ ಬಿಲ್ಲುಗಳನ್ನೂ ನಾಶಪಡಿಸಿ ಶಂಖಧ್ವನಿ ಮಾಡಿದನು. ಯುದ್ಧದಲ್ಲಿ ನಿಂತು ಬೀಗುತ್ತಿರುವ ಶಲ್ಯನನ್ನು ನೋಡಿ ವಾಯುನಂದನನು ಶೀಘ್ರವಾಗಿ ಅವನನ್ನು ಅನೇಕ ಬಾಣಗಳಿಂದ ಮುಂಬರದಂತೆ ತಡೆದನು. ಅವನ ರಥವನ್ನು ಕ್ಷಣಮಾತ್ರದಲ್ಲಿ ನಾಶಪಡಿಸಿದನು. ಬೇರೊಂದು ರಥವನ್ನು ಹತ್ತಿಬಂದ ಶಲ್ಯನ ಮರ್ಮಸ್ಥಾನಗಳನ್ನು ಶರಗಳಿಂದ ಭೇದಿಸಿ ಮತ್ತೆ ಅವನ ರಥವನ್ನು ಹಾಳು-ಗೆಡಹಿದನು. ಆಗ ಶಲ್ಯನು ಮತ್ತೊಂದು ರಥವೇರಿ ಬರಲು ಭೀಮನು ಅವನೆತ್ತಿದ ಸಕಲ ಆಯುಧಗಳನ್ನು ಬಾಣಗಳಿಂದ ಭೇದಿಸಿ ಶಲ್ಯನ ಮರ್ಮಸ್ಥಾನಗಳಲ್ಲಿ ಅನೇಕ ಬಾಣಗಳನ್ನು ನೆಟ್ಟು ಬಾಧೆಗೊಳಿಸಿದನು. ಶಲ್ಯನು ಕೋಪದಿಂದ ಮುಷ್ಟಿಗಳನ್ನು ಮೇಲೆತ್ತಿ ಧರ್ಮರಾಜನತ್ತ ಹೋದನು. ಭೀಮಸೇನನಿಂದ ಭಗ್ನವಾದ ಮರ್ಮಾಂಗವುಳ್ಳ ನಿರಾಯುಧನೂ, ಶ್ವಾಸ-ಮಾತ್ರಾವಸನ್ನನಾಗಿ ಮರಣಾವಸನ್ನನಾಗಿ ತನ್ನ ಕಡೆ ಬರುತ್ತಿರುವ ಶಲ್ಯನನ್ನು ಪರಿಕಿಸಿ, ಮತ್ತೊಂದು ರಥದಲ್ಲಿ ಕುಳಿತು ಯುದ್ಧದಲ್ಲಿ ವೀರನಾದ ಶಲ್ಯನನ್ನು ಸಂಹರಿಸಲು ಇಚ್ಛಿಸಿ ಶ್ರೇಷ್ಠವಾದ ಶಕ್ತ್ಯಾಯುಧವನ್ನು ಹಿಡಿದು ಅದನ್ನು ದಿವ್ಯಾಸ್ತ್ರಗಳಿಂದ ಅಭಿಮಂತ್ರಿಸಿ ತನ್ನ ಸತ್ಯ ಧರ್ಮಗಳ ಫಲವನ್ನು ಅದಕ್ಕೆ ಧಾರೆಯೆರದು ತಕ್ಷಣ ಶಲ್ಯನ ಹೃದಯದಲ್ಲಿ ಪ್ರಯೋಗಿಸಿದನು. ಛೇದಿಸಲ್ಪಟ್ಟ ಹೃದಯವುಳ್ಳ ಶಲ್ಯರಾಜನು ಆಗ ಧರ್ಮಜನಿಗೆ ಅಭಿಮುಖವಾಗಿ ಭೂಮಿಯಲ್ಲಿ ಬಿದ್ದನು. ಅನಂತರ ಮರಣಿಸಿದ ಮತ್ತು ಸತ್ಯಧರ್ಮರತನಾದ ಶಲ್ಯರಾಜನು ಸ್ವರ್ಗಲೋಕಕ್ಕೆ ಅತಿಥಿಯಾಗಿ ಪ್ರಯಾಣ ಬೆಳೆಸಿದನು. ಆಗ ಪಾರ್ಥನು ಯುದ್ಧದಲ್ಲಿ ಹೋರಾಡಿ ಅಳಿದುಳಿದ ಸಂಶಪ್ತಕರಿಂದ ಸಹಿತವಾಗಿ ಸುಶರ್ಮನನ್ನು ಯಮಸದನಕ್ಕಟ್ಟಿದನು.

ಆ ತರುವಾಯ ಭೀಮಸೇನನು ಉಳಿದ ದುರ್ಯೋಧನನ ಸಮಸ್ತ ಸಹೋದರರನ್ನು ಸಂಹರಿಸಿದನು. ಪುನಃ ರಣಭೂಮಿಯಲ್ಲಿ ಕೌರವರ ಸಕಲ ಸೈನ್ಯವನ್ನೂ ನಿಶ್ಶೇಷವಾಗಿ ಸಂಹಾರ ಮಾಡಿದನು. ಆ ಬಳಿಕ ಶಕುನಿಯ ಪುತ್ರನಾದ ಉಲೂಕನನ್ನು ಕೊಂದುಹಾಕಿದ ಸಹದೇವನು, ಅತ್ಯಂತ ಪಾಪಿಯಾದ ಶಕುನಿಯನ್ನು ಸಂಹಾರ ಮಾಡಿದನು. (ಭೀಷ್ಮ ಪರ್ವದಲ್ಲಿ ಅರ್ಜುನನ ಕುಮಾರನಾದ ಇರಾವಾನನು ಶಕುನಿಯ ಆರು ಜನ ಮಕ್ಕಳನ್ನು ಹೇಗೆ ಸಂಹರಿಸಿದನೋ ಅದರಂತೆ ನಕುಲನೂ ಸಹ ದ್ಯೂತಸಂದರ್ಭದಲ್ಲಿ ಪ್ರತಿಜ್ಞೆ ಮಾಡಿದಂತೆ ಶಕುನಿಯ, ಹಲವರಲ್ಲಿ – ಕೆಲಪುತ್ರರನ್ನು ಸಂಹರಿಸಿದನೆಂದು ತಿಳಿಯಬೇಕು. ) ಆ ತರುವಾಯ ಭೀಮಾರ್ಜುನರು ಅಶ್ವತ್ಥಾಮ, ಕೃತವರ್ಮ, ಕೃಪಾಚಾರ್ಯರುಗಳನ್ನು ರಥರಹಿತರನ್ನಾಗಿ ಮಾಡಿ ಮತ್ತೆ ಮತ್ತೆ ಪೀಡಿಸಿ ರಣರಂಗದಿಂದ ಪಲಾಯನಗೊಳಿಸಿದರು. ಅವರೆಲ್ಲರೂ, ಅಂದರೆ ಅಶ್ವತ್ಥಾಮಾದಿಗಳೆಲ್ಲರೂ ಬಹುಭೀತರಾಗಿ ರಣರಂಗವನ್ನು ತೊರೆದು ವನಪ್ರವೇಶಮಾಡಿದರು.

ಅದೇ ಸಂದರ್ಭದಲ್ಲಿ ದುರ್ಯೋಧನನ ಮಾನಸಿಕ ಪ್ರವೃತ್ತಿಯನ್ನು, ಅವನ ಸಮಾಚಾರವನ್ನೂ ತಿಳಿದುಬರಲು ಧೃತರಾಷ್ಟ್ರನಿಂದ ಕಳುಹಿಸಲ್ಪಟ್ಟ ಸಂಜಯನನ್ನು ಕಂಡು ಸಾತ್ಯಕಿಯು ಅವನನ್ನು ಸಂಹರಿಸಲೆಂದು ಸಂಜಯನನ್ನು ತರುಬಿ ಹಿಡಿದನು. ಆಗ ಅನಂತಶಕ್ತಿಸಂಪನ್ನರಾದ ಶ್ರೀವೇದವ್ಯಾಸದೇವರು ಬಂದು ಸಾತ್ಯಕಿಗೆ ಬುದ್ಧಿ ಹೇಳಿ ಸಂಜಯನನ್ನು ಮುಕ್ತಗೊಳಿಸಿದರು. ಆಗ ಅಸಹಾಯನಾದ ದುರ್ಯೋಧನನು ಒಬ್ಬನೇ ಯುದ್ಧಕ್ಕಾಗಿ ಪಾಂಡವರ ಬಳಿಗೆ ಬಂದನು. ಆಗ ಪಾಂಡವರೊಡನೆ ಜರುಗಿದ ಯುದ್ಧದಲ್ಲಿ ಸುಯೋಧನನು ಅನೇಕ ಬಾರಿ ಅರ್ಜುನನನ್ನು ಮೂರ್ಛೆಗೊಳಿಸಿದನು. ಯುಧಿಷ್ಠಿರ, ನಕುಲ, ಸಹದೇವರನ್ನು ಸುಲಭವಾಗಿ ವಿರಥಗೊಳಿಸಿದನು. ಅದನ್ನು ಕಂಡ ಭೀಮನು ಧಾರ್ತರಾಷ್ಟ್ರನನ್ನು

ರಥವಿಲ್ಲದವನನ್ನಾಗಿ ಮಾಡಿದನು. ಆಗ ದುರ್ಯೋಧನನು ಆನೆಯ ಮೇಲೆ ಕುಳಿತು ಪುನಃ ಆಗಮಿಸಿದನು ಮತ್ತು ಸಾತ್ಯಕಿ, ಶಿಖಂಡಿ, ದೃಷ್ಟದ್ಯುಮ್ನ, ನಕುಲ, ಸಹದೇವರು ಹಾಗೂ ಧರ್ಮರಾಜಾದಿಗಳ ಆಯುಧಗಳನ್ನು ನಾಶಪಡಿಸಿದನು. ಭೀಮನಾಗ ದುರ್ಯೋಧನನ ಗಜವನ್ನು ನಾಶಮಾಡಲು, ಅವನು ಪ್ರಾಸ ಎಂಬ ಆಯುಧವನ್ನು ಕರದಲ್ಲಿ ಪಿಡಿದು ನಿರ್ಭಯನಾಗಿ ತುರಗವನ್ನೇರಿ ಭರದಿಂದ ಸಂಚರಿಸುತ್ತಾ ಸಾತ್ಯಕಿಯನ್ನು ಹೊಡೆದನು. ದುರ್ಯೋಧನನಿಂದ ತಾಡಿತನಾದ ಸಾತ್ಯಕಿಯೂ, ನಕುಲ, ಸಹದೇವರೂ, ಬಹುವಾಗಿ ಹಿಂಸೆಗೊಳಗಾದರು. ಸುಯೋಧನನು ಧರ್ಮನಂದನನತ್ತ ಧಾವಿಸುತ್ತಿರುವುದನ್ನೂ ಕಂಡು ಭೀಮಸೇನನು ದುರ್ಯೋಧನನ ಅಶ್ವವನ್ನು ಸಂಹರಿಸಿದನು. ಕುದುರೆಯು ಭೀಮನಿಂದ ಹತವಾಗಲು ಮತ್ತು ತನ್ನ ಪ್ರಾಸಾಯುಧವನ್ನು ಛೇದಿಸಿ ಹಾಕಲು ವಾಹನವಿಹೀನನಾದ ಕುರುರಾಜನು ದೊಡ್ಡದಾದ ಗದೆಯನ್ನು ಹಿಡಿದು ಜಲರಾಶಿಯಿಂದ ವಿಸ್ತೀರ್ಣವಾದ ದ್ವೈಪಾಯನ ಸರೋವರದ ಕಡೆಗೆ ಹೋದನು ಮತ್ತು ಜಲಸ್ತಂಭನ ವಿದ್ಯೆಯಲ್ಲಿ ಪರಿಣತನಾದ ದುರ್ಯೋಧನನು ಆ ಸರೋವರವನ್ನು ಪ್ರವೇಶಿಸಿದನು.

ಆ ಮಹಾಯುದ್ಧದಲ್ಲಿ ದುರ್ಯೋಧನನ ಹನ್ನೊಂದು ಅಕ್ಷೋಹಿಣೀ ಸೈನ್ಯದಲ್ಲಿ ಆರು ಅಕ್ಷೋಹಿಣೀ ಸೈನ್ಯವನ್ನು ಭೀಮನೂ, ಐದು ಅಕ್ಷೋಹಿಣೀ ಸೈನ್ಯವನ್ನು ಅರ್ಜುನನೂ ಹೀಗೆ ಹನ್ನೊಂದು ಅಕ್ಷೋಹಿಣೀ ಸೈನ್ಯವನ್ನು ಸಂಹರಿಸಿದರು ಎಂದು ತಾತ್ಪರ್ಯ. ಆದು ಸರಿ, ಗ್ರಂಥಾತರದಲ್ಲಿ ಅರ್ಧಭಾಗವನ್ನು ವೃಕೋದರನು, ಇನ್ನರ್ಧ ಭಾಗವನ್ನು ಪಾರ್ಥನೂ ನಾಶಪಡಿಸಿದರೆಂದು ಹೇಳಲ್ಪಟ್ಟಿರುವುದರಿಂದ, ಮೇಲೆ ಭೀಮಸೇನನಿಂದ ಒಂದು ಅಕ್ಷೋಹಿಣೀ ಸೈನ್ಯ ಸಹಿತರಾದ ಕಳಿಂಗ ದೇಶಾಧಿಪತಿಗಳನ್ನು ಹೊರತುಪಡಿಸಿ ಅರ್ಧಭಾಗವು ಭೀಮನಿಂದ ಸಂಹೃತವಾಯಿತು. ಅಂದರೆ ಆರು ಅಕ್ಷೋಹಿಣೀ ಸೈನ್ಯವು ನಾಶವಾಯಿತು. ಉಳಿದು ಐದು ಅಕ್ಷೋಹಿಣೀ ಸೈನ್ಯವು ಅರ್ಜುನನಿಂದ ನಾಶವಾಯಿತು ಎಂದು ಬೇರೊಂದು ಗ್ರಂಥದಲ್ಲಿ ಉಕ್ತವಾದುದರ ಅಭಿಪ್ರಾಯವೆಂದು ತಿಳಿಯಬೇಕು. ದೃಷ್ಟದ್ಯುಮ್ನ, ಭೀಮಾರ್ಜುನರು ನಾಶಪಡಿಸಿ ಅಳಿದುಳಿದ ಬಲವು ಸಾತ್ಯಕಿ ಮೊದಲಾದವರಿಂದ ಸಂಹೃತವಾಯಿತು. ಅಂತೂ ಒಟ್ಟನಲ್ಲಿ ಒಂದು ಅಕ್ಷೋಹಿಣೀ ಸೈನ್ಯಯುಕ್ತರಾದ ಕಾಲಿಂಗ ಸೈನ್ಯ, ಇತರ ಐದು ಅಕ್ಷೋಹಿಣೀ ಸೈನ್ಯ, ಇಂತು ಆರು ಅಕ್ಷೋಹಿಣೀ ಸೈನ್ಯವು ಭೀಮನಿಂದಲೂ, ಐದು ಅಕ್ಷೋಹಿಣೀ ಸೈನ್ಯವು ಅರ್ಜುನನಿಂದಲೂ ಹತವಾಯಿತೆಂದು ಭಾವ.

ಪಾಂಡವರ ನಾಲ್ಕು ಅಕ್ಷೋಹಿಣೀ ಸೈನ್ಯವು ಅಶ್ವತ್ಥಾಮನಿಂದ ಹತವಾಯಿತು. ಉಳಿದ ಮೂರು ಅಕ್ಷೋಹಿಣೀ ಸೈನ್ಯವು ದ್ರೋಣ ಕರ್ಣಾದಿ ಸಮಸ್ತರಿಂದಲೂ ಸಂಹೃತವಾಯಿತು. ಶತ್ರುಗಳು ನಾಶಪಡಿಸಿದ್ದರಲ್ಲಿಯೂ ತಾರತಮ್ಯವನ್ನು ಹೇಳುವರು. ಮಹಾವ್ರತನಾದ ಪಿತಾಮಹ ಭೀಷ್ಮರು, ಭಗದತ್ತ, ದುರ್ಯೋಧನರು ಪ್ರಾಯಃ ಹೆಚ್ಚಿನ ಸೈನ್ಯವನ್ನು ಸಂಹರಿಸಿದರು. ದ್ರೋಣರು ಎಷ್ಟು ಪಾಂಡವ ಸೈನ್ಯವನ್ನು ನಾಶಪಡಿಸಿದರೋ ಅದಕ್ಕಿಂತ ಕಡಿಮೆಯಾಗಿ ಕರ್ಣನು ಸಂಹರಿಸಿದನು. ಕರ್ಣಾಪೇಕ್ಷೆಯಾ ಭೀಷ್ಮಾಚಾರ್ಯರು ಸ್ವಲ್ಪ ಸೈನ್ಯವನ್ನು ನಾಶಪಡಿಸಿದರೆಂದು ಈ ಕ್ರಮದ ಅಭಿಪ್ರಾಯವು. ಇಂತು ಕುರುಕ್ಷೇತ್ರ ಯುದ್ಧದಲ್ಲಿ ಜಯಗಳಿಸಿದ ಪಾಂಡವರು ದೊಡ್ಡ ಧ್ವನಿಯಿಂದ ಸಿಂಹನಾದ ಮಾಡುತ್ತಿರಲು ದುರ್ಯೋಧನನು ದ್ವೈಪಾಯನ ಸರಸ್ಸಿನಲ್ಲಿ ಜಲಸ್ತಂಭನ ಮಾಡಿ ಮಂತ್ರಜಪ ಮಾಡಹತ್ತಿದನು.

ಶ್ರೇಷ್ಠ ತಪಸ್ವಿಗಳಾದ ದುರ್ವಾಸ ಮುನಿಗಳು ಉಪದೇಶಿಸಿದ ಮೃತಸಂಜೀವಿನಿಪ್ರದವಾದ, ಅಂದರೆ ಮೃತರಾದವರನ್ನು ಪುನಃ ಜೀವಂತರಾಗುವಂತೆ ಮಾಡುವ ಮಂತ್ರವೇ 'ಮೃತಸಂಜೀವಿನೀ' ಮಂತ್ರವು. ಅದು ವಿಜಯಪ್ರದವಾದುದು. ಬೆಂಕಿ ನೀರುಗಳ ಸ್ತಂಭನ ನಿರೋಧಕವು. ಮಳೆ ಮುಂತಾದ ಅಭೀಷ್ಟಗಳನ್ನು ಕೊಡುವಂತಹದು. ಸರ್ವರನ್ನು ಜಯಿಸಲು ಶಕ್ತಿ-ಪ್ರದವಾದುದು. ಇಂತಹ ಮೃತಸಂಜೀವಿನೀ ಮಂತ್ರವನ್ನು ಏಳು ದಿವಸ ಜಪಿಸಿದರೆ ಅದರಿಂದ ಮೃತರಾದವರೆಲ್ಲರನ್ನೂ ದುರ್ಯೋಧನನು ಬದುಕಿಸುವ ಶಕ್ತಿಸಂಪನ್ನನಾಗುವನು ಮತ್ತು ಬದುಕಿದವರೆಲ್ಲರೂ ಅವಧ್ಯರಾಗುವರು ಎಂದು ಆ

ವಿದ್ಯೆಯ ಮಹತ್ವ, ಬಲವನ್ನು ತಿಳಿದು ಪಾಂಡುಕುಮಾರರು ಆ ಮಂತ್ರವನ್ನು ಸುಯೋಧನನು ಜಪಿಸದಂತೆ ಮಾಡಲು ದುರ್ಯೋಧನನನ್ನು ಹುಡುಕುತ್ತಾ ಹೊರಟರು. ಆಗ ವ್ಯಾಧ(ಬೇಡರು)ರಿಂದ, ದುರ್ಯೋಧನನು ದ್ವೈಪಾಯನ ಸರೋವರದಲ್ಲಿ ಅಡಗಿರುವುದನ್ನು ತಿಳಿದರು. ಅನಂತರ ಶ್ರೀಕೇಶವನನ್ನು ಮುಂದೆ ಮಾಡಿಕೊಂಡು ದ್ವೈಪಾಯನ ಸರಸ್ಸಿನ ಬಳಿಗೆ ಆಗಮಿಸಿದರು. ಅಲ್ಲಿ ಅಶ್ವತ್ಥಾಮ, ಕೃಪ, ಕೃತವರ್ಮಗೊಡನೆ ನೀರಿನಿಂದ ಎದ್ದು ಬಂದ ದುರ್ಯೋಧನನು ತನ್ನ ಮಂತ್ರ ಜಪ ಸಂಕಲ್ಪಾದಿಗಳನ್ನು ವಿವರಿಸಿ, ಮಂತ್ರಾಲೋಚನೆ ಮಾಡುತ್ತಿರುವುದನ್ನು ಕಂಡರು. ಶ್ರೀಕೃಷ್ಣ ಪಾಂಡವರು ಅಲ್ಲಿಗೆ ಬರುತ್ತಿರುವುದನ್ನು ನೋಡಿ ಅಶ್ವತ್ಥಾಮಾದಿಗಳು ಓಡಿಹೋದರು. ಪಾಂಡವರನ್ನು ಕಂಡ ದುರ್ಯೋಧನನು ಮತ್ತೆ ಸರೋವರವನ್ನು ಪ್ರವೇಶಿಸಿದನು. ಆಗ ಶ್ರೀಕೃಷ್ಣ ಪರಮಾತ್ಮನ ಆಜ್ಞೆಯಂತೆ ಧರ್ಮರಾಜನು ಕ್ರೂರವಚನಗಳಿಂದ ಯುದ್ಧಕ್ಕೆ ಬರುವಂತೆ ದುರ್ಯೋಧನನನ್ನು ಆಹ್ವಾನಿಸಿದನು.

ಸರಸ್ಸಿನಲ್ಲಿ ಕುಳಿತಿದ್ದ ದುರ್ಯೋಧನನು ಯುಧಿಷ್ಠರನ ಯುದ್ಧಾಹ್ವಾನವನ್ನು ಸಹಿಸದೇ, ಕೋಲಿನಿಂದ ಏಟುತಿಂದ ಸರ್ಪದಂತೆ ಶ್ವಾಸ ಬಿಡುತ್ತಾ ಶಾಠ್ಯದಿಂದ "ಧರ್ಮನಂದನ! ನಾನು ತಪಸ್ಸಿಗಾಗಿ ವನಕ್ಕೆ ಹೋಗುತ್ತೇನೆ. ನೀವು ಸಮಸ್ತ ಭೂಮಿಯನ್ನೂ ಪಾಲಿಸಿರಿ" ಎಂದು ಹೇಳಿದನು. ಅವನ ಜಿನ್ನಾಣದ ಮಾತನ್ನು ಆಲಿಸಿ ಧರ್ಮರಾಜನು "ದುರ್ಯೋಧನ! ಆಶ್ಚರ್ಯ, ಪರಮಾಶ್ಚರ್ಯ, ಶ್ರೀಕೃಷ್ಣನು ಸಂಧಾನಕ್ಕೆ ನಿಮ್ಮಲ್ಲಿಗೆ ಬಂದು ಪರಿಪರಿಯಿಂದ ಹೇಳಿದಾಗ ನೀನು ಉದ್ಧಟನಾಗಿ ಪಾಂಡವರಿಗೆ ಒಂದು ಸೂಜಿಯ ಮೊನೆಯಷ್ಟು ಭೂಮಿಯನ್ನೂ ನೀಡುವುದಿಲ್ಲವೆಂದು ಆರ್ಭಟಿಸಿದ್ದು ಮರೆತೆಯಾ? ಶ್ರೀಮುರಾರಿಯ ಹಿತೋಪದೇಶವನ್ನು ತಿರಸ್ಕರಿಸಿದೆ. ಈಗ ಭೂಮಿಯನ್ನು ಹಾಳುಗೆಡಹಿ ಪೂಜ್ಯರಾದ ಭೀಷ್ಮದ್ರೋಣಾದಿ ಪ್ರಮುಖರನ್ನು ಬಲಿಕೊಟ್ಟು, ಈಗ ಸಮಸ್ತ ಭೂಮಿಯನ್ನು ಕೊಡಲಿಚ್ಛಿಸುತ್ತಿರುವೆಯಲ್ಲ, ಇದೆಂತಹ ವಿರೋಧಾಭಾಸವು. ಇದು ಎಂಥ ಆಶ್ಚರ್ಯಕರವು. ಆದರೆ ನಾವೀಗ ನಿನ್ನನ್ನು ಸಂಹರಿಸದಲೇ ರಾಜ್ಯವನ್ನು ಪಡೆಯಲು ಇಚ್ಛಿಸುವುದಿಲ್ಲ. ಆದ್ದರಿಂದ ನೀನು ಯುದ್ಧಕ್ಕೆ ಸಿದ್ಧನಾಗು. ನೀನು ಕುರುಕುಲಕಲಂಕನಾಗಿರುವೆ. ಪ್ರಖ್ಯಾತರಾದ ಕುರುಕುಲೋತ್ಪನ್ನರೆಲ್ಲರೂ ಸರ್ವದಾ ಯುದ್ಧದಲ್ಲಿ ಉತ್ಸುಕರು. ನಿನ್ನಂತೆ ಅಂಜುಗುಳಿಗಳಲ್ಲ. ನೀನು ಮರಣ ಭಯದಿಂದ ನೀರಿನಲ್ಲಿ ಅಡಗಿ ಕುಳಿತಿದ್ದೀಯೆ. ಆದುದರಿಂದ ನೀನು ಕುರುಕುಲದಲ್ಲಿ ಜನಿಸಿದವನಲ್ಲ" ಮುಂತಾಗಿ ಛೇಡಿಸಿದನು.

ಧರ್ಮರಾಜನ ಕ್ರೂರವಚನಗಳನ್ನಾಲಿಸಿ ಅತಿಕೋಪದಿಂದ ಜಲಸ್ತಂಭನದಿಂದ ಮೇಲೆದ್ದು, ದುರ್ಯೋಧನನು ಸರ್ಪದಂತೆ ಬುಸುಗುಟ್ಟುತ್ತಾ "ಯುಧಿಷ್ಠಿರ! ನಾನೀಗ ಏಕಾಂಗಿಯಾಗಿರುವೆನು. ಕಿರೀಟ ಕವಚಗಳಿಂದ ಶಿರಸ್ತ್ರಾಣಾದಿ-ಗಳಿಲ್ಲದವನಾಗಿದ್ದೇನೆ. ನೀವಾದರೂ ಬಹುಜನರು. ಕವಚ ಶಿರಸ್ತ್ರಾಣಗಳಿಂದ ಯುಕ್ತನಾಗಿರುವಿರಿ. ಹೀಗೆ ನಮ್ಮೀರ್ವರಲ್ಲಿ ವಿಷಮತೆಯಿದ್ದರೂ ನಿಮ್ಮೊಡನೆ ಹೋರಾಡಲು ನಾನು ಸಮಾನನೆಂದು ನೀವು ಭಾವಿಸಿದಲ್ಲಿ ನಿಮ್ಮೆಲ್ಲರೊಡನೆ ಅಥವಾ ಒಬ್ಬರೊಡನೆ ಯುದ್ಧ ಮಾಡೇನು! ನನಗಾವ ಭಯವೂ ಇಲ್ಲ" ಎಂದರುಹಿದನು.

ಆಗ ಧರ್ಮರಾಜನು "ಸುಯೋಧನ ನಿನಗೆ ಅವಶ್ಯವಾದ ಕವಚಾದಿಗಳನ್ನು ಕೊಡುತ್ತೇನೆ ಸ್ವೀಕರಿಸು. ಅಣ್ಣ ತಮ್ಮಂದಿರಾದ ನಾವು ಐವರಲ್ಲಿ ನೀನು ಯಾರೊಡನೆ ಕಾದಾಡಲಿಚ್ಛಿಸುವೆಯೋ ಅವರೊಡನೆ ಯುದ್ಧಮಾಡಿ ನಮ್ಮಲ್ಲೊಬ್ಬನನ್ನು ಸಂಹರಿಸಿ ನೀನೊಬ್ಬನೇ ಈ ರಾಜ್ಯವನ್ನು ಅನುಭವಿಸು. ಉಳಿದ ನಾಲ್ವರು ವನಕ್ಕೆ ಹೋಗುತ್ತೇವೆ. ಯುದ್ಧದಲ್ಲಿ ನೀನು ಮೃತನಾದರೆ ನಾವು ಸಮಸ್ತ ಭೂಮಂಡಲಕ್ಕೆ ಒಡೆಯರಾಗಿ ಅನುಭವಿಸುತ್ತೇವೆ. ನೀನು ಯಾವ ಆಯುಧದಿಂದ ಕಾದಾಡಿ ನಮ್ಮನ್ನು ಜಯಿಸಲಪೇಕ್ಷಿಸುವೆಯೋ, ಅಂಥ, ನಿನಗೆ ಬೇಕಾದ ಆಯುಧವನ್ನು ತೆಗೆದುಕೋ" ಎಂದನು. ಧರ್ಮರಾಜನಿಂತು ಹೇಳಲು, ಸುಯೋಧನನು "ಧರ್ಮಜ! ನಾನು, ದುರ್ಬಲರಾದ ಅರ್ಜುನ, ನೀನು, ನಕುಲ-ಸಹದೇವರೊಡನೆ ಯುದ್ಧ ಮಾಡುವುದಿಲ್ಲ. ನನಗೆ ಸರಿಸಮಾನನಾದವನೆಂದರೆ ಭೀಮಸೇನನೊಬ್ಬನೇ. ನಾನು ಅವನೊಡನೆ ನನಗೆ ಪ್ರಿಯವಾದ

ಗದೆಯನ್ನು ಹಿಡಿದು ಹೋರಾಡುವೆನು. ನಾನು ಬೇರಾವ ಆಯುಧಗಳನ್ನೂ ಮುಟ್ಟುವುದಿಲ್ಲ" ಎಂದು ನಿರೂಪಿಸಿದನು. ಅವನ ನುಡಿಯನ್ನಾಲಿಸಿ ವೃಕೋದರನು ರಭಸದಿಂದ ದುರ್ಯೋಧನನ ಗದೆಗಿಂತ ಸ್ವಲ್ಪ ಅಧಿಕಭಾರವುಳ್ಳ ಗದೆಯನ್ನು ಸಂತಸದಿಂದ ಕೈಗೆತ್ತಿಕೊಂಡು, ಆ ವೀರವರನು ಗಟ್ಟಿಯಾಗಿ ಗರ್ಜಿಸುತ್ತಾ ಯುದ್ಧ ಮಾಡಲು ಮೇಲೆದ್ದನು.

ಆಗ ಆದಿದೇವನಾದ (ಶ್ರೀಕೃಷ್ಣಪರಮಾತ್ಮನು) ನಾರಾಯಣನು "ಧರ್ಮನಂದನ! ನಮಗೆಂತಹ ಕಷ್ಟವನ್ನು ತಂದಿತ್ತೆ. ನಿನ್ನ ಈ ಕಾರ್ಯವು ಯುಕ್ತವಾದುದಲ್ಲ. ಈ ಸುಯೋಧನನು ಗದಾಧಾರಿಯಾಗಿ ಯುದ್ಧದಲ್ಲಿ ಚಲಿಸುತ್ತಿರುವಾಗ ಇವನನ್ನು ಸಕಲ ದೇವತೆಗಳಿಂದಲೂ ಜಯಿಸಲಸದಳವು. ಆದುದರಿಂದ ನೀನು ಯಾರಾದರೊಬ್ಬರನ್ನು ಯುದ್ಧಕ್ಕೆ ಆರಿಸಿಕೋ ಎಂದು ಹೇಳಿದ್ದು ಸರಿಯಲ್ಲ. ಅರ್ಜುನಾದಿ ನೀವು ನಾಲ್ವರನ್ನೂ ಇವನು ಸಂಹರಿಸಬಹುದು. ಕೇವಲ ಭೀಮಸೇನನೊಬ್ಬನು ಮಾತ್ರ ಯಾವುದಾದರೊಂದು ಉಪಾಯದಿಂದ ದುರ್ಯೋಧನನನ್ನು ಸಂಹರಿಸಬಹುದು. ಸಾಮರ್ಥ್ಯವಿಷಯದಲ್ಲಿ ಭೀಮನಿಗೆ ಸಮಾನರು ಬೇರಾರೂ ಎಲ್ಲಿಯೂ ಇಲ್ಲ. ದುರ್ಯೋಧನನೂ ಸರ್ವದಾ ಅಭ್ಯಾಸದಲ್ಲಿ ಕುಶಲನೇ ಆಗಿರು-ವನು. ಹಾಗಾದರೆ ಭೀಮನು ದುರ್ಯೋಧನನನ್ನು ಹೇಗೋ ಸಂಹರಿಸಬಲ್ಲನು ಎಂದು ಉಕ್ತವಾಯಿತಷ್ಟೇ. ಇದರಿಂದ ಭೀಮನು ದುರ್ಬಲನೆಂದು ಅರ್ಥವಾಗುವುದರಿಂದ ಭೀಮಸೇನನಿಗೆ ಬಲದಲ್ಲಿ ಸರಿಸಮರು ಬೇರೊಬ್ಬರಿಲ್ಲವೆಂದೂ ಹೇಳಲಾಗಿದೆ. ಹೀಗೆ ಪರಸ್ಪರ ವಿರುದ್ಧವಾದ ಆ ಎರಡು ವಾಕ್ಯಗಳ ಆಶಯವನ್ನೀಗ ವಿವರಿಸುವರು. ಭೀಮಸೇನನು ಯಾವುದಾದರೊಂದು ಉಪಾಯದಿಂದ ದುರ್ಯೋಧನನನ್ನು ಸಂಹರಿಸಬಹುದು ಎಂದು ಕೃಷ್ಣ ಹೇಳಿದ್ದಾನೆ. ಆದರಂತೆ ದುರ್ಯೋಧನನನ್ನು ಸಂಹರಿಸಲು ಭೀಮನು ಸಮರ್ಥನಾಗಿದ್ದಾನೆ ಎಂದೂ ಶ್ರೀವಾಸುದೇವನು ಹೇಳಿದ್ದಾನೆ. ಇವೆರಡು ವಾಕ್ಯಗಳ ಅಭಿಪ್ರಾಯವು ಹೀಗಿದೆ –

ಭೀಮಸೇನನು ಯಾವ ವ್ಯಾಜವೂ ಇಲ್ಲದೆ ದುರ್ಯೋಧನನನ್ನು ಸಂಹರಿಸಲು ಶಕ್ತನೆಂಬುದು ಸ್ಪಷ್ಟವಾಗಿದೆ. ಆದರೂ "ತವೋರುಮೇನಂ ಗದಯೋರುವೇಗಯಾ ಬಿಭೇತ್ಸ್ಯೇ"ಎಂದು ತಾನು ಮಾಡಿದ ಪ್ರತಿಜ್ಞಾ ಪರಿಪಾಲನೆಗಾಗಿ ನಾಭಿಯ ಮೇಲ್ಭಾಗದಲ್ಲಿ ಹೊಡೆದು ಕೊಲ್ಲುವ ಯಾವುದಾದರೊಂದು ನಿಮಿತ್ತಮಾಡಿ ದುರ್ಯೋಧನನನ್ನು ಸಂಹರಿಸಲಿ – ಎಂಬುದು ಶ್ರೀಕೃಷ್ಣನ ಅಭಿಪ್ರಾಯವೆಂದು ತಿಳಿಯಬೇಕು. ಹಿಂದೆ ಹೇಳಿದಂತೆ, ಭೀಮನು ದುರ್ಯೋಧನನ ತೊಡೆಗಳನ್ನು ಮುರಿದು ಸಂಹರಿಸುತ್ತೇನೆಂದು ಪ್ರತಿಜ್ಞಾತವಾಗಿದ್ದಾನೆ. ಅದನ್ನು ಅವನು ಪಾಲಿಸಬೇಕು. ಅದಕ್ಕಾಗಿ ಎರಡು ಊರುಗಳನ್ನು ಮುರಿಯ-ಬೇಕು. ಹಾಗೆ ಮುರಿಯದಿದ್ದರೆ ಪ್ರತಿಜ್ಞಾತ್ಯಾಗರೂಪ ಅಧರ್ಮಕ್ಕೆ ಅವನು ಗುರಿಯಾಗಬೇಕಾಗುತ್ತದೆ. ಗದಾಯುದ್ಧದಲ್ಲಿ ನಾಭಿಯ ಕೆಳಭಾಗಕ್ಕೆ ಹೊಡೆದು ಕೊಲ್ಲುವುದು ಅಧರ್ಮವೆಂದು ತಿಳಿದವರು ಹೇಳುವರು. ಹಾಗಾದರೆ ಹೇಗೆ ಮಾಡಬೇಕು ಎಂಬ ಸಂದೇಹ ಬಂದರೆ, ಗದಾಯುದ್ಧ ವಿಷಯದ ನಿಯಮ ಒಂದು ಕಡೆ, ಪ್ರತಿಜ್ಞೆ ಇನ್ನೊಂದು ಕಡೆ. ಇಂತಿರುವುದರಿಂದ ಲೋಕನಿಂದೆಯು ಬಾರದಂತೆ ಮಾಡಲು, ಅಂದರೆ ಭೀಮನು ಅಧರ್ಮದಿಂದ ದುರ್ಯೋಧನನನ್ನು ಸಂಹರಿಸಿದನೆಂಬ ಲೋಕಾಪವಾದ ಬರದಂತೆ ಮಾಡಲು ಧರ್ಮದ್ವಯವಿರೋಧ ಬಂದಾಗ ಆಪತ್ಕಾಲದಲ್ಲಿ ಮುಖ್ಯವಾದ (ಬಲವಾದ) ಧರ್ಮರಕ್ಷಣೆಯೇ ಮುಖ್ಯ ಎಂಬುದನ್ನು ಪ್ರದರ್ಶಿಸಲು ಶ್ರೀಕೃಷ್ಣನು ಅಲ್ಪವಾದ (ಬಲವಲ್ಲದ) ವ್ಯಾಜದಿಂದ ಭೀಮನು ಶತ್ರುವನ್ನು ಕೊಂದಾನು ಎಂದು ಹೇಳಿರುವುದು, ಭೀಮನು ಅತಿ ಬಲಶಾಲಿಯೆಂದು ಹೇಳಿದ್ದೂ ಸಹ ಭೀಮನ ಪ್ರಶಂಸೆ-ಯೆಂದು, ಸತ್ಯವಾದ ವಿಚಾರವೆಂದೂ ತಿಳಿಯಬೇಕು. ನೆಪವಿಲ್ಲದೆ ದುರ್ಯೋಧನನನ್ನೂ ಸಂಹರಿಸಲು ಭೀಮನು ನಿಸ್ಸೀಮ ಬಲಶಾಲಿಯಾಗಿದ್ದಾನೆ. ಪ್ರತಿಜ್ಞಾಪಾಲನೆ ಮಾಡದಿರುವುದು ಕ್ಷತ್ರಿಯರಿಗೆ ಅಧರ್ಮವು. ಗದಾಯುದ್ಧ ನಿಯಮವೆಂಬ ಮುಖ್ಯವಲ್ಲವೆಂಬ ನಿಯಮವನ್ನು ಉಲ್ಲಂಘಿಸಿಯಾದರೂ, ಮುಖ್ಯವೂ ಪ್ರಬಲವೂ ಆದ ಧರ್ಮಪಾಲನೆ ಮಾಡುವುದು ಕ್ಷತ್ರಿಯರಿಗೆ ಮುಖ್ಯವೂ ಪ್ರಬಲವು ಆದ ಧರ್ಮವು. ಗದಾ ಯುದ್ಧವನ್ನು ಉಲ್ಲಂಘಿಸುವುದು ಅದೆಂತು ಧರ್ಮವಾದೀತು? ಎಂದರೆ ವಿವರಿಸುತ್ತಾರೆ.

ಆಪತ್ಕಾಲದಲ್ಲಿ ಸಣ್ಣದಾದ ಅಧರ್ಮವನ್ನು ತಾಳಿಕೊಂಡು ಮುಖ್ಯವಾದ ಪ್ರತಿಜ್ಞಾಪಾಲನೆ ಎಂಬ ಧರ್ಮವನ್ನೇ ಕಾಪಾಡುವಂತಾಗಬೇಕು. ಇದನ್ನು ಸ್ಪಷ್ಟಪಡಿಸಲೆಂದೇ ಯಾವುದಾದರೊಂದು ವ್ಯಾಜದಿಂದ ಭೀಮನು ದುರ್ಯೋಧನನನ್ನು ಸಂಹರಿಸುವನೆಂದು ಶ್ರೀಕೃಷ್ಣನು ಹೇಳಿದನು. ಇದಕ್ಕೆ ದೃಷ್ಟಾಂತ ಹೇಳುತ್ತಾರೆ. ಒಂದು ಹುಲಿಯು ಗೋವನ್ನು ಸಂಹರಿಸು-ತ್ತಿರುವಾಗ ಗೋವನ್ನು ರಕ್ಷಿಸುವುದು ಕ್ಷತ್ರಿಯನ ಧರ್ಮವು. ಇನ್ನು ಅಲಕ್ಷಿಸಿದರೆ ಅಧರ್ಮವಾಗುವುದು. "ನ ಹಿಂಸ್ಯಾತ್" ಎಂದು ಶ್ರುತಿ ಹೇಳುವುದು. ಅಂದರೆ ಪ್ರಾಣವಧೆಯನ್ನು (ಹಿಂಸೆಯನ್ನು) ಮಾಡಬಾರದು ಎಂದರ್ಥ. ಗೋವನ್ನು ಕೊಲ್ಲ-ಲೆತ್ನಿಸುತ್ತಿರುವ ವ್ಯಾಘ್ರವನ್ನು ಕೊಲ್ಲುವುದು ಇದರ ಪ್ರಕಾರ ಅಧರ್ಮವಾಗುವುದು. ಕ್ಷತ್ರಿಯನಿಗೆ ಆಪತ್ಕಾಲದಲ್ಲಿರುವವರನ್ನು ರಕ್ಷಿಸುವುದು ಮುಖ್ಯಧರ್ಮವು. ಅದನ್ನು ಮಾಡದಿರುವುದು ಅಧರ್ಮವು. ಆದ್ದರಿಂದ ತನ್ನ ಮುಖ್ಯಧರ್ಮದ ರಕ್ಷಣೆಗೆ (ಪರಿಪಾಲನಕ್ಕಾಗಿ) ಹುಲಿಯ ಸಂಹಾರರೂಪ ಅಧರ್ಮವಾಡಿದರೂ ಅದು ಧರ್ಮವೇ ಆಗುವುದು. ಜಗತ್ತಿಗೆ ಕ್ರೂರವಾದ ಪ್ರಾಣಿಯಿಂದ ಸಾಧುಪ್ರಾಣಿಯಾದ ಗೋವು ಹತವಾಗುವಾಗ ಸುಮ್ಮನಿರುವುದು ತಪ್ಪು. ಮೇಲಾಗಿ "ಮೋದೇತ ಸಾಧುರಪಿ ವೃಶ್ಚಿಕಸರ್ಪಹತ್ಯಾಂ" ಎಂಬ ಪ್ರಮಾಣವಿದೆ. ಅಂದರೆ ಕ್ರೂರವಾದ ಚೇಳು ಹಾಗೂ ಸರ್ಪಗಳ ಸಂಹಾರದಿಂದ ಸಾಧು (ಸಜ್ಜನರು)ಗಳು ಸಂತೋಷಪಡುತ್ತಾರೆ ಎಂಬ ಪ್ರಮಾಣವಿರುವುದರಿಂದ 'ನ ಹಿಂಸ್ಯಾತ್' ಎಂಬ ಸಾಧಾರಣವೂ, ಅಲ್ಪವೂ ಆದ ಪ್ರಮಾಣಕ್ಕಿಂತಲೂ ಮುಖ್ಯವಾದ ಕ್ಷತ್ರಿಯ ಧರ್ಮ ಮತ್ತು 'ಮೋದೇತ' ಎಂಬ ಪ್ರಮಾಣ ಹಾಗೂ ಸಾಧುಪ್ರಾಣಿ ರಕ್ಷಣಾರೂಪ ಶ್ರೇಷ್ಠ ಧರ್ಮಾಚರಣೆಯೇ ಮುಖ್ಯವಾದುದರಿಂದ ಅಧರ್ಮವೆನಿಸಿದರೂ ಹುಲಿಯನ್ನು ಸಂಹರಿಸಿ ಯಾಗಕ್ಕೆ ಅಂಗರೂಪವಾದ ಗೋರಕ್ಷಣೆಯೇ ಕ್ಷತ್ರಿಯನಿಗೆ ಮುಖ್ಯ ಧರ್ಮವಾಗಿರುವಂತೆ, ದುಷ್ಟನಾದ ದುರ್ಯೋಧನನನ್ನು ಸಂಹರಿಸುವುದಕ್ಕಾಗಿ, ಸಣ್ಣ ಅಧರ್ಮವನ್ನು ಉಪೇಕ್ಷಿಸಿ ತಾನು ಮಾಡಿದ, "ದುರ್ಯೋಧನನನ್ನು ಸಂಹರಿಸುವೆನು" ಎಂಬ ಪ್ರತಿಜ್ಞಾರೂಪವಾದ ಮುಖ್ಯಧರ್ಮಪಾಲನೆಯು, ಸತ್ಯಪರಿಪಾಲನೆಯು ಯುಕ್ತವೇ ಆಗಿದೆಯೆಂಬುದು ಶ್ರೀಕೃಷ್ಣನ ಮಾತಿನ ತಾತ್ಪರ್ಯವೆಂದು ತಿಳಿಯಬೇಕು.

ಭೀಮಸೇನನು ಗದಾವಿದ್ಯಾಭ್ಯಾಸವನ್ನು ಹೆಚ್ಚಾಗಿ ಮಾಡದಿದ್ದರೂ, ಭೀಮನಲ್ಲಿ ನಿರ್ಬಲತ್ವವಿಲ್ಲ. ಗದಾವಿದ್ಯಾಭ್ಯಾಸವನ್ನು ಹೆಚ್ಚಾಗಿ ಮಾಡದಿರುವುದು ಭೀಮನ ನಿರ್ಬಲತ್ವವನ್ನು ತೋರಿಸುವುದಿಲ್ಲ, ಕಿಂತು ಗುಣವನ್ನೇ ಎತ್ತಿ ತೋರುವುದು. ದುರ್ಯೋಧನನು ಹೆಚ್ಚಾಗಿ ಗದಾವಿದ್ಯಾಭ್ಯಾಸ ಮಾಡಿರುವುದು ಅವನ ದುರ್ಬಲತೆಯನ್ನು ತೋರಿಸುವುದು. ಭೀಮಸೇನನು ಹೆಚ್ಚಾಗಿ ಗದಾವಿದ್ಯಾಭ್ಯಾಸಮಾಡಿ ತನಗೆ ಮಾರಕನಾಗುವವನೋ ಎಂಬ ಭಯದಿಂದ ಬಹುಪ್ರಕಾರವಾಗಿ ಹೆಚ್ಚಾಗಿ ಗದಾ-ವಿದ್ಯಾಭ್ಯಾಸವನ್ನು ಸುಯೋಧನನು ಮಾಡಿದ್ದಾನೆ. ದುರ್ಯೋಧನನ ಈ ಅತಿಯಾದ ಅಭ್ಯಾಸವು ಅವನ ದುರ್ಬಲತೆಯನ್ನು ಎತ್ತಿ ತೋರುವುದು.

ಆಪತ್ತಿನಲ್ಲಿ ಮುಖ್ಯವಾದ ಧರ್ಮವನ್ನು ಕಾಪಾಡಿಕೊಳ್ಳಬೇಕು ಎಂದು ಉಕ್ತವಾಗಿದೆಯಷ್ಟೇ ? ಮುಖ್ಯಧರ್ಮವೆಂದರೆ ಯಾವುದು? ಎಂಬುದನ್ನು ವಿವರಿಸುತ್ತಾರೆ – ಸಮಸ್ತಜನರ ಪ್ರೀತಿಗಾಗಿ ಪ್ರತಿಜ್ಞೆಯನ್ನು ಬಿಡಬೇಕು ಎಂಬುದನ್ನು ವ್ಯಾವೃತ್ತಿ-ಗೊಳಿಸಲು ಇಲ್ಲಿ ದುಷ್ಕರಲ್ಲಿ ಎಂದು ನಿರೂಪಿಸಲ್ಪಟ್ಟಿದೆ. ತಾವು ಮಾಡಿದ ಪ್ರತಿಜ್ಞೆಯನ್ನು ಪಾಲಿಸುವುದು ಧರ್ಮ, ಅದರಲ್ಲೂ ದುಷ್ಕರ ವಿಷಯದಲ್ಲಿ ವಿಶೇಷಾಕಾರವಾದ ಧರ್ಮವು ಎಂಬ ಧರ್ಮರಹಸ್ಯವನ್ನು ಶ್ರೀಕೃಷ್ಣ ಭೀಮಸೇನರು ತಿಳಿದಿದ್ದಾರೆ. ಕೃಷ್ಣನನ್ನು ಬಿಟ್ಟು ಬೇರೊಬ್ಬರೇಕೆ ಹೇಳಿಲ್ಲವೆಂದರೆ. ಅದು ಧರ್ಮರಹಸ್ಯವಾದ್ದರಿಂದ, ಅದನ್ನು ತಿಳಿಯದಿದ್ದುದರಿಂದ ಹೇಳಲಿಲ್ಲವೆಂದು ತಿಳಿಯಬೇಕು.

ಮೇಲೆ ಹೇಳಿದ ಎರಡು ಧರ್ಮಗಳಲ್ಲಿ ಪ್ರತಿಜ್ಞಾಪಾಲನವು ಬಲಿಷ್ಠವಾದ್ದರಿಂದ, ಅತುಲ್ಯ ಬಲವಿರುವುದರಿಂದ ವಿರೋಧವೇ ಇಲ್ಲವಲ್ಲ ಎಂದಾಶಂಕಿಸಿ ಹೇಳುವರು. ಧರ್ಮದ್ವಯರೂಪವಾದ ಆಪತ್ತಿನಲ್ಲಿದ್ದರೂ ಲೋಕನಿಂದನೆಯನ್ನು

ಪರಿಹರಿಸಲು ಲೋಕಪ್ರಸಿದ್ಧವಾದ ಆಪತ್ತೆಂದು ತೋರಿಸಲೋಸುಗ ಹಾಗೆ ಮಾಡಿದರು ಎಂದರಿಯಬೇಕು. ಶ್ರೀಕೃಷ್ಣನು ಧರ್ಮರಾಜನಿಗೆ ಉಭಯಸಂಕಟದ ಬಗ್ಗೆ (ಹಿಂದೆ ನಿರೂಪಿಸಿದೆ) ಮಾತನಾಡಿದ ಮೇಲೆ ಭೀಮನು ಸರ್ವಲೋಕಕ್ಕೂ (ಸಕಲ ಜನರಿಗೂ) ಧರ್ಮವನ್ನು ಪ್ರಕಾಶಪಡಿಸುತ್ತಾ 'ದುರ್ಯೋಧನ! ನಾನು ದ್ಯೂತಕಾಲದಲ್ಲಿ ಪ್ರತಿಜ್ಞೆ ಮಾಡಿದಂತೆ ನಿನ್ನ ತೊಡೆಗಳನ್ನು ಭೇದಿಸುತ್ತೇನೆ. ನಿನ್ನ ತೊಡೆಗಳನ್ನು ಮುರಿಯುವ ವಿಷಯದಲ್ಲಿ ವಿಚಾರ ಮಾಡಬೇಕಾಗಿಲ್ಲ (ಸಂಶಯ-ಪಡಬೇಕಾಗಿಲ್ಲ). ಅಧರ್ಮವನ್ನು ಮಾಡುವೆನೋ ಇಲ್ಲವೋ ಎಂದು ವಿಚಾರ ಮಾಡಬೇಡ. ಖಂಡಿತ ನಿನ್ನೆರಡು ತೊಡೆಗಳನ್ನು ಮುರಿದು ನಿನ್ನನ್ನು ಸಂಹರಿಸುತ್ತೇನೆ' ಎಂದು ಭಾವ. ಇಂತು ಘೋಷಿಸುತ್ತಿರುವ ಪವನನಂದನನಾದ ಭೀಮಸೇನನ ಬಳಿಗೆ ದುರ್ಯೋಧನನು ಯುದ್ಧಕ್ಕೆ ಬಂದನು.

ಆಗ ಭೀಮನು ಜನರಿಗೆ ಗದಾಯುದ್ಧದಲ್ಲಿ ತನಗಿರುವ ನಾನಾ ಪ್ರಕಾರಕವಾದ ಚಾತುರ್ಯವನ್ನು ತೋರಿಸುವುದಕ್ಕಾಗಿ ಅಥವಾ ಉತ್ತಮರ ಸ್ವಭಾವವನ್ನು ಪ್ರದರ್ಶಿಸಲಿಚ್ಛಿಸಿ ಯುದ್ಧ ಪ್ರಾರಂಭದಲ್ಲಿ ಸ್ವಲ್ಪ ಮಾತ್ರ ಚಾತುರ್ಯವನ್ನು ತೋರುತ್ತಾ ಯುದ್ಧವು ರಭಸದಿಂದ ಜರುಗುವಾಗ ಬಹುಪ್ರಕಾರವಾಗಿ ಚಾತುರ್ಯವನ್ನು ತೋರುವರೆಂಬ ಉತ್ತಮ ಸ್ವಭಾವವನ್ನು ಪ್ರಕಟಗೊಳಿಸಲು (ಸ್ಪಷ್ಟಪಡಿಸಲು) ಮೊದಲು ಮೆಲ್ಲಮೆಲ್ಲನೆ ಯುದ್ಧ ಮಾಡಿ ನಂತರ ಬಹುಕೌಶಲ್ಯವನ್ನು ತೋರುತ್ತಾ ಆಶ್ಚರ್ಯಕರವಾಗಿ ಯುದ್ಧ ಮಾಡಿದನೆಂದು ಭಾವ.

ಭೀಮ-ದುರ್ಯೋಧನರು ತಮ್ಮ ಗದಾಯುದ್ಧದ ಕೌಶಲ್ಯವನ್ನು ಅಲ್ಲಿದ್ದವರಿಗೆ ಪ್ರದರ್ಶಿಸುತ್ತಾ ಚಕ್ರಾಕಾರವಾಗಿ ಸಂಚರಿಸಹತ್ತಿದರು. ಅದೇ ವೇಳೆಗೆ ತೀರ್ಥಯಾತ್ರೆಗೆ ತೆರಳಿದ್ದ ಬಲರಾಮನೂ ಬಂದನು. ಮುಸಲಿಯು ಅವರಿಬ್ಬರನ್ನು ಯುದ್ಧ ಮಾಡಬೇಡಿರೆಂದು ಹೇಳಿ ತಡೆದನು. ಬಲರಾಮನು ತಡೆಯುತ್ತಿದ್ದರೂ ಭೀಮ-ಸುಯೋಧನರಿಬ್ಬರೂ ಯದ್ಧವನ್ನು ನಿಲ್ಲಿಸಲಿಲ್ಲ. ಆಗ ಶ್ರೀಕೃಷ್ಣಾದಿಗಳಿಂದ ಮಾನಿತನಾದ ಬಲಭದ್ರನು ಭೀಮ-ದುರ್ಯೋಧನರ ಗದಾಯುದ್ಧವನ್ನು ನೋಡುತ್ತ ನಿಂತನು.

ಗದಾಯುದ್ಧದ ಅಭ್ಯಾಸಬಲವುಳ್ಳ ಭೀಮ ದುರ್ಯೋಧನರು ಮಂಡಲಾಕಾರವಾಗಿ ತಿರಗುತ್ತ ಯುದ್ಧಮಾಡಿದರು. ಆಗ ದುರ್ಯೋಧನನು ಭೀಮನನ್ನು ವಂಚಿಸಲು ಶಿರಸ್ಸನ್ನು ಕೆಳಗೆ ಮಾಡಿ ತೊಡೆ-ಕಟಿ ಪ್ರದೇಶದ ಸಂಧಿಭಾಗವನ್ನು (ಪೃಷ್ಠಭಾಗದ ಮೂಲವಾದ ಆಧಾರಸ್ಥಾನವನ್ನು) ತೋರುತ್ತಾ ಯುದ್ಧ ಮಾಡಿದನು. ಆಗ ಭೀಮಸೇನನು ಶ್ರೀಕೃಷ್ಣನ ಅಪ್ಪಣೆಯಂತೆ ಗದಾಯುದ್ಧದ ಮರ್ಯಾದೆಯನ್ನೂ, ಕೀರ್ತಿಯನ್ನೂ ಕಾಪಾಡಲಿಕ್ಕಾಗಿ ನಾಭಿಯಿಂದ ಅತಿಕೆಳಗೆ ಹೊಡೆಯದೆ ದುರ್ಯೋಧನನ ಪೃಷ್ಠಮೂಲದಲ್ಲಿ ಹೊಡೆದನು. ಮತ್ತು ತನ್ನ ಎರಡು ಪ್ರತಿಜ್ಞಾಪಾಲನೆಗಾಗಿ ನಾಭಿಯ ಮೇಲ್ಭಾಗದಲ್ಲಲ್ಲದೆ ಅಧೋಭಾಗದಲ್ಲಿ ಗದಾ ಪ್ರಹಾರಮಾಡಿ ದುರ್ಯೋಧನನನ್ನು ಧರೆಗುರುಳಿಸಿದನು. ಪ್ರತಿಜ್ಞಾದ್ವಯವೆಂದು ಹೇಳಲಾಯಿತಲ್ಲ. ಯಾವುದು ಆ ಎರಡು ಪ್ರತಿಜ್ಞೆಗಳು? ಎಂದರೆ ಕಪಟದ್ಯೂತ ಸಂದರ್ಭದಲ್ಲಿ ದುರ್ಯೋಧನನು, ಧರ್ಮರಾಜ ಎಲ್ಲವನ್ನೂ ಪಣವಾಗಿಟ್ಟು ಕಳೆದುಕೊಂಡಿರುವಾಗ 'ಈಗ ಕೃಷ್ಣನನ್ನು ಪಣವಾಗಿಡು' ಎಂದು ಹೇಳಿದಾಗ, ಭೀಮಸೇನನು, ಕೃಷ್ಣನನ್ನು ಅವಮಾನಪಡಿಸಿದ್ದನ್ನು ಸಹಿಸಲಾಗದೆ "ನಿಪಾತ್ಯ ಏವ ಭೂತಲೇ ಹಿ ತೇ ಶಿರೋ ನಿಪಾತ್ಯ ಇತ್ಯಲಂ", ಅಂದರೆ 'ಎಲವೋ ದುಷ್ಟ ದುರ್ಯೋಧನ! ಯುದ್ಧದಲ್ಲಿ ನಿನ್ನನ್ನು ಭೂಮಿಗುರುಳಿಸಿ ನಿನ್ನ ತಲೆಯನ್ನು ಮೆಟ್ಟುತ್ತೇನೆ' ಎಂದು ಪ್ರತಿಜ್ಞೆ ಮಾಡಿದ್ದನು. ನಂತರ ದ್ರೌಪದಿಯನ್ನು ಅವಮಾನಿಸಿ 'ನನ್ನ ತೊಡೆಯ ಮೇಲೆ ಕುಳಿತುಕೋ' ಎಂದು ತೊಡೆತಟ್ಟಿ ತನ್ನ ತೊಡೆ ತೋರಿಸಿ ದುರ್ಯೋಧನು ಹೇಳಿದಾಗ ಮತ್ತೆ ಭೀಮನು "ತವೋರುಮೇನಂ ಗದಯೋರುವೇಗಯಾ ವಿಭೆತ್ಸ್ಯೇ" ಅಂದರೆ 'ದುರಾತ್ಮ ದುರ್ಯೋಧನ! ಪಾಂಡವವಧುವಾದ ಪಾಂಚಾಲಿಯನ್ನು ತೊಡೆಯಮೇಲೆ ಕುಳಿತುಕೋ ಎಂದು ತೊಡೆ ತಟ್ಟಿದೆಯಲ್ಲವೇ? ಅಂಥ ನಿನ್ನ ತೊಡೆಯನ್ನು ಪ್ರಚಂಡವಾದ ನನ್ನ ಗದೆಯಿಂದ ಮುರಿಯುತ್ತೇನೆ' ಎಂದೂ ಪ್ರತಿಜ್ಞೆ ಮಾಡಿದ್ದನು. ಪುನಃ

ವನವಾಸಕ್ಕೆ ಹೊರಡುವ ಮುನ್ನ, ಈ ಸಭೆಯಿಂದ ಹೊರಟಾಗ 'ನಿನ್ನ ತೊಡೆಯನ್ನು ಭೇದಿಸಿ ಕಾಲಿನಿಂದ ಮರ್ದಿಸುತ್ತೇನೆ, ಕುಣಿಯುತ್ತೇನೆ' ಎಂದು ಎರಡು ಪ್ರತಿಜ್ಞೆಗಳನ್ನೂ ಸತ್ಯ ಮಾಡಲು ದುರ್ಯೋಧನನ ತೊಡೆಯನ್ನು ಮುರಿದು ತಲೆಯನ್ನು ಪಾದಾಘಾತದಿಂದ ಮರ್ದಿಸಿದನು.

ತೊಡೆಗಳಿಗೆ ಕಟಿ ಪ್ರದೇಶವು ಸಂಧಿಯು. ತೊಡೆಗಳಿಗೆ ಮೂಲ (ಆಧಾರ)ಭೂತವಾದುದರಿಂದ ನಾಭಿಗೆ ಸಮಾನ-ವಾದ್ದರಿಂದ ಸಕ್ಥಿಗೆ ಗದೆಯಿಂದ ತಾಡನ ಮಾಡಿದನು. ತಲೆ ಮತ್ತು ಶರೀರವೆಂಬ ಅವಯವ ಸಂಬದ್ಧವಾದ ಕಟಿಪ್ರದೇಶ, ಇವೆರಡೂ ಅವಯವವಾದ್ದರಿಂದ ಶರೀರ ದ್ವಾರಾ ತಲೆಗೂ ಮೂಳೆಯ ಸಂಬಂಧವಿರುವುದರಿಂದ ಇಂತು ಮೂಳೆ ಸಂಬಂಧವುಳ್ಳ ಪೃಷ್ಠಮಧ್ಯ - ತಲೆ ಇವುಗಳನ್ನು ಭೀಮನು ಗದಾಪ್ರಹಾರ ಮಾಡಿ, ದುರ್ಯೋಧನನನ್ನು ಸಂಹರಿಸಿ ತನ್ನ ಎರಡು ಪ್ರತಿಜ್ಞೆಗಳನ್ನು ಸಾರ್ಥಕಪಡಿಸಿಕೊಂಡನು ಎಂದು ತಿಳಿಯಬೇಕು.

ಹೀಗೆ ದುರ್ಯೋಧನನ ತೊಡೆಮುರಿದು ತಲೆಯನ್ನು ಮೆಟ್ಟಿದಾಗ ಭೀಮಸೇನನು "ಋಷಭಂ ಮಾ ಸಮಾನಾನಾಂ" ಎಂಬ ಸೂಕ್ತವನ್ನು ದರ್ಶಿಸಿದನು. ಈ ಸೂಕ್ತದಲ್ಲಿರುವ "ಮಾವಕ್ಷಿತ್ತ ಮಾವೀ ವ್ರತಂ" ಎಂಬ ಅಥರ್ವಣ ಋಕ್ ಪ್ರತಿ-ಪಾದ್ಯವಾದ ಅರ್ಥವನ್ನು ದುರ್ಯೋಧನಾದಿಗಳಿಗೆ ದರ್ಶನ ಮಾಡಿಸಿದನು (ತನ್ನ ಕೃತಿಯಿಂದ ತಿಳಿಸಿಕೊಟ್ಟನು). ದುರ್ಯೋಧನಾದಿ ಹರಿದ್ವೇಷಿಗಳ ಪುಣ್ಯಗಳನ್ನೂ, ವಿದ್ಯೆಯನ್ನೂ ಭೀಮನು ಅಪಹರಿಸಿ (ಸ್ವೀಕರಿಸಿ, ತನ್ನದಾಗಿ ಮಾಡಿಕೊಂಡು) ಎಲ್ಲ ಕಡೆ ಎಲ್ಲರನ್ನೂ ಅಜ್ಞಾನ-ಮಿಥ್ಯಾಜ್ಞಾನ (ಬುದ್ಧಿ), ಹರಿದ್ವೇಷ ಉಳ್ಳವರನ್ನು ತಮಸ್ಸಿಗೆ ಹೋಗುವಂತೆ ಮಾಡಿದನು. ಅಂತೆಯೇ ದುರ್ಯೋಧನನ ತಲೆಯನ್ನು ಪಾದದಿಂದ ತಾಡನಮಾಡಿದನು.

ಶ್ರೀನಿರ್ಣಯಾಚಾರ್ಯರು "ಋಷಭಂ ಮಾ ಸಮಾನಾನಾಂ" ಎಂಬ ಸೂಕ್ತಾರ್ಥವನ್ನು ನಿರ್ಣಯಗ್ರಂಥದಲ್ಲಿ ಹೀಗೆ ನಿರೂಪಿಸಿದ್ದಾರೆ -

" ಋಷಭಂ ಮಾ ಸಮಾನಾನಾಂ ಸೂಕ್ತಂ ದದರ್ಶಹ ।
ತೇಷಾಂ ಪುಣ್ಯಾನಿ ವಿದ್ಯಾಶ್ಚ ಸಮಾದಾಯೈವ ಸರ್ವಶಃ ।
ತಾಂಶ್ಚಕಾರ ತಮೋಗಂತೂನ್ ತಸ್ಯ ಮೂರ್ಧ್ನಿ ಪದಾಕ್ರಮತ್ (ನ್)॥

(ಮ. ಭಾ. ತಾತ್ಪರ್ಯನಿರ್ಣಯ, ಅ. 28, ಶ್ಲೋ. 80)

**ಅರ್ಥ-** ಭೀಮಸೇನನು 'ಋಷಭಂ ಮಾ ಸಮಾನಾನಾಂ' ಎಂಬ ಸೂಕ್ತವನ್ನು ಕಂಡನು. ಹರಿದ್ವೇಷಿಗಳಾದ ದುರ್ಯೋಧನ ಮೊದಲಾದವರ ಪುಣ್ಯಗಳನ್ನೂ, ವಿದ್ಯೆಗಳನ್ನು ಇವರಿಂದ ಕಿತ್ತು ತಾನು ಸ್ವೀಕರಿಸಿ ಅಜ್ಞಾನ ಮಿಥ್ಯಾಜ್ಞಾನ ಹಾಗೂ ಶ್ರೀಹರಿದ್ವೇಷ ಯುಕ್ತರಾದವರೆಲ್ಲರನ್ನೂ ಅಂಧಂತಮಸ್ಸಿಗೆ ಭಾಗಿಗಳಾಗುವವರನ್ನಾಗಿ ಮಾಡಿದನು. ದುರ್ಯೋಧನನ ಶಿರಸ್ಸನ್ನು ತನ್ನ ಪಾದಗಳಿಂದ ಆಕ್ರಮಿಸಿದನು. ಅಂದರೆ ತಲೆಯನ್ನು ಮೆಟ್ಟಿದನು ಎಂದು ಭಾವ.

ಈ ಸೂಕ್ತವನ್ನು ಶ್ರೀಮದ್ವಾದಿರಾಜಗುರುಸಾರ್ವಭೌಮರು ತಾತ್ಪರ್ಯನಿರ್ಣಯಕ್ಕೆ ತಾವು ರಚಿಸಿರುವ "ಶ್ರೀಭಾವ-ಪ್ರಕಾಶ" ಎಂಬ ವ್ಯಾಖ್ಯಾನದಲ್ಲಿ ಬಹುಸುಂದರವಾಗಿ ವ್ಯಾಖ್ಯಾನಿಸಿದ್ದಾರೆ. ದುರ್ಯೋಧನನ ಊರುಗಳನ್ನು ಭಗ್ನಗೊಳಿಸಿ ಅವನ ತಲೆಯನ್ನು ತಮ್ಮ ಪಾದಗಳಿಂದ ಮೆಟ್ಟಿದಾಗ ಭೀಮಸೇನದೇವರು ಈ ಸೂಕ್ತದರ್ಶನ ಮಾಡಿದರು (ಕಂಡರು) ಎಂದು ಶ್ರೀವಾದಿರಾಜರು ಹೇಳಿದ್ದಾರೆ. ದರ್ಶನ ಮಾಡಿದರು (ಕಂಡರು) ಎಂದರೆ ವೇದೋಪನಿಷತ್ ಸೂಕ್ತಗಳನ್ನು ದರ್ಶನ ಮಾಡಿದವರನ್ನು (ಕಂಡವರನ್ನು) ವೇದ, ಉಪನಿಷತ್, ಸೂಕ್ತ ಮಂತ್ರದ್ರಷ್ಟಾರರೆಂದು ಪ್ರಾಜ್ಞರು ಸ್ತುತಿಸುವರು. ಆದ್ದರಿಂದ "ಋಷಭಂ ಮಾ ಸಮಾನಾನಾಂ" ಎಂಬ ಸೂಕ್ತವನ್ನು ಕಂಡ ಶ್ರೀಭೀಮಸೇನದೇವರು ಈ ಸೂಕ್ತದ ಮಂತ್ರದ್ರಷ್ಟಾರರು

ಎಂದು ಭಾವ. ಶ್ರೀವಾದಿರಾಜಪೂಜ್ಯಚರಣರು ತಮ್ಮ ವ್ಯಾಖ್ಯಾನದಲ್ಲಿ ಈ ಸೂಕ್ತವು ಶ್ರೀವಾಯುದೇವರ ಪರವಾದದ್ದೆಂದು ಅಪ್ಪಣೆ ಕೊಡಿಸಿದ್ದಾರೆ.

ಶ್ರೀವಾಯುದೇವರ ಅವತಾರರಾದ ಶ್ರೀಭೀಮಸೇನದೇವರು ರಣರಂಗದಲ್ಲಿ ಎಸಗಿದ ಪ್ರಕೃತ ದುರ್ಯೋಧನನೊಡನೆ ಕಾದಾಡಿ ಗದಾಪ್ರಹಾರದಿಂದ ಅವನನ್ನು ನೆಲಕ್ಕೆ ಕೆಡಹಿ, ಅವನ ತಲೆಯನ್ನು ಪಾದಗಳಿಂದ ತುಳಿದುದೇ ಮೊದಲಾದ ಕಾರ್ಯಗಳನ್ನೂ ಈ ಸೂಕ್ತದ ಅರ್ಥವನ್ನು ವಿವರಿಸಿದ ಶ್ರೀನಿರ್ಣಯಾಚಾರ್ಯರರ ವಾಕ್ಯಗಳನ್ನು, ಈ ಸೂಕ್ತಕ್ಕೆ ಶ್ರೀವಾದಿರಾಜರು ಬರೆದಿರುವ ವ್ಯಾಖ್ಯಾನವನ್ನು ಪೂರ್ವಾಗ್ರಹದೂಷಿತರಾಗಿರುವ ಪಂಡಿತರಿಗೆ ಈ ಎರಡರಲ್ಲೂ ಒಂದೇ ವಿಧವಾದ ಅರ್ಥವಾಗುವುದರಿಂದ ಶ್ರೀವಾದಿರಾಜ ಗುರುರಾಜರು ಅಪ್ಪಣೆ ಕೊಡಿಸಿದಂತೆ ಈ ಸೂಕ್ತವು ಶ್ರೀವಾಯುದೇವರ ಪರವಾದುದೆಂಬುವುದು ಅತ್ಯಂತ ಸ್ಪಷ್ಟವಾಗುವುದಲ್ಲಿ ಸ್ವಲ್ಪವೂ ಸಂದೇಹವಿಲ್ಲ ಎಂದು ಮಹತ್ವ ಪೂರ್ಣವಾದ 'ಋಷಭಂ ಮಾ ಸಮಾನಾನಾಂ' ಎಂಬ ಸೂಕ್ತದ ಅರ್ಥವು ಹೀಗಿರುತ್ತದೆ ಇದನ್ನು ಶ್ರೀವಾದಿರಾಜಗುರುಗಳ ವ್ಯಾಖ್ಯಾನದಂತೆ ಶ್ರೀಹರಿವಾಯುಗುರುಗಳ ಮನಸ್ಸಂತೋಷಕ್ಕಾಗಿ ನಿರೂಪಿಸಲು ಹರ್ಷಿಸುತ್ತೇವೆ.

"ಋಷಭಂ ಮಾ ಸಮಾನಾನಾಂ ಸಪತ್ನಾನಾಂ ವಿಷಾಸಹಿಮ್ ।
ಹಂತಾರಂ ಶತ್ರೂನ್(ಶತ್ರೂಣಾಂ)ಕೃಧಿ ವಿರಾಜಂ ಗೋಪತಿಂ ಗವಾಮ್ ॥
ಅಹಮಸ್ಮಿ ಸಪತ್ನಹೇಂದ್ರ ಇವಾರಿಷ್ಟೋ ಅಕ್ಷತಃ ।
ಅಧಃ ಸಪತ್ನಾ ಮೇ ಪದೋರಿಮೇ ಸರ್ವೇ ಅಭೀಷ್ಠಿತಾಃ ॥

ಅತ್ರೈವೋಷಿ ನಹ್ಯಮುಭೇ ಆರ್ತ್ನೀಂ ಇವ ಜ್ಯಾಯಾ ।
ವಾಚಸ್ಪತೇ (ನಿದಧೇ) ನಿಷೇಧೇ ಮಾನ್ಯಧಮದಧರಂ ವದಾನ್ ॥
ಅಭಿಭೂರಹಮಾಗಮಂ ವಿಶ್ವಕರ್ಮೇಣ ಧಾಮ್ನಾ ।
ಆವಶ್ಚಿತ್ತಮಾವೋ ವ್ರತಮಾವೋಽಹಂ ಸಮಿತಿಂ ದದೇ ॥

ಯೋಗಕ್ಷೇಮಂ ವ ಆದಾಯಾಹಂ ಭೂಯಾಸಮುತ್ತಮ ಆವೋ ಮೂರ್ಧಾನಮಕ್ರಮೀಮ್ ।
ಅಥ ಸ್ವದಾಸ್ವ ಉದ್ವದತಮಂಡೂಕಾ ಇವೋದಕಾನ್ ಮಂಡೂಕಾ ಉದಕಾದಿವ॥" ಇತಿ

ಈ ಸೂಕ್ತಕ್ಕೆ ಶ್ರೀವಾದಿರಾಜರು ಹೀಗೆ ವ್ಯಾಖ್ಯಾನವನ್ನು ಮಾಡಿದ್ದಾರೆ. ಭೀಮಸೇನದೇವರಿಂದ ದೃಷ್ಟವಾದ ಸೂಕ್ತಕ್ಕೆ ಅವರ ಕೃಪೆಯಿಂದ ನನ್ನ ಶಕ್ತ್ಯಾನುಸಾರವಾಗಿ ಅರ್ಥವನ್ನು ವಿವರಿಸುತ್ತೇನೆ. 'ಸಮಾನಾನಾಂ ಸಪತ್ನಾನಾಂ' ಇವುಗಳ ಮಧ್ಯದಲ್ಲಿ 'ವಿಷಾಸಹಿಂ' ಎಂಬ ವಿಶೇಷಣ ಕೊಟ್ಟಿರುವುದರಿಂದ ಸಹನಶೀಲವಾದ, ಹಿರಿಯ ಕಿರಿಯರಾದ ಧೃತರಾಷ್ಟ್ರ ಪಾಂಡುರಾಜರ ಪುತ್ರರಾದರಿಂದ ಕೌರವ-ಪಾಂಡವರು ಅರ್ಧರಾಜ್ಯಕ್ಕೆ ಅರ್ಹರಾದ್ದರಿಂದ 'ಸಮಾನಾನಾಂ' ಎಂದು ಉಕ್ತವಾಗಿದೆ. ಅಂತೆಯೇ ಶತ್ರುಗಳೆಂದು ಹೇಳದೆ 'ಸಪತ್ನಾನಾಂ' ಎಂದು ಹೇಳಲ್ಪಟ್ಟಿದೆ. 'ಸಮಾನೌ ಪತ್ನ್ಯೌ ಕುಂತೀ ಗಾಂಧಾರ್ಯೌ ಯೇಷಾಂ ತೇ ತಥೋಕ್ತಾಃ' ಎಂಬ ವ್ಯುತ್ಪತ್ತಿಯಿಂದ, 'ಸಪತ್ನಹಾ' ಎಂದು ಹೇಳಲ್ಪಟ್ಟಿದೆ. ಅಂದರೆ ಸಮಾನರಾದ ಪತ್ನಿಯರಾದ ಕುಂತೀ ಗಾಂಧಾರಿಯರು ಸಪತ್ನರು(ಸಪತ್ನಿಯರು). ಲೌಕಿಕ ಸಂಬಂಧದ ಅಭಿಪ್ರಾಯದಿಂದ ಹೀಗೆ ಉಕ್ತವಾಗಿದೆ. ವಾಸ್ತವಾಗಿ ನಾವು (ಪಾಂಡವರು) ಸುರರಾದ್ದರಿಂದ, ಕೌರವರು ಅಸುರರಾದ್ದರಿಂದ ವಿರೋಧವು ಸಹಜವಾಗಿದೆ ಎಂದು ಸೂಚಿಸಲು 'ಶತ್ರುಗಳ' ಎಂದು ಹೇಳುತ್ತಾರೆ. ರಾಜಸಭೆಯಲ್ಲಿ ಪಾಂಚಾಲರಾಜ ಪುತ್ರಿ, ಪಾಂಡವ ವಧುವಾದ ದ್ರೌಪದೀದೇವಿಯ ಶಿರಮುಡಿಯನ್ನು ಹಿಡಿದು ಸೆಳೆಯುವುದೇ ಮುಂತಾದ ಅಪರಾಧಗಳನ್ನು (ಕೌರವರು) ಮಾಡಿದ್ದರೂ,

ಶ್ರೀಹರಿಯ ಸಂಕಲ್ಪವನ್ನು ಅನುಸರಿಸಿ ಆ ಕಾಲದಲ್ಲಿ ಸಹಿಸಿಕೊಂಡು ಸುಮ್ಮನಿದ್ದುದರಿಂದ 'ದ್ವಿಷಾ ಸಹಿಂ' ಎಂದು ಉಕ್ತವಾಗಿದೆ. ನನ್ನ ಸಹನೆಯೂ ಸಹ ವಿದ್ವೇಷಿಗಳಿಗೆ ವಿಷಕ್ಕೆ ಸಮಾನವೆಂದು ಸೂಚಿಸಲು ಮೂಲಸಂಹಿತೆಯಲ್ಲಿ ಸಕಾರಕ್ಕೆ ಷಕಾರವನ್ನು ಹೇಳಲಾಗಿದೆ. ಆದ್ದರಿಂದಲೇ 'ಹಂತಾರಂ' ಎಂದು ಹೇಳುತ್ತಾರೆ(ಹೇಳಿದ್ದಾರೆ). ಋಷಭಂ = ಶ್ರೇಷ್ಠನಾದ, ಮಾ = ನನ್ನನ್ನು, ಹಿಂದೆ ಹೇಳಿದ ಸಹನ ಶಕ್ತಿಯಿಂದಲ್ಲ ಎಂದು ಸೂಚಿಸಲು 'ಋಷಭಂ' ಎಂದಿದ್ದಾರೆ. ಶತ್ರೂಣಾಂ ಹಂತಾರಂ = ಶತ್ರುಗಳನ್ನು ಕೊಲ್ಲುವವನನ್ನಾಗಿ, ಕೃಧಿ = ಮಾಡು, ವಿರಾಜಂ = ವಿಶೇಷಾಕಾರವಾಗಿ ಪ್ರಕಾಶಮಾನನ್ನಾಗಿ, ಕುರು = ಮಾಡು, ಗವಾಂ = ವಿದ್ಯೆಗಳ ಮಧ್ಯದಲ್ಲಿ, ಗೋಪತಿಂ = ನನ್ನನ್ನು ವಿದ್ಯಾಪತಿಯನ್ನಾಗಿ, ಕುರು = ಮಾಡು, ವಿದ್ಯಾಭಿಮಾನಿಗಳಾದ ದೇವತೆಗಳು ನನ್ನನ್ನು ಸೇವಿಸುವಂತೆ (ಹೇಗೆ ಸೇವಿಸಬೇಕೋ ಹಾಗೆ), ಕುರು = ಮಾಡು, ಎಂದು ಅರ್ಥವು. ಈ ಅರ್ಥವನ್ನು "ಪೀತೇ-ರತ್ನೋಪಕ್ಲೃಪ್ತೇ ರುಚಿರ ರುಚಿಮಣಿ ಜ್ಯೋತಿಷಾ ಸನ್ನಿಷಣ್ಣಂ। ಬ್ರಹ್ಮಾಣಂ ಭಾವಿನಂ ತ್ವಾಂ ಜ್ವಲತಿ ನಿಜಪದೇ ವೈದಿಕಾದ್ಯಾಹಿ ವಿದ್ಯಾಃ । ಸೇವಂತೇ ಮೂರ್ತಿಮತ್ಯಃ" ಎಂದು ವಾಯುಸ್ತುತಿಕಾರರು ಹೇಳಿದ್ದಾರೆ.

ಇಂದ್ರ ಇವ = ಇಂದ್ರನಂತೆ, ಅರಿಷ್ಟಃ = ನಾಶರಹಿತನಾದ, ಅಕ್ಷತಸ್ಸನ್ = ಕ್ಷತಾದಿಗಳಿಲ್ಲದವನನ್ನಾಗಿ, ನಾನು, ಸಪತ್ನಃ = ಸಪತ್ನರಾದ ಕೌರವರ, ಹಂತಾ ಅಸ್ಮಿ = ಸಂಹಾರಕನಾಗಿದ್ದೇನೆ. ಇಮೇ = ಈ, ಸರ್ವೇ = ಸಮಸ್ತರಾದ, ಸಪತ್ನಃ = ಶತ್ರುಗಳು, ಮೇ = ನನ್ನ, ಪದೋರಧಃ = ಪಾದಗಳ ಕೆಳಗೆ, ಅಧಿಷ್ಠಿತಾಃ = ಸುತ್ತ (ಇರುವವರಾಗಿ), ಸ್ಥಿತಾ ಭವಂತು = ಇರುವವರಾಗಿರಲಿ (ಪಾದದ ಕೆಳಗೆ ಬಿದ್ದಿರಲಿ), ಈ ವಿಷಯವು ತಮಗೆ ಸಂಬಂಧಿಸಿದ ವಿಷಯವೆಂದು ತೋರಿಸಿ-ಕೊಡಲಿಕ್ಕಾಗಿಯೇ ಭೀಮಸೇನದೇವರು ದುರ್ಯೋಧನನ ಶಿರಸ್ಸಿನಲ್ಲಿ ಮತ್ತೆ ಮತ್ತೆ ತಮ್ಮ ಪಾದಗಳನ್ನಿಟ್ಟು (ಪಾದಗಳಿಂದ), ನನರ್ತ = ನರ್ತಿಸಿದರು.

ಏವಂ ಚ ಮೂಲದಲ್ಲಿ (ಸಂಹಿತೆಯಲ್ಲಿ) ಹೇಳಿರುವ, ಪದೇತಿ ಪದಂ = ಪದವೆಂಬ ಪದವು (ಪಾದವು) ಜಾತ್ಯೈಕ-ವಚನವೆಂದು ತಿಳಿಯಬೇಕು. ಅತ್ರೈವ = ನನ್ನ ಪಾದಗಳ ಕೆಳಭಾಗದಲ್ಲಿಯೇ, ಜ್ಯಾಯಾ = ಮೌರ್ವಿಯಿಂದ, ಉಭೇ ಆರ್ತ್ನೀಂ ಅರತಂ ಸಂತತಂ ಜ್ಯಯಾ ನಿರ್ಯೇತ ಇತಿ ಆರ್ತ್ನೀಂ, ಧನುಷ್ಕೋಟೀ ಇವ = ಧನುಷ್ಕೋಟಿಯಂತೆ, ವೋಪಿ ಪರಸೇನಾಸ್ಥಿತಾನಿವ = ಶತ್ರುಸೇನೆಯಲ್ಲಿರುವರಂತೆ, ಮಮ = ನನ್ನ, ಸೇನಾಸ್ಥಾನಪಿ = ಸೇನೆಯಲ್ಲಿರುವವರನ್ನೂ (ಉಭಯ ಸಮುಚ್ಚಯಾರ್ಥಂ ಅಪಿ ಪದಂ), ರಣರಂಗ ಮಧ್ಯಸ್ಥಿತೇ = ರಣಭೂಮಿಯ ಮಧ್ಯದಲ್ಲಿರುವ ಆ ಉಭಯಸೇನೆಯನ್ನು ನೋಡಿಯೇ ಹೇಳಿರು-ವುದರಿಂದ 'ವ' ಎಂದು ಹೇಳಲ್ಪಟ್ಟಿದೆ. ಸಹ್ವಾಮಿ = ಬಧ್ನಾಮಿ = ಅತ್ತಿತ್ತ ಅಲುಗಾಡಲೂ ಬಿಡುವುದಿಲ್ಲ ಎಂದು ಸೂಚಿಸಲು ಸಹ್ವಾಮಿ ಎಂದು ಹೇಳಲ್ಪಟ್ಟಿದೆ. ಏಕೇನೈಕಜೀವೋಭಯಕಟಕಬಂಧನಸ್ಯ ಅಸಂಭಾವನಾ ಪರಿಹಾರಕ್ಕಾಗಿ ಜ್ಞಾನಿದರ್ಶನವನ್ನು ತೋರಿಸಿದ್ದಾರೆ.

ಹೇ ವಾಚಸ್ಪತೇ! = ಸಕಲ ವಿದ್ಯೆಗಳಿಗೆ ಪ್ರಭುಗಳಾದ ಹೇ ಶ್ರೀವೇದವ್ಯಾಸ ದೇವರೇ, ಇಮಾನ್ ಸರ್ವಾನ್ = ಇವರೆಲ್ಲರನ್ನೂ, ಮತ್ = ನನ್ನಿಂದ (ನನ್ನ), ಅಧರಂ = ಕೆಳಭಾಗದಲ್ಲಿರುವವಂತೆಯೇ, ವದಾನ್ = ಹೇಳುವವರನ್ನಾಗಿ (ಕೂಗಿಕೊಳ್ಳುವವರನ್ನಾಗಿ), ಅಂದರೆ ನನಗೆ ಎದುರು ಹೇಳಲಾಗದಿರುವವರನ್ನಾಗಿ, ನಿಷೇಧ = ಸಾಧಿಸಿಕೊಡು. ನನ್ನ ಈ ಭೀಮರೂಪದಲ್ಲಿಯೂ, ಮುಂದೆ ಅವತರಿಸಲಿರುವ ನನ್ನ ಶ್ರೀಮಧ್ವರೂಪದಲ್ಲಿಯೂ ಸಹ ನನಗೆ ಎದುರಾಡುವವರಿಲ್ಲದಂತೆ ಸಾಧಿಸಿಕೊಡು ಎಂದು ಭಾವ. ಅಹಂ = ನಾನು ವಿಶ್ವಕರ್ಮಣಾ = (ವಿಶ್ವಸ್ಯ ಕರ್ಮ ಸಕಲಜಗತ್‌ಸೃಷ್ಟಿ ಸಂಹಾರಾದಿ ಕರ್ಮ ಯಸ್ಮಾತ್‌ಸಃ ವಿಶ್ವಕರ್ಮೇತಿ ವಿಗ್ರಹಃ) ಸಕಲ ಜಗತ್ತಿನ ಸೃಷ್ಟಿಸಂಹಾರಾದಿ ಕಾರ್ಯಗಳು ಯಾರಿಂದ ಜರುಗುವುವೋ ಅಂಥ ವಿಶ್ವಕರ್ಮನಿಂದ, ಧಾಮ್ನಾ = ಸಕಲ ಜಗದ್ಧಾರಕನಿಂದಲೂ, ಅಂದರೆ ಶ್ರೀಮನ್ನಾರಾಯಣನಿಂದ, ಅಭಿಭೂಃ = ಪರರನ್ನು (ಪರದ್ವೇಷಿಗಳಾದ ಶತ್ರುಗಳನ್ನು ) ಪರಾಭವಗೊಳಿಸುವವನನ್ನಾಗಿ, ಇಹ = ಇಲ್ಲಿಗೆ, ಆಗಮಂ = ನಾರಾಯಣನ

ಆಜ್ಞೆಯಿಂದ ಸರ್ವರನ್ನೂ ಜಯಿಸುವವನಾಗಿ, ಅಹಂ = ನಾನು, ಆಗಮಂ = ಬಂದಿದ್ದೇನೆ. ಈ ಭಾಗದ ಭಾವವನ್ನು 'ಅಜ್ಞಾಮನ್ಯೈರಧಾರ್ಯಾಂ' ಮತ್ತು 'ಭೂಮಾವಾಗತ್ಯ ಭೂಮನ್' ಎಂದೂ, 'ದುರ್ಭಾಷ್ಯಂ ವ್ಯಸ್ಯದಸ್ಯೋಃ' ಎಂದೂ ಸಹ ಶ್ರೀವಾಯುಸ್ತುತಿಯಲ್ಲಿ ನಿರೂಪಿಸಿದ್ದಾರೆ. ಆ - ಸುತ್ತಮುತ್ತಲೂ (ಎಲ್ಲಕಡೆ), ವಃ - ಚಿತ್ರವನ್ನು, ಆ - ಸರ್ವತ್ರ, ಸಂ = ಸಮೀಚೀನವೂ ಆದ, ಇತಿಂ = ಜ್ಞಾನವನ್ನು, ಜ್ಞಾನಂ = ಜ್ಞಾನದ್ ಫಲಭೂತವಾದ, ಸದ್ಗತಿಂ ಚ = ಸದ್ಗತಿಯನ್ನು, ಅಹಮೇವ = ನಾನೇ, ಆದದೇ = ಬಲವಂತವಾಗಿ ಅಪಹರಿಸಿ ನನ್ನ ವಶಪಡಿಸಿಕೊಂಡಿದ್ದೇನೆ'' ಎಂದು ತಾತ್ಪರ್ಯ.

ಈ ವಿಚಾರವು ''ತೇಷಾಂ ಪುಣ್ಯಾನಿ ವಿದ್ಯಾಸ್ವ'' ಮುಂತಾಗಿ ನಿರ್ಣಯವಾಕ್ಯಗಳಲ್ಲಿ ಗ್ರಂಥಕಾರರೇ ಅನುವಾದಕರ ನೆಪದಿಂದ ಹೇಳಿದ್ದಾರೆ.

ಯೋಗಕ್ಷೇಮಂ = ಕಾಮ್ಯ-ತಪಸ್ಸು ಮೊದಲಾದ, ಲಬ್ಧಂ = ಲಭಿಸಿದ, ವಃ = ನಿಮ್ಮ, ಯೋಗಕ್ಷೇಮಂ ಆದಾಯ = ತೆಗೆದುಕೊಂಡು ನಾನು ಮಾಡಿದ ಪುಣ್ಯವಶದಿಂದ, ಭವದ್ಭ್ಯಃ = ನಿಮ್ಮಗಳಿಂದ ಕಿತ್ತುಕೊಂಡು ಶ್ರೇಷ್ಠನಾಗುತ್ತೇನೆ, ಆ = ಎಲ್ಲ ಕಡೆ ರಣರಂಗದಲ್ಲಿ ಬಿದ್ದಂತಹ, ವಃ = ನಿಮ್ಮಗಳ, ಮೂರ್ಧಾನಂ = ಶಿರಸ್ಸನ್ನು, ಆಕ್ರಮೀಂ = ಪಾದಗಳಿಂದ ಆಕ್ರಮಿಸಿ, ಆತಿಷ್ಠಂ = ನಿಂತಿರುವೆನು, ಯಾಯಂ ಸರ್ವೇ = ನೀವೆಲ್ಲರೂ, ಉಕ್ತವಿಧಯಾ = ಮೇಲೆ ಹೇಳುವಂತೆ ಶಿರಸ್ಸನ್ನಾಕ್ರಮಿಸಿ, ಸ್ಥಿತಸ್ಯ = ನಿಂತಿರುವ, ಮಮ = ನನ್ನ, ಪದಾತ್ = ಪಾದದ, ಅಧಸ್ತಾತ್ = ಕೆಳಭಾಗದಲ್ಲಿ ಬಿದ್ದಿರುವ ನೀವು, ಉದ್ವದತ್ = ಗಟ್ಟಿಯಾಗಿ ಆಕ್ರೋಶವನ್ನು, ಕುರುತ್ = ಮಾಡಿರಿ, ಗಟ್ಟಿಯಾಗಿ ಕಿರುಚಿಕೊಳ್ಳಿರಿ, ಈ ವಿಷಯವಾಗಿ ಒಂದು ದೃಷ್ಟಾಂತವನ್ನು ಕೊಡುತ್ತಾರೆ. ಉದಕಾತ್ ಅಧಃ = ನೀರಿನಿಂದ ಕೆಳಗೆ, ಪಂಕೇ = ಕೆಸರಿನಲ್ಲಿ (ಸಿಕ್ಕಿರುವ), ಮಂಡೂಕಾ ಇವ = ಕಪ್ಪೆಗಳಂತೆ ಆಕ್ರೋಶಮಾಡಿರಿ ಎಂದು ಅರ್ಥ. 'ದ್ವಿರ್ಬದ್ಧಂ ಸುಬದ್ಧಂ ಭವತಿ' ಎಂಬ ನ್ಯಾಯದಿಂದ ಈ ಪ್ರಕಾರವಾದ ಸ್ಥಿತಿಯ ಅಪರಿಹಾರ್ಯವೆಂದು ಸೂಚಿಸಲು, ಅದೇ ದೃಷ್ಟಾಂತವನ್ನು ಮತ್ತೆ ಹೇಳುವರು. ಇದನ್ನು 'ಆಕ್ರೋಶಂತೋ ನಿರಾಶಾ' ಮುಂತಾದ ವಾಕ್ಯಗಳಿಂದ ವಾಯುಸ್ತುತಿಯಲ್ಲಿ ಹೇಳಿದ್ದಾರೆ. ಈ ಶ್ರುತ್ಯರ್ಥಕ್ಕೂ (ಸೂಕ್ತಾರ್ಥಕ್ಕೂ) ಭೀಮನ ಚರಿತ್ರೆಯಲ್ಲಿರುವ ನಡವಳಿಕೆಗೂ ಸ್ವಲ್ಪವೂ ವೈಲಕ್ಷಣ್ಯವಿಲ್ಲದಿರುವುದರಿಂದ ಈ ಸೂಕ್ತವು ಭೀಮನಿಗೆ ಸಂಬಂಧಪಟ್ಟಿದ್ದು. ಇನ್ನಾರಿಗೂ ಸಂಬಂಧವಿಲ್ಲವಾಗಿದೆ ಎಂದು ವ್ಯಾಖ್ಯಾನಕಾರರು ನಿರೂಪಿಸಿ ವಿರಮಿಸಿದ್ದಾರೆ.

ಆಗ ಭೀಮಸೇನನು ದುರ್ಯೋಧನನು ಮಾಡಿದ ಅಪರಾಧಗಳು ಮತ್ತು ಅಕೃತ್ಯಗಳನ್ನು ಅವನಿಗೆ ಜ್ಞಾಪಿಸಲಾರಂಭಿಸಿದನು. 'ದುರ್ಯೋಧನ ನೀನು ಮಾಡಿರುವ ಅಪರಾಧಗಳು ಒಂದೇ ಎರಡೇ? ಅದಕ್ಕೆ ಇತಿಮಿತಿಯೇ ಇಲ್ಲ, ಕೇಳು. ಭಗವಾನ್ ಶ್ರೀಕೃಷ್ಣನು ಕುರುಪಾಂಡವರಲ್ಲಿ ಶಾಂತಿಸ್ಥಾಪನೆ ಮಾಡಲೆಂದು ಸಂಧಾನಕ್ಕಾಗಿ ನಮ್ಮ ದೂತನಾಗಿ ಬಂದಾಗ ದುಷ್ಟನಾದ ನೀನು ಶಕುನಿ ಕರ್ಣ ದುಶ್ಶಾಸನಾದಿದಳೊಡನೆ ಕುಮಂತ್ರಾಲೋಚನೆ ಮಾಡಿ ಶ್ರೀಕೃಷ್ಣನನ್ನು ಬಂಧಿಸಲು ಪ್ರಯತ್ನಿಸಿದೆಯಲ್ಲವೇ? ಇಕೋ ನೀನು ಮಾಡಿದ ಆ ಅಪರಾಧಕ್ಕಾಗಿ ಈ ಏಟು' ಎಂದು ತನ್ನ ಪಾದಾಘಾತಗಳಿಂದ ಅವನ ಶಿರಸ್ಸಿನ ಮೇಲೆ ತಾಡನಮಾಡಿದನು. ಅದನ್ನು ಕಂಡು ಬಲರಾಮನು ಮತ್ತೆ ಮತ್ತೆ 'ಇದು ತಪ್ಪು ಅಧರ್ಮ' ಎಂದೂ ಕೂಗಿಕೊಂಡನು. ಮತ್ತು ಇದು ಧರ್ಮವಿರುದ್ಧವೆಂದು ತನ್ನ ಎರಡು ಭುಜಗಳನ್ನೂ ಮೇಲೆತ್ತಿ ಮತ್ತೆ ಆಕ್ರೋಶಿಸಿದನು. ಪುನಃ ಕೋಪದಿಂದ ಕೆಂಪಾದ ಕಣ್ಣುಗಳಿಂದ ಭೀಮನನ್ನು ನೋಡುತ್ತಾ ತನ್ನ ಹಲ-ಮುಸಲಾಯುಧಗಳನ್ನು ಹಿಡಿದು ಭೀಮನತ್ತ ಧಾವಿಸಿದನು. ಅದನ್ನು ಕಂಡು ಬಲಭೀಮನು ಸ್ವಲ್ಪವು ಹೆದರದೆ ನಿಶ್ಚಲನಾಗಿ ನಿಂತನು. ಅದನ್ನು ಅವಲೋಕಿಸಿ ಕೇಶವನು ಬಲರಾಮನನ್ನು ಭುಜಹಿಡಿದು ತಡೆದು ನಿಲ್ಲಿಸಿದನು. ಮತ್ತು ''ಅಣ್ಣ! ಭೀಮನು ಧರ್ಮದಿಂದಲೇ ದುರ್ಯೋಧನನನ್ನು ಸಂಹರಿಸಿದ್ದಾನೆ. ಇನ್ನೊಂದು ವಿಧವಾಗಿ ಯೋಚಿಸಿದರೂ ಭೀಮನು ಅಧರ್ಮಯುದ್ಧ ಮಾಡಿಲ್ಲ. ವರ್ತುಲಾಕಾರವಾಗಿ ಎದುರು ಅಥವಾ ಹಿಂಭಾಗವಾಗಿ ವಂಚನೆಯಿಂದ (ಯುದ್ಧಮಾಡುವ) ವಂಚಕರನ್ನು ನಾಭಿಯಿಂದ

ಕೆಳಗೆ ಹೊಡೆದು ಸಂಹರಿಸಬಹುದು. ಆದರಿಂದ ದೋಷವಿಲ್ಲ. ಇದೂ ಅಲ್ಲದೆ, ದ್ಯೂತಕಾಲದಲ್ಲಿ ದ್ರೌಪದಿಯನ್ನು ನನ್ನ ತೊಡೆಯ ಮೇಲೆ ಕೂಡು ಎಂದು ತೊಡೆ ತಟ್ಟಿ ತೋರಿಸಿದನು. ಆಗ ಭೀಮನು 'ದುರುಳ ದುರ್ಯೋಧನ! ನೀನು ಯಾವ ತೊಡೆಯಮೇಲೆ ಕೂಡು ಎಂದೆಯೋ ಆ ತೊಡೆಗಳನ್ನು ನನ್ನ ಗದಾಪ್ರಹಾರದಿಂದ ಮುರಿದು ಹಾಕುವೆನು' ಎಂದು ಪ್ರತಿಜ್ಞೆ ಮಾಡಿದ್ದಾನೆ. ಯುಕ್ತಿಪೂರ್ವಕವಾಗಿ ಸತ್ಕರ್ಮಿಯಾದ ಭೀಮನು ಧರ್ಮದಿಂದಲೆ ಸಂಹಾರ ಮಾಡಿರುವನು." ಶ್ರೀವಾಸುದೇವನ ಈ ನುಡಿಗಳನ್ನಾಲಿಸಿ ಬಲರಾಮನು ಇದು ಕೇವಲ ಧರ್ಮಚ್ಛಲವೆಂದು ಹೇಳಿ ತನ್ನ ಸೇವಕರೊಡನೆ ಕೂಡಲೇ ದ್ವಾರಕಾಪುರಿಗೆ ಹೊರಟು ಹೋದನು.

ಬಲರಾಮನ ನಿರ್ಗಮನಾನಂತರ, ಧರ್ಮವಿಷಯಕ ಸಂಶಯದಿಂದ ಧರ್ಮರಾಜನು 'ಕೃಷ್ಣ! ಭೀಮನು ಮಾಡಿದ್ದು ಧರ್ಮವೇ? ಅಥವಾ ಅಧರ್ಮವೇ?' ಎಂದು ಪ್ರಶ್ನಿಸಿದನು. ಆಗ ಬ್ರಹ್ಮರುದ್ರಾದಿನಿಯಾಮಕನಾದ್ದರಿಂದ ಕೇಶವನಾಮಕನಾದ ಶ್ರೀಕೃಷ್ಣನು ಹೀಗೆ ನುಡಿದನು –

"ಧರ್ಮಜ! ಹಿಂದೆ ಎಷ್ಟೋ ಜನರು ಸಾಕ್ಷಾತ್ ಧರ್ಮದಿಂದಲೇ ಸಂಹೃತರಾದ ಅನೇಕ ಪಾಪಿಗಳಾದ ಮಾನವರು, ದೈವೇಚ್ಛೆಯಿಂದ ದೈವವಂಚಿತರಾಗಿ ವಂಚನೆಯಿಂದಲೇ ಸುರದ್ವೇಷಿಗಳಾದ ದೈತ್ಯರು ಹತರಾಗಿದ್ದಾರೆ. ಆದುದರಿಂದ ದುರ್ಯೋಧನನು ಅಧರ್ಮದಿಂದ ಹತನಾಗಿದ್ದರೂ (ಹಾಗೆ ಭಾವಿಸಿದರು) ಆದರಿಂದ ಈ ವಿಷಯದಲ್ಲಿ ದೋಷವಿಲ್ಲ (ಪಾಪವಿಲ್ಲ). ಏಕೆಂದರೆ ಭೀಷ್ಮಾಚಾರ್ಯರು, ದ್ರೋಣಾಚಾರ್ಯರು ಮತ್ತು ಅಂಗರಾಜನಾದ ಕರ್ಣನು ಈ ಪ್ರಕಾರ-ವಾಗಿಯೇ ಹತರಾಗಿದ್ದಾರೆ. ಅಂದ ಮೇಲೆ ಆಗ ನಿನಗೆ ಬಾರದ ಅಧರ್ಮಶಂಕೆಯು ಈಗ ಹೇಗೆ ಬಂದಿತು? ಅತಃ ಈ ಪಾಪಿಯಾದ ದುರ್ಯೋಧನನು ಸಂಹೃತನಾದ್ದರಿಂದ ಯಾವ ದೋಷವೂ ಇಲ್ಲ. ಪ್ರತಿಜ್ಞಾಪಾಲನೆಯು ಧರ್ಮವು. ಆದ ಕಾರಣ ಪ್ರತಿಜ್ಞಾಪಾಲನೆಗಾಗಿ, ಅದು ಕ್ಷತ್ರಿಯರ ಧರ್ಮವಾದ್ದರಿಂದ, ಆ ಕಾರ್ಯವನ್ನು ಸಫಲಗೊಳಿಸಲು ಭೀಮಸೇನನು ದುರ್ಯೋಧನನ ಊರು(ತೊಡೆ)ಗಳನ್ನು ಛೇಧಿಸಿ, ಸಂಹರಿಸಿದ್ದಾನೆ.

ಗದಾಯುದ್ಧದಲ್ಲಿ ನಾಭಿಯಿಂದ ಕೆಳಗೆ ಹೊಡೆದು ಕೊಲ್ಲುವುದು ನಿಷಿದ್ಧವಾಗಿರುವುದರಿಂದ 'ತವೋರುಮೇನಂ ಗದೋರುವೇಗಯಾ ಬಿಭೇತ್ಸ್ಯೇ', ಭೀಮನು ಮೊದಲೇ ಹೇಗೆ ಪ್ರತಿಜ್ಞೆ ಮಾಡಿದನೆಂದರೆ. ಭೀಮನು ಗದೆಯಿಂದಲೇ ನಿನ್ನ ತೊಡೆಯನ್ನು ಭೇದಿಸುವೆನೆಂದು ಮಾಡಿರುವ ಪ್ರತಿಜ್ಞೆಯು ಧರ್ಮದಿಂದಲೇ ಮಾಡಿದ್ದಾಗಿದೆ. ದುರ್ಯೋಧನನ ಸಂಹಾರವು ಅಜ್ಞಲೋಕವ್ಯವಹಾರದಿಂದ ಹೇಗೂ ಧರ್ಮಕ್ಕೆ ಹಾನಿಯಿಲ್ಲ. ಊರೂಭಂಗ ಮಾಡಿ ಕೊಲ್ಲಲು ಭೀಮನಿಗಿರುವ ಸಾಮರ್ಥ್ಯವನ್ನು ತಿಳಿಯದವರೂ ಸಹ ಅದನ್ನು ಆಪದ್ಧರ್ಮವನ್ನಾಗಿ ತಿಳಿಯುವರು. ಪ್ರಾಣನಾಶವಾಗುವ ಆಪತ್ಕಾಲದಲ್ಲಿ ಹೇಗಾದರೊಂದು ಕ್ರಮದಿಂದ ಪ್ರಾಣರಕ್ಷಣೆಯು ಧರ್ಮವಾಗಿದೆ. ಜರಾಸಂಧನ ಬಲಕ್ಕೆ ಸಮಾನವಾದ ಬಲವುಳ್ಳ ದುರ್ಯೋಧನನನ್ನು ವಧಿಸಲು ಭೀಮನು ಸಮರ್ಥನೆಂದು ತಿಳಿದಿರುವ ಜನರೂ ಕೂಡ ಧರ್ಮಹಾನಿಯಿಲ್ಲವೆನ್ನುವರು. ರುದ್ರದೇವರು ಸಹ ದುರ್ಯೋಧನನಿಗೆ ಅವಧ್ಯತ್ವ(ಮತ್ತೊಬ್ಬರಿಂದ ಸಂಹೃತನಾಗದಿರುವಂತಹ) ವರವನ್ನು ಕೊಟ್ಟಿರುವರು. ಆದರಿಂದಲೂ ಗದಾಭ್ಯಾಸ ಬಲದಿಂದಲೂ ದುರ್ಯೋಧನನು ಜರಾಸಂಧನಿಗೆ ಸಮಾನನೆಂದು ಪ್ರಸಿದ್ಧನಾಗಿರುವುದರಿಂದ, ಆ ಪ್ರಭಾವವನ್ನರಿತವರೂ ಸಹ ಪ್ರತಿಜ್ಞಾರೂಪ ಆಪದ್ಧರ್ಮವನ್ನು ತಿಳಿಯುವರು.

'ಯೇ ಭೀಮಸ್ಯಾಪ್ರಭಾವಜ್ಞಾಃ' ಎಂದು ಹೇಳಿದ ಕೃಷ್ಣನು, ಮೊದಲು ಹೇಳಿದ "ಕಿಂಚಿದ್ವ್ಯಾಜೇನ ಸಂಯುತಃ" ಎಂಬ ಮಾತು ಜನರಿಗೆ ಆಪದ್ಧರ್ಮವನ್ನು ತಿಳಿಸಲೆಂದೇ ಹೇಳಿದ್ದಾನೆ. ಭೀಮನಲ್ಲಿ ಸ್ವಲ್ಪ ನೆಪ (ವ್ಯಾಜ)ವಿದೆಯೆಂಬ ಅಭಿಪ್ರಾಯದಿಂದ ಹೇಳಿದ್ದಲ್ಲ ಎಂಬುದು ಇದರಿಂದ ಸ್ಪಷ್ಟವಾದಂತಾಯಿತು. 'ಜರಾಸಂಧೋಪಮಃ' ಎಂದು ನಿರೂಪಿಸಿದ್ದರಿಂದ ಬ್ರಾಹ್ಮಣರ ವೇಷವನ್ನು ಧರಿಸಿ ಹೋಗಿ ಜರಾಸಂಧನನ್ನು ಸಂಹರಿಸಿದಾಗ ಅಧರ್ಮಶಂಕೆ ಮಾಡದಿದ್ದ ಹೇ ಧರ್ಮನಂದನ! ಈಗೇಕೆ

ಶಂಕಿಸುವೆ? ಎಂದು ಸೂಚಿಸಿದಂತಾಯಿತು. ದುರ್ಯೋಧನನು ಭಸ್ಮ - ತ್ರಿಪುಂಡ್ರಗಳನ್ನು ಧರಿಸಿದ್ದರೂ, ಕಲಿಸ್ವರೂಪನಾದ್ದರಿಂದ ಜರಾಸಂಧನಿಗಿಂತಲೂ ಅಧಮನಾಗಿದ್ದಾನೆ. ಆದ್ದರಿಂದಲೂ ಅಧರ್ಮಶಂಕೆಯನ್ನು ಮಾಡಬಾರದು' ಎಂದು ಸೂಚಿಸಲು 'ಶಿವ ವರಾವಧ್ಯತ್ವೇ' ಮುಂತಾಗಿ ಉಕ್ತವಾಗಿದೆ ಎಂದು ತಿಳಿಯಬೇಕು.

ಆದುದರಿಂದ ಭೀಮನೆಸಗಿದ ದುರ್ಯೋಧನನ ಸಂಹಾರವು ಧರ್ಮವೇ ಆಗಿರುತ್ತದೆ. ಹೀಗೆ ಸಕಲ ಜಗ-ದೊಡೆಯನಾದ ಶ್ರೀವಾಸುದೇವನು ಹೇಳಿದರೂ ಧರ್ಮರಾಜನ ಧರ್ಮಾಧರ್ಮ ಸಂಶಯವನ್ನು ಪರಿಹರಿಸದೆ ಹಾಗೆಯೇ ಬಿಟ್ಟನು.

ಶ್ರೀಕೃಷ್ಣನು ಧರ್ಮರಾಜನನ್ನು ಹೀಗೇಕೆ ಸಂಶಯಗ್ರಸ್ತನನ್ನಾಗಿ ಮಾಡಿದನೆಂದರೆ, ಅದರ ಪ್ರಯೋಜನವನ್ನು ನಿರೂಪಿಸುವರು. ತನ್ನ ಅವತಾರದ ಉದ್ದೇಶವಾದ ಭೂಮಿಗೆ ಭಾರವಾದ ಅಸುರರ ಸಂಹಾರದಿಂದ ದೊರಕುವ ಪುಣ್ಯ ಮತ್ತು ಧರ್ಮವು ಭೀಮಸೇನನೊಬ್ಬನಿಗೆ ಮಾತ್ರ ಲಭಿಸಬೇಕೆಂಬ ಅಭಿಪ್ರಾಯದಿಂದ, ಸರ್ವಸಮರ್ಥನೂ, ಸರ್ವೋತ್ತಮನೂ ಆದ ಶ್ರೀಕೃಷ್ಣನು ಹೀಗೆ ಮಾಡಿದನೆಂದು ತಿಳಿಯಬೇಕು. ವಾಸುದೇವನು ಬಲರಾಮನಿಗೆ ಮತ್ತು ಯುಧಿಷ್ಠಿರನಿಗೆ ಹಾಗೂ ಅಲ್ಲಿರುವವರಿಗೆ ಪುನಃ ಪುನಃ ದುರ್ಯೋಧನಾದಿ ಪಾಪಿಗಳು ಧರ್ಮದಿಂದಲೇ ಕೊಲ್ಲಲ್ಪಟ್ಟರೆಂದು ಹೇಳಿದರೂ ಧರ್ಮ-ರಾಯನು ತನ್ನ ಸಂಶಯದಿಂದ ಮುಕ್ತನಾಗಲಿಲ್ಲವಾದ್ದರಿಂದ (ಸಂಶಯವನ್ನು ಬಿಡಲಿಲ್ಲವಾದ್ದರಿಂದ)ಕೃಷ್ಣನು ಅವನನ್ನು ಸಂದೇಹರಹಿತನನ್ನಾಗಿ ಮಾಡಲಿಲ್ಲ. ದುರ್ಯೋಧನನು ವಾಯುಪುತ್ರನಿಂದ, ಧರ್ಮದಿಂದಲೇ ಹತನಾದದ್ದು ಶ್ರೇಷ್ಠವಾದ ಧರ್ಮವೆಂದು ಹೇಳಿರುವನು. ಕುರುಪತಿಯು ವೃಕೋದರನಿಂದ, ಧರ್ಮದಿಂದಲೇ ಸಂಹೃತನಾಗಿದ್ದಾನೆ ಎಂದು ಪೌನಃ ಪುನ್ಯೇನ ಕೃಷ್ಣನು ಘೋಷಿಸಿದ್ದು ಅರ್ಜುನನಿಗೆ ಯಥಾರ್ಥ ಜ್ಞಾನವನ್ನು ಹುಟ್ಟಿಸಲೆಂದೇ ಎಂದು ಭಾವಿಸಬೇಕು.

ಇಂತು ಶ್ರೀಕೃಷ್ಣನು, ದುರ್ಯೋಧನನು ಧರ್ಮದಿಂದಲೇ ಹತನಾದನೆಂದು ಹೇಳಿದ್ದನ್ನು ಕೇಳಿ ಮಹಾಪಾಪಿಯಾದ ದುರ್ಯೋಧನನು, ಕ್ರೋಧದಿಂದ, ಅದರುವ ತುಟಿಗಳಿಂದ, "ಕೃಷ್ಣ ! ನೀನೇ ಪಾಂಡವರು ಪಾಪಕರ್ಮವನ್ನೆಸಗುವಂತೆ ಮಾಡಿದ್ದೀಯೆ. ನೀನು ಪರಮಪಾಪಿಷ್ಠನು" ಎಂದು ನಿಂದಿಸಲು, ವಾಸುದೇವನು ಜಗತ್ತಿನಲ್ಲಿ ನಿನ್ನಂಥ ಪಾಪಿಗಳು ಖಂಡಿತವಾಗಿ ಮತ್ತಾರು ಇಲ್ಲ. ಭೀಷ್ಮ ದ್ರೋಣಾದಿಗಳ ಸಂಹಾರಕ್ಕೆ ನೀನೇ ಕಾರಣನಾಗಿರುವೆ. ಆ ಪಾಪವು ನಿನಗೆ ಮಾತ್ರ ಸಲ್ಲುವುದು. ಯಾರು ಪಾಪದಲ್ಲಿಯೇ ಆಸಕ್ತನಾದ, ಪಾಪಿಯಾದ ನಿನ್ನನ್ನು ಅನುಸರಿಸಿದ್ದ, ಭೀಷ್ಮರೇ ಮೊದಲಾದ ಸಜ್ಜನರನ್ನು ಸಂಹರಿಸಿದ್ದರಿಂದ ಯಾವ ಪಾಪವೂ ಇಲ್ಲ. ಯುದ್ಧ ಪ್ರಯತ್ನ ಹಾಗೂ ಸ್ವಾಭಾವಿಕವಾಗಿಯೂ ಪಾಂಡುಕುಮಾರರು ಪಾಪಿಗಳಲ್ಲವೇ ಅಲ್ಲ. ಪಾಂಡವರು ಗುಣಾಧಿಕರು. ನನ್ನನ್ನು ಆಶ್ರಯಿಸಿದ್ದಾರೆ. ಅಥವಾ ನನ್ನ ಆಶ್ರಯವಿರುವುದರಿಂದ ಶ್ರೇಷ್ಠಗುಣಾಧಿಕರಾದ ಪಾಂಡವರಲ್ಲಿ ಪಾಪವಿದೆಯೆಂದು ಅದಾರು ತಾನೆ ಹೇಳಲು ಸಾಧ್ಯ? ದುರ್ಯೋಧನ! ನೀನು ಸ್ವಾಭಾವಿಕವಾಗಿ ಅಧಾರ್ಮಿಕನೂ, ಅತಿ ಪಾಪಿಯೂ ಆಗಿದ್ದೀಯೆ. ಧರ್ಮಿಷ್ಠರಾದ ಭೀಷ್ಮಾದಿಗಳನ್ನು ಅಧರ್ಮದ ದಾರಿಗೆಳೆದು ಸರ್ವದಾ ವಿಷ್ಣು ವೈಷ್ಣದ್ರೋಹವೆಂಬ ಮಹಾಪಾಪಕ್ಕೆ ನೀನೇ ಕಾರಣನಾಗಿದ್ದೀಯೆ. ಇಂತು ನೀನು ಸರ್ವದಾ ಮಾಡಿದ ಮಹಾಪಾಪದ ಪರಿಣಾಮವಾಗಿ ನೀನು ಪಾಪಭೂಮಿಯಿಷ್ಟವಾದ ಅಂಧಂತಮಸ್ಸನ್ನೇ ಪಡೆಯುವೆ (ಅಂಧಃ ತಮಸಿಗೆ ಹೋಗುತ್ತೀಯೆ).

ಈ ಪ್ರಕಾರವಾಗಿ ಮಾಧವನು ಹೇಳಲು, ಪಾಪಿಗಳಲ್ಲಿ ಅಗ್ರಗಣ್ಯನಾದ ಧಾರ್ತರಾಷ್ಟ್ರನು ಪುನಃ ಇಂತುಸುರಿದನು - "ಧರ್ಮಯುದ್ಧದಲ್ಲಿ ಹೋರಾಡಿ ಮಂಗಳಕರ ಮರಣ ಪಡೆದವರಲ್ಲಿ ನಾನೇ ಉತ್ತಮನಾಗಿದ್ದೇನೆ. ನಾನು ಪಾಪಿಯಾಗಿದ್ದಲ್ಲಿ ವೀರೋಚಿತವಾದ ಸ್ವರ್ಗವು ನನಗೆ ಹೇಗೆ ದೊರೆತೀತು? ನನ್ನ ಸಮಾನರಾರಿದ್ದಾರೆ? ಖಂಡಿತ ಯಾರು ಇಲ್ಲ. ನಾನು ಈ ಜನ್ಮದಲ್ಲಿ ಅದಾವ ಅಧಾರ್ಮಿಕವಾದ ದುಷ್ಟಕಾರ್ಯ ಮಾಡಿದ್ದೇನೆ? ಕೇಳು, ನಾನು ಬಹುವಿಧವಾದ ಯಜ್ಞಯಾಗಾದಿಗಳನ್ನು

ನೆರವೇರಿಸಿದ್ದೇನೆ. ವಾಪೀ ಕೂಪ ತಟಾಕಾದಿಗಳನ್ನು ನಿರ್ಮಿಸಿ ಜನೋಪಕಾರಕವಾದ ಧರ್ಮಕಾರ್ಯ ಮಾಡಿದ್ದೇನೆ. ಶತ್ರುಗಳನ್ನು ಜಯಿಸಿ ಅವರ ಶಿರದಲ್ಲಿ ಪಾದವನ್ನಿಟ್ಟಿದ್ದೇನೆ. ಯುದ್ಧಾಭಿಮುಖನಾದ ನಾನು ರಣರಂಗದಲ್ಲಿ ವೀರಮರಣವನ್ನು ಹೊಂದಿದ್ದೇನೆ. ಇನ್ನೇನು ಉಳಿದಿದೆ? ಎಲ್ಲವನ್ನೂ ನಾನು ಮಾಡಿದ್ದೇನೆ. ಯಾವಯಾವ ಕಾಲಗಳಲ್ಲಿ ಏನೇನು ಭೋಗಗಳನ್ನು ಅನುಭವಿಸಬೇಕೋ ಅವೆಲ್ಲವನ್ನೂ ಅನುಭವಿಸಿದ್ದೇನೆ. ನಾನೀಗ ಉತ್ತಮವಾದ ಸ್ವರ್ಗಸುಖವನ್ನು ಪಡೆಯುವೆನು. ಕಪಟ ಯುದ್ಧ ಮಾಡಿದ ಪಾಂಡವರು ದುಃಖವನ್ನೇ ಅನುಭವಿಸುವರು. ಚಂದ್ರ ಸೂರ್ಯರಿಗೆ ಸಮಾನರಾದ, ಧರ್ಮರತರಾದ, ವೀರ ಸಜ್ಜನ ರಹಿತವಾದ (ಸಜ್ಜನರಾರರೂ ಇಲ್ಲದ), ಕೇವಲ ಮಣ್ಣು ಮಾತ್ರ ಉಳಿದಿರುವ ಈ ಭೂಮಿಯನ್ನು ನಿನ್ನ ಪಾಂಡವರು ಅನುಭವಿಸಲಿ" ಎಂದು ಹೇಳಿದನು.

ಇಂತು ಪುನಃ ಪುನಃ ಭಗವಂತನಾದ ಶ್ರೀಕೃಷ್ಣನನ್ನು ನಿಂದಿಸುತ್ತಿರುವ ದುರ್ಯೋಧನನ ಮೇಲೆ ಆಗ ಪುಷ್ಪವೃಷ್ಟಿಯಾಯಿತು ಎಂದು ಕೆಲವು ಪುರಾಣಗಳಲ್ಲಿ ಪ್ರತೀತಿ ಇದೆ. ಅದರ ಭಾವವನ್ನು ನಿರ್ಣಯಾಚಾರ್ಯರು ನಿರೂಪಿಸುವರು- ತನ್ನನ್ನು ತಾನೇ ಹೊಗಳಿಕೊಳ್ಳುತ್ತಾ ಕೃಷ್ಣನನ್ನೂ ಪಾಂಡವರನ್ನೂ ನಿಂದಿಸುತ್ತಿರುವ ದುರ್ಯೋಧನನು "ಸ್ವಂತೋತ್ತಮ" ಅಂದರೆ, 'ಶೋಭನಃ ಅಂತಃ ನಾಶೋ ಯೇಷಾಂ ತೇ ಸ್ವಂತಾಃ ತೇಷು ಉತ್ತಮಃ" ಎಂಬ ವ್ಯುತ್ಪತ್ತಿಯಿಂದ ಶೋಭನವಾದ ನಾಶವುಳ್ಳವರಲ್ಲಿ ಶ್ರೇಷ್ಠನಾದ ನಾನೇ ಶ್ರೇಷ್ಠನೆಂದರ್ಥ. ಧರ್ಮಯುದ್ಧದಲ್ಲಿ ಮೃತನಾದ್ದರಿಂದ ಮಂಗಳಕರಮರಣ ಹೊಂದುವವರಲ್ಲಿ ಶ್ರೇಷ್ಠನಾದ ನನ್ನಲ್ಲಿ ಪಾಪವಿದ್ದಲ್ಲಿ ವೀರಸ್ವರ್ಗೋಚಿತ ಮರಣವೆಂತಾದೀತು? ಎಂದು ಭಾವ. ಇಂತಹ ಆ ಬುದ್ಧಿಯೇ ದುರ್ಯೋಧನನಿಗೆ ಅಧಿಕವೂ ಮತ್ತು ನಿಶ್ಚಿತವೂ ಆಗುವಂತೆ ಮಾಡಿ, ಅವನು ಅಂಧಃತಮಸ್ಸಿಗೆ ಬೀಳುವಂತೆ ಮಾಡಲೋಸುಗವೇ ದೇವತೆಗಳು ಮಾಡಬಾರದ ಈ ಪುಷ್ಪವೃಷ್ಟಿಯನ್ನು ಮಾಡಿದ್ದಾರೆಂಬುದು ಪ್ರಸಿದ್ಧವು. ಹೀಗೆಯೇ ತಿಳಿಯಬೇಕೆಂದು ತಾತ್ಪರ್ಯ.

"ಭಗವನ್ನಿಂದಯಾ ವೇನೋ ದ್ವಿಜೈಸ್ತಮಸಿ ಪಾತಿತಃ । ನಿಂದಾಂ ಭಗವತಃ ಶೃಣ್ವನ್ ಯಾತ್ಯಧಃ ಸುಕೃತಾತ್‌ಚ್ಯುತಃ" ಎಂದು ಸ್ಮೃತಿಯು ಘೋಷಿಸುವುದು. ಪರಮಾತ್ಮನನ್ನು ನಿಂದಿಸಿದ್ದರಿಂದ, ಅಸುರನಾದ ವೇನನು ಬ್ರಾಹ್ಮಣರಿಂದ ತಮಸ್ಸಿಗೆ ಬೀಳಿಸಲ್ಪಟ್ಟನು. ಯಾರು ಭಗವಂತನಾದ ಶ್ರೀಹರಿಯ ನಿಂದೆಯನ್ನು ಆಲಿಸುವರು, ಅಂತಹವರು ಪುಣ್ಯದಿಂದ ಚ್ಯುತರಾಗಿ ಕೆಳಗೆ ಬೀಳುವರು. ಅಂದರೆ ತಮಸ್ಸಿಗೆ ಬೀಳುವರು ಎಂದು ಮೇಲಿನ ಸ್ಮೃತಿಯ ಅರ್ಥವು. ಆದುದರಿಂದ ಭೂಮಿಗೆ ಭಾರನಾಗಿರುವವನು ಅಮರರಿಗೆ ಪ್ರಥಮ ಶತ್ರುವು. ಭಗವಂತನಾದ ಕೃಷ್ಣನನ್ನೇ ಅನೇಕ ವಿಧವಾಗಿ ನಿಂದಿಸಿದ ದುರ್ಯೋಧನನನ್ನು ತಿರಸ್ಕರಿಸಲೆಂದೇ ಪಾಂಡವ ಪಕ್ಷಪಾತಿಗಳಾದ ಪರಮವೈಷ್ಣವರಾದ ದೇವತೆಗಳು ದುರ್ಯೋಧನನ ಪಕ್ಷಪಾತಿಗಳಾದ ದೈತ್ಯರೊಡನೆ ಕಲಹ ಮಾಡುತ್ತಾ ಸ್ಮೃತಿ ಹಾಗೂ ಯುಕ್ತಿವಿರುದ್ಧವಾದ ಕುಸುಮವೃಷ್ಟಿಯನ್ನು ಮಾಡಿದರೆಂದು ತಿಳಿಯಬೇಕು. ಅದೂ ಅಲ್ಲದೇ ಶೈವಮತ ಪ್ರವರ್ತಕರೂ, ವಿಷ್ಣು ವೈಷ್ಣವ ದ್ವೇಷಿಗಳಲ್ಲಿ ಅಗ್ರಗಣ್ಯರೂ ಆದ ಶಿಶುಪಾಲ, ಜರಾಸಂಧ, ಕಂಸ, ನರಕಾಸುರ ಹಾಗೂ ದುಶ್ಶಾಸನ ಮುಂತಾದವರು ಮರಣ ಹೊಂದುವಾಗ ಮಾಡದೇ ಇದ್ದ ಪುಷ್ಪವೃಷ್ಟಿಯನ್ನು ದುರ್ಯೋಧನನು ಮರಣಹೊಂದುತ್ತಿರುವಾಗ ದೇವತೆಗಳು ಅದೆಂತು ಮಾಡಲು ಸಾಧ್ಯ? ಆದ ಕಾರಣ ಹಿಂದೆ ನಿರ್ಣಯಾಚಾರ್ಯರು ಹೇಳಿದಂತೆ ದುರ್ಯೋಧನನು ಅಂಧಃತಮಸ್ಸಿಗೆ ಬೀಳಲೆಂದು ಪುಷ್ಪವೃಷ್ಟಿ ಮಾಡಿದರೆಂಬುದೇ ಅತ್ಯಂತ ಸಮಂಜಸವೆಂದು ತಿಳಿಯಬೇಕು. ಮರಣಕಾಲದಲ್ಲಿ ಆತ್ಮಸ್ತುತಿ ಮಾಡಿಕೊಳುತ್ತಾ ಶ್ರೀಹರಿಯನ್ನು, ಶ್ರೀಹರಿಯ ಭಕ್ತರನ್ನು ನಿಂದನೆ ಮಾಡಿದ ದುರ್ಯೋಧನನು ಅಂಧಃತಮಸ್ಸಿಗೆ ಪಾತ್ರನಾಗದಿರಲು ಶಕ್ಯವೇ? ಅವನು ನಿಶ್ಚಯವಾಗಿ ಅಂಧಃತಮಸ್ಸಿಗೆ ಬಿದ್ದೇ ಬೀಳುವನು ಎಂದು ತಾತ್ಪರ್ಯವು.

ವಿಶೇಷ ವಿಚಾರ - ಶ್ರೀವಿಷ್ಣುವಿನ ನಿಂದೆ, ವೈಷ್ಣವರ (ದ್ವೇಷ) ನಿಂದೆ ಮತ್ತು ಆತ್ಮಪ್ರಶಂಸೆ ಇವು ಒಂದೊಂದೂ ಅಂಧಂತಮಸ್ಸಾಗಲು ಕಾರಣವಾಗುವುದು. ಅಂದ ಮೇಲೆ ಆ ಮೂರನ್ನೂ ಮಾಡಿದ ದುರ್ಯೋಧನನಿಗೆ ತಮಸ್ಸಿನಲ್ಲಿ ಅತ್ಯಧಿಕ ದುಃಖಪ್ರಾಪ್ತಿಯಾಗುವುದೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೇ?

ಅನಂತರ ಸರ್ವಸಮರ್ಥನಾದ (ಕರ್ತುಂ ಅನ್ಯಥಾ ಕರ್ತುಂ ಶಕ್ತನಾದ) ಭಗವಾನ್ ಶ್ರೀಪುರುಷೋತ್ತಮನು ತನ್ನ (ಶ್ರೀಕೃಷ್ಣರೂಪಿ ಹರಿಯ), ತನ್ನವರಾದ ಪಾಂಡವರ ಭಕ್ತರನ್ನು ಹೆಚ್ಚಾಗಿ ನಿಂದಿಸಿ ತನ್ನನ್ನು ತಾನೇ ಅತ್ಯಂತ ಶ್ರೇಷ್ಠನೆಂದು ದುರ್ಯೋಧನ ಹೊಗಳಿಕೊಳ್ಳುವಂತೆ ಮಾಡಲು ಹೀಗೆ ಹೇಳಿದನು – "ದುರ್ಯೋಧನ! ನೀನು ಯಜ್ಞಯಾಗಾದಿಗಳನ್ನು ಮಾಡಿದ್ದೇನೆ ಎಂದು ಹೊಗಳಿಕೊಂಡಿದ್ದೀಯೆ. ಅದೆಲ್ಲವೂ ನಿರರ್ಥಕವೂ, ನಿಷ್ಫಲವೂ ಆಗಿದೆ. ಅದರಿಂದ ನಿನಗೆ ಖಂಡಿತ ಫಲವು ದೊರಕುವುದಿಲ್ಲ. ವಿಷಪ್ರಾಶನ, ಲಾಕ್ಷಾಗೃಹ ಪ್ರವೇಶಾದಿಗಳನ್ನು ಆಚರಿಸಿ ಅತಿ ಹಿಂಸಕನಾದವನು ನೀನು. ಅರ್ಜುನನು ಕಳಿಂಗ, ಚಿತ್ರಸೇನನಿಂದ ನಿನ್ನನ್ನು ಬಿಡುಗಡೆ ಮಾಡಿಸಿದ ಉಪಕಾರವನ್ನು ಮರೆತು ಸದ್ಗುಣಿಗಳಾದ ಪಾರ್ಥ, ವಿದುರಾದಿ ಸಜ್ಜನರನ್ನು ದ್ವೇಷಿಸಿದ ನಿನಗೆ, ನೀನು ಮಾಡಿದೆನೆಂದು ಹೇಳಿಕೊಳ್ಳುವ ಧರ್ಮದಿಂದ ಫಲ ಬರುವುದಾದರೆ ಅಂಧಕಾರವೂ ಸೂರ್ಯನಂತೆ ಪ್ರಕಾಶಕರವಾಗಬೇಕಾದೀತು. " ಹೀಗೆ ದುರ್ಯೋಧನನಿಗೆ ಹೇಳಿ ಹಿಂದೆ ನಿರೂಪಿಸಿದಂತೆ ಪುನಃ ಪುನಃ ಭೀಮಸೇನನು ಧರ್ಮದಿಂದಲೇ ದುರ್ಯೋಧನನನ್ನು ಸಂಹರಿಸಿದನೆಂದು ಸಜ್ಜನರಲ್ಲಿ, ಭಕ್ತರಲ್ಲಿ ಪ್ರಸಿದ್ಧಿ ಪಡಿಸಿದನು. ಇಂತು ಶ್ರೀಕೃಷ್ಣನ ವಚನಪ್ರಸಿದ್ಧಿಯಿಂದ ಎಲ್ಲ ಸಜ್ಜನರ ಮನೋಗತವು ಪೂರ್ಣವಾಯಿತು. ಅಂದರೆ ಪಾಪಿಷ್ಠನಾದ ದುರ್ಯೋಧನನು ಭೀಮನಿಂದ ಧರ್ಮರೀತಿಯಿಂದಲೇ ಕೊಲ್ಲಲ್ಪಟ್ಟನೆಂದು ಸುಜನರು ನಿಶ್ಚಿತ ಅಭಿಪ್ರಾಯ-ವುಳ್ಳವರಾದರು. ದೇವತೆಗಳೆಸಗಿದ ಕುಸುಮವೃಷ್ಟಿಯಿಂದ ಧರ್ಮರಾಜನು ದುರ್ಯೋಧನನು ಪಾಪಿಯಲ್ಲವೆಂದು ಭಾವಿಸಿ ಅವನ ಮರಣವಿಷಯದಲ್ಲಿ ಸಂಶಯೋಪೇತನಾದನು. ಧೂರ್ತ ದುರ್ಯೋಧನನ ಪಕ್ಷಪಾತಿಗಳಾದ ಮತ್ತು ಅವನಲ್ಲಿನ ಅಧಿಕಸ್ನೇಹದಿಂದ ಅಶ್ವತ್ಥಾಮ, ಸಂಜಯ, ಬಲಭದ್ರಾದಿಗಳು, ಭೀಮನು ಮಾಡಿದ ಕಾರ್ಯವು ಪಾಪಯುಕ್ತವೂ ಅಧರ್ಮವೆಂದೇ ಹೇಳಿದರು.

ಜಯಶೀಲನಾದ ಶ್ರೀಕೃಷ್ಣನು ಅತಿ ಹರುಷದಿಂದ ಜಯಧ್ವನಿ ಮಾಡುತ್ತಿರುವ ಪಾಂಡವ, ಪಾಂಚಾಲರಿಂದ ಸಹಿತನಾಗಿ ಬ್ರಹ್ಮ ರುದ್ರ ದೇವೇಂದ್ರಾದಿ ದೇವತೆಗಳಿಂದ ಪೂಜಿತನಾಗಿ ಪಾಂಡವ ಪಾಂಚಾಲಾದಿಗಳಿಂದಲೂ ಹೆಚ್ಚಾಗಿ ಪೂಜಿತನಾಗಿ, ಮಂದಹಾಸ ಮುಖಾರವಿಂದರಂಜಿತನಾಗಿ ಯುದ್ಧರಂಗದಿಂದ ಶಿಬಿರಕ್ಕೆ ತೆರಳಿದನು.

ಆ ತುರುವಾಯ ಸಂಜಯನಿಂದ, ಪುತ್ರನಾದ ದುರ್ಯೋಧನನ ಪತನವಿಚಾರವನ್ನರಿತು ಅತಿ ದುಃಖಿತನಾದ ಧೃತರಾಷ್ಟ್ರನನ್ನು ಸಾಂತ್ವನಗೊಳಿಸಲಿಚ್ಛಿಸಿದ ಯುಯುತ್ಸುವು (ಇವನು ವೈಶ್ಯ ಕನ್ಯೆಯಲ್ಲಿ ಧೃತರಾಷ್ಟ್ರನಿಂದ ಜನಿಸಿದ ಮಗನು) ಶ್ರೀಮಾಧವ, ಧರ್ಮಜರ ಒಪ್ಪಿಗೆಯಂತೆ ವಧಾಸ್ಥಾನದಿಂದ ಹಿಂದಿರುಗುತ್ತಿರುವ ದುರ್ಯೋಧನನ ಪತ್ನಿಯರನ್ನು ಅನುಸರಿಸುತ್ತಾ ಹಸ್ತಿನಾವತಿಗೆ ತೆರಳಿದರು. ಶ್ರೀಕೃಷ್ಣನು ಅವನನ್ನೂ ಹಿಂಬಾಲಿಸಿದನು. ಹಸ್ತಿನಾವತಿಯಲ್ಲಿ ಧೃತರಾಷ್ಟ್ರನನ್ನು ಭೇಟಿ ಮಾಡಿ ಕೃಷ್ಣನು 'ರಾಜನ್, ವಿಧಿ ಬರಹದಂತೆಯೇ ಎಲ್ಲವೂ ಜರುಗುವುದು. ಜಗತ್ತಿನಲ್ಲಿ ಎಷ್ಟೋ ಮಕ್ಕಳು ತಂದೆಯ ಮುಂದೆಯೇ ಮೃತರಾಗುವರು. ಕೆಲವರು ತಂದೆಯ ಮರಣಾನಂತರ ಸಾಯುವರು' ಮುಂತಾದ ಸಮಯೋಚಿತ ಲೌಕಿಕದೃಷ್ಟಾಂತಗಳಿಂದ, ಸಮಾಧಾನಪಡಿಸುವ ವಚನಗಳಿಂದ ಧೃತರಾಷ್ಟ್ರನನ್ನು ಸಾಂತ್ವನಗೊಳಿಸಿದನು. ಮತ್ತು ಪುನಃ ಪಾಂಡವರ ಬಳಿಗೆ ಹೋದನು. ಕಲಿಕಾಲಕ್ಕೆ ಅನುಗುಣವಾಗಿ ಜಗತ್ತಿನಲ್ಲಿ ಜನಿಸಿರುವ ಧೃಷ್ಟದ್ಯುಮ್ನಾದಿ ದೇವತೆಗಳ ಸಂಹಾರ-ವಾಗಬೇಕೆಂದು ಬಯಸಿದ ಶ್ರೀಕೃಷ್ಣನು ಅರ್ಜುನ ಸಾತ್ಯಕಿಗಳೊಡನೆ ಅಂದು ರಾತ್ರಿ ಕೌರವರ ಶಿಬಿರಕ್ಕೆ ಹೋದನು. ಅದೇ ಸಮಯದಲ್ಲಿ ಅಲ್ಲಿಗೆ ಬಂದ ಕೃತವರ್ಮ, ಕೃಪಾಚಾರ್ಯರಿಂದ ಯುಕ್ತನಾದ ಅಶ್ವತ್ಥಾಮನು ಅಲ್ಲಿ ಬಿದ್ದಿದ್ದ ದುರ್ಯೋಧನನನ್ನು ಕಂಡನು. ಆಗ ದುರ್ಯೋಧನನ ಪಾಡು ಬಹುಶೋಚನೀಯವಾಗಿತ್ತು. ನಾಯಿ ನರಿಗಳೂ ಇತರ ಪ್ರಾಣಿಗಳೂ ಟೊಂಕ ಮುರಿದು ಭೂಮಿಯಲ್ಲಿ ಬಿದ್ದಿದ್ದ ದುರ್ಯೋಧನನ ದೇಹದ ಖಂಡ-ಮಾಂಸಗಳನ್ನು ಕಿತ್ತು ತಿನ್ನುತ್ತಿದ್ದ ದಯನೀಯ ದೃಶ್ಯವದು. ಅದನ್ನು ಕಂಡು ಅತಿಶಯ ದುಃಖಿತನಾದ ಅಶ್ವತ್ಥಾಮನು ಪಾಂಡವರನ್ನು ದೂಷಿಸುತ್ತಾ, 'ರಾಜನ್! ನಿನಗೆ

ನಾನೀಗ ಯಾವ ಹಿತವಾದ ಕಾರ್ಯವನ್ನು ಮಾಡಲಿ ಹೇಳು' ಎನಲು ದುರ್ಯೋಧನನು ಅಶ್ವತ್ಥಾಮನಿಗೆ ಧೂಳಿನಿಂದ ಅಭಿಷೇಕ ಮಾಡಿ 'ಗುರುಪುತ್ರ, ನೀನು ಜಗತ್ತಿನಲ್ಲಿ ಪಾಂಡವರಿಲ್ಲದಂತೆ ಮಾಡು' ಎಂದು ಹೇಳಿದನು.

ಅಶ್ವತ್ಥಾಮನಿಗೆ ಧೂಳಿನಿಂದ ಅಭಿಷೇಕಮಾಡಿದ ಕಾರಣವೇನೆಂಬುದನ್ನು ನಿರ್ಣಯಾಚಾರ್ಯರು ಹೇಳುತ್ತಾರೆ- ಅಶ್ವತ್ಥಾಮನು ಪಾಂಡವರನ್ನೂ, ಅವರ ಸಂತಾನವನ್ನು ನಾಶಪಡಿಸಿ ತನ್ನ ಪಟ್ಟದರಸಿಯಾದ ಭಾನುಮತಿಯಲ್ಲಿ ಪುತ್ರರನ್ನು ಹುಟ್ಟಿಸಿ, ಆ ತನ್ನ ಪುತ್ರ ಸಂತತಿಯವರೇ ಈ ಭೂಮಿಯನ್ನಾಳುವಂತೆ ಮಾಡಲಿ ಎಂಬುದು ಸುಯೋಧನನ ಅಭಿಪ್ರಾಯವೆಂದು ನಿರ್ಣಯಾಚಾರ್ಯರ ಭಾವವೆಂದು ತಿಳಿಯಬೇಕು. ದುರ್ಯೋಧನನಿಂದ ಅಭಿಷಿಕ್ತರಾದ ಅಶ್ವತ್ಥಾಮರು 'ರಾಜೇಂದ್ರ, ಖಂಡಿತನಾಗಿ ನಿನ್ನ ಪತ್ನಿಯಲ್ಲಿ ಪುತ್ರನನ್ನು ಹುಟ್ಟಿಸಿ, ನಿನ್ನ ಮನೋಭಿಲಾಷೆಯನ್ನು ಯಶಸ್ವಿಗೊಳಿಸುತ್ತೇನೆ' ಎಂಬ ಭರವಸೆಯಿತ್ತು ಅಲ್ಲಿಂದ ಪಯಣಿಸಿದರು.

ಅಶ್ವತ್ಥಾಮಾಚಾರ್ಯರು, ಕೃಪ-ಕೃತವರ್ಮರೊಡನೆ ರಥಾರೂಢರಾಗಿ ಶ್ರೀಕೃಷ್ಣ ಭೀಮಾರ್ಜುನರ ಭಯದಿಂದ ಅಲ್ಲಿಂದ ಹೊರಟು ಅರಣ್ಯವನ್ನು ಸೇರಿದರು. ದುರ್ಯೋಧನನ ಸಂಹಾರವನ್ನೇ ಚಿಂತಿಸುತ್ತಿದ್ದ ಅಶ್ವತ್ಥಾಮನಿಗೆ ಅಂದು ರಾತ್ರಿ ನಿದ್ರೆ ಬರಲಿಲ್ಲ. ಅರ್ಧರಾತ್ರಿಯಲ್ಲಿ ಒಂದು ಬಲಿಷ್ಠವಾದ ಗೂಬೆಯು ನ್ಯಗ್ರೋಧ ವೃಕ್ಷವನ್ನು ಆಶ್ರಯಿಸಿಕೊಂಡಿದ್ದ ಸಹಸ್ರಾರು ಕಾಗೆಗಳನ್ನು ಸಂಹಾರ ಮಾಡಿದ್ದನ್ನು ಕಂಡು ಅಶ್ವತ್ಥಾಮನು ಕೃಪ-ಕೃತವರ್ಮರನ್ನುದ್ದೇಶಿಸಿ 'ಬಲಿಷ್ಠವಾದ ಗೂಬೆಯು ಸಾವಿರಾರು ಕಾಗೆಗಳನ್ನು ಕೊಂದ ಈ ದೃಷ್ಟಾಂತದಿಂದ ನಾನು ಪರಮಾತ್ಮನ ಪ್ರೇರಣೆಯಂತೆ ಪಾಂಡವರನ್ನು, ಅವರ ವಂಶೀಕರನ್ನು ಸಂಹರಿಸಲು ಹೋಗುತ್ತೇನೆ' ಎಂದು ಹೇಳಿ, ಕೃಪ-ಕೃತವರ್ಮರು ಬೇಡವೆಂದು ತಡೆಯುತ್ತಿದ್ದರೂ ರಥದಲ್ಲಿ ಕುಳಿತು ಹೊರಟನು. ಆಗ ಕೃಪ-ಕೃತವರ್ಮರೂ ಅವನನ್ನು ಹಿಂಬಾಲಿಸಿದರು. ಅಶ್ವತ್ಥಾಮನು ಪಾಂಡವರ ಶಿಬಿರಕ್ಕೆ ಬಂದನು. ಅಲ್ಲಿ ಅವನು ಕೋಟಿರೂಪಗಳುಳ್ಳ ಶ್ರೀಹರಿಯಿಂದ ಆವಿಷ್ಟನಾದ ಅತಿಕ್ರೂರರೂಪವುಳ್ಳ ತನ್ನ ಶರೀರರೂಪಿಯಾದ ರುದ್ರ-ದೇವನನ್ನು ಕಂಡನು. ಅಶ್ವತ್ಥಾಮನು ಆಗ ರುದ್ರನಲ್ಲಿ ಆವಿಷ್ಟನಾದನು. ಶಿಬಿರದ್ವಾರದ ಬಳಿ ಸದಾಶಿವನೆಂಬ ರುದ್ರನು ತನ್ನ ಸ್ವರೂಪನೇ ಆದ ಅಶ್ವತ್ಥಾಮನೊಡನೆ ಶ್ರೀಕೃಷ್ಣನ ಪ್ರೇರಣೆಯಿಂದ ಯುದ್ಧಮಾಡಿದನು ಮತ್ತು ಅಶ್ವತ್ಥಾಮನ ಸಕಲ ಆಯುಧಗಳನ್ನೂ ನುಂಗಿಬಿಟ್ಟನು. ಅದು ಸರಿ. ರುದ್ರನು ಕೃಷ್ಣನ ಪ್ರೇರಣೆಯಿಂದ ತನ್ನ ಸ್ವರೂಪದವನೇ ಆದ ಅಶ್ವತ್ಥಾಮನೊಡನೆ ಏಕೆ ಯುದ್ಧ ಮಾಡಿದನು? ಎಂದರೆ ನಿರ್ಣಯಾಚಾರ್ಯರು ಇಂತು ನಿರೂಪಿಸುವರು. ಶ್ರೀಹರಿಯು ಅಚಿಂತ್ಯಾದ್ಭುತ-ಶಕ್ತನಾದ್ದರಿಂದ ಶ್ರೀಹರಿಯಿಂದ ಪ್ರೇರಿತನಾದ ರುದ್ರನು ತನ್ನ ಸ್ವರೂಪಭೂತನೇ ಆಗಿದ್ದರೂ, ಅಶ್ವತ್ಥಾಮನೊಡನೆ ಯುದ್ಧಮಾಡಿ ಅವನ ಎಲ್ಲಾ ಆಯುಧಗಳನ್ನು ನುಂಗಿ ಹಾಕಿದನು. ಆಗ ಅಶ್ವತ್ಥಾಮನು ತನ್ನನ್ನೇ ಪಶುವಾಗಿ ಕಲ್ಪಿಸಿಕೊಂಡು ತನ್ನ ಅಂತರ್ಯಾಮಿಯಾದ ಶ್ರೀವಿಷ್ಣುವಿನ ಪ್ರೀತ್ಯರ್ಥವಾಗಿ ಮಾನಸಿಕ(ಧ್ಯಾನವೆಂಬ)ಯಾಗವನ್ನು ಮಾಡಿದನು. ಸ್ವಾವತಾರಭೂತ ಅಶ್ವತ್ಥಾಮನನ್ನು ಸಂಹರಿಸಲಿಚ್ಛಿಸಿ, ಮೂಲರೂಪದ ರುದ್ರನೇ ಅಲ್ಲಿ ಕಂಡುಬರುವುದರಿಂದ "ಸ್ವಾತ್ಮನಾ" ಎಂದು ಹೇಳಿರುವರು. 'ಮನ್ ಪ್ರತ್ಯಯಾಂತ ತನು ವಿಸ್ತಾರೇ' ಎಂಬ ಧಾತುವಿನಿಂದ 'ತ್ಮನ್' ಎಂಬ ಪದದಿಂದ ವಿಸ್ತತನಾದ ಶ್ರೀಹರಿಪರಮಾತ್ಮನೇ ಉಕ್ತನಾಗಿದ್ದಾನೆ. ಹರಿಯ ಹೆಸರನ್ನು ಧರಿಸಿರುವುದರಿಂದ ಆ ಪದದಿಂದ ಜೀವನೂ ಉಕ್ತನಾಗಿದ್ದಾನೆ. ಅಂತೂ 'ಆತ್ಮ ಹರೇ' 'ತ್ಮಹನ'ರು ಎನಿಸುವರು. ತಾನು ಮರಣಹೊಂದುವಾಗ "ಅಯಂ ಮದ್ದೇಹಃ ವಿಷ್ಣವೇ ಸ್ವಾಹಾ" ಎಂದು ತನ್ನ ದೇಹವನ್ನು ಶ್ರೀಹರಿಗೆ ಅರ್ಪಿಸುತ್ತಿರುವಾಗ 'ಈ ದೇಹವನ್ನು ಶ್ರೀಹರಿಗೆ ಅರ್ಪಿಸುತ್ತಿರುವಾಗ ಈ ದೇಹವು ನಿನಗೆ ಭಕ್ಷಣಾರ್ಹವಾಗುವುದು' ಎಂದು ನೆನೆಯುತ್ತಾನೆ. ಹೀಗೆ ಮಾಡುವುದೇ ಮಾನಸಯಜ್ಞವು ಮತ್ತು ಶಿಬಿರದಲ್ಲಿ ನನ್ನಿಂದ ಹತರಾಗುವವರೆಲ್ಲರನ್ನೂ ನಿನಗೆ ಪಶುಗಳನ್ನಾಗಿ (ಬಲಿಯನ್ನಾಗಿ), ಅಂದರೆ 'ನಿಖಿಲ ದೇಹಾ ಅಪಿ ವಿಷ್ಣವೇ ಸ್ವಾಹಾ' ಎಂದು 'ನಾನು ಸಕಲರ ದೇಹಗಳನ್ನೂ ಬಲಿಪಶುಗಳನ್ನಾಗಿ ನೀಡುತ್ತಿರುವಾಗ ಅವರು, ಆಗ ನಿನಗೆ ಭಕ್ಷಣಾರ್ಹರಾಗುವರು. ಆದ್ದರಿಂದ ಶ್ರೀಹರಿಯೇ! ಇಂತಹ

ನಿನ್ನ ಯಜ್ಞಕ್ಕೆ ನೀನೇ ವಿಘ್ನ ಮಾಡಬೇಡ' ಎಂಬ ನ್ಯಾಯದಿಂದಲೂ ಶ್ರೀಹರಿಯನ್ನು ಸ್ಮರಿಸಿದನೆಂದು ತಿಳಿಯಬೇಕು ಎಂದು ನಿರ್ಣಯಾಚಾರ್ಯರ ತಾತ್ಪರ್ಯ.

ಆಗ ಒಂದು ರೂಪದಿಂದ ದ್ರೋಣಾಚಾರ್ಯರಿಗೆ ಪುತ್ರನಾಗಿದ್ದ ಅಶ್ವತ್ಥಾಮನಿಗೆ, ರುದ್ರನು ತಾನು ನುಂಗಿದ್ದ ಎಲ್ಲ ಆಯುಧಗಳನ್ನು ಕೊಟ್ಟನು. ಹಾಗಾದರೆ ಮೊದಲೇಕೆ ಆಯುಧಗಳನ್ನು ನುಂಗಿದನು? ಈಗ ಮತ್ತೇಕೆ ಅವನಿಗೆ ಕೊಟ್ಟನು? - ಎಂದರೆ ರುದ್ರದೇವನು ''ಅಶ್ವತ್ಥಾಮಾ! ಪರಮಸಾಮರ್ಥ್ಯಶಾಲಿನಾದ, ಶ್ರೀಹರಿಯಿಂದ ಆಜ್ಞಾಪಿಸಲ್ಪಟ್ಟವನಾಗಿ ನಾನು ಈವರೆಗೆ ವಿಶೇಷಶಕ್ತಿಯಿಂದ ಪಾಂಡವರ ಶಿಬಿರವನ್ನು ರಕ್ಷಿಸುತ್ತಿದ್ದೆನು. ಈಗ ಶ್ರೀಹರಿಯ ಪ್ರೇರಣೆಯಿಂದ ನಿನಗೆ ಒಳಗೆ ಹೋಗಲು ದಾರಿ ನೀಡುತ್ತೇನೆ ಮತ್ತು ಶಿಬಿರದಲ್ಲಿರುವವರನ್ನು ಸಂಹರಿಸಲು ನಿನ್ನ ಎಲ್ಲಾ ಆಯುಧಗಳನ್ನು ಕೊಡುತ್ತೇನೆ'' ಎಂದು ಹೇಳಿ ವೃಷಭಧ್ವಜನಾದ ರುದ್ರನು ಸಕಲ ಆಯುಧಗಳನ್ನು ಅಶ್ವತ್ಥಾಮನಿಗೆ ಕೊಟ್ಟು ಅಂತರ್ಧಾನಾದನು. ಆಗ ಅಶ್ವತ್ಥಾಮನು ಕೃಪ-ಕೃತವರ್ಮರನ್ನು ಕುರಿತು 'ನಾನೀಗ ಶಿಬಿರವನ್ನು ಪ್ರವೇಶ ಮಾಡಿ ಎಲ್ಲರನ್ನು ಸಂಹರಿಸುತ್ತೇನೆ. ಯಾರಾದರೂ ಅಕಸ್ಮಾತ್ ನನ್ನಿಂದ ಪಾರಾಗಿ, ಭಯಗೊಂಡು ಹೊರಗೆ ಓಡಿಬಂದರೆ ನೀವು ಅವರೆಲ್ಲರನ್ನೂ ಕೊಂದು ಹಾಕಿರಿ' ಎಂದು ಹೇಳಿ ಅಪರಮೃತ್ಯುವಿನಂತೆ ಶಿಬಿರವನ್ನು ಹೊಕ್ಕನು.

ಶಿಬಿರದಲ್ಲಿ ನಿದ್ರೆಯಿಂದ ಎಚ್ಚೆತ್ತು ತಲ್ಪದಿಂದ ಮೇಲೆದ್ದ ಧೃಷ್ಟದ್ಯುಮ್ನನು ರೌದ್ರಾವತಾರನಾಗಿ ಬಂದ ಗುರುಪುತ್ರನನ್ನು ಕಂಡು 'ಅಶ್ವತ್ಥಾಮಾ ನೀನು ವೀರನಾಗಿರುವುದರಿಂದ ಶಸ್ತ್ರಪಾಣಿಯಾದ ನನ್ನನ್ನು ಜಯಿಸಿ, ಸಂಹರಿಸು. ಹಾಗೆ ಶಸ್ತ್ರದಿಂದ ಹತರಾದವರಿಗೆ ವೀರಸ್ವರ್ಗವು ಲಭಿಸುವುದು. ನನಗೂ ವೀರ ಸ್ವರ್ಗ ದೊರೆಯಲಿ' ಎಂದು ಹೇಳಲು, ಅತಿ ಕೋಪಿಷ್ಟನಾದ ಅಶ್ವತ್ಥಾಮನು, 'ಬ್ರಾಹ್ಮಣನಾದ ನನ್ನ ತಂದೆಯನ್ನು ಸಂಹರಿಸಿದ ನೀನು ಮಹಾಪಾಪಿಯಾಗಿದ್ದೀಯೇ. ನಿನ್ನಂಥವರಿಗೆ ಉತ್ತಮ ಲೋಕ ಲಭಿಸುವುದಿಲ್ಲ. ಅದರಲ್ಲೂ ಗುರುಗಳನ್ನು ಕೊಂದವರಿಗೆ ನಿಶ್ಚಯವಾಗಿ ಸ್ವರ್ಗಲೋಕವು ಪ್ರಾಪ್ತವಾಗುವುದಿಲ್ಲ ಎಂದು ಬೇರೆ ಹೇಳಬೇಕಾಗಿಲ್ಲವಷ್ಟೇ. ನಿನ್ನಂಥ ಪಾಪಿಗಳು ಧರ್ಮಯುದ್ಧದಲ್ಲಿ ವಧಾರ್ಹರಲ್ಲ' ಎಂದು ಹೇಳಿದನು. ಆಗ ಧೃಷ್ಟದ್ಯುಮ್ನನು ತನ್ನ ಮರಣವು ನಿಶ್ಚಿತವೆಂದರಿತು ಮೌನವಹಿಸಿ ನಿಂತನು. ಧೃಷ್ಟದ್ಯುಮ್ನನು ಈಗ ತಾನು ಪಡೆಯಲಿರುವ ಮರಣವನ್ನು ನಿತ್ಯವು ಸ್ವಪ್ನದಲ್ಲಿ ಕಾಣುತ್ತಿದ್ದನು ಎಂದು ಭಾವ. ಏಕೆಂದರೆ ದ್ರೋಣಾಚಾರ್ಯರು ಮೃತರಾದ ಮೇಲೆ ಮಹಾಕಾಲನಾದ ಮೃತ್ಯುವು ತನ್ನನು ಸೆಳೆದು ಕೊಲ್ಲುವುದನ್ನು ಅವನು ಕನಸಿನಲ್ಲಿ ಪ್ರತಿದಿನವೂ ಕಾಣುತ್ತಿದ್ದನು. ಆಗ ಅಶ್ವತ್ಥಾಮನು ಧೃಷ್ಟದ್ಯುಮ್ನನನ್ನು ಕೆಳಗೆ ಬೀಳಿಸಿ ಅವನೆದೆಯ ಮೇಲೆ ಕುಳಿತು ಅವನ ಕಂಠಕ್ಕೆ ಮೌರ್ವಿಯನ್ನು ಹಾಕಿ ಮಂಥನ ಮಾಡಿ ಸಂಹರಿಸಿದನು. ಹೀಗೆ ಮೃತನಾದ ಧೃಷ್ಟದ್ಯುಮ್ನನು ಅಗ್ನಿಯ ಅವತಾರನಾದ ತನ್ನ ಮೂಲಸ್ಥಾನಕ್ಕೆ ತೆರಳಿದನು.

ಅನಂತರ ಅಶ್ವತ್ಥಾಮನು ಶಿಖಂಡಿ, ಯುಧಾಮನ್ಯು, ಉತ್ತಮೌಜಸ, ಜನಮೇಜಯರೆಂಬ, ಪಾಂಚಾಲರಾಜನ ನಾಲ್ವರು ಪುತ್ರರನ್ನು ಸಂಹರಿಸಿ ದ್ರೌಪದಿಯ ಪುತ್ರರತ್ತ ಬೆಂಕಿಯಂತೆ ಹೋದನು. ಹಾಸಿಗೆಯಿಂದ ಮೇಲೆದ್ದ ದ್ರೌಪದಿಯ ಸುತರನ್ನು ಖಡ್ಗದಿಂದ ಸಂಹರಿಸಿದನು. ಕಾಶೀರಾಜನ ಪುತ್ರಿಯಾದ ಕಾಳಿಯಲ್ಲಿ ಜನಿಸಿದ ಭೀಮಸೇನನ ಮಗನನ್ನು ಬಿಟ್ಟು ಉಳಿದ ಪಾಂಡವರ ಮಕ್ಕಳನ್ನು, ಉಳಿದ ದ್ರೌಪದಿಯ ಸುತರನ್ನೂ ಸಂಹರಿಸಿದನು. ಆ ಸಂಹಾರ ಸಮಯದಲ್ಲಿ ರುದ್ರದೇವನು ಭೀಮಪುತ್ರನಲ್ಲಿ ಅಂತರ್ಹಿತನಾದನು. ಆದ್ದರಿಂದ ಆ ಭೀಮಕುಮಾರನು ಶರ್ವತ್ರಾತ ಅಂದರೆ ರುದ್ರರಕ್ಷಿತನೆಂದು ಹೆಸರು ಪಡೆದನು. ಮತ್ತು ಅವನು ಕೈಲಾಸದಲ್ಲಿ ರುದ್ರನ ಸನ್ನಿಧಿಯಲ್ಲಿ ವಾಸ ಮಾಡಿದನು. ಹಿಂದೆ ಕಾಶೀರಾಜನು ತನ್ನ ದೌಹಿತ್ರನು (ಕಾಳಿಯ ಮಗನು) ಅವಧ್ಯನಾಗಬೇಕೆಂದು ಶಂಕರನನ್ನು ಪ್ರಾರ್ಥಿಸಿದನು. ಅಂತೆಯೇ ಕರುಣಾನಿಧಿಯಾದ ರುದ್ರನು ಕಾಳಿಯ ಮಗ(ಭೀಮಪುತ್ರ)ನನ್ನು ರಕ್ಷಿಸಿದನು. ಅದು ಸರಿ, ಆ ಶರ್ವತ್ರಾತನು ಮತ್ತೆ ಭೂಮಿಗೆ ಏಕೆ ಬರಲಿಲ್ಲ? ಎಂದರೆ, ನಿರ್ಣಯಾಚಾರ್ಯರು ಹೇಳುತ್ತಾರೆ. ಶ್ರೀಹರಿಯು (ಶ್ರೀಕೃಷ್ಣನು) ಅರ್ಜುನನ ಸುತನಾದ, ಅಭಿಮನ್ಯುವಿನ ಮಗನಾದ

ಪರೀಕ್ಷಿದ್ರಾಜನೇ ಕುರುಸಾಮ್ರಾಜ್ಯದ ಅಧಿಪತಿಯಾಗಬೇಕೆಂದು ಸಂಕಲ್ಪಿಸಿದನು. ಅಂತೆಯೇ, ಅದನ್ನು ಅರಿತಿದ್ದ ರುದ್ರ-ದೇವನು, ಶರ್ವತ್ರಾತನು ಭೂಮಿಗೆ ಪುನಃ ಬರದಂತೆ ತಡೆದಿದ್ದರಿಂದ ಅವನು ಬರಲಿಲ್ಲವೆಂದು ತಿಳಿಯಬೇಕು.

ಅಶ್ವತ್ಥಾಮನು ಸಕಲ ಪಾಂಡವಸಂತಾನವನ್ನೂ ಸಂಹರಿಸುವೇನೆಂದು ಹೇಳಿದ್ದನಷ್ಟೇ? ಭೀಮಪುತ್ರನಾದ ಶರ್ವತ್ರಾತನೂ ಪಾಂಡವನೇ ಆದರಿಂದ ಅವನನ್ನು ಏಕೆ ಅಶ್ವತ್ಥಾಮನು ಪ್ರಯೋಗಿಸಿದ್ದ ಬ್ರಹ್ಮಾಸ್ತ್ರವು ಕೊಲ್ಲಲಿಲ್ಲ? ಎಂದರೆ ರುದ್ರನೇ ಅಶ್ವತ್ಥಾಮನಾಗಿ ಜನಿಸಿದ್ದರಿಂದ, ಅವರಿಬ್ಬರಲ್ಲಿ ಐಕ್ಯವಿರುವುದರಿಂದ ರುದ್ರ ರಕ್ಷಿತನಾದ ಶರ್ವತ್ರಾತನನ್ನು ಬ್ರಹ್ಮಶಿರವೆಂಬ ಅಸ್ತ್ರವು ಸಂಹರಿಸಲಿಲ್ಲ. ಚೇಕಿತಾನಾದಿ ಸರ್ವರನ್ನೂ ಎಲ್ಲ ಕಡೆಯಲ್ಲಿ ಎಲ್ಲರನ್ನು ಅಶ್ವತ್ಥಾಮನು ಸಂಹರಿಸಿದನು. ಅಶ್ವತ್ಥಾಮನು ಶಿಬಿರದಲ್ಲೆಲ್ಲಾ ಕ್ರೂರನಾಗಿ ಪ್ರಜ್ವಲಿಸಿದನು. ಹೀಗೆ ಅಶ್ವತ್ಥಾಮನು ಸಕಲರನ್ನು ಕೊಲ್ಲುತ್ತಿರುವಾಗ ಕೆಲವರು ಪ್ರಾಣ ಉಳಿಸಿ ಕೊಳ್ಳಲು ಹೊರಗೆ ಓಡಿ ಬರುತ್ತಿದ್ದರು. ಅವರನ್ನು ಕೃಪ - ಕೃತವರ್ಮರು ಸಂಹರಿಸಿಬಿಟ್ಟರು. ಅವರಿಂದ ಎಲ್ಲರೂ ಮೃತ-ರಾದರೂ ದೈವಯೋಗದಿಂದ ಓರ್ವ ಸೂತನು (ಸಾರಥಿಯು) ಮಾತ್ರ ಬದುಕುಳಿದನು. ಅವನೆಂತು ಬದುಕುಳಿದನೆಂದರೆ ಕೃತವರ್ಮನು ಖಡ್ಗ ಪ್ರಹಾರಮಾಡಲು ಬಂದಾಗ ಆ ಖಡ್ಗದ ಹೊಡೆತವು ದೇಹಕ್ಕೆ ತಗಲುವ ಮುಂಚೆಯೇ ಅವನು ಕೆಳಗೆ ಬಿದ್ದುಬಿಟ್ಟನು. ಅಲ್ಲಿ ಬಹು ಕತ್ತಲಿದ್ದುದರಿಂದ ಅದನು ಕೃತವರ್ಮನು ಕಾಣಲಿಲ್ಲ. ಆದ್ದರಿಂದಲೇ ಅವನು ಜೀವಂತನಾಗಿ ಉಳಿದನು.

ಕೃತವರ್ಮನು ಬೇರೆಯವರನ್ನು ಸಂಹರಿಸುವ ಕಾರ್ಯಾಸಕ್ತನಾಗಿದ್ದರಿಂದ ಕೆಳಗೆ ಬಿದ್ದು ಬದುಕಿದ ಆ ಸೂತನು ಮೆಲ್ಲನೆ ಮೇಲೆದ್ದು ಅಲ್ಲಿಂದ ನುಸುಳಿಕೊಂಡು ಓಡುತ್ತಾ ಉಪಪ್ಲಾವ್ಯಕ್ಕೆ ಹೋಗಿ ದ್ರೌಪದಿದೇವಿಗೆ ಶಿಬಿರದಲ್ಲಿ ಜರುಗಿದ ಅನಾಹುತ, ಕಗ್ಗೊಲೆಗಳನ್ನು ತಿಳಿದನು. ತನ್ನ ಪುತ್ರರು, ಸ್ತ್ರೀಯರು ಮತ್ತೆ ರಥಿಕರಾದಿಯಾಗಿ ಸರ್ವರೂ ಮೃತರಾದ ವಿಚಾರ ಕೇಳಿ ಅತಿದುಃಖಿತಳಾದ ದ್ರೌಪದಿಯು ಕೌರವರ ಶಿಬಿರದಲ್ಲಿದ್ದ ಭೀಮಸೇನನ ಬಳಿಗೆ ಬಂದು ವೃಕೋದರನಿಗೆ ದುಃಖದಿಂದ ಕಣ್ಣೀರು ಸುರಿಸುತ್ತಾ ಹೇಳಿದಳು. ಆದರಿಂದ ಅತಿ ಕ್ರುದ್ಧನಾದ ಭೀಮನು ಧನುರ್ಧಾರಿಯಾಗಿ, ಅಶ್ವತ್ಥಾಮನು ಇರುವಲ್ಲಿಗೆ ರಥಾರೂಢನಾಗಿ ಧಾವಿಸಿದನು. ಭೀಮನು ಕುಪಿತನಾಗಿ ತಮ್ಮ ಶಿಬಿರದತ್ತ ಬರುವ ಕಾಲದ ಮಧ್ಯದ ಅವಧಿಯಲ್ಲಿ ಗುರುಪುತ್ರನು ತಾನು ಮಾಡಿದ ಕಾರ್ಯದಿಂದ ಅತಿಹರ್ಷಿತನಾಗಿ ಕೃಪ ಕೃತವರ್ಮರೊಡನೆ ಮರಣಾಸನ್ನನಾಗಿದ್ದ ದುರ್ಯೋಧನನು ಬಿದ್ದಿದ್ದ ಸ್ಥಳಕ್ಕೆ ಬಂದು ದ್ರೌಪದಿಯ ಪುತ್ರರ ಶಿರಸ್ಸುಗಳನ್ನು ದುರ್ಯೋಧನನಿಗೆ ತೋರಿಸಿದನು ಮತ್ತು ತಾನು ಗೈದ ಕಾರ್ಯಗಳನ್ನು ನಿರೂಪಿಸಿದನು. ಅವನ ವಚನವನ್ನಾಲಿಸಿ ಕುರುಪತಿಯು ಪರಮಾನಂದಭರಿತನಾಗಿ, 'ಗುರುಪುತ್ರ ಅಶ್ವತ್ಥಾಮಾ! ಭಲೇ ಭಲೇ! ಉತ್ತಮಕಾರ್ಯವನ್ನು ಮಾಡಿ ನನ್ನ ಮಾತನ್ನು ನೆರವೇರಿಸಿದ್ದೀಯೇ. ಈಗ ನನಗೆ ಬಹು ಸಂತೋಷವಾಗಿದೆ ಎಂದು ಹೇಳಿ ದೇಹ ತ್ಯಾಗ ಮಾಡಿದನು. ಕಲಿಸ್ವರೂಪಿಯೂ ಕಪಟಿಯೂ ಆದ ದುರುಳ ದುರ್ಯೋಧನನನು ಹೀಗೆ ಸಾವನ್ನಪ್ಪಿ ಅಂಧಂತಮಸ್ಸಿಗೆ ಬಿದ್ದನು. ಆ ತರುವಾಯ ಕೃಷ್ಣ ಭೀಮಾರ್ಜುನರ ಭಯದಿಂದ ಒಬ್ಬೊಬ್ಬರು ಒಂದೊಂದು ದಿಕ್ಕಿಗೆ ಚದುರಿಹೋದರು.

ಹೀಗೆ ಬೇರೆ ಬೇರೆಯಾಗಿ ಹೊರಟ ಆ ಮೂವರಲ್ಲಿ, ರಥದಲ್ಲಿ ಕುಳಿತು ಯಾರೂ ಸಹಾಯಕರಿಲ್ಲದೆ ಬರುತ್ತಿದ್ದ ಅಶ್ವತ್ಥಾಮನನ್ನು ಕಂಡು ಭೀಮಸೇನನು ತನ್ನ ರಥವನ್ನು ಓಡಿಸುತ್ತಾ ಅವನೆಡೆಗೆ ಧಾವಿಸಿ ಬಂದನು. ಅದನ್ನು ಅವಲೋಕಿಸಿದ ಅಶ್ವತ್ಥಾಮನು ವೇಗವಾಗಿ ಚಲಿಸುವ ಅಶ್ವಗಳನ್ನು ಹೂಡಿರುವ ರಥದಲ್ಲಿ ವೇಗವಾಗಿ ಪಲಾಯನಮಾಡಹತ್ತಿದನು. ಸ್ವಲ್ಪದೂರ ಪ್ರಯಾಣಿಸಿದ ಮೇಲೆ ಹಿಂತಿರುಗಿ ನೋಡಿ ಭೀಮನು ತನ್ನನ್ನು ಅಟ್ಟಿಸಿಕೊಂಡು ಬರುತ್ತಿರುವುದನ್ನು ಗಮನಿಸಿ ಕೋಪಯುಕ್ತನಾಗಿ ಆ ದ್ರೋಣಪುತ್ರನು ತಾನೂ ಹಿಂದಿರುಗಿ ನಿಂತು ಭೀಮನೊಡನೆ ಯುದ್ಧಮಾಡಿ ಪರಾಜಿತನಾದನು. ಆದರಿಂದ ಖಿತಿಗೊಂಡ ಅಶ್ವತ್ಥಾಮನು ಯುಕ್ತಾಯುಕ್ತ ವಿವೇಚನೆ ಮಾಡದೇ ಭೀಮಾದಿಗಳ ನಾಶಕ್ಕಾಗಿ ಬ್ರಹ್ಮಾಸ್ತ್ರವನ್ನು ಕೈಗೆತ್ತಿಕೊಂಡನು.

ಅದೇ ಸಮಯಕ್ಕೆ ಧರ್ಮರಾಜ, ಅರ್ಜುನರಿಂದ ಸಹಿತನಾದ ಭಗವಾನ್ ಶ್ರೀಕೃಷ್ಣನು ಬಂದು ಆ ಬ್ರಹ್ಮಾಸ್ತ್ರದ ಅಮೋಘತ್ವ, ಭೀಮಸೇನನ ಅವಧ್ಯತ್ವಗಳನ್ನು ಸಾಧಿಸಿ ತೋರಿಸಿದನು. ಶ್ರೀಕೃಷ್ಣನು ಆ ಬ್ರಹ್ಮಾಸ್ತ್ರವು ಭೀಮನನ್ನು ಏನೂ ಮಾಡದೇ ವ್ಯರ್ಥವಾಗುವಂತೇಕೆ ಮಾಡಿದನು? ಎಂದರೆ ಭೀಮನು ಅವಧ್ಯನಾಗಿದ್ದಾನೆ. ಬ್ರಹ್ಮಾಸ್ತ್ರವೂ ಅಮೋಘವಾದುದು, ಅಂದರೆ ಎದುರಿಲ್ಲದುದು. ಆದ್ದರಿಂದ ಕೃಷ್ಣನು ಭೀಮನ ಅವಧ್ಯತ್ವ, ಅಸ್ತ್ರದ ಅಮೋಘತ್ವವು ಪ್ರಕಟವಾಗುವಂತೆ ಮಾಡಿದನು. ಭೀಮ ಮತ್ತು ಅಸ್ತ್ರಗಳ ಅವಧ್ಯತ್ವ ಅಮೋಘತ್ವವೇಕೆ? ಎಂದರೆ ಭೀಮನ ಅವಧ್ಯತ್ವವೂ, ಬ್ರಹ್ಮಾಸ್ತ್ರದ ಅಮೋಘತ್ವವೂ (ಇವೆರಡೂ) ಶ್ರೀವಿಷ್ಣುವಿನಿಂದಲೇ ಸಂಕಲ್ಪಿತವಾದ್ದರಿಂದ ಭೀಮನೂ ಅವಧ್ಯನು, ಅಸ್ತ್ರವೂ ಅಮೋಘವೇ. ನಿರ್ಣಯಾ-ಚಾರ್ಯರು ಇನ್ನೊಂದು ಬಗೆಯಿಂದಲೂ ಭೀಮನ ಅವಧ್ಯತ್ವವನ್ನು ತಿಳಿಸುತ್ತಾರೆ. ಆ ಬ್ರಹ್ಮಾಸ್ತ್ರವು ಭೀಮಾತ್ಮಕವೇ ಆಗಿರುತ್ತದೆ. ಭೀಮನು ಮುಂದೆ ಬ್ರಹ್ಮಪದಕ್ಕೆ ಬರುವುದು ನಿಶ್ಚಿತವಾಗಿದೆ. ಅತಃ ಆ ಅಸ್ತ್ರಕ್ಕೆ ಭೀಮನೇ ಅಭಿಮಾನಿಯೂ ಆದಂತಾಯಿತು. ಅಂದರೆ ಆ ಅಸ್ತ್ರವು ಭೀಮಾಭಿಮನ್ಯವಾಗಿದೆ. ಬ್ರಹ್ಮಾಸ್ತ್ರವು ಗಾಯತ್ರೀಮಂತ್ರಾತ್ಮಕವಾದದು. ಬ್ರಹ್ಮನೇ ದೇವತೆಯು (ಧ್ಯಾನ ಮಾಡಬೇಕಾದ ದೇವತೆಯು). ಜಗಜ್ಜನ್ಮಾದಿ ಕಾರಣನಾದ, ಅಂದರೆ ಬ್ರಹ್ಮಾದಿ ಜಗತ್ತನ್ನು ಸೃಷ್ಟಿಸು-ವವನಾದ ಸಾಕ್ಷಾತ್ ಶ್ರೀನಾರಾಯಣನೇ ಆ ಮಂತ್ರಪ್ರತಿಪಾದ್ಯ ದೇವತೆಯೇ ಹೊರತು, ಸೂರ್ಯನು ಪ್ರತಿಪಾದ್ಯನಲ್ಲ ಎಂದು ತಿಳಿಯಬೇಕು. ಭಾವೀ ಬ್ರಹ್ಮನಾದ ಭೀಮನನ್ನು ಆ ಬ್ರಹ್ಮದೇವತಾಕವಾದ ಅಸ್ತ್ರವು ಏನೂ ಮಾಡದ್ದರಿಂದ ಭೀಮನ ಅವಧ್ಯತ್ವವು ಪ್ರಕಟವಾಗುವಂತೆ ಶ್ರೀಕೃಷ್ಣನು ಮಾಡಿದನೆಂದು ಭಾವ.

ಹಿಂದೆ ಅಶ್ವತ್ಥಾಮನು ಪಾಂಡವರ ವಂಶವನ್ನು ನಿರ್ಮೂಲನ ಮಾಡಲು ತನಗೆ ಕೃಷ್ಣನನ್ನು 'ನಿನ್ನ ಚಕ್ರಾಯುಧವನ್ನು ಕೊಡು' ಎಂದು ಪ್ರಾರ್ಥಿಸಿದ್ದನು. ಅಶ್ವತ್ಥಾಮನು ಹೀಗೆ ಪ್ರಾರ್ಥಿಸಿದ್ದ ಅಂತರಂಗವೇನೆಂದರೆ ಪಾಂಡವ ಸಂತತಿಯನ್ನು ನಾಶಪಡಿಸುವುದರ ಜೊತೆಗೆ ದುರ್ಯೋಧನನು ಅವನ ವಂಶೀಕರಿಗೆ ಭೂಮಂಡಲಾಧಿಪತ್ಯವಿರುವಂತೆ ಮಾಡಬೇಕೆಂದು ಅವನು ಬಯಸಿದ್ದನು. ಇವೆಲ್ಲ ವಿಚಾರವನ್ನು ಶ್ರೀಕೃಷ್ಣನು ಧರ್ಮಾರ್ಜುನರಿಗೆ ಹೇಳಿ ನನ್ನ ಸ್ವರೂಪಭೂತವಾದ ನನ್ನ ಚಕ್ರಾ-ಯುಧವನ್ನು ಪ್ರಾರ್ಥಿಸಿದ ಅಶ್ವತ್ಥಾಮನು ಅವಿವೇಕಿಯು. ಆದ್ದರಿಂದಲೇ ನಾನು ಅವನಿಗೆ ಇಂಥ ದುರ್ವ್ಯಾಪಾರ ಮಾಡ-ಬೇಡವೆಂದು ಹೇಳಿದ್ದೆ ಎಂದು ತಿಳಿಸಿದನು.

ಜಗತ್ತಿನಲ್ಲಿ ಪಾಂಡವರ ಸಂತತಿಯೇ ಇಲ್ಲದಂತೆ ಮಾಡಲಿಚ್ಛಿಸಿ ಅಶ್ವತ್ಥಾಮನು ಪ್ರಯೋಗಿಸಿದ ಪ್ರಜ್ವಲಿಸುವ ಬ್ರಹ್ಮಾಸ್ತ್ರ-ವನ್ನು ನೋಡಿ ಶ್ರೀಕೃಷ್ಣನಿಂದ ಪ್ರೇರಿತನಾದ ಫಲ್ಗುಣನು ಆ ಬ್ರಹ್ಮಾಸ್ತ್ರವು ಶಾಂತವಾಗುವುದಕ್ಕಾಗಿ, ತಾನೂ ಬ್ರಹ್ಮಾಸ್ತ್ರವನ್ನು ಬಿಟ್ಟನು. ಹಾಗೆ ಅಸ್ತ್ರ ಪ್ರಯೋಗಕಾಲದಲ್ಲಿ ಪಾರ್ಥನು 'ಗುರುಪುತ್ರ ಅಶ್ವತ್ಥಾಮನಿಗೆ ಸಮಸ್ತ ಭೂತ(ಪ್ರಾಣಿ)ಗಳಿಗೆ ಮತ್ತು ತಮಗೂ ಕ್ಷೇಮವಾಗಲೆಂದು' ಪ್ರಾರ್ಥಿಸಿ ಅಸ್ತ್ರವನ್ನು ಬಿಟ್ಟನು. ಪ್ರಕೃತ ಅಶ್ವತ್ಥಾಮನು ಇನ್ನೂ ನಾಶವೇ ಆಗದಿರುವಾಗ ಅರ್ಜುನನು ಅವನಿಗೆ ಮಂಗಳವಾಗಲಿ ಎಂದು ಹೇಳಿ ಏಕೆ ಬ್ರಹ್ಮಾಸ್ತ್ರವನ್ನು ಬಿಟ್ಟನು? ಎಂಬ ಶಂಕೆ ಬಂದರೆ, ಅಸ್ತ್ರಜ್ಞಾನ ಇಲ್ಲದಿರುವವರ ಮೇಲೆ, ಧರ್ಮರಾಜಾದಿಗಳ ಮೇಲೆ ಅಸ್ತ್ರವನ್ನು ಪ್ರಯೋಗಿಸಿದರೆ ಆಗ ಆ ಅಸ್ತ್ರವು ಯಾರು ಆ ಅಸ್ತ್ರವನ್ನು ಬಿಟ್ಟರೋ ಅವರನ್ನೇ ಸಂಹರಿಸುವುದು. ಆದ್ದರಿಂದ ಗುರುಗಳಾದ ದ್ರೋಣಾಚಾರ್ಯರಲ್ಲಿನ ಭಕ್ತಿಯಿಂದ ಅವರ ಪುತ್ರನಾದ ಅಶ್ವತ್ಥಾಮನನ್ನು ಅದು ಸಂಹರಿಸದಿರಲೆಂದು 'ಸ್ವಸ್ತ್ಯಸ್ತು ದ್ರೋಣಪುತ್ರಾಯ - ಅಶ್ವತ್ಥಾಮನಿಗೆ ಕ್ಷೇಮ-ಮಂಗಳವಾಗಲಿ' ಇತ್ಯಾದಿಯಾಗಿ ಪ್ರಾರ್ಥಿಸಿ ಧನಂಜಯನು ಆ ಅಸ್ತ್ರವನ್ನು ಪ್ರಯೋಗಿಸಿದನೆಂದು ಆ ಶಂಕೆಯನ್ನು ಗ್ರಂಥಕಾರರು ಪರಿ-ಹರಿಸಿದ್ದಾರೆ.

ಅದು ಸರಿ. ಸಮಸ್ತ ಭೂತ(ಪ್ರಾಣಿ)ಗಳಿಗೆ ಮತ್ತು ನನಗೆ (ನಮಗೆ) ಕ್ಷೇಮವಾಗಲಿ ಎಂದೇಕೆ ಪ್ರಾರ್ಥಿಸಿದನು? ಎಂದರೆ ಆ ಎರಡೂ ಬ್ರಹ್ಮಾಸ್ತ್ರಗಳ ತಿಕ್ಕಾಟದಿಂದ ಸಮಸ್ತರ (ಪ್ರಾಣಿಗಳ) ನಾಶವಾಗುವುದು ನಿಶ್ಚಿತವಾದುದರಿಂದ ಎಲ್ಲ

ಪ್ರಾಣಿಗಳ ಮೇಲಿರುವ ಕಾರುಣ್ಯದಿಂದ ಮತ್ತು ತಮಗೂ ಸ್ವಸ್ತಿಯುಂಟಾಗಲಿ ಎಂದು ಹಾರೈಸಿ ಪ್ರಾರ್ಥಿಸಿದನೆಂದು ಭಾವ. ಇಂತು ಅರ್ಜುನನು ಪ್ರಾರ್ಥಿಸಿದ್ದರೂ ಆ ಎರಡೂ ಅಸ್ತ್ರಗಳಿಂದ ಸಮಸ್ತ ಪ್ರಾಣಿಗಳ ನಾಶವಾಗುವುದು ಖಂಡಿತವಾದ್ದರಿಂದ ಅದು ಸಂಭವಿಸದಂತೆ ಮಾಡಲು ನಿಸ್ಸಿಮ ಶಕ್ತರಾದ ಸತ್ಯವತೀ ಪುತ್ರರಾದ ಪರಮರಾದ ಭಗವಾನ್ ಶ್ರೀವೇದವ್ಯಾಸದೇವರು ಆ ಅಸ್ತ್ರಗಳಿಗೆ ಪರಸ್ಪರ ಸಂಯೋಗ – ಘರ್ಷಣೆಗಳಾಗದಂತೆ ತಡೆಯಲು ಅವೆರಡರ ಮಧ್ಯೆ ನಿಂತರು. ಪೂರ್ವದಲ್ಲಿ ಅನೇಕರು ಈ ಬ್ರಹ್ಮಾಸ್ತ್ರವನ್ನು ತಿಳಿದವರು ಇದ್ದರೂ, ಪ್ರಾಯಃ ಅವರಾದರೂ ಆಪತ್ಕಾಲದಲ್ಲಿ ಸಹ ಈ ಬಗೆಯ ಕಾರ್ಯ ಮಾಡಲಿಲ್ಲ! ಲೋಕೋಪದ್ರವ ಕಾರಕವಾದ ಕಾರ್ಯವನ್ನಾರು ತಾನೇ ಮಾಡಿಯಾರು? ಹೀಗಿರಲು 'ಅರ್ಜುನ ನೀವೇಕೆ ಹೀಗೆ ಮಾಡಿದಿರಿ?' ಎಂದು ಅರ್ಜುನನನ್ನು ಪ್ರಶ್ನಿಸಿದರು.

ಆಗ ಅರ್ಜುನನು 'ಭಗವನ್ ನಾನು ಆಪತ್ಕಾಲವೆಂದು ಬಗೆದು ಸರ್ವರ ಶಾಂತಿಗಾಗಿಯೇ (ಅಂದರೆ ಆ ಅಸ್ತ್ರದ್ವಯವು ಶಾಂತವಾಗಿ ಸಕಲರಿಗೂ ಕ್ಷೇಮವಾಗಲೆಂದೇ) ಬಹ್ಮಾಸ್ತ್ರವನ್ನು ಪ್ರಯೋಗಿಸಿದೆನು. ಆದ್ದರಿಂದ ನನ್ನನ್ನು ಕ್ಷಮಿಸಿರಿ' ಎಂದು ಪ್ರಾರ್ಥಿಸಿದನು. ಅಶ್ವತ್ಥಾಮನೂ ಅದರಂತೆ ಹೇಳಿ ಕ್ಷಮೆ ಕೋರಿದನು. ಆಗ ಬಾದರಾಯಣರು 'ನೀವು ಬಿಟ್ಟ ಈ ಅಸ್ತ್ರಗಳನ್ನು ಉಪಸಂಹರ (ನಿವಾರಣ)ಮಾಡಿರಿ' ಎಂದು ಆಜ್ಞಾಪಿಸಿದರು. ಆಗ ಇಂದ್ರಸುತನಾದ ಅರ್ಜುನನು ತಾನು ಪ್ರಯೋಗಿಸಿದ ಆ ಬ್ರಹ್ಮಾಸ್ತ್ರವನ್ನು ಉಪಸಂಹಾರ ಮಾಡಿದನು. ತಾನು ಬಿಟ್ಟ ಬ್ರಹ್ಮಾಸ್ತ್ರವನ್ನು ಉಪಸಂಹರಿಸಲು ತಿಳಿಯದ ಅಶ್ವತ್ಥಾಮನು ತಲೆತಗ್ಗಿಸಿ ನಿಂತನು. ಆಗ ಗುರುಪುತ್ರನ ಬಗೆಗೆ ಶ್ರೀವಾಸುದೇವನು ಇಂತು ನುಡಿದನು – "ಪಾಂಡುಕುಮಾರನಾದ ಗಾಂಡೀವಿಯು (ಅರ್ಜುನನು) ಕ್ಷಾತ್ರತೇಜೋ ವಿಭೂಷಿತನಾಗಿದ್ದಾನೆ. ಕುಮಾರಾವಸ್ಥೆಯಿಂದಲೂ ಅವನು ಬ್ರಹ್ಮಕರ್ಮವ್ರತ ನಿಷ್ಠನಾಗಿದ್ದಾನೆ. ಆದ್ದರಿಂದ ಪಾರ್ಥನು ಬ್ರಹ್ಮಾಸ್ತ್ರವನ್ನು ಉಪಸಂಹರಿಸಲು ಶಕ್ತನಾಗಿದ್ದಾನೆ. ಆದರೆ ಈ ಅಶ್ವತ್ಥಾಮನು ದುರ್ಯೋಧನನ ಮುಂದೆ ಪ್ರತಿಜ್ಞೆ ಮಾಡಿದ್ದಾನೆ. ಅದರಿಂದಾಗಿ ಇವನು ಬ್ರಹ್ಮಚರ್ಯದಿಂದ ಭ್ರಷ್ಟನಾಗಿದ್ದಾನೆ. ಅಂದರೆ ಬ್ರಹ್ಮಚರ್ಯವನ್ನು ಕಳೆದುಕೊಂಡಿದ್ದಾನೆ. ಆದುದರಿಂದ ಅಶ್ವತ್ಥಾಮನು ಬ್ರಹ್ಮಾಸ್ತ್ರವನ್ನು ಉಪಸಂಹರಿಸಲು ಅಶಕ್ತನಾಗಿದ್ದಾನೆ" ಎಂದು ನಿರೂಪಿಸಿದನು.

ಶ್ರೀವಾಸುದೇವನ ವಚನವನ್ನಾಲಿಸಿ ಶ್ರೀವೇದವ್ಯಾಸರು ಬ್ರಹ್ಮಚರ್ಯವನ್ನು ಕಳೆದುಕೊಂಡಿರುವ ಅಶ್ವತ್ಥಾಮನನ್ನು ವೀಕ್ಷಿಸಿ 'ಅಶ್ವತ್ಥಾಮಾ! ಬ್ರಹ್ಮಾಸ್ತ್ರವನ್ನು ನಿವಾರಿಸಲು (ಉಪಸಂಹರಿಸಲು) ಅಸಮರ್ಥನಾಗಿರುವ ನೀನು ಈ ಬ್ರಹ್ಮಾಸ್ತ್ರವನ್ನು ಪ್ರಯೋಗಿಸುವುದಕ್ಕಿಂತ ಮೊದಲೇ ಭೀಮನಿಂದ ಪರಾಜಿತನಾಗಿದ್ದೀಯೆ. ಆದ ಕಾರಣ ನಿನ್ನ ಶಿರದಲ್ಲಿ ರಾಜಿಸುವ ಸ್ವಾಭಾವಿಕವೂ, ಅತಿ ಶ್ರೇಷ್ಠವೂ ಆಗಿರುವ ಮಣಿ(ರತ್ನ)ಯನ್ನು ಭೀಮಸೇನನಿಗೆ ಕೊಡು. ಮಾತಿನಿಂದಲೇ ಪಾಂಡವರಿಗೆ ಈ ಅಸ್ತ್ರದ ಭಯವಿಲ್ಲದಂತೆ, ಕೇಡಾಗದಂತೆ ಅಸ್ತ್ರವನ್ನು ವಚನದಿಂದಲೇ ಹಿಂತೆಗೆದುಕೋ' ಎಂದು ಆಜ್ಞಾಪಿಸಿದರು. ಆಗ ಅಶ್ವತ್ಥಾಮನು ಜರಾಮರಣವಿಲ್ಲದಂತೆ ಮಾಡುವ, ಸಕಲಶ್ರಮವನ್ನು ಪರಿಹರಿಸುವ, ಹಸಿವೂ ನೀರಡಿಕೆಗಳಿಲ್ಲದಂತೆ ಮಾಡುವ, ದುರ್ಗಂಧವನ್ನು ನಾಶಪಡಿಸುವ ಅಪೂರ್ವಶಕ್ತಿ ಸಂಪನ್ನವಾದ ತನ್ನ ತಲೆಯ ಮೇಲ್ಭಾಗದಲ್ಲಿರುವ ರತ್ನಮಣಿಯನ್ನು ತಲೆಯಿಂದ ಕಿತ್ತು ಭೀಮಸೇನನಿಗೆ ನೀಡಿದನು ಮತ್ತು 'ಈ ಅಸ್ತ್ರದಿಂದ ಈಗ ಪಂಚಪಾಂಡವರು ಮಾತ್ರ ಉಳಿದರು. ಮತ್ತಾರೂ ಉಳಿಯಲಿಲ್ಲ' ಎಂದನು. ಆಗ ಶ್ರೀವೇದವ್ಯಾಸರು 'ವತ್ಸ ಅರ್ಜುನ! ಈ ಅಶ್ವತ್ಥಾಮನು ಬಿಟ್ಟ ಬ್ರಹ್ಮಾಸ್ತ್ರವನ್ನೂ ನೀನೇ ಉಪಸಂಹಾರ ಮಾಡು' ಎಂದು ಹೇಳಲು ಅರ್ಜುನನು ಶ್ರೀವ್ಯಾಸರಿಗೆ ನಮಸ್ಕರಿಸಿ ಆ ಬ್ರಹ್ಮಾಸ್ತ್ರವನ್ನೂ ಉಪ-ಸಂಹರಿಸಿದನು.

ಆಗ ಶ್ರೀಕೃಷ್ಣ ಪರಮಾತ್ಮನು "ಅಶ್ವತ್ಥಾಮಾ! ಈಗ ಪಾಂಡವರ ಸಂತತಿಯಲ್ಲಿ ಒಬ್ಬನೇ ಉತ್ತರೆಯ ಗರ್ಭದಲ್ಲಿ ಉಳಿದಿದ್ದಾನೆ. ನೀನು ಆ ಗರ್ಭಸ್ಥ ಶಿಶುವಿಗೆ ಕ್ಷೇಮವಾಗುವಂತೆ, ಅಪಾಯವಾಗದಂತೆ ಮಾತಿನಿಂದಲೇ ಆ ಅಸ್ತ್ರವನ್ನು

ನಿವಾರಿಸು" ಎಂದು ಹೇಳಿದನು. ಆಗ ಗೌತಮಿಯು (ಅಶ್ವತ್ಥಾಮನು), 'ಕೃಷ್ಣ ನೀನು ಪಕ್ಷಪಾತದಿಂದ ಸೋದರಳಿಯನಾದ ಅಭಿಮನ್ಯುವಿನ ಸಂತಾನವನ್ನು ರಕ್ಷಿಸಬೇಕೆಂದು ಹೀಗೆ ಹೇಳುತ್ತಿದ್ದೀಯೆ. ನಾನು ಆ ಉತ್ತರಾದೇವಿಯ ಗರ್ಭದಲ್ಲಿರುವ ಸಂತಾನದ ನಾಶಕ್ಕಾಗಿ ಗರ್ಭಕ್ಕೆ ಅಸ್ತ್ರವನ್ನು ಬಿಡುತ್ತೇನೆ' ಎಂದು ಹೇಳಿದನು. ಅವನ ಮಾತನ್ನು ಕೇಳಿ ಶ್ರೀವಾಸುದೇವನು ಪುನಃ ಹೀಗೆ ಹೇಳಿದನು. 'ಗುರುಪುತ್ರ! ನೀನು ಸಂತಾನವನ್ನು ನಾಶಪಡಿಸಲೇಬೇಕಾಗಿದ್ದಲ್ಲಿ ಯಾವ ಪ್ರಕಾರದಿಂದಲೂ ಉತ್ತರೆಯ ಗರ್ಭಕ್ಕೆ ಅಸ್ತ್ರವನ್ನು ಬಿಡಬೇಡ. ಮೃತನಾದ ಅಭಿಮನ್ಯುವಿನ ದೇಹಕ್ಕೆ ಆ ಅಸ್ತ್ರವನ್ನು ಬಿಡು. ಹೀಗೆ ನಿನ್ನಿಂದ ಸಂಹೃತವಾದ ಗರ್ಭವನ್ನು ನಾನು ಪುನಃ ಉಜ್ಜೀವನಗೊಳಿಸುತ್ತೇನೆ." ಕೃಷ್ಣನ ನುಡಿ ಕೇಳಿ ಅಶ್ವತ್ಥಾಮನು ಹಟದಿಂದ 'ಉತ್ತರೆಯ ಗರ್ಭಕ್ಕೆ ನಾನು ಅಸ್ತ್ರವನ್ನು ಪ್ರಯೋಗಿಸುತ್ತೇನೆ' ಎಂದೆನಲು, ಸ್ವಲ್ಪ ಕೋಪಗೊಂಡವನಂತೆ (ಅಶ್ವತ್ಥಾಮನು ತನ್ನ ಭಕ್ತನಾದ್ದರಿಂದ ಸ್ವಲ್ಪ ಕೋಪಗೊಂಡ) ಶ್ರೀಕೃಷ್ಣನು, 'ಎಲವೋ ದುರ್ಬುದ್ಧಿಯುಳ್ಳ ಅಶ್ವತ್ಥಾಮಾ! ನನ್ನ ಸಾಮರ್ಥ್ಯವನ್ನು ನೋಡು. ನಿನಗೆ ಶಕ್ಯವಾದುದನ್ನು ಮಾಡು. ಪ್ರಯತ್ನಪೂರ್ವಕವಾಗಿ ಪಾಂಡವರ ಸಂತಾನವನ್ನು ನಾಶಪಡಿಸಲೆತ್ನಿಸುವ ನಿನ್ನ ಪ್ರಯತ್ನವನ್ನು, ಶಕ್ತಿಯನ್ನೂ ನಾನು ವ್ಯರ್ಥಗೊಳಿಸುತ್ತೇನೆ ಮತ್ತು ಉತ್ತರಾಗರ್ಭದಲ್ಲಿರುವ ಶಿಶುವನ್ನು ರಕ್ಷಿಸುತ್ತೇನೆ. ಈ ಪಾಂಡವರ ಸಂತತಿಯು ಒಂದು ಸಹಸ್ರವರ್ಷಗಳ ಕಾಲ ಈ ಸಮಸ್ತ ಭೂಮಂಡಲವನ್ನಾಳುತ್ತಾ ಪ್ರಕಾಶಿಸುವುದು. ನನ್ನಿಂದ ರಕ್ಷಿತವಾದ ಸಂತಾನವನ್ನು ನಾಶಪಡಿಸಲು ಯಾರೂ, ಸ್ವಲ್ಪವೂ ಶಕ್ತರಲ್ಲ. ನಿನ್ನ ಮನಸ್ಸಿನಲ್ಲಿರುವ ದುಷ್ಟಬುದ್ಧಿಯನ್ನೂ, ಅರ್ಜುನನ ಈ ಸಂತಾನವನ್ನು ನೀನೇಕೆ ನಾಶಪಡಿಸಬಯಸುತ್ತೀಯೆ ಎಂಬುದನ್ನು ನಾನು ಚೆನ್ನಾಗಿ ಬಲ್ಲೆನು. ನೀನು ನನ್ನ ಆಜ್ಞೆಯಿಲ್ಲದೆ ಮತ್ತೆ ಆ ದುಷ್ಟ ದುರ್ಯೋಧನನ (ನನ್ನಿಂದ ಜನಿಸಿದ್ದು) ಸಂತಾನ ತಂತುವನ್ನು ಉಳಿಸುವುದು ದುಷ್ಕರವು. ನನ್ನ ಸಂಕಲ್ಪ ಮತ್ತು ಆಜ್ಞೆಯಿಂದ ನಿನ್ನ ವಾಂಛಿತವು, ಆ ಯತ್ನವೂ ವಿಫಲವಾಗುವುದು. ಅದು ಹೇಗೆಂದರೆ ಶ್ರೀವಿಷ್ಣುವಿನಿಂದ ವಿಮುಖನಾಗಿ, ದುಷ್ಕರ್ಮಾಚರಣರತನಾಗಿ ಮೋಕ್ಷವನ್ನು ಅಪೇಕ್ಷಿಸುವವನ ಇಚ್ಛೆಯು ಅದೆಂತು ನಿಷ್ಫಲವೋ, ಅದರಂತೆ ನಿನ್ನ ಇಚ್ಛೆಯು ವ್ಯರ್ಥವೂ, ನಿಷ್ಫಲವೂ ಆಗುವುದು. ಅದೇ ನನ್ನ ಇಚ್ಛೆಗೆ ವಿರುದ್ಧವಾದ ಇಚ್ಛೆಯಿಂದಲೇ ಮನುಷ್ಯ ಗೋಚರವಾದ ಈ ಭೂಭಾಗವು ಅಂದರೆ ರಾಜ್ಯವು ನಿನಗೆ ದೊರಕಲಾರದು. ಎಲವೋ ಮೂರ್ಖ, ಎಲ್ಲಿಯವರೆಗೆ ಪಾಂಡವರ ಸಂತತಿಯವರು ಈ ಭೂಮಂಡಲವನ್ನು ಪಾಲಿಸುತ್ತಿರುವರೋ ಅಲ್ಲಿಯವರೆಗೆ ನೀನು ದುರ್ಗಂಧಯುಕ್ತನಾಗಿ, ವ್ರಣಪೂರ್ಣಶರೀರವುಳ್ಳವನಾಗಿ, ಸರ್ವದಾ ಅತ್ಯಂತ ನಿರ್ಬಲನಾಗಿ, ಕಪಿಗಳಂತೆ ವೃಕ್ಷಗಳನ್ನಾಶ್ರಯಿಸಿ ವಾಸಮಾಡುತ್ತಾ , ಅರಣ್ಯದಲ್ಲಿಯೇ ಅಡಕಾಕುತ್ತಾ ಅಂದರೆ ಸಂಚರಿಸುತ್ತಿರುವವನಾಗುತ್ತೀಯೇ" ಎಂದು ಹೇಳಿದನು. ಆಗ ಶ್ರೀವೇದವ್ಯಾಸ-ದೇವರೂ ಕೃಷ್ಣಾಭಿಪ್ರಾಯವನ್ನು ಅನುಮೋದಿಸಿ ಅದರಂತೆಯೇ ಹೇಳಿದರು. ಶ್ರೀಹರಿಯರೂಪದ್ವಯರಾದ ಯಾದವಕೃಷ್ಣ ವಾಸಿಷ್ಠಕೃಷ್ಣರಿಂದ ಹೀಗೆ ಹೇಳಲ್ಪಟ್ಟ ಅಶ್ವತ್ಥಾಮನು, ಸತ್ಯವತೀ ಹೃದಯನಂದರಾದ ಶ್ರೀವೇದವ್ಯಾಸರನ್ನು ಉದ್ದೇಶಿಸಿ ಹೀಗೆ ವಿಜ್ಞಾಪಿಸಿದನು. "ಭಗವನ್ ಶ್ರೀಕೃಷ್ಣನಾಶವು ಮುಗಿದ ಮೇಲೆ (ಒಂದು ಸಾವಿರ ವರ್ಷಗಳಾದ ಮೇಲೆ) ನನಗೆ ನಿಮ್ಮ ಸಮಾಗಮವಾಗುವಂತಾಗಲಿ. ಯಥೇಚ್ಛವಾಗಿ ನನ್ನ ಸಂಗಮ(ಮಿಲನ)ವು ನಿಮ್ಮೊಡನಾಗಲಿ. ಈ ವಿಷಯದಲ್ಲಿ ವಿಘ್ನವು ಬರದಿರಲಿ, ಹಾಗೆ ಅನುಗ್ರಹಿಸಿರಿ" ಎಂದು ಪ್ರಾರ್ಥಿಸಿದನು. ಶ್ರೀವ್ಯಾಸರು ತಥಾಸ್ತು ಎಂದರು. ಆಗ ಅಶ್ವತ್ಥಾಮನು ಶ್ರೀವೇದ-ವ್ಯಾಸರಿಗೆ ನಮಸ್ಕರಿಸಿ ತಾನು ಹಿಂದೆ ಕಂಡ ಸ್ವಪ್ನವನ್ನು ಜ್ಞಾಪಿಸಿಕೊಳ್ಳುತ್ತಾ ಅವರಿಂದ ಬೀಳ್ಕೊಂಡು ತೆರಳಿದನು. ಅಶ್ವತ್ಥಾಮನು ಕನಸಿನಲ್ಲಿ ಏನು ಕಂಡನೆಂಬುದನ್ನೀಗ ವಿವರಿಸುವರು.

ಸ್ವಪ್ನದಲ್ಲಿ ಅವನು ಕಂಡ ಬಗೆ ಇಂತಿತ್ತು – ತಾನು (ಅಶ್ವತ್ಥಾಮನು) ದ್ರೌಪದಿಯ ಸುತರನ್ನು ಸಂಹಾರ ಮಾಡಿದ್ದು. ಆಗ ಅರ್ಜುನನು ದ್ರೌಪದಿಯನ್ನು ಸಮಾಧಾನ ಪಡಿಸಿ ತನ್ನನ್ನು ವಧಿಸುವುದಾಗಿ ಪ್ರತಿಜ್ಞೆ ಮಾಡಿ ಅದರಂತೆ ಬಂಧಿಸಿ ಶಿಬಿರಕ್ಕೆ ಕೊಂಡ್ಯೊಯ್ದುದು. ಅದನ್ನು ನೋಡಿದ ದ್ರೌಪದಿಯು ಇವನು ಗುರುಪುತ್ರನಾಗಿದ್ದಾನೆ. ಆದ್ದರಿಂದ ಇವನನ್ನು ಸಂಹರಿಸಬಾರದೆಂದು

ಹೇಳಿದ್ದು. ಆಗ ಭೀಮಸೇನನು 'ದ್ರೌಪದಿ ನಿನ್ನ ಮಾತು ಸಮಂಜಸವಲ್ಲ. ಇವನನ್ನು ಕ್ಷಮಿಸಿ ಬಿಡುವುದು ಯುಕ್ತವಲ್ಲ. ಇವನು ಖಂಡಿತ ವಧಾರ್ಹನಾಗಿದ್ದಾನೆ' ಎಂದು ಹೇಳಿದ್ದು, ಅನಂತರ ಶ್ರೀಕೃಷ್ಣನ ಅಪ್ಪಣೆಯಂತೆ ತನ್ನ ಶಿರೋಭೂಷಣವಾಗಿದ್ದ ಅಪೂರ್ವರತ್ನವನ್ನು ಕಿತ್ತುಕೊಂಡು ಅಲ್ಲಿಂದ ಓಡಿಸಿದ್ದು – ಇವೇ ಮೊದಲಾದ ತಾನು ಕನಸಿನಲ್ಲಿ ಕಂಡ ವಿಚಾರಗಳು ಈಗ ಸತ್ಯವಾಯಿತೆಂದು ತಿಳಿದು ಶಸ್ತ್ರಜ್ಞರಲ್ಲಿ ಉತ್ತಮನಾದ ಅಶ್ವತ್ಥಾಮನು, ಶ್ರೀಹರಿನಾರಾಣನನ್ನು ಧ್ಯಾನಿಸುತ್ತಾ ಶ್ರೀಕೃಷ್ಣನು ಹೇಳಿದಂತೆ ದುರ್ಗಂಧಭೂಯಿಷ್ಠವಾದ ಶರೀರವುಳ್ಳವನಾಗಿ ವ್ರಣ(ಬಾಧೆಯು)ವ್ಯಸನವನ್ನು ಅನುಭವಿಸುತ್ತಾ ಹೊರಟು ಹೋದನೆಂದು ತಾತ್ಪರ್ಯ.

ಮುಂದೆ ಅಶ್ವತ್ಥಾಮನು ಶ್ರೀಕೃಷ್ಣನ ಶಾಪದಂತೆ ಒಂದು ಸಹಸ್ರವರ್ಷಾ ನಂತರ ಶ್ರೀವೇದವ್ಯಾಸದೇವರ ಸಂದರ್ಶನ ಮಾಡಿ ಅವರ ಶಿಷ್ಯತ್ವ ವಹಿಸಿ ದ್ವಾಪರೋತ್ತರದಲ್ಲಿ, ಅಂದರೆ ಭವಿಷ್ಯದ್ ದ್ವಾಪರಯುಗದಲ್ಲಿ ಸಕಲ ವೇದಗಳನ್ನೂ ವಿಭಾಗ ಮಾಡುವನು. ವೇದವಿಭಾಗ ಮಾಡಿದ ಮೇಲೆ ಶ್ರೀವೇದವ್ಯಾಸರ ಪ್ರಸಾದದಿಂದ ಸಪ್ತರ್ಷಿಗಳಲ್ಲಿ ಒಬ್ಬ ಮುನಿಯಾಗಿ ಅಚ್ಯುತನಿಷ್ಠನಾಗಿ, ಅಂದರೆ ಶ್ರೀಹರಿಯಲ್ಲಿ ಭಕ್ತಿದಾರ್ಢ್ಯದಿಂದ, ಸ್ವರೂಪದಿಂದ ಶ್ರೀರುದ್ರದೇವರಲ್ಲಿ ಏಕೀಭಾವ(ಐಕ್ಯ)ವನ್ನು ಹೊಂದುವನು. ಕೃಪಾಚಾರ್ಯರೂ ಸಹ ಪಾಂಡವರನ್ನು ಸೇರಿ ಗೌರವದಿಂದ ಅವರಿಂದ ಪೂಜಿತನಾಗಿ ಪಾಂಡವರ ವಂಶದಲ್ಲಿ ಬರುವ (ಕ್ಷೇಮಕಾಂತ ರಾಜನವರೆಗೆ) ರಾಜರುಗಳಿಗೆ ಆಚಾರ್ಯನಾಗುವನು. ಅರ್ಥಾತ್ ಶಾಸ್ತ್ರಾಚಾರರತರಾಗಿ ಆಚಾರ್ಯಸ್ಥಾನವನ್ನು ಅಲಂಕರಿಸುವನು. ಪುನಃ ಪಾಂಡವರ ವಂಶವು ನಷ್ಟವಾದ ತರುವಾಯ ಶ್ರೀಬಾದರಾಯಣರ ಶಿಷ್ಯತ್ವವನ್ನು ವಹಿಸಿ ಶ್ರೀವೇದವ್ಯಾಸದೇವರನ್ನು ಭಜಿಸುತ್ತಾ, ಸೋದರಳಿಯನಾದ ಅಶ್ವತ್ಥಾಮ ಸಹಿತನಾಗಿ ತಾನೂ ಸಹ ಸಪ್ತರ್ಷಿಗಳಲ್ಲಿ ಒಬ್ಬ ಋಷಿಯಾಗುತ್ತಾನೆ. ಅದು ಸರಿ. ಅಶ್ವತ್ಥಾಮಕೃಪರ ಭಾವಿ ಜೀವನಾದಿಗಳು ತಿಳಿದಂತಾಯಿತು. ಅವರ ಜೊತೆಗಿದ್ದ ಕೃತವರ್ಮನೇನಾದನು? ಎಂದರೆ ಆ ಕೃತವರ್ಮನು ಶ್ರೀಕೃಷ್ಣನನ್ನು ಪ್ರಾರ್ಥಿಸಿ ಅವನ ಸಮ್ಮತಿ ಪಡೆದು ತನ್ನ ವಾಸಸ್ಥಳವಾದ ದ್ವಾರಕಾನಗರಕ್ಕೆ ಹೋಗಿ ಅಲ್ಲಿ ವಾಸಮಾಡಿದನು ಎಂದು ತಿಳಿಯಬೇಕು.

ಇವೆಲ್ಲವೂ ಜರುಗಿದ ಮೇಲೆ ಇತ್ತ ಅಶ್ವತ್ಥಾಮನಿಂದ ಕಿತ್ತುಕೊಂಡ ಪ್ರಭಾವಶಾಲಿಯಾದ ಆ ಮಣಿಯನ್ನು ಭೀಮಸೇನನು ದ್ರೌಪದೀದೇವಿಗೆ ಕೊಟ್ಟನು. ಮತ್ತು ಪುತ್ರಶೋಕಯುಕ್ತಳಾದ ಅವಳನ್ನು ಸಮಾಧಾನ ಪಡಿಸಿದನು. ದ್ರೌಪದಿಯು ತನ್ನ ಸುತರ ವಧದಿಂದ ಉಂಟಾಗಿದ್ದ ಕೋಪವನ್ನು ಬಿಟ್ಟು ಶಾಂತಳಾದಳು. ಮತ್ತು ಭೀಮಸೇನನು ತನಗೆ ಕೊಟ್ಟ ಮಣಿಯನ್ನು ಧರ್ಮರಾಜನಿಗೆ ಅರ್ಪಿಸಿದಳು. ದ್ರೌಪದಿಯು ಯುಧಿಷ್ಠಿರನಿಗೆ ಆ ರತ್ನವನ್ನು ಕೊಟ್ಟ ಕಾರಣವನ್ನು ಈಗ ಹೇಳುವರು. ತನಗೆ ರಾಜಾರ್ಹವಾದ ಆ ದಿವ್ಯ ಮಣಿಯನ್ನು ಭೀಮನು ಕೊಟ್ಟಿದ್ದನ್ನು ಲೌಕಿಕರು ಮತ್ತು ಧರ್ಮರಾಜನು ಭೀಮನು ಸ್ತ್ರೀಪಕ್ಷಪಾತದಿಂದ ಮಣಿಯನ್ನು ದ್ರೌಪದಿಗೆ ಕೊಟ್ಟನೆಂದು ಯಾರೂ ಶಂಕಿಸಬಾರದು ಎಂದು ಪತಿಯ ಹಿತದಲ್ಲಿ ರತಳಾದ ದ್ರೌಪದೀದೇವಿಯು, ಆ ಮಣಿಯು ರಾಜಾರ್ಹವಾದುದರಿಂದ ಅದು ಮಹಾರಾಜನಾದ ಯುಧಿಷ್ಠಿರನಲ್ಲಿರುವುದೇ ಯುಕ್ತವೆಂದು ಭಾವಿಸಿ ಅದನ್ನು ಧರ್ಮರಾಜನಿಗೆ ಅರ್ಪಿಸಿದಳು ಎಂದು ತಿಳಿಯಬೇಕು. ಆಗ ಧರ್ಮರಾಜನು ಆ ಮಣಿಯನ್ನು ತನ್ನ ಶಿರದಲ್ಲಿ (ಕಿರೀಟದಲ್ಲಿ) ಧರಿಸಿ ಸೂರ್ಯನಂತೆ ಪ್ರಕಾಶಿಸಿದನು.

ಅನಂತರ ವೇದೇಶ್ವರರಾದ ಶ್ರೀಬಾದರಾಯಣರು ಹಾಗೂ ಯಾದವಶ್ರೇಷ್ಠನಾದ ಶ್ರೀಕೃಷ್ಣನಿಂದ ಸಮೇತರಾಗಿ ಪಾಂಡವರು ಭಾರ್ಯೆಯರಿಂದೊಡಗೂಡಿ ತಮ್ಮ ರಾಜಧಾನಿಯಾದ ಹಸ್ತಿನಾವತಿಗೆ ಪ್ರಯಾಣ ಬೆಳೆಸಿದರು. ತಮ್ಮ ಗೇಹ (ಅಂದರೆ ಅಂತರಂಗ)ದಲ್ಲಿದ್ದ ದುರ್ಯೋಧನಾದಿ ಶತ್ರುಗಳನ್ನು ಹತಗೊಳಿಸಿ, ಭಾಗವತಾಗ್ರೇಸರಾಗಿ ತಮ್ಮ ಹೃದಯದಲ್ಲಿರುವ ಕಾಮ-ಕ್ರೋಧಾದಿಗಳನ್ನು ಸಂಹರಿಸಿ, ಶ್ರೀಹರಿಯು ಅಪರೋಕ್ಷವನ್ನು – ಮೋಕ್ಷವನ್ನು ಕುರಿತು ಹೋಗುವಂತೆ, ಹಸ್ತಿನಾವತಿ ಪಟ್ಟಣಕ್ಕೆ ತೆರಳಿದರೆಂದು ಭಾವ.

ಆಗ ಹಸ್ತಿನಾಪುರದ ಅರಮನೆಯಲ್ಲಿ ಪಾಂಡವರು ವಿಚಿತ್ರವೀರ್ಯನ ಕುಮಾರನೂ, ತಮ್ಮ ದೊಡ್ಡಪ್ಪನೂ ಆದ ಧೃತರಾಷ್ಟ್ರನಿಗೆ ವಂದಿಸಹತ್ತಿದರು. ಮೊದಲು ಧರ್ಮರಾಜನು ಧೃತರಾಷ್ಟ್ರನಿಗೆ ನಮಸ್ಕಾರ ಮಾಡಿದನು. ಆ ತರುವಾಯ ಭೀಮಸೇನನು ವಂದಿಸಲು ಮುಂದಾದಾಗ ಶ್ರೀಕೃಷ್ಣನು ಅವನ ಭುಜವನ್ನು ಹಿಡಿದು ತಡೆದು ನಿಲ್ಲಿಸಿ ಭೀಮಸೇನನ ಉಕ್ಕಿನಮೂರ್ತಿಯನ್ನು ರಾಜಾ ಧೃತರಾಷ್ಟ್ರನ ಮುಂದೆ ಇಡಿಸಿದನು. ಆ ಕಬ್ಬಿಣದ ಭೀಮನ ಪ್ರತಿಮೆಯು ಯಾವುದು? ಅಲ್ಲಿಗೆ ಹೇಗೆ ಬಂದಿತು? ಎಂದರೆ ಹಿಂದೆ ದುರ್ಯೋಧನನು ಭೀಮನನ್ನು ಪರಾಜಯಗೊಳಿಸಲು ಗದಾವಿದ್ಯಾಭ್ಯಾಸಕ್ಕೆ ಸಹಾಯಕವಾಗಲೆಂದು ತಯಾರು ಮಾಡಿಸಿ ತನ ಗದಾಭ್ಯಾಸ ಮಂದಿರದಲ್ಲಿ ಇಟ್ಟುಕೊಂಡಿದ್ದನು. ಅದನ್ನು ಬಲ್ಲ ಶ್ರೀಕೃಷ್ಣಪರಮಾತ್ಮನು ಅದನ್ನು ತರಿಸಿ ಧೃತರಾಷ್ಟ್ರನ ಮುಂದೆ ಇಡಿಸಿದನೆಂದು ತಿಳಿಯಬೇಕು. ಆಗ ಧೃತರಾಷ್ಟ್ರನು ತನ್ನ ಮುಂದೆ ಭೀಮಸೇನನೇ ನಿಂತಿರುವನೆಂದು ಭಾವಿಸಿ ತನ್ನ ಕುಮಾರನಾದ ದುರ್ಯೋಧನನ್ನು ಸಂಹರಿಸಿದ ಭೀಮನ ಮೇಲೆ ಸೇಡು ತೀರಿಸಿಕೊಳ್ಳಲು ಆ ಪ್ರತಿಮೆಯನ್ನು ಭೀಮನೆಂದು ಭಾವಿಸಿ ಅದನ್ನು ಗಟ್ಟಿಯಾಗಿ ತನ್ನ ಬಾಹುಗಳಿಂದ ತಬ್ಬಿಹಿಡಿದು, ಪುಡಿಪುಡಿಮಾಡಿ 'ಹಾಹಾ ಭೀಮ ನೀನು ಸತ್ತೆಯಾ?' ಎಂದು ಕೂಗಿ ಕೆಳಗೆ ಬಿದ್ದುಬಿಟ್ಟನು.

ಆಗ ಭಗವಾನ್ ಶ್ರೀಕೃಷ್ಣನು ಧೃತರಾಷ್ಟ್ರನನ್ನು ಅಪಹಾಸ್ಯ ಮಾಡುತ್ತಾ "ಧೃತರಾಷ್ಟ್ರ! ಭೀಮಸೇನನು ಸಾಯಲಿಲ್ಲ. ನೀನೇ ಏಕೆ? ದೇವತೆಗಳು, ದೈತ್ಯರು ಹೀಗೆ ಯಾರೂ ಭೀಮನನ್ನು ಸಾಯಿಸಲು ಶಕ್ತರಲ್ಲ. ಹೇ ರಾಜನ್! ಈಗಲೀಗ ನಿನ್ನ ದುರ್ಬುದ್ಧಿಯು ಪ್ರಕಟವಾಯಿತು. ಎಲವೋ ರಾಜ! ನಿನ್ನ ಪುತ್ರರೆಲ್ಲರೂ ನಾಶವಾಗಿ ಹೋದ ಮೇಲೂ, ಈಗಲೂ ನಿನ್ನ ಪಾಪಬುದ್ಧಿಯು ಹೋಗಲಿಲ್ಲವಲ್ಲ, ಇದು ಪರಮಾಶ್ಚರ್ಯಕರ ಎಂದು ಹೇಳಿದನು. ಮುಂದುವರೆದು ಶ್ರೀಅಚ್ಯುತನು, "ಧೃತರಾಷ್ಟ್ರ ! ನಿನ್ನ ಬುದ್ಧಿದೋಷದಿಂದ ಪುತ್ರ ವ್ಯಾಮೋಹದಿಂದ ಅತ್ಯಂತ ಅಧಾರ್ಮಿಕರೂ, ಪಾಪಿಗಳೂ ಆದ ಪುತ್ರರ ಮಾತಿಗೆ ಮರುಳಾಗಿ ಅವರೊಡನೆ ಸೇರಿ ಅತಿಪಾಪಕಾರ್ಯಗಳನ್ನು ಮಾಡಿಸುತ್ತಾ ಅಭಿವೃದ್ಧಿಸಿದೆ. ಈಗ ನೀನು ಪುತ್ರರ ವಶನಾಗಿ ಮಾಡಿದ ಪಾಪದ ಫಲವನ್ನು ಅನುಭವಿಸುತ್ತಿದ್ದೀಯೆ. ಆದುದರಿಂದ ಈಗಲಾದರೂ ಭೀಮಸೇನನ ಮೇಲಿನ ಕೋಪವನ್ನು ಬಿಡು" ಎಂದು ಹೇಳಿದನು. ಅನಂತರ ಭೀಮಸೇನ, ಅನುಜರಾದ ಅರ್ಜುನ, ನಕುಲ, ಸಹದೇವಾದಿಗಳು ಮತ್ತು ದ್ರೌಪದಿಯೂ ಧೃತರಾಷ್ಟ್ರನಿಗೆ ನಮಸ್ಕರಿಸಿದರು. ಶ್ರೀಕೃಷ್ಣನ ಮಾತನ್ನು ಮನ್ನಿಸಿ ಪಶ್ಚಾತ್ತಾಪನಾದ ಧೃತರಾಷ್ಟ್ರನು ಶಾಂತನಾಗಿ ಭೀಮಸೇನನನ್ನು ಕರೆದು ಆದರಿಸಿದನು.

ಶ್ರೀಕೃಷ್ಣನು ವೃಕೋದರನನ್ನು ತಡೆದು ಭೀಮನ ಉಕ್ಕಿನ ಪ್ರತಿಮೆಯನ್ನೇಕೆ ಇಡಿಸಿದ? ಎಂದರೆ ಭೀಮನು ವಜ್ರಕ್ಕಿಂತ ದೃಢವಾದ ಹಸ್ತಪಾದಾದಿ ಭಂಗವಿಲ್ಲದವನಾಗಿದ್ದರೂ, ಅಂದರೆ ಯದ್ಯಪಿ ಅವನು ಧೃತರಾಷ್ಟ್ರನ ಭುಜಪಂಜರದಲ್ಲಿ ಸಿಕ್ಕಿದ್ದರೂ, ಅವನಿಗೇನೂ ಆಗುತ್ತಿರಲಿಲ್ಲ. ಹಾಗಾಗಿದ್ದರೆ ಧೃತರಾಷ್ಟ್ರನ ದುಷ್ಟಬುದ್ಧಿಯು ಪ್ರಕಟವಾಗುತ್ತಿರಲಿಲ್ಲ. ಅದು ಸರ್ವರಿಗೂ ವಿದಿತವಾಗಬೇಕೆಂದು ಆಲೋಚಿಸಿಯೇ ಭೀಮನ ಉಕ್ಕಿನಪ್ರತಿಮೆಯನ್ನು ಶ್ರೀಕೃಷ್ಣನು ಧೃತರಾಷ್ಟ್ರನ ಮುಂದಿರಿಸಿದನು. ಅದರಿಂದ ವಂಚಿತನಾಗಿ ಧೃತರಾಷ್ಟ್ರನು ಭೀಮನನ್ನು ಕೊಲ್ಲಲೆಂದು, ಆ ಪ್ರತಿಮೆಯೇ ಭೀಮನೆಂದು ನಂಬಿ ತನ್ನ ಬಲಾಢ್ಯ-ಬಾಹುಗಳಲ್ಲಿ ಬಂಧಿಸಿ (ಅದುಮಿ ಹಿಡಿದು) ಅದನ್ನು ಪುಡಿಪುಡಿ ಮಾಡಿ, ಭೀಮನು ಮೃತನಾದನೆಂದು ಬಗೆದನು. ಆದರಿಂದಾಗಿ ಅವನ ದುಷ್ಟಬುದ್ಧಿಯು ಪ್ರಕಟವಾಗುವಂತಾಯಿತೆಂದು ಭಾವ. ಆಗ ಭೀಮನ ಮೇಲಿನ ಹಿಂದಿನ ಕ್ರೋಧವನ್ನು ತ್ಯಜಿಸಿ ಅವನು ಭೀಮಧರ್ಮರಾಜಾದಿಗಳೆಲ್ಲರನ್ನು ಪ್ರೀತಿಯಿಂದ ಆಶೀರ್ವದಿಸಿದನು.

ಆಗ ಧರ್ಮರಾಜನು "ನಾನು ಕುಲನಾಶಕನು. ಪಾಪಿಯಾದ ನಾನು ನಿನ್ನ ಶಾಪಕ್ಕೆ ಅರ್ಹನಾಗಿದ್ದೇನೆ' ಎಂದು ಹೇಳಿ ಗಾಂಧಾರಿಗೆ ನಮಸ್ಕರಿಸಿದನು. ಆಗ ಅವಳು ಕಣ್ಣಿಗೆ ಕಟ್ಟಿಕೊಂಡಿದ್ದ ಬಟ್ಟೆಯ ಒಳಗಿದ್ದ ಕಣ್ಣುಗಳಿಂದಲೇ ಕೋಪದಿಂದ ಧರ್ಮರಾಜನ ಶೋಭನವಾದ ಪಾದಾಂಗುಲಿಗಳನ್ನು ನೋಡಿದಳು. ಆಗ ಅವಳ ಕ್ರೋಧಾಗ್ನಿಯಿಂದ ಯುಧಿಷ್ಠಿರನ ಪಾದ ನಖಗಳು (ಉಗುರುಗಳು) ದಗ್ಧವಾಗಿ ಧರ್ಮಜನು 'ಕುನಖಿ'ನಾದನು.

ಅನಂತರ ತನಗೆ ವಂದಿಸಿದ ಭೀಮನನ್ನು ಕುರಿತು, 'ಭೀಮ! ಅಧರ್ಮದಿಂದ ನನ್ನ ಮಗನನನ್ನು ಹೇಗೆ ನೀನು ಕೊಂದುಹಾಕಿದೆ?' ಎನಲು ಭೀಮನು ಅವಳ ಕೋಪ ಪರಿಹಾರಕ್ಕಾಗಿ ಮೊದಲು ಅವಳಿಗೆ ವಂದಿಸಿ, 'ಪ್ರಾಣಾಪತ್ಕಾಲದಲ್ಲಿ ಹರಿದ್ವೇಷಿಗಳಾದ ಪಾಪಿಗಳನ್ನು ಅಧರ್ಮದಿಂದ ಸಂಹರಿಸಿದರೂ ಅದು ಪಾಪವಾಗುವುದಿಲ್ಲ. ಆದರೂ ನಿನ್ನ ಮಗನು ಅಧರ್ಮದಿಂದ ಮೃತನಾಗಲಿಲ್ಲವೆಂದು ತಿಳಿ' ಎಂದು ಹೇಳಿದನು. ಬಲವಂತನಾದ ಭೀಮನಿಗೆ ಪ್ರಾಣನಾಶ ಸಂದೇಹ-ವೆಲ್ಲಿಯದು? ಎಂಬ ಅಭಿಪ್ರಾಯದಿಂದ ಹೇಳುವರು. 'ಅಮ್ಮಾ! ಪ್ರತಿಜ್ಞಾಹಾನಿಯನ್ನು ಬಿಟ್ಟು ನನಗೆ ಪ್ರಾಣಹಾನಿ ಸಂದೇಹ-ವಿಲ್ಲ' ಎಂದು ತಿಳಿದ ಭೀಮಸೇನನು ಮತ್ತೆ ಗಾಂಧಾರಿಗೆ ಹೇಳಿದನು – "ಪ್ರತಿಜ್ಞೆಯನ್ನು ಅತಿಕ್ರಮಿಸದೆ ಯುದ್ಧದಲ್ಲಿ ಶತ್ರು-ಗಳನ್ನು ಕೊಲ್ಲುವುದು ಧರ್ಮವಾಗಿದೆ. ಕ್ಷತ್ರಿಯನಾದ ನನಗೆ ಅಧರ್ಮವೆಲ್ಲಿದೆ? ಪ್ರತಿಜ್ಞಾಹಾನಿಯಾದರೆ ಮಾತ್ರ ನನ್ನ ಜೀವನವು ನಾಶವಾದಂತೆ!" ಹರಿದ್ವೇಷಿಗಳಾದ ಪಾಪಿಗಳನ್ನು ಶುದ್ಧಧರ್ಮದಿಂದ ಕೊಲ್ಲಬೇಕೆಂಬ ಶ್ರುತಿಯನ್ನು ಉದಾಹರಿಸಿ ಭೀಮನು 'ಶತ್ರುಸಂಹಾರವು ಪಾಪವಾಗುವುದಿಲ್ಲ' ಎಂದು ಹೇಳಿದನು ಮತ್ತು 'ಪ್ರತಿಜ್ಞೆಯನ್ನು ಬಿಟ್ಟು ಗದಾಯುದ್ಧದಲ್ಲಿ ನಾಭಿಯ ಕೆಳಗೆ ಹೊಡೆದು ಕೊಲ್ಲುವುದು ಧರ್ಮವೇ ಆಗಿದೆ. ಧಾರ್ಮಿಕರನ್ನು ಸಂಹರಿಸಿದಂತೆ, ಪಾಪಿಗಳಾದ ಹರಿದ್ವೇಷಿಗಳ ಸಂಹಾರವು ಪಾಪವಾಗುವುದಿಲ್ಲ. 'ನಿಕೃತ್ಯಾ ನಿಕೃತಿಂ' ಎಂಬ ಪ್ರಮಾಣದಂತೆ ಕಪಟಿಗಳಾದ, ಸಂಹಾರಯೋಗ್ಯರಾದ ಅಸುರ-ರನ್ನು "ನಿಕೃತ್ಯಾ ನಿಕೃತಿಂ ಹನ್ಯಾನ್ನಿಕೃತ್ಯಾ ನೈವ ಧಾರ್ಮಿಕಾನ್" ಎಂದು ಶ್ರೇಷ್ಠವಾದ ಪೈಂಗಿಶ್ರುತಿಯು ಹೇಳುವುದು. ಇದು ಅಪೌರುಷೇಯವಾದುದು" ಎಂದು ಹೇಳಿದನು.

ಆಗ ಗಾಂಧಾರಿಯು "ನೀನು ಯುದ್ಧದಲ್ಲಿ ದುಶ್ಶಾಸನನ ರಕ್ತಪಾನ ಮಾಡಿದೆಯಲ್ಲ, ಅದು ಪಾಪವಲ್ಲವೇ?" ಎಂದಾಗ, ಭೀಮನು "ನಾನು ನರರಕ್ತವನ್ನು ಪಾನ ಮಾಡಲಿಲ್ಲ. ಅಮ್ಮಾ! ನಿನ್ನ ಮಗನ ರಕ್ತವು ನನ್ನ ಹಲ್ಲುಗಳನ್ನು ದಾಟಿ ಒಳಗೆ ಹೋಗಲಿಲ್ಲ. ನಿನ್ನ ರಕ್ತವನ್ನು ಕುಡಿಯುತ್ತೇನೆ' ಎಂದು ನಾನು ಮಾಡಿದ ಪ್ರತಿಜ್ಞೆಯನ್ನು ಪಾಲಿಸಲು ರಕ್ತಪಾನ ಮಾಡಿದವನಂತೆ ನಟನೆ ಮಾಡಿದೆನಷ್ಟೇ?" ಎಂದು ಮತ್ತೆ ಬೇರೊಂದು ಕಾರಣವನ್ನು ಹೇಳಿ "ಯುದ್ಧಭೂಮಿಯಲ್ಲಿದ್ದ ಶತ್ರುಗಳನ್ನು ಭಯಗೊಳಿಸಲು ರಕ್ತಪಾನ ಮಾಡಿದವನಂತೆ ಪ್ರದರ್ಶನ ಮಾಡಿದೆ. ರಕ್ತಪಾನ ಮಾಡುವೆನೆಂಬ ಪ್ರತಿಜ್ಞಾಪಾಲನ ರೂಪವಾದ ರಕ್ತಪಾನ ಕಾರ್ಯವು ಧರ್ಮವಾದದ್ದೇ ಆಗಿದೆ." ದುಷ್ಟಜನರ ವಿಷಯದಲ್ಲಿ ಹಾಗೆ ಮಾಡುವುದು ಯುಕ್ತವೆಂದು ವೇದದಲ್ಲಿ ಪ್ರತಿಪಾದ್ಯವಾಗಿದೆ. ಅದು ಪಾಪಿಗಳನ್ನು ಕುರಿತು ಹೇಳುವುದೇ ವಿನಃ ಸಜ್ಜನರನ್ನು ಕುರಿತು ಅಲ್ಲವೆಂದು ಭಾವವು. ಭೀಮನ ಮಾತು ಕೇಳಿ ಗಾಂಧಾರಿಯು "ಭೀಮಸೇನ! ಜಾತ್ಯಂಧನಾದ ನನ್ನ ಪತಿ ಮತ್ತು ನಾನಾಗಿ ನೇತ್ರಬಂಧನ ಮಾಡಿಕೊಂಡು ಅಂಧಳಾದ ನಾನು, ಹೀಗೆ ಕುರುಡರಾದ ನಮ್ಮಿಬ್ಬರ ನೂರಾರು ಮಕ್ಕಳನ್ನು ಸಂಹರಿಸಿದ ನೀನು ನಮಗೆ ಊರುಗೋಲಾಗಬೇಕಾದ ಒಬ್ಬ ಪುತ್ರನನ್ನೂ ಉಳಿಸಲಿಲ್ಲವಲ್ಲ" ಎಂದಾಕ್ಷೇಪಿಸಲು, ಭೀಮನು "ಅಮ್ಮಾ ನಾನು ಪಾಪಿಷ್ಠರಾದ ವಧಾರ್ಹರಾದವರೆಲ್ಲರನ್ನೂ ಸಂಹರಿಸಿದೆನು" ಎಂದಾಗ, ಗಾಂಧಾರಿಯು ಮತ್ತೆ "ಭೀಮ ನನ್ನ ಮಕ್ಕಳಲ್ಲಿ ನಿನಗೆ ಅಪರಾಧ ಮಾಡದವರು ಒಬ್ಬರೂ ಇರಲಿಲ್ಲವೇ?" ಎಂದು ಪ್ರಶ್ನಿಸಿದಳು. ಆಗ ಭೀಮನು "ನಿನ್ನ ಎಲ್ಲ ಮಕ್ಕಳೂ ಸೇರಿಕೊಂಡು ದುರಾಲೋಚನೆ ಮಾಡಿ, ದೂತನಾಗಿ ಬಂದಿದ್ದ ಭಗವಾನ್ ಶ್ರೀಕೃಷ್ಣನನ್ನೇ ಬಂಧಿಸಲು ನಿಶ್ಚಯಿಸಿದರು. ಇದರಂತೆ ಇನ್ನೂ ಅನೇಕ ಪಾಪಗಳನ್ನು ಮಾಡಿದರು. ಸಭೆಯಲ್ಲಿ ಧರ್ಮಾಧರ್ಮಗಳನ್ನು ಬಿಡಿಸಿ ಹೇಳುತಿದ್ದ ಶ್ರೀವಾಸು-ದೇವನನ್ನು ನಿನ್ನೆಲ್ಲ ಪುತ್ರರೂ ಪುನಃ ಪುನಃ ತಿರಸ್ಕರಿಸಿ, ಅವಮಾನಗೊಳಿಸಿ, ದುರ್ಯೋಧನನೊಡನೆ ಎಲ್ಲರೂ ಸಭೆಯನ್ನು ಬಿಟ್ಟು ಹೋದರು. ಆದ್ದರಿಂದ ಅಪರಾಧ ಮಾಡದ ಯಾರೊಬ್ಬರೂ ನಿನ್ನ ಪುತ್ರರಲ್ಲಿ ಕಾಣಲಿಲ್ಲ. ತಾಯಿ! ದುಷ್ಟರಾದ ನಿನ್ನ ಮಕ್ಕಳನ್ನು ಸನ್ಮಾರ್ಗಗಾಮಿಗಳಾಗುವಂತೆ ಶಿಕ್ಷಣ ಕೊಡಲು ಅಸಮರ್ಥಳಾಗಿದ್ದರೂ, ನೀನು ನನ್ನ ಮೇಲೆ ಏಕೆ ವ್ಯರ್ಥವಾಗಿ ಕೋಪಗೊಳ್ಳುವೆ?" ಎಂದು ಹೇಳಿದನು. ಆಗ ಶ್ರೀವೇದವ್ಯಾಸದೇವರ ಉಪದೇಶದಿಂದ ಗಾಂಧಾರಿಯ ಕೋಪವು ಪರಿ-ಹಾರವಾಯಿತು. ಅಂತೆಯೇ ಅವಳು ಉತ್ತರ ಹೇಳದೆ ಮೌನವನ್ನು ವಹಿಸಿದಳು. ಆಗ ಪಾಂಡವರೆಲ್ಲರೂ ಗಾಂಧಾರಿಗೆ

ನಮಸ್ಕರಿಸಿದ ಮೇಲೆ ಅವಳು ಶಾಂತಳಾದಳು. ಸೊಸೆಯರಿಂದೊಡಗೂಡಿದ ಗಾಂಧಾರಿಯನ್ನು ಪುರಸ್ಕರಿಸಿ, ಧೃತರಾಷ್ಟ್ರ ವಿದುರಾದಿಗಳು ಪಟ್ಟಣದಲ್ಲಿರುವಂತೆ ಮಾಡಿ, ಕುಂತಿ ಮುಂತಾದವರೊಡನೆ ಭಾರ್ಯಾಸಹಿತರಾದ ಪಾಂಡವರು ಕೃಷ್ಣದ್ವಯರಿಂದ ಕೂಡಿ ರಣಭೂಮಿಗೆ ಆಗಮಿಸಿದರು. ಆಗ ವೇದವ್ಯಾಸರು ಗಾಂಧಾರಿಯ ತಪಸ್ಸಿನ ಸಾಮರ್ಥ್ಯವನ್ನು ಅರಿತು ಅವಳ ತಪಸ್ಸು ವ್ಯಯ(ನಾಶ)ವಾಗುವಂತೆ ಮಾಡಲು ಗಾಂಧಾರಿಗೆ ದಿವ್ಯಚಕ್ಷುಸ್ಸನ್ನು ಅನುಗ್ರಹಿಸಿದರು.

ಆಗ ಗಾಂಧಾರಿಯು ದುರ್ಯೋಧನಾದಿ ತನ್ನ ಪುತ್ರರು ಮೃತರಾಗಿ ಬಿದ್ದಿರುವುದನ್ನು ಕಂಡು ದುಃಖಾರ್ತಳಾಗಿ, "ಕೃಷ್ಣ! ಈ ಅನರ್ಥಕ್ಕೆಲ್ಲಾ, ಅಂದರೆ ನನ್ನ ಪುತ್ರರ ನಾಶಕ್ಕೆ ನೀನೇ ಕಾರಣನಾಗಿದ್ದೀಯೆ. ಆದ್ದರಿಂದ ನಿಮ್ಮ ವಂಶದವರೂ ಪರಸ್ಪರ ಹೊಡೆದಾಡಿ ನಾಶವಾಗಲಿ" ಎಂದು ಕೃಷ್ಣನನ್ನು ಶಪಿಸಿದಳು. ಯದ್ಯಪಿ ಶ್ರೀಕೃಷ್ಣನು ಅವಳ ಶಾಪವನ್ನು ವ್ಯರ್ಥಗೊಳಿಸಲು ಸಮರ್ಥನಾಗಿದ್ದರೂ ಸ್ವತಃ ತಾನೇ ಯಾದವರು ಪರಸ್ಪರ ಹೊಡೆದಾಡಿ ಸಾಯಬೇಕೆಂದು ಸಂಕಲ್ಪಿಸಿದ್ದರಿಂದ ಅವಳ ಮಾತಿಗೆ ಪ್ರತಿ ಹೇಳದೆ 'ಗಾಂಧಾರಿ, ನಿನ್ನ ಶಾಪದಂತೆಯೇ ಯಾದವರೆಲ್ಲರೂ ನಾಶವಾಗಲಿ' ಎಂದು ಸಮ್ಮತಿಸಿದನು. ಗಾಂಧಾರಿಯು ಶಾಪಪ್ರದಾನ ಮಾಡಿದ್ದರಿಂದ ಅವಳ ತಪಸ್ಸು ನಷ್ಟವಾಯಿತು. ಪತಿಸಹಿತಳಾದ ಅವಳು ನೀಚಳಾದಳು. ತಮ್ಮ ಯೋಗ್ಯತೆಗೆ ಮೀರಿ ತಪಸ್ಸು ಮುಂತಾದವುಗಳನ್ನು ಮಾಡಿ ಅಭಿವೃದ್ಧಿಸುವವರನ್ನು ಕಂಡು 'ಏಧಮಾನದ್ವಿಟ್' ಎಂದು ಖ್ಯಾತನಾದ ಭಗವಂತನು ಅಂತಹವರ ಆಧಿಕ್ಯವನ್ನು, ಗುಣಗಳನ್ನು ನಾಶಪಡಿಸುವನು. ಇದರಿಂದ ಶ್ರೀವೇದವ್ಯಾಸರ ತಂತ್ರವು (ದಿವ್ಯ ಚಕ್ಷಸ್ಸು ಕೊಟ್ಟಿದ್ದು) ಫಲಿಸಿ ಅವಳ ತಪವು ನಷ್ಟವಾಗುವಂತಾಯಿತು.

ಆ ತರುವಾಯ ಎಲ್ಲ ಸ್ತ್ರೀಯರೂ ತಮ್ಮ ತಮ್ಮ ಪತಿಗಳ ದೇಹಗಳನ್ನು ಅಪ್ಪಿಕೊಂಡು ರೋದನ ಮಾಡಿದರು. ಆಗ ಶ್ರೀಕೃಷ್ಣನು ದುರ್ಯೋಧನಾದಿಗಳ ಪತ್ನಿಯರ ಪ್ರಲಾಪವನ್ನು ದ್ರೌಪದಿಗೆ ತೋರಿಸಿದನು. ಆಗ ದ್ರೌಪದಿಯು ಷಡ್ಗುಣೈಶ್ವರ್ಯ-ಪೂರ್ಣನಾದ ಶ್ರೀಕೃಷ್ಣಪರಮಾತ್ಮನನ್ನು ಭಕ್ತಿಯಿಂದ ಸ್ತುತಿಸಿದಳು.

ಆ ನಂತರ ಪಂಚಪಾಂಡವರು, ಪ್ರಸಿದ್ಧರಾದ, ಸಂತರಾದ ದ್ರೋಣಾಚಾರ್ಯ, ಶಲ್ಯರಾಜಾದಿಗಳ ದೇಹವನ್ನು ದಹನ ಮಾಡಿದರು ಮತ್ತು ಧೃತರಾಷ್ಟ್ರಾದಿಗಳನ್ನು ಮುಂದೆ ಮಾಡಿಕೊಂಡು ದುರ್ಯೋಧನಾದಿಗಳ ದೇಹಗಳನ್ನು ದಹನ ಮಾಡಿಸಿದರು. ಇನ್ನು ಉಳಿದವರ ದೇಹಗಳನ್ನು ತಮ್ಮ ಐದು ಜನ ಸೂತರಿಂದ ಸರಸ್ವತೀ ನದಿಗೆ ಹಾಕಿದರು. ಧರ್ಮರಾಜನು ಯುದ್ಧದಲ್ಲಿ ಮೃತರಾದವರನ್ನು ಸರಸ್ವತೀ ನದಿಗೆ ಹಾಕಲು ತಮ್ಮ ಸೂತರನ್ನು ಯೋಜನೆ ಮಾಡಿದ್ದು ಸರಿ. ಆದರೆ ಯುಧಿಷ್ಠಿರಾದಿ ಮೂವರು ತಮ್ಮ ಬಾಂಧವರಾದ ಹೆಂಗಸರು ಮಕ್ಕಳನ್ನು ಸರಸ್ವತೀ ನದಿಯಲ್ಲಿ ಹಾಕಲು ಮತ್ತೇಕೆ ಸೂತರನ್ನು ನಿಯೋಜಿಸಿದರು? ಎಂದರೆ ಬಾಂಧವ್ಯ ಸ್ನೇಹದಿಂದ ಹಾಗೆ ಮಾಡಿಸಿದರೆಂದು ಭಾವ. ಶವಗಳು ಬಹಳವಾಗಿದ್ದರಿಂದ ಎಲ್ಲೆಲ್ಲಿ ಮೃತರಾದರೋ ಅವರೆಲ್ಲರ ಶವಗಳು ಅಲ್ಲಲ್ಲಿಯೇ ಉಳಿಯಿತು.

ಅನಂತರ ಪಾಂಡವರು ಧೃತರಾಷ್ಟ್ರಾದಿಗಳು ಗಂಗಾನದಿಯಲ್ಲಿ ಮೃತರಾದ ತಮ್ಮವರಿಗೆ ತಿಲೋದಕವನ್ನು ಕೊಟ್ಟರು. ಆಗ ಕುಂತೀದೇವಿಯು ಕರ್ಣನಿಗೂ ತಿಲೋದಕವನ್ನು ಕೊಡುವಂತೆ ಧರ್ಮರಾಜಾದಿಗಳಿಗೆ ಹೇಳಿದಳು ಮತ್ತು ಕರ್ಣನು ನಿಮ್ಮೆಲ್ಲರಿಗೂ ಜ್ಯೇಷ್ಠ ಸಹೋದರನೆಂದೂ ತಿಳಿಸಿದಳು. ಅವಳ ಮಾತನ್ನು ಕೇಳಿ ಧರ್ಮರಾಜನು ದುಃಖದಿಂದ ಹಾಹಾಕಾರ ಮಾಡಿ 'ಇನ್ನು ಮುಂದೆ ಎಲ್ಲಾ ಸ್ತ್ರೀಯರ ಹೃದಯದಲ್ಲೂ ರಹಸ್ಯ ಸಂಗತಿಯು ಗುಪ್ತವಾಗುಳಿಯದಂತಾಗಲಿ' ಎಂದು ಶಾಪ ನೀಡಿದನು. ಮತ್ತು 'ಅಮ್ಮಾ ನೀನು ಕರ್ಣನು ನಮ್ಮ ಅಣ್ಣನೆಂದು ಹೇಳದೆ ನಮ್ಮೆಲ್ಲರನ್ನೂ ಕೊಂದು ಬಿಟ್ಟೆ. ತಂದೆಗೆ ಸಮಾನನಾದ ಜ್ಯೇಷ್ಠನಾದ ಅಣ್ಣನನ್ನು ಸಂಹರಿಸಿದ ನಮಗೆ ಗತಿ ಯಾವುದು? ನಾವು ನರಕ ಭಾಗಿಗಳಾದೆವು" ಎಂದು ಮುಂತಾಗಿ ದುಃಖಿಸಿದನು.

ಹೀಗೆ ದುಃಖಿಸುತ್ತಿದ್ದ ಧರ್ಮರಾಜನಿಗೆ ಶ್ರೀಕೃಷ್ಣ ಮತ್ತು ನಾರದರು "ಧರ್ಮರಾಜ! ನಿಮಗಾವ ದೋಷವೂ ಇಲ್ಲ" ಎಂದು ದೋಷನಿರಾಕರಣ ವಾಕ್ಯಗಳಿಂದ ಶಾಂತನನ್ನಾಗಿ ಮಾಡಿದರು. ಕೃಷ್ಣನು ಕರ್ಣನ ಗುಣಾವಗುಣಗಳನ್ನು ತಿಳಿಸುತ್ತಾ, "ಸಂಧಾನವು ವಿಫಲವಾದಾಗ ನಾನು ಕರ್ಣನನ್ನು ಏಕಾಂತವಾಗಿ 'ನೀನು ಪಾಂಡವರಿಗೆಲ್ಲ ಅಗ್ರಜನು. ಕುಂತಿಯ ಜ್ಯೇಷ್ಠ ಪುತ್ರನು. ನೀನೇ ರಾಜನಾಗಿ ದೇಶವನ್ನು ಪಾಲನೆ ಮಾಡು. ನಿನ್ನ ಆಜ್ಞಾಧಾರಕರಾಗಿರುವಂತೆ ಮಾಡುತ್ತೇನೆ' ಎಂದು ಹೇಳಿದಾಗ, ಅವನು 'ನಾನು ರಾಜ್ಯವನ್ನು ಪಾಲಿಸುವುದಿಲ್ಲ. ದುರ್ಯೋಧನನಿಗಾಗಿ ಪ್ರಾಣಗಳನ್ನೇ ಬಿಡುತ್ತೇನೆ' ಮುಂತಾಗಿ ಹೇಳಿದನು. ಇದು ಅವನ ಗುಣಗಳಾಗಿದೆ. ಇದರಂತೆ ಅವನು ಅವೈಷ್ಣವರೂ, ಅಧಾರ್ಮಿಕರೂ ಆದ ದುರ್ಯೋಧನನನ್ನೇ ಅನುಸರಿಸಿ ಪಾಪಗಳೆಸಿದನು. ಇದು ಅವನ ದುರ್ಗುಣವೆಂದು ಹೇಳಿ, ಕರ್ಣನು ದುಷ್ಟನಾದ ಪಾಪಿ ದುರ್ಯೋಧನನ ಪಕ್ಷವಹಿಸಿ ತಾನೂ ಪಾಪಿಯಾದ್ದರಿಂದ ಅವನ ಸಂಹಾರವು ದೋಷಾರ್ಹವಲ್ಲ" ಇತ್ಯಾದಿಯಾಗಿ ಹೇಳಿ ಧರ್ಮರಾಜನನ್ನು ಸಮಾಧಾನಗೊಳಿಸಿದನು. ಅನಂತರ ಪಾಂಡವರು ಸರ್ವರಿಗೂ ತಿಲೋದಕ – ಪಿಂಡಪ್ರದಾನಾದಿ ಪ್ರೇತಕರ್ಮಗಳನ್ನು ನೆರವೇರಿಸಿದರು.

ಇವೆಲ್ಲ ಮುಗಿದ ಮೇಲೆ ಪಾಂಡವರಿಗೆ ಅಗ್ರಜನಾದ ಯುಧಿಷ್ಠಿರನು ಎಲ್ಲಾ ರಾಜರಿಗೂ ಅಧಿರಾಜನಾಗಿ, ಅಂದರೆ ಚಕ್ರವರ್ತಿಯಾಗಿ ವಿರಾಜಿತನಾದನು.

*ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯದ ಕಥಾಸಾರವು ಮುಕ್ತಾಯವಾಯಿತು.*

॥ ಕೃಷ್ಣಾರ್ಪಣಮಸ್ತು ॥

★ ★ ★



ಭೀಷ್ಮರಿಂದ ಧರ್ಮರಾಜನಿಗೆ ಉಪದೇಶ

## ಏಕೋನತ್ರಿಂಶಾಧ್ಯಾಯಭಾವಸಂಗ್ರಹ

**ಕೃಷ್ಣಾಭ್ಯಾಮಪಿ ಭೂಸುರೈರ್ನೃಪಸುತೋ ರಾಜ್ಯೇಽಭಿಷಿಕ್ತೋ ದ್ವಿಜೈಃ**
**ದಗ್ಧೇ ನಿಂದತಿ ಭಿಕ್ಷುಕೇ ಖಲತರೇ ಸ್ವಂ ವಿಪ್ರತೀಸಾರತಃ ।**
**ರಾಜ್ಯಂ ತ್ಯಕ್ತುಮಥೋದ್ಯತೋ ವಚನತೋ ಯಸ್ಯಾಪ್ತಭೀಷ್ಮಸ್ತತಃ**
**ಶುಶ್ರಾವಾಖಿಲಧರ್ಮನಿರ್ಣಯಮದಃ ಕೃಷ್ಣದ್ವಯಂ ಧೀಮಹಿ ॥ 29 ॥**

**ಅನ್ವಯಾರ್ಥ :-** **ಕೃಷ್ಣಾಭ್ಯಾಂ** = ವಾಸಿಷ್ಠಕೃಷ್ಣ, ಯಾದವಕೃಷ್ಣರಿಂದ, **ಭೂಸುರೈರಪಿ** = ಬ್ರಾಹ್ಮಣರಿಂದಲೂ ಸಹ, **ರಾಜ್ಯೇ** = ಸಾಮ್ರಾಜ್ಯದಲ್ಲಿ, **ಅಭಿಷಿಕ್ತಃ** = ಪಟ್ಟಾಭಿಷಿಕ್ತನಾಗಿ, **ನೃಪಸುತಃ** = ಪಾಂಡುರಾಜನ ಮಗನಾದ ಧರ್ಮರಾಜನು, **ಖಲತರೇ** = ಖಿಲಾಧಮನಾದ, **ವಿಪ್ರತೀಸಾರತಃ** = ವಿರೋಧ ದೆಸೆಯಿಂದ, **ನಿಂದತಿ** = ನಿಂದೆಯನ್ನು, **ಕುರ್ವತಿ** = ಮಾಡುತ್ತಿರಲು, **ಭಿಕ್ಷುಕೇ** = ಭಿಕ್ಷುಕ ರೂಪಧಾರಿಯಾದ, ದುರ್ಯೋಧನನ ಮಿತ್ರಭೂತನಾದ, ಅಸುರನನ್ನು, **ದ್ವಿಜೈಃ** = ಬ್ರಾಹ್ಮಣರಿಂದ, **ದಗ್ಧೇ ಸತಿ** = ಶಾಪದಿಂದ ದಗ್ಧನಾಗಲು, **ಸ್ವಂ ರಾಜ್ಯಂ** = ತನ್ನ ರಾಜ್ಯವನ್ನು, **ತ್ಯಕ್ತುಂ ಮುದ್ಯತಃ** = ತ್ಯಜಿಸಲು ಉದ್ಯುಕ್ತನಾದ, **ಅಥ** = ತರುವಾಯ, **ಯಸ್ಯ** = ಯಾರ, **ವಚನತಃ** = ವಾಕ್ಯ(ಗಳಿಂದ)ದಿಂದ, **ಆಪ್ತ** = ಹೊಂದಿದ, **ಭೀಷ್ಮಸ್ಸನ್** = ಭೀಷ್ಮಾಚಾರ್ಯರುಳ್ಳವನಾಗಿ, **ಯಃ** = ಯಾವ ಧರ್ಮರಾಜನು, ಭೀಷ್ಮಾಚಾರ್ಯರಿಂದ ಸಮಸ್ತ ಧರ್ಮನಿರ್ಣಯವನ್ನು, **ಶುಶ್ರಾವ** = ಕೇಳಿದನೋ, **ಅದಃ** = ಏತಾದೃಶರಾದ, **ಕೃಷ್ಣದ್ವಯಂ** = ಶ್ರೀವೇದವ್ಯಾಸ-ಶ್ರೀಕೃಷ್ಣರನ್ನು, **ಧೀಮಹಿ** = ಧ್ಯಾನಿಸುತ್ತೇವೆ.

**ತಾತ್ಪರ್ಯ :-** ಆ ತರುವಾಯ ಪಾಂಡುಸುತನಾದ ಧರ್ಮರಾಜನು ಶ್ರೀವಾಸಿಷ್ಠಕೃಷ್ಣ (ವೇದವ್ಯಾಸರು) ಯಾದವ-ಕೃಷ್ಣರಿಂದ, ಮತ್ತು ಬ್ರಾಹ್ಮಣಶ್ರೇಷ್ಠರಿಂದ ಸಾಮ್ರಾಜ್ಯ ಸಿಂಹಾಸನವಲ್ಲಿ ಮತ್ತು ಭೀಮಸೇನನು ಯುವರಾಜನ ಸ್ಥಾನದಲ್ಲಿ ಪಟ್ಟಾಭಿಷಿಕ್ತರಾದರು. ಅನಂತರ ಛದ್ಮವೇಷಧಾರಿಯಾಗಿ ಭಿಕ್ಷುಕನ ರೂಪದಿಂದ ಬಂದ ದುರ್ಯೋಧನನ "ಮಿತ್ರನಾದ" ಎಂಬ ಅಸುರನು, ಧರ್ಮರಾಜನನ್ನು ನಿಂದಿಸುತ್ತಿರಲು ಆ ಭಿಕ್ಷುಕನನ್ನು ಬ್ರಾಹ್ಮಣರು ಶಾಪಪ್ರದಾನದಿಂದ ದಗ್ಧಗೊಳಿಸಿದರು. ಆಗ ಧರ್ಮರಾಜನು ತನ್ನ ರಾಜಪಟ್ಟವನ್ನು (ರಾಜ್ಯವನ್ನು) ತ್ಯಜಿಸಲು ಉದ್ಯುಕ್ತನಾದನು. ಅನಂತರ ಯಾವ ವೇದವ್ಯಾಸ ಶ್ರೀಕೃಷ್ಣರು ಹೇಳಿದಂತೆ ಧರ್ಮರಾಜನು ಭೀಷ್ಮಾಚಾರ್ಯರಲ್ಲಿಗೆ ಹೋಗಿ ಅವರಿಂದ ಸಮಸ್ತ ಧರ್ಮನಿರ್ಣಯಗಳನ್ನೂ ಕೇಳಿ ತಿಳಿದುಕೊಂಡನೋ ಅಂತಹ ವೇದವ್ಯಾಸದೇವರು ಮತ್ತು ಶ್ರೀಕೃಷ್ಣಪರಮಾತ್ಮನನ್ನು (ಸ್ತೋತ್ರ ಮಾಡುತ್ತೇವೆ), ಧ್ಯಾನಿಸುತ್ತೇವೆ ಎಂದು ಭಾವ.

## ಇಪ್ಪತ್ತೊಂಬತ್ತನೆಯ ಅಧ್ಯಾಯದ ಕಥಾಸಾರವು

ಹಸ್ತಿನಾವತಿಯ ರಾಜಸಭೆಯಲ್ಲಿಂದು ಅತೀವ ಸಂಭ್ರಮ. ರಾಜ ಮಹಾರಾಜರು, ಮಾಂಡಲಿಕರು ಋಷಿಮುನಿಗಳು ಪೌರಜಾನಪದರು ಸಭೆಯಲ್ಲಿ ಕಿಕ್ಕಿರಿದು ತುಂಬಿದ್ದಾರೆ. ಕೃಷ್ಣದ್ವಯರೆಂದು ಪ್ರಖ್ಯಾತರಾದ ವಾಸಿಷ್ಠಕೃಷ್ಣ (ಶ್ರೀವೇದವ್ಯಾಸ ದೇವರು) ಮತ್ತು ಯಾದವ ಕೃಷ್ಣ (ಶ್ರೀವಾಸುದೇವ)ರ ಸಾನ್ನಿಧ್ಯವು ಆ ಸಂಭ್ರಮದ ಸಮಾರಂಭಕ್ಕೆ ವಿಶೇಷ ಕಳೆಯನ್ನು ತಂದಿದೆ. ಪಾಂಡವ ಜ್ಯೇಷ್ಠನಾದ ಯುಧಿಷ್ಠಿರನ ಪಟ್ಟಾಭಿಷೇಕ ಮಹೋತ್ಸವವೇ ಅಂದಿನ ಸಭೆಯು ಅತಿಶಯವಾಗಿ ಕಂಗೊಳಿಸಲು ಕಾರಣವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೇ?

ಮಂಗಳವಾದ್ಯಗಳ ಮೇಳ ಮೊಳಗುತ್ತಿರಲು ಶ್ರೀವೇದವ್ಯಾಸ - ವಾಸುದೇವರು ಮತ್ತು ಶ್ರೇಷ್ಠಬ್ರಾಹ್ಮಣರು ಧರ್ಮ-ರಾಜನನ್ನು ರತ್ನಮಯಸಿಂಹಾಸನದಲ್ಲಿ ಮಂಡಿಸಿ ಕುರುಸಾಮ್ರಾಟನೆಂದು ಪಟ್ಟಾಭಿಷೇಕವನ್ನು ವಿಶೇಷ ವೈಭವದಿಂದ ನೆರವೇರಿಸಿದ ತರುವಾಯ, ಶ್ರೀಪವನನಂದನನಾದ ಭೀಮಸೇನನನ್ನು ಯುವರಾಜನೆಂದು ಯೌವರಾಜ್ಯಪಟ್ಟಾಭಿಷೇಕವನ್ನು ನೇರವೇರಿಸಿದರು. ಆ ಮಂಗಳಕರ ದೃಶ್ಯವನ್ನು ಅವಲೋಕಿಸಿ ಸಮಸ್ತ ಸಭಿಕರೂ ಪರಮಾನಂದತುಂದಿಲರಾಗಿ ಜಯಕಾರ ಮಾಡಿದರು. ಆನಂತರ ಋಷಿಮುನಿಗಳು, ಶ್ರೇಷ್ಠ ವಿಪ್ರರುಗಳು ಯುಧಿಷ್ಠಿರ-ಭೀಮಸೇನರನ್ನು ವೈದಿಕಮಂತ್ರ ಪಠನಪೂರ್ವಕ ಶುಭಾಶಂಸನಮಾಡಿ ಮಂತ್ರಾಕ್ಷತೆ, ಪುಷ್ಪವೃಷ್ಟಿ ಮಾಡಿ ಆಶೀರ್ವದಿಸಿದರು. ಸಕಲರೂ ಸಂತೋಷ ನಿರ್ಭರರಾದರು.

ಅದೇ ಸಮಯದಲ್ಲಿ ತ್ರಿದಂಡಧಾರಿಯಾದ ಭಿಕ್ಷುವೊಬ್ಬನು ಬಂದು "ರಾಜ್ಯದ ಸಕಲ ಬ್ರಾಹ್ಮಣರೂ ನಿನ್ನನ್ನು ಅಧಾರ್ಮಿಕನೆಂದು ಹಳಿಯುವರು" ಎಂದು ನಿಂದಿಸಿದನು. ಆ ಭಿಕ್ಷುವಿನ ವಚನವನ್ನಾಲಿಸಿದ ವಿಪ್ರರು, ಅತ್ಯಂತ ಕುಪಿತ-ರಾಗಿ "ಎಲವೋ ಧೂರ್ತಸನ್ಯಾಸಿಯೇ! ಸಕಲ ಬ್ರಾಹ್ಮಣ ಸಮಾಜದವರಾದ ನಾವುಗಳು ಧರ್ಮಶೀಲನಾದ ಯುಧಿಷ್ಠಿರನು ಅಧಾರ್ಮಿಕನೆಂದು ಎಂದೂ ನಿಂದಿಸಿಲ್ಲ. ಹೀಗಿದ್ದರೂ ನೀನು ಬ್ರಾಹ್ಮಣರು ನಿನ್ನನ್ನು ನಿಂದಿಸುವರೆಂದು ಹೇಳಿದ, ಮಿಥ್ಯಾ-ವಾದಿಯಾದ ನೀನು ಮಹಾಪಾಪಿಯು. ನಿನ್ನನ್ನು ನಾವೀಗ ಶಪಿಸಿ ನಾಶಪಡಿಸುವೆವು" ಎಂದು ಹೇಳಿ ಶಾಪಪ್ರದಾನ ಪೂರ್ವಕವಾಗಿ ವಂಚಕವೇಷಧಾರಿಯಾದ ಆ ಭಿಕ್ಷುವನ್ನು ಭಸ್ಮಗೊಳಿಸಿದನು. ಆಗ ಶ್ರೀಕೃಷ್ಣನು ಧರ್ಮನಂದನನ್ನು ಕುರಿತು "ಯುಧಿಷ್ಠಿರ! ಇವನಾರೆಂದು ನೀನು ಬಲ್ಲೆಯಾ? ಈ ಅಧಮನು ಮಹಾಪಾಪಿಷ್ಠನಾದ ದುರ್ಯೋಧನನ ಮಿತ್ರನಾದ 'ಚಾರ್ವಾಕ'ನೆಂಬ ಪಾಪಿಯಾದ ಅಸುರನು. ನಿನಗೆ ದುಃಖ ನೀಡಿ ರಾಜ್ಯವನ್ನು ಬಿಡುವಂತೆ ಮಾಡಲೆಂದೇ ಭಿಕ್ಷುವೇಷದಿಂದ ಬಂದಿದ್ದನು. ವಿಪ್ರರು ಅವನನ್ನು ಭಸ್ಮಗೊಳಿಸಿ ಉತ್ತಮ ಕಾರ್ಯವನ್ನು ಮಾಡಿದ್ದಾರೆ. ನೀನು ಮಾಡಬೇಕಾಗಿದ್ದ ದುಷ್ಟ-ಸಂಹಾರರೂಪವಾದ ಕಾರ್ಯವನ್ನು ಈ ಬ್ರಾಹ್ಮಣರೇ ಮಾಡಿರುವರು. ಇದರಿಂದ ನೀನು ಕೃತಕೃತ್ಯನಾಗಿರುವೆ. ದುಃಖಿಸ-ಬೇಡ" ಎಂದು ಹೇಳಿ ಧರ್ಮರಾಜನನ್ನು ಸಮಾಧಾನಪಡಿಸಿದನು.

ಧರ್ಮರಾಜನು ಶಾಂತಮನಸ್ಕನಾಗಿ ಬ್ರಾಹ್ಮಣ ವೃಂದವನ್ನು ಭಕ್ತಿಯಿಂದ ನಮಿಸಿ ಅವರನ್ನು ಧನ-ಕನಕಾಭರಣ ವಸ್ತ್ರಾದಿಗಳಿಂದ ಪೂಜಿಸಿ ಹರುಷಗೊಳಿಸಿದನು. ಆ ತರುವಾಯ ಯಮಸುತನಾದ ಯುಧಿಷ್ಠಿರನು ತನ್ನ ಪುರನಿವಾಸಿಗಳು, ಆಶ್ರಿತರು, ಬಾಂಧವರು ಹಾಗು ಸೇವಕರುಗಳನ್ನು ಅಧಿಕ ಧನ-ಕನಕ ವಸ್ತ್ರಾದಿಗಳಿಂದ ತೃಪ್ತಿಪಡಿಸಿ ಬಾಂಧವರ ಹನನದಿಂದ ದುಃಖಿತರಾದ ತನ್ನ ಬಂಧುಗಳಿಗೆ, ಪೂರ್ವದಂತೆಯೇ ಅವರವರ ಸ್ಥಾನಮಾನಗಳನ್ನಿತ್ತು ಸಂತೋಷಪಡಿಸಿ ಎಲ್ಲರನ್ನೂ ಮಕ್ಕಳಂತೆ ರಕ್ಷಿಸಿದನು. ಆ ತರುವಾಯ ಧರ್ಮನಂದನನು ಭೀಷ್ಮ, ದ್ರೋಣ, ಕರ್ಣ ಮತ್ತಿತರರ ಸಂಹಾರ ಮತ್ತು ದುರ್ಯೋಧನನ ವಧೆಯಿಂದಲೂ ತನಗೆ ಪಾಪವುಂಟಾಗಿದೆಯೆಂದು ಶಂಕಿಸಿ ಬಹುದುಃಖಿಗೊಂಡು "ನನಗೆ ಈ ರಾಜ್ಯಾಧಿಪತ್ಯವು ಬೇಡ" ಎಂದು ಹೇಳಿದನು. ಆಗ ಭೀಮಾರ್ಜುನಾದಿ ಸಹೋದರರು, ದ್ರೌಪದಿದೇವಿ ಹಾಗು ವಿಪ್ರರು ಧರ್ಮವಿಚಾರವನ್ನು ಹೇಳಿ ಸಮಾಧಾನಪಡಿಸಿದರು ಮತ್ತು ಆಗ ಧರ್ಮಜನು 'ಭೀಮಸೇನ, ನೀನು ನನಗೆ ಧರ್ಮಾ-ಧರ್ಮಗಳನ್ನು ಹೇಳಬೇಡ. ನನಗೆ ಈ ರಾಜ್ಯ ಬೇಡ ನೀನೇ ರಾಜನಾಗು' ಎಂದು ಹೇಳಿ 'ಅರ್ಜುನ, ನಿನಗೆ ಧರ್ಮಸೂಕ್ಷ್ಮ ತಿಳಿಯದು' ಎಂದುಸುರಿದನು.

ಆಗ ಪಾರ್ಥನು ಅಣ್ಣನ ಮಾತಿನಿಂದ ಕ್ರೋಧಗೊಂಡಾಗ, ಅಲ್ಲಿದ್ದ ದ್ವಿಜರು 'ರಾಜನ್! ಅರ್ಜುನನು ನಿನಗಿಂತ ಧರ್ಮವನ್ನು ಚೆನ್ನಾಗಿ ಅರಿತಿರುವವನೂ, ತತ್ವವಿಶಾರದನೂ ಆಗಿದ್ದಾನೆ. ಅವನನ್ನು ಹಳಿಯಬೇಡ' ಎಂದು ಹೇಳಿದರು. ಆಗ ಧರ್ಮರಾಜನು 'ಈ ಭೀಮ-ಬ್ರಾಹ್ಮಣರೆಲ್ಲರೂ ಶತ್ರುಸಂಹಾರವು ನನ್ನ ಮೇಲಿನ ಅಭಿಮಾನದಿಂದ, ಸ್ನೇಹದಿಂದ ನನ್ನ ಮನಸ್ಸಿನ ತೃಪ್ತಿಗಾಗಿ ಧರ್ಮವೆಂದು ಹೇಳುತ್ತಿರುವರು. ಆದ್ದರಿಂದಲೇ ನಾನು ಅವರ ಮಾತಿನಲ್ಲಿ ನಂಬಿಕೆಯಿಲ್ಲದವನಾಗಿದ್ದೇನೆ. ಬಾಂಧವರಾದ ಶತ್ರುಗಳ ಸಂಹಾರವು ಅಧರ್ಮವೆಂದೇ ನಾನು ಸಂಶಯಗೊಂಡಿದ್ದೇನೆ' ಎಂದು ನಿರೂಪಿಸಿದನು.

ಹೀಗೆ ಸಂಶಯಗ್ರಹಗ್ರಸ್ತಾಂತರಂಗನಾದ, ಯಮನಂದನನಾದ ರಾಜಾ ಧರ್ಮರಾಜನನ್ನು ಉದ್ದೇಶಿಸಿ ಬ್ರಾಹ್ಮಣರು, ಯಾದವ ವಾಸಿಷ್ಠಕೃಷ್ಣರು, ದ್ರೋಣಾದಿಗಳ ಸಂಹಾರವು ಧರ್ಮವೇ ಎಂದು ಪುನಃ ಪುನಃ ಶಾಸ್ತ್ರಪ್ರಮಾಣೋದಾಹರಣವಿತ್ತು ನಿರೂಪಿಸಿದರು. ಆಗ ಅಚ್ಯುತರಾದ ಶ್ರೀವೇದವ್ಯಾಸ, ವಾಸುದೇವರಿಬ್ಬರೂ ತಾವು ವಿವರಿಸಿ ಹೇಳಿದ ಮೇಲೂ ತಮ್ಮ ಮಾತನ್ನು ನಂಬದೆ ನಿಶ್ಚಿತ ಬುದ್ಧಿಯಿಲ್ಲದ ಧರ್ಮರಾಜನನ್ನು ಕುರಿತು 'ರಾಜನ್! ಸ್ವಪಕ್ಷ - ಪರಪಕ್ಷಗಳೆಂದು ಭಾವಿಸದ, ಧರ್ಮಾತ್ಮನೂ ಸತ್ಯಸಂಧನೂ ಆದ ಪಿತಾಮಹ ಭೀಷ್ಮಾಚಾರ್ಯನು ನಿಷ್ಪಕ್ಷವಾಗಿ ಸತ್ಯವಿಚಾರವನ್ನು ನಿರೂಪಿಸುವ ಮತ್ತು ಶತ್ರುಪಕ್ಷದವನಾದ ನಿಮ್ಮಿಂದ ಸಂಹೃತನಾದ ಪಿತಾಮಹ ಭೀಷ್ಮನು ನಾವು ಹೇಳುತ್ತಿರುವ ಶತ್ರುವಧವು ಧರ್ಮವೆಂಬ ಮಾತಿನ ಸತ್ಯಾಸತ್ಯತೆಯನ್ನೂ, ಧರ್ಮಾಧರ್ಮಗಳನ್ನು ಹೇಳಿ ನಿನ್ನ ಸಂಶಯಪರಿಹಾರ ಮಾಡಲು ಸಮರ್ಥನಾಗಿದ್ದಾನೆ. ಏಕೆಂದರೆ ಯಾರೊಬ್ಬರ ತೃಪ್ತಿಗಾಗಿಯೂ ಅವನು ಅಸತ್ಯವನ್ನಾಡುವುದಿಲ್ಲವಾದ್ದರಿಂದ ಹೇ ರಾಜನ್, ನೀನೀಗ ಅವನ ಬಳಿ ಹೋಗಿ ಧರ್ಮಾಧರ್ಮಗಳನ್ನು ಅವನಿಂದ ಉಪದೇಶ ಪಡೆ, ನಡೆ. ಎಲ್ಲರೂ ಅವನಲ್ಲಿಗೆ ಹೋಗೋಣ' ಎಂದರು. ಅನಂತರ ಧರ್ಮರಾಜನು ಶ್ರೀಕೃಷ್ಣದ್ವಯರು, ವಿದುರ, ಭೀಮಸೇನಾದಿ ಸಹೋದರರು ಹಾಗೂ ಬ್ರಾಹ್ಮಣರಿಂದ ಸಹಿತನಾಗಿ ಶರತಲ್ಪದಲ್ಲಿ ಪವಡಿಸಿರುವ ಪಿತಾಮಹರಾದ ಭೀಷ್ಮಾಚಾರ್ಯರಲ್ಲಿಗೆ ಹೋದರು. ಆಗ ಧರ್ಮರಾಜನು ಭೀಷ್ಮರ ಸಂಹಾರಕ್ಕೆ ಕಾರಣನಾದ ತಾನು ಅವನಲ್ಲಿ ಧರ್ಮಾಧರ್ಮಗಳನ್ನು ಪ್ರಶ್ನಿಸುವುದೆಂತೆಂದು ಲಜ್ಜೆ ಪಡುತ್ತಿರಲು, ಶ್ರೀಕೃಷ್ಣಪರಮಾತ್ಮನು 'ಪಿತಾಮಹರಾದ ಭೀಷ್ಮರೇ ! ಯುಧಿಷ್ಠಿರನು ನಿಮ್ಮಿಂದ ಧರ್ಮವಿಚಾಗಳನ್ನು ತಿಳಿಯಲು ಬಂದಿದ್ದಾನೆ' ಎಂದು ಹೇಳಿದಾಗ ಭೀಷ್ಮಾಚಾರ್ಯರು 'ಧರ್ಮನಂದನ! ನಿನ್ನ ಸಂದೇಹವನ್ನೂ, ಅರಿಯಲಿಚ್ಛಿಸುವ ಧರ್ಮವಿಚಾರಗಳನ್ನೂ ಕೇಳು' ಎಂದು ಹೇಳಿದನು. ಆಗ ಯುಧಿಷ್ಠಿರನು ಲಜ್ಜೆಯನ್ನು ಬಿಟ್ಟು, ತನ್ನ ಸಂಶಯಗಳನ್ನು ಅರುಹಿ, ಧರ್ಮಾಧರ್ಮಗಳನ್ನು ತನಗೆ ಉಪದೇಶಿಸಬೇಕೆಂದು ಕೋರಿದನು. ಶ್ರೀಭಗವಾನ್ ಕೃಷ್ಣನು ಭೀಷ್ಮರಲ್ಲಿ ಸನ್ನಿಹಿತನಾಗಿ ಹೇಳಹತ್ತಿದನು. ಇಲ್ಲೊಂದು ಸಂಶಯವುಂಟಾಗುವುದು. 'ಯಮೋ ಮಾನವೀ ಚಂದ್ರಸೂರ್ಯೌ' ಎಂದು ಪ್ರಮಾಣವಿದೆಯಷ್ಟೇ. ಯಮನು ಶ್ರೇಷ್ಠನಾದ ದೇವತೆಯು. ಭೀಷ್ಮರಾದರೋ ದ್ಯುನಾಮಕ ವಸುವು. ಅವರು ತಾರತಮ್ಯದಲ್ಲಿ ಅವರರು. ಇಂತಿರಲು ಯಮಾವತಾರಿಯಾದ ಯುಧಿಷ್ಠಿರನಿಗೆ ತಾರತಮ್ಯದಲ್ಲಿ ಅವನಿಗಿಂತ ಕಡಿಮೆಯವರಾದ ದ್ಯುನಾಮಕ ವಸುವಿನ ಅವತಾರರಾದ ಭೀಷ್ಮರು ಅದೆಂತು ಗುರುಸ್ಥಾನದಲ್ಲಿದ್ದು ಉಪದೇಶಿಸಲು ಸಾಧ್ಯ? ಎಂದರೆ, ಆದ್ದರಿಂದಲೇ ಭೀಷ್ಮರ ಶರೀರದಲ್ಲಿ ಸನ್ನಿಹಿತನಾಗಿ ಶ್ರೀಕೃಷ್ಣಪರಮಾತ್ಮನೇ ಧರ್ಮರಾಜನಿಗೆ ಉಪದೇಶಿಸುತ್ತಿರುವುದರಿಂದ ಗುರುತ್ವವು ಸಿದ್ಧಿಸುವುದೆಂದು ತಿಳಿಯಬೇಕು.

ಅದು ಸರಿ, ಶ್ರೀಕೃಷ್ಣನು ಧರ್ಮಜನನ್ನು ಭೀಷ್ಮರಲ್ಲಿಗೆ ಕರೆ ತರುವುದನ್ನು ಬಿಟ್ಟು ತಾನೇ ಉಪದೇಶಿಸಬಹುದಾಗಿತ್ತಲ್ಲ. ಹಾಗೇಕೆ ಮಾಡಲಿಲ್ಲ? ಎಂಬ ಸಂದೇಹ ಬಂದರೆ, ನಿರ್ಣಯಾಚಾರ್ಯರು ಉತ್ತರಿಸುತ್ತಾರೆ. ಭೀಷ್ಮಾಚಾರ್ಯರೂ ಸಹ 'ಹೇ ಶ್ರೀಕೃಷ್ಣ ! ನಾನು ದೇವತೆಗಳಾದ ಪಾಂಡವರಿಗೆ ಉಪದೇಶಿಸಲು ಸಮರ್ಥನಲ್ಲ. ಅಧಿಕಾರಿಯಲ್ಲ. ಆದ್ದರಿಂದ ಭಗವಂತ ನೀನೇ ಉಪದೇಶ ಮಾಡು' ಎಂದು ಕೋರಿದನು. ಆಗ ಶ್ರೀಕೃಷ್ಣನು 'ಪಿತಾಮಹ ನಾನು ನಿಮ್ಮಲ್ಲಿ ಸನ್ನಿಹಿತನಾಗಿ ವೇದಾದಿ ಶಾಸ್ತ್ರೋಕ್ತ ಸತ್ತತ್ತ್ವ ಧರ್ಮಗಳನ್ನು ನಿಮಗೆ ಕೀರ್ತಿಯುಂಟಾಗುವುದಕ್ಕಾಗಿ ಉಪದೇಶಮಾಡುವೆನು' ಎಂದು ನುಡಿದನು. ನಿರ್ಣಯಾಚಾರ್ಯರು ಈಗ ಭೀಷ್ಮರು ನೆರವೇರಿಸಿದ ಪರತತ್ತ್ವ ಹಾಗೂ ಧರ್ಮಾಧರ್ಮ ವಿಚಾರ ಪ್ರಕಾರವನ್ನು ವಿವರಿಸುವರು.

ಭೀಷ್ಮರಲ್ಲಿ ಸನ್ನಿಹಿತನಾದ ಶ್ರೀಕೃಷ್ಣನು ಮೊದಲು ಚಾತುರ್ವರ್ಣ್ಯದವರ ಧರ್ಮಗಳನ್ನು ನಿರೂಪಿಸುವನು - "ಯುಧಿಷ್ಠಿರ ನಾನು ಹೇಳುವುದನ್ನು ಗಮನವಿಟ್ಟು ಕೇಳು. ರಾಜರಿಗೆ ವೈಷ್ಣವಧರ್ಮಾಚರಣೆಯು ಧರ್ಮವಾಗಿದೆ. ವೈಷ್ಣವಧರ್ಮ-ಪ್ರವರ್ತನೆಗಾಗಿ ಅದಕ್ಕೆ ವಿರುದ್ಧವಾದ ಅವೈಷ್ಣವರನ್ನು ನಾಶಪಡಿಸುವುದು, ಅರ್ಥಾತ್ ದುಷ್ಟರ ಸಂಹಾರವು ಪ್ರಮುಖ

ಧರ್ಮವು. ಸಚ್ಛಾಸ್ತ್ರಗಳಿಗೆ ಸಮ್ಮತವಾದ ಪರಮಾತ್ಮಕ ವಿಷಯ, ಇತರ ಧರ್ಮಗಳು ರಾಜರಿಗೆ ಧರ್ಮವು, ಅವು ಯಾವ ಧರ್ಮಗಳೆಂಬುದನ್ನು ವಿವರಿಸುವರು -

"ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ" ಎಂಬ ಪ್ರಮಾಣದಂತೆ ಅಂದರೆ ಮನಸ್ಸು, ಮಾತು ಮತ್ತು ಕರ್ಮಗಳಿಂದ ಎಡೆಬಿಡದೆ ಶ್ರೀಹರಿಯನ್ನು ಪೂಜಿಸುವುದು. ಶ್ರೀಹರಿಪರಮಾತ್ಮನೊಬ್ಬನೇ ಪರಿಪೂರ್ಣವಾದ ಗುಣ-ಗಳುಳ್ಳವನು. ಶ್ರೀವಿಷ್ಣುವು ಒಬ್ಬನೇ ಸರ್ವಸ್ವತಂತ್ರನು. ಅವನಿಗೇ ಏಕೆ ಸರ್ವಸ್ವಾತಂತ್ರ್ಯವೆಂದು ಶಂಕಿಸಬೇಡ. ಶ್ರೀಹರಿಯನ್ನು ಬಿಟ್ಟು ಸಕಲ ಜಗತ್ತೂ ಅರ್ಥಾತ್ ಚೇತನಾಚೇತನಾತ್ಮಕವಾದ ಪ್ರಪಂಚವು ಶ್ರೀಹರಿಗೆ ಅಧೀನವೆಂಬುದು ನಿಶ್ಚಿತವಾಗಿದೆ. ಶ್ರೀಲಕ್ಷ್ಮೀದೇವಿಯೂ ಸಹ ಶ್ರೀವಿಷ್ಣುವಿಗೆ ಅಧೀನಳು. ಈ ಶ್ರೀರಮಾದೇವಿ ಮೊದಲಾದ ದೇವತೆಗಳ ತಾರತಮ್ಯವನ್ನು ಅರಿಯುವುದೂ ಧರ್ಮವು. ಶ್ರೀಹರಿಯನ್ನು ಬಿಟ್ಟು, ಇತರ ದೇವತೆಗಳನ್ನು ಸರ್ವೋತ್ತಮರೆಂಬ ಬುದ್ಧಿಯಿಂದ ಪೂಜಿಸ-ಬಾರದು, ಇದೂ ಧರ್ಮವಾಗಿದೆ. ಹಾಗಾದರೆ ಇತರ ದೇವತೆಗಳನ್ನು ಖಂಡಿತವಾಗಿ ಪೂಜಿಸಬಾರದೇನು? ಎಂದು ತಿಳಿಯಬೇಡ. ಶ್ರೀಭಗವಾನ್ ವಿಷ್ಣುವಿನ ಪರಿವಾರವೆಂದು ಸಕಲದೇವತೆಗಳು, ಋಷಿಗಳೇ ಮೊದಲಾದವರನ್ನು ಪೂಜಿಸುವುದು ಧರ್ಮವೇ ಆಗಿದೆ. ಫಲೇಚ್ಛಾರಹಿತವಾಗಿ ಪೂಜಿಸುವುದು ಯುಕ್ತವು. ಶ್ರೀಹರಿಪರಮಾತ್ಮನಿಗೂ ಅವನ ಭಕ್ತರಿಗೂ ಯಾವ ಕಾಲದಲ್ಲೂ ವಿರೋಧ ಮಾಡಬಾರದು. ಶಿಷ್ಟರು ಹಾಗೂ ಶಿಷ್ಟರಲ್ಲದವರ ವಿಷಯದಲ್ಲಿ ಪರಸ್ಪರ ವಿರೋಧವು ಬಂದೊದಗಿದರೆ ಆಗ ಅದು ಅಧರ್ಮದಂತೆ ಕಂಡುಬಂದರೂ ಶಿಷ್ಟರ ಪಕ್ಷ ವಹಿಸುವುದೇ ಸಮಂಜಸವು. ಶ್ರೀಹರಿ ಮತ್ತು ಅವರ ಭಕ್ತರಿಗೆ ಪ್ರಿಯವಾದುದೆಲ್ಲವನ್ನೂ ಮಾಡಬೇಕು. ತೋರಿಕೆಗೆ ಧರ್ಮದಂತೆ ಕಂಡುಬಂದರೂ ಅದು ಶ್ರೀವಿಷ್ಣು - ವೈಷ್ಣವರಿಗೆ ಅಪ್ರಿಯವಾಗಿದ್ದಲ್ಲಿ ಸರ್ವಥಾ ಅಂತಹ ಕಾರ್ಯವನ್ನು ಖಂಡಿತವಾಗಿ ಮಾಡಬಾರದು. ಎರಡೂ ಪಕ್ಷವೂ ಶ್ರೇಷ್ಠ-ವಾಗಿರುವುದರಿಂದ ಸಮಾನವಿರೋಧವು ಬಂದರೆ ಆಗ ಹೆಚ್ಚಾಗಿ ವೈಷ್ಣವರನ್ನು ಅನುಸರಿಸಿಕೊಂಡಿರಬೇಕು. ಅರ್ಥಾತ್ ಅಂಥ ಸಮಯದಲ್ಲಿ ವೈಷ್ಣವರಿಗೆ ಅನುಕೂಲವಾಗಿರಬೇಕು. ಮನಸ್ಸು, ವಚನ ಮತ್ತು ಕರ್ಮಗಳಿಂದ ಹಿಂದೆ ನಿರೂಪಿಸಿದ ಧರ್ಮಗಳು ರಾಜರಿಗೆ ಅಸಾಧಾರಣ ಧರ್ಮಗಳಲ್ಲ. ಭಗವಂತನಿಗೆ ಸಂಬಂಧಿಸಿದ, ಹಿಂದೆ ಹೇಳಿದ ಧರ್ಮಗಳು ಕ್ಷತ್ರಿಯರಿಗೆ ಸಾಧಾರಣಧರ್ಮಗಳೆಂದು ತಿಳಿಯಬೇಕು.

'ಧರ್ಮನಂದನ! ಈಗ ಬ್ರಾಹ್ಮಣನ ಧರ್ಮವನ್ನು ಹೇಳುವೆನು ಕೇಳು. ಬ್ರಾಹ್ಮಣನಿಗೆ ತತ್ತ್ವೋಪದೇಶವು ಮುಖ್ಯ ಧರ್ಮವು. ಸತೀ-ಸುತ ಶಿಷ್ಯರುಗಳನ್ನು ಬಿಟ್ಟು ಬೇರೆಯವರನ್ನು ಹೊಡೆಯಬಾರದು. ಇದು ಬ್ರಾಹ್ಮಣರಿಗೆ ಧರ್ಮವು. ಪತ್ನಿ-ಪುತ್ರಾದಿಗಳನ್ನು ದಂಡಿಸುವಾಗ ಅವರ ಹಸ್ತಪಾದಾದಿ ಅವಯವಗಳು ಭಗ್ನವಾಗದಂತೆಯೂ, ಅಧಿಕ ವ್ಯಥೆ-ಯಾಗದಂತೆಯೂ ಶಾರೀರಿಕ ದಂಡನೆಯನ್ನು ಮಾಡತಕ್ಕದ್ದು. ಕ್ಷತ್ರಿಯರನ್ನುಳಿದು, ಬ್ರಾಹ್ಮಣರು, ವೈಶ್ಯರು ಮುಂತಾದ ಮೂರು ವರ್ಣದವರು (ಬ್ರಾಹ್ಮಣರು, ವೈಶ್ಯ, ಶೂದ್ರರೂ) ಹಾಗೂ ತ್ರಿವರ್ಣೇತರರಿಗೂ ಆರ್ಥಿಕ ದಂಡನೆಯನ್ನು ಮಾಡ-ಬಾರದು. ವೈಶ್ಯ ಮೊದಲಾದ ವರ್ಣದವರಿಗೂ, ಬ್ರಾಹ್ಮಣರಿಗೆ ಹೇಳಿದಂತೆ ಶಾರೀರಿಕ ದಂಡವು, ಅಂದರೆ ಅವಯವಗಳಿಗೆ ನ್ಯೂನತೆ, ಅಧಿಕವೇದನೆಗಳಾಗದಂತೆ ದಂಡಿಸುವುದು ಧರ್ಮವೆಂದು ತಿಳಿಯಬೇಕು.

ಬ್ರಾಹ್ಮಣ ಶ್ರೇಷ್ಠನು ಹೆಚ್ಚು ಪ್ರಯತ್ನ ಮಾಡದೇ ದೊರಕುವ ದ್ರವ್ಯದಿಂದ ಅಥವಾ ಭಿಕ್ಷಾಟನೆಯಿಂದ ಜೀವಿಸಬೇಕು. ಶಿಷ್ಯರು ಅಥವಾ ಯಜಮಾನನಿಂದ ಪಡೆದ ದ್ರವ್ಯದಿಂದ, ಅಂದರೆ ಆಪತ್ಕಾಲವಲ್ಲದ ಸಮಯದಲ್ಲಿ ಶಿಷ್ಯರು ನೀಡಿದ ಇಲ್ಲದೇ ಯಜ್ಞಯಾಗಾದಿ ಕಾಲದಲ್ಲಿ ಯಜಮಾನನು ನೀಡಿದ ಹಣದಿಂದಲಾದರೂ ಜೀವಿಸುತ್ತಿರಬೇಕು. ಅತಿ ಆಪತ್ಕಾಲ ಬಂದಾಗ ಬ್ರಾಹ್ಮಣನು, ಕ್ಷತ್ರಿಯ ಅಥವಾ ವೈಶ್ಯಧರ್ಮದಿಂದ ಜೀವನವನ್ನು ಸಾಗಿಸಬೇಕು.

ಈಗ ಕ್ಷತ್ರಿಯ ಧರ್ಮವನ್ನು ವಿವರಿಸುವರು - 'ಧರ್ಮರಾಜ! ಕ್ಷತ್ರಿಯನು ದೇವತೆಗಳು, ಬ್ರಾಹ್ಮಣರುಗಳನ್ನು ಹೊರತುಪಡಿಸಿ ತನ್ನ ಪ್ರಯೋಜನೋಪಯುಕ್ತವಾದ ವೈಶ್ಯ ಮುಂತಾದವರ ಸಮಸ್ತ ದ್ರವ್ಯದಿಂದ ಆ ವೈಶ್ಯಾದಿಗಳನ್ನು ಚೆನ್ನಾಗಿ ರಕ್ಷಿಸುತ್ತಾ ಜೀವಿಸಬೇಕು. ಇದರಂತೆ ಶ್ರೇಷ್ಠಧರ್ಮವಿರೋಧಿಗಳಾದ ಕ್ಷತ್ರಿಯರಿಂದ ಬಲವಂತವಾಗಿ ಅವರ ದ್ರವ್ಯವನ್ನು ಕಿತ್ತುಕೊಳ್ಳುವುದು ಧರ್ಮವಾಗಿದೆ. ಕ್ಷತ್ರಿಯನು ಸಾಮ, ದಾನ, ಭೇದಗಳಿಂದಲೇ ಧರ್ಮವನ್ನು ಸ್ಥಾಪಿಸಬೇಕು. ಸಾಮಾದಿ-ಗಳಿಂದ ಕಾರ್ಯಸಾಧನೆಯಾಗದಿದ್ದಾಗ ದಂಡ(ಶಿಕ್ಷೆ)ವನ್ನು ಪ್ರಯೋಗಿಸಿ ಧರ್ಮಸ್ಥಾಪನೆ ಮಾಡತಕ್ಕದ್ದು. ಯುದ್ಧಕಾಲದಲ್ಲಿ ಸಜ್ಜನರೆಸಗುವ ಯುದ್ಧಕಾರ್ಯವನ್ನು ಬಿಟ್ಟು ಎಂದಿಗೂ ಪಲಾಯನ ಮಾಡುವ ಸ್ವಭಾವವಿಲ್ಲದವನಾಗಿರಬೇಕು. ಜರಾಸಂಧಾದಿ ಅಸಜ್ಜನರಿಗೆ ಯುದ್ಧ ಸಹಾಯಮಾಡುವ ಶಲ್ಯ ಬಾಹ್ಲೀಕಾದಿಗಳಿಗೆ ಪಲಾಯನವು ಅಧರ್ಮವಲ್ಲವೆಂದು ತಿಳಿಯಬೇಕು.

ಬ್ರಾಹ್ಮಣ ಕ್ಷತ್ರಿಯರ ಧರ್ಮಗಳನ್ನು ನಿರೂಪಿಸಿದ ತರುವಾಯ, ಈಗ ಭೀಷ್ಮಾಚಾರ್ಯರು ವೈಶ್ಯಧರ್ಮವನ್ನು ಹೇಳುವರು. "ಕುಂತೀಕುಮಾರ, 'ಕೃಷಿ, ವಾಣಿಜ್ಯ, ಗೋರಕ್ಷಾ ಕುಸೀದಂ ವೈಶ್ಯಜೀವನಂ' ಅಂದರೆ, ವೈಶ್ಯನಿಗೆ ಕೃಷಿ, ಅಂದರೆ ನೇಗಿಲಿನಿಂದ ಭೂಮಿಯನ್ನು ಉತ್ತು ಧಾನ್ಯಗಳನ್ನು ಬೆಳೆಯುವುದು ಮತ್ತು ವಾಣಿಜ್ಯ ಅಂದರೆ ಧಾನ್ಯಗಳನ್ನು ಕಡಿಮೆ ಬೆಲೆಗೆ ಪಡೆದು, ಅಧಿಕ ಬೆಲೆಗೆ ಮಾರಾಟ ಮಾಡುವುದಕ್ಕೆ ವಾಣಿಜ್ಯವೆಂದು ಹೆಸರು. ಹೀಗೆ ವೈಶ್ಯನು ಕೃಷಿ, ವಾಣಿಜ್ಯಗಳಿಂದಲೂ ಮತ್ತು ಗೋರಕ್ಷಣೆ, ಅಂದರೆ ಗೋವುಗಳನ್ನು ಕಾಪಾಡುವುದು ಅವನ ಧರ್ಮವಾಗಿದೆ. ಇಂತು ಗೋರಕ್ಷಣೆ ಮಾಡುತ್ತಾ ಗೋವಿನಿಂದ ದೊರಕುವ ಕ್ಷೀರ (ಹಾಲು)ಮತ್ತು ಅದರಿಂದ ಉತ್ಪಾದಿಸುವ ಮೊಸರು, ಹಾಗು ಬೆಣ್ಣೆ (ತುಪ್ಪ) ಇವುಗಳನ್ನು ಮಾರಾಟ ಮಾಡಿ ಆ ದ್ರವ್ಯದಿಂದ ಜೀವಿಸುವುದು ವೈಶ್ಯಧರ್ಮವಾಗಿರುವುದು. ಇದರಂತೆ ವೈಶ್ಯನಿಗೆ ಕುಸೀದವೂ ('ಕುಸೀದಂ ವೈಶ್ಯಜೀವಿಕಾ' ಎಂದು ಅನುಶಾಸನವಿರುವುದರಿಂದ) ಧರ್ಮವಾಗಿದೆ. ಕುಸೀದವೆಂದರೆ ಧನಿಕರಿಗೆ ಅಥವಾ ದ್ರವ್ಯಾಪೇಕ್ಷಿ-ಗಳಿಗೆ ಧನವನ್ನು ವೃದ್ಧಿಯ ನಿಯಮದಿಂದ, ಅಂದರೆ ಅಧಿಕ ಬಡ್ಡಿವೃದ್ಧಿಯ ನಿಯಮದಿಂದ ಧನವನ್ನು (ಸಾಲವಾಗಿ) ನೀಡಿ ಹೆಚ್ಚು ಬಡ್ಡಿಯನ್ನು ಸಂಪಾದಿಸುವುದಕ್ಕೆ ಕುಸೀದವೆಂದು ಹೆಸರು. ಹೀಗೆ ವೈಶ್ಯನಿಗೆ ಕೃಷಿ, ವಾಣಿಜ್ಯ, ಗೋರಕ್ಷಾ ಹಾಗೂ ಕುಸೀದಗಳಿಂದ ಜೀವಿಸುವುದು ಧರ್ಮವಾಗಿರುತ್ತದೆ.

ತ್ರಿವರ್ಣೀಯರ ಧರ್ಮಗಳನ್ನು ನಿರೂಪಿಸಿದ ಮೇಲೆ ಈಗ ಶೂದ್ರಧರ್ಮವನ್ನು ನಿರೂಪಿಸುವರು. ಶೂದ್ರನಿಗೆ ಮೇಲೆ ಹೇಳಿದ ಬ್ರಹ್ಮ ಕ್ಷತ್ರಿಯ ವೈಶ್ಯರೆಂಬುವ ಮೂರು ವರ್ಣದವರ ಸೇವೆ ಮಾಡುತ್ತಾ ಜೀವಿಸುವುದು ಧರ್ಮವಾಗಿದೆ. ಈ ಚಾತುರ್ವರ್ಣ್ಯದವರಿಂದ ಭಿನ್ನರಾದ ವರ್ಣಬಾಹ್ಯರಾದ ಕುಂಭಕಾರ, ಕಾರು, ಸೂತ(ಸೂದ)ರೇ ಮೊದಲಾದವರು ತಮ್ಮ ತಮ್ಮ ಪೂರ್ವಜರು ಮಾಡುತ್ತಿದ್ದಂತೆ ನಿಂದನೀಯವಲ್ಲದ, ಕುಲವೃದ್ಧರು ಆಚರಿಸುತ್ತಿದ್ದಂತೆ ಆಚರಿಸುತ್ತಾ ಜೀವಿಸಬೇಕು (ವರ್ತಿಸತಕ್ಕದ್ದು).

ಭೀಷ್ಮಾಚಾರ್ಯರು ತಮ್ಮ ಉಪದೇಶವನ್ನು ಮುಂದುವರಿಸಿ ಹೀಗೆ ನಿರೂಪಿಸಿದರು. "ಯುಧಿಷ್ಠಿರ! ಕೇಳು. ಪರಿ-ಪ್ರಿಯರಾದ ಬ್ರಾಹ್ಮಣಾದಿಗಳು, ವರ್ಣಕ್ರಮದಂತೆ ಬ್ರಾಹ್ಮಣ ಕ್ಷತ್ರಿಯ ವೈಶ್ಯರುಗಳು ಪೂಜ್ಯರಾಗಿದ್ದಾರೆ. ಶ್ರೀಹರಿಭಕ್ತಿಯಲ್ಲಿ ಉತ್ತಮನಲ್ಲದ ವರ್ಣದಿಂದ ಶ್ರೇಷ್ಠನಾಗಿದ್ದರೂ ಅಂತಹವನು ಅತ್ಯಂತ ಪೂಜ್ಯನಾಗುವುದಿಲ್ಲ. ವಿಷ್ಣು ಭಕ್ತ್ಯಾದಿಗಳಲ್ಲಿ ಆಧಿಕ್ಯ-ವುಳ್ಳ ತಾರತಮ್ಯದಲ್ಲಿ ಹೀನವರ್ಣದವನಿಂದ ಹೆಚ್ಚು ಪೂಜ್ಯನಾಗಲಾರನೆಂದು ತಿಳಿಯಬೇಕು. ಅಂತಹ ಹೀನವರ್ಣೀಯನು ನಮಸ್ಕಾರವಿಲ್ಲದಂತೆ ಪೂಜಾರ್ಹನಾಗಿದ್ದಾನೆ. ವರ್ಣಹೀನನಾಗಿದ್ದರೂ ಅಧಿಕವಾಗಿ ಶ್ರೀಹರಿಭಕ್ತಿ ವಿಶಿಷ್ಟನಾದವನು, ಅಧಿಕ ಹರಿಭಕ್ತಿಯಿರುವುದರಿಂದ ಅಂತಹವನು ಆದರಣೀಯನಾಗುವನು.

ಬ್ರಾಹ್ಮಣನಿಗೆ ಸತ್ತತ್ತ್ವೋಪದೇಶವು ಪರ(ವಿಶೇಷ)ಧರ್ಮವೆಂದು ಹಿಂದೆ ಹೇಳಿದೆಯಷ್ಟೇ? ಹಾಗಾದರೆ ಬ್ರಾಹ್ಮಣನು ತತ್ತ್ವಜ್ಞಾನವನ್ನು ತಿಳಿಯದವನಾಗಿದ್ದಲ್ಲಿ ಉಪದೇಶ ಮಾಡುವುದು ಯಾರ ಧರ್ಮ? ಎಂದರೆ ಹೇಳುವರು. ತತ್ತ್ವ-

ಜ್ಞಾನಾನಭಿಜ್ಞನಾದ ಅಂತಹ ಬ್ರಾಹ್ಮಣನಿಂದ ಅನುಮತಿ ಪಡೆದು ಉಪದೇಶಿಸುವುದು (ಕ್ಷತ್ರಿಯರು ಉಪದೇಶಿಸುವುದು) ಧರ್ಮವಾಗಿದೆ. ಕ್ಷತ್ರಿಯನು ತತ್ತ್ವಜ್ಞಾನವಿದುರನಾದ ಬ್ರಾಹ್ಮಣನಿಂದ ಅಪ್ಪಣೆ ಪಡೆದು ಉಪದೇಶ ಮಾಡಬಹುದೆಂದು ತಾತ್ಪರ್ಯ.

ಒಂದು ವೇಳೆ ಕ್ಷತ್ರಿಯನಿಗೆ ಉಪದೇಶ ಸಾಮರ್ಥ್ಯವಿಲ್ಲದಿರುವಾಗ ಬ್ರಾಹ್ಮಣ ಮತ್ತು ಕ್ಷತ್ರಿಯನ ಅನುಮತಿ ಪಡೆದು ಉಪದೇಶ ಮಾಡುವುದು ವೈಶ್ಯನಿಗೆ ಧರ್ಮವು. ಪರಮ ಆಪತ್ಕಾಲದಲ್ಲಿ ಅಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯವರ್ಣದವರು ಅಜ್ಞರಾಗಿದ್ದಲ್ಲಿ, ಶೂದ್ರನು ಅವರ ಅನುಮತಿ ಪಡೆದು ತನ್ನ ಪುತ್ರಾದಿಗಳಿಗೆ ಉಪದೇಶ ಮಾಡುವುದು ಅವನಿಗೆ ಧರ್ಮವಾಗಿದೆ. ಉಚ್ಚ ವರ್ಣದವರಾರೂ ಉಪದೇಶಾನರ್ಹರಾಗಿದ್ದಾಗ ಅವರ ಅಪ್ಪಣೆ ಪಡೆದು ತನ್ನ ಪುತ್ರ ಬಾಂಧವರಿಗೆ ಉಪದೇಶ ಮಾಡಬಹುದು. ಅದು ಅವನ ಧರ್ಮವಾಗುವುದು. ಆದರೆ ತನಗಿಂತ ಉತ್ತಮರಾದ ವರ್ಣೀಯರಿಗೆ ಉಪದೇಶ ಮಾಡಬಾರದೆಂದು ಭಾವ. ಬ್ರಾಹ್ಮಣಾದಿ ವರ್ಣಗಳಲ್ಲದ ವರ್ಣಬಾಹಿರನಿಗೆ ತತ್ತ್ವೋಪದೇಶವು ಧರ್ಮ-ವಾಗುವುದೇ? ಎಂದರೆ, ಬ್ರಾಹ್ಮಣಾದಿ ನಾಲ್ಕು ವರ್ಣದವರು ಅಜ್ಞಾನಿಗಳಾಗಿದ್ದರೆ, ಅಂದರೆ "ವರ್ಣೇಶ್ವಜ್ಞೇಷ್ವ ವರ್ಣಾಸ್ತು ನ ಜ್ಞಾನೀ ಸ್ಯಾತ್" - 'ವರ್ಣಬಾಹಿರನಾದವನು ಯಾವುದೇ ಪ್ರಕಾರದಿಂದಲೂ ಜ್ಞಾನಿಯಾಗಲಾರನು' ಎಂಬ ಶ್ರುತಿ-ಯಿರುವುದರಿಂದ ವರ್ಣಬಾಹ್ಯನಿಗೆ ಜ್ಞಾನವಿಲ್ಲದಿರುದರಿಂದ ತತ್ತ್ವೋಪದೇಶ ಪ್ರಾಪ್ತಿಯು ಇಲ್ಲವೇ ಇಲ್ಲ.

ಮುಂದುವರೆದು ಭೀಷ್ಮರು ಹೇಳಹತ್ತಿದರು - ಬ್ರಾಹ್ಮಣಾದಿ ವರ್ಣದವರು (ಸ್ತ್ರೀಯರು) ಸಕಲ ವೇದ-ತಂತ್ರಗಳಲ್ಲಿ ಉಕ್ತವಾದುದೆಲ್ಲವನ್ನೂ ತಿಳಿಯಬೇಕು (ತಿಳಿಯಲು ಅರ್ಹರು). ಮೂರು ವರ್ಣದ ಸ್ತ್ರೀಯರು ವೇದಗಳನ್ನು ಬಿಟ್ಟು, ತಂತ್ರಗಳಲ್ಲಿ ಹೇಳಿರುವುದನ್ನು ತಿಳಿಯಬೇಕು. ಸ್ತ್ರೀಯರು ಮನೋವಾಕ್ಕಾಯಗಳಿಂದ ತಮ್ಮ ತಮ್ಮ ಪತಿಗಳಲ್ಲಿಯೇ ಆಸಕ್ತರಾಗಿ, ಅವರನ್ನು ಅನುಸರಿಸಿ ಪತಿವ್ರತೆಯರಾಗಿರುವುದು ಧರ್ಮವು. ಇದರಂತೆ ಸ್ವಪತ್ನಿಯರಲ್ಲಿ ಮಾತ್ರ ಅನುರಕ್ತರಾಗಿ ನಡೆಯುವುದು ಪುರುಷರಿಗೆ ಧರ್ಮವಾಗಿದೆ. ಶ್ರೀಹರಿಭಕ್ತಿ ಮುಂತಾದ ಗುಣಗಳಿಂದ ಶ್ರೇಷ್ಠರಾದ ದೇವತೆಗಳು ಹಾಗೂ ಋಷಿಗಳ ಸ್ತ್ರೀಯರೊಡನೆ ಕ್ರೀಡಿಸಬೇಕೆಂದು ಬಯಸುವವರು ಆ ಸ್ಮರಣೆ ಮಾತ್ರದಿಂದಲೇ ಅಂತು ಆಶಿಸಿದ ತಮೋಯೋಗ್ಯ ಪುರುಷರು ಅಂಧಂತಮಸ್ಸಿಗೆ ಬೀಳುವರು ಎಂದು ಹೇಳಿ, ತಮಗಿಂತ ಉತ್ತಮರಾದ ಸ್ತ್ರೀಯರ ವಿಷಯದಲ್ಲೂ ನಿರೂಪಿಸುತ್ತಾರೆ. ಉತ್ತಮ ಸ್ತ್ರೀಯರಿಂದ ಭಿನ್ನರಾದ, ತಮಗಿಂತ ಹೆಚ್ಚು ಹೆಚ್ಚಾದ ಗುಣಗಳಿಂದ ಶ್ರೇಷ್ಠರಾದವರ್ಯಾರೋ ಅಂತಹವರೊಡನೆ ರಮಿಸಿದರೆ ಜ್ಞಾನಾದಿ ಗುಣರೂಪವಾದ, ಸಮಸ್ತವಾದ ದ್ರವ್ಯಹಾನಿಗೆ ಪಾತ್ರರಾಗಬೇಕಾಗುವುದು. ಶೂದ್ರ ಸ್ತ್ರೀಯರೊಡನೆ ಕ್ರೀಡಿಸಿದರೆ ಎಷ್ಟು ಗುಣಹಾನಿಯಾಗುವುದೋ ಅದಕ್ಕಿಂತ ವೈಶ್ಯಸ್ತ್ರೀಯರಲ್ಲಿ ರಮಿಸಿದರೆ ಅಧಿಕ ಗುಣಹಾನಿಯಾಗುವುದು. ಅದಕ್ಕಿಂತಲೂ ಕ್ಷತ್ರಿಯ ಸ್ತ್ರೀಯರಲ್ಲಿ ಸಂಭೋಗಿಸಿದರೆ ಹೆಚ್ಚಿನ ಗುಣನಷ್ಟವಾಗುವುದು. ಅದಕ್ಕಿಂತಲೂ ಬ್ರಾಹ್ಮಣ ಸ್ತ್ರೀಸಂಭೋಗದಿಂದ ಅಧಿಕವಾಗಿ ಜ್ಞಾನಾದಿ ಗುಣಗಳು ನಷ್ಟವಾಗುವುದು. ಅಥವಾ ಗುಣಗಳಿಂದ ಶ್ರೇಷ್ಠರಾದ ಪುರುಷರ ಸ್ತ್ರೀಯರನ್ನು ಸಂಭೋಗಿಸಲು ಆಶಿಸಿದ ಮಾತ್ರದಿಂದಲೇ ಅಂತಹ ಅಯೋಗ್ಯ ಪುರುಷನು ಅಂಧಂತಮಸ್ಸನ್ನು ಪಡೆಯುವನು. ಮಾನವರಲ್ಲಿ ಕೆಲ ಸಂದರ್ಭಗಳಲ್ಲಿ ಕೆಲವು ಕಡೆ ಸ್ತ್ರೀಯರಲ್ಲಿ ಶ್ರೀಹರಿಭಕ್ತ್ಯಾದಿಗುಣಾಧಿಕ್ಯವು ಕಂಡುಬರುವುದರಿಂದ ಅಂತಹ ಗುಣಾಧಿಕರಾದ ಪುರುಷರ ಸ್ತ್ರೀಯರು, ಅವರ ಉತ್ತಮೋತ್ತಮರಾದ ಪುರುಷರಲ್ಲಿ ಅಧಮವರ್ಣದ ಸ್ತ್ರೀಯನ್ನು ಭೋಗಿಸಬೇಕೆಂಬ ಭಾವನೆಯುಂಟಾದಲ್ಲಿ ಅಂಥವರ ಪುಣ್ಯ ನಾಶವಾಗುವುದು. ಆದರೆ ಮಹತ್ತವಾದ ದೋಷವು ಪ್ರಾಪ್ತವಾಗುವುದಿಲ್ಲ.

ಈಗ ಋಷಿಗಳು, ದೇವತೆಗಳು, ಅನ್ಯಸ್ತ್ರೀಯರನ್ನು ಭೋಗಿಸಬೇಕೆಂಬ ಆಶೆಯಿಂದ ಹಾಗೆ ಇಚ್ಛಿಸಿದರೆ ಗುಣಗಳೆಲ್ಲವೂ ನಾಶವಾಗಿ ಅಂಧಂತಮಸ್ಸಿಗೆ ಬೀಳುವರು ಎಂದು "ಸ್ವನಾಶನಿಯತಿರ್ನೃಣಾಮ್" ಎಂಬ ವಾಕ್ಯಕ್ಕೆ ವಿಷಯದಲ್ಲಿ ಬಾಧಕವನ್ನು

ಹೇಳಿ, "ಸ್ತ್ರೀಯ ಪುನ್ನಿಯತಿಃ ಸ್ತ್ರೀಣಾಮ್" ಎಂಬುದಕ್ಕೂ ವಿಷಯದಲ್ಲಿ ಬಾಧಕವನ್ನು ನಿರೂಪಿಸುವರು. ಸ್ತ್ರೀಯರು ತಮ್ಮ ನಿಯತ ಪತಿಗಳನ್ನು ಬಿಟ್ಟು ಬೇರೊಬ್ಬರನ್ನು ತಮ್ಮ ಪತಿಸಮಾನರನ್ನಾಗಿ ತಿಳಿದು ತಮಗಿಂತ ಕೆಳಕೆಳಗಿನ ಜಾತಿ ಹಾಗೂ ಗುಣಗಳಿಂದ ನೀಚರಾದವರೊಡನೆ ಕ್ರೀಡಿಸಿದಲ್ಲಿ ಹಾಗೆ ಹಾಗೆಯೇ ಅಧಿಕವಾದ ದೋಷವುಂಟಾಗುವುದು.

ಈಗ "ಸ್ತ್ರೀಭಿರ್ವೇದಾನ್ವಿನಾಖಿಲಮ್" ಎಂಬುದಕ್ಕೆ ಅಪವಾದವನ್ನು ಹೇಳುವರು. ದ್ರೌಪದೀ-ಶಚೀದೇವಿ ಮುಂತಾದ ಉತ್ತಮ ಸ್ತ್ರೀಯರು ಹೇಗೆ ವೇದಗಳನ್ನು ಅರಿಯಲು ಯೋಗ್ಯರೋ ಹಾಗೆಯೇ ಉತ್ತಮರಾದ ದೇವ ಋಷಿ ಮುಂತಾದವರ ಸ್ತ್ರೀಯರೂ ಸಹ ವೇದಗಳನ್ನರಿಯಲು ಯೋಗ್ಯರಾಗಿದ್ದಾರೆ. ಕೆಲವರ್ಗದ ತಾರತಮ್ಯದಲ್ಲಿ ಕಡಿಮೆಯವರಾದ ಪುರುಷರು ತಮಗಿಂತ ಉತ್ತಮರಾದವರ ಪತ್ನಿಯರನ್ನು ಭೋಗಿಸಬೇಕೆಂದು ಚಿಂತಿಸುವ ಮಾತ್ರದಿಂದಲೇ ಅವರಿಗೆ ಅಧಿಕ ದೋಷವು ಪ್ರಾಪ್ತವಾಗುವುದು. ಸಮಾನ ಪುರುಷರು ಹಾಗೂ ಉತ್ತಮರಾದ ಪುರುಷರೊಡನೆ ಭೋಗಿಸಲು ಅಪೇಕ್ಷೆ ಉಂಟಾದರೂ ಅದರಿಂದ ಸ್ತ್ರೀಯರಿಗೆ ಮಹತ್ತಾದ ದೋಷವು ಪ್ರಾಪ್ತವಾಗುವುದು.

ಮಾನವರಾಗಿ ಜನಿಸಿರುವ ದ್ರೌಪದೀದೇವಿ ಮೊದಲಾದವರಿಗೆ ಶ್ರೇಷ್ಠತ್ವವು ಇಲ್ಲದಿರುವುದರಿಂದ ಅವರಿಗೆ ವೇದಾ-ಧಿಕಾರವು ಹೇಗೆ ಬರುವುದು? ಎಂದಾಶಂಕಿಸಿ ಉತ್ತಮ ಸ್ತ್ರೀಯರು ಯಾರೆಂದು ತಿಳಿಸುವರು.

ದೇವತಾಸ್ತ್ರೀಯರು ಋಷಿಪತ್ನಿ(ಸ್ತ್ರೀ)ಯರುಗಳು ಮಾನವರಾಗಿ, ಕಪಿಗಳಾಗಿ (ವಾನರರಾಗಿ) ಜನ್ಮ ತಾಳಿದ್ದರೂ ಅವರನ್ನು ಉತ್ತಮರೆಂದೇ ತಿಳಿಯಬೇಕು. "ಭಾರತೀ ಶಚ್ಯಾದ್ಯಾಃ" ಎಂದು ಹೇಳದೆ "ಕೃಷ್ಣಾಭಿರಿವ" ಎಂದು ಹೇಳಿರುವುದು, ಮಾನವ ಕುಲದಲ್ಲಿ ಜನಿಸಿರುವ ದೇವರ್ಷಿ ಸ್ತ್ರೀಯರಿಗೆ ಉತ್ತಮತ್ವವನ್ನು ಪ್ರತಿಪಾದಿಸಲು ಹೇಳಿರುವುದೆಂದು ತಿಳಿಯಬೇಕು. ಶ್ರೇಷ್ಠರಾದ ಶೂದ್ರರು ವೇದಗಳಲ್ಲದ, ವೇದಾರ್ಥಬೋಧಕಗಳಾದ (ಅನುವಾದಕಗಳಾದ) ಭಾರತ – ಪುರಾಣಾದಿಗಳನ್ನು ತಿಳಿಯಬಹುದು. ವರ್ಣಬಾಹ್ಯರಾದವರು ಶ್ರೀಹರಿಯ ನಾಮಸ್ಮರಣೆಯು ಸ್ವ-ಕರ್ತವ್ಯ ಕರ್ಮಸಾಧಕವೆಂದು ತಿಳಿದು ಶ್ರೀಹರಿನಾಮ ಸ್ಮರಣಾದಿಗಳನ್ನು ಮಾಡಬೇಕು.

ಈಗ ಭೀಷ್ಮರು ಉದ್ಧಾರಕಸ್ವಾಮಿಯಾದ ಶ್ರೀಹರಿಪರಮಾತ್ಮನನ್ನು ಚಿಂತಿಸುವ ಕ್ರಮವನ್ನು, ಶ್ರೀಹರಿಯನ್ನೂ, ಅವನ ವಿಷಯಗಳನ್ನು ಹೇಗೆ ತಿಳಿಯಬಾರದೆಂಬುದನ್ನೂ ತಿಳಿಸುವರು.

ಕೆಲವು ಗುಣಗಳಿಂದ ಬ್ರಹ್ಮರುದ್ರಾದಿಗಳನ್ನು ಶ್ರೀಹರಿಪರಮಾತ್ಮನಿಗೆ ಸದೃಶರೆಂದಾಗಲಿ ಅಥವಾ ಶ್ರೀವಿಷ್ಣುವಿಗಿಂತ ಉತ್ಕೃಷ್ಟರೆಂದಾಗಲಿ ಯಾವ ದೇಶಕಾಲಗಳಲ್ಲಿಯೂ ತಿಳಿಯಬಾರದು. ಹಾಗೆ ತಿಳಿಯುವವನು ಸರ್ವಥಾ ನಿವಾರಿಸಲಾಗದ ಅಂಧಂತಮಸ್ಸಿಗೆ ಪಾತ್ರನಾಗುವನು. ಬ್ರಹ್ಮರುದ್ರಾದಿಗಳಿಂದ ಶ್ರೀವಿಷ್ಣುವು ಭಿನ್ನನೆಂದು (ಬ್ರಹ್ಮರುದ್ರರು ಮತ್ತು ಶ್ರೀಹರಿಗೆ ಭೇದವನ್ನು) ತಿಳಿಯುವುದಿಲ್ಲವೋ ಅಂಥವರೂ ಅಂಧಂತಮಸ್ಸನ್ನು ಪಡೆಯುವರು. ಶ್ರೀವಿಷ್ಣುವಿಗೂ ಅವನ ಗುಣಗಳಿಗೂ ಮತ್ತು ಶ್ರೀಹರಿಗೂ ಅವನ ಅವತಾರಗಳಾದ ಶ್ರೀರಾಮ ಕೃಷ್ಣಾದ್ಯವತಾರಗಳಿಗೂ ಹಾಗೂ ಜಗತ್ಸೃಷ್ಟ್ಯಾದಿ ಕರ್ಮಗಳಲ್ಲಿಯೂ ಭೇದವಿದೆಯೆಂದು ತಿಳಿಯುವವನು ಅಂಧಂತಮಸ್ಸಿಗೆ ಬೀಳುವನು. ಯಾವನು, ಅವತಾರವರ್ತಿದ ಅಪ್ರಾಕೃತ ಶರೀರನಾದ ಶ್ರೀಹರಿಯು ಪಂಚಭೂತಾತ್ಮಕ (ಪ್ರಾಕೃತ) ಶರೀರವುಳ್ಳವನೆಂದು ತಿಳಿಯುವನೋ ಅಂಥವನೂ ಅಂಧಂತಮಸ್ಸನ್ನು ಪಡೆ-ಯುವನು. ಶ್ರೀಹರಿಪರಮಾತ್ಮನಿಗೆ ದುಃಖ, ಅಜ್ಞಾನ, ದೇಹಾದಿ ಭ್ರಮಗಳು ಉಂಟೆಂದಾಗಲಿ, ಲೋಭ, ಮರಣಾದಿಗ-ಳಿವೆಯೆಂದಾಗಲಿ, ತಾರತಮ್ಯವಿದೆಯೆಂದಾಗಲಿ ಅಥವಾ ಮೂಲರೂಪದ ಶ್ರೀಹರಿಗೂ ಶ್ರೀರಾಮಕೃಷ್ಣಾದ್ಯವತಾರಗಳಿಗೂ ಯುಗಾನುಸಾರದಿಂದ ನೀಚೋಚ್ಚಭಾವವನ್ನಾಗಲಿ ಚಿಂತಿಸುವವನೂ ಅಂಧಂತಮಸ್ಸಿಗೆ ಪಾತ್ರನಾಗುವನು. ಶ್ರೀವಿಷ್ಣುವಿನ ಭಕ್ತರಲ್ಲಿ ಪರಸ್ಪರ ತಾರತಮ್ಯವಿಲ್ಲವೆಂದಾಗಲಿ ಶ್ರೀಹರಿಯಲ್ಲಿ, ಶ್ರೀಹರಿಯ ಭಕ್ತರಾದ ಬ್ರಹ್ಮರುದ್ರಾದಿಗಳಲ್ಲಿ ಮನೋ-

ವಾಕ್ಕಾಯಗಳಿಂದ ವಿರೋಧವನ್ನು ಆಚರಿಸದವನೂ, ಶ್ರೀವಿಷ್ಣುವಿನ ಅಧೀನವಾದ, ಪದಾರ್ಥಗಳ (ಸಮುದಾಯ) ದಶೆಯಿಂದ ಇತರವಾದ ಯಾವುದಾದರೂ ಸ್ವತಂತ್ರವಾದ ವಸ್ತುವಿದೆಯೆಂದು ತಿಳಿಯುವವನೂ, ಶ್ರೀಹರಿಯೂ ಮತ್ತೊಬ್ಬರಿಗೆ ಅಧೀನನೆಂದು ಅಂದರೆ ವಿಷ್ಣುವು ಪರತಂತ್ರನೆಂದು ಭಾವಿಸುವವನು, ಇದರಂತೆ ಶ್ರೀಹರಿಯ ಸರ್ವಸ್ವಾತಂತ್ರ್ಯಾದಿ ಅನಂತ ಕಲ್ಯಾಣಗುಣಗಳನ್ನು, ಗುಣಪೂರ್ಣತ್ವವನ್ನು ತಿಳಿಯದಿರುವವನೂ ಸಹ ಶ್ರೀಹರಿಭಕ್ತಿರಹಿತರಾದ, ಹಿಂದೆ ನಿರೂಪಿಸಿದವ-ರೆಲ್ಲರೂ ಕೂಡ ಖಂಡಿತ ಅಂಧಂತಮಸ್ಸನ್ನು ಅನುಭೋಗಿಸುವರು.

ಈಗ ಶ್ರೀಹರಿಯಲ್ಲಿ ನವವಿಧ ದ್ವೇಷ ಮಾಡುವರಿಗೆ ತಮಸ್ಸು ಲಭಿಸುವುದೆಂದು ಹೇಳಿ, ಸಂಶಯಗ್ರಸ್ತರಾದ ತ್ರಿವಿಧ ಜೀವರ ಮಧ್ಯದಲ್ಲಿ ಅಧಮರಾದವರು ಯಾವ ಗತಿಯನ್ನು ಹೊಂದುವರೆಂಬುದನ್ನು ತಿಳಿಸುವರು – ಯಾರು ಶ್ರೀಹರಿ ಸರ್ವೋತ್ತಮತ್ವಾದಿ ತತ್ತ್ವವಿಷಯದಲ್ಲಿ ಸರ್ವದಾ ಸಂಶಯಗ್ರಸ್ತರಾಗಿರುವರೋ ಅಂಥ ಅಧಮರಾದ ಮನುಷ್ಯರು ಅಧಮರು. ಅಂಥವರು ನರಕಕ್ಕೆ ಹೋಗುವರು. ಮನುಷ್ಯರಲ್ಲಿ ಉತ್ತಮರಾದವರಿಗೆ ಆಗುವ ಗತಿಯನ್ನು ಈಗ ನಿರೂಪಿಸುವರು. ಸಂಶಯವುಳ್ಳ ಆ ಜ್ಞಾನಿಗಳು ದೋಷಗಳಿಂದ ಅರ್ಥಾತ್ ಸಂಶಯರೂಪ ಮನೋದೋಷಯುಕ್ತರಾದವರು ಜ್ಞಾನಾದಿ ಗುಣಾಧಿಕ್ಯದಿಂದ ಅಧಮಗತಿಯನ್ನು ಹೊಂದುವುದೇ ಇಲ್ಲ. ಮಧ್ಯಮರಾದ ಮನುಷ್ಯರ ಗತಿಯನ್ನು ಹೇಳುವರು. ಗುಣಾಃ ಅಂದರೆ ಜ್ಞಾನಾದಿಗಳು, ದೋಷಾಃ ಅಂದರೆ ಸಂಶಯಾದಿಗಳು ಅವರಿಗೆ ಸಮಾನವಾಗಿದ್ದರೆ, ಸರ್ವದಾ ಅಂದರೆ ಪ್ರತಿಕಲ್ಪಗಳಲ್ಲಿಯೂ ಪುನಃ ಪುನಃ ಅಂಥವರಿಗೆ ಮನುಷ್ಯ ಜನ್ಮವೇ ಲಭಿಸುವುದು ಎಂದು ಭಾವ. ಮನುಷ್ಯೋತ್ತರಿಗೆ ಗುಣಾಧಿಕ್ಯವಿರುವುದರಿಂದ ಅಧಮ ಗತಿಯಾಗುವುದಿಲ್ಲವೆಂದು ಹೇಳಲಾಗಿದೆಯಲ್ಲ. ಹಾಗಾದರೆ ಅಂತಹವರಿಗೆ ಯಾವ ಗತಿ ಎಂಬುದನ್ನು ಹೇಳುವರು. ಮೇಲೆ ಹೇಳಿದಂಥರಿಗೆ ದೋಷ ಕ್ಷಯವಾದಂತೆಲ್ಲಾ ಕ್ರಮವಾಗಿ ಭುವಃ – ಅಂದರೆ ಭುವರ್ಲೋಕ, ಸ್ವಃ – ಸ್ವರ್ಲೋಕವು, ಮಹಃ – ಮಹರ್ಲೋಕಗಳು ಎಂಬ ಕ್ರಮದಿಂದ ಪ್ರಾಪ್ತವಾಗುವುದು. ಸಕಲ ದೋಷಗಳೂ ಪರಿಹಾರವಾದಮೇಲೆ ಸ್ವ-ಸ್ವಯೋಗ್ಯತಾನುಸಾರವಾಗಿ ಭಕ್ತಿ (ಮಾಹಾತ್ಮ್ಯಜ್ಞಾನಪೂರ್ವಕವಾದ ಭಕ್ತಿ)ಜ್ಞಾನ, ಶ್ರೀಹರಿಯ ಮಾಹಾತ್ಮ್ಯಜ್ಞಾನಗಳ ಉನ್ನತಿಯಿಂದಾಗಲೇ ಅಂಥವರಿಗೆ ಮೋಕ್ಷವು ದೊರಕುವುದು ಎಂದು ಶ್ರೀಹರಿ ಸರ್ವೋತ್ತಮತ್ವಜ್ಞಾನದ ಫಲವನ್ನು ಹೇಳಿ ಈಗ ಧರ್ಮದ ಫಲವನ್ನು ತಿಳಿಸುವರು. ತಮತಮಗೆ ವಿಹಿತವಾದ ವರ್ಣಾ-ಶ್ರಮೋಚಿತವಾದ ಕರ್ಮಾನುಷ್ಠಾನ ಮಾಡುವುದರಿಂದ ಸ್ವರ್ಗಪ್ರಾಪ್ತಿಯಾಗುವುದು. ಶ್ರೀವಿಷ್ಣು ವೈಷ್ಣವರ ವಚನದಿಂದ ಅಂದರೆ, "ನೀನು ವಿಹಿತವಾದ ಕರ್ಮಾನುಷ್ಠಾನದಿಂದ ಶುದ್ಧನಾಗಿದ್ದೀಯೇ" ಎಂಬ ವಿಷ್ಣು ವೈಷ್ಣವರ ಮಾತಿನಿಂದಲೂ, ನಿಷಿದ್ಧಾಚರಣೆಯಿಂದ ಬಂದ ಪಾಪವು ಪರಿಹಾರವಾಗುವುದು. ಹೀಗೆ ಸರ್ವಧರ್ಮಗಳ ಸಾರಭೂತವಾದ ಉಪದೇಶವನ್ನು ಭೀಷ್ಮರಲ್ಲಿ ಸನ್ನಿಹಿತನಾದ ಶ್ರೀಕೃಷ್ಣನು ಪಾರ್ಥನಿಗೆ ಹೇಳಿದನು. "ಪಾರ್ಥಾನಾಂ ಗದಿತಂ" ಅಂದರೆ ಪಾಂಡವರಿಗಾಗಿ ಹೇಳಲ್ಪಟ್ಟಿತು ಎಂದು ಹೇಳಿದ್ದು ಯುಕ್ತವಲ್ಲ. ಭೀಷ್ಮಾಚಾರ್ಯರು ನಿನ್ನ ಪ್ರಶ್ನೆಗಳೇನು? ಕೇಳು ಎಂದು ಧರ್ಮರಾಜನನ್ನು ಕೇಳಿರುವುದರಿಂದ ಪಾರ್ಥರಿಗೆ ಎಂದು ಹೇಳಿದ್ದು ವಿರೋಧವಲ್ಲವೆಂದು ಹೇಳಬಾರದು. ಎಲ್ಲರೂ ಭೀಷ್ಮರ ಮಾತನ್ನು ಕೇಳಿರುವುದರಿಂದ ವಿರೋಧವಿಲ್ಲವೆಂದು ಅಭಿಪ್ರಾಯ. ಪ್ರಶ್ನೆ ಮಾಡಿದ ವಾಕ್ಯದಲ್ಲಿ ಧರ್ಮರಾಜನಿಗೇ ಹೆಚ್ಚಾದ ಸಂದೇಹ-ವಿದ್ದುದರಿಂದ ಪ್ರಶ್ನಿಸು ಎಂದು ಹೇಳಿದರೆಂದು ಜ್ಞಾಪಿಸಲು 'ಪಾರ್ಥಾನಾಂ' ಎಂದು ಉಕ್ತವಾಗಿದೆ. ಭೀಮಾರ್ಜುನರಿಗೆ ಸಂದೇಹವೇ ಇರಲಿಲ್ಲವಾದ್ದರಿಂದ ಭೀಷ್ಮರು ಕೇಳಿದ್ದು ಧರ್ಮರಾಜನನ್ನು ಕುರಿತೇ ಎಂದು ತಿಳಿಯಬೇಕು. ಆದ್ದರಿಂದಲೇ ಪಾರ್ಥಾನಾಂ ಎಂದು ಬಹುವಚನ ಪ್ರಯೋಗ ಮಾಡಿರುವರು. ಧರ್ಮರಾಜ, ಭೀಮ ಮತ್ತು ಅರ್ಜುನ ಹೀಗೆ ಮೂವರು ಉಪದೇಶವನ್ನು ಕೇಳಿದರಾದರೂ, ಧರ್ಮರಾಜನಿಗೊಬ್ಬನಿಗೇ ಸಂದೇಹವಿದ್ದುದರಿಂದ 'ಪ್ರಶ್ನಿಸು' ಎಂದು ಭೀಷ್ಮರಲ್ಲಿ ಸನ್ನಿಹಿತನಾದ ಶ್ರೀಕೃಷ್ಣನು ಭೀಮಾರ್ಜುನರ ಮುಖ್ಯಾಧಿಕಾರ ಸೂಚನೆಗಾಗಿ ಎಂದು ತಿಳಿಯಬೇಕು.

ಪಾರ್ಥರಿಗೆ ಹೇಳಲ್ಪಟ್ಟ ಧರ್ಮಸಾರವನ್ನು ಕೇಳಿದ ರಾಜಾಧರ್ಮರಾಜನು ಸಹೋದರರಾದ ಭೀಮಾರ್ಜುನರನ್ನು ಮತ್ತು ವಿದುರನನ್ನೂ, ಧರ್ಮ-ಅರ್ಥ-ಕಾಮಗಳೆಂಬ ಪುರುಷಾರ್ಥಗಳಲ್ಲಿ ಮಧ್ಯದಲ್ಲಿ ಮುಖ್ಯವಾದ ಪುರುಷಾರ್ಥದ ಸಾರವನ್ನು ಹೇಳಿರಿ ಎಂದು ಕೇಳಿದನು. ಆಗ ವಿದುರನು ಧರ್ಮವೇ ಮುಖ್ಯಪುರುಷಾರ್ಥವೆಂದು ನಿರೂಪಿಸಿದನು. ಅರ್ಥವು ಮಧ್ಯವೆಂದೂ, ಕಾಮವು ಅಧಮವೆಂದೂ ನಿರೂಪಿಸಿದನು. ಏಕೆಂದರೆ ಅವೆರಡು (ಅರ್ಥ-ಕಾಮಗಳು) ನಿಷ್ಫಲ-ವಾದ್ದರಿಂದ ವಿಷಯಭೋಗವು ಪರಲೋಕಪ್ರಾಪ್ತಿಗೆ ಅಂಗಭೂತವಲ್ಲವಾದ್ದರಿಂದ ಧರ್ಮವೇ ಉತ್ತಮ ಪುರುಷಾರ್ಥ-ವೆಂದು ಹೇಳಿದನು.

ಅನಂತರ ಅರ್ಜುನನು ತ್ರಿವಿಧ ಪುರುಷಾರ್ಥಗಳಲ್ಲಿ ಅರ್ಥರೂಪ ಪುರುಷಾರ್ಥವೇ ಶ್ರೇಷ್ಠವೆಂದು ನಿರೂಪಿಸಿದನು ಮತ್ತು ಅರ್ಥವೆಂಬ ಪುರುಷಾರ್ಥವು ದೈವ ಮತ್ತು ಮಾನುಷ ಎಂದು ಎರಡು ವಿಧವಾಗಿದೆಯೆಂದು ಹೇಳಿ ಅದರಲ್ಲಿ ದೈವವು(ವಿದ್ಯಾ)ಜ್ಞಾನವೆಂದು ಹೇಳಲ್ಪಡುವುದು. ಸುವರ್ಣ ರಜತಾದಿಗಳು ಮಾನುಷಾರ್ಥವೆಂದು ಉಕ್ತವಾಗಿದೆ. ಧರ್ಮ, ಅರ್ಥ, ಕಾಮಗಳೆಂಬ ತ್ರಿವಿಧ ಪುರುಷಾರ್ಥಗಳ ಮಧ್ಯದಲ್ಲಿ ದ್ರವ್ಯವೆಂಬ ಅರ್ಥವು ಮಧ್ಯಮವು. ವಿದ್ಯೆಯೆಂಬ, ಜ್ಞಾನವೆಂಬ ಅರ್ಥಕ್ಕೆ ಉತ್ತಮತ್ವವನ್ನು ಉಪಪಾದಿಸುವರು. ವಿದ್ಯಾ(ಜ್ಞಾನ) ಎಂಬ ಹೆಸರುಳ್ಳ ಪುರುಷಾರ್ಥವು ಧರ್ಮಕ್ಕೆ ಸಾಧ್ಯವಾದ ಫಲವು. ಅಂದರೆ ಧರ್ಮ ಮಾಡಿದಾಗ ವಿದ್ಯೆಯು ಉತ್ಪನ್ನವಾಗುವುದರಿಂದ ಸಾಧ್ಯವು. ವಿದ್ಯೆಯೆಂಬ ಪುರುಷಾರ್ಥವು ಧರ್ಮಕ್ಕೆ ಸಾಧನವೂ ಆಗುವುದು. ಅರ್ಥಾತ್ ಜ್ಞಾನಪೂರ್ವಕವಾಗಿ ಆಚರಿಸಿದ ಕರ್ಮದಿಂದಲೇ ಸಾಧನವಾಗುವುದು. ಬೇರೊಂದು ಕಾರಣದಿಂದಲೂ ದೈವ ಎಂಬ ಅರ್ಥಕ್ಕೆ ಮುಖ್ಯತ್ವವನ್ನು ವಿವರಿಸುವರು. ಹರಿಸರ್ವೋತ್ತಮತ್ವಜ್ಞಾನದಿಂದಲೇ ಜೀವನು ಸಂಸಾರಬಂಧನದಿಂದ ಮುಕ್ತನಾಗುವನು. ವಿದ್ಯೆಯು ಧರ್ಮಕ್ಕೆ ಸಾಧನವೂ, ಸಾಧ್ಯವೂ ಆಗುವುದು. ಜ್ಞಾನಪೂರ್ವಕವಾಗಿ ಯಜ್ಞಯಾಗಾದಿ ಕರ್ಮ ಮಾಡುವುದರಿಂದ ಧರ್ಮವು ವಿದ್ಯೆಗೆ ಸಾಧನವಾಗುವುದು. "ಕರ್ಮಣಾ ಜ್ಞಾನಮಾತನೋತಿ, ತಪಸಾ ಬ್ರಹ್ಮವಿಜಿಜ್ಞಾಸಸ್ವ" ಎಂಬ ಶ್ರುತಿಯು ತಪಸ್ಸು ಮುಂತಾದ ಕರ್ಮದಿಂದ ಶುದ್ಧಾಂತಃಕರಣ-ವುಳ್ಳವನಿಗೆ ಜ್ಞಾನವು ಹುಟ್ಟುವುದೆಂದು ಹೇಳುವುದರಿಂದ ವಿದ್ಯೆಯು ಧರ್ಮಕ್ಕೆ ಸಾಧ್ಯವಾದ ಫಲವೆಂದು ತಿಳಿಯಬೇಕು.

ದೈವವೆಂಬ ಅರ್ಥವು ಧರ್ಮಕ್ಕಿಂತ ಶ್ರೇಷ್ಠವಾಗಲಿ, ಆದರೆ ಮಾನುಷಾರ್ಥವು ಧರ್ಮಕ್ಕಿಂತ ಎಂತು ಉತ್ತಮ-ವಾಗುವುದೆಂದು ಪ್ರಶ್ನೆ ಬಂದರೆ, ಉತ್ತರ ಹೇಳುವರು - ಮಂಗಳಕರವಾದ ವೇದವನ್ನು ತಿಳಿದಿರುವ ಶ್ರೀಹರಿಭಕ್ತರಲ್ಲಿ ವಿಷ್ಣುವಿನ ಪ್ರೀತ್ಯರ್ಥವಾಗಿ ಅರ್ಪಿಸಿದ ಸುವರ್ಣಾದಿ ಮಾನುಷಾರ್ಥವು ಜ್ಞಾನಕ್ಕೆ ಕಾರಣವು. ಕೈಮುತ್ಯನ್ಯಾಯದಿಂದ ಸುಪ್ರಯೋಜಿತವಾದ ಮಾನುಷಾರ್ಥಕ್ಕೆ ಜ್ಞಾನಕಾರಣತ್ವವನ್ನು ಉಪಪಾದಿಸುವರು. ಹಿರಣ್ಯಾದಿ ಮಾನುಷಾರ್ಥಗಳಿಂದ ಹರ್ಷಿತನಾದ (ಯಾವ) ಗುರುವು ಮೋಕ್ಷವನ್ನು ಕೊಡಲು (ಕೊಡಿಸಲು) ಸಮರ್ಥನಾಗಿರುವುದರಿಂದ ಅವನು ಜ್ಞಾನವನ್ನು ಕೊಡಲು ಸಮರ್ಥನೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೇ? ಸುಪ್ರಯೋಜಿತವಾದ ಮಾನುಷಾರ್ಥವು ಧರ್ಮವನ್ನು ಹುಟ್ಟಿಸುವುದರಿಂದ, ಕಾರಣವಾದ್ದರಿಂದ ಧರ್ಮಜನಕ ವಿಷಯದಲ್ಲಿ ಕಾರಣವಾಗದೇ ಹೋಗಬೇಕಾದೀತು. ಆದ್ದರಿಂದ ಧರ್ಮಕ್ಕಿಂತ ಅಧಿಕವಾಗುವುದಿಲ್ಲವೆಂದರೆ ಅಥವಾ ಮಾನುಷಾರ್ಥವು ಧರ್ಮದ್ವಾರಾ ಗುರುಪ್ರೀತಿಜನಕವಾದ್ದರಿಂದ ಹೇಗೆ ಅದು ಧರ್ಮಕ್ಕಿಂತ ಉತ್ತಮವೆಂದರೆ? ನಿರೂಪಿಸುವರು. ಧರ್ಮ ಪ್ರಯೋಜನವಿಲ್ಲದಲೆ, ಅಂದರೆ ಧರ್ಮವನ್ನು ಉದ್ದೇಶಿಸದೆ ಸುಪ್ರಯೋಜಿತವಾದ ಅರ್ಥಗಳಿಂದ ಗುರುಗಳು, ದೇವತೆಗಳು ಸಂತುಷ್ಟರಾಗುವರು. ನಿಷ್ಕಾಮ ಕರ್ಮಜ ಧರ್ಮಕ್ಕೂ ಸಹ ಜ್ಞಾನಸಾಧನವಾದ್ದರಿಂದ ಧರ್ಮಕ್ಕಿಂತಲೂ ಹೇಗೆ ಅಧಿಕವೆಂದರೆ, ಯದ್ಯಪಿ ಅನುದ್ದೇಶಿತವಾದ ಜ್ಞಾನಫಲೋದ್ದೇಶದಿಂದ ಮಾಡದಿರುವ ಕರ್ಮದಿಂದ ಉಂಟಾದ ಧರ್ಮವಾದರೂ, ಅರ್ಥವನ್ನು ಹೊಂದಿಕೊಂಡು ಜ್ಞಾನಾರ್ಥವನ್ನು ಅನುಸರಿಸುವುದು. ಯದ್ವಾ, ಅನುದ್ದಿಷ್ಟವಾದ ಅನ್ನ, ವಸ್ತ್ರ, ಸ್ತ್ರೀಪುತ್ರಾದಿ ಫಲೋದ್ದೇಶದಿಂದ ಮಾಡಿದ್ದರೂ

ಕರ್ಮಜನಿತವಾದ ಅರ್ಥವನ್ನೇ ಅನುಸರಿಸುವುದು. ಅನ್ನ ವಸ್ತ್ರಾದಿಗಳನ್ನು ಉತ್ಪಾದಿಸಿಯೇ ಅರ್ಥಕ್ಕೆ ಅನುಕೂಲನಾಗಿ ವರ್ತಿಸುವುದು. ಅರ್ಥದ ಶ್ರೇಷ್ಠತ್ವವನ್ನು ಉಪಸಂಹರಿಸುವರು. ಅರ್ಥರೂಪ ಪುರುಷಾರ್ಥವು ಉತ್ತಮವಾದದ್ದು. ಕಾಮವು ನೀಚವಾದುದರಿಂದ ನಿಷ್ಫಲವೆಂದು ತಾತ್ಪರ್ಯ, ಎಂಬುದು ಪ್ರಸಿದ್ಧಿ ಸೂಚಕವಾಗಿದೆ. ಈ ಪ್ರಶ್ನೆಯಲ್ಲಿ ಜ್ಞಾನಿಗಳ ಮಧ್ಯದಲ್ಲಿ ಶ್ರೇಷ್ಠರಾದ ನಕುಲ-ಸಹದೇವರು ಧರ್ಮರಾಜನಿಗೆ ಅರ್ಜುನನು ಹೇಳಿದ ಅರ್ಥರೂಪ ಪುರುಷಾರ್ಥದ ಉತ್ತಮತ್ವವು ನಮ್ಮಿಬ್ಬರಿಗೂ ಸಮ್ಮತವಾದುದೆಂದು ಹೇಳಿದರು.

ವಿದುರ ಅರ್ಜುನರು ಧರ್ಮ ಮತ್ತು ಅರ್ಥಗಳೇ ಮುಖ್ಯವಾದ ಪುರುಷಾರ್ಥವೆಂದು ಹೇಳಿ ಕಾಮವನ್ನು ಕಡೆಗಣಿಸಿದ್ದರಿಂದ, ಅಂದರೆ ಕಾಮವೆಂಬ ಪುರುಷಾರ್ಥವನ್ನು ನಿಕೃಷ್ಟವಾಗಿ ಕಂಡಿದ್ದನ್ನು ಸಹಿಸದೆ, ಪವನನಂದನನಾದ ಭೀಮಸೇನನು ಕಾಮರೂಪ ಪುರುಷಾರ್ಥವೇ ಶ್ರೇಷ್ಠವೆಂದು ಸಾಧಿಸುತ್ತಾ ತನ್ನ ಮತವನ್ನು ಮಂಡಿಸುತ್ತಿದ್ದನು. ಮಂದಹಾಸ ಮುಖರಂಜಿತನಾದ ಭೀಮಸೇನನು, ಶ್ರೇಷ್ಠರಾದ ತತ್ತ್ವಜ್ಞಾನಿಗಳ ಗುಂಪಿನಲ್ಲಿ ಉತ್ತಮನಾದ.ಭೀಮಸೇನನು, ಸಂತೋಷದಿಂದ ಅಲ್ಲಿದ್ದವರನ್ನು ತನ್ನ ಅಭಿಪ್ರಾಯಪರರನ್ನಾಗಿ ಮಾಡಿಕೊಂಡು ತನ್ನ ನಿರೂಪಣೆಯಿಂದ ಅವರನ್ನು ವಿಸ್ಮಯಗೊಳಿಸುತ್ತಾ, ಕಾಮವಿಷಯ ಅಥವಾ ಇಚ್ಛಾ ಎನ್ನುವ ವಿಕಲ್ಪವನ್ನು ಮನಸ್ಸಿನಲ್ಲಿಟ್ಟುಕೊಂಡು ಕಾಮರೂಪ ಮಂಗಳಕರ ಪುರುಷಾರ್ಥಕ್ಕಿಂತ ಉತ್ತಮ ಪುರುಷಾರ್ಥಗಳು ಬೇರೊಂದಿಲ್ಲ. ಅಂದರೆ ಕಾಮವೇ ಶ್ರೇಷ್ಠವಾದ ಪುರುಷಾರ್ಥವಾದ್ದರಿಂದ ಅದು ಧರ್ಮ ಅರ್ಥರೂಪ ಪುರುಷಾರ್ಥಗಳಿಗಿಂತ ಎಂತು ನೀಚವಾದೀತು? ಭೀಮಸೇನನು ಕಾಮ ಎಂಬ ಅರ್ಥವಿವರಣಪೂರ್ವಕ, ಕಾಮವೇ ಉತ್ತಮ ಪುರುಷಾರ್ಥವೆಂದು ಸಾಧಿಸುತ್ತಾನೆ. 'ಕಾಮ್ಯಂ ಕಾಮ್ಯತೇ ಇತಿ ಕಾಮ' ಎಂಬ ವ್ಯುತ್ಪತ್ತಿಯಿಂದ ಜ್ಞಾನಿಗಳಾದ ಹಿರಿಯರು ಕಾಮವೇ ಕಾಮ್ಯಶಬ್ದದಿಂದ ವಾಚ್ಯವಾಗಿದೆ ಎಂದು ಹೇಳುವರು. ಇದು ಪ್ರಸಿದ್ಧವಾಗಿದೆ. ಧರ್ಮ ಮೊದಲಾದ ಪುರುಷಾರ್ಥಗಳು ಸ್ವಸ್ವ-ವಿಹಿತ ಸಾಧನಗಳಿಂದ ಸಹಿತವಾಗಿ ಕಾಮ್ಯಗಳಾಗಿರುವುದರಿಂದ ಕಾಮತ್ವವು ಕಾಮಕ್ಕೆ ಇರುವುದರಿಂದ ಅದೆಂತು ನೀಚತ್ವವನ್ನು ಹೊಂದೀತು? ಅಂದರೆ 'ಕಾಮ್ಯಂತೇ ಇತಿ ಕಾಮಾಃ' ಎಂಬ ನಿರುಕ್ತಿಯಿಂದ ಧರ್ಮಾದಿಗಳೇ ಕಾಮಗಳಾಗಿರುವುದರಿಂದ ಕಾಮಕ್ಕೆ ಅವರತ್ವವು ಅನುಪಯುಕ್ತವು. ಇನ್ನೊಂದು ಪರಿಯಿಂದ ಹೇಳು-ವುದಾದರೆ ಕೇವಲ ಅನ್ನದ ಆಕಾಂಕ್ಷೆಯು ಪುರಷಾರ್ಥವಾಗದೆ ಇರುವುದರಿಂದ, 'ಕಾಮ್ಯಂತೇ' ಎಂಬ ವ್ಯುತ್ಪತ್ತಿಯಿಂದ ಕಾಮ್ಯ(ಇಚ್ಛಿತ)ಗಳಾದ ಪದಾರ್ಥಗಳೇ ಕಾಮಗಳು, ಅಂದರೆ ಕಾಮನಾ ವಿಷಯವಲ್ಲವೆಂದು ಭಾವ.

ಹಾಗಾದರೆ ಅಕಾಮ್ಯವು (ಕಾಮ್ಯಗಳಲ್ಲದ್ದು) ಯಾವುದೆಂದರೆ ಪುರುಷಾರ್ಥವಲ್ಲದ ದುಃಖಸಾಧನವಾದ ಕಂಟಕ (ಮುಳ್ಳು) ಮುಂತಾದವೂ ಸಹ ಅಕಾಮ್ಯತ್ವವನ್ನು, ಅಂದರೆ ಇದು ಗ್ರಾಹ್ಯವೆಂಬ ಬುದ್ಧಿಗೆ ಅಗೋಚರವಾಗುವುದು. ಇದರಿಂದ ಧರ್ಮಾದಿಗಳಿಗೆ ಕಾಮ್ಯತ್ವವು ಇರುವುದರಿಂದ ಕಾಮ್ಯತ್ವವು ಹೇಳಿದಂತಾಯಿತು. ಅದೆಂತೆಂದರೆ ಪುರುಷರಿಂದ ಪ್ರಾರ್ಥಿತವಾದ ಕಾರಣ ಧರ್ಮ ಮೊದಲಾದವು, ಧರ್ಮಸಾಧನವೂ ಸಹ ಪುರುಷಾರ್ಥವೆಂದು ಉಕ್ತವಾಗಿರುವುದರಿಂದ ಕಾಮ್ಯತ್ವವಿರುವುದರಿಂದ ಪುರುಷಾರ್ಥವು. ಪುರುಷಾರ್ಥವಲ್ಲದ್ದರಿಂದ ದುಃಖ ಹಾಗೂ ದುಃಖಸಾಧನವೂ ಕೂಡ ಅಕಾಮವು. "ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್" ಎಂದು ಶ್ರುತಿಯಿರುವುದರಿಂದ ಕಾಮನಾ (ಇಚ್ಛಾ)ಪೂರ್ವಕವಾಗಿ ಸಾಧಿಸಲ್ಪಟ್ಟ ಶ್ರವಣ ಮನನಾದಿಗಳು ಫಲಪ್ರದವಾಗಿದೆ. ತಟಸ್ಥವಾದವು ಫಲದಾಯಕವಲ್ಲವೆಂಬ ತಾತ್ಪರ್ಯದಿಂದ ಹೇಳುತ್ತಾರೆ. ಅಥವಾ ಕೇವಲ ಪುರುಷಾರ್ಥಗಳೇ ಕಾಮತ್ವವಲ್ಲ, ಪುನಃ ಪುರುಷಾರ್ಥಸಾಧನಗಳೂ ಮೋಕ್ಷವೂ ಕೂಡ ಕಾಮತ್ವವೇ ಆಗಿದೆ ಎಂದು ನಿರೂಪಿಸುವರು.

ವಿಜ್ಞಾನ, ಭಕ್ತಿ ಮುಂತಾದವುಗಳೂ ಕೂಡ ಮುಖ್ಯವಾಗಿ ಧರ್ಮ ಮೊದಲಾದವುಗಳಿಗೆ ಸಾಧನವಾಗಿದೆ. ವಿಜ್ಞಾನ, ಭಕ್ತಿ ಮೊದಲಾದವು ಅಕಾಮ್ಯವಾಗಿದ್ದಲ್ಲಿ ಧರ್ಮಾದಿಗಳಿಗೆ ಸಾಧನವಾಗದೇ ಹೋಗಬೇಕಾಗುವುದು. ಅತಃ ವಿಜ್ಞಾನ

ಭಕ್ತ್ಯಾದಿಗಳೂ ಕೂಡ ಕಾಮ್ಯವಾಗಿರುವುದರಿಂದ ಕಾಮವಾಗಿದೆ. ಮೋಕ್ಷವಿಷಯಕ ಕಾಮನೆಯ ದೆಶೆಯಿಂದ ಹೊರತು ಪುರುಷಾರ್ಥಗಳಲ್ಲಿ ಶ್ರೇಷ್ಠವಾದ ಮೋಕ್ಷವೂ ಸಹ ಸಾಧುತ್ವವನ್ನು ಹೊಂದಿರುವ ಕಾರಣದಿಂದ ಕಾಮವಿಷಯವಾದ್ದರಿಂದ ಪುರುಷಾರ್ಥಗಳಲ್ಲಿ ಶ್ರೇಷ್ಠವಾದ ಮೋಕ್ಷವೂ ಕೂಡ ಕಾಮವೇ ಆಗಿರುವುದು. ಇದರಿಂದ ಪುರುಷರಿಂದ ಅರ್ಥಿತವಾದದು ಪುರುಷಾರ್ಥವೆಂದಾಯಿತು. ಅರ್ಥನಾ ಎಂದರೆ ಕಾಮವೇ. ಆದುದರಿಂದ ಕಾಮವಿಲ್ಲದೆ ಪುರುಷಾರ್ಥವು ವ್ಯಾಹತ-ವಾಗುವುದೆಂದು ತಿಳಿಯಬೇಕು. ಕೇವಲ ಧರ್ಮಾದಿಗಳು ಮಾತ್ರ ಕಾಮ್ಯವೆಂದಲ್ಲ. ಅವನ್ನು ದೊರಕಿಸಿ ಕೊಡುವ ಶ್ರೀವಿಷ್ಣುವು ಕಾಮ್ಯವಾಗಿದ್ದಾನೆ ಎಂದೀಗ ನಿರೂಪಿಸುವರು. ಎಲ್ಲ ಉತ್ತಮರಿಗಿಂತಲೂ ಅತ್ಯುತ್ತಮನಾದ ಜಗದಾದಿ ಪುರುಷನಾದ ಶ್ರೀಮನ್ನಾರಾಯಣನೂ ಸಹ, ತನಗೂ ಮತ್ತು ಪುರುಷಾರ್ಥಾಪೇಕ್ಷಿಗಳಾದ ಇತರರಿಗೂ ಕಾಮ್ಯನೇ ಆಗಿದ್ದಾನೆ. ಶ್ರೀಹರಿಯು ತನಗೂ ಇತರರಿಗೂ ಯಾವುದರಿಂದ ಕಾಮ್ಯನು? ಎಂದರೆ ಕಾಮವಿಷಯತ್ವವನ್ನು ಹೊಂದಿಸಲ್ಪಟ್ಟಡದಿರುವ ಶ್ರೀಹರಿಯು ಯಾವ ಕಾರಣದಿಂದ ಅಧಮಗತಿಯನ್ನೇ ನೀಡುವನೋ ಆ ಕಾರಣದಿಂದ ಕಾಮ್ಯನಾಗಿರುವುದರಿಂದ ಶ್ರೀಹರಿ ಪರಮಾತ್ಮನೂ ಸಹಿತ ಕಾಮ್ಯನೇ ಆಗಿರುವನು. ಕಾಮ ಶಬ್ದವಾಚ್ಯತ್ವವು ಕಾಮ್ಯಕ್ಕೆ ಇರುವುದರಿಂದ ಸಮಸ್ತ ಪುರುಷಾರ್ಥವೂ ಕಾಮಸಾಧನವು. ಕಾಮವನ್ನು ಸಂಪಾದಿಸಿಕೊಡುವ (ಅನುಗ್ರಹಿಸುವ) ಶ್ರೀವಿಷ್ಣುವೂ ಸಹ ಕಾಮನೇ ಆಗಿದ್ದಾನೆ. ಇನ್ನೂ ಹೇಳುವುದಾದರೆ ಕಾಮವು ಸಮಸ್ತ ಸಂಪೂರ್ಣ ಪುರುಷಾರ್ಥವು.

ವಿಶೇಷ ವಿಚಾರ - (ಶ್ರೀವಾದಿರಾಜಗುರುಸಾರ್ವಭೌಮರ ವ್ಯಾಖ್ಯಾನದಂತೆ ) "ಸೋಽಕಮಯತ। ಬಹುಸ್ಯಾಂ ಪ್ರಜಾಯೇಯೇತಿ" ಎಂಬ ವೇದವಾಕ್ಯದಿಂದಲೂ, "ವಿಸ್ಮಾಪನಂ ಸ್ವಸ್ಯ ಚ ಸೌಭಗರ್ಭೇ" ಎಂಬ ಭಾಗವತವಚನದಿಂದಲೂ ಶ್ರೀವಿಷ್ಣುವು ತಾನು ಸಹ ತನ್ನಿಂದ ಕಾಮ್ಯನೇ ಆಗಿದ್ದಾನೆ ಎಂಬ ಭಾವದಿಂದ "ಸ್ವಸ್ಯೇತರೇಷಾಮಪಿ ಕಾಮ್ಯ ಏವ" ಎಂದು ಹೇಳಿರುತ್ತಾರೆ. "ಪುರುಷೈಃ ಅರ್ಥ್ಯಮಾನೋ ಹಿ ಪುರುಷಾರ್ಥಃ" ಅಂದರೆ ಪುರುಷರಿಂದ ಪ್ರಾರ್ಥನೀಯವಾದುದು ಯಾವುದಿದೆಯೋ ಅದೇ ಪುರುಷಾರ್ಥವೆಂದರ್ಥ. "ಅರ್ಥನಾ ಚ ಕಾಮಃ" ಅಂದರೆ ಪ್ರಾರ್ಥನೆ ಮಾಡುವುದ್ಯಾವುದಿದೆಯೋ ಅದು ಕಾಮವು ಎಂದಭಿಪ್ರಾಯ. "ಅಂತಃ ಕಾಮಂ ವಿನಾ ಪುರುಷಾರ್ಥ ಇತ್ಯೇತತ್ ವ್ಯಾಹತಮಿತಿ ಜ್ಞೇಯಂ" ಆದುದರಿಂದ ಕಾಮವನ್ನು ಬಿಟ್ಟು ಪುರುಷಾರ್ಥವೆಂಬುವುದು ವ್ಯಾಹತವು, ಅಂದರೆ ಪರಸ್ಪರ ವಿರುದ್ಧವಾಕ್ಯವೆಂದು ತಿಳಿಯಬೇಕು.[45]

---

45. ಮೇಲ್ಕಂಡ ಎಲ್ಲ ವಿಚಾರಗಳನ್ನೂ ವಿಚಾರ ಮಾಡಿದಾಗ ನಾವು ಶ್ರೀ ಭೀಮಸೇನದೇವರ ಅಭಿಪ್ರಾಯವನ್ನು ಈ ರೀತಿಯೆಂದು ತಿಳಿಯಬಹುದಾಗಿದೆ - ಜೀವನು ಪರಮಪುರುಷಾರ್ಥವಾದ ಮೋಕ್ಷವನ್ನು ತನಗಾಗಬೇಕೆಂದು ಬಯಸುತ್ತಾನೆ. ಅದರ ಸಾಧನೆಗಾಗಿ ವಿಹಿತಾಚರಣಾನಿಷ್ಠನಾಗಿ ಶ್ರೇಷ್ಠಗುರುಗಳಿಂದ ಭಕ್ತಿಪೂರ್ವಕವಾಗಿ ಶ್ರೀಹರಿಯ ಮಾಹಾತ್ಮ್ಯಜ್ಞಾನವನ್ನು ಸಂಪಾದಿಸಿ, ಜ್ಞಾನಭಕ್ತಿ ವೈರಾಗ್ಯಪೂರ್ಣನಾಗಿ ಸಾಧನ ಮಾಡಿಕೊಳ್ಳುತ್ತಾನೆ. ಜೀವನ (ಭಕ್ತನ) ಸಾಧನವು ಪೂರ್ಣವಾದ ಮೇಲೆ ಭಕ್ತವತ್ಸಲನಾದ ಶ್ರೀಹರಿಯು "ಏನಂ ಮೋಚಯಾಮಿ" ಎಂದು ಇಚ್ಛಿಸಿ ಅವನಲ್ಲಿ ಪ್ರಸನ್ನನಾಗಿ ಪ್ರಸಾದ ಮಾಡುತ್ತಾನೆ. ಭಗವತ್ಪ್ರಸಾದದಿಂದ ಜೀವನಿಗೆ ಮೋಕ್ಷವು ಲಭಿಸುತ್ತದೆ. ಹೀಗೆ ಪ್ರತಿಜೀವರ ಮುಖ್ಯ ಗುರಿಯಾದ, ಸಂಸಾರಚಕ್ರದಿಂದ ಬಿಡುಗಡೆಯಾಗಿ ಜೀವನಿಗೆ ಆನಂದರೂಪ ಮೋಕ್ಷವು ಲಭಿಸಿ ಅಲ್ಲಿ ಅವನು ಭಗವತ್ಸನ್ನಿಧಿಯಲ್ಲಿ ಆವನ ಅನುಗ್ರಹದಿಂದ ಜೀವನಿಷ್ಠ ಆನಂದೋತ್ಸಾಹವನ್ನು ಪಡೆದು ಸುಖಿಸುತ್ತಾನೆ. ಆದ್ದರಿಂದ ಭಕ್ತನಾದ ಜೀವನು ಮೋಕ್ಷವನ್ನು ಅಪೇಕ್ಷಿಸುವುದು, ಅದಕ್ಕಾಗಿ ಭಕ್ತಿ ಸಹಕೃತ ಪರಮಾತ್ಮನ ಮಾಹಾತ್ಮ್ಯಜ್ಞಾನವನ್ನು ಗುರುಗಳಿಂದ ಪಡೆಯುವುದು. ನಂತರ ಸಾಧನೆ ಮಾಡಿಕೊಳ್ಳುವುದು, ಅವನ ಆರಾಧನೆಯಿಂದ ಸುಪ್ರಸನ್ನನಾದ ಶ್ರೀಹರಿಯು 'ಏನಂ ಮೋಚಯಾಮಿ' ಎಂಬ ಇಚ್ಛೆಯಿಂದ ಪ್ರಸಾದ ಮಾಡುವುದು, ನಂತರ ಮೋಕ್ಷವನ್ನು ಅನುಗ್ರಹಿಸುವುದು. ಇವೆಲ್ಲವೂ ಕಾಮವೇ (ಇಚ್ಛೆ) ಆಗಿರುವುದರಿಂದ, ಜೀವನು ಆಶಿಸುವ ಮೋಕ್ಷಪ್ರದನಾದ ಶ್ರೀಹರಿಯೂ ಕಾಮನೇ ಆಗಿರುವುದರಿಂದ, ಕಾಮರೂಪ ಪುರುಷಾರ್ಥವು ಶ್ರೇಷ್ಠವಾದದ್ದೆಂದು ಶ್ರೀ ಭೀಮಸೇನದೇವರ ಉಪದೇಶವೆಂದು ವ್ಯಕ್ತವಾಗುವುದು - ಅನುವಾದಕ.

ಈಗ ಇಚ್ಛೆಯೆಂಬ ಎರಡನೆಯ ವಿಕಲ್ಪವನ್ನೂ ಉಪಪಾದಿಸುವರು - ಇಚ್ಛೆಯೇ ಕಾಮಶಬ್ದವಾಚ್ಯವಾಗಲಿ, ಆದರೂ ಕಾಮವೇ ಶ್ರೇಷ್ಠವು. ಇಚ್ಛೆಯನ್ನು ಬಿಟ್ಟು ಜೀವನಿಗೆ ಚೇತನತ್ವವೇ ಕೂಡುವುದಿಲ್ಲ. ಇಚ್ಛೆ ಇಲ್ಲವಾದರೆ ಜೀವನಿಗೂ ಘಟ ಕುಡ್ಯಾದಿಗಳಂತೆ (ಮಡಿಕೆ-ಗೋಡೆಗಳಂತೆ) ಅಚೇತನತ್ವವು ಬರಬೇಕಾಗುವುದರಿಂದ ಇಚ್ಛೆಯು ಸಕಲ ಪುರುಷಾರ್ಥಗಳಿಗೆ ಮೂಲಭೂತವಾದ್ದರಿಂದ ಇಚ್ಛೆಯೇ ಉತ್ತಮವಾದದ್ದು. ಆ ಇಚ್ಛೆಯು ಚೇತನಸ್ವರೂಪ, ಅಚೇತನಸ್ವರೂಪವೆಂದು ಎರಡು ವಿಧವೆಂದು ತಿಳಿಯಬೇಕು. ಚೇತನ ಸ್ವರೂಪವಾದ ಇಚ್ಛೆಯು ಸರ್ವದಾ ಮೋಕ್ಷಪರ್ಯಂತವಾಗಿ ಅವಿದ್ಯೆಯಿಂದ ಆವೃತವಾದ ಸ್ವರೂಪವುಳ್ಳದ್ದಾಗಿದ್ದು ಮುಕ್ತಿಯಲ್ಲಿ ಆವಿರ್ಭೂತವಾಗುವುದು. ಇನ್ನು ಅಚೇತನಸ್ವರೂಪವಾದ ಇಚ್ಛೆಯು ಯಾವಾಗಲೂ ಅಂದರೆ ಮೋಕ್ಷದ ಮೊದಲು ಸಂಸಾರಾವಸ್ಥೆಯಲ್ಲಿ ಅನಭಿಭೂತವಾದ ಸ್ವರೂಪವುಳ್ಳದ್ದು ಅಥವಾ ರಾಗದಿಂದ ಕಲುಷಿತವಾದ ಮನೋರೂಪವಾದ ಇಚ್ಛೆಯು ಪುರುಷಾರ್ಥವೆನಿಸದೇ ಇರುವುದರಿಂದ, ಚಿದಾತ್ಮಿಕತವಾದ ಇಚ್ಛೆಯೇ ಸಾರಭೂತವಾದ್ದೆಂದು ತಿಳಿಯಬೇಕು. ಚಿದ್ರೂಪವಾದ ಆ ಇಚ್ಛೆಯು ಸಂಸಾರದಲ್ಲಿ ಗೌಪ್ಯಶರೀರವುಳ್ಳದ್ದಾಗಿರುತ್ತದೆ. ಶಾಕಗಳಲ್ಲಿನ ಲವಣ (ಉಪ್ಪು) ದಂತೆಯೇ ಸಕಲ ಪುರುಷಾರ್ಥಗಳಲ್ಲಿ ಕಾಮವು ಮಿಶ್ರವಾಗಿರುವ ಕಾರಣ ಅದು ಪ್ರತ್ಯೇಕವಾಗಿ ಪ್ರಶ್ನಾರ್ಹವಲ್ಲವೆಂದು ಹೇಳುವರು. ಹಿದೆ ನಿರೂಪಿಸಿದ ಕಾಮವು ಸಕಲ ಪುರುಷಾರ್ಥಕ್ಕೂ ಕಾಮತ್ವವಿರುವುದರಿಂದಲೇ ಪ್ರತ್ಯೇಕವಾಗಿ ಧರ್ಮಾದಿಗಳಲ್ಲಿ ಶ್ರೇಷ್ಠವೆಂದು ವಿಭಾಗ ಮಾಡಿ, ಪ್ರಶ್ನಾರ್ಹವಲ್ಲ. ಇಚ್ಛೆಗೆ ಕಾಮತ್ವವಿರುವುದರಿಂದಲೇ ಇಚ್ಛೆಯು, ಇಲ್ಲವಾದರೆ ಪ್ರಶ್ನಾದಿಗಳೂ ಕೂಡುವುದಿಲ್ಲವಾದ್ದರಿಂದ ಇಚ್ಛೆಗೆ ಶ್ರೇಷ್ಠತ್ವವು ಸಿದ್ಧವಾಗುತ್ತಿರಲು ಈ ಕಾಮವು ಪ್ರತ್ಯೇಕ ಪ್ರಶ್ನಾರ್ಹವಲ್ಲ.

'ಹೇ ರಾಜನ್ ! ಕಾಮಕ್ಕೆ ತಾರತಮ್ಯವನ್ನು ಇಚ್ಛಿಸುವುದಾದರೆ "ಕಾಮ್ಯತೇ ಇತಿ ಕಾಮಃ" ಎಂಬ ನಿರ್ವಚನ ಸಿದ್ಧವಾದ ಈ ಕಾಮವು ಮೂರು ವಿಧವೆಂದು ತಿಳಿ. ಈ ಮೂರು ವಿಧಗಳಾದ ಕಾಮಗಳ ಮಧ್ಯದಲ್ಲಿ, ಧರ್ಮ ಅರ್ಥಗಳಿಂದ ಯುಕ್ತವಾದ ಆ ಇಚ್ಛಾರೂಪವಾದ ಕಾಮವು ಏಕಾದಶೀ ಮುಂತಾದ ವೈಷ್ಣವವ್ರತಗಳಂತೆಯೇ ಶ್ರೇಷ್ಠವೆಂದು ತಿಳಿಯಬೇಕು. ಅಥವಾ ಕಾಮದಲ್ಲಿ ತಾರತಮ್ಯವನ್ನು ಇಚ್ಛಿಸುವುದಾದರೆ ಈ ಕಾಮವು ಉತ್ತಮ ಮಧ್ಯಮ ಅಧಮವೆಂಬ ಭೇದದಿಂದ ಮೂರು ಪ್ರಕಾರವಾಗಿ ತಿಳಿಯಬೇಕು. ಇದರಲ್ಲಿ ಧರ್ಮ ಅರ್ಥಗಳಿಂದ ಕೂಡಿದ್ದು, ಅಂದರೆ ಧರ್ಮಕ್ಕೂ ದೈವಮಾನುಷ ಎಂಬ ದ್ವಿವಿಧ ಅರ್ಥಕ್ಕೂ ಅವಿರೋಧಿಯಾದದ್ದು ಕಾಮವು. ವೈರಾಗ್ಯಪೂರ್ವಕವಾಗಿ ಶ್ರೇಷ್ಠರಾದ, ವಿರಕ್ತರಾದ ಗುರುಗಳಿಂದ ಭಕ್ತಿಸಹಕೃತವಾದ ಭಗವನ್ಮಾಹಾತ್ಮ್ಯಜ್ಞಾನವನ್ನು ಸಂಪಾದಿಸಿ ಶ್ರವಣ, ಮನನ, ನಿಧಿಧ್ಯಾಸನಾದಿಗಳನ್ನು ವಿಷಯೀಕರಿಸುವ ಕಾಮವು ಉತ್ತಮವೆಂದು ತಿಳಿಯಬೇಕು.

ಧರ್ಮ - ಅರ್ಥರೂಪ ಪುರುಷಾರ್ಥಗಳ ಮಧ್ಯದಲ್ಲಿ ಒಂದು ವಿರೋಧಿಯೂ, ಮತ್ತೊಂದು ಅವಿರೋಧಿಯೂ ಆದರೆ ಅದು ಮಧ್ಯವು, ಅಂದರೆ ಧರ್ಮಕ್ಕೆ ವಿರುದ್ಧವಲ್ಲದ್ದಾಗಿದ್ದು. ಅರ್ಥಕ್ಕೆ ವಿರೋಧಿಯಾಗಿದ್ದರೆ 'ವಿಶ್ವಜಿದ್ಯಾಗಾದಿ' ರೂಪವಾದ ಕಾಮ್ಯಕರ್ಮಕ್ಕೆ ಸಂಬಂಧಿಸಿದ ಕಾಮವು. ಅರ್ಥಕ್ಕೆ ವಿರೋಧವಲ್ಲವಾಗಿದ್ದು, ಧರ್ಮಕ್ಕೆ ವಿರೋಧಿಯಾಗಿದ್ದರೆ -(ಉದಾ) ವ್ಯಾಪಾರ ಮಾಡುವುದಕ್ಕೇ ಸಂಬಂಧಿಸಿದ ಕಾಮವು, ಇವೆರಡು ವಿಧವೂ ಮಧ್ಯಮವಾದದ್ದು, ಧರ್ಮ ಮತ್ತು ಅರ್ಥ ಇವೆರಡಕ್ಕೂ ವಿರೋಧಿಯಾದ ಕಾಮವು ನಿಂದಿತನಾದ ಪ್ರಭುವನ್ನು ಸೇವಿಸುವಂತೆ, ಅಥವಾ ನಾಸ್ತಿಕನಿಗೆ ದಾನ ಮಾಡಿದಂತೆ ಅಗಮ್ಯ. ಸ್ತ್ರೀಗಮನಕ್ಕೆ ಸಂಬಂಧಿಸಿದ ಕಾಮವು. ಇದು ನೀಚವಾದದ್ದೇ ಆಗಿದೆ.

ಅದು ಸರಿ. "ಸ್ರಕ್ ಚಂದನವನಿತಾದಿಕಂ ಕಾಮಃ" ಎಂದು ಲೋಕದಲ್ಲಿ ತಿಳಿದವರು ಹೇಳುವರಲ್ಲ. ಅದಕ್ಕೇನು ಗತಿ? ಎಂದರೆ ಆ ಅರ್ಥವನ್ನು ಅರ್ಧಾಂಗೀಕಾರ ರೂಪವಾಗಿ ಒಪ್ಪಿ ಆ ಶಂಕೆಯನ್ನು ಪರಿಹರಿಸುವರು. ಪೂರ್ವದಲ್ಲಿ ಹೇಳಿದಂತೆ ಕಾಮವು ಶ್ರೇಷ್ಠವಾಗಿರುವುದರಿಂದ "ತಸ್ಮಾತ್ ಸ್ವಬುದ್ಧಿಪ್ರಮಾದಾಭಿರೇವ" (ವಾದಿರಾಜರ ವ್ಯಾಖ್ಯಾ), "ಮದೀಹರ್ಷೇ" ಎಂಬ ಧಾತುವಿನಿಂದ (ವ್ಯುತ್ಪತ್ತಿಯಿಂದ), "ಪ್ರಕರ್ಷಃ ಮದಃ ಮೋಕ್ಷಾಖ್ಯಹರ್ಷಃ ಯಾಭ್ಯಸ್ತಾಃ ಪ್ರಮದಾಃ" ಅಂದರೆ

ಪ್ರಕೃಷ್ಟವಾದ ಮೋಕ್ಷವೆಂಬ ಹರ್ಷವು ಯಾವುದರುಗಳಿಂದುಂಟಾಗುವುದೋ ಅವುಗಳೇ ಪ್ರಮದಗಳೆಂದು ತಿಳಿಯಬೇಕು. ಏನಃ ಉತ್ತಮವಾದುದನ್ನು ಹುಟ್ಟಿಸುವ ಲೌಕಿಕ ಸ್ತ್ರೀ ಎಂದಲ್ಲ! ತನ್ನ ಸಮೀಚೀನ ಬುದ್ಧಿಗಳೆಂಬ ಪ್ರಮದಗಳಿಂದ ಶ್ರೀಹರಿಯು ಗುಣಪರಿಪೂರ್ಣನೆಂದು ಅರಿಯುವುದು ಒಂದು ಬುದ್ಧಿಯು. ವೈರಾಗ್ಯಬುದ್ಧಿಯು ಎರಡನೆಯ ಬುದ್ಧಿಯು. ಉಪಾಸನಾ ಬುದ್ಧಿಯು ಮೂರನೆಯ ಬುದ್ಧಿಯು. ಇವೇ ಮುಂತಾದ ಸುಬುದ್ಧಿಗಳೆಂಬ, ಮೋಕ್ಷವೆಂಬ ಹರ್ಷಜನಕ ಪ್ರಮದಗಳಿಂದಲೇ ಧರ್ಮಾದಿಗಳಿಗೆ ಅನುರೂಪವಾಗಿ ಇಚ್ಛಿಸುವವನಾಗಿ, "ಎಲೈ ರಾಜೇಂದ್ರ! ನೀನು ಯಥೇಷ್ಟವಾಗಿ ಕ್ರೀಡಿಸು ಮತ್ತು ಶ್ರೀಹರಿಗೆ ಸಮರ್ಪಿತವಾದ ಹೂವು, ಶ್ರೀಹರಿಗೆ ಅರ್ಪಿಸಿದ ನಿರ್ಮಾಲ್ಯಗಂಧಾದಿಗಳನ್ನು ಲೇಪಿಸಿಕೊಂಡು ಸರ್ವದಾ ಕ್ರೀಡಿಸುತ್ತಿರಬೇಕು. ಪುನಃ ತಾವು ಪೂರ್ವದಲ್ಲಿ ಹೇಳಿದುದು ಉತ್ತಮವೆಂದು ಸಾರುತ್ತಾ ಭೀಮಸೇನದೇವರು ಮತ್ತೆ ಹೀಗೆ ಹೇಳುತ್ತಾರೆ -

ರಾಜನ್ನ ಕಾಮಾದಪರಂ ಶುಭಂ ಹಿ ಪರೋ ಹಿ ಕಾಮೋ ಹರಿರೇವ ಯೇನ ॥
ಪ್ರಜ್ಞಾಸ್ವರೂಪಶ್ಚಂದನ ಸಾರಲಿಪ್ತೋ ವಿಚಿತ್ರಮಾಲ್ಯಾಭರಣೈರುಪೇತಃ ॥
ಇದಂ ವಚೋ ಮೇ ವ್ಯಾಸಸಮಾಸಯುಕ್ತಂ ಸಂಪ್ರೋಚ್ಯ ಭೀಮೋ ವಿರರಾಮ ವೀರಃ ॥
ಪ್ರಶಸ್ಯ ಭೀಮಮನ್ಯಾಂಶ್ಚ ರಾಜಾ ಮೋಕ್ಷಮಥಾಸ್ತುವತ್ ।
ಸ್ವಯುಕ್ತೇರಪ್ರತೀಪತ್ವಾನ್ನಿರಾಚಕ್ರೇ ನ ಮಾರುತಿಃ ॥

- ಮ.ಭಾ.ತಾತ್ಪರ್ಯ ನಿರ್ಣಯ, ಅ. 24, ಶ್ಲೋ. 62-63

"ಎಲೈ ರಾಜೇಂದ್ರ! ಪ್ರಾಜ್ಞಸ್ವರೂಪಿಯೂ, ಭಕ್ತವತ್ಸಲನೂ, ಸೌಹಾರ್ದಯುತನೂ, ಚಂದನಜಲವಿಲೇಪಿತನೂ, ವಿಚಿತ್ರಗಳಾದ ಮಾಲಾಭರಣಗಳಿಂದ ಅಲಂಕೃತನೂ ಆದ ಭಗವಾನ್ ಶ್ರೀಹರಿಯೇ ಕಾಮಗಳಲ್ಲಿ ಶ್ರೇಷ್ಠಕಾಮನಾಗಿದ್ದಾನೆ. ಆದುದರಿಂದ ಕಾಮವನ್ನು ಬಿಟ್ಟು ಬೇರೊಂದು ಯಾವುದೂ ಉತ್ತಮವಾದುದು ಇರುವುದಿಲ್ಲ. ಇದು ಶ್ರುತಿಪ್ರಸಿದ್ಧವು. ಆದುದರಿಂದ ಕಾಮವೇ ಶ್ರೇಷ್ಠವಾದದ್ದು. ಪ್ರಾರಂಭಿಸಿದ್ದನ್ನು ಕೊನೆ ಮುಟ್ಟಿಸುವುದರಲ್ಲಿ ವಿಚಕ್ಷಣರಾದ ಶ್ರೀಭೀಮಸೇನದೇವರು ವಿಸ್ತಾರ ಮತ್ತು ಸಂಕ್ಷೇಪವಾಗಿ ಮೇಲೆ ಹೇಳಿದಂತೆ ತಮ್ಮ ವಾದವನ್ನು ಸಾಧಿಸಿ, ಧರ್ಮ, ಅರ್ಥ, ಕಾಮಾದಿ ಪುರುಷಾರ್ಥಗಳಲ್ಲಿ ಕಾಮವೆಂಬ ಪುರುಷಾರ್ಥವೇ ಉತ್ತಮವಾದದ್ದೆಂದು ನಿರೂಪಿಸಿ ಮೌನವಹಿಸಿದರು.

ವಿಶೇಷ ವಿಚಾರ - (ಶ್ರೀವಾದಿರಾಜಸ್ವಾಮಿಗಳ ವ್ಯಾಖ್ಯಾನದಂತೆ) "ತ್ವಯೋಪಭುಕ್ತಸ್ರಗ್ಗಂಧವಾಸೋऽಲಂಕಾರ ಚರ್ಚಿತಾಃ। ಉಚ್ಛಿಷ್ಟಭೋಜಿನೋ ದಾಸಾಸ್ತವ ಮಾಯಾಂ ಜಯೇಮಹಿ॥" ಎಂಬ ಪ್ರಮಾಣದಂತೆ ಮಾಯೆಯನ್ನು ಜಯಿಸುವ ಉಪಾಯವೆಂದರೆ- ಶ್ರೀಹರಿಯ ನಿರ್ಮಾಲ್ಯರೂಪವಾದ ಕುಸುಮಮಾಲಿಕೆ, ಶ್ರೀಹರಿಗರ್ಪಿತವಾದ ನಿರ್ಮಾಲ್ಯ-ಗಂಧ, ಅಲಂಕಾರ (ಆಭರಣ), ಪಂಚಾಮೃತ, ನೈವೇದ್ಯವಾದ ಅನ್ನಗಳನ್ನು ಸ್ವೀಕರಿಸುವುದೇ ಕಾಮಗಳು. ಮನೋವಿಕಾರ-ಕಾರಕಗಳಾದ, ಭಗವಂತನಿಗೆ ಸಮರ್ಪಿತವಾಗದಿರುವ ಸ್ರಕ್ ಚಂದನ ಆಭರಣಗಳು ಕಾಮಗಳಲ್ಲ. "ನ ಕಾಮಾದತಿರಿಕ್ತಮಸ್ತಿ" ಎಂಬ ಆರಂಭಿಸಿ "ಅನುವಾಪ ಕಾಮ" ಎನ್ನುವವರೆಗೆ ಹೇಳಿದ್ದು ವಿಸ್ತಾರವಾದ ಉಕ್ತಿಯು. "ರಾಜನ್ನ ಕಾಮಾದಪರಂ" ಮುಂತಾದವು ಸಂಕ್ಷೇಪವಾದ ಉಕ್ತಿಯು. ಹೀಗೆ ಶ್ರೀಭೀಮಸೇನದೇವರು ವಿಸ್ತಾರ ಸಂಕ್ಷೇಪಗಳಿಂದ ಅಣ್ಣನೂ, ರಾಜನೂ ಆದ ಧರ್ಮರಾಜನಿಗೆ ಪುರುಷಾರ್ಥವೆಂದು ಪ್ರಮಾಣಪೂರ್ವಕವಾಗಿ ನಿರೂಪಿಸಿ ಮೌನವಹಿಸಿದರು ಎಂದು ತಾತ್ಪರ್ಯ.

ಆ ತರುವಾಯ ರಾಜಾಧರ್ಮನಂದನನಾದ ಯುಧಿಷ್ಠಿರನು ಭೀಮಸೇನ, ಅರ್ಜುನ, ವಿದುರಾದಿಗಳನ್ನು ಪ್ರಶಂಸೆ ಮಾಡಿ, ಸ್ವತಃ ತಾನು ಭೀಷ್ಮಪಿತಾಮಹರಲ್ಲಿ ಸನ್ನಿಹಿತನಾದ ಭಗವಾನ್ ಶ್ರೀಕೃಷ್ಣನ ಉಪದೇಶದಿಂದ ಅರಿತಿದ್ದನ್ನು ತನ್ನ ಮತವಾಗಿ ಎಲ್ಲರಿಗೂ ಮೋಕ್ಷವೇ ಪರಮಪುರುಷಾರ್ಥವೆಂದು ಸ್ತೋತ್ರಮಾಡಿದನು.

ಆಗ ಭೀಮಸೇನನು ತನ್ನ ಯುಕ್ತಿಗೆ ವಿರೋಧವಾಗಿಲ್ಲದಿರುವುದರಿಂದ, ಅಂದರೆ ಕಾಮಕ್ಕೆ ಶ್ರೇಷ್ಠತ್ವ ಯುಕ್ತಿಯು ವಿರುದ್ಧವಾಗಿಲ್ಲದಿರುವುದರಿಂದ, ಕಾಮಕ್ಕೆ ಉತ್ತಮತ್ವವನ್ನು ಸಾಧಿಸತಕ್ಕ ಯುಕ್ತಿಯಿಂದಲೇ ಮೋಕ್ಷಕ್ಕೆ ಶ್ರೇಷ್ಠತ್ವವು ಸಿದ್ಧ-ವಾಗಿರುವುದರಿಂದ, ಧರ್ಮರಾಜನು ಹೇಳಿದ್ದನ್ನು ನಿರಾಕರಿಸಲಿಲ್ಲವೆಂದು ತಿಳಿಯಬೇಕೆಂದು ಭಾವ.

*ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯದ ಕಥಾಸಾರವು ಮುಕ್ತಾಯವಾಯಿತು.*

॥ ಕೃಷ್ಣಾರ್ಪಣಮಸ್ತು ॥

★ ★ ★



ಭೀಷ್ಮರ ಅವಸಾನ - ಶ್ರೀ ಕೃಷ್ಣನ ಆಶೀರ್ವಾದ

# ತ್ರಿಂಶಾಧ್ಯಾಯಭಾವಸಂಗ್ರಹ

*ಅವತಾರಿಕೆ:-*

"ಸ್ಮೃತ್ವಾ" ಎಂಬ ಪದ್ಯದಿಂದ ಶ್ರೀರಾಘವೇಂದ್ರ ಗುರುಸಾರ್ವಭೌಮರು ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದ ಮೂವತ್ತನೆಯ ಅಧ್ಯಾಯಾರ್ಥವನ್ನು ಸಂಗ್ರಹಿಸುವರು.

**ಸ್ಮೃತ್ವಾ ಯಂ ದ್ಯುಸರಿತ್ಸುತೋವಸುರಭೂದ್ರಾಜಾ ಯದಾಶ್ವಾಸಿತಃ**
**ನಿರ್ದುಃಖೋಽಪಿ ಜುಗೋಪ ಧರ್ಮನಿರತೋ ಜಿತ್ವಾ ಸ್ವರಾಜ್ಯಂ ಕಲಿಮ್ ।**
**ಯಃ ಪಾರ್ಥಂ ಸಮಬೋಧಯನ್ ಮೃತಶಿಶುಂ ಯೋಽಜೀವಯತ್ಪಾಂಡವೈಃ**
**ಯೋ ಯಜ್ಞಂ ಸಮಕಾರಯದ್ಬಹುಧನೈಃ ಧ್ಯಾಯಾಮಿ ತಂ ಕೇಶವಮ್ ॥ 30 ॥**

*ಅನ್ವಯಾರ್ಥ :-* ದ್ಯುಸರಿತ್ಸುತೋ = ಗಂಗಾದೇವಿಯ ಪುತ್ರರಾದ, ಮತ್ತು ಇಚ್ಛಾಮರಣವುಳ್ಳವರೂ ಆದ ಭೀಷ್ಮಾಚಾರ್ಯರು, **ವಸುರಭೂತ್** = ಉತ್ತರಾಯಣವು ಬಂದೊಡನೆ ಸ್ವತಃ ಇಚ್ಛಿಸಿ ದೇಹತ್ಯಾಗಮಾಡಿ ತಮ್ಮ ಮೂಲರೂಪವಾದ ದ್ಯುನಾಮಕ ವಸುಗಳಾದರು. **ರಾಜಾ** = ಧರ್ಮರಾಜನು, **ಯಂ** = ಯಾವ ಭೀಷ್ಮಾಚಾರ್ಯರನ್ನು ಸ್ವರ್ಗಸ್ಥರಾದುದನ್ನು, **ಸ್ಮರನ್** = ಸ್ಮರಿಸಿಕೊಂಡು ಅವರ ವಿಯೋಗದುಃಖದಿಂದ ಬಹಳ ದುಃಖಿತನಾಗಲು, **ಯದಾಶ್ವಾಸಿತಃ** = ಶ್ರೀಕೃಷ್ಣನಿಂದ ಸಮಾಧಾನಗೊಳಿಸಲ್ಪಟ್ಟವನಾಗಿ, **ಸಮಾಹಿತಃ ಸನ್** = ಸಮಾಧಾನ ಹೊಂದಿದವನಾಗಿ, **ನಿರ್ದುಃಖಸ್ಸನ್** = ದುಃಖವಿಲ್ಲದವನಾಗಿ, **ಅಪಿ** = ಮತ್ತು, **ಕಲಿಂ** = ತನ್ನ ರಾಜ್ಯದಲ್ಲಿ ಗೊಂದಲವನ್ನುಂಟುಮಾಡುತ್ತಿದ್ದ ಕಲಿಯನ್ನು, **ಜಿತ್ವಾ** = ಜಯಿಸಿ, **ಸ್ವರಾಜ್ಯಂ** = ಸಾಮ್ರಾಜ್ಯವನ್ನು, **ಧರ್ಮನಿರತೋ** = ಧರ್ಮಿಷ್ಠನಾಗಿ, **ಸಾಮ್ರಾಜ್ಯಂ ಜುಗೋಪ** = ಕುರುಸಾಮ್ರಾಜ್ಯವನ್ನು ರಕ್ಷಿಸಿದನು ಅರ್ಥಾತ್ ಆಳಿದನು. **ಯಃ** = ಯಾವ ಶ್ರೀಕೃಷ್ಣನು, **ಪಾರ್ಥಂ** = ಅರ್ಜುನನಿಗೆ, **ಸಮಬೋಧಯನ್** = ಸತ್ತತ್ತ್ವಧರ್ಮಗಳನ್ನು ಬೋಧಿಸಿ ಸಾಂತ್ವನಗೊಳಿಸಿದನೋ, **ಮೃತಶಿಶುಂ** = ಅಭಿಮನ್ಯುವಿನ ಮೃತವಾದ ಶಿಶುವನ್ನು, **ಅಜೀವಯತ್** = ಪುನರುಜ್ಜೀವನಗೊಳಿಸಿದನೋ, **ಪಾಂಡವೈಃ** = ಪಾರ್ಥರಿಂದ, **ಬಹುಧನೈಃ** = ಅಪಾರಧನಗಳಿಂದ, **ಯಜ್ಞಂ** = ಅಶ್ವಮೇಧಯಾಗವನ್ನು, **ಸಮಕಾರಯತ್** = ಚೆನ್ನಾಗಿ ಮಾಡಿಸಿದನೋ, **ತಂ** = ಅಂಥ, **ಕೇಶವಂ** = ಬ್ರಹ್ಮರುದ್ರಾದಿ ನಿಯಾಮಕನಾದ ಶ್ರೀಕೃಷ್ಣನನ್ನು, **ಧ್ಯಾಯಾಮಿ** = ಧ್ಯಾನಿಸುತ್ತೇನೆ.

*ತಾತ್ಪರ್ಯ :-* ಶರಪಂಜರ(ಮಂಚ)ದಲ್ಲಿ ಪವಡಿಸಿದ್ದ ಪಿತಾಮಹ ಭೀಷ್ಮಾಚಾರ್ಯರು ಇಚ್ಛಾಮರಣ ವರವನ್ನು ಪಡೆದವರಾದ್ದರಿಂದ ಉತ್ತರಾಯಣವನ್ನು ನಿರೀಕ್ಷಿಸುತ್ತಿದ್ದು, ಶ್ರೀಕೃಷ್ಣನ ಆದೇಶದಂತೆ ಧರ್ಮನಂದನನಿಗೆ ಅನೇಕ ತತ್ತ್ವಧರ್ಮಗಳನ್ನು ಉಪದೇಶಮಾಡಿ, ಸ್ವೇಚ್ಛೆಯಿಂದ, ದೇಹತ್ಯಾಗಮಾಡಿ, ತಮ್ಮ ಮೂಲರೂಪವಾದ ದ್ಯುನಾಮಕ ವಸುವಿನಲ್ಲಿ ಐಕ್ಯವಾದರು. ಪಿತಾಮಹರ ಮರಣದಿಂದ ಧರ್ಮರಾಜನು ಬಹುದುಃಖಿತನಾದನು. ಆಗ ಭಗವಾನ್ ಶ್ರೀಕೃಷ್ಣನು ಬಹುಪರಿಯಾಗಿ ಸಾಂತ್ವನಗೊಳಿಸಿದನು. ಆದರಿಂದ ಯುಧಿಷ್ಠಿರನು ಸಮಾಧಾನ ಪಡೆದು, ದುಃಖವನ್ನು ಬಿಟ್ಟು, ರಾಜ್ಯಭಾರ ಮಾಡಿದನು. ಅನಂತರ ಕಲಿಯು ತನ್ನ ಗಣಗಳಿಂದ ಸಹಿತನಾಗಿ ಧರ್ಮರಾಜನ ರಾಜ್ಯದಲ್ಲಿ ಧರ್ಮಕಂಟಕ(ನಾಶಕ)ಕಾರ್ಯಾಸಕ್ತನಾಗಿ ಬಹುವಾಗಿ ಗೊಂದಲಮಾಡಲಾರಂಭಿಸಿದನು. ಆದರಿಂದ ಕುಪಿತನಾದ ಧರ್ಮರಾಜನು ಶ್ರೀಕೃಷ್ಣಸಹಿತನಾಗಿ ಕಲಿಯನ್ನು ಜಯಿಸಿದನು. ಶ್ರೀಕೃಷ್ಣನು ಭಾರತಾವನಿಯಲ್ಲಿ ಪಾಂಡವರ ಸಂತತಿಯವರು ಆಳುತ್ತಿರುವವರೆಗೂ ಭೂಮಂಡಲದಲ್ಲಿ ಕಾಲಿಡಬಾರದೆಂದು ಶಾಸನ ಮಾಡಿದನು. ಆ ತರುವಾಯ ಯುಧಿಷ್ಠಿರನು ಧರ್ಮದಿಂದ ರಾಜ್ಯಭಾರವನ್ನು

ಮಾಡಹತ್ತಿದನು. ಅರ್ಜುನನು ಪುತ್ರನಾದ ಅಭಿಮನ್ಯುವಿನ ಮರಣದಿಂದ ಅತ್ಯಂತ ವ್ಯಾಕುಲವುಳ್ಳವನಾಗಿ, ಪುತ್ರವಿಯೋಗ-ದುಃಖದಿಂದ ಬಳಲುತ್ತಿರಲು ಶ್ರೀಕೃಷ್ಣನು ತಾನು ಉಪದೇಶಿಸಿದ ಗೀತಾ ಉಪದೇಶವನ್ನು ಮರೆತಿರುವನೆಂದು ತಿಳಿದು ಅವನಿಗೆ ಮತ್ತೆ ಅದನ್ನು ವಿಸ್ತಾರವಾಗಿ ಬೋಧಿಸಿ ಅನೇಕ ಧರ್ಮರಹಸ್ಯಗಳನ್ನು ತಿಳಿಸಿ ಸಮಾಧಾನಪಡಿಸಿದನು. ಅದೇ ಸಮಯದಲ್ಲಿ ಅಶ್ವತ್ಥಾಮನ ಶಸ್ತ್ರದಿಂದ ದಗ್ಧವಾದ ಅಭಿಮನ್ಯುವಿನ ಶಿಶುವನ್ನು ಶ್ರೀಕೃಷ್ಣನು ಪುನಃ ಜೀವಂತಗೊಳಿಸಿ ಎಲ್ಲರನ್ನೂ ಮುದಗೊಳಿಸಿದನು. ಮತ್ತು ಶ್ರೀಕೃಷ್ಣದ್ವೈಪಾಯನರ ಸಲಹೆಯಂತೆ ಶ್ರೀಕೃಷ್ಣನು ಪಾಂಡವರಿಂದ ಬಹು ಧನ ವ್ಯಯದಿಂದ ಅಶ್ವಮೇಧಯಾಗವನ್ನು ಮಾಡಿಸಿದನು. ಇಂಥ ಶ್ರೀಬ್ರಹ್ಮ-ರುದ್ರೇಂದ್ರಾದಿ ದೇವತೆಗಳಿಗೆ ನಿಯಾಮಕನಾದ್ದರಿಂದ ಕೇಶವನೆಂಬ ಹೆಸರಿನಿಂದ ಪೂಜ್ಯನಾದ ಶ್ರೀಕೃಷ್ಣನನ್ನು ಧ್ಯಾನಿಸುತ್ತೇನೆ – ಎಂದು ಭಾವ.

## ಮೂವತ್ತನೆಯ ಅಧ್ಯಾಯದ ಕಥಾಸಾರವು

ಶ್ರೀಕೃಷ್ಣನ ಆದೇಶದಂತೆ ಭೀಷ್ಮರು ಧರ್ಮರಾಜನಿಗೆ ಅನೇಕ ತತ್ತ್ವ ಧರ್ಮಗಳನ್ನು ಬೋಧಿಸಿ ಶ್ರೀಕೃಷ್ಣನನ್ನು ಸ್ಮರಿಸುತ್ತಾ ದೇಹತ್ಯಾಗ ಮಾಡಿ ತಮ್ಮ ಮೂಲರೂಪವಾದ ದ್ಯುನಾಮಕ ವಸುವಿನಲ್ಲಿ ಐಕ್ಯ ಹೊಂದಿದರು. ಅಂದರೆ ಮೂಲರೂಪದ ದ್ಯುನಾಮಕ ವಸುವಾದರು ಎಂದು ಭಾವ. ಶರತಲ್ಪದಲ್ಲಿ ಪವಡಿಸಿದ್ದ ಪಿತಾಮಹ ಭೀಷ್ಮರು ಧರ್ಮರಾಜನಿಗೆ ಶ್ರೀಕೃಷ್ಣನ ಅಪ್ಪಣೆಯಂತೆ ಬಂಧು ಬಾಂಧವರ ಹನನದುಃಖಪರಿಹಾರಕ್ಕಾಗಿ ಉಪದೇಶ ಮಾಡಿ (ಭೀಷ್ಮರ ಪ್ರಾರ್ಥನೆಯಂತೆ ಶ್ರೀಕೃಷ್ಣನೇ ಅವರ ದೇಹದಲ್ಲಿ ಸನ್ನಿಹಿತನಾಗಿ ಧರ್ಮಜನಿಗೆ ಉಪದೇಶಿಸಿದನೆಂದು ತಿಳಿಯಬೇಕು), ಅನಂತರ ಇಚ್ಛಾ-ಮರಣವುಳ್ಳ ಭೀಷ್ಮರು ದಕ್ಷಿಣಾಯನ ಕಳೆದು ಉತ್ತರಾಯಣವು ಬಂದ ಮೇಲೆ ಧರ್ಮರಾಜನಿಗೆ ಉಪದೇಶಿಸಿ ದೇಹತ್ಯಾಗ ಮಾಡಿದರು. ಧರ್ಮರಾಜನು ಪಿತಾಮಹರ ಔರ್ಧ್ವದೇಹಿಕ ಕರ್ಮಗಳನ್ನು ನೆರವೇರಿಸಿ ಧೃತರಾಷ್ಟ್ರಾದಿಗಳಿಂದಲೂ ಮಾಡಿಸಿದನು. ಆಗ ತನ್ನ ಪುತ್ರನಾದ ಭೀಷ್ಮನ ಮರಣದಿಂದ ಅತ್ಯಂತ ಖತಿಗೊಂಡ ಗಂಗಾದೇವಿಯನ್ನು ಶ್ರೀವೇದವ್ಯಾಸ-ಕೃಷ್ಣದ್ವಾರಾ ಸಾಂತ್ವನಗೊಳಿಸಿದನು ಮತ್ತು ಅವರಿಂದ ತಾನೂ ಉಪದಿಷ್ಟನಾಗಿ ಸಮಾಧಾನ ತಾಳಿದನು. ಆದರೂ ಅವನ ದುಃಖವು ಪೂರ್ಣವಾಗಿ ಸಂಹಾರವಾಗದಿದ್ದುದ್ದರಿಂದ ಮಿತಿಯಿಲ್ಲದ ಅಭೀಷ್ಟಸಿದ್ಧಿಯುಳ್ಳ ಪರಾಶರರ ಕುಮಾರರಾದ ಶ್ರೀವೇದವ್ಯಾಸದೇವರು ಧರ್ಮಜನನ್ನು ಕುರಿತು-

"ವತ್ಸ ಯುಧಿಷ್ಠಿರ ! ಪಾಪವಿಲ್ಲದ ದುಷ್ಟ ಕೌರವಾದಿ ಸಮಸ್ತರ ಪಾಪವಿಷಯದಲ್ಲಿ ಇದು ಪಾಪವೆಂದು ಗ್ರಹಿಸಿ ಸಂಶಯಗ್ರಸ್ತನಾಗಿರುವೆ. ಆ ಪಾಪಪರಿಹಾರ, ದುಃಖಪರಿಹಾರ, ಮನಶ್ಶಾಂತಿಗಾಗಿ ಅಚ್ಯುತ(ನಾಶರಹಿತ)ವಾದ ಶ್ರೀಕೃಷ್ಣನ ಪ್ರೀತ್ಯರ್ಥವಾಗಿ ಅಶ್ವಮೇಧಯಜ್ಞವನ್ನು ನೆರವೇರಿಸು ಮತ್ತು ರಾಜ್ಯವನ್ನು ಧರ್ಮದಿಂದ ಪಾಲಿಸುತ್ತಾ ಹೀಗೂ ಪಾಲಕರಿಲ್ಲದ ನಿನ್ನ ಪ್ರಜರನ್ನು ಸಂರಕ್ಷಿಸು" ಎಂದು ಆಜ್ಞಾಪಿಸಿದರು. ಹೀಗೆ ಪಾರಾಶರರ ಆದೇಶದಂತೆ ಧರ್ಮರಾಜನು ಪ್ರಜಾಪರಿಪಾಲನ ಮಾಡುತ್ತಾ ಬಂದನು. ಹಾಗೂ ಸ್ತ್ರೀಭೋಗಾದಿ ವಿಷಯಸುಖಗಳನ್ನು ತ್ಯಜಿಸಿ ಗೋವ್ರತ ಮುಂತಾದ ವ್ರತಗಳಿಂದ ಜೀವಿಸುತ್ತಾ ಸಮಸ್ತ ಭೂಮಿಯನ್ನು ಪರಿಪಾಲಿಸಹತ್ತಿದನು. ಗೋವ್ರತ ಎಂದರೆ ಗೋವುಗಳಿಗೆ ಆಹಾರವಾಗಿ ಧಾನ್ಯಗಳನ್ನು (ಗೋಗ್ರಾಸ) ಕೊಟ್ಟು ಗೋವು ಭಕ್ಷಿಸಿ ಉಳಿದ ಧಾನ್ಯದಿಂದ ತಯಾರಿಸಿದ ಅನ್ನಾದಿ ಭೋಜನವನ್ನು ಮಾಡುತ್ತಾ ಜೀವಿಸುವುದಕ್ಕೆ ಗೋವ್ರತವೆಂದು ಹೆಸರು. ಇದರಂತೆ ವಿಷ್ಣುಪಂಚಕ ವ್ರತಾದಿಗಳಲ್ಲಿ ಆಸಕ್ತನಾಗಿ ಭೂಮಂಡಲವನ್ನು ರಕ್ಷಿಸುತ್ತಿದ್ದನೆಂದು ಭಾವ. ಧರ್ಮರಾಜನು ತುಲಾಭಾರಾದಿಗಳನ್ನು ನೆರವೇರಿಸಿಕೊಂಡು ನೀಡಲು ಅರ್ಹವಾದ ಮಹಾದಾನಗಳನ್ನು ಮಾಡುತ್ತಿದ್ದನು. ದಾನ ಪಡೆಯಲು ಸಮರ್ಥರಾದ ಗುಣವಂತರಾದವರಲ್ಲಿ ಅವನಿಂದ ದಾನವನ್ನು ಪಡೆಯದಿದ್ದವರೇ ಇಲ್ಲವೆಂದು ಹೇಳಬಹುದು. ಅಂದರೆ ಸಮಸ್ತ ಸದ್ಗುಣಗಳಾದ ವಿಪ್ರರು ಧರ್ಮರಾಜನಿಂದ ಉದಾರವಾಗಿ ದಾನವನ್ನು ಪಡೆದು ಹರ್ಷಿಸುತ್ತಿದ್ದರೆಂದು ಭಾವ.

ಪಾಂಡವರ ಮಧ್ಯದಲ್ಲಿ; ಸ್ತ್ರೀಭೋಗಾದಿಗಳಿಂದ ನಿವೃತ್ತರಾದ ರಾಜರೆಲ್ಲರಿಗೂ ಚಕ್ರವರ್ತಿಯಾದ ಧರ್ಮನಂದನನು ಪಾಂಡುರಾಜನ ಅರಮನೆಯಲ್ಲಿ ಸರ್ವನರಪತಿವಂದ್ಯನೂ ಯಾಗಶೀಲನೂ ಆಗಿ ನೆಮ್ಮದಿಯಿಂದ ವಾಸ ಮಾಡಿದನು. ಯುವರಾಜನಾದ ವಾಯುಪುತ್ರ ಭೀಮಸೇನನು ತನ್ನ ಭುಜಬಲಪರಾಕ್ರಮದಿಂದ ಸಂಪಾದಿಸಿದ ದುರ್ಯೋಧನನ ಅರಮನೆಯಲ್ಲಿಯೇ ಪಾಂಚಾಲನಂದಿನಿಯಾದ ದ್ರೌಪದೀದೇವಿಯಿಂದ ಸಹಿತನಾಗಿ ಸುರಪತಿಗೆ ಯೋಗ್ಯವಾದ ಸಮಸ್ತ ಭೋಗಗಳನ್ನೂ ಅನುಭವಿಸುತ್ತಾ ವಾಸಮಾಡಿದನು. ಸುಸ್ಪಷ್ಟವಾದ ಭಾರತೀದೇವಿಯ ಸನ್ನಿಧಾನವುಳ್ಳ ದ್ರೌಪದಿಯು ಧರ್ಮಜ, ಅರ್ಜುನ, ನಕುಲ, ಸಹದೇವರನ್ನು ಬಿಟ್ಟು ಶ್ರೀಭೀಮಸೇನದೇವರೊಡನೆ ಮಿನುಗುವ ಅಗ್ನಿಜ್ವಾಲೆಯಂತೆ ಇತರಸ್ತ್ರೀಸಂಬಂಧವಿಲ್ಲದ ಭೀಮಸೇನನೊಡನೆ ಬಾಳುತ್ತಾ ಶೋಭಿಸಿದಳು. "ದ್ರೌಪದಿ ! ನೀನು ಭೂತಭವಿಷ್ಯದ್ವರ್ತಮಾನ-ಜ್ಞಾನಿಯಾಗಿ ಸಂಸಾರ ಮಾಡು. ನಮ್ಮ ಸಂಬಂಧ ಬೇಡ" ಎಂದು ವಿಶ್ವಾಸದಿಂದ ಧರ್ಮರಾಜಾದಿಗಳು "ಜ್ಞಾನಾಧಿಕನಾದ ವಾಯುದೇವನ ಪತ್ನಿಯಾದ ನಿನ್ನನ್ನು ಸ್ಪರ್ಶಿಸಲು ನಾವು ಅರ್ಹರಲ್ಲವಾದ್ದರಿಂದ ನೀನು ಭೀಮಸನೊಬ್ಬನೊಡನೆ ಮಾತ್ರ ಕ್ರೀಡಿಸು" ಎಂದು ದ್ರೌಪದಿಗೆ ಹೇಳಿದ್ದರಿಂದ ಆ ಧರ್ಮರಾಜಾದಿ ನಾಲ್ವರನ್ನು ಬಿಟ್ಟು ಪತಿಯಾದ ಭೀಮಸೇನನೊಡನೆ ವಾಸಿಸುತ್ತಾ ಪತಿಸೇವಾರತಳಾಗಿ ಬಾಳ್ವೆ ನಡೆಸಿದಳೆಂದು ತಾತ್ಪರ್ಯ. ಭೀಮಸೇನನು ದ್ರುಪದರಾಜ ಕಾಶಿರಾಜರಿಂದ ಜನಿಸಿದ ದ್ರೌಪದೀ ಮತ್ತು ಕಾಳೀ ಎಂಬ ಎರಡುರೂಪದ ಭಾರತಿಯ ಸನ್ನಿಧಾನವುಳ್ಳ ಪತ್ನಿಯರೊಡನೆ ಸಂಸಾರ ಮಾಡುತ್ತಾ, ಶ್ರೀಪದ್ಮನಾಭನಾದ ಶ್ರೀಹರಿಯು ಸಮಸ್ತ ದೈತ್ಯರನ್ನು ಸಂಹರಿಸಿ ಕ್ಷೀರಸಾಗರದಲ್ಲಿ ಶ್ರೀಭೂದೇವಿಯರೊಡನೆ ಶೋಭಿ-ಸುವಂತೆ ಕಂಗೊಳಿಸಿದನು.

ಮುಖ್ಯಪ್ರಾಣಕುಮಾರನಾದ ಅಹಂಕಾರಿಕ ವಾಯುವಿನ ಹೆಸರಿನಿಂದ ಸರ್ವೋತ್ತುಂಗನ ಅಂಶಭೂತನಾದ ಅವನು ರೋಹಿಣಿಯ ಪುತ್ರಿಯಲ್ಲಿ ಅಂದರೆ ಭೀಮನ ಪತ್ನಿಯಲ್ಲಿ ಜನಿಸಿ ರಾತ್ರಿ ಸಮಯದಲ್ಲಿ ಅಶ್ವತ್ಥಾಮನಿಂದ ಸಂಹೃತನಾದನು. ಅವನ ತಾಯಿಯೇ ರೋಹಿಣಿಯ ಪುತ್ರಿಯಾದ 'ದೇವಿ' ಎಂಬ ಹೆಸರಿನವಳೇ ಸರ್ವೋತ್ತುಂಗನ ತಾಯಿಯು. ಇವಳು ಹಿಂದೆ ಪೂರ್ಣಿಮೆಗೆ ಅಭಿಮಾನಿನಿಯಾದ "ರಾಕಾ" ಎಂಬುವವಳು. ಅವಳು ಈ ಭೀಮರೂಪನಾದ ವಾಯುವಿನ ಪತ್ನಿ-ಯಾಗಿದ್ದಳು. ಮೊದಲು 'ದಿಕ್'ಶಬ್ದವಾಚ್ಯ ದಿಗಭಿಮಾನಿ ದೇವತೆಗಳ, ಅಪ್‌ಶಬ್ದವಾಚ್ಯ ಜಲಾಭಿಮಾನಿದೇವತೆಗಳ ಶ್ರೇಷ್ಠ ಸ್ವರೂಪವುಳ್ಳ ಬೇರೆ ಇಪ್ಪತ್ತುಜನ ಸ್ತ್ರೀಯರು (ಇವರು ವಸುದೇವನಿಗೆ ಜನಿಸಿದವರು) ವಸುದೇವಪುತ್ರಿಯರಾಗಿ ಜನಿಸಿ ಭೀಮನ ಪತ್ನಿಯರಾಗಿದ್ದರು. ಆ ಇಪ್ಪತ್ತುಜನರು ಮತ್ತು ರೋಹಿಣಿಯ ಮಗಳಾದ ದೇವಿ ಹೀಗೆ ಇಪ್ಪತ್ತೊಂದು ಜನ ಹೆಂಡತಿಯರಿಂದ ಯುಕ್ತನಾಗಿ, ದೇವತೆಗಳು, ಗಂಧರ್ವಾದಿಗಳಿಂದ ಪೂಜಿತನಾದ ಭೀಮನು ಅಮರರಿಂದಲೂ ಅನು-ಭವಿಸಲಳವಲ್ಲದ ಭೋಗಗಳನ್ನು ಅನುಭವಿಸಿದನು. "ತಾಭಿರ್ಯುತಃ" ಎಂದು ಹೇಳಿರುವುದರಿಂದ ಭೀಮನು ದ್ರೌಪದಿ-ಯೊಬ್ಬಳೊಡನೆಯೇ ಕ್ರೀಡಿಸುತ್ತಿದ್ದನು. ಉಳಿದ ಇಪ್ಪತ್ತೊಂದು ಜನ ಪತ್ನಿಯರು ಭೀಮನ ಸೇವೆ ಮಾಡಿಕೊಂಡಿದ್ದರೆಂಬುದು ಇದರಿಂದ ಸೂಚಿತವಾಗಿದೆ.

ಭೀಮಸೇನನು ಪ್ರತಿಯೊಬ್ಬ ಪ್ರಜೆಯೂ ತತ್ವ-ಧರ್ಮನಿಷ್ಠರಾಗಿರಬೇಕೆಂದು ಅಪೇಕ್ಷಿಸಿ ತಮ್ಮ ರಾಜ್ಯದಲ್ಲಿ ಪ್ರತಿ-ಗ್ರಾಮಗಳಲ್ಲೂ ತನ್ನವರಾದ ಶುದ್ಧ ಭಾಗವತಾಚರಣೆಯಲ್ಲಿಯೇ ಆಸಕ್ತರಾದ ಪರಸ್ಪರ ಸಮ್ಮತರಾದ ಜ್ಞಾನಿಗಳಾದ ಐದು ಜನರನ್ನು ವೇತನಕ್ಕೆ ಇಟ್ಟುಕೊಂಡು ಶ್ರೀಹರಿಯ ಏಕಾದಶೀ ಉಪವಾಸಾದಿ ಧರ್ಮಗಳನ್ನು ರಕ್ಷಿಸಿಕೊಂಡು ಬರುವಂತೆ ಆಜ್ಞಾಪೂರ್ವಕವಾಗಿ ವ್ಯವಸ್ಥೆ ಮಾಡಿದನು. ಭೀಮನು ತಾನು ವ್ಯವಸ್ಥೆಗೊಳಿಸಿದ ವಿಪ್ರರಿಗೆ ಅನುಕೂಲರಾಗದಿದ್ದವರನ್ನು ಸ್ವತಃ ಶಿಕ್ಷಿಸುತ್ತಿದ್ದನು. ನಂತರ ಅನುಕೂಲರಾದವರನ್ನೂ ಸಂತೋಷದಿಂದಲೇ ಅನುಗ್ರಹಿಸುತ್ತಿದ್ದನು. ಪ್ರತಿಗ್ರಾಮಕ್ಕೆ ಐದೈದು ಜನರಂತೆ, ತಾನು ವ್ಯವಸ್ಥೆ ಮಾಡಿದವರು ಉದಾಸೀನರಾಗಿರದಂತೆ ಸರಿಯಾಗಿ ವರ್ತಿಸುವಂತೆ ಅವರ ಮೇಲೆ ನಿಗಾವಣೆಗಾಗಿ

ಪೇರಿಯವರನ್ನು ನೇಮಿಸಿ ಅವರಿಂದ ವಿಷಯವರಿತು ಭಾಗವತಧರ್ಮಪ್ರವೃತ್ತಿಯು ಪ್ರಜರಲ್ಲಿ ಸಾಂಗೋಪಾಂಗವಾಗಿ ನೆರವೇರುವಂತೆ ವ್ಯವಸ್ಥೆ ಮಾಡಿದ್ದನು. ಅದನ್ನೇ ಈಗ ನಿರ್ಣಯಾಚಾರ್ಯರು ವಿವರಿಸುವರು.

ಭೀಮನ ಧಾರ್ಮಿಕ ಪ್ರವೃತ್ತಿಯ ವ್ಯವಸ್ಥೆಯು ಸಕ್ರಮವಾಗಿ ಜರುಗುತ್ತಿತ್ತು. ರಾಜ್ಯದಲ್ಲಿ ಅವೈಷ್ಣವರಾರೂ ಇರಲಿಲ್ಲ. ಶ್ರೀವಿಷ್ಣುವನ್ನು ಜರಿದು ರಮಾದಿ ದೇವತೆಗಳು ಸರ್ವೋತ್ತಮರೆಂದು ತಿಳಿದು ಭಕ್ತಿ ಮಾಡುವವರು ಇರಲೇ ಇಲ್ಲ. ಧರ್ಮಪ್ರತಿಬಂಧಕರೂ ವರ್ಣಾಶ್ರಮಧರ್ಮಗಳಿಗೆ ಯೋಗ್ಯವಾದ ವಿಧಿನಿಯಮಗಳನ್ನು ಉಲ್ಲಂಘಿಸುವವರೂ ಇರಲಿಲ್ಲ. ರಾಜ್ಯದಲ್ಲಿ ದುಃಖಿಗಳಾರೂ ಇರಲಿಲ್ಲ. ಭೀಮಸೇನನ ಆ ರಾಜ್ಯದಲ್ಲಿ ದರಿದ್ರರಾರೂ ಇರಲಿಲ್ಲ. ವಾಸಿಷ್ಠಕೃಷ್ಣ - ಯಾದವ-ಕೃಷ್ಣರನ್ನು ದರ್ಶಿಸುವ ಪ್ರಜೆಗಳ ಅಥವಾ ವಾಸಿಷ್ಠಕೃಷ್ಣರ ಪಾಂಡವರ ಪ್ರಜೆಗಳು ತಮ್ಮ ಶಿಕ್ಷಣಕೌಶಲವನ್ನು ನೋಡಲಿ ಎಂದು ಎಲ್ಲ ಶಿಷ್ಯರು ಸಕಲಗ್ರಾಮಗಳಿಗೂ ಹೋಗಿ ಶ್ರೀವೇದವ್ಯಾಸ, ಕೃಷ್ಣ, ಭೀಮಸೇನ ಹಾಗೂ ಮುನಿವರ್ಯರುಗಳಿಂದ ಚೆನ್ನಾಗಿ ಶಿಕ್ಷಣವನ್ನು ಪಡೆದು ಪ್ರಜರಿಗೆ ಕಲಿಯುಗವು ಮೊದಲ ಯುಗವಾದ ಕೃತಯುಗದ ಗುಣಗಳಿಕಿಂತಲೂ ಹೆಚ್ಚಿನ ಗುಣಗಳುಳ್ಳದ್ದಾಗಿ ರಾರಾಜಿಸಿತು.

ಕೃತಯುಗದಲ್ಲಿ ಬಹಳ ಪುಣ್ಯ ಮಾಡಿದರೂ ಅದು ಅಲ್ಪಫಲಪ್ರದವಾಗುವುದು. ಕೃತಯುಗದಲ್ಲಿ ಸರ್ವರೂ ಶುಭ-ಕಾರ್ಯವನ್ನೇ ಮಾಡುವವರಿದ್ದರಿಂದ ಅವರಲ್ಲೊಬ್ಬನು ಪುಣ್ಯ ಮಾಡುವುದು ಅಪೂರ್ವವಾದುದೇನಲ್ಲ. ಹೇಗೆಂದರೆ ಸುಭಿಕ್ಷ ಕಾಲದಲ್ಲಿ ಅನ್ನದಾನ ಮಾಡುವವನು ದುರ್ಭಿಕ್ಷ ಕಾಲದಲ್ಲಿ ಅನ್ನದಾನ ಮಾಡುವನಂತೆ ಮಹಾಫಲವಿಲ್ಲದವನಾಗುವಂತೆ ಕೃತಯುಗದಲ್ಲಿ ಶುಭಕಾರ್ಯಕ್ಕೆ ಹೆಚ್ಚಿನ ಫಲವಿಲ್ಲ. ಇದಕ್ಕೆ ವಿರುದ್ಧವಾಗಿ ಕೃತಯುಗದಲ್ಲಿ ಸ್ವಲ್ಪ ಅಶುಭಕಾರ್ಯ ಮಾಡಿದರೂ ಬಹುಪಾಪವೇ ಸಂಭವಿಸುವುದು. ಅಶುಭಕಾರ್ಯ ಮಾಡುವವನು ಎಲ್ಲಿಯೂ ಇಲ್ಲದಿರುವಾಗ ಅಶುಭಕಾರ್ಯಾಸಕ್ತನು ನಿಂದ್ಯನಾಗುವನೆಂದು ಭಾವ. ಅದು ಕೃತಯುಗದ ದೋಷವು. ಆ ದೋಷವಿಲ್ಲದ ಕಲಿಯುಗವನ್ನು ಗ್ರಾಮಗ್ರಾಮಗಳಲ್ಲೂ ಹೆಚ್ಚಾದ ಶುಭಕಾರ್ಯವುಳ್ಳದ್ದನ್ನಾಗಿ ಮಾಡಿದನು. ಅಂದರೆ ಸ್ವಲ್ಪ ಪುಣ್ಯಕಾರ್ಯ ಮಾಡಿದರೂ ಯುಗಸ್ವಭಾವದಿಂದ ಅಭಿವೃದ್ಧವಾದ್ದರಿಂದ ಮಹಾಫಲದಾಯಕವು. ಅಧಿಕ ಅಮಂಗಳ ಕಾರ್ಯ ಮಾಡಿದರೂ ಯುಗಸ್ವಭಾವದಿಂದ ಶ್ರೀಕೃಷ್ಣ-ಸಂದರ್ಶನಾದಿಗಳಿಂದ ಹೆಚ್ಚಿನ ಪಾಪಗಳು ಪ್ರತಿಕ್ಷಣವೂ ನಾಶವಾಗುವುದರಿಂದ ಅಲ್ಪಫಲವನ್ನು ಕೊಡುವುದೆಂದು ಅರ್ಥವು. ರಾಷ್ಟ್ರದಲ್ಲಿ ಭೀಮಸೇನನ ಶಿಕ್ಷಣಾದಿಗಳಿಂದ ಹೆಚ್ಚು ಪಾಪ ಮಾಡುವುದು ಅಸಂಭವ. ಹಾಗಿದ್ದರೂ ಪರರಾಷ್ಟ್ರಗಳಿಂದ ಬಹಳ ಪಾಪಮಾಡಿ ಬಂದವರಿಗೂ ಭೀಮಸೇನನ ರಾಷ್ಟ್ರದಲ್ಲಿ ಕ್ಷಣಕ್ಷಣವೂ ಶ್ರೀಕೃಷ್ಣಸಂದರ್ಶನಾದಿಗಳಿಂದ ಕ್ರಮಶಃ ಪ್ರಾಯಶ್ಚಿತ್ತ ಮಾಡಿಕೊಂಡಂತಾಗುವುದರಿಂದ ಸ್ವಲ್ಪಫಲವನ್ನೇ ನೀಡುವುದೆಂದು ಭಾವ. ಭೀಮನು ಅಚ್ಯುತನ ಆಶ್ರಯಾದಿಗಳಿಂದ ಹೀಗೆ ತನ್ನ ರಾಷ್ಟ್ರವನ್ನು ಕೃತಯುಗದಕ್ಕಿಂತ ಅಧಿಕವನ್ನಾಗಿ ಮಾಡಿದನೆಂದು ಹೇಳಲಾಗಿದೆ. ಹೆಚ್ಚು ನೀರಡಿಕೆಯಿಂದ ಬಳಲಿರುವವನು ಸ್ವಲ್ಪ ನೀರನ್ನು ಕೊಡಿ ಎಂದು ಪ್ರಾರ್ಥಿಸಿದವನಿಗೆ ಹೆಚ್ಚಾಗಿಯೇ ಜಲವನ್ನು ದಾನ ಮಾಡಿದರೆ (ಕೈಮುತ್ಯನ್ಯಾಯದಿಂದ) ಹೇಗೆ ಪೂರ್ಣತೃಷೆಯು ಪರಿಹಾರವಾಗುವುದೋ ಅದರಂತೆ ಹೆಚ್ಚು ಫಲವೇ ಲಭಿಸುವುದೆಂದು ತಾತ್ಪರ್ಯ. ಇಂತು ಸ್ವರಾಷ್ಟ್ರದಲ್ಲಿ ಗ್ರಾಮಗ್ರಾಮಗಳಲ್ಲೂ ಹೆಚ್ಚಾದ ಶುಭಕಾರ್ಯಗಳಾಗುವಂತೆ (ಇಂತು ಕಲಿಯುಗವನ್ನು ಗುಣಭರಿತವನ್ನಾಗಿ) ಭೀಮಸೇನನು ಮಾಡಿದನೆಂದು ಭಾವ. ಅಲ್ಪಪುಣ್ಯದಿಂದಲೂ ಬಹಳ ಫಲಪ್ರದವಾದ ಕಲಿಯುಗದಲ್ಲಿ ಭೀಮನು ತನ್ನ ಆಜ್ಞಾಸಾಮರ್ಥ್ಯದಿಂದ ಸರ್ವದಾ ಎಲ್ಲಕಡೆ ಜನರು ಪುಣ್ಯಕಾರ್ಯ ಮಾಡುವಂತೆ ಮಾಡಿದನು. ಆದ್ದರಿಂದ ಪಾಂಡವರ ರಾಜ್ಯದಲ್ಲಿರುವ ಪ್ರಜರ ಭಾಗ್ಯವಿದೆಂತೆಬುದನ್ನು ಪ್ರತ್ಯೇಕವಾಗಿ ವರ್ಣಿಸುವುದೇನಿದೆ? ಎಂಬುದು ಹೃದಯ.

ಅರ್ಜುನನು ಸರ್ವದಾ ಪರರಾಜ್ಯಗಳ ಮೇಲೆ ದಿಗ್ವಿಜಯಯಾತ್ರೆಯನ್ನು ಕೈಕೊಂಡು ಪರರಾಜರುಗಳನ್ನು ಸಂಹರಿಸದೆ ಬೆದರಿಕೆಯಿಂದಲೇ ಜಯಿಸಿ ಅವರು ಧರ್ಮರಾಜನನ್ನು ಸಾರ್ವಭೌಮನೆಂದು ಒಪ್ಪಿ ತಾವು ಮಾಂಡಲಿಕ ರಾಜರಾಗಿ-

ರುವುದಾಗಿಯೂ ಒಪ್ಪಿ-ಅರ್ಪಿಸಿದ್ದ ಧನಕನಕಾಭರಣಗಳು ನವರತ್ನಾದಿಗಳನ್ನು ತಂದು ಧರ್ಮರಾಜನಿಗೆ ಅರ್ಪಿಸುತ್ತಿದ್ದನು. ಪಾರ್ಥನು ಪುತ್ರನಾದ ಅಭಿಮನ್ಯು ಹಾಗೂ ಬಾಂಧವರ ಮರಣದಿಂದುಂಟಾದ ಮಾನಸಿಕ ದುಃಖವನ್ನು ಕ್ರಮೇಣ ತ್ಯಜಿಸಿ ಭೋಗಾಪೇಕ್ಷೆಯಿಂದ ನಿವೃತ್ತನಾಗಿ ಕ್ರೀಡಿಸಿದನು. ಅವನು ದುಶ್ಶಾಸನನು ವಾಸ ಮಾಡುತ್ತಿದ್ದ ಶ್ರೇಷ್ಠ ಅರಮನೆಯಲ್ಲಿ ವಾಸಿಸುತ್ತಾ ಸುಭದ್ರಾದೇವಿಯೊಡನೆ ಮತ್ತು ಅಶ್ವಮೇಧಕ್ಕಾಗಿ ಬಂದು ಅಲ್ಲಿಯೇ ಇರುತ್ತಿದ್ದ ಚಿತ್ರಾಂಗದೆಯರೊಡನೆ 'ಚಂದ್ರಿಕಾ' ಮತ್ತು 'ಕಾಂತಿ' ಎಂಬ ಪತ್ನಿಯಿಂದ ರಾಜಿಸುವ ಚಂದ್ರನಂತೆ ಶೋಭಿಸಿದನು. ಮಾದ್ರೀಸುತರಲ್ಲಿ ಹಿರಿಯನಾದ ನಕುಲನು, ರಾಜ್ಯದಲ್ಲಿ ಆಶ್ರಿತರ ಸೇವೆ ಸಲ್ಲಿಸುವವರ ಯೋಗಕ್ಷೇಮಕ್ಕಾಗಿ ವೇತನ ಪ್ರದಾನ ಮಾಡುವ ಸ್ಥಾನದಲ್ಲಿದ್ದು ಧೃತರಾಷ್ಟ್ರಪುತ್ರರಲ್ಲೊಬ್ಬನಾದ ದುರ್ಮುಖನ ಅರಮನೆಯಲ್ಲಿ ಶಲ್ಯರಾಜಪುತ್ರಿಯಾದ ತನ್ನ ಪತ್ನಿಯೊಡನೆ ದೊಡ್ಡಣ್ಣನನ್ನು ಅನುಸರಿಸಿಕೊಂಡು ವಾಸಮಾಡಹತ್ತಿದ್ದನು. ಧೃತರಾಷ್ಟ್ರನ ಮತ್ತೊಬ್ಬ ಪುತ್ರನಾಗಿದ್ದ ದುರ್ಮುಖನ ಉತ್ತಮವಾದ ಅರಮನೆಯಲ್ಲಿ ಜರಾಸಂಧನ ಕುಮಾರಿಯಾದ ತನ್ನ ಸತಿಯೊಡನೆ ನಕುಲನ ಸಹೋದರನಾದ ಸಹದೇವನು ಆಶ್ರಿತ ರಾಜರು ಹಾಗೂ ಶತ್ರುರಾಜರೊಡನೆ ಸಂಧಾನಮಾಡಿಕೊಳ್ಳುವುದು, ಅಸಮ್ಮತರಾದ ಶತ್ರುರಾಜರಲ್ಲಿ ಭೇದಕಲ್ಪನಾದಿಗಳನ್ನು ಮಾಡುತ್ತಾ ಖಡ್ಗಧಾರಿಯಾಗಿ ಯುಧಿಷ್ಠಿರನ ಅಂಗರಕ್ಷಕನಾಗಿ ಕಾರ್ಯ ಮಾಡುತ್ತಾ ಕಂಗೊಳಿಸಿದನು. ಕೃಪಾಚಾರ್ಯರು ಪಾಂಡವ ರಾಜ್ಯದ ಸೇನಾಧಿಪತಿಗಳಾಗಿ ಶೋಭಿಸಿದರು. ಧೃತರಾಷ್ಟ್ರನ ಕುಮಾರನಾದ ಯುಯುತ್ಸುವು ಪ್ರಖ್ಯಾತರಾದ ಸಂಜಯ-ವಿದುರರು ಪಾರ್ಥರ ಕೋರಿಕೆಯಂತೆ ಅಂಬಿಕೆಯ ಸುತನಾದ ಧೃತರಾಷ್ಟ್ರನಿಗೆ ಸಹಾಯಕರಾಗಿ ಅವನ ಸೇವೆ ಮಾಡಿ-ಕೊಂಡಿದ್ದರು. ಅಷ್ಟರಿಂದಲೇ ತೃಪ್ತರಾಗದ ಪಂಚಪಾಂಡವರೂ ದೊಡ್ಡಪ್ಪನಾದ ಧೃತರಾಷ್ಟ್ರ ಮಹಾರಾಜನನ್ನು ದೇವತೆಯಂತೆ ಭಕ್ತಿಯಿಂದ ಪೂಜಿಸುತ್ತಾ ಸೇವಿಸುತ್ತಿದ್ದರು.

ದ್ವಿರೂಪದಿಂದ ಅವತರಿಸಿದ್ದ ಶ್ರೀಹರಿಯಾದ ಅಂದರೆ ವಾಸಿಷ್ಠಕೃಷ್ಣ (ವೇದವ್ಯಾಸರು) – ಯಾದವಕೃಷ್ಣರಿಂದ ರಾಜ್ಯ ಪರಿಪಾಲನೆ ಮಾಡುತ್ತಾ ಪ್ರಜರನ್ನು ಪಾಲಿಸುತ್ತಿರಲು ಪ್ರಜರೆಲ್ಲರೂ ರೋಗರಹಿತರಾಗಿದ್ದರು. ದೊಡ್ಡವರಾಗುವ ಮೊದಲೇ ಬಾಲಕರು ಅಕಾಲಮೃತ್ಯುವಿಗೆ ಈಡಾಗುತ್ತಿರಲಿಲ್ಲ. ಸ್ತ್ರೀಯರು ಪತಿವಿಹೀನರಾಗಿ ವಿಧವೆಯರಾಗುತ್ತಿರಲಿಲ್ಲ. ಪತ್ನಿಯು ಮರಣಿಸಿ ಪತಿಗಳು ವಿಧುರರಾಗುತ್ತಿರಲಿಲ್ಲ. ಶಬ್ದ, ರೂಪ, ಗಂಧ, ರಸ, ಸ್ಪರ್ಶಗಳೆಂಬ ಪಂಚವಿಷಯಗಳು ಅತ್ಯಂತ ಮನೋಹರವಾಗಿದ್ದವು. ಕುಂತೀಕುಮಾರರ ರಾಜ್ಯದಲ್ಲಿ ಇಂದ್ರನು ಕಾಲಕಾಲಕ್ಕೆ ಮಳೆಗರೆಯುತ್ತಿದ್ದನು. ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕಗಳೆಂಬ ತ್ರಿವಿಧ ತಾಪರಹಿತರಾಗಿ ಸಮಸ್ತ ಪ್ರಜೆಗಳು ಅನನ್ಯ ಭಕ್ತಿಯಿಂದ ಶ್ರೀಹರಿ ಪರಮಾತ್ಮನನ್ನು ಸೇವಿಸುತ್ತಿದ್ದರು ಮತ್ತು ವೇದಗಳಿಂದ ಸಹಿತವಾದ ಗೋವುಗಳು ವಿಶೇಷಾಕಾರವಾಗಿ ಅಮೃತವನ್ನು ಕರೆಯುತ್ತಿದ್ದರು. (ಹೆಚ್ಚಾಗಿ ಕ್ಷೀರವನ್ನು ನೀಡುತ್ತಿದ್ದವು.) ಮೇಘಗಳು, ಸಮುದ್ರಗಳು, ನದಿಗಳು ರತ್ನೋತ್ಪತ್ತಿಕರಗಳಾಗಿ ಕಂಗೊಳಿಸಿದವು. ಪಾಂಡವರ ರಾಜ್ಯದಲ್ಲಿ ಕೇವಲ ಲವಣಸಮುದ್ರ ತಾಮ್ರಪರ್ಣಿಗಳಿಂದ ಮಾತ್ರ ರತ್ನೋತ್ಪತ್ತಿಯಾಗುತ್ತಿತ್ತೆಂದಲ್ಲ, ಸಮಸ್ತ ಪೃಥ್ವಿಯೂ ರತ್ನೋತ್ಪತ್ತಿಕರವಾಗಿ ಬೆಡಗುಗೊಂಡಿತು. ಪೃಥ್ವಿಯು ದೋಹದವಾಯಿತು. ಅಂದರೆ ಬಹುಧನಧಾನ್ಯಪುರ-ವಾಯಿತು. ಗೋವುಗಳು ಅಧಿಕ ಕ್ಷೀರಪ್ರದವಾಗಿದ್ದವು. ಹೀಗೆಯೇ ವೇದೋಕ್ತರೀತ್ಯಾ ವೇದೋಕ್ತ ಕರ್ಮಾನುಷ್ಠಾನನಿಷ್ಠರಿಗೆ ಯಥೋಕ್ತ ಫಲವು ದೊರಕುತ್ತಿತ್ತು. (ಇದಕ್ಕೆ ದೋಹದವೆಂದು ಹೆಸರು). ಭಗವಾನ್ ಶ್ರೀಕೃಷ್ಣನ ಆಶ್ರಯದಿಂದ ಪಾಂಡವರು ತಮ್ಮ ರಾಜ್ಯವನ್ನು ಶಾಸ್ತ್ರೋಕ್ತ ಪ್ರಕಾರವಾಗಿ ಚೆನ್ನಾಗಿ ಪ್ರಜಾರಂಜಕರಾಗಿ ಪಾಲಿಸುತ್ತಿದ್ದುದರಿಂದ ಮುನಿಶ್ರೇಷ್ಠರು, ಗಂಧರ್ವರು, ರಾಜರುಗಳಿಂದ ಶೋಭಿಸುವ ಸ್ವರ್ಗದ ದೇವತೆಗಳು ಸುಖಿಸುವಂತೆ ಧರ್ಮರಾಜನ ರಾಜ್ಯದಲ್ಲಿ ಪ್ರಜಾಜನರು ಅತಿ ಸುಖ ಸಂತೋಷಗಳಿಂದ ಜೀವಿಸುತ್ತಿದ್ದರು.

ದೇದೀಪ್ಯಮಾನಳಾದ ಪಾಂಡವರ ಕೀರ್ತಿಯೆಂಬ ಕಾಮಿನಿಯು ಬ್ರಹ್ಮಾಂಡವನ್ನೇ ವ್ಯಾಪಿಸಿ ವಿರಾಜಿಸಿದಳು. ದೇದೀಪ್ಯಮಾನವಾದ ತನ್ನ ಪಾದ, ಉದರ, ಕಟಿ, ಹೃದಯ, ಕರ, ಶಿರಗಳಿಂದ ವರಪ್ರದಳೂ ಅಭಯಪ್ರದಳೂ ಆದ

ಸ್ತ್ರೀಯಂತೆ ಪಾಂಡವರ ಕೀರ್ತಿಯು ಬ್ರಹ್ಮಾಂಡವನ್ನೇ ವ್ಯಾಪಿಸಿ ರಾಜಾಜಿಸಿತು. ಅದು ಸರಿ; ಪಾಂಡವರ ಕೀರ್ತಿಗೆ ಜಗ-ದ್ವ್ಯಾಪಕತ್ವವು ಹೇಗೆ ಬಂದಿತೆಂದರೆ ವಿವರಿಸುವರು- ಶ್ರೀವೇದವ್ಯಾಸರ ಮುಖದಿಂದ ಅದು ಉತ್ಪನ್ನವಾದ್ದರಿಂದ ಜಗದ್ವ್ಯಾಪಿ-ಯಾಯಿತೆಂದು ಭಾವ. ವ್ಯಾಪ್ತಿ ಪ್ರಕಾರವನ್ನು ತೋರಿಸುವರು- ಅಂದರೆ ಪಾಂಡವರ ಕೀರ್ತಿಯೆಂಬ ಅಂಗನೆಯು ಬ್ರಹ್ಮಾಂಡವನ್ನು ಎಂತು ವ್ಯಾಪಿಸಿದೆ ಈಗ ವಿವರಿಸುವರು -

ಆ ಕೀರ್ತಿಕಾಮಿನಿಯ ಪಾದಗಳು ಪಾತಾಲದಲ್ಲಿ ರಾಜಿಸಿತು. ಪೃಥ್ವಿಯಲ್ಲಿ ಕಟಿ ಪ್ರದೇಶವು (ನಿತಂಬವು) ಆಕಾಶವು. ಮಧ್ಯಪ್ರದೇಶವು (ಉದರವು) ದಿಕ್ಕುಗಳು. ಆದಿತ್ಯಾದಿ ಗ್ರಹಗಳು ಅವಳ ಕರಗಳು. ಅಶ್ವಿನ್ಯಾದಿ ಇಪ್ಪತ್ತೇಳು ನಕ್ಷತ್ರಗಳೇ ಆಕೆಯ ಆಭರಣಗಳಾಗಿದ್ದವು. ಸ್ವರ್ಗವೇ ಅವಳ ವಕ್ಷಸ್ಥಳವಾಗಿತ್ತು ಮತ್ತು ಬ್ರಹ್ಮದೇವರ ಸತ್ಯಲೋಕವೇ ಆ ಕೀರ್ತಿಕಾಮಿನಿಯ ಸುಂದರ ಮುಖಕಮಲವಾಗಿತ್ತು. ಇಂತು ಪಾಂಡವರ ಕೀರ್ತಿಯೆಂಬ ಅಂಗನೆಯು ಬ್ರಹ್ಮಾಂಡವನ್ನು ವ್ಯಾಪಿಸಿ ವಿರಾಜಿಸಿ-ದಳೆಂದು ಭಾವ. ಹೀಗೆ ಆ ಕೀರ್ತ್ಯಂಗನೆಯು ವೈಕುಂಠಪತಿಯಾದ ಶ್ರೀಹರಿಯ ವರಾಭಯ ಮುದ್ರಾಂಕಿತವಾದ ಹಸ್ತವನ್ನು ತನ್ನ ಶಿರದಲ್ಲಿ ಧರಿಸಿಕೊಂಡು ಶ್ರೇಷ್ಠ 'ಭಾರತ' ಎಂಬ ನಾಮದಿಂದ ರಾಜಿಸಿದಳು. ಆ ಕೀರ್ತಿಲಲನೆಯು ಭಾರತಾರ್ಥವನ್ನು ಆಲಿಸಿ ಸಮಸ್ತಲೋಕಗಳೂ ಪಾವನವಾಗಿ ಬೇರೊಂದು ಯಜ್ಞಕುಂಡದಿಂದ ಮೇಲೆದ್ದು ಬಂದ ದ್ರೌಪದಿಯನ್ನು ಅವಲೋಕಿಸಿ ನಿಖಿಲ ಪ್ರಪಂಚವೂ ಪರಮ ಪವಿತ್ರವಾಯಿತೆಂದು ತಿಳಿಯಬೇಕು.

ಶ್ರೀಕೃಷ್ಣನಿಂದ ಸಹಿತರಾದ ಪಾಂಡವರು ಶಾಸ್ತ್ರಪ್ರಕಾರವಾಗಿ ರಾಜ್ಯಭಾರ ಮಾಡುತ್ತಿರುವಾಗ ಕಲಿಯು ಮತ್ತು ಬಲಿಯು; ಈ ಬಲಿಯು ಶ್ರೀವಿಷ್ಣುವಿನ ಭಕ್ತನಾಗಿದ್ದರೂ ಅವನನ್ನು ಆವರಿಸಿದ್ದ ಬಲಿ ಎಂಬ ಹೆಸರಿನವನೇ ಆದ ದೈತ್ಯನೂ-ಹೀಗೆ ಆ ಕಲಿ-ಬಲಿಗಳಿಬ್ಬರೂ ಪಾಂಡವರ ರಾಜ್ಯದಲ್ಲೆಲ್ಲಾ ಅಧರ್ಮನಿರತರಾಗಿ ರಾಜ್ಯೋಪದ್ರವಕಾರ್ಯಗಳನ್ನು ಮಾಡ-ಹತ್ತಿದ್ದರು. ಈ ವಿಚಾರವು ಪಾಂಡವರಿಗೆ ಶೀಘ್ರವಾಗಿಯೇ ತಿಳಿಯಿತು. ಶ್ರೀಕೃಷ್ಣ-ಯುಧಿಷ್ಠಿರರಿಂದ ಪ್ರೇರಿತನಾದ ವಾಯುಕುಮಾರನಾದ ಭೀಮಸೇನನು ದೈತ್ಯಗಣಗಳಿಂದ ಕೂಡಿದ ಕಲಿ-ಬಲಿಗಳೆಂಬ ಆ ಇಬ್ಬರು ದೈತ್ಯರನ್ನು ಜಯಿಸಿ ಬಲಿಯನ್ನು (ದೈತ್ಯನನ್ನು) ಹೊಡೆದೋಡಿಸಿ ಕಲಿಯನ್ನು ಬಂಧಿಸಿ ಕರೆತಂದು ಶ್ರೀಕೃಷ್ಣ-ಧರ್ಮರಾಜರ ಮುಂದೆ ನಿಲ್ಲಿಸಿದನು. ಆಗ ಉತ್ತಮ ಮತಿವಂತನಾದ ಯಮಸುತನು (ಧರ್ಮರಾಜನು) ಶ್ರೀಕೃಷ್ಣನ ಸಮಕ್ಷ ಆ ಕಲಿಯನ್ನು ಕುರಿತು "ಎಲವೋ ಕಲಿಯೆ ! ನೀನು ನನ್ನ ರಾಜ್ಯದಲ್ಲಿ ಏಕೆ ದಾಂಧಲೆ ಮಾಡುತ್ತಾ ದೇಶದ ಜನರಿಗೆ ನಾಶಕಾರಕನಾಗಿರುವೆ ?" ಎಂದು ಪ್ರಶ್ನಿಸಿದನು. ಅದಕ್ಕೆ ಕಲಿಯು "ರಾಜನ್ ! ದುರ್ಯೋಧನನು ಮೃತನಾದಂದಿನಿಂದ ಈ ಕಾಲವು ನನ್ನದಾಗಿರುವುದು. ಆದರೆ ನೀನು ಇದನ್ನು ಬಲವಂತವಾಗಿ ಆಕ್ರಮಿಸಿದ್ದೀಯೆ. ನನ್ನ ಕಾಲವನ್ನಾಕ್ರಮಿಸಿರುವುದರಿಂದ ಮಾನವರಿಗೆ ಅಧಿಪತಿಯಾದ ಎಲೈ ದೊರೆಯೆ ! ನಿನ್ನ ರಾಜ್ಯದ ವಿನಾಶಕಾರ್ಯದಲ್ಲಿ ನಾನು ಆಸಕ್ತನಾಗಿದ್ದೇನೆ" ಎನ್ನಲು ಧರ್ಮರಾಜನು ರಾಜರ ಬಲ-ದಿಂದಲೇ (ಶಾರೀರಿಕ ಅಥವಾ ಸಾಮಾದಿಗಳಿಂದ) ರಾಜ್ಯವು ಪ್ರವೃತ್ತವಾಗುವುದು. ಅತಃ ನಿನ್ನದಾದ ಕಾಲವೇ ನಿಮಿತ್ತ-ವಾಗಿದ್ದರೂ ರಾಜ್ಯವು ನನ್ನಂಥ ಪರಾಕ್ರಮಿಗಳಾದ ರಾಜರಿಂದ ಬಲವಂತವಾಗಿ ಅಪಹರಿಸಲ್ಪಡುವುದು. ಅಂದಮೇಲೆ ಈ ಕಾಲದಲ್ಲಿ ನಿನಗೇತರ ರಾಜ್ಯದ ಬಯಕೆ? ಅಂದರೆ ನಾನೀಗ ರಾಜ್ಯಾಧಿಪನಾಗಿರುವುದರಿಂದ ನಿನಗೆ ಅದು ಇಲ್ಲವೇ ಇಲ್ಲ. ಎಲೈ ಕಲಿಯೇ ! ರಾಜನಿಗೆ ರಾಜ್ಯಪ್ರಾಪ್ತಿ ವಿಷಯದಲ್ಲಿ ರಾಜನಿಗೆ ಕಾಲವು ಕಾರಣವೋ? ಅಥವಾ ರಾಜನೇ ಕಾಲಕ್ಕೆ ಕಾರಣನೋ? ಎಂಬ ಸಂಶಯವು ನಿನಗೆ ಯುಕ್ತವಲ್ಲ. ರಾಜನೇ ಕಾಲಕ್ಕೆ ಕಾರಣನು' ಎಂದುತ್ತರಿಸಿದನು. ಧರ್ಮಜನ ವಚನವನ್ನಾಲಿಸಿ ಕಲಿಯು ಹೀಗೆ ಹೇಳಿದನು- "ಎಲೈ ರಾಜನೇ ! ನನಗೆ ಜ್ಞಾನ-ಬಲಗಳಿಂದ ಸಂಬಂಧಿಸಿರುವ ಕಾಲದಲ್ಲಿ ನನಗೆ ಸಮಾನರಾರೂ ಇಲ್ಲ. ರಾಜನ್ ! ಮೊದಲು ನಾನು ರಾಜರನ್ನು ಪ್ರವೇಶಿಸಿ ನಂತರ ಬ್ರಾಹ್ಮಣರನ್ನು ಪ್ರವೇಶಿಸುವೆನು. ಶ್ರೀವಾಸುದೇವನ ಸಹವಾಸವುಳ್ಳ ನಿಮ್ಮನ್ನು ಎದುರಿಸಲು ನನಗೆ ಸಾಮರ್ಥ್ಯವಿಲ್ಲ. ಆದುದರಿಂದ ಬ್ರಾಹ್ಮಣರಿಗೂ

ದೇವತೆಗಳಿಗೂ ಅಥವಾ ವೇದಗಳಿಗೂ ವಿರೋಧಿಯಾದ ನನಗೆ ಸಂಬಧಿಸಿದ ಕಾಲದಲ್ಲಿ ನಿನ್ನನ್ನು ಹೊರತುಪಡಿಸಿ ಮತ್ತಾವ ರಾಜನು ತಾನೇ ನನ್ನಿಂದ ನಿರಾಕರಿಸಲ್ಪಡುವುದಿಲ್ಲ? ಅಂಥವರ್ಯಾರೂ ಇಲ್ಲ. ನನ್ನ ದೃಷ್ಟಿಪಾತವಾದ ಕೂಡಲೆ ಅಂತಹ ಸ್ಥಳದಲ್ಲಿ ಗುಣಗಳಾಗಲಿ ವೇದಗಳಾಗಲಿ ಸದ್ಯುಕ್ತಿಗಳಾಗಲಿ ಎಲ್ಲಿರಲು ಸಾಧ್ಯ ?" ಎಂದು ತಿಳಿಸಿದನು. ಆಗ ಧರ್ಮರಾಜನು "ಎಲೈ ಕಲಿಯೇ ! ನೀನು ಯಾವಾಗಲೂ ಅಸತ್ಯವಾದಿಯಾಗಿದ್ದರೂ ಈಗ ಸತ್ಯವನ್ನೇ ಹೇಳಿದ್ದೀಯೆ. ನಿನ್ನನ್ನು ಸತ್ಯವಚನದಿಂದ ಬಿಡುಗಡೆ ಮಾಡುವೆನು. ಮುಂದೆ ನೀನು ಯಾವಾಗ ನಮ್ಮ ವಂಶೀಯನಾದ ಕ್ಷೇಮಕ ರಾಜನ ಕಾಲದಲ್ಲಿ ಸಕಲಧರ್ಮಗಳನ್ನು ನಾಶಪಡಿಸುವೆಯೋ ಆಗಲೂ ಸಹ ನೀನು ನಮಗೆ ನಮ್ಮ ವಂಶೀಯರಿಗೆ ಕೊಡುತ್ತಿರು. ನೀನು ತೆರಬೇಕಾದ ಕಪ್ಪವಾವುದು ಗೊತ್ತೆ ? **ಸೀಮಾ** - ಗ್ರಾಮದ ಸೀಮೆಯು (ಎಲ್ಲೆಯು) **ಆಧಿಃ**- ಋಣದಾತನಿಗೆ ವಿಶ್ವಾಸ ಹುಟ್ಟಲು ಕೊಡಲ್ಪಟ್ಟ ದ್ರವ್ಯವು, **ಮರ್ಯಾದಾಶಿಲೆ** - ಅಂದರೆ ಗ್ರಾಮಸೀಮಾ ಗುರುತಿನ ಶಿಲೆಯು ಅಥವಾ **ಸೀಮಾಧಿಃ** - ಗ್ರಾಮಭೂಮಿಯು ಅಂದರೆ "ಆಸಮಂತಾತ್ ಚತುರ್ದಿಕ್ಷು ದೀಯಂತೇ ಪೋಷ್ಯಂತೇ ವಾ ಅನಯಾ" ಎಂಬ ವ್ಯುತ್ಪತ್ತಿಯಿಂದ **ಸೀಮಾ** - ಅಡಿಗಲ್ಲು ಎಂದು ಅರ್ಥವಾಗುವುದು. ಮತ್ತು ಬಹುಜನರ ವಾಕ್ಯ, **ತುಲಾ** - ಬೆಲ್ಲ ಮೊದಲಾದ ಮಾರಾಟದ ವಸ್ತುಗಳನ್ನು ತೂಕ ಮಾಡುವ ತಕ್ಕಡಿ, ಮಾನ, ಧಾನ್ಯಗಳನ್ನು ಅಳತೆ ಮಾಡುವ ಸೇರು, ಪಾವು, ಕೊಳಗ, ಇತ್ಯಾದಿಗಳು, ಇದೇ ನೀನು ಕೊಡಬೇಕಾದ ಕಪ್ಪವು" ಎಂದು ಹೇಳಿದನು. ಆ ತರುವಾಯ ಶ್ರೀಕೃಷ್ಣನು "ಎಂತಹ ನೆಪವಿದ್ದರೂ ನೀನು ಸೀಮಾದಿಗಳನ್ನು ಅತಿಕ್ರಮಿಸಬೇಡ" ಎಂದು ಹೇಳಿ ಮುಂದುವರೆದು, ಶ್ರೀಕೃಷ್ಣನು "ಎಲೈ ಕಲಿಯೇ ! ಪಾಂಡವರ ಸಂತತಿಯು ಎಲ್ಲಿಯವರೆಗೆ ಇರುವುದೋ ಅಲ್ಲಿಯವರೆಗೂ ನೀನು ಭೂಮಿಯಲ್ಲಿ ಕಾರ್ಯಪ್ರವೃತ್ತನಾಗಿದ್ದರೂ ಅದನ್ನು ಮೀರಲು ನಿನಗೆ ಸಾಮರ್ಥ್ಯ ಬರಲಾರದು. ಪಾಂಡವರ ತರುವಾಯ ಅವರ ವಂಶದಲ್ಲಿ ಯಾವಾಗ ಕ್ಷೇಮಕನೆಂಬ ರಾಜನು ಜನಿಸಿ ರಾಜ್ಯವಾಳುವನೋ ಅಲ್ಲಿಯವರೆಗೆ ಪಾಂಡವರ ವಂಶವು ಕ್ರಮವಾಗಿ ಅಭಿವೃದ್ಧವಾಗುವುದು. ಕ್ಷೇಮಕ ರಾಜನಾದ ಮೇಲೆ ಕ್ರಮವಾಗಿ ಅಭಿವೃದ್ಧಿಸಿದ ನಿನ್ನ ಸಾಮರ್ಥ್ಯವು ಪರಿಪೂರ್ಣವಾಗುವುದು. ಎಲ್ಲಿಯವರೆಗೆ ಈ ಭೂಮಂಡಲದಲ್ಲಿ ಪಾಂಡವರು ಇರುವರೋ ನಾನೂ ಇರುವೆನೋ ಅಲ್ಲಿಯವರೆಗೆ ಈ ಭೂಮಂಡಲದಲ್ಲಿ ನೀನು ಕಾಲಿಡಬೇಡ. ನಿನ್ನ ದೃಷ್ಟಿ ಬೀರಬೇಡ. ನಮ್ಮ ತರುವಾಯ (ಭೂಲೋಕದಿಂದ ನಾವು ಪ್ರಯಾಣ ಬೆಳೆಸಿದ ಮೇಲೆ) ನೀನು ಭೂಮಿಯಲ್ಲಿ ಕಾಲಿಡು." ಹೀಗೆ ಶ್ರೀಕೃಷ್ಣನು ಹೇಳಲು ಕಲಿಯು ಧರ್ಮರಾಜನಿಂದ ಬಂಧವಿಮುಕ್ತನಾಗಿ ಕೃಷ್ಣ-ಧರ್ಮಜರಿಗೆ ನಮಸ್ಕರಿಸಿ ಹೊರಟು ಸಮುದ್ರದ ಆಚೆಯ ದಡದಲ್ಲಿರುವ ಪ್ಲಕ್ಷದ್ವೀಪದಲ್ಲಿರುವ ಗುಹೆಯನ್ನು ಆಶ್ರಯಿಸಿ ವಾಸಮಾಡಿದನು. ಶ್ರೀಕೃಷ್ಣ ಸಹಿತರಾದ ಪಾಂಡವರು ಭೂಮಂಡಲವನ್ನಾಳುತ್ತಾ ಸಂತಸದಿಂದಿದ್ದರು.

ಹೀಗೆ ಕೃಷ್ಣಪರಮಾತ್ಮನು ಇಂದ್ರಪ್ರಸ್ಥದಲ್ಲಿ ಪಾಂಡವರನ್ನು ಸ್ಥಾಪಿಸಿ ಅರ್ಜುನನಿಂದೊಡಗೂಡಿ ಕ್ರೀಡಿಸುತ್ತಾ ಪುತ್ರನ ಮರಣ ದುಃಖದಿಂದ ನಿವಾರಣೆಗಾಗಿ ಅವನಿಗೆ ಅನೇಕ ದಿವ್ಯ ಕಥಾನಕಗಳನ್ನು ಹೇಳುತ್ತಾ ಮತ್ತು ಯುದ್ಧಪ್ರಾರಂಭ ಕಾಲದಲ್ಲಿ ತಾನು ಪಾರ್ಥನಿಗೆ ಉಪದೇಶಿಸಿದ ಗೀತಾತತ್ವಗಳನ್ನು ಮರೆತಂತಿರುವ ಅರ್ಜುನನಿಗೆ ಪುನಃ ಆ ಸತ್ತತ್ವಗಳನ್ನು ವಿಸ್ತಾರವಾಗಿ ಉಪದೇಶಿಸಿ ಅವನನ್ನು ಸಮಾಧಾನ ಪಡಿಸಿದನು.

ಭಾರತೀ(ವಾಣೀ)-ಮುಖ್ಯಪ್ರಾಣ-ಶ್ರೀವಾಸುದೇವರಿಂದ ಸಮಸ್ತ ಜಗತ್ತು ವ್ಯಾಪಿಸಿದೆ. ಈ ಮೂವರಿಗೆ ಸರ್ವೋ-ತ್ತಮತ್ವವಿದೆ. ವಾಣಿಗಿಂತ ಮುಖ್ಯಪ್ರಾಣನೂ, ಅವನಿಗಿಂತ ಶ್ರೀವಾಸುದೇವನು ಉತ್ತರೋತ್ತರ ಗುಣಾಧಿಕರೂ ಸರ್ವೋ-ತ್ತಮರೂ ಆಗಿದ್ದಾರೆ. ಅಂತೆಯೇ ಈ ಮೂವರ ವಶದಲ್ಲಿ ಈ ಅಖಂಡ ಜಗತ್ತು ಇರುವುದು. ಉಳಿದ ಶೇಷ-ಇಂದ್ರಾದಿಗಳು ವಾಣಿಯ ವಶದಲ್ಲಿರುವವರಾಗಿದ್ದಾರೆ.

*ವಿಶೇಷ ವಿಚಾರ* - (ಶ್ರೀವಾದಿರಾಜಸ್ವಾಮಿಗಳ ವ್ಯಾಖ್ಯಾನದಂತೆ) 1. ಶ್ರೀಹರಿಯೇ ನಿರವಧಿಕ ಸರ್ವೋತ್ತಮನು. 2. ಮುಖ್ಯಪ್ರಾಣನಿಗೆ "ಇಯದಾಮನಾತ್" ಎಂಬ ಬ್ರಹ್ಮಸೂತ್ರದಲ್ಲಿ ಅಧಿಕಾರಿಗಳು ಪ್ರಾಣಪರ್ಯಂತವೆಂದು ನಿರೂಪಿತ-

ವಾಗಿರುವುದರಿಂದ ಅಧಿಕಾರಿಗಳ ಗುಂಪಿನಲ್ಲಿ(ವರ್ತುಲದಲ್ಲಿ)ರುವ ಸರ್ವಜೀವರಕ್ಕಿಂತಲೂ ಮುಖ್ಯಪ್ರಾಣನು ಉತ್ತಮನಾಗಿದ್ದಾನೆ. 3. ಭಾರತಿಯು ಅಧಿಕಾರಿಕ ಮಂಡಲದಲ್ಲಿರುವ ದೇವಿಯರಲ್ಲಿ ಸರ್ವೋತ್ತಮಳಾಗಿರುವಳು. 4. "ಜಾಯತೇ ಗಚ್ಛತಿ ಚ" ಎಂಬ ವ್ಯುತ್ಪತ್ತಿಯಿಂದ ಉತ್ಪತ್ತಿವಿನಾಶಗಳುಳ್ಳ ಮಹತ್ತತ್ವಪರ್ಯಂತವಾದ ತತ್ತ್ವವೇ ಜಗತ್ತೆನಿಸಿಕೊಳ್ಳುವುದು. ಅವರಲ್ಲಿ ಭಾರತೀಮುಖ್ಯಪ್ರಾಣರಿಗೆ ವ್ಯಾಪ್ತಿಯು ಇದ್ದೇ ಇರುವುದು. ಹೀಗೆ ಮುಖ್ಯಪ್ರಾಣ-ವಾಣಿಯರಿಗೆ ಶೇಷಾದಿಗಳು ಅಧೀನವೆಂಬ ಪ್ರಕಾರದಿಂದ ವಾಣೀ-ಪ್ರಾಣಾದಿ ಸರ್ವವೂ ಶ್ರೀಹರಿಯ ಅಧೀನನಲ್ಲಿರುವವರಾಗಿದ್ದಾರೆ. ಶ್ರೀಹರಿಯಾದರೋ ಸರ್ವಸ್ವತಂತ್ರನೂ, ಗುಣಪೂರ್ಣನೂ, ಏಕೈಕ ಪ್ರಭುವೂ ಆಗಿದ್ದಾನೆ. ಶ್ರೀರಮಾದೇವಿಯು ಮುಖ್ಯಪ್ರಾಣನಿಗಿಂತ ಉತ್ತಮಳು, ಮತ್ತು ಶ್ರೀಹರಿಗಿಂತ ತಾರತಮ್ಯದಲ್ಲಿ ಕೆಳಗಿರುವವಳು. ಆದ್ದರಿಂದ ಶ್ರೀವಿಷ್ಣುವಿನ ಕೆಳಗೆ ತಾರತಮ್ಯದಲ್ಲಿ ಸಣ್ಣವರಾದವರೆಲ್ಲರೂ ಇರುವರು.

ಶ್ರೀಹರಿಯು ಹುತಾಶನೆಂದು ಖ್ಯಾತನಾಗಿದ್ದಾನೆ. "ಹುತಂ ಅಶ್ನಾತೀತಿ ಹುತಾಶಃ" ಅಂದರೆ ಯಜ್ಞಹುತವಾದುದೆಲ್ಲವನ್ನೂ ಭಕ್ಷಿಸುವುದರಿಂದ ಶ್ರೀಹರಿಯು ಹುತಾಶಶಬ್ದವಾಚ್ಯನಾಗಿದ್ದಾನೆ. "ಯೋ ದೇವಾನಾಂ ನಾಮಧಾ ಏಕ ಏವ" ಎಂಬ ಶ್ರುತಿವಾಚ್ಯನಾದ ಹರಿಯು ವಾಣೀ-ಪ್ರಾಣರ ಹೃತ್ಕಮಲಮಧ್ಯವರ್ತಿಯಾಗಿರುವುದರಿಂದ ಪ್ರಭುವಾದ ಶ್ರೀವಿಷ್ಣುವು ಸ್ತ್ರೀಪುರುಷಾತ್ಮಕವಾದ ಸಮಸ್ತ ಜಗದ್ಧಾರಕನಾಗಿರುವುದರಿಂದ "ಧಾತಾ" ಎಂದು ಸರ್ವನಾಮ ಉಳ್ಳವನಾಗಿರುವನು. ಅಥವಾ ಶ್ರೀಹರಿಯು ಸಮಸ್ತವನ್ನೂ ಧರಿಸಿರುವುದರಿಂದ (ಧಾರಣೆ ಮಾಡುವುದರಿಂದ) ಅವನು ಈಶನಾಗಿದ್ದಾನೆ.ಬ್ರಹ್ಮರುದ್ರಾದಿಗಳು ಜೀವರು. ಶ್ರೀಹರಿಯು ಈಶ. ಬ್ರಹ್ಮಾದಿ ಉತ್ತಮರು ಜೀವರೆಂದು ಉಕ್ತರಾಗಿದ್ದಾರೆ. ಅವರು ಶ್ರೀಹರಿಗೆ ಅನಾದಿಕಾಲದಿಂದ ಶ್ರೇಷ್ಠ ಭಕ್ತರು. ಅವರು ಆತ್ಯಂತಿಕದುಃಖನಿವೃತ್ತಿಪೂರ್ವಕ ಸ್ವರೂಪಾನಂದಾವಿರ್ಭಾವಾತ್ಮಕವಾದ ಮುಕ್ತಿಗೆ ಯೋಗ್ಯರೆಂದು ಉಕ್ತರಾಗಿದ್ದಾರೆ. ಶ್ರೀಹರಿಯಲ್ಲಿ ಅನಾದಿಕಾಲದಿಂದ ದ್ವೇಷವುಳ್ಳವರು (ಪಾಪಿಷ್ಠರು) ತಮೋಯೋಗ್ಯರಾಗಿದ್ದಾರೆ. ಶ್ರೀಹರಿಯಲ್ಲಿ ಸ್ವಲ್ಪ ಭಕ್ತಿ - ದ್ವೇಷಯುಕ್ತರಾದವರು ಮಧ್ಯಮರು. ಅವರು ಸಂಸಾರದಲ್ಲಿಯೇ ಸುತ್ತುವರು. ಈ ತ್ರಿವಿಧರಾದ ಜೀವರ ಯೋಗ್ಯತೆಯು ಖಂಡಿತ ವ್ಯತ್ಯಾಸವಾಗುವುದಿಲ್ಲ. ಹಿಂದೆ ನಿರೂಪಿಸಿದ ಯೋಗ್ಯತಾ ವಿಪರ್ಯಯದಿಂದ ಉತ್ತಮ, ಮಧ್ಯಮ, ಅಧಮರೆಂದು ಮೂರು ವಿಧರಾಗಿದ್ದಾರೆ. ಈ ತಾರತಮ್ಯವನ್ನು ವೈದಿಕೈಃ ಅಂದರೆ ಶಂಖ ಚಕ್ರಾದಿ ಧಾರಣದಿಂದ ಪ್ರದಕ್ಷಿಣ-ನಮಸ್ಕಾರಾದಿ ರೂಪವಾದ ಅಥವಾ ಜ್ಞಾನಾದಿಲಿಂಗೈಃ-ಲಕ್ಷಣಗಳಿಂದ ಜೀವರ ತಾರತಮ್ಯವನ್ನು ತಿಳಿಯಬೇಕು. ಹಿಂದೆ ಹೇಳಿದ ಲಕ್ಷಣವುಳ್ಳವರು ಉತ್ತಮರು. ಆ ಲಕ್ಷಣವಿಲ್ಲದವರು ಅಧಮರೆಂದು ಭಾವವು.

ಶ್ರೀವಾದಿರಾಜಸ್ವಾಮಿಗಳವರು ದೈಹಿಕಲಿಂಗವೆಂದರೆ ಏನೆಂಬುದನ್ನು ತಮ್ಮ ವ್ಯಾಖ್ಯಾನದಲ್ಲಿ ಹೀಗೆ ವಿವರಿಸುವರು - ಮಹತ್ತತ್ತ್ವವಿರುವವರೆಗೆ ಬ್ರಹ್ಮನ ಶರೀರವಿರುವುದು. ಅದಕ್ಕಿಂತ ಕೆಳಗೆ ಅಹಂಕಾರತತ್ತ್ವವಿರುವವರೆಗೆ ರುದ್ರ, ಶೇಷ, ಗರುಡರ ಶರೀರವಿರುವುದು. ಅದರಕಿಂತ ಕೆಳಗೆ ಮನಸ್ತತ್ತ್ವವು ಎಲ್ಲಿಯವರೆಗಿರುವುದೋ ಆ ಪರ್ಯಂತ ಇಂದ್ರ-ಸ್ಕಂಧರ ಶರೀರಂಗಳಿರುವುವು. ಏತೇನ- ಪೂರ್ವಪೂರ್ವಶರೀರಗಳು ಸ್ಥೂಲ-ಸ್ಥೂಲಗಳು, ಮೇಲು-ಮೇಲಿನ ದೇವತೆಗಳ ಶರೀರವಾದರೂ ಸೂಕ್ಷ್ಮ-ಸೂಕ್ಷ್ಮಗಳೂ. ಹೀಗೆ ದೇಹಸಂಬಂಧಿಯಾದ ಪರಿಮಾಣವು ದೇವತಾತಾರತಮ್ಯಗಳಲ್ಲಿ ಲಿಂಗವು ಅಂದರೆ ಲಕ್ಷಣವು. ಬ್ರಹ್ಮದೇವರು ಸಮಸ್ತ ವೇದೋಕ್ತ ಗುಣಗಳನ್ನು ಮನಸ್ಸಿನಿಂದ ತಿಳಿಯುವುದು. ರುದ್ರಾದಿಗಳು ಅವರಕ್ಕಿಂತ (ಬ್ರಹ್ಮದೇವರಕ್ಕಿಂತ) ಸ್ವಲ್ಪ ಕಡಿಮೆ ತಿಳಿಯುವರು. ಕ್ರಮದಿಂದ ಕಡಿಮೆಯಾದ ಮಾನಸಜ್ಞಾನವೂ ಸಹ ದೇವತಾತಾರತಮ್ಯದಲ್ಲಿ ಲಕ್ಷಣ(ಲಿಂಗ) ವಾಗಿದೆ - ಎಂದು ಅಪ್ಪಣೆ ಕೊಡಿಸಿದ್ದಾರೆ. ಶ್ರೀವಿಷ್ಣುಲಿಂಗಾನುಸಾರಿಯಾದುದರಿಂದ ಈರೀತಿ ತಾರತಮ್ಯವನ್ನು ತಿಳಿಯಬೇಕು. ಶ್ರೀಹರಿ ಮತ್ತು ಅವನನ್ನು ಅನುಸರಿಸಿರುವುದರಿಂದ ದೇವತೆಗಳಿಗೆ ಪ್ರಿಯವಾದ ಧರ್ಮವೆಂದು ಉಕ್ತವಾಗಿದೆ. ಇದಕ್ಕೆ ವಿರುದ್ಧವಾದುದು ಅಧರ್ಮವೂ (ಅಂದರೆ ಶ್ರೀಹರಿಯಲ್ಲಿ ಭಕ್ತಿ (ಪ್ರೀತಿ) ಮಾಡದಿರುವುದು ಅಧರ್ಮವೆಂದು ತಾತ್ಪರ್ಯ).

ಆದ್ದರಿಂದ ಪುತ್ರನು ಮೃತನಾದನೆಂದು ಪ್ರಲಾಪಿಸುವುದರಿಂದ ಪ್ರಯೋಜನವೇನು? ಅಂದರೆ ಮೃತರಾದವರ ಬಗ್ಗೆ ಶೋಕಿಸುವುದನ್ನು ಬಿಟ್ಟು ಹಿಂದೆ ನಿರೂಪಿಸಿದಂತೆ ಜ್ಞಾನವನ್ನು ಸಂಪಾದಿಸಿ ನನ್ನನ್ನು (ಶ್ರೀಹರಿಯನ್ನು) ಭಜಿಸಿ ಎಂದು ಅರ್ಜುನನಿಗೆ ತಿಳಿಸಿದ್ದು ಅವನ ಭಾವವೆಂದು ತಿಳಿಯಬೇಕು।ಇಂತು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸುತ್ತಾ ಶ್ರೀಕೃಷ್ಣನು ಹಸ್ತಿನಾಪುರಕ್ಕೆ ಬಂದನೆಂದು ಭಾವ. ಈ ವಿಚಾರವು ಅಶ್ವಮೇಧಪರ್ವದಲ್ಲಿ ಇಂತು ಸಂಭಾಷಿಸುತ್ತಾ ಕೃಷ್ಣಾರ್ಜುನರಿಬ್ಬರೂ ಹಸ್ತಿನಾಪುರಕ್ಕೆ ಬಂದರೆಂದು ನಿರೂಪಿತವಾಗಿದೆ. ಅನಂತರ ಕೃಷ್ಣನು ಅರ್ಜುನನಿಗೆ ಉಪದೇಶಿಸಿದ ಮೇಲೆ ಪಾಂಡವರಿಂದ ಚೆನ್ನಾಗಿ ಸತ್ಕೃತನಾಗಿ ಅವರಿಂದ ಬೀಳ್ಕೊಂಡು ಹೊರಟನು. ಪಾಂಡವರೂ ಅವನನ್ನನುಸರಿಸಿ ಬಹುದೂರ ಬಂದರು. ಶ್ರೀವಾಸುದೇವನು ಹೇಗೋ ಅವರನ್ನು ಸಮಾಧಾನಪಡಿಸಿ "ನೀವಿನ್ನು ಬರುವುದು ಸಾಕು, ಇಲ್ಲಿಯೇ ನಿಲ್ಲಿರಿ" ಎಂದು ಹೇಳಿ ಸೋದರಿಯಾದ ಸುಭದ್ರಾದೇವಿಯೊಡನೆ ದ್ವಾರಕಾಪುರಿಗೆ ಪ್ರಯಾಣ ಬೆಳೆಸಿದನು.

ಶ್ರೀಕೃಷ್ಣನು ದ್ವಾರಾವತಿಗೆ ಹೋಗುವ ಮಾರ್ಗದಲ್ಲಿ ತಪಸ್ಸಿನಲ್ಲಿ ರತನಾಗಿದ್ದು ಆಗ ತಾನೆ ಸಮಾಧಿಯಿಂದ ಎಚ್ಚತ್ತ 'ಉದಂಕ' ಎಂಬ ಮುನಿಯನ್ನು ಕಂಡನು. ಉದಂಕಮುನಿಯು ಶ್ರೀಕೃಷ್ಣನನ್ನು ಕಂಡು "ಕೃಷ್ಣ ನೀನು ಎಲ್ಲಿಗೆ ಹೋಗಿದ್ದಿ? ನೀನೇನು ಮಾಡಿದಿ? ಈಗ ಎಲ್ಲಿಗೆ ಹೋಗುತ್ತೀಯೆ?" ಎಂದು ಪ್ರಶ್ನಿಸಿದನು. ಆಗ ಕೃಷ್ಣನು "ಮುನಿಗಳೇ ! ಕುರುಕ್ಷೇತ್ರದಲ್ಲಿ ಜರುಗಿದ ಕುರುಪಾಂಡವರ ಯುದ್ಧದಲ್ಲಿ ಪಾಲ್ಗೊಳ್ಳಲು ಹೋಗಿದ್ದೆ. ದುರ್ಯೋಧನನು ಪಾಂಡವರೊಡನೆ ಯುದ್ಧಮಾಡಿ ಕದನದಲ್ಲಿ ಸಹೋದರರಿಂದ ಸಹಿತನಾಗಿ ಮೃತನಾದನು. ಧರ್ಮರಾಜನು ಸಾಮ್ರಾಟನಾದನು. ಅಲ್ಲಿಂದ ಹೊರಟು ಈಗ ದ್ವಾರಕಾಪಟ್ಟಣಕ್ಕೆ ಹೋಗುತ್ತಿದ್ದೇನೆ" ಎಂದು ಹೇಳಿದನು. ಅದನ್ನು ಕೇಳಿ ಉದಂಕಮುನಿಯು ತನ್ನ ಪ್ರಿಯಶಿಷ್ಯನಾದ ದುರ್ಯೋಧನನ ವಧೆಯ ಕೋಪದಿಂದ ಶ್ರೀಕೃಷ್ಣನನ್ನು ಶಪಿಸಲುದ್ಯುಕ್ತನಾದಾಗ ಶ್ರೀಕೇಶವನು ಉದಂಕನಿಗೆ ತನ್ನ ವಿಶ್ವರೂಪದರ್ಶನ ಮಾಡಿಸಿ ತತ್ತ್ವಬೋಧಕ ವಾಕ್ಯಗಳಿಂದ ಅವನ ಕೋಪವನ್ನು ಪರಿಹರಿಸಿದನು. "ಈ ಉದಂಕ ಮುನಿಯು ನನ್ನ ಭಕ್ತನಾಗಿರುವನು. ನನ್ನ ಪೂಜಾರಾಧನೆಯಲ್ಲಿ ತತ್ಪರನಾಗಿದ್ದಾನೆ. ನಾನಾರೆಂದು ತಿಳಿಯದೆ (ತಿರಸ್ಕರಿಸಿ) ಪುನರಾವೃತ್ತಿ ರಹಿತವಾದ ತಮಸ್ಸಿಗೆ ಇವನು ಹೋಗದಿರಲಿ" ಎಂಬ ಆಶಯದಿಂದ ಶ್ರೀಕೃಷ್ಣನು ತನ್ನ ವಿಶ್ವರೂಪವನ್ನು ತೋರಿಸಿ ಉಪದೇಶಿಸಿ ಅವನ ಕೋಪ ಪರಿಹಾರ ಮಾಡಿದನೆಂದು ಭಾವವು. ಶ್ರೀಕೃಷ್ಣನ ವಿಶ್ವರೂಪದರ್ಶನ ಉಪದೇಶಗಳಿಂದ ಶಾಂತ ಮನಸ್ಸಿನವನಾಗಿ ತನ್ನ ಕಾರ್ಯಕ್ಕಾಗಿ ಪಶ್ಚಾತ್ತಾಪಪಟ್ಟು ಶ್ರೀಕೃಷ್ಣನಿಗೆ ಶರಣು ಹೋದನು. ಶ್ರೀಕೃಷ್ಣನಾಗ ಅವನಿಗೆ ಅಭಯವಿತ್ತು "ಮುನಿವರ್ಯ ! ನಿನಗೆ ಅಮೃತವನ್ನು ಇಂದ್ರನ ಹಸ್ತದಿಂದ ಕಳಿಸುವೆನು" ಎಂದು ಹೇಳಿ ದ್ವಾರಕಾ ಪಟ್ಟಣಕ್ಕಾಗಮಿಸಿದನು. ಮತ್ತು ಇಂದ್ರನಿಗೆ "ದೇವೇಂದ್ರ ! ನೀನು ಉದಂಕಮುನಿಗೆ ಅಮೃತವನ್ನು ಕೊಡು" ಎಂದಾಜ್ಞಾಪಿಸಿದನು. ಆಗ ಇಂದ್ರನು ಕೃಷ್ಣನ ಕ್ಷಮೆ ಬೇಡಿ "ದೇವ! ನಾನು ಉದಂಕನನ್ನು ವಂಚಿಸಿ ಅವನು ಅಮೃತಭಾಗಿಯಾಗದಂತೆ ಮಾಡುವೆನು" ಎನಲು ಇಂದ್ರನಲ್ಲಿರುವ ಸ್ನೇಹದಿಂದ ಕೃಷ್ಣನು "ಹಾಗೆಯೇ ಮಾಡು" ಎಂದು ಒಪ್ಪಿದನು. ಅನಂತರ ಶಚೀಪತಿಯು ಅತ್ಯಂತ ಜಿಗುಪ್ಸಿತವಾದ ಚಂಡಾಲವೇಷದಂತೆ ವೇಷ ಧರಿಸಿ "ಚಂಡಾಲಿಪ್ಲವಮಾತಂಗ ದಿವಾಕೀರ್ತಿಜನಂಗಮಾಃ" ಎಂಬ ಅನುಶಾಸನದಂತೆ ಚಂಡಾಲವೇಷ ಧರಿಸಿ ಉದಂಕಮುನಿಯ ಬಳಿಗೆ ಬಂದು ಅವನು ನೋಡುತ್ತಿರುವಂತೆಯೇ ಅಮೃತವಿಲ್ಲದ ಕಲಶವನ್ನು ತನ್ನ ಮರ್ಮಾಂಗದ ದ್ವಾರಕ್ಕೆ ಹಿಡಿದು (ಜಿತೇಂದ್ರಿಯನಾದ್ದರಿಂದ ಮೂತ್ರವನ್ನು ನಿರೋಧಿಸುವ ಸಾಮರ್ಥ್ಯವಿತ್ತಾದ್ದರಿಂದ) ಜಲಸೃಷ್ಟಿ ಮಾಡಿ ಅಮೃತಕಲಶಕ್ಕೆ ಸುರಿಸಿ ಮೂತ್ರ ಮಾಡಿದವನಂತೆ ನಟಿಸಿದನು ಮತ್ತು "ಮುನಿವರ್ಯ! ಶ್ರೀಕೃಷ್ಣನು ನಿನಗೆ ಅಮೃತ ಕಳಿಸಿದ್ದಾನೆ, ಸ್ವೀಕರಿಸಿ ಪಾನಮಾಡು" ಎಂದು ಹೇಳಿದನು. ಅಮೃತಕಲಶದಲ್ಲಿರುವುದು ಮೂತ್ರವೆಂದು ತಿಳಿದ ಉದಂಕನು ಇಂದ್ರನನ್ನು ನಿಂದಿಸಿ ಶ್ರೇಷ್ಠ ಜಲವೆಂದರಿಯದೇ "ನನ್ನ ಮುಂದಿರಬೇಡ, ಹೊರಟು ಹೋಗು" ಎಂದು ಹೇಳಲು ಇಂದ್ರನು ಉದಂಕನನ್ನು ವಂಚಿಸಿದ್ದರಿಂದ ಸಂತುಷ್ಟನಾಗಿ ಸ್ವರ್ಗಕ್ಕೆ ತೆರಳಿದನು. ದೇವತೆಗಳಿಗೆ

ಅಮೃತವು ಅಸಾಧಾರಣವಾದ ಅನ್ನವಾಗಿದೆ. ಅಂತೆಯೇ ಅದನ್ನು ಮತ್ತೊಬ್ಬರು ಪಾನ ಮಾಡುವುದು ಅಪ್ರಿಯವಾದ ಕಾರ್ಯವು. ಆದುದರಿಂದಲೇ (ಇಂದ್ರನು ವಂಚಿಸಿದನೆಂದು ಭಾವ) ಸ್ವಾಭಾವಿಕವಾಗಿ ದಾನ ಮಾಡಿದ ಅಮೃತವನ್ನು ಮೂತ್ರವೆಂದು ತಿರಸ್ಕರಿಸಿದ ಉದಂಕನಿಗೆ ಅಮೃತ ದೊರಕದಿದ್ದುದು ಸರಿಯಾಯಿತೆಂದು ಭಾವಿಸಿದನೆಂದು ತಾತ್ಪರ್ಯ.

ದ್ವಾರಕಾಪುರಿಗೆ ಬಂದ ಶ್ರೀಕೃಷ್ಣನು ಯಾದವರಿಂದ ಪೂಜಿತನಾಗಿ ಆ ಯಾದವರ ಸಭೆಯಲ್ಲಿ ವಸುದೇವನಿಗೆ ಕುರುಕ್ಷೇತ್ರದಲ್ಲಿ ಜರುಗಿದ ಸಕಲ ಸಮಾಚಾರಗಳನ್ನೂ ನಿವೇದಿಸಿದನು. ಹಾಗೆ ತಿಳಿಸಿದಾಗ ಅಭಿಮನ್ಯುವಿನ ವಧೆಯ ವಿಚಾರ ವೇಳಲಿಲ್ಲವಾದ್ದರಿಂದ "ಸಾತ್ವತೀ" ಎಂದು ಪರಿಚಿತಳಾದ ಸುಭದ್ರೆಯು "ಸಾತ್ವತಾಂ ಪತಿ"ಯಾದ ಪ್ರಭು ಶ್ರೀಕೃಷ್ಣನನ್ನು ಅಭಿಮನ್ಯುವಿನ ವಧವಿಚಾರವನ್ನು ಹೇಳೆಂದು ಪ್ರಾರ್ಥಿಸಿದಳು. ಆಗ ವಾಸುದೇವನು ಅಭಿಮನ್ಯುವಿನ ಅಸದೃಶ ಪರಾಕ್ರಮಾದಿ ವರ್ಣನಪೂರ್ವಕವಾಗಿ ಕೌರವರು ಅಧರ್ಮಮಾರ್ಗದಿಂದ ಕಪಟದಿಂದ ಅಭಿಮನ್ಯುವನ್ನು ಸಂಹರಿಸಿದ ವಿಚಾರವನ್ನು ತಿಳಿಸಿದನು. ಅದನ್ನು ಕೇಳಿ ಅತಿದುಃಖಿತರಾದ ವಸುದೇವಾದಿಗಳು ಶ್ರೀಕೃಷ್ಣನೊಡಗೂಡಿ ಅಭಿಮನ್ಯುಗಾಗಿ ಶ್ರಾದ್ಧ-ದಾನಾದಿಗಳನ್ನು ವಿಶೇಷವಾಗಿ ನೆರವೇರಿಸಿದರು.

ಸರ್ವ ಜಗತ್ತಿಗೆ ಸ್ವಾಮಿಯಾದ ಶ್ರೀಕೃಷ್ಣನು ದ್ವಾರಕಾಪುರಿಯಲ್ಲಿ ವಾಸಮಾಡುತ್ತಿರಲು ಇತ್ತ ಹಸ್ತಿನಾಪುರದಲ್ಲಿ ಅರಸನಾದ ಧರ್ಮರಾಜನು ವಿಶೇಷ ವೈಭವದಿಂದ ಅಶ್ವಮೇಧಯಾಗವನ್ನು ಮಾಡಲು ತಮ್ಮಲ್ಲಿರುವ ಧನವು ಅಪೂರ್ಣವೆಂದೂ ಅಷ್ಟು ದ್ರವ್ಯದಿಂದ ಯಜ್ಞವನ್ನು ವಿಶೇಷಾಕಾರವಾಗಿ ನೆರವೇರಿಸಲು ಸಾಧ್ಯವಾಗುವುದಿಲ್ಲವೆಂದು ಅಳಿದುಳಿದಿರುವ ರಾಜರಿಂದ ಪಡೆಯಲು ಅವರ ಮೇಲಿನ ಕಾರುಣ್ಯದಿಂದ ಇಚ್ಛಿಸಲಿಲ್ಲ. ಮಧ್ಯಮ ರೀತಿಯಲ್ಲಿ ಯಾಗವನ್ನು ಮಾಡಲೂ ಬಯಸಲಿಲ್ಲ. ಆಗ ಸರ್ವಜ್ಞರಾದ ಶ್ರೀಬಾದರಾಯಣರು ಆವಿರ್ಭೂತರಾಗಿ ಧರ್ಮರಾಜನನ್ನು ಉದ್ದೇಶಿಸಿ "ಕುಮಾರ ಯುಧಿಷ್ಠಿರ ! ಯಾವ ಹಿಮವತ್ಪರ್ವತದಲ್ಲಿ ಆ ಪರ್ವತದ ಶಿಖರವು ಹಿಮವತ್ಪರ್ವತದಲ್ಲಿರುವ ಮೇರುವಿನ ಶಿಖರದಿಂದ ಮಿಲಿತವಾಗಿದೆಯೋ ಅಂತಹ ಆ ಪರ್ವತದಲ್ಲಿ ಬೇಕಾದಷ್ಟು ಧನವಿದೆ. ನಾಶರಹಿತನಾದ ಶ್ರೀಹರಿಯೂ ಭಕ್ತಜನರ ರಕ್ಷಣೆಗಾಗಿ ಕರ್ಮಬಂಧನರಹಿತನಾಗಿದ್ದರೂ ಅಲ್ಲಿ ಯಜ್ಞವನ್ನು ಮಾಡಿರುವನು. ಅದೇ ಪರ್ವತದಲ್ಲಿ ಶ್ರೀರುದ್ರದೇವರೇ ಮೊದಲಾದ ದೇವತೆಗಳಿಗೂ ಮರುತ್ತನೆಂಬ ರಾಜನೂ ಶ್ರೀಹರಿಯನ್ನು ಉದ್ದೇಶಿಸಿ ಯಾಗ ಮಾಡಿರುವರು. ಅದರಂತೆ ವೃಷಪರ್ವನೆಂಬ ದಾನವನೂ ಸಹ ಯಜ್ಞವನ್ನಾಚರಿಸಿರುವನು. ಅಂತಹ ಆ ಪರ್ವತದಲ್ಲಿ ಅಪಾರವಾದ (ಅವಿನಾಶಿಯಾದ) ದ್ರವ್ಯವಿದೆ. ರುದ್ರನಲ್ಲಿ ಅಂತರ್ಗತನಾದ ಜಮದಗ್ನಿಕುಮಾರನಾದ, ಸರ್ವೋತ್ತಮನಾದ ಶ್ರೀಪರಶುರಾಮನೆಂಬ ಶ್ರೀಹರಿಯನ್ನು ಪೂಜಿಸಿ ಶ್ರೀಪರಶುರಾಮನ ಅಪ್ಪಣೆಯಿಂದಲೇ ಅಕ್ಷಯವಾದ ಧನವನ್ನು ಸ್ವೀಕರಿಸಿ ನೀನು ದ್ರವ್ಯದಿಂದ ಅತ್ಯಂತ ಶ್ರೇಷ್ಠ ರೀತಿಯಲ್ಲಿ ಅಶ್ವಮೇಧಯಾಗವನ್ನು ನೆರವೇರಿಸು" ಎಂದು ಆಜ್ಞಾಪಿಸಿದರು. ಆಗ ಭೀಮಸೇನನು ಬಾದರಾಯಣರ ಮಾತಿಗೆ ಅನುಕೂಲಕರರಾಗಿಯೇ ರಾಜಶ್ರೇಷ್ಠನಾದ ಯುಧಿಷ್ಠಿರನಿಗೆ ಇಂತು ಹೇಳಿದನು-

"ಅಣ್ಣ ! ಸಕಲ ದ್ರವ್ಯಕ್ಕೆ (ಸಂಪತ್ತಿಗೆ) ಶ್ರೀವಿಷ್ಣುವೇ ದೇವತೆಯು, ಶ್ರೀವಿಷ್ಣ್ವಭಿನ್ನರಾದ ಶ್ರೀಪರಶುರಾಮದೇವರು ಸರ್ವರಿಗೂ ಪ್ರಭುಗಳಾಗಿದ್ದಾರೆ. ಶ್ರೀಪರಶುರಾಮದೇವರೇ ಶ್ರೀರುದ್ರದೇವರಲ್ಲಿ ಅಂತರ್ಗತರಾಗಿದ್ದು ಯಜ್ಞೋಚ್ಛಿಷ್ಟ-ಧನಾಧಿಪತಿಗಳಾಗಿದ್ದಾರೆ. ಶ್ರೀವಿಷ್ಣುವಿನ ಅವತಾರರಾದ ಶ್ರೀಪರಶುರಾಮದೇವರೇ ಶ್ರೀರುದ್ರಾಂತರ್ಗರಾಗಿದ್ದು ಅರ್ಜುನನಿಗೆ ಪಾಶುಪತಾಸ್ತ್ರವನ್ನು ದಯಪಾಲಿಸಿದರು. ಶ್ರೀಹರಿಯು ನಮ್ಮಿಂದ ಅನೇಕ ಕಾರ್ಯಗಳನ್ನು ಮಾಡಿಸಿದ್ದಾನೆ.ಸಮಸ್ತರಿಗೂ ಸ್ವಾಮಿಯಾದ ಶ್ರೀಹರಿಯು ಬ್ರಹ್ಮ-ರುದ್ರ-ಇಂದ್ರಾದಿಗಳಿಗೆ ಆಯಾ ಪದವಿಗಳನ್ನು ಕೊಡತಕ್ಕವರಾಗಿದ್ದಾರೆ. ಶ್ರೀಹರಿಯು ಸ್ವತಂತ್ರನು. ಪರತಂತ್ರರಾದ ಅಂದರೆ ಶ್ರೀವಿಷ್ಣುವಿನ ಅಧೀನರಾದ ಬ್ರಹ್ಮ-ರುದ್ರಾದಿಗಳನ್ನು ತನ್ನ ಇಚ್ಛೆಯಿಂದಲೇ ಮುಕ್ತಿ-ಪರ್ಯಂತರವೂ ತಿರುಗಿಸುತ್ತಾನೆ. (ಆವರ್ತಿಸುತ್ತಾನೆ). ರಾಜನ್ ! ಅವನು ನಮಗೆ ಅತ್ಯಂತ ಪ್ರಿಯನು. ನಾವೂ ಸರ್ವದಾ

ಶ್ರೀಹರಿಗೆ ಪ್ರಿಯರಾಗಿದ್ದೇವೆ. ಆದುದರಿಂದ ಅವನ ಅಪ್ಪಣೆ ಪಡೆದು ಯಜ್ಞವನ್ನು ನೆರವೇರಿಸೋಣ. ಶ್ರೀವೇದವ್ಯಾಸದೇವರು ನಮಗೆ ಪಿತಾಮಹಾರಾಗಿದ್ದಾರೆ. ಆದ್ದರಿಂದ ಆ ಧನವನ್ನು ಅವರು ನಮಗೆ ಕೊಡುತ್ತಾರೆ" ಹೀಗೆ ಹೇಳಿ ಭೀಮಸೇನನು ಯುಧಿಷ್ಠಿರನನ್ನು ಮುಂದು ಮಾಡಿಕೊಂಡು ಎಲ್ಲರೂ ಶ್ರೀಕೃಷ್ಣದ್ವೈಪಾಯನಾಚಾರ್ಯರ ಸನ್ನಿಧಿಗೆ ಹೋದರು.

ಪಾಂಡವರು ಶ್ರೀವೇದವ್ಯಾಸರ ಬಳಿಗೆ ಬಂದು ನಮಸ್ಕರಿಸಿ ಅಶ್ವಮೇಧಯಾಗ ನಿರ್ವಹಣೆಗೆ ಪರ್ವತದಲ್ಲಿರುವ ಧನವನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿದರು. ಶ್ರೀವೇದವ್ಯಾಸದೇವರು ಪಾಂಡವರಲ್ಲಿ ಸುಪ್ರೀತರಾಗಿ ಒಂದು ಯೋಜನಪರ್ಯಂತವಿದ್ದ ಅಗಾಧ ಧನರಾಶಿ(ಸುವರ್ಣರಾಶಿ)ಯನ್ನು ಅವರ ಮುಂದೆ ಸುರಿಸಿ "ಇದರಿಂದ ಯಜ್ಞವನ್ನು ನೆರವೇರಿಸಿ" ಎಂದು ಆಜ್ಞಾಪಿಸಿದರು. ಆಗ ಪಾಂಡವರು ಅಗಾಧವಾದ ಸುವರ್ಣರಾಶಿಯನ್ನು, ಆನೆಗಳು, ಕುದುರೆಗಳು, ಒಂಟೆಗಳು, ಹಾಗೂ ಮನುಷ್ಯರುಗಳ ಮೇಲೆ ಹೊರಿಸಿ ತೆಗೆದುಕೊಂಡು ಹೊರಟರು. ಧರ್ಮರಾಜನನ್ನು ಬಿಟ್ಟು ಉಳಿದ ಪಾಂಡವರೂ ಸಹ ದ್ರವ್ಯಗಳನ್ನು ಹೊತ್ತು ನಡೆದು ಬಂದರು.

ಪಾಂಡವರು ಹಸ್ತಿನಾಪುರಿಗೆ ಬರುವ ವೇಳೆಗೆ ಶ್ರೀಕೃಷ್ಣನು ಪತ್ನಿಯರಿಂದೊಡಗೂಡಿ ತಂಗಿಯಾದ ಸುಭದ್ರಾದೇವಿಯ ಸಹಿತನಾಗಿ ಹಸ್ತಿನಾಪುರಕ್ಕೆ ಹೊರಟು ಮಾರ್ಗಮಧ್ಯದಲ್ಲಿ ಮರುಪ್ರದೇಶದಲ್ಲಿ ವಾಸಮಾಡುವ ಉದಂಕಮುನಿಯಿಂದ ಪೂಜಿತನಾಗಿ ಆ ಮುನಿಯು ಇಚ್ಛಿಸಿದಾಗ ಜಲವರ್ಷ ಮಾಡುವ ಅಮೋಘ ಮೇಘಗಳನ್ನು ಮುನಿಗೆ ಅನುಗ್ರಹಿಸಿ ಹಿಂದೆ ತಾನು "ಅಮೃತವನ್ನು ಕಳಿಸುತ್ತೇನೆ" ಎಂಬ ಮಾತನ್ನು ಸತ್ಯ ಮಾಡಲು "ಪಯಃಕೀಲಾಲಮಮೃತಂ" ಅಂದರೆ ಅಮೃತ ಮತ್ತು ನೀರು ಎರಡೂ ಒಂದೇ ಅರ್ಥ(ಅಮೃತ-ಜಲ)ವುಳ್ಳದ್ದಾದ್ದರಿಂದ ಮುನಿಗೆ ಇಚ್ಛಿಸಿವಾಗ ಜಲವನ್ನು ವರ್ಷಿಸುವ ಮೇಘಗಳನ್ನು ಕರುಣಿಸಿ ಹಸ್ತಿನಾಪುರದ ಹತ್ತಿರ ಬಂದನು. ಅಷ್ಟರಲ್ಲಿ ಪಾಂಡವರು ಶ್ರೀವೇದವ್ಯಾಸದೇವರೂ ಬಂದರು. ಮೊದಲು ಶ್ರೀವೇದವ್ಯಾಸದೇವರು ಹಸ್ತಿನಾವತಿಗೆ ಬಂದರು. ಆನಂತರ ಪಾಂಡವರು ತರುವಾಯ ಶ್ರೀಕೃಷ್ಣಾದಿಗಳು ಬಂದು ಸೇರಿದರು.

ಶ್ರೀಕೃಷ್ಣನು ದಯಮಾಡಿಸಿದ ಮೇಲೆ ಅಭಿಮನ್ಯುವಿನ ಪತ್ನಿಯಾದ ಉತ್ತರಾದೇವಿಯು ಮೃತವಾದ ಶಿಶುವನ್ನು ಪ್ರಸವಿಸಿದಳು. ಅಶ್ವತ್ಥಾಮನ ಅಸ್ತ್ರದಿಂದ ದಗ್ಧವಾಗಿ ಹುಟ್ಟಿದ ಶಿಶುವನ್ನು ನೋಡಿ ದುಃಖಿತರಾದ ಕುಂತೀದೇವಿ ಮುಂತಾದವರು ಶ್ರೀವಾಸುದೇವನ ಬಳಿಗೆ ಬಂದು ದುಃಖದಿಂದ ಕಣ್ಣರು ಸುರಿಸುತ್ತಾ ಜರುಗಿದ ವಿಚಾರವನ್ನು ಹೇಳಿದರು. ಶ್ರೀಕೃಷ್ಣ ಪರಮಾತ್ಮನು ಪ್ರತ್ಯಕ್ಷವಾಗಿ ಗರ್ಭಸ್ಥ ಶಿಶುವನ್ನು ಸಂರಕ್ಷಿಸಿ ಪ್ರಸವಕಾಲದಲ್ಲಿ ಅಶ್ವತ್ಥಾಮನ ಅಸ್ತ್ರಕ್ಕೆ ಪ್ರಸವಕಾಲದಲ್ಲಿ ಅವಕಾಶವಿತ್ತು. ಶಿಶುವು ಅದರಿಂದ ದಗ್ಧವಾಗಿ ಮೃತವಾಗಿ ಜನಿಸಿದ ಕೂಸನ್ನು ತಾನು ಗರ್ಭಸ್ಥಶಿಶುವನ್ನು ಸಂರಕ್ಷಿಸಿದ್ದೇನೆಂಬುದನ್ನು ಜಗತ್ತಿಗೆ ತೋರಿಕೊಡಲು, ಆ ಮೃತವಾದ ಶಿಶುವನ್ನು ಅರ್ಜುನನ ಸಂತಾನ ತಂತುವನ್ನು ಉಳುಹಲು ಪುನಃ ಉಜ್ಜೀವನಗೊಳಿಸಿದನು.ಅದೇ ಕಾಲಕ್ಕೆ ವೇದವ್ಯಾಸರಿಂದ ಸಹಿತರಾದ ಪಾಂಡವರು ಅಗಾಧ ಧನರಾಶಿಯೊಡನೆ ಬಂದು ಸೇರಿದರು. ಆಗ ಅವರೆಲ್ಲರಿಗೂ ಮೃತವಾಗಿ ಜನಿಸಿದ್ದ ಶಿಶುವನ್ನು ಶ್ರೀಕೃಷ್ಣನು ಪುನಃ ಜೀವಂತಗೊಳಿಸಿದ ವಿಚಾರ ತಿಳಿಯಿತು. ಜೀವಂತವಾದ ಕೂಸನ್ನು ಕಂಡು ಪಾಂಡವರೆಲ್ಲರೂ ಹರ್ಷನಿರ್ಭರರಾದರು. ಆಗ ಯುಧಿಷ್ಠಿರನು, ಪೌತ್ರನು ಜೀವಂತನಾದ ನಿಮಿತ್ತ ಸಂತೋಷಗಳಿಂದ ಬಹುವಿಧವಾದ ದಾನಧರ್ಮಗಳನ್ನು ಮಾಡಿ ವಿಪ್ರರಿಗೆಲ್ಲಾ ವಿಶೇಷ ದಕ್ಷಿಣಾ ಪ್ರದಾನ ಮಾಡಿದನು. ನಂತರ ಶ್ರೀಕೃಷ್ಣನಿಗೆ ನಮಸ್ಕರಿಸಿದನು. ಆಗ ಕುಂತೀದೇವಿ, ದ್ರೌಪದೀ, ಸುಭದ್ರಾದೇವಿ, ಉತ್ತರಾದೇವಿ, ಹಾಗೂ ಪಾಂಡವರು ಇತರ ಪುರುಷರೂ ಶ್ರೀಹರಿಯನ್ನು ಸ್ತೋತ್ರ ಮಾಡಿದರು ಮತ್ತು ನಮಿಸಿದರು.

ಆನಂತರ ಶ್ರೀವೇದವ್ಯಾಸದೇವರು ಯಜ್ಞವಿಧಿಗಳನ್ನು ಹೇಳುತ್ತಾ ಮಾರ್ಗದರ್ಶನ ಮಾಡುತ್ತಿರಲು ಶ್ರೀವಾಸಿಷ್ಠಕೃಷ್ಣ ಯಾದವಕೃಷ್ಣರಿಂದ ಅನುಜ್ಞಪ್ತರಾಗಿ ಬ್ರಹ್ಮವಾದಿಗಳಾದ ಮುನಿಗಳು ಅಶ್ವಮೇಧಯಜ್ಞವನ್ನು ಪ್ರಾರಂಭಿಸಿದರು. ಆ

ಪಾಂಡವರ ಸರ್ವಯಜ್ಞಾತ್ಮಕವಾದ ಅಶ್ವಮೇಧಯಾಗವನ್ನು ಜಗತ್ಪತಿಗಳಾದ ಭಗವಾನ್ ಶ್ರೀಕೃಷ್ಣದ್ವೈಪಾಯನರು ಸ್ವತಃ ತಾವೇ ಪಾಂಡವರಿಂದ ಮಾಡಿಸಿದರು. ಶ್ರೀಕೃಷ್ಣದ್ವೈಪಾಯನರ ಅಪ್ಪಣೆಯಂತೆ ಪವನನಂದನನಾದ ಭೀಮಸೇನನು ಸುವರ್ಣಮಯವಾದ ಯಜ್ಞಕ್ಕೆ ಬೇಕಾದ ಪಾತ್ರ-ಪದಾರ್ಥಗಳನ್ನು ಮತ್ತು ವಿಶಾಲವಾದ ಕನಕಮಯ ಯಜ್ಞಶಾಲೆಗಳನ್ನು ನಿರ್ಮಾಣ ಮಾಡಿಸಿದನು. ಅನಂತರ ಪುರೋಹಿತರಾದ ಧೌಮ್ಯಋಷಿಗಳು ವೈದಿಕಮಂತ್ರ ಪಠನಪೂರ್ವಕ ಮಂತ್ರಪೂತವಾದ ಆ ಯಾಗಾಶ್ವವನ್ನು ಬಿಡುವಂತೆ ಆಜ್ಞಪ್ತರಾಗಿ ಯಾಗಾಶ್ವವನ್ನು ದಿಗ್ವಿಜಯಕ್ಕಾಗಿ ಬಿಟ್ಟನು. ಆ ಯಾಗಾಶ್ವವು ಕೃಷ್ಣವರ್ಣೋಪೇತ ಅವಯವಗಳಿಂದ ವಿರಾಜಿಸುತ್ತಿತ್ತು. ಸಾಲಂಕೃತವಾಗಿತ್ತು. ಆ ಯಾಗಾಶ್ವವನ್ನು ಮುಂದೆಮಾಡಿಕೊಂಡು ಅದರ ರಕ್ಷಣೆಗಾಗಿ ಗಾಂಡೀವಧಾರಿಯಾದ ಅರ್ಜುನನು ದಿಗ್ವಿಜಯಕ್ಕಾಗಿ ಹೊರಟನು. ಅದು ಸಕಲರಾಜ್ಯಗಳಲ್ಲಿ ಸಂಚರಿಸುತ್ತಾ ಹೊರಟಿತು. ಬಹುಶಃ ಆ ಯಾಗಾಶ್ವವನ್ನು ಹೆಚ್ಚಿನ ರಾಜರುಗಳು ಕಟ್ಟಲಿಲ್ಲ. ಹಾಗೆ ಕಟ್ಟಿದವರನ್ನು ಸಂಹರಿಸದೇ ಅಸ್ತ್ರತೇಜಸ್ಸಿನಿಂದಲೇ ಜಯಿಸಿದನು. ಧರ್ಮರಾಜನು ಅಶ್ವ ಕಟ್ಟಿದವರನ್ನು ಸಂಹರಿಸಬಾರದೆಂದು ಆಜ್ಞಾಪಿಸಿದ್ದನು. ಅಣ್ಣನ ಅಪ್ಪಣೆಯಂತೆಯೇ ಅರ್ಜುನನು ಯಾಗಾಶ್ವ ಕಟ್ಟಿದವರನ್ನು ಜಯಿಸಿ ಅವರಿಂದ ಹೇರಳ ಕಾಣಿಕೆಗಳನ್ನು ಸುವರ್ಣರತ್ನಾಭರಣಗಳನ್ನು ಸ್ವೀಕರಿಸಿ ಎಲ್ಲ ರಾಜರಿಗೂ ಯಜ್ಞಕ್ಕೆ ಆಗಮಿಸಬೇಕೆಂದು ಆಹ್ವಾನ ನೀಡಿದನು. ಹೀಗೆ ಸರ್ವರಾಷ್ಟ್ರಗಳಲ್ಲಿಯೂ ಸಂಚರಿಸುತ್ತಾ ಶತ್ರುಗಳಿಂದ ಅಜಯ್ಯನಾಗಿ ಕಂಗೊಳಿಸಿದನು. ಅರ್ಜುನನು ಯಾಗಾಶ್ವದೊಡನೆ ಮಳಲೂರು ಎಂಬಲ್ಲಿಗೆ ಬಂದನು.

ಅಲ್ಲಿ ಅರ್ಜುನನಿಗೆ ಚಿತ್ರಾಂಗದೆಯಿಂದ ಜನಿಸಿದ ಬಭ್ರುವಾಹನನು ಆ ರಾಜ್ಯಕ್ಕೆ ರಾಜನಾಗಿದ್ದನು. ಅವನು ಅರ್ಜುನನು ತನ್ನ ತಂದೆಯೆಂಬ ಭಕ್ತಿಗೌರವಗಳಿಂದ ಅರ್ಘ್ಯಪಾದ್ಯಾದಿಗಳಿಂದ ಅರ್ಜುನನನ್ನು ಪೂಜಿಸಲು ಬಂದಾಗ ಅವನನ್ನು ನೋಡಿ ಗಾಂಡೀವಿಯು "ಯಾಗಾಶ್ವವನ್ನು ಕಟ್ಟಿ ಹಾಕಿ ಯುದ್ಧಮಾಡುವುದನ್ನು ಬಿಟ್ಟು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಲು ಬಂದಿರುವೆಯಲ್ಲ. ನಿನ್ನ ಪೌರುಷಕ್ಕೆ ಧಿಕ್ಕಾರವಿರಲಿ" ಎಂದು ನಿಂದಿಸಿದನು. ಆದರೂ ಪಿತೃಭಕ್ತಿಯಿಂದ ತಂದೆಯು ನಿಂದಿಸಿದರೂ ಅರ್ಜುನನೊಡನೆ ಯುದ್ಧಮಾಡಲು ಇಚ್ಛಿಸದ ಬಭ್ರುವಾಹನನನ್ನು ನೋಡಿ ಅರ್ಜುನನ ಮತ್ತೊಬ್ಬ ಪತ್ನಿಯಾದ ನಾಗಕನ್ನಿಕೆಯಾದ ಉಲೂಪಿ(ಉಲೂಚಿ)ಯು "ವತ್ಸ ! ಬಭ್ರುವಾಹನ ! ನೀನು ಯುದ್ಧಮಾಡಿದರೆ ನಿನ್ನ ತಂದೆಗೆ ನಿನ್ನಲ್ಲಿ ಪ್ರೀತಿ ಸಂತೋಷಗಳುಂಟಾಗುವುವು. ಆದ್ದರಿಂದ ಯುದ್ಧಮಾಡುವುದು ನಿನ್ನ ಕರ್ತವ್ಯ" ಎಂದು ಹೇಳಿದಳು ಆಗ ಬಭ್ರುವಾಹನನು ಜನಕನನ್ನು ಸಂತೋಷಗೊಳಿಸಲು (ದ್ವೇಷದಿಂದಲ್ಲ ಎಂದು ಭಾವ) ಅರ್ಜುನನೊಡನೆ ತನ್ನ ಪೌರುಷತೋರಲು ಯುದ್ಧ ಮಾಡಿದನು. ಪಾರ್ಥನು ಮಂದಹಾಸ ಬೀರುತ್ತಾ ವಿಸ್ಮಯವಾಗುವಂತೆ ಮಗನ ಮೇಲಿನ ಮಮತೆಯಿಂದ ತನ್ನ ಹೆಚ್ಚು ಬಲವನ್ನು ತೋರದಲೇ ನಿಧಾನವಾಗಿ ಯುದ್ಧ ಮಾಡುತ್ತಿರಲು, ಬಭ್ರುವಾಹನನು ಪ್ರಯೋಗಿಸಿದ ಸಕಲ ಆಯುಧ(ಅಸ್ತ್ರ)ಗಳೂ ಪಾರ್ಥನಿಗೆ ಒಂದು ಗಾಯವನ್ನೂ ಮಾಡಲು ಶಕ್ತವಾಗದೆ ನಿಷ್ಫಲವಾದವು. ಅದನ್ನು ಕಂಡು ಬಭ್ರುವಾಹನನು ಬಾಲಸ್ವಭಾವದಿಂದ ಒಂದು ಮುಂದು ಯೋಚಿಸದೇ ತನ್ನಲ್ಲಿದ್ದ ಬಹುಶಕ್ತಿಯುತವಾದ ಮಂತ್ರಪೂತವಾದ ಅಸ್ತ್ರವನ್ನು ಅರ್ಜುನನ ಸಾಮರ್ಥ್ಯ ಪರೀಕ್ಷೆಗಾಗಿ ಪ್ರಯೋಗಿಸಿದನು. ಅದರಿಂದ ಅರ್ಜುನನು ಮೂರ್ಛಿತನಾದನು. ತಂದೆಯು ಮೂರ್ಛಿತನಾದುದನ್ನು ಕಂಡು ಬಭ್ರುವಾಹನನು ಪಿತೃಭಕ್ತಿಯಿಂದ ತಾನು ಮಾಡಿದ ಕಾರ್ಯಕ್ಕಾಗಿ ಅತಿದುಃಖಿತನಾಗಿ ಪ್ರಾಣತ್ಯಾಗಮಾಡಲು ಪ್ರಾಯೋಪವೇಶಮಾಡಿ ಕುಳಿತನು. ಅವನ ತಾಯಿ ಅರ್ಜುನನ ಪತ್ನಿಯಾದ ಚಿತ್ರಾಂಗದೆಯು ಮೂರ್ಛಿತನಾದ ಪತಿಯನ್ನು ನೋಡಿ ಅವನು ಮೃತನಾದನೆಂದೇ ಭಾವಿಸಿ ಅತಿದುಃಖದಿಂದ ಪ್ರಲಾಪ ಮಾಡಿದಳು. ಉಲೂಪಿಯನ್ನು ದೂಷಿಸುತ್ತಾ "ಜಗತ್ತ್ರಯಪೂಜ್ಯನಾದ ನನ್ನ ಪತಿಯನ್ನು ಅವಿವೇಕದಿಂದ ಮಗನಿಂದಲೇ ಸಂಹಾರಮಾಡಿಸಿದೆಯಲ್ಲ, ನಿನಗೆ ಧಿಕ್ಕಾರ" ಎಂದು ಕೋಪದಿಂದ ಭರ್ತ್ಸನ ಮಾಡಿದಳು. ಮುಂದುವರೆದು ಚಿತ್ರಾಂಗದೆಯು "ಉಲೂಪಿ! ನನ್ನ ಪತಿಯು ಮರಣ ಹೊಂದಿದ ಮೇಲೆ ಅವನನ್ನು ಬಿಟ್ಟು ಈ ಪುತ್ರನಿಂದ ನನಗೇನು ಪ್ರಯೋಜನ ? ಪತಿಯೊಡನೆ ನಾನು ಪತಿಯ ಲೋಕಕ್ಕೆ ತೆರಳುವೆನು. ಎಲೈ ಕದನಪ್ರಿಯಳಾದ ದುಷ್ಟಳೇ (ಕಲಿಪ್ರಿಯಳೇ) !

ಈಗ ನೀನು ತೃಪ್ತಳಾಗು'' ಎಂದು ಹೇಳಿದಳು ಮತ್ತು ಪ್ರಾಣತ್ಯಾಗ ಮಡಲು ತೀರ್ಮಾನಿಸಿ ಚಿತ್ರಾಂಗದೆಯು ಧರೆಯಲ್ಲಿ ಬಿದ್ದು ವಿಲಾಪಿಸಿದಳು. ಅದನ್ನು ಪರೀಕ್ಷಿಸಿ ನಾಗಕುಮಾರಿಯಾದ ಉಲೂಪಿಯು ನಾಗಲೋಕಕ್ಕೆ ಹೋಗಿ ಅಲ್ಲಿದ್ದ ಸಂಜೀವಿನೀ ಮಣಿಯನ್ನು ತತ್‌ಕ್ಷಣವೇ ತಂದು ಅದರಿಂದ ಪತಿಯಾದ ತ್ರಿಲೋಕಾಧಿರಥನಾದ ಪಾರ್ಥನನ್ನು ಬದುಕಿಸಿದಳು. ಅನಂತರ ಉಲೂಪಿಯು ನಗುತ್ತಾ ''ಪೂರ್ವದಲ್ಲಿ ನಾನು ದೇವಲೋಕಕ್ಕೆ ಹೋಗಿದ್ದಾಗ ಅಲ್ಲಿ ಅಮರರು, 'ಭೀಷ್ಮಾದಿಗಳನ್ನು ಅರ್ಜುನನು ಅತಿ ಧರ್ಮದಿಂದ ಸಂಹರಿಸದೆ ಅಧರ್ಮದಿಂದ ಒಂದು ವ್ಯಾಜದಿಂದ ಸಂಹರಿಸಿದನು. ಆದ್ದರಿಂದ ಅರ್ಜುನನು ಆ ದೋಷದಿಂದ ಯುದ್ಧದಲ್ಲಿ ಹೆಚ್ಚು ವೇದನೆಯನ್ನು ಅನುಭವಿಸಲಿ' ಎಂದು ಹೇಳಿದ್ದನ್ನು ಕೇಳಿಸಿಕೊಂಡೆನು. ಆದ್ದರಿಂದ ಅರ್ಜುನನು ಬೇರೊಬ್ಬರಿಂದ ಯುದ್ಧದಲ್ಲಿ ಅತಿವೇದನೆ ಪಡುವುದು ಬೇಡ, ಮಗನಿಂದಲೇ ಆ ದುಃಖವನ್ನು ಅನುಭವಿಸಲಿ ಎಂದು ನಾನು ಬಭ್ರುವಾಹನನಿಗೆ ಯುದ್ಧಮಾಡು ಎಂದು ಪ್ರೋತ್ಸಾಹಿಸಿ ಆ ಕಾರ್ಯವನ್ನು ಮಾಡಿಸಿದೆನು'' ಎಂದು ನಿರೂಪಿಸಿದಳು. ಈ ವಿಚಾರವಾಗಿ ಶ್ರೀನಿರ್ಣಯಾಚಾರ್ಯರು ಅರ್ಜುನನು ದೇವತೆಗಳ ಸಂಕಲ್ಪದಿಂದಲೇ ಮೂರ್ಛಿತನಾದನೇ ವಿನಃ ಬಭ್ರುವಾಹನನ ಸಾಮರ್ಥ್ಯದಿಂದಲ್ಲ ಎಂದೂ, ಬೇರೆಯವರಿಂದಲ್ಲದೆ ಮಗನಿಂದಲೇ ಯುದ್ಧದಲ್ಲಿ ಮೂರ್ಛಿತನಾಗಿ ವ್ಯಥೆಯನ್ನು ಅನುಭವಿಸಿದ್ದರಿಂದ ಭೀಷ್ಮಾದಿಗಳನ್ನು ವ್ಯಾಜದಿಂದ ಸಂಹರಿಸಿದ ದೋಷದಿಂದ ಅರ್ಜುನನು ಮುಕ್ತನಾದನೆಂದೂ ಅಪ್ಪಣೆ ಕೊಡಿಸಿದ್ದಾರೆ.

ತ್ರಿಲೋಕಗಳಲ್ಲಿ ಕೀರ್ತಿತವಾದ ಅರ್ಜುನನ ಸಾಮರ್ಥ್ಯಕ್ಕೆ ಕುಂದು ಬರಬಾರದು. ಆದುದರಿಂದ ಮಗನಿಂದಲೇ ಮೂರ್ಛಿತನಾಗಿ ಅವನ ಕೀರ್ತಿಯು ಬೆಳಗುತ್ತಿರಲಿ ಎಂಬ ಅಭಿಪ್ರಾಯದಿಂದ ದೇವತೆಗಳು ಹಾಗೆ ಸಂಕಲ್ಪಿಸಿದರೆಂದು ಉಲೂಪಿಯು ನಿರೂಪಿಸಿದ್ದನ್ನಾಲಿಸಿ, ಪತ್ನಿ-ಪುತ್ರರಿಂದ ಯುಕ್ತನಾದ ಅರ್ಜುನನು ಅವರಲ್ಲಿ ಅತಿ ಪ್ರೀತಿಯುಕ್ತನಾದನು. ಪಾರ್ಥನು ಪತ್ನಿ-ಪುತ್ರಾದಿಗಳನ್ನು ಅಶ್ವಮೇಧಯಜ್ಞಕ್ಕೆ ಬರುವಂತೆ ಆಹ್ವಾನಿಸಿ ಅವರಿಂದ ಪೂಜಿತನಾಗಿ ಅಲ್ಲಿಂದ ಯಾಗಾಶ್ವದಿಂದ ಸಹಿತನಾಗಿ ಮುಂದೆ ಪ್ರಯಾಣ ಬೆಳಸಿದನು.

ಅಲ್ಲಿಂದ ಹೊರಟ ಧನಂಜಯನು ದ್ವಾರಕಾನಗರಕ್ಕೆ ಸಮೀಪ ಬಂದಾಗ ಶ್ರೀಕೃಷ್ಣಪುತ್ರರಾದ ಪ್ರದ್ಯುಮ್ನ ಮುಂತಾದವರು ಯಾಗಾಶ್ವವನ್ನು ಬಂಧಿಸಿ ಯುದ್ಧಕ್ಕೆ ಬರುವಂತೆ ಅರ್ಜುನನನ್ನು ಆಹ್ವಾನಿಸಿದರು. ಈ ಕೃಷ್ಣಪುತ್ರರು ಹಿಂದೆ ಅರ್ಜುನನು ಸುಭದ್ರೆಯನ್ನು ಹರಣ ಮಾಡಿದಾಗ ಬಂದ ಅಪಕೀರ್ತಿಯನ್ನು ಪರಿಹರಿಸಿಕೊಳ್ಳಲು ಹೀಗೆ ಅರ್ಜುನನು ಶ್ರೀವಾಸುದೇವನಲ್ಲಿರುವ ಗೌರವದಿಂದಲೂ ಸೋದರಮಾವನಾದ ವಸುದೇವನಲ್ಲಿರುವ ಗೌರವದಿಂದಲೂ ಯುದ್ಧಮಾಡದೆ ವಸುದೇವನ ಬಳಿಗೆ ಬಂದು ಪ್ರದ್ಯುಮ್ನಾದಿ ನಿಮ್ಮ ಪೌತ್ರರು ನಾನು ಅಬಂಧುವೆಂಬಂತೆ ಕಂಡು ಅಣ್ಣನ ಯಾಗಾಶ್ವವನ್ನು ಕಟ್ಟಿಹಾಕಿದ್ದಾರೆ'' ಎಂದು ಹೇಳಿದನು. ಆಗ ವಸುದೇವನು ಬಂಧುವಾದ ಪಾರ್ಥನನ್ನು ಶತ್ರುವಂತೆ ಕಂಡು ಯಾಗಾಶ್ವವನ್ನು ಕಟ್ಟಿಹಾಕಿದ್ದಕ್ಕೆ ಪ್ರದ್ಯುಮ್ನ ಮೊದಲಾದ ಪೌತ್ರರನ್ನು ಜಬರಿಸಿ ಯಾಗಾಶ್ವವನ್ನು ಬಿಡಿಸಿ ಅರ್ಜುನನಿಗೆ ನೀಡಿದನು. ಆಗ ಅರ್ಜುನನು ವಸುದೇವ ಮತ್ತು ಪ್ರದ್ಯುಮ್ನಾದಿ ಯದುಕುಮಾರರನ್ನು ಅಶ್ವಮೇಧ ಯಾಗಕ್ಕೆ ಬರಬೇಕೆಂದು ಆಹ್ವಾನಿಸಿ ಅವರಿಂದ ಬೀಳ್ಕೊಂಡು ಹೊರಟು ತಾನು ಹಸ್ತಿನಾವತಿಗೆ ಬರುತ್ತಿರುವ ವರ್ತಮಾನವನ್ನು ಧರ್ಮರಾಜನಿಗೆ ತಿಳಿಸಬೇಕೆಂದು ಒಬ್ಬ ದೂತನನ್ನು ಹಸ್ತಿನಾಪುರಕ್ಕೆ ಕಳುಹಿಸಿದನು. ಆ ದೂತನಿಂದ ಅರ್ಜುನನ ಆಗಮನದ ವಾರ್ತೆಯನ್ನರಿತು ರಾಜ ಧರ್ಮರಾಜನು ಶ್ರೀಕೃಷ್ಣ ಸಹೋದರರಿಂದ ಸಹಿತನಾಗಿ ಸಹೋದರಪ್ರೇಮದಿಂದ ಯುಕ್ತನಾಗಿ ಆನಂದಾಶ್ರು ಸುರಿಸುತ್ತಾ ಅರ್ಜುನನನ್ನು ಸ್ವಾಗತಿಸಿ ದುಃಖಿತ ಮುಖಭಾವಯುಕ್ತನಾಗಿ ಶ್ರೀಕೃಷ್ಣನನ್ನು ಕುರಿತು ''ಕೃಷ್ಣ-ಅರ್ಜುನನಲ್ಲಿ ನಾನು ಯಾವ ದುರ್ಲಕ್ಷಣಗಳನ್ನು ಕಂಡವನಲ್ಲ. ಆದರೆ ಅವನು ಈಗ ಯಾವ ದುರ್ಲಕ್ಷಣದಿಂದ ಬಹು ದುಃಖಿತನಾಗಿದ್ದಾನೆ'' ಎಂದು ಪ್ರಶ್ನಿಸಿದನು.

ಧರ್ಮರಾಜನ ವಚನವನ್ನಾಲಿಸಿ ಶ್ರೀಕೃಷ್ಣನು ''ಧರ್ಮನಂದನ ! ನನ್ನ ಸಹೋದರನಾದ ಅರ್ಜುನನು ದೀರ್ಘ-ಪಿಂಡಿಕಾರೂಪ(ದೀರ್ಘಶರೀರಿಯುಳ್ಳ) ದುರ್ಲಕ್ಷಣದಿಂದ ಕೂಡಿರುವುದರಿಂದ ದುಃಖಾರ್ತನಾಗಿದ್ದಾನೆ'' ಎಂದು ಹೇಳಿ ಇತರ

ದುರ್ಲಕ್ಷಣಗಳನ್ನು ಹೇಳಲುದ್ಯುಕ್ತನಾದಾಗ ದ್ರೌಪದಿಯು ನೇತ್ರಸಂಜ್ಞೆಯಿಂದ ಅದನ್ನು ಹೇಳದಿರುವಂತೆ ಸೂಚಿಸಿ ತಡೆದಳು. ಎಲ್ಲ ಲಕ್ಷಣಗಳನ್ನರಿತವರೆಂದರೆ ಶ್ರೀಕೃಷ್ಣ, ಸತ್ಯಭಾಮಾ, ಭೀಮ ಮತ್ತು ದ್ರೌಪದಿಯರು ಮಾತ್ರ. ಈ ನಾಲ್ವರನ್ನು ಬಿಟ್ಟು ಬೇರೆಯವರ್ಯಾರೂ ತಿಳಿದವರಿಲ್ಲ. "ಪುರುಷಲಕ್ಷಣಪ್ರತಿಪಾದಕವಾದ ವಿದ್ಯಾಗ್ರಹಣಶೀಲನಾದ ಧರ್ಮಜನು ಆ ಲಕ್ಷಣಗಳನ್ನು ಹೇಳಿದಲ್ಲಿ ಅದನ್ನು ತಾನು ಪಡೆಯಲಾಶಿಸಬಹುದು" ಎಂದಾಲೋಚಿಸಿ ಅದು ಇತರರಿಗೆ ದೊರೆಯಬಾರದೆಂದು (ಲೋಭದಿಂದ) ಕಾರಣದಿಂದಲೇ ದ್ರೌಪದಿಯು ಧರ್ಮರಾಜನಿಗೆ ಹೇಳದಿರುವಂತೆ ಕೃಷ್ಣನಿಗೆ ಸಂಜ್ಞೆಯಿಂದ ತಿಳಿಸಿದಳು. ಶ್ರೀಕೃಷ್ಣನು ಪಾಂಚಾಲಿಯಲ್ಲಿರುವ ಗೌರವ(ವಿಶ್ವಾಸ)ದಿಂದ ಅದನ್ನು ತಿಳಿಸದಲೇ ಬೇರೊಂದು ಪ್ರಸಂಗವನ್ನು ನಿರೂಪಿಸಿ ಆ ಲಕ್ಷಣವಿಚಾರವನ್ನು ಯುಧಿಷ್ಠಿರನು ಮರೆಯುವಂತೆ ಮಾಡಿದನು. ಅರ್ಜುನನಲ್ಲಿರುವ ದೀರ್ಘಪಿಂಡತ್ವ ದೋಷಕ್ಕಿಂತಲೂ ಪ್ರಬಲವಾದ ಸ್ಪಷ್ಟವಾಗಿ ದೃಗ್ಗೋಚರವಾದ ಉದರದ ಆಧಿಕ್ಯ, ವೃಷಣಾಧಿಕ್ಯ, ಎಡಭಾಗದ ತೋಳು (ಕರ) ಉದ್ದವಾಗಿರುವುದೇ ಮುಂತಾದ ದೋಷಲಕ್ಷಣಗಳನ್ನು ಕೃಷ್ಣನು ತಿಳಿಸಲೇ ಇಲ್ಲ. ದೀರ್ಘಪಿಂಡಕಾದಿ ದೋಷಗಳು ನಿತ್ಯವಾದವು. ಅಂದರೆ ಜೀವರಲ್ಲಿ ಸದಾ ಇರುವಂತಹುದು. ಆತ ಏವ ಅವು ಜ್ಞಾನಾನಂದಾದಿಗಳನ್ನು ಹ್ರಾಸ ಮಾಡುವಂತಹುದು. ಅವು ನಿತ್ಯವಾದ್ದರಿಂದ ಮುಕ್ತಿಯಲ್ಲಿ ಅವು ಜೀವರ ಜ್ಞಾನಾನಂದಾದಿಗಳನ್ನು ಮುಚ್ಚಿ ಬಿಡುವವು. ಸಕಲ ಜೀವರಾಶಿಯಲ್ಲಿ ದ್ರೌಪದೀ ಭೀಮಸೇನರಿಬ್ಬರೇ ದುರ್ಲಕ್ಷಣರಹಿತರಾಗಿ ಪರಿಪೂರ್ಣ ಜ್ಞಾನ, ಆನಂದ, ದೈಹಿಕ ಬಲ, ಭಕ್ತಿ ಮುಂತಾದ ಗುಣಗಳಿಂದವರು ಶೋಭಿಸುವರು.

ರುಕ್ಮಿಣೀ ಸತ್ಯಭಾಮಾ ಸೀತಾದಿಗಳ ಸ್ವರೂಪವಾದ ಲಕ್ಷ್ಮೀದೇವಿಗೆ ದ್ರೌಪದೀ ಭೀಮಸೇನರಕ್ಕಿಂತ ಹೆಚ್ಚಾಗಿ ಅನಾದಿ ದುಃಖವಿಲ್ಲದಿರುವಿಕೆ ಸುಖಾಧಿಕ್ಯಾದಿ ಮುಖ್ಯ ಲಕ್ಷಣವಿದೆ. ಅಂದರೆ ಜೀವಸಮುದಾಯಕ್ಕಿಂತ ಲಕ್ಷ್ಮೀದೇವಿಯು ವಿಶೇಷ-ಗುಣವಿಶಿಷ್ಟಳೆಂದು ಭಾವ. ಲಕ್ಷ್ಮೀದೇವಿಗಿಂತಲೂ (ರಮಾದೇವಿಗೀತಲೂ) ಅತಿಮುಖ್ಯವಾದ ಸ್ವಾತಂತ್ರ್ಯಾದಿ ಗುಣಗಳಿಂದ ಸರ್ವೋತ್ಕೃಷ್ಟ ಲಕ್ಷಣವು ಶ್ರೀವೇದವ್ಯಾಸಾದಿ ಸ್ವರೂಪಿಯಾದ ಶ್ರೀವಿಷ್ಣುವಿಗೆ ಮಾತ್ರವಿದೆ. ಮತ್ತಾರಿಗೂ ಸುತರಾಂ ಇಲ್ಲ. ಆದ್ದರಿಂದ ಶ್ರೀಹರಿಯೊಬ್ಬನೇ ಪರಿಪೂರ್ಣಜ್ಞಾನಾನಂದಾದಿ ನಿರ್ದುಷ್ಟ (ದೋಷದೂರವಾದ) ಮಂಡಿತನಾಗಿದ್ದಾನೆ.ಈವರಿಗೆ ನಿರ್ಣಯಾಚಾರ್ಯರು ಪ್ರಸಂಗತ್ವೇನ ಶ್ರೀಲಕ್ಷ್ಮೀದೇವಿ ಮೊದಲಾದವರ ಸ್ವರೂಪ ಮಾಹಾತ್ಮ್ಯವನ್ನು ನಿರೂಪಿಸಿ ಶ್ರೀಹರಿ-ಯೊಬ್ಬನೇ ಸರ್ವೋತ್ತಮನೆಂದು (ಸರ್ವಶ್ರೇಷ್ಠನೆಂದು) ಹೇಳಿ (ಸಾಧಿಸಿ) ಪ್ರಕೃತ ವಿಷಯದ ಕಡೆ ಗಮನ ಹರಿಸಿದ್ದಾರೆ.

ಅಶ್ವಮೇಧಯಾಗಾಶ್ವಸಹಿತನಾಗಿ ಬಂದ ಪಾರ್ಥನು ಯಜ್ಞಶಾಲೆಯನ್ನು ಪ್ರವೇಶಿಸುತ್ತಿರಲು ಶ್ರೀಕೃಷ್ಣನಿಂದೊಡ-ಗೂಡಿದ ಅರ್ಜುನನ ಸಹೋದರರು ಪರಮಾನಂದತುಂದಿಲರಾಗಿ ಪಾರ್ಥನನ್ನು ಆಲಿಂಗನಾದಿ ದ್ವಾರಾ ಗೌರವಿಸಿದರು. ಆ ತರುವಾಯ ಅಶ್ವಮೇಧ ಯಜ್ಞವು ಶ್ರೀಕೃಷ್ಣ ರಕ್ಷಿತವಾಗಿ ವೇದವ್ಯಾಸದೇವರ ಉಪದೇಶ ಮಾರ್ಗದರ್ಶನದಲ್ಲಿ ಋಷಿಗಳಿಂದ ಪ್ರವರ್ತಿತವಾಯಿತು ಮತ್ತು ಯಾಗಕ್ಕಾಗಿ ಆಹುತರಾಗಿ ಬಂದ ರಾಜರು ಬ್ರಾಹ್ಮಣಶ್ರೇಷ್ಠರಿಂದ ಅದು ಸೇವಿತವಾಗಿ ಪರಿಶೋಭಿಸಿತು. ವಿಶ್ವ-ತೈಜಸ-ಪ್ರಾಜ್ಞವೆಂಬ ಮೂರು ರೂಪಗಳುಳ್ಳ ಶ್ರೀಹರಿಯಿಂದ (ತುರೀಯರೂಪವು ಮೋಕ್ಷದಾಯಕವಾದುದರಿಂದ ಜಾಗ್ರತ್-ಸ್ವಪ್ನ-ಸುಷುಪ್ತಿ ಎಂಬ ವಿಶ್ವವ್ಯಾಪಾರಗಳಿಗೆ ಸಹಾಯಕವಿಲ್ಲವಾದ್ದರಿಂದ ಅದನ್ನು ಇಲ್ಲಿ ಹಿಡಿದಿಲ್ಲವೆಂದು ತಿಳಿಯಬೇಕು.) ಈ ಜಗತ್ತು ಶೋಭಿಸುವಂತೆ ವಾಸಿಷ್ಠ-ಯಾದವಕೃಷ್ಣರಿಬ್ಬರು ಹಾಗೂ ಪರಶುರಾಮರು ಹೀಗೆ ಮೂರು ವಿಧದಿಂದ ಅವತರಿಸಿದ (ವಿಭಕ್ತನಾದ) ಸರ್ವೋತ್ತಮನಾದ ಶ್ರೀಹರಿ ಪರಮಾತ್ಮನಿಂದ ರಾಜಿಸುವ ಆ ಅಶ್ವಮೇಧಯಜ್ಞವು ಅತಿಮನೋಹರವಾಗಿ ಕಂಗೊಳಿಸಿತು. ಹಿಂದೆ ಚತುರಾನನ ಬ್ರಹ್ಮದೇವರಿಂದ ಆಚರಿಸಲ್ಪಟ್ಟ ಯಜ್ಞವು ಹೇಗೆ ಶೋಭಿಸಿತೋ ದೇವೇಂದ್ರನಿಂದಾಚರಿಸಲ್ಪಟ್ಟ ಆ ಯಾಜ್ಞವು 'ಶತಕ್ರತು'ವೆನಿಸಿ ಹೇಗೆ ರಾಜಿಸಿದ್ದಿತೋ ಅದರಂತೆಯೇ (ರುದ್ರದೇವರಾಚರಿಸಿದ ಯಜ್ಞದಂತೆ ಮನೋಜ್ಞವಾಗಿದ್ದಿತೋ) ಪಾಂಡವರು ನೆರವೇರಿಸಿದ ಈ ಅಶ್ವಮೇಧ ಯಜ್ಞವು

ಪ್ರತ್ಯಕ್ಷವಾಗಿ ಹೆಚ್ಚಾಗಿ ಶೋಭಾಯಮಾನವಾಗಿದ್ದಿತು. ಪಾಂಡವರ ಈ ಅಶ್ವಮೇಧಯಾಗಕ್ಕೆ ಸರ್ವರೂ ಆಗಮಿಸಿದ್ದರು. ಸುರರು, ಗಂಧರ್ವರು, ಋಷಿಗಳು, ಸರ್ವವರ್ಣಾಶ್ರಮೋಚಿತ ಧರ್ಮಾನುಷ್ಠಾನನಿಷ್ಠ ಮಾನವರು ಮತ್ತು ವಿಭೀಷಣಾದಿ ಸದ್ರಾಕ್ಷಸರುಗಳ ಗುಂಪಿನಲ್ಲಿ ಯಜ್ಞದಲ್ಲಿ ಪಾಲ್ಗೊಳ್ಳದಿರುವವರು (ಯಜ್ಞಕ್ಕೆ ಬಾರದಿದ್ದವರು) ಮೂರು ಲೋಕಗಳಲ್ಲಿ ಯಾರೂ ಇರಲಿಲ್ಲ. ಅಂದರೆ ಸರ್ವರೂ ಬಂದಿದ್ದರೆಂದು ಭಾವ. ದೇವತೆಗಳ ಯಜ್ಞದಲ್ಲಿ ಮಾತ್ರ ಬಹುವಾಗಿ ಕಂಡು ಬರುತ್ತಿತ್ತು.ಈ ಯಾಗವು ಪತ್ನೀಸಹಿತರಾದ ದೇವತೆಗಳಿಂದ ಯುಕ್ತವಾದ ಸ್ವರ್ಗಲೋಕದಂತೆ ದೇದೀಪ್ಯಮಾನವಾಗಿದ್ದಿತು. ಆ ಯಜ್ಞ ಶಾಲೆಯಲ್ಲಿ ಅನೇಕ ತತ್ತ್ವಗಳ ಬಗೆಗೆ ಸಂಶಯಗ್ರಸ್ತರಾದ ಅನೇಕರು ಆ ಬಗ್ಗೆ ವಾದವಿವಾದ ಮಾಡುತ್ತಿರುವಾಗ ಕೃಪಾ-ಸಾಗರರಾದ ಶ್ರೀವೇದವ್ಯಾಸ-ಕೃಷ್ಣ-ಪರಶುರಾಮರೆಂಬ ತ್ರಿರೂಪದ ಶ್ರೀಹರಿಯು ಶ್ರೇಷ್ಠ ಉಪನಿಷದ್ವಾಕ್ಯೋದಾಹರಣ ಪೂರ್ವಕವಾಗಿ ವಾದಿಗಳ ಎಲ್ಲ ಸಂಶಯಗಳನ್ನು ಪರಿಹಾರ ಮಾಡಿದನು.

ಗಂಧರ್ವರು ಉತ್ತಮವಾಗಿ ಗಾನ ಮಾಡುತ್ತಿರಲು ಅಪ್ಸರಾಸ್ತ್ರೀಯರು ನರ್ತಿಸುತ್ತಿರಲು, ಬ್ರಹ್ಮವಾದಿಗಳಾದ ಬ್ರಾಹ್ಮಣರು ದೇವತೆಗಳು ರಾಜರುಗಳೆಲ್ಲರೂ ರತ್ನಖಚಿತ ಶಿರೋಭೂಷಣ (ಕಿರೀಟ), ಹಾರ, ಕುಂಡಲ, ಕಂಕಣಗಳಿಂದ ಅಲಂಕೃತರಾಗಿದ್ದುದರಿಂದ ದೇವತೆಗಳಾರು, ರಾಜರಾರು ಎಂಬುದನ್ನು ತಿಳಿಯುವುದೇ ಕಷ್ಟವಾಗಿತ್ತು. (ಸಮಾನವಾಗಿ ಅಲಕೃತರಾಗಿದ್ದುದರಿಂದ) ಆಗ ಪರಸ್ಪರ ನಾವು ದೇವತೆಗಳು ನಾವು ರಾಜರು, ನಾವು ಬ್ರಾಹ್ಮಣರು ಎಂಬ ಅವರುಗಳ ವಚನದಿಂದ ಮಾತ್ರ ಅವರ್‍ಯಾರು ಎಂಬುದನ್ನರಿಯಬಹುದಾಗಿತ್ತೇ ವಿನಃ ಬೇರೆ ರೀತಿಯಿಂದ ಸಾಧ್ಯವಿಲ್ಲ.ಇಂತಹ ದೋಷ-ರಹಿತವಾದ ಯಜ್ಞಗಳ ಗುಂಪಿನಲ್ಲಿ ಪಾಂಡವರ ಯಾಗವು ಶ್ರೇಷ್ಠವಾಗಿ ಶೋಭಿಸಿತು. ಮಣಿಮಯ ಸುವರ್ಣಾಭರಣಗಳಿಂದ ದಿವ್ಯವಾಗಿ ಸಿಂಗರಿಸಿಕೊಂಡಿದ್ದ ಶ್ರೀಕೃಷ್ಣನ ಪತ್ನಿಯರಿಂದ ಸಹಿತರಾದ ಅಮರರ ವನಿತೆಯರು ಆ ಯಜ್ಞಶಾಲೆಯಲ್ಲಿ ಅತ್ತಿಂದಿತ್ತ ಸುಳಿದಾಡುತ್ತಿದ್ದರು. ದೇವತಾಸ್ತ್ರೀಯರು ಅಪ್ಸರಾಸ್ತ್ರೀಯರುಗಳಿಂದ ಯುಕ್ತರಾದ ಆ ಎಲ್ಲ ಲಲನೆಯರು ಶ್ರೀಕೃಷ್ಣನ ಸತ್ಕಥಾಲಾಪದಲ್ಲಿ ಮಗ್ನರಾಗಿದ್ದರು.

ಸಕಲರ ಮನೋಕಾಮನೆಗಳನ್ನು ಚೆನ್ನಾಗಿ ಬಲ್ಲ ವಾಯುಕುಮಾರನಾದ ಭೀಮಸೇನನು ಸ್ವತಃ ನಿಂತು ಉದಾರವಾಗಿ ದಾನ ಮಾಡುತ್ತಿರುವಾಗ ಯಾರೂ ವ್ಯರ್ಥಕಾಮನೆಯುಳ್ಳವರಾಗಲಿಲ್ಲ. ಆ ಯಜ್ಞಶಾಲೆಯಲ್ಲಿ ಜರುಗಿದ ಮಹಾಸಭೆಯಲ್ಲಿ ಮೋಕ್ಷಾರ್ಥಿಯು (ಮುಮುಕ್ಷುವು) ವ್ಯರ್ಥವಾದ ಇತರ ಕಾಮಗಳನ್ನು ಬಯಸಲಿಲ್ಲ. ವೇದವ್ಯಾಸ-ಕೃಷ್ಣ-ಪರಶು-ರಾಮರೆಂಬ ತ್ರಿರೂಪಾತ್ಮಕನಾದ ಶ್ರೀವಿಷ್ಣುವಿನ ಪ್ರಸನ್ನವಾದ ಮುಖಾರವಿಂದದರ್ಶನದಿಂದಲೇ ಮುಕ್ತಿಯು ಕರಗತ-ವಾಯಿತು. ಸರ್ವೈಶ್ವರ್ಯಸಂಪನ್ನನಾಗಬಯಸುವವನೂ ಸಹ ತುಚ್ಛಕಾಮಾರ್ತನಾಗಲಿಲ್ಲ. ಅವರವರಿಗೆ ಅಪೇಕ್ಷಿತವಾದ ಸಂಪತ್ತುಗಳನ್ನು ಉದಾರಿಗಳಲ್ಲಿ ಅಗ್ರಣಿಯಾದ ಭೀಮಸೇನನು ಕಡಾಡುತ್ತಿದ್ದನೆಂದು ಭಾವ. ಸಕಲ ತತ್ತ್ವನಿರ್ಣಯಾಪೇಕ್ಷಿಗಳಲ್ಲಿ ಯಾರೂ ಅಸತ್ಕಾಮರಿರಲಿಲ್ಲ. ಅಂದರೆ ಸರ್ವಜ್ಞನಾದ ತ್ರಿಮೂರ್ತಿರೂಪನಾದ ಶ್ರೀಹರಿಯು ಮುಖಕಮಲದಿಂದಲೇ ಪ್ರಮಾಣ-ಯುಕ್ತಿಸಹಿತನವಾಗಿ ಸಾಂಗವಾದ ವೇದೋಪನಿಷತ್ತತ್ತ್ವಾರ್ಥಗಳನ್ನು ಕೇಳಿದ್ದರಿಂದ ಸಕಲರೂ ತತ್ತ್ವನಿರ್ಣಯ ಮಾಡಿಕೊಂಡು ಕೃತಾರ್ಥರಾದರೆಂದು ತಾತ್ಪರ್ಯ. ಆ ಯಾಗಶಾಲೆಯಲ್ಲಿ ಷಡ್ರಸೋಪೇತವಾದ ನಾಲ್ಕು ಬಗೆಯ ಅನ್ನಗಳು ಎಲ್ಲೆಡೆಯಲ್ಲಿಯೂ ಸದಾ ಸರ್ವರಿಗೂ ಲಭಿಸುತ್ತಿದ್ದುರಿಂದ ಭೋಜನಕ್ಕಾಗಿ ಯಾರೂ ತವಕಿಸುವವರಿರಲಿಲ್ಲ. ಹೀಗೆ ಹದಿನೈದು ವತ್ಸರಗಳ ಕಾಲ ಜರುಗಿದ ಯಜ್ಞದಲ್ಲಿ ಪ್ರತಿದಿನವೂ ಶ್ರೇಷ್ಠಲೇಹ್ಯಾದಿರಸೋಪೇತ ಗುಡ(ಶರ್ಕರಾ-ಬೆಲ್ಲ)ಯುಕ್ತವಾದ ತೈಲಪಕ್ವ, ಘೃತಪಕ್ವಗಳಿಂದ ಭಕ್ಷ್ಯವಿಶೇಷಗಳಿಂದ ಕೂಡಿ ಉತ್ತಮ ಅಕ್ಕಿಯ ಅನ್ನಗಳೆಂಬ ಪರ್ವತಗಳೂ, ಜೇನು, ಕಬ್ಬುಗಳ ವಿಕಾರಗಳಿಂದ ಯುಕ್ತವಾದ ಕ್ಷೀರ-ಘೃತಾದಿಗಳು, ಕಡಿಮೆಯಾಗದ ಹರಿಯುವ ನದಿಗಳೂ, ವಿವಿಧ ಪಾಯಸಗಳೆಂಬ ಹ್ರದಗಳು, ಅವರವರ ಯೋಗ್ಯತೆಗೆ ತಕ್ಕಂತೆ ದೇವಗಂಧರ್ವಾದಿಗಳಿಗೆ ಭೋಗಾರ್ಹಗಳಾದ ಕುಂಕುಮ, ಕಸ್ತೂರಿ, ಮುಂತಾದ

ದ್ರವ್ಯಗಳು, ಗಂಧ, ಕೃಷ್ಣಾಗರು, ರಕ್ತಚಂದನ, (ಕೇಸರಿಗಂಧ) ಮುಂತಾದವುಗಳ ವಿಸ್ತೀರ್ಣವಾದ ಹ್ರದಗಳೂ, ರತ್ನ ಸುವರ್ಣನಿರ್ಮಿತ ಕಜ್ಜಲ ಲಾಕ್ಷಾವಿಕಾರ ಮುಂತಾದ ಆಲಂಕಾರ ವ್ಯಾಜಗಳಾದ ಹರಿದ್ರಾಕುಂಕುಮಾದಿಗಳೆಂಬ ಇಳಿಯುವ ಬಾವಿಗಳೂ (ಸರಸ್ಸುಗಳು), ಅಂದರೆ ಆಯಾ ಪದಾರ್ಥಗಳ ವರ್ಣಸದೃಶಗಳಾದ ರತ್ನ, ಸುವರ್ಣಾದಿಗಳಿಂದ ನಿರ್ಮಿತಗಳಾದ ಭೋಜನಗಳಿಂದ ಸಹಿತವಾದ ಬಾವಿಗಳೂ ಅಲ್ಲಿ ಶೋಭಿಸುತ್ತಿದ್ದವು. ಅಂದರೆ ಅಲ್ಲಿ ಪರ್ವತಸದೃಶ ವಿವಿಧ ಅನ್ನದ ರಾಶಿಗಳು, ಭಕ್ಷ್ಯಗಳು, ಹಾಲು, ಮೊಸರು, ತುಪ್ಪಗಳು ನದಿಗಳಂತೆ ಹರಿಯುತ್ತಿದ್ದವು. ಪಾಯಸಾದಿ ಕಾಲುವೆಗಳೂ ರತ್ನ ಸುವರ್ಣನಿರ್ಮಿತ ಪಾತ್ರಗಳಲ್ಲಿ ಶೋಭಿಸುವ ಪರಿಮಳದ್ರವ್ಯ ಹರಿದ್ರಾಕುಂಕುಮಾದಿಗಳೆಂಬ ಕೂಪಗಳೂ ವಿಶೇಷವಾಗಿ ಶೋಭಿಸುತ್ತಿದ್ದವು. ಅಪೇಕ್ಷಿಸಿದ ಪಾನೀಯ ಆಸನಾದಿ ಭೋಗಸಾಮಗ್ರಿಗಳಿಂದ ರಂಜಿತವಾದ ವೈಶಿಷ್ಟ್ಯಪೂರ್ಣಗಳಾದ ಸಹಸ್ರಸಂಖ್ಯಾಕಗಳಾದ ಗಂಧರಸಾದಿ ಸಮಸ್ತ ಭೋಗವಸ್ತುಗಳು ಸ್ವರ್ಗದಲ್ಲಿರುವಂತೆ ಭೀಮನ ಮೇಲ್ವಿಚಾರಣೆಯಲ್ಲಿ ಆ ಯಜ್ಞದಲ್ಲಿ ಹೇರಳವಾಗಿದ್ದು ಸರ್ವರಿಗೂ ತೃಪ್ತಿಕರವಾಗಿ ಕಂಗೊಳಿಸುತ್ತಿದ್ದವು. ಯಾವುದಕ್ಕೂ ಅಲ್ಲಿ ಕೊರತೆ ಇರಲಿಲ್ಲವೆಂದು ಭಾವ. ಆ ಯಜ್ಞಕ್ಕೇ ಆಗಮಿಸಿದ್ದ ಸಮಸ್ತ ಜನರೂ ಶ್ರೀಕೃಷ್ಣಪ್ರವರ್ತಿತ ಪಾಂಡವಾಚರಿತವಾದ ಆ ಅಶ್ವಮೇಧಯಾಗವನ್ನು ನೋಡಿ ಶ್ರೀರಾಮಚಂದ್ರ, ಚತುರಾನನ, ಬ್ರಹ್ಮ ಹಾಗೂ ಇಂದ್ರ ಇವರು ನೆರವೇರಿಸಿದ ಯಜ್ಞಗಳನ್ನು ಬಿಟ್ಟರೆ ಇಂತಹ ಯಜ್ಞವನ್ನು ಈವರೆಗೂ ಬೇರಾರೂ ಆಚರಿಸಿರಲಿಲ್ಲವೆಂದು ಶ್ಲಾಘಿಸಿದರು.

ಹದಿನೈದು ವರ್ಷಗಳ ಕಾಲ ದಿನೇದಿನೇ ಗುಣಗಳಿಂದ ಚೆನ್ನಾಗಿ ಅಭಿವೃದ್ಧಿಸಿದ ಅತ್ಯುತ್ತಮ ಕಲ್ಪವಾದ ಐದು ಅಶ್ವಮೇಧ ರೂಪವಾದ ಶ್ರೀಹರಿಯೇ ದೇವತೆಯಾಗುಳ್ಳ ಆ ಅಶ್ವಮೇಧವು ಸುಜನರಿಗೆ ಆನಂದಪ್ರದವಾಯಿತು. ವಿಶೇಷ ದರ್ಶ-ಪೂರ್ಣಮಾಸ, ಪ್ರಯಾಜ, ಅನುಯಾಜಾದಿ ಪೂರ್ವೋತ್ತರ ಇಷ್ಟಿಗಳನ್ನು ಮಾಡುವ ಸಲುವಾಗಿ ಒಂದೊಂದು ಸಾಂಗವಾದ ಅಶ್ವಮೇಧವನ್ನು ನೆರವೇರಿಸಲು ಮೂರು ಮೂರು ವರ್ಷಗಳು ಬೇಕಾಗುವುದು. ಆದುದರಿಂದ "ವತ್ಸರಪಂಚಕತ್ರಯಂ" ಎಂದೂ ಪಂಚಪಾಂಡವರಿಗೆ ಒಂದೊಂದು ಅಶ್ವಮೇಧವೆಂಬ ಅಭಿಪ್ರಾಯದಿಂದ "ಪಂಚಾಶ್ವಮೇಧಕಃ" ಎಂದೂ ನಿರ್ಣಯಕಾರರು ಹೇಳಿದ್ದಾರೆ.

ಅಶ್ವಮೇಧ ಯಾಗವು ಮಂಗಳಕರವಾಗಿ ಅತ್ಯಂತ ಯಶಸ್ವಿಯಾಗಿ ಮುಕ್ತಾಯವಾದ ಮೇಲೆ ಸಕಲ ಪಾಂಡವರೂ ದ್ರೌಪದಿಯೂ ಸಹ "ಸಹಸ್ರಮಾಖ್ಯಾತ್ರೇ ದದ್ಯಾತ್" ಎಂಬ ವಿಧಾನದಿಂದ ಋತ್ವಿಜರಿಗೆ ಕೊಡಬೇಕಾದ ದ್ರವ್ಯವಿಭಾಗಗಳನ್ನು ವೇದಗಳು ಪ್ರತಿಪಾದಿಸುವವು. ಅಂಥಾ ವೇದಗಳನ್ನು ವಿಭಾಗ ಮಾಡಿದ ಶ್ರೀವೇದವ್ಯಾಸರಿಗೆ ಶಾಸ್ತ್ರೋಕ್ತಪ್ರಕಾರವಾಗಿ ದ್ರವ್ಯವಿಭಾಗ ಮಾಡಿ, ಋತ್ವಿಜರಿಗೆ ಕೊಡಬೇಕೆಂದು ರಾಜಭಂಡಾರದಲ್ಲಿದ್ದ ಧನಕನಕಾಭರಣಗಳನ್ನೂ ಸಮಸ್ತ ಪೃಥ್ವಿಯನ್ನು ಶ್ರೀವೇದವ್ಯಾಸದೇವರ ಪಾದಕಮಲಗಳಲ್ಲಿ ಸಮರ್ಪಿಸಿದರು.

ಅದು ಸರಿ; ಮನಃಪೂರ್ವಕವಾಗಿ ಶ್ರೀಹರಿಗೆ ಸಮರ್ಪಿಸಿದ ಆ ಎಲ್ಲ ಸಂಪತ್ತನ್ನು ಋತ್ವಿಜರಿಗೆ ನೀಡಲು ಪುನಃ ಶ್ರೀವೇದವ್ಯಾಸರಿಗೆ ಕೊಟ್ಟಿದ್ದರಿಂದ ಅನರ್ಥಸಾಧನವಾದ ದತ್ತಾಪಹಾರರೂಪ ದೋಷವು ಬರುವುದಿಲ್ಲವೇ? ಅಂದ ಮೇಲೆ ದತ್ತಾಪಹಾರ ಮಾಡಿ ಋತ್ವಿಜರಿಗಾಗಿ ಹೇಗೆ ಕೊಟ್ಟರು? ಎಂದರೆ ನಿರ್ಣಯಾಚಾರ್ಯರು ಹೇಳುತ್ತಾರೆ- ಋತ್ವಿಜರಾದ ವಿಪ್ರರಲ್ಲಿ ಸನ್ನಿಹಿತರಾಗಿದ್ದು ಋತ್ವಿಜರು ಮಾಡಿದ ಸಕಲ ಕಾರ್ಯಗಳನ್ನು ಮಾಡಿದವರು ಶ್ರೀವೇದವ್ಯಾಸದೇವರೇ ಅಲ್ಲವೇ? ಋತ್ವಿಜರ ಕರದಲ್ಲಿ ಕೊಟ್ಟ ದಾನವೂ ವಿಷ್ಣುವಿನ ಕರದಲ್ಲಿ ಕೊಟ್ಟಂತೆಯೇ ಆಗುವುದು. ಸಾಕ್ಷಾತ್ ಸ್ವಕರದಿಂದ ಸ್ವೀಕರಿಸಿದವನೂ ಶ್ರೀಹರಿಯೇ ಆಗಿರುವಾಗ ಬೇರೆಯವರ ಹಸ್ತದಲ್ಲೇಕೆ ಕೊಡಬೇಕೆಂದು ಶ್ರೀಹರಿಗೆ ಸಮರ್ಪಿಸಿದರೆಂದು ತಿಳಿಯಬೇಕು. ಅತಃ ದತ್ತಾಪಹಾರ ದೋಷಕ್ಕೆ ಅವಕಾಶವಿಲ್ಲ. (ದತ್ತಾಪಹಾರ ದೋಷ ಬರುವುದಿಲ್ಲ). ಮೇಲ್ನೋಟಕ್ಕೆ ವಿಭಾಗ ಮಾಡಲು ಕೊಟ್ಟರೆಂದು ಕಂಡುಬಂದರೂ ವಸ್ತುತಃ ಅದನ್ನು ಪಾಂಡವರು ಶ್ರೀಹರಿಗೆ ಮನಃಪೂರ್ವಕವಾಗಿ ಕೊಟ್ಟರು

(ಅರ್ಪಿಸಿದರು). "ದ್ವಿಜಸ್ತೋऽಪಿ ಸಮಸ್ತಕರ್ತಾ ಸ ಏವ ಹಿ" ಎಂಬಲ್ಲಿ ನಿರ್ಣಯಕಾರರು ಪ್ರಯೋಗಿಸಿರುವ 'ಹಿ' ಶಬ್ದದಿಂದ "ಅರ್ಚಂತು ಪುತ್ರಕಾ ಉತ ಪುರಂ ನ ಘೃಷ್ಣ್ವರ್ಚತ" ಗುಣಾಶಯಾಯ್ಯೇವ ನ ದೇಹಮಾನಿನಃ" ಇತ್ಯಾದಿ ಶ್ರುತಿಪ್ರಸಿದ್ಧಿಯನ್ನು ಸೂಚಿಸಿರುವರು. ಪಾಂಡವರು ತಮ್ಮ ಸರ್ವಸ್ವವನ್ನೂ ಶ್ರೀವೇದವ್ಯಾಸರಿಗೆ ಸಮರ್ಪಿಸಿದರು. ಹಾಗಾದರೆ ಪಾಂಡವರು ರಾಜ್ಯಕೋಶಾದಿಗಳು ತಮ್ಮದೆಂಬ ಸ್ವಾತಂತ್ರ್ಯಬುದ್ಧಿಯಿಂದ ದಾನ ಮಾಡಿದರೇನು? ಎಂದರೆ ತಿಳಿಸುವರು – "ನ ತ್ವಸ್ಮದೀಯಂ ಕ್ವ ಚ ಕಿಂಚನೇಶ" ಅಂದರೆ ಎಲೈ ಪ್ರಭುವೇ! ಯಾವುದೇ ಕಾಲದಲ್ಲಾಗಲಿ ದೇಶದಲ್ಲಾಗಲಿ ನಮ್ಮ-ದೆಂಬುವುದು ಯಾವುದೂ ಇಲ್ಲ. ಏಕೆಂದರೆ, ನೀನೊಬ್ಬನೇ ಸರ್ವಸ್ವತಂತ್ರನು, ಬೇರಾರೂ ಇಲ್ಲ. ನಿನ್ನದನ್ನೇ ನಿನಗೆ ಅರ್ಪಿಸಿದ್ದೇವೆ. (ಬಲಿಯಂತೆ ಸ್ವಾತಂತ್ರ್ಯಾಭಿಮಾನದಿಂದಲ್ಲವೆಂದು ಭಾವ.) ಹೇಗೆಂದರೆ ಸರೋವರದಲ್ಲಿ ಸರೋವರದ ಜಲದಿಂದ ತರ್ಪಣ ಅರ್ಘ್ಯಾದಿಗಳನ್ನು ಕೊಡುವಂತೆ ನಿನ್ನದೇ ಆದ ದ್ರವ್ಯವನ್ನು ನಿನಗೆ ಕೊಟ್ಟಿದ್ದೇವೆ. ಹೀಗೆ ಹೇಳಿ ರಾಜ್ಯ ಕೋಶಾದಿಗಳನ್ನೆಲ್ಲಾ ಅರ್ಪಿಸಿದರು. ಅನಂತರ ಶ್ರೀವೇದವ್ಯಾಸದೇವರು ಶಾಸ್ತ್ರವಿಧಾನಪ್ರಕಾರವಾಗಿ ವಿಭಾಗ ಮಾಡಿ ಋತ್ವಿಜ-ರಿಗೆ ಕೊಟ್ಟರು. ಆಗ ಮುನಿಗಳು "ಸ್ವಾಮಿ ! ನಾವು ದಾನ ಪಡೆದು ತೃಪ್ತರಾಗಿದ್ದೇವೆ. ಈ ರಾಜ್ಯಕೋಶಾದಿ ಸಂಪತ್ತು ನಮಗೆ ಬೇಡ. ಅದನ್ನು ನಾವು ಪಾಂಡವರಿಗೇ ಅರ್ಪಿಸುತ್ತೇವೆ. ಪಾಂಡವರೇ ರಾಜ್ಯವನ್ನು ಪಾಲಿಸಲು ಸಮರ್ಥರು ಮತ್ತು ಯೋಗ್ಯರು ಆದ್ದರಿಂದ ಅವರಿಗೆ ಅರ್ಪಿಸುವೆವು" ಎಂದು ಹೇಳಿದರು.

ಆಗ ಪಾಂಡವರು ಭಾರ್ಯೆಯಿಂದ ಸಹಿತರಾಗಿ "ಪ್ರಭುಗಳೇ ! ನಿಮಗೆ ಅರ್ಪಿಸಿದ ರಾಜ್ಯವು (ಧರ್ಮಲಬ್ಧಂ) ನಮಗೆ ಬೇಡ. ನಾವು ತಮಸ್ಸಿಗೆ ವನಕ್ಕೆ ಹೋಗುವೆವು". ಆಗ ಶ್ರೀಕೃಷ್ಣದ್ವೈಪಾಯನರು "ಪ್ರೀತಿಯ ಪಾಂಡವರೇ ! ಈ ಬ್ರಾಹ್ಮಣರು ಹಿರಣ್ಯಾದಿ ದ್ರವ್ಯವನ್ನು ಸ್ವೀಕರಿಸಲಿ. ಅದುವೇ ಅವರಿಗೆ ಸಾಕು. ಅವರಿಗೆ ರಾಜ್ಯವು ಬೇಡ. ನೀವೇ ರಾಜ್ಯವನ್ನು ಧರ್ಮದಿಂದ ಪರಿಪಾಲಿಸಿರಿ" ಎಂದು ಆಜ್ಞಾಪಿಸಿದರು ಮತ್ತು ಮುಂದುವರೆದು "ನೀವು ನನಗೆ ಸರ್ವಸ್ವವನ್ನೂ ಅರ್ಪಿಸಿದ್ದೀರಿ. ಅದು ನಿಮಗೆ ಫಲಪ್ರದವಾಗಲಿ. ರಾಜ್ಯವನ್ನು ನೀವು ಮತ್ತೆ ಸ್ವೀಕರಿಸುವುದು ದೋಷವಲ್ಲ. ದತ್ತಾಪಹಾರ ದೋಷವಾಗದು. ಮೇಲಾಗಿ ನಾನು ನಿಮಗೆ ಪಿತಾಮಹನಾಗಿದ್ದೇನೆ, ಗುರುವಾಗಿದ್ದೇನೆ, ಪ್ರಭುವಾಗಿದ್ದೇನೆ. ಪರಿಪಾಲನೆಗಾಗಿ ರಾಜ್ಯವನ್ನು ಪಡೆಯಲು ನೀವು ಅರ್ಹರಾಗಿದ್ದೀರಿ" ಎಂದು ಹೇಳಿದರು. ಅನಂತರ ಶ್ರೀಹರಿಚಿತ್ತವೆಂದು ರಾಜ್ಯವನ್ನು ಸ್ವೀಕರಿಸಿ ಸಕಲ ಸುವರ್ಣಾದಿ ದ್ರವ್ಯಗಳನ್ನು ಅವರಿಗೆ ಪುನಃ ಸಮರ್ಪಿಸಿದರು. ಶ್ರೀವೇದವ್ಯಾಸರು ಅವರವರ ಯೋಗ್ಯತಾನುಸಾರ ದಕ್ಷಿಣಾದಿ ವಿಭಾಗ ಮಾಡಿ ಋತ್ವಿಜರಿಗೆ ಕೊಟ್ಟು ಉಳಿದ ತಮ್ಮ ಭಾಗದ ಸಮಸ್ತ ಸುವರ್ಣಾದಿದ್ರವ್ಯಗಳನ್ನು ಕುಂತೀದೇವಿಗೆ ನೀಡಿದರು. ಶ್ರೀವೇದವ್ಯಾಸರಿಗೆ ಪಾಂಡು-ರಾಜನು ಪುತ್ರನು. ಪಾಂಡವರು ಅವನ ಮಕ್ಕಳು. ತಮ್ಮ ಪೌತ್ರರೆಂದು ಅವರಿಗೆ ರಾಜ್ಯವನ್ನು ಕೊಟ್ಟರು. "ಪ್ರಯಚ್ಛಂತಿ ತಥಾ ರಾಜ್ಯಂ ಪ್ರೀತಾ ನೄಣಾಂ ಪಿತಾಮಹಾಃ" ಅಂದರೆ ಪಿತಾಮಹರು ಪ್ರೀತರಾಗಿ ತಮ್ಮ ಪೌತ್ರರಾದ ಮಾನವರಿಗೆ ರಾಜ್ಯವನ್ನು ಪ್ರದಾನ ಮಾಡುವರು – ಎಂಬಂತೆ ಅಂದರೆ "ಪಿತಾಮರಿಂದ ಪೌತ್ರರಿಗೆ ರಾಜ್ಯ ಸ್ವೀಕಾರ ಯೋಗ್ಯತಾಪ್ರತಿಪಾದಕ ಶ್ರುತಿಯು ಇರುವುದರಿಂದಲೂ "ಗುರೋರ್ಧನಂ ಶಿಷ್ಯೋ ಗೃಹ್ಣೀಯಾತ್" ಗುರುಗಳ ಸಂಪತ್ತನ್ನು (ಧನವನ್ನು) ಶಿಷ್ಯರು ಸ್ವೀಕರಿಸಬೇಕೆಂಬ ನ್ಯಾಯವಿರುವುದರಿಂದಲೂ "ಪತ್ಯುರ್ಧನಂ ಭೃತ್ಯೋ ಗೃಹ್ಣೀಯಾತ್" ಪತಿಧನವನ್ನು ಭೃತ್ಯನು ಸ್ವೀಕರಿಸಬೇಕು ಎಂಬ ನ್ಯಾಯದಂತೆ ನೀವು ರಾಜ್ಯವನ್ನು ಸ್ವೀಕರಿಸಲು ಅರ್ಹರಾಗಿದ್ದೀರಿ" ಎಂದು ಹೇಳಿ ಶ್ರೀವೇದವ್ಯಾಸರು ಪೌತ್ರರಾದ ಪಾಂಡವರಿಗೆ ರಾಜ್ಯವನ್ನು ಅರ್ಪಿಸಿದರು. ಇದರಂತೆ ಮಾವನಿಂದ ಸೊಸೆಯು ದ್ರವ್ಯವನ್ನು ಸ್ವೀಕರಿಸಲು ಯೋಗ್ಯಳೆಂಬುದು ಕಂಡು ಬಂದಿದೆ-ಯಾದ್ದರಿಂದ "ನಿಜಂ ತು ಭಾಗಂ ನಿಖಿಲಂ ಪೃಥಾಯಾಃ" ಅಂದರೆ ತಮ್ಮ ಭಾಗಕ್ಕೆ ಬಂದ ಸಮಸ್ತ ದ್ರವ್ಯವನ್ನೂ ಕುಂತೀದೇವಿಗೆ "ಪತಿರಹಿತಳಾದ ನಿನಗೆ ಪೂಜಾರಾಧನ ಧರ್ಮಾದಿಕಾರ್ಯಗಳಿಗೆ ಈ ಧನವನ್ನು ಸ್ವೀಕರಿಸು" ಎಂದು ಶ್ರೀವ್ಯಾಸರು ಸುವರ್ಣಾದಿ ದ್ರವ್ಯಗಳನ್ನು ಅನುಗ್ರಹಿಸಿದರೆಂದು ತಿಳಿಯಬೇಕು. ಇದರಂತೆ ಪಾಂಡವರಿಗೂ ಅವರ ಪತ್ನಿಯರಿಗೂ ಬೇರೆ ಬೇರೆಯಾಗಿ ಸುವರ್ಣಾಭರಣಾದಿಗಳನ್ನು ಕೊಟ್ಟರು. ಎಲ್ಲರೂ ಅದನ್ನು ಸ್ವೀಕರಿಸಿ ಶ್ರೀವೇದವ್ಯಾಸರಿಗೆ ನಮಸ್ಕರಿಸಿದರು.

ವೈಭವದ ಅಶ್ವಮೇಧಯಜ್ಞವನ್ನಾಚರಿಸಿದ ಪಾಂಡವರನ್ನು ವೇದನಿಷ್ಠರೂ ಸಮರ್ಥರೂ ಆದ ಋಷಿ ಮುನಿ ಮುಂತಾದವರು ಸ್ತೋತ್ರ ಮಡಿದರು. ಆಗ ಅಲ್ಲಿಗೆ ಮುಂಗುಸಿರೂಪದ ಕ್ರೋಧನಾಮಕ ದೈತ್ಯನು ಬಂದು ಗಟ್ಟಿಯಾಗಿ ಗರ್ಜಿಸುತ್ತಾ ಪಾಂಡವರು ನೆರವೇರಿಸಿದ ಅಶ್ವಮೇಧಯಜ್ಞವನ್ನೂ ಯಜ್ಞ ಮಾಡಿಸಿದ ಸಕಲ ಋತ್ವಿಜನರನ್ನೂ ನಿಂದಿಸುತ್ತಾ ಹೀಗೆ ಹೇಳಿದನು - "ಹಿಂದೆ ಓರ್ವ ಉಂಛವೃತ್ತಿಯಿಂದ ಜೀವಿಸುವ ಬ್ರಾಹ್ಮಣನು ಪತ್ನಿ-ಪುತ್ರರೊಡನೆ ಜೀವಿಸುತ್ತಿದ್ದನು. ಒಮ್ಮೆ ಯಮದೇವರು ಅವನ ಮನೆಗೆ ಅತಿಥಿಯಾಗಿ ಬಂದರು. ಆಗ ಆ ಬ್ರಾಹ್ಮಣನು ಅತಿ ಭಕ್ತಿಯಿಂದ ಅತಿಥಿಯಾಗಿ ಬಂದ ಯಮನಿಗೆ ಸತ್ಕಾರಮಾಡಿ ಸಕ್ತುವನ್ನು ನೀಡಿದನು. "ಈ ಪಾರ್ಥನು ಮಾಡಿದ ಯಜ್ಞವು ಅತಿಥಿಪೂಜೆ ಅಥವಾ ಸಕ್ತುಪ್ರದಾನದ 16ನೆಯ ಒಂದಂಶಕ್ಕೂ ಸಮವಾಗುವುದಿಲ್ಲ" ಎಂದನು. ಅವನ ಮಾತನ್ನಾಲಿಸಿ ಋತ್ವಿಜರು ಹೀಗೇಕೆ ಹೇಳುವೆ? ಪಾಂಡವರಾಚರಿಸಿದ ಯಜ್ಞದಲ್ಲಿ ಕೊರತೆಯೇನಿದೆ? ಎಂದು ಪ್ರಶ್ನಿಸಲು ಕ್ರೋಧನಾಮಕ ಅಸುರನು "ಹಾಗಾದರೆ ಕೇಳಿರಿ, ಆ ಉಂಛವೃತ್ತಿಯ ಬ್ರಾಹ್ಮಣನು ಅತಿಥಿಯಾದ ಯಮರಾಜನಿಗೆ ಪಾದಪ್ರಕ್ಷಾಳನ ಮಾಡಿದಾಗ ಹರಿದ ನೀರು ನನ್ನ ಈ ಒಂದು ಪಾರ್ಶ್ವಕ್ಕೆ ಸ್ಪರ್ಶವಾಗಿ ಈ ಭಾಗವು ಬಂಗಾರಮಯವಾಯಿತು. ನನ್ನ ಇನ್ನೊಂದು ಪಾರ್ಶ್ವವೂ ಸುವರ್ಣ-ಮಯವಾಗಬೇಕೆಂಬ ಆಶೆಯಿಂದ ಅಲಾಗಾಯಿತು ಎಲ್ಲಾ ತೀರ್ಥಗಳಲ್ಲಿ ಯಜ್ಞದ ಅವಭೃತ ಸ್ನಾನದ ಜಲಗಳಲ್ಲಿ ಮತ್ತು ಈ ಪಾಂಡವರು ಆಚರಿಸಿದ ಹದಿನೈದು ಅಶ್ವಮೇಧ ಯಾಗದಲ್ಲಿ ಅವಭೃತ ಸ್ನಾನ ಜಲದಿಂದ ನಾನು ಶ್ರದ್ಧಾಭಕ್ತಿಯಿಂದ ಸ್ನಾನ ಮಾಡಿದೆನು. ಆದರೂ ನನ್ನ ಈ ಇನ್ನೊಂದು ಪಾರ್ಶ್ವವು ಸುವರ್ಣಮಯವಾಗಲಿಲ್ಲ" ಎಂದು ಹೇಳಿದನು. ಮುಂಗುಸಿರೂಪದ ಕ್ರೋಧನಾಮಾಸುರನ ಮಾತಿನ ಸತ್ಯವಾದ ಅಭಿಪ್ರಾಯವನ್ನು ಬಲ್ಲ ಮುನಿವರ್ಯರು ಮುಂಗುಸಿರೂಪದ ಕ್ರೋಧಾಸುರನನ್ನು ಅಂಧತಮಸ್ಸಿಗೆ ತಳ್ಳಬೇಕೆಂಬ ಇಚ್ಛೆಯಿಂದ ಅವರು ಹಾಗೂ ಶ್ರೀಕೃಷ್ಣನು ಮುಂಗುಸಿಯ ಮಾತಿಗೆ ಉತ್ತರಿಸದೆ ಕೇವಲ ಮಂದಹಾಸ ಬೀರಿದರು. ಆಗ ಆ ದೈತ್ಯನು ಅಲ್ಲಿಂದ ಅದೃಶ್ಯನಾದನು. ಮತ್ತು ಕಾಲಾಂತರದಲ್ಲಿ ಅಂಧತಮಸ್ಸನ್ನು ಪಡೆದನು. ಆ ಅಸುರನು ತಮಸ್ಸಿಗೆ ಪಾತ್ರನಾಗಬೇಕೆಂದು ಅವನನ್ನು ಶಪಿಸದೆ ಮಂದಹಾಸ ಮಾಡಿದರೆಂದು ಹೇಳಿದ್ದರಿಂದ ಅವನನ್ನು ನಿಂದಿಸದೆ ಕೇವಲ ಮಂದಹಾಸ ಮಾಡಿದ್ದರಿಂದ ಆ ದೈತ್ಯನು ತಾನು ಹೇಳಿದ್ದು ಮುನಿಗಳಿಗೂ ಸಮ್ಮತವೇ ಆಯಿತೆಂದು ಬೋಧಿಸಿ ಆ ಕ್ರೋಧನಾಮಕ ದೈತ್ಯನ ಮನದಲ್ಲಿ ಯಜ್ಞನಿಂದೆಯನ್ನು ದೃಢಪಡಿಸಿ ತಮಸ್ಸಿಗೆ ಹೋಗುವಂತೆ ಮಾಡಿದರೆಂಬುದು ವಿಶೇಷ ವಿಚಾರ. ದೈತ್ಯನು ಯಾಗವನ್ನು ಅವಹೇಳನ ಮಾಡುವಂತೆ ಮಾಡಿ ಅವನ ಮಿಥ್ಯಾಜ್ಞಾನವು ದೃಢವಾಗುವಂತೆ ಮಾಡುವುದಕ್ಕಾಗಿಯೇ ಮುಂಗುಸಿರೂಪದ ಅವನ ಒಂದು ಭಾಗವು ಕನಕಮಯ-ವಾಗುವಂತಾಯಿತು. ಕೃಷ್ಣ-ಪಾಂಡವರ ಯಜ್ಞಗಳನ್ನು ಸ್ತುತಿಸುತ್ತಾ ಆ ಅಸುರನ ನಿಂದೆಯು ಮಧುವೈರಿಯಾದ ಶ್ರೀಕೃಷ್ಣನಿಗೆ ಸಮ್ಮತವಾಗಿದೆಯೆಂದು ಅರಿತು ಋಷಿ-ಮುನಿಗಳು ಅವನನ್ನು ನಿಂದಿಸಿದರು.

*ವಿಶೇಷ ವಿಚಾರ - (ವಾದಿರಾಜಸ್ವಾಮಿಗಳ ವ್ಯಾಖ್ಯಾನದಂತೆ)* ತತ್ಕಾಲದಲ್ಲಿ ಸೃಷ್ಟಿಮಾಡಲು ಚತುರರಾದ ದೇವತೆಗಳ ಕಾರ್ಯದಿಂದಲೇ ಮುಂಗುಸಿಯ ಒಂದು ಪಾರ್ಶ್ವವು ಬಂಗಾರಮಯವಾಯಿತೇ ವಿನಃ ವಿಪ್ರಪಾದೋದಕದಿಂದಲ್ಲ. ಹಾಗಿದ್ದಲ್ಲಿ ಇನ್ನೊಂದು ಭಾಗವೂ ಸುವರ್ಣಮಯವಾಗಬೇಕಾಗಿದ್ದಿತು. ವಿಪ್ರಪಾದೋದಕವನ್ನು ಅನೇಕ ಬಾರಿ ಸ್ನಾನ ಮಾಡಿದರೂ ಮುಂಗುಸಿಯ ಇನ್ನೊಂದು ಭಾಗವು ಏಕೆ ಸುವರ್ಣಮಯವಾಗಲಿಲ್ಲ? ಮತ್ತು ಪಾದಜಲದಿಂದ ತೋಯ್ದ ಭೂಮಿಯೇಕೆ ಹಿರಣ್ಮಯವಾಗಲಿಲ್ಲ? ಅಷ್ಟೆ ಅಲ್ಲ. ಆ ಉಂಛವೃತ್ತಿಯ ಬ್ರಾಹ್ಮಣನು ಅತಿಥಿಯಾದ ಯಮರಾಜನಿಗೆ ಪಾದಪ್ರಕ್ಷಾಳನ ಮಾಡಿದಾಗ ಆ ಬ್ರಾಹ್ಮಣನ ಕರಗಳೇಕೆ ಬಂಗಾರಮಯವಾಗಲಿಲ್ಲ? ಇನ್ನು ಹೇಳುವುದೇನಿದೆ? ಸಾಕ್ಷಾತ್ ಶ್ರೀಹರಿಪರಮಾತ್ಮನ ಪಾದವನ್ನು ಚತುರಾನನ ಬ್ರಹ್ಮದೇವರು ತೊಳೆದರು. ಆ ಜಲವನ್ನು ಮಹಾಸಮರ್ಥರಾದ ರುದ್ರದೇವರು ಭಕ್ತಿಯಿಂದ ತಮ್ಮ ಶಿರಸ್ಸಿನಲ್ಲಿ ಧರಿಸಿದರು. ಆದರೂ ಬ್ರಹ್ಮದೇವರ ಕರಗಳು, ರುದ್ರದೇವರ ಶಿರಸ್ಸು ಸುವರ್ಣಮಯವಾಗಲಿಲ್ಲ. ಶ್ರೀಹರಿಯು ತನ್ನ ಪಾದೋದಕವನ್ನು ತಲೆಯಲ್ಲಿ ಧರಿಸಿದ ಶಿವನನ್ನು ಪಾಪರಹಿತನನ್ನಾಗಿ ಮಾಡಿ ಪರಮಮಂಗಳವನ್ನೇ

ಮಾಡಿದನೆಂದು "ಶಿವಃ ಶಿವೋಽಭೂತ್" ಎಂಬ ಶ್ರುತಿಯು ಸಾರುವುದು. ಇದರಿಂದ ಪಾದೋದಕಕ್ಕೆ ಸ್ಪರ್ಶವಾದ ಭಾಗವನ್ನು ಸುವರ್ಣವನ್ನಾಗಿ ಮಾಡುವ ಸಾಮರ್ಥ್ಯವಿಲ್ಲವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೇ ? ಅದೂ ಅಲ್ಲದೆ ಅತಿಥಿಯಾದ ವಿಪ್ರನ ಪಾದಪ್ರಕ್ಷಾಳನ ಜಲಕ್ಕೆ ಸ್ಪರ್ಶವಾದ ಭಾಗವನ್ನು ಬಂಗಾರಮಯವನ್ನಾಗಿ ಮಾಡುವ ಶಕ್ತಿ ಇದ್ದ ಪಕ್ಷದಲ್ಲಿ ಪ್ರತಿವರ್ಷ ಸಾವಿರಾರು ಜನರು ತಂದೆ ತಾಯಿಯರ ಶ್ರಾದ್ಧಮಾಡುವರು. ವಿಪ್ರನ ಪಾದ ತೊಳೆದ ಜಲಕ್ಕೆ ಬಂಗಾರಮಯವನ್ನಾಗಿ ಮಾಡುವ ಸಾಮರ್ಥ್ಯವಿದ್ದ ಪಕ್ಷದಲ್ಲಿ ಪಾದತೊಳೆದ ಶ್ರಾದ್ಧ ಮಾಡುವವರ ಕರಗಳು ಸುವರ್ಣಮಯವಾಗಿ ಆ ಬ್ರಾಹ್ಮಣರಿಗೆ (ಶ್ರಾದ್ಧ ಮಾಡುವವರಿಗೆ) ದಾರಿದ್ರ್ಯವೇ ಇಲ್ಲದಂತಾಗಬೇಕಾಗುವುದು. ಆದ್ದರಿಂದ ಹಿಂದೆ ನಿರೂಪಿಸಿದ್ದೇ ಸರಿಯಾದುದೆಂದು ತಿಳಿಯಬೇಕು. ಕ್ರೋಧಾಸುರನು ಶ್ರಾದ್ಧಕ್ಕಾಗಿ ಕಾದಿರಿಸಿದ್ದ ಕ್ಷೀರವನ್ನು ಕುಡಿದು ಉಚ್ಚಿಷ್ಟವನ್ನಾಗಿ ಮಾಡಿ ಶ್ರಾದ್ಧಘಾತ ಮಾಡುವನು. ಅದರಿಂದ ಕುಪಿತರಾದ ಪಿತೃದೇವತೆಗಳು ಕ್ರೋಧನನೆಂಬ ಆ ಅಸುರನನ್ನು "ಮುಂಗುಸಿಯಾಗು" ಎಂದು ಶಪಿಸಿದರು. ಕ್ರೋಧಾಸುರನು ಮುಂಗುಸಿಯಾದ ಮೇಲೆ ಶ್ರೀಹರಿಯ ಮತ್ತು ಹರಿಭಕ್ತ ನಿಂದನರೂಪವಾದ ಪಾಪದಿಂದ ಪರವೈಷ್ಣವರಾದ ಪಾಂಡವರಲ್ಲಿನ ದ್ವೇಷದಿಂದ ಅವರು ಮಾಡಿದ ಯಜ್ಞದ ಅವಹೇಳನ ರೂಪವಾದ ಮಹತ್ತಾದ ಪಾಪದಿಂದ ಅಂಧಂತಮಸ್ಸಿಗೆ ಬೀಳಲಿ ಎಂಬ ಆಶಯದಿಂದ "ಎಲವೋ ಕ್ರೋಧಾಸುರನೇ ! ನೀನು ಯಮಾದಿ ದೇವತೆಗಳನ್ನು ನಿಂದಿಸುವವರೆಗೆ ಮುಂಗುಸಿಯಾಗಿರು" ಎಂದು ಪಿತೃದೇವತೆಗಳಿಂದ ಶಾಪ ಪಡೆದ ಕ್ರೋಧಾಸುರನು ಧರ್ಮ ಮುಂತಾದ ಪುಣ್ಯಕಾರ್ಯಗಳನ್ನು ನಿಂದಿಸಿ ತಮಸ್ಸಿಗೆ ಹೋದನು. ಕ್ಷೀರನಿಂದನೆಯಿಂದ ತಮಸ್ಸಿನ ಪ್ರಾಪ್ತಿಗೆ ಅವಕಾಶವಿಲ್ಲವಾದ್ದರಿಂದ ನೀಚಯೋನಿಯಾದ ಮುಂಗುಸಿಯಾಗುವುದೇ ಯೋಗ್ಯವು. ಪರಮವೈಷ್ಣವರಾದ ಪಾಂಡವರಲ್ಲಿ ದ್ವೇಷ ಮಾಡಿದ್ದರಿಂದಲೇ ಕ್ರೋಧಾಸುರನಿಗೆ ತಮಸ್ಸಿನ ಪ್ರಾಪ್ತಯಾಗಲಿದೆಯೆಂದು ಪಿತೃದೇವತೆಗಳ ಭಾವವೆಂದು ತಿಳಿಯಬೇಕು.

ದರಿದ್ರನಾದವನು ಕಷ್ಟದಿಂದ ಸಂಪಾದಿಸಿದ ದ್ರವ್ಯದಲ್ಲಿ ಸ್ವಲ್ಪವನ್ನು ನೀಡಿದ್ದರೂ ಅದು ಹೇಗೆ ಬಹುಫಲಪ್ರದವಾಗಲಾರದಂತಹುದು. ಯದ್ಯಪಿ ದರಿದ್ರನು ಸತ್ಪಾತ್ರರಿಗೆ ದಾನಮಾಡಿದ ಅಲ್ಪದ್ರವ್ಯವು ಬಹುಫಲಪ್ರದವಾಗುವುದು. ಆದರೂ ದಾನ ಮಾಡುವವನ ಜ್ಞಾನ ಮುಂತಾದ ಗುಣಗಳೇ ಅನಂತಫಲಗಳನ್ನೀಯುವವು. ಮಹಾಗುಣಗಳ ಮಧ್ಯದಲ್ಲಿಯೂ ಸಜ್ಜನರ ಪ್ರೀತಿಯೂ ಸಹ ಅನಂತಫಲಪ್ರದವಾದವು. ಸಜ್ಜನರಲ್ಲಿ ಶ್ರೇಷ್ಠನಾದ ಶ್ರೀಹರಿಯೇ ಸಚ್ಛಬ್ದವಾಚ್ಯನೆಂದು ಹೇಳುವವು. ಇದು ಪ್ರಸಿದ್ಧವಾಗಿದೆ. ಇದರಿಂದ ಪ್ರಕೃತ ವಿಚಾರಕ್ಕಿಂತ ಜ್ಞಾನಭಕ್ತ್ಯಾದಿ ಮಹಾಗುಣಗಳಿಂದ ಅಧಿಕರಾದವರು ಅಥವಾ ಸಮರಾದವರು ಕರ್ತೃಗಳಾದ ಮಾನವರು ಸಜ್ಜನರ ಮಧ್ಯದಲ್ಲಿ ಉತ್ತಮೋತ್ತಮನಾದ ಶ್ರೀಹರಿಯು ಸುಜನರಾದ ಮುನಿಶ್ರೇಷ್ಠರಿಂದ ಸಹಿತನಾಗಿ ತನಗೆ ಅತಿಪ್ರಿಯರಾದ ಪಾಂಡವರಿಂದ ತಾನೇ (ಸ್ವತಃ) ಸಾಕ್ಷಾತ್ ನಿಂತು ಅತ್ಯುತ್ಕೃಷ್ಟವಾದ ಅಶ್ವಮೇಧವನ್ನು ಮಾಡಿಸಿರುವುದರಿಂದ ಸಚ್ಛಬ್ದವಾಚ್ಯನಾದ ಶ್ರೀವಿಷ್ಣುವಿಗೂ ಋಷಿ-ಮುನಿಶ್ರೇಷ್ಠರಿಗೂ ಪಾಂಡವರಲ್ಲಿ ಅತಿಶಯಪ್ರೀತಿ ಇದೆಯೆಂಬುವುದು ಸೂಚಿತವಾಗುವುದು. ಇಂತಹ ಯಜ್ಞಕ್ಕೆ ಸಮಾನವಾದ ಶುಭಸಾಧನವಾದದ್ದು ಯಾವುದೂ ಇಲ್ಲ. ಇಲ್ಲಿ ನಿರೂಪಿತವಾದ ಅರ್ಥಕ್ಕೆ ಉಪಯುಕ್ತ ಪೈಂಗಿಶಾಖೆಯ ಮಂತ್ರಗಳನ್ನು ಉದಾಹರಿಸುವರು.

"ಅವೈಷ್ಣವಕೃತಂ ಕರ್ಮ ಸರ್ವಮಂತವದುಚ್ಯತೇ ।
ಅನಂತಂ ವೈಷ್ಣವಕೃತಂ ತತ್ರ ವರ್ಣಕ್ರಮಾತ್ತ್ವತ್ವರಮ್ ॥ 1 ॥
ವೈಷ್ಣವೇಷ್ವಪಿ ಮರ್ತ್ಯೈರ್ಯತ್ಕೃತಂ ಶತಗುಣಂ ತತಃ ।
ಗಾಂಧರ್ವಕರ್ಮ ತಸ್ಮಾಚ್ಚ ಪಿತೃಭಿರ್ಮುನಿಭಿಸ್ತತಃ ॥ 2 ॥
ದೇವಶಕ್ರಶಿವಬ್ರಹ್ಮಕೃತಂ ತಸ್ಮಾತ್ಕ್ರಮೇಣ ಚ ।
ಶತೋತ್ತರಮಿತಿ ಜ್ಞೇಯಂ ನಾನ್ಯದ್ ಬ್ರಹ್ಮಕೃತೋಪಮಮ್ ॥ 3 ॥ (ಮ.ತಾ.ನಿ.)

ಅವೈಷ್ಣವರು ಮಾಡಿದ ಕರ್ಮವೆಲ್ಲವು ನಾಶವುಳ್ಳದ್ದು. ವೈಷ್ಣವರಾಚರಿಸಿದ್ದು ನಾಶರಹಿತವಾದದ್ದು. ವೈಷ್ಣವರಿಂದ ಆಚರಿಸಲ್ಪಟ್ಟ ಕರ್ಮಗಳೆಲ್ಲವು ಕ್ರಮವಾಗಿ ಉತ್ತಮವಾದದ್ದು. ಅದಕ್ಕಿಂತ (ಕ್ಷತ್ರಿಯನಾಚರಿಸಿದ ಕರ್ಮಕ್ಕಿಂತ) ಬ್ರಾಹ್ಮಣನು ಮಾಡಿದ ಕರ್ಮವೆಂದು ಭಾವ. ವೈಷ್ಣವರಾದ ಮಾನವರು ಅಥವಾ ವಿಷ್ಣುಭಕ್ತರ ಮಧ್ಯದಲ್ಲಿಯೂ ಮಾನವರು ನೆರವೇರಿಸಿದ್ದಕ್ಕಿಂತ ಗಂಧರ್ವರು ಮಾಡಿದ ಕರ್ಮವೂ ಶತಗುಣಾಧಿಕವಾದುದು. ಗಂಧರ್ವರಿಗಿಂತಲೂ ಮುನಿಗಳಾಚರಿಸಿದ ಕರ್ಮವು ಶತಗುಣಾಧಿಕವಾದುದು ಎಂದು ತಿಳಿಯಬೇಕು. ಅದಕ್ಕಿಂತಲೂ ದೇವತೆಗಳು, ಇಂದ್ರ, ರುದ್ರ, ಬ್ರಹ್ಮ ಇವರು ಮಾಡಿದ ಕರ್ಮವು ಶತಗುಣಾಧಿಕವಾದುದು ಎಂದು ತಿಳಿಯಬೇಕು. ಮಿಕ್ಕೆಲ್ಲವೂ ಬ್ರಹ್ಮದೇವರು ಆಚರಿಸಿದ್ದಕ್ಕೆ ಸಮಾನ-ವಾಗಲಾರವು. ಅಂದರೆ ಬ್ರಹ್ಮದೇವರಾಚರಿಸಿದ್ದಕ್ಕೆ ಸಮಾನವಾದದ್ದು ಇಲ್ಲವೇ ಇಲ್ಲ ಎಂದು ಬಾವ. ಬ್ರಹ್ಮದೇವರು ಆಚರಿಸಿದ್ದಕ್ಕೆ ಸಮಾನವಾದದ್ದು ಯಾವುದು ಇಲ್ಲವೆಂದು ಹೇಳಿದ್ದನ್ನು ವಿವರಿಸುತ್ತಾರೆ -

"ವೈಷ್ಣವತ್ವಂ ಕ್ರಮಾದ್ವೃದ್ಧಂ ಬ್ರಹ್ಮಾಂತಂ ಜೀವರಾಶಿಷು ।
ಫಲಾಧಿಕ್ಯಂ ಕರ್ಮಣಾಂ ಹಿ ವಿಷ್ಣೋಃ ಪ್ರೀತ್ಯೈವ ನಾನ್ಯಥಾ ॥ (ಮ.ಭಾ.ತಾ.ನಿರ್ಣಯ)

ರಾಜರುಗಳಿಂದಾರಂಭಿಸಿ ಚತುರಾನನ ಬ್ರಹ್ಮದೇವರ ಪರ್ಯಂತವಾಗಿ ಜೀವರಾಶಿಗಳಲ್ಲಿ ವೈಷ್ಣವತ್ವವು ಅತ್ಯಭಿವೃದ್ಧಿ-ರಿಂದ ಶ್ರೀಹರಿಯ ಪ್ರೀತಿಯಿಂದಲೇ ಕರ್ಮಗಳಿಗೆ ಫಲಾಧಿಕ್ಯವೆಂದು ಭಾವ. ಶ್ರೀಹರಿಯ ಪ್ರೀತಿಯನ್ನು ಬಿಟ್ಟು ಫಲವು ಲಭಿಸುವುದೇ ಇಲ್ಲ. ಹೀಗೆ ಪೈಂಗಿಗಳು ಮಂತ್ರವನ್ನು ಪಠಿಸುವರು. ಈ ಕಾರಣದಿಂದ ಪಾಂಡವರ ಕರ್ಮ, ಜ್ಞಾನ, ಮುಂತಾದ ಗುಣಗಳಿಗೆ ಸಮಾನವಾದದ್ದು ಇತರ ವಸ್ತುವಾವುದೂ ಇಲ್ಲ. ಪಾಂಡವರು ಉತ್ತಮರಾದ್ದರಿಂದ ತಮೋಗುಣ-ಪ್ರಧಾನವಾದ ಕ್ರೋಧನಾಮಕ ಅಸುರನು ಅತ್ಯಂತ ಜ್ಞಾನವುಳ್ಳ ಶ್ರೀವಿಷ್ಣುವಿನಲ್ಲಿರುವ ಸ್ಥಿರವಾದ ಅಂತಃಕರಣವುಳ್ಳ ಅಥವಾ ಅಧಿಕಸತ್ವಗುಣ ಶೋಭಿತರಾದ ಪಾಂಡವರನ್ನು ನಿಂದಿಸಿ ಕ್ರೋಧನೆಂಬ ಹೆಸರಿನ ದೈತ್ಯನು ಅಂಧಂತಮಸ್ಸನ್ನು ಪಡೆದನು.

ದೇವತೆಗಳು ವಿಪ್ರರೇ ಮೊದಲಾದ ಸಜ್ಜನರ ಸಭೆಯಲ್ಲಿ ಯುಧಿಷ್ಠಿರನು ಧರ್ಮಾದಿಗಳ ಬಗ್ಗೆ ಪ್ರಶ್ನಿಸಲು ಶ್ರೀವಾಸು-ದೇವನು ಪರಮಾನಂದಭರಿತನಾಗಿ ವರ್ಣಾಶ್ರಮೋಚಿತಗಳಾದ ವೈಷ್ಣವ ಧರ್ಮಗಳನ್ನು ನಿರೂಪಿಸಿದನು. ಪರಮ ಭಾಗವತರಾದ ಶ್ರೇಷ್ಠ ಭಕ್ತಿಯುಕ್ತರಾದ ಪಾಂಡವರು ಶ್ರೀಕೃಷ್ಣಪರಮಾತ್ಮನು ಉಪದೇಶಿಸಿದ ಸಕಲ ಧರ್ಮಗಳನ್ನು ಕೇಳಿ ಸಮಸ್ತ ಜಗತ್ಪ್ರಭುವಾದ ಶ್ರೀಹರಿಯನ್ನು ಆರಾಧಿಸಿ ಪರಮಾನಂದಭರಿತರಾದರು.

*ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಮೂವತ್ತನೆಯ ಅಧ್ಯಾಯದ ಕಥಾಸಾರವು ಸಮಾಪ್ತವಾಯಿತು.*

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★

## ಏಕತ್ರಿಂಶಾಧ್ಯಾಯಭಾವಸಂಗ್ರಹ

ಅವತಾರಿಕೆ:-

ಈಗ ಶ್ರೀಮದ್ರಾಘವೇಂದ್ರತೀರ್ಥಗುರುಸಾರ್ವಭೌಮರು ಶ್ರೀಮದಾಚಾರ್ಯರು ರಚಿಸಿದ ಮಹಾಭಾರತ-ತಾತ್ಪರ್ಯ ನಿರ್ಣಯದ ಮೂವತ್ತೊಂದನೆಯ ಅಧ್ಯಾಯಾರ್ಥವನ್ನು "ಯದ್ಯುಕ್ತಾಃ" ಎಂಬ ಪದ್ಯದಿಂದ ಸಂಗ್ರಹಿಸುತ್ತಾರೆ.

**ಯದ್ಯುಕ್ತಾಃ ಪಾಂಡುಪುತ್ರಾಃ ಕ್ಷಿತಿಮಥ ಜುಗುಪುಃ ಧರ್ಮರಾಜಸ್ತ್ವರಾವಾನ್**
**ಧರ್ಮೇ ಯತ್ಪ್ರೀತಯೇಽಭೂತ್ಪವನಜವಚನೈರಾಂಬಿಕೇಯಂ ವಿರಕ್ತಮ್ ।**
**ವ್ಯಾಸಾತ್ಮಾ ಯೋ ವನಸ್ಥಂ ತ್ವಕೃತ ನಿಜಮನೋಽಭೀಷ್ಟವಂತಂ ಗತಸ್ವಂ**
**ನಾಯಂ ಪಾರ್ಥಾನ್ ಸ್ಮರಂತೋ ಮುಮುದುರಪಿ ಪದಂ ಯಸ್ಯ ಕೃಷ್ಣಂ ತಮೀಡೇ ॥31॥**

**ಅನ್ವಯಾರ್ಥ** :- **ಅಥ** = ಕೌರವರ ಸಂಹಾರಾನಂತರ, **ಯದ್ಯುಕ್ತಾಃ** – **ಯೇನ** = ಯಾವ ಶ್ರೀಕೃಷ್ಣ ಪರಮಾತ್ಮನಿಂದ, **ಯುಕ್ತಾಃ** = ಸಹಿತರಾದ, **ಪಾಂಡುಪುತ್ರಾಃ** = ಪಾಂಡುಮಹಾರಾಜನ ಮಕ್ಕಳಾದ ಧರ್ಮರಾಜಾದಿಗಳು, **ಕ್ಷಿತಿಂ** = ಭೂಮಿಯನ್ನು, **ಜುಗುಪುಃ** = ರಕ್ಷಿಸಿದರೋ, **ಧರ್ಮರಾಜಃ** = ಯುಧಿಷ್ಠಿರನು, **ಪವನಜವಚನೈಃ** – ವಾಯುಪುತ್ರನಾದ ಭೀಮಸೇನನ ಮಾತುಗಳಿಂದ, **ಯತ್** = ಯಾವ ಶ್ರೀಕೃಷ್ಣಪರಮಾತ್ಮನ, **ಪ್ರೀತಯೇ** = ಪ್ರೀತಿಗಾಗಿ, **ಧರ್ಮೇ** = ಧರ್ಮದಲ್ಲಿ, **ತ್ವರಾವಾನ್ (ಅಭೂತ್)** – ತ್ವರೆಯುಳ್ಳವನಾದನೋ; **ಯಃ** = ಯಾವ, **ವ್ಯಾಸಾತ್ಮಾ** = ಶ್ರೀವೇದವ್ಯಾಸರೂಪನಾದ ಶ್ರೀಕೃಷ್ಣನು, **ಗತಸ್ವಂ** = ಧನಾದಿರಹಿತನಾದ, **ವಿರಕ್ತಂ** = ಭೀಮಸೇನನ ವಾಕ್ಯಗಳಿಂದ ವಿರಕ್ತನಾದ, **ಆಂಬಿಕೇಯಃ** = ಅಂಬಿಕೆಯ ಮಗನಾದ ಧೃತರಾಷ್ಟ್ರ ಮಹಾರಾಜನು, **ವನೇ** = ಅರಣ್ಯದಲ್ಲಿ, ತಪಶ್ಚರಣರೂಪವಾದ, **ನಿಜಮನೋಽಭೀಷ್ಟವಂತಂ** = ತನ್ನ ಮನೋಭೀಷ್ಟವಾದ ಗಂಧರ್ವಲೋಕ ಪ್ರಾಪ್ತಿಯುಳ್ಳವನನ್ನಾಗಿ, **ವನಸ್ಥಂ** = ಅರಣ್ಯದಲ್ಲಿ ತಪೋನಿರತನಾಗುವಂತೆ ಮಾಡಿದನೋ, **ಪಾರ್ಥಾ ಅಪಿ** = ಪಾಂಡವರೂ ಸಹ, **ನಾಥಂ** = ಪ್ರಭುವಾದ, **ಯಸ್ಯ** = ಯಾವ, **ಕೃಷ್ಣಸ್ಯ** = ಶ್ರೀಕೃಷ್ಣ ಪರಮಾತ್ಮನ, **ಪದಂ** = ಚರಣವನ್ನು, **ಸ್ಮರಂತಃ** = ಸ್ಮರಣೆ ಮಾಡುತ್ತಾ, **ಮುಮುದುಃ** – ಸಂತೋಷಭರಿತರಾದರೋ, **ತಂ** = ಅಂಥ, **ಕೃಷ್ಣಂ** = ಶ್ರೀಕೃಷ್ಣನನ್ನು, **ಈಡೇ** = ಸ್ತುತಿಸುವೆನು.

**ತಾತ್ಪರ್ಯ** :- ಕೌರವರ ಸಂಹಾರಾನಂತರ ಶ್ರೀಕೃಷ್ಣಪರಮಾತ್ಮನಿಂದ ಸಹಿತರಾದ, ಪಾಂಡುರಾಜತನಯರಾದ ಧರ್ಮರಾಜಾದಿಗಳು ಈ ಭೂಮಂಡಲವನ್ನು ರಕ್ಷಿಸಿದರು. ಧರ್ಮರಾಜನು ವಾಯುಕುಮಾರನಾದ ಭೀಮಸೇನನ ವಚನಗಳಿಂದಾಗಿ, ಶ್ರೀಕೃಷ್ಣನ ಪ್ರೀತಿಗಾಗಿ, ಧರ್ಮಕಾರ್ಯಗಳಲ್ಲಿ ತ್ವರೆಯುಳ್ಳವನಾದನು. ಶ್ರೀವೇದವ್ಯಾಸರೂಪಿಯಾದ ಶ್ರೀಕೃಷ್ಣನು, ಭೀಮಸೇನನ ವಾಕ್ಯಗಳಿಂದ ವಿರಕ್ತನಾದ, ಧನಾದಿರಹಿತನಾದ, ಅಂಬಿಕೆಯ ಮಗನಾದ ಧೃತರಾಷ್ಟ್ರ ಮಹಾರಾಜನನ್ನು, ತನ್ನ ಮನೋಭೀಷ್ಟವಾದ ಗಂಧರ್ವಲೋಕಪ್ರಾಪ್ತಿಗಾಗಿ, ತಪಶ್ಚರಣರತನಾಗಿ, ಅರಣ್ಯದಲ್ಲಿರುವಂತೆ ಮಾಡಿ, ಅವನ ಮನೋಬಯಕೆಯು ಸಿದ್ಧಿಸುವಂತೆ ಅನುಗ್ರಹಿಸಿದನು.

ಯಾವ ಶ್ರೀಹರಿಯ ಪರಮಭಕ್ತರಾದ ಪಾಂಡವರೂ ಕೂಡ ಪ್ರಭುವಾದ ಶ್ರೀಕೃಷ್ಣಪರಮಾತ್ಮನ ಚರಣಕಮಲಗಳನ್ನು ಸ್ಮರಿಸುತ್ತಾ ಸಂತೋಷಯುಕ್ತರಾದರೋ, ಅಂತಹ ಶ್ರೀಕೃಷ್ಣಪರಮಾತ್ಮನನ್ನು ಸ್ತುತಿಸುತ್ತೇನೆ ಎಂದು ತಾತ್ಪರ್ಯ.

# ಮೂವತ್ತೊಂದನೆಯ ಅಧ್ಯಾಯದ ಕಥಾಸಾರವು

ಶ್ರೀಯಜ್ಞಾಧಿಪತಿಯಾದ ಭಗವಾನ್ ಶ್ರೀವಾಸುದೇವನಿಂದ ಸಹಿತರಾದ, ಶ್ರೀಹರಿಭಕ್ತಿಭರಿತರಾದ ಪಾಂಡವರು ಭೂಮಂಡಲವನ್ನು ಪರಿಪಾಲಿಸುತ್ತಿರುವಾಗ ಒಂದು ರಾತ್ರಿ ಓರ್ವ ಬ್ರಾಹ್ಮಣಶ್ರೇಷ್ಠನು ಅಲ್ಲಿಗೆ ಬಂದನು. ಒಂದು ಯಜ್ಞವನ್ನು ಮಾಡ ಬಯಸಿದ ಆತನು ಧರ್ಮರಾಜನನ್ನು ಯಜ್ಞಮಾಡಲು ಧನ ಸಹಾಯ ಮಾಡುವಂತೆ ಬೇಡಿದನು. ಧರ್ಮನಂದನನು ಆ ದ್ವಿಜನಿಗೆ ಮರುದಿನ ಬೆಳಿಗ್ಗೆ ಧನ ಸಹಾಯಮಾಡುವುದಾಗಿ ಹೇಳಿದನು. ಆಗ ಆ ವಿಪ್ರನು ಯಜ್ಞಾರಂಭ ಮಹೋತ್ಸವು ಅತಿಕ್ರಾಂತವಾದೀತೆಂಬ ಸಂಶಯದಿಂದ ಕೂಡಲೇ ಶ್ರೀವಾಯುನಂದನನಾದ ಭೀಮಸೇನನ ಬಳಿಗೆ ಬಂದು ಅವನಿಗೆ ಧರ್ಮರಾಜನ ಮಾತನ್ನು ತಿಳಿಸಿ ತನಗೆ ತ್ವರೆಯಾಗಿ ಧನವು ಬೇಕಾಗಿರುವುದರಿಂದ ತಾನು ನೆರವೇರಿಸಲಿರುವ ಯಜ್ಞಕ್ಕೆ ಧನಸಹಾಯ ಮಾಡುವಂತೆ ಯಾಚಿಸಿದನು. ಭೀಮಸೇನನು ತಡಮಾಡದೆ ತನ್ನ ಕರಗಳಲ್ಲಿದ್ದ ಸುವರ್ಣಕಡಗಗಳನ್ನು ಆ ಭೂಸುರನಿಗೆ ಕೊಟ್ಟು ಕಳುಹಿಸಿದನು. ಅಗ್ನಿಯಂತೆ ಝಗಝಗಿಸುವ ಅಮೂಲ್ಯವಾದ ಆ ರತ್ನಮಯವಾದ ಕನಕ ಕಂಕಣಗಳನ್ನು ಸ್ವೀಕರಿಸಿ ಕೃತಕೃತ್ಯನಾದ ಆ ವಿಪ್ರನು ಸಂತಸದಿಂದ ಯಜ್ಞವನ್ನು ನೆರವೇರಿಸಲು ಹೊರಟುಹೋದನು.

ಅನಂತರ ಭೀಮಸೇನನು ಉತ್ಸವದ ಭೇರಿಯನ್ನು, ಅಂದರೆ ಆನಂದವನ್ನುಂಟುಮಾಡುವ ನಂದಿಘೋಷವನ್ನು ಮಾಡಿಸಿದನು. ಅಕಾಲದಲ್ಲಿ ಧ್ವನಿಸಿದ ನಂದಿಘೋಷವನ್ನಾಲಿಸಿ, ಅದನ್ನು ಬಾರಿಸಿದ ಕಾರಣವನ್ನು ತಿಳಿದು ಬರಲು ಯುಧಿಷ್ಠಿರನು, ಒಬ್ಬರಾದ ಮೇಲೊಬ್ಬರಂತೆ ಭೀಮನ ಬಳಿಗೆ ದೂತರನ್ನು ಕಳುಹಿಸಿದನು. ಆ ದೂತರು ಬಂದು ಭೀಮಸೇನನನ್ನು ಭೇರೀತಾಡನದ ಕಾರಣವೇನೆಂದು ತಿಳಿದು ಬರಲು ರಾಜಾ ಧರ್ಮನಂದನನು ಕಳಿಸಿರುವ ವಿಚಾರವನ್ನು ತಿಳಿಸಿದರು. ಅವರ ವಚನವನ್ನಾಲಿಸಿದ ಭೀಮನು 'ಮರಣವುಳ್ಳ ಮಾನವ ಶರೀರಿಯಾಗಿದ್ದರೂ ಧರ್ಮರಾಜನು ತಾನು ಶಾಶ್ವತನು ಅಂದರೆ ಬಹುವರ್ಷ ಜೀವಿಸುವವನೆಂದು ತಿಳಿದು, ಇಂದು ಮಾಡಬೇಕಾದ ಧರ್ಮಕಾರ್ಯವನ್ನು ನಾಳೆ ಮಾಡುವುದಾಗಿ ಹೇಳಿದ್ದರಿಂದ, ಆ ಸಂತೋಷದಿಂದ ಭೇರೀತಾಡನ ಮಾಡಿಸಿದನೆಂದು' ಹೇಳಿ ಕಳುಹಿಸಿದನು.

ದೂತರಿಂದ ವಿಷಯವನ್ನು ಅರಿತ ಧರ್ಮರಾಜನು 'ನಿಜ. ನಾನು ತಪ್ಪು ಮಾಡಿದೆನು. ಈ ದೇಹವು ಶಾಶ್ವತವಲ್ಲ. ನಾಳೆ ಮಾಡುವ ಧರ್ಮಕಾರ್ಯವನ್ನು ಇಂದೇ ಮಾಡಬೇಕಾದುದು ಅವಶ್ಯವು' ಎಂದು ಹೇಳಿ ಭೀಮಸೇನನ ಕರ್ತವ್ಯ ಪ್ರಜ್ಞೆಯನ್ನು ಶ್ಲಾಘನೆ ಮಾಡಿ ಇನ್ನು ಮುಂದೆ ಭೀಮಸೇನನ ಆಶಯದಂತೆಯೇ ವರ್ತಿಸುವುದಾಗಿ ನಿಶ್ಚಯಿಸಿದನು ಮತ್ತು ಅಂದಿನಿಂದ ಸತ್ಕರ್ಮಾಚರಣೆಯಲ್ಲಿ ತ್ವರೆಯುಳ್ಳವನಾದನು.

ಆ ತರುವಾಯ ವಿಷಯ ಸುಖಗಳಲ್ಲಿ ಆಸಕ್ತನಾದ, ದುಷ್ಟರಾದ, ದುರ್ಯೋಧನಾದಿ ಮಕ್ಕಳ ಸಂಪರ್ಕದಿಂದ ಸ್ವಾಭಾವಿಕವಾಗಿ ದುಷ್ಟನಲ್ಲದಿದ್ದರೂ ಸಹವಾಸ ದೋಷದಿಂದ ದುಷ್ಟನಾದ, ಮಾಡಿದ ಅಧಿಕ ದೋಷಗಳಿಂದ ಸಮಸ್ತ ರಾಜರ ಮರಣಕ್ಕೆ (ನಾಶಕ್ಕೆ) ಕಾರಣನಾದ ಅಂಬಿಕೆಯ ಪುತ್ರನಾದ ಧೃತರಾಷ್ಟ್ರ ಮಹಾರಾಜನ ವಿಚಾರವರಿತು ಅವನಲ್ಲಿ ದಯೆ ತೋರಿದನು.

'ಧೃತರಾಷ್ಟ್ರನು ವಿಶೇಷವಾಗಿ ತಪಸ್ಸನ್ನಾಚರಿಸದೇ ಇರುವುದರಿಂದ ಅವನಿಗೆ ತನ್ನದಾದ ಗಂಧರ್ವಲೋಕವು ದೊರಕದೇ ಹೋದೀತು. ಮುಂದಾದರೂ ಅವನು ತಪಸ್ಸನ್ನು ಮಾಡಿಯಾನು ಎಂದರೆ ಅವನಿಗೆ ತಪೋನಿಷ್ಠನಾಗುವ ಬುದ್ಧಿಯೇ ಬರದೇ ಹೋಗಬೇಕಾಗುವುದು. ಇವನು ವಿಷಯ ಸುಖದಲ್ಲಿಯೇ ಮಗ್ನನಾಗಿ ತಪಸ್ಸನ್ನಾಚರಿಸದೇ ಹೋಗಬಹುದು' ಮುಂತಾಗಿ ನಿಶ್ಚಯಿಸಿ ವಾಯುನಂದನನು ಧೃತರಾಷ್ಟ್ರನಿಗೆ ವೈರಾಗ್ಯವುಂಟಾಗುವಂತೆ ಮಾಡುವ ಕಾರ್ಯದಲ್ಲಿ ತೊಡಗಿದನು.

ಶ್ರೀನಿರ್ಣಯಾಚಾರ್ಯರು ವೈರಾಗ್ಯ ಸಂಪಾದಕ ಕಾರ್ಯಗಳನ್ನು ಹೀಗೆ ಉದಾಹರಿಸುವರು – "ಸಹೋದರರು ಬಾಂಧವರುಗಳಿಂದ ಧೃತರಾಷ್ಟ್ರನು ಪೂಜಿತನಾದರೂ, ಧೃತರಾಷ್ಟ್ರನ ಆಜ್ಞಾದಿಗಳನ್ನು ಭೀಮಸೇನನು ಬೇರೆಯವರಿಂದ ಹಾಳುಗೆಡಹುತ್ತಾನೆ. ತಾನೂ ತಿರಸ್ಕಾರ ವಚನಗಳನ್ನಾಡುತ್ತಾನೆ. ಇಂತು ಭೀಮಸೇನನಿಂದ ತಿರಸ್ಕೃತನಾದರೂ ಭೀಮಸೇನನನ್ನು ಬಿಟ್ಟು ತಮ್ಮವರಿಂದ ಪೂಜಿತನಾಗಿ ವಿರಕ್ತನಾಗಲಿಲ್ಲ. ಭೀಮನು ನಿರಾಕರಿಸಿದರೂ ಇತರ ಸ್ವಕೀಯರಾದ ಅರ್ಜುನಾದಿಗಳಿಂದ ಅತಿಯಾಗಿ ಗೌರವಿತನಾಗಿಯೂ ವೈರಾಗ್ಯದತ್ತ ಮನಸಹರಿಸಲಿಲ್ಲ. ತನ್ನ ಆಜ್ಞೋಲ್ಲಂಘನ ಮಾಡುವ ಗ್ರಾಮೀಣ ಪ್ರಜರನ್ನು ಹೂಂಕಾರಾದಿಗಳಿಂದ ಬೆದರಿಸುತ್ತಾ ನಿರಾಕರಿಸಿದರೂ, ಅರ್ಜುನಾದಿಗಳು ಪೂಜಿಸುತ್ತಿದ್ದುದರಿಂದ ಧೃತರಾಷ್ಟ್ರನು ವೈರಾಗ್ಯ ಶಾಲಿಯಾಗದೇ ವಿಷಯಲೋಲುಪನಾಗಿಯೇ ಇದ್ದನು. ಭೀಮನನ್ನು ಹೊರತುಪಡಿಸಿ ಪತ್ನೀಸಹಿತರಾಗಿ ಇತರ ಪಾಂಡವರು ದಿನದಿನವೂ ಗಾಂಧಾರಿಯಿಂದೊಡಗೂಡಿದ ಧೃತರಾಷ್ಟ್ರನನ್ನು ಹೆಚ್ಚು ಆದರದಿಂದಲೇ ಪೂಜಿಸುತ್ತಿದ್ದರು. ದ್ರೌಪದಿಯೂ ಸಹ ಧೃತರಾಷ್ಟ್ರನು ಪುತ್ರನಾಶದಿಂದ ದುಃಖಿತನಾಗಬಾರದೆಂದು ತಾನೂ ಅವನನ್ನು ಸೇವಿಸಿ ಗೌರವಿಸುತ್ತಿದ್ದಳು. ಪುತ್ರವಿಯೋಗ ಶೋಕದಿಂದ ದುಃಖಿತನಾದ ಅವನಿಂದ ಪುನಃ ಪಾಪವು ಘಟಿಸಬಾರದೆಂಬ ಕಾರುಣ್ಯದಿಂದ ಕುರುಪತಿ ಧೃತರಾಷ್ಟ್ರನನ್ನು ಸೇವಿಸುತ್ತಾ ಭೀಮಸೇನನ ಕಾರ್ಯಕ್ಕೆ (ಪ್ರಯತ್ನಕ್ಕೆ) ಅನುಕೂಲವನ್ನೇ ಮಾಡುತ್ತಿದ್ದಳು ಎಂದು ಭಾವ.

ಧೃತರಾಷ್ಟ್ರನು ಪಾಂಡವರಲ್ಲಿ ಅತ್ಯಂತ ಅವರಿಗೆ ಹೊಂದಿಕೊಂಡು ನಡೆಯುತ್ತಿದ್ದರೂ ಸಹ, ಭೀಮನ ಪರಾಕ್ರಮುವನ್ನರಿತಿದ್ದರೂ ಭೀಮಸೇನನು ತನ್ನ ಪುತ್ರರನ್ನು ಸಂಹರಿಸಿದ್ದರಿಂದ ಅದನ್ನು ನೆನೆನೆನೆದು ಅಂತರಂಗದಲ್ಲಿ ಧೃತರಾಷ್ಟ್ರನು ಭೀಮನಲ್ಲಿ ಹೆಚ್ಚಾಗಿ ಪ್ರೀತಿಸುತ್ತಿರಲಿಲ್ಲ. ಧೃತರಾಷ್ಟ್ರನು ವೈರಾಗ್ಯವಂತನಾಗುವಂತೆ ಮಾಡಲು ಮತ್ತು ವೈರಾಗ್ಯ ತಾಳಿ ತಪೋನಿರತನಾಗಿ 'ನಾನು ಹೀಗೆ ತಪೋನಿರತನಾಗಿ ಸಾಧನ ಮಾಡಿಕೊಳ್ಳಲು ಭೀಮಸೇನನೇ ಕಾರಣನೆಂದು ತಿಳಿದು ತನ್ನಲ್ಲಿರುವ ಭೀಮನ ಮೇಲಿನ ಅಂತರಂಗ ದ್ವೇಷವನ್ನು ಬಿಟ್ಟು ಸುಪ್ರಸನ್ನನಾಗಿ ಪ್ರೀತಿಸುವಂತಾಗಬೇಕೆಂದು' ಬಯಸಿ ಮಾದ್ರೀಸುತನಾದ ನಕುಲ ಸಹದೇವರ ಸಮಕ್ಷ ಭೀಮಸೇನನು ತನ್ನ ಭುಜಗಳನ್ನು ತಟ್ಟಿಕೊಂಡು 'ನೋಡಿರಿ ನನ್ನೀ ಭುಜಗಳ ಮಧ್ಯೇ ಸಿಲುಕಿಯೇ ಮುದಿಯನಾದ ಈ ಧೃತರಾಷ್ಟ್ರನ ಮಕ್ಕಳೆಲ್ಲರೂ ನಾಶವಾದರು. ನೋಡಿರಿ ನನ್ನೀ ಭುಜಗಳೆಷ್ಟು ದುಂಡಾಗಿಯೂ, ಪುಷ್ಟವಾಗಿಯೂ, ಗಂಧಲೇಪನಾದಿಗಳಿಂದ ಯುಕ್ತವಾಗಿ ಕಂಗೊಳಿಸುತ್ತಿದೆ' ಎಂದು ಭೀಮನು ಅಡಿಗಡಿಗೆ ಹೇಳಹತ್ತಿದನು. ನಕುಲ-ಸಹದೇವರು ಭೀಮನ ಈ ಮಾತನ್ನು ಒಪ್ಪಿ ಸುಮ್ಮನಾಗುತ್ತಿದ್ದರು. ಅವರು ಧೃತರಾಷ್ಟ್ರನ ಮೇಲಿನ ಗೌರವದಿಂದ ಅವನನ್ನು ನಿಂದಿಸುವುದು, ನಿಷ್ಠುರ ವಚನಗಳನ್ನಾಡುವ ಕಾರ್ಯ ಮಾಡುತ್ತಿರಲಿಲ್ಲ. ಈ ವಿಚಾರವು "ಆಶ್ರಮ ವಿವೇಕ"ದಲ್ಲಿ – 'ಮಾದ್ರೀ ಪುತ್ರೌ ತು ಚಿತ್ತಜ್ಞೌ ಚಿತ್ತಂ ತಸ್ಯಾನ್ವಮೋದತಾಂ। ರಾಜ್ಞಸ್ತು ಚಿತ್ತಂ ರಕ್ಷಂತೌ ನೋಚತುಃ ಕಿಂಚಿ-ದಪ್ರಿಯಮ್ ॥' ಎಂದು ಉಕ್ತವಾಗಿದೆ. ಭೀಮಸೇನನಾಡುತ್ತಿದ್ದ ಈ ಮಾತುಗಳನ್ನು ನಕುಲ-ಸಹದೇವರು, ಕುಂತೀದೇವಿ, ಧರ್ಮರಾಜ, ಅರ್ಜುನ, ದ್ರೌಪದಿಯರಿಗೆ ತಿಳಿಸುತ್ತಿರಲಿಲ್ಲವಾದ್ದರಿಂದ ಅವರಿಗಿದು ತಿಳಿದಿರಲಿಲ್ಲ.

ಪವನಸುತನಾದ ಭೀಮಸೇನನ ಮಾತಿನಿಂದ ಸ್ವಲ್ಪ ವೈರಾಗ್ಯ ತಾಳಿದ ಧೃತರಾಷ್ಟ್ರನಿಗೆ ಹೆಚ್ಚು ವೈರಾಗ್ಯವುಂಟಾಗಲು ವಿದುರನು ಏಕಾಂತದಲ್ಲಿ ಇಂತು ಬುದ್ಧಿವಾದವನ್ನು ಹೇಳುತ್ತಿದ್ದನು –

"ಅಣ್ಣ ಧೃತರಾಷ್ಟ್ರ! ನೀನು ಹೆಚ್ಚಾಗಿ ಜೀವಿಸಲು ಬಯಸುತ್ತಿರುವೆ. ಇದು ಆಶ್ಚರ್ಯಕರವು. ಪ್ರಾಣಿಗಳಿಗೆ ಜೀವಿತೇಚ್ಛೆಯು ಉತ್ತಮವಾದದ್ದು. ಆದರೆ ನೀನಾದರೋ ಕೇವಲ ಜೀವಿಸುವ ಇಚ್ಛೆಯಿಂದ, ಭೀಮಸೇನನು ಪಿತೃಗಳಿಗೆ ಪಿಂಡವನ್ನು ನೀಡುವಂತೆ ಎಡಗೈಯಿಂದ ಕೊಟ್ಟ ಅನ್ನವನ್ನು ಶ್ವಾನದಂತೆ ಸ್ವೀಕರಿಸುತ್ತಿರುವೆ. ಇದು ನಾಚಿಕೆಗೇಡು. ನೀನು ಪಾಂಡವರಿಗೆ ಏನೇನು ಅಪಕಾರ ಮಾಡಿರುವೆ, ಅವನ್ನು ಸ್ವಲ್ಪ ನೆನೆದುಕೊಳ್ಳು.

ನೀನು ಲಾಕ್ಷಾಗೃಹಕ್ಕೆ ನಿನ್ನ ಪುತ್ರರ ಮೂಲಕವಾಗಿ ಬೆಂಕಿಯಿಡಿಸಿ ಪಾಂಡವರನ್ನು ನಾಶಪಡಿಸಲು ಯತ್ನಿಸಿದ್ದೀಯೆ. ಭೀಮಸೇನನಿಗೆ ವಿಷವನ್ನಿಕ್ಕಿಸಿದೆ. ಸಭೆಯಲ್ಲಿ ದ್ರೌಪದೀದೇವಿಯನ್ನು ಎಳೆತರಿಸಿ ಮಾನಭಂಗ ಮಾಡಲು, ಮೊದಲೇ ದುಷ್ಟರಾದ ಮಕ್ಕಳನ್ನು ಪ್ರೋತ್ಸಾಹಿಸಿದೆ. ಇವೆಲ್ಲವೂ ಸತ್ಯ. ಅಂದ ಮೇಲೆ ಭೀಮನು ಅವುಗಳನ್ನು ಎತ್ತಿ ಹೇಳಿ ನಿನ್ನ ಮಕ್ಕಳನ್ನು ಅದಕ್ಕಾಗಿ ಸಂಹರಿಸಿದೆನೆಂದು ಅವನು ಹೇಳಿದ್ದರಲ್ಲಿ ತಪ್ಪೇನಿದೆ ?

ನೀನಾದರೋ, ಮಕ್ಕಳಿಂದ ಭೀಮಸೇನನ (ಪಾಂಡವರ) ರಾಜ್ಯವನ್ನೂ, ಧನವನ್ನೂ, ಕಪಟದ್ಯೂತದ ಮೂಲಕ ಅಪಹಾರ ಮಾಡಿಸಿ ಅವರಿಗೆ ಅನಿಷ್ಟಗಳನ್ನು ಎಸಗಿದ್ದೀಯೆ. ನಿನಗೆ ಭೀಮಸೇನನೇನಾದರೂ ಅಂತಹ ಅನಿಷ್ಟ ಕಾರ್ಯವನ್ನು ಮಾಡಿರುವನೇ? ಇಲ್ಲ. ಕೇವಲ ವಿಷಯಾಸಕ್ತನಾಗಿ ಭೋಗದಲ್ಲಿಯೇ ಮುಳುಗಿರುವ ನಿನಗೆ ಇನ್ನಾದರೂ ವೈರಾಗ್ಯ-ವುಂಟಾಗಲೆಂದು ಕಡುನುಡಿಗಳನ್ನಾಡಿದ್ದಾನೆಯೇ ಹೊರತು ನಿನ್ನಲ್ಲಿ ದ್ವೇಷ ಅಥವಾ ಉದಾಸೀನದಿಂದ ಭೀಮನಂತೂ ನುಡಿದಿಲ್ಲ. ನಿನಗೆ ವೈರಾಗ್ಯ ಹುಟ್ಟಿಸಲು ಭೀಮನು ಅಂತು ನುಡಿದಿದ್ದಾನೆಂದು ತಿಳಿದು, ಇನ್ನಾದರೂ ಅವನಲ್ಲಿ ದ್ವೇಷವನ್ನು ಬಿಡು. ವನಕ್ಕೆ ತೆರಳಿ ತೀರ್ಥಗಳನ್ನು ಸೇವಿಸುತ್ತಾ ತಪೋನಿರತನಾಗಿ ಶ್ರೀಹರಿಪರಮಾತ್ಮನನ್ನು ಪೂಜಿಸು. ಆದರಿಂದ ನೀನು ಪಾವನನಾಗಿ ಉದ್ಧಾರವಾಗುತ್ತೀಯೆ."

ವಿದುರನು ಹೇಳಿದ ಈ ವಿವೇಕದಿಂದ ಆಗ ಧೃತರಾಷ್ಟ್ರನು ಭೀಮನಲ್ಲಿನ ದ್ವೇಷವನ್ನು ತ್ಯಜಿಸಿ, ವೈರಾಗ್ಯಶಾಲಿಯಾದನು. ತರುವಾಯ ತಪಸ್ಸನ್ನೆಸಗಲು ವನಕ್ಕೆ ತೆರಳಲು ಪಾಂಡವರ ಅನುಮತಿ ಪಡೆಯಲು ಧೃತರಾಷ್ಟ್ರನು ಉಪವಾಸ ಮಾಡಹತ್ತಿದನು.

ದೊಡ್ಡಪ್ಪನು ಭೋಜನವನ್ನು ತ್ಯಜಿಸಿ ಉಪವಾಸವನ್ನು ಮಾಡುತ್ತಿರುವನೆಂಬ ವಿಚಾರವರಿತು ಪಾಂಡವರು ಧೃತರಾಷ್ಟ್ರನ ಅರಮನೆಗೆ ನಾಲ್ಕನೆಯ ದಿವಸ ಬಂದರು. ಆಗ ಯುಧಿಷ್ಠಿರನು ಹೀಗೆ ಹೇಳಿದನು – "ಪೂಜ್ಯ ದೊಡ್ಡಪ್ಪ! ನೀನು ಭೋಜನವನ್ನು ಮಾಡು, ಉಪವಾಸವನ್ನು ಬಿಡು" ಎಂದು ಮತ್ತೆ ಮತ್ತೆ ಪ್ರಾರ್ಥಿಸಿದನು. ಆ ವಚನವನ್ನಾಲಿಸಿ ಧೃತರಾಷ್ಟ್ರನು "ಧರ್ಮನಂದನ, ನಾನು ವನವಾಸಕ್ಕೆ ಹೊರಡಲು ನೀನು ಅನುಮತಿಯನ್ನು ಕೊಡು. ಆ ತರುವಾಯ ನಾನು ಭೋಜನ ಮಾಡುವೆನು. ನೀನು ಇದಕ್ಕೆ ಸಮ್ಮತಿಸದಿದ್ದರೆ ಖಂಡಿತ ಭೋಜನ ಮಾಡುವುದಿಲ್ಲ" ಎಂದು ಹೇಳಿ ಉಪವಾಸದಿಂದ ಬಳಲಿ ಕೃಶನಾದ ಧೃತರಾಷ್ಟ್ರನು ಮೂರ್ಛೆ ತಾಳಿ ಪತ್ನಿಯನ್ನು ಆಶ್ರಯಿಸಿದನು. ಆಗ ಧರ್ಮರಾಜನು ತನ್ನ ಮೃದುವಾದ, ಸುಖಕರವಾದ ಹಸ್ತಗಳಿಂದ ದೊಡ್ಡಪ್ಪನನ್ನು ಮೆಲ್ಲಮೆಲ್ಲನೆ ಸ್ಪರ್ಶಿಸುತ್ತಾ, ಆತನು ಮೂರ್ಛೆಯಿಂದ ಎಚ್ಚರಗೊಳ್ಳುವಂತೆ ಮಾಡಿದನು. ಮತ್ತು ಅತಿ ದುಃಖಿತನಾಗಿ "ದೊಡ್ಡಪ್ಪ! ನೀನು ಯುಯುತ್ಸುವನ್ನು ಮುಂದಿಟ್ಟುಕೊಂಡು ಶತ್ರುರಹಿತವಾದ ಈ ರಾಜ್ಯವನ್ನು ಪಾಲಿಸು. ನಾವು ನಿನಗಾಗಿ ಅರಣ್ಯಕ್ಕೆ ತೆರಳಿ ತಪಸ್ಸು ಮಾಡುತ್ತೇವೆ" ಎಂದು ನುಡಿದನು.

ಆಗ ಧೃತರಾಷ್ಟ್ರನು – "ಯುಧಿಷ್ಠಿರ! ನೀವು ವನಕ್ಕೆ ಹೋಗಬೇಡಿರಿ. ವಾರ್ಧಿಕ್ಯದಲ್ಲಿ ವನದಲ್ಲಿ ತಪೋನಿರತರಾಗಿ, ದೇಹತ್ಯಾಗ ಮಾಡುವುದು ಧರ್ಮ. ನಮ್ಮ ಕುಲಾಚಾರವಾಗಿದೆ. ಆದುದರಿಂದ ನೀವು ನಾನು ವನವಾಸಕ್ಕೆ ತೆರಳಲು ಅನುಮತಿ ಕೊಡಿರಿ" ಎಂದರುಹಿದನು. ಹೀಗೆ ಅವರಿಬ್ಬರೂ ವಾದಿಸುತ್ತಿರುವಾಗ ಸರ್ವಜ್ಞರು, ಸರ್ವಕರ್ತರೂ, ಪ್ರಭುಗಳಾದ ಶ್ರೀಕೃಷ್ಣದ್ವೈಪಾಯನರು ಅಲ್ಲಿ ಆವಿರ್ಭೂತರಾಗಿ ಧರ್ಮರಾಜನಿಗೆ ಕುರಿತು ಹೀಗೆ ಹೇಳಿದರು –

"ವತ್ಸ ಧರ್ಮನಂದನ! ಮಾಡಿದ ಸಮಸ್ತ ಪಾಪಗಳನ್ನೆಲ್ಲಾ ಕಳೆದುಕೊಳ್ಳಲು ತಪಸ್ಸು ಮಾಡಬಯಸಿರುವ ಈ ಧೃತರಾಷ್ಟ್ರರಾಜನಿಗೆ ವನಕ್ಕೆ ಹೋಗಲು ನೀನು ಅನುಮತಿಯನ್ನು ಕೊಡು. ಅವನಾಚರಿಸಲಿರುವ ಧರ್ಮಕಾರ್ಯಕ್ಕೆ ವಿಘ್ನ ಮಾಡಬೇಡ. ತಪೋನಿಷ್ಠನಾಗಿ ಕಾಲಕಳೆದಂತೆ ದುಃಖವನ್ನು ಮರೆತು ತಪಸ್ಸಿನಿಂದ ದಗ್ಧವಾದ ಪಾಪಗಳುಳ್ಳವನಾದ್ದರಿಂದ (ದೋಷದೂರನಾಗಿ) ಶುಭಗತಿಯನ್ನು ಹೊಂದಲಿ. ಹಾಗಾಗದಿದ್ದರೆ ಅವನಿಗೆ ಸದ್ಗತಿಯಾಗಲಾರದು."

ಶ್ರೀವೇದವ್ಯಾಸದೇವರು ಇಂತು ಆಜ್ಞಾಪಿಸಲು ಧರ್ಮರಾಜನು ತಪಸ್ಸನ್ನಾಚರಿಸಲು ವನಕ್ಕೆ ತೆರಳಲು ಧೃತರಾಷ್ಟ್ರನಿಗೆ ಸಮ್ಮತಿಯನ್ನು ನೀಡಿದನು. ಆನಂತರ ಧೃತರಾಷ್ಟ್ರನು ಭೋಜನ ಮಾಡಿದನು. ಆಗ ಧೃತರಾಷ್ಟ್ರನಿಂದ ಧರ್ಮರಾಜನಿಗೆ ಸದ್ಧರ್ಮಗಳನ್ನು ಉಪದೇಶ ಮಾಡಿಸಿದರು. ಧರ್ಮಪುತ್ರನು, ಧೃತರಾಷ್ಟ್ರ ರಾಜನಲ್ಲಿರುವ ಗೌರವಸ್ನೇಹಗಳಿಂದ ವಿನಯ ಪೂರ್ವಕವಾಗಿ ಕೇಳಿದನು. ಆದಾದ ಮೇಲೆ ಅರಣ್ಯಕ್ಕೆ ಹೋಗಲು ಅನುಮತಿ ಕೊಟ್ಟು ಯುಧಿಷ್ಠಿರನು ತನ್ನ ಅರಮನೆಗೆ ಬಂದನು.

ಆ ತರುವಾಯ ಧೃತರಾಷ್ಟ್ರನು ತನ್ನ ಪುತ್ರಾದಿಗಳ ಶ್ರಾದ್ಧಾಚರಣೆಗಾಗಿ ಧನವನ್ನು ಅಪೇಕ್ಷಿಸಿ ಪುನಃ ವಿದುರನನ್ನು ಧರ್ಮರಾಜನ ಬಳಿಗೆ ಕಳುಹಿಸಿದನು. ವಿದುರನು ನಿರೂಪಿಸಿದ ವಿಚಾರವನ್ನು ಕೇಳಿ ಯುಧಿಷ್ಠಿರನು 'ಧೃತರಾಷ್ಟ್ರನಿಗೆ ಪುತ್ರ ಪೌತ್ರ ಬಂಧುಗಳ ಶ್ರಾದ್ಧಾದಿಗಳಿಗಾಗಿ ನಾವೀಗ ಚೆನ್ನಾಗಿ ಧನವನ್ನು ಕೊಡಬೇಕು' ಎಂದು ಭೀಮಸೇನನಿಗೆ ಹೇಳಿದನು. ಆಗ ಭೀಮಸೇನನು 'ಪಾಪಿಗಳೂ, ಮಧುವೈರಿಯಾದ ಶ್ರೀಕೃಷ್ಣನಿಗೆ ವಿಮುಖರೂ ಆದ ದುರ್ಯೋಧನಾದಿಗಳ ಪರಲೋಕ ಕಾರ್ಯಕ್ಕೆ ನಾವು ಸಹಾಯ ಮಾಡಬಾರದು. ನಾವು ಧನಸಹಾಯ ಮಾಡಿದರೆ, ಭೀಷ್ಮಾದಿಗಳ ಶ್ರಾದ್ಧಕ್ಕಾಗಿ ನಾವು ಕೊಡುವ ಧನದಿಂದ ಅವನು ತನ್ನ ಪುತ್ರಾದಿಗಳ ಶ್ರಾದ್ಧವನ್ನು ನೆರವೇರಿಸುತ್ತಾನೆ. ಆದರಿಂದ ನಮಗೆ ದೋಷವು ಬಂದೀತು' ಎಂದು ಚಿಂತಿಸಿ ಸಕಲ ದುರ್ಯೋಧನಾದಿಗಳು ಬಹುಕಷ್ಟದ ಮೇಲೆ ಕಷ್ಟಗಳನ್ನು ಹೊಂದಲಿ. ನಾವು ಭೀಷ್ಮಾದಿಗಳ ಶ್ರಾದ್ಧವನ್ನು ನಾವು ಮಾಡುತ್ತಿದ್ದೇವೆ. ಮತ್ತೆ ಈಗೇಕೆ ಧನವನ್ನು ಕೊಡಬೇಕು? ಕರ್ಣನಿಗೆ ಶ್ರಾದ್ಧ ಮಾಡುತ್ತಾನಾದ್ದರಿಂದ ಕೊಡಬೇಕೆಂದರೆ ಕನ್ಯೆಯಾಗಿದ್ದ ಕುಂತೀದೇವಿಯಲ್ಲಿ ಜನಿಸಿದ ಕಾನೀನನಾದ ಕರ್ಣನು, ಕುಂತಿಯು ಪಾಂಡುರಾಜನೊಡನೆ ವಿವಾಹವಾದ ಮೇಲೆ ಜನಿಸಿದ್ದರೆ ಅಣ್ಣನಾಗುತ್ತಿದ್ದನು. ಅವನು ಕಾನೀನನಾಗಿ ಜನಿಸಿದ್ದರಿಂದ ಕರ್ಣನ ಶ್ರಾದ್ಧಕ್ಕೆ ಕುಂತೀಮಾತೆಯೇ ಧನವನ್ನು ಕೊಡಬೇಕು. ನಾವೇಕೆ ಅವನ ಶ್ರಾದ್ಧಕ್ಕಾಗಿ ಧನವನ್ನು ಕೊಡಬೇಕು? ಎಂದು ಆಕ್ಷೇಪಿಸಿದನು. ಭೀಮನ ಮಾತನ್ನಾಲಿಸಿ, ಧರ್ಮರಾಜ-ಅರ್ಜುನರು "ಅರಣ್ಯವನ್ನು ಕುರಿತು ತೆರಳಲಿರುವ ಧೃತರಾಷ್ಟ್ರನಿಗೆ ಅವನು ಬಾಹುಬಲದಿಂದ ಸಂಪಾದಿಸಿದ ದ್ರವ್ಯವನ್ನು ಕೊಡು. ವನವಾಸಿಯಾದ ಮೇಲೆ ಅವನು ನಿನ್ನನ್ನು ಬೇಡುವುದಿಲ್ಲವಷ್ಟೇ? ವೃದ್ಧನಾದ ಅವನು ಮತ್ತೆ ಬರಲಾರನು. ಇನ್ನು ಮೇಲೂ ಧೃತರಾಷ್ಟ್ರನು ಏನನ್ನಾದರೂ ಯಾಚಿಸಬಹುದು. ಅವನು ಸಂಪಾದಿಸಿದ ಧನವನ್ನೇ ಅವನಿಗೆ ನೀಡು. ಆದರಿಂದ ನಿನಗೇನೂ ಪಾಪಸಂಘಟನೆ ಆಗಲಾರದು ಎಂದು ಹೇಳಿದರು.

ಆದರೂ ಧೃತರಾಷ್ಟ್ರನಿಗೆ ಖಂಡಿತ ದ್ರವ್ಯಸಹಾಯ ಮಾಡಬಾರದೆಂದು ಸಾರಿದ, ಭಾಗವತಧರ್ಮದಲ್ಲಿಯೇ ರತನಾದ ಭೀಮಸೇನನನ್ನು ಧರ್ಮರಾಜನು ಸ್ವಲ್ಪ ಕುಪಿತನಾಗಿ "ಭೀಮಸೇನ! ಸುಮ್ಮನೆ ಕುಳಿತುಕೋ" ಎಂದು ಗದರಿಸಿ ಪುನಃ "ರಾಜಕೋಶಕ್ಕೆ ಸೇರದಿರುವ ನನ್ನ ಭೋಗಾದಿಗಳಿಗೆ ಸಹಾಯಕವಾದ ದ್ರವ್ಯವಿದೆಯಷ್ಟೆ? ಅವೆಲ್ಲವನ್ನೂ ನಾನು ಹಿರಿಯ ತಂದೆಯಾದ ಧೃತರಾಷ್ಟ್ರನಿಗೆ ಅರ್ಪಿಸುತ್ತೇನೆ" ಎಂದು ಹೇಳಲು ಅರ್ಜುನನೂ ಸಹ ಹಾಗೆಯೇ ಹೇಳಿದನು ಮತ್ತು ಧರ್ಮರಾಜ-ಅರ್ಜುನರು ವಿದುರನನ್ನು ಕುರಿತು 'ಆರ್ಯ! ಭಾಗವತಧರ್ಮಗಳಲ್ಲಿಯೇ ಆಸಕ್ತನಾಗಿರುವ ಭೀಮಸೇನನ ಮೇಲೆ ಕೋಪಗೊಳ್ಳಲು ಅವನು ಅರ್ಹನಾಗುವುದಿಲ್ಲ, ಅಂದರೆ ಭೀಮಸೇನನ ಮೇಲೆ ಕುಪಿತನಾಗಬೇಡ' ಎಂದು ಅರುಹಿದರು.

ಇಂತು ಪಾಂಡುನಂದನರು ಹೇಳಿದ ಮಾತನ್ನಾಲಿಸಿ ವಿದುರನು ಅವರು ಕೊಟ್ಟ ದ್ರವ್ಯವನ್ನು ತೆಗೆದುಕೊಂಡು ಹೋಗಿ ಧೃತರಾಷ್ಟ್ರನಿಗೆ ಕೊಟ್ಟು "ಅಣ್ಣ! ಧರ್ಮರಾಜ ಮತ್ತು ಪಾರ್ಥನು ಹಿರಿಯವನಾದ ನಿನ್ನಲ್ಲಿ ಭಕ್ತಿಯುಳ್ಳವನಾಗಿದ್ದಾನೆ. ನಿನ್ನ (ಆಣತಿಯಿಂದ ತುಷ್ಟನಾಗುವುದಿಲ್ಲ) ವಿಷಯದಲ್ಲಿ ತುಷ್ಟನಾಗಿಲ್ಲ. ಭೀಮನು ಕ್ಷತ್ರಿಯಧರ್ಮದಲ್ಲಿ ನಿರತನಾಗಿದ್ದಾನೆ. ಆದ್ದರಿಂದ ಅವನ ಮೇಲೆ ಸಿಟ್ಟಾಗಬೇಡ" ಎಂದು ಹೇಳಿದನು.

ಧರ್ಮಜ-ಧನಂಜಯರು ಕ್ಷಾತ್ರಧರ್ಮರತರಾಗಿದ್ದರೂ ಪ್ರಾಣದಯಾಸಕ್ತರು. ಅವರ ಬಗೆಗೆ ವಿದುರನಾಡಿದ ನುಡಿಯನ್ನಾಲಿಸಿ ಅವರಲ್ಲಿ ಕೋಪಗೊಳ್ಳದೆ ಧೃತರಾಷ್ಟ್ರನು ಶಾಂತಮನಸ್ಸಿನಿಂದ, ಪಾಪಿಗಳಾದ ಮಕ್ಕಳ ಋಣದಿಂದ ಮುಕ್ತನಾಗಬೇಕು. ಮತ್ತೆ ಅವರ ಸಂಬಂಧ ಆಗಬಾರದೆಂಬ ಮನಸ್ಸಿನಿಂದ ಪಿತೃಋಣವನ್ನು ಕಳೆದುಕೊಳ್ಳಬೇಕೆಂಬ ಬುದ್ಧಿಯುಳ್ಳವನಾಗಿ ಪವಿತ್ರಾಂತಃಕರಣದಿಂದ ಸಕಲರಿಗೂ ಶ್ರಾದ್ಧಗಳನ್ನಾಚರಿಸಿ ಆ ಹತ್ತುದಿನಗಳಲ್ಲಿ (ದಶರಾತ್ರಗಳಲ್ಲಿ) ಬಹುವಾಗಿ ಮಹಾದಾನಗಳನ್ನು ನೆರವೇರಿಸಿದನು. ಧೃತರಾಷ್ಟ್ರನು ಶುದ್ಧಾಂತಃಕರಣದಿಂದ ಎಲ್ಲ ಕರ್ಮಗಳನ್ನೂ ಮುಗಿಸಿ ಅದನ್ನು ಶ್ರೀಹರಿಪರಮಾತ್ಮನಿಗೆ ಸಮರ್ಪಿಸಿ, ಬಂಧುಗಳು ಹಾಗೂ ಬಾಂಧವಜನರಿಂದ ಅಪ್ಪಣೆ ಪಡೆದು ಅರಮನೆಯಿಂದ ಅರಣ್ಯಕ್ಕೆ ಹೊರಡಲು ಸಿದ್ಧನಾಗಿ ಕಣ್ಣೀರು ಸುರಿಸುತ್ತಾ, ಉತ್ತಮ ಬುದ್ಧಿಯುಳ್ಳವನಾಗಿ ದೇಶದ ಪ್ರಜೆಗಳನ್ನೂ, ರಾಜಧಾನಿಯ ಪೌರಜಾನಪದರನ್ನೂ ಉದ್ದೇಶಿಸಿ ಹೀಗೆ ಹೇಳಿದನು -

"ನನ್ನ ಪ್ರೀತಿಯ ಪ್ರಜಾಜನರೇ! ನಿಮ್ಮೆಲ್ಲರಿಂದ ಬೀಳ್ಕೊಳ್ಳುವ ಮೊದಲು ಕೆಲ ವಿಚಾರಗಳನ್ನು ನಿಮಗೆ ಹೇಳಬಯಸುತ್ತೇನೆ. ನಮ್ಮ ಪೂರ್ವಿಕರು ನಿಮ್ಮನ್ನು ಧರ್ಮದಿಂದ ಪಾಲಿಸಿಕೊಂಡು ಬಂದರು. ದಯಾಮಯರಾದ ನೀವು ನನ್ನ ಮೇಲಿನ ಪ್ರೀತಿ ಗೌರವಬುದ್ಧಿಯಿಂದ ನಾನು ಪ್ರಜಾಜನರನ್ನು ಸರಿಯಾಗಿ ರಕ್ಷಿಸಲಿಲ್ಲವೆಂದು ಪ್ರಮಾದವಶಾತ್ ಸಹ ಆಕ್ಷೇಪಿಸಲಿಲ್ಲ. ನಾನು ನಿಮ್ಮನ್ನು ರಕ್ಷಣೆಯನ್ನು ಮಾಡದಿದ್ದರೂ ಕೂಡ ನಿಮ್ಮ ದಯದಿಂದಲೇ ಯಜ್ಞ-ಯಾಗಾದಿಗಳು ಆಚರಿಸಲ್ಪಟ್ಟವು. ವಾಪಿ, ಕೂಪ, ತಟಾಕಾದಿಗಳು ನಿರ್ಮಾಣವಾದವು. ಪಾಪಿಯಾದ ನನ್ನ ಪುತ್ರನು ಸಮಸ್ತ ಕ್ಷತ್ರಿಯರ ನಾಶಕ್ಕೆ ಕಾರಣನಾದನು. ಅವನು ಎಲ್ಲೆಡೆಯಲ್ಲಿಯೂ, ಎಲ್ಲರನ್ನೂ ಬಹು ಸಂಶಯ ದೃಷ್ಟಿಯಿಂದಲೇ ನೋಡುತ್ತಿದ್ದನು. ಅವನು ಮಹಾಮೂರ್ಖನು. ಪೂಜ್ಯರಾದ ಜ್ಞಾನಿಗಳ ಅಣತಿಯನ್ನು ಅತಿಕ್ರಮಿಸುತ್ತಿದ್ದನು. ಮಹಾನುಭಾವರಾದ ಪಾಂಡವರಲ್ಲಿ ಸ್ನೇಹದಿಂದಿರುವುದನ್ನು ಬಿಟ್ಟು ದ್ವೇಷಮಾಡಿದನು. ಯಾರೂ ಎಲ್ಲಿಯೂ ಎಂದಿಗೂ ಮಾಡದಿರುವಂತಹ ದ್ವೇಷವನ್ನು ಮಾಡಿದನು. ಹುಟ್ಟಿನಿಂದಲೇ ಅತಿ ದುಷ್ಟಬುದ್ಧಿಯುಳ್ಳವನಾಗಿ ಶ್ರೀಕೃಷ್ಣಪರಮಾತ್ಮನಿಗೆ ವಿರುದ್ಧವಾದ ಕಾರ್ಯಗಳನ್ನು ಅವನೆಸಗಿದನು. ಮೂರ್ಖನಾಗಿದ್ದರೂ ನನ್ನ ಪುತ್ರನು ನಿಮಗೆ ಅಮಂಗಳವನ್ನು ಮಾಡಲಿಲ್ಲವಲ್ಲವೇ? ದುರ್ಯೋಧನನ ಅನುಜರೂ ಸಹ ಅವನ ದುಷ್ಟಸ್ವಭಾವವನ್ನೇ ಅನುಸರಿಸಿದ್ದರು.

ಅವನು ಮಾಡಿದ (ನಮ್ಮ) ಪಾಪದ ಪರಿಣಾಮವಾಗಿ ನನ್ನ ಪುತ್ರರು, ಮಂತ್ರಿಗಳು, ಬಂಧುಗಳೆಲ್ಲರೂ ಹತರಾದರು. ಮಕ್ಕಳು ಮಾಡಿದ ಮಾನಸಿಕ ಪೀಡೆಯಿಂದ ವೃದ್ಧನಾದ ನಾನೀಗ ಬಹಳ ಪೀಡಿತನಾಗಿದ್ದೇನೆ. ಶ್ರೀಕೃಷ್ಣ ಮತ್ತು ಧರ್ಮಾತ್ಮರಾದ ಪಾಂಡವರಲ್ಲಿ ಆ ದುಷ್ಟಪುತ್ರರ ಸಂಬಂಧದಿಂದಾಗಿ ನಾನು ಅತಿಕ್ರೂರ ಪಾಪಕಾರ್ಯಗಳನ್ನು ಮಾಡಿದ್ದೇನೆ. ಅಂದರೆ ಶ್ರೀಕೃಷ್ಣನ ಆಜ್ಞೋಲ್ಲಂಘನರೂಪವಾದ ಪಾಪಕಾರ್ಯ, ಅನ್ಯಾಯವಾಗಿ ಪಾಂಡವರ ರಾಜ್ಯಾಪಹಾರರೂಪ ಪಾಪಕಾರ್ಯವನ್ನು ಮಾಡಿದ್ದೇನೆ. ತಪಸ್ಸಿನಿಂದ ಆ ಎಲ್ಲ ಪಾಪಗಳಿಂದ ಮುಕ್ತನಾಗಲು ನಾನೀಗ ಸನ್ನದ್ಧನಾಗಿರುವೆನು.

ಸ್ನೇಹಪರರಾದ ಸಜ್ಜನರೇ, ಅದಕ್ಕಾಗಿ ನೀವು ದಯಮಾಡಿ ನನ್ನನ್ನು ಕ್ಷಮಿಸಿರಿ. ನೀವು ನನ್ನ ಪ್ರೀತ್ಯರ್ಥವಾಗಿ ಮಹಾತ್ಮರಾದ ಪಾಂಡವರಲ್ಲಿ ಪ್ರೀತಿಯಿಂದ ವರ್ತಿಸಿರಿ. ಅವರು ಪಾಂಡವರು ನನ್ನ ಪ್ರೀತಿಗಾಗಿಯೇ ಸ್ನೇಹ ಕೋರುತ್ತಿದ್ದಾರೆ. ಪಾಂಡವರು ನನ್ನ ಮಕ್ಕಳೇ, ಅವರು ಸಜ್ಜನರು. ಅವರು ಇಹಪರಗಳಲ್ಲಿಯೂ ನಮಗೆ ಸೌಖ್ಯ ನೀಡುವವರೇ ಆಗಿದ್ದಾರೆ.

ಇಂತು ಧೃತರಾಷ್ಟ್ರನು ಬಿನ್ನವಿಸುತ್ತಿರಲು, ತಮ್ಮ ಗುಣಗಳನ್ನು ಗಟ್ಟಿಯಾಗಿ ಹೊಗಳುತ್ತಾ ತಾನು ಅರಣ್ಯಕ್ಕೆ ತೆರಳುತ್ತಿರುವುದಕ್ಕಾಗಿ ಅತಿದುಃಖಿತರಾಗಿ ಕಣ್ಣೀರಿನಿಂದ ಸಿಕ್ತವಾದ ನೇತ್ರಗಳುಳ್ಳ ಪಟ್ಟಣಿಗರು ಹಾಗೂ ದೇಶದ ಪ್ರಜೆಗಳಿಂದ ಬೀಳ್ಕೊಂಡು ಧೃತರಾಷ್ಟ್ರನು ತನ್ನನ್ನು ಬಹುದೂರ ಅನುಸರಿಸಿ ಬಂದ ಪಾಂಡವರಿಂದಲೂ ಬೀಳ್ಕೊಂಡು ಅರಣ್ಯಕ್ಕೆ ಪ್ರಯಾಣ ಬೆಳೆಸಿದನು. ಸಂಜಯ, ವಿದುರರು ಪತ್ನಿಯಿಂದ ಸಹಿತನಾದ ಧೃತರಾಷ್ಟ್ರನನ್ನು ಅನುಸರಿಸಿ ತಾವು ವನಕ್ಕೆ ಹೊರಟರು.

ಕುಂತೀದೇವಿಯು ತನ್ನ ಮಕ್ಕಳು, ಸೊಸೆಯಂದಿರು ಅತಿ ದುಃಖಿತರಾಗಿ ತಡೆಯುತ್ತಿದ್ದರೂ ಸಹ ಅರಣ್ಯಕ್ಕೆ ಹೋಗಲು ದೃಢನಿಶ್ಚಯ ಮಾಡಿದ ಅವಳು, ಭಾವ ಧೃತರಾಷ್ಟ್ರನ ಜೊತೆಗೆ ತಾನೂ ಅರಣ್ಯಕ್ಕೆ ಹೊರಟಳು. ಅತಿಕಷ್ಟದಿಂದ ಎಲ್ಲರನ್ನು ನಿಲ್ಲುವಂತೆ ಹೇಳಿ (ಹಸ್ತಿನಾಪುರದಲ್ಲೇ ಇರುವಂತೆ ಹೇಳಿ) ಕುಂತೀದೇವಿ, ವಿದುರ, ಸಂಜಯ ಇವರು ಮಾರ್ಗದರ್ಶನ ಮಾಡುತ್ತಿರಲು ಗಾಂಧಾರಿಯಿಂದೊಡಗೂಡಿದ ಧೃತರಾಷ್ಟ್ರನು ವನಪ್ರವೇಶ ಮಾಡಿ ಕುರುಕ್ಷೇತ್ರವನ್ನು ತಲುಪಿದನು. ಮತ್ತು ತೀರ್ಥಯಾತ್ರಾಕ್ರಮದಲ್ಲಿ ಲೋಕಗುರುಗಳಾದ ಸಕಲ ಸುರವೃಂದವಂದಿತರಾದ (ಪೂಜಿತರಾದ) ಶ್ರೀವೇದವ್ಯಾಸದೇವರ ನಿವಾಸವಾದ ಬದರಿಕಾಶ್ರಮಕ್ಕೆ ಹೋದನು.

***ಶ್ರೀವಾದಿರಾಜಗುರುಚರಣರ ವ್ಯಾಖ್ಯಾನದಂತೆ ಕೆಲವಿಶೇಷ ವಿಚಾರಗಳು*** – ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಶ್ರೀಮದಾಚಾರ್ಯರು 'ಅನುವವ್ರಾಜ ತಂ ಕುಂತೀ' ಎಂದು ಹೇಳಿದ್ದಾರೆ. 'ಪತಿಂ ಪ್ರಯಾಂತಂ ಸುಬಲಸ್ಯ ಪುತ್ರೀ' ಎಂದು ಭಾಗವತದಲ್ಲಿ ಗಾಂಧಾರಿಯು ಪತಿಯನ್ನನುಸರಿಸಿ ಹೋದಳು ಎಂದು ಉಕ್ತವಾಗಿದೆ. ಹೀಗೆ ತಾತ್ಪರ್ಯನಿರ್ಣಯ ಭಾಗವತ ವಾಕ್ಯಗಳಿಗೆ ವಿರೋಧ ಬಂತಲ್ಲಾ ಎಂದು ಶಂಕಿಸಬಾರದು. ಸುಬಲರಾಜನ ಪುತ್ರಿಯು (ಗಾಂಧಾರಿಯು) ಮಾತ್ರ ಅನುಸರಿಸಿ ಹೋದಳೆಂದು ಹೇಳಿಲ್ಲ. ಆದ್ದರಿಂದ ಉಪಲಕ್ಷಣವೆಂದಿಟ್ಟುಕೊಂಡು ಕುಂತಿಯೂ ಅನುಸರಿಸಿ ಹೋಗಿದ್ದಾಳೆಂದು ತಿಳಿಯಬೇಕು ಹಾಗಲ್ಲದಿದ್ದರೆ "ವೃಕೋದರಃ ಫಲ್ಗುನಶ್ಚೈವ ವೀರೋ ಮಾದ್ರೀಪುತ್ರೌ ವಿದುರಃ ಸಂಜಯಶ್ಚ। ವೇಶ್ಯಾಃ ಪುತ್ರಸ್ಸಹಿತ ಸ್ಸಂಜಯೇನ ಧೌಮ್ಯೋ ವಿಪ್ರಾಶ್ಚಾನ್ವಯುಃ ಬಾಷಕಂಠಾಃ॥" "ಕುಂತೀ ಗಾಂಧಾರೀಮನುಸೃತ್ಯ ಸ್ಕಂಧಾಸಕ್ತಂ ಹಸ್ತಮಥೋದ್ವಹಂತೀ। ರಾಜಾ ಗಾಂಧಾರೀ ಸ್ಕಂಧದೇಶೇಽವಸಜ್ಯ ಪಾಣಿಂ ಯಯೌ ಧೃತರಾಷ್ಟ್ರಃ ಪ್ರತೀತಃ॥" ಇದೇ ಮುಂತಾದ ಭಾರತವಾಕ್ಯಕ್ಕೆ ವಿರೋಧ ಬರುವುದು. ಆದುದರಿಂದ ವನಮಾರ್ಗದಲ್ಲಿ ಹೋಗುವಾಗ ಧೃತರಾಷ್ಟ್ರನು ಗಾಂಧಾರಿಯ ಭುಜವನ್ನು ಹಿಡಿದುಕೊಂಡಿದ್ದನು. ಗಾಂಧಾರಿಯು ಕಣ್ಣಿಗೆ ಬಟ್ಟೆಯನ್ನು ಕಟ್ಟಿಕೊಂಡಿದ್ದುದರಿಂದ ಅವಳು ಕುಂತಿಯ ಭುಜವನ್ನು ಹಿಡಿದುಕೊಂಡು ಹೋದಳು. "ಸಂದರ್ಶಿತಪಥೋ ರಾಜಾ ಕುಂತೀವಿದುರಸಂಜಯೈಃ" ಎಂಬಲ್ಲಿಯೂ, "ಕುಂತೀ ಗಾಂಧಾರೀಮನುಸೃತ್ಯ ವ್ರಜಂತೀ" ಎಂಬ ಭಾರತವಚನವನ್ನು ವಿವೇಚಿಸಿದಾಗ ಕುಂತಿಯ ಭುಜದಲ್ಲಿ ಗಾಂಧಾರಿಯು ಕರವಿಟ್ಟುಕೊಂಡು ಹೋದಳು, ಧೃತರಾಷ್ಟ್ರನು ಗಾಂಧಾರಿಯ ಭುಜದ ಮೇಲೆ ಕೈಯಿಟ್ಟುಕೊಂಡು ಹೋದನು ಎಂತಲೇ ಅರ್ಥಮಾಡಬೇಕು. ಕುಂತೀದೇವಿಯೇ ಅರಣ್ಯದಲ್ಲಿ ಮಾರ್ಗದರ್ಶನ ಮಾಡುತ್ತಿದ್ದಳು. "ಅಗ್ನಿರ್ವಿಸೃಷ್ಟೋ ದತ್ತಶ್ಚ ನರೋ ದಾರಾಶ್ಚ ದೂಷಿತಾಃ" ಮುಂತಾದ ವಾಕ್ಯಗಳಿಂದ ವಿದುರನು ಮನೆಯಲ್ಲಿಯೇ ವೈರಾಗ್ಯ ಮಾರ್ಗವನ್ನು ತೋರಿಸುತ್ತಿದ್ದನೆಂದು ಗ್ರಂಥಕಾರರೇ (ಶ್ರೀನಿರ್ಣಯಾಚಾರ್ಯರೇ) ಹೇಳಿರುವುದರಿಂದ ಮನೆಯಲ್ಲಿ ಸಂಜಯ-ವಿದುರರು ವೈರಾಗ್ಯಮಾರ್ಗಪ್ರದರ್ಶನ ಮಾಡುತ್ತಿದ್ದರೆಂದು, ಸಂದರ್ಭಕ್ಕೆ ತಕ್ಕಂತೆ ಯಥಾಯೋಗ್ಯರೀತಿಯಲ್ಲಿ ಅರ್ಥಮಾಡಬೇಕು. ವಿದುರನು ತೋರಿದ ವೈರಾಗ್ಯಪಥವು ಸುಮ್ಮನಿದ್ದ ಸಂಜಯನಿಗೂ ಸಮ್ಮತವಾಗಿದ್ದುದರಿಂದ ಸಂಜಯನನ್ನೂ ಹಿಡಿಯಬೇಕು. ಅತ ಏವ "ಭ್ರಾತೃಸಂದರ್ಶಿತಾಧ್ವಾ" ಎಂಬ ಭಾಗವತವಚನಕ್ಕೆ ವಿದುರನು ಮನೆಯಲ್ಲಿ ತೋರಿದ್ದು ವೈರಾಗ್ಯಮಾರ್ಗವೇ ಹೊರತು ಅರಣ್ಯಮಾರ್ಗವಲ್ಲ ಎಂದು ತಿಳಿಯಬೇಕು.

ಶ್ರೀವೇದವ್ಯಾಸರ ಆಶ್ರಮದಲ್ಲಿ ಬ್ರಹ್ಮದೇವರ ಪುತ್ರರಾದ (ಬ್ರಹ್ಮಮಾನಸ ಪುತ್ರರಾದ) ದೇವರ್ಷಿ ನಾರದರು ಧೃತರಾಷ್ಟ್ರನಿಗೆ "ಇನ್ನು ಮೂರು ವರ್ಷಗಳ ನಂತರ ಪತ್ನೀಸಹಿತನಾದ ನೀನು ಗಂಧರ್ವಲೋಕವನ್ನು ಪಡೆಯುವೆ. ಅಂದರೆ ಇನ್ನು ಮೂರು ವರ್ಷಕ್ಕೆ ಪತ್ನೀಸಹಿತನಾದ ನಿನಗೆ ಮರಣವಾಗುವುದು" ಎಂದು ಹೇಳಿದರು. ನಾರದರ ಮಾತಿನಲ್ಲಿ ಗೌರವವುಳ್ಳ ಧೃತರಾಷ್ಟ್ರನು ಶ್ರೀವೇದವ್ಯಾಸದೇವರು ಉಪದೇಶಿಸಿದಂತೆ ಸಾಧನ ಮಾಡಿಕೊಳ್ಳಲಾಶಿಸಿ ಶ್ರೇಷ್ಠವಾದ ತಪಸ್ಸನ್ನು ಆಚರಿಸಿದನು.

ವಿದುರ, ಗಾಂಧಾರೀ, ಕುಂತಿಯರಿಂದೊಡಗೂಡಿದ, ಸಂಜಯನಿಂದ ಸಹಿತನಾದ ಧೃತರಾಷ್ಟ್ರನು ಘೋರತಪಸ್ಸಿನಿಂದ ಸ್ವಾಮಿಯಾದ ಶ್ರೀಹರಿಪರಮಾತ್ಮನ ಆರಾಧನೆಯಲ್ಲಿ ಮಗ್ನನಾಗಿರಲು ಹಸ್ತಿನಾವತಿಯಿಂದ ಪತ್ನಿಯರು, ಬಾಂಧವರು ಹಾಗೂ ಸೇವಕರಿಂದ ಸಹಿತರಾದ ಪಾಂಡವರು ಧೃತರಾಷ್ಟ್ರಾದಿಗಳನ್ನು ನೋಡಲು ಆಶ್ರಮಕ್ಕೆ ಬಂದರು.

ಆ ವನದಲ್ಲಿ ವಿದುರನು ಧರ್ಮರಾಜನಲ್ಲಿ ಐಕ್ಯನಾದನು. ಅಂದರೆ ವಿದುರನು ತನ್ನ ಶರೀರವನ್ನು ತ್ಯಜಿಸಿ ಯುಧಿಷ್ಠಿರ ಸ್ವರೂಪದಿಂದ ಐಕ್ಯ ಹೊಂದಿದನು ಅಥವಾ ವಿದುರ-ಧರ್ಮರಾಜನು ಯಮನ ಅಂಶಸಂಜಾತರಾದ್ದರಿಂದ ವಿದುರನೆಂಬ ಯಮಾಂಶನು ಧರ್ಮರಾಜನಲ್ಲಿರುವ ಯಮಾಂಶನಿಂದ ಪರಕಾಯಪ್ರವೇಶರೂಪ ಯೋಗಶಕ್ತಿಯಿಂದ ಏಕೀಭಾವ ಹೊಂದಿದನೆಂದು ತಿಳಿಯಬೇಕು.

ಪಾಂಡವರು, ವಿದುರನು ಶರೀರತ್ಯಾಗ ಮಾಡಿದ ಮೇಲೆ ಸಂಜಯ, ಗಾಂಧಾರಿಯರಿಂದ ಸಹಿತನಾದ ವಿಚಿತ್ರವೀರ್ಯನ ಕುಮಾರನಾದ ಧೃತರಾಷ್ಟ್ರನನ್ನು, ಮಾತಾ ಕುಂತಿಯನ್ನೂ ಸೇವಿಸುತ್ತಿರಲು ಅಮಿತ ಶಕ್ತಿ, ತೇಜಸ್ಸು, ಜ್ಞಾನ, ಅದ್ಭುತ, ಐಶ್ವರ್ಯ, ಸುಖಾದಿರೂಪರಾದ ಶ್ರೀವೇದವ್ಯಾಸರೂಪಿ ಶ್ರೀಹರಿಯು ಅಲ್ಲಿ ಪ್ರಾದುರ್ಭವಿಸಿದನು. ಆಗ ಶ್ರೀವೇದವ್ಯಾಸರನ್ನು ಅತ್ಯುತ್ತಮ ಭಕ್ತಿಯಿಂದ ಪಾಂಡವಾದಿಗಳು ಪೂಜಿಸಿದರು. ಇಂತು ಪಾಂಡವರಿಂದ ಪೂಜಿತರಾದ ಶ್ರೀಬಾದರಾಯಣದೇವರು ಆಸನದಲ್ಲಿ ಮಂಡಿತರಾಗಿ 'ನಿಮ್ಮಲ್ಲಿ ಯಾರು ಯಾರಿಗೆ ಏನೇನು ಅಭೀಷ್ಟಗಳು ಬೇಕೋ ಕೇಳಿರಿ. ಅವನ್ನು ನಾವು ಪೂರೈಸುತ್ತೇವೆ' ಎಂದು ಅಪ್ಪಣೆ ಕೊಡಿಸಿದರು. ಆಗ ಪತ್ನೀಸಹಿತರಾದ ಪಾಂಡವರು ಶ್ರೀಹರಿಯಲ್ಲಿ ಭಕ್ತ್ಯಭಿವೃದ್ಧಿಯನ್ನು ಬೇಡಿದರು. ಕುಂತೀದೇವಿಯು ಕರ್ಣನಿಗೆ ಈ ಜನ್ಮಮರಣಗಳಿಂದುಂಟಾದ ದೋಷಪರಿಹಾರವನ್ನು ಯಾಚಿಸಿದಳು. ದೋಷ ಪರಿಹಾರವೆಂದರೇನು? ಎಂದರೆ ಕುಂತಿಯು ಕನ್ಯೆಯಾಗಿರುವಾಗಲೇ ಕರ್ಣನು ಜನಿಸಿದ್ದರಿಂದ ಜನ್ಮದಲ್ಲಿ ದೋಷವು. ಕರ್ಣನು ನಿಮ್ಮ ಅಣ್ಣನೇ ಎಂದು ಪಾಂಡವರಿಗೆ ತಿಳಿಸದೇ ಮಗನಾದ ಅರ್ಜುನನಿಂದ ಕರ್ಣನ ಸಂಹಾರಕ್ಕೆ ಕಾರಣಳಾದ್ದರಿಂದ ಮರಣದೋಷವು. ಹೀಗೆ ಆ ಎರಡು ದೋಷಗಳು ತನಗೆ ಇದ್ದುದರಿಂದ ಅದರ ಪರಿಹಾರವಾಗುವಂತೆ ಅನುಗ್ರಹಿಸಬೇಕೆಂದು ಕೋರಿದಳೆಂದು ಭಾವವು. ಶ್ರೀವೇದವ್ಯಾಸ ದೇವರು ಪಾಂಡವರ ಮತ್ತು ಕುಂತೀದೇವಿಯ ಅಭೀಷ್ಟಗಳನ್ನು ಪೂರ್ಣಮಾಡಿದರು.

ಆ ತರುವಾಯ ಧೃತರಾಷ್ಟ್ರನು ಗಾಂಧಾರಿಯೊಡನೆ ಸಮಾಲೋಚಿಸಿ ಯುದ್ಧದಲ್ಲಿ ಮೃತರಾದ ತನ್ನ ಪುತ್ರರನ್ನು ಕಾಣಬಯಸಿ ಪ್ರಭುಗಳಾದ ಶ್ರೀವೇದವ್ಯಾಸರನ್ನು ಅದಕ್ಕಾಗಿ ಪ್ರಾರ್ಥಿಸಿದನು. ಸರ್ವನಿಯಾಮಕ ಶ್ರೀವೇದವ್ಯಾಸರ ಅಣತಿಯಂತೆ ಕುರುಕ್ಷೇತ್ರ ಸಮರದಲ್ಲಿ ಮೃತರಾಗಿ ವೀರಮರಣೋಚಿತ ಸ್ವರ್ಗಲೋಕದಿಂದ ಕ್ಷಣಮಾತ್ರದಲ್ಲಿ ಧೃತರಾಷ್ಟ್ರನ ಪುತ್ರರೆಲ್ಲರೂ ಮತ್ತು ಇನ್ನಿತರ ವೀರರೂ ಅಲ್ಲಿಗೆ ಬಂದರು. ಶ್ರೀಕೃಷ್ಣದ್ವೈಪಾಯನರು ತನ್ನೆಲ್ಲ ಪುತ್ರರನ್ನು ಕಣ್ಣಾರೆ ಕಾಣಲು ಧೃತರಾಷ್ಟ್ರನಿಗೆ ದಿವ್ಯದೃಷ್ಟಿಯನ್ನು ಅನುಗ್ರಹಿಸಿದರು. ಗಾಂಧಾರಿಸಹಿತನಾದ ಧೃತರಾಷ್ಟ್ರನು ತನ್ನೆಲ್ಲ ಪುತ್ರರನ್ನು ಕಂಡಾನಂದಿಸಿ ತೃಪ್ತನಾದನು. ಅಭಿಮನ್ಯುವಿನ ಪತ್ನಿ ಮತ್ತು ಪಾಂಡವರೂ ಅಭಿಮನ್ಯುವನ್ನು ಕಂಡು ಮುದಭರಿತನಾದರು. ಆಗ ಶ್ರೀಬಾದರಾಯಣರ ಅಪ್ಪಣೆಯಿಂದಲೇ ಉತ್ತರೆಯನ್ನು ಬಿಟ್ಟು ಮತ್ತೆಲ್ಲರ ಪತ್ನಿಯರೂ ಪತಿಸಹಿತರಾಗಿ ಸ್ವರ್ಗಲೋಕಕ್ಕೆ ತೆರಳಿದರು. ಶ್ರೀವೇದವ್ಯಾಸದೇವರು "ಪುತ್ರಂ ಪರಿಪಾಲಯ" ಎಂದು ಆಜ್ಞಾಪಿಸಿದ್ದರಿಂದ ಉತ್ತರೆಯು ಪತಿಯೊಡನೆ ಸ್ವರ್ಗಕ್ಕೆ ಹೋಗಲಿಲ್ಲ. ಪ್ರಸಂಗ ಸಂಗತಿಯಿಂದ ಮುಂದಿನ ಪರ್ವದ ಕಥಾಭಾಗವನ್ನೀಗ ಹೇಳುವರು.

ಕೌರವರು ತಮ್ಮ ಹಿಂದಿನಂತೆ, ಮಾನವ ಶರೀರಯುಕ್ತರಾಗಿ ಸ್ವರ್ಗದಿಂದ ಬಂದ ತಮ್ಮ ತಮ್ಮ ಪತ್ನಿಯರಿಂದ ಸಹಿತರಾಗಿ ಶ್ರೀವೇದವ್ಯಾಸರ ಅಪ್ಪಣೆಯಿಂದ ಆ ಬದರೀಕ್ಷೇತ್ರದಲ್ಲಿ ಒಂದು ರಾತ್ರಿ ವಾಸ ಮಾಡಿದರು.

ಪರೀಕ್ಷಿದ್ರಾಜನ ಪುತ್ರನಾದ ಜನಮೇಜಯರಾಜನು ಸರ್ವಶಕ್ತಿ ಸಂಪನ್ನರಾದ ಶ್ರೀವೇದವ್ಯಾಸದೇವರಿಂದ ಕರೆಸಲ್ಪಟ್ಟ ತನ್ನ ತಂದೆಯನ್ನು ಕಂಡು ಪರಮಾನಂದಭರಿತನಾಗಿ ಜನಕನನ್ನು ಪೂಜಿಸಿ ಬ್ರಹ್ಮರುದ್ರೇಂದ್ರವಂದ್ಯನಾದ ಶ್ರೀಕೃಷ್ಣನನ್ನು (ಶ್ರೀವೇದವ್ಯಾಸದೇವರನ್ನು) ಭಕ್ತಿಯಿಂದ ಪೂಜಿಸಿ ಕ್ಷಮೆಯನ್ನು ಯಾಚಿಸಿದನು. ಜನಮೇಜಯನು ಪುರಾಣ ಶ್ರವಣಾದರಯುಕ್ತರಾದ ಶ್ರೋತೃಗಳಿಂದ ಸಹಿತನಾಗಿ ಮೃತನಾದ ತಂದೆಯ ದರ್ಶನ ಮಾಡಿದ ಮೇಲೆ ಭಾರತ ಕಥೆಯಲ್ಲಿ ಬರುವ ಬಹುಅದ್ಭುತವಿಚಾರಗಳಲ್ಲಿ ಹೆಚ್ಚಾಗಿ ನಂಬಿಕೆ ತಾಳಿದನು. ಅಂದರೆ ಭಾರತಯುದ್ಧದಲ್ಲಿ ಭೀಮಸೇನನು ಮೇಲೆಸೆದ ಮೇಘಮಂಡಲದಲ್ಲಿ ಸಂಬದ್ಧವಾಗಿದ್ದ ಗಜಗಳು ಈಗಲೂ ಅಲ್ಲಲ್ಲಿ ಕುರುಕ್ಷೇತ್ರದಲ್ಲಿ ಬೀಳುತ್ತಿವೆ. ಹುಟ್ಟು ಕುರುಡನಾದ ಧೃತರಾಷ್ಟ್ರನಿಗೆ ದಿವ್ಯದೃಷ್ಟಿ ಅನುಗ್ರಹಿಸಿ ಮೃತರಾದ ಪುತ್ರರನ್ನು ತೋರಿಸಿದರು – ಮುಂತಾದ ಭಾರತದ ಕಥೆಗಳಲ್ಲಿ ಮೊದಲು ಸಂಶಯತಾಳಿದ್ದ ಜನಮೇಜಯನು ತನ್ನ ಜನಕನನ್ನು ದರ್ಶನಮಾಡಿದ ಮೇಲೆ ಆ ಕಥೆಗಳನ್ನು ಸಂಪೂರ್ಣವಾಗಿ ನಂಬಿದನೆಂದು ಭಾವ.

ಆ ತರುವಾಯ ಪಾಂಡವರು ಶ್ರೀವೇದವ್ಯಾಸದೇವರ ಅನುಗ್ರಹ ಪಡೆದು ಧೃತರಾಷ್ಟ್ರ, ಗಾಂಧಾರಿ, ಕುಂತೀದೇವಿಯರ ಅಪ್ಪಣೆ ಪಡೆದು ಅವರಿಂದ ಬೀಳ್ಕೊಂಡು ಹಸ್ತಿನಾವತಿಗೆ ಬಂದು ಧರ್ಮದಿಂದ ಭೂಮಂಡಲವನ್ನು ಪರಿಪಾಲಿಸುತ್ತಾ, ವಿಷಯ ಸುಖೇಚ್ಛಾರಹಿತರಾಗಿ ಸಕಲಜಗದುದ್ಧಾರಕನಾದ ಶ್ರೀಕೃಷ್ಣಪರಮಾತ್ಮನಲ್ಲಿ ಮನವಿರಿಸಿ, ಸಜ್ಜನರಿಂದ ಅನುಭವಿಸಲು ಯೋಗ್ಯವಾದ ಭೋಗಗಳನ್ನು ಅನುಭವಿಸಿದರು.

ಪಾಂಡವರು, ಮೂರು ವರ್ಷಗಳಾದ ಮೇಲೆ ಅರಣ್ಯದಲ್ಲಿ ಉದ್ಭವಿಸಿದ ಬೆಂಕಿಯಲ್ಲಿ ಧೃತರಾಷ್ಟ್ರ, ಗಾಂಧಾರೀ ಮತ್ತು ಕುಂತೀದೇವಿಯರು ಮೃತರಾದರೆಂಬ ವರ್ತಮಾನವನ್ನು, ಅಗ್ನಿಜ್ವಾಲೆಯಿಂದ ತಪ್ಪಿಸಿಕೊಂಡು ಹಸ್ತಿನಾಪುರಕ್ಕಾಗಮಿಸಿದ ಸಂಜಯನಿಂದ (ಆ ದುಃಖದ ವೃತ್ತಾಂತವನ್ನು) ತಿಳಿದು, ಕಪ್ಪಾದ ಮುಖವುಳ್ಳ (ಕಂದಿದ ಮುಖಯುಕ್ತನಾದ), ಲಜ್ಜೆಯಿಂದ ತಲೆ ತಗ್ಗಿಸಿದ, ಶ್ರೀಹರಿಧ್ಯಾನಾಸಕ್ತನಾದ ಯುಧಿಷ್ಠಿರನು ತನ್ನ ತಂದೆಯ ಅಗ್ರಜನಾದ ಧೃತರಾಷ್ಟ್ರ, ಗಾಂಧಾರಿ ಹಾಗೂ ತಾಯಿಯಾದ ಕುಂತೀದೇವಿಯರ ಮರಣವಾರ್ತೆಯನ್ನು ಕೇಳಿ ಅತಿ ದುಃಖಿತನಾಗಿ ಅವರೆಲ್ಲರ ಔರ್ಧ್ವದೈಹಿಕ ಕರ್ಮಗಳನ್ನು ನೆರವೇರಿಸಿದನು.

ಧೃತರಾಷ್ಟ್ರ, ಗಾಂಧಾರಿ ಹಾಗೂ ಕುಂತೀದೇವಿಯರು ಮರಣ ಕಾಲದಲ್ಲಿ ಮಹಾತ್ಮ್ಯಜ್ಞಾನಪೂರ್ವಕವಾಗಿ ಪುನಃ ಪುನಃ ಶ್ರೀಕೃಷ್ಣಪರಮಾತ್ಮನನ್ನು ಸ್ಮರಿಸುತ್ತಿದ್ದುದರಿಂದ, ಶ್ರೀವಿಷ್ಣುಭಕ್ತಿಯಿಂದ ಪವಿತ್ರೀಭೂತವಾದ ತಪಸ್ಸು ಮುಂತಾದ ಕರ್ಮಾಸಕ್ತರಾಗಿದ್ದ, ತಾರತಮ್ಯಜ್ಞಾನದಿಂದಲೂ ಅತಿಯೋಗ್ಯರಾದ, ಪುತ್ರರಾದ ಪಾಂಡವರು ನೆರವೇರಿಸಿದ ಅಪರಕರ್ಮಗಳುಳ್ಳ, ಸಾಧನಗಳಿಂದ ನಾಶರಹಿತವಾದ, ತಮಗೆ ಉಚಿತವಾದ ಆನಂದೋನ್ನಾಹವನ್ನು ಪಡೆದರು. ಅವರು ಉತ್ತಮಾಧಿಕಾರಿಗಳಾದ್ದರಿಂದ ಶಾಶ್ವತ ಸುಖಾಭಿವೃದ್ಧಿ ಪಡೆದರೆಂದು ಭಾವ.

ಧೃತರಾಷ್ಟ್ರಾದಿಗಳ ಮರಣವಾರ್ತೆಯನ್ನು ತಿಳಿಸಲು ಹಸ್ತಿನಾವತಿಗೆ ಬಂದಿದ್ದ ಸಂಜಯನು ಅಪರಕರ್ಮಗಳೆಲ್ಲ ವಿಧ್ಯುಕ್ತವಾಗಿ ಪೂರ್ಣವಾದ ಮೇಲೆ ಪುನಃ ಶ್ರೀವೇದವ್ಯಾಸದೇವರಸನ್ನಿಧಿಗೆ ಬಂದು ಅವರ ಅನುಗ್ರಹದಿಂದ ತನಗುಚಿತವಾದ ಗತಿಯನ್ನು ಪಡೆದನು. ಇತ್ತ ಹಸ್ತಿನಾಪುರದಲ್ಲಿ ಪಾಂಡವರು ಶ್ರೀಕೃಷ್ಣನ ಸ್ವರ್ಗಲೋಕ ಗಮನವನ್ನು (ವೈಕುಂಠಗಮನವನ್ನು) ನಿರೀಕ್ಷಿಸುತ್ತಾ, ಭೂಮಂಡಲವನ್ನು ಪಾಲಿಸುತ್ತಿದ್ದರು. ಹಿಂದೆ ನಿರೂಪಿಸಿದಂತೆ ಸಕಲ ಭೂಮಂಡಲವನ್ನು ರಕ್ಷಿಸುತ್ತಾ, ಧರ್ಮಾರ್ಥಕಾಮ ಮೋಕ್ಷ ಸಂಪತ್ತುಳ್ಳ ಮಹಾನುಭಾವರಾದ ಪಾಂಡವರು ನಿರಂತರವೂ ಶ್ರೀಹರಿಚರಣಧ್ಯಾನರತರಾಗಿ ರಾಜ್ಯವಾಳುತ್ತಿರಲು ಹದಿನೆಂಟು ವರ್ಷಗಳು ಗತಿಸಿದವು.

**ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಮೂವತ್ತೊಂದನೆಯ ಅಧ್ಯಾಯದ ಕಥಾಸಾರವು ಮುಕ್ತಾಯವಾಯಿತು.**

॥ ಕೃಷ್ಣಾರ್ಪಣಮಸ್ತು ॥

# ದ್ವಾತ್ರಿಂಶಾಧ್ಯಾಯಭಾವಸಂಗ್ರಹ

*ಅವತಾರಿಕೆ:-*

ಈಗ ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು, ಶ್ರೀಮನ್ಮಧ್ವಾಚಾರ್ಯರು ವಿರಚಿಸಿದ ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯ ಗ್ರಂಥದ ಕೊನೆಯ ಅಧ್ಯಾಯ(ಮೂವತ್ತೆರಡನೆಯ ಅಧ್ಯಾಯ)ದ ಭಾವವನ್ನು "ಯೋ ಯಷ್ಟ್ವಾ" ಎಂಬ ಪದ್ಯದೊಡನೆ ಸಂಗ್ರಹಿಸಿ ಗ್ರಂಥವನ್ನು ಪೂರ್ಣಗೊಳಿಸುತ್ತಾರೆ.

**ಯೋ ಯಷ್ಟ್ವಾ ವಿಪ್ರಶಾಪಾದ್ಯದುಕುಲಮವಧೀತ್ ಅರ್ಥಿತೋಽಗಾತ್ಸ್ವಲೋಕಂ**
**ದೇವೈರ್ಭೈಷ್ಮ್ಯಾದ್ಯುಪೇತೋ ಯದನು ನಿಜಪದಂ ಪಾಂಡವಾ ಅಪ್ಯವಾಪುಃ ।**
**ದೈತ್ಯಾ ಯದ್ದ್ವೇಷತೋಽಂಧೇ ತಮಸಿ ನಿಪತಿತಾ ಬುದ್ಧರೂಪೋಽಭವದ್ಯಃ**
**ಕಲ್ಕ್ಯಾತ್ಮಾಂತೇ ಕಲೇರ್ಯಃ ಕುಜನನಿಧನಕೃತ್ ಪಾತು ಸೋಽಸ್ಮಾನ್ ಸುರೇಶಃ ।।32।।**

***ಅನ್ವಯಾರ್ಥ :-*** **ಯಂ** = ಯಾವ ಶ್ರೀಕೃಷ್ಣಪರಮಾತ್ಮನು, **ಯಷ್ಟ್ವಾ** = ಯಜ್ಞವನ್ನಾಚರಿಸಿ, **ವಿಪ್ರಶಾಪಾತ್** = ಬ್ರಾಹ್ಮಣಶಾಪದಿಂದ, **ಯದುಕುಲಂ** = ಯಾದವರ ವಂಶವನ್ನು, **ಅವಧೀತ್** = ಸಂಹಾರಮಾಡಿದನೋ, **ದೇವೈಃ** = ದೇವತೆಗಳಿಂದ, **ಅರ್ಥಿತಃ** = ಪ್ರಾರ್ಥಿತನಾಗಿ, **ಭೈಷ್ಮ್ಯಾದ್ಯುಪೇತಃ ಸನ್** = ರುಕ್ಮಿಣೀ-ಸತ್ಯಭಾಮಾದೇವಿಯರಿಂದೊಡ-ಗೂಡಿ, **ಸ್ವಲೋಕಂ** = ತನ್ನದಾದ ವೈಕುಂಠಲೋಕಕ್ಕೆ, **ಅಗಾತ್** = ಹೋದನೋ, **ಯದನು** = ಆ ತರುವಾಯ, ಭಗವಾನ್ ಶ್ರೀಕೃಷ್ಣನು, ವೈಕುಂಠ ಲೋಕಕ್ಕೆ ದಯಮಾಡಿಸಿದಮೇಲೆ, **ಪಾಂಡವಾ ಅಪಿ** = ಪಾಂಡುಪುತ್ರರಾದ ಧರ್ಮರಾಜಾದಿಗಳೂ ಸಹ, **ನಿಜಪದಂ** = ತಮ್ಮ ತಮ್ಮ ಸ್ಥಾನಗಳನ್ನು (ಪದಗಳನ್ನು), **ಅವಾಪುಃ** = ಪಡೆದರು. **ಯದ್ದ್ವೇಷತಃ** - **ಯತ್** = ಯಾವ ಶ್ರೀಹರಿಯ ಮೇಲಿನ, **ದ್ವೇಷತಃ** = ದ್ವೇಷದಿಂದ, **ದೈತ್ಯಾಃ** = ದೈತ್ಯರುಗಳು, **ಅಂಧೇತಮಸಿ** = ಅಂಧಂತಮಸ್ಸಿನಲ್ಲಿ, **ನಿಪತಿತಾಃ** = ಬಿದ್ದರೋ, **ಯಃ** = ಯಾವ ಕೃಷ್ಣನು ಬುದ್ಧರೂಪಿಯಾದನೋ, **ಯಃ** = ಯಾವನು, **ಕಲೇಃ** = ಕಲಿಯುಗದ, **ಅಂತ್ಯೇ** = ಕೊನೆಯಲ್ಲಿ, **ಕಲ್ಕ್ಯಾತ್ಮಾ ಸನ್** = ಕಲ್ಕಿಸ್ವರೂಪನಾಗಿ, (ಕಲ್ಕ್ಯಾವತಾರತಾಳಿ), **ಕುಜನನಿಧನಕೃತ್** = ದುರ್ಜನರ ಸಂಹಾರ ಮಾಡಿದನೋ, **ಸಃ** = ಅಂತಹ, **ಸುರೇಶಃ** = ಬ್ರಹ್ಮರುದ್ರೇಂದ್ರಾದಿ ದೇವತೆಗಳಿಗೆ ಪ್ರಭುವಾದ, **ಮುಕುಂದಃ** = ಶ್ರೀಹರಿ ಪರಮಾತ್ಮನು, **ಅಸ್ಮಾನ್** = ನಮ್ಮನ್ನು, **ಪಾತು** = ರಕ್ಷಿಸಲಿ.

***ತಾತ್ಪರ್ಯ :-*** ಶ್ರೀಕೃಷ್ಣಪರಮಾತ್ಮನು ದಿವ್ಯವೂ ಮಂಗಳಕರವೂ ಆದ ಯಜ್ಞವನ್ನು ನೆರವೇರಿಸಿ ಅನಂತರ ಬ್ರಾಹ್ಮಣರ ಶಾಪದಿಂದ ಯಾದವ ಕುಲವನ್ನು ನಾಶಪಡಿಸಿದವನಾಗಿ, ಬ್ರಹ್ಮಾದಿ ದೇವತೆಗಳಿಂದ ಪ್ರಾರ್ಥಿತನಾಗಿ, ರುಕ್ಮಿಣೀ, ಸತ್ಯಭಾಮಾ ಮುಂತಾದವರೊಡನೆ ಸಹಿತನಾಗಿ, ತನ್ನದಾದ ವೈಕುಂಠಲೋಕಕ್ಕೆ ದಿಗ್ವಿಜಯ ಮಾಡಿದನು. ಇತ್ತ ಪಾಂಡುಕುಮಾರರಾದ ಧರ್ಮನಂದನಾದಿಗಳೂ ಸಹ ತಮ್ಮ ತಮ್ಮ ಮೂಲರೂಪದ ಸ್ಥಾನಗಳನ್ನು ಪಡೆದರು. ಶ್ರೀಕೃಷ್ಣರೂಪೀ ಹರಿಯ ಮೇಲಿನ ದ್ವೇಷದ ಪರಿಣಾಮವಾಗಿ ದೈತ್ಯರೆಲ್ಲರೂ ಅಂಧಃತಮಸ್ಸಿಗೆ ತಳ್ಳಲ್ಪಟ್ಟರು. ಅನಂತರ ಶ್ರೀಹರಿಯು ತನ್ನ ಒಂಭತ್ತನೆಯ ಬುದ್ಧಾವತಾರ ತಾಳಿದನು. ಅದಾದ ಬಳಿಕ ಕಲಿಯುಗದ ಅಂತ್ಯದಲ್ಲಿ ಕಲ್ಕಿಯ ಅವತಾರವನ್ನೆತ್ತಿ ದುಷ್ಟ ಜನರನ್ನು ಸಂಹಾರ ಮಾಡಿದನು. ಅಂಥಾ ಬ್ರಹ್ಮರುದ್ರೇಂದ್ರಾದಿ ವೃಂದಾರಕವೃಂದಕ್ಕೆ ಸ್ವಾಮಿಯಾದ ಶ್ರೀಹರಿಪರಮಾತ್ಮನು ನಮ್ಮೆಲ್ಲರನ್ನೂ ಕಾಪಾಡಲಿ ಎಂದು ತಾತ್ಪರ್ಯ.

*ಸಮಾಪ್ತಿ ಮಂಗಲಮ್:-*

**ಮಹಾಭಾರತತಾತ್ಪರ್ಯನಿರ್ಣಯಾಶಯಸಂಗ್ರಹಃ ।**
**ರಾಘವೇಂದ್ರೇಣ ಯತಿನಾ ಕೃತಃ ಸಜ್ಜನಸಂವಿದೇ ॥**

ಶ್ರೀರಾಘವೇಂದ್ರತೀರ್ಥ ಯತಿವರ್ಯರಿಂದ ಶ್ರೀಮನ್ಮಧ್ವಾಚಾರ್ಯರು ರಚಿಸಿದ ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದ ಅಭಿಪ್ರಾಯ ಸಂಗ್ರಹವು ಸಜ್ಜನರುಗಳ ಸನ್ನಿಧಿಯಲ್ಲಿ. ಅವರ ಜ್ಞಾನಭಕ್ತ್ಯಾಭಿವೃದ್ಧಿಗಾಗಿ ರಚಿಸಿ ಅರ್ಪಿಸಲ್ಪಟ್ಟಿತು ಎಂದು ತಾತ್ಪರ್ಯ.

## ಮೂವತ್ತೆರಡನೆಯ ಅಧ್ಯಾಯದ ಕಥಾಸಾರ

### ಪಾಂಡವರ ಸ್ವರ್ಗಾರೋಹಣ

**ಕುರುಕ್ಷೇತ್ರದಲ್ಲಿ ಶ್ರೀಕೃಷ್ಣನು ಮಾಡಿದ ದ್ವಾದಶಾಬ್ದಸತ್ರ -** ಪಾಂಡವರು ಹದಿನೆಂಟು ವರ್ಷಪರ್ಯಂತವಾಗಿ ಭೂಮಿಯನ್ನು ಆಳಿದ ನಂತರ, ಶ್ರೀಕೃಷ್ಣ ಪರಮಾತ್ಮನು ಹನ್ನೆರಡು ವರ್ಷಗಳಿಂದ ಮಾಡಲು ಶಕ್ಯವಾದ ಯಜ್ಞದಲ್ಲಿ (ದ್ವಾದಶಾಬ್ದಸತ್ರದಲ್ಲಿ) ದೀಕ್ಷೆಯನ್ನು ಹೊಂದಿದನು. ವೇದವ್ಯಾಸ-ಪರಶುರಾಮರ ಸ್ವರೂಪಭೂತನಾದ, ಅಜನಾದ ಮತ್ತು ಅಪ್ರಮೇಯನಾದ ಆ ಯಾದವಕೃಷ್ಣನೇ ಯಾಗದಲ್ಲಿ ಮಂತ್ರಪೂರ್ವಕ ವಿಧಿಯನ್ನು ಹೇಳುವ ಸದಸ್ಯನ ಕಾರ್ಯವನ್ನು ನಿರ್ವಹಿಸಿದನು. ಅವನು ಯಜ್ಞಸಭೆಯಲ್ಲಿ ಮಾಡಲ್ಪಡುವ ಎಲ್ಲ ಕಾರ್ಯ-ಕಲಾಪಗಳ ಕೌಶಲದಲ್ಲಿ ನಿಯಾಮಕನ ಕಾರ್ಯವನ್ನು ವಹಿಸಿದನು.

ಆ ಯಜ್ಞದಲ್ಲಿ ದಕ್ಷ, ಭೃಗು ಇವರೇ ಮೊದಲಾದ ಋಷಿಗಳು ಪ್ರಧಾನ ಋತ್ವಿಕರು ಆಗಿದ್ದರು. ಶ್ರೀಹರಿಯ ಪರಮಭಕ್ತರಾದ ಯಾದವಶ್ರೇಷ್ಠರು, ಪಾಂಡವರು ಹಾಗೂ ಬ್ರಹ್ಮ-ರುದ್ರ-ಇಂದ್ರಾದಿ ದೇವತೆಗಳು ಅತ್ಯಂತ ಭಕ್ತಿಯಿಂದ ಯಜ್ಞದಲ್ಲಿ ಸೇವಕರುಗಳಾಗಿ ಕಾರ್ಯಗಳನ್ನು ಮಾಡಿದರು. ಭೂಮಿಯಲ್ಲಿರುವ ಸಕಲ ಜೀವಿಗಳು, ಅಂತರಿಕ್ಷ-ಸ್ವರ್ಗ-ಮಹದಾದಿ ಮೇಲಿನ ಲೋಕಗಳಲ್ಲಿ ವಾಸವಾಗಿರುವ ಜೀವಿಗಳು, ಮತ್ತು ಪಾತಾಳಾದಿ ಸಪ್ತಲೋಕಗಳಲ್ಲಿರುವ ನಾಗರು ಮೊದಲಾದ ಶ್ರೀಕೃಷ್ಣಪರಮಾತ್ಮನ ಪಾದಾಶ್ರಿತರಾದವರೆಲ್ಲರೂ ಈ ಯಜ್ಞದಲ್ಲಿ ಪಾಲ್ಗೊಂಡು ಸಂತೋಷಪಟ್ಟರು.

ದೇವತೆಗಳ ಪರಸ್ಪರವಾದ ಮತ್ತು ಬ್ರಾಹ್ಮಣರ ಪರಸ್ಪರವಾದ ವಾದ-ವಿವಾದಗಳಿಂದಲೂ, ಹಾಗೂ ವೇದವ್ಯಾಸ-ಪರಶುರಾಮ ಸ್ವರೂಪಿಯಾದ ಶ್ರೀಕೃಷ್ಣನ ವಾಕ್ಯಗಳಿಂದಲೂ, ತತ್ವನಿರ್ಣಯವನ್ನು ಬಯಸುವ ಜಿಜ್ಞಾಸುಗಳಿಗೆ ಈ ಯಜ್ಞದಲ್ಲಿ ತತ್ವಗಳ ವಿಶೇಷವಾದ ನಿರ್ಣಯವು ಉಂಟಾಯಿತು. ಜರಾಮರಣರಹಿತ ದೇವತೆಗಳು, ಮನುಷ್ಯರು ಇವರೇ ಮೊದಲಾದ ಸಕಲರೂ ಈ ಯಜ್ಞಭೂಮಿಯಲ್ಲಿ ಯಥೇಷ್ಟವಾಗಿ ಪಾನ-ಅಶನ-ವಸ್ತ್ರಗಳನ್ನು ಹೊಂದಿದವರಾಗಿ ಸಂಚಾರ ಮಾಡುತ್ತಿದ್ದರು. ಪುರುಷಾರ್ಥಗಳನ್ನು ಇಚ್ಛಿಸುವ ಸಮಸ್ತ ಜನರುಗಳಿಗೆ ಈ ಯಜ್ಞದಲ್ಲಿ ಧರ್ಮ-ಅರ್ಥ-ಕಾಮಗಳೂ ಮತ್ತು ಮೋಕ್ಷವೂ ಶ್ರೀಕೃಷ್ಣಪರಮಾತ್ಮನಿಂದ ಪ್ರಾಪ್ತವಾದವು. ಯಾಗಸಮಯದಲ್ಲಿ ಕುರುಕ್ಷೇತ್ರದ ಯಜ್ಞಭೂಮಿಯು ಶ್ರೀಹರಿಯ ಲೋಕವಾದ ವೈಕುಂಠಕ್ಕೆ ಸದೃಶವಾಗಿತ್ತು. ಇದಕ್ಕೆ ಮುಖ್ಯಕಾರಣಗಳೆಂದರೆ – ಸಕಲ ಸಜ್ಜನರುಗಳು ಒಂದೆಡೆ ಸಮಾಗಮವಾಗಿರುವುದು, ಅವರು ತಮ್ಮ ಸಕಲ ಕಾಮನೆಗಳನ್ನು ಈಡೇರಿಸಿಕೊಂಡಿರುವುದು, ಹಾಗೂ ಮುಖ್ಯವಾಗಿ ಶ್ರೀಕೃಷ್ಣಪರಮಾತ್ಮನ ದರ್ಶನವನ್ನು ಅನಾಯಾಸವಾಗಿ ಹೊಂದಲು ಶಕ್ಯವಾಗಿರುವುದು.

ಹೀಗೆ ಶ್ರೀ ಕೃಷ್ಣಪರಮಾತ್ಮನು ಹನ್ನೆರಡುವರ್ಷಗಳ ಕಾಲ ಇಂಥ ಮಹತ್ತಾದ ಯಜ್ಞವನ್ನು ಸಮಾಪನಗೊಳಿಸಿ, ಅವಭೃತ ಸ್ನಾನವನ್ನು ಮಾಡಿ, ಪೂಜಾರ್ಹರಾದವರೆಲ್ಲರನ್ನೂ ಆದರದಿಂದ ಸತ್ಕರಿಸಿ, ಆಹ್ವಾನಿತರಾಗಿ ಬಂದ ಅತಿಥಿಗಳನ್ನು ಸನ್ಮಾನ ಪೂರ್ವಕವಾಗಿ ಕಾಲಕ್ರಮದಿಂದ ಒಂದು ವರ್ಷಪರಿಮಿತವಾದ ಅವಧಿಯಲ್ಲಿ ಆಜ್ಞಾಪಿಸಿ ಕಳುಹಿಸಿಕೊಟ್ಟನು.

***ಯಾದವರಿಗೆ ವಿಪ್ರಶಾಪ ಮತ್ತು ಉದ್ಧವನಿಗೆ ತತ್ವೋಪದೇಶ*** - ಅನಂತರ ಶ್ರೀಕೃಷ್ಣಪಮಾತ್ಮನು ತನ್ನ ಯಾದವಕುಲವನ್ನು ಸಂಹರಿಸಲಿಕ್ಕೆ ಇಚ್ಛಿಸಿದವನಾಗಿ, ಬ್ರಾಹ್ಮಣ ಶಾಪವನ್ನು ಉಂಟು ಮಾಡಿದನು. ಯಾದವರು ಜಾಂಬವತೀ ಪುತ್ರನಾದ ಸಾಂಬನಿಗೆ ಗರ್ಭಿಣೀಸ್ತ್ರೀಯ ವೇಷವನ್ನು ತೊಡಿಸಿ, "ಆನಳು ಎಂತಹ ಮಗುವನ್ನು ಹೆರುವಳು?" ಎಂಬುದಾಗಿ ಅಲ್ಲಿಗೆ ಆಗಮಿಸಿದ್ದ ನಾರದ, ಕಶ್ಯಪ, ವಿಶ್ವಾಮಿತ್ರ ಮೊದಲಾದ ಮಹಾಮುನಿಗಳನ್ನು ಪರೀಕ್ಷಿಸಲೆಂದು ಕೇಳಿದರು. ಅವರು ಜ್ಞಾನದೃಷ್ಟಿಯಿಂದ ವಿಷಯವನ್ನು ತಿಳಿದು, 'ಇವಳು ನಿಮ್ಮ ವಂಶವನ್ನೆಲ್ಲ ನಾಶಮಾಡುವ ಒನಕೆಯೊಂದನ್ನು ಹೆರುವಳು' ಎಂದು ಶಪಿಸುವರು. ಇದು ಶ್ರೀಕೃಷ್ಣನೇ ಯದುಕುಲವನ್ನು ಸಂಹರಿಸಲೆಂದು ನಿಮಿತ್ತವಾಗಿ ಸೃಷ್ಟಿಸಿದ ಬ್ರಾಹ್ಮಣ ಶಾಪವು. ಶ್ರೀಕೃಷ್ಣನು ಉದ್ಧವನಿಗೆ ಉತ್ಕೃಷ್ಟವಾದ ಜ್ಞಾನವನ್ನು ಉಪದೇಶಮಾಡಿ, ಬದರಿಕಾಶ್ರಮಕ್ಕೆ ಕಳುಹಿಸಿ ಕೊಟ್ಟನು.

***ಶ್ರೀಕೃಷ್ಣನಿಂದ ಭೂಮಿಯ ಪರಿಪಾಲನೆ*** - ಶ್ರೀಕೃಷ್ಣನು ತನ್ನ ಅವತಾರ ಕಾಲದ ಪರಿಸಮಾಪ್ತಿಯನ್ನು (107 ವರ್ಷಗಳ ಅವಧಿ) ನಿರೀಕ್ಷಿಸುತ್ತ, ಪಾಂಡವರಿಂದ ಸಹಿತನಾಗಿ ಭೂಮಿಯನ್ನು ರಕ್ಷಿಸುತ್ತ ಇದ್ದನು. ದುರ್ಯೋಧನನು ಭೂಮಿಯಲ್ಲಿ ಪತನಹೊಂದಿದ ಸಮಯದಿಂದಲೇ ಕಲಿಯಗವು ಪ್ರಾರಂಭವಾಗಿರುವುದು. ಕಲಿಯುಗವು ಪ್ರಾರಂಭವಾದ ಮೇಲೆಯೂ ಶ್ರೀಕೃಷ್ಣನು 36 ವರ್ಷಗಳವರೆಗೆ, ಅಂದರೆ ಭೂಮಿಯಲ್ಲಿ ತನ್ನ ಅವತಾರ ಪರಿಸಮಾಪ್ತಿ ಮಾಡುವ ಕಾಲದ ಪರ್ಯಂತವಾಗಿ, ಕಲಿಯುಗವನ್ನು ಕೃತಯುಗದಂತೆಯೇ ಪ್ರವರ್ತಿಸಿದನು. ಕಲಿಯ ಪ್ರಭಾವವು ಸಜ್ಜನರನ್ನು ಸಂತಾಪಗೊಳಿಸಲು ಅಸಮರ್ಥ-ವಾಗುವಂತೆ ಮಾಡಿದನು. ಕಲಿಯುಗದ ಸ್ವಭಾವದಿಂದ ಮತ್ತು ಶ್ರೀಕೃಷ್ಣಪರಮಾತ್ಮನ ಆಜ್ಞೆಯಿಂದ, ಅಲ್ಪವಾದ ಪುಣ್ಯಕ್ಕೆ ಅಧಿಕಫಲ ಮತ್ತು ಅಧಿಕವಾದ ಪಾಪಕ್ಕೆ ಅಲ್ಪಫಲ ಎನ್ನುವ ವ್ಯವಸ್ಥೆಯು ಆ ಕಾಲದಲ್ಲಿ ಸಾಧ್ಯವಾಯಿತು. ಆದ್ದರಿಂದ ಕಲಿಯುಗದ ವೈಭವವು ಕೃತಯುಗದಂತೆಯೇ ತೋರಿತು. ಕಾಲಪ್ರವರ್ತಕನಾದ ಪರಮಾತ್ಮನಿಂದಲೇ ಇದು ಸಾಧ್ಯ.

***ಬ್ರಹ್ಮಾದಿದೇವತೆಗಳಿಂದ ಅವತಾರದ ಪರಿಸಮಾಪ್ತಿಗೆ ಪ್ರಾರ್ಥನೆ*** - ಅತ್ಯಂತ ಧರ್ಮಿಷ್ಠವಾದ ಮತ್ತು ಹರಿಭಕ್ತಿಯಿಂದ ಕೂಡಿದ ಜಗತ್ತಿನಲ್ಲಿ ಕಲಿಯ ಧರ್ಮಗಳು ಶ್ರೀಕೃಷ್ಣಪರಮಾತ್ಮನ ಪ್ರಭಾವದಿಂದ ಭೂಮಿಯಲ್ಲಿ ನಷ್ಟವಾಗುತ್ತ ಬಂದವು. ಆಗ ಕಲಿಯುಗದ ಸ್ವಾಭಾವಿಕವಾದ ಧರ್ಮಪ್ರವೃತ್ತಿಯನ್ನು ಇಚ್ಛಿಸಿದ ಬ್ರಹ್ಮರುದ್ರಾದಿ ದೇವತೆಗಳು, ಅನಿಷ್ಟ-ದೇಹಹಾನಿ-ದುಃಖ ಪ್ರಾಪ್ತಿ-ಅಪೂರ್ಣತ್ವರೂಪವಾದ ಚತುರ್ವಿಧ ನಾಶರಹಿತನಾದ ಶ್ರೀಕೃಷ್ಣನನ್ನು ಸ್ತೋತ್ರಮಾಡಿ, ಅವನು ತನ್ನ ಲೋಕಕ್ಕೆ ಹಿಂತಿರುಗಬೇಕೆಂದು ವಿಜ್ಞಾಪಿಸಿದರು. ಅವರ ಪ್ರಾರ್ಥನೆಯನ್ನು ಮನ್ನಿಸಿ ಪರಮಾತ್ಮನು 'ತಥಾಸ್ತು' ಎಂದು ಹೇಳಿದನು.

***ಯದುಕುಲದ ಉಪಸಂಹಾರ*** - ಸಜ್ಜನರೇ ಭೂಮಿಯಲ್ಲಿ ಬಹು ಸಂಖ್ಯೆಯಲ್ಲಿ ಇದ್ದರೆ ಕಲಿಯುಗದ ಪ್ರಾಬಲ್ಯವು ಸರಿಯಾಗಿ ಆಗಲಾರದು. ಆದ್ದರಿಂದ ಕೃಷ್ಣಭಕ್ತರಾದ, ದೇವಾಂಶ ಸಂಭೂತರಾದ ಯಾದವರು ಭೂಮಿಯಲ್ಲಿದ್ದರೆ ಕಲಿಯ ಪ್ರಾಬಲ್ಯವು ಸರಿಯಾಗಿ ಆಗದು ಎಂಬ ಅಭಿಪ್ರಾಯದಿಂದಲೂ, ಮತ್ತು ಸಾಮಾನ್ಯ ದೇವತೆಗಳ ಅವತಾರಭೂತರಾದ ಯಾದವರು ಕಲಿಯ ಪ್ರಭಾವದಿಂದ ಮನೋವಿಕಾರಗಳನ್ನು ಹೊಂದಿ ತಾವು ಸಂಪಾದಿಸಿದ ಪುಣ್ಯದ ನಾಶವನ್ನು ಮಾಡಿ-ಕೊಳ್ಳದಿರಲಿ ಎಂಬ ಅಭಿಪ್ರಾಯದಿಂದಲೂ, ಸರ್ವಸಮರ್ಥನಾದ ಶ್ರೀಕೃಷ್ಣನು ತನ್ನ ಕುಲದ ಸಂಹಾರಕ್ಕಾಗಿ, ಯಾದವರನ್ನು ಪ್ರಭಾಸಕ್ಷೇತ್ರಕ್ಕೆ ಕರೆದುಕೊಂಡು ಹೋದನು.

ಪುಣ್ಯಕ್ಷೇತ್ರವಾಗಿದ್ದರೂ ಸ್ವಗೃಹದಲ್ಲಿ ಮರಣವು ಹೆಚ್ಚು ಪುಣ್ಯವನ್ನು ಕೊಡುವದಿಲ್ಲ. ಸ್ವಲ್ಪವಾದರೂ ದೂರವಾದರೂ ಬೇರೊಂದು ಪುಣ್ಯಕ್ಷೇತ್ರಕ್ಕೆ ಹೋಗಿ ಮೃತರಾದರೆ ಮಹಾಫಲವು ಬರುವದು. ಇದು ಧರ್ಮಶಾಸ್ತ್ರಗಳಿಂದ ನಿರ್ಣೀತವಾದುದು. ಇದನ್ನು ಪ್ರಕಾಶಪಡಿಸುವದಕ್ಕಾಗಿಯೇ, ಶ್ರೀಕೃಷ್ಣಪರಮಾತ್ಮನು ತನ್ನ ಬಂಧುಗಳಾದ ಯಾದವರನ್ನು ಅಂತ್ಯಕಾಲದಲ್ಲಿ ಕುಶಸ್ಥಲಿಯಿಂದ (ದ್ವಾರಕೆಯಿಂದ) ಪ್ರಭಾಸಕ್ಷೇತ್ರಕ್ಕೆ ಕರೆದುಕೊಂಡು ಹೋದನು. ಅಲ್ಲಿ ಅವರಿಂದ ದಾನ ಮೊದಲಾದ ಸದ್ಧರ್ಮಗಳನ್ನು ಮಾಡಿಸಿದನು. ಸ್ನಾನದಾನಾದಿಗಳನ್ನು ಮಾಡಿದ ಮೇಲೆ, ಆ ಯಾದವರು 'ಸಾಂಬಗರ್ಭದಲ್ಲಿ ಹುಟ್ಟಿದ

ಮುಸಲದಿಂದ ಯಾದವ ಕುಲವು ನಾಶವಾಗಲಿ' ಎಂಬ ವಿಪ್ರಶಾಪದ ನಿಮಿತ್ತದಿಂದ ಶ್ರೀಕೃಷ್ಣನಿಂದಲೇ ಮೋಹವನ್ನು ಹೊಂದಿದವರಾಗಿ, ಮಧುಪಾನದಿಂದ ಮತ್ತರಾಗಿ, ಒಬ್ಬರನ್ನೊಬ್ಬರು ದೂಷಿಸುತ್ತಾ, ಪರಸ್ಪರವಾಗಿ ಹೊಡೆದಾಡಿದರು. ಪೂರ್ವದಲ್ಲಿ ಅವರು ವಿಪ್ರಶಾಪದಿಂದ ಹುಟ್ಟಿದ ಒನಕೆಯನ್ನು ಅರೆದು ಪುಡಿಮಾಡಿ ಸಮುದ್ರದಲ್ಲಿ ಬೆರೆಸಿದ್ದರು. ಅದುವೇ ಸಮುದ್ರದ ದಂಡೆಯಲ್ಲಿ 'ಐರಕ' ಎಂಬ ಹುಲ್ಲಿನ ರೂಪದಲ್ಲಿ ಹುಟ್ಟಿತ್ತು. ಯಾದವರು ಸಮುದ್ರದಡದಲ್ಲಿಯ ಈ ವಿಶಿಷ್ಟ ರೀತಿಯ ಐರಕವೆಂಬ ಹುಲ್ಲಿನಿಂದಲೇ ಒಬ್ಬನ್ನೊಬ್ಬರು ಹೊಡೆದುಕೊಂಡು, ತಮ್ಮ ಅವತಾರ ಶರೀರಗಳನ್ನು ನಾಶಪಡಿಸಿ-ಕೊಂಡು, ಮೂಲರೂಪವನ್ನು ಹೊಂದಿದರು. ಅವರ ಮೋಹನ-ಸಂಹಾರಾದಿಗಳಿಗೆ ಶ್ರೀಕೃಷ್ಣನೇ ಮುಖ್ಯ ಕಾರಣನು. ಶಾಪಾದಿಗಳು ಅಮುಖ್ಯ ಕಾರಣಗಳು.

***ಪಾಂಡವರಿಗೆ ದಾರುಕನ ಮೂಲಕ ಸಂದೇಶ*** - ಆಮೇಲೆ ಸರ್ವೋತ್ತಮನೂ, ಅಪರಿಮಿತ ಸಾಮರ್ಥ್ಯವುಳ್ಳವನೂ, ಬ್ರಹ್ಮಾದಿಗಳಿಗೆ ನಿಯಾಮಕನೂ ಆದ ಶ್ರೀಕೃಷ್ಣನು, ತನ್ನ ಅನಂತರದಲ್ಲಿ ಪಾಂಡವರೂ ಕೂಡ ತಮ್ಮ ತಮ್ಮ ಲೋಕಗಳಿಗೆ ತೆರಳಬೇಕು ಎಂದು ತಿಳಿಸಿಕೊಡುವುದಕ್ಕಾಗಿಯೇ, ತನ್ನ ಸಾರಥಿಯಾದ ದಾರುಕನನ್ನು ಪಾಂಡವರ ಬಳಿಗೆ ತ್ವರೆಯಿಂದ ಕಳುಹಿಸಿಕೊಟ್ಟನು.

***ಜರಾ ನಾಮಕ ಬೇಡನಿಗೆ ಶ್ರೀಕೃಷ್ಣನಿಂದ ಸದ್ಗತಿ ಪ್ರದಾನ*** - ದಾರುಕನು ಹೊರಟು ಹೋದ ಮೇಲೆ, ಸರ್ವೇಶ್ವರನಾದ ಶ್ರೀಕೃಷ್ಣನು ಒಂದು ಅಶ್ವತ್ಥವೃಕ್ಷದ ಬುಡದಲ್ಲಿ ತನ್ನ ತೊಡೆಯ ಮೇಲೆ ಅತ್ಯಂತ ಕೆಂಪಾಗಿದ್ದ ತನ್ನ ಪಾದತಲವನ್ನು ಇಟ್ಟುಕೊಂಡು ಕುಳಿತಿದ್ದನು. ಸ್ವಲ್ಪ ದೂರದಲ್ಲಿ ಇದ್ದ 'ಜರಾ' ಎಂಬ ಹೆಸರಿನ ಒಬ್ಬ ವ್ಯಾಧನು, ಅತ್ಯಂತ ಕೆಂಪಾದ ಶ್ರೀಕೃಷ್ಣನ ಪಾದತಲವನ್ನು ನೋಡಿ, ಅದನ್ನು ಮೃಗವಿಶೇಷವೆಂದು ಶಂಕಿಸಿ, ಬಾಣವನ್ನು ಪ್ರಯೋಗಿಸಿದನು. ಜರಾ ಬೇಡನು ಶ್ರೀಕೃಷ್ಣಪರಮಾತ್ಮನ ಶ್ರೇಷ್ಠ ಭಕ್ತನು. ಆದರೂ ಮೃಗವೆಂದು ತಿಳಿದದ್ದನ್ನು ಸಂಹಾರ ಮಾಡುವುದಕ್ಕೆ ಬಾಣವನ್ನು ಪ್ರಯೋಗಿಸಿದನು. ವ್ಯಾಧನು ಪ್ರಯೋಗಿಸಿದ ಬಾಣದ ತುದಿಯು, ವಿಪ್ರಶಾಪದಿಂದ ಹುಟ್ಟಿದ್ದ ಮುಸಲದ (ಒನಕೆಯ) ಕಬ್ಬಿಣದಿಂದಲೇ ನಿರ್ಮಾಣ ಮಾಡಲ್ಪಟ್ಟಿತ್ತು. ವಿಪ್ರಶಾಪದ ಮಹತ್ವವನ್ನು ಜಗತ್ತಿಗೆ ತೋರಿಸಲೆಂದೇ ಪರಮಾತ್ಮನಿಂದ ಹೀಗೆ ನಿಯೋಜಿಸಲ್ಪಟ್ಟಿತ್ತು. ಕೃಷ್ಣನ ದೇಹವು ಛೇದಿಸಲಿಕ್ಕೆ ಮತ್ತು ಭೇದಿಸಲಿಕ್ಕೆ ಅಶಕ್ಯವಾದುದು. ಆ ಬಾಣವು ಶ್ರೀಕೃಷ್ಣನ ಪಾದಕ್ಕೆ ಬೀಳುತ್ತಿರುವಾಗ ಸಮೀಪಕ್ಕೆ ತಲುಪಿದ ವ್ಯಾಧನು, ಶ್ರೀಕೃಷ್ಣಪರಮಾತ್ಮನನ್ನು ನೋಡಿ ಭಯಗ್ರಸ್ತನಾಗಿ ಭೂಮಿಯಲ್ಲಿ ಬಿದ್ದನು. 'ತಾನು ಮಾಡಿರುವ ಶರಪ್ರಹಾರರೂಪ ಅಕ್ಷಮ್ಯ ಅಪರಾಧವನ್ನು ಮನ್ನಿಸು' ಎಂದು ಪ್ರಾರ್ಥಿಸಿ, ಪರಮಾತ್ಮನ ಪಾದಗಳಿಗೆ ಎರಗಿದನು.

ಈ ವ್ಯಾಧನು ಯಾರೆಂದರೆ, ಪೂರ್ವದಲ್ಲಿ ಶ್ರೀಹರಿಗೆ ಪಾದಪ್ರಹಾರ ಮಾಡಿದ್ದರಿಂದ ಉಂಟಾದ ದೋಷದಿಂದ ನೀಚವಾದ ವ್ಯಾಧಯೋನಿಯನ್ನು ಹೊಂದಿದ ಆ ಭೃಗು ಋಷಿಯು. ತಾನು ಮಾಡಿದ ಕಾರ್ಯದಿಂದ ಪಶ್ಚಾತ್ತಾಪವನ್ನು ಹೊಂದಿ, ಅತ್ಯಂತ ಭಕ್ತಿಯುಕ್ತನಾದ ಆ ವ್ಯಾಧ ಶರೀರವುಳ್ಳವನು. ಎಲ್ಲವನ್ನೂ ತಿಳಿದಿದ್ದ ಶ್ರೀಕೃಷ್ಣಪರಮಾತ್ಮನು ತನ್ನ ಭಕ್ತನಾದ ಈ ವ್ಯಾಧನನ್ನು ಅನುಗ್ರಹಿಸಿ, ಸ್ವರ್ಗಲೋಕ ಪ್ರಾಪ್ತಿಯನ್ನು ದಯಪಾಲಿಸಿದನು.

ಪಾಪಕರ್ಮಗಳನ್ನು ಮಾಡಿದವರಿಗೆ ಸ್ವರ್ಗರೂಪವಾದ ಉತ್ತಮ ಫಲಪ್ರಾಪ್ತಿಯು ಹೇಗೆ ಕೂಡುವದು? ಎಂಬ ಪ್ರಶ್ನೆಗೆ ಈ ರೀತಿ ಸಮಾಧಾನವಿದೆ. ಭೃಗುಋಷಿಯು ಪರಮಾತ್ಮನ ಸರ್ವೋತ್ತಮತ್ವವನ್ನು ಪ್ರದರ್ಶಿಸುವ ಕಾರ್ಯಕ್ಕಾಗಿ ಪಾದ-ಪ್ರಹಾರ ಮಾಡಿದ್ದನು. ಅವನು ಪಾದಪ್ರಹಾರವನ್ನು ಮಾಡುವ ಸಮಯದಲ್ಲಿ, ತನ್ನ ಮನಸ್ಸಿನಲ್ಲಿ ಯಾವ ದೋಷವನ್ನೂ ಹೊಂದಿರಲಿಲ್ಲ. ಆದರೂ ಪರಮಾತ್ಮನಿಗೆ ಪಾದಪ್ರಹಾರವು ದೋಷವೇ ಆಗಿದೆಯಾದ್ದರಿಂದ ನೀಚವಾದ ವ್ಯಾಧಜನ್ಮವನ್ನು ಹೊಂದಿದನು. ಹೀಗಿದ್ದರೂ ಭೃಗುಋಷಿಗೆ ಹರಿಭಕ್ತಿಯಲ್ಲಿ ಯಾವ ಲೋಪವೂ ಆಗಿರಲಿಲ್ಲ. ಈ ವ್ಯಾಧ ಜನ್ಮದಲ್ಲಿಯೂ ಕೂಡ ಶ್ರೀಕೃಷ್ಣನ ಪಾದತಲವೆಂದು ತಿಳಿಯದೇ, ಬುದ್ಧಿಪೂರ್ವಕವಾಗಿ ಶರಪ್ರಹಾರವನ್ನು ಮಾಡದೇ ಇದ್ದುದರಿಂದ, ಅದು

ಅತಿಯಾದ ದೋಷವನ್ನು ಉಂಟು ಮಾಡಲಿಲ್ಲ. ಆದ್ದರಿಂದ ಈ ಕೃಷ್ಣಾವತಾರಕಾಲದಲ್ಲಿ ಪಶ್ಚಾತ್ತಾಪದಿಂದ 'ದೇವನಾದ ಕೃಷ್ಣನೇ! ಪಾಪಿಷ್ಠನಾದ ನನ್ನನ್ನು ಸಂಹರಿಸು' ಎಂದು ಪಾದದಲ್ಲಿ ಬಿದ್ದ ವ್ಯಾಧನನ್ನು ಮನ್ನಿಸಿ, ಸ್ವರ್ಗಪ್ರಾಪ್ತಿರೂಪ ಅನುಗ್ರಹವನ್ನು ಪರಮಾತ್ಮನು ಅನುಗ್ರಹಿಸಿದ್ದಾನೆ.

***ಶ್ರೀಕೃಷ್ಣನ ಪರಂಧಾಮ ಗಮನ ಹಾಗೂ ಮೂಲರೂಪದೊಂದಿಗೆ ಐಕ್ಯ*** - ಅನಂತರ ಬ್ರಹ್ಮ-ರುದ್ರ-ದೇವೇಂದ್ರರುಗಳು ಪುನಃ ಸ್ತೋತ್ರಮಾಡಿ, ಶ್ರೀಕೃಷ್ಣನ ಬಳಿಗೆ ಬಂದು ನಮಸ್ಕರಿಸಿ, ಅವನನ್ನು ಅನುಸರಿಸಿಕೊಂಡು ಹೋದರು. ಶ್ರೀಕೃಷ್ಣನು ತನ್ನ ತೇಜಸ್ಸಿನಿಂದ ಈ ಸಮಸ್ತ ಜಗತ್ತನ್ನು ಬೆಳಗುವವನಾಗಿ ಶೀಘ್ರದಲ್ಲಿಯೇ ತನ್ನ ಲೋಕವಾದ ವೈಕುಂಠಕ್ಕೆ ತೆರಳಿದನು.

***ಶ್ರೀಕೃಷ್ಣನು ಗೋಪಾಲಮಂತ್ರವನ್ನು (ಕೃಷ್ಣಮಂತ್ರವನ್ನು) ಉಪಾಸನೆ ಮಾಡುವವರಿಗೆ ಫಲವನ್ನು ಕರುಣಿಸಿದ್ದು*** - ಶ್ರೀಕೃಷ್ಣನು ಕೃಷ್ಣಮಂತ್ರ ಉಪಾಸಕರಿಗೆ ವಿಶೇಷಫಲ ಕೊಡುವವನಾಗಿ ವಿಶೇಷಾಕಾರದಿಂದ ಒಂದು ರೂಪದಿಂದ ಭೂಮಿಯಲ್ಲಿ ಮನುಷ್ಯದೃಷ್ಟಿಗೆ ಅಗೋಚರನಾಗಿ ನೆಲೆಸಿದನು. ಎರಡನೇ ರೂಪದಿಂದ ಸೂರ್ಯಮಂಡಲದಲ್ಲಿ ನೆಲೆಸಿದನು. ಶಿವಲೋಕದಲ್ಲಿ ರುದ್ರನಿಂದ ಪೂಜಿತವಾಗಿ ಮೂರನೆಯ ರೂಪದಿಂದ ನೆಲೆಸಿದನು. ಶ್ರೀಕೃಷ್ಣನ ನಾಲ್ಕನೆಯ ರೂಪವು ಬ್ರಹ್ಮಲೋಕದಲ್ಲಿ ಬ್ರಹ್ಮದೇವರಿಂದ ವಿಶೇಷವಾಗಿ ಪೂಜಿತವಾಗಿ ನೆಲೆಸಿತು. ಆಮೇಲೆ ಉತ್ತಮವಾದ ತನ್ನ ಮಂದಿರವಾದ ವೈಕುಂಠವನ್ನು ಹೊಂದುತ್ತಿದ್ದ ಈ ಕೃಷ್ಣನ ಐದನೆಯ ರೂಪವನ್ನು, ದೇವಶ್ರೇಷ್ಠರು ತಾರತಮ್ಯದಿಂದ ತಮ್ಮ ಸ್ವರೂಪ-ಯೋಗ್ಯತಾನುಗುಣವಾದ ಭಕ್ತಿಯಿಂದ ಶಕ್ತ್ಯನುಸಾರವಾಗಿ ಅನುಸರಿಸಿ ಹೋದರು. ಅಪರಿಮಿತವಾದ ಉತ್ಕೃಷ್ಟವಾದ ಪ್ರಕಾಶವುಳ್ಳ ಆ ವೈಕುಂಠದ ತೇಜಸ್ಸಿನಿಂದ ದೇವತೆಗಳ ದೃಷ್ಟಿಯು ಮಂಕಾಯಿತು. ಇಂದ್ರಾದಿ ದೇವತೆಗಳು ನೋಡಲು ಅಶಕ್ಯವಾದ ಪ್ರಕಾಶದಿಂದ ಕಣ್ಣು ಮುಚ್ಚಿದವರಾಗಿ, ಮುಂದೆ ಹೋಗಲು ಅಶಕ್ತರಾದರು. ತಮಗೆ ಹೋಗಲು ಎಷ್ಟು ಯೋಗ್ಯವೋ ಅಷ್ಟು ದೂರವನ್ನು ಮಾತ್ರ ಶ್ರೀಕೃಷ್ಣ ಪರಮಾತ್ಮನನ್ನು ಅನುಸರಿಸಿ ಹೋಗಿ ನಿಂತುಬಿಟ್ಟರು.

ಗರುಡ-ರುದ್ರ-ಶೇಷರುಗಳಿಂದ ಅನುಸರಿಸಲ್ಪಟ್ಟ ಬ್ರಹ್ಮದೇವನು, ಮುಕ್ತಸ್ಥಾನವನ್ನು ಪ್ರವೇಶ ಮಾಡಿದ ಪರಮಾತ್ಮನನ್ನು ನಮಸ್ಕರಿಸಿ, ಗರುಡಾದಿಗಳನ್ನು ಬಿಟ್ಟು, ತಾನೊಬ್ಬನೇ ತನ್ನ ತಂದೆಯಾದ ಶ್ರೀಕೃಷ್ಣಪರಮಾತ್ಮನಿಂದ ಆಲಿಂಗಿತನಾಗಿ, ಅವನಿಗೆ ಏಕಾಂತದಲ್ಲಿ ಹೇಳಲು ಅರ್ಹವಾದ ಪ್ರಮೇಯವನ್ನು ಹೇಳಿದನು ಮತ್ತು ಸ್ತೋತ್ರವನ್ನು ಮಾಡಿದನು. ಏಕಾಂತದಲ್ಲಿ ಪರಮಾತ್ಮನ ದರ್ಶನ, ಸಂಭಾಷಣ ಮತ್ತು ಸ್ತುತಿಗಳು ಬ್ರಹ್ಮದೇವರೊಬ್ಬರಿಂದಲೇ ಸಾಧ್ಯವಾಗುವುದು. ಬ್ರಹ್ಮನೇ ಮೊದಲಾದ ಮುಕ್ತರಿಂದ ಉತ್ತಮವಾಗಿ ಪೂಜಿತನಾದ, ಅಪರಿಮಿತ ಸದ್ಗುಣರೂಪನಾದ ಶ್ರೀಕೃಷ್ಣನು, ಮೂಲಸ್ವರೂಪದಿಂದ ಐಕ್ಯವನ್ನು ಹೊಂದಿಯೂ, ಹಾಗೂ ಪ್ರತ್ಯೇಕವಾಗಿಯೂ ಕೃಷ್ಣಸ್ವರೂಪವನ್ನು ಹೊಂದಿ ಇರುತ್ತಾ, ಸ್ವೇಚ್ಛಾನುಸಾರವಾಗಿ ಲಕ್ಷ್ಮೀದೇವಿಯೊಡನೆ ವಿಹರಿಸಿದನು.

ಅನಂತರ ಚತುರ್ಮುಖಬ್ರಹ್ಮನು ರುದ್ರಾದಿಗಳಿಂದ ಕೂಡಿಕೊಂಡು ಹಿಂದಿರುಗಿ, ತನ್ನ ಲೋಕವಾದ ಸತ್ಯಲೋಕವನ್ನು ಹೊಂದಿ, ಪುನಃ ಅಲ್ಲಿರುವ ಶ್ರೀಕೃಷ್ಣನನ್ನು ವಿಶೇಷವಾಗಿ ದರ್ಶನ ಮಾಡುತ್ತಲೂ, ಪೂಜಿಸುತ್ತಲೂ ಕ್ರೀಡಿಸಿದನು. ಇತರ ಎಲ್ಲ ದೇವತೆಗಳೂ ಸೂರ್ಯಬಿಂಬದಲ್ಲಿ ಇರುವ ಶ್ರೀಕೃಷ್ಣನನ್ನು ನೋಡುವವರಾಗಿ, ಪೂಜಿಸುವವರಾಗಿ ಆನಂದಿಸಿದರು.

***ಶ್ರೀಕೃಷ್ಣನಿಂದ ದೇಹತ್ಯಾಗದ ನಟನೆ*** - ಅಚ್ಯುತನಾದ ಶ್ರೀಹರಿಯು ಪೂರ್ವದ ತನ್ನ ಅನೇಕವಾದ ಯಾವ ಅವತಾರ-ದಲ್ಲಿಯೂ ಕೂಡ, ದೇಹತ್ಯಾಗ ರೂಪವಾದ ಭ್ರಾಂತಿಯನ್ನು ಅಜ್ಞರಿಗೆ ತೋರಿಸಲಿಲ್ಲ. ಸರ್ವಥಾ ಶ್ರೀಹರಿಯು ನಾಶರಹಿತನು. ಅದ್ಭುತಕರ್ಮಗಳನ್ನು ಮಾಡುವಲ್ಲಿ ಅತ್ಯಂತ ಸಮರ್ಥನಾದ ಶ್ರೀಕೃಷ್ಣನು, ಜ್ಞಾನಾನಂದಾದಿಗಳೇ ಕೇವಲ ದೇಹವಾಗಿ ಉಳ್ಳವನಾಗಿದ್ದರೂ, ಈ ಕೃಷ್ಣಾವತಾರದಲ್ಲಿ ಅಸುರರನ್ನು ಮೋಹಗೊಳಿಸಿ ಅಂಧಂತಮಸ್ಸನ್ನು ಹೊಂದಿಸುವುದಕ್ಕಾಗಿ, ಪ್ರಾಕೃತರಿಗೆ ನೋಡಲಿಕ್ಕೆ ಯೋಗ್ಯವಾದ ತನ್ನ ದೇಹಕ್ಕೆ ಸದೃಶವಾದ ಮತ್ತೊಂದು ಶರೀರವನ್ನು ಸೃಷ್ಟಿಮಾಡಿ, ಆ ಶರೀರವನ್ನು

ಭೂಮಿಯಲ್ಲಿ ತೊರೆದು, ತಾನು ತನ್ನ ಲೋಕವಾದ ವೈಕುಂಠವನ್ನು ಹೊಂದಿದನು. ಜೀವನಿಂದ ಬಿಡಲ್ಪಟ್ಟ ಶರೀರದಂತೆ ಭೂಮಿಯಲ್ಲಿ ಬಿದ್ದುಕೊಂಡಿದ್ದ ಆ ದೇಹವನ್ನು ನೋಡಿ ಅಸುರರು, 'ಕೃಷ್ಣಾವತಾರದಲ್ಲಿ ಕೃಷ್ಣನಿಗೂ ಇತರರಂತೆ ದೇಹವಿಯೋಗ ಉಂಟು' ಎಂದು ಮೋಹಗೊಂಡರು. ಕೃಷ್ಣನ ಸಾರಥಿಯಾದ ದಾರುಕನ ಉಕ್ತಿಯಿಂದ ಅಲ್ಲಿಗೆ ಬಂದ ಅರ್ಜುನನು, ಮೋಹಕ್ಕಾಗಿ ಸೃಷ್ಟಿಸಿದ ಆ ಶರೀರವನ್ನು ದಹನ ಮಾಡಿದನು.

***ಸತ್ಯಭಾಮಾ, ರುಕ್ಮಿಣೀ ಮೊದಲಾದವರ ದೇಹತ್ಯಾಗ*** - ಶ್ರೀಕೃಷ್ಣನಂತೆಯೇ ಅಸುರ ಜನರನ್ನು ಮೋಹಿಸುವದಕ್ಕಾಗಿ ರುಗ್ಮಿಣೀದೇವಿಯು ಅಗ್ನಿಯಲ್ಲಿ ಅದೃಶ್ಯಳಾಗಿ, ಶ್ರೀಕೃಷ್ಣನ ಲೋಕಕ್ಕೆ ತೆರಳಿ, ಅವನ ಪಾರ್ಶ್ವವನ್ನೇ ಹೊಂದಿದಳು. ಸತ್ಯಭಾಮಾದೇವಿಯು ತಪಸ್ಸನ್ನು ಮಾಡಿ, ಕಾಡಿನಲ್ಲಿ ಅದೃಶ್ಯಳಾಗಿ, ರುಗ್ಮಿಣೀದೇವಿಯಂತೆಯೇ ಶ್ರೀಕೃಷ್ಣನ ಪಾರ್ಶ್ವವನ್ನು ಹೊಂದಿದಳು. ಲಕ್ಷ್ಮೀದೇವಿಯ ಎರಡು ರೂಪಗಳಂತೆಯೇ ಇರುವ ರುಕ್ಮಿಣೀ-ಸತ್ಯಭಾಮರುಗಳು ಜ್ಞಾನಾನಂದಾತ್ಮಕ ಶರೀರಗಳುಳ್ಳವರು. ಆದ್ದರಿಂದಲೇ ಅವರಿಬ್ಬರೂ ಶ್ರೀಕೃಷ್ಣನಂತೆಯೇ ದುಷ್ಟರನ್ನು ಮೋಹಗೊಳಿಸುವರು. ಜಾಂಬವತಿಯೇ ಮೊದಲಾದ ಆರು ಮಹಿಷಿಯರಲ್ಲಿ ಕೆಲವರು ಅಗ್ನಿಯಲ್ಲಿ ಶರೀರವನ್ನು ತ್ಯಜಿಸಿ, ಇನ್ನು ಕೆಲವರು ತಪಸ್ಸಿನಿಂದಲೇ ಶರೀರ-ಗಳನ್ನು ಬಿಟ್ಟು, ಶ್ರೀಕೃಷ್ಣನನ್ನು ಹೊಂದಿದರು.

***ಶ್ರೀಕೃಷ್ಣನ ಸಾರಥಿ ದಾರುಕನ ಗಮನ*** - ಶ್ರೀಕೃಷ್ಣನ ಸಾರಥಿಯಾದ ದಾರುಕನು ಬಂದ ಹಾಗೆಯೇ ಪುನಃ ವಿಷ್ಣುವಿನ ಲೋಕವನ್ನು ಹೊಂದಿದನು. ಭೂಲೋಕಕ್ಕೆ ಮೂಲರೂಪದಲ್ಲಿಯೇ ಬಂದು ತನ್ನ ಮೂಲಸ್ಥಾನಕ್ಕೆ ಹಾಗೆಯೇ ತೆರಳಿದುದು ಶ್ರೀಹರಿಯ ಸಾರಥಿಯಾದ ದಾರುಕನ ವಿಶೇಷವಾಗಿದೆ.

***ಬಲರಾಮ, ವಸುದೇವಾದಿಗಳ ದೇಹತ್ಯಾಗ*** - ಯಾದವರ ಮರಣವನ್ನು ನೋಡಿ, ರೋಹಿಣೀಪುತ್ರನಾದ ಬಲರಾಮನೂ 'ತನ್ನ ಅವತಾರಕಾರ್ಯವು ಪೂರ್ತಿಸಿತು' ಎಂಬ ವಿಷಯವನ್ನು ಅರಿತು, ಯೋಗಶಕ್ತಿಯಿಂದ ತನ್ನ ದೇಹವನ್ನು ಬಿಟ್ಟನು. ತನ್ನ ಶರೀರವಾದ ಶೇಷಶರೀರವನ್ನು ಹೊಂದಿ ಮೂಲರೂಪಕ್ಕೆ ತೆರಳಿದನು. ಅರ್ಜುನನು ಬಲರಾಮನೇ ಮೊದಲಾದ ಪ್ರಧಾನರಾದವರ ಶರೀರಗಳನ್ನು ದಹನ ಮಾಡಿದನು. ಬಲರಾಮ ಮೊದಲಾದವರ ಪತ್ನಿಯರುಗಳು ಅಗ್ನಿಮುಖದಲ್ಲಿ ಶರೀರವನ್ನು ತ್ಯಜಿಸಿದರು. ಅವರೆಲ್ಲರೂ ಮಹಾಪತಿವ್ರತೆಯರಾದ ಕಾರಣ ತಮ್ಮ ತಮ್ಮ ಪತಿಗಳನ್ನೇ ಹೊಂದಿದರು.

ವಸುದೇವನು ಅರ್ಜುನನ ಮುಖದಿಂದ ಯಾದವರ ಮರಣವನ್ನು ಮತ್ತು ಶ್ರೀಕೃಷ್ಣನ ಗಮನಾದಿ ವಾರ್ತೆಗಳನ್ನು ಕೇಳಿ, ಯೋಗವಿಶೇಷದಿಂದ ಶರೀರವನ್ನು ಬಿಟ್ಟು, ಶ್ರೀಕೃಷ್ಣನ ಮೇಲಿನ ವಿಶೇಷವಾದ ಭಕ್ತಿಯಿಂದ ಕಶ್ಯಪತ್ವವನ್ನೇ ಹೊಂದಿದನು. ಆಗ ಅರ್ಜುನನು ಅಶ್ವಮೇಧಾಗ್ನಿಯಲ್ಲಿ ವಸುದೇವನ ಅಂತ್ಯಕರ್ಮಗಳನ್ನು ಮಾಡಿದನು. ವಸುದೇವನ ಪತ್ನಿಯರಾದ ದೇವಕೀ ಮೊದಲಾದವರು, ಅಶ್ವಮೇಧಾಗ್ನಿಯಲ್ಲಿಯೇ ತಮ್ಮ ದೇಹಗಳನ್ನು ತ್ಯಜಿಸಿ, ಕಶ್ಯಪರನ್ನೇ ಹೊಂದಿದರು.

***ಸಮುದ್ರದಲ್ಲಿ ಮುಳುಗಿದ ದ್ವಾರಕೆ ಮತ್ತು ದ್ವಾರಕೆಯಿಂದ ಅರ್ಜುನನ ನಿರ್ಗಮನ*** - ಅರ್ಜುನನು ಉಳಿದ ಸ್ತ್ರೀಯರನ್ನೂ, ಬಾಲಕರನ್ನೂ ಮತ್ತು ಧನವನ್ನೂ ತೆಗೆದುಕೊಂಡು ದ್ವಾರಾವತಿಯಿಂದ ಹೊರಟನು. ಅವನು ಮುಂದೆ ಸಾಗುತ್ತಿದ್ದಂತೆಯೇ, ಸಮುದ್ರವು ದ್ವಾರಾವತಿಪಟ್ಟಣವನ್ನು ತನ್ನ ಉದಕದಿಂದ ಆಚ್ಛಾದನೆ ಮಾಡಿತು. ಶ್ರೀಕೃಷ್ಣಪರಮಾತ್ಮನು ಪರಂಧಾಮಕ್ಕೆ ತೆರಳಿದ ಏಳನೆಯ ದಿನ ದ್ವಾರಕೆಯು ಸಮುದ್ರದಲ್ಲಿ ಮುಳುಗಿ ಹೋದ ವಿವರವು ಭಾಗವತಾದಿಗಳಲ್ಲಿ ಇದೆ.

ಸ್ತ್ರೀಯರಿಂದಲೂ ಮತ್ತು ಬಾಲಕರಿಂದಲೂ ಸಹಿತನಾಗಿ ಅರ್ಜುನನು ಒಬ್ಬನೇ ದಾರಿಯಲ್ಲಿ ಸಾಗುತ್ತಿರುವಾಗ, ಅತಿ ಪಾಪಿಷ್ಠರಾದ ಉನ್ಮತ್ತರಾದ ಅಭೀರರು (ಮ್ಲೇಂಛವಿಶೇಷರು) ಸ್ತ್ರೀಜನರನ್ನು ಅಪಹಾರ ಮಾಡಿದರು. 16,100 ಸಂಖ್ಯಾಕರಾದ

ಕೃಷ್ಣನ ಸ್ತ್ರೀಯರು ಶ್ರೀಕೃಷ್ಣನ ವಿಷಯದಲ್ಲಿ ಪೂರ್ವದಲ್ಲಿ ಗರ್ವವನ್ನು ತೋರಿಸಿದ್ದರು. ಆ ನಿಮಿತ್ತದಿಂದ, ಶ್ರೀಕೃಷ್ಣನಿಂದ ಕೊಡಲ್ಪಟ್ಟ ಶಾಪಮೂಲಕವಾಗಿ ಅವರೆಲ್ಲರೂ ಮ್ಲೇಂಛರ ಅಧೀನರಾದರು. ಧನ ಮತ್ತು ಸ್ತ್ರೀಯರ ಅಪಹಾರಕರಾದ ಮ್ಲೇಂಛರೊಂದಿಗೆ ಆಗ ಯುದ್ಧ ಮಾಡಲು ಇಚ್ಛಿಸಿದ ಅರ್ಜುನನಿಗೆ ಗಾಂಡೀವವನ್ನು ಹೆದೆಯೇರಿಸುವುದು ಅತಿ ಕಷ್ಟ-ವಾಯಿತು. ಶ್ರೀಹರಿಯ ಸಂಕಲ್ಪದಿಂದಲೇ ಅರ್ಜುನನ ಬಾಣಗಳು ಸಹ ಬರಿದಾದವು. ಅಸ್ತ್ರಗಳು ಅವನ ಸ್ಮರಣಕ್ಕೆ ಬರಲಿಲ್ಲ. ಅರ್ಜುನನು ಈ ಪರಾಭವಗಳನ್ನು ದೈವಕೃತಗಳೆಂದು ತಿಳಿದು, ಅದರಲ್ಲಿ ಕಾರಣೀಭೂತನಾದ ಶ್ರೀಕೃಷ್ಣನನ್ನು ಸ್ಮರಿಸುತ್ತಾ, ಬಾಣಗಳಿಲ್ಲದ ಗಾಂಡೀವ ಧನುಸ್ಸಿನಿಂದಲೇ ಶತ್ರುಗಳನ್ನು ಸಂಹಾರಮಾಡುತ್ತಾ, ಉಳಿದ ಧನ ಮೊದಲಾದುದನ್ನು ರಕ್ಷಿಸಿ-ಕೊಂಡು ಕುರುಕ್ಷೇತ್ರಕ್ಕೆ ತೆರಳಿದನು. 'ತಾನು ಪರಂಧಾಮಕ್ಕೆ ಹೋಗುವವರೆಗೂ ಅರ್ಜುನನಿಗೆ ಸೋಲಿರುವದಿಲ್ಲ' ಎಂದು ಶ್ರೀಕೃಷ್ಣನು ಇಂದ್ರನಿಗೆ ಕೊಟ್ಟ ವಚನವನ್ನು ಇಲ್ಲಿ ಸ್ಮರಿಸಬಹುದು. ಆದರಿಂದಲೇ ಅರ್ಜುನನಿಗೆ ಈ ಪರಿಸ್ಥಿತಿ ಒದಗಿತು.

***ಕುರುಕ್ಷೇತ್ರಕ್ಕೆ ಅರ್ಜುನನ ಆಗಮನ ಹಾಗೂ ಶ್ರೀವೇದವ್ಯಾಸದೇವರ ದರ್ಶನ*** - ಅತ್ಯಂತ ಪರಿಪೂರ್ಣ ವಿಜ್ಞಾನಬಲ-ಗಳಿಂದ ಸಮುದ್ರದಂತಿರುವ, ನಿರ್ದುಷ್ಟ ಸುಖಸ್ವರೂಪರಾದ, ವಾಸಿಷ್ಠ ಕುಲದಲ್ಲಿ ಅವತಾರ ಮಾಡಿದ, ಶ್ರೀಕೃಷ್ಣನ ಸ್ವರೂಪವೇ ಆದ, ಜಗದ್ಗುರುಗಳಾದ ವೇದವ್ಯಾಸದೇವರು, ಅರ್ಜುನನು ಕುರುಕ್ಷೇತ್ರವನ್ನು ತಲುಪುವ ಸಮಯದಲ್ಲಿಯೇ ಅಲ್ಲಿ ಉಪಸ್ಥಿತರಿದ್ದರು. ವೇದವ್ಯಾಸದೇವರ ದರ್ಶನವಾದೊಡನೆ ಅರ್ಜುನನು ಅಪಾರ ದುಃಖದಿಂದ ಅವರ ಪಾದಗಳಲ್ಲಿ ಸಾಷ್ಟಾಂಗ ಪ್ರಣಾಮ ಮಾಡಿದನು. ಅಜ್ಞಾನಾಖ್ಯ ಅಂಧಕಾರಕ್ಕೆ ಸೂರ್ಯನಂತೆ ಇದ್ದ, ಪುರುಷೋತ್ತಮರಾದ ವೇದವ್ಯಾಸರು ಅರ್ಜುನನಿಗೆ ಬಹು ರೀತಿಯಾಗಿ ಅನೇಕ ಯುಕ್ತಿಯುಕ್ತ ವಚನಗಳಿಂದ ಬೋಧಿಸಿದರು. ಈ ರೀತಿ ಉಪದೇಶಿಸಿಕೊಳ್ಳಲ್ಪಟ್ಟ ಅರ್ಜುನನು ಕೃಷ್ಣಸ್ವರೂಪಿಯಾದ ವೇದವ್ಯಾಸದೇವರಲ್ಲಿ ತನ್ನ ಮನಸ್ಸನ್ನು ಸ್ಥಿರಗೊಳಿಸಿ, ಧೈರ್ಯದಿಂದ ತನ್ನ ದುಃಖಗಳನ್ನು ಬಹಳವಾಗಿ ಪರಿಹರಿಸಿಕೊಂಡನು.

***ಕೃಷ್ಣಸ್ತ್ರೀಯರಿಗೆ ಗೋವಿಂದೇಕಾದಶಿಯ ಉಪದೇಶ ಮತ್ತು ದೇಹತ್ಯಾಗ*** - ಮ್ಲೇಂಛರಿಂದ ಅಪಹೃತರಾಗಿದ್ದ ಸ್ತ್ರೀಯರು, ಶ್ರೀಕೃಷ್ಣನಿಂದ ಕಳುಹಿಸಲ್ಪಟ್ಟ ದಾಲ್ಭ್ಯಮುನಿಯಿಂದ ಗೋವಿಂದೈಕಾದಶೀವ್ರತದ ಮಹಿಮೆಯ ಉಪದೇಶವನ್ನು ಪಡೆದರು. ಚೈತ್ರ ಮೊದಲಾದ ಹನ್ನೆರಡು ಶುದ್ಧ ಏಕಾದಶಿಗಳಿಗೆ ಕೇಶವಾದಿ ದ್ವಾದಶಮೂರ್ತಿಗಳು ದೇವತೆಗಳು. ಆಷಾಢಶುದ್ಧ ಏಕಾದಶಿಗೆ ಗೋವಿಂದನೇ ದೇವತೆ. ಆದುದರಿಂದ ಗೋವಿಂದೈಕಾದಶಿಯು ಪ್ರಸಿದ್ಧವಾಗಿದೆ. ತಾವು ಶ್ರೀಕೃಷ್ಣಪರಮಾತ್ಮನಲ್ಲಿ ತೋರಿದ ಗರ್ವಮೂಲಕವಾಗಿ ಬಂದ ಶಾಪಪರಿಹಾರಾರ್ಥವಾಗಿ, ಉಪವಾಸವ್ರತವನ್ನು ಅನುಷ್ಠಾನ ಮಾಡಿದರು. ಅದರಿಂದ ಗೋವಿಂದನ ಕೃಪೆಯನ್ನೂ ಹೊಂದಿದರು. ಅವರು ವಿಷ್ಣುವಿನ ಪ್ರೀತಿಗಾಗಿ ಏಕಾದಶೀವ್ರತವನ್ನು ಸರ್ವದಾ ಅನುಷ್ಠಾನ ಮಾಡುವರು. ಆದರೂ ಪ್ರಾಯಶ್ಚಿತ್ತರೂಪದಿಂದ ಮಾಡಿದ್ದರಿಂದ ವಿಶೇಷತಃ ಇಲ್ಲಿ ಉಲ್ಲಿಖಿತವಾಗಿದೆ. ಅದೃಶ್ಯರಾದ ವಾಯುದೇವರ ವಚನಾನುಸಾರವಾಗಿ, ಆ ಎಲ್ಲ ಸ್ತ್ರೀಯರು ಸರಸ್ವತೀನದಿಯಲ್ಲಿ ಸ್ನಾನವನ್ನು ಮಾಡಿ, ಅನಂತರ ಸರಸ್ವತೀ ಜಲದಲ್ಲಿಯೇ ತಮ್ಮ ದೇಹಗಳನ್ನು ತ್ಯಜಿಸಿದರು.

***ಅರ್ಜುನನಿಂದ ರಾಜ್ಯಭಾರದ ವ್ಯವಸ್ಥೆ*** - ಅರ್ಜುನನು ಕೃತವರ್ಮನ ಪುತ್ರನನ್ನು ಕುರುಕ್ಷೇತ್ರದೇಶಕ್ಕೆ ಮತ್ತು ಸಾತ್ಯಕಿಯ ಪುತ್ರನನ್ನು ಸಾರಸ್ವತ ದೇಶಕ್ಕೆ ರಾಜರನ್ನಾಗಿ ಪಟ್ಟಾಭಿಷೇಕಮಾಡಿದನು. ಕೃಷ್ಣನಿಗೆ ಪ್ರಿಯ, ಗುಣಸಂಪನ್ನ ಮತ್ತು ಅನಿರುದ್ಧನ ಪುತ್ರನಾದ ವಜ್ರನನ್ನು ಅರ್ಜುನನು ಶೂರಸೇನದೇಶ ಮತ್ತು ಇಂದ್ರಪ್ರಸ್ಥದೇಶಗಳಿಗೆ ರಾಜನನ್ನಾಗಿ ಮಾಡಿದನು. ಸ್ತ್ರೀಯರನ್ನು, ಬಾಲಕರನ್ನು ಮತ್ತು ಧನವನ್ನು ಈ ವಜ್ರರಾಜನಿಗೆ ಒಪ್ಪಿಸಿದನು.

***ಪರೀಕ್ಷಿತ್ ರಾಜನಿಗೆ ಪಟ್ಟಾಭಿಷೇಕ*** - ಅನಂತರ ಅರ್ಜುನನು, ಸಹೋದರರಾದ ಧರ್ಮರಾಜಾದಿಗಳು ಇದ್ದ ಸ್ಥಳಕ್ಕೆ ಹೋದನು. ಅವರಿಗೆ ಸಕಲ ವೃತ್ತಾಂತವನ್ನೂ ಹೇಳಿದನು. 'ಶ್ರೀಕೃಷ್ಣನು ಪರಂಧಾಮಕ್ಕೆ ತೆರಳಿದ ಬಳಿಕ ತಾವು ಭೂಲೋಕದಲ್ಲಿ

ಉಳಿದರೆ ಪರಮಾತ್ಮನ ವಿಯೋಗವನ್ನು ಹೊಂದಿದಂತೆ ಆಗುವದು. ಶ್ರೀಕೃಷ್ಣನ ವಿಯೋಗವನ್ನು ಹೊಂದುವುದು ತಮಗೆ ಅಭಿಪ್ರೇತವಲ್ಲ'ವೆಂದು ಪಾಂಡವರು ಆಲೋಚಿಸಿ, ಅವನನ್ನು ಪ್ರಾರ್ಥಿಸಿಕೊಂಡಿದ್ದರು. ಅದಕ್ಕೆ ಅನುಸಾರವಾಗಿ ಶ್ರೀಕೃಷ್ಣನು, 'ನಾನು ಪರಂಧಾಮಕ್ಕೆ ಹೋದ ಮೇಲೆ ನೀವೂ ಕೂಡ ಶೀಘ್ರದಲ್ಲಿಯೇ ಬರುವವರಾಗಿರಿ' ಎಂದು ತನ್ನ ಸಾರಥಿಯಾದ ದಾರುಕನ ಮುಖಾಂತರ ಕಳುಹಿಸಿದ ವಿಯೋಗಸಂಕೇತ ಕಾಲವನ್ನು ಪಾಂಡವರು ಸ್ಮರಿಸಿಕೊಂಡು ಇರುತ್ತಿದ್ದರು. ಅಂತಹ ಸಮಯವು ಈಗ ಒದಗಿದ್ದನ್ನು ತಿಳಿದುಕೊಂಡು, ಅವರು ಮಹಾಸಾಮ್ರಾಜ್ಯದಲ್ಲಿ ಭಗವದ್ಭಕ್ತನಾದ ಪರೀಕ್ಷಿತನನ್ನು ಪಟ್ಟಾಭಿಷೇಕಮಾಡಿದರು. ಸ್ತ್ರೀಯರನ್ನೂ ಮತ್ತು ಧನಾದಿಗಳನ್ನು ಅಪಹರಿಸಿದ ಮ್ಲೇಂಛರ ಸಂಹಾರಕ್ಕಾಗಿ ಪಾಂಡವರು ಪರೀಕ್ಷಿದ್ರಾಜನಿಗೆ ಆಜ್ಞೆ ಮಾಡಿದರು. ಪಿತಾಮಹರಾದ ಪಾಂಡವರು ಹೊರಿಸಿದ ಭಾರವನ್ನು ಹೊತ್ತುಕೊಂಡ ಆ ಪರೀಕ್ಷಿದ್ರಾಜನು ಮ್ಲೇಂಛರ ಹನನವನ್ನು ಮಾಡಿದನು.

ದುಷ್ಟಸಂಹಾರರೂಪವಾದ ಹರಿಸೇವೆಗಾಗಿ ಅವತಾರ ಮಾಡಿದ ಪಾಂಡವರೇ ಮ್ಲೇಂಛಹನನವನ್ನು ಏಕೆ ಮಾಡಲಿಲ್ಲ ಎಂಬುದಕ್ಕೆ ಕಾರಣ ಉಂಟು. ಪಾಂಡವರು ನಿಯಮಪರಿಪಾಲಕರು. ಈ ನಿಯಮವು ಯಾವುದೆಂದರೆ ಶ್ರೀಕೃಷ್ಣನ ಪಾದ-ಸ್ಪರ್ಶವು ಇರುವ ಸಮಯದಲ್ಲಿ ಭೂಮಿಗೆ ಕಂಟಕರೂಪರಾದ ಅಸುರರ ಸಂಹಾರವು ಅಥವಾ ಶ್ರೀಕೃಷ್ಣನು ಪರಂಧಾಮಕ್ಕೆ ಹೋದ ಮೇಲೆ ಅವನನ್ನು ಅನುಸರಿಸಿಯೇ ತಮ್ಮ ತಮ್ಮ ಲೋಕಗಳಿಗೆ ಪ್ರಯಾಣ ಮಾಡುವುದು. ಇದೇ ಪಾಂಡವರ ನಿಯಮ.

ಆದ್ದರಿಂದ ಶ್ರೀಕೃಷ್ಣನು ಪರಂಧಾಮಕ್ಕೆ ಹೋದ ಮೇಲೆ, ಅವನ ಪಾದಸ್ಪರ್ಶರಹಿತವಾದ ಭೂಮಿಯಲ್ಲಿ ಕಂಟಕಭೂತರಾದ ಅಸುರರ ಸಂಹಾರವನ್ನು ತಾವು ಮಾಡದೇ, ಪರೀಕ್ಷಿತನಿಗೆ ಮಾಡುವಂತೆ ಆಜ್ಞಾಪಿಸಿದರು. 'ಸರ್ವೇಶ್ವರನಾದ ಶ್ರೀಕೃಷ್ಣನನ್ನು ಅನುಸರಿಸಿ ಹೋಗುವ ನಮ್ಮಿಂದ ಶ್ರೀಕೃಷ್ಣನಿಂದ ಬಿಡಲ್ಪಟ್ಟ ಭೂಮಿಯು ಅನುಭವಿಸಲೂ ಯೋಗ್ಯವಾಗಿಲ್ಲ ಮತ್ತು ರಕ್ಷಿಸಲೂ ಯೋಗ್ಯವಾಗಿಲ್ಲ' ಎಂದು ತಿಳಿದಿರುವ ಪಾಂಡವರಿಗೆ, ಈ ಪ್ರಕಾರವಾದ ಕಾಲನಿಯಮವು ಅತ್ಯಂತ ವಿಹಿತವಾಗಿದೆ.

**ದ್ರೌಪದಿಯಲ್ಲಿ ಐಕ್ಯಳಾದ ಕಾಳೀ** - ಭೀಮನ ಹೆಂಡತಿಯಾದ ಕಾಲೀದೇವಿಯು ಸಮಾಧಿಯಿಂದ ಹರಿಧ್ಯಾನವನ್ನು ಹೊಂದಿ, ತನ್ನ ಮನುಷ್ಯ ಶರೀರವನ್ನು ಬಿಟ್ಟು, ದ್ರೌಪದೀದೇವಿಯೊಂದಿಗೆ ಐಕ್ಯವನ್ನು ಹೊಂದಿದಳು.

***ಹಸ್ತಿನಾವತಿಯಲ್ಲಿ ಸುಭದ್ರಾದೇವಿ*** - ಸುಭದ್ರಾದೇವಿ ಮೊದಲಾದ ಪಾಂಡವರ ಹೆಂಡತಿಯರು, ಮತ್ತು ಧೃತರಾಷ್ಟ್ರನ ಪುತ್ರನಾದ ಯುಯುತ್ಸು ಇವರುಗಳು, ಪಾಂಡವರ ಆಜ್ಞೆಯಂತೆ ಪೌತ್ರನಾದ ಪರೀಕ್ಷಿದ್ರಾಜನಿಗೆ ರಾಜಧರ್ಮಗಳನ್ನು ಶಿಕ್ಷಣ ಮಾಡುವದಕ್ಕಾಗಿ ಹಸ್ತಿನಾವತೀ ಪಟ್ಟಣದಲ್ಲಿಯೇ ವಾಸ ಮಾಡಿದರು.

***ಪಾಂಡವರ ಸ್ವರ್ಗಾರೋಹಣ ಅಥವಾ ಮಹಾಪ್ರಸ್ಥಾನ*** - ಐವರು ಪಾಂಡವರೂ ಛತ್ರ-ಚಾಮರಾದಿ ರಾಜಚಿಹ್ನೆಗಳನ್ನು ತೊರೆದು, ಪರಮಾತ್ಮನಲ್ಲಿ ಧ್ಯಾನಾಸಕ್ತರಾಗಿ, ದ್ರೌಪದಿಯಿಂದ ಕೂಡಿಕೊಂಡು, ವೀರಾಧ್ವಾನವನ್ನು ಕುರಿತು ಪ್ರಯಾಣ ಮಾಡಿದರು. ವೀರಾಧ್ವಾನವೆಂದರೆ, ಆಹಾರವನ್ನು ತೊರೆದು, ನೀರು-ಗಾಳಿಗಳನ್ನೇ ಸೇವಿಸುತ್ತ, ಈಶಾನ್ಯದಿಕ್ಕಿನಿಂದ ಆರಂಭಿಸಿ ಪ್ರದಕ್ಷಿಣಾಕಾರವಾಗಿ ಸತತ ಸಂಚಾರವನ್ನು ಕೈಗೊಂಡು, ದೇಹವನ್ನು ತ್ಯಜಿಸುವವರೆಗೂ ಮುಂದುವರೆಸುವ ವೀರಯೋಗಿ-ಗಳಿಂದ ಅನುಷ್ಠಿತವಾದ ವಿಶಿಷ್ಟ ವ್ರತವು. ಇದನ್ನೇ ಮಹಾಪ್ರಸ್ಥಾನವೆಂದೂ ಕರೆಯುವರು. ಇಂತಹ ವೀರಾಧ್ವಾನವನ್ನು ಪ್ರಾರಂಭಿಸಿದ ಪಾಂಡವರ ಜೊತೆಗೆ, ಯಾದೃಚ್ಛಿಕವಾಗಿ ನಾಯಿಯ ರೂಪದಲ್ಲಿ ಯಮನೂ ಅವರನ್ನು ಹಿಂಬಾಲಿಸಿದನು.

ಪಾಂಡವರು ಮೊದಲಿಗೆ ಈಶಾನ್ಯ ದಿಕ್ಕನ್ನು ಕುರಿತು ಪ್ರಯಾಣ ಮಾಡಿದರು. ಮಹಾಪ್ರಸ್ಥಾನದ ಪ್ರಾರಂಭದಲ್ಲಿ ಅರ್ಜುನನ್ನು ಹೊರತುಪಡಿಸಿ ಇತರ ಪಾಂಡವರು ತಮ್ಮ ಶಸ್ತ್ರಾಸ್ತ್ರಗಳನ್ನೆಲ್ಲ ತ್ಯಜಿಸಿದ್ದರು. ಅರ್ಜುನನು ಇತರ ಅಸ್ತ್ರಗಳನ್ನು

ತ್ಯಜಿಸಿದ್ದರೂ, ಲೋಭದಿಂದಾಗಿ ತನ್ನ ಗಾಂಡೀವ ಧನುಸ್ಸನ್ನು ತ್ಯಜಿಸಿರಲಿಲ್ಲ. ಸಮುದ್ರದ ಬಳಿಯಲ್ಲಿ ಅಗ್ನಿಯು ಅರ್ಜುನನು ಧನುಸ್ಸನ್ನು ತ್ಯಜಿಸದೇ ಇದ್ದುದನ್ನು ನೋಡಿ, ಧರ್ಮರಾಜನನ್ನು ಬೇಡಿಕೊಂಡನು. ಧರ್ಮರಾಜನಿಂದ ಹೇಳಿಸಿಕೊಳ್ಳಲ್ಪಟ್ಟ ಅರ್ಜುನನು ಸಮುದ್ರದಲ್ಲಿ ತನ್ನ ಬಾಣಗಳನ್ನೂ ಮತ್ತು ಧನುಸ್ಸನ್ನೂ ಬೀಸಿ ಹಾಕಿದನು. ಅಗ್ನಿಯು ವರುಣನಿಗೆ 'ಅರ್ಜುನನಿಗೋಸ್ಕರ ಧನುಸ್ಸನ್ನು ಕೊಡು, ಅದನ್ನು ನಾನು ನಿನಗೆ ಪುನಃ ಕಾರ್ಯಾನಂತರದಲ್ಲಿ ಮರಳಿ ಕೊಡಿಸುವೆ' ಎಂದು ಹೇಳಿದ್ದನು. ಅರ್ಜುನನು ಸಮುದ್ರಲ್ಲಿ ಧನುಸ್ಸನ್ನು ತ್ಯಜಿಸಿದ್ದರಿಂದ, ಅಗ್ನಿಯು ವರುಣನ ಋಣವನ್ನು ಪರಿಹರಿಸಿಕೊಂಡಂತೆ ಆಯಿತು. ಇದಲ್ಲದೇ, ಅಗ್ನಿಯು ವರುಣನಲ್ಲಿ ಇದ್ದ ಧನುಸ್ಸನ್ನು ಮೊದಲು ಅಪಹಾರ ಮಾಡಿದ್ದರಿಂದ ವರುಣನಿಗೆ ಅಗ್ನಿಯಲ್ಲಿ ಸ್ವಲ್ಪ ವೈರವೂ ಇತ್ತು. ಧನುಸ್ಸನ್ನು ವರುಣನಿಗೆ ಈಗ ಮರಳಿ ಅರ್ಜುನನಿಂದ ಕೊಡಿಸಿದ್ದರಿಂದ, ವಿಪರೀತಕಾರಿತ್ವವನ್ನೂ ಪರಿಹರಿಸಿಕೊಂಡಂತೆ ಆಯಿತು. ಅರ್ಜುನನು ಅಸ್ತ್ರಗಳನ್ನು ಸಮುದ್ರದಲ್ಲಿ ಹಾಕಿದ ನಂತರ ಅಗ್ನಿಯು ಅದೃಶ್ಯನಾದನು.

ಪಾಂಡವರು ಯೋಗಸಮಾರೂಢರಾಗಿ, ಲವಣ-ಇಕ್ಷು-ಸುರಾ-ಸರ್ಪಿ-ದಧಿ-ಕ್ಷೀರ-ಶುಧೋದಕ ಎನ್ನುವ ಸಪ್ತ ಸಮುದ್ರಗಳನ್ನು ಹಾರಿಕೊಂಡು, ಶೀಘ್ರವಾಗಿ ಪ್ರಯಾಣ ಮಾಡಿದರು. ಶುಕ-ನಾರದಾದಿಗಳಂತೆಯೇ ಬಹುತರವಾದ ಯೋಗಾಭ್ಯಾಸದಿಂದ, ಗಮನಮಾರ್ಗದಲ್ಲಿಯೂ ಕೂಡ ಅವರಿಗೆ ವಿಶೇಷವಾದ ಶಕ್ತಿಯು ಇದ್ದಿತು. ಸತತ ಹರಿಧ್ಯಾನಪರರಾಗಿ, ಯಾವ ದುರ್ಗಮಾರ್ಗದಲ್ಲಿಯೂ ವಿಶ್ರಾಂತಿಯನ್ನು ಹೊಂದದೆಯೇ, ಪಾಂಡವರು ತಮ್ಮ ಯೋಗಸಾಮರ್ಥ್ಯದಿಂದ ಏಳು ದಿನಗಳಲ್ಲಿ ಸಮಸ್ತ ಭೂಪ್ರದಕ್ಷಿಣೆಯನ್ನು ಮಾಡಿ, ಗಂಧಮಾದನಪರ್ವತವನ್ನು ಹೊಂದಿದರು.

***ಗಂಧನಮಾದನ ಪರ್ವತದಲ್ಲಿ ಭೀಮಾದಿಗಳ ದೇಹಪಾತ*** - ಗಂಧಮಾದನಪರ್ವತದ ನಾರಾಯಣ ಕ್ಷೇತ್ರದಲ್ಲಿ (ಬದರಿಕಾಶ್ರಮದಲ್ಲಿ) ದ್ರೌಪದೀ-ಸಹದೇವ-ನಕುಲ-ಅರ್ಜುನ-ಭೀಮ ಇವರ ದೇಹಗಳು ಕ್ರಮವಾಗಿ ವರ್ಯೋನೀಚ ಕ್ರಮದಿಂದ ಬೀಳತೊಡಗಿದವು. ಮೊದಲು ದ್ರೌಪದೀ, ಅನಂತರ ಸಹದೇವ, ಅನಂತರ ನಕುಲ, ಬಳಿಕ ಅರ್ಜುನ, ಕೊನೆಯಲ್ಲಿ ಭೀಮಸೇನ - ಈ ಕ್ರಮವಾಗಿ ದೇಹವನ್ನು ತೊರೆದರು. ಆಗ ಭೀಮಸೇನನು ತಾವೆಲ್ಲರೂ ಈ ದೇಹದಿಂದ ಸ್ವರ್ಗಲೋಕ ಪ್ರಯಾಣವನ್ನು ಇಚ್ಚಿಸದೆ ಇದ್ದುದರಿಂದ, ಅವರ ದೇಹಪಾತವು ಭೂಮಿಯಲ್ಲಿ ಆಯಿತು ಎಂಬ ಯಥಾರ್ಥವನ್ನು ತಾನು ತಿಳಿದಿದ್ದರೂ, 'ಯಾವ ದೋಷದಿಂದ ನಮ್ಮ ದೇಹವು ನೀಚಕ್ರಮದಿಂದ ಬಿದ್ದವು?' ಎಂದು ಧರ್ಮರಾಜನನ್ನು ಪ್ರಶ್ನಿಸಿದರು. ಋಷಿಗಳಿಗೆ ಇಚ್ಛಾನುಸಾರವಾಗಿ ಸ್ವರ್ಗಕ್ಕೆ ಹೋಗಲಿಕ್ಕೆ ಶಕ್ತಿ ಇದ್ದಂತೆ, ಸ್ವಚ್ಛಂದಮರಣವುಳ್ಳ ಪಾಂಡವರಿಗೂ ಮಾನುಷ ದೇಹದಿಂದಲೇ ಸ್ವರ್ಗಲೋಕಕ್ಕೆ ಹೋಗಲಿಕ್ಕೆ ಶಕ್ತಿ ಇದೆ. ಆದ್ದರಿಂದ ಮನುಷ್ಯರಂತೆ ಅವರ ಶರೀರಪಾತಕ್ಕೆ ಪಾಪಾದಿಗಳು ಕಾರಣವಲ್ಲ. ಮಾನುಷ ಶರೀರವನ್ನು ಸ್ವರ್ಗಕ್ಕೆ ತೆಗೆದುಕೊಂಡು ಹೋಗಬಾರದೆಂಬ ತಮ್ಮ ಇಚ್ಛೆಯಿಂದಲೇ ಮಾನುಷಶರೀರ ಪರಿತ್ಯಾಗವನ್ನು ಮಾಡಿದರು. ಇದನ್ನು ಭೀಮಸೇನನು ತಿಳಿದುಕೊಂಡೇ ಇದ್ದನು. ಆದರೂ ತಿಳಿಯದವನಂತೆ ಧರ್ಮರಾಜನನ್ನು ಪ್ರಶ್ನಿಸಿದನು.

ಮರಣ ಕಾಲದಲ್ಲಿ ಯಾರು ಯಾರ ದೋಷವನ್ನು ಹೇಳುವನೋ, ಅವನಿಗೆ ಆ ದೋಷವನ್ನು ಹೇಳುವವನ ಋಣ ವಿಮೋಚನವು ಆಗುತ್ತದೆ ಎಂದು ಶ್ರುತಿಯು ಹೇಳುವದು. ಆ ಕಾರಣದಿಂದ ಭೀಮಸೇನನು ಎಲ್ಲರ ಋಣವನ್ನು ಮೋಚನಮಾಡಿಸುವದಕ್ಕಾಗಿ ಧರ್ಮರಾಜನಿಂದ ಇತರ ಪಾಂಡವರುಗಳ ದೋಷಗಳನ್ನು ಹೇಳಿಸಿದನು.

***ಧರ್ಮರಾಜನಿಂದ ಹೇಳಲ್ಪಟ್ಟ ಅರ್ಜುನಾದಿಗಳ ದೋಷಗಳು*** - ಅತಿ ಪರಿಶುದ್ಧವಾದ ಕರ್ಮಗಳುಳ್ಳ ದ್ರೌಪದೀದೇವೀ ಹಾಗೂ ಇತರ ಪಾಂಡವರು ತಮ್ಮ ಇಚ್ಛಾನುಸಾರವಾಗಿ ಶರೀರಗಳನ್ನು ತೊರೆದರು ಎಂಬುದನ್ನು ಧರ್ಮರಾಜನು ತಿಳಿಯದೆಯೇ, 'ಯಾವುದಾದರೂ ಒಂದು ದೋಷವು ಅವರ ಶರೀರಪಾತಕ್ಕೆ ಕಾರಣವಾಗಿರಬಹುದು' ಎಂದು ಊಹೆಯನ್ನು ಮಾಡಿ, ದೋಷಗಳನ್ನು ಹೇಳತೊಡಗಿದನು.

ಧರ್ಮರಾಜನು ಹೇಳಿದ ದೋಷಗಳು ಯಾವುವೆಂದರೆ - ದ್ರೌಪದೀದೇವಿಯ ಪತನಕ್ಕೆ ಅವಳಿಗೆ ಅರ್ಜುನನಲ್ಲಿದ್ದ ಅಧಿಕವಾದ ಪಕ್ಷಪಾತರೂಪ ದೋಷವು, ಸಹದೇವನಲ್ಲಿ ತಾನು ನೀತಿಜ್ಞನೆಂಬ ಅಭಿಮಾನಾಖ್ಯ ದೋಷವು, ನಕುಲನಲ್ಲಿ ತಾನು ಮಹಾಸುರೂಪಿ ಎಂಬ ಅಭಿಮಾನಾಖ್ಯ ದೋಷವು, ಅರ್ಜುನನಲ್ಲಿ ತಾನು ಮಹಾವೀರನೆಂಬ ಅಭಿಮಾನಾಖ್ಯ ದೋಷವು, ಮತ್ತು ಭೀಮಸೇನನಲ್ಲಿ ತಾನು ಮಹಾಬಲಶಾಲಿಯೆಂಬ ಅಭಿಮಾನಾಖ್ಯ ದೋಷವು - ಇವುಗಳು ಅವರ ಭೂಮಿಯಲ್ಲಿಯ ದೇಹಪಾತಕ್ಕೆ ಕಾರಣಗಳು ಎಂದು ಹೇಳಿದನು.

***ದ್ರೌಪದ್ಯಾದಿಗಳು ದೋಷರಹಿತರು*** - ದ್ರೌಪದ್ಯಾದಿ ಐವರಲ್ಲಿ ದೋಷಗಳು ವಾಸ್ತವವಲ್ಲ. ತಮ್ಮ ಇಚ್ಛೆಯಿಂದಲೇ ಮರಣವುಳ್ಳ ಪಾಂಡವರು ಮತ್ತು ದ್ರೌಪದೀದೇವಿಯು ಯೋಗಸಾಮರ್ಥ್ಯದಿಂದಲೇ ತಮ್ಮ ಶರೀರಗಳನ್ನು ಬಿಟ್ಟು, ತಮಗೆ ಯೋಗ್ಯವಾದ ಉತ್ತಮ ಸ್ಥಾನಗಳನ್ನು ಹೊಂದಿದರು ಎಂಬುದಾಗಿ 'ಸ್ವಚ್ಛಂದಮೃತ್ಯವಃ' ಎಂಬ ಶ್ರುತಿಯು ಪ್ರತಿಪಾದನೆ ಮಾಡುವದು. ಆದ್ದರಿಂದ ಜ್ಞಾನಭಕ್ತ್ಯಾದಿಗುಣಗಳಿಂದ ಉತ್ಕೃಷ್ಟರಾದ ಆ ದ್ರೌಪದ್ಯಾದಿ ಪಾಂಡವರು ಪಾಪದಿಂದ ದೇಹ-ಗಳನ್ನು ತ್ಯಜಿಸಲಿಲ್ಲ.

ಭೀಮಸೇನನು ಯುಧಿಷ್ಠಿರನಿಂದ ದೋಷಗಳನ್ನು ಅನುವಾದ ಮಾಡಿಸುವುದರಿಂದ ಸ್ವಕೀಯರಾದ ದ್ರೌಪದೀ-ಸಹದೇವಾದಿಗಳ ಋಣವನ್ನು ಮೋಚನ ಮಾಡಿಸಿದನು. ತಾನು ಸರ್ವೋತ್ತಮನಾದ ಶ್ರೀಹರಿಯನ್ನು ಧ್ಯಾನ ಮಾಡುವವನಾಗಿ ತನ್ನ ಶರೀರವನ್ನು ಬಿಟ್ಟು, ಉತ್ತಮವಾದ ಯೋಗ್ಯವಾದ ಸ್ಥಾನವನ್ನು ಹೊಂದಿದನು. ಈ ವಿಷಯದಲ್ಲಿ 'ಋಣಾನುನ್ಮುಚ್ಯ' ಎಂಬ ಸ್ಕಾಂದಪುರಾಣದಲ್ಲಿಯ ಋಷಿಗಳನ್ನು ಕುರಿತು ವೇದವ್ಯಾಸದೇವರು ಹೇಳಿದ ವಾಕ್ಯವಿದೆ. ಆದ್ದರಿಂದ ಪಾಂಡವರಲ್ಲಿ ಯುಧಿಷ್ಠಿರನು ಹೇಳಿದ ದೋಷಗಳು ವಾಸ್ತವವಲ್ಲ.

***ಧರ್ಮರಾಜನು ಅಜ್ಞಾನದಿಂದ ಭೀಮಸೇನ-ದ್ರೌಪದ್ಯಾದಿಗಳಲ್ಲಿ ದೋಷಗಳನ್ನು ಹೇಳಿದುದು*** - ಭೀಮಸೇನನ್ನು ಹೊರತುಪಡಿಸಿ, ಧರ್ಮರಾಜ-ಅರ್ಜುನ-ನಕುಲ-ಸಹದೇವ ಈ ನಾಲ್ವರ ಮಧ್ಯದಲ್ಲಿ ಅರ್ಜುನನ ವಿಷಯದಲ್ಲಿ ದ್ರೌಪದೀದೇವಿಗೆ ವಿಶೇಷ ಪಕ್ಷಪಾತವಿದ್ದದ್ದು ಯೋಗ್ಯವೇ ಆಗಿದೆ. ಇಂದ್ರರೂಪನಾದ ಅರ್ಜುನನು ಧರ್ಮರಾಜ-ನಕುಲ-ಸಹದೇವರಿಗಿಂತಲೂ ದೇವತಾ ತಾರತಮ್ಯದಲ್ಲಿ ಅಧಿಕನಾದುದರಿಂದ, ದ್ರೌಪದೀದೇವಿಯ ಪಕ್ಷಪಾಕವು ಯುಕ್ತವೇ ಆಗಿದೆ. ಆದುದರಿಂದ ದ್ರೌಪದೀದೇವಿಗೆ ಇದು ದೋಷವಾಗುವದಿಲ್ಲ.

ನೀತಿ, ರೂಪ, ವೀರ್ಯ ಮತ್ತು ಬಲಗಳು ವಿಶೇಷಗುಣಗಳಾಗಿವೆ. ಇವುಗಳಲ್ಲಿ ನೀತಿಯು ಲೌಕಿಕ ವಿವೇಕರೂಪ-ವಾಗಿರುವದರಿಂದ ಅಲ್ಪವಾದ ಗುಣವು. ರೂಪವು ಸ್ತ್ರೀಯರಿಗೆ ವಿಶೇಷವಾಗಿ ಪ್ರಿಯವೆಂದು, ನೀತಿಗಿಂತಲೂ ಅಧಿಕಗುಣವು. ವೀರ್ಯವು ಕ್ಷತ್ರಿಯನಿಗೆ ಅಪೇಕ್ಷಿತವಾದ ಗುಣವಾಗಿರುವದರಿಂದ ನೀತಿಗಿಂತಲೂ ತಾರತಮ್ಯದಲ್ಲಿ ಅಧಿಕವಾದ ಗುಣವು. ಬಲವು ಕ್ಷತ್ರಿಯರಿಗೆ ಮಹಾಗುಣವು. ಆದ್ದರಿಂದ ಎಲ್ಲಕ್ಕಿಂತಲೂ ಅಧಿಕವಾದ ಗುಣವಾಗಿದೆ. ಆದುದರಿಂದ ಕ್ರಮವಾಗಿ ಧರ್ಮರಾಜ-ನಕುಲ-ಸಹದೇವ, ಅರ್ಜುನರಲ್ಲಿ ತಾರತಮ್ಯದಿಂದ ಇದ್ದ ಅಭಿಮಾನವು ದ್ರೌಪದೀದೇವಿಗೆ ದೋಷವನ್ನು ತಂದುಕೊಡುವದಿಲ್ಲ.

ತನ್ನ ಸ್ವರೂಪವನ್ನು ಯಥಾವತ್ತಾಗಿ ತಿಳಿದುಕೊಳ್ಳುವುದು ದೋಷಕ್ಕೆ ಕಾರಣವಲ್ಲ. 'ಯಥಾ ಸ್ವರೂಪವಿಜ್ಞಾನಂ' ಎಂದು ವ್ಯಾಸಸ್ಮೃತಿಯು ಇದನ್ನೇ ಬೋಧಿಸುವುದು. ಆದ್ದರಿಂದ ಧರ್ಮರಾಜನು ದ್ರೌಪದೀ-ಸಹದೇವಾದಿಗಳ ವಿಷಯದಲ್ಲಿ ಹೇಳಿರುವ ದೋಷಗಳು ಅವರಿಗೆ ಕೂಡುವುದಿಲ್ಲ.

ಕೆಲವು ಸಮಯಗಳಲ್ಲಿ ಸಹದೇವ-ನಕುಲ-ಅರ್ಜುನರಿಗೆ ತಮ್ಮ ಗುಣಗಳ ಬಗ್ಗೆ ಅತಿಯಾದ ಅಹಂಕಾರವು ಉಂಟಾಗುತ್ತಿತ್ತು. ಅದು ಸ್ವರೂಪದಿಂದ ಅತಿರಿಕ್ತವಾದ ಅಭಿಮಾನವಾಗಿದೆ. ಆದರೆ ಅವರು ದೇಹ ತೊರೆದದ್ದಕ್ಕೆ ಅದು

ಕಾರಣವಲ್ಲ. ಅದು ಅವರಿಗೆ ಮುಕ್ತಿಯಲ್ಲಿಯ ಆನಂದ ತಾರತಮ್ಯಕ್ಕೆ ಕಾರಣವಾಗುತ್ತದೆ. ಮುಕ್ತಿಯಲ್ಲಿಯ ತಾರತಮ್ಯವು ಸಮುದ್ರದ ಅಲೆಯಂತೆ ಕಾದಾಚಿತ್ಕವಿಶೇಷರೂಪ ಆನಂದಹ್ರಾಸರೂಪವಾದ ಫಲವು. ಅಪರೋಕ್ಷಜ್ಞಾನಿಯೂ ಕೂಡ ಪ್ರಾರಬ್ಧಕರ್ಮಭೋಗದ ನಂತರ, ದೇಹಪಾತವನ್ನು ಹೊಂದಿಯೇ ಮೋಕ್ಷಕ್ಕೆ ತೆರಳಬೇಕಾಗುತ್ತದೆ. ಅಲ್ಲಿ ಸಂಸಾರದಲ್ಲಿಯ ಪಾಪವು ದೇಹಪಾತಕ್ಕೆ ಕಾರಣ ಎಂದು ಸರ್ವಥಾ ತಿಳಿಯಲು ಬರುವದಿಲ್ಲ. ಪಾಪವು ದೇಹಪಾತಕ್ಕೆ ಕಾರಣವಾಗುವ ಪ್ರಸಕ್ತಿಯೇ ಇರುವುದಿಲ್ಲ. ಗುಣದೋಷಗಳು ಹೆಚ್ಚು-ಕಡಿಮೆ ಆಗುವುದು ಸಂಸಾರದಲ್ಲಿನ ದೇಹಪಾತಾದಿಗಳಿಗೆ ಕಾರಣವಲ್ಲ. ಆದ್ದರಿಂದ ದೇವತೆಗಳಾದ ಪಾಂಡವರಿಗೆ ಪಾಪದ ಮೂಲಕ ದೇಹಪಾತವು ಆಗಿಲ್ಲವೆಂದು ಏನು ಹೇಳುವದು? ಪಾಪರಹಿತನಾದ ಉತ್ತಮನಿಗೂ ಕೂಡ ಪ್ರಾರಬ್ಧಕರ್ಮವು ನಾಶವಾದಾಗ ದೇಹವು ಬೀಳುವದು. ಅದೇ ರೀತಿಯಲ್ಲಿ ಪಾಂಡವರ ದೇಹಪಾತವು ಎಂದು ತಿಳಿಯಬೇಕು.

ಪಾಪಮೂಲಕವಾಗಿ ಪಾಂಡವರ ದೇಹಪಾತವು ಆಗಿಲ್ಲ ಎನ್ನುವದಕ್ಕೆ ಬೇರೆ ಯುಕ್ತಿಯನ್ನೂ ತಿಳಿಯಬಹುದು. ತನ್ನ ದೇಹವನ್ನು ತ್ಯಾಗಮಾಡದೇ ಯುಧಿಷ್ಠಿರನು ಆಗ ಸ್ವರ್ಗಕ್ಕೆ ಹೋದರೂ, ಅವನ ಪ್ರಾರಬ್ಧಕರ್ಮನಾಶವು ಆಗದೇ ಇದ್ದುದರಿಂದ ದೇಹಪಾತವು ಆಗಲಿಲ್ಲ. ಮುಂದೆ ತನ್ನ ಶರೀರವನ್ನು ಸ್ವರ್ಗದಲ್ಲಿರುವ ಭಾಗೀರಥಿಯಲ್ಲಿ ತ್ಯಜಿಸಿ, ತನ್ನ ಮೂಲಸ್ವರೂಪವನ್ನು ಸೇರುವನು. ಆದ್ದರಿಂದ ಪ್ರಾರಬ್ಧಕರ್ಮವಶದಿಂದಲೇ ಯುಧಿಷ್ಠಿರನಿಗೆ ದೇಹಪಾತವೆಂದು ಸಿದ್ಧವಾಗುವುದು. ಇತರ ಪಾಂಡವರಲ್ಲಿಯೂ ಇದೇ ನ್ಯಾಯವು ಸಮಾನವಾಗಿದೆ. ಇಷ್ಟೇ ಅಲ್ಲ, ಯುಧಿಷ್ಠಿರನು ಸ್ವರ್ಗಕ್ಕೆ ಹೋದರೂ ಅಲ್ಲಿ ತನ್ನ ಮನುಷ್ಯದೇಹದಿಂದ ಸ್ವರ್ಗವನ್ನು ಭೋಗಿಸಲೇ ಇಲ್ಲ.

***ಭೀಮಸೇನನು ಸರ್ವದಾ ದೋಷರಹಿತನು*** - ಅನಾದಿಕಾಲದಿಂದಲೂ ಸರ್ವದೋಷಗಳಿಂದ ರಹಿತರಾದ, ಎಲ್ಲ ಜೀವರುಗಳ ಸಮೂಹದಿಂದ ಉತ್ತಮರಾದ, ಅಧಿಕಗುಣಗಳಿಂದ ಕೂಡಿದ, ಋಜುಗಣದಲ್ಲಿ ಇರುವ, ದೇವತೆಗಳಿಗೂ ದೇವತೆಯಾದ, ವಾಯುಸ್ವರೂಪರಾದ ಭೀಮಸೇನನಿಗೆ ಅಭಿಮಾನಾದಿ (ಅಹಂಕಾರಾದಿ) ಯಾವ ದೋಷಗಳ ಪ್ರಸಕ್ತಿಯೇ ಇರುವದಿಲ್ಲ. ಶ್ರೀಕೃಷ್ಣನು ಭೀಮಸೇನನಿಗೆ ಅಹಂಕಾರ ಮೊದಲಾದ ದೋಷಗಳು ಸರ್ವಥಾ ಇಲ್ಲವೆಂದು ಹೇಳಿರುವನು ಎಂಬುದು ಮಹಾಭಾರತದಲ್ಲಿ ಪ್ರಸಿದ್ಧವಾಗಿದೆ.

ಭೀಮಸೇನನು ಪ್ರಧಾನವಾಯುಸ್ವರೂಪರಾದುದರಿಂದ, ಅಜ್ಞರು ದೋಷವೆಂದು ತಿಳಿದಿರುವ ಬಹ್ವನ್ನಭೋಕ್ತೃತ್ವವು ಅವನಿಗೆ ದೋಷವಾಗುವದಿಲ್ಲ. 'ಪೃಕ್ಷೋ ವಪುಃ ಪಿತುಮಾನ್' ಎಂದು ಶ್ರುತಿಯಲ್ಲಿ ಹೇಳಿರುವಂತೆ ಅದು ಗುಣವೇ ಆಗಿದೆ.

ಧರ್ಮರಾಜನು ಧರ್ಮಯುದ್ಧವನ್ನೇ ಅಧರ್ಮವೆಂದು ಶಂಕಿಸಿ, ದುರ್ಯೋಧನಾದಿಗಳ ಸಂಹಾರವನ್ನು ಧರ್ಮದ ಹಾನಿಯೆಂದು ಹೇಗೆ ತಪ್ಪಾಗಿ ತಿಳಿದನೋ, ಅದೇ ರೀತಿ ಇಲ್ಲಿಯೂ ಸಹ ಇತರ ಪಾಂಡವರ ವಿಷಯದಲ್ಲಿ ಅಧರ್ಮ-ದಿಂದ ಅತಿಮಾನಾದಿ ದೋಷಗಳಿಂದ ದೇಹಪಾತವಾಯಿತೆಂದು ನಿಷ್ಕಾರಣವಾಗಿ ಊಹಿಸಿರುವನೇ ಹೊರತು ಅದು ವಾಸ್ತವವಲ್ಲ.

***ವೃತ್ತಮದಿಂದ ದೇಹಪಾತ*** - ಮುಕ್ತಿಯನ್ನು ಹೊಂದುವ ಅಗ್ನ್ಯಾದಿ-ರುಥ್ರಾಂತರಾದ ದೇವತೆಗಳಿಗೆ ಶರೀರಪಾತವು ಪೂಜ್ಯರಾದ ಬ್ರಹ್ಮಾದಿ ಉತ್ತಮ ದೇವತೆಗಳಿಗಿಂತ ಪೂರ್ವದಲ್ಲಿಯೇ, ಅವರ ಇಚ್ಛೆಯಿಂದ ಕೇವಲ ಮುಮುಕ್ಷೆಯಿಂದಲೇ ಆಗುವುದು. ಮುಕ್ತಿಪ್ರಾಪ್ತಿಕಾಲದಲ್ಲಿ ಕರ್ಮಕ್ಷಯದಿಂದಲೇ ದೇಹಪಾತವು. ಪಾಪದಿಂದ ಆಗುವದಿಲ್ಲ. ಹೀಗೆಯೇ ದ್ರೌಪದೀ ಸಹಿತರಾದ ಪಾಂಡವರಿಗೆ ಮಾನುಷಶರೀರಪಾತವು, ವಯೋವೃದ್ಧರಾದ ಧರ್ಮರಾಜಾದಿಗಳಿಗಿಂತ ಪೂರ್ವದಲ್ಲಿಯೇ,

ಮೋಕ್ಷೇಚ್ಛೆಯಿಂದಲೇ ಆಯಿತು. ಪಾಪದಿಂದ ಅಲ್ಲ. 'ವ್ಯುತ್ಕ್ರಮೇಣ ಲಯಃ' ಎಂಬ ಶಾಸ್ತ್ರ ನಿಯಮದಂತೆ, ಮೊದಲು ಹುಟ್ಟಿದವನು ಅನಂತರವೂ, ಅನಂತರ ಹುಟ್ಟಿದವರು ಮೊದಲೂ ದೇಹವನ್ನು ತೊರೆಯಬೇಕು. ಅದೇ ರೀತಿಯಾಗಿ, ಪತ್ನಿಯು ದೇಹವನ್ನು ಪತಿಗಿಂತ ಮೊದಲು ದೇಹವನ್ನು ತೊರೆಯಬೇಕು ಎಂಬುದು ಸಹ ನಿಯಮವಾಗಿದೆ. ಈ ನಿಯಮಕ್ಕನುಗುಣವಾಗಿ ದ್ರೌಪದೀದೇವಿಯು ಎಲ್ಲರಿಗಿಂತ ಮುಂಚಿತವಾಗಿಯೂ, ಅನಂತರ ಕ್ರಮವಾಗಿ ಸಹದೇವ, ನಕುಲ, ಅರ್ಜುನ, ಭೀಮಸೇನ ನಾಲ್ವರೂ ತಮ್ಮ ದೇಹಗಳನ್ನು ತೊರೆದರು.

**ಧರ್ಮರಾಜನ ಪ್ರಯಾಣ** - ಭೀಮಾದಿಗಳು ತಮ್ಮ ಲೋಕಗಳಿಗೆ ತೆರಳಿದ ಮೇಲೆ, ಧರ್ಮರಾಜನು ದೈವದಿಂದ ಪ್ರಾಪ್ತನಾದ ನಾಯಿಯ ಸ್ವರೂಪನಾದ ಯಮನಿಂದ ಕೂಡಿಕೊಂಡು, ಸ್ವರ್ಗಲೋಕಕ್ಕೆ ಹೋಗುವದಕ್ಕಾಗಿ ಸ್ವಲ್ಪ ದೂರ ಮುಂದೆ ಸಾಗಿದನು. ಆಗ ಅವನ ಮುಂಭಾಗದಲ್ಲಿ ದೇವತೆಗಳಿಂದ ಕಳುಹಿಸಲ್ಪಟ್ಟ ರಥವು ಕೆಳಗೆ ಇಳಿದು ಬಂದಿತು. ರಥದಲ್ಲಿದ್ದ ಸೂತನು ಧರ್ಮರಾಜನನ್ನು ರಥದಲ್ಲಿ ಏರುವುದಕ್ಕಾಗಿ ಹೇಳಿದನು. 'ಮೊದಲು ನಾಯಿಯು ರಥವನ್ನು ಏರಬೇಕು' ಎಂದು ಧರ್ಮರಾಜನು ನುಡಿದಾಗ, ಸಾರಥಿಯು ಅವನನ್ನು ಕುರಿತು 'ನಾಯಿಯು ರಥವನ್ನು ಏರುವದು ಯುಕ್ತವಲ್ಲ' ಎಂದು ಹೇಳಿದನು. 'ನಾನು ಆ ನಾಯಿಯನ್ನು ಬಿಟ್ಟು ರಥವನ್ನು ಏರಲಾರೆನು' ಎಂದು ಧರ್ಮರಾಜನು ಆಗ್ರಹಪೂರ್ವಕವಾಗಿ ಹೇಳಿದಾಗ, ಯಮಧರ್ಮನು ನಾಯಿಯ ರೂಪದಲ್ಲಿದ್ದ ತನ್ನ ನಿಜವಾದ ಯಮನಸ್ವರೂಪವನ್ನು ಧರ್ಮರಾಜನಿಗೆ ಪ್ರಕಟಪಡಿಸಿದನು. ಹೀಗೆ ಯಮನು ದಯಾಮಯಿಯಾದ ಕುಂತೀಪುತ್ರನಾದ ಧರ್ಮರಾಜನ ರೂಪದಲ್ಲಿಯ ತನಗೇ ಕೃಪಾಗುಣರೂಪವಾದ ಕೀರ್ತಿಯನ್ನು ಧರ್ಮಯುಕ್ತವಾದ ಸದ್ವಾಕ್ಯಗಳಿಂದ ಲೋಕದಲ್ಲಿ ಪ್ರಸಿದ್ಧಿಪಡಿಸಿದನು.

ಅನಂತರ ಶ್ರೀಹರಿಗೆ ಪ್ರಿಯನಾದ ಧರ್ಮರಾಜನು, ಆ ದೇವರಥವನ್ನು ಏರಿಕೊಂಡು, ಭೂಮಿ-ಅಂತರಿಕ್ಷಗಳ ಮೇಲೆ ಇರುವ ಎಲ್ಲ ಲೋಕಗಳನ್ನು ದಾಟಿ, ಯಮಲೋಕದಲ್ಲಿ ಇದ್ದ ವೀರಸ್ವರ್ಗಸ್ಥರಾದ ಎಲ್ಲ ರಾಜರನ್ನು ಅತಿಕ್ರಮಿಸಿಕೊಂಡು, ಮುಂದೆ ಹೋದನು. ಧರ್ಮರಾಜನು ದೇವತೆಯಾದ್ದರಿಂದ, ಅವನು ಯಮನ ಸಭೆಯನ್ನು ಮಾತ್ರ ಸೇರಲು ಯೋಗ್ಯರಾದ ರಾಜರುಗಳಿಗಿಂತಲೂ ಉತ್ತಮವಾದ ಸ್ಥಾನವನ್ನು ಪಡೆದನು. ಯಾಕೆಂದರೆ ದೇವತೆಗಳು ಇಂದ್ರಸಭೆಯಲ್ಲಿ ನೆಲೆಸುವ ಯೋಗ್ಯತೆ ಉಳ್ಳವರು.

**ಇಂದ್ರಲೋಕದಲ್ಲಿ ಧರ್ಮರಾಜನು** - ಧರ್ಮರಾಜನು ಎಲ್ಲ ಲೋಕಗಳ ಮಧ್ಯದಲ್ಲಿ ಶ್ರೇಷ್ಠವಾದ, ಇಂದ್ರನಿಂದ ತನ್ನ ಕ್ರೀಡೆಗೋಸ್ಕರ ನಿರ್ಮಿಸಲ್ಪಟ್ಟ, ಲೋಕವನ್ನು ಹೊಂದಿದನು. 'ಇದೇ ನಿನಗೆ ವಾಸಕ್ಕೆ ಯೋಗ್ಯವಾದ ಸ್ಥಾನವು' ಎಂದು ದೇವತೆಗಳಿಂದ ಹೇಳಿಸಿಕೊಳ್ಳಲ್ಪಟ್ಟವನಾದನು. ಧರ್ಮರಾಜನು ಅಲ್ಲಿದ್ದ ದುರ್ಯೋಧನನನ್ನು ಕಂಡನು. ಪ್ರಕಾಶಮಾನನಾಗಿ, ಎಲ್ಲರಿಕಿಂತಲೂ ಮೇಲಿನ ಸ್ಥಾನದಲ್ಲಿ ತನ್ನ ಸಹೋದರರಿಂದ ಸಹಿತನಾಗಿ ಮೆರೆಯುತ್ತಿದ್ದ ದುರ್ಯೋಧನನನ್ನು ನೋಡಿ ಅತ್ಯಂತ ಕೋಪಯುಕ್ತನಾದ ಧರ್ಮರಾಜನು ತನ್ನ ಮಂಗಳಕರವಾದ ಎರಡೂ ಕಣ್ಣುಗಳನ್ನು ಮುಚ್ಚಿಕೊಂಡು ದೇವತೆಗಳನ್ನು ಕೇಳಿದನು. "ನನ್ನ ಸಹೋದರರು ಎಲ್ಲಿ? ದ್ರೌಪದಿಯು ಎಲ್ಲಿ? ಕರ್ಣನು ಎಲ್ಲಿ? ಧೃಷ್ಟದ್ಯುಮ್ನನೇ ಮೊದಲಾದ ಇತರ ಬಾಂಧವರು ಎಲ್ಲಿ? ಘಟೋತ್ಕಚ ಮೊದಲಾದ ಪುತ್ರರುಗಳು ಎಲ್ಲಿ? ನನ್ನ ಸಂಬಂಧಿಕರುಗಳಾದ ಯಾದವರು ಎಲ್ಲಿ?" ಎಂದು. ಆಗ ದೇವತೆಗಳು 'ನಿನಗೆ ಈ ಸಹೋದರರಿಂದ ಏನು ಪ್ರಯೋಜನವು? ಸ್ವರ್ಗದಲ್ಲಿ ತಮ್ಮಿಂದ ಮಾಡಲ್ಪಟ್ಟ ಕರ್ಮವನ್ನು ತಾವೇ ಭೋಗಿಸುವರು' ಎಂದು ಅವನಿಗೆ ಹೇಳಿದರು.

ಹೀಗೆ ಹೇಳಿಕೊಳ್ಳಲ್ಪಟ್ಟ ಧರ್ಮರಾಜನು ದೇವತೆಗಳನ್ನು ಕುರಿತು - 'ಈ ದುರ್ಯೋಧನನು ಅತಿ ಪಾಪಿಷ್ಠ, ಭೂಮಿಯಲ್ಲಿರುವ ಎಲ್ಲ ರಾಜರ ನಾಶಕ್ಕೆ ಕಾರಣೀಭೂತನಾದವನು. ಎಲ್ಲ ವಿಷಯದಲ್ಲಿಯೂ ಅತ್ಯಂತ ಸಂಶಯವುಳ್ಳವನು,

ಮಿತ್ರರಿಗೆ ದ್ವೇಷಿಯಾದವನು, ನಾರಾಯಣನಿಗೆ ವಿಮುಖನಾದವನು, ಅತಿಕ್ರೂರನು, ನಾಸ್ತಿಕನು, ಮಹಾಧೂರ್ತನು, ವಿಷ್ಣು-ವೈಷ್ಣವ ದ್ವೇಷಿ ಇಂತಹ ದುರ್ಯೋಧನನು ಸರ್ವೋತ್ತಮವಾದ ಸ್ಥಾನವನ್ನು ಯಾವ ಕಾರಣದಿಂದ ಹೊಂದಿದನು? ಸಕಲ ಧರ್ಮಗಳನ್ನು ತಿಳಿದವರಾದ, ಪರಮಾತ್ಮನನ್ನೇ ಆಶ್ರಯಿಸಿದ, ಪರಮ ಧರ್ಮದಲ್ಲಿಯೇ ನಿಷ್ಠರಾದ ನನ್ನ ಪ್ರಿಯ ಭ್ರಾತೃಗಳು ಇಲ್ಲಿ ಹೇಗೆ ಕಾಣಿಸಲ್ಪಡುವದಿಲ್ಲ? ಸಜ್ಜನರಾದ ನನ್ನ ಸಹೋದರಾದಿಗಳು ಎಲ್ಲಿ ಇರುವರೋ, ಅದು ನರಕದಲ್ಲಿಯೇ ಆಗಲಿ, ನಾನು ಅಲ್ಲಿಯೇ ಇರಬೇಕು. ಅತಿ ಪಾಪಿಷ್ಠರಾದ ದುರ್ಯೋಧನಾದಿಗಳ ಸಂಗಡ ಈ ಸ್ವರ್ಗದಲ್ಲಿ ನಾನು ಇರಲಾರೆ' ಎಂದು ನುಡಿದನು.

***ಧರ್ಮರಾಜನಿಗೆ ಕೃತ್ರಿಮ ನರಕದರ್ಶನ*** - 'ಅತ್ಯಂತ ವೀರನಾದ ಈ ದುರ್ಯೋಧನನಿಗೆ ಈ ಸರ್ವೋತ್ತಮವಾದ ಸ್ಥಾನವು ಹೊಂದಲು ಯೋಗ್ಯವಾಗಿದೆ' ಎಂದು ದೇವತೆಗಳು ಧರ್ಮರಾಜನನ್ನು ಕುರಿತು ಹೇಳಿದರು. ಅನಂತರ ಸ್ವಕೀಯರಾದ ಭೀಮಾದಿಗಳನ್ನು ನೋಡಲು ಇಚ್ಛಿಸಿದ ಧರ್ಮರಾಜನೊಂದಿಗೆ ತಮ್ಮ ದೂತನನ್ನು ಕಳುಹಿಸಿ ಕೊಟ್ಟರು.

ಧರ್ಮರಾಜನು ದೂತನು ತೋರಿಸಿದ ಮಾರ್ಗದಲ್ಲಿ ನಡೆದುಹೋದನು. ಆ ಮಾರ್ಗದಲ್ಲಿ ಸಹಿಸಲು ಅಶಕ್ಯವಾದ ದುರ್ಗಂಧ ಮತ್ತು ಕತ್ತಲೆಯು ಆವರಿಸಿತ್ತು. ಸ್ವಲ್ಪ ದೂರ ಕ್ರಮಿಸಿದ ಮೇಲೆ, ಆ ದುರ್ಗಂಧವನ್ನು ಸಹಿಸಲಿಕ್ಕೆ ಅಶಕ್ಯವಾಗಿ, ಧರ್ಮರಾಜನು ಹಿಂತಿರುಗಲು ಇಚ್ಛಿಸಿದನು. ಆಗ ಆ ದುರ್ಗಂಧಸ್ಥಲದಲ್ಲಿ ತನ್ನ ಸಹೋದರರ ಮಾತುಗಳಂತೆ ಇದ್ದ ಮಾತುಗಳನ್ನು ಕೇಳಿಸಿಕೊಂಡನು. 'ಮಹಾರಾಜನೇ! ಒಂದು ಕ್ಷಣ ಇಲ್ಲಿ ನಿಲ್ಲು. ನಿನ್ನ ಸನ್ನಿಧಾನದ ಬಲದಿಂದ ನಮಗೆ ನರಕಭೋಗದ ವ್ಯಥೆಯು ಕಡಿಮೆಯೆನಿಸುತ್ತದೆ' ಎಂದು ಕೇಳಿಸಿತು. ಧರ್ಮರಾಜನು ಆ ಧ್ವನಿಯಲ್ಲಿಯ ದೈನ್ಯವನ್ನು ಕೇಳಿ, ತನ್ನ ಸಹೋದರಾದಿಗಳೇ ಮಾತನಾಡುವವರು ಎಂದು ಸಂದೇಹಿಸಿ, ಸ್ಖಲಿತವಾದ ಧ್ವನಿಯುಳ್ಳನಾಗಿ, 'ನೀವು ಯಾರು?' ಎಂದು ಪ್ರಶ್ನೆ ಮಾಡಿದನು. 'ನಾನು ಭೀಮಸೇನನು', 'ನಾನು ಅರ್ಜುನನು', 'ನಾನು ಕರ್ಣನು' ಇತ್ಯಾದಿಯಾಗಿ ಹೇಳಿದಂತಾಯಿತು. ಧರ್ಮರಾಜನು ಅದನ್ನು ಕೇಳಿಸಿಕೊಂಡನು. ದಯೆಯಿಂದ ಕೂಡಿದ ದುಃಖ ಮತ್ತು ಕ್ರೋಧವುಳ್ಳವನಾಗಿ ಧರ್ಮರಾಜನು ದೂತನನ್ನು ಕುರಿತು 'ನೀನು ಇಚ್ಛಾನುಸಾರವಾಗಿ ಹಿಂತಿರುಗು. ನಾನು ಇಲ್ಲಿಂದ ಹೋಗಲಾರೆನು. ಇಂತಹ ದುಃಖಯುಕ್ತರಾದ ನಮ್ಮವರನ್ನು ಬಿಟ್ಟು ನನಗೆ ಸ್ವರ್ಗದಿಂದಲೂ ಪ್ರಯೋಜನವಿಲ್ಲ' ಎಂದು ಹೇಳಿದನು. ಅದನ್ನು ಕೇಳಿದ ದೂತನು ಅಲ್ಲಿಂದ ತೆರಳಿದನು. ಧರ್ಮರಾಜನು ಅದೇ ಸ್ಥಳದಲ್ಲಿಯೇ ನಿಂತನು.

***ಇಂದ್ರಾದಿ ದೇವತೆಗಳ ಆಗಮನ*** - ದೂತನು ಅಲ್ಲಿಂದ ಹೋದ ಮೇಲೆ ಇಂದ್ರನೇ ಮೊದಲಾದ ದೇವತೆಗಳು ಧರ್ಮರಾಜನಲ್ಲಿ ಅತ್ಯಂತ ಸ್ನೇಹವಶದಿಂದ ಆ ದುರ್ಗಂಧ ಸ್ಥಾನಕ್ಕೆ ಬಂದರು. ಇಂದ್ರಾದಿಗಳು ಅಲ್ಲಿ ಬಂದೊಡನೆಯೇ ಆ ದುಃಖಯುಕ್ತ ಮಾತುಗಳು ಕೇಳಿ ಬರಲಿಲ್ಲ. ದುರ್ಗಂಧವಾಗಲಿ, ಕತ್ತಲೆಯಾಗಲಿ ಕಾಣದಾದವು. ಇಂದ್ರಾದಿಗಳು ಬಂದ ಸಮಯದಲ್ಲಿ ಯುಧಿಷ್ಠಿರನು ಭ್ರಮರಹಿತವಾದ ಮನಸ್ಸುಳ್ಳವನಾದನು. ತಾನು ಈ ಮೊದಲು ನೋಡಿದ ನರಕಸದೃಶವಾದ ಸ್ಥಾನವನ್ನು, ಈಗ ಸ್ವರ್ಗಕ್ಕಿಂತಲೂ ಉತ್ತಮವಾದ ಸ್ಥಾನವನ್ನಾಗಿ ಕಂಡನು.

***ಯಮಧರ್ಮರಾಜನಿಂದ ಧರ್ಮರಾಜನ ಪ್ರಶಂಸೆ*** - ಆ ಸಮಯದಲ್ಲಿ ಪುನಃ ಯಮನು ತನ್ನ ಉತ್ತಮ ಕೀರ್ತಿಯನ್ನು ಪ್ರಕಾಶಪಡಿಸುವವನಾಗಿ, ಯುಧಿಷ್ಠಿರರೂಪದ ತನ್ನನ್ನು ಕುರಿತು ಹೇಳಿದನು - 'ಧರ್ಮಕ್ಕಿಂತಲೂ ದಯೆಯು ಯಾವಾಗಲೂ ಉತ್ತಮವಾಗಿದೆ. ಅದನ್ನು ನಾನು ನಿನ್ನಲ್ಲಿ ವಿಶೇಷವಾಗಿ ಮೂರು ಬಾರಿ ಕಂಡಿದ್ದೇನೆ' ಎಂದು. ಯಕ್ಷಪ್ರಶ್ನೆಯ ಪ್ರಸಂಗದಲ್ಲಿ 'ನಕುಲ ಬದುಕಲಿ' ಎಂದು ಹೇಳಿದ್ದು, ಸ್ವರ್ಗಾರೋಹಣ ಸಂದರ್ಭದಲ್ಲಿ ನಾಯಿಯೂ ಸಹ ರಥದಲ್ಲಿ ತನ್ನೊಂದಿಗೆ ಬರಬೇಕೆಂದು ಆಗ್ರಹಿಸಿದ್ದು, ಮತ್ತು ಈ ಪ್ರಸಂಗದಲ್ಲಿ ತನ್ನ ಸುಖಕ್ಕಿಂತ ಬಂಧುಗಳ ಹಿತವು ಮುಖ್ಯ ಎಂದು ಹೇಳಿದ್ದು - ಇವು ಯಮಧರ್ಮನು ಯುಧಿಷ್ಠಿರನನ್ನು ಪರೀಕ್ಷಿಸಿದ ಮೂರು ಪ್ರಸಂಗಗಳು.

***ಧರ್ಮರಾಜನಿಗೆ ಕೃತ್ರಿಮನರಕ ದರ್ಶನದ ಕಾರಣ*** - ಇಂದ್ರನೂ ಸಹ ಧರ್ಮರಾಜನನ್ನು ಕುರಿತು ಹೇಳಿದನು - 'ದ್ರೋಣನಿಗ ನೀನು ಸುಳ್ಳು ಹೇಳಿದ್ದಕ್ಕಾಗಿ ನಿನಗೆ ಸುಳ್ಳು ನರಕವು ತೋರಿಸಲ್ಪಟ್ಟಿದೆ. ಏಕೆಂದರೆ ನಿನಗೆ ಕೃಷ್ಣನ ಮಾತಿನಲ್ಲಿ ಪೂರ್ಣ ವಿಶ್ವಾಸವಿರಲಿಲ್ಲ. 'ಅಶ್ವತ್ಥಾಮೋ ಹತಃ' ಎಂದು ಹೇಳು ಎಂದು ಕೃಷ್ಣನಿಂದ ಹೇಳಲ್ಪಟ್ಟಿದ್ದನ್ನು, ಹಾಗೆ ಹೇಳಿದರೆ ಸುಳ್ಳಾಡಿದಂತಾದೀತು ಎಂದು ಬಗೆದ ನೀನು, 'ಕುಂಜರಃ' ಎಂಬ ಪದವನ್ನು ಸೇರಿಸಿಕೊಂಡು ನುಡಿದೆ. ಆದ್ದರಿಂದಲೇ ಶ್ರೀಕೃಷ್ಣನ ಮಾತಿನಲ್ಲಿ ನಿನಗೆ ಅತ್ಯಂತ ವಿಶ್ವಾಸವು ಇರಲಿಲ್ಲ. ಸಕಲಧರ್ಮಪ್ರವರ್ತಕನಾದ ಶ್ರೀಕೃಷ್ಣನ ಮಾತಿನಲ್ಲಿಯೇ ಪಾಪದ ಸಂದೇಹಪಟ್ಟಿದ್ದರಿಂದ ನಿನಗೆ ಈ ದುರ್ಗಂಧವಾದ ತಮಸ್ಸು ಮೊದಲಾದವುಗಳು ನರಕದಲ್ಲಿ ಎನ್ನುವ ಭ್ರಾಂತಿಯಿಂದ ತೋರಿಸಲ್ಪಟ್ಟವು. ಅದರಿಂದಾಗಿ ನಿನಗೆ ನರಕದರ್ಶನವಾಯಿತು ಎಂದು ತಿಳಿದುಕೋ. ಶ್ರೀಕೃಷ್ಣನ ಆಜ್ಞೆಯಿಂದ, ಎಲ್ಲ ಶ್ರುತಿ-ಸ್ಮೃತಿ-ಪುರಾಣಗಳಿಗೆ ವಿರುದ್ಧವಾದ ಆಚರಣವುಳ್ಳವನಾದರೂ, ಅವನಿಗೆ ಯಾವ ಪಾಪವೂ ಬರಲಾರದು ಎಂದು ಶ್ರುತಿ-ಸ್ಮೃತಿಗಳಲ್ಲಿ ಪ್ರಸಿದ್ಧವಾಗಿದೆ' ಎಂದು.

ದೇವತೆಯಾದ ಧರ್ಮರಾಜನಿಗೆ ಸಾಕ್ಷಾತ್ತಾಗಿ ನರಕ ದುಃಖವು ಕೂಡುವುದಿಲ್ಲ. ಸ್ವಪ್ನ ಪದಾರ್ಥದಂತೆ ತಾತ್ಕಾಲಿಕವಾದ ದುರ್ಗಂಧಾದಿಗಳನ್ನು ಸೃಷ್ಟಿಮಾಡಿ ದೇವತೆಗಳು ತೋರಿಸಿರುವರು. ಇದು ಕೃಷ್ಣನ ಮಾತಿನಲ್ಲಿಯ ಅವಿಶ್ವಾಸರೂಪವಾದ ಪಾಪವನ್ನು ಮಾಡಿದ ಧರ್ಮರಾಜನಿಗೆ ದುಃಖವನ್ನು ಭೋಗಿಸುವುದಕ್ಕೆ ಸೃಷ್ಟವಾದ ಸುಳ್ಳು ನರಕವು. ಅದರಂತೆ ದೈತ್ಯನಾದ ದುರ್ಯೋಧನನಿಗೂ ಇದು ಸ್ವರ್ಗ ಎಂದು ತಿಳಿಸಿದ್ದೂ ಸಹ ಸುಳ್ಳು ಎಂದೇ ತಿಳಿಯಬೇಕು. ಅದು ಕೃತಕವಾದ ಸ್ವರ್ಗ.

ಅಪರೋಕ್ಷಜ್ಞಾನವು ಹುಟ್ಟಿದ ಮೇಲೆ ಮಾಡಿದ ಪುಣ್ಯಪಾಪಗಳ ಫಲವಿಲ್ಲದಿರುವುದರಿಂದ, ಧರ್ಮರಾಜನಿಗೆ ಈ ಜನ್ಮದಲ್ಲಿ ಮಾಡಿದ ಕೃಷ್ಣವಾಕ್ಯದಲ್ಲಿ ತೋರಿದ ಅವಿಶ್ವಾಸದಿಂದ ಉಂಟಾದ ದೋಷಲೇಪವು ಹೇಗೆ ಕೂಡುತ್ತದೆ ಎಂಬ ಶಂಕೆಗೆ ಸಮಾಧಾನವು ಹೀಗೆ ಇದೆ. ಸ್ತೋತ್ರಮದ್ರೋಹದ ಹೊರತು ಇತರ ಪಾಪಗಳ ಲೇಪವು ಅಪರೋಕ್ಷಜ್ಞಾನಿಗಳಿಗೆ ಸರ್ವಥಾ ಇರುವುದಿಲ್ಲ. ಪರಬ್ರಹ್ಮನ ಅಪರೋಕ್ಷಜ್ಞಾನದ ಸಮಯದಲ್ಲಿಯೇ ಭಗವಂತನ ಅಪ್ರೀತಿರೂಪವಾದ ಸ್ತೋತ್ರಮದ್ರೋಹರೂಪ ವಿರುದ್ಧಕರ್ಮಗಳನ್ನು ಮಾಡಿದರೆ, ಅದು ಭೋಗಿಸಲಿಕ್ಕೆ ಪ್ರಾರಂಭಿಸಿದ ಪ್ರಾರಬ್ಧಪಾಪದ ಸೂಚಕವು. ಯುಧಿಷ್ಠಿರನಿಗೆ ನರಕ ದರ್ಶನವಾದದ್ದು ಅವನ ಪ್ರಾರಬ್ಧದ ಫಲವೆಂದು ತಿಳಿಯಬೇಕು. ಕರ್ಮವಶದಿಂದ ಆಯುಷ್ಯ ತೀರಿದವನ ಮರಣಕ್ಕೆ ವಿಷಭಕ್ಷಣವು ಕಾರಣವಾದಂತೆ, ಧರ್ಮರಾಜನ ನರಕದರ್ಶನವು ಅವನ ಪ್ರಾರಬ್ಧಫಲವು.

"ನನ್ನ ಸಹೋದರರು ಎಲ್ಲಿ ಇರುವರು?" ಎಂಬ ಧರ್ಮರಾಜನ ಪ್ರಶ್ನೆಗೆ, ಇಂದ್ರದೇವನು ಹೇಳಿದನು. "ಈ ಸ್ವರ್ಗದಲ್ಲಿ ಯಾಗಮಾಡುತ್ತಿರುವ ದೇವತೆಗಳಿಂದ ಉತ್ತಮವಾಗಿ ಪೂಜಿತರಾದ, ಶೋಭಾಯಮಾನರಾದ ಭೀಮಾದಿಗಳನ್ನು ನೋಡು. ಶಮದಮಾದಿಗಳಿಂದ ಅತಿಶುದ್ಧರಾದ, ಉತ್ತಮ ಕರ್ಮಗಳನ್ನು ಪರಮಾತ್ಮನಿಗೆ ಸಮರ್ಪಿಸುತ್ತಿರುವ, ಪರಬ್ರಹ್ಮನನ್ನು ಅಪರೋಕ್ಷೀಕರಿಸಿದ, ಪರಮಾತ್ಮನೇ ಆಶ್ರಯವಾಗಿ ಉಳ್ಳ, ಉತ್ತಮ ಧ್ಯಾನದಿಂದ ತಮ್ಮ ದೇಹಗಳನ್ನು ತ್ಯಜಿಸಿರುವ, ದೇವತೆಗಳಿಗೂ ಅಧಿಪತಿಗಳಾದ ಭೀಮಾದಿಗಳಿಗೆ ಯಾವ ಕಾರಣದಿಂದಲೂ ದುಃಖವು ಆಗಲಾರದು."

'ದೇವಶ್ರೇಷ್ಠರಾದ ವಾಯುದೇವರೇ ಮೊದಲಾದವರು ಭೂಮಿಯಲ್ಲಿ ಭೀಮಾದಿರೂಪದಿಂದ ಅವತಾರಮಾಡಿ, ಭೂಮಿಗೆ ಭಾರಭೂತರಾದ ದೈತ್ಯರನ್ನು ಸಂಹಾರ ಮಾಡಲು ಇಚ್ಛಿಸಿದ ಪರಮಾತ್ಮನಿಗೆ ತಮ್ಮ ಬುದ್ಧಿ-ಕರ್ಮಗಳನ್ನು ಸಮರ್ಪಿಸಿ, ಹರಿಯನ್ನು ಸಂತೋಷಪಡಿಸಿ, ಆಮೇಲೆ ಶ್ರೀಹರಿಯಿಂದಲೇ ಕೂಡಿಕೊಂಡು ಪುನಃ ಸ್ವರ್ಗವನ್ನು ಹೊಂದಿದರು' ಎಂದು ಹೇಳಿದನು.

***ದೇಹತೊರೆಯಲು ಧರ್ಮರಾಜನಿಗೆ ಇಂದ್ರನಿಂದ ಸಂದೇಶ*** - 'ಧರ್ಮರಾಜನೇ, ಈಗಲೂ ಕೂಡ ನಿನಗೆ ಮನುಷ್ಯ ಸ್ವಭಾವವು ಹೋಗಿಲ್ಲ. ಮನುಷ್ಯಸ್ವಭಾವದಿಂದಲೇ ನೀನು ದುರ್ಯೋಧನಾದಿಗಳನ್ನು ದ್ವೇಷ ಮಾಡುತ್ತಿರುವಿ.

ದುರ್ಯೋಧನಾದಿಗಳು ಪ್ರಾರಬ್ಧಪುಣ್ಯದ ಫಲದಿಂದ ಅಂತಹ ಕೃತಕಸ್ವರ್ಗದಲ್ಲಿಯ ಭೋಗವನ್ನು ಪಡೆದರು. ಅದು ತಾತ್ಕಾಲಿಕವಾದುದು. ಅದನ್ನು ತಿಳಿಯದೇ, ದುರ್ಯೋಧನಾದಿಗಳು ಇಂತಹ ಪುಣ್ಯಭೋಗಗಳನ್ನು ಹೊಂದಿರುವುದನ್ನು ಸಹಿಸದೆಯೇ, ನೀನು ಅಸಹನೆಯಿಂದ ದ್ವೇಷ ಮಾಡುತ್ತಿರುವಿ. ಭೀಮಸೇನ ದ್ರೌಪದಿಯರು ದುರ್ಯೋಧನನನ್ನು ಎಲ್ಲರಿಗಿಂತ ಹೆಚ್ಚು ದ್ವೇಷಮಾಡಿದವರು. ಆದರೆ ಅದು ತಾತ್ವಿಕ ದ್ವೇಷವಾಗಿದೆ. ತಮೋಯೋಗ್ಯನಾದ ದುರ್ಯೋಧನನು ಅಂಧಂತಮಸ್ಸಿನಲ್ಲಿ ಮಹಾದುಃಖವನ್ನು ಅನುಭವಿಸಲಿ ಎಂಬ ಅಭಿಪ್ರಾಯದಿಂದಲೇ ಭೀಮ-ದ್ರೌಪದಿಯರು ದ್ವೇಷ ಮಾಡುವರು. ಆದ್ದರಿಂದ ಅದು ಹರಿಪ್ರೀತಿಕರವಾಗಿ ದೇವಸ್ವಭಾವವವೇ ಆಯಿತು, ಮನುಷ್ಯ ಸ್ವಭಾವವಲ್ಲ. ಈ ವ್ಯತ್ಯಾಸವನ್ನು ತಿಳಿದುಕೋ. ಈಗ ನೀನು ಸ್ವರ್ಗದಲ್ಲಿರತಕ್ಕ ಮಂದಾಕಿನಿಯಲ್ಲಿ ಸ್ನಾನಮಾಡಿ, ಈ ಮಂದಾಕಿನಿಯಲ್ಲಿ ನಿನ್ನ ದೇಹವನ್ನು ತ್ಯಜಿಸಿ, ದೇವತ್ವವನ್ನು ಹೊಂದು' ಎಂದು ದೇವೇಂದ್ರನು ನುಡಿದನು.

ದುರ್ಯೋಧನಾದಿಗಳು ಸರ್ವೋತ್ತಮವಾದ ಸ್ಥಾನವನ್ನು ಹೇಗೆ ಹೊಂದಿದರು ಎಂಬುದಕ್ಕೆ ದೇವೇಂದ್ರನ ಉತ್ತರವಿದು – 'ಮಹಾಪಾಪಿಗಳಾದ ದುರ್ಯೋಧನಾದಿಗಳು ಭೋಗಿಸಲಿಕ್ಕೆ ಪ್ರಾರಂಭಿಸಿದ ಯಜ್ಞದಾನಾದಿ ಪುಣ್ಯಕರ್ಮಗಳ ಫಲರೂಪವಾಗಿ ಸ್ವರ್ಗದಂತಿರುವ (ಕೃತಕ ಸ್ವರ್ಗ) ಸ್ಥಾನದಲ್ಲಿ ಭೋಗಿಸುತ್ತಿದ್ದಾರೆ. ಈ ಸ್ವರ್ಗಭೋಗದಿಂದ ಪುಣ್ಯನಾಶವನ್ನು ಹೊಂದಿ, ಸುಖಲೇಶವೂ ಇಲ್ಲದ ದುಃಖಮಯವಾದ ನಿತ್ಯನರಕದಲ್ಲಿ ಪರಮಾತ್ಮನ ಅಧೀನರಾಗಿ ಬೀಳುವರು. ಇದು ಪುನರಾವೃತ್ತಿರಹಿತವಾದ ಸ್ಥಾನ. ದೇವಾಂಶದಿಂದ ಸಂಭೂತರಾದವರೆಲ್ಲರೂ ಬ್ರಹ್ಮಪ್ರಲಯಕಾಲದಲ್ಲಿ ತಮ್ಮ ಮೂಲರೂಪವನ್ನು ಹೊಂದಿ, ತಮ್ಮ ತಮ್ಮ ಯೋಗ್ಯತಾನುಗುಣವಾದ ಮೋಕ್ಷವನ್ನು ಹೊಂದುವರು. ದೈತ್ಯರಿಗೆ ತಮಃಪ್ರಾಪ್ತಿ ವಿಷಯದಲ್ಲಿಯೂ, ದೇವತೆಗಳಿಗೆ ಮೋಕ್ಷಪ್ರಾಪ್ತಿ ವಿಷಯದಲ್ಲಿಯೂ ಯಾವ ವಿಚಾರಿಸುವ ಅಂಶವೂ ಇರುವದಿಲ್ಲ' ಎಂದು.

***ಧರ್ಮರಾಜನಿಂದ ದೇಹತ್ಯಾಗ*** - ಹೀಗೆ ಹೇಳಿಸಿಕೊಳ್ಳಲ್ಪಟ್ಟ ಧರ್ಮರಾಜನು ಶೀಘ್ರದಲ್ಲಿಯೇ ಸ್ವರ್ಗದಲ್ಲಿರತಕ್ಕ ಭಾಗೀರಥಿಯಲ್ಲಿ ಮಿಂದು, ಆ ಭಾಗೀರಥಿಯಲ್ಲಿ ಮನುಷ್ಯ ಶರೀರವನ್ನು ಬಿಟ್ಟನು. ತತ್ಕ್ಷಣದಲ್ಲಿಯೇ ದೇವಶರೀರವನ್ನು ಹೊಂದಿ, ಕೋಪ ಮೊದಲಾದ ದೋಷಗಳನ್ನು ಕಳೆದುಕೊಂಡನು. ಧರ್ಮರಾಜನು ತನ್ನ ತಮ್ಮಂದಿರೆಲ್ಲರನ್ನೂ ಅವರವರ ಮೂಲರೂಪರಾದ ದೇವತೆಗಳನ್ನು ಅತಿ ಸಮೀಪದಲ್ಲಿ ನೋಡಿದನು. ಮರುದ್ಗಣದ ಮಧ್ಯದಲ್ಲಿ ಶ್ರೀಮುಖ್ಯಪ್ರಾಣನ ಸಮೀಪದಲ್ಲಿ ಪ್ರಕಾಶಿಸುವ ಭೀಮಸೇನನನ್ನು ನೋಡಿದನು.

***ಇಂದ್ರನಿಂದ ದ್ರೌಪದೀದೇವಿಯ ಸ್ವರೂಪದ ಉಪದೇಶ*** - ಧರ್ಮರಾಜನು ಭೀಮಸೇನನ ಬಳಿಯಲ್ಲಿಯೇ, ಇತರ ದೇವತಾಸ್ತ್ರೀಯರಿಗಿಂತಲೂ ಅಧಿಕವಾದ ಕಾಂತಿಯಿಂದ ಶೋಭಿಸುತ್ತಿರುವ ದ್ರೌಪದೀದೇವಿಯನ್ನು ನೋಡಿದನು. ಸಭೆಯಲ್ಲಿರುವ ದೇವತೆಗಳ ಪತ್ನಿಯರನ್ನು ದಾಟಿಕೊಂಡು, ದ್ರೌಪದೀದೇವಿಯನ್ನು ಮುಟ್ಟಲಿಕ್ಕೆ ಧರ್ಮರಾಜನು ಸಂಸ್ಕಾರವಶದಿಂದ ಇಚ್ಛಿಸಿದನು. ದೇವೇಂದ್ರನು ದ್ರೌಪದೀದೇವಿಯನ್ನು ಮುಟ್ಟಬೇಡವೆಂದು ಧರ್ಮರಾಜನಿಗೆ ನಿಷೇಧಮಾಡಿ, ಅವನನ್ನು ಕುರಿತು ಈ ಕೆಳಗಿನಂತೆ ಹೇಳಿದನು.

'ಈ ದ್ರೌಪದಿದೇವಿಯು, ಸಜ್ಜನರಿಗೆ ಹಿತರೂಪನೂ, ಸರಸ್ವತ್ಯಾದಿಗಳಿಗೆ ನಿಯಾಮಕನೂ, ಜೀವಶ್ರೇಷ್ಠನೂ, ಮುಖ್ಯಪ್ರಾಣಸ್ವರೂಪನೂ ಆದ ವಾಯುದೇವರ ಪ್ರಾಣಪ್ರಿಯೆಯು ಆಗಿರುತ್ತಾಳೆ. ಸುಖಸ್ವರೂಪನಾದ ಈ ವಾಯುವಿನಲ್ಲಿ ಯಾವಾಗಲೂ ಕ್ರೀಡಿಸುತ್ತಿರುವುದರಿಂದ, ವಾಯುವಿನ ಹೆಂಡತಿಯಾದ ಭಾರತಿಗೆ (ದ್ರೌಪದೀದೇವಿಗೆ) ಶ್ರೀಃ ಎಂಬ ಹೆಸರಿರುವುದು. ನಿಮ್ಮ ನಾಲ್ವರ ಶರೀರದಲ್ಲಿ ಪ್ರವಿಷ್ಟನಾದ ವಾಯುದೇವನ ಹಾಗೂ ಭೀಮಸ್ವರೂಪನಾದ ವಾಯುದೇವನ ಭೋಗಕ್ಕಾಗಿ, ಮತ್ತು ನಿಮ್ಮೆಲ್ಲರ ಪ್ರೀತಿಗೋಸ್ಕರ, ನಿಮ್ಮ ಪತ್ನಿಯರಿಂದ ಕೂಡಿದವಳಾಗಿ ಈ ಭಾರತಿಯು ಪುರುಷೋತ್ತಮನಾದ ಶ್ರೀಹರಿಯಿಂದ ಸೃಷ್ಟಳಾಗಿದ್ದಳು. ಆದರಿಂದಾಗಿ ದ್ರೌಪದೀದೇವಿಗೆ ಭೀಮಸೇನನಲ್ಲಿ ಪ್ರೀತಿಯು ಅತ್ಯಧಿಕವಾಯಿತು.

ಭೀಮಸೇನನ ನಂತರ ಅರ್ಜುನನಲ್ಲಿಯೂ, ಅನಂತರ ನಿನ್ನಲ್ಲಿಯೂ, ಅನಂತರ ನಕುಲನಲ್ಲಿಯೂ ಮತ್ತು ಸಹದೇವನಲ್ಲಿಯೂ, ವಾಯುದೇವರ ಸನ್ನಿಧಾನಾಖ್ಯಗುಣದ ಅನುಸಾರವಾಗಿ, ಆವೇಶತಾರತಮ್ಯ ಕ್ರಮದಿಂದ, ದ್ರೌಪದೀದೇವಿಯು ಪ್ರೀತಿಯನ್ನು ಹೊಂದಿದ್ದಳು. ಈಗ ದ್ರೌಪದಿಯು ನಿಮ್ಮ ಹೆಂಡಂದಿರಾದ ಶಚೀ ಮೊದಲಾದವರ ಆವೇಶವಿಲ್ಲದಿರುವ ಉತ್ತಮ ದೇಹವನ್ನು ಹೊಂದಿದ ಶುದ್ಧ ಭಾರತೀಸ್ವರೂಪಳು. ಅದರಂತೆ ನೀವೆಲ್ಲರೂ ಕೂಡ ವಾಯುದೇವರ ವಿಶೇಷಾವೇಶರಹಿತರಾಗಿ ನಿಮ್ಮ ಮೂಲರೂಪದ ದೇಹಗಳಲ್ಲಿ ಇರುವಿರಿ. ಆ ಕಾರಣದಿಂದ ಈ ಮುಖ್ಯಪ್ರಾಣನ ಹೆಂಡತಿಯಾದ ದ್ರೌಪದೀದೇವಿಯನ್ನು ಮುಟ್ಟುವ ವಿಷಯದಲ್ಲಿ ನಿಮಗೆ ಪಾವಿತ್ರ್ಯವು ಸಾಲದು. ಮುಟ್ಟುವ ಯೋಗ್ಯತೆಯೂ ಇಲ್ಲ. ಮನುಷ್ಯ ದೇಹದಲ್ಲಿ ಇದ್ದಾಗ ಆವೇಶಬಲದಿಂದ ಒದಗಿದ್ದ ಯೋಗ್ಯತೆಯು, ದೇವದೇಹವನ್ನು ಪಡೆದ ನಿಮಗೆ ಇಲ್ಲವಾದ್ದರಿಂದ, ದ್ರೌಪದಿಯನ್ನು ಸ್ಪರ್ಶ ಮಾಡುವುದು ಸರ್ವಥಾ ಅಶಕ್ಯವು. ಮನುಷ್ಯ ಶರೀರವುಳ್ಳ ಮನುಷ್ಯರಲ್ಲಿ ಹುಟ್ಟಿದ ದೇವತೆಗೆ, ಮೂಲರೂಪದಲ್ಲಿರುವ ದೇವತೆಗಳನ್ನು ಸ್ಪರ್ಶಿಸಲು ಹೇಗೆ ಅರ್ಹತೆಯಿರುವದಿಲ್ಲವೋ ಇಲ್ಲಿಯೂ ಹಾಗೆಯೇ' ಎಂದು ನುಡಿದನು.

***ಧರ್ಮರಾಜನ ಮಾನುಷಸಂಸ್ಕಾರ ನಾಶ*** - ಇಂದ್ರನು ಹೀಗೆ ಉಪದೇಶ ಮಾಡಲು, ಧರ್ಮರಾಜನು ದ್ರೌಪದಿಯನ್ನು ಮುಟ್ಟುವ ಇಚ್ಛೆಯಿಂದ ನಿವೃತ್ತನಾಗಿ ಹಿಂದೆ ಸರಿದನು. ಧರ್ಮರಾಜನಲ್ಲಿಯ ಮನುಷ್ಯಸಂಸ್ಕಾರವನ್ನು ನಾಶಪಡಿಸುವದಕ್ಕಾಗಿ, ಶ್ರೀಹರಿಯ ದಕ್ಷಿಣ ಸ್ತನದಿಂದ ಹುಟ್ಟಿರುವ ಧರ್ಮರೂಪಿಯಾದ ಯಮನು, ಆ ಧರ್ಮರಾಜನನ್ನು ತಾನಾಗಿಯೇ ಅಪ್ಪಿಕೊಂಡನು. ಅನಂತರ ಧರ್ಮರಾಜನು ಮನುಷ್ಯಸಂಸ್ಕಾರ ರಹಿತನಾಗಿ, ಶುದ್ಧವಾದ ಶರೀರವುಳ್ಳವನಾಗಿ ಕೂಡಲೇ ಯಮಧರ್ಮದೇವತೆಗೆ ಸಮಾನನಾದನು.

***ಸಕಲ ಪಾಂಡವರಿಗೆ ಸ್ವರ್ಗದಲ್ಲಿ ಶ್ರೀಕೃಷ್ಣನ ಸಮಾಗಮ*** - ಅನಂತರ ಎಲ್ಲ ಪಾಂಡವರೂ ತಮ್ಮ ಮೂಲರೂಪಗಳಿಂದ ಕೂಡಿಕೊಂಡು ಸಂತೋಷಯುಕ್ತರಾಗಿ ಸ್ವರ್ಗಲೋಕದಲ್ಲಿ ತಮ್ಮ ಮಂದಿರಗಳನ್ನು ಪ್ರವೇಶಿಸಿದರು. ಆ ಲೋಕಗಳಲ್ಲಿ ಮೂಲರೂಪಗಳಿಗೆ ಕಡಿಮೆಯಾಗದ ಭೋಗಗಳೊಂದಿಗೆ, ತಮ್ಮ ಪತ್ನಿಯರಿಂದ ಕೂಡಿದವರಾಗಿ, ಭೃತ್ಯರಿಂದ ಸಹಿತರಾಗಿ, ಸುಖದಿಂದ ವಾಸ ಮಾಡಿದರು. ಕೃಷ್ಣಭಕ್ತರಾದ ಪಾಂಡವರಿಗೆ ಕೃಷ್ಣನ ವಿಯೋಗವೇ ಇಲ್ಲ. ಆದ್ದರಿಂದ ಭೀಮಾದಿ ಪಾಂಡವರಿಗೆ ಆ ಸ್ವರ್ಗದಲ್ಲಿಯೂ ಹಿಂದಿನಂತೆಯೇ ಶ್ರೀಕೃಷ್ಣನ ಸಮಾಗಮವಾಯಿತು. ಶ್ರೀಕೃಷ್ಣನೂ ಹಾಗೆಯೇ ಪಾಂಡವರಿಂದ ಕೂಡಿದವನಾಗಿಯೇ ಕ್ರೀಡಿಸಿದನು. ಅಲ್ಲಿಯೂ ಶ್ರೀಕೃಷ್ಣನು ತನ್ನ ರಥದಲ್ಲಿ ಅರ್ಜುನನೊಂದಿಗೆ ಕೂಡಿಕೊಂಡು ವಿಹರಿಸಿದನು. ಪಾಂಡವರಿಗೆ ತಮ್ಮ ಮೂಲರೂಪದ ದೆಸೆಯಿಂದ ಪ್ರತ್ಯೇಕವಾಗಿಯೇ ಸುಖಾನುಭವಕ್ಕೆ ಕಾರಣವಾದ ಪ್ರಾರಬ್ಧಪುಣ್ಯಕರ್ಮದ ಶೇಷವಿದೆ ಎಂದು ತಿಳಿಯಬೇಕು.

***ಇತರ ದೇವಾಂಶರುಗಳಿಗೆ ಮೂಲರೂಪ ಪ್ರಾಪ್ತಿ*** - ದೇವತೆಗಳ ಅವತಾರಭೂತರಾದ ದೇವಾಂಶಸಂಭೂತರಾದ ಅನ್ಯರಾದ ದ್ರೋಣಾದಿಗಳು, ಪ್ರಾರಬ್ಧಕರ್ಮಕ್ಷಯದಿಂದಲೇ ತಮ್ಮ ತಮ್ಮ ಮೂಲರೂಪಗಳಿಂದ ಐಕ್ಯವನ್ನು ಶೀಘ್ರವಾಗಿ ಹೊಂದಿದರು.

***ಭೂಮಿಯಲ್ಲಿ ಅಸುರರ ಜನನ*** - ದುರ್ಯೋಧನನೇ ಮೊದಲಾದ ಅಸುರರು ಕಲಿಯುಗವು ಪ್ರಾರಂಭವಾಗಿ 4300 ವರ್ಷಗಳವರೆಗೆ ವೀರಸ್ವರ್ಗದಲ್ಲಿ ದಿವ್ಯವಾದ ತಮ್ಮ ಪ್ರಾರಬ್ಧಕರ್ಮಾನುಸಾರಿಯಾದ ಭೋಗಗಳನ್ನು ಅನುಭವಿಸಿ, ಸ್ವರ್ಗಭೋಗದಿಂದ ಪುಣ್ಯವು ಕ್ಷಯಿಸಿದ ಮೇಲೆ, ಭೂಲೋಕದಲ್ಲಿ ಹುಟ್ಟಿದರು. ಭೂಮಿಯಲ್ಲಿ ಹುಟ್ಟಿದ ನಂತರ, ಮನುಷ್ಯರ ಸ್ವರೂಪದಲ್ಲಿಯೂ ಸಹ, ಸರ್ವದಾ 'ನಾನು ಈಶ್ವರನು, ಜಗತ್ತು ಮಿಥ್ಯಾಭೂತವಾದುದು' ಎಂದು ತಮ್ಮ ಸ್ವರೂಪಭೂತವಾದ ಜ್ಞಾನದಿಂದ ಅಸದುಪಾಸನೆಯನ್ನೇ ಮಾಡಿ, ತಮಸ್ಸನ್ನು ಹೊಂದಿದರು. ಅಂಧಂತಮಸ್ಸಿನಲ್ಲಿ ಅಸುರರಿಗೆ ದುಃಖದಲ್ಲಿಯೂ ತಾರತಮ್ಯವಿದೆ. ಇಲ್ಲಿ ಎಲ್ಲ ದೈತ್ಯರಿಗಿಂತಲೂ ಕಲಿಗೆ ಅತ್ಯಧಿಕವಾದ ದುಃಖವಿದೆ. ಚತುರ್ಮುಖನಿಗೆ ಮುಕ್ತಿಯಲ್ಲಿ

ಉತ್ಕೃಷ್ಟವಾದ ಸುಖವಿರುವಂತೆ, ಎಲ್ಲರಿಗಿಂತ ಶ್ರೀಹರಿಯನ್ನು ಅಧಿಕವಾಗಿ ದ್ವೇಷಮಾಡಿದ ಅಸುರನಿಗೆ ಅಧಿಕ ದುಃಖವು ಇದೆ.

ಭೂಮಿಯಲ್ಲಿ ಆ ಸಮಯದಲ್ಲಿ ಎಲ್ಲ ಅಸುರರಿಗೂ ನರತ್ವಪ್ರಾಪ್ತಿಯು ಆಯಿತೆಂದು ತಿಳಿಯಬಾರದು. ಕೆಲವರು ಮನುಷ್ಯರಾಗಿ ಜನಿಸಿ ಸಾಧನೆಯನ್ನು ಮಾಡಿದರೆ, ಮತ್ತೆ ಕೆಲವರು ಪಿಶಾಚಿಗಳಾಗಿ, ಅಸುರರಾಗಿ, ರಾಕ್ಷಸರಾಗಿಯೂ ಜನಿಸಿ, ವಿಷ್ಣುವಿನಲ್ಲಿ ಮತ್ತು ವಿಷ್ಣುಭಕ್ತರಲ್ಲಿ ದ್ವೇಷ ಮಾಡಿ ಅಂಧಂತಮಸ್ಸನ್ನು ಶೀಘ್ರವಾಗಿ ಹೊಂದಿದರು. ದೇವತೆಗಳು ತಮ್ಮ ಸ್ವರೂಪಯೋಗ್ಯತೆಗೆ ಅನುಗುಣವಾಗಿ ಸಾಧನೆಯನ್ನು ಪೂರ್ಣಮಾಡಿ, ಏಹಿತವಾದ ಕಾಲದಲ್ಲಿ ತಮಗೆ ಯೋಗ್ಯವಾದ ಮುಕ್ತಿಯನ್ನು ಹೊಂದಿದರು.

***ಕಲಿಯುಗದಲ್ಲಿ ಭೀಮಾವತಾರ*** - ಕಲಿಯುಗದಲ್ಲಿ 4300 ವರ್ಷಗಳು ಕಳೆದ ಮೇಲೆ ಮತ್ತೆ ವಿಪ್ರರೂಪದಿಂದ ಆ ಭೀಮಸೇನನೇ ಭೂಮಿಯಲ್ಲಿ ಅವತರಿಸಿ, ದೈತ್ಯರಿಂದ ಆಚ್ಛಾದಿತವಾಗಿದ್ದ ಹರಿತತ್ತ್ವವನ್ನು ಸಜ್ಜನರಿಗೆ ಉಪದೇಶಿಸಿದನು. ವಿಪ್ರರೂಪದಿಂದ ಅವತರಿಸಿದ ವಾಯುದೇವರ ಈ ಮೂರನೆಯ ರೂಪವೇ ಮಧ್ವರೂಪವು. ಭೀಮಸೇನನು ಬ್ರಾಹ್ಮಣನಾಗಿ ಅವತಾರ ಮಾಡುವ ಮಧ್ವಾವತಾರದ ಕಾಲದಲ್ಲಿಯೇ ದ್ರೌಪದೀದೇವಿಯೂ ಸಹ ಭೂಮಿಯಲ್ಲಿ ಅವತರಿಸಿ, ಹರಿಪ್ರೀತಿಗಾಗಿ ಮಹಾದೈತ್ಯರನ್ನು ಅಂಧಂತಮಸ್ಸಿನಲ್ಲಿ ಬೀಳಿಸಿದಳು. ಮಹಾವಿಷ್ಣುಭಕ್ತರಾದ ಆ ಅರ್ಜುನಾದಿಗಳೆಲ್ಲರೂ ಮಧ್ವಾವತಾರದ ಸಮಯದಲ್ಲಿಯೇ ಹರಿಪ್ರೀತಿಗಾಗಿ ಪುನಃ ಭೂಮಿಯಲ್ಲಿ ಅವತರಿಸಿದರು. ಅವರು ಭೂಮಿಯಲ್ಲಿ ಹರಿಸೇವೆಯನ್ನು ಮಾಡಿ, ಪುನಃ ಸ್ವರ್ಗವನ್ನು ಹೊಂದಿ, ಬ್ರಹ್ಮಪ್ರಲಯಕಾಲದಲ್ಲಿ ತಮಗೆ ಯೋಗ್ಯವಾದ ಮುಕ್ತಿಯನ್ನು ಹೊಂದುವರು.

ಹನುಮದವತಾರನಾದ ಭೀಮಸೇನನು (ಅಥವಾ ಭೀಮಾವತಾರರಾದ ಮಧ್ವಾಚಾರ್ಯರು) ಭೂಮಿಯಲ್ಲಿಯ ಪರಮಾತ್ಮನ ಸೇವೆಯ ನಂತರ ವಾಯುರೂಪದೊಂದಿಗೆ ಐಕ್ಯವನ್ನು ಹೊಂದಿ, ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಯನ್ನು ಹೊಂದುವನು. ದ್ರೌಪದೀದೇವಿಯು ಸರಸ್ವತೀ ಪದವಿಯನ್ನು ಹೊಂದುವಳು. ಭೂಲೋಕದಲ್ಲಿ ಹನುಮದಾದಿ ಅವತಾರ-ಗಳನ್ನು ಹೊಂದಿದಾಗಲೂ, ಅನಂತರ ಬ್ರಹ್ಮಪದವಿಯನ್ನು ಹೊಂದಿದ ಅವಸ್ಥೆಯಲ್ಲಿಯೂ, ಮತ್ತು ಮುಕ್ತಿಯಲ್ಲಿಯೂ ಭಾರತೀ-ವಾಯುಗಳಿಬ್ಬರೂ ಜ್ಞಾನಾನಂದಪೂರ್ಣನಾದ ಶ್ರೀಹರಿಯಲ್ಲಿಯೇ ಅವಿಚ್ಛಿನ್ನವಾದ ಉತ್ಕೃಷ್ಟವಾದ ಭಕ್ತಿಯು-ಳ್ಳವರಾಗಿ, ಸಕಲ ಜೀವಸಮುದಾಯದ ದೆಸೆಯಿಂದ ಪರಮಾತ್ಮನನ್ನು ತಮ್ಮ ಕಾರ್ಯಗಳಿಂದ ವಿಶೇಷವಾಗಿ ಸಂತೋಷಪಡಿಸುವರು. ಅವರು ಸರ್ವಾಧಿಕವಾದ ಆನಂದವುಳ್ಳ ಸಾಯುಜ್ಯರೂಪವಾದಮುಕ್ತಿಯನ್ನು ಶ್ರೀಹರಿಯಿಂದ ಹೊಂದುವರು.

'ಭೂಷನ್ನಯೋಧಿ ಬಭ್ರುಷು ನಮ್ನತೇ', 'ಬಳಿತ್ಥಾ ತದ್ವಪುಷೇ ಧಾಯಿ ದರ್ಶತಮ್', 'ತಾಂ ಸುತೇ ಕೀರ್ತಿಂ ಮಘವನ್ಮಹಿತ್ವಾ', ಇವೇ ಮೊದಲಾದ ವೇದಮಂತ್ರಗಳು ಈ ವಿಷಯದಲ್ಲಿ ಪ್ರಮಾಣಗಳಾಗಿವೆ. ಇತರ ವೇದವಾಕ್ಯಗಳೂ, ಪಂಚರಾತ್ರಾಗಮದಲ್ಲಿಯ ಉಕ್ತಿಗಳೂ, ಮತ್ತು ಪುರಾಣವಾಕ್ಯಗಳೂ ಈ ವಿಷಯದಲ್ಲಿ ಪ್ರಮಾಣವಾಗಿವೆ. ಯುಧಿಷ್ಠಿರನಿಂದ ಪ್ರಶ್ನಿಸಲ್ಪಟ್ಟ ಇದೇ ಅರ್ಥದಲ್ಲಿಯ ಪ್ರಮೇಯವನ್ನು ಭೀಷ್ಮಾಚಾರ್ಯರು ಮೋಕ್ಷಧರ್ಮದಲ್ಲಿಯೂ ಸಂಕ್ಷೇಪದಿಂದ ಹೇಳಿರುವರು.

***ಶ್ರೀಹರಿಯ ಬೌದ್ಧಾವತಾರದ ಹಿನ್ನೆಲೆ*** - ಹೀಗೆ ಕೃಷ್ಣನಿಂದ ಸಹಿತರಾದ ಯಾದವರು ಮತ್ತು ಪಾಂಡವರು ತಮ್ಮ ಲೋಕಗಳನ್ನು ಕುರಿತು ಹೋದ ಮೇಲೆ, ಪಾಂಡವರ ವಂಶದಲ್ಲಿ ಜನಿಸಿದ, ವೇದವ್ಯಾಸರಿಂದ ಶಿಕ್ಷಿತನಾದ ಪರೀಕ್ಷಿತನೇ ಮೊದಲಾದವರು ಭೂಮಿಯನ್ನು ಪಾಲಿಸುತ್ತಿದ್ದರು. ವೇದವ್ಯಾಸರ ಅನುಗ್ರಹದಿಂದ ಮತ್ತು ಅವರ ಪ್ರಭಾವದಿಂದ, ಕಲಿಯುಗದಲ್ಲಿಯೂ ಕೂಡ ಪರೀಕ್ಷಿತನಿಂದ ಪ್ರಾರಂಭಿಸಿ ಕ್ಷೇಮಕನ ಪರ್ಯಂತರಾದ ರಾಜರಿಂದ ಧರ್ಮ-ಜ್ಞಾನಾದಿಗಳು

ಉತ್ತಮವಾಗಿ ರಕ್ಷಿತವಾಗಿ, ನಾಶವನ್ನು ಹೊಂದಲಿಲ್ಲ. ಪಾಂಡವರ ಸಂತಾನವು ಕಲಿಯುಗದಲ್ಲಿ ಒಂದು ಸಹಸ್ರವರ್ಷ ಪರ್ಯಂತವಾಗಿ ಇದ್ದಿತು. ಅಲ್ಲಿಯವರೆಗೆ ಧರ್ಮ-ಜ್ಞಾನಾದಿಗಳ ನಾಶದ ಪ್ರಸಕ್ತಿಯೇ ಇರಲಿಲ್ಲ.

ಕಲಿಯುಗದಲ್ಲಿ ಒಂದು ಸಹಸ್ರ ವರ್ಷಗಳು ಕಳೆದು, ಎಲ್ಲ ಸಜ್ಜನರೂ ತತ್ತ್ವಜ್ಞಾನವನ್ನು ಹೊಂದಿ ಸ್ವರ್ಗಾದಿಫಲಗಳನ್ನು ಹೊಂದುತ್ತಿರುವ ಸಮಯದಲ್ಲಿ, ತ್ರಿಪುರನನ್ನು ಸಂಹರಿಸಿದ ರುದ್ರದೇವರಿಂದಲೇ ಸುಡಲ್ಪಟ್ಟಿದ್ದ ತ್ರಿಪುರಾಸುರರು ಪುನಃ ಭೂಮಿಯಲ್ಲಿ ಜನಿಸಿದರು. ಭೂಮಿಯಲ್ಲಿ ಪಾಂಡವರ ಸಂತಾನವು ನಾಶವಾಗುವ ಸಮಯಕ್ಕೆ, ನಿರ್ದುಷ್ಟಜ್ಞಾನಕ್ಕೆ ಮುಖ್ಯ ಆಶ್ರಯಭೂತರಾದ ವೇದವ್ಯಾಸದೇವರು ಎಲ್ಲ ಮುನಿಶ್ರೇಷ್ಠರೊಂದಿಗೆ ಕೂಡಿಕೊಂಡು ಅದರ್ಶನವನ್ನು ಹೊಂದಿದ್ದರು. ಆದರೂ ಶ್ರೀವೇದವ್ಯಾಸರ ಸಂಪ್ರದಾಯದ ಬಲದಿಂದಾಗಿ ಉಳಿದಿದ್ದ, ಉತ್ತಮವಾದ ತತ್ತ್ವವಿದ್ಯೆಯನ್ನು ಆ ಅಸುರರು ಪಡೆದುಕೊಂಡರು. ಪಾಶುಪತ ಮೊದಲಾದ ದುರಾಗಮಗಳೆಲ್ಲ ನಾಶಹೊಂದಿ ಅವುಗಳ ಸಂಪ್ರದಾಯವು ಮರೆಯಾ-ಗಿದ್ದರಿಂದಲೂ, ಮತ್ತು ಪಂಚರಾತ್ರಾದಿ ಸದಾಗಮಗಳು ಎಲ್ಲ ಕಡೆಗೆ ಪ್ರಸಾರಗೊಂಡಿದ್ದರಿಂದಲೂ, ಪಾಪಿಗಳಾದ ಅಸುರರು ಸಹ ತತ್ತ್ವಜ್ಞಾನವನ್ನು ಪಡೆದುಕೊಳ್ಳಲು ಅನುಕೂಲವಾಯಿತು. ನಾಯಿಯು ಪುರೋಡಾಶಕ್ಕೆ (ಹವಿಸ್ಸಿನ ಭಾಗಕ್ಕೆ) ಬಾಯಿ ಹಾಕಿದುದನ್ನು ಮತ್ತು ಅಂತ್ಯಜರು ಮಾಡುವ ವೇದಶ್ರವಣವನ್ನು ಹೇಗೆ ಸಜ್ಜನರು ಸಹಿಸುವದಿಲ್ಲವೋ, ಹಾಗೆ ನಿರವಧಿಕವಾದ ದುಃಖಕ್ಕೆ ಅತ್ಯಂತ ಯೋಗ್ಯರಾದ ದೈತ್ಯರು ತತ್ತ್ವವಿದ್ಯೆಯನ್ನು ಪಡೆದುದು ದೇವತೆಗಳು ಸಹಿಸಲು ಅಸಾಧ್ಯವಾಯಿತು.

ಸಮ್ಯಗ್‌ಜ್ಞಾನಿಗಳಿಗೆ ಅಧೋಗತಿಯು ಆಗಬಾರದು. ಯಥಾರ್ಥ ಜ್ಞಾನಿಗಳಿಗೆ ನಿತ್ಯಸುಖರೂಪವಾದ ಮೋಕ್ಷವು ನಿಶ್ಚಯವಾಗಿಯೂ ದೊರಕಬೇಕು. ಅಸುರರಿಂದ ಅಂಧಂತಮಸ್ಸು ಹೊಂದಲ್ಪಡಬೇಕು. ಅವರಿಗೆ ನಿತ್ಯಸುಖರೂಪ ಮುಕ್ತಿಯು ಲಭಿಸಬಾರದು. ಹೀಗೆ ದೇವತೆಗಳು ಇದನ್ನು ಆಲೋಚಿಸಿದರು. ಸಜ್ಜನರಿಗೆ ಜ್ಞಾನವನ್ನು ಕೊಡುವುದಕ್ಕಾಗಿ ಮತ್ತು ಅಸಜ್ಜನರ ತತ್ತ್ವಜ್ಞಾನವನ್ನು ನಾಶಪಡಿಸುವದಕ್ಕಾಗಿ ದೇವತೆಗಳನ್ನು ಪರಮಾತ್ಮನು ನಿಯಮಿಸಿದ್ದಾನೆ. ಇದು ದೇವತೆಗಳ ಆದ್ಯ ಕರ್ತವ್ಯ. ಆದ್ದರಿಂದ ಬ್ರಹ್ಮರುದ್ರರಿಂದ ಸಹಿತರಾದ ದೇವತೆಗಳು ತಮ್ಮಿಂದ ಪ್ರಸಕ್ತದಲ್ಲಿ ಈ ಕಾರ್ಯವು ಅಸಾಧ್ಯವೆಂದು ತಿಳಿದು, ಶ್ರೀಹರಿಯನ್ನು ಹೊಂದಿ ವಿಜ್ಞಾಪಿಸಿಕೊಂಡರು.

***ಬೌದ್ಧಾವತಾರದ ವರ್ಣನೆ*** - ಕ್ಷೀರಸಮುದ್ರದ ಉತ್ತರ ತಟದಲ್ಲಿದ್ದ ಶ್ರೀಹರಿಯು ಬ್ರಹ್ಮಾದಿದೇವತೆಗಳ ಸ್ತೋತ್ರಗಳಿಂದ ಸಂತುಷ್ಟನಾಗಿ, ದೇವತೆಗಳಿಗೆ ಅಭಯವನ್ನು ಕೊಟ್ಟು, ಕ್ಷಣದಲ್ಲಿಯೇ ಅತ್ಯಂತ ಸುಂದರವಾದ ಆಕೃತಿಯುಳ್ಳ ಶಿಶುರೂಪವನ್ನು ಧರಿಸಿದನು. ಈ ಶಿಶುರೂಪವೇ ಬುದ್ಧರೂಪದಲ್ಲಿಯ ಪರಮಾತ್ಮನು. ದ್ವಾಪರಾಂತ್ಯದಲ್ಲಿ ಜ್ಞಾನಸಂಸ್ಥಾಪನೆಗಾಗಿ ವ್ಯಾಸ ರೂಪವನ್ನು ಪ್ರಕಟಿಸಿದ ಪರಮಾತ್ಮನು ಈ ಕಲಿಯುಗದ ಆದಿಭಾಗದಲ್ಲಿ ಮತ್ತೆ ಸುರದ್ವಿಷರ ಸಂಮೋಹನಾರ್ಥವಾಗಿ ಜ್ಞಾನಕ್ಕಾಗಿ ಬುದ್ಧರೂಪವನ್ನು ಪ್ರಕಾಶಿಸಿದನು.

***ತ್ರಿಪುರಾಸುರರುಗಳ ಮಧ್ಯದಲ್ಲಿ ಮೊದಲನೆಯವನಾದ ದೈತ್ಯನು ಭೂಮಿಯಲ್ಲಿ ಜನಿಸಿದ್ದು*** - ಶುದ್ಧೋದನನೆಂಬ ಹೆಸರಿನಿಂದಲೂ, ಜಿನನೆಂಬ ಹೆಸರಿನಿಂದಲೂ ಆ ದೈತ್ಯನು ಕರೆಯಲ್ಪಡುತ್ತಿದ್ದನು. ಅವನಿಗೆ ಗಯಾ ಎಂಬ ಹೆಸರಿನ ಪತ್ನಿಯಿದ್ದಳು. ಗಯಾಪತ್ನಿಯಲ್ಲಿ, ಗಯಾಖ್ಯಕ್ಷೇತ್ರವಿಶೇಷದಲ್ಲಿ ಆಗ ತಾನೇ ಜನಿಸಿದ ಆ ಜಿನನ ಶಿಶುವನ್ನು ದೂರಕ್ಕೆಸೆದು, ಅಲ್ಲಿಯೇ ಶಿಶುರೂಪವುಳ್ಳ ಹರಿಯು ತಾನು ಮಲಗಿದನು. ಬುದ್ಧಾವತಾರವು ಶ್ರೀಹರಿಯ ದಶಾವತಾರಗಳಲ್ಲಿ ಒಂಬತ್ತನೆಯ ಅವತಾರವು. ಅದು ನಡೆದದ್ದು ಎರಡು ಬಾರಿ. ಮೊದಲನೆಯ ಬುದ್ಧರೂಪದಿಂದ 'ತ್ರೈಪುರಸ್ತ್ರೀಯರು ಉಪಪತಿಯನ್ನು ತೆಗೆದುಕೊಳ್ಳಬಹುದು' ಇತ್ಯಾದಿ ಪ್ರಮೇಯ ಸಂಬಂಧಿಯಾದ ಧರ್ಮವನ್ನು ಉಪದೇಶಿಸಿ, ತ್ರಿಪುರಾಸುರರ ಪತ್ನಿಯರ ಪಾತಿವ್ರತ್ಯವನ್ನು ಭಂಗಗೊಳಿಸಿ, ಆ ಅಸುರರ ನಾಶಕ್ಕೆ ಕಾರಣನಾಗಿದ್ದನು. ಎರಡನೆಯದು ಜಿನಪುತ್ರನಾಗಿ ಅವತರಿಸಿದ ಈ ಶಿಶುರೂಪವು.

ದೂರದಲ್ಲಿ ಎಸೆಯಲ್ಪಟ್ಟಿರುವ ತಮ್ಮ ಶಿಶುವನ್ನು ತಿಳಿಯದೇ ಇದ್ದ ಜಿನ ಮತ್ತು ಇತರರು, ಶಿಶುರೂಪಿಯಾದ ಶ್ರೀಹರಿಯನ್ನೇ ನೋಡಿ ತಮ್ಮ ಶಿಶುವೆಂದು ತಿಳಿದುಕೊಂಡರು. ಹುಟ್ಟಿದ ಮಗುವಿಗೆ ಅವರು ವೇದೋಕ್ತಕ್ರಮದಿಂದ ಜಾತ-ಕರ್ಮಗಳನ್ನು ಮಾಡತೊಡಗಿದರು. ಅದನ್ನು ನೋಡಿ ಶ್ರೀಹರಿಯು ಶಿಶುರೂಪದಿಂದಲೇ, ಅವರನ್ನು ಅಪಹಾಸ್ಯ ಮಾಡುವವನಂತೆ, ಜೋರಾಗಿ ನಕ್ಕನು. ಯಾಕೆಂದರೆ, ಪರಮಾತ್ಮನು ಜನರಿಗೆ ವೇದೋಕ್ತ ಕರ್ಮಗಳನ್ನು ತ್ಯಜಿಸಲು ಸೂಚಿಸುವನೋ ಎಂಬುವ ಅರ್ಥವು ಆ ಶಿಶುವಿನ ನಗೆಯಲ್ಲಿ ಭಾಸವಾಯಿತು. ಜನಿಸಿದೊಡನೇ ಮಗುವು ಹಾಗೆ ಗಹಗಹಿಸಿ ನಗುತ್ತಿರುವದನ್ನು ಕಂಡು ಬಹಳವಾಗಿ ಆಶ್ಚರ್ಯಪಟ್ಟು, ಜಿನಾದಿಗಳು ಆ ಶಿಶುವನ್ನು 'ನೀನು ಯಾರು' ಎಂದು ಕೇಳಿದರು. ಆ ಶಿಶುವು 'ನನಗೆ ಉತ್ತಮವಾದ ನಿತ್ಯಜ್ಞಾನರೂಪತ್ತ್ವವಿದ್ದುದರಿಂದ ನಾನು ಬುದ್ಧನೇ' ಎಂದು ಹೇಳಿ, ಜಿನಾದಿಗಳಿಗೆ ಬುದ್ಧದರ್ಶನವನ್ನು ಉಪದೇಶ ಮಾಡಿದನು. ಬುದ್ಧರೂಪದ ಶ್ರೀಹರಿಯು ಬುದ್ಧಶಾಸ್ತ್ರವನ್ನು ಹಾಗೆ ಹೇಳಿದರೂ, ಶುದ್ಧೋಧನಾದಿಗಳಿಗೆ ಅದರಲ್ಲಿ ವಿಶ್ವಾಸವು ಮೂಡಲಿಲ್ಲ. ಇದನ್ನು ನೋಡಿ ಶ್ರೀಹರಿಯು ಎಲ್ಲ ದೇವತೆಗಳನ್ನು ಯುದ್ಧಕ್ಕೆ ಬರುವಂತೆ ಸ್ಮರಿಸಿದನು. ಜಿನಾದಿಗಳಿಗೆ ತನ್ನ ಮಾತುಗಳಲ್ಲಿ ನಂಬಿಕೆ ಹುಟ್ಟಿಸಲೆಂದು ಮತ್ತು ತನ್ನ ಸರ್ವೋತ್ತಮತ್ವವನ್ನು ನಿರೂಪಿಸಲೆಂದು, ಸಕಲ ದೇವತೆಗಳನ್ನೂ ಅಲ್ಲಿಗೆ ಕರೆದನು. ಆಗ ದೇವತೆಗಳು ಶ್ರೀಹರಿಯ ಮನೋಭೀಷ್ಟವನ್ನು ಅರಿತು, ತಮ್ಮ ಆಯುಧಗಳ ಸಮೂಹವನ್ನು ಬಾಲರೂಪನಾದ ಆ ವಿಷ್ಣುವಿನ ಮೇಲೆ ಪ್ರಯೋಗಿಸಿದರು.

ಆಗ ತಾನೇ ಹುಟ್ಟಿದ್ದ ಶಿಶುರೂಪದ ಶ್ರೀಹರಿಯು ರುದ್ರಾದಿ ದೇವತೆಗಳ ತ್ರಿಶೂಲಾದಿ ಆಯುಧಗಳನ್ನೆಲ್ಲ ಭಕ್ಷಣ ಮಾಡಿದನು. 'ವಿಷ್ಣುವಿಗಿಂತಲೂ ಬುದ್ಧನು ಶ್ರೇಷ್ಠನು' ಎಂದು ದೈತ್ಯರಿಗೆ ಅತ್ಯಂತ ಮೋಹವನ್ನು ಹುಟ್ಟಿಸುವದಕ್ಕಾಗಿ, ತನ್ನ ಸ್ವರೂಪಭೂತನಾದ, ವಿಷ್ಣುವಿನಿಂದ ಬಿಡಲ್ಪಟ್ಟ, ಸುದರ್ಶನ ಚಕ್ರಾಯುಧವನ್ನು ತನ್ನ ಕೈಯಲ್ಲಿ ಹಿಡಿದುಕೊಂಡನು. ಹೀಗೆ 'ಸಕಲ ದೇವತೆಗಳೊಂದಿಗೆ ವಿಷ್ಣುವೂ ಪರಾಭವಗೊಂಡನು' ಎಂಬ ಭ್ರಮೆಯು ಅಸುರರಿಗೆ ಹುಟ್ಟುವಂತಾಯಿತು. ಬುದ್ಧರೂಪಿ, ಶಿಶುರೂಪಿ ಶ್ರೀಹರಿಯು ಆ ಚಕ್ರವನ್ನು ಆಸನವನ್ನಾಗಿ ಮಾಡಿ, ಅದರ ಮೇಲೆ ಕುಳಿತುಕೊಂಡನು. ಆಗ ಅವನಿಗೆ ದೇವತೆಗಳೆಲ್ಲರೂ ನಮಸ್ಕರಿಸಿ ತಮ್ಮ ಲೋಕಗಳಿಗೆ ತೆರಳಿದರು. ಜಿನ ಮೊದಲಾದ ದೈತ್ಯರು ಕೂಡಲೇ ಆ ಬುದ್ಧನ ಮಾತುಗಳನ್ನು, ಬುದ್ಧಶಾಸ್ತ್ರದಲ್ಲಿ ಪ್ರಮಿತವಾದ ವಾಕ್ಯಗಳನ್ನು, ಪ್ರಮಾಣವೆಂದು ಸ್ವೀಕರಿಸಿದರು.

ಆ ಪಾಪಿಷ್ಠರಾದ ಜಿನಾದಿ ದೈತ್ಯರೆಲ್ಲರೂ ದೇವೋತ್ತಮನಾದ ಬುದ್ಧರೂಪಿ ಪರಮಾತ್ಮನಿಂದ ವಿಶೇಷವಾಗಿ ಮೋಹವನ್ನು ಹೊಂದಿ, ಸರಿಯಾದ ಜ್ಞಾನ-ಧರ್ಮಗಳನ್ನು ತೊರೆದು, 'ಜಗತ್ತೆಲ್ಲವೂ ಕ್ಷಣಿಕ, ಸತ್ಯವಲ್ಲ. ಶೂನ್ಯವೊಂದೇ ತತ್ತ್ವವು' ಎಂಬುದಾಗಿ ದೃಢವಾಗಿ ತಿಳಿದವರಾಗಿ, ಅದನ್ನು ಧ್ಯಾನಿಸುತ್ತಾ, ಅಸದುಪಾಸನೆಯಿಂದ ಅಂಧಂತಮಸ್ಸನ್ನು ಹೊಂದಿದರು.

***ಬುದ್ಧರೂಪಿಯಾದ ನಾರಾಯಣನಿಂದ ದೇವತೆಗಳಿಗೆ ಬೌದ್ಧಾಗಮದ ಉಪದೇಶ*** - ಬುದ್ಧರೂಪಿ ಶ್ರೀನಾರಾಯಣನು ದೇವತೆಗಳ ಬಳಿಗೆ ತೆರಳಿ, ಆ ದೇವತೆಗಳಿಗೆ ತಾನು ಮಾಡಿದ ಎಲ್ಲ ವೃತ್ತಾಂತವನ್ನೂ ಹೇಳಿದನು. ದೇವತೆಗಳು ಬುದ್ಧಶಾಸ್ತ್ರದ ಅಭಿಪ್ರಾಯವನ್ನು ತಿಳಿಯುವ ಇಚ್ಛೆಯಿಂದ ಪರಮಾತ್ಮನನ್ನು ಪ್ರಾರ್ಥಿಸಿದರು. ಆಗ ಅವರಿಗೆ ಸಂಸಾರಬಂಧನದ ವಿಮೋಚನೆಗೆ ಕಾರಣವಾದ, ತನ್ನ ಮನಸ್ಸಿನಲ್ಲಿಯ ಬೌದ್ಧಾಗಮದ ಅರ್ಥವನ್ನು ಉಪದೇಶ ಮಾಡಿದನು.

***ಕ್ಷಣಿಕಶಬ್ದಾರ್ಥವನ್ನು ಈ ರೀತಿಯಾಗಿ ಉಪದೇಶಿಸಿದ್ದಾನೆ***- 'ಕ್ಷಣಾದಿಗಳು, ಲವ-ನಿಮೇಷಾದಿ ಕಾಲವಿಶೇಷಗಳು, ಮತ್ತು ಘಟ-ಪಟ ಮೊದಲಾದ ಪದಾರ್ಥಗಳು ಇವೆಲ್ಲವೂ ಕ್ಷಣಿಕಗಳೇ. ಕ್ಷಣಗಳೆಲ್ಲವೂ ಕ್ಷಣಮಾತ್ರದಲ್ಲಿ ಇದ್ದುದರಿಂದಲೇ ಕ್ಷಣಿಕಗಳು, ಅನುತರವಿನಾಶಿಯಾದವುಗಳು. ಸ್ವಾಭಾವಿಕವಾಗಿಯೇ ನಾಶವನ್ನು ಹೊಂದುತ್ತವೆ. ಕಾಲವಿಶೇಷವು ಕ್ಷಣಾದಿಕಾಲದ ಸಂಬಂಧದಿಂದ ಕ್ಷಣದಲ್ಲಿ ಇರುವಂತಹದು' ಎಂದು ನನ್ನಿಂದ ಉಪದೇಶ ಮಾಡಲ್ಪಟ್ಟಿರುವದು. ಅಂದರೆ ಕ್ಷಣೋಪಲಕ್ಷಿತವಾದ ಅಲ್ಪಕಾಲದಲ್ಲಿ ಇರುವಂತಹದು ಎಂದು ಅರ್ಥವು. ಘಟ-ಪಟಾದಿ ಪದಾರ್ಥಗಳಿಗೆ ಅನುತರವಿನಾಶಿತ್ವವು ಇಲ್ಲದಿದ್ದರೂ,

ಆಶುತರವಿನಾಶಿಯಾದ ಕ್ಷಣಾದಿ- ಕಾಲದ ಸಂಬಂಧವಿರುವದರಿಂದ ಅವು ಕ್ಷಣಿಕವಾದವುಗಳು ಎಂದು ಹೇಳಲ್ಪಡುವವು. 'ಶತೇ ಪಂಚಾಶತ್' ನ್ಯಾಯದಿಂದ ಇದನ್ನು ಹೇಳುವರು.

ಕ್ಷಣಗಳಿಗೆ ಕ್ಷಣವರ್ತಿತ್ವವೆಂದರೆ ಕ್ಷಣಾಂತರವರ್ತಿತ್ವವು ಇಲ್ಲದಿರುವದು ಮತ್ತೂ ಸ್ಥಿತಿಕಾಲದಲ್ಲಿ ಕ್ಷಣಾಖ್ಯವಾದ ತನ್ನಲ್ಲಿಯೇ ಇರುವಿಕೆಯು. ಉತ್ಪತ್ತಿಕ್ಷಣಕ್ಕೂ ಮತ್ತು ನಾಶಕ್ಷಣಕ್ಕೂ ಸ್ಥಿತಿಕಾಲವು ಇಲ್ಲದಿರುವುದರಿಂದ, ಸ್ಥಿತಿಕಾಲದಲ್ಲಿ ಕ್ಷಣಮಾತ್ರ ವರ್ತಿತ್ವಕ್ಕೆ ಭಂಗವಿಲ್ಲ. ಕ್ಷಣಕ್ಕೆ ಕ್ಷಣದಲ್ಲಿಯೇ ವೃತ್ತಿತ್ವವೆಂದರೆ ತನ್ನಲ್ಲಿ ತಾನು ಇರುವದು ಎಂದಾಯಿತು. ಆದ್ದರಿಂದ ಆತ್ಮಾಶ್ರಯವು ಬರಬೇಕಾಗುವದು ಎಂಬ ಆಕ್ಷೇಪವನ್ನು ಸಮಾಧಾನಪಡಿಸಲು, 'ವಿಶೇಷ ಸಂಶ್ರಯಾತ್' ಎಂದು ಹೇಳಿರುವರು. ಅಂದರೆ ಒಂದು ಇದ್ದರೂ ಅಪರನಾಶಾಖ್ಯವಾದ ಭೇದಾಸಾಧಾರಣವಾದ ಕಾರ್ಯವನ್ನು ಹೊರತು ಪಡಿಸಿ, ಎಲ್ಲ ಭೇದಕಾರ್ಯಗಳನ್ನು ಮಾಡತಕ್ಕ ವಿಶೇಷದಿಂದಲೇ ಇದನ್ನು ನಿರ್ವಾಹ ಮಾಡಬೇಕು. 'ಕಾಕೇಭ್ಯೋ ದಧಿ ರಕ್ಷ್ಯಂತಾಂ' ಎಂಬ ವಾಕ್ಯದಲ್ಲಿ, ಕಾಕಪದದಿಂದ ದಧಿಯನ್ನು ಅಪಹರಿಸುವ ಮಾರ್ಜಾಲಾದಿಗಳಿಗೆ ಉಪಲಕ್ಷಣವಿದ್ದಂತೆಯೇ, ಕ್ಷಣಪದದಿಂದಲೂ ಅಲ್ಪ ಕಾಲವನ್ನು ಮತ್ತು ಕಾಲರೂಪಗಳಾದ ಎಲ್ಲ ಕಾಲಗಳನ್ನು ಲಕ್ಷಣಯಾ ತೆಗೆದುಕೊಳ್ಳಬೇಕು. ಆದುದರಿಂದ ಲವ-ನಿಮೇಷ-ಯಾಮಾದಿರೂಪ ಕಾಲಾವಯವಗಳಲ್ಲಿಯೂ ಮತ್ತು ಘಟಾದ್ಯನಿತ್ಯಜಗತ್ತುಗಳಲ್ಲಿಯೂ ಕ್ಷಣಿಕತ್ವವೆಂದರೆ ಅಲ್ಪಕಾಲದಲ್ಲಿ ಅವಸ್ಥಿತಿ ಮಾತ್ರ. ಇದೇ ಶ್ರೀಹರಿಗೆ ಅಭಿಪ್ರೇತವಾದ ಕ್ಷಣಿಕತ್ವವು.

ಬುದ್ಧದೇವರಿಗೆ ಅಭಿಪ್ರೇತವಾದ ಈ ಶಬ್ದಮರ್ಯಾದೆಯನ್ನು ತಿಳಿಯಲು ಅಸಮರ್ಥರಾದ ಬೌದ್ಧರು 'ಪೂರ್ವೋತ್ತರ ಕಲಾವಿಲಕ್ಷಣವರ್ತಿತ್ವ'ವನ್ನು ಹೇಳುತ್ತಾರೆ. ಆದುದರಿಂದ ಅದು ಭ್ರಾಂತಿಮೂಲಕವಾಗಿದೆ. ಈ ಶಬ್ದಮರ್ಯಾದೆಯನ್ನು ಪರಮಾತ್ಮನಿಂದ ತಿಳಿದ ದೇವತೆಗಳು, ಪರಮಾತ್ಮನು ಉಪದೇಶಿಸಿದ ರೀತಿಯಿಂದಲೇ ಕ್ಷಣಿಕತ್ವವನ್ನು ಅರಿತುಕೊಂಡರು. ಆದುದರಿಂದ ಬುದ್ಧರೂಪಿಯಾದ ಪರಮಾತ್ಮನ ವಚನಕ್ಕೆ ಎಲ್ಲಿಯೂ ಅಪ್ರಾಮಾಣ್ಯವಿಲ್ಲ. ತತ್ತ್ವವಿವೇಕವಿಲ್ಲದ ಬುದ್ಧಿಯಿಂದ ಜಿನಾದಿಗಳಿಂದ ತಿಳಿದ ಬೌದ್ಧಮತವೇ ಕುಮತವು.

ಹಾಗಾದರೆ ವಿಶೇಷವನ್ನು ಅಂಗೀಕರಿಸಿ, ಘಟದಲ್ಲಿಯೂ ಘಟವನ್ನು ಏಕೆ ಅಂಗೀಕರಿಸುವದಿಲ್ಲ ಎಂಬ ಆಕ್ಷೇಪಕ್ಕೆ ಉತ್ತರರೂಪವಾಗಿ 'ನೈಮಿತ್ತಿಕೇ ಸತಿ ನಿಮಿತ್ತಾನುಸರಣಂ, ನ ತು ನಿಮಿತ್ತೇ ಸತಿ ನೈಮಿತ್ತಿಕಕಲ್ಪನಾ' ಎಂಬ ನಿಯಮವನ್ನು ಉದಾಹರಿಸುವರು. ನೈಮಿತ್ತಿಕವಿದ್ದರೆ ನಿಮಿತ್ತದ ಅನುಸರಣವು. ನಿಮಿತ್ತವಿದೆಯೆಂದು ನೈಮಿತ್ತಿಕ ಕಲ್ಪನೆಯು ಕೂಡಲಾರದು. ವಿಶೇಷವನ್ನು ಹೊಂದಿರುವ ವಸ್ತುವು ಮತ್ತು ವಿಶೇಷವು ಭಿನ್ನವಲ್ಲವಾದ್ದರಿಂದ, ಅವು ಸ್ವನಿರ್ವಾಹಕಶಕ್ತಿಯನ್ನು ಹೊಂದಿರುವವು. ಸ್ವನಿರ್ವಾಹಕಶಕ್ತಿ ಎಂದರೆ ಅಭೇದವಿದ್ದರೂ ಭೇದವ್ಯವಹಾರವನ್ನು ನಿರ್ವಾಹ ಮಾಡುವ ಶಕ್ತಿ ಎಂದು ಅರ್ಥವು. ಆದ್ದರಿಂದ ಪ್ರಪಂಚವು ಕ್ಷಣಸ್ಥಾಯಿ ಹಾಗೂ ಸ್ಥಿರ ಎಂದು ವಿರುದ್ಧ ಧರ್ಮಗಳಿಂದ ಹೇಳಿದಾಗ ಯಾವ ವಿರೋಧವೂ ಬರುವುದಿಲ್ಲ. ವಿಶೇಷವು ಸ್ವಾಭಾವಿಕವಾಗಿಯೇ ಅಭಿನ್ನದಲ್ಲಿ ಭೇದಕಾರ್ಯವನ್ನು ಮಾಡುತ್ತದೆ. ಆದುದರಿಂದ ಅಭಿನ್ನವಾದ ತನ್ನಲ್ಲಿಯೂ, ತನ್ನ ಧರ್ಮಿಯಲ್ಲಿಯೂ ಧರ್ಮಧರ್ಮಿಭಾವರೂಪವಾದ ಭೇದಕಾರ್ಯವನ್ನು ಮಾಡುತ್ತದೆ ಎಂದು ತಿಳಿಯಬೇಕು. ಆದುದರಿಂದ ಜಗತ್ತು ಸ್ಥಿರರೂಪವಾಗಿದ್ದರೂ, ಅಮುಖ್ಯವೃತ್ತಿಯಿಂದ ಕ್ಷಣಿಕತ್ವವಿದ್ದುದರಿಂದಲೇ ಎಲ್ಲ ವಿಶೇಷಸಹಿತವಾದ ಜಗತ್ತು ಕ್ಷಣದಲ್ಲಿ ಇರತಕ್ಕುದು. ಆದರಂತೆ ಜಗತ್ತು ಸ್ಥಿರಸ್ವರೂಪವೂ ಆಗಿದೆ. ಆದುದರಿಂದ ಯಾವ ವಿರೋಧವು ಇಲ್ಲ.

***ಜಗತ್ತಿಗೆ ಜ್ಞಾನಾತ್ಮಕತ್ವವನ್ನು ಪರಮಾತ್ಮನು ಈ ರೀತಿಯಾಗಿ ಉಪದೇಶಿಸಿದ್ದಾನೆ -***

ಜಗತ್ತಿಗೆ ಜ್ಞಾನಾತ್ಮಕತ್ವವನ್ನು, ಚಿತ್ಸ್ವರೂಪತ್ವವನ್ನು ಪರಮಾತ್ಮನು ಉಪದೇಶ ಮಾಡಿದ ಅರ್ಥವು ಹೀಗೆ ಇದೆ - 'ಸ್ವತಂತ್ರನಾದ ನಾನು ಸರ್ವೋತ್ತಮನಾಗಿದ್ದು, ಜ್ಞಾನರೂಪನಾದುದರಿಂದ ಜ್ಞ ಎಂದು ಕರೆಯಲ್ಪಡುವನು. ಜ್ಞಾನರೂಪನಾದ

ನನ್ನಿಂದ ಅಸ್ವತಂತ್ರವಾದ ಈ ಜಗತ್ತು ಸರ್ವದಾ ಆನನೀಯವಾಗಿದೆ, ಅಂದರೆ ಚೇಷ್ಟಿಸಲಿಕ್ಕೆ ಯೋಗ್ಯವಾಗಿದೆ, ಪ್ರವೃತ್ತಿಯನ್ನು ಹೊಂದುತ್ತದೆ. ಆದ್ದರಿಂದ ಜಡರೂಪವಾದ ವಿಶ್ವವು ಜ್ಞಾನಾತ್ಮಕವಾದುದು ಎಂದು ನಾನು ಹೇಳಿದೆನು. 'ಜ್ಞಾನೇ ಅನಿತಿ ಚೇಷ್ಟತೇ ಆತ್ಮಾ ಸ್ವರೂಪಂ ಯಸ್ಯ' ಎಂಬ ವ್ಯುತ್ಪತ್ತಿಯಿಂದ ಜ್ಞಾನಾತ್ಮಕವು ಎಂದು ಅರ್ಥವಾಗುವದು. ಇನ್ನು ಚೇತನವು ಜ್ಞಾನಾತ್ಮಕವು ಎಂಬುದು ಕೈಮುತ್ಯಸಿದ್ಧವು.'

***ಜಗತ್ತಿಗೆ ಶೂನ್ಯತ್ವವನ್ನು ಪರಮಾತ್ಮನು ಈ ರೀತಿಯಾಗಿ ಉಪದೇಶಿಸಿದ್ದಾನೆ -***

"ಚೇಷ್ಟಿಸಲಿಕ್ಕೆ ಯೋಗ್ಯವಾದ ಜಗತ್ತು ಶೂನ್ಯವೂ ಆಗಿದೆ. ನಾನು ಸುಖಸ್ವಭಾವದವನು ಮತ್ತು ಉತ್ತಮನು ಆಗಿರುವದರಿಂದ 'ಶೂ' ಎಂದು ಕರೆಯಿಸಿಗೊಳ್ಳಲ್ಪಡುತ್ತೇನೆ. 'ಶೂ' ನಾಮಕನಾದ ನನ್ನಿಂದ ಈ ಜಗತ್ತು ಸ್ಥಾಪಿಸಲ್ಪಡುತ್ತದೆ ಅಥವಾ ನಿಯಮಿಸಲ್ಪಡುತ್ತದೆ. ಆದ್ದರಿಂದ ಅಂಥ ಜಗತ್ತನ್ನು ಶೂನ್ಯವೆಂಬ ಹೆಸರಿನಿಂದ ನಾನು ಉಪದೇಶಿಸಿದ್ದೇನೆ. "ಶಂಶೀಲಕತ್ವಾತ್ ಶುಃ, ಉಚ್ಚತ್ವಾತ್ ಉಃ, ಶುಶ್ಚ ಅಸೌ ಉಶ್ಚ ಶೂ, ಶ್ವಾ ನೀಯತೇ ಇತಿ ಶೂನ್ಯಂ" ಎಂದು ಶಬ್ದ ವ್ಯುತ್ಪತ್ತಿಯು.'

***ಜಗತ್ತನ್ನು ಅಸತ್ ಮತ್ತು ಅಭಾವ ಎಂದು ಪರಮಾತ್ಮನು ಈ ರೀತಿಯಾಗಿ ಉಪದೇಶಿಸಿದ್ದಾನೆ-***

"ನಾನು ಗುಣಸ್ವರೂಪನಾಗಿರುವದರಿಂದ, ನನ್ನಲ್ಲಿ ದೋಷರಾಹಿತ್ಯವಿರುವದರಿಂದ, ಮತ್ತು ನಾನು ಎಲ್ಲ ಜಗತ್ತಿನಿಂದಲೂ ಅನ್ಯನಾಗಿರುವದರಿಂದ, 'ಅ' ಎಂದು ಕರೆಯಿಸಿಕೊಳ್ಳಲ್ಪಡುವೆನು. 'ಅ' ಶಬ್ದವು ತದ್ವಿರುದ್ಧ-ತದಬಾವ- ತದನ್ಯತ್ವ ವಾಚಕವಾಗಿರುವದು. ಅ ನಾಮಕನಾದ ನನ್ನಿಂದ ಈ ಜಗತ್ತು ಸಂಹಾರಮಾಡಲ್ಪಡುವದು. ಆದ್ದರಿಂದ ಜಗತ್ತಿಗೆ ಅಸತ್ ಎಂದು ಹೆಸರು. 'ಅ' ನಾಮಕನಾದ ನನ್ನಿಂದಲೇ ಜಗತ್ತು ಹುಟ್ಟುತ್ತದೆ. ಆದ್ದರಿಂದ ಅದು ಅಭಾವವೆಂದು ಕರೆಯಲ್ಪಡುವದು. 'ಅದ್ಭವತೀತಿ ಅಭಾವಃ' ಎಂದು ವಿಗ್ರಹವು. ಆದ್ದರಿಂದ ಜಡ-ಚೇತನಾತ್ಮಕವಾದ ಸಮಸ್ತ ಜಗತ್ತು ಕ್ಷಣಿಕ, ಶೂನ್ಯ, ಅಭಾವ ಮತ್ತು ಅಸತ್ ಆಗಿದೆ. ಈ ಶಬ್ದಗಳಿಂದ ನಾನು ಜಗತ್ತನ್ನು ಹೇಳಿದ್ದೇನೆ. ನನ್ನಿಂದ ಉಪದೇಶಿಸಲ್ಪಟ್ಟ ಎಲ್ಲವೂ ಪ್ರಾಮಾಣಿಕವೇ ಆಗಿದೆ. ಅಗ್ರಾಹ್ಯವಾದುದು ಯಾವುದೂ ಇರುವದಿಲ್ಲ."

ಈ ರೀತಿಯಾಗಿ ತತ್ವಗಳನ್ನು ದೇವತೆಗಳಿಗೆ ಉಪದೇಶಿಸಿ, ಬುದ್ಧರೂಪಿಯಾದ ಶ್ರೀಹರಿಯು ದೇವತೆಗಳೊಂದಿಗೆ ಆವಾಸಮಾಡಿದನು. ಮತ್ತೊಂದು ರೂಪದಿಂದ ವೈಕುಂಠಕ್ಕೆ ತೆರಳಿ, ಪ್ರತ್ಯೇಕವಾದ ಬುದ್ಧರೂಪವುಳ್ಳವನಾಗಿ, ಮೂಲ-ರೂಪದಿಂದ ಏಕೀಭೂತನಾಗಿ ಇಚ್ಛಾನುಸಾರವಾಗಿ ಅಲ್ಲಿ ನೆಲೆಸಿದನು.

***ಬೌದ್ಧ ಹಾಗೂ ಜೈನಮತಗಳ ಉಗಮ*** - ಹೀಗೆ ಬೌದ್ಧದರ್ಶನದ ಯಥಾರ್ಥವಾದ ಜ್ಞಾನವು ದೇವತೆಗಳಿಗೆ ಉಂಟಾದರೆ, ಅದರ ವಿಪರೀತಜ್ಞಾನವು ಅಸುರರಿಗೆ ಆಯಿತು. ಅನಂತರ, ಬುದ್ಧನು ಹೇಳಿದ ವಿಪರೀತಾರ್ಥಬೋಧಕವಾದ ಪಕ್ಷವನ್ನು ಅವಲಂಬಿಸಿ, ಬೌದ್ಧಮತವನ್ನು ದೈತ್ಯರು ಅನುಸರಿಸಿದರು. ಹಾಗೆಯೇ ಜಿನನು ಆಪಾತತೋ ಪ್ರತೀಯಮಾನವಾದ ಬೌದ್ಧಮತದ ಅರ್ಥವನ್ನು ಪ್ರತಿಪಾದಿಸುವ, ಭಗವದಭಿಪ್ರೇತವಾದ ಮತದಿಂದ ಭಿನ್ನವಾದ, ಬೇರೊಂದು ಮತವನ್ನು ಸ್ಥಾಪಿಸಿದನು. ಜಗತ್ತಿನಲ್ಲಿ ಅದು ಜೈನಮತವೆಂದು ಪ್ರಸಿದ್ಧವಾಯಿತು. ಬೌದ್ಧಮತ ಮತ್ತು ಜೈನಮತಗಳು ಹೀಗೆ ಉಗಮಗೊಂಡು, ಅಸುರ ಸ್ವಭಾವದ ಜನರಿಗೆ ಅವು ಪ್ರಿಯವೆನಿಸಿ, ಜಗತ್ತಿನಲ್ಲಿ ಪ್ರಸಾರಗೊಂಡವು.

***ದೇವತೆಗಳಿಂದ ಪ್ರಶಾಂತವಿದ್ಯೆಯ ಪ್ರಾಪ್ತಿ*** - ಜಿನನಿಂದ ಅಭಿಪ್ರೇತವಾದ ಮತದಿಂದ ಭಿನ್ನವಾದ, ಬುದ್ಧನು ಉಪದೇಶಿಸಿದ 'ಪ್ರಶಾಂತವಿದ್ಯೆ' ಎಂಬ ಬೇರೊಂದು ಹೆಸರುಳ್ಳ, ಮತ್ತು ವೇದಗಳ ಸಂಪೂರ್ಣವಾದ ಮುಖ್ಯಾರ್ಥವನ್ನು ಪ್ರತಿಪಾದಿಸುವ ಶಾಸ್ತ್ರವನ್ನು ದೇವತೆಗಳು ಪಡೆದು ಸಂತೋಷ ಹೊಂದಿದರು. ಈ ಪ್ರಶಾಂತವಿದ್ಯೆಯನ್ನು ಹೊಂದಿದವರಿಗೆ ಶೀಘ್ರವಾಗಿ ಮುಕ್ತಿಯು ಲಭಿಸುವದು.

**ಕ್ರೋಧವಶಾದಿ ದೈತ್ಯರ ಅವತಾರ** - ದೇವತೆಗಳಿಂದ ಭಿನ್ನರಾದ ಮುಕ್ತಿಯೋಗ್ಯರಾದ ಮನುಷ್ಯೋತ್ತಮರು ಸಂಪ್ರದಾಯಾರ್ಥಗಳಿಂದ ಕೂಡಿದ ಭಾರತ ಮೊದಲಾದ ಶಾಸ್ತ್ರಗಳನ್ನು ಸ್ವೀಕಾರ ಮಾಡಿದರು. ಅವರು ಸನ್ಮಾರ್ಗದಿಂದ ಶ್ರೀಹರಿಯನ್ನು ಆರಾಧಿಸುವವರಾಗಿ, ಅತ್ಯುತ್ತಮವಾದ ಗತಿಯನ್ನು ಹೊಂದಿದರು. ಮಣಿಮಂತನೇ ಮೊದಲಾದ ಕ್ರೋಧವಶಾದಿ ದೈತ್ಯರು ಭಾರತಾದಿಶಾಸ್ತ್ರಗಳ ಪ್ರವೃತ್ತಿಯನ್ನು ಸಹಿಸಲಿಲ್ಲ. ಆ ದೈತ್ಯರು ಉಗ್ರವಾದ ರುದ್ರದೇವರ ತಪಸ್ಸನ್ನು ಮಾಡಿ, ಜಗತ್ತನ್ನು ವಿಮೋಹಿಸುವದಕ್ಕಾಗಿ ಮಹತ್ತರವಾದ ಶಕ್ತಿಯನ್ನು ರುದ್ರದೇವರಿಂದ ಹೊಂದಿ, ಭೂಲೋಕದಲ್ಲಿ ಹುಟ್ಟಿದರು. ಅವರು ತರ್ಕಾಭ್ಯಾಸಗಳಿಂದ ಜೀವಪರಮಾತ್ಮರಿಗೂ ಜೀವರಿಗೂ ಪರಸ್ಪರವಾಗಿ ಅಭೇದವನ್ನು ಪ್ರತಿಪಾದಿಸುತ್ತ, ಮೋಹಕಶಾಸ್ತ್ರವನ್ನು ರಚಿಸಿದರು.

**ಮಧ್ವಾವತಾರ ಮತ್ತು ದುರ್ಗಾದೇವಿಯ ಅವತಾರ** - ಆ ಕ್ರೋಧವಶಾದಿ ದೈತ್ಯರ ಅಧಃಪತನಕ್ಕಾಗಿಯೂ ಹಾಗೂ ಸಜ್ಜನರಿಗೆ ಮೋಕ್ಷವನ್ನು ಕೊಡಿಸುವದಕ್ಕಾಗಿಯೂ, ಭೀಮಸೇನನು ಕಲಿಯುಗದಲ್ಲಿ ಮಧ್ವಾಖ್ಯ ಅವತಾರವನ್ನು ಹೊಂದಿದನು. ಬಳಿತ್ಥಾಸೂಕ್ತದಿಂದ ಉದ್ಭೃತವಾದ ಈ ಮಧ್ವಾಖ್ಯ ಅವತಾರದ ವಿಷಯವು ಇದೇ ಗ್ರಂಥದ ಎರಡನೇ ಅಧ್ಯಾಯದಲ್ಲಿ ಪ್ರತಿಪಾದಿತವಾಗಿದೆ. ಅದೇ ರೀತಿಯಾಗಿ, ಆಮೇಲೆ ದುರ್ಗಾದೇವಿಯು ಪುನಃ ಪಯಸ್ವಿನೀ ನದಿಯ ತೀರದಲ್ಲಿ ಬ್ರಾಹ್ಮಣರ ಕುಲದಲ್ಲಿ ಅವತಾರ ಮಾಡಿ, ಅಸುರರ ಸಮೂಹವನ್ನು ಸಂಹರಿಸುವಳು. ಮಧ್ವಾವತಾರವು ಕಲಿಯುಗದಲ್ಲಿ 4300 ವರ್ಷಗಳು ಕಳೆದ ಮೇಲೆ ಆಯಿತು. ದುರ್ಗಾವತಾರವು ಕಲಿಯುಗದ 36000 ವರ್ಷಗಳು ಕಳೆದ ನಂತರ ಆಗುವದು ಎಂದು ಗ್ರಂಥಾಂತರಗಳಿಂದ ತಿಳಿದು ಬರುವದು.

**ಶ್ರೀನಾರಾಯಣನ ಕಲ್ಕೀ ಅವತಾರ** - ದುರ್ಗಾದೇವಿಯ ಅವತಾರದ ಸಮಾಪ್ತಿಯ ಅನಂತರ, ಕಲಿಯುಗದ ಅಂತ್ಯಭಾಗದಲ್ಲಿ, ಸಜ್ಜನರು ಧರ್ಮ-ಜ್ಞಾನ-ಹರಿಭಕ್ತಿ ಮೊದಲಾದ ಉತ್ತಮ ಗುಣಗಳನ್ನು ಸಂಪೂರ್ಣವಾಗಿ ಕಳೆದುಕೊಂಡಾಗ, ಬ್ರಹ್ಮರುದ್ರಾದಿ ದೇವತೆಗಳು ಕ್ಷೀರಸಾಗರಕ್ಕೆ ತೆರಳಿ, ಅಚಿಂತ್ಯ ಶಕ್ತಿಯುಳ್ಳ ನಾರಾಯಣನನ್ನು ಪುನಃ ಅವತಾರ ಮಾಡುವದಕ್ಕಾಗಿ ಪ್ರಾರ್ಥಿಸಿದರು. ಅವರಿಂದ ಪ್ರಾರ್ಥಿತನಾದ ನಾರಾಯಣನು ಸಜ್ಜನರಿಗೆ ಧರ್ಮಜ್ಞಾನಾದಿ ಸದ್ಗುಣಸಂಪತ್ತನ್ನು ದಯಪಾಲಿಸಲು, ಶಂಫ(ಭ)ಲವೆಂದು ಹೆಸರಿನ ಗ್ರಾಮದಲ್ಲಿ 'ವಿಷ್ಣುಯಶ' ಎಂದು ಹೆಸರಿನ ಮುನಿಯ ಧರ್ಮಪತ್ನಿಯಲ್ಲಿ ಪ್ರಾದುರ್ಭೂತನಾಗುವನು. ಹೀಗೆ ಅವತಾರ ಮಾಡಿದ ಶ್ರೀನಾರಾಯಣನ ನಾಮವು 'ಕಲ್ಕೀ' ಎಂದು. ಇದು ಎಲ್ಲ ಪರಮಾತ್ಮನ ಅವತಾರಗಳಂತೆ ಅತ್ಯಂತ ಅನ್ವರ್ಥಕವಾದುದು. ಕಲಿ ನಾಮಕ ಅಸುರನನ್ನು ನಾಶ ಮಾಡಿದ ಕಾರಣದಿಂದಲೇ ಪರಮಾತ್ಮನು ಕಲ್ಕಿ ಎಂದು ಕರೆಯಿಸಿಕೊಳ್ಳಲ್ಪಡುತ್ತಾನೆ. ಇನ್ನೊಂದು ಅರ್ಥವನ್ನೂ ತಿಳಿಯಬಹುದು. ಕಲ ಎಂದರೆ ಜ್ಞಾನ. ಕಂ ಎನ್ನುವದು ಸುಖದ ಹೆಸರು. ಜ್ಞಾನ ಮತ್ತು ಸುಖವುಳ್ಳವನು ಕಲ್ಕಿ ಎಂದು ಕರೆಯಲ್ಪಡುವನು. ಕಲ್ಕಿರೂಪಿ ಪರಮಾತ್ಮನು ವ್ಯಾಪ್ತನಾಗಿರುವುದರಿಂದಲೇ, ಒಂದೇ ದಿನದಲ್ಲಿ ಸಮಸ್ತ ಅಸುರರನ್ನು ನಾಶಪಡಿಸುವನು. ಅಶ್ವಾರೂಢನಾಗಿ ಕಲ್ಕಿಯು ಅಧರ್ಮದಲ್ಲಿ ಪ್ರವರ್ತರಾದ ಮತ್ತು ಶ್ರೀಹರಿಯ ವಿರೋಧಿಗಳಾದ ಸಕಲ ಜನರನ್ನೂ ನಿಃಶೇಷವಾಗಿ ಸಂಹರಿಸಿ, ತನ್ನ ಧರ್ಮರೂಪವಾದ ಕೇತುವನ್ನು ಸ್ಥಾಪಿಸುವನು. ಸಜ್ಜನರಲ್ಲಿ ತನ್ನ ಜ್ಞಾನ-ಭಕ್ತಿಗಳನ್ನು ಸಂಸ್ಥಾಪಿಸುವನು. ಈ ಕಲ್ಕ್ಯವತಾರವು ಕಲಿಯುಗದ ಅಂತ್ಯ ಮತ್ತು ಕೃತಯುಗದ ಸಂಧಿಕಾಲದಲ್ಲಿ ಆಗುವದು.

*ಪ್ರಕೃತ ಗ್ರಂಥೋಪಸಂಹಾರ*

ಇದುವರೆಗೆ ವರ್ಣಿತವಾದುದೇ ಮೊದಲಾದವುಗಳು, ಪಾರತಂತ್ರ್ಯಾದಿ ದೋಷವಿದೂರನಾದ ಶ್ರೀಹರಿಯ ಉತ್ಕೃಷ್ಟವಾದ ಕರ್ಮಗಳು ಮತ್ತು ಉದಾರಗುಣಕರ್ಮಗಳ ನಿಧಿಗಳಾದ ಮತ್ಸ್ಯಾದಿ ಅನೇಕ ಅವತಾರರೂಪಗಳು. ಶ್ರೀಹರಿಯು ಗುಣಪರಿಪೂರ್ಣನಾದ ಕಾರಣದಿಂದಲೇ ಅವನಿಗೆ ಬ್ರಹ್ಮ, ಅನಂತ ಎಂಬ ನಾಮಗಳುಂಟು.

### *ಗ್ರಂಥಕರ್ತೃಗಳು*

ಉತ್ತಮವಾದ ಪೂರ್ಣಪ್ರಜ್ಞರು ಎಂದು ಹೆಸರುಳ್ಳ ಆನಂದತೀರ್ಥಮುನಿಯು ಬದರಿಕಾಶ್ರಮದಲ್ಲಿ ನಾರಾಯಣ ದೇವರಿಂದ 'ಈ ಗ್ರಂಥ ರಚನೆಯನ್ನು ಮಾಡು' ಎಂದು ಆಜ್ಞಪ್ತರಾಗಿ, ಮಹಾಭಾರತ ತಾತ್ಪರ್ಯನಿರ್ಣಯವೆಂಬ ಗ್ರಂಥವನ್ನು ರಚಿಸಿದರು. ಅವರು ಬ್ರಹ್ಮಾದಿ ಸಕಲಜಗತ್ತಿಗೆ ಸ್ವಾಮಿಯಾದ ವೇದವ್ಯಾಸರ ಮುಖ್ಯಶಿಷ್ಯರೇ ಆಗಿದ್ದಾರೆ.

ಆನಂದತೀರ್ಥರು ವೇದವ್ಯಾಸದೇವರ ಅನುಗ್ರಹದಿಂದ ಪಂಚರಾತ್ರಾಗಮ-ಉಪನಿಷತ್ತು-ಬ್ರಹ್ಮಸೂತ್ರಗಳಿಂದ ಸಹಿತವಾದ ಎಲ್ಲ ವೇದಗಳ ಮತ್ತು ಪುರಾಣಗಳಿಂದ ಸಹಿತವಾದ ಇತಿಹಾಸಗಳ, ಹಾಗೂ ಇತರ ಎಲ್ಲ ಶಾಸ್ತ್ರಗಳ ಅರ್ಥಗಳನ್ನು ವೇದವ್ಯಾಸರಿಗೆ ಅಭಿಪ್ರೇತವಾಗಿಯೇ ತಿಳಿದಿರುವರು. ಸಕಲ ಶಾಸ್ತ್ರಾರ್ಥಗಳನ್ನು ಪರಿಪೂರ್ಣವಾಗಿ, ನಿರ್ದುಷ್ಟವಾಗಿ ತಿಳಿದಿರುವದರಿಂದಲೇ ಅವರಿಗೆ ಪೂರ್ಣಪ್ರಜ್ಞರೆಂಬ ಅನ್ವರ್ಥಕ ನಾಮಧೇಯವು.

### *ಪ್ರಕೃತ ಗ್ರಂಥದ ವೈಶಿಷ್ಟ್ಯ*

ಇಂಥ ಪೂರ್ಣಪ್ರಜ್ಞಾಭಿದರಾದ ಮಧ್ವಾಚಾರ್ಯರಿಂದ ನಿರ್ಮಿತವಾದ ಈ ಗ್ರಂಥವು ಸರ್ವಶಾಸ್ತ್ರಗಳ ಅರ್ಥ ವಿನಿರ್ಣಯವುಳ್ಳದ್ದು. ವಿಶೇಷವಾಗಿ ಭಾರತಾರ್ಥ ನಿರ್ಣಯಾತ್ಮಕವಾದುದು. ಜಗಜ್ಜನಕರಾದ, ತಮ್ಮ ಗುರುಗಳಾದ ವೇದವ್ಯಾಸದೇವರನ್ನು ಸಂತೋಷಡಿಸಲೆಂದು ಅವರು ಈ ಗ್ರಂಥವನ್ನು ರಚಿಸಿದರು.

ಆಪಾತತಃ ಪರಸ್ಪರ ವಿರುದ್ಧವೆಂಬಂತೆ ತೋರುವ ವೇದ-ಪಂಚರಾತ್ರಾಗಮ-ಇತಿಹಾಸಾದಿ ಸಕಲಶಾಸ್ತ್ರ ವಚನಗಳಿಗೆ ಮಹಾಭಾರತತಾತ್ಪರ್ಯನಿರ್ಣಯಗ್ರಂಥಕ್ಕಿಂತಲೂ ಬೇರೆಯಾದ ವಿಶೇಷವಾದ ನಿರ್ಣಯವು ಇರುವುದಿಲ್ಲ. ವೇದವ್ಯಾಸ ದೇವರಿಂದ ನಿರ್ಮಿತವಾದ, ವೇದಾರ್ಥ ನಿರ್ಣಾಯಕಗಳಾದ ಬ್ರಹ್ಮಸೂತ್ರಗಳ ವ್ಯಾಖ್ಯಾನವನ್ನು ವೇದವ್ಯಾಸರಿಗೆ ಅಭಿಪ್ರೇತವಾದ ಅರ್ಥಕ್ಕಿಂತ ವಿಪರೀತವಾಗಿ ಇತರ ದುರ್ವಾದಿಗಳು ಮಾಡಿದ್ದಾರೆ. ಆದುದರಿಂದ ಮಹಾಭಾರತತಾತ್ಪರ್ಯನಿರ್ಣಯವು ಸಜ್ಜನರಿಗೆ ವೇದ-ಇತಿಹಾಸ-ಪುರಾಣಗಳ ಸಂಪೂರ್ಣ ಅರ್ಥವನ್ನು ಪಡೆಯಲು ಪ್ರಯೋಜಕವಾಗಿ, ವೇದವ್ಯಾಸದೇವರ ಆಜ್ಞಾನುಸಾರ ರಚಿತವಾಗಿದೆ.

### *ಮಧ್ವಾಚಾರ್ಯರಿಂದ ಬ್ರಹ್ಮಸೂತ್ರಭಾಷ್ಯಾದಿಗಳ ರಚನೆ*

ಬ್ರಹ್ಮಸೂತ್ರಗಳಲ್ಲಿ ಪ್ರತಿಪಾದಿತವಾಗಿದ್ದ ಶ್ರೀಹರಿಯ ಸರ್ವೋತ್ತಮತ್ವವು, ಜೀವೇಶ್ವರರಿಗೆ ಐಕ್ಯವನ್ನು ಹೇಳುವ ಮಣಿಮಂತನೇ ಮೊದಲಾದ ಕ್ರೋಧವಶಾದಿ ದೈತ್ಯರಿಂದ ನಿಗೂಹಿತವಾಗಿತ್ತು.

ಆದಕ್ಕಾಗಿ ಆನಂದತೀರ್ಥರಾದ ಮಧ್ವಾಚಾರ್ಯರು ಶ್ರೀವೇದವ್ಯಾಸರ ಆಜ್ಞೆಯಿಂದ ಬ್ರಹ್ಮಸೂತ್ರಗಳಿಗೆ ಉತ್ತಮವಾದ ಭಾಷ್ಯವನ್ನು ರಚಿಸಿ, ಸೂತ್ರಗಳ ಸರಿಯಾದ ಭಾವವನ್ನು ಪ್ರಕಟಪಡಿಸಿದರು. ಅನಂತರ, ಉಪನಿಷತ್ತುಗಳಿಗೂ ಪ್ರತ್ಯೇಕವಾಗಿ ಭಾಷ್ಯಗಳನ್ನು ರಚಿಸಿದರು. ಅವೆಲ್ಲವೂ ಶ್ರೀಹರಿಯು ಸರ್ವೋತ್ತಮನು ಮತ್ತು ಸರ್ವವಿಲಕ್ಷಣನು ಎಂದು ಬೋಧಿಸುವವು ಎಂಬುದಾಗಿ ಪ್ರತಿಪಾದಿಸಿದರು. ಈ ರೀತಿಯಾಗಿ ಸೂತ್ರ-ವೇದಾದಿಗಳಿಗೆ ಅಭಿಪ್ರೇತವಾದ ಅರ್ಥವನ್ನು ಪ್ರಕಟೀಕರಿಸಿದ ಆನಂದತೀರ್ಥಾಚಾರ್ಯರಿಂದ ಪ್ರಕೃತಗ್ರಂಥವು ರಚಿಸಲ್ಪಟ್ಟಿದೆ.

### *ಗ್ರಂಥಾಧ್ಯಯನದ ಫಲ*

ಶ್ರೀವಾಯುದೇವರ ಈ ಮೂರನೆಯ ಅವತಾರ ರೂಪರಾದ ಶ್ರೀಮದಾನಂದತೀರ್ಥರು ಮಹಾಭಾರತದ ನಿರ್ದುಷ್ಟವಾದ ಅರ್ಥವನ್ನು ಪ್ರತಿಪಾದಿಸಲೆಂದು ಈ ಗ್ರಂಥವನ್ನು ರಚಿಸಿದರು. ಹರಿಸರ್ವೋತ್ತಮವನ್ನು ಪ್ರತಿಪಾದಿಸುವ

ಈ ಗ್ರಂಥದ ಅಧ್ಯಯನದಿಂದ ಹರಿಪಾದಾಸಕ್ತರಾದ ಉತ್ತಮ ಜ್ಞಾನಿಗಳು ಪರಮಾತ್ಮನಲ್ಲಿ ಅಧಿಕವಾದ ಭಕ್ತ್ಯಾದಿಗಳಿಂದ ಸಂತೋಷಿಸುವರು.

***ಆನಂದತೀರ್ಥರು ಅಥವಾ ಮಧ್ವಾಚಾರ್ಯರು ವಾಯುದೇವರ ಅವತಾರಭೂತರು***

ಶ್ರೀ ಆನಂದತೀರ್ಥರು ಅಥವಾ ಮಧ್ವಾಚಾರ್ಯರು ವಾಯುದೇವರ ತೃತೀಯಾವತಾರಭೂತರು ಎನ್ನುವದಕ್ಕೆ ಬಳಿತ್ಥಾದಿ ಅನೇಕಪ್ರಮಾಣಗಳನ್ನು ಉದಾಹರಿಸುವರು.

ತೃತೀಯಮಸ್ಯ ವೃಷಭಸ್ಯ ದೋಹಸೇ ದಶಪ್ರಮತಿಂ ಜನಯಂತ ಯೋಷಣಃ ।
ನಿರ್ಯದೀಂ ಬುಧ್ನಾನ್ಮಹಿಷಸ್ಯ ವರ್ಪಸಃ ಈಶಾನಾಸಃ ಶ್ರವಸಾಕ್ರಂತ ಸೂರಯಃ ।
ಯದೀಮನು ಪ್ರದಿವೋ ಮಧ್ವ ಆಧವೇ ಗುಹಾಸಂತಂ ಮಾತರಿಶ್ವಾ ಮಥಾಯತಿ ॥

ದೇವಶ್ರೇಷ್ಠರಾದ ಈ ವಾಯುದೇವರ ದಶಪ್ರಮತಿನಾಮಕವಾದ ಮೂರನೆಯ ಅವತಾರವನ್ನು, ವೇದಾಭಿ-ಮಾನಿಗಳಾದ ಶ್ರೀ, ಭೂ, ದುರ್ಗಾ ಎಂಬ ಹೆಸರುಳ್ಳ ಸ್ತ್ರೀಯರು ಜ್ಞಾನದೋಹನಕ್ಕಾಗಿ ಪ್ರಸವಿಸಿದರು. ವರಣಪಾಲನಶೀಲವಾದ ಪೂರ್ಣಪ್ರಜ್ಞಾಖ್ಯ ಮೂರನೆಯ ಅವತಾರವು ರುದ್ರಾದಿದೇವತೆಗಳಿಗೆ, ಈಗ ಕಾಣುವ ಪ್ರಕಾರದಿಂದಲೇ, ಅತ್ಯಂತ ಉತ್ತಮವಾದ ಜ್ಞಾನವನ್ನು ದಯಪಾಲಿಸಿತು. ಸುಖದಿಂದ ಪೂರ್ಣನಾದ ಶ್ರೀಹರಿಯ ಬಲಜ್ಞಾನಾದಿ ಗುಣಗಳನ್ನೂ ನಿತ್ಯವೂ ಉಪಾಸನೆ ಮಾಡುತ್ತಿರುವ ಆನಂದತೀರ್ಥರು ಜ್ಞಾನರೂಪರೂ, ಭಕ್ತರಿಗೆ ಅನುಗ್ರಹವನ್ನು ಮಾಡುವವರೂ ಆಗಿದ್ದಾರೆ. ಇಂತಹ ಭಕ್ತರಕ್ಷಕರಾದ ಪೂರ್ಣಪ್ರಜ್ಞಾಚಾರ್ಯರು ರುದ್ರಾದಿ ದೇವತೆಗಳನ್ನು ಸುಖದಿಂದ ಜ್ಞಾನಿಗಳನ್ನಾಗಿ ಮಾಡಿದರು.

ಪ್ರಕೃಷ್ಟಜ್ಞಾನವುಳ್ಳ ಮಧ್ವಾಖ್ಯರಾದ ವಾಯುದೇವರು ಭಾರತ ಪಂಚರಾತ್ರ ಇವೇ ಮೊದಲಾದವುಗಳನ್ನು ಅನುಸರಿಸಿಯೇ ರುದ್ರಾದಿ ದೇವತೆಗಳನ್ನು ಬೋಧಿಸಿದರು. ಅವರು ಹೃದಯಗುಹೆಯಲ್ಲಿ ಇರುವ ಶ್ರೀನಾರಾಯಣನ ಸ್ವಾಮಿತ್ವ ಮತ್ತು ಸರ್ವೋತ್ತಮತ್ವ ವಿಷಯದಲ್ಲಿ, ಮಧ್ವಾದಿ ಅವತಾರಗಳಲ್ಲಿ ದೃಶ್ಯಮಾನವಾದ ಪ್ರಕಾರದಿಂದಲೇ, ವೇದಶಾಸ್ತ್ರಗಳ ಮಥನವನ್ನು ಮಾಡುತ್ತಾರೆ. ಈ ಕಾರಣದಿಂದ ರುದ್ರಾದಿ ದೇವತೆಗಳು ಪೂರ್ಣಪ್ರಜ್ಞಾಚಾರ್ಯರಿಂದ ವಿಷ್ಣುವಿನ ಗುಣಗಳನ್ನು ಸುಖದಿಂದ ತಿಳಿದರು.

***ಈ ಗ್ರಂಥೋಕ್ತ ಸಕಲ ವಿಷಯಗಳೂ ಪ್ರಾಮಾಣಿಕ***

'ತೃತೀಯಮಸ್ಯ ವೃಷಭಸ್ಯ' ಇವೇ ಮೊದಲಾದ ವೇದವಾಕ್ಯಗಳಿಂದ ಹೇಳಲ್ಪಟ್ಟ ಎಲ್ಲ ಪ್ರಮೇಯವು ಪುರಾಣಗಳಲ್ಲಿಯೂ ಮತ್ತು ಪಂಚರಾತ್ರಾಗಮದಲ್ಲಿಯೂ ಹೇಳಲ್ಪಟ್ಟಿದೆ. ಈ ಗ್ರಂಥದಲ್ಲಿ ಹೇಳಿದ ಸಕಲ ಕಥೆಗಳು ಮತ್ತು ಪ್ರಮೇಯಗಳು ವೇದ-ಇತಿಹಾಸಗಳ ನಿರ್ಣಯವನ್ನು ಒಳಗೊಂಡಿವೆ. ಆದ್ದರಿಂದ ಈ ಗ್ರಂಥದಲ್ಲಿ ಉಕ್ತವಾದ ಸಕಲ ವಿಷಯಗಳೂ ಪ್ರಾಮಾಣಿಕವಾಗಿವೆ. ಎಲ್ಲ ನಿರ್ಣಾಯಕವಾದ ಗ್ರಂಥಗಳ ಮಧ್ಯದಲ್ಲಿ ಇದು ಶ್ರೇಷ್ಠವಾದ ಗ್ರಂಥವು. ಶ್ರೇಷ್ಠವಾದ ಧರ್ಮ ಮೊದಲಾದ ಮೋಕ್ಷಪರ್ಯಂತವಾದ ಸಕಲ ಪುರುಷಾರ್ಥಗಳಿಗೆ ಕಾರಣೀಭೂತನಾದ ಶ್ರೀನಾರಾಯಣನು ಈ ಗ್ರಂಥದ ಶ್ರವಣಮನನದಿಂದ ಅತ್ಯಂತವಾಗಿ ಪ್ರೀತಿಯನ್ನು ಹೊಂದುವನು.

***ವಾಯುದೇವರ ಅವತಾರ ತ್ರಯವು ಪ್ರಮಾಣಪ್ರಸಿದ್ಧ***

ಉತ್ಕೃಷ್ಟವಾದ ಹನುಮ-ಭೀಮ-ಮಧ್ವಾಖ್ಯ ವಾಯುದೇವರ ಮೂರು ಅವತಾರಗಳು ಬಳಿತ್ಥಾ ಇತ್ಯಾದಿ ವೇದ ವಚನಗಳಲ್ಲಿ ಹೇಳಲ್ಪಟ್ಟಿವೆ. ವಾಯುದೇವರ ಮೂಲರೂಪವು ಬಲಾತ್ಮಕವು ಹಾಗೂ ಜ್ಞಾನಪೂರ್ಣವು ಆಗಿದೆ. ಇಂಥ

ವಾಯುದೇವರ ರೂಪವು ಸರ್ವಜೀವರನ್ನು ಪೋಷಿಸುವದಕ್ಕಾಗಿ ಸರ್ವಜೀವರ ಹೃದಯದಲ್ಲಿ ಇರುವುದು ಮತ್ತು ಸರ್ವ ಜಗತ್ತುಗಳಲ್ಲಿಯೂ ಪೂಜ್ಯವಾದುದು ಆಗಿದೆ. ಮೂಲರೂಪದಂತೆಯೇ ಅವತಾರರೂಪಗಳೂ ಜ್ಞಾನ-ಬಲಾತ್ಮಕವಾಗಿ ಇರುವವು.

ವಾಯುದೇವರ ಹನುಮದಾಖ್ಯವಾದ ಮೊದಲನೆಯ ಅವತಾರವು ರಾಮದೇವರ ವಚನಗಳನ್ನು ಸೀತಾದೇವಿ-ಗೋಸ್ಕರ ತೆಗೆದುಕೊಂಡು ಹೋದಂತಹದು, ಮತ್ತು ರಾಮದೇವರ ವಿಷಯಕಗಳಾದ ರಾಮಾಯಣಾದಿ ವಚನಗಳನ್ನು ಸನಕಾದಿ ಋಷಿಗಳಿಗಾಗಿ ಒಯ್ಯುವಂತಹದು ಆಗಿದೆ. ಭೀಮಾಖ್ಯವಾದ ಎರಡನೆಯ ಅವತಾರವು ಕೌರವ ಸೈನ್ಯವನ್ನು ನಾಶಮಾಡಿದಂತಹದು. ಈ ಮಧ್ವಾಖ್ಯವಾದ ಮೂರನೆಯ ಅವತಾರದಿಂದ, ಆನಂದತೀರ್ಥಾಚಾರ್ಯರ ರೂಪದಿಂದ, ಈ ಗ್ರಂಥವು ಶ್ರೀಕೇಶವನಲ್ಲಿ ಸಮರ್ಪಿಸಬೇಕೆನ್ನುವ ಬುದ್ಧಿಯಿಂದ ವಿರಚಿತವಾಗಿದೆ.

*ಪರಮಾತ್ಮನಲ್ಲಿ ಗ್ರಂಥಸಮರ್ಪಣೆ*

ಸಕಲ ಗುಣಗಳಿಂದ ಪರಿಪೂರ್ಣನಾದ, ಸಕಲದೋಷಗಳಿಂದ ವಿರಹಿತನಾದ, ನನಗೆ ಅತ್ಯಂತವಾಗಿ ನಿತ್ಯದಲ್ಲಿಯೂ ಪ್ರೀತನೇ ಆದ ಮತ್ತು ಪರಮ ಸುಹೃತ್ ಆದ ಶ್ರೀಹರಿಯು ಅತ್ಯಂತವಾಗಿ ಪ್ರೀತನಾಗಲಿ.

*ಇತಿ ಶ್ರೀಮದಾನಂದತೀರ್ಥಭಗವತ್ಪಾದರವರು ವಿರಚಿಸಿದ ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದ ಅಭಿಪ್ರಾಯ ಸಂಗ್ರಹರೂಪವಾಗಿ ಶ್ರೀಮದ್ರಾಘವೇಂದ್ರತೀರ್ಥ ಗುರುಸಾರ್ವಭೌಮರವರು ರಚಿಸಿದ ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯ ಭಾವಸಂಗ್ರಹವು ಮುಕ್ತಾಯವಾಯಿತು.*

*"ಶ್ರೀರಾಘವೇಂದ್ರಗುರುವಂಶಭೂಷಣ"ರಾದ ವಿದ್ವಾನ್ ರಾಜಾ ಶ್ರೀ ಗುರುರಾಜಾಚಾರ್ಯರು ಮಾಡಿದ ಶ್ರೀಗುರುಸಾರ್ವಭೌಮರ "ಭಾವಸಂಗ್ರಹ"ದ ಕನ್ನಡಭಾಷೆಯ ಅನುವಾದವು ಸಂಪೂರ್ಣವಾಯಿತು.*

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★



**ಕೆಲವರ ಕರಗಳು ಮಾತ್ರ ಹಾಗೆ, ಆದಕ್ಕೆ ಅಮೃತಹಸ್ತ ಎನ್ನುತ್ತಾರೆ!**

1945ರಲ್ಲಿ ಸ್ಥಾಪಿಸಿದ ಶ್ರೀ ಪರಿಮಳ ಗ್ರಂಥ ಪ್ರಕಾಶನ 150ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿ ದಾಖಲೆ ನಿರ್ಮಿಸಿದೆ. ಸರಿಸುಮಾರು ಆ ದಶಕದಲ್ಲೇ ಆರಂಭಗೊಂಡ 'ಪರಿಮಳ' ಮಾಸಪತ್ರಿಕೆ ವೈಷ್ಣವರ ಬಾನ ಅಂಗಳದ ಮುಳುಗದ ಸೂರ್ಯ. ಅವರು ಬರೆದ 'ಸುಪ್ರಭಾತ' ಶ್ರೀರಾಯರಿಗೆ ಮಂತ್ರಾಲಯದಲ್ಲಿ ನಿತ್ಯ ಉದಯಗೀತೆ. ''ತುಂಗಾತೀರವಿರಾಜಂ'' ಸಂಗೀತಗಾರರ ಅಚ್ಚುಮೆಚ್ಚು. ಕಮಲೇಶರ ಕೀರ್ತನೆಗಳು ಕನ್ನಡಿಗರ ಭೂಲೋಕದ ಭಂಡಾರ.

ಮೂಲವೃಂದಾವನಕ್ಕೆ ರಾಜಾ ಗುರುರಾಜಾಚಾರ್ಯರು ಆರಂಭಿಸಿದ ಅಕ್ಷಯತೃತೀಯಾದಿನದ ಗಂಧಲೇಪನಸೇವೆ ಶ್ರೀಮಠದ ನಡುವಳಿಯಲ್ಲಿ ಒಂದಾಗಿ ಹೋಗಿದೆ.

ವಿವಾದ ಬರದಂತೆ ಚಿತ್ರಿಸಿದ ಡಾ. ರಾಜಕುಮಾರ್ ಅವರ ''ಮಂತ್ರಾಲಯ ಮಹಾತ್ಮೆ'' ಚಿತ್ರದ ಸಾಹಿತ್ಯ, ಚಿತ್ರಕಥೆ ರಚಿಸಿದ ಗುರುರಾಜಾಚಾರ್ಯರ ಕಳಕಳಿ, ಸಾಮರಸ್ಯ, ಬ. ಲ. ಸುರೇಶ್‌ರಂಥ ಕಿರುತೆರೆ ನಿರ್ದೇಶಕರಿಗೆ ಇಂದಿಗೂ ಅಧ್ಯಯನಯೋಗ್ಯ. ಆರಂಭದಲ್ಲಿ ತೋರಿಸಿದಂತೆ ಚಿತ್ರಿಸಬೇಕಷ್ಟೆ.

ಸಾಂಸ್ಕೃತಿಕ ಹಬ್ಬವಾಗಿ ರೂಪಗೊಂಡಿರುವ 'ಮಂತ್ರಾಲಯಂ'ನ ಸಪ್ತರಾತ್ರೋತ್ಸವ ಆಚಾರ್ಯರ ಶ್ರೇಷ್ಠ ಚಿಂತನೆಗಳಲ್ಲಿ ಒಂದು.

ಶತಮಾನೋತ್ಸವವೆಂದರೆ ಸಡಗರ. ಅದರಲ್ಲೂ ಸಾಧು-ಸಂತರ ರಜತೋತ್ಸವಗಳೆಂದರೆ ಜಾತ್ರೆಯಂತೆ ಆಚರಿಸುತ್ತಾರೆ. ಆದರೆ ಗುರುರಾಜಾಚಾರ್ಯರ ಆಲೋಚನೆ ವಿಶಿಷ್ಟ ರೀತಿಯದು. ಅರ್ಥಪೂರ್ಣವಾಗಿ, ಸಂದರ್ಭೋ- ಚಿತವಾಗಿ ಆಚರಿಸಿದ ಶ್ರೀರಾಯರ ತ್ರಿಶತಮಾನೋತ್ಸವ ನಾಡಿಗೆ ಮಾದರಿ. ಮುಂದೆ ಅವರು ಗತಿಸಿದ ನಂತರ 'ಮಂತ್ರಾಲಯಂ'ನ ಶ್ರೀರಾಘವೇಂದ್ರಸ್ವಾಮಿಗಳವರ ಮಠ ಆಚರಿಸಿದ ಶ್ರೀರಘುನಂದನತೀರ್ಥರ 501 ನೇ ಆರಾಧನೆಗೆ ರಾಜಾ ಗುರುರಾಜಾಚಾರ್ಯರದ್ದೇ ಸ್ಫೂರ್ತಿ.

ಶ್ರೀವಿಜಯೀಂದ್ರರ-ಶ್ರೀರಾಘವೇಂದ್ರರ-ಶ್ರೀಸುಯತೀಂದ್ರರ ಅಡಗಿ ಹೋಗಿದ್ದ - ಹುದುಗಿ ಹೋಗಿದ್ದ - ನಶಿಸಿ ಹೋಗಲು ತಯಾರಾಗಿದ್ದ ಗ್ರಂಥಗಳನ್ನು ವೈಷ್ಣವರ ಭೂಪಟದಲ್ಲಿ ರಾರಾಜಿಸುವಂತೆ ಮಾಡಿದ್ದು ಆಚಾರ್ಯರ ಬಹುದೊಡ್ಡ ಸೇವೆ. ಪರಿಣಾಮ ಬೀರುವ ಸದಾ ನೆನಪಿನಲ್ಲಿ ಇಟ್ಟುಕೊಳ್ಳುವ ಭಾಷಣ, ಮಂದಹಾಸ ಬೀರುತ್ತಾ ಆತ್ಮೀಯ ನೋಟವನ್ನು ಬೀರುವ ಅವರ ಸುಂದರ ಮುಖ, ಸಾಹಿತ್ಯ ಪ್ರಕಾಶನಕ್ಕೆ ಪ್ರೋತ್ಸಾಹವಿಲ್ಲದೇ ಸೊರಗಿರುವ ವಿದ್ವಾಂಸರಿಗೆ, ನಾಡಿನ ಕಲಾಕರ್ಮಿಗಳಿಗೆ ಧಾರಾಳವಾಗಿ ಕೊಡುತ್ತಿದ್ದ ಸಂಭಾವನೆ-ದಾನ-ಪ್ರಶಸ್ತಿ-ಪುರಸ್ಕಾರಗಳು ಆಚಾರ್ಯರನ್ನು ಕಾವಿಯಿಲ್ಲದ ಪೀಠಾಧಿಪತಿಯಾಗಿ ಕಾಣುವಂತೆ ಮಾಡಿತ್ತು.

ಇವರನ್ನು ಹಿಂಬಾಲಿಸಿದ್ದು ಹೆಂಡತಿ ಮಕ್ಕಳಲ್ಲ, ರಾಷ್ಟ್ರಮಟ್ಟದ - ರಾಜ್ಯಮಟ್ಟದ ಪ್ರಶಸ್ತಿಗಳು. ಅದರ ಸಂಖ್ಯೆ ಇಂತಿಷ್ಟು ಎನ್ನುವಂತಿಲ್ಲ. ಬಂದ ಬಿನ್ನವತ್ತಳೆ, ಸನ್ಮಾನಪತ್ರಿಕೆಗಳೇ ಒಂದು ಪಿಹೆಚ್.ಡಿ. ಪ್ರಬಂಧಕ್ಕಾಗುವಷ್ಟು ಸರಕು ಒದಗಿಸಬಲ್ಲವು.

ದೊಡ್ಡ ವಂಶದಲ್ಲಿ ಹುಟ್ಟಿದವರಿಗೆ ಜವಾಬ್ದಾರಿ ಹೆಚ್ಚು. ನೋಡುವ ಕಣ್ಣುಗಳು ಹಲವಾರು. ಶ್ರೀರಾಯರ ವಂಶದಲ್ಲಿ ಜನಿಸಿದ ಈ ಪ್ರತಿಭೆ ಮನೆತನಕ್ಕೆ ಪ್ರಭೆಯಾಯಿತು.

-ರಾಜಾ ಎಸ್. ರಾಜಗೋಪಾಲಾಚಾರ್ಯ

ಪ್ರಕಾಶಕರು
ರಾಜಾ ಜಿ. ಸುಧೀಂದ್ರಾಚಾರ್ಯ
ಸಂಚಾಲಕರು, ಶ್ರೀಸುಯಮೀರಾಘವೇಂದ್ರ ಸಂಶೋಧನ ಕೇಂದ್ರ
ನಂಜನಗೂಡು – ಬೆಂಗಳೂರು. ದೂರವಾಣಿ : 99453 48633

Printed at Sudha Mudrana, Bangalore 560 004 Mobile: 9243074414.